

# ಅರೆಭಾಷೆ ವಿಶ್ವಕೋಶ





ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು
ಸಾಹಿತ್ಯ ಅಕಾಡೆಮಿ

# ಅರೆಭಾಷೆ ವಿಶ್ವಕೋಶ








**Decennial Year Publication 2022**

# ಅರೆಭಾಷೆ ವಿಶ್ವಕೋಶ

## AREBHASHE ENCYCLOPEDIA

Karnataka Arebhashe Samskrithi mattu Sahitya Academy, Coffee Krupa, Rajaseat Road, Madikeri, Kodagu Dist. 571201.

Email: arebaseacademy@gmail.com, Mob: 6362522677
Web: https://arebhasheacademy.karnataka.gov.in

**Published by** - Registrar, Karnataka Arebhashe Samskrithi mattu Sahitya Academy





| | | |
|---|---|---|
| Year of publication | : | 2022 |
| Size | : | Demmy ¼ |
| Paper | : | 80 GSM NS Maplitho |
| Pages | : | XLVIII + 400 |
| Copies | : | 300 |
| Price | : | Rs. 600/- |
| ISBN | : | 978-81-956598-9-0 |
| Cover page design | : | Sudhakar Acharya, Attegoli |
| Page Layout | : | Harish Kodethoor, Kinnigoli |
| Printed at | : | **Diganta Mudrana Ltd.**<br>5-184, 185, Near Industrial Area Yeyyadi, Mangaluru<br>Ph: 0824-2212551, Mob: 9972741579<br>marketingdml.ltd@gmail.com |

# ಸಲಹಾ ಸಮಿತಿ



ಪ್ರಧಾನ ಸಂಪಾದಕರ್ : **ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ,** ಅಧ್ಯಕ್ಷರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಮುಕ್ಯ ಸಂಪಾದಕರ್ : **ಶ್ರೀ ಭರತೇಶ ಅಲಸಂಡೆಮಜಲು,** ಬ್ಯಾಂಕ್ ಆಫ್ ಬರೋಡ ಉದ್ಯೋಗಿ ಮತ್ತೆ ಸದಸ್ಯರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಸಂಪಾದಕರ್ : **ಡಾ. ವಿಶ್ವನಾಥ ಬದಿಕಾನ,** ಸಹಾಯಕ ಪ್ರಾಧ್ಯಾಪಕರ್, ಕನ್ನಡ ವಿಭಾಗ, ಸಂತ ಅಲೋಶಿಯಸ್ ಕಾಲೇಜು (ಸ್ವಾಯತ್ತ), ಮಂಗಳೂರು ಮತ್ತೆ ಸದಸ್ಯರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಸಂಕಲನ ಮತ್ತೆ ತಾಂತ್ರಿಕ ಸಲಹೆಗಾರರ್ : **ಡಾ. ಹಾ.ತಿ. ಕೃಷ್ಣೇಗೌಡ,** ವಿಶ್ರಾಂತ ಪ್ರಾಧ್ಯಾಪಕರ್, ಮೈಸೂರು ವಿಶ್ವವಿದ್ಯಾನಿಲಯ

ಮುಕ್ಯ ಅನುವಾದಕರ್ : **ಶ್ರೀ ಮನೋಜ್ ಕುಡೆಕಲ್ಲು,** s/o ಸೀತಾರಾಮ ಕುಡೆಕಲ್ಲು, ಆಲೆಟ್ಟಿ ಗ್ರಾಮ ಮತ್ತು ಅಂಚೆ, ಸುಳ್ಯ

ಅನುವಾದಕರ್ : **ಶ್ರೀಮತಿ ಸ್ಮಿತಾ ಅಮೃತರಾಜ್,** ಸದಸ್ಯರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
**ಶ್ರೀ ಕಿರಣ್ ಕುಂಬಳಚೇರಿ,** ಸದಸ್ಯರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ಅನುವಾದ ಸಹಾಯಕರ್ : **ಶ್ರೀಮತಿ ಅಪೂರ್ವ ಕೆ.ಟಿ., ಕುಮಾರಿ ಧನ್ಯಶ್ರೀ ಕಳಗಿ, ಕುಮಾರಿ ಶರಣ್ಯ ಕುಮಾರಿ ಕೆ. ಶ್ರೀಮತಿ ಮಮತಾ ಕೆಂಜನ, ಶ್ರೀ ಜೀವನ್ ಪುರ**

ಕರಡು ಪ್ರತಿ ತಿದ್ದಿದವು : **ಶ್ರೀ ಪುರುಷೋತ್ತಮ ಕಿರ್ಲಾಯ,** ಸದಸ್ಯರ್, ನಿವೃತ್ತ ಮುಕ್ಯೋಪಾದ್ಯಾಯರ್ ಮತ್ತೆ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
**ಶ್ರೀಮತಿ ಸರೋಜಾ ಎಂ.ಕೆ.,** ಮಂಗಳೂರು
**ಶ್ರೀ ಮೋನಪ್ಪ ಗೌಡ ಕಜೆ,** (ಎಂ.ಜಿ. ಕಜೆ) 'ಹಸೆಮನೆ' – 1–3(ಜಿ)2, ಬಗಂಬಿಲ ರಸ್ತೆ ದೇರಳಕಟ್ಟೆ ಅಂಚೆ, ಮಂಗಳೂರು – 575018

ಸಲಹಾ ಸಮಿತಿ ಸದಸ್ಯರ್ : **ಪ್ರೊ. ಪುರುಷೋತ್ತಮ ಬಿಳಿಮಲೆ,** ವಿಶ್ರಾಂತ ಪ್ರಾಧ್ಯಾಪಕರ್, ಜೆ.ಎನ್.ಯು. ಕನ್ನಡ ಅಧ್ಯಯನ ಕೇಂದ್ರ, ದೆಹಲಿ
**ಡಾ. ಪೂವಪ್ಪ ಕಣಿಯೂರು,** ವಿಶ್ರಾಂತ ಪ್ರಾಂಶುಪಾಲರು, ನೆಹರು ಸ್ಮಾರಕ ಮಹಾವಿದ್ಯಾಲಯ, ಸುಳ್ಯ
**ಡಾ. ಸುಂದರ ಕೇನಾಜೆ,** ದೀಪ್ತಶೀಲ ಮನೆ, ಬೆಟ್ಟಂಪಾಡಿ ಶಾಂತಿನಗರ, ಸುಳ್ಯ ತಾಲೂಕು – 574239
**ಶ್ರೀಮತಿ ಸಹನಾ ಕಾಂತಬೈಲು,** ಸಂಪಾಜೆ
**ಶ್ರೀ ವಿನೋದ್ ಮೂಡಗದ್ದೆ,** ಕೊಡಗು
**ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಪ್ಪ,** ಸದಸ್ಯರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
**ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ,** ಸದಸ್ಯರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
**ಶ್ರೀ ಧನಂಜಯ ಅಗೋಳಿಕಜೆ,** ಸದಸ್ಯರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
**ಡಾ. ದಯಾನಂದ ಕೆ.ಸಿ. ಕೂಡಕಂಡಿ,** ಸದಸ್ಯರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
**ಶ್ರೀ ಕುಸುಮಾಧರ ಎ.ಟಿ.,** ಸದಸ್ಯರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
**ಶ್ರೀ ಜಯಪ್ರಕಾಶ ಮೋಂಟಡ್ಕ ಬಿಳಿನೆಲೆ,** ಸದಸ್ಯರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
**ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು,** ಸದಸ್ಯರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ



# EDITORIAL COMMITTEE







# ಸಂಪಾದಕ ಮಂಡಳಿ ಸದಸ್ಯರ್

## ಅಕಾಡೆಮಿ ಅಧ್ಯಕ್ಷರ್



ಲಕ್ಷ್ಮೀನಾರಾಯಣ ಕಜೆಗದ್ದೆ

## ಅಕಾಡೆಮಿ ಸದಸ್ಯರ್



ಬೈತಡ್ಕ ಜಾನಕಿ ಬೆಳ್ಯಪ್ಪ



ಸ್ಮಿತಾ ಅಮೃತರಾಜ್



ಚೊಕ್ಕಾಡಿ ಪ್ರೇಮ ರಾಘವಯ್ಯ



ಧನಂಜಯ ಅಗೋಳಿಕಜೆ



ದಂಬೆಕೋಡಿ ಯಸ್. ಆನಂದ



ಡಾ. ದಯಾನಂದ ಕೆ. ಸಿ.
ಕೂಡಕಂಡಿ



ಕುಸುಮಾಧರ ಎ.ಟಿ



ಡಾ. ವಿಶ್ವನಾಥ ಬದಿಕಾನ



ಜಯಪ್ರಕಾಶ್
ಮೋಂಟಡ್ಕ ಬಿಳಿನೆಲೆ



ಪುರುಷೋತ್ತಮ ಕಿರ್ಲಾಯ



ಡಾ. ಪುರುಷೋತ್ತಮ ಕೆ.ವಿ.
ಕರಂಗಲ್ಲು



ಕಿರಣ್ ಕುಂಬಳಚೇರಿ



ಭರತೇಶ ಅಲಸಂಡೆಮಜಲು

## ರಿಜಿಸ್ಟ್ರಾರ್



ಶ್ರೀ ಚಿನ್ನಸ್ವಾಮಿ

## ಕಚೇರಿ ಸಿಬ್ಬಂದಿಗ



ಶ್ರೀಮತಿ ಜ್ಯೋತಿ



ಶ್ರೀಮತಿ ಶೋಭಾ



ಶ್ರೀ ವಿಘ್ನೇಶ್



ಅಧ್ಯಕ್ಷರ ಮಾತ್

# ಪ್ರಾದೇಸಿಕ ಬಾಸೆಲಿ ಬಾವ ಸುರುನ ವಿಶ್ವಕೋಶ



✍ ಲಕ್ಷ್ಮೀನಾರಾಯಣ ಕಜೆಗದ್ದೆ
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಕಜೆಗದ್ದೆ ಮನೆ, ಅಂಚೆ ಕನಕಮಜಲು, ಸುಳ್ಯ, ದ.ಕ. – 574223
ಮೊ: +91 9449082249

ಮೊನ್ಸ ಅವನ ಜ್ಞಾನ ಹೆಚ್ಚ್‌ಸಿಕಂಬಕೆ ಓದಿ ತಿಳ್ಕಂಡದೆ, ನೋಡಿ ತಿಳ್ಕಂಡದೆ, ಕೇಳಿ ತಿಳ್ಕಂಡದೆ, ಹಂಗೆನೇ ದೇಸ ಸುತ್ತಿನೂ ತಿಳ್ಕಂಡದೆ. ಅದ್‌ಕೆ ಹಿರಿಯರ್ ಹೇಳ್‌ತಿದ್ದೋ ಒಂದೋ ದೇಶ ಸುತ್ತೊಕು, ಇಲ್ಲರೆ ಕೋಶ ಓದೊಕುತ ಅಂವ ಎಸ್ಟ್ ತಿಳ್‌ಕಂಡರೆನು ಇಂದ್ ಗೊತ್ತಿರ್‌ದು ನಾಳೆಗೆ ಹಳ್‌ತ್ ಆಗಿ, ಹೊಸ್ತ್ ಎಂತ ಬಂದುಟುತ ಮೈಯೆಲ್ಲಾ ಕಣ್ಣ್, ಕೆಬಿ ಮಾಡಿಕಂಡ್ ಇರೋಕಾದ ಕಾಲಲಿ ನಾವ್ ಈಗ ಬೊದ್‌ಕೆಂಡ್ ಒಳೊ. ಹಿಂಗೆ ಕಾಲ ಕಾಲಕ್ಕೆ ನಾವ್ ಅಪ್‌ಡೇಟ್ ಆಗಿ 'ಸಾಮಾನ್ಯ ಜ್ಞಾನ' ತೇಲ್ದರ ಪಡ್ಕಂಬೊದು ಇಂದ್‌ನ ದಿನಲಿ ತುಂಬಾ ಅಗತ್ಯನ ಸಂಗತಿ. ಇಂದ್ ಜ್ಞಾನದ ಸಾಕೆ ತುಂಬಾ ಕವಲ್ ಕವಲಾಗಿ ಒಡ್‌ದುಟ್ಟು. ಪ್ರತಿ ಒಂದ್ ವಿಸಯಲಿ ನಾವ್ ತುಂಬಾ ತಿಳ್‌ಕಂಡಿದ್ದರೂ ಮೂಲಲಿ ಇರ್‌ವ ವಿಸಯಗಳ ತಿಳ್ಕಂಬೊಕೆ ನಾವ್‌ಗೆ 'ವಿಶ್ವಕೋಶ'ದ ಅಗತ್ಯ ಉಟ್ಟು. ಅದ್‌ಕಾಗಿ ಜೆನಗ ಅವರ ಅವರ ಬಾಸೆಲಿ ವಿಶ್ವಕೋಶದ ರಚನೆನ ಪ್ರಪಂಚದ ಮೂಲೆ ಮೂಲೆಲಿ ಮಾಡ್‌ಕಂಡ್ ಬಂದೊಳೊ.

1768ರ್‌ಲಿ ಇಂಗ್ಲಿಸ್ ಬಾಸೆಲಿ 'ವಿಶ್ವಕೋಶ' ಬಂದ ಮೇಲೆ ಬೇರೆ ಬೇರೆ ಬಾಸೆಲಿ ವಿಶ್ವಕೋಶ ಬಾಕೆ ಸುರ್ ಆತ್‌ತ ಹೇಳಿರೆ ತೊಪ್ಪಾಕಿಲೆ. ನಮ್ಮ ದೇಸದ ಬಾಸೆಗಳ ವಿಸಯಕೆ ಬಂದರೆ ಕನ್ನಡ, ತಮಿಳ್, ತೆಲುಗ್, ಬಂಗಾಲಿ, ಮರಾಠಿ, ಹಿಂದಿ, ಗುಜರಾತಿ ಮಲಯಾಳಂ, ಬಾಸೆಲಿ ವಿಶ್ವಕೋಶ ಬಂದ್‌ಟ್ಟು. ಒಂದ್ ಬಾಸೆಲಿ ವಿಶ್ವಕೋಶ ಬಂದರೆ ಆ ಬಾಸೆನ ಸ್ತಾನಮಾನ ಹೆಚ್ಚಾದೆ. ಹಂಗೆನೆ ಆ ಬಾಸೆ ಗೊತ್ತಿರ್‌ವ ಜೆನಕೆ ಅವರ ಬಾಸೆಲಿ 'ಸಾಮಾನ್ಯ ಜ್ಞಾನ' ಸುಲಬಲಿ ಸಿಕ್ಕಿದೆ. ಆಗ ಜೆನಗ ಜ್ಞಾನವಂತರ್ ಆದವೆ. ಅದ್ಕೆ ನೋಡಿ ತುಂಬಾ ತಿಳ್ಕಂಡವ್‌ಕೆ ಜೆನಗ ಅವ್ ಒಂದ್ ವಿಶ್ವಕೋಶ ಇದ್ದಂಗೆತ ಹೇಳ್ದು!

ನಮ್ಮ ಅರೆಬಾಸೆ, ಗೌಡ ಜೆನಾಂಗದ ಹತ್ತ್ ಕುಟುಂಬ, ಹದಿನೆಂಟ್ ಗೋತ್ರದವ್, ಮಾತಾಡ್‌ವ ಅವ್ವಬಾಸೆ ಆದರೆನೂ ಬಾಸೆ ಯಾದೆ ಒಂದ್ ಜಾತಿನ ಸೊತ್ತ್ ಆಗದೆ ಸಮಾಜದ ಸೊತ್ತ್ ಆಗಿರೊಕು. ಆಗ ಬಾಸೆಗೆ ಕಸ್ಟ ಬಂದರೆ ಬಾಸೆ ತೇಳ್‌ವ ತೊಟ್ಟಿಗಿಲ್‌ನ ತೂಗಿಕೆ ಎಲ್ಲವೂ ಬಂದವೇ. ಅಲ್ಲದೆನೇ ಬಾಸೆಗೆ ಕೆಲ್ಸ ಮಾಡಿಕೆ ಎಲ್ಲವ್‌ಕು ಉಮೇದ್ ಬಂದದೇ.

ಅರೆಬಾಸೆಗೆ 2011 ರ್‌ಲಿ ಕರ್ನಾಟಕ ಸರಕಾರ ಅಕಾಡೆಮಿ ಸ್ತಾನಮಾನ ಕೊಟ್ಟತ್, ಹಂಗಾಗಿ ಬಾಸೆಗೆ ಸಮ್ಮಂದಪಟ್ಟಂಗೆ ಹೆಚ್ಚ್ ಹೆಚ್ಚ್ ಅಕಾಡೆಮಿಕ್ ಕೆಲ್‌ಸ ಮಾಡಿಕೆ ಮತ್ತೆನ ದಿನಲಿ ಸಾದ್ಯ ಆತ್. ನಾವ್ ನಮ್ಮ ಅಕಾಡೆಮಿ ಅವದಿಲಿ ವಾರ್ಸಿಕ ಕ್ರಿಯಾ ಯೋಜನೆ ಮಾಡ್‌ಕನ ಅರೆಬಾಸೆಲಿ ಒಂದ್ ವಿಶ್ವಕೋಶ ಆಕುಂತ ಯೋಚನೆ ಮಾಡ್‌ದೊ. ಆದರೆ ವಿಶ್ವಕೋಶದ ಕೆಲ್ಸ ಹೆಂಗೆ ಮಾಡ್ದು? ವಿಶ್ವಕೋಶಲಿ ಕೆಲ್ಸ ಮಾಡಿ ಗೊತ್ತಿರೊವ್ ಯಾರ್ ಒಳೊಂತ ನಾವ್‌ಗೆ ಯಾರಿಗೂ ಗೊತ್ತಿತ್ಲೆ. ನಾವ್ ವಿಚಾರ್‌ಸಿಕಂಡ್ ಹೋಕನ 'ಪಾಂಡಿತ್ಯವಲಯ'ಲಿ ಕೇಳಿ ಬಂದ ಹೆಸರ್ ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ತೆಲಿ ಕನ್ನಡ ವಿಶ್ವಕೋಶಕೆ ದೊಡ್ಡ ಕೆಲ್ಸ ಮಾಡ್‌ದ ಪ್ರೊ. ಹಾ.ತಿ. ಕೃಷ್ಣೇಗೌಡರ್ ಸಂಪರ್ಕ ಮಾಡಿ ಅವರ ವಿಸಯನ ಚರ್ಚೆ ಮಾಡಿ ನಿಮ್ಮ ಸಾಯ ಬೇಕುತ ಕೇಳ್ದೊ. ಅವ್ ಕುಸಿಲಿ ಒಪ್ಪಿಕಂಡ್ ನಾ ನೀವ್‌ಗೆ ಮಾರ್ಗದರ್ಶನ ಮಾಡ್ನೆತ ಹೇಳ್ದೊ. ಅವರ ಮಾತ್‌ನಂಗೆ ನಾವ್ ಸುಳ್ಯ ಮತ್ತೆ ಮಡಿಕೇರಿಲಿ ಸಬೆ ಕರ್‌ದ್ ಅಬಿಪ್ರಾಯ ತೆಕಂಡ. ಆದರೆ ಮತ್ತೆನ ದಿನಗಳ್‌ಲಿ ಕೊರೊನಂದ ನಾವ್‌ಗೆ ಜೆನಗಳ ಸೇರ್‌ಸಿ ಸಬೆ ನಡ್‌ಸಿಕೆ, ಲೇಕನಗಳ ಬರ್‌ಸಿಕೆ ಸಾದ್ಯ

ಆತ್ಲೆ. ನಮ್ಮ ಅಕಾಡೆಮಿನ ಅವದಿ ಮುಕ್ಕಂಡ್ ಬರ್‌ತಿದ್ದ ಕಾರಣ ನಾವ್ ಎಸ್ಟ್ ಸಾದ್ಯನೊ ಅಸ್ಟ್ ಲೇಕಕರ ಹಕ್ಕಲೆ ಲೇಕನ ತೆಕಂಡ್ ವಿಶ್ವಕೋಶನ ತಯಾರ್ ಮಾಡ್ದು ಬಾರಿ ಕಸ್ಟದ ಸಂಗತಿ. ಅದರ್‌ಲಿ ಒಂದ್ ಪ್ರಾದೇಸಿಕ ಬಾಸೆಲಿ ಮಾಡ್ದು ಇನ್ನೂ ಕಸ್ಟನೇ. ಬಾಸೆ ಗೊತ್ತಿರೊಕು, ಬರೆವ ವಿಸಯಲಿ ಜ್ಞಾನ ಇರೋಕು, ಬರ್‌ದ್ ಅಬ್ಬೆಸ ಇರೋಕು. ಇಸ್ಟೆಲ್ಲ ಗೊತ್ತಿದ್ದ ಮೇಲೆ ಬರೆವ ಉಮೇದ್ ಇರೋಕು. ಇಸ್ಟ್ ಸಂಗತಿ ಗೊತ್ತಿರುವೊವು ಅರೆಬಾಸೆಲಿ ಕಡಿಮೆ ಒಳೊ. ಹಂಗಾಗಿ ವಿಶ್ವಕೋಶದ ಕೆಲ್ಸ ನಾವ್‌ಗೆ ಹಙ್ಙಾ ಸವಾಲ್ ಆತ್. ಆದರೆನು ಅರೆಬಾಸೆಲಿ ಒಂದ್ ವಿಶ್ವಕೋಶ ರಚನೆ ಆಗೇ ಆಕುತೇಳ್ವ ದೊಡ್ಡ ಮಟ್ಟ್‌ನ ಹಟ ಈ ಕೆಲ್ಸನ ಮಾಡ್‌ಸಿಟ್ಟು! ಒಂದ್ ಹಂತಲಿ ವಿಶ್ವಕೋಶದ ಕೆಲ್ಸ ನಾವ್‌ಗೆ ಮಾಡಿಕೆ ಸಾದ್ಯ ಆತ್ಲೆ ತ ಅಬಿಪ್ರಾಯ ಬಾಕನ ಪ್ರೊ. ಹಾ.ತಿ.ಕೃಷ್ಣೇಗೌಡ್ರು ಮಾತ್ರ ಇದ್ ಆಗಿಯೇ ಆಕು. ಒಂದ್ ಪ್ರಾದೇಸಿಕ ಬಾಸೆಲಿ ಬಾವ ಸುರುನ ವಿಶ್ವಕೋಶ ಇದಾಗಿದ್ದದೆ. ನೀವ್ ಇದರ ಕೈ ಬುಡ್‌ವ ಹಂಗೆ ಇಲ್ಲೆತ ಎಚ್ಚ್‌ರ್‌ಸಿ ನಮ್ಮ ಹಕ್ಕಲೆ ಈ ಕೆಲ್ಸ ಮಾಡ್‌ಸಿಯೊಳೊ.

ನಮ್ಮ ಅಕಾಡೆಮಿ ಸದಸ್ಯರ್‌ಲಿ ಎಲ್ಲರ್‌ಂದ ಸಣ್ಣ ಪ್ರಾಯದೊವ್ ಭರತೇಶ್ ಅಲಸಂಡೆಮಜಲು, ಅವ್ ತಂತ್ರಜ್ಞಾನ ಬಳ್ಸಿಕಂಡ್ ಕೆಲ್ಸ ಮಾಡುದರ್‌ಲಿ ಬಾರಿ ಉಸಾರ್. ವಿಶ್ವಕೋಶದ ಮುಕ್ಯ ಸಂಪಾದಕರ ಜೊವಾಬ್ದಾರಿನ ಅಕಾಡೆಮಿ ಅವದಿನ ಕಡೇಲಿ ಅನಿವಾರ್ಯವಾಗಿ ಅವ್‌ಕ್ಕೆ ಕೊಟ್ಟೊ. ಹಂಗೆನೇ ಸಂಪಾದಕರಾಗಿ ಡಾ. ವಿಶ್ವನಾಥ ಬದಿಕಾನ ಅವ್ಕೆ ನಾ ಕೇಳಿಕಂಡೆ. ಅವ್ ಅದರ ಸವಾಲಾಗಿ ತೆಕಂಡ್ ಕಡೆ ಹೊತ್ತ್‌ಲಿ ಬಾರಿ ಉಮೇದ್‌ಲಿ ಹಗಲಿರ್‌ಲ್ ಕುದ್ದ್ ಕೆಲ್ಸ ಮಾಡ್ದೊ. ವಿಶ್ವಕೋಶ ಸಂಪಾದನೆ ಮಾಡಿಕೆ ತುಂಬಾ ನಿದ್ದೆಗೆಟ್ಟೊಳೊ. ಲೇಕನಗಳ ಬೇರೆವರ ಹಕ್ಕಲೆ ಬರ್‌ಸುದು, ಅದರ ತಿದ್ದುದು, ಬರ್‌ದದ್ ಸರಿ ಇತ್ಲಾರ್ ಅವ್ವೇ ಕುದ್ದ್ ಬರಿದು. ವಿಸಯ ಸಂಗ್ರಹಣೆ ಮಾಡ್ದು, ಅದರ ಬೇಕಾದಂಗೆ ಜೋಡ್ಸುದು. ಹಿಂಗೆ ಕೆಲ್ಸನ ಎಸ್ಟ್ ಗಮನ ಕೊಟ್ಟ್ ಮಾಡ್ರೂ ಪುಸ್ತಕಲಿ ತಪ್ಪುಗ ಇದ್ದೇ ಇದ್ದದೆ. ಮುಕ್ಯ ಆಗಿ ವಿಶ್ವಕೋಶಕೆ ಬಾವ ಲೇಕನಗಳ ಬೇರೆ ಬೇರೆ ಜ್ಞಾನದ ಮೂಲಂದ ಬಂದಿದ್ದದೆ. ಕನ್ನಡ ಬಾಸೆನ ಲೇಕನಕೆ ಅರೆಬಾಸೆನ ಹೊಂದ್‌ಸಿಕಂಡ್ ವಾಕ್ಯ ಬರಿದು, ಅರೆಬಾಸೆ ಪದ ಕೊಡ್ದು ಬಾರಿ ಕಸ್ಟದ ಕೆಲ್ಸ. ಆದರೆ ಮುಂದೆನ ದಿನಲಿ ಈ ವಿಶ್ವಕೋಶನ ಮಾದರಿ ಆಗಿ ಇಸಿಕಂಡ್ ಅರೆಬಾಸೆಲಿ ವಿಶ್ವಕೋಶದ ಎರಡನೇ ಸಂಪುಟ ತಾಕೆ ಇದ್ ಸಾಯ ಮಾಡ್ದೆ. ಅರೆಬಾಸೆಲಿ ವಿಶ್ವಕೋಶ ತಾದು ಕಸ್ಟತ ಅಕಾಡೆಮಿನಂತ ಜವಾಬ್ದಾರಿನ ಜಾಗೆಲಿ ಇರ್‌ವ ನಾವು ಹೇಳ್ದಕ್ಕಿಂತ ತಪ್ಪಾದರೆನು ಸರಿ ಮಾಡೋಕು ತೇಳ್‌ವ ನಿರ್‌ದಾರ ತುಂಬಾ ಮುಕ್ಯ ಆದೆ. ನಾವು ಸಂಪಾದನೆ ಮಾಡ್ದ ವಿಶ್ವಕೋಶಲಿ ತೊಪ್ಪುಗ ಇರ್‌ವ. ಆದರೆ ಮುಂದೆನ ದಿನಲಿ ಪರಿಸ್ಕೃತ ಸಂಪುಟ ತಾಕನ ತೊಪ್ಪುಗಳ ಸರಿಪಡಿಸಿ ಸಂಪಾದ್‌ಸ್‌ವೊವ್ಕೆ ಇದ್ ಒಂದ್ ದಾರಿದೀಪ ಆಗ್‌ವಂತ ಕೆಲ್ಸನ ನಮ್ಮ ಅವದಿಲಿ ಮಾಡಿಕೆ ನಾವ್‌ಗೆ ಆವುಟು ತೇಳ್ದು ಬಾರಿ ಕುಸಿನ ಸಂಗತಿ.

ದೂರದ ಹೈದರಾಬಾದ್‌ಂದ ಮನೋಜ್ ಕುಡೆಕಲ್ಲು ಹೆಚ್ಚ್‌ನ ಎಲ್ಲಾ ಲೇಕನಗಳ ಓದಿ ಅರೆಬಾಸೆಗೆ ಅನುವಾದಿಸಿಯೊಳೊ. ಅಕಾಡೆಮಿ ಸದಸ್ಯರಾದ ಶ್ರೀಮತಿ ಸ್ಮಿತಾ ಅಮೃತರಾಜ್, ಶ್ರೀ ಕಿರಣ ಕುಂಬಳಚೇರಿ ಅನುವಾದಿಸಿಕೆ ಸಹಕರಿಸಿಯೊಳೊ. ಶ್ರೀ ಪುರುಷೋತ್ತಮ ಕಿರ್ಲಾಯರ್, ಸರೋಜ ಎಂ.ಕೆ. ಮತ್ತೆ ಎಂ.ಜಿ.ಕಜೆ ಓದಿ ತಿದ್ದಿ ಕೊಟ್ಟೊಳೊ. ಕುಸುಮಾಧರ ಎ.ಟಿ., ಪುರುಷೋತ್ತಮ ಕೆ.ವಿ. ಕರಂಗಲ್ಲು ಆರಂಬಲಿ ಸಹಕರಿಸಿಯೊಳೊ. ಸಲಹಾ ಸಮಿತಿಲಿ ವಿನೋದ್ ಮೂಡಗದ್ದೆ ಸಹನಾ ಕಾಂತಬೈಲ್ ಮತ್ತೆ ಎಲ್ಲ ಸದಸ್ಯರ್, ಹಿರಿಯ ವಿದ್ವಾಂಸರ್ ಇದ್ದ್ ಸಹಕರಿಸಿಯೋಳೋ ಹೀಂಗೆ 10 ತಿಂಗಳ್‌ಲಿ ವಿಶ್ವಕೋಶ ಕೆಲಸ ಮಾಡಿ ಮುಗ್ಸಿದ್ ದೊಡ್ಡ ಸಾದನೆಯೇ ಸರಿ. ಇವ್ಕೆಲ್ಲಾ ನಾ ಅಬಿನಂದನೆ ಸಲ್ಲಿಸ್ತಾ ಒಳೆ. ಈ ಸಂಪುಟಲಿ ಅರೆಬಾಸೆ ಪ್ರದೇಶದ ಹಿರಿಯ ಲೇಕಕರ್ ಮಾಹಿತಿ ಲೇಕನಗಳ ಬರ್‌ದ್ ಕೊಟ್ಟೊಳೊ. ಡಾ. ಪುರುಷೋತ್ತಮ ಬಿಳಿಮಲೆ, ಡಾ. ಪೂವಪ್ಪ ಕಣಿಯೂರು, ಶ್ರೀ ಅರವಿಂದ ಚೊಕ್ಕಾಡಿ, ಶ್ರೀ ಅನಂತರಾಜ್ ಗೌಡ ಪುತ್ತೂರು, ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್, ಡಾ. ಸುಂದರ ಕೇನಾಜೆ ಹೀಂಗೆ ಹಲವರ್ ಸಮಯಕ್ಕೆ ಸರಿಯಾಗಿ ಸಹಾಯ ಮಾಡ್ಯೊಳೊ. ಅಕಾಡೆಮಿ ರಿಜಿಸ್ಟ್ರಾರ್ ಶ್ರೀ ಚಿನ್ನಸ್ವಾಮಿ, ಸಿಬ್ಬಂದಿಗಳಾದ ಶ್ರೀಮತಿ ಜ್ಯೋತಿ, ಶ್ರೀಮತಿ ಶೋಭಾ, ಶ್ರೀ ವಿಘ್ನೇಶ್ ಎಲ್ಲರ ಈ ಹೊತ್ತ್ ನೆನ್ಸಿಕಣೆ. ಪ್ರಕಟಣೆ ಹೊತ್ತ್‌ಲಿ ತಾಂತ್ರಿಕ ಸಹಾಯ ಮಾಡ್ದ ದಿಗಂತ ಮುದ್ರಣದ ಶ್ರೀ ರಾಜೇಶ ಎಂ., ಮುಖಪುಟ ವಿನ್ಯಾಸ ಸುಧಾಕರ್ ಆಚಾರ್ಯ ಮತ್ತೆ ಮುಕಪುಟ ಒಳಪುಟ ವಿನ್ಯಾಸ ಮಾಡ್ಕ ಹರೀಶ್ ಕೊಡೆತ್ತೂರು ಇವ್ಕೆ ದನ್ಯವಾದಗ.





ಮುಕ್ಯ ಸಂಪಾದಕರ ಮಾತ್

# ಒಂದು ಚೌಕಟ್ಟ್‌ನ ಮಾದರಿ ಬರೆಹದ ಕೊಪ್ಪರಿಗೆ ಅರೆಭಾಷೆ ವಿಶ್ವಕೋಶ



✍ ಭರತೇಶ ಅಲಸಂಡೆಮಜಲು
ಬೋಜಪ್ಪ ಗೌಡರ ಮಗ, ಅಲಸಂಡೆ ಮಜಲು ಮನೆ,
ಪೆರ್ಲಂಪಾಡಿ ಅಂಚೆ, ಕೊಳ್ತಿಗೆ ಗ್ರಾಮ, ಪುತ್ತೂರು
ಮೊ: +91 9008027271

**ವಿಶ್ವಕೋಸದ ಬಗ್ಗೆ:** ಜ್ಞಾನದ ಬೇರೆ ಬೇರೆ ಸಾಕೆಗಳ ಒಳ್ಳ ಸೆಳ್ತ ಇರ್‌ವ ವಿಶ್ವಕೋಶಗಳ ರಚನೆ ಭಾರತಲಿ ಹಿಂದೆಂದಲು ಸಾಗಿ ಬಂದುಟು. ಒಂದೊಳ್ಳ ಸಮಾಜಕೆ ಅಗತ್ಯಂತ ಅನ್‌ಸ್‌ವ ಸುಮಾರ್ ವಿಚಾರ, ವಿಸಯಗಳ ಸಾರನ ಸರಳ ಆಗಿ ಬುಡ್ಸಿದ್ ಒಂದೇ ಪುಸ್ತಕ ಆಗಿದ್ ಬರಿವ ಪ್ರಯತ್ನ ನಡ್‌ಕಂಡ್ ಬಂದುಟು. ಇಂದ್‌ನ ಅಧುನಿಕ ಜಗತ್‌ಲಿ ಮಾಯಿತಿ ನಮ್ಮ ಕೈ ಬೆರ್‌ಳ್‌ಲಿ ಇದ್ದರೂ ಅವ್ವ ಬಾಸೆಲಿ ಪ್ರಪಂಚದ ಗೇನನ ತಿಳ್ಕಂಡ್ ಅದರ ನಮ್ಮ ಗೇನದ ಜ್ಞಾನ ಮಾಡಿಕಂಡ್ ಹಂಗೆನೆ ನಮ್ಮ ಪರಿಸರದ ಜ್ಞಾನ ಬೇರೆವ್‌ಕೆ ಕೊಡುದೇ ವಿಶ್ವಕೋಶದ ಕೆಲಸ.

ಅರೆಭಾಷೆ ಸಂಸ್ಕೃತಿ, ಸಾಹಿತ್ಯ, ಪಾರಂಪರಿಕ ಕಲೆಗೆ ಸಮ್ಮಂದಪಟ್ಟಂಗೆ ಒಂದ್ ಸಾವಿರ ಸೀರ್ಸಿಕೆಗಳ ಮಾಡಕ್. ಇನ್ನೂ ಸೆರಿಲಿ ನೋಡಿರೆ ಆ ಲೆಕ್ಕನ ಮೂರ್‌ಪಟ್ಟ್ ಮಾಡಿಕೆನು ಸಾದ್ಯ. ಆದರೆ ನಾವ್‌ಗಿದ್ದದ್ ಮಿತಿ ಇರ್‌ವಸ್ಟೆ ಸಮಯಲಿ ಮುಗ್‌ಸ್‌ವ ಅವ್‌ಕಾಸ ಮಾತ್ರ. ಇಸ್ಟರ್‌ಲೆ ಬಾವಂಗೆ 150 ಲೇಕನಗಳ ಸಿದ್ದಪಡ್‌ಸಿಯೊಳೊ. ಕಲೆ-ಸಾಹಿತ್ಯ-ಸಂಸ್ಕೃತಿ-ಭಾಷೆ-ಸಾಧಕ ವ್ಯಕ್ತಿಗ ಹೀಂಗೆ ಸುಮಾರ್ ವಿಸಯಲಿ ಮಾಹಿತಿನ, ಕಿರಿಯರ್ ತಿಳ್ದಿರಕಾದ ಎಲ್ಲ ಇಸಯನ ಇಕ್ಕಿಸಿದ ತಿನಿನ ಹಾಂಗೆ ಇಲ್ಲಿ ಕೊಟ್ಟೊಳೊ. ವಿಶ್ವದ ಇಸಯದ ವ್ಯಾಪ್ತಿ ಇಲ್ಲದ ಯಾವ ಓದುನೂ ಸಮಗ್ರ ಅಂತಾದುಲೆಗಡ. ಮೂಡ ಪೊಡ್‌ವಣ ತೇಳ್‌ವ ಬೇದಕಾಗಲಿ, ಬಾಸೆನ ಬಗ್ಗೆ ಪ್ರಾದೇಸಿಕ ಹೆಚ್ಚ್‌ಗಾರಿಕೆಗೆ ಇಲ್ಲಿ ಜಾಗೆ ಇಲ್ಲೆ. ಮೊನ್ಸನ ಅಲೋಚನೆ ಎಂತದೇ ಇರ್‌ಲಿ ಜ್ಞಾನ ಜ್ಞಾನನೆ. ಇಂತದ್ ಸ್ವೀಕಾರ ಯೋಗ್ಯ, ಇಂತದ್ ಅಯೋಗ್ಯತೇಳ್‌ವ ಇಸಯ ಜ್ಞಾನ ಪ್ರಪಂಚಲಿ ಇಲ್ಲೆ . ಎಲ್ಲ ತಿಳ್‌ವಳಿಕೆನೂ ಕೈಗೆ ಸಿಕ್ಕಿರೆ ಮಾತ್ರ ವೈಯಕ್ತಿಕ ಆಯ್ಕೆ ಸುಲಬ ಆದೆ.

ನೂರಾರ್ ಕೋಟಿ ಪದಗ ಇರ್‌ವ, ಸುಮಾರ್ ಲಕ್ಷ ಪುಟಗ ಇರ್‌ವ? ಎನ್‌ಸೈಕ್ಲೋಪೀಡಿಯಾ ಬ್ರಿಟಾನಿಕಾಲಿ ಯಾದೇ ಒಂದ್‌ಲೇಕನಲಿ ಎಲ್ಲಮಾಹಿತಿ ಸಿಕ್ಕುದುಲೆ. ವಿವರಗಳೆಲ್ಲನು ತುರ್‌ಕಿಕೆ ಹೊರ್‌ಟರೆ, ಪ್ರತಿ ಲೇಕನನು ಒಂದೊಂದ್ ಪುಸ್ತಕ ಆದೆ. ವಿಶ್ವಕೋಶನ ಬರಿಯಕನ ವಿಶ್ವಕೋಶದ ಚೌಕಟ್ಟ್‌ನ ಮಾದರಿಲಿ ಇರೊಕು. ಸೊಂತ ಅಬಿಪ್ರಾಯ, ವಿವರಣೆ, ಹೊಗಳಿಕಂಬದು, ಉಪಮಾನ-ಉಪಮೇಯಗ ಸೇರ್‌ಸಿಕಂಬದು ಇಂತದರ ಬುಟ್ಟ್ ಸೀದ ವಿಸಯಕೆ ಹುಕ್ಕ್ ಸರಳ, ಸುಲಬ ಬಾಸೆಲಿ ಮಾಯಿತಿನ ವಿವರ್‌ಸುದು ಕ್ರಮ. ಇಂತ ಸುಮಾರ್ ನಿಯಮಗಳ ಅರೆಭಾಷೆ ವಿಶ್ವಕೋಶಲಿ ಪಾಲ್‌ಸಿಕೆ ಪ್ರಯತ್ನ ಪಟ್ಟೊಳೊ. ಭಾರತೀಯ ಬಾಸೆಗಳ್‌ಲಿ ವಿಶ್ವಕೋಶಗ ಬೇಕಸ್ಟ್ ಬಂದುಟು. ಇದ್ ಸುಳ್ಯ ಮತೆ ಮಡಿಕೇರಿ ಪ್ರದೇಸಲಿ ಜೀವಂತ ಇರ್‌ವ ಅರೆಭಾಷೆನ ಸುತ್ತ ಹರ್‌ಂಡಿಕಂಡಿರ್‌ವ ಸುಮಾರ್ ಬಗೆನ ಜ್ಞಾನನ ಅರೆಬಾಸೆಲೇ ತೋರ್‌ಸಿಕೊಟ್ಟದೆ. ಇಂತ ಕೆಲ್‌ಸಗ ಅರೆಬಾಸೆಲಿ ಇದ್‌ವರೆಗೆ ನಡೆದೇ ಇರ್‌ದರ್‌ಂದ ಈ ಪುಸ್ತಕಕೆ ಐತಿಹಾಸಿಕ ಮಹತ್ವ ಉಟ್ಟು. ಹಂಗೆನೆ ಒಂದ್ ಪ್ರದೇಸದ ಸಣ್ಣಬಾಸೆಲಿ ಹೊರಬಾವ ಸುರುನ ವಿಶ್ವಕೋಶಂತೇಳ್‌ವ ಹೆಗ್ಗ ಅರೆಭಾಷೆ ವಿಶ್ವಕೋಶಕೆ ಉಟ್ಟು. ನಮ್ಮ ರಾಜ್ಯಲಿ ಕನ್ನಡನ ಬುಟ್ಟರೆ ಅರೆಭಾಷೆಲೇ ವಿಶ್ವಕೋಶ ಒಳದ್ ತೇಳ್ದು ಕುಸಿನ ಸಂಗತಿ.

**ಪರಿವಿಡಿ ಬಗ್ಗೆ:** ವಿಶ್ವಕೋಶನ ಕಿರಿಯರ, ಹಿರಿಯರ ಆಲೋಚನೆನ, ಅವಸ್ಯಕತೆನ ಗಮನಲಿ ಇಸಿಕಂಡ್, ವಿವರಾಗಿ ದೊಡ್ಡ ಅಕ್ಷರಲಿ, ಸೀರ್ಸಿಕೆಗಳ ಬಳಸಿಕಂಡೊಳೊ. ಉಪಸೀರ್ಸಿಕೆಗ, ಬೇರೆ ಲೇಕನಕೆ ಕೊಂಡಿಗ, ಬರ್‌ದವರ ಹೆಸರ್‌ನ ಇನ್ಸಲ್‌ನ ಲೇಕನದ ಕಡೇಗೆ ಬರ್‌ದೊಳೊ. ಪ್ರತಿಯೊಂದ್ ಸೀರ್ಸಿಕೆ, ಉಪುಸೀರ್ಸಿಕೆಗಳ 'ಅ'ಕಾರಂದ ಬಾವಂಗೆ ಜೋಡ್‌ಸಿ, ಪುಸ್ತಕದ ಕಡೆಲಿ ಪುಟಸಂಕೆನ ಕೊಟ್ಟೊಳೊ. ಅರೆಭಾಷೆ ವಿಶ್ವಕೋಶ ಸಂಪುಟಲಿ ಮುಕ್ಯ ಆಗಿದ್ ಅರೆಬಾಸೆ ಪ್ರದೇಸದ ಸಂಸ್ಕೃತಿ, ಆಚರಣೆ, ಆರಾದನೆ, ಪಾರಂಪರಿಕ ಸೊತ್ತ್‌ಗ, ಸಾಮಾನ್‌ಗ, ಪೊದ್ದತಿಗ, ನಿಸೇದಂಗ, ಜಾಗೆಗ, ವ್ಯಕ್ತಿ ಪರಿಚಯ, ಕೃಷಿ-ಬೇಸಾಯ, ಬೇಟೆ, ವರ್ಸವಂತಿ ಆಚರಣೆಗ, ಜೀವನಾವರ್ತನ ಆಚರಣೆಗ, ಜನಪದ ಆಟಗ, ಜನಪದ ಕೊಣ್ತಗ, ಜನಪದ ಅಡ್‌ಗೆ-ತಿನಿ ಸಂಸ್ಕೃತಿ, ಜನಪದ ನಂಬಿಕೆಗ, ಜನಪದ ದೈವಗಳ, ಕೌಟುಂಬಿಕ ಸಮ್ಮಂದಗ, ಜನಪದ ಕತೆ, ಗಾದೆಗ, ಒಡ್ಸ್ ಕತೆ, ಐತಿಹ್ಯ, ಇತಿಯಾಸ, ನಮ್ಮ ನಾಡ್‌ನ ಚರಿತ್ರೆ, ಶಿಶುಪ್ರಾಸಗ, ಜನಪದ ವೈದ್ಯ, ಹಬ್ಬಗ, ಉಡುಗೆತೊಡುಗೆ, ಸಾಹಿತ್ಯ, ರಂಗಬೂಮಿ ಹೀಂಗೆ ಬೇಕಾದಂತ ಲೇಕನಗ ಕಾಂಬಕೆ ಸಿಕ್ಕಿದೆ. ಇದರೊಟ್ಟಿಗೆ ಬೇರೆ ಅಗತ್ಯ ಲೇಕನಗಳ ಬಳ್‌ಸಿಕಂಡೊಳೊ.

**ವಿಶ್ವಕೋಸ ಲೇಕನಗಳ ರಚನೆ ಸೊರೂಪ:** ಅರೆಭಾಷೆ ವಿಶ್ವಕೋಶ ಬರೆವಣಿಗೆಲಿ ಇದ್ದ ಸಾಂಸ್ಕೃತಿಕ ಪಾರಿಭಾಷಿಕ ಪದಂಗ, ಆಡಳಿತಾತ್ಮಕ ಪದಂಗ, ವಿಜ್ಞಾನ ಸಮ್ಮಂದಿ ತಾಂತ್ರಿಕ ಪದಗಳ ಕೊರ್‌ತೆ ಕಂಡ್‌ಬಾತ್. ಇದ್‌ಕೆ ಹೋಲ್‌ವ ಅರೆಬಾಸೆನ ಪದಗಳನೆ ಬಳ್‌ಸಿಕೆ ಪ್ರಯತ್ನಪಟ್ಟೊಳೊ. ಹೊಸ್ತಾಗಿ ಬಾಸೆಲಿ ಪದಗಳ ಒತ್ತಿ ಬರ್‌ದದ್, ಅದ್ ಅರ್‌ತ ಆಗದೇ ಹೋದರೆ ಸಮಾನಪದಗಳ ಸ್ರಿಸ್ಟಿಸಿ ಎಂತ ಪ್ರೇಜನ? ಇದರ ಗುಮನಲಿಸಿದ್, ಸುಲಬಲಿ ಅರ್‌ತ ಆವ ಕಡೆ ಅಂತರರಾಷ್ಟ್ರೀಯ ಬಳಕೆನ ಹಾಂಗೆನೆ ಪದರೂಪಗಳನೆ ಒಳ್‌ಸಿಕಂಡೊಳೊ. ಇಂಗ್ಲಿಸ್ ಅಂಕೆಗಳ ಬಳ್‌ಸಿಕಂಡೊಳೊ, ಒಂದ್ ಸಂಗತಿನ ಮೇಲೆ ಸುಮಾರ್ ವಿದ್ವಾಂಸರ್ ಬರ್‌ದದರ ಒಂದೇ ಸೀರ್‌ಸಿಕೆನಡಿಲಿ ಒಳ್‌ಸಿಕಂಡೊಳೊ. ಉದಾ: ಸಿದ್ದವೇಸ, ಮೊದುವೆ ಸಂಪ್ರದಾಯ ಇಂತದೆಲ್ಲ. ಸಂಸೋದನೆ ಮಾಡ್‌ವ ಓದ್‌ವವ್ಕೆ ಸುಲಬಲಿ ಸಿಕ್ಕೊಕು ಮತೆ ಬೇರೆಬೇರೆ ಒಳ ಸಂಗತಿಗ, ಯೋಚನೆಗ ಸಿಕ್ಕಲಿ ತೇಳ್‌ವ ನೆಲೆಲಿ ವಿಶ್ವಕೋಶದ ಪರಿಣಿತರೊಟ್ಟಿಗೆ ಚರ್‌ಚೆ ಮಾಡಿ ಒಳ್‌ಸಿಕಂಡೊಳೊ. ರಾಜ್ಯ, ರಾಷ್ಟ್ರಮಟ್ಟಲಿ ಗುರ್‌ತ್‌ಸಿಕಂಡಿರ್‌ವ, ಅಕಾಡೆಮಿ ಪ್ರಶಸ್ತಿ ಪಡ್‌ದಿರ್‌ವ, ಸರಕಾರ ಗುರ್‌ತ್‌ಸಿದಂತ ಇನಾಮು ಪಡ್‌ದಿರ್‌ವ ಅರೆಬಾಸೆ ಪ್ರದೇಸದ ಸಾದಕರ ಪರ್‌ಚಯನ ಮಾಡೆಳೊ. ಈ ಮಾಹಿತಿಕೊಶಲಿ ಸುಮಾರ್ ವಿಸಯ, ವಿಚಾರಗಳ ತಾವ ಪ್ರಯತ್ನಲಿ ಲೇಕಕರ ಕೊರ್‌ತೆ, ನಿರ್ದಿಸ್ಟ ಅವದಿ, ರೇಕಾಚಿತ್ರ ಬರ್‌ದ್ ಕೊಡ್‌ವವರ ರ್‌ದಿ ಅಸಹಕಾರಂದ ಸುಮಾರ್ ಲೇಕನಗ ಕಡ್‌ಮೆನೊ ಅಲ್ಲೊ ಬೇಕೇ ಬೇಕು ತೇಳ್‌ವ ಲೇಕನಗ ಬಾರದೆ ಹೋಗುಟು. ಆದರೂ ಒಟ್ಟಾರೆ ಅರೆಬಾಸೆಗೆ ಒಂದ್ ಚೌಕಟ್ಟ್‌ನ ಮಾದರಿ ಬರೆಹದ ಕೊಪ್ಪರಿಗೆ ಆಗುಟು.

ವಿಸಯ ಎಸ್ಟ್ ಬಜ್ಜ ಇದ್ದರೆನು ಬರೆವಣಿಗೆ ಆದಸ್ಟ್ ಸರಳ ಆಗಿರಕು. ಪೊರ್‌ಲಿರಕು; ಕ್ರಮಲಿ ಸುಮಾರ್‌ಮಟ್ಟ್‌ಗೆ ಎಲ್ಲನು ಒಂದೇ ತರ ಇರೊಕು ತೇಳ್ದು ನಮ್ಮ ಗುರಿ ಆಗಿತ್ತ್. ಅದರ್‌ಲಿ ನಾವ್ ಪೂರ ಸರಿ ಇದ್ದ್ ಲಾಯಿಕ್ ಮಾಡಿಯೊಳೊಂತ ನಾ ಹೇಳ್‌ದುಲೆ. ಪ್ರಯತ್ನ ಅಂತು ಮಾಡಿಯೊಳೊ. ತಕ್ಕಮಟ್ಟ್‌ಗಾರ್ ಅದ್ ಪೊಳ್‌ಕಿರೆ ನಾವ್‌ಗೆ ಕುಸಿ. ಹಾಂಗಾಗಿ ಹೆಚ್ಚಿಗೆ ಸುಳ್ಯ ಪರಿಸರದ ಅರೆಬಾಸೆನ ಒಳ್‌ಸಿಕಂಡೊಳೊ.

1,80000ಸ್ಟ್ ಪದಂಗ ಇರ್‌ವ ಈ ಅರೆಭಾಷೆ ವಿಶ್ವಕೊಶ ಅಡ್ಡಣಪೆಟ್ಟ್‌ಂದ ಹಿಡ್ದ್ ಹೊಸ್ಟೂಟನ ವರೆಗೆ 150 ಮುಕ್ಯ ಲೇಕನಗ, 450ರ್‌ಂದ ಹೆಚ್ಚಿಗೆ ಬಿಡಿಬಿಡಿ ಲೇಕನಗ ಉಟ್ಟು. ಆದಸ್ಟ್ ಹೆಚ್ಚಿ ಜೆನಂಗ ಕಿರಿಯರ್ ಹಿರಿಯರ್ ಕೂಡಾ ಅರೆಭಾಷೆ ವಿಶ್ವಕೋಶದ ಪುಟಗಳ ಬುಳ್‌ಗಿ ನೋಡಕು ತೇಳ್‌ದು, ಓದೊಕುಂತೇಳ್‌ದು ನಮ್ಮ ಆಸೆ.

ಈ ಅರೆಭಾಷೆ ವಿಶ್ವಕೋಶಲಿ ಸೀರ್‌ಸಿಕೆಗಳ ಆಯ್ಕೆಮಾಡ್‌ವ ಹೊತ್ತುಲಿ ಸುರುಗೆ ಆದ್ಯತೆನ ಅರೆಬಾಸೆಗೆ ಮಾತ್ರ ಸಮ್ಮಂದಪಟ್ಟ, ಅದಾಗಿ ಅರೆಬಾಸೆ ಪರಿಸರ ಮತ್ತೆ ಇನ್ನಿತರ ವಿಸಯಕೆ ಕೊಟ್ಟೊಳೊ. ಸಾಮಾನ್ಯ ಆಗಿದ್ ಪ್ರತಿ ಒಂದ್ ವಿಸಯದ ಸುರುಗೆ ಸುರುನ ವಾಕ್ಯ ಲೇಕನದ ಸಾರಾಂಸನ ಹೇಳ್ದೆ; ಅದಾಗಿ ವಿಸಯದ ವಿವರ್‌ಣೆ ಮುಂದ್‌ವರ್‌ದದೆ. ಕೆಲೊಮ್ಮೆ ಪ್ರದಾನ ಸೀರ್‌ಸಿಕೆನ ಒಟ್ಟಿಗೆ ಉಪಸೀರ್‌ಸಿಕೆಗಳ ಕೊಟ್ಟೊಳೊ. ಲೇಕನಗಳ ಸಂಪಾದ್‌ಸಿಕಾಕನ ಆಯಾ ಲೇಕಕರ ಬಾಸೆನ ಬರೆವ ಕ್ರಮ ಸಾದ್ಯ ಆವಸ್ಟರ ಮಟ್ಟ್‌ಗೆ ಒಳ್‌ಸಿಕಂಡೊಳೊ. ವಿಶ್ವಕೋಶದ ವಿಸಯನ ಒಟ್ಟಾರೆ ರಚನೆ ಮತ್ತೆ ಸೊರೂಪಕೆ ಸಮ್ಮಂದ ಆವಂಗೆ ಒಂದೇ ರೂಪಲಿ ಇರ್‌ವಾಂಗೆ ಆದಸ್ಟ್ ಕಡೀಮೆನು, ಅಗತ್ಯದ ಮಾರ್ಪಾಡ್‌ನ ಮಾಡಿಯೊಳೊ. ಲೇಕನಕೆ ಒಂಬುವ ಚಿತ್ರಗಳ ಸಾದ್ಯ ಇರ್‌ವಲ್ಲಿ ಕೊಟ್ಟೊಳೊ. ಈ ಅಗತ್ಯ ಪರಿಕರಗಳ ಬೇರೆಬೇರೆ ಮೂಲಂದ ಪರಿಣತರ್‌ಂದ ಪಡ್ಕಂಡಂತದ್. ಈ ವಿಚಾರಲಿ ನಾವ್ ಸುಮಾರ್ ಜೆನಕೆ, ಸಂಗಸಂಸ್ತೆಗೆ, ಪುಸ್ತಕಕೆ ಹೀಂಗೆ, ಬೇರೆ ಬೇರೆ ಮೂಲಕೆ ರುಣಿ ಒಳೊ. ಸಂಪುಟದ ಕಡೇಲಿ ಎಲ್ಲರ ಸಾಯನ ನೆನ್ಸಿಕಂಡೊಳೊ. ಪ್ರಸ್ತುತ ಸಂಪುಟದ ವಿಸಯಕೆ ಸಮ್ಮಂದಪಟ್ಟಂಗೆ ಬೇಕಾದಸ್ಟ್ ಪರಾಮರ್‌ಸೆನ ಪುಸ್ತಕಗಳ, ಲೇಕನಗಳ ಪೊಟ್ಟಿ ಉಟ್ಟು.

**ಭಾಷಾ ಬಳಕೆ:** ಈ ಪ್ರಯೋಗನ ಓದಿ, ಹರ್‌ಂಡಿ, ಪಾಲ್ ಮಾಡಿ, ಕ್ರಮಾಲಿ ಜೋಡ್‌ಸಿ, ಬೇಡಾದ್ದರ ತೆಗ್‌ದ್ ಹಾಕಿ, ಬೇಕಾದರ ಹೊಸ್ತಾಗಿ ಸೇರ್‌ಸಿಯೊಳೊ. ವಾಚಕರ್, ಸಹಾಯಕರ್, ಉಪಸಂಪಾದಕರ್, ಸಂಪಾದಕರ್, ಸೋದ್‌ಸಿದೊವ್, ಸಲಹೆ ಕೊಟ್ಟೊವ್, ಪ್ರೂಫ್ ನೋಡೊವ್–ಹೀಂಗೆ ಸುಮಾರ್ ಜೆನರ ಸ್ರಮ ಉಟ್ಟು. ಎಸ್ಟ್ ಸ್ರಮಪಡಕಾತ್ ಎಸ್ಟ್ ಕಾಲ ಹಿಡ್ತ್, ಎಸ್ಟ್ ಕೆಲಸ ಆಗುಟುತೇಳ್ದು ಜನಸಾಮಾನ್ಯಕ್ಕೆ ಗೊತ್ತಾದುಲೆ. 'Set' ತೇಳ್‌ವ ಮೂರು ಬಣ್ಣದ ಒಂದ್ ಸಬ್ದದ ವೆವಸ್ತೆಗೆ ಇಂಗ್ಲಿಸ್ ನಿಗಂಟ್ ಕಾರ್ಯಾಲಯದವ್‌ಕೆಲ್ಲ ಒಂಬತ್ ತಿಂಗಳ ಕೆಲ್‌ಸ ಹಿಡ್‌ತ್‌ಗಡ. ಈ ಮಾತ್‌ಗ ವಿದ್ವತ್ ಕೆಲ್‌ಸದ ವಿಸ್ತಾರಕೆ ಹಿಡ್‌ದ ಕನ್ನಟಿಂತ ಹೇಳಕ್.

ವಿಶ್ವಕೋಶಕೆ ಅರೆಭಾಷೆ ವಿದ್ವಾಂಸರಾದ ಪ್ರೊ ಕೋಡಿ ಕುಶಾಲಪ್ಪ ಗೌಡ, ಪ್ರೊ ಚೆ. ರಾಮಸ್ವಾಮಿಯವರ ಬಾಸಿಕ ನೆಲೆನ ಮಾರ್ಗದರ್ಶನಲಿ ಮಹಾಪ್ರಾಣಕ್ಸರ, ದೀರ್ಗಾಕ್ಸರ, ಸಂಸ್ಕೃತ ಪದಗಳ ಸಾದ್ಯ ಆದಸ್ಟ್ ಬಳ್‌ಸಿಕಣದೆ ಅರ್‌ದಾಕ್ಸರ ಮತ್ತೆ ಅರೆಬಾಸೆನ ಮೂಲ ಪದಗಳನೆ ಒಳ್‌ಸಿಕಂಡೊಳೊ. ಉದಾ: ವರ್ಷ–ವರ್‌ಸ, ದರ್ಶನ–ದರ್‌ಸನ, ಹಂಞ–ಹಞ್ಞ, ಮಂಜ–ಮಜ್ಜ ಇಂತದೆಲ್ಲ.

**ಅರೆಭಾಷೆ ವಿಶ್ವಕೋಶ ಯೋಜನೆ ತಯಾರಿ:** ಅರೆಭಾಷೆ ವಿಶ್ವಕೋಶ ತಯ್ಯಾರಾಕುಂತ 13.07.2020 ರಂದ್ ನಡ್‌ದ ಅಕಾಡೆಮಿನ ಸಾಮಾನ್ಯ ಸಬೆಲಿ ಮತ್ತೆ ಸ್ತಾಯಿ ಸಮಿತಿ ಸಬೆಲಿ ಉದ್ದುದ್ದಕೆ ಚರ್‌ಚೆಗ ಆದಮೇಲೆ ವಿಶ್ವಕೋಶದ ತಯ್ಯಾರ್ ಮಾಡಿಯೊಳೊ. ಅರೆಭಾಷೆ ವಿಶ್ವಕೋಶ, ಕನ್ನಡ ವಿಶ್ವಕೋಶ ಮಾದರಿಲಿ ಬರೊಕುಂತ ನೆನ್‌ಸಿ ಸುಮಾರ್ ವಿಶ್ವಕೋಶಗಳ ಮಾಡ್‌ದ ಮುಖ್ಯ ಸಂಪಾದಕರಾಗಿ ಕೆಲ್‌ಸ ಮಾಡ್‌ದ ಡಾ. ಹಾ. ತಿ. ಕೃಷ್ಣೇಗೌಡರ್ ಇದರ ಸಂಕಲನ ತಜ್ಞರಾಗಿ ಉಪಕಾರ ಮಾಡ್‌ದೊ.

**ಅರೆಭಾಷೆ ವಿಶ್ವಕೋಶ ರಚನೆನ ಸುರುನ ಸಬೆ:** ಅರೆಭಾಷೆ ವಿಶ್ವಕೋಶ ತಯಾರ್‌ಗೆ ಸಮ್ಮಂದಪಟ್ಟಂಗೆ ಸುಳ್ಯ ಮತ್ತೆ ಮಡಿಕೇರಿಲಿ ಎರ್‌ಡ್ ಸಬೆಗಳ ನಡ್‌ಸಿದೊ. ಸುಳ್ಯಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಅಧ್ಯಕ್ಷ ಮತ್ತೆ ಸದಸ್ಯರ್, ಬಾಸೆ ಮತ್ತೆ ವಿಸಯ ತಜ್ಞರಾದ ಶ್ರೀ ಕುಞ್ಞೇಟಿ ಶಿವರಾಮ ಗೌಡ, ಡಾ. ಪ್ರಭಾಕರ ಶಿಶಿಲ, ಡಾ. ಸುಂದರ ಕೇನಾಜೆ, ಶ್ರೀಮತಿ ಜಯಮ್ಮ ಚೆಟ್ಟಿಮಾಡ, ಶ್ರೀ ಕೇಪು ಅಜಿಲ, ಶ್ರೀ ಕುಶಾಲಪ್ಪ ಗೌಡ ಕಂದ್ರಪ್ಪಾಡಿ, ಶ್ರೀ ಬಾಬು ಗೌಡ ಅಚ್ರಪ್ಪಾಡಿ, ಶ್ರೀ ಜಯಪ್ರಕಾಶ್ ಕುಕ್ಕೇಟಿ, ಶ್ರೀ ಲೋಕೇಶ್ ಊರುಬೈಲು, ಜೀವನ್ ಪುರ,

ಶ್ರೀ ಎ. ಕೆ ಹಿಮಕರ, ಕುಮಾರಿ ರಮ್ಯಾಶ್ರೀ ನಡುಮನೆ, ಶ್ರೀ ಅನಿಂದಿತ್ ಗೌಡ ಕೊಚ್ಚಿ ಬಾರಿಕೆ, ಶ್ರೀಮತಿ ಪ್ರೀತಿಕಾ ಬೊಳ್ಳೂರು, ಶ್ರೀ ಲೋಕೇಶ್ ಕುಂಚಡ್ಕ, ಶ್ರೀಮತಿ ಸುಮಿತ್ರಾ ಸುಬ್ರಹ್ಮಣ್ಯ, ಶ್ರೀ ಯಶವಂತ ಕುಡೇಕಲ್ಲು, ಶ್ರೀ ಕಾರ್ತಿಕ್ ಪದೇಲ, ಶ್ರೀಮತಿ ಲೀಲಾ ದಾಮೋಧರ, ಶ್ರೀ ಕಿಶೋರ್ ಕುಮಾರ್ ಕಿರ್ಲಾಯ ಮತ್ತೆ ಮಡಿಕೇರಿಲಿ ಅಕಾಡೆಮಿ ಸದಸ್ಯರೊಟಿಗೆ ಶ್ರೀ ನಾಗೇಶ್ ಕಾಲೂರು, ಡಾ. ಕರುಣಾಕರ ನಿಡಿಂಜಿ, ಡಾ. ಕೋರನ ಸರಸ್ವತಿ ಪ್ರಕಾಶ್, ಶ್ರೀಮತಿ ಸಹನಾ ಕಾಂತಬೈಲು, ಡಾ. ಶ್ರೀಧರ ಹೆಗಡೆ, ಶ್ರೀ ಬಾರಿಯಂಡ ಅರ್ ಜೋಯಪ್ಪ, ಶ್ರೀ ವಿನೋದ್ ಮೂಡಗದ್ದೆ ಸೇರಿದ್ದೊ.

**ಸಂಗ್ರಹ ಮತ್ತೆ ಸಂಪಾದನೆ ವಿದಾನ:** 15.11.2021ರ ಸಾಮಾನ್ಯ ಸಬೆಲಿ ವಿಶ್ವಕೋಶದ ಜವಾಬ್ದಾರಿನ ಅಕಾಡೆಮಿನ ಸರ್ವ ಸದಸ್ಯರ ಒಪ್ಪಿಗೆನಂಗೆ ನಂಗೆ ವಯ್ಸಿಕೊಟ್ಟೊ. ಇದ್ ನನ್ನ ಪಾಲ್‌ಗೆ ಬಂದ ಬಾಗ್ಯಂತೇಳಿ ನೆನ್‌ಸಿಕಣೆ. ಈ ವರೆಗೆ ವಿಶ್ವಕೋಶದ ರಚನಾತ್ಮಕ ಚರ್ಚೆಗ ಮತ್ತೆ ಪರಿವಿಡಿ ತಯಾರಾಗಿತ್ತ್. ಅಂದ್‌ಂದ ಇಂದ್‌ನವರೆಗೆ ಅಂದರೆ 15.09.2022ರವರೆಗೆ 10 ತಿಂಗಲಿ ಲೇಕನಗಳ ಸಂಪಾದನೆ ಮಾಡ್‌ದು ಸವಾಲೇ ಅಗಿತ್ತ್. ಕಡಿಮೆ ಕಾಲಲಿ ಈಗಾಗಲೇ ತಯ್ಯಾರಾದ ಲೇಕನದ ಪೊಟ್ಟಿನ ಮಾಡಿ ವಿಸಯ ತಜ್ಞರಾದ ಡಾ. ಹಾ. ತಿ ಕೃಷ್ಣೇ ಗೌಡರೊಟಿಗೆ ಚರ್‌ಚಿಸಿ ಬೇಟಿ ಮಾಡ್‌ದೊ. ಲೇಕನಗಳ ಸೊರೂಪ, ವಿಸಯ ಮೌಲ್ಯ, ವಿಚಾರ ಪ್ರಸ್ತುತತೆ, ಲೇಕನಗಳ ಅಯ್ಕೆ, ಲೇಕಕರ ಸಂಬಾವನೆ, ಚಿತ್ರಗಳ ಅಯ್ಕೆ ಹೀಂಗೆ ವಿವರ ಆಗಿದ್ ವಿಸ್ತಾರಾಗಿದ್ ಚರ್‌ಚಿಸಿ ಲೇಕನಗಳ ಒಂದ್ ಹಂತದ ಪೊಟ್ಟಿ ಸಿದ್ದ ಆತ್. ಅದರಾಂಗೆ ಕೆಲ್ಸಕಿಳ್‌ದ್ ಲೇಕಕರ ಹುಡ್‌ಕಾಟದ ಒಟ್ಟಿಗೆ ಅವರ್‌ಂದ ಲೇಕನಗಳ ಬರ್‌ಸ್‌ವ ದೊಡ್ಡ ಸಾಹಸನೆ ಸುರಾತ್. ಇದರ ಅಕಾಡೆಮಿ ಸದಸ್ಯರನು ಸೇರ್‌ಸಿ ಲೇಕನ ಬರ್‌ಸುವ ಮತ್ತೆ ಕೂಡ್‌ಸ್‌ವ ಗುರುತರ ಜವಾಬ್ದಾರಿನ ಪಾಲ್‌ಮಾಡಿಕಂಡೊ. ಲೇಕಕರೊಟ್ಟ್‌ಗೆ ನಿರಂತರ ಸಂಪರ್‌ಕಲಿ ಇದ್ದ್‌ಕಂಡ್ ಬರ್‌ಸಿಕಂಡ ಲೇಕನಗಳ ಲೆಕ್ಕ ಬಾರಿ ಕಮ್ಮಿಂತಳೇ ಹೇಳಕ್. ಈಗಾಗಲೇ ಪ್ರಕಟ ಆದ ಪುಸ್ತಕ ಲೇಕನಗಳ ಹೆರ್‌ಕಿ ತಗ್ದ್ ಆ ಲೇಕಕರ ಒಪ್ಪಿಗೆನ ಪಡ್ಕಂಡ್ ಅವ್‌ಗಳ ಈ ಸಂಪುಟಲಿ ಸೇರ್‌ಸಿಕಂಡೊ. ಮುಕ್ಯ ಆಗಿದ್ ನಾ ಕಂಡ್‌ಕಂಡ ವಿಚಾರ ಎಂತತೇಳಿರೆ ಲೇಕನಗಳ ಬರೆವವ್ ಒಳೊ. ಅದರೆ ವಿಸಯನ ಮಾಹಿತಿ ರೂಪಕೆ ಇಳ್‌ಸಿ ವಿಶ್ವಕೋಶ ಮಾದರಿಲಿ ಬೊರಿ ಮಾಯಿತಿನ ಬರ್‌ದ್ ಕೆಲ್‌ಸ ಮಾಡ್‌ವವು ಕಮ್ಮಿ. ಹಲ್ಲ್ ಇದ್ದವಂಗೆ ಕಡ್ಲೆ ಇಲ್ಲೆ, ಕಡ್ಲೆ ಇದ್ದವಂಗೆ ಹಲ್ಲಿಲ್ಲೆ ತೇಳುವ ಗಾದೆನಂಗಾತ್. ಹಾಂಗಾಗಿ ಒಟ್ಟು ಲೇಕನಗಳ ಲೆಕ್ಕ ಕಡಿಮೆ ಆತ್.

ಹೀಂಗೆ ಒಟ್ಟು ಆದ ಲೇಕನಗಳ ಅ – ಕಾರದಿಯಾಗಿ ಸುರ್‌ಗೆ ಬಾವಂಗೆ ಪಾಲ್‌ಮಾಡಿ ಅದರ ಮುಕ್ಯ ಸೀರ್‌ಸಿಕೆನ ಅಡಿಲಿ ಬಾವಂಗೆ ಮಾಡ್‌ದೊ. ಈ ಲೇಕನಗಳ ಪಾಲ್ ಮಾಡ್‌ದು, ಸೀರ್‌ಸಿಕೆ ಕೊಡ್‌ದು, ಯಾವ ಲೇಕನ ಯಾವ ವಿಬಾಗಕೆ ಉಪ ಸೀರ್‌ಸಿಕೆ ಆಗಿದ್ ಬರೊಕು, ಸರಿಹೊಂದ್‌ವ ಚಿತ್ರಗಳ ಹೆರ್‌ಕುದು, ಚಿತ್ರ ಸೀರ್‌ಸಿಕೆ, ಅಕ್ಷರ ವಿನ್ಯಾಸ ಹೀಂಗೆ ತುಂಬ ಕಾಲ ಹಿಡಿವ ವಿಶ್ವಕೋಶದ ಮೂಲ ಉದ್ದೇಸದಂಗೆ ಸುಮಾರ್ ತಿದ್ದುಪಡಿ ಮತ್ತೆ ಒಪ್ಪಂದದೊಟ್ಟಿಗೆ ಸಾದ್ಯ ಆದಸ್ಟ್ ಕಾರ್‌ಯರೂಪಕೆ ತಾಕೆ ಪ್ರಯತ್ನಿಸಿಯೊಳೊ. ಹೆಚ್ಚಾಗಿ ಬಿಡಿಬಿಡಿ ಲೇಕನಗಳನೆ ಮುಕ್ಯ ಸೀರ್‌ಸಿಕೆ ಆಗಿದ್ ಬಳಕೆ ಮಾಡಿಯೊಳೊ. ಒಂದ್ ವಿಸಯದ ಮೇಲೆ ಒಳ್ಳ ಅವ್‌ಕಾಸ ಇರ್‌ವ ಲೇಕನಗಳ ಒಂದ್ ಮುಕ್ಯ ಸೀರ್‌ಸಿಕೆನ ಅಡಿಲಿ ಬಳ್‌ಸಿಕಂಡೊಳೊ. ಅಂತ ಲೇಕನಗಳ ಪೊಟ್ಟಿ ಹೀಂಗುಟ್ಟು. ಒಕ್ಕಲಿಗರ್ – ಅರೆಬಾಸೆ ಗೌಡ್‌ರ್; ಕೃಸಿ ಜಾನಪದ; ಕೌಟುಂಬಿಕ ಸಮ್ಮಂದಗ; ಜನಪದ ಅಡ್‌ಗೆ–ತಿನಿ – ಹೀಂಗೆ ವಿಶ್ವಕೋಶದ ಒಳೆಗಿರ್‌ವ ವಿಬಾಗಂಗ. ಇಡೀ ಸಂಪುಟಲಿ ಬಣ್ಣದ ಚಿತ್ರಗಳ ಮತ್ತೆ ಕಪ್ಪು ಬಿಳಿ ಚಿತ್ರಗಳ ಬಳಸಿಕಂಡೊಳೊ. ಒಂದ್ ವಿಸಯಕೆ ಸಮ್ಮಂದ ಆವ ತುಂಬ ಚಿತ್ರಗ ಇದ್ದರೆ ಅದರ ಒಂದು ಪುಟಲಿ ಗುಂಪಾಗಿ ಕೊಟ್ಟೊಳೊ. ಉದಾರ್‌ಣೆಗೆ, ಜಲಪಾತ, ಮೊದ್‌ವೆ ಕ್ರಮ, ಸಾವು ಇಂತದೆಲ್ಲ. ಲೇಕನ ಸೂಚಿ, ಲೇಕಕ ಸೂಚಿ, ಆಯ್ದ ಪರಾಮರ್ಶನ ಗ್ರಂಥಗಳ ಸೂಚಿ, ಪಡ್‌ದ ಬೇರೆಬೇರೆ ನೆರವುನ ಕೃತಜ್ಞತೆನ ವಿವರಗ ಇದ್ದದೆ. ಪಟ್ಯಲಿ, ಪ್ರತಿ ಲೇಕನದ ಕಡೆಲಿ ಲೇಕನ ಬರ್‌ದ ಲೇಕಕರ ಹೆಸರ್‌ನ ಸಂಕೇತಾಕ್ಷರಗ ಇದ್ದದೆ. ಸುರುಂದಲೇ ಕೆಲ್‌ಸಕೆ ಇಳ್‌ದ್ ದಿನದಿನ ಸಂಪಾದಕ ಸದಸ್ಯರೊಟ್ಟ್‌ಗೆ ಅಂತರಜಾಲಲಿ ಗೂಗುಲ್ ಮೀಟ್, ಗೂಗುಲ್ ಡಾಕ್ ಅನ್‌ಲೈನ್‌ಲಿ ಸಾವಿರಾರ್ ಗಂಟೆ ಮತ್ತೆ ಸಬೆಗಳ್‌ಲಿ ಎಲ್.ಸಿ.ಡಿ ಪ್ರಾಜೆಕ್ಟರ್ ಬಳ್‌ಸಿ ಲೇಕನಗಳ ಬಗೆಗೆ ಚರ್‌ಚಿಸಿ ಬೇರೆಬೇರೆ ಮೂಲಂದ ವಿಸಯ ಕೂಡ್ಸಿದ್, ಈಗಾಗಲೇ ಬರ್‌ದಿರ್‌ವ ಲೇಕನಗಳನ ಪರಿಸ್ಕರಣೆ ಮಾಡಿ, ಸಮಾಲೋಚಕರ್‌ಂದ ಪರಿಸೀಲನೆ ಮಾಡ್ಸಿದೊ. ಇದರ್‌ಂದಾಗಿ ನಮ್ಮ ಮಟ್ಟಿಗೆ ಇದ್‌ಕೆ ವಿಶ್ವಕೋಶದ ರೂಪ ಕೊಟ್ಟೊಳೊ.

ಈ ಅರೆಭಾಷೆ ವಿಶ್ವಕೋಶಲಿ ಮೊಡಿ ಮೈಲಿಗೆನ ಹಂಗಿಲ್ಲೆ, ಶ್ಲೀಲ ಅಶ್ಲೀಲನ ಬೇದ ಇಲ್ಲೆ, ಪ್ರಾದೇಸಿಕತೆನ ಗಡಿ ನೋಡಿಕಣದೇ ಅಗತ್ಯಂತೇಳುವ ಲೇಖನಗಳ ಸೇರ್‌ಸಿಕೊಂಡೊಳೊ. ಒಟ್ಟು ಹೇಳೊಕು ತೇಳಿರೆ ಮುಂದೆಗೆ ಒಂದಸ್ಟ್ ಸಂಶೋದನೆ ಮಾಡೊವ್‌ಕೆ, ಮುಂದೆನಳ ತಲೆಮಾರ್‌ಗೆ ಪ್ರಯೋಜನಕೆ ಬಾವ ಹಾಂಗೆ ತಯಾರ್ ಮಾಡ್ಯೊಳೊ. ವಿಶ್ವಕೋಶ ರಚನೆನ ಕೆಲ್ಸಕೆ ಡಾ ವಿಶ್ವನಾಥ ಬದಿಕಾನ ಮತ್ತೆ ನಾ ತುಳು ವಿಕಿಪೀಡಿಯದ ಭಾರತದ 23ನೇ ಬಾಸೆ ಆಗಿ ಜೀವಂತ ಆಕೆ ಮಾಡ್‌ದ ಕೆಲ್ಸದ ಅನುಬವ ನಮ್ಮ ಉಪಕಾರಕ್ಕೆ ಬಾತ್‌ಂತ ಹೇಳಕ್. ವಿಸಯ ತಜ್ಞರ ಒಟ್ಟಿಗೆ ಮಾತ್‌ಕತೆ ಮಾಡಿಕಂಡ್ ಸಲಹೆ ಮಾರ್ಗದರ್ಶನನ ಪಡ್ಕಂಡ್ ಇದರ ತಯಾರ್ಸಿದ್. ಇದರ್‌ಲಿ ಮೂರ್ ಜೆನರ 10 ತಿಂಗಳ ಕಾಲ, ದಿನೋಳು ಕಮ್ಮಿಲಿ 5 ಗಂಟೆಗಳ ಪುರ್ಸೊತಿಲ್ಲದ ಕೆಲ್ಸ ಉಟ್ಟು.

## ಕೃತಜ್ಞತೆಗ

ಅರೆಭಾಷೆ ವಿಶ್ವಕೋಶ ಆಕುಂತ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ನಾಕ್‌ನೆ ಅವದಿನ ಸಬೆಲಿ ಡಾ. ವಿಶ್ವನಾಥ ಬದಿಕಾನ ಇವ್ ಪ್ರಸ್ತಾಪ ಮಾಡಿಕನ ಸರ್ವಸದಸ್ಯರ್ ಸಬೆಲಿ ನಿರ್ಣಯಿಸಿ ಒಪ್ಪಿಗೆ ಕೊಟ್ಟೊ. ಅಧ್ಯಕ್ಷರಾದ ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ, ರಿಜಿಸ್ಟ್ರಾರ್ ಶ್ರೀ ಚಿನ್ನಸ್ವಾಮಿ ಮತ್ತೆ ಅರ್ಥ ಸದಸ್ಯರಾದ ಶ್ರೀಮತಿ ದರ್ಶನ ಕೆ. ಟಿ. ಅವರ ಒಪ್ಪಿಗೆ ಪಡ್‌ಕಂಡೊ. ಡಾ. ವಿಶ್ವನಾಥ ಬದಿಕಾನ ಅವರ ನಿರಂತರ ಮಾರ್ಗದರ್ಶನ, ಸಹಕಾರ ಮತ್ತೆ ಜೊತೆ ಸಂಪಾದಕತ್ವಂದ ಲೇಕನಗಳ ಜೋಡ್‌ಸ್‌ವ, ತಿದ್ದುಪಡಿ ಮಾಡ್‌ವ ಕೆಲಸ ಸಾದ್ಯ ಆಗುಟು. ಲೇಕನಗಳ ಅಯ್ಕೆಂದ ಹಿಡ್ದ್ ಮುದ್ರಣದವರೆಗೆ ಔದ್ಯೋಗಿಕ ಒತ್ತಡ, ಅರೆಭಾಷೆನ ಪದಕೋಶ ಮತ್ತೆ ಪಾರಂಪರಿಕ ಕೋಶದ ಪುರ್ಸೋತಿಲ್ಲದ

ಹೊತ್ತುಲಿ ಒಟ್ಟೊಟ್ಟಿಗೆ ಕೆಲ್‌ಸನ ಮಾಡಿಯೊಳೊ. ಈ ಎಲ್ಲ ಲೇಕನಗಳ ಓದಿ ಮತ್ತೆ ಅರೆಬಾಸೆಗೆ ಅನುವಾದ ಮಾಡಿ ಅರೆಬಾಸೆನ ಪ್ರೀತಿ ಮತ್ತೆ ಬದ್ಧತೆಂದ ಅಂತರಜಾಲಲಿ ದೂರದ ಹೈದರಾಬಾದ್‌ಂದ ಹಗಲ್‌ರಾತ್ರಿ ಹೊತ್ತ್‌ಗೊತ್ತಿಲ್ಲದೆ ಕೈ ಜೋಡ್‌ಸಿದೊವ್ ಸಣ್ಣ ಹೈದ ಮನೋಜ್ ಕುಡೆಕಲ್ಲ್. ಬಾಸೆನ ಒಂದೇ ನಮೂನೆ ಪೊರ್ಲ್ ಬಾಕುಂತೇಳಿ ಇವ್ ಮಾಡ್‌ದ ಸಾಯ ದೊಡ್ಡದ್.

ಮೈಸೂರು ವಿಶ್ವವಿದ್ಯಾಲಯದ ವಿಶ್ರಾಂತ ಪ್ರಾಧ್ಯಾಪಕರ್ ಮತ್ತೆ ಕನ್ನಡ ವಿಶ್ವಕೋಶನ ಗೌರವ ಸಂಪಾದಕರ್ ಡಾ. ಹಾ. ತಿ. ಕೃಷ್ಣೇಗೌಡರ್. ಇವು ಅರೆಭಾಷೆ ವಿಶ್ವಕೋಶದ ಕೆಲ್‌ಸಕಾಗಿ ನಾಕ್ ಸರ್ತಿ ಬೇರೆ ಬೇರೆ ಕಡೆ ನಮ್ಮೊಟ್ಟಿಗೆ ಸಬೆ ಸೇರಿ ಚರ್ಚೆ ಮಾಡಿಯೊಳೊ. ಅದಾಗಿ ದೂರವಾಣಿಲಿ, ಅಂತರಜಾಲಲಿ ವಿಶ್ವಕೋಶದ ಸಂಕಲನ, ಬಾಸಿಕ ಸಲಹೆನ, ತಾಂತ್ರಿಕ ಸಲಹೆ–ಮಾರ್ಗದರ್ಶನನ ಕೊಟ್ಟೊಳೊ. ನಮ್ಮ ಕೆಲ್‌ಸಗಳ ಬಗೆಗೆ ನಮ್ಮಂದೊಳು ಹೆಚ್ಚಿ ಕಾಳಜಿ ಇಸಿದ್ ನಮ್ಮಂದ ಕೆಲ್‌ಸ ತೆಗ್‌ಸಿಕಂಡೊಳೊ. ಅಗಾಗ ಅಧ್ಯಕ್ಷರ್‌ಗೆ ಕರೆ ಮಾಡಿ ಕರ್ನಾಟಕದೊಳಗೆನ ಸಣ್ಣ ಬಾಸೆಗೆ ಆಗ್‌ತಿರ್‌ವ ಸುರೂನ ವಿಶ್ವಕೋಶ ಆದ್ದರ್‌ಂದ ಇದರ ಆದ್ಯತೆಂದ ಮಾಡೋಕೆಂತೇಳಿ ನಮ್ಮ ಎಚ್ಚರ್‌ಸಿ ಕೆಲ್‌ಸ ಮಾಡ್‌ಸಿಯೊಳೊ.

ಡಾ. ಪುರುಷೋತ್ತಮ ಬಿಳಿಮಲೆ, ಡಾ. ಪೂವಪ್ಪ ಕಣಿಯೂರು, ಡಾ. ಸುಂದರ ಕೇನಾಜೆ, ಶ್ರೀ ಅರವಿಂದ ಚೊಕ್ಕಾಡಿ, ಶ್ರೀ ಎಂ. ಜಿ ಕಜೆ, ಪಾಲ್ತಾಡಿ ರಾಮಕೃಷ್ಣ ಅಚಾರ್, ಡಾ. ವಿಶ್ವನಾಥ ಬದಿಕಾನ, ಡಾ. ರೇವತಿ ನಂದನ್, ಡಾ. ಲಾವಣ್ಯ ಸಿ. ಪಿ. ಕೊಟ್ಟಕೇರಿಯನ, ಶ್ರೀ ಚಂದ್ರಶೇಖರ ಬೇರಿಕೆ, ಶ್ರೀ ಚಂದ್ರಶೇಖರ ಪೇರಾಲ್, ಶ್ರೀ ಅನಂತರಾಜ ಗೌಡ ಪುತ್ತೂರು, ಶ್ರೀ ಭರತೇಶ ಅಲಸಂಡೆಮಜಲು, ಶ್ರೀ ಮೂಲೆಮಜ್ಲು ಸೋಮಣ್ಣ, ಡಾ. ಕೋರನ ಸರಸ್ವತಿ, ಶ್ರೀಮತಿ ಕೆದಂಬಾಡಿ ಕಾಂಚನ, ಶ್ರೀ ಗುಡ್ಡೇರ ಪಿ ಗಣಪತಿ ಕೊಡಗು, ಶ್ರೀ ವಾಮನ ನಂದಾವರ, ಶ್ರೀಮತಿ ಸಹನಾ ಕಾಂತಬೈಲು, ಶ್ರೀಮತಿ ಜಾನಕಿ ಬೈತಡ್ಕ, ಶ್ರೀಮತಿ ಪ್ರೇಮ ರಾಘವಯ್ಯ ಚೊಕ್ಕಾಡಿ, ಡಾ. ಪುರುಷೋತ್ತಮ ಕೆ. ವಿ. ಕರಂಗಲ್ಲು, ಡಾ. ಎ ಸುಬ್ಬಣ್ಣ ರೈ, ಡಾ. ಗಾಯತ್ರಿ ನಾವಡ, ಡಾ. ಕಿಶೋರ್ ಕುಮಾರ್ ರೈ ಶೇಣಿ, ಕುಮಾರಿ ಕವಿತಾ ಎಂ ಎಲ್, ಶ್ರೀ ಮಾಕೋನಹಳ್ಳಿ ದೊಡ್ಡಮನೆ ದೊಡ್ಡಪ್ಪ ಗೌಡ, ಡಾ. ಹೆಜಮಾಡಿ ಗಂಗಾಧರ ಭಟ್, ಡಾ. ಆಶೋಕ ಆಳ್ವ, ನರೇಂದ್ರ ರೈ ದೇರ್ಲ, ಶ್ರೀ ಹಂಝ ಮಲಾರ್, ಡಾ. ಶ್ರೀಧರ ಗೌಡ ಪಾನತ್ತಿಲ, ಶ್ರೀಮತಿ ಕೃಪ ದೇವರಾಜ್, ಶ್ರೀ ತುಕರಾಮ ಏನೇಕಲ್, ಶ್ರೀ ಜೀವನ್ ಪುರ, ಶ್ರೀಮತಿ ಶೀಲಾವತಿ ಕೊಳಂಬೆ, ಡಾ. ಚಕ್ಕೆರೆ ಶಿವಶಂಕರ್, ಶ್ರೀ ರೋಶನ್ ಉಳುವಾರನ, ಶ್ರೀ ಪಟ್ಟಡ ದೀಕ್ಷಿತ್, ಶ್ರೀಮತಿ ಮಿಲನಾ ಭರತ್ ಲೇಕನಗಳ ಬರ್‌ದ್ ಕೊಡೊಕುತ ಕೇಳಿಕಣ ಕುಸೀಲಿ ಸಮಯಕೆ ಸೆರಿ ಆಗಿದ್ ಕೊಟ್ಟೊಳೊ.

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು ಇವ್ ಸಂಪಾದನೆ ಮಾಡಿ ಪ್ರಕಟ ಮಾಡ್‌ದ ಕನ್ನಡ ವಿಶ್ವಕೋಶಂದ 38 ಲೇಕನಗಳ ನಮ್ಮ ಅರೆಭಾಷೆ ವಿಶ್ವಕೋಶಲಿ ಬಳ್‌ಸಿಕೊಂಡೊಳೊ. ಇದರ ಬಳಕೆ ಮಾಡಿಕೆ ಅವಕಾಸ ಮಾಡಿಕೊಟ್ಟ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ ಮೈಸೂರು ಮತ್ತೆ ಮೈಸೂರು ವಿಶ್ವವಿದ್ಯಾಲಯಕೆ ದನ್ಯವಾದಗ

ಬಂದ ಕನ್ನಡ ಲೇಕನಗಳ ಅರೆಬಾಸೆಗೆ ಶ್ರೀಮತಿ ಸ್ಮಿತಾ ಅಮೃತರಾಜ್, ಶ್ರೀ ಕಿರಣ ಕುಂಬಳಚೇರಿ, ಇವು ಲೇಕನಗಳ ಓದಿ ಅನುವಾದ ಕೆಲ್‌ಸಕೆ ಕೈ ಜೋಡಿಸಿಯೊಳೊ. ಶ್ರೀಮತಿ ಅಪೂರ್ವ ಕೆ. ಟಿ., ಕುಮಾರಿ ಧನ್ಯಶ್ರೀ ಕಳಗಿ, ಕುಮಾರಿ ಶರಣ್ಯ ಕುಮಾರಿ ಕೆ., ಶ್ರೀಮತಿ ಮಮತಾ ಕೆಂಜನ, ಶ್ರೀ ವಿನೋದ್ ಮೂಡಗದ್ದೆ, ಶ್ರೀ ಜೀವನ್ ಪುರ ತಾತ್ಕಾಲಿಕ ನೆಲೆಲಿ ಅನುವಾದ ಕೆಲ್‌ಸ ಮಾಡಿಯೊಳೊ.

ವಿಶ್ವಕೋಶದ ಮುನ್ನುಡಿನ ಪೊರ್ಲುಲಿ ಬರ್‌ದ ಕೊಟ್ಟ ಡಾ. ಹಾತಿ ಕೃಷ್ಣೇಗೌಡ, ಸಂಪಾದಕರ ಅನುಬವ ಮಾತ್ ಬರ್‌ದ ಡಾ. ವಿಶ್ವನಾಥ ಬದಿಕಾನ, ಅನುವಾದಕರ ಮಾತ್ ಬರ್‌ದ ಶ್ರೀ ಮನೋಜ್ ಕುಡೆಕಲ್ಲ್, ಲೇಕಕರ ಮಾತ್ ಬರ್‌ದ ಡಾ. ಪುರುಷೋತ್ತಮ ಬಿಳಿಮಲೆ, ಡಾ. ಪೂವಪ್ಪ ಕಣಿಯೂರು, ಡಾ. ಸುಂದರ ಕೇನಾಜೆ ಇವ್ ಅಭಿಪ್ರಾಯ ಬರ್‌ದ್ ಅರೆಭಾಷೆ ವಿಶ್ವಕೋಶಕ್ಕೆ ಮೆರುಗು ಕೊಟ್ಟೊಳೊ.

ಬಿಡಿಬಿಡಿ ಚಿತ್ರಗಳ ಕೊಟ್ಟ ಶ್ರೀ ಅನ್ವಿತ್ ಬದಿಕಾನ, ಶ್ರೀಮತಿ ಪ್ರೀತಿಕಾ ಬೊಳ್ಳೂರು, ಕಿರಣ ಅಲಸಂಡೆಮಜಲು, ಶ್ರೀ ಆಶಯ್ ಬದಿಕಾನ, ಮೈಸೂರು ವಿಶ್ವವಿದ್ಯಾಲಯದ ಪ್ರಾಧ್ಯಾಪಕಿ ಡಾ. ಶೋಭಾ ಮತ್ತೆ ಅಂತರಜಾಲಲಿ, ವಿಕಿಕಾಮಾನ್ಸ್‌ಲಿ ಚಿತ್ರಗಳ ಹಾಕಿದ ಎಲ್ಲರ ನೆಂಪುಸಿಕಣೆ.

ಲೇಕನಂಗ ಮತ್ತೆ ಬಾಸೆನ ನೆಲೆಲಿ ಕರಡು ಪ್ರತಿ ಓದಿದವ್ ಪುರುಷೋತ್ತಮ ಕಿರ್ಲಾಯ, ಶ್ರೀಮತಿ ಸರೋಜ ಎಂ.ಕೆ. ಮತ್ತೆ ಮೋನಪ್ಪ ಗೌಡ ಕಜೆ(ಎಂ.ಜಿ. ಕಜೆ) ಇವ್‌ಕೆ. ತಾಂತ್ರಿಕ ಮತ್ತೆ ಆಡಳಿತಾತ್ಮಕ ಸಾಯ ಮಾಡಿದ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಸಿಬ್ಬಂದಿಗ ಶ್ರೀಮತಿ ಜ್ಯೋತಿ, ಶ್ರೀಮತಿ ಶೋಭಾ ಮತ್ತೆ ಶ್ರೀ ವಿಘ್ನೇಶ್ ಇವ್‌ಕೆ. ದಿಗಂತ ಮುದ್ರಾಣಾಲಯದ ಶ್ರೀ ರಾಜೇಶ್ ಅವು ಅರೆಬಾಸೆ ಕೆಲ್‌ಸ ತನ್ನ ಸೊಂತ ಕೆಲ್‌ಸಂತ ತಿಳ್ದ್ ತಮ್ಮ ಸಹಾಯಕರ್ ಮತ್ತು ಸಿಬಂದಿ ವರ್ಗದವ್ ಯಾಗೋಳುನ ಸ್ರದ್ದೆಲಿ ದುಡ್‌ದ್ ಬೇಗ ಮುದ್ರಣ ಆವಂಗೆ ಸಹಕರ್ಸಿಯೊಳೊ. ಶ್ರೀ ಸುಧಾಕರ ಆಚಾರ್ಯ ಮುಖಪುಟ ಚಿತ್ರನ ಬರ್‌ದ್ ಮತ್ತೆ ಶ್ರೀ ಹರೀಶ್ ಕೊಡೆತ್ತೂರು ಇವ್ ಪುಟನ ವಿನ್ಯಾಸ ಮಾಡಿ ವಿಶ್ವಕೋಶನ ಪೊರ್ಲ್ ಮಾಡಿ ಕೊಟ್ಟೊಳೊ, ಅಂತರಜಾಲಲೆ ನಾವ್‌ಗೆ ಬೇಕಾದಂಗೆ, ಬೇಕಾದಾಗ ಕಾಲಕೆ, ಕೆಲಸ ಮಾಡಿಕೆ ಗೂಗಲ್ ಮೀಟ್, ಗೂಗಲ್ ಡಾಕ್, ಗೂಗಲ್ ಶೀಟ್‌ನ ಉಪಕಾರ ತೆಕಂಡದ್ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಇಂತ ಮಹತ್ವದ ಯೋಜನೆ ಕಮ್ಮಿ ಕಾಲಲಿ ಆಕೆ ಸಾದ್ಯ ಆತ್. ಎಲ್ಲವುಕೆ ನನ್ನ ನೆಂಪುನ ಕೃತಜ್ಞತೆಗ.





ಸಂಪಾದಕರ ಮಾತ್

# ಪ್ರಪಂಚ ಜ್ಞಾನಲಿ ಸೇರ್‌ವ ಅರೆಬಾಸೆನ ಗೇನ




ಡಾ. ವಿಶ್ವನಾಥ ಬದಿಕಾನ
**ಸಹಾಯಕ ಪ್ರಾಧ್ಯಾಪಕ**
ಸಂತ ಅಲೋಶಿಯಸ್ ಕಾಲೇಜು(ಸ್ವಾಯತ್ತ), ಮಂಗಳೂರು
ಮೊ: +91 9449615474


'ವಿಶ್ವಕೋಶ' ತೇಳುವ ಪುಸ್ತಕ ನಮ್ಮ ಅರೆಬಾಸೆಲೇ ಬಾಕನ ಆವ ಕುಸಿನೇ ಬೇರೆ. ಬಾಸೆ, ಸಂಸ್ಕೃತಿ, ಆಚರಣೆ, ಸಮುದಾಯ ಬೊದ್ಕ್, ಆಚಾರ-ಇಚಾರಗ, ಉಡ್‌ಗೆ-ತೊಡ್‌ಗೆಗ, ಮೊದುವೆ ಜಂಬರಗ, ನಾಟಿ ಮೊದ್ದ್‌ಗ ಹೀಂಗೆ ಅನೇಕ ಮಾಹಿತಿ ನಮ್ಮ ನೆಂಪುಂದ ಜಾರ್‌ತಾ ಉಟ್ಟು. ಅದರ ಹೇಂಗೆ ಉಳ್‌ಸೊಕು ಬೆಳ್‌ಸೊಕುಂತ ಗೊತ್ತಿದ್ದರೂ ಕೂಡ್‌ಕಟ್ಟ್‌ಲಿ ಸೇರಿ ಸಂಗ್ರಹ ಮಾಡಿ ಕಟ್ಟಿಕೊಡ್‌ವಂತ ಪ್ರಯತ್ನಗ ಕಡ್‌ಮೆ ಆಗ್‌ತಾ ಉಟ್ಟು. ನಮ್ಮ ನೆರೆಕರೆನ ಬಾಸೆಗಳ್‌ಲಿ ಇರ್‌ವ ಜಾನಪದ ಇಚಾರಗ ಅರೆಬಾಸೆಲೂ ಉಟ್ಟುಂತೇಳುವ ತಿಳ್‌ವಳಿಕೆ ಕಮ್ಮಿಯಾಗ್‌ತಾ ಉಟ್ಟು.

ಒಂದ್ ಕಾಲಲಿ ಒಂದ್ ಕಡೆ ಕುದ್ದರೆ ಎಲ್ಲವೂ ಎಲ್ಲದರ ಕೇಳಿಸಿಕಂಬ ಜಾನಪದ ಸಾಹಿತ್ಯಗ ಸಿಗ್‌ತಿತ್. ಈಗ ಊರೆಲ್ಲಾ ತಿರ್‌ಗಿ ನಮ್ಮ ಸಂಸ್ಕೃತಿ ಇಚಾರಗ ಉಟ್ಟಾತ ಕೇಳ್‌ರೆ ಅದ್ ನಮ್ಮದಲ್ಲ, ಇದ್ ನಾವ್‌ಗೆ ಬೇಕಾಂತ ಪ್ರಸ್ನೆ ಮಾಡಿಕಂಡ್, ಇದರ್‌ಲಿ ನಮ್ಮ ಬಾಸೆ, ಸಂಸ್ಕೃತಿನ ಇಚಾರ ಉಟ್ಟಾಂತ ಕೇಳಿ ಹುಡ್‌ಕೊಕಾದ ಪರಿಸ್ತಿತಿಲಿ ನಾವ್ ಒಳೊ. ಹುಟ್ಟ್-ಮೊದುವೆ-ಸಾವುನ ವರೆಗೆ ಆವ ಜೀವನಾವರ್‌ತನ ಆಚರಣೆಗಳ್‌ಲಿ ಯಾದಾದರ್ ಒಂದ್ ಹೊಸ ಶಾಸ್ತ್ರ ಸೇರಿಕಂಡಿದ್ದದೆ. ಮೊದುವೆಲಿ ನೆಡೆವ ಎಸ್ಟೋ ಕ್ರಮಗ ಸಂಸ್ಕೃತೀಕರಣಂದ ಬದಲಾವುಟು. ಮೊದುವೆಲಿ 'ಧಾರಾಮುಹೂರ್ತ' ತೇಳುದರ ಅವವುಕೆ ಬೇಕಾದಂಗೆ ಬದಲಾಯಿಸಿಕಂಡೊಳೊ. 'ಗೌಡದಾರೆ' ಅತವಾ 'ಬಂಟದಾರೆ' ಮೊದುವೆಂತೇಳುವ ಕ್ರಮ; ಹೆತ್ತ ಸೂತಕ, ಸತ್ತ ಸೂತಕದ ಸುದ್ದದಂತ ಕ್ರಮ ಹಿಂದೆಲ್ಲ ಇತ್ತ್‌ಗಡ ಹೇಳ್‌ವ ಕಾಲ ಬಾದು. ಅರಮನೆ, ಗುರುಮನೆ, ಹತ್ತ್‌ಕುಟುಂಬ, ಹದಿನೆಂಟ್ ಗೋತ್ರಂತೇಳಿ ಹೇಳ್‌ರೆ ಗೌಡ ಸಮುದಾಯದ ಜೊತೆಲಿ ನೆರೆಕರೆ ಎಲ್ಲವೂ ಸೇರೊಕುತ ಸೂಚನೆ ಇತ್ತ್. ಹಿಂಗೆ ಬೇರೆ ಬೇರೆ ಸಮುದಾಯದವು ನಮ್ಮೊಟ್ಟಿಗೆ ಸೇರ್‌ತಿದ್ದೊ. ಅವುಕೆ ಒಬ್ಬೊಬ್ಬಂಗೆ ಒಂದೊಂದ್ ಕೆಲ್‌ಸ ಹಂಚಿತಿದ್ದೊ. ನೆರ್‌ದ ಮೊದುವೆ ಮಾಡಿ ಗೂಡೆನ ಸೋದರ ಮಾವನ ಮನೆಗೆ ಕಳಿಸ್‌ತಿದ್ದೊ. ಬಯಕೆ ಮುಗ್‌ಸಿ ಗೂಡೆನ ಅಮ್ಮನ ಮನೆಗೆ ಕರ್‌ಕಂಡ ಹೋತಿದ್ದೊ. ಎಲ್ಲ ಆಚರಣೆಗಳ ಹಿಂದೆ ಜ್ಞಾನ-ವಿಜ್ಞಾನ, ಸಮ್ಮಂದ ಕಟ್ಟ್‌ವ ಲೆಕ್ಕಾಚಾರ ಬೇಕಸ್ಟ್ ಇತ್ತ್. ಇದೆಲ್ಲ ಇತ್ತ, ಎಲ್ಲಿಟ್ಟು? ತೇಳುವ ಪ್ರಸ್ನೆಗೆ ಉತ್ತರ ಇಲ್ಲೆ.

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಂದ ತಯಾರಾವ 'ಅರೆಭಾಷೆ ವಿಶ್ವಕೋಶ' ಲಾಯ್‌ಕ್‌ಲಿ ವಿಸಯಗಳ ಹೊಂದಿಸಿಕಂಡ್ ಬರ್‌ತಾ ಉಟ್ಟು. ಅರೆಬಾಸೆ ಕನ್ನಡ ಬಾಸೆನಂಗೆ ಪ್ರಮಾಣಬಾಸೆ ಅಲ್ಲಂತ ಹೇಳ್‌ವವು ಒಳೊ. ಆದರೆ ಸಂಸ್ಕೃತಿ ಇಚಾರಕೆ ಬಾಕನ ನಮ್ಮದೇ ಪ್ರಾಮಾಣಿಕ ಬೊದ್‌ಕ್ ಇತ್ತ್, ಉಟ್ಟು. ಮೆಗಾಕಲ್ಚರ್ ಬಾಕನ ನಮ್ಮದ್ ಅಮುಕ್ಯಂತ ಆದುಲೆ. ಹೊಸ ಸಂಸ್ಕೃತಿನ ಜೊಡಿಸಿಕಂಡಂಗೆ ಹಳೆ ಸಂಸ್ಕೃತಿನ ಉಳ್‌ಸಿಕಣಿಕೆ ಮಾದ್ಯಮ ಯಾವುದೂಂತ ಎಚ್ಚರಲಿರೊಕಾದೆ. ಆದರೆ ಕೊಡಗ್ ಮತ್ತೆ ದಕ್ಷಿಣ ಕನ್ನಡ ಜಿಲ್ಲೆ ಅರೆಬಾಸೆ ಪ್ರದೇಸಲಿ ಕೆಲವರ್ ವಿದ್ವಾಂಸರ್ ಬರ್‌ದ ಪುಸ್ತಕಗಳ ಆದಾರಲಿ ನಮ್ಮ ಸಂಸ್ಕೃತಿ ಹಳ್ಳಿ ಒಳ್‌ದುಟ್ಟುತ ಹೇಳಿಕಂಬಸ್ಟ್ ಅದ್ಯಯನಗ ನಡ್‌ದುಟು. ಹಿಂಗೆ ಒಂದ್ ಸಣ್ಣ ಪ್ರದೇಸಲಿ ಮಾತಾಡ್‌ವ ಬಾಸೆಲಿರ್‌ವ ಜ್ಞಾನನ ಪ್ರಪಂಚಕ್ಕೆ ತೋರ್‌ಸಿಕೆ ನಾವ್‌ಗೆ ಅರೆಬಾಸೆನೇ ಆಕುಂತಿಲ್ಲೆ. ಇಂತ ಇಚಾರಗಳ ಅರೆಬಾಸೆಲೇ ಹೇಳೊಕುತ ಹೊರ್‌ಟಾಕನ ಬಾಸೆ, ವ್ಯಾಕರಣ, ಪಾರಂಪರಿಕ ಜ್ಞಾನ ಇಂತ ಹಿನ್ನೆಲೆಲಿ ಹೇಳಿಕೆ ಪದಸಂಪೊತ್ತ್, ಪ್ರಾದೇಸಿಕ ಜ್ಞಾನ ಇರೊಕಾದೆ. ಜ್ಞಾನ ಪರಂಪರೆನ ಕಟ್ಟಿಕೊಟ್ಟರೆ ಮಾತ್ರ ಮುಂದೆ ಬೆಳ್‌ಕಂಡ್ ಹೋದೆ. ಸಂಸ್ಕೃತಿ ನಿತ್ತ ನೀರಲ್ಲ, ಅದ್ ಹರ್‍ಕೊಂಡ್ ಹೋವಂತದ್‌ತ ಮಾತುಟ್ಟು. ಅರೆಬಾಸೆನೂ ಅಕಾಡೆಮಿ ಬಂದ ಮೇಲೆ ಬೆಳಿತಾ ಉಟ್ಟು. ಆದರೆ, ಅರೆಬಾಸೆ ಸಂಸ್ಕೃತಿ

ಶ್ರೀಮಂತ ಇದ್ದರೂ ನಾವ್ಗೆ ನಮ್ಮದ್ ಅರೆಬಾಸೆಂತ ಹೇಳಿಕಂಬಕೆ ನಾಮೊಸ್ ಆವವೂ ಒಳೊ. ನಮ್ಮ ಬೌತಿಕ, ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಕ ಇಚಾರಗಳ ಅರೆಬಾಸೆಲೇ ಬರ್‌ದ್ 'ನಮ್ಮ ಜ್ಞಾನನ ಪ್ರಪಂಚ ಜ್ಞಾನಲಿ, ಪ್ರಪಂಚ ಜ್ಞಾನನ ನಮ್ಮ ಬಾಸೆಲಿ' ತಾವ ಒಂದ್ ಮೊದಲ ಪ್ರಯತ್ನ ಈ ಪುಸ್ತಕಂತ ಹೇಳಕ್.

13.07.2020ರ ಅಕಾಡೆಮಿ ಸಾಮಾನ್ಯ ಸಬೆಲಿ ಅರೆಬಾಸೆಗೆ ಪದಕೋಶ, ವಿಶ್ವಕೋಶ ತಯಾರ್ ಮಾಡೊಕುಂತ ಚರ್‌ಚೆ ಆತ್. ಒಂದ್ ಅಕಾಡೆಮಿನ ಅವದಿಲಿ ಇದೆಲ್ಲ ಮಾಡಿಕೆ ಆದೆನಾತ ಎಲ್ಲವುಕೆ ಆತಂಕನೂ ಇತ್ತ್. ಕೊರೊನಾಂದ ಲೇಕನ ಬರಿಯಕೆ, ಬರೆವವುಕೆ ಏನೂ ಅಡ್ಡಿ ಇಲ್ಲಂತಾದರೂ ಪ್ರಬಂದ ವಿಸಯ ಹೊಂದಾಣಿಕೆ ಮಾಡುದರಲ್ಲೇ ಹಞ್ಞ ಸಮಯ ಕಳ್ತ್. ಅಕ್ಟೋಬರ್ 2020ರ್‌ಲಿ ಸುಳ್ಯ ಮತ್ತೆ ಮಡಿಕೇರಿಲಿ ಎರಡ್ ಸಬೆ ಸೇರ್‌ಸಿ ಲೇಕನ ಬರೆಯೊವರ ಜೊತೆ ಚರ್‌ಚೆ ಮಾಡಿ 400ಕಿಂತ ಹೆಚ್ಚಿಗೆ ಮುಕ್ಯ ಲೇಕನಗಳ ಒಂದ್ ಪರಿವಿಡಿ ತಯಾರಾತ್. ಆದರೂ ಕೆಲ್‌ಸ ಸುರುವಾಕೆ ಹಞ್ಞಞ್ಞನೇ ತಡ ಆತ್. ಕೊನೆಗೂ ಅಕ್ಟೋಬರ್ 2021ರ್‌ಲಿ ಅರೆಭಾಷೆ ವಿಶ್ವಕೋಶ ಕಾರ್ಯನಿರ್ವಹಣಾ ಸಂಪೋದಕರಾಗಿ ಸದಸ್ಯರಾದ ಶ್ರೀ ಭರತೇಶ ಅಲಸಂಡೆಮಜಲು ಅವರ ಆಯ್ಕೆ ಮಾಡ್‌ದೊ. ಒಂದ್ ಕಡೆ ಅರೆಭಾಷೆ ಪಾರಂಪರಿಕ ಕೋಶಲಿ ತಾಂತ್ರಿಕ ಸಹಾಯ, ಅರೆಭಾಷೆ ಪದಕೋಶ ಸಂಪೋದನೆ ಮಾಡ್‌ವ ಕೆಲ್‌ಸದ ಜವಾಬ್ದಾರಿನೂ ಇತ್ತ್. ಭರತೇಶ ಅಲಸಂಡೆಮಜಲು ಅವು ವಿಶ್ವಕೋಶ ಸಂಪೋದನೆಗೆ ತಾಂತ್ರಿಕ ಚೌಕಟ್ಟ್ ಹಾಕೊಂಡೊ. ಲೇಕನಗಳ, ವಿಸಯಗಳ ಆಯ್ಕೆಗೆ ಸಂಪೋದನೆಗೆ ನಂಗೂ ಅವಕಾಸ ಮಾಡಿಕೊಟ್ಟೊ. ನಾವಿಬ್ಬೊರು ಕನ್ನಡ, ತುಳು ವಿಕಿಪೀಡಿಯ ಸಂಪೋದಕರಾದ ಕಾರಣ ವಿಶ್ವಕೋಶದ ಲೇಕನ ಹೇಂಗಿರೊಕುಂತೇಳುವ ನಿಯಮ ಗೊತ್ತಿತ್ತ್. ಅಕಾಡೆಮಿನ ಈ ಯೋಜನೆಲಿ ಆನ್‌ಲೈನ್ ಕೆಲ್‌ಸ ಮಾಡಿಕೆ, ಕಡಿಮೆ ಸಮಯಲಿ ಹೆಚ್ಚಿಗೆ ಕೆಲ್‌ಸ ಮಾಡಿಕೆ ಅದುನೂ ಕಾರಣ ಆಗಿರ್‌ದು.

ವಿಶ್ವಕೋಶಲಿ ಪ್ರಕಟ ಆವ ಲೇಕನಗಳ ಈಗಾಗಲೇ ಅರೆಬಾಸೆ ಸಂಸ್ಕೃತಿ ಬಗ್ಗೆ ಪ್ರಕಟ ಆದ ಪುಸ್ತಕಂದ ಆಯ್ದ್ ಹೆರ್‌ಕಿದ ಜನಪದ ಕತೆ, ಗಾದೆ, ಒಗಟ್, ಆಟ, ಕೊಣ್‌ತ, ಬೇಟೆ, ದೆವ್ವಾರಾದನೆ, ಅಮರಸುಳ್ಯದ ಚಾರಿತ್ರಿಕ ಸಂಗತಿ, ಕ್ರಿಸಿಗೆ ಸಮ್ಮಂದಿಸಿದ ಮಾಹಿತಿ, ವೀರರ ಆರಾದನೆ, ಮೊದ್ದ್, ಸೊತ್ತ್‌ಗ, ವ್ಯಕ್ತಿ ಪರಿಚಯ, ಜಾಗೆ ಪರಿಚಯ, ಗೌಡ ಸಮುದಾಯ, ಚರಿತ್ರೆನ ಪರಿಚಯ – ಹೀಂಗೆಲ್ಲ ಒಟ್ಟ್‌ಮಾಡಿ ಅಡ್ಡಣಪೆಟ್ಟ್‌ಂದ ಹೊಸ್ತೂಟದ ವರೆಗೆ 150ರಸ್ಟ್ ಕನ್ನಡ ಲೇಕನಗಳ ಸಂಪೋದನೆ ಮಾಡ್‌ದೊ. ಒಟ್ಟ್ 450ಕ್ಕಿಂತ ಹೆಚ್ಚಿಗೆ ವಿಸಯಲಿ ಓದುವವ್ಕೆ ಸಿಕೊಕುಂತ ಸಂಗ್ರಹ ಮಾಡ್ಯೊಳೊ. ಸಂಗ್ರಹ ಆದ ಎಲ್ಲಾ ಲೇಕನಗಳ ಗೂಗಲ್ ಡಾಕ್‌ಲಿ ಹಾಕಿ ಏಕ ಕಾಲಲಿ ಬೇರೆಬೇರೆ ಕಡೆಂದ ಅರೆಬಾಸೆಗೆ ಅನುವಾದ ಮಾಡುವ ಕೆಲ್‌ಸ ಸುರುವಾತ್. ಸುಳ್ಯ ಕಡೆಂದ ಕಿರಣ ಕುಂಬಳಚೇರಿ, ಮಡಿಕೇರಿ ಕಡೆಂದ ಸ್ಮಿತಾ ಅಮೃತರಾಜ್, ಮಂಗಳೂರ್‌ಂದ ನಾ ಮತ್ತೆ ಭರತೇಶ್ ಅಲಸಂಡೆಮಜಲು, ಹೈದರಾಬಾದ್‌ಂದ ಮನೋಜ್ ಕುಡೆಕಲ್ಲು ಒಟ್ಟಾಗಿ ಕೆಲ್‌ಸ ಮಾಡ್‌ದೊ. ಈ 10 ತಿಂಗಳ್‌ಲಿ ನಾವ್ ಸರಾಸರಿ ದಿನಕೆ 5 ಗಂಟೆ ಆನ್‌ಲೈನ್‌ಲೇ ಇದ್ದೊ. ಮನೋಜ್ ಸಣ್ಣ ಹೈದನಾದರೂ ಅರೆಬಾಸೆನ ಬಗ್ಗೆ ಅಪಾರ ಆಸಕ್ತಿಂದ. ಅಮ್ಮನ ಕಡೆಲಿ ನಡೆವ, ನಮ್ಮ ಊರ್‌ಲಿ ನಡೆವಂತ ನೆಂಪು ಮಾಡಿ ಕೆಲವು ಇಸಯಗಳ ಸೇರ್‌ಸಿಕಂಡೊಳೊ. ನಮ್ಮ ತಿಳ್‌ವಳಿಕೆಗೆ ಬಾಸೆ ಮಾತ್ರ ಅಲ್ಲ ಪರಿಸರನೂ ಮುಕ್ಯತ ಇವರ ಪರಿಶ್ರಮದ ಕೆಲ್‌ಸನ ನೋಡಿ ಕಲಿಯೊಕು.

ಅರೆಭಾಷೆ ಪಾರಂಪರಿಕ ವಸ್ತುಕೋಶ, ಪದಕೋಶ ಮತ್ತೆ ವಿಶ್ವಕೋಶಕ್ಕೆ ಗೂಗಲ್ ತಾಂತ್ರಿಕ ಸಹಾಯ ಬೇಕಸ್ಟ್ ಸಿಕ್ಕಿತ್. ಕೊರೊನಾಂದ ಎಲ್ಲ ಕೆಲ್‌ಸನೂ ಆನ್‌ಲೈನ್‌ತ ಆಕನ ಗೂಗಲ್ ಮೀಟ್, ಗೂಗಲ್ ಎಕ್ಸೆಲ್, ಗೂಗಲ್ ಡಾಕ್ ಹಿಂಗೆ ಎಲ್ಲವೂ ಗೂಗಲ್‌ಮಯ ಆತ್. ಗೂಗಲ್‌ನ ಸಹಾಯ ಇಲ್ಲಂದರೆ ಅಕಾಡೆಮಿ ಮಾಡ್‌ವ ಯಾದೇ ಯೋಜನಾ ಕೆಲ್‌ಸಗ ನೆನ್ಸ್‌ದಂಗೆ ಆಕ್ಕೆ ಕಸ್ಟ ಇತ್ತ್. ಪೇಪರ್ ಇಲ್ಲದೆ ತಯಾರಾದ ನೂರಾರು ಪುಟಗಳ ಈ ಆನ್‌ಲೈನ್ ಕೆಲ್‌ಸ ಬೇರೆವ್ಕೂ ಅನುಕರಣೀಯತ ಹೇಳಕ್.





## ಅನುವಾದಕರ ಮಾತ್



“

# ಅರೆಬಾಸೆಂತೇಳ್ವ ಹೂಬೊಳ್ಳಿನ ಸುರುನ ಪಂಚಾಂಗ

✍ ಶ್ರೀ ಮನೋಜ್ ಕುಡೆಕಲ್ಲು
s/o ಸೀತಾರಾಮ ಕುಡೆಕಲ್ಲು, ಆಲೆಟ್ಟಿ ಗ್ರಾಮ ಮತ್ತು ಅಂಚೆ, ಸುಳ್ಯ

ಈಗ ನಿಮ್ಮ ಕೈಲಿ ಇರ್‌ವ ಈ ಪೊರ್ಲುನ, ತೂಕದ ಪುಸ್ತಕನ ಓದಿ ಮುಗ್ಸ್‌ವ ಹೊತ್ತ್‌ಗೆ, ನೀವ್ ಎಸ್ಟೊ ವರ್ಸದ ಹಿಂದೆನ ನಮ್ಮ ಊರ್, ಕಾಡ್‌ಗುಡ್ಡೆ ದಾಟಿದ್ ದೂರದೂರ್‌ನ ನಮ್ಮ ರಕ್ತದ ಮೂಲದ ನಾಡ್‌ಗೆ ಹೋಗಿ ಅಲ್ಲಿ ಸುತ್ತಾಡಿ, ಅಲ್ಲಿಂದ ಇಳ್ದ್ ಬಂದ್  ಸುಳ್ಯ ಕೊಡ್ಗ್‌ನ ಎಲ್ಲಾ ಮೂಲೆ ಮೂಲೆನ ಸುತ್ತಾಡಿಕಂಡ್ ತಿಳ್ಕಂಡ್ ಅರೆಬಾಸೆನ ಬೊಳ್ಳಿ ಹಬ್ಬಿದ ದಾರಿಲಿ ಅಲ್ದಾಡಿಕಂಡ್ ಬಂದ್ಯರಿ. ನಮ್ಮ ಅರಸರ್, ಅವರ ಸಾಮ್ರಾಜ್ಯ, ದಂಡ್, ದಂಗೆಗ ಏಳ್‌ಬೀಳ್‌ಂದ ಹಿಡ್ದ್ ಅವರ ನೆತ್ತರ್ ಸಮ್ಮಂದದ ಇಂದ್‌ನ ನಿಮ್ಮದೆ ಕುಟುಂಬ, ಬೊಳಿ, ಮತ ಮೂಲದವರೆಗೆನ ಸತ್ಯಂಗಳ, ಪಂಡ್‌ನ ಕಾಲದ ಬೊದ್ಕ್–ಬೇಸಾಯ, ಕ್ರಮ–ಕಟ್ಪ್‌ಪಾಡ್‌ಗ, ನಂಬಿಕೆ, ಮಾಟ–ಮಂತ್ರಗ, ಮೊದ್ದ್‌ಗ, ಹಬ್ಬ ಹರಿದಿನ ದೆವ್ವ–ದೇವುರು, ಜಂಬರ–ಜಟ್ಟಿನೊಟ್ಟಿಗೆ ಒಬ್ಬ ಮೊನ್ಸ ಹುಟ್ಟಿದಲ್ಲಿಂದ ಹಿಡ್ದ್ ಹಬ್ಬಕೆ ಅವನ ಅವ್ಲ್ ಹಾಕ್‌ವಲ್ಲಿವರೆಗೆನ ಕ್ರಮಗಳ ಪೂರ ತಿಳ್ಕಂಡ್ ಬಾಕಾದೆ. ಸುಳ್ಯದವ್ ಕೊಡ್ಗ್‌ನ ಹುತ್ತರಿ ಕೋಲಾಟ, ತೆರೆ ಎಂತತ ತಿಳ್ಕಣಕ್. ಕೊಡ್ಗ್‌ನವ್ ಸುಳ್ಯದ ಅಡ್ಡನಪೆಟ್ಟ್, ಸಿದ್ದವೇಸ ಇಂತ ಇನ್ನು ಸುಮಾರ್ ಇಂದ್‌ನ ದಿನ ಕಾಂಬಕೆನೆ ಅಪ್ರೂಪದ, ಈಗೊಳು ಇರ್‌ವ  ಕಟ್ಪ್‌ಪಾಡ್, ಕೊಣ್ತಗಳ ಬಗ್ಗೆ ತಿಳ್ಕಣಕ್. ಇಸ್ಟಲ್ಲದೆ ಅರೆಬಾಸೆನ ಒಳ್ಸಿಕಂಡ್, ಬಳ್ಸಿಕಂಡ್ ಹೋಕಾದ ಜೊವಬ್ದಾರಿ ಇರ್‌ವ ಅರೆಬಾಸೆನ ಹೊಸ ತಲೆಮಾರ್‌ನ ಇಂದ್‌ನ ಮಕ್ಕ ಅಲ್ಲೊ ಮುಂದೆ ಬರೊವ್ಕೆ ತಿಳ್ಕಂಬಕೆ ಬೇಕಾವ ಆಚಾರ ವಿಚಾರ, ಕ್ರಮ ಕಟ್ಪ್‌ಪಾಡ್‌ನ ಬರಹಂಗಳ ಈ ವಿಶ್ವಕೋಶದೊಳೆಗೆ ಕೂಡಿಸ್‌ವ ಪ್ರಯತ್ನ ಆಗುಟು.

ಒಂದ್ ಹೂಬೊಳ್ಳಿನ ಬಿತ್ತ್ ಬಿದ್ದುಟ್ಟಿದ್, ಚಿಗ್‌ರ್‌ದಾಂಗೆ ನೆಲದೊಳೆಗೆ ಬೇರ್‌ನ ಇಳ್ಸಿ, ಮೇಲೆ ಸಿಕ್ಕಿದ ದೈಮರಕೆ ಹಬ್ಬಿದ್ ಬೆಳ್ಕಂಡ್ ಹೋದೆ. ಚಿಗ್‌ರ್ ಸೊಪ್ಪಾಗಿ, ಅದರ ನೊಡ್‌ಲಿ ಮೊಗ್ಗಾಗಿ, ಮೊಗ್ಗ್ ಹೂ ಆಗಿ ಅರ್‌ಳಿದೆ. ಹೀಂಗೆನೆ ನಮ್ಮ ಅರೆಬಾಸೆನ ಬೊಳ್ಳಿನು ಒಂದ್ ಮೂಲಲಿ ಹುಟ್ಟಿದ್, ಒಂದ್ ಕಾರಣಕೆ ಆಯಾಯ ಕಾಲಲಿ ನಾವಿರ್‌ವ ಇಂದ್‌ನ ನೆಲಕೆ ಹಬ್ಬಿಕಂಡ್ ಬಂದುಟು. ಹಬ್ಬಿಕಂಡೇ ಉಟ್ಟು. ಈ ಬೊಳ್ಳಿಗೆ ಬೇಸಾಯಂದ ಕಟ್ಟಿಕಂಡ ಬೊದ್ಕ್‌ನ ಚೆರೆ ಉಟ್ಟು. ಹುಟ್ಟ್‌ಂದಳೆ ಬಂದ ನೆತ್ತರ್‌ನ ಗುಣಲಿ ಹೆದ್‌ರದೆ ಹಬ್ಬ್‌ವ ಸಕ್ತಿ ಇರ್‌ದು ಕಂಡದೆ. ಈ ಹಬ್ಬಟಲಿ ಅಲ್ಲಲ್ಲಿ ಸುಮಾರ್ ಜೆನಂಗ ಹೂ ಆಗಿದ್ ಅರ್‌ಳಿಯೊಳೊ. ಇನ್ನುನು ಈ ಬೊಳ್ಳಿ ಹಬ್ಬಿಕಂಡೆ ಹೋದೆ. ಇಂತ ಹೂಬೊಳ್ಳಿನ ಕಡೆಕೊಡಿ ಉದ್ದಗಲ ಚಾಳ ಇರ್‌ವ ಅದರ  ಪಂಚಾಂಗನ ಈ ಅರೆಬಾಸೆ ವಿಸ್ವಕೋಸ ನಾವ್ಗೆ ತಿಳ್ಸಿದೆ. ಈ ಎಲ್ಲಾ ಸಂಗತಿಲಿ ಸುಮಾರ್ ಸಂಸೋದಕರ್ ಹಗಲಿರ್‌ಲ್ ನಡ್ಸಿದ ಸೋದ, ಸ್ರಮ ಉಟ್ಟು. ಜೆನಪದರ ಬಾಯಿಂದ ಬಾಯಿಗೆ ಬಾಕೆ ಆ ಜೆನಂಗ ಮಾತಾಡ್‌ವ ಮತೆ ಕೇಳಿ ಕಲ್ತ್, ಇನ್ನೊಬ್ಬಂಗೆ ಹೇಳ್ದರ ಪಲ ಉಟ್ಟು. ಇಸ್ಟಲ್ಲದೆ ಈ ಅರೆಭಾಷೆ ವಿಶ್ವಕೋಶ ಮಾಡಿದ್ ಅದರ ಅರೆಬಾಸೆ ಜೆನಕೆ ಒಪ್ಪುಸುವ ಗುರಿ ಇಸಿಕಂಡ ನಮ್ಮ ಅಕಾಡೆಮಿನ ದೂರದ್ರಿಸ್ಟಿ ಮತೆ ಅದರ ಮುಗ್ಸಿಕೆ ಗೆಯ್ಮೆ ಮಾಡ್ದ ಸುಮಾರ್ ಜೆನರ ಸ್ರಮ ಉಟ್ಟು. ಹಂಗಾಗಿದ್ ಈ ಹೂಬೊಳ್ಳಿನ ಪಂಚಾಂಗ ಇಂದ್ ನಿಮ್ಮ ಕೈಲಿ ಇಸ್ಟ್ ಗಡ್ದ್‌ಲಿ ಒಳದ್. ಈ ವಿಶ್ವಕೋಶಲಿ ಅಲ್ಲದೆ ಅರೆಬಾಸೆನ ಬೇರೆ ಸಂಗತಿಗಳ ಹುಡ್ಕಿರೆ, ಅದರ ಸೋದ ಮಾಡಿರೆ ಇನ್ನಸ್ಟ್ ಸಿಕ್ಕುದರ್‌ಂದ, ಮುಂದೆ ಬೇರೊಂದ್ ಪುಸ್ತಕ ಬಂದರು ಬಾದು. ಆದರೆ  ಈ ವಿಶ್ವಕೋಶ ಯಾಗೋಳ್‌ಗೆ ಸುರುದೇ ಆಗಿ ಒಳಿದರ್‌ಂದ ನಾ ಇದರ ಅರೆಬಾಸೆಂತೇಳ್ವ ಹೂಬೊಳ್ಳಿನ ಸುರುನ ಪಂಚಾಂಗತ ಕರ್‌ದನೆ.

ನಾ ಇಂದೊರೆಗೆ ಬೇರೆ ಬಾಸೆಲಾಗಲಿ ಅಲ್ಲೊ ನನ್ನ ಅರೆಬಾಸೆಲಿ ಹೇಳಿಕಂಬತ ತೂಕದ ಕೆಲ್ಸಗ ಮಾಡ್‌ತ್ಲೆ. ನನ್ನ ಹುಟ್ಟ್‌ನೆಲದ ನೀರ್‌ನ ಗುಣನೊ ಗೊತ್ತ್‌ಲೆ. ನಾಕೈದ್ ಪೊದ್ಯಗಳ, ಕತೆ ಕವನಗಳ ಮನ್ಸ್‌ನ ಕುಸಿಗೆ ಅರೆಬಾಸೆಲಿ ಬರ್ದ್‌ದ್ ಬುಟ್ಟರೆ ಬೇರೆಂತ ಇಲ್ಲೆ. ಈಗದ ಅಕಾಡೆಮಿನ ಅದ್ಯಕ್ಸರ್ ಲಕ್ಷ್ಮಿನಾರಾಯಣ ಕಜೆಗದ್ದೆ ಅವ್ ಸುರುಲೆ ನನ್ನ ಗುರ್ತ್‌ಸಿದ್ ಅರೆಬಾಸೆ ಸಾಹಿತ್ಯಲಿ ಬೇಕಿರ್‌ವ ಹೊಸತನ ಮತ್ತೆ ಅಂತದರ ಬರಿಯಕೆ ಮುಂದೆ ನನ್ನ ಪ್ರಾಯದವ್ ಓದಕಾದ ಪುಸ್ತಕಗಳ, ನೋಡಕಾದ ನಾಟಕಗಳ, ಪಿಚ್ಚರ್‌ಗಳ ತಿಳ್ಸಿದ್ ಆಗಾಗ ಬೆನ್ನ್ ತಟ್ಟಿಯೊಳೊ. ನಾ ಇದರ ನನ್ನ ಅರೆಬಾಸೆ ಸಾಹಿತ್ಯ ಬೊದ್ಕ್‌ಲಿ ಯಾಗೋಳುಗು ನೆಂಪುಲಿಸಿಕಣೆ. ಅದಾಗಿದ್ ಈ 'ಅರೆಭಾಷೆ ವಿಶ್ವಕೋಶ' ಮತೆ 'ಅರೆಭಾಷೆ ಪದಕೋಶ'ದ ಕೆಲ್ಸಲಿ ಭರತೇಶ ಅಲಸಂಡೆಮಜಲು ಮತ್ತೆ ಡಾ.ವಿಶ್ವನಾಥ ಬದಿಕಾನ ಇವರ್‌ಂದಾಗಿ ಹುಕ್ಕಂಡೆ. ಸುರುಗೆ ನಂಗೆ ಈ ಎರ್‌ಡ್ ಪುಸ್ತಕದ ಕಡೆಕೊಡಿ ಗೊತ್ತಿತ್ತ್‌ಲೆಲೆ. ಏಕೆಂತೇಳಿರೆ ನಂಗೆ ಇದ್ ಆನ್‌ಲೈನ್‌ಲಿ ಬರಿಯಕೆ ಆವಂಗಿತ್ತ್, ಸುಮಾರ್ ದಿನಕೊಮ್ಮೆ ಎರ್‌ಡೆರಡ್ ಬರಹಗಳ ಹಞ್ಞಞ್ಞ ಅರೆಬಾಸೆಗೆ ಬರೆಕನ ಹೊಸ ಹೊಸ ಸಂಗತಿಗ ತಿಳ್ಕಂಡೆನೆ ಹೊರ್‌ತ್ ಇದ್ ಎಲ್ಲಾ ಸೇರಿ ಪುಸ್ತಕ ಆಕನ ಅದರ್‌ಲಿರ್‌ವ ಸಂಗತಿನ ತೂಕ ಮತೆ ಚಾಳ ಆಗ ಗೊತ್ತಾತ್‌ಲೆ. ಕಡೆಕಡೆಗೆ ಎಲ್ಲದರ ಒಮ್ಮೆಗೆ ಒಟ್ಟ್ ಸೇರ್‌ಸಿ ಕೂಡ್ಸಿದರ, ಕಡೇ ಸುತ್ತ್‌ಲಿ ಇದರೆಲ್ಲ ತಿರ್‌ಗಿಸಿ ನೋಡಿಕನ ರೋಮಕುತ್ತ ಆತ್. ಬಾರಿ ಕಮ್ಮಿ ಕಾಲಲಿ ಕಟ್ಟಿದ ಈ "ಅರೆಭಾಷೆ ವಿಶ್ವಕೋಶ" ಅರೆಬಾಸೆಗೆ ಒಂದ್ ಹೆಗ್ಗ ಆದರ್‌ಲಿ ಎರ್‌ಡ್ ಮಾತಿಲ್ಲೆ. ಬವುಸ ನಾ ಭರತೇಶ್ ಮತೆ ವಿಶ್ವನಾಥ ಬದಿಕಾನ ಅವರಂತ ಅರೆಬಾಸೆನ ಸಕ್ತಿಗಳೊಟ್ಟಿಗೆ ಕೆಲ್ಸ ಮಾಡಿರೆ, ಇನ್ನ್‌ನು ಇಂತ ಒಂದ್ ನೂರ್ ಪುಸ್ತಕದ ಕೆಲ್ಸಕೆ ಇಳಿಯಕ್‌ತೇಳ್‌ವ ದಮ್ಮ್ ನಂಗೆ ಬಂದುಟು. ಕಾರಣ ಇವಿಬ್ಬರ ತಾಳ್ಮೆ ಮತೆ ಒಂದೇ ಸಂಗತಿನ ಮೇಲೆ ಗುರಿ ಇಸಿದ್ ಹಗಲಿರ್‌ಲ್‌ಂತ ದುಡಿದರ ಕಾಂಬಕನ ನಾನು ಸಣ್ಣಮಟ್ಟ್‌ನ ಸಿಸ್ತ್‌ನ ಕಲ್ತಳೆ. ನನ್ನಾಂಗೆ ಹಗಲ್‌ನ ಆಪಿಸ್ ಕೆಲ್ಸ ಆಗಿ ಬಂದ್ ಇಂತ ಬಾಸೆನ ಕಟ್ಟ್‌ವ ಕೆಲ್ಸಲಿ ಹಕ್ಕಕ್ಕಲೆ ಕಳ್‌ದ ಒಂದ್ ವರ್‌ಸಂದ ದಿನಾ ಇರ್‌ಲ್, ನೊಡಿರ್‌ಲ್, ಬೆಳ್ಗರ್‌ವರೆಗೆ ಕುದ್ದ್ ಅವಿಬ್ಬರ್ ಗೈದರ ಕಂಡಾಕನ, ಅರೆಬಾಸೆಗೆ ಇವರಂತವ್ ಇನ್ನ್ ಹತ್ತ್ ಹದ್‌ನೈದ್ ಜೆನ ಇದ್ದರೆ ನಮ್ಮ ಬಾಸೆ ಹೆಂಗೆ ಬೆಳಿದೊಲಾಂತ ಆದೆ. ಅವರ್‌ಲಿ ಒಬ್ಬ ನಾನೆ ಏಕಾಗದ್‌ತ ಒಳಗೆಂದ ಒಳೆಗೆ ಹೊಸ ಮಿಂಚ್ ಹರ್‌ದದೆ. ಕಂಪ್ಯೂಟರ್ ಟೆಕ್ನಾಲಜಿನ ತಿಳ್ದ್ ಕೆಲ್ಸ ಮಾಡಿರೆ ಈಗನ ಕಾಲಲಿ ಬಾಸೆನ ಓಟಲಿ ಆವ ವೆತ್ಯಾಸಕೆ, ಅಂದರೆ ಆನ್‌ಲೈನ್‌ಲಿ ಸುಮಾರ್ ಜೆನ ಒಮ್ಮೆಗೆ ಒಂದೆ ಪುಸ್ತಕದ ಮೇಲೆ ಕಣ್ಣಾಡ್‌ಸಿ ಕೆಲ್ಸ ಮಾಡಿರೆ ಅದರ್‌ಲಿ ಆವ ಸುದಾರ್‌ಣೆಗೆ ಕಡಿಮೆ ಕಾಲಲಿ ಅಂದರೆ ವರ್‌ಸದ ಒಳೆಗೆ ಅಕಾಡೆಮಿ ಹೊರತಂದ ಪದಕೋಶ ಮತ್ತೆ ವಿಶ್ವಕೋಶ ತೇಳ್ವ ಎರ್‌ಡ್ ಪುಸ್ತಕಗ ಸಾಕ್ಸಿ.

ಈ ಪುಸ್ತಕದ ಸುರುಂದ ಕಡೆವರೆಗೆ ಇರ್‌ವ ಎಲ್ಲಾ ಸಂಗತಿಗ, ಸಂಸೋದನ ವಿಸಯಗ, ಜೆನಪದ ಕಲೆ ಕ್ರಮ ಕಟ್ಟ್‌ಪಾಡ್‌ನ ಬರಹಂಗಳ ನಾ ಅರೆಬಾಸೆಗೆ ನಂಗೆ ಇಂತ ಹೆಗ್ಗನ ಪುಸ್ತಕದ ಗೈಮೆಲಿ ಸಣ್ಣಮಟ್ಟ್‌ಲಿ ಕೈಜೋಡ್ಸಿಕೆ ಕರ್‌ದ ಮೇಲೆ ಹೇಳ್ದ ಮೂರ್ ಜೆನಕೆ ನನ್ನ ನಮಸ್ಕಾರಂಗ. ಹಾಂಗೆ ಇದರ ಓದಿಕಿರ್‌ವ ನೀವ್ಗೆನು ನಮಸ್ಕಾರ.





ಲೇಕಕರ ಮಾತ್

“

# ಅರೆಭಾಷೆಯ ಸುತ್ತ ಹರಡಿಕೊಂಡಿರುವ ಅನೇಕ ಬಗೆಯ ಜ್ಞಾನಕೋಶ



✍ ಪುರುಷೋತ್ತಮ ಬಿಳಿಮಲೆ
ವಿಶ್ರಾಂತ ಪಾಧ್ಯಾಪಕರ್,
ಜೆಎನ್‌ಯು ನವದೆಹಲಿ

ಒಂದು ನಿರ್ದಿಷ್ಟ ಭಾಷೆಯಲ್ಲಿ ರಚಿತವಾಗುವ ವಿಶ್ವಕೋಶವು ಲೋಕದ ಬಹುತೇಕ ಎಲ್ಲಾ ವಿಷಯಗಳನ್ನು ವ್ಯವಸ್ಥಿತವಾಗಿ ಆ ಭಾಷೆಯಲ್ಲಿ ಮಂಡಿಸುತ್ತದೆ. ಆದರೆ ವಿಶ್ವಕೋಶದ ಸುಮಾರು ಎರಡು ಸಾವಿರ ವರ್ಷಗಳ ಇತಿಹಾಸವನ್ನು ಗಮನಿಸಿದವರಿಗೆ ಅದರ ಇನ್ನೊಂದು ಆಯಾಮವೂ ಅರಿವಿಗೆ ಬರುತ್ತದೆ. ಅದೇಂದರೆ, ಒಂದು ನಿರ್ದಿಷ್ಟ ವಿಷಯವನ್ನು ಕೇಂದ್ರದಲ್ಲಿರಿಸಿ ಅದರ ಸುತ್ತ ಹೆಣೆದುಕೊಂಡಿರುವ ಹತ್ತು ಹಲವು ಅಂಶಗಳನ್ನು ಸಂಗ್ರಹಿಸಿ ವಿವರಿಸುವುದು. ಅರೆಭಾಷೆ ಅಕಾಡೆಮಿಯ ಪ್ರಸ್ತುತ ವಿಶ್ವಕೋಶವು ಎರಡನೇ ವರ್ಗಕ್ಕೆ ಸೇರುತ್ತದೆ.  ಈ ಗ್ರಂಥವು ಸುಳ್ಯ ಮತ್ತು ಮಡಿಕೇರಿ ಪರಿಸರದಲ್ಲಿ ಪ್ರಚಲಿತದಲ್ಲಿರುವ ಅರೆಭಾಷೆಯ ಸುತ್ತ ಹರಡಿಕೊಂಡಿರುವ ಅನೇಕ ಬಗೆಯ ಜ್ಞಾನವನ್ನು ಅರೆಭಾಷೆಯಲ್ಲಿಯೇ ಪ್ರಸ್ತುತಪಡಿಸುತ್ತದೆ. ಇಂಥ ಕೆಲಸಗಳು ಅರೆಭಾಷೆಯಲ್ಲಿ ಇದುವರೆಗೆ ನಡೆಯದೇ ಇರುವುದರಿಂದ ಈ ಪುಸ್ತಕಕ್ಕೆ ಐತಿಹಾಸಿಕ ಮಹತ್ವ ಇದೆ.

ವಿಶ್ವಕೋಶದ ಮಾಹಿತಿಗಳು ಹೆಚ್ಚು ನಿಖರವಾಗಿರಬೇಕೆಂದು ಎಲ್ಲರೂ ಬಯಸುತ್ತಾರೆ. ತಪ್ಪು ಮಾಹಿತಿಗಳು ಅನೇಕ ತಲೆಮಾರುಗಳನ್ನೇ ಹಾಳುಮಾಡಬಲ್ಲವು, ನಿಜ. ಆದರೆ ಅರೆಭಾಷೆಯಂಥ ಸಣ್ಣ ಭಾಷೆಯಲ್ಲಿ ವಿಶ್ವಕೋಶವೊಂದು ರಚನೆಯಾದಾಗ ಆ ಬಗೆಯ ನಿಖರತೆಯನ್ನು ನಾವು ನಿರೀಕ್ಷಿಸಬಾರದು, ಏಕೆಂದರೆ ಇಲ್ಲಿಯ ಬಹುತೇಕ ಮಾಹಿತಿಗಳನ್ನು ಮೌಖಿಕ ನಿರೂಪಣೆಗಳ ಮೂಲಕ ಸಂಗ್ರಹಿಸಲಾಗಿದೆ. ಈ ಮೌಖಿಕ ಮಾಹಿತಿಗಳು ಪ್ರದೇಶದಿಂದ ಪ್ರದೇಶಕ್ಕೆ ಬದಲಾಗುತ್ತವೆ. ಮಾಹಿತಿ ಕೊಡುವ ನಿರೂಪಕ ಬದಲಾದಂತೆಯೂ ಅವು ಬದಲಾಗುತ್ತವೆ. ಕಾಲದ ಬದಲಾವಣೆಯೂ ನಿರೂಪಿತ ವಸ್ತುವಿನ ಮೇಲೆ ಗಮನಾರ್ಹ ಪ್ರಭಾವ ಬೀರುತ್ತವೆ. ಇಂಥಲ್ಲಿ ವಿಷಯವೊಂದಕ್ಕೆ ಸಂಬಂಧಿಸಿದಂತೆ ಎಲ್ಲರಿಗೂ ಒಪ್ಪಿತವಾಗುವ ಒಂದು ಅಧಿಕೃತ ಪಠ್ಯವನ್ನು ಸಿದ್ಧಪಡಿಸುವುದು ಬಹಳ ಕಷ್ಟ, ಅಥವಾ ಅಸಾಧ್ಯ. ಹೀಗೆ ನೋಡಿದಾಗ ಇಲ್ಲಿನ ಮಾಹಿತಿಗಳ ಮಹತ್ವ ಮತ್ತು ಮಿತಿಗಳು ತಿಳಿಯುತ್ತವೆ. ಇಂತ ಪ್ರಯತ್ನಗಳು ಮತ್ತೆ ಮತ್ತೆ ಮುಂದುವರೆದಾಗ ಮಾತ್ರ ಮಾಹಿತಿಗಳು ಅಧಿಕೃತ ರೂಪವನ್ನೂ ಇನ್ನಷ್ಟು ಆಳ– ಅಗಲಗಳನ್ನೂ ಪಡೆದುಕೊಳ್ಳುತ್ತವೆ.

ಈ ವಿಶ್ವಕೋಶವನ್ನು ನಿಧಾನವಾಗಿಯಾದರೂ ವಿಕಿಪೀಡಿಯ ಮಾದರಿಯಲ್ಲಿ ಮುಕ್ತ ಹಾಗೂ ಸ್ವತಂತ್ರ ವಿಶ್ವಕೋಶವಾಗಿ ಮಾರ್ಪಡಿಸಿದರೆ ಹೆಚ್ಚು ಪ್ರಯೋಜನವಿದೆ. ಕಾಲಕಾಲಕ್ಕೆ ಅದಕ್ಕೆ ಹೊಸ ವಿಷಯಗಳನ್ನು ಸೇರಿಸಬಹುದು, ತಪ್ಪುಗಳನ್ನು ಸರಿಪಡಿಸಬಹುದು, ಗೊಂದಲಗಳನ್ನು ನಿವಾರಿಸಿಕೊಳ್ಳಬಹುದು.

ಏನಿದ್ದರೂ ಸಣ್ಣ ಅವಧಿಯಲ್ಲಿ ಅರೆಭಾಷೆ ಅಕಾಡೆಮಿ ಮಾಡಿದ ಈ ಸಾಹಸದ ಕೆಲಸವನ್ನು ಅಭಿನಂದಿಸದೆ ಇರಲಾರೆ.





ಲೇಕಕರ ಮಾತ್

# ಅರೆಬಾಸೆನ ಬೆಳ್‌ಸುವ ಕನ್ಸ್ ನಿಜಾಗುಟು



ಡಾ. ಪೂವಪ್ಪ ಕಣಿಯೂರು
ವಿಶ್ರಾಂತ ಪ್ರಾಂಶುಪಾಲರು,
ನೆಹರು ಸ್ಮಾರಕ ಮಹಾವಿದ್ಯಾಲಯ, ಸುಳ್ಯ

ನಾನು ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯ 2014–17ರ ಅವಧಿಯಲ್ಲಿ ಸದಸ್ಯನಾಗಿ ಕಾರ್ಯ ನಿರ್ವಸಿದ್ದೆ. ನಮ್ಮ ಅವಧಿಯಲ್ಲಿ ನಡೆದ ಮೊದಲ ಕ್ರಿಯಾಯೋಜನಾ ಸಭೆಯಲ್ಲಿ ಅರೆಭಾಷೆಯಲ್ಲಿ ಅಗತ್ಯ ಆಗಬೇಕಾದ ಇಂತಹ ಅಗತ್ಯ ಮತ್ತು ಮಹತ್ವದ ಯೋಜನೆಗಳ ಬಗ್ಗೆ ದೀರ್ಘವಾಗಿಯೆ ಚರ್ಚಿಸಿದ್ದೆವು. ಆದರೆ ಅದು ನಮ್ಮ ಆವಧಿಯಲ್ಲಿ ಸಾಧ್ಯವಾಗಿರಲಿಲ್ಲ. ಅರೆಭಾಷೆಯನ್ನು ಉಳಿಸಿ ಬೆಳಸಬೇಕೆನ್ನುವ ಜಾಗ್ರತ ಮನಸಿನ ಕನಸು ಆರಂಭಿಕ ನೆಲೆಯಲ್ಲಿ ಈಗ ನಿಜವಾಗುತ್ತಿದೆ. ಇಂದು ಅರೆಭಾಷಿಕರು ಜಗತ್ತಿನಾದ್ಯಂತ ಇದ್ದಾರಾದರೂ ಪ್ರಾದೇಶಿಕವಾಗಿ ಅರೆಭಾಷೆಯನ್ನು ದಟ್ಟವಾಗಿ ಆಡುವ ಜನವ್ಯಾಪ್ತಿ ಕಿರಿದಾದುದು. ಈ ಸಣ್ಣ ವ್ಯಾಪ್ತಿಯ ಭಾಷೆಗೂ ವಿಶ್ವಕೋಶದಂತ ರಚನೆಗಳು ಬೇಕೇ ಎನ್ನುವ ಪ್ರಶ್ನೆಗೆ, ಸ್ಥಳೀಯ ಭಾಷೆಗಳ ಅಸ್ತಿತ್ವದ ದೃಷ್ಟಿಯಿಂದ ಮತ್ತು ಕಳೆದು ಹೋಗುತ್ತಿರುವ ಒಂದು ಭಾಷೆಯ ಪಾರಂಪರಿಕ ಜ್ಞಾನ ಸಂಪತ್ತನ್ನು ದಾಖಲಿಸಬೇಕಾದ ತೀರ ಅಗತ್ಯದ ದೃಷ್ಟಿಯಿಂದ ಇದು ಅತ್ಯಂತ ಮಹತ್ವದ ಕಾರ್ಯವಾಗಿದೆ.

ವಿಶ್ವವ್ಯಾಪಿಯ ಸಮಕಾಲೀನ ಸರ್ವೆಗಳು ದಾಖಲಿಸುವಂತೆ ಜಾಗತೀಕರಣ, ಔದ್ಯೋಗಿಕರಣದ ಕಾರಣಕ್ಕಾಗಿ ಏಕ ವಿಶ್ವಭಾಷೆಯ ಪರಿಕಲ್ಪನೆಯಲ್ಲಿ ಜಗತ್ತಿನ ಬಹುಸಂಖ್ಯಾತ ಜನರು ಸಂವಹನ ಮಾಧ್ಯಮವಾಗಿ ಬಳಸಿಕೊಂಡು ಬಂದ, ಸಹಸ್ರಮಾನಗಳ ಇತಿಹಾಸ ಇರುವ ಅನೇಕ ಭಾಷೆಗಳು ವಿನಾಶದ ಅಂಚಿಗೆ ಸರಿದಿವೆ. ಕನ್ನಡ ಭಾಷೆಯೇ ಇದರಿಂದ ಹೊರತಾಗಿಲ್ಲ ಅಂದ ಮೇಲೆ ಅರೆಭಾಷೆಯಂತಹ ಸಣ್ಣ ಭಾಷೆಗಳ ಗತಿಯನ್ನು ಊಹಿಸಲೂ ಸಾಧ್ಯವಿಲ್ಲ. ನಿನ್ನೆ ಮೊನ್ನೆಯವರೆಗೆ ಇದ್ದ ಕೊರಗರ, ಕುಂಬಾರರ ಭಾಷೆ ಕಣ್ಮರೆಯಾದ ವಾಸ್ತವ ನಮ್ಮೆದುರು ಇರುವಾಗ ಅರೆಭಾಷೆಯನ್ನು ಉಳಿಸುವ ಬೆಳೆಸುವ ಅಗತ್ಯವಿದೆ. ಭಾಷೆಯೊಂದರ ಅಳಿವು ಎಂದರೆ ಬಹುಮುಖಿಯಾದ ಸಾಂಸ್ಕೃತಿಕ ಜಗತ್ತೊಂದರ ನಾಶ. ಈಗಾಗಲೇ ಅರೆಭಾಷಿಕ ಸಮುದಾಯ ತನ್ನ ಮೂಲ ಸಾಂಸ್ಕೃತಿಕ ಜಗತ್ತಿನಿಂದ ಸರಿದಾಗಿದೆ. ಇದರ ಹಿಂದೆ ಜಾಗತೀಕರಣ ಮುಂದುಮಾಡಿದ ಆರ್ಥಿಕ ಚಿಂತನೆಯ ಕಾರಣವಿದೆ. ಬತ್ತ ಬೆಳೆವ ಸಂಸ್ಕೃತಿಯಿಂದ ವಾಣಿಜ್ಯ ಬೆಳೆಗಳ ಕಡೆಗೆ ಸರಿದ ಪರಿಣಾಮವಾಗಿ ಅರೆಭಾಷಿಕರನ್ನೊಳಗೊಂಡಂತೆ ಒಕ್ಕಲು ಮೂಲದ ಎಲ್ಲಾ ಸಮುದಾಯಗಳ ಸಂಸ್ಕೃತಿ ಸಂರಚನೆಗಳು ಪುನರ್ ಸೃಷ್ಟಿಯಾಗುವ ಮೂಲವೇ ನಾಶವಾಗಿದೆ. ಹಾಗಾಗಿ ಇಂದು ಹೊಸ ತಲೆಮಾರಿನವರಲ್ಲಿ ಜನಮೂಲ ಅನುಭವ ಜನ್ಯ ಜ್ಞಾನದ ಅರಿವಿಲ್ಲ. ಒಂದು ಭಾಷಾ ಸಮುದಾಯದ ಅನುಭವ ಜನ್ಯ ಲೋಕದೃಷ್ಟಿಯನ್ನು, ಜ್ಞಾನ ಸಂಪತ್ತನ್ನು ವಿಶ್ವಕೋಶದಂತಹ ರಚನೆಗಳಲ್ಲಿ ದಾಖಲಿಸುವುದರಿಂದ ಒಂದಕ್ಕಿಂತ ಹೆಚ್ಚಿನ ಅನುಕೂಲಗಳಿವೆ. ಆ ಭಾಷಾ ಸಮುದಾಯದ ಅನನ್ಯವಾದ ಅನುಭವಗಳನ್ನು ಮುಂದಿನ ಪೀಳಿಗೆಗೆ ರವಾನಿಸುವುದರ ಜೊತೆಗೆ ಅಧ್ಯಯಕಾರರಿಗೆ ಸಹಾಯಕವಾಗುತ್ತದೆ.

ವಿಶ್ವಕೋಶದಲ್ಲಿ ದಾಖಲಾಗುವ ವಿಷಯಗಳ ವ್ಯಾಪ್ತಿ ಆ ಭಾಷಾ ಸಮುದಾಯ ಸಂಬಂಧಿಯಾಗಿ ವಿಸ್ತೃತವಾಗಿರುತ್ತದೆ. ಆ ಸಮುದಾಯದ ಮೂಲ ಇತಿಹಾಸ, ಆ ಭಾಷಾ ಸಮುದಾಯ ಬದುಕು ಕಟ್ಟಿಕೊಂಡಿರುವ ಭೂಪ್ರದೇಶವನ್ನು ಆಳಿದ ರಾಜಕೀಯ ಇತಿಹಾಸ, ಊರಿನ ಕತೆ ಕಟ್ಟಲು ಸಹಾಯಕವಾಗುವ ಮೌಖಿಕ ಪರಂಪರೆಯ ಐತಿಹ್ಯ, ಸ್ಥಳ ಪುರಾಣಗಳು, ವಾರ್ಷಿಕಾವರ್ತನದಲ್ಲಿ ಬರುವ ಆಚರಣೆಗಳು, ಜೀವನಾವರ್ತನದ ಸಂಪ್ರದಾಯಗಳು, ಪದ್ಧತಿಗಳು, ಆರಾಧನಾ ಜಗತ್ತಿನ/ದೈವಾರಾಧನಾ ಸಂಬಂಧಿ ವಿಧಿ ವಿಧಾನಗಳು, ಜನಮೂಲದ ಭೌತಿಕ ಮತ್ತು ಅಭೌತಿಕ ವಸ್ತು ಸಂಗತಿಗಳು ಇಲ್ಲಿವೆ. ವೈವಿಧ್ಯಮಯವಾದ ಜಾನಪದೀಯ, ಸಾಂಸ್ಕೃತಿಕ, ಸಾಮಾಜಿಕವಾದ ವಸ್ತು ಸಂಗತಿಗಳು ಇಲ್ಲಿ ದಾಖಲಾಗಿವೆ. ಇವೆಲ್ಲವೂ ಕೂಡ ಇತಿಹಾಸದ ಗತಿಬಿಂಬವೇ ಆಗಿರುವುದರಿಂದ, ಈ ವಿಶ್ವಕೋಶ ಅರೆಭಾಷಿಕ ಸಮುದಾಯದ ಒಟ್ಟಾರೆ ಇತಿಹಾಸವನ್ನು ನಮ್ಮ ಮುಂದಿಡುವ ಆಕರವಾಗಿದೆ.

ಸಣ್ಣ ಸಮುದಾಯದ ಸಂಸ್ಕೃತಿ ಮತ್ತು ಆಡುವ ಭಾಷೆಯಲ್ಲೇನಿದೆ ಎನ್ನುವ ಜನಮೂಲ ಮನಸ್ಸುಗಳಿಗೆ ನಮ್ಮಲ್ಲಿ ಇಂತದ್ದು ಇದೆಯೆನ್ನುವುದನ್ನು ಅಧಿಕೃತವಾಗಿ ತಿಳಿಹೇಳುವ ದೃಷ್ಟಿಯಿಂದಲೂ ವಿಶ್ವಕೋಶ, ವ್ಯಾಕರಣ, ಶಬ್ದಕೋಶ, ವಿಷಯಕೋಶದಂತಹ

ಶಾಸ್ತ್ರೀಯ ರಚನೆಗಳು ಕೂಡ ಸೃಜನಶೀಲ ಸಾಹಿತ್ಯ ರಚನೆಗಳಷ್ಟೇ ಮಹತ್ವದವು ಅಗಿರುತ್ತವೆ. ನಾವಿಲ್ಲಿ ಒಂದು ಎಚ್ಚರದ ಅಂಶವನ್ನೂ ಕೂಡ ಗಮನಿಸಬೇಕಾಗಿದೆ. ಒಂದು ದೇಶ ಅಂದಾಗ ಅದು ಕುಟುಂಬದಿಂದ ಆರಂಭವಾಗುತ್ತದೆ. ಭಾರತ ದೇಶ ಬಹುಮುಖಿಯಾದ ಭಾಷೆ, ಮತ, ಪ್ರಾದೇಶಿಕತೆಯಿಂದಾಗಿದೆ. ಆದ್ದರಿಂದ ಭಾರತೀಯ ಸಂಸ್ಕೃತಿ ಎಂದಾಗ ಅದರಲ್ಲಿ ಅರೆಭಾಷೆಯೂ ಸೇರಿರುತ್ತದೆ. ಹಾಗಾಗಿ ಭಾರತೀಯ ವಿಶ್ವಕೋಶ, ಕನ್ನಡ ವಿಶ್ವಕೋಶ ರಚನೆಗಳಲ್ಲಿ ಮಾತ್ರವಲ್ಲ, ಕರ್ನಾಟಕ ಜಾನಪದ ವಿಶ್ವಕೋಶ ರಚನೆಯಲ್ಲಿಯೂ ಅರೆಭಾಷಿಕ ಸಾಂಸ್ಕೃತಿಕ ಸಂರಚನೆಗಳು ಇರಬೇಕಾದ್ದು ತೀರ ಅಗತ್ಯ. ಅಡ್ಡಣಪೆಟ್ಟು, ಪೂಕರೆ, ಆಟಿಕಳೆಂಜ, ಎರವ ಕುಣಿತ, ಭೂತಾರಾಧನೆ, ಜಾಲಾಟ, ಅಜ್ಜಿದೈವ, ಕುಕ್ಕೆತ್ತಿಬಳ್ಳು, ಅಣಿ, ಕಡ್ಸಲೆ, ಮೊಗ, ಬಚ್ಚನಾಯಕ, ಪುರುಷ ದೈವ, ಉಲ್ಲಾಕುಳು, ಕುಂಟು ಪೂಜಾರಿ, ಮೈಮಾನಿಕೆ. ಮೊಕ್ತೇಸರ, ಮಾಡ, ಚಾವಡಿ, ಮಾಳ್ಯ, ಕೈಮಾಡ, ಹತ್ತೊಕ್ಕಲು, ಕೈಲ್ ಪೊಲ್ದ್, ಹುತ್ತರಿ, ಕಾವೇರಿ ಸಂಕ್ರಮಣ, ಸಿದ್ಧವೇಷ, ಬಳಿಪದ್ದತಿ, ಮೊದುವೆ, ಅಮೆ, ಬೊಜ್ಜ, ಕೊಂಬರೆ, ಐನ್‌ಮನೆ, ನೆಲ್ಲಕ್ಕಿ ದೀಪ, ಪಟ್ಟೆಗಾರ, ನೊಗ, ಮುಟ್ಟಾಲೆ–ಹೀಗೆ ಇಲ್ಲಿ ಅನೇಕವಾಗಿ ದಾಖಲಾಗಿರುವ ಇವು ಅರೆಭಾಷಿಕ ಪರಿಸರದಲ್ಲಿ ಹೊಂದುವ ಅರ್ಥಪದರಗಳನ್ನು ಇನ್ನೊಂದು ಉದಾಹರಣೆಗೆ ಕನ್ನಡ ಭಾಷಾ ಪರಿಸರದಲ್ಲಿ ಹೊಂದಲಾರದು. ಇವುಗಳಿಗೆ ಅರೆಭಾಷಿಕ ಪರಿಸರದಲ್ಲಿ ಅದರದ್ದೇ ಆದ ಅನನ್ಯತೆ ಇದೆ. ಈ ಅನನ್ಯತೆಯನ್ನು ಹೊರ ಜಗತ್ತಿಗೆ ಪ್ರಸ್ತುತ ಪಡಿಸುವ ದೃಷ್ಟಿಯಿಂದಲೂ ಈ ಅರೆಭಾಷಾ ವಿಶ್ವಕೋಶಕ್ಕೆ ಮಹತ್ವವಿದೆ.

ವಿಶ್ವಕೋಶ, ವಿಷಯಕೋಶ, ಶಬ್ದಕೋಶಗಳ ರಚನೆ ಕಾರ್ಯ ಯಾವತ್ತೂ ಪರಿಪೂರ್ಣ ಅಲ್ಲ. ಹೊಸ ಶೋಧನೆ, ಅವಿಷ್ಕಾರಗಳ ಮೂಲಕ ಜಗತ್ತು ಚಲನಶೀಲ ಅಥವಾ ಬದಲಾಗುತ್ತಾ ಇರುತ್ತದೆ. ಈ ಬದಲಾವಣೆ ಚಾಲ್ತಿಯಲ್ಲಿರುವ ಸಮುದಾಯಗಳ ಭಾಷೆ, ಸಾಂಸ್ಕೃತಿಕ ಸಂರಚನೆಗಳ ಮೇಲೂ ಪ್ರಭಾವಿತವಾಗಿ ಅವು ಹೊಸತ್ತನ್ನು ಸ್ವೀಕರಿಕೊಂಡು ವಿಸ್ತರಿಸಿಕೊಳ್ಳುತ್ತಿರುತ್ತವೆ. ಹಾಗಾಗಿ ಆಯಾಯ ಸಮುದಾಯ ಭಾಷೆಗಳ ಹಳೆಯ ರಚನೆಗಳನ್ನೂ ಒಳಗೊಂಡು ನವೀನತೆಯನ್ನು ಅಳವಡಿಸಿಕೊಂಡು ಹೊಸ ರೂಪವನ್ನು ಪಡೆದುಕೊಳ್ಳುವುದು ಅನಿವಾರ್ಯವಾಗುತ್ತದೆ. ಹೀಗಾಗುವುದರ ಮೂಲಕ ಆ ಸಮುದಾಯದ ಭಾಷೆ ಮತ್ತು ಸಾಂಸ್ಕೃತಿಕವಾದ ಚಲನಶೀಲತೆಯ ದಾಖಲೀಕರಣವೂ ಆದಂತಾಗುತ್ತದೆ. ಅರ್ಥಾತ್ ಇದು ಒಂದು ಭಾಷಾ ಸಮುದಾಯದ ಚಲನಶೀಲತೆಯ ದಾಖಲಾತಿಯೂ ಹೌದು. ಹಾಗಾಗಿ ಪ್ರಾದೇಶಿಕ ಭಾಷಾ ಸಮುದಾಯವೊಂದರ ವಿಶ್ವಕೋಶದ ರಚನೆಗೆ ಬಹಳ ಮಹತ್ವವಿದೆ ಎನ್ನುವ ಹಿನ್ನೆಲೆಯಲ್ಲಿ ಅರೆಭಾಷೆಯ ವಿಶ್ವಕೋಶ ರಚನೆಯ ಆರಂಭಕ್ಕೆ ಒಂದು ಚಾರಿತ್ರಿಕವಾದ ಆರಂಭ ಅಕಾಡೆಮಿಯಿಂದ ಆದಂತಾಗಿದೆ.

ಈ ವಿಶ್ವಕೋಶಕ್ಕೆ ಅರೆಭಾಷಿಕವಾದ ವೈವಿಧ್ಯ ಪೂರ್ಣ ವಸ್ತು ವಿಷಯಗಳನ್ನು ಲಿಖಿತ ಹಾಗೂ ಮೌಖಿಕ ಪರಂಪರೆಯಿಂದ ಒಟ್ಟು ಮಾಡುವ ಮತ್ತು ಮರು ನಿರೂಪಿಸುವ ಕಾರ್ಯ ಅತ್ಯಂತ ಶ್ರಮದಾಯಕವಾದುದು. ಇದಕ್ಕೆ ಅರೆಭಾಷಿಕ ಜಗತ್ತಿನ ಜ್ಞಾನ ಪರಂಪರೆಯ ಅರಿವಿರುವ ವಿದ್ವಾಂಸರು ಬಹಳಷ್ಟು ಶ್ರಮವಹಿಸಿದ್ದಾರೆ. ಒಂದು ವಿಶ್ವವಿದ್ಯಾನಿಲಯ ಮಾಡಬೇಕಾದ ಕಾರ್ಯವನ್ನು ಇತರ ಕಾರ್ಯಗಳ ಒತ್ತಡದಲ್ಲಿರುವ ಅಕಾಡೆಮಿ ಮಾಡುತ್ತಿರುವುದು ಗಮನಾರ್ಹ ವಿಚಾರವಾಗಿದೆ.

ಅರೆಭಾಷೆ ವಿಶ್ವಕೋಶದ ಕಾರ್ಯ ನಿರ್ವಾಹಹಿಸಿದವುಕೆ, ಸಂಪಾದಕರ್‌ಗೆ, ಅಕಾಡೆಮಿ ಅಧ್ಯಕ್ಷರಾದ ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆವು ನನ್ನ ಮೇಲಿಟ್ಟಿರುವ ಪ್ರೀತಿಗೆ ನಾ ವಂದಿಸಿ ಅಭಿನಂದಿಸಿನೆ. ಮುಕ್ಯ ಸಂಪಾದಕರಾದ ಶ್ರೀ ಭರತೇಶ ಅಲಸಂಡೆಮಜಲು ಮತ್ತೆ ಸಂಪಾದಕರಾದ ಡಾ. ವಿಶ್ವನಾಥ ಬದಿಕಾನರ್ ಹಾಂಗೆ ಈ ಅವದಿಲಿ ಅಕಾಡೆಮಿನ ರಚನಾತ್ಮಕ ಆಗಿ ರೂಪಿಸುವಲ್ಲಿ ಅಧ್ಯಕ್ಷರ್‌ಗೆ ಬೆನ್ನೆಲುಬಂತೆ ನಿಂತ ಅಕಾಡೆಮಿನ ಎಲ್ಲಾ ಸದಸ್ಯರ್‌ಗೂ ಸಹ ಅಬಿನಂದನೆಗ.





ಲೇಕಕರ ಮಾತ್



# ಜೆನರ ಬೊಡ್‌ಕ್‌ನ ಬಾಸೆ ಆಗಿ ಬೆಳಿಯಲಿ

✍ ಡಾ. ಸುಂದರ ಕೇನಾಜೆ
ದೀಪ್ತಶೀಲ ಮನೆ, ಬೆಟ್ಟಂಪಾಡಿ ಶಾಂತಿನಗರ,
ಸುಳ್ಯ ತಾಲೂಕು – 574239

ಬಾಸೆಗೆ ಸಮ್ಮಂದಪಟ್ಟ ಒಂದ್ ಅಕಾಡೆಮಿ, ಅಧ್ಯಯನ ಸಂಸ್ಥೆ ಇಲ್ಲೆ, ಒಂದ್ ಸರಕಾರ ಏನ್ ಮಾಡಕ್‌ಂತ ಕೇಳ್ರೆ, ಅದ್‌ಕೆ ಉತ್ತರ ಆಗಿದ್ ಇಂದ್ ಅರೆಬಾಸೆ ಅಕಾಡೆಮಿ ಮಾಡ್‌ತಿರ್‌ವ ಕೆಲ್ಸನ ತೋರ್ಸಿರೆ ಸಾಕ್. ಒಂದೆರಡ್ ಜಿಲ್ಲೆಲಿ, ಲೆಕ್ಕದ ಜೆನ ಮಾತ್ರ ಮಾತಾಡ್‌ವರ್‌ಸಿ ಒಂದ್ ಬಾಸೆಗೆ ಅದರ್‌ದೆ ಆದ ಸಮಕಟ್ಟಾದ ಹಿನ್ನಲೆ ಉಟ್ಟು, ಮತ್ತೆ ಒಂದ್ ಸಂಸ್ಕೃತಿನ ಬೊಳ್ಪು ಉಟ್ಟುಂತ ತೋರ್‌ಸುದು ಸಣ್ಣ ಕೆಲ್ಸ ಅಲ್ಲ. ಆ ಬಾಸೆನ ಮಹತ್ವನ ತಿಳಿಯಕಾರೆ ಅದ್‌ಕೆ ಅದರ್‌ದೆ ಆದ ನೆಲೆಲಿ ಕೆಲ್‌ಸ ಮಾಡೋಕು. ಅಂತ ಕೆಲ್ಸಲಿ ಸಾಸ್ವತ ಆಗಿದ್ ಒಳಿವ ಕೆಲ್ಸಂತೇಳಿರೆ ಅರೆಬಾಸೆಗೆ ಸಮ್ಮಂದಪಟ್ಟ ಪದಕೋಶದ ರಚನೆ ಮತ್ತೆ ವಿಶ್ವಕೋಶದ ರಚನೆ. ಅರೆಬಾಸಾ ಅಕಾಡೆಮಿ ಸ್ಥಾಪನೆ ಆಗಿ ಸುಮಾರ್ ಹತ್ತ್ ವರ್‌ಸನೆ ಕಳ್ತ್. ಆದರೆ ಹೆಚ್ಚಿ ಕಡಿಮೆ ಕಳ್‌ದ ಮೂರು ವರ್‌ಸಂದ ಅಕಾಡೆಮಿ ಮಾಡ್ತಿರ್‌ವ ಕೆಲ್ಸ ಮಾತ್ರ ಬಾರಿ ತೂಕ ಮತೆ ಗಂಬೀರ ಆಗಿರ್‌ವಂತದ್. ಇದ್ ಸಾಸ್ವತ ಆಗಿ ನಿಲ್ಲ್‌ವ ಕೆಲ್ಸ ಮಾತ್ರ ಅಲ್ಲ, ಬಹುಸಂಕ್ಯೆಲಿ ಮಾತನಾಡ್‌ವ ಬೇರೆ ಬಾಸೆವೆಲ್ಲ ಆಸ್ಚರ್‌ಯ ಪಡ್‌ವಂತ ಕೆಲ್ಸ. ಏಕೆಂತೇಳಿರೆ, ಒಂದ್ ಪದಕೋಶನ ರಚನೆ ಮಾಡಿದ್ ಬಾಸೆನ ಸಬ್ದ ಬಂಡಾರನ ಒಳ್ಸ್‌ವ ಮತ್ತೆ ಅಳ್ದ್ ಹೋವ ಪದಗಳ ಸಂರಕ್ಷಣೆ ಮಾಡ್‌ವ ಕೆಲ್ಸನ ಪ್ರಾಮಾಣಿಕ ಆಗಿದ್ ಮಾಡ್ದೂಂತ ಹೇಳಕ್. ಹಾಂಗೇ ವಿಶ್ವಕೋಶನ ರಚನೆ ಮಾಡಿರೆ ಬಾಸಾ ವ್ಯಾಪ್ತಿಲಿ ಬಾವ ವಿಚಾರಗ ಮತ್ತೆ ಅಳ್ದ್ ಹೋವ ಸಾಂಸ್ಕೃತಿಕ ಸಂಗತಿಗಳ ಒಳ್ಸುವ ಕೆಲ್ಸ ಮಾಡ್ದಂಗೆ. ಈ ಎರಡ್ ಕೆಲ್ಸಗಳ ಈ ಅವದಿನ ಅಕಾಡೆಮಿ ಸಮಿತಿ ಮಾಡ್ತಾ ಇರ್‌ದರ ನೋಡಿರೆ ಪ್ರಾದೇಸಿಕ ಬಾಸೆಗಳಿಗೂ ಬವಿಸ್ಯ ಉಟ್ಟ್‌ಂತ ಹೇಳ್‌ವ ಬರವಸೆನ ಕೊಟ್ಟಾಂಗೆ ಕಂಡದೆ.

'ಅ'ಕಾರಂದ ಸುರಾಗಿ ನಮ್ಮ ಮುಂದೆ ಇಂದ್ ಕಾಂಬಕೆ ಸಿಕ್ಕ್‌ವ ಮತ್ತೆ ಸಿಕ್ಕದೆ ಇರ್‌ವ ಆದರೆ ಈಗಾಗಲೇ ದಾಕಲೆ ಆಗಿರ್‌ವ ಸುಮಾರ್ ವಿಚಾರಗಳ ಈ ವಿಶ್ವಕೋಶಲಿ ನೋಡಿಕೆ ಸಾದ್ಯ ಉಟ್ಟು. ವಿಚಾರದ ಬಗ್ಗೆ ಅಧ್ಯಯನ ಮಾಡಿರ್‌ವ ಸುಮಾರ್ ವಿದ್ವಾಂಸರ್ ಇಲ್ಲಿ ಅಧಿಕೃತ ಆದಂತ ಮಾಹಿತಿನ ಕೊಟ್ಟಿರ್‌ದ ಕುಸಿನ ಸಂಗತಿ. ಹಂಗಾಗಿದ್ ಈ ವಿಶ್ವಕೋಶಕೆ ಅದಿಕೃತ ಮಾನ್ಯತೆ ಉಟ್ಟು. ಚರಿತ್ರೆನರ್‌ದು ಪುಟ ಸೇರ್‌ವ ಮತ್ತೆ ಈಗಾಗಲೇ ಸೇರ್‌ದ ಸುಮಾರ್ ಸಂಗತಿಗಳಿಗೆ ಈ ವಿಶ್ವಕೋಶ ಕಣ್ಣ್–ಕೈಕಾಲ್ ಮಾತ್ರ ಅಲ್ಲದೇ ಅದ್‌ಕೆ ಮತ್ತೆ ಜೀವಕಲೆ ಬಾವ ಹಾಂಗೆ ಮಾಡಿಟು.  ಹಾಂಗಾಗಿ ಇದ್ ಮುಂದೆನ ಪೀಳಿಗೆಗೆ ನಮ್ಮ ಬಾಸೆನ ಸಂಪತ್ತ್‌ನ ಪರಿಚಯ ಮಾಡಿಕೊಡುದರ ಒಟ್ಟಿಗೆ ಜೀವಂತಲಿ ಒಳಿವ ಹಾಂಗೆ ನೋಡ್ದಂತ ವಿಚಾರಾಂತ ಹೇಳಿರೆ ತೊಪ್ಪಿಲ್ಲೆ.

ನಮ್ಮ ಕರಾವಳಿ ಬಾಗದ ಮೂಲ ಬೇಸಾಯದ ಕೆಲ್ಸ, ಅಲ್ಲದೇ ಇನ್ನು ಬೇರೆಬೇರೆ ಕೆಲ್ಸಗ, ಹಾಂಗೆ ಆಚರಣೆ, ಆರಾಧನೆ, ನಂಬಿಕೆ, ನಡವಳಿಕೆ ಮತ್ತೆ ಸಂಸ್ಕೃತಿಗೆ ಸಮ್ಮಂದಪಟ್ಟ ಸುಮಾರ್ ಸಂಗತಿಗ, ನಮ್ಮ ನಾಡ್‌ನ ಚರಿತ್ರೆ, ಒಟ್ಟ್‌ಲಿ ನಾವ್ ಬಳ್ಸ್‌ವ ಒಂದ್ ಸಣ್ಣ ಸೂಜಿಂದ ಹಿಡ್ದ್ ನಮ್ಮ ಬೊದಕ್‌ನ ಸಕಲ ಸಂಗತಿಗಳ ಒಂದೇ ಕಡೆ ಒಟ್ಟು ಸೇರ್‌ಸಿ ಹೇಳ್‌ವ ಕೆಲ್ಸನ ಈ ವಿಶ್ವಕೋಶ ಮಾಡಿಟು.  ಎಸ್ಟೇ ಸೇರ್ಸಿರು ಈ ವಿಶ್ವಕೋಶದ ತಯಾರಿ ಅಸ್ಟ್ ಸುಲಬ ಮತ್ತೆ ಇಸ್ಟ್ ಸಾಕ್‌ಂತ ಹೇಳುವಂತ್ತದ್ದಲ್ಲ ತೇಳ್‌ವ ಸತ್ಯಸಂಗತಿನ ಕೂಡ ನಾವುಗೆ ಇಲ್ಲಿ ತಿಳ್ಕಂಬಕೆ ಸಾದ್ಯ ಆಗುಟು. ಆದರೆ ಈ ಎಲ್ಲಾ ಕೆಲ್ಸನ ಬಾರಿ  ಜಾಗ್ರತೆ ಮತ್ತೆ ಅಕಾಡೆಮಿಕ್ ಆದ ಶಿಸ್ತ್ ನ ಪಾಲ್ಸಿದ್ ಈ ಸಂಪಾದಕ ಮಂಡಳಿ ಪಾಲಿಸಿಕಂಡ್‌ದ್ ಬಂದ್ದದೇ ಈ ವಿಶ್ವಕೋಶದ ಹೆಗ್ಗಳಿಕೆಂತ ಹೇಳಕ್.

ಮುಂದೆನ ತಲೆಮಾರ್‌ಗೆ ಪ್ರಯೋಜನಕೆ ಬಾವ ಹಾಂಗೆ, ಯಾದೆ ಗಡಿಬಿಡಿ ಇಲ್ಲದೇ ಸಮಾದಾನಲಿ ಮತ್ತೆ ಅಸ್ಟೇ ಉಮೇದ್‌ಲಿ ವಿಶ್ವಕೋಶದ ರಚನೆ ಮಾಡಿರ್‌ವ ಅರೆಬಾಸಾ ಅಕಾಡೆಮಿನ ಎಲ್ಲವುಕೆನೂ ಮತ್ತೆ ಈ ಮುಖ್ಯ ಸಂಪಾದಕರಾದ ಶ್ರೀ ಭರತೇಶ ಅಲಸಂಡೆಮಜಲು, ಸಂಪಾದಕರಾದ ಡಾ. ವಿಶ್ವನಾಥ ಬದಿಕಾನ ಮತ್ತೆ ಅನುವಾದಕರ್ ಶ್ರೀ ಮನೋಜ್ ಕುಡೆಕಲ್ಲು ಇವ್‌ಕೆ ಸಂಪಾದಕ ಮಂಡಳಿಗೆ ಅನುವಾದಕಾರ ಅರೆಬಾಸೆನ ಮೇಲೆ ಪ್ರೀತಿ ಇರ್‌ವ ಎಲ್ಲವ್ ನಮಸ್ಕಾರ ಹೇಳೊಕು. ಇದರ ಈ ಸರ್ತಿಯ ಅಧ್ಯಕ್ಷರ್ ಮತ್ತೆ ಎಲ್ಲ ಸದಸ್ಯರ್‌ಗ ಬಾಸೆ ಕಟ್ಟುವ ಕೆಲ್ಸಕೆ ಮುಂದಿಂದಳೆ ಕೈ ಹಾಕಿರ್ದು ಬಾಸೆನ ಬೆಳವಣಿಗೆನ ದೇಸೆಲಿ ಮೆಚ್ಚಕಾದ ವಿಸಯ. ಈ ವಿಶ್ವಕೋಶ ಮುಂದೆನ ತಲೆಮಾರ್‌ಗೆ ಉಪಯೋಗಕೆ ಬರಲಿ, ಅರೆಬಾಸೆ ಕರಾವಳಿ ಬಾಗದ ಜನರ ಬೊದ್‌ಕ್‌ನ ಬಾಸೆ ಆಗಿ ಬೆಳಿಯಲಿತ ನಾ ಹಾರೈಕೆ ಮಾಡ್ನೆ, ಇಂತಹಾ ಅಕಾಡೆಮಿಕ್ ಕೆಲಸಗ ಅಕಾಡೆಮಿಲಿ ಇನ್ನೂ ಹೆಚ್ಚಿಗೆ ನಡೆಯಲಿ ಅಂತ ಹೇಳ್ತ, ಎಲ್ಲವುಕು ನಮಸ್ಕಾರ.





## ಮುನ್ನುಡಿ

# ಸಮುದಾಯದ ಸಾಂಸ್ಕೃತಿಕ, ಭೌತಿಕ ಲೋಕದ ಅಂತಃಸತ್ವ ಅರೆಭಾಷೆ ವಿಶ್ವಕೋಶ



**ಡಾ. ಹಾ. ತಿ. ಕೃಷ್ಣೇಗೌಡ**
ಗೌರವ ಸಂಪಾದಕ,
ಕನ್ನಡ ವಿಶ್ವಕೋಶ, ಮೈಸೂರು

ಕನ್ನಡದ ಆದಿಕವಿ ಪಂಪ ತನ್ನ ಕಾವ್ಯದಲ್ಲಿ ಜ್ಞಾನದ ಅನಂತತೆಯನ್ನು ಕುರಿತು 'ಕ್ಷಯಮಣಮಿಲ್ಲ ಕೇಳ್ದುಕಡೆಗಂಡವನಾವನುಮಿಲ್ಲ' ಎಂದು ಹೇಳಿದ್ದಾನೆ. ಅಕ್ಷಯವಾದ ಜ್ಞಾನವನ್ನು ಅರಿಯುತ್ತ ಹೋಗಬಹುದೇ ಹೊರತು ಅದರ ಕೊನೆಮುಟ್ಟಲು ಸಾಧ್ಯವಿಲ್ಲ. ಇಪ್ಪತ್ತನೆಯ ಶತಮಾನ 'ಅರಿವಿನ ಸ್ಫೋಟ'ದ (ನಾಲೆಡ್ಜ್ ಎಕ್ಸ್‌ಪ್ಲೋಷನ್) ಶತಮಾನವಾಗಿದ್ದರೆ, ಇಪ್ಪತ್ತೊಂದನೆಯ ಶತಮಾನ 'ಮಾಹಿತಿ ತಂತ್ರಜ್ಞಾನ ಸ್ಫೋಟ'ಕ್ಕೆ (ಟೆಕ್ನಾಲಜಿ ಎಕ್ಸ್‌ಪ್ಲೋಷನ್) ಕಾರಣವಾಗಿದೆ. ಮೊಬೈಲ್, ಇಂಟರ್‌ನೆಟ್ ಸಂಪರ್ಕದಿಂದ ಇಡೀ ಭೂಮಂಡಲವೇ ಬೆರಳ ತುದಿಯಲ್ಲಿ ಸಿಗುತ್ತದೆ; ಅಂಗೈನಲ್ಲಿ ಪ್ರತ್ಯಕ್ಷವಾಗುತ್ತದೆ. ಈ ತಂತ್ರಜ್ಞಾನದ ಕ್ರಾಂತಿ ಸಾಮಾನ್ಯವಾದುದಲ್ಲ. ಮನುಕುಲದ ಇತಿಹಾಸದಲ್ಲಿ ಹೊಸದಿಗಂತವನ್ನು ಈ ತಂತ್ರಜ್ಞಾನ ತೆರೆದಿದೆ, ನಿಜ. ಇಂಟರ್‌ನೆಟ್‌ನಲ್ಲಿ, ಯೂಟ್ಯೂಬಿನಲ್ಲಿ, ಮೊಬೈಲ್‌ನಲ್ಲಿ ದೊರಕುವ ಮಾಹಿತಿ ಎಷ್ಟೋ ವೇಳೆ ಅಧಿಕೃತವೂ ಖಚಿತವೂ ಆಗಿರದೆಹೋಗಬಹುದಾದ ಸಾಧ್ಯತೆಯೂ ಹೆಚ್ಚಿರುತ್ತದೆ. ಬಹಳ ಎಚ್ಚರಿಕೆಯಿಂದ ಇಂಥ ಮಾಹಿತಿಯನ್ನು ಪರಿಗಣಿಸಬೇಕಾಗುತ್ತದೆ. ಒಂದು ವಿಧದಲ್ಲಿ ಅದು ಅವಸರದ ಸೃಷ್ಟಿ. ಬೇಕುಬೇಡದ ಎಲ್ಲ ವಿಚಾರಗಳನ್ನೂ ಅದು ತುರುಕುತ್ತಾ ಹೋಗುತ್ತದೆ. ಆಯ್ಕೆ ಬಳಕೆದಾರನಿಗೆ ಬಿಟ್ಟ ವಿಚಾರ. ಯಾವುದೇ ವಿಚಾರದಲ್ಲಿ ಕೊಡುವ ಮಾಹಿತಿ ಸತ್ಯವಾಗಿರಬೇಕು, ನಂಬಿಕೆಗೆ ಅರ್ಹವಾಗಿರಬೇಕು, ಖಚಿತವಾಗಿರಬೇಕು. ಆದರೆ ಎಷ್ಟೋ ವೇಳೆ ತಂತ್ರಜ್ಞಾನ ಕೊಡುವ ಮಾಹಿತಿ, ಪೂರ್ಣ ನಂಬಿಕೆಗೆ ಅರ್ಹವಾಗಿರುವುದಿಲ್ಲ. ವಿಶ್ವಕೋಶಗಳ ವಿಚಾರದಲ್ಲಿ ಹೇಳುವುದಾದರೆ ಈ ಬಗೆಯ ಅನಿಶ್ಚಿತತೆ, ಅಪನಂಬಿಕೆ, ಅನುಮಾನ ಇರುವುದಿಲ್ಲ. ವಿಶ್ವಕೋಶಗಳಲ್ಲಿ ಒಂದು ವಿಷಯದ ಮಾಹಿತಿ ಸಮಗ್ರವಾಗಿ, ಖಚಿತವಾಗಿ, ಕರಾರುವಾಕ್ಕಾಗಿ ದೊರೆಯುತ್ತದೆ. ಇಂಥ ಮಾಹಿತಿಯ ಸಂಗ್ರಹದ ಹಿಂದೆ ಶ್ರೇಷ್ಠ ಶೈಕ್ಷಣಿಕತೆ, ಬೌದ್ಧಿಕತೆ ಕೆಲಸಮಾಡಿರುತ್ತದೆ. ಇಲ್ಲಿನ ಬರೆವಣಿಗೆ ನೀಡುವ ಮಾಹಿತಿ ಅವಸರದ್ದಲ್ಲ, ಶಾಶ್ವತವಾದದ್ದು. ಇದು ತಂತ್ರಜ್ಞಾನದ ಮಾಹಿತಿಗೂ ವಿಶ್ವಕೋಶದ ಮಾಹಿತಿಗೂ ಇರುವ ವ್ಯತ್ಯಾಸ.

ವಿಶ್ವಕೋಶಗಳು ಪರಾಮರ್ಶನ ಗ್ರಂಥಗಳಾಗಿ (ರೆಫರೆನ್ಸ್ ವರ್ಕ್ಸ್) ಬೌದ್ಧಿಕ ನೆಲೆಯಲ್ಲಿ ಬಹಳ ಎತ್ತರದ ಸ್ಥಾನದಲ್ಲಿವೆ. "ಜ್ಞಾನದ ವಿವಿಧ ವಿವೇಚನೆಯುಳ್ಳ, ಸಾಮಾನ್ಯವಾಗಿ ಬಿಡಿ ಲೇಖನಗಳನ್ನು ಅಕಾರಾದಿಯಾಗಿ ಒಳಗೊಂಡ ಭಂಡಾರವೇ ವಿಶ್ವಕೋಶ" ಎಂದು ಇಂಗ್ಲಿಷ್‌ನ ವೆಬ್‌ಸ್ಟರ್ ನಿಘಂಟು ಹೇಳುತ್ತದೆ. ಆಧುನಿಕ ವಿಶ್ವಕೋಶದ ಪರಿಕಲ್ಪನೆಯನ್ನು 1768 ರಲ್ಲಿ 'ಎನ್‌ಸೈಕ್ಲೊಪೀಡಿಯ ಬ್ರಿಟಾನಿಕ' ಹುಟ್ಟುಹಾಕಿತು. ಪ್ರಪಂಚದ ಎಲ್ಲ ದೇಶಗಳೂ ಈ ವಿಶ್ವಕೋಶವನ್ನೇ ಮಾದರಿಯಾಗಿಟ್ಟುಕೊಂಡವು. ಬ್ರಿಟಾನಿಕ ವಿಶ್ವಕೋಶ ಪ್ರಕಟವಾದ ಸುಮಾರು ಇನ್ನೂರು ವರ್ಷಗಳ ಅನಂತರ ಕನ್ನಡದಲ್ಲಿಯೂ ಆಧುನಿಕ ವಿಶ್ವಕೋಶದ ಕಲ್ಪನೆ ಮೊಳಕೆಯೊಡೆಯಿತು. ಈ ಮುನ್ನ ಕನ್ನಡದಲ್ಲಿ 'ಜ್ಞಾನಕೋಶ'ಗಳಿದ್ದವು. ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಅಧಿಕೃತವಾಗಿ ಕನ್ನಡ

ವಿಶ್ವಕೋಶದ ಕೆಲಸವನ್ನು 1968 ರಲ್ಲಿ ಆರಂಭಿಸುವ ಮೂಲಕ ಜ್ಞಾನಕ್ಷೇತ್ರದಲ್ಲಿ ಹೊಸ ಶಕೆಯೊಂದನ್ನು ತೆರೆಯಿತು. ಹಾಗೆ ನೋಡಿದರೆ ಕನ್ನಡದ ಸಂದರ್ಭದಲ್ಲಿ ವಿಶ್ವಕೋಶ ಸ್ವರೂಪದ ಗ್ರಂಥಗಳ ಪ್ರಕಟಣೆ ಸುಮಾರು 12ನೆಯ ಶತಮಾನದಲ್ಲಿಯೇ ಆರಂಭವಾಯಿತೆನ್ನಬೇಕು. ಚಾವುಂಡರಾಯನ 'ಲೋಕೋಪಕಾರ' (ಸು. 1150) ಈ ದೃಷ್ಟಿಯಿಂದ ಸೀಮಿತಾರ್ಥದಲ್ಲಿಯಾದರೂ ಮೊದಲ ಕೃತಿ ಎನ್ನಬಹುದು. ಅನಂತರ ಆಧುನಿಕ ಸ್ವರೂಪದಲ್ಲಿ, ವ್ಯಕ್ತಿಮಟ್ಟದಲ್ಲಿ ನಡೆದ ಬೃಹತ್ ಕೆಲಸಗಳೆಂದರೆ ಕೆ. ಶಿವರಾಮ ಕಾರಂತರು ಪ್ರಕಟಿಸಿದ ಬಾಲಪ್ರಪಂಚ (3 ಸಂಪುಟಗಳು, 1931) ಮತ್ತು ವಿಜ್ಞಾನ ಪ್ರಪಂಚ (4 ಸಂಪುಟಗಳು, 1959–64). ಆಮೇಲೆ ಸಾಂಸ್ಥಿಕ ಮಟ್ಟದಲ್ಲಿ ನಡೆದ ದೊಡ್ಡ ಕೆಲಸವೆಂದರೆ ನಿರಂಜನರ ಸಂಪಾದಕತ್ವದಲ್ಲಿ ಪ್ರಕಟವಾದ ಏಳು ಸಂಪುಟಗಳನ್ನೊಳಗೊಂಡ ಕಿರಿಯರ ವಿಶ್ವಕೋಶ, ಜ್ಞಾನಗಂಗೋತ್ರಿ (1970–74). ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ 'ಕನ್ನಡ ಜಾನಪದ ವಿಶ್ವಕೋಶ'ವನ್ನೂ ಇಲ್ಲಿ ಸ್ಮರಿಸಬಹುದು.

ಆದರೆ ಎನ್‌ಸೈಕ್ಲೊಪೀಡಿಯ ಬ್ರಿಟಾನಿಕ ಮಾದರಿಯನ್ನು ಅನುಸರಿಸಿ, ಅದೇ ಆದರ್ಶದಲ್ಲಿ ಪ್ರಕಟಣೆಗೆ ತೊಡಗಿದ್ದು ಮಾತ್ರ ಮೈಸೂರು ವಿಶ್ವವಿದ್ಯಾನಿಲಯ; ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ (14 ಸಂಪುಟಗಳ ಸಾಮಾನ್ಯ ವಿಶ್ವಕೋಶ ಮತ್ತು 30 ಸಂಪುಟಗಳ ವಿಷಯ ವಿಶ್ವಕೋಶ). ಈ ಹದಿನಾಲ್ಕು ಸಂಪುಟಗಳೂ ಪ್ರಕಟಗೊಂಡು ಈಗ ಈ ಸಂಪುಟಗಳ ಪರಿಷ್ಕಾರ ಮತ್ತು ಪುನರ್‌ಮುದ್ರಣ ಯೋಜನೆ ಚಾಲನೆಯಲ್ಲಿದೆ; ಒಂಬತ್ತು ಸಂಪುಟಗಳು ಪ್ರಕಟಗೊಂಡಿವೆ (2022). ವಿಷಯ ವಿಶ್ವಕೋಶ ಯೋಜನೆಯಲ್ಲಿ ಆರು ಸಂಪುಟಗಳು ? ಕರ್ನಾಟಕ (2 ಸಂಪುಟಗಳು), ಜಾನಪದ, ಪ್ರಾಣಿವಿಜ್ಞಾನ, ಇತಿಹಾಸ ಮತ್ತು ಪುರಾತತ್ವ, ಭೂಗೋಳವಿಜ್ಞಾನ– ಪ್ರಕಟಗೊಂಡಿವೆ. ಪ್ರಪಂಚದ ಮೊಟ್ಟಮೊದಲ ಜಾನಪದ ವಿಶ್ವವಿದ್ಯಾಲಯವೆಂಬ ಖ್ಯಾತಿಗಳಿಸಿರುವ ಹಾವೇರಿ ಜಿಲ್ಲೆಯ ಶಿಗ್ಗಾವಿ ತಾಲ್ಲೂಕಿನ ಗೊಟಗೋಡಿಯಲ್ಲಿ ಸ್ಥಾಪಿತವಾದ ಕರ್ನಾಟಕ ಜಾನಪದ ವಿಶ್ವವಿದ್ಯಾಲಯ ಪ್ರಪಂಚದ ಜಾನಪದ ಸಂಪತ್ತನ್ನು ಕನ್ನಡದಲ್ಲಿ ಹತ್ತು ಸಂಪುಟಗಳಲ್ಲಿ ಪ್ರಕಟಿಸಬೇಕೆಂಬ ಆಶಯದೊಡನೆ 'ಜಾನಪದ ವಿಶ್ವಕೋಶ' ಯೋಜನೆಯನ್ನು ಪ್ರಾರಂಭಿಸಿತು. ಸದ್ಯದಲ್ಲಿ ಕರ್ನಾಟಕ ಜಾನಪದ ವಿಶ್ವಕೋಶ (ಭಾಗ 1, 2015), ಆಫ್ರಿಕ ಜಾನಪದ (2021) ಎಂಬ ಎರಡು ಸಂಪುಟಗಳು ಪ್ರಕಟವಾಗಿವೆ. ಸ್ಥೂಲವಾಗಿ ಇದಿಷ್ಟು ಕನ್ನಡ ವಿದ್ವತ್ ಕ್ಷೇತ್ರದಲ್ಲಿ ನಡೆದಿರುವ ವಿಶ್ವಕೋಶದ ಕೆಲಸ. ಈ ವಿದ್ವತ್ ಕ್ಷೇತ್ರಕ್ಕೆ ಈಗ 'ಅರೆಭಾಷೆ ವಿಶ್ವಕೋಶ' ಸೇರ್ಪಡೆಗೊಳ್ಳುತ್ತಿದೆ.

'ಅರೆಭಾಷೆ ವಿಶ್ವಕೋಶ'ದ ಸ್ವರೂಪ ಕುರಿತು ಪ್ರಸ್ತಾಪಿಸುವ ಮೊದಲು ವಿಶ್ವಕೋಶ ರಚನೆಯ ಸ್ವರೂಪವನ್ನು ಕುರಿತು ಇಲ್ಲಿಯೇ ಕೆಲವು ವಿಚಾರಗಳನ್ನು ಹೇಳುವುದು ಉಚಿತವೆಂದು ಭಾವಿಸುತ್ತೇನೆ. ಒಂದು ಉತ್ತಮ ವಿಶ್ವಕೋಶದ ಮಾದರಿಯನ್ನು ಈಗಾಗಲೇ ಬ್ರಿಟಾನಿಕ ವಿಶ್ವಕೋಶ ಹಾಕಿಕೊಟ್ಟಿದೆ. ಒಂದು ಉತ್ತಮ ವಿಶ್ವಕೋಶದಲ್ಲಿ ಈ ಮುಂದಿನ ಆರು ಅಂಶಗಳು ಕಡ್ಡಾಯವಾಗಿರಬೇಕು (ಇವುಗಳನ್ನು ಷಟ್‌ಸೂತ್ರಗಳೆಂದು ಕರೆಯಬಹುದು). ಈ ಆರು ಸೂತ್ರಗಳು ಹೀಗಿವೆ: 1. Authoritativeness – ಅಧಿಕೃತತೆ, 2. Comprehensiveness –ಸಮಗ್ರತೆ, 3. Condensation – ಸಂಕ್ಷಿಪ್ತತೆ, 4. Accessibility – ಸುಲಭಗ್ರಾಹ್ಯತೆ, 5. Accuracy- ಖಚಿತತೆ, 6. International orientation – ಅಂತಾರಾಷ್ಟ್ರೀಯ ಅರಿವು. ಯಾವುದೇ ವಿಶ್ವಕೋಶ ರಚನೆಯಲ್ಲಿ ಈ ಆರು ಸೂತ್ರಗಳನ್ನು ಸಾಧ್ಯವಾದ ಮಟ್ಟಿಗೆ ಅನುಸರಿಸಬೇಕು. ಇನ್ನು ವಿಶ್ವಕೋಶದ ಸ್ವರೂಪ, ಅದರ ಹೂರಣದ ವಿಚಾರ. ವಿಶ್ವಕೋಶ ಸಂಪುಟ ರಾಯಲ್ ಡೆಮ್ಮಿ ಆಕಾರದಲ್ಲಿರುತ್ತದೆ. ಪಠ್ಯದ ಜೊತೆಗೆ ಸೂಕ್ತ ಚಿತ್ರಗಳಿರುತ್ತವೆ. ಲೇಖನ ಸೂಚಿ, ಲೇಖಕ ಸೂಚಿ, ಆಯ್ದ ಪರಾಮರ್ಶನ ಗ್ರಂಥಗಳ ಸೂಚಿ, ಪಡೆದ ವಿವಿಧ ನೆರವಿನ ಕೃತಜ್ಞತೆ ಮೊದಲಾದ ವಿವರಗಳನ್ನು ಒಳಗೊಂಡಿರುತ್ತದೆ. ಪಠ್ಯದಲ್ಲಿ, ಪ್ರತಿ ಲೇಖನದ ಕೊನೆಯಲ್ಲಿ ಲೇಖನ ಬರೆದ ಲೇಖಕರ ಹೆಸರಿನ ಸಂಕೇತಾಕ್ಷರವಿರುತ್ತದೆ. ಲೇಖಕ ಸೂಚಿಯು ಇಂಗ್ಲಿಷ್ ವರ್ಣಮಾಲೆಯ ಕ್ರಮವನ್ನು ಅನುಸರಿಸಿರುತ್ತದೆ. ಉದಾ: ವಿಶ್ವನಾಥ ಬದಿಕಾನ (Vishwanatha Badikana)– ಸಂಕೇತಾಕ್ಷರ ವಿ.ಬಿ.; ಭರತೇಶ ಅಲಸಂಡೆಮಜಲು (Bharatesha Alasandemajalu)– ಸಂಕೇತಾಕ್ಷರ ಬಿ.ಎ.

ಆಯಾ ಕ್ಷೇತ್ರದ ಪರಿಣತರಿಂದ, ವಿದ್ವಾಂಸರಿಂದ ಲೇಖನಗಳನ್ನು ಬರೆಸಿ ತರಿಸಿಕೊಳ್ಳುವುದು ವಿಶ್ವಕೋಶ ರಚನೆಯ ಮೊದಲ ಹಂತ. ಇದು ಸಂಪಾದಕ ವರ್ಗದ ಎಲ್ಲರ ಹೊಣೆಗಾರಿಕೆ. ಬರೆದುಬಂದ ಲೇಖನ ಪ್ರಕಟಣೆಗೆ ಅರ್ಹವಾಗಿದೆಯೆ, ಇಲ್ಲವೆ ಎಂದು ಓದಿ ತೀರ್ಮಾನಿಸುವುದು ಸಂಪಾದಕವರ್ಗದ ಜವಾಬ್ದಾರಿ. ಅನಂತರ ಲೇಖನಗಳನ್ನು ಸೂಕ್ತವಾಗಿ ತಿದ್ದುಪಡಿಯನ್ನು ಮಾಡುವುದು, ಸಂಪಾದಿಸುವುದು (ಎಡಿಟಿಂಗ್) ಎರಡನೆಯ ಹಂತದ ಕೆಲಸ. ಇಡೀ ಸಂಪುಟದ ತಾಂತ್ರಿಕ ವ್ಯವಸ್ಥೆಯ ಪೂರ್ಣ ಹೊಣೆಗಾರಿಕೆಯೂ ಸಂಪಾದಕವರ್ಗದ್ದು. ಸಂದರ್ಭ ಉದ್ಭವಿಸಿದರೆ ಹೊಸ ಲೇಖನಗಳನ್ನೂ ಸಂಪಾದಕವರ್ಗ ಬರೆಯಬೇಕು. ಇಷ್ಟೆಲ್ಲಾ ಕೆಲಸ ಮುಗಿದ ಮೇಲೆ ಅಂತಿಮ ಹಂತ ಮುದ್ರಣ. ಇದಿಷ್ಟು ಸ್ಥೂಲವಾಗಿ ಒಂದು ವಿಶ್ವಕೋಶ ರೂಪಿಸುವ ಸಂದರ್ಭದಲ್ಲಿ ಅಗತ್ಯವಾಗಿ ಗಮನಿಸಬೇಕಾದ ಅಂಶಗಳು.

'ಅರೆಭಾಷೆ ವಿಶ್ವಕೋಶ'ವನ್ನು ಅರೆಭಾಷೆಯಲ್ಲಿಯೆ ರೂಪಿಸಲಾಗಿದೆ. ಅರೆಭಾಷೆ, ಕನ್ನಡದ ಒಂದು ಪ್ರಾದೇಶಿಕ ಭಾಷೆ, ಕರ್ನಾಟಕ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ರಚನೆಯಾಗುವ ಮೊದಲು ಅರೆಭಾಷೆಯನ್ನು ಅರೆಗನ್ನಡ, ಗೌಡ ಕನ್ನಡ ಎಂದೂ ಕರೆಯುತ್ತಿದ್ದರು. ಕೊಡಗು ಜಿಲ್ಲೆಯ ಮಡಿಕೇರಿ, ಸೋಮವಾರಪೇಟೆ, ವಿರಾಜಪೇಟೆ ತಾಲ್ಲೂಕುಗಳಲ್ಲಿ, ದಕ್ಷಿಣಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕಿನಲ್ಲಿ,

ಬೆಳ್ತಂಗಡಿ, ಪುತ್ತೂರು ತಾಲ್ಲೂಕುಗಳಲ್ಲಿ, ಕಾಸರಗೋಡು ಪರಿಸರದಲ್ಲಿ ನೆಲೆಸಿರುವ, ಪ್ರಧಾನವಾಗಿ ಒಕ್ಕಲಿಗ ಸಮುದಾಯದ ಜನವರ್ಗ, ಜೊತೆಗೆ ಇತರ ಸಮುದಾಯಗಳ ಜನರು ಆಡುವ ಭಾಷೆಯಾಗಿದೆ. ಅರೆಭಾಷೆಯು ದ್ರಾವಿಡಭಾಷೆಯ, ಹಳಗನ್ನಡ ಭಾಷೆಯ ಕೆಲವು ಮೂಲಸ್ವರೂಪವನ್ನು ತಮಿಳಿನಂತೆ, ತುಳುವಿನಂತೆ ಈಗಲೂ ಸಾಕಷ್ಟು ಉಳಿಸಿಕೊಂಡು ಬಂದಿದೆ. ಜೊತೆಗೆ ಈ ಅರೆಭಾಷೆ ಸಮುದಾಯ ಸಾಂಸ್ಕೃತಿಕವಾಗಿ ತನ್ನ ಅನನ್ಯತೆಯನ್ನೂ ಪ್ರತ್ಯೇಕತೆಯನ್ನೂ ವೈಶಿಷ್ಟ್ಯವನ್ನೂ ಕಾಪಾಡಿಕೊಂಡು ಬಂದಿದೆ. ನಡೆನುಡಿ ಆಚಾರ ವಿಚಾರಗಳಲ್ಲಿ ತನ್ನದೇ ಆದ ವಿಭಿನ್ನವಾದ ಅಸ್ಮಿತೆಯನ್ನು ಉಳಿಸಿಕೊಂಡುಬಂದಿದೆ. ಸಂಸ್ಕೃತಿಯ ವಿಚಾರವಾಗಿ ಮಾತನಾಡುವ ಸಂದರ್ಭದಲ್ಲಿ ಪ್ರಧಾನ ಸಂಸ್ಕೃತಿ, ಉಪಸಂಸ್ಕೃತಿ ಎಂದು ಮಾತನಾಡುವುದುಂಟು. ಆದರೆ ಈ ಬಗೆಯ ತಾರತಮ್ಯಕ್ಕೆ ಯಾವ ಅರ್ಥವೂ ಇಲ್ಲ. ಎಲ್ಲ ಸಮುದಾಯಗಳ, ಅದು ಚಿಕ್ಕದಿರಲಿ, ದೊಡ್ಡದಿರಲಿ, ಸಂಸ್ಕೃತಿಗಳೂ ಪ್ರಧಾನ ಸಂಸ್ಕೃತಿಗಳೇ. ಇಲ್ಲಿ ಕನಿಷ್ಠ, ಶ್ರೇಷ್ಠ ಎಂಬ ಮಾತೇ, ಅಭಿಪ್ರಾಯವೇ ಅರ್ಥಹೀನವಾದದ್ದು– ಭಾರತದಂತಹ ಬಹುಸಂಸ್ಕೃತಿಯುಳ್ಳ ದೇಶದಲ್ಲಿ ಇಂಥ ಮಾತುಗಳಿಗೆ ಯಾವ ಬೆಲೆಯೂ ಇಲ್ಲ. ವೈವಿಧ್ಯತೆಯಲ್ಲಿ ಏಕತೆ (ಯೂನಿಟಿ ಇನ್ ಡೈವರ್ಸಿಟಿ) ಎಂಬ ಮಾತು ಭಾರತದ ಸಂಸ್ಕೃತಿಗೆ ಅರ್ಥಪೂರ್ಣವಾಗಿ ಸಲ್ಲುವಂತಹದು.

'ಅರೆಭಾಷೆ ವಿಶ್ವಕೋಶ'ವನ್ನು ಈಗಾಗಲೇ ನಾನು ಪ್ರಸ್ತಾಪಿಸಿರುವ ವಿಷಯಗಳ ಹಿನ್ನೆಲೆಯಲ್ಲಿ ಸಿದ್ಧಪಡಿಸಲಾಗಿದೆ. ಮುಖ್ಯವಾಗಿ ಹೇಳಬೇಕಾದ ಮಾತೆಂದರೆ ಇದೊಂದು ಮಾದರಿಯ ವಿಷಯ ವಿಶ್ವಕೋಶ (ಸಬ್‌ಜೆಕ್ಟ್ ಎನ್‌ಸೈಕ್ಲೊಪೀಡಿಯ). ಅರೆಭಾಷೆ ಮಾತನಾಡುವ ಸಮುದಾಯದ ಬದುಕಿನ ಬಹುಪಾಲು ವಿವರಗಳನ್ನು ಇದು ದಾಖಲಿಸಿದೆ. ಕೃಷಿ, ಬೇಟೆ, ಜೀವನಾವರ್ತನ ಆಚರಣೆಗಳು, ಜನಪದ ಆಟಗಳು, ಜನಪದ ಕುಣಿತಗಳು, ಜನಪದ ಅಡುಗೆ–ಆಹಾರ ಸಂಸ್ಕೃತಿ, ಜನಪದ ನಂಬಿಕೆಗಳು, ಜನಪದ ದೈವಗಳು, ಕೌಟುಂಬಿಕ ಸಂಬಂಧಗಳು, ಜನಪದ ಕತೆ, ಗಾದೆ, ಒಗಟು, ಐತಿಹ್ಯ, ಶಿಶುಪ್ರಾಸಗಳು, ಜನಪದ ವೈದ್ಯ, ಹಬ್ಬಗಳು, ಉಡುಗೆತೊಡುಗೆ, ಸಾಹಿತ್ಯ, ರಂಗಭೂಮಿ ಹೀಗೆ ನೂರಾರು ವಿಷಯಗಳು ಈ ಸಂಪುಟದಲ್ಲಿ ಸ್ಥಾನಪಡೆದಿವೆ.

ಅರೆಭಾಷೆ ಸಮುದಾಯದ ಬದುಕಿನ ಸಾಕ್ಷಿಪ್ರಜ್ಞೆಯಾಗಿರುವ 'ಕನ್ನಿಕಂಬ'ದ ವಿಚಾರವಾಗಿ ಕೆಲವು ಮಾತುಗಳನ್ನು ಹೇಳಬೇಕು. ಇದು ಮರದಿಂದ ಮಾಡಿದ ಒಂದು ಆರಾಧನಾ ವಸ್ತು. ಇದನ್ನು ಕನ್ನಿಕಂಬ, ಕನ್ನೆಕಂಬ, ಮೂರ್ತದ ಕಂಬ, ಕನ್ಯಾಕಂಬ, ಕನ್ನಿಕೋಂಬ ಇತ್ಯಾದಿ ಹೆಸರಿನಲ್ಲಿ ಕರೆಯಲಾಗುತ್ತದೆ. ಇದು ಅಡುಗೆಮನೆಯಲ್ಲಿ, ಕೆಲವು ಮನೆಗಳಲ್ಲಿ ದೇವರ ಮನೆಯಲ್ಲಿ ಸ್ಥಾಪಿತವಾಗಿರುವ 'ಕಂಬ'. ಈ ಸ್ಥಳವನ್ನು ಕನ್ಯಾಮೂಲೆ, ಕನ್ನೆ ಮೂಲೆ ಎಂದೂ ಕರೆಯುವರು. ಕನ್ಯಾಮೂಲೆ ಎಂದರೆ ಗಂಡಹೆಂಡಿರು ಮಲಗುವ ಕೋಣೆಯ ಮೂಲೆ ಎಂಬುದು ವಾಚ್ಯಾರ್ಥ. ಈ ಕಂಬವನ್ನು ಹಾಲು ಒಸರುವ ಮರದಿಂದ ತಯಾರಿಸಲಾಗುತ್ತದೆ. ಹೆಚ್ಚಾಗಿ ಇದರ ತಯಾರಿಕೆಗೆ ಹಲಸಿನಮರ ಬಳಸಲಾಗುವುದು. ಕುಟುಂಬದ ಮನೆ, ದೊಡ್ಡ ಮನೆ, ಐನ್‌ಮನೆ, ಗುತ್ತು, ಬಾರಿಕೆ ಎಲ್ಲ ಕಡೆ ಇರುವಂಥದು. 'ಕನ್ನಿ' ಎಂದರೆ ಸಣ್ಣದು ಚಿಕ್ಕದು ಎಂಬ ಅರ್ಥವೂ ಇದೆ. ಪ್ರಾಯದ 'ಗೂಡೆ'ಯನ್ನು ಕನ್ನಿ, ಕನ್ನೆ ಎಂದು ಕರೆಯುವುದಿದೆ. ತಮಿಳಿನಲ್ಲಿ 'ಕನ್ನೆ' ಎಂದರೆ 'ಪವಿತ್ರ' ಎಂಬ ಅರ್ಥವಿದೆಯೆಂದು ತಿಳಿದುಬರುತ್ತದೆ. 'ಕನ್ನಿಕಂಬ'ದ ಪೂಜೆ ಸಲ್ಲಿಸದೆ ಯಾವುದೇ ಶುಭಕಾರ್ಯವನ್ನೂ ಈ ಸಮುದಾಯದ ಜನವರ್ಗ ಕೈಗೊಳ್ಳುವುದಿಲ್ಲ. ಈ ಸಮುದಾಯದ ಬದುಕಿನಲ್ಲಿ ಈ 'ವಸ್ತು'ವಿಗೆ ಅಪರಿಮಿತ ಪೂಜ್ಯ ಭಾವನೆಯಿದೆ. ಇದರ ಮೂಲವನ್ನು ಹುಡುಕುತ್ತ ಸಂಶೋಧನೆ ಮುಂದುವರಿದರೆ ಇದು ಶಕ್ತಿಯ ಆರಾಧನೆಯಲ್ಲಿ ನೆಲೆಗೊಂಡ 'ನಾಥಪಂಥ'ದ ಸಂಕೇತವಾಗಿ ತೋರುತ್ತದೆ. ಇನ್ನೂ ಮುಂದುವರಿದರೆ ಇದರ ಸ್ವರೂಪ, ಆಕಾರ ಗಮನಿಸಿದರೆ, ಒಂದು ಕಾಲದಲ್ಲಿ ಇದ್ದಿರಬಹುದಾದ ಪ್ರಕೃತಿ ಮೂಲದ, ಸೃಷ್ಟಿಮೂಲದ ಶಿಶ್ನಾರಾಧನೆಯ ಪಳೆಯುಳಿಕೆಯಾಗಿ ಕಂಡುಬರುತ್ತದೆ. ಸಿಂಧೂ–ಸರಸ್ವತಿ ಸಂಸ್ಕೃತಿಯವರೆಗೆ ಇದರ ಮೂಲವನ್ನು ಕೊಂಡೊಯ್ಯಬಹುದಾದ ಸಾಧ್ಯತೆಯನ್ನು ವಿಚಾರಮಾಡಬೇಕಾಗಿದೆ. ಈ ಬಗ್ಗೆ ಆಳವಾದ ಸಂಶೋಧನೆ ಆಗಬೇಕಾಗಿದೆ. ಹಾಗಾದಾಗ ಅರೆಭಾಷೆ ಸಮುದಾಯದ ಮೂಲವನ್ನೂ ಪ್ರಾಚೀನತೆಯನ್ನೂ ಅಧಿಕೃತವಾಗಿ ಗುರುತಿಸಬಹುದೆಂದು ನಾನು ಭಾವಿಸುತ್ತೇನೆ. ಇಂಥ ಆರಾಧನಾ ಕ್ರಮ ಕರ್ನಾಟಕದಲ್ಲಿ ನನಗೆ ತಿಳಿದಿರುವಂತೆ ಬೇರೆ ಯಾವುದೇ ಸಮುದಾಯದಲ್ಲಿ ಕಂಡುಬರುವುದಿಲ್ಲ. ಇದು ಅರೆಭಾಷೆ ಒಕ್ಕಲಿಗ ಸಮುದಾಯದ ಅಸ್ಮಿತೆ ಎಂದು ಹೇಳಬೇಕು.

ನನಗೆ ತಿಳಿದ ಹಾಗೆ ಪ್ರಧಾನ ಭಾಷೆಗಳಲ್ಲಿ ವಿಶ್ವಕೋಶಗಳ ರಚನೆಯ ಕಾರ್ಯ ನಡೆದಿದೆ. ಆದರೆ ಒಂದು ಪ್ರಾದೇಶಿಕ ಭಾಷೆಯಲ್ಲಿ ವಿಶ್ವಕೋಶ ಪ್ರಕಟವಾಗುತ್ತಿರುವುದು ಇದೇ ಮೊದಲು. ಕನ್ನಡನಾಡಿನಲ್ಲಿ ಇದೊಂದು ನೂತನ ದಾಖಲೆ ಎಂದೇ ನಾನು ಭಾವಿಸಿದ್ದೇನೆ.

"ಒಂದು ಪರಾಮರ್ಶನ ಗ್ರಂಥದ ಮೌಲ್ಯವನ್ನು ಅಳೆಯಬೇಕಾದರೆ ಆ ಕೆಲಸದ ಸಿದ್ಧತೆಯಲ್ಲಿ ಯಾರು ತೊಡಗಿಸಿಕೊಂಡಿದ್ದಾರೆ ಎಂದು ಗುರುತಿಸುವ ಮೂಲಕವಾಗಲಿ ಅಥವಾ ಕೇವಲ ವಿಷಯ ಮಾಹಿತಿಯನ್ನು ಪಟ್ಟಿಮಾಡುವ ಮೂಲಕವಾಗಲಿ ಅಳೆಯುವುದಲ್ಲ; ಅಧಿಕೃತ ಹಾಗೂ ಉಪಯುಕ್ತ ಮಾಹಿತಿಯನ್ನು ಪರಿಣಾಮಕಾರಿಯಾಗಿ ನಿರೂಪಿಸುವ ಮೂಲಕ ಓದುಗನ ಅನುಭವವನ್ನು ಯಾವ ಮಟ್ಟದಲ್ಲಿ ಸಮೃದ್ಧಿಗೊಳಿಸುತ್ತದೆ ಎಂಬ ದೃಷ್ಟಿಯಿಂದ ಅದರ ಮೌಲ್ಯವನ್ನು ಅಳೆಯಬೇಕಾಗುತ್ತದೆ" (ಎನ್‌ಸೈಕ್ಲೊಪೀಡಿಯ ಆಫ್ ಆರ್ಟ್, 1971). ಈ ಅಭಿಪ್ರಾಯಕ್ಕೆ ಪ್ರತ್ಯಕ್ಷ ಸಾಕ್ಷಿ ಎನ್ನುವಂತೆ 'ಅರೆಭಾಷೆ ವಿಶ್ವಕೋಶ' ರೂಪುಗೊಂಡಿದೆ. ಒಂದು ಸಮುದಾಯದ ಸಾಂಸ್ಕೃತಿಕ, ಭೌತಿಕ ಲೋಕದ ಅಂತಃಸತ್ವವನ್ನು ಈ ಗ್ರಂಥ ಅನಾವರಣಗೊಳಿಸಿದೆ.

ಅರೆಭಾಷೆ ಸಾಹಿತ್ಯ ಮತ್ತು ಸಂಸ್ಕೃತಿ ಅಕಾಡೆಮಿ ಅರೆಭಾಷೆಗೆ ಸಂಬಂಧಿಸಿದಂತೆ ಇತ್ತೀಚಿನ ದಿನಗಳಲ್ಲಿ ಅತ್ಯಂತ ಕ್ರಿಯಾಶೀಲವಾಗಿ ತೊಡಗಿಸಿಕೊಂಡು ಕೆಲಸಮಾಡುತ್ತಿದೆ. ಈಗಾಗಲೇ ಅದು ಅರೆಭಾಷೆ ಪಾರಂಪರಿಕ ವಸ್ತುಕೋಶ ಮತ್ತು ಅರೆಭಾಷೆ ಪದಕೋಶ–ಎಂಬ

ಎರಡು ಮಹತ್ವದ ಕೆಲಸಗಳನ್ನು ಮಾಡಿದೆ. ಈಗ ಇದೇ ಬೌದ್ಧಿಕ ನೆಲೆಯ ಗುಂಪಿಗೆ 'ಅರೆಭಾಷೆ ವಿಶ್ವಕೋಶ' ಸೇರ್ಪಡೆಗೊಳ್ಳುತ್ತಿದೆ. ಅಕಾಡೆಮಿಯ ಅಧ್ಯಕ್ಷರಾದ ಶ್ರೀ ಲಕ್ಷ್ಮೀನಾರಾಯಣ ಕಜಗದ್ದೆಯವರು ತರುಣರು, ಉತ್ಸಾಹಿಗಳು, ಶೈಕ್ಷಣಿಕ ಬದ್ಧತೆಯುಳ್ಳವರು. ಅವರ ನೆರವಿಗೆ ಬಂದವರು ಸಂಪಾದಕದ್ವಯರಾದ ಡಾ. ವಿಶ್ವನಾಥ ಬದಿಕಾನ ಮತ್ತು ಭರತೇಶ ಅಲಸಂಡೆಮಜಲು–ಇವರುಗಳು; ಜೊತೆಗೆ ಈ ಸಂಪುಟದ ಲೇಖಕರು. ಈ ಎಲ್ಲರೂ ಒಮ್ಮನಸ್ಸಿನಿಂದ ಕೂಡಿ ಸಹಕರಿಸಿ ಅತ್ಯಲ್ಪ ಕಾಲಾವಧಿಯಲ್ಲಿ ಈ ಸಂಪುಟವನ್ನು ರೂಪಿಸಿದ್ದಾರೆ. ಇವರೆಲ್ಲರಿಗೂ ನಾನು ಶುಭಾಶಯಗಳನ್ನು ಕೋರುತ್ತೇನೆ.

ಯಾವುದೇ ಕೆಲಸವೂ ಪರಿಪೂರ್ಣವಲ್ಲ. 'ಪರಿಪೂರ್ಣತೆ ಎನ್ನುವುದು ಸಾಧಿಸಲಾಗದ ಆದರ್ಶ. ಆದರೆ ಅದರ ಕಡೆಗೆ ಮಾರ್ಗಕ್ರಮಣ ಮಾಡಬಹುದು. ಅದಕ್ಕೆ ಕೊನೆ ಎಂಬುದಿಲ್ಲ' ಎಂಬ ಹಿರಿಯರ ಮಾತಿದೆ. 'ನಡೆವರೆಡವದೆ ಕುಳಿತವರೆಡಹುವರೆ' ಎಂಬ ಮಾತೂ ಇದೆ. 'ಅರೆಭಾಷೆ' ವಿಶ್ವಕೋಶ'ಕ್ಕೂ ಈ ಮಾತುಗಳು ಅನ್ವಯಿಸುತ್ತವೆ ಎಂದು ನಾನು ಭಾವಿಸಿದ್ದೇನೆ. ಇಂಥ ಸಂಪುಟಗಳ ಕೆಲಸ ಒಂದು ಮುದ್ರಣಕ್ಕೆ ಮುಗಿಯುವಂತದ್ದಲ್ಲ; ಮತ್ತೆ ಮತ್ತೆ ಪರಿಷ್ಕಾರಗೊಳ್ಳುತ್ತ ಹೋಗಬೇಕಾಗುತ್ತದೆ. 'ಸಹೃದಯ ಮನಸ್ಸಿನ' ವಿಮರ್ಶೆಗೆ ಸದಾ ಸ್ವಾಗತವಿರಲಿ. ನನಗೆ ಇಂಥದ್ದೊಂದು ಅವಕಾಶ ಕಲ್ಪಿಸಿದ ಅರೆಭಾಷೆ ಅಕಾಡೆಮಿಗೆ, ಅದರ ಅಧ್ಯಕ್ಷರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.



## ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ



# ಅರೆಭಾಷೆ ವಿಶ್ವಕೋಶ

**ಅಡ್ಡಣಪೆಟ್ಟ್ :** ಅರಸು ಮನೆತನದ ದೆವ್ವಗಳ ಆರಾದನೆಲಿ ಅಡ್ಡಣಪೆಟ್ಟ್ ನಡ್‌ದದೆ. ಇದ್ ಗೌಡ್‌ರ್‌ಗಳೆ ಹೆಚ್ಚಿಗೆ ಇರ್‌ವ ಸುಳ್ಯದ ಊರುಗಳ್‌ಲಿ ಅದರ್‌ಲು ಉಲ್ಲಾಕುಳು–ನಾಯರ್ ದೆವ್ವಗಳ ಆರಾದನೆಲಿ ಉಟ್ಟು. ಅಡ್ಡಣಪೆಟ್ಟ್ ನಡ್‌ಸಿಕೆ ಹಜ್ಜಾ ಬಜ್ಜ ಉಟ್ಟು. ಇದ್ ಗುರಾಣಿನ ಹಾಂಗಿರ್‌ವ ಅಡ್ಡಣ ಮತ್ತೆ ದೊಣ್ಣೆ ಹಿಡ್‌ಕಂಡ್ ಹೊಡ್‌ಕಂಬ ಯುದ್ದದ ಹಾಂಗಿದ್ದದೆ. ಅಡ್ಡಣನ ಯಾದೆ ಲೋಹಂದ ಮಾಡ್‌ದುಲೆ. ಕಾಡ್‌ಲಿ ಇರ್‌ವ ಬೆತ್ತನ ಸಿಗ್‌ದ್ ಗುರಾಣಿನ ಆಕಾರಲಿ ಮೆಡ್‌ದ್ ಮಾಡ್‌ವೆ. ಅದರ ಹೊರಪುಡೆನ ಜಿಂಕೆನ ಚರ್ಮಂದ ಮುಚ್ಚ್‌ವೆ. ಒಳೆಗೆ ಪುಡೆಲಿ ಹಿಡ್‌ಕಂಬಕೆ ಹಿಡಿ ಇದ್ದದೆ. ಇಬ್ಬಿಬ್ಬರ್ ಜೆನ ಎದ್‌ರೆದ್‌ರ್ ನಿತ್ತ್‌ಕಂಡ್ ಹೊಡ್‌ಕಂಡವೆ. ಹೊಡ್‌ಕಂಬಕೆ ಅವರ ಕೈಲಿ ನಾಕೈದ್ ಅಡಿನಸ್ಟ್ ಉದ್ದದ ಬೆತ್ತ ಅಲ್ಲರೆ ಬೀಟೆ ಮರಂದ ಮಾಡ್‌ದ ದೊಣ್ಣೆ ಇದ್ದದೆ. ಇದರ ಬಂದಿಕೋಲು/ಪಾಳಿ ದೊಣ್ಣೆತನು ಹೇಳಿವೆ. ಅಡ್ಡಣಪೆಟ್ಟ್ ಸುರು ಮಾಡಿಕೆ ಮುಂದೆ ಬಂದಿಕೋಲ್‌ನ ಕಬ್ಬಣದ ಆಚಾರಿಗ ಕಲ್ಲ್‌ನ ಮೇಲೆ ಇಸಿ ಕಬ್ಬಣದ ಮುಟ್ಟಿಂದ (ಸುತ್ತಿಗೆಂದ) ಹೊಡ್‌ದ್ ಪರೀಕ್ಸೆ ಮಾಡ್‌ವ ಕ್ರಮ ಉಟ್ಟು. ಇದ್‌ಕೆ ಬೊಂದ್ಯೆ ಸೋದ್‌ಸುದುತ ಹೇಳ್‌ವೆ.



ಉಲ್ಲಾಕ್ಲು ದೆವ್ವ–ಅಡ್ಡಣಪೆಟ್ಟ್

ಅಡ್ಡಣಪೆಟ್ಟ್‌ಗೆ ನಾಕ್ ಜೆನ ಎದ್‌ರ್ ಬದ್‌ರ್ ಆಗಿ ನಿತ್ತವೆ. ಈ ನಾಕ್ ಜೆನ ಹಿಂದೆಂದಲೂ ತೇಳಿರೆ, ಬಲ್ಲಾಳರ ಕಾಲಂದಲೇ ಗುತ್ತು ಮನೆತನದವೇ ಆಗಿರೊಕುಂತ ಕ್ರಮ ಉಟ್ಟು. ಈ ಮನೆತನಲಿ ಅಡ್ಡಣಕೆ ನಿಲ್ಲಿಕೆ ಜೆನ ಇಲ್ಲೆಂತಾದರೆ ಸಂಬಳ ಕೊಟ್ಟಾರ್ ಬೇರೆ ಜೆನ ಮಾಡೊಕು. ಅಡ್ಡಣಕೆ ನಿಲ್ಲೊವು ತಲೆಗೆ ಬಿಳಿ ಮುಂಡಾಸ್ ಕಟ್ಟಿಕಣಕು. ಮುಂಡಾಸ್ ತಲೆಲಿ ಸೂಡಿನ ಹಾಂಗೆ ಕಟ್ಟಿರೂ ಅದರ ಕೊಡಿನ ತಲೆನ ಹಿಂದೆ ಇಳ್‌ಸಕು. ದೆವ್ವದ ಪನಿಯಾರಂದ ತೆಗ್‌ದ ಪಿಂಗಾರನ ಮುಡಿಯೋಕು. ಹಣೆ, ಎದೆ, ರಟ್ಟೆಗೆ ಗಂದದ ನಾಮ ಹಾಕಿಕಣಕು. ಸೊಂಟಲಿರುವ ಕಾಕಿ ಚೆಡ್ಡಿನ ಮೇಲೆ ಕೆಂಪು ಬಟ್ಟೆನ ಸುತ್ತಿ ಕಟ್ಟಿ ಅದರ ಒಂದ್ ಕೊಡಿನ ಹಿಂದೆನ ಮೆಯ್ಯಿಲಿ ಇಸಕು. ಅಡ್ಡಣದ ಪೆಟ್ಟ್ ಒಂದ್ ವೇಳೆ ಕೈ ಮೀರಿ ಹೋದರೆ ಹಿಡ್‌ದ್ ಎಳೆಕೆ ಆವ ಹಾಂಗೆ ಅದರ ಇಳ್‌ಸಿದ್ದವೆ. ಇನ್ನ್ ಒಳ್‌ದ ಹಾಂಗೆ ಅಡ್ಡಣದವು ಬರೇ ಮೆಯ್ಯಿಲಿ ಇದ್ದವೆ.

ಅಡ್ಡಣ ಪೆಟ್ಟ್‌ನ ಕ್ರಮ ಮತ್ತೆ ನೋಡಿಕೆ ಸಾದಾರಣ ಹೀಂಗಿದ್ದದೆ – ಉಲ್ಲಾಕುಳ ಮಾಡಂದ ಸುಮಾರಾಗಿ ಒಂದ್ ಕಿಲೋಮೀಟರ್ ದೂರಲಿ ಮುಡಿ ಕಲ್ಲ್ ಇದ್ದದೆ. ಚಾವಡಿಲಿ ಮೋರೆಗೆ ಅರ್‌ದಳ ಹಾಕಿ, ಅಲಂಕಾರ ಮಾಡ್‌ದ ದೆವ್ವ, ದೆವ್ವದ ಪ್ರತಿಮಾನಿ ಪೂಜಾರಿಗಳ ಸಮೇತ ಬಂಡಾರದೊಟ್ಟಿಗೆ ಮುಡಿಕಲ್ಲ್‌ನ ಹಕ್ಕಲೆ ಮೆರವಣಿಗೆಲಿ ಜೆನ, ಆಳ್ಗಕೂ.. ತ ಕೂಕುಳ್ ಹಾಕಿಕಂಡ್ ಬಂದ್ ಮುಡಿಕಲ್ಲ್‌ನ ಹಕ್ಕಲೆ ಎಲ್ಲವೂ ನಿತ್ತವೆ. ಈ ಕಲ್ಲ್‌ನ ಹಕ್ಕಲೆ ಗುತ್ತ್‌ನವು, ಮೊಕ್ತೇಸರರ್, ಪೂಜಾರಿಗ ಎಲ್ಲಾ ಮುಕ್ಯಸ್ತರ್ ಮುಂಡ್ಯೆ ಹಾಕಿದ ಕಟ್ಟೆನ ಹಕ್ಕಲೆ ಬಂದ್ ದೆವ್ವದ ಸಮೇತ ಎಲ್ಲವೂ ಇದ್ದವೆ.



ಅಡ್ಡಣಪೆಟ್ಟ್

ಮುಂಡ್ಯೆ ಹಾಕಿದ ಕಟ್ಟೆನ ಹಕ್ಕಲೆ ಮುಡಿಕಲ್ಲ್ ಇದ್ದಲ್ಲಿ ದೆವ್ವಕ್ಕೆ ಬಿರ್‌ದಾಳಿ ಸಮೇತ ಮುಡಿದಾರಣೆ ಆಕನ, ಎದ್‌ರಕೆ ಅಡ್ಡಣ ಮತ್ತೆ ದೊಣ್ಣೆನೊಟ್ಟಿಗೆ ಅಡ್ಡಣದವು ಒಬ್ಬಂಗೊಬ್ಬ ಎದ್‌ರ್ ಬದ್‌ರ್ ನಿತ್ತ್‌ಕಂಡವೆ ಬಿರ್‌ದಾಳಿನೊಟ್ಟಿಗೆ. ಮುಡಿದಾರಣೆ ಆದರ ಕಾದ್ ನಿತ್ತ ಅಡ್ಡಣದವು ಪೆಟ್ಟ್ ಸುರು ಮಾಡಿಕೆ ಮುಂದೆ ಸೂಚನೆಂತೇಳುವ ಹಾಂಗೆ ಚೆಂಡ್ ದಾಟುವ ಕ್ರಮ ನಡ್‌ದದೆ. ದಡ್ಡಲ ಮರದ (ಗುಡ್ಡದ ಹಿಪ್ಪೇಮರ) ಸೊಪ್ಪುನ ಕಟ್ಟಿ ಮಾಡ್‌ದ ಚೆಂಡ್‌ನ ಒಂದರ ಯಾರಾರ್ ಒಬ್ಬ ಅಡ್ಡಣದ ಅಡಿಲಿ ತೊಪ್ಪುಸಿ ಇಸಿಕಂಡಿದ್ದದೆ. ಅಡ್ಡಣದ ಪೆಟ್ಟ್‌ಗೆ ಕೈ ನೇಚಿಕಾಕನ ಈ ಚೆಂಡ್‌ನ ಕಾಲ್‌ಂದ ಎಡ್‌ಗಿ ಎರಡ್ ಕಡೆವೂ ಅಡ್ಡಣಗಳಿಗೆ ಜೋರು ಜೋರಾಗಿ ಹೊಡ್‌ಕಂಡವೆ. ಅಸ್ಪೊತ್‌ಗೆ ದೆವ್ವ ಎದ್ದ್ ಬಂದ್ ಅದರ ಬಿಲ್ಲ್‌ನ ಬಾಣಂದ ಅವರ ನೊಡುಗೆ ಬಂದ್ ತಡ್‌ದದೆ. ಆಗ ಅಡ್ಡಣದವು ಹೊಡ್‌ತನ ನಿಲ್ಲ್‌ಸ್‌ವೆ. ಯುದ್ದದ ಹಾಂಗೆ ನಡೆವ ಇಂತಾ ಅಡ್ಡಣಪೆಟ್ಟ್‌ನ ಜಗಳದ ನಾಟಕ ಉಲ್ಲಾಕುಲ ನೇಮದ ಹೊತ್ತುಗೆ ಬೇರೆ ತರಲಿ ಸಾ ನಡ್‌ಸುವ ಕ್ರಮ ಉಟ್ಟು. ಚೆಂಬು ಗ್ರಾಮಲಿ ನಡಿವ ನೇಮಲಿ ಬಾಳೆದಂಡ್‌ನ ಹಿಡ್‌ಕಂಡ್ ಹೊಡ್‌ಕಂಡವೆ. ಚೊಕ್ಕಾಡಿಲಿ ಬರೀ ಮೈಲಿ ಇರ್‌ವ ಅಡ್ಡಣದವು ಅಡ್ಡಣಕೆ ಹೊಡ್‌ಕಂಬ ಬದಲ್ ಒಬ್ಬಂದೊಬ್ಬಂಗೆ ಮೆಯ್ಯಿಗೆ ಹೊಡ್‌ಕಂಡವೆ. ಮರ್‌ಕಂಜಲಿ ನಾಕ್ ಊರ್‌ನ ನಾಕ್ ಯವ್ವನಸ್ತರ್ ಅಡ್ಡಣಪೆಟ್ಟ್‌ಗೆ ನಿಲ್ಲುವ ಹಾಂಗೇ ಬಟ್ಟೆ ಉಟ್ಟ್‌ಕಂಡ್ ಕೈಲಿ ಬೆತ್ತ ಹಿಡ್‌ಕಂಡ್ ಊರ್ ಮುಕ್ಯಸ್ತ ಹೇಳಿಕೆ ಕೊಟ್ಟ ಮೇಲೆ 'ಓಲೆಸಿರಿ ಮಜಲ್‌ಲಿ' ಕೂ.. ಕೂ.. ತ ಕೂಕುಳು ಹಾಕಿಕಂಡ್ ಮೂರ್ ಸುತ್ತ್ ಒಬ್ಬಂದೊಬ್ಬಂಗೆ ಹೊಡ್‌ಕಂಡೆ ಓಡ್‌ವೆ. ಮಾರ್‌ನೆದಿನ ಉಲ್ಲಾಕುಲ ನೇಮಲಿ ಹಿಂಗೆ ಹೊಡ್‌ಕಂಡ ಹೈದಂಗಳಿಗೆ ರಾಜಿ ಮಾಡ್‌ಸ್‌ವ ಕ್ರಮನು ನಡ್‌ದದೆ. ಅಡ್ಡಣ ಪೆಟ್ಟ್‌ನ ಎಲ್ಲಾ ಕ್ರಮಗ ಯುದ್ದ ಮಾಡ್‌ವ ಒಂದ್ ತಾಲೀಮ್‌ನ ಹಾಂಗೇ ಕಂಡದೆ. ಅವರವರೊಳಗೆ ಯಾಗೊಳು ಜಗಳ ಮಾಡಿಕಂಬ ಬೀಡ್ ಬಲ್ಲಾಳ್‌ಗಳ ಅರಸುಗ ಹದ್ದ್ ಬಸ್ತ್‌ಲಿ ಇಸ್‌ವ ಪಿರಾಕ್‌ನ ಒಂದ್ ರಾಜಕೀಯ ವೆವಸ್ತೆನ ಗುರ್‌ತ್‌ನಂಗೆ ಈ ಅಡ್ಡಣಪೆಟ್ಟ್ ಕಂಡದೆ. (ಪಿ.ಕೆ.)

## ಅಮರಸುಳ್ಯದ ಸ್ವಾತಂತ್ರ್ಯ ಹೋರಾಟ 1834–1837:

ಬ್ರಿಟಸ್ ಆಡೆಳಿತೆ ವಿರುದ್ದ ಕೊಡಗ್ ಮತ್ತೆ ದಕ್ಷಿಣಕನ್ನಡದ ಜಿಲ್ಲೆನ ಜೆನ ಮಾಡ್‌ದ ಜೆನತಾ ಬಂಡಾಯ. ಭಾರತಕೆ ಬ್ರಿಟಿಸರ್ ಬಂದಾಂಗೆ ಬಾರಿ ಸುಲಬಲಿ ಭಾರತನ ಅವರ ಕೈವಸ ಮಾಡಿಕಂಡೊ ತೇಳಿ ಗೇನ ಮಾಡಿರೆ ಅದ್ ತಪ್ಪಾದೆ. ಬ್ರಿಟಿಸರ ವಿರುದ್ದ ಸಾಕಸ್ಟ್ ಪ್ರತಿಬಟನೆಗ, ಬಂಡಾಯಗ ನಡ್‌ದುಟು. ತ ಬಂಡಾಯಗಳ್‌ಲಿ ಒಂದ್ ಈ 'ಅಮರಸುಳ್ಯದ ಜೆನತಾ ಬಂಡಾಯ' ಅಲ್ಲರೆ ಕೊಡಗ್ ಮತ್ತೆ ಕರಾವಳಿನ ಜೆನತಾ ಬಂಡಾಯ. ಇದ್ ಅಮರ ಸುಳ್ಯನ ಕೇಂದ್ರ ಆಗಿದ್ ಇಸಿಕಂಡ್, ಬಂಡಾಯದ ವ್ಯಾಪ್ತಿ ಕೊಡ್‌ಗ್, ದಕ್ಷಿಣಕನ್ನಡ, ಕಾಸರಗೋಡು ಬಾಗಲೆಲ್ಲ ಇತ್ತ್. ಹಂಗಾಗಿ ಇದರ ಕೊಡ್‌ಗ್ ಮತ್ತೆ ಕರಾವಳಿಲಿ ಜೆನತಾ ಬಂಡಾಯತ ಹೇಳ್‌ದು ಸರಿ ಕಂಡದೆ.

1833ರ ಸುಮಾರ್‌ಗೆ ಸ್ವಾಮಿ ಅಪರಂಪಾರ (ನೋಡಿ:ಸ್ವಾಮಿ ಅಪರಂಪಾರ) ತೇಳ್‌ವ ಸನ್ಯಾಸಿ ಒಬ್ಬ ಮಡಿಕೇರಿ ರಾಜ ಚಿಕ್ಕವೀರರಾಜರ್ ಕರ್‌ದರ್‌ಂದ ಮಡಿಕೇರಿಗೆ ಬಂದಿದ್ದೊ. ಅವ್ ಕೆಲ ದಿನಗ ಕಳ್‌ದ್ ಯಾರ್‌ಗೂ ತಿಳಿಯದಂಗೆ ಕೊಡಗ್‌ನ ಉತ್ತರ ಗಡಿನ ದಾಟಿ ಹೋದೊ. ಈ ಅಪರಂಪಾರ ಯಾರ್‌ತೇಳಿರೆ ತುಮ್‌ಕೂರು ಜಿಲ್ಲೆನ ಮಾಯಸಂದ್ರ ತಾಲೂಕುನ ಕಡಗನೂರ್‌ನವು. ಇವರ ಅಪ್ಪ ಹನುಮಂತರಾಯ, ಅಮ್ಮ ಗೋಪಮ್ಮ. ಇವ್‌ಕೆ ಮೊದ್‌ವೆ ಆಗಿ ಒಂದ್ ಹೆಣ್ಣ್ ಕೂಸ್ ಹುಟ್ಟಿದ ಮೇಲೆ ಊರ್ ಬುಟ್ಟ್ ಹೋಗಿ ಸನ್ಯಾಸಿ ಆದೊಂತೇಲಿ ತಿಳ್‌ದ್‌ಬಂದದೆ.

ಹಿಂಗೆ ಸ್ವಾಮಿ ಅಪರಂಪರ ಚಿಕ್ಕವೀರರಾಜೇಂದ್ರ ದೊಡ್ಡಪ್ಪ ಅಪ್ಪಾಜಿ ಅರಸರ ಮಜ್ಜ ವೀರರಾಜ ಅರಸ ತೇಳ್‌ವ ಕತೆ ಬಿಚ್ಚಿಕಂಡದೆ. ಇದರ ಇಡೀ ಸತ್ಯ ಇಂದ್‌ಗೂ ನಿಗೂಡನೇ ಆವುಟು. ಚಿಕ್ಕವೀರರಾಜನ ದೊಡ್ಡಪ್ಪ ಅಪ್ಪಾಜಿ ಅರಸರ ಇಬ್ಬೊರ್ ಮಕ್ಕ ವೀರರಾಜ ಅರಸ

ಮತ್ತೆ ನಂಜುಂಡ ಅರಸ. ಅಪ್ಪಾಜಿ ಅರಸರ ಕುಟುಂಬನ ಮಡಿಕೇರಿ ಅರಮನೆ ಹಕ್ಕಲೆನ ಸಣ್ಣ ಮನೆಲಿ ಇಸಿದ್ ಸೆರಿಯಾಗಿ ತಿಂಬಕೂ ಕೊಡದೆ ಕೊಲ್ಲ್‌ಸಿದೊ ತೇಳ್‌ವ ಸುದ್ದಿ ಉಟ್ಟು. ವೀರರಾಜ ಅರಸ ಮತ್ತೆ ನಂಜುಂಡ ಅರಸರ್‌ನ ಹೂಳಿಕೆ ಕಾಡ್‌ಗೆ ಕಳ್‌ಸಿದ್ದೊ. ಹೂಳಿಕಾಕನ ಅವರೊಳಗೆ ಕಡೇ ಜೀವ ಇತ್ತ್. ಅದರ್‌ಂದ ರಾಜಂಗೆ ಗುಂಡಿಗೆ ಹಾಕಿದ ಗುರ್ತ್‌ನ ತೆಕಂಡ್ ರಾಜಕುಮಾರರ ಸೈನಿಕರ್ ಬುಟ್ಟು ಬುಟ್ಟೊ. ಅವು ಮೈಸೂರ್ ಸೀಮೆಗೆ ಹೊರ್‌ಟ್ ಹೋದೋ ತೇಳ್‌ದು

ಅಮರಸುಳ್ಯ ಹೋರಾಟಗಾರರ್ ಕ್ರಮಿಸಿದ ಹಾದಿ

ಕತೆ. ಮತ್ತೆ ಬೋಪು ದಿವಾನರ್ ಮಡಿಕೇರಿನ ಬ್ರಿಟಿಸ್ ಅದಿಕಾರಿ ಲೀ ಹಾರ್‌ಡಿನ ಮುಂದೆ ಹೂಳ್‌ದವರ ಕರ್‌ಸಿ ಸಾಕ್ಷಿ ಹೇಳ್‌ಸಿದ್ದೊ. ಲೀ ಹಾರ್‌ಡಿನ ಮುಂದೆ ಅಪ್ಪಾಜಿ ಅರಸರ ಮಕ್ಕಳ ಹೂಳ್‌ದ್ ಹೌದು ತೇಳಿ ಹೂಳ್‌ದವೆ ಸಾಕ್ಷಿ ಹೇಳ್‌ದರ ಬುಟ್ಟರೆ ಅವು ಹೇಳ್‌ದ ವಿಚಾರ ಸತ್ಯನೇ ಆಗುಟು ತೇಳಿಕೆ ಯಾವ ಸಾಕ್ಷಿನು ಇತ್ತ್‌ಲೆ.

**ಮಹತ್ವ :** ಇಡೀ ಬಂಡಾಯಲಿ ಇದ್ ಬಾರೀ ಮುಕ್ಯದ್ದ್. ಸುರುಗೆ ಅಪ್ಪಾಜಿ ಅರಸರ ಮಜ್ಜ ವೀರರಾಜ ಅರಸರೇ ಸ್ವಾಮಿ ಅಪರಂಪಾರ ತೇಳಿ ಬಂಡಾಯಕ್ಕೆ ಚಾಲನೆ ಸಿಕ್ಕಿದೆ. ಮತ್ತೆನ ಹಂತಲಿ ಸ್ವಾಮಿ ಅಪರಂಪಾರ ಅವರ ಅನುಯಾಯಿ ಕಲ್ಯಾಣಸ್ವಾಮಿನೆ ಅಪ್ಪಾಜಿ ಅರಸರ ಎರಡ್‌ನೆ ಮಜ್ಜ ನಂಜುಂಡ ಅರಸ ತೇಳಿ ಬಂಡಾಯ ಮುನ್ನಡ್‌ದದೆ. ಅಕೇರಿಗೆ ಪುಟ್ಟಬಸಪ್ಪನವೆ ಕಲ್ಯಾಣಸ್ವಾಮಿ, ಅರ್‌ತಾತ್ ನಂಜುಂಡರಸ ತೇಳಿ ಬಂಡಾಯ ನಡ್‌ದದೆ.

**ಚಿಕ್ಕವೀರರಾಜರಪದಚ್ಯುತಿ:** 1833ರ ಹೊತ್ತ್‌ಗೆ ಚಿಕ್ಕವೀರರಾಜಂಗೂ, ಬ್ರಿಟಿಸರ್‌ಗೂ ಸಂಮ್ಮಂದಗ ಹಳ್‌ಸಿಕೆ ಸುರಾದೆ. ಅದೇ ಹೊತ್ತ್‌ಗೆ ಚಿಕ್ಕವೀರರಾಜನ ಒಬ್ಬ ದಿವಾನ ಚೆಪ್ಪುಡೀರ ಪೊನ್ನಪ್ಪರೊಟ್ಟಿಗೆ ರಾಜನ ಸಂಮ್ಮಂದ ಕೆಟ್ಟತ್. ಚಿಕ್ಕವೀರರಾಜಂಗೆ ಒಟ್ಟ್ ನಾಕ್ ಜೆನ ದಿವಾನರ್ ಇದ್ದೊ. ಅವರ್‌ಲಿ ದಿವಾನ್ ಕುಂಟು ಬಸವ ಬಾರಿ ಪ್ರಬಲರಾಗಿದ್ದೊ. ಒಮ್ಮೆ ಹಿಂಬೊತ್‌ಗೆ ಬ್ರಿಟಿಸರೊಟ್ಟಿಗೆ ಹೆಂಗೆ ವೆವಹರ್‌ಸಕುತ ಚಿಕ್ಕವೀರರಾಜ ಕೇಳಿಕಾಕನ ಚೆಪ್ಪುಡೀರ ಪೊನ್ನಪ್ಪ ಬ್ರಿಟಿಸರ ಎದ್‌ರ್ ಹಾಕಂಬೊದು ಒಳ್ಳದಲ್ಲ ತೇಳಿ ಸಲಹೆ ಕೊಟ್ಟೊ. ಚೆಪ್ಪುಡೀರ ಪೊನ್ನಪ್ಪ ಹಂಗೆ ಹೇಳಿಕನ ದಿವಾನ್ ಕುಂಟ ಬಸವ ಪೊನ್ನಪ್ಪರ ಕೆಮಿಚೆಂಡೆಗೆ ಬೀಸಿ ಹೊಡ್‌ದೊ,ಆಗ ಪೊನ್ನಪ್ಪ ಕುಸ್ದ್ ಬೀತ್. ಆಗ ಚಿಕ್ಕವೀರರಾಜ ಪೊನ್ನಪ್ಪ ಅವರ ಎದ್‌ರ್‌ಗೆ ದೊಂದಿಯವ್ ಹೋಕನ 'ಅಂವನ ಹಂಗೆ ಬುಟ್ಟುಬಿಡಿ' ತೇಳ್‌ದೊ. ಇದ್ ಚೆಪ್ಪುಡೀರ ಪೊನ್ನಪ್ಪ ಮತ್ತೆ ಚಿಕವೀರರಾಜನ ನೊಡುಲಿ ಸಿಟ್ಟ್ ಹುಟ್ಟಿಕೆ ಕಾರಣ ಆತ್. ಒಂದ್ ಕಡೆ ಚೆಪ್ಪುಡೀರ ಪೊನ್ನಪ್ಪ ದಿವಾನ್, 'ಅಪ್ಪರಂಡ ಬೋಪು ಅವು ಬ್ರಿಟಿಸರ ಪರ ವಯ್‌ಸಿದೊ. ದಿವಾನ್ ಲಕ್ಷ್ಮೀನಾರಾಯಣಯ್ಯ ಯಾರ ಪರ ಇದ್ದೊ ತೇಳಿ ಗೊತ್ತಾದುಲೆ. ಲಕ್ಷ್ಮೀನಾರಾಯಣಯ್ಯರ ನೆಂಟ್‌ರ್‌ಗ ಬಂಡಾಯಗಾರರ ಪರ ಆಗಿದ್ದೊ. ಬ್ರಿಟಿಸರ್ ಮಡಿಕೇರಿನ ಮುತ್ತಿಕನ ಕರಜೆನೆ ಹಕ್ಕಲೆ ನಾಲ್ಕ್‌ನಾಡ್ ಅರಮನೆಲಿ ಚಿಕ್ಕವೀರರಾಜನೊಟ್ಟಿಗೆ ದಿವಾನ್ ಕುಂಟ ಬಸವ ಬ್ರಿಟಿಸರ್‌ಗೆ ಸರಣಾಕಂಡೇ ಅವು ಆತ್ಮಹತ್ಯೆ ಮಾಡಿಕಂಡೊ.

ಬ್ರಿಟಿಸರ್ ಮಡಿಕೇರಿಲಿ ಉಳಿಯಕೆ ಬುಡಿಕಿಲೆ ತೇಳಿ ಗ್ಯಾನ ಮಾಡ್‌ದ ಚಿಕ್ಕವೀರರಾಜ ಮಡಿಕೇರಿನ ವಸಪಡ್‌ಸಿಕಂಡ ಕರ್ನಲ್ ಪ್ರೇಸರ್‌ನ ಏಪ್ರಿಲ್ 1834ರಂದ್ ಅವರೊಟ್ಟಿಗೆ ಒಬ್ಬನೆ ಮಾತಾಡಿಕೆ ಕರ್‌ಸಿಕಂಡೊ. ಹೆಂಗಾರ್ ಮಾಡಿ ನಾ ಮಡಿಕೇರಿಲಿ ಕುದ್‌ರೊಕು, ನನ್ನ ಆಡಳ್‌ತೆ ಎಂದೂ ಕೆಟ್ಟದಾಗಿತ್ತ್‌ಲೆತ ಹೇಳ್‌ದರ ಮನವರ್‌ಕೆ ಮಾಡಿಕೊಟ್ಟೊ. ಕಡೇ ಪ್ರಯತ್ನತ ಚಿಕ್ಕವೀರರಾಜ ತಾನ್ ಬ್ರಿಟಿಸರ ಸೆರೆಯಾಳ್ ಆವಮುಟ್ಟ ತನ್ನ ಆಡಳ್‌ತೆ ಹೆಂಗಿತ್ತ್ ತೇಳ್‌ದರ ತಮ್ಮ ದಿವಾನರ್, ಕರಣಿಕರ್, ಸುಬೇದಾರರ್, ಮುನ್ನಿಗಳಿಗೆ ಕಾಗದ ಬರ್‌ದ್ ತಿಳ್ಸೋಕು ತೇಳಿ ಕೇಳಿಕಂಡೊ. 400 ಪ್ರಜೆಗ ಚಿಕ್ಕವೀರರಾಜನ ಆಡಳ್‌ತೆ ಲಾಯ್‌ಕಿತ್ತ್ ತೇಳಿ ಬರ್‌ದ್ ಕೊಟ್ಟೊ. ಆದ್‌ರೂ ಬ್ರಿಟಿಸರ್ ಅದ್‌ಕೆ ಒಪ್ಪಿಕಂಡತ್‌ಲೆ. ಪ್ರೇಸರ್ ಕೊಡಗ್‌ನ ಮುಕ್ಯಸ್ತರ ಸಬೆನ ಕರ್‌ದ್ ಕೇಳಿಕಾಕನ ಕೊಡಗ್‌ನ ಮುಕ್ಯಸ್ತರ್ ಆಡಳ್‌ತೆನ ಬ್ರಿಟಿಸರ್ ಮಾಡ್‌ವಂಗೆ ಸಲ್‌ಹೆ ಕೊಟ್ಟೊ, ಆದ್‌ರೆ ಚಿಕ್ಕವೀರ ರಾಜನ ಮಡಿಕೇರಿಲೇ ಇರಿಕೆ ಬುಡೋಕುತೇಳ್‌ದೊ.

ಯಾರ್ ಹೆಂಗೆ ಪ್ರಯತ್ನ ಮಾಡಿರೂ, ಚಿಕ್ಕವೀರರಾಜನ ಮಡಿಕೇರಿಂದ ಹೊರೆಗೆ ಹಾಕ್‌ವ ತೀರ್ಮಾನನ ಬ್ರಿಟಿಸರ್ ಮಾಡಿದ್ದೊ. ಚಿಕ್ಕವೀರರಾಜನ ಮಡಿಕೇರಿಂದ ಹೊರ್‌ಡಿಸಿ 12ಮೇ 1834ರಂದ್

ಬೆಂಗ್‌ಳೂರ್‌ಗೆ ಮುಟ್ಟ್‌ಸಿದೊ. ಅಲ್ಲಿಂದ ರಾಜನ ಕಾಸಿಗೆ ಕರ್‌ಕಂಡ್ ಹೋದೊ. ಮತ್ತೆ ಇಂಗ್ಲೆಂಡ್‌ಗೆ ಕಳ್‌ಸಿಕೊಟ್ಟೊ. ಮೇ 7, 1834ರ್‌ಂದ ಕೊಡ್‌ಗ್ ಬ್ರಿಟಿಸ್ ಆಡಳ್‌ತೆಗೆ ಸೇರ್‌ಸಿ ಆಗುಟುತೇಳಿ ಅದಿಕೃತಾಗಿ ಗೋಸಣೆ ಮಾಡ್‌ದೊ.

**ಆಡೆಳ್‌ತ ಬಿಕ್ಕಟ್ಟ್ :** ಅಂದ್‌ನ ಕೊಡಗ್ ರಾಜ್ಯತೇಳಿರೆ ಇಂದ್‌ನ ಕೊಡಗ್ ಮಾತ್ರ ಆಗಿತ್ಲೆ. ದಕ್ಷಿಣಕನ್ನಡ ಜಿಲ್ಲೆಲಿರ್‌ವ ಪುತ್ತೂರ್, ಸುಳ್ಯ, ಬೆಳ್ಳಾರೆ, ಪಂಜ, ಕುಕ್ಕೆ ಸುಬ್ರಹ್ಮಣ್ಯ, ಕಡಬ ಪ್ರದೇಸನೂ ಚಿಕ್ಕವೀರರಾಜರ ಆಡೆಳ್ತೆಗೆ ಸೇರಿತ್ತ್, ಇದ್ ಕೆಳಗೆನ ಕೊಡಗ್ ತೇಳಿ ಕರೆತಿದ್ದೊ. ಈಗನ ಕೊಡಗ್ ಜಿಲ್ಲೆ ಬಾಗನ ಆಗ ಮೇಲೆನ ಕೊಡಗ್ ತೇಳಿ ಕರೆತಿದ್ದೊ.

ಬ್ರಿಟಿಸರ್ ಕೊಡಗ್‌ನ ಆಡೆಳ್ತ ತಕಂಡ ಮೇಲೆ ಕೆಳಗೆನ ಕೊಡಗ್‌ನ ಕೆನರಾ ಜಿಲ್ಲೆಗೆ ಸೇರ್‌ಸಿದೊ. ಹಂಗಾಗಿ ಬ್ರಿಟಿಸರ ಅಡಿಲೇ ಒಳ್‌ದ ಮೇಲೆನ ಕೊಡಗ್‌ನ ಜೆನಕೆ ಸುಮಾರ್ ರಿಯಾಯಿತಿಗ ಅನುಕೂಲತೆಗ ಸಿಕ್ಕಿದೊ. ಕೆಳಗೆನ ಕೊಡಗ್‌ನ ಜೆನಕೆ ಈ ಅನುಕೂಲತೆಗ ಸಿಕ್ಕದೆ ಕೆನರಾ ಜಿಲ್ಲೆಗೆ ಅನ್ವಯ ಆವ ಕಾನೂನುಗ ಅವ್‌ಕೆ ಅನ್ವಯ ಆತ್.

**ಕಾರಣಗ :** ಈ ಬಂಡಾಯ ಜೆನತಾ ಬಂಡಾಯ, ರಾಜ ಇಲ್ಲದೆನೂ ರಾಜ ಒಬ್ಬ ಉಟ್ಟು ತೇಳುವ ಕಲ್ಪನೆನ ಇಸಿಕಂಡ್ ನಡ್‌ದ ಹೋರಾಟ ಆಗಿತ್ತ್. ಜೆನತೆನ ಹೋರಾಟಲಿ ಬಾಗಿಯಾಕನ ಬೇರೆ ಬೇರೆ ಜೆನಕೆ ಬೇರೆ ಬೇರೆ ಕಾರಣಗ ಇದ್ದದೆ. ಹಾಂಗೆ ಸುಮಾರ್ ಸಂಗತಿಗಳ್‌ಂದ ಬಂಡಾಯ ಆಕೆ ಕಾರಣ ಆತ್.

**ದುಡ್ಡ್‌ನ ಸಮಸ್ಯೆ :** 1805–07ರ್‌ಲಿ ಕೆನರಾ ಜಿಲ್ಲೆಲಿ 'ತೆರಿಗೆನ ಏರ್‌ಸಿದ್ ಬಾರಿ ಹೆಚ್ಚಿ ಆಗಿತ್ತ್. ಇದರೊಟ್ಟಿಗೆ ದುಡ್ಡುನ ಸಮಸ್ಯೆನೂ ಸುರು ಆಗಿತ್ತ್. ಬ್ರಿಟೀಸರ್ ರಾಜರ್‌ಗಳ ಆಡಳ್‌ತೆ ಕಾಲಲಿ ವಸ್ತುರೂಪನ ತೆರಿಗೆನ ತೆಗ್ದ್ ದುಡ್ಡುನ ರೂಪಲಿ ತೆರಿಗೆ ಹಾಕಿದೊ. ಅದರ್‌ಂದಾಗಿ ರೈತರ್ ಬಾರಿ ಕಮ್ಮಿ ಕ್ರಯಕೆ ತಮ್ಮ ಬೆಳೆ ಮಾರಾಟ ಮಾಡಿ ತೆರಿಗೆ ಕಟ್ಟಿಕಾಗದ ಸ್ತಿತಿಗೆ ಹೋದೊ. ಈ ಸ್ತಿತಿನ ಬಗ್ಗೆ ಕೆಲೊವು ಒಳ್ಳ ಬೆಳ್‌ವಣಿಗೆಗ ಆದೊ. ನಿರೀಕ್ಸೆ ಮಾಡ್‌ತ್‌ಲೆರು ಅದ್‌ಕೆ ವಿರುದ್ದಾಗಿ ನಾ ನೋಡ್‌ದ ಕೆಲ ಪ್ರದೇಸಗಳ ಪರಿಸ್ತಿತಿ ಹಿಂದೆಂದಳು ಕೆಟ್ಟದಾಗಿತ್ತ್ ತೇಳಿ ರೈತ್‌ವಾರಿ ಪೊದ್ದತಿ ಜಾರಿಲಿ ಪ್ರಮುಕರಾಗಿದ್ದ ಅಲೆಕ್ಸಾಂಡರ್ ರೀಡ್ ಬರ್‌ದೊಳೊ. ಬಂಡಾಯ ನಡೆತ್ತಿದ್ದ ಕಾಲಲಿ 1835ರ ಇಂಡಿಯನ್ ಕರೆನ್ಸಿ ಕಾಯ್‌ದೆ ಪ್ರಕಾರ ಆದ ಚಿನ್ನದ ಡಿಮಾನಿಟೈಸೇಷನ್ ಸನು ದುಡ್ಡ್‌ನ ಸಮಸ್ಯೆನ ಜಾಸ್ತಿ ಮಾಡ್‌ದರ ಪಿ. ಜೆ. ತಾಮ್ಸನ್ ತಿಳ್‌ಸಿ ಯೊಳೊ. ತಲಚೇರಿನ ಬ್ರಿಟಿಸ್ ಅದಿಕಾರಿ ಎಪ್. ಸಿ. ಚ್ರಾನ್ 1838ರ್‌ಲಿ ಬರ್‌ದ ಪ್ರಕಾರ ಕೆನರಾಲಿ ಸೇಕಡಾ 70ರಸ್ಟ್ ತೆರಿಗೆ ಅಲ್ಲದೆ; ಸುಂಕಗ ರೈತನ ನಿರಾಸಕ್ತಿಗೆ ದೂಡ್ತ್. ಈ ಎಲ್ಲದರ್‌ಂದಾಗಿ 1834ರ ಸುರೂಲೆ ಕರಾವಳಿಲಿ ರೈತರ ಬಂಡಾಯಗ ನಡ್‌ದರ ಗಮನ್‌ಸಕ್. 1810–11ರ್‌ಲಿ ಕರಾವಳಿಲಿ ರೈತರ ಬಂಡಾಯ ನಡ್‌ದಿತ್ತ್. 1830–31ರ್‌ಲಿ ಕೂಟ ಬಂಡಾಯ ನಡ್‌ದಿತ್ತ್. ಈ ಬಂಡಾಯಗ ದುಡ್ಡ್‌ನ ಸಮಸ್ಯೆ ಇದ್ದದರ ತಿಳ್ಸಿದೆ.

ದುಡ್ಡ್‌ನ ಸಮಸ್ಯೆ ಮಾತ್ರ ಅಲ್ಲ, ಎಪ್. ಸಿ. ಚ್ರಾನ್ ಹೇಳ್‌ವ ಪ್ರಕಾರ, ಅಮೇರಿಕಾದ ಹೊಸೊಪ್ಪುನ ಭಾರತಲಿ ಮಾಡ್‌ದಕೆ ಇಲ್ಲಿನ ರೈತರ್ ಹೊಸೆಪ್ಪು ಬೆಳಿಯದಂಗೆ ಮತ್ತೆ ಕರಾವಳಿಲಿ ಕಡಲ್ ಇದ್ದರೂ ಉಪ್ಪು ತಯಾರ್‌ಸದಂಗೆ ಜೆನಕೆ ನಿಸೇದ ಹೇರ್‌ದೊ.

ಸುಂಕ ನಿಗದಿಪಡ್‌ಸಿಕೆ ಬ್ರಿಟಿಸರ್ ರೈತರ ಜಮೀನ್‌ನ ಅಳ್‌ತೆ ಮಾಡ್‌ಸಿ, ರೈತರಿಗೆ ಸುಂಕ ಹೆಚ್ಚ್‌ಸಿಕೆ ಮಾಡ್‌ದ ಯೋಜೆನೆನಂಗೆ ಕಂಡದೆ. ಬ್ರಿಟಿಸ್ ಕಾರ್‌ಯಾಂಗ ಮತ್ತೆ ನ್ಯಾಯಾಂಗದ ಕಚೇರಿಗ ತೆಗಿಯಕೆ ಸುರು ಆದಂಗೆ ಹಿಂದೆನ ಗ್ರಾಮ ಮುಕಂಡರ ಅದಿಕಾರಗ ಹೊರ್‌ಟ್ ಹೋದೊ. ಇದರೊಟ್ಟಿಗೆ ತಮ್ಮ ರಾಜನ ಪದಚ್ಯುತಿನೂ ಅಸಮಾದಾನನ ಹುಟ್ಟ್ ಹಾಕಿ 1834–37ರ ಜೆನತಾ ಬಂಡಾಯಕೆ ಕಾರಣ ಆತ್. ಆ ಬಂಡಾಯನ ಮೂರ್ ಹಂತಗಳ್‌ಲಿ ಅರ್‌ತಮಾಡಿಕಣಕ್.

ಸ್ವಾಮಿ ಅಪರಂಪಾರ ಕೊಡಗ್ ಮತ್ತೆ ದಕ್ಷಿಣಕನ್ನಡ 'ಅಮರಸುಳ್ಯ ಜೆನ ಒಬ್ಬ ನಾಯಕ. **(ನೋಡಿ: ಸ್ವಾಮಿ ಅಪರಂಪಾರ)** ಅಪ್ಪಾಜಿ ಅರಸರ ಮಜ್ಜ ವೀರರಾಜ ಅರಸ ತೇಳಿ ಜೆನ ಗ್ರೇಸಿರು ಅವೆಲ್ಲೂ ನಾ ವೀರರಾಜ ಅರಸಾಂತ ಹೇಳಿಕಂಡತ್‌ಲೆ. ಅವರ ಹಿನ್ನೆಲೆನ ವಿಚಾರಿಸಿದವ್‌ಕೆ 'ನಾನಾವ ಮಹಾ ಪುರುಸನೂ ಅಲ್ಲ. ನಾ, ನನ್ನ ನೋಡಿಕೆ ಬಂದವರ ಕೀಳ್ ಸೇವಕ ತೇಳಿದ್ ಉತ್ತರ ಕೊಡ್‌ತಿದ್ದೊ. 1835ರ ಮೇ ತಿಂಗಳ ಕಡೇಗಾಕನ ಸ್ವಾಮಿ ಅಪರಂಪಾರ ಕೆಲ ಜಂಗಮರ್ ಮತ್ತೆ ಬಟ್ಟರೊಟ್ಟಿಗೆ ಕೊಡಗ್‌ನ ಕೊಡಲಿಪೇಟೆಗೆ ಬಂದಿದ್ದೊ. ಅಲ್ಲಿಂದ ಹಾರಂಗಿಗೆ ಹೋಗಿದ್ದೊ. ಹಾರಂಗಿಲಿ ಅವರ ಪರಿವಾರದೊಟ್ಟ್‌ಗೆ ದಳವಾಯಿ ವೆಂಕಟಪ್ಪನಲ್ಲಿ ನಿತ್ತಿದ್ದೊ. ಅಲ್ಲಿಂದ ಹಾಲೇರಿಗೆ ಹೋಗಿ, ಹಾಲೇರಿಂದ ಕೊಡಗ್‌ನ ಉತ್ತರದ ಗಡಿನ ದಾಟಿ ಕೆಂಚಮ್ಮನ ಹೊಸಕೋಟೆಗೆ ಹೋದೊ. ಅಲ್ಲಿ ಅವರೊಟ್ಟ್‌ಗೆ ಸುಮಾರ್ 70 ಜೆನಂಗ ಇದ್ದೊ. ಅವರ್‌ಲಿ ಮತ್ತೆ 30 ಜೆನ ಕೊಡಗ್‌ಗೆ ವಾಪಾಸ್ ಬಂದೊ.

ಕೆಂಚಮ್ಮನ ಹೊಸಕೋಟೆಂದ ಅಪರಂಪಾರ ಕೊಡಗ್‌ನ 20 ಜೆನರೊಟ್ಟಿಗೆ ಕುಕ್ಕೆ ಸುಬ್ರಹ್ಮಣ್ಯಕೆ ಬಂದೊ. ಅಲ್ಲಿಂದ ಹಜ್ಞ ದೂರಲಿದ್ದ ಕೂಜುಗೋಡು ಕಟ್ಟೆಮನೆಲಿ ಆಸ್ರಯ ಪಡ್‌ಕಂಡೊ. ಕೂಜುಗೋಡು ಕಟ್ಟೆಮನೆ ಪಟೇಲರ್ ಕೊಡಗ್‌ನ ರಾಜರಾಗಿದ್ದ ಲಿಂಗರಾಜ ಮತ್ತೆ ಚಿಕ್ಕವೀರರಾಜರ ಆಪ್ತರಾಗಿದ್ದೊ.

ಕೂಜುಗೋಡು ಕಟ್ಟೆಮನೆಲಿ ಕೆಲ ಕಾಲ ಇದ್ದ್, ಮತ್ತೆ ಸ್ವಾಮಿ ಅಪರಂಪಾರ ಕೆಂಚಮ್ಮನ ಹೊಸಕೋಟೆಗೆ ಹೋದೊ. ಆಗ ಅವರ ಅನುಯಾಯಿಗ ಅಪರಂಪರ ಅವ್ ವೀರರಾಜ ತೇಳಿ ಗೋಸಣೆ ಮಾಡ್‌ದೊ. ಅಪರಂಪರ ಸನ ಕೊಡಗ್‌ನ ರಾಜರ್ ಹಾಕ್‌ತಿದ್ದ ಬಟ್ಟೆನ ಕೊಂಬು ಟೊಪ್ಪಿನ ಹಂಗೆ ಇದ್ದ ಟೊಪ್ಪಿನ ಹಾಕಂಡ್ ರಾಜರ ಚಿನ್ನೆಗಳ ತೊಡ್‌ತಿದ್ದೊ. ಆಗ ಸ್ವಾಮಿ ಅಪರಂಪಾರ ಅವೇ ಇನ್ನ್ ಕೆಲ ದಿನಲೆ ಕೊಡಗ್‌ಲಿ ಬಂಡಾಯ ನಡೆಕುಟ್ಟು, ನನ್ನ ಒಟ್ಟ್‌ಗೆ ಸೇರ್‌ದವ್‌ಕೆ ಬವುಸ ಸಿಕ್ಸೆಯಾದುತೇಳಿ ಅವರೊಟ್ಟಿಗೆನ ಬರತಿದ್ದ ಬೆಂಬಲಿಗರ್‌ಗೆ

ಎಚ್ಚರ್‌ಕೆ ಕೊಟ್ರೊ. ಆದರೆ ಒಬ್ಬನೇ ಒಬ್ಬ ಬೆಂಬಲಿಗನೂ ಅವರ ಬುಟ್ಟ್ ಹೋತ್‌ಲೆ. ತನ್ನೊಟ್ಟಿಗೆ ಇದ್ದ ಬೆಂಬಲಿಗರ ಕರ್‌ಕಂಡ್ ಅಪರಂಪಾರ ಅವು ಕೊಡಗ್‌ನ ಹುಗ್ಗಿದೊ ಕೊಡಗ್‌ನ ಸುಮಾರ್ ಜೆನಗ ಅಪರಂಪಾರ ಅವರೊಟ್ಟಿಗೆ ಸೇರಿಕಂಡೊ. ಹಂಗೆ ಜೆನ ಅಪರಂಪಾರ ಅವರ್‌ನ ಅಪ್ಪಾಜಿ ಅರಸರ ಮಜ್ಜತೇಳ್‌ವ ಗೌರವಂದ ಸತ್ಕರ್‌ಸಿದೊ. ಬ್ರಿಟಿಸರ ಬದ್ರ ಆಡೆಳ್ತೆ ಇದ್ದ ಕಾರಣಕೆ, ಬ್ರಿಟಿಸರ ಎದ್‌ರಿಸಿ ಹಿಂದೆನ ರಾಜರ ಅದಿಕಾರಕ್ಕೆ ತಾದು ಕಸ್ಟತ ಹೇಳ್‌ದೊ.

ಜೆನರ ಮಾತ್‌ಂದ ನಿಜನ ತಿಳ್‌ಕಂಡ ಅಪರಂಪಾರ ಮಡಿಕೇರಿಗೆ ಹೋಗದೆ, ದಿಕ್ಕ್ ಬದ್‌ಲಿಸಿಕಂಡ್ ಬಿಸಿಲೆ ಗಾಟಿನ ಕಡೆಂದ ಇಂದ್‌ನ ದಕ್ಷಿಣಕನ್ನಡ ಜಿಲ್ಲೆಲಿರ್‌ವ **(ನೋಡಿ:ದಕ್ಷಿಣಕನ್ನಡ ಜಿಲ್ಲೆ)** ಕಡಬಕೆ ಹೋದೊ. ಅದೇ ಹೊತ್ತುಗೆ ಕೊಡಗ್‌ಗೆ ಸೂಪರ್‌ಟೆಂಡೆಂಟಾಗಿ ಲೀಹಾರ್ಡಿನ ನೇಮಕ ಮಾಡಿದ್ದೊ.

ಅಪರಂಪಾರ ಕೊಡಗ್‌ನ ಪ್ರವೇಸ ಮಾಡ್ತ್‌ತ ಗೊತ್ತಾದಂಗೆನೆ ಲೀಹಾರ್ಡಿ ಕ್ರಮ ತಕಂಬದರ ಬಗ್ಗೆ ದಿವಾನರ ಸಲಹೆ ಕೇಳಿಕಾಕನ ಅಪರಂಪಾರರ ಗುಮನಕೆ ತಕಣದಿದ್ದರಾತ್‌ತ ಹೇಳ್‌ದೊ. ಲೀಹಾರ್ಡಿ ಅಪರಂಪಾರರ ಮೇಲೆ ಒಂದ್ ಕಣ್ಣಿಸಿಕೆ ಜೆನರ ಬುಟ್ಟ್ ಏನೂ ಗೊತ್ತೇ ಇಲ್ಲದಂಗೆ ಇದ್ದೊ. ಲೀಹಾರ್ಡಿನ ಗುಪ್ತಚರರ್ ಸೋಮವಾರಪೇಟೆಗೆ ಎತ್ತ್‌ವ ಹೊತ್ತ್‌ಗೆ ಅಪರಂಪಾರ ಅವು ಒಟ್ಟಿಗಿದ್ದವರೊಟ್ಟಿಗೆ ಕಡಬಕ್ಕೆ ಹೋಗಿ ಮುಟ್ಟಿದೊ. ಕೂಡ್‌ಲೆ ಎಚ್ಚರಲಿದ್ದ ಲೀಹಾರ್ಡಿ ಕೊಡಗ್‌ನ ಕೆಲ ಸೈನಿಕಂಗ ಮತ್ತೆ ಬ್ರಿಟಿಸ್ ಸೈನಿಕರ ಒಟ್ಟ್ ಮಾಡಿ ಕಡಬಕೆ ಕಳ್‌ಸಿದೊ. ಲೀಹಾರ್ಡಿ ಕಳ್‌ಸಿದ ಸೈನಿಕರ್ ಬಂದೊತ ಅಪರಂಪಾರ ಅವ್‌ಕೆ ಗೊತ್ತಾತ್. ಅವರೊಟ್ಟಿಗಿದ್ದವ್‌ಕೆ ಕಾಡ್‌ಕುರ್‌ಬರ ವೇಸಲಿ ಅವರವರ ಊರ್‌ಗೆ ಹೋಕೆ ಹೇಳ್‌ದೊ. ಅಪರಂಪಾರ ಮತ್ತೆ ಕೆಲೊವ್ ಜೆನ ಒಟ್ಟಿಗಿದ್ದವರೊಟ್ಟಿಗೆ ಕೂಡಿಕಂಡ್ ಸಿವಮೊಗ್ಗ ಸೀಮೆನ ಪೇಟೆ ಕಡೆಗೆ ಹೊರ್‌ಟೊ. ಹಂಗೆ ಹೋಕನ ಅಪರಂಪಾರ ಅವರ ಮಂಜರಾಬಾದ್ ಕೋಟೆ ಹಕ್ಕಲೆ ಬ್ರಿಟಿಸ್ ಸೈನಿಕರ್ ಹಿಡ್‌ದೊ. ಅಲ್ಲಿಂದ ಅವರ ತಿರುಚನಾಪೊಳ್ಳಿ ಜೈಲಿಗೆ ಹಾಕಿದೊ. 34 ವರ್‌ಸಗಳ ಸೆರೆವಾಸಲಿದ್ದ್ ಕಡೇ ಕಾಲಲಿ ಸೆರೆಂದ ಬುಡ್ಗಡೆ ಆಗಿ ಬೆಂಗ್ಳೂರ್‌ಗೆ ಬಂದೊ. ಸರ್‌ಕಾರ ಅವರ ಮೈಸೂರ್‌ಲಿ ಇರಿಕೆ ಸೂಚನೆ ಕೊಟ್ಟತ್. ಹಂಗೆ ಮೈಸೂರ್‌ಗೆ ಹೋಕನ ದಾರಿಲೆ 1870ರ್‌ಲಿ ಅಪರಂಪಾರ ಶ್ರೀರಂಗಪಟ್ಟಣಲಿ ತೀರಿಕಂಡೊ.

**ಕಲ್ಯಾಣಸ್ವಾಮಿ :** ಕಲ್ಯಾಣಪ್ಪ ಸ್ವಾಮಿ ಅಪರಂಪಾರನ ಸಿಸ್ಯ. ಅಪರಂಪಾರ ಶಿವಮೊಗ್ಗದ ನಗರಕೆ ಹೊರಟಿರ್‌ಕನ ಅವರವರ ಊರ್‌ಗೆ ಹೋಕೆ ಕಳಿಸಿದವರ್‌ಲಿ ಇವೂ ಒಬ್ಬ. 1835ರ್‌ಲಿ ಅಪರಂಪಾರನ ಬ್ರಿಟಿಸರ್ ಸೆರೆ ಹಿಡ್‌ದ ಮೇಲೆ ಜಂಗಮ ವೇಸಲಿ ಇದ್ದ ಕಲ್ಯಾಣಪ್ಪನ ಜೆನ ಕಲ್ಯಾಣಸ್ವಾಮಿತ ಕರೆತಿದ್ದೊ. ಕಲ್ಯಾಣಸ್ವಾಮಿ ನಾ ಅಪ್ಪಾಜಿ ಅರಸರ ಮಜ್ಜ ನಂಜುಂಡರಸ, ಕೊಡಗ್‌ನ ಸಿಂಹಾಸನದ ಮೇಲೆ ನಂಗೆ ಹಕ್ಕುಟ್ಟುತ ವಾದ ಮಾಡಿಕೆ ಸುರ್ ಮಾಡ್‌ದೊ.. ಅಪರಂಪಾರ ಅವ್‌ಕೆ ಇದ್ದ ಹಿಂಜರಿಕೆಗ ಕಲ್ಯಾಣಸ್ವಾಮಿಗೆ ಇತ್ತ್‌ಲೆ. ಕಲ್ಯಾಣಸ್ವಾಮಿಗೆ ಅಪರಂಪಾರಂದ ಹೆಚ್ಚಿಗೆ ಬೆಂಬಲಿಗರ್ ಇದ್ದೊ. ಕಲ್ಯಾಣಸ್ವಾಮಿನ ಬೆಂಬಲಿಗರ್‌ಲಿ ಹುಲಿಕೊಂದ ನಂಜಯ್ಯ ಅವ್ ಮುಕ್ಯ ಆಗಿದ್ದೊ. ಅವ್ ಜಂಗಮರಾಗಿದ್ದ್ ಕೊಡಗ್‌ನ ರಾಜರ್‌ಂದ ಗುರ್‌ತಿಸಿಕಂಡ ಲಿಂಗಾಯತ ಮಟದ ಉಸ್ತುವಾರಿನ ಪಡ್‌ಕಂಡಿದ್ದೊ. ನಂಜಯ್ಯನವ್‌ಕೆ ಬಲಮುರಿನ ಸುಬೇದಾರ್ ಗುಡ್ಡೆಮನೆ ಅಪ್ಪಯ್ಯ ಗೌಡ, ಬಂಟ್ವಾಳ ಹಕ್ಕಲೆನ ಬೀರಣ್ಣ ಬಂಟ, ಕುಂಬಳೆನ ಸುಬ್ರಾಯ ಮಮ್ಮಿಡ ರಂಗಪ್ಪತೇಳೊವ್ ಬೆಂಬಲಿಗರಾಗಿದ್ದೊ. ಕಲ್ಯಾಣಸ್ವಾಮಿನ ಬೆಂಬಲಿಗರ್ ಕೊಡಗ್‌ನ ರಾಜವಂಸಕೆ ನಿಯತ್ತ್‌ಲಿ ಇರವರ ಹುಡ್‌ಕಿಕಂಡ್ ಆ ವಲಯಲಿ ಅಪ್ಪಾಜಿ ಅರಸರ ಎರಡ್‌ನೇ ಮಜ್ಜನಂಜುಂಡ ಅರಸ ಕೊಡ್ಲಿಪೇಟೆಂದ ಕೊಡಗ್‌ಗೆ ಬಂದವೆ. ಈ ಹೊತ್ತುಗೆ ಜೆನಗ ಆಯುದನ ತಕಂಡ್ ನಂಜುಂಡ ಅರಸರ ಸಂದಾಯಕೆ ಬರೋಕು, ಮಡಿಕೇರಿ ಕೋಟೆಗೆ ಮುತ್ತಿಗೆ ಹಾಕೋಕು ತೇಳಿ ಪ್ರಚಾರ ಸುರು ಮಾಡ್ದೊ. ಅದೇ ಹೊತ್ತುಗೆ ಈಗದ ದಕ್ಷಿಣಕನ್ನಡ ಜಿಲ್ಲೆನ ಸುಳ್ಯ ಮತ್ತೆ ಬೆಳ್ಳಾರೆಲಿ ಜೆನಗ ದಂಗೆ ಎದ್‌ರಿಕೆ ಯೋಜೆನೆನ ಮಾಡಿಯೊಳ ತೇಳಿ ಪ್ರಚಾರ ಮಾಡ್‌ದೊ.

ಕೊಡಗ್‌ಲಿ ಬ್ರಿಟಿಸರ ಆಡಳ್‌ತೆ ಜಾರಿಗೆ ಬಂದ ಮೇಲೆ ಲಕ್ಷ್ಮೀನಾರಾಯಣ, ಅಪ್ಪಾರಂಡ ಬೋಪು, ಚೆಪ್ಪುಡೀರ ಪೊನ್ನಪ್ಪ ಮೂರೂ ಜೆನ ಚಿಕ್ಕವೀರರಾಜರ ದಿವಾನರಾಗಿದ್ದ ಇವು ದಿವಾನರಾಗಿ ಮುಂದುವರ್‌ದರೂ ಲಕ್ಷ್ಮೀನಾರಾಯಣ ಅವ್ಕೆ ಹಿಂದೆನಸ್ಟ್ ಜವಾಬ್ದಾರಿ ಇತ್ಲೆ. ಲಕ್ಷ್ಮೀನಾರಾಯಣ ಅವು ತನ್ನ ಅದಿಕಾರನ ಮತ್ತೆ ಪಡ್ಕಂಬಕೆ ಲೀ ಹಾರ್‌ಡಿನ ಹಕ್ಕಲೆ ಹೋದೊ. ಅಪ್ಪಾಜಿ ಅರಸರ ಮಜ್ಜ ನಂಜುಂಡರಸ ಮಡಿಕೇರಿಗೆ ಬಂದಿದ್ದೊ. ಜೆನಗ ನಂಜುಂಡರಸರ್‌ಗೆ ಉಪಕಾರ ಮಾಡಿಕೆ ಒಪ್ಪಿಯೊಳೊ ತೇಳ್‌ವ ವಿಚಾರ ಅಪ್ಪಾರಂಡ ಬೋಪು ಮತ್ತೆ ಚೆಪ್ಪುಡೀರ ಪೊನ್ನಪ್ಪ ಅವ್‌ಕೆ ತಿಳ್‌ದುಟು ತೇಳ್‌ದೊ. ಈ ವಿಸಯನ 'ಮಲ್ಲ' ತೇಳ್‌ವ ಗೂಡಾಚಾರಿ ಲೀಹಾರ್‌ಡಿಗೆ ತಿಳ್ಸಿಟುತ ಹೇಳ್‌ದೊ. ಆದರೆ ಅಂವ ಲೀಹಾರ್‌ಡಿನ ಬೇಟಿ ಮಾಡದೆ ಊರ್‌ಗೆ ಹೋವಂಗೆ ಲಕ್ಷ್ಮೀನಾರಾಯಣ ಮಾಡ್‌ದೊ. ಕೆಳಗೆನ ಕೊಡಗ್‌ಲಿ ಬ್ರಿಟಿಸರ ಬಗ್ಗೆ ಅಸಮಾದಾನ ಆದ ಬಗ್ಗೆನೇ ಕಪ್ಪ ತಂದ ಸುದ್ದಿನ ಲಕ್ಷ್ಮೀನಾರಾಯಣ ಲೀಹಾರ್‌ಡಿಗೆ ತಿಳಿಸಿತ್ತ್‌ಲೆ. ಇದರ್‌ಂದ ಲೀಹಾರ್‌ಡಿಗೆ ಲಕ್ಷ್ಮೀನಾರಾಯಣರ ಮೇಲೆನೇ ಸಂಸಯ ಬಂದ್ ತತ್ಕಾಲ ಲಕ್ಷ್ಮೀನಾರಾಯಣರ ಹುದ್ದೆಂದ ತೆಗ್ದ್ ವಿಚಾರಣೆಗೆ ಆದೇಸಿಸಿದೊ. ಮತ್ತೆ ಲಕ್ಷ್ಮೀನಾರಾಯಣರ ಮೇಲೆನ ಸಂಸಯಕ್ಕೆ ಆದಾರ ಸಿಕ್ಕದೆ ಕುಲಾಸೆ ಆದೊ. ಆದರೆ ಲಕ್ಷ್ಮೀನಾರಾಯಣರ ಹೆಣ್ಣ್‌ನ ಸಹೋದರ ಕಾರಬಾರ ಸುಬೇದಾರಕೃಷ್ಣ ಮತ್ತೆ ಲಕ್ಷ್ಮೀನಾರಾಯಣ ಅಳಿಯ ಕರಣಕ ಸುಬ್ಬಯ್ಯ ಅವ್ ಬಂಡಾಯಗಾರರಾಗಿದ್ದೊ.




ಕಲ್ಯಾಣಸ್ವಾಮಿ ಕೊಡ್‌ಲಿಪೇಟೆಂದ ಕೊಡಗ್‌ಗೆ ಪ್ರವೇಸ ಮಾಡ್‌ದೊ. ಅವು ಗಡಿನಾಡ್ ಎಮ್ಮತ್ತ್‌ನಾಡ್‌ಗೆ ಬಾಕನ ಅಲ್ಲಿನ ಜೆನಂಗ ಕಲ್ಯಾಣಸ್ವಾಮಿನ ತಮ್ಮ ರಾಜವಂಸದೊವ್ ತೇಳಿ ತಿಳ್ಕಂಡ್ ಗುಟ್ಟ್‌ಲಿ ಬಕ್ತಿಂದ ನಡ್‌ಕೊಂಡೊ. ಆದರೆ ಕಲ್ಯಾಣಸ್ವಾಮಿಗೆ ಕೊಡಗ್‌ಲಿ ಹೆಚ್ಚಿಗೆ ಬೆಂಬಲ ಸಿಕ್ಕಿಕ್ಕಿಲೆ ತೇಳಿ ಇಂದ್‌ನ ದಕ್ಷಿಣಕನ್ನಡಕೆ ಬಂದ್ ಬಂಡಾಯದ ಸಂಗಟನೆನ ಮಾಡಿಕೆ ಕಲ್ಯಾಣಸ್ವಾಮಿ ಆಲೋಚನೆ ಮಾಡಿದ್ದೊ. ಆಗ ಬೆಂಬಲಿಗರ್, ಸೀದಾ ದಕ್ಷಿಣಕನ್ನಡಕೆ ಹೋದರೆ ಬ್ರಿಟಿಸರ್‌ಗೆ ಸಿಕ್ಕಿ ಬೀಳ್‌ವ ಸಾದ್ಯತೆ ಉಟ್ಟುಂತೇಳಿ ಕಲ್ಯಾಣಸ್ವಾಮಿನ ಗುಟ್ಟಾಗಿ ಕೇರಳದ ವಯನಾಡ್‌ಗೆ ಕಳ್‌ಸಿದೊ. ಕಲ್ಯಾಣ ಸ್ವಾಮಿ ವಯನಾಡ್‌ಂದ ಮೈಸೂರ್‌ಗೆ ಹೊರ್‌ಟೊ. ಮೈಸೂರ್‌ಗೆ ಹೊರ್‌ಟ ಕಲ್ಯಾಣಸ್ವಾಮಿನ 1837ರ ಜೂನ್ ತಿಂಗಳ್‌ಲಿ ಮಲಬಾರ್‌ನ ಸಿಪಾಯಿಗಳ ಉಪಕಾರಲಿ ಲೀಹಾರ್‌ಡಿ ಸೈನಿಕಂಗ ಬೈತೂರ್‌ಲಿ ಸೆರೆ ಹಿಡ್‌ದೊ.

**ಹುಲಿಕಡಿದ ನಂಜಯ್ಯ:** ಅಬಿನವ ಕಲ್ಯಾಣಸ್ವಾಮಿ ತೇಳುವ ಪಾತ್ರನ ಕಟ್ಟಿದವು ಹುಲಿಕಡಿದ ನಂಜಯ್ಯ. ಇವ್ ತಿರುಚನಾಪೊಳ್ಳಿ, ಗ್ವಾಲಿಯರ್, ಲಾಹೋರ್‌ಗೆಲ್ಲ ಪ್ರವಾಸ ಮಾಡಿ ಬಂದೊವ್. ಆದರೆ ಆ ಪ್ರವಾಸದ ಉದ್ದೇಸ ಎಂತತ ಯಾರಿಗೂ ಗೊತ್ತ್‌ಲೆ. ಹಂಗೆನೆ ಇವು ಹೋದಲೆಲ್ಲ ಕಬ್ಬಣದ ಹೂಜಿನ ತಕಂಡ್ ಹೋತಿದ್ದೊ. 1857ರ್‌ಲಿ ನಡ್‌ದ ಕ್ರಾಂತಿಲಿ ಚಪಾತಿ ಕೊಟ್ಟ್‌ಕಂಡ್ ಹೋದರೆ ಕ್ರಾಂತಿನ ಸಂಗಟನೆ ಇಡಿ ಆತ್‌ತೇಳಿ ಅರ್‌ತ ಇತ್ತ್. ಹಂಗಾಗಿ ನಂಜಯ್ಯನವ್ ತಕಂಡ್ ಹೋಗತಿದ್ದ ಹೂಜಿ ಬಂಡಾಯಕೆ ಸಮ್ಮಂದಪಟ್ಟ ಯಾದೋ ಸಂದೇಸನ ಹೊರತಿತ್ತ್ ತೇಳಿ ತೀ. ತಾ. ಶರ್ಮ ಅವ್ ಅಬಿಪ್ರಾಯ ಪಟ್ಟೊಳೊ.

ಹೆಮ್ಮಾನಿ ಗ್ರಾಮದ ರೈತ ಅಬಿನವ ಕಲ್ಯಾಣಸ್ವಾಮಿ ಕೊಡಗ್‌ನ ಏಳ್ ಸಾವಿರ ಸೀಮೆನ ಸನಿವಾರಸಂತೆ ತೇಳ್‌ವ ಊರೊವಾಗಿದ್ದೊ. ಇವರ ಬಸಪ್ಪ ಮತ್ತೆ ಮರಿಬಸಪ್ಪ ತೇಳ್‌ವ ಹೆಸ್‌ರ್‌ಲಿನು ಕರೆತ್ತಿದ್ದೊ. ಜಂಗಮನ ಹಾಂಗೆ ಬೊದ್ಕುದು ಪುಟ್ಟಬಸಪ್ಪ ಅವರ ಸೊಬಾವ ಆಗಿತ್ತ್. ಮಡಿಕೇರಿಲಿ ಅರಮನೆನ ಕಟ್ಟಿಕಾಕನ ಪುಟ್ಟಬಸಪ್ಪ ಅರಮನೆಗೆ ಸಾಮಾನ್‌ಗಳ ಹೊತ್ತ್ ತಕಂಡ್ ಹೋಗಿ ಬೊದ್ಕ್ ನಡ್‌ಸ್‌ತಿದ್ದೊ. ಮತ್ತೆ ಹೋಬಳಿ ಕಚೇರಿನ ಕಾವಲುಗಾರ ಆಗಿದ್‌ನು ಕೆಲ್‌ಸ ಮಾಡಿದ್ದೊ. ಪುಟ್ಟಬಸಪ್ಪ ಅವರ ಈ ವಿಚಿತ್ರ ವರ್‌ತನೆಂದಾಗಿ ಅವರ ಹೆಣ್ಣ್ ಅವರ ಬುಟ್ಟ್ ಹೋಗಿದ್ದೊ. ಅದಾಗಿ ಪುಟ್ಟಬಸಪ್ಪ ಅವ್ ಸ್ವಾಮಿ ಅಪರಂಪಾರ ಅವರೊಟ್ಟಿಗೆ ಸೇರಿಕಂಡೊ. ನಂಜಯ್ಯನವ್‌ಕೆ ಅಪರಂಪಾರನ ಪರಿಚಯ ಆಗಿತ್ತ್. ಹಿಂಗೆ ಪುಟ್ಟಬಸಪ್ಪನೂ ನಂಜಯ್ಯ ಅವ್‌ಕೆ ಪರಿಚಿತರಾದೊ. ಕಲ್ಯಾಣಸ್ವಾಮಿನ ಬ್ರಿಟಿಸರ್ ಸೆರೆ ಹಿಡಿಯಕನ ಕಲ್ಯಾಣ ಸ್ವಾಮಿನ ಹೋಲ್‌ವ ಪಾತ್ರದಾರಿ ಒಬ್ಬನ ಅಗತ್ಯ ಇತ್ತ್. ಆ ಪಾತ್ರದಾರಿ ಅಲ್ಲೇ ಇರ್‌ವ ಪರಿಸರಲಿ ಪರಿಚಯ ಇಲ್ಲದವ್ ಆಗಿರ್‌ದು ಅಮರ ಸುಳ್ಯದ ಅಂದ್‌ನ ಅಗತ್ಯ ಆಗಿತ್ತ್. ಕಲ್ಯಾಣಸ್ವಾಮಿನ ಹಾಂಗೆ ನಟ್‌ಸಿಕೆ ಪುಟ್ಟಬಸಪ್ಪನೆ ಸೂಕ್ತ ತೇಳಿ ನಂಜಯ್ಯ ಅವ್ ಕೆದಂಬಾಡಿ ರಾಮಯ್ಯ ಗೌಡರ ಹಕ್ಕಲೆ ಪುಟ್ಟಬಸಪ್ಪನ ಕರ್‌ಕಂಡ್ ಬಂದೊ.

**ಕೆದಂಬಾಡಿ ರಾಮಯ್ಯ ಗೌಡ :** ಕೆದಂಬಾಡಿ ರಾಮಯ್ಯ ಗೌಡರ 1837 ಬಂಡಾಯದ ನಾಯಕ ತೇಳಿ ಕರೆಯಕ್. ರಾಮಯ್ಯ ಗೌಡ್ರುಗೆ ಮೇಲೆನ ಕೊಡಗ್‌ಲಿನೂ ಮನೆ ಇತ್ತ್. ಅವ್ ಮೂಲಲಿ ಸುಳ್ಯದ ಹಕ್ಕಲೆ ಇರ್‌ವ ಉಬರಡ್ಕದ ಮೊದ್‌ವೆಗದ್ದೆ ಪ್ರದೇಸಲಿ ವಾಸಾಗಿದ್ದೊ. ರಾಮಯ್ಯ ಗೌಡರ ಸಮ್ಮಂದಿಗ ಎಲ್ಲ ಈ ಹಿಂದೆ ಕೊಡಗ್ ರಾಜರ ಸೇವೆಲಿ ಅದಿಕಾರಿಗಳಾಗಿ ಇದ್ದೊ. ಇವ್‌ಕೆ ಕೂಜುಗೋಡು ಕಟ್ಟೆಮನೆವು ಮುಕ್ಯ ಆಗಿದ್ದೊ. ಅಪರಂಪಾರ ಮತ್ತೆ ಕಲ್ಯಾಣಸ್ವಾಮಿನ ಪ್ರಯತ್ನಲಿ ಅವರ ಬಗ್ಗೆ ಬ್ರಿಟಿಸ್ ಆಡಳ್ತೆಗೆ ಅನುಮಾನಗ ಬಂದ ಹಿನ್ನೆಲೆಲಿ ಬಂಡಾಯದ ಕಡೆನ ಹಂತಿಲಿ ಸಂಗಟನಾ ಕೇಂದ್ರ ರಾಮಯ್ಯ ಗೌಡ್‌ರೆ ಆಗಿದ್ದೊ. ಪಂಜದ ಹೊಸೊಪ್ಪು ಸೇಕ್, ಸರಕಾಜೆ ಮಲ್ಲಯ್ಯ ಇವರೊಟ್ಟಿಗೆ ಕೊಡ್‌ಗ್, ತಿರುಚಿನಾಪೊಳ್ಳಿ, ಮೈಸೂರ್‌ಗಳ ಕಡೆಲೆಲ್ಲಾ ರಾಮಯ್ಯ ಗೌಡರ ಕೈ ಇತ್ತ್.

ರಾಮಯ್ಯ ಗೌಡರ್ ಅವರ ಮನೆನ ಹಕ್ಕಲೆ ಇದ್ದ ಪೂಮಲೆ ತೇಳ್‌ವ ಕಾಡ್‌ನ ಒಳೆಗೆ ಒಂದ್ ಆಸ್ರಮ ಮಾಡಿ ಅದರೊಳೆಗೆ ಪುಟ್ಟಬಸಪ್ಪನೊವು ಇರಿಕೆ ವೆವಸ್ತೆ ಮಾಡಿಕೊಟ್ಟೊ. ಪುಟ್ಟಬಸಪ್ಪನೊವ್‌ಕೆ ಕಲ್ಯಾಣಸ್ವಾಮಿನ ಸೊಬಾವದ ತರಬೇತಿನ ಇಲ್ಲಿಯೇ ಕೊಟ್ಟೊ. ಹಿಂಗೆ ಸುರಾದ ಅಬಿನವ ಕಲ್ಯಾಣಸ್ವಾಮಿನ ಜೆನ ತಮ್ಮ ರಾಜಂತೇಳಿ ತಿಳ್‌ಕಂಡೊ. ರಾಮಯ್ಯಗೌಡರ ಕೋರಿಕೆನಂಗೆ ಚಿಕ್ಕವೀರರಾಜರ್‌ಗೆ ಗುರಿ ಹೊಡೆಕೆ ಕಲ್‌ಸಿದ ಚೆಟ್ಟಿಕುಡಿಯ ಮತ್ತೆ ಕರ್‌ತು ಕುಡಿಯರ್ 20


ಕೆದಂಬಾಡಿ ರಾಮಯ್ಯ ಗೌಡ

ಜೆನರೊಟ್ಟಿಗೆ ಅಬಿನವ ಕಲ್ಯಾಣಸ್ವಾಮಿನೊಟ್ಟಿಗೆ ಸೇರಿಕಂಡೊ. ಬೆಡಿನ ತಯಾರ್ ಮಾಡ್‌ದರ್‌ಲಿ ಚುರುಕಾಗಿದ್ದ ಸುಳ್ಯದ ಆಚಾರಿಗಳ್‌ಂದ ರಾಮಯ್ಯ ಗೌಡರ್ ಕಳ್ಳಬೆಡಿಗಳ ಮಾಡ್‌ಸಿಕಂಡೊ. ಕೊಡ್ಲಿಪೇಟೆಂದ ಸುಮಾರ್ ಎರಡ್ ಸಾವ್‌ರ ಕತ್ತಿ ಮತ್ತೆ ಕಡ್‌ಗಂಗಳ ತರ್‌ಸಿದೊ. ಸುಳ್ಯದ ಗುತ್ತಿಗಾರ್ ಹಕ್ಕಲೆ ಇದ್ದ ಗುಡ್ಡೆಮನೆನ ಒಂದ್ ಕಬರ್ ಕೊಡಗ್‌ನ ಬಲಮುರಿಲಿ ನೆಲೆ ನಿತ್ತಿದ್ದೊ. ಈ ಸಾಕೆನ ಸುಬೇದಾರ್ ಗುಡ್ಡೆಮನೆ ಅಪ್ಪಯ್ಯ ಗೌಡರ್ ಅಬಿನವ ಕಲ್ಯಾಣ ಸ್ವಾಮಿನೊಟ್ಟಿಗೆ ಸೇರಿಕೊಂಡೊ. ಈ ಹೊತ್ತುಗೆ ದಿವಾನ್ ಲಕ್ಷ್ಮೀನಾರಾಯಣರ ತಮ್ಮ ರಾಮಪ್ಪಯ್ಯಂತೇಳವು ಸುಳ್ಯದ ಅಮಲ್ದಾರರಾಗಿದ್ದೊ. ಇವು ಜೆನರೊಟಿಗೆ ಬಾರಿ ಕ್ರೂರಾಗಿ ನಡ್ಕಣ್‌ತಿದ್ದೊ. ಈ ರಾಮಪ್ಪಯ್ಯ ಕೆದಂಬಾಡಿ ರಾಮಯ್ಯ ಗೌಡ್‌ರ ಬಲವಂತವಾಗಿ ಹಿಡ್ದ್ ತರ್‌ಸಿ ರಾಮಯ್ಯ ಗೌಡ್‌ರ ಕೆಲವ್ ಆಸ್ತಿಗಳ್‌ನ ಅವ್‌ಕೆ ಕೊಡುವಂಗೆ ಒತ್ತಾಯ ಮಾಡ್‌ದೊ. ಇದರ್‌ಂದಾಗಿ ದ್ವೇಸ ಬೆಳ್‌ತ್. ದಿನಂದಿನಕೆ ತನ್ನ ವಿರೋದಿಗಳ ಸಂಕೆ ಬೆಳೆತಿದ್ದದರ ಕಂಡ್ ರಾಮಪ್ಪಯ್ಯ, ರಾಮಯ್ಯ ಗೌಡ್‌ರ ನಿಯಂತರ್‌ಸಿಕೆ ಅಬಿನವ ಕಲ್ಯಾಣ ಸ್ವಾಮಿನ ಇಸಿಕಂಡ್ ಬಂಡಾಯ ಮಾಡಿಕಿರ್‌ವ ವಿಸಯನ ನಾ ಮಂಗಳೂರ್‌ನ ಬ್ರಿಟಿಸ್ ಕಲೆಕ್ಟರ್‌ಗೆ ಹೇಳಿನೆ ತೇಳಿ ರಾಮಯ್ಯ ಗೌಡರಿಗೆ ಸುದ್ದಿ ಕಳ್‌ಸಿದೊ. ಇದರ್‌ಂದ ಸಿಟ್ಟಿಗೆದ್ದ ಬಂಡಾಯಗಾರರ್ ರಾಮಪ್ಪಯ್ಯನ ಕೊಂದೊ ತೇಳಿ ಲೀಹಾರ್ಡಿ ಮೇಲಾದಿಕಾರಿಗಳಿಗೆ ಬರ್‌ದ ಪತ್ರಲಿ ಹೇಳಿಯೊಳೊ. ಇನ್ನ್ ಕೆಲ ಬಾಯಿಮಾತ್‌ನ ದಾಕಲೆಗಳ ಪ್ರಕಾರ ರಾಮಪ್ಪಯ್ಯನ ಸೆರೆ ಹಿಡ್ದ್ ಕರ್‌ಕಂಡ್ ಹೋಕನ ಬೆಳ್ಳಾರೆಲಿ ನೇಣ್‌ಗೆ ಕೊಟ್ಟೊ. ಈ ಕೊಲೆನ ಹಿನ್ನೆಲೆಲಿ ಪಟ್ರಕೊಡಿ ಸಣ್ಣಪ್ಪ ಅವ್‌ಕೆ ಹತ್ತ್ ವರ್‌ಸಗಳ ಶಿಕ್ಷೆ, ಉಳುವಾರ್ ಕೃಷ್ಣ ಅವರ ಸಿಂಗಾಪುರಕೆ ಗಡಿಪಾರ್ ಮಾಡ್‌ದೊ.

ಬಂಡಾಯಗಾರರ್ ಮಾತ್ ಮಾಡ್‌ದ ಪ್ರಕಾರ 5 ಮಾರ್ಚ್ 1837ರಂದ್ ಕೊಡಗ್‌ಲಿ, 7 ಎಪ್ರಿಲ್ 1837ರಂದ್ ಅಮರ ಸುಳ್ಯಲಿ ಬಂಡಾಯ ನಡೆಕಾಗಿತ್ತ್. ಆದರೆ ಕೊಡಗ್‌ಲಿ ನಿಗಂಟ್ ಮಾಡ್‌ದಾಂಗೆ ಬಂಡಾಯ ನಡ್ತ್‌ಲೆ. ರಾಮಪ್ಪಯ್ಯನ ಪ್ರಕರಣಂದಾಗಿ 29 ಮಾರ್ಚ್ 1837ರಂದೇ ಬಂಡಾಯ ಸುರಾಗಿ ಬಂಡಾಯಗಾರರ್ ಸುಳ್ಯದ ಕಜಾನೆನ ವಸಕೆ ತೆಕಂಡೊ. ಅಲ್ಲಿಂದ ಬೆಳ್ಳಾರೆಗೆ ಹೋಗಿ ಅವು 30 ಮಾರ್ಚ್ 1837ರಂದ್ ಬೆಳ್ಳಾರೆ ಕಜಾನೆನ ವಸಪಡ್‌ಸಿಕಂಡ್ ಅದರ ಗುಡ್ಡ ತಿಮ್ಮಣ್ಣ ಅವರ ಅದೀನಕೆ ಕೊಟ್ಟೊ. ಬೆಳ್ಳಾರೆಲ್ಲಿದ್ದ ಬ್ರಿಟಿಸ್ ನೌಕರರ್‌ನ ಸೆರೆಹಿಡ್‌ದೊ. ಕೆದಂಬಾಡಿ ರಾಮಯ್ಯ ಗೌಡ್‌ರ್ 30 ಮಾರ್ಚ್ 1837ರಂದ್ ಬೆಳ್ಳಾರೆಲಿ ಅಬಿನವ ಕಲ್ಯಾಣ ಸ್ವಾಮಿನ ಹೊಸ ರಾಜ ತೇಳಿ ಕರ್‌ದ್ ಹೇಳ್‌ದೊ. ಮತ್ತೆ ರಾಮಯ್ಯ ಗೌಡ, ಕುಕನೂರು ಚಿನ್ನಯ್ಯ ತೇಳ್‌ವ ಮುಕ್ಯಸ್ತರ್ ನಾಕ್ ಜೆನ ನಂಜುಂಡರಸರ ಹೆಸರ್‌ಲಿ ನಿರೂಪಗಳ್‌ನ ಅಲ್ಲೊ ಅಪ್ಪಣೆ ಕಾಗದ ಬರ್‌ಸಿ ಚೆಂಬು, ಪೆರಾಜೆಗಳ ಪಾರ್‌ಪತೆಗಾರರಿಗೆ, ಕೊಡಗ್‌ನ ದಿವಾನರಿಗೆ ಕಳ್ಸಿ ರಾಜ ಬಕ್ತಿನ ಪ್ರದರ್‌ಸಿಸುದು ಬೇಡ ಬ್ರಿಟಿಸರ್‌ಂದ ಸೊತಂತ್ರ ಆಕೆ ಇರ್‌ವ ಅವಕಾಸನ ಕಳ್‌ಕಂಬಕಾಗದ್ ತೇಳಿ ತಿಳ್‌ಸಿದೊ. 31 ಮಾರ್ಚ್ 1837ರಂದ್ ಅಬಿನವ ಕಲ್ಯಾಣ ಸ್ವಾಮಿ ಒಂದ್ ಗೋಸಣೆನ ಹೊರ್‌ಡಿಸಿ ಬ್ರಿಟಿಸರಿಗೆ ಇನ್ನ್ ಮುಂದೆನ ಬೆಂಬಲಿಗರ್‌ಲಿ, ಕೊಡಗ್‌ನ ಸೊತಂತ್ರ ಮಾಡಿಕೆ ಉಪಕಾರ ಮಾಡ್‌ವ ರೈತಂಗ ಮುಂದೆನ ಮೂರ್ ವರ್‌ಸದವರೆಗೆ ತೆರಿಗೆ ಕಟ್ಟೋಕುಂತಿಲ್ಲೆ ತೇಳಿ ತಿಳ್‌ಸಿದೊ.

ಅದಾಗಿ ಪಂಜದ ಜೋಯಿಸರೊಬ್ಬರ ಸಲಹೆನಾಂಗೆ ಬಂಡಾಯಗಾರರ್ ಮಂಗಳೂರ್‌ನ ಕಬಳ್‌ಸಿಕೆ ಹೊರಟೊ. ಪುತ್ತೂರ್‌ಲಿ ಬಂಡಾಯಗಾರರೆಲ್ಲ ಒಟ್ಟಾಗಿ ಅಲ್ಲಿಂದ ಬೇರೆ ಬೇರೆ ಆಕು, ಏಪ್ರಿಲ್ 5ರಂದ್ ಮಂಗಳೂರ್‌ನ ವಸಕೆ ತೆಕಣಕು ತೇಳಿ ನಿರ್‌ದಾರ ಮಾಡ್‌ದೊ. ಮಂಗಳೂರ್‌ನ ವಸ ಪಡ್‌ಸಿಕಂಬಕಿದ್ದ ತಂಡಕ್ಕೆ ರಾಮಯ್ಯ ಗೌಡ್ರ್ ನಾಯಕ, ಮಣ ಯಾನ ಸುಬ್ರಾಯ ಗೌಡ, ದೇರಾಜೆ ಬಚ್ಚ, ಗುಡ್ಲದ ಸುಬ್ಬಯ್ಯ, ಮಡ್ಯಾಲ ತಿಮ್ಮ ಅವು ಸಹಾಯಕರಾಗಿದ್ದ್, ಈ ದಂಗೆನ ತಂಡಲಿ 500 ಜೆನ ಬಂಡಾಯಗಾರರ್ ಇದ್ದೊ.

ಎರ್‌ಡ್‌ನೆ ತಂಡಕ್ಕೆ ಕೂಜುಗೋಡು ಅಪ್ಪಯ್ಯ ಗೌಡ, ಮಲ್ಲಪ್ಪ ಗೌಡ, ಸುಬೇದಾರ್ ಗುಡ್ಡೆಮನೆ ಅಪ್ಪಯ್ಯ ಗೌಡರ್ ನಾಯಕರಾಗಿದ್ದೊ. ಇವು ಬಿಸ್‌ಲೆ ಗಾಟಿಗಾಗಿ ಕೂಡು ರಸ್ತೆಗೆ ಹೋಗಿ ಏಪ್ರಿಲ್ 5ರಂದ್ ಮಡಿಕೇರಿನ ವಸಪಡ್‌ಸಿಕಣೊಕು ತೇಳುವ ಯೋಜೆನೆ ಆಗಿತ್ತ್. ಕುಡೆಕಲ್ಲ್ ಪುಟ್ಟಗೌಡ ಮತ್ತೆ ಕುಂಚಡ್ಕ ರಾಮ ಅವರ ನಾಯಕತ್ವಲಿ ವಿಟ್ಲದ ಕಡೆಂದ ಕಾಸರಗೋಡುಗೆ ಹೋಗಿ ಅದರ ವಸಪಡ್‌ಸಿಕಂಡ್ ಕುಂಬಳೆ ಮಂಜೇಸ್ವರದ ಮಾರ್‌ಗಲಿ ಏಪ್ರಿಲ್ 5ಕ್ಕೆ ಮಂಗಳೂರು ಮುಟ್ಟೊಕು ತೇಳುದು ಯೋಜೆನೆ ಆಗಿತ್ತ್.

30 ಮಾರ್ಚ್ 1837ರಂದ್ ಬೆಳ್ಳಾರೆಲಿ 2000 ಜೆನ ಸಬೆ ಸೇರಿ ತೀರ್ಮಾನ ಮಾಡಿ ಬಂಡಾಯಕೆ ಹೊರ್‌ಟೊ. ಧರ್ಮಸ್ಥಳದ ಮಂಜಯ್ಯ ಹೆಗ್ಗಡೆವ್ ದಂಡ್‌ಗೆ ಎರ್‌ಡ್ ಪಿರಂಗಿಗಳ ಕೊಟ್ಟಿದ್ದೊ. ದಂಡ್ ಪುತ್ತೂರ್‌ನ ವಸಪಡ್‌ಸಿಕಂಬಕಾಕನ ಕೆನರಾ ಕಲೆಕ್ಟರ್ ಎಮ್. ಲೆವಿನ್ ಅಲ್ಲೇ ಇದ್ದರೂ ಏನೂ ಮಾಡಿಕೆ ಬೊತ್ತಾತ್. ಬ್ರಿಟಿಸ್ ಪೊಲೀಸರ್ ಆಗಿದ್ದ ಊರೊವ್ ದಂಡ್‌ನವ್ ಎದ್‌ರೆದ್‌ರ್ ಆಕನ ನೀವು ನಮ್ಮವು. ನಿಮ್ಮ ಮೇಲೆ ನಾವು ಯುದ್ದ ಮಾಡಿಕಿಲೆ ತೇಳ್‌ದೊ. ಪುತ್ತೂರ್‌ನ ವಸಪಡ್‌ಸಿಕಂಡ ಮೇಲೆ ಅಬಿನವ ಕಲ್ಯಾಣ ಸ್ವಾಮಿನ ದಂಡ್ ಪಾಣೆಮಂಗಳೂರು ಮತ್ತೆ ಬಂಟ್ವಾಳನ ವಸಪಡ್‌ಸಿಕಂಡ್ ಮುಂದೋತ್. ಇಲ್ಲಿನ ಮುಕ್ಯ ರಂಗ ಬಾಳಿಗಾ ಬ್ರಿಟಿಸರ ಬೆಂಬಲಿಸಿದ್ದೊ. ಆದರೆ ನಂದಾವರದ ಲಕ್ಷ್ಮಪ್ಪ ಬಂಗರಸರ್ ಅಬಿನವ ಕಲ್ಯಾಣ ಸ್ವಾಮಿನ ಬೆಂಬಲ್‌ಸಿದೊ. ಬಂಗರಸರ್ ಬಂಡಾಯಗಾರರಿಗೆ ಒಂದ್ ಪಿರಂಗಿ ಮತ್ತೆ ಸಿಡಿಮೊದ್ದ್‌ನ ಕೊಟ್ಟಿದ್ದೊ. ಮೂಡುಬಿದ್‌ರೆನ ಚಂದ್ರಶೇಖರ ಚೌಟರಸರ್ ದಂಡ್‌ಗೆ ಜೆನನ ಕಳ್‌ಸಿದ್ದೊ. ಕುಂಬಳೆನ ಸುಬ್ರಾಯ ಹೆಗಡೆ ಮತ್ತೆ ತೆಂಕು ಕುಂಬಳೆನ ಚೀರಂಜಿ ಸುಬ್ರಾಯ ದಂಡ್‌ಗೆ ಕೂಡಿಕಂಡೊ.




ಕಾಸರಗೋಡ್‌ನ ಕಡೆಗೆ ಹೋದ ತಂಡನ ವಿಟ್ಲದ ಅರಸರ್ ಬೆಂಬಲಿಸಿದೊ. 1837ರ ಎಪ್ರಿಲ್ 2ರಂದ್ ಕುಂಚಡ್ಕ ರಾಮ ಮತ್ತೆ ಕುಡೆಕಲ್ಲ್ ಪುಟ್ಟಗೌಡರ್ ಕಾಸರಗೋಡ್‌ನ ತಹಸೀಲ್ದಾರ್ ಕಚೇರಿ ಮತ್ತೆ ಕಜಾನೆನ ವಸಪಡ್‌ಸಿಕಂಡ್ ತಮ್ಮ ಕಡೆವರ ಬಂಟ್ವಾಳಂದ ಕರಣಿಕ ಸುಬ್ಬಯ್ಯ ಅವರ ಕೈಲಿ ಮಂಗಳೂರ್‌ನ ಜೆನಕೆ ಕಾಗದನ ಬರ್‌ಸಿ ಅಬಿನವ ಕಲ್ಯಾಣಸ್ವಾಮಿ 12 ಲಕ್ಷ ಜೆನ ಇರ್‌ವ ತನ್ನ ದಂಡ್ ಬೇಗನೆ ಮಂಗಳೂರ್ ಮುಟ್ಟಿದೆಂತೇಳಿ, ಮಂಗಳೂರ್‌ನ ನಾಗರಿಕರ್ ನಮ್ಮೊಟಿಗೆ ಸೇರಿಕಣೊಕುತ ಕೇಳಿ ಕಂಡೊ. ಇಲ್ಲಿ ಕಾಟನ್ ವರದಿಲಿ 12 ಲಕ್ಷ ತೇಳ್‌ದು ಆಕಸ್ಮಿಕನೂ ಆಗಿರ್‌ದು.

5 ಎಪ್ರಿಲ್ 1837ರಂದ್ ಅಬಿನವ ಕಲ್ಯಾಣಸ್ವಾಮಿನ ದಂಡ್ ಮಂಗಳೂರ್‌ನ ಮುಟ್ಟಿತ್. ಸರಕಾರಿ ಕಜಾನೆನ ಒಡ್ದೊ. ಮತ್ತೆ ಜೈಲ್‌ಗೆ ಹುಕ್ಕ್ ಕೈದಿಗಳ ಬುಡ್‌ಗಡೆ ಮಾಡಿ ಬಂಡಾಯಗಾರರ್ ತಮ್ಮ ದಂಡ್‌ಗೆ ಅವರ ಸೇರ್‌ಸಿಕಂಡೊ. ಅಂದ್ ಮಂಗಳೂರ್‌ಲಿದ್ದ ಬ್ರಿಟಿಸರ ದ್ವಜೆನ ಬಂಡಾಯಗಾರರ್ ಇಳ್‌ಸಿ ತಮ್ಮ ದ್ವಜೆನ ಹಾರ್‌ಸಿದೊ. ಆ ಜಾಗೆನ ಈಗ ಬಾವುಟಗುಟ್ಟೆತ ಕರ್‌ದವೆ. ಬಂಡಾಯಗಾರರ್ ಕಟಿದ್ದ ಸರಕಾರದ ಹಾಂಗೆನೆ ನಡ್‌ಕಂಡೊತ ಅಂದ್‌ನ ಕೆನರಾದ ಕಲೆಕ್ಟರ್ ಎಮ್. ಲೆವಿನ್ ದಾಕಲಿಸಿಯೊಳೊ. ಬಂಡಾಯಗಾರರ ಎದ್‌ರ್‌ಸಿಕೆ ಬ್ರಿಟಿಸರ್‌ಗೆ ಸಾದ್ಯ ಆಗದೆ ಅವು ಸಂದ್ರ ಮಾರ್‌ಗಲಿ ತಲಚೇರಿಗೆ ಓಡಿ ಹೋದೊ. ಕಾರ್ಕಳ, ಮೂಡಬಿದ್‌ರೆ ಕಡೆಂದಲೂ ಬಂಡಾಯಗಾರರ್‌ಗೆ ಬೆಂಬಲ ಸಿಕ್ಕಿತ್. ಹೊನ್ನಾವರ ಕಡೆಂದ ಲೆಫ್ಟಿನೆಂಟ್ ಬ್ಲೇಕ್ ಮುಂದಾಳತ್‌ವಲಿ ಬ್ರಿಟಿಸ್ ದಂಡ್ ಮಂಗಳೂರ್‌ನ ಪ್ರವೇಸ ಮಾಡದಂಗೆ ಬಂಡಾಯಗಾರರ್ ತಡ್‌ದೊ. 13 ದಿನಗಳ ಕಾಲ ಬಂಡಾಯಗಾರರ್ ಮಂಗಳೂರ್‌ನ ತಮ್ಮ ವಸಲಿ ಇಸಿಕಂಡಿದ್ದೊ. ತಲಚೇರಿ ಮತ್ತೆ ಕಣ್ಣಾನರ್‌ಂದ ಬ್ರಿಟಿಸರ್ ಸೈನ್ಯ ತರ್‌ಸಿಕಂಡೊ. ಏಪ್ರಿಲ್ 17ರಂದ್ ಕರ್ನಲ್ ಗ್ರೀನ್ ನಾಯಕತ್ವಲಿ ಬಂದ 1200 ಜೆನರ ಬ್ರಿಟಿಸ್ ಸೇನೆ ಏಪ್ರಿಲ್ 19ರಂದ್ ಮಂಗಳೂರ್‌ನ ಮತ್ತೆ ಅವರ ಕೈಗೆ ತೆಕಂಡೊ. ಇನ್ನೊಂದ್ ಕಡೆ ಮಡಿಕೇರಿಗೆ ಹೊರ್‌ಟ ತಂಡ ದಾರಿ ಉದ್ದೊಕು ಸರಕಾರಿ ಕಚೇರಿಗಳ ವಸಪಡ್‌ಸಿಕಂಡ್ ತಮ್ಮ ಅದಿಕಾರನ ಸುರು ಮಾಡ್‌ದೊ. ಏಪ್ರಿಲ್ 9ರಂದ್ ಬಂಡಾಯಗಾರರ್ ಬಿಸ್‌ಲೆ ಗಟ್ಟದ ಹಕ್ಕಲೆ ಸೇರಿ, ಅಲ್ಲಿಂದ ಎಡೆನಾಡ್‌ಗಾಗಿ ಕೊಡಗ್‌ನ ಪಡ್‌ಕಣಿಕೆ ತಯಾರಾಗೊಳೊತ ಲೀಹಾರ್‌ಡಿಗೆ ಗೊತ್ತಾತ್. ಬಂಡಾಯಗಾರರ್ ಕೊಡಗ್‌ನ ಎತ್ತರದ ಗಡಿನ ದಾಟದಂಗೆ ತಡೆಕೆ ಲೀಹಾರ್‌ಡಿ ನಿರ್‌ದಾರ ಮಾಡ್‌ದೊ. ಏಪ್ರಿಲ್ 11ರಂದ್ ಬೋಪು ದಿವಾನರ ಮುಂದಾಳತ್ವಲಿ ಲೀಹಾರ್‌ಡಿನ ದಂಡ್ ಶಾಂತಳ್ಳಿ ಮುಟ್ಟಿತ್. ಕುಂದಗಳ್ಳಿನ ಅಡ್ಕಲಿ ಬಂಡಾಯಗಾರ ಮೇಲೆ ಬಿದ್ದ ಲೀ ಹಾರ್‌ಡಿನ ಲೆಕ್ಕಾಚಾರ ತಿರ್‌ಗ ಮರ್‌ಗ ಆತ್. ಬಂಡಾಯಗಾರರ್ ಆಗಲೇ ಬಿಸ್ಲೆ ಗಟ್ಟದ ಎತ್ತರದ ಪ್ರದೇಸಕ್ಕೆ ಹೋಗಿದ್ದೊ. ಗೆರಿಲ್ಲಾ ಯುದ್ದನೂ ನಡ್‌ಸಿದ್ದೊ.

ಈ ಹೊತ್ತ್‌ಗೆ ಮಂಗಳೂರ್‌ಂದ ಹಿಂದೆಬಂದ ಅಬಿನವ ಕಲ್ಯಾಣ ಸ್ವಾಮಿ ಅಮರಸುಳ್ಯಕೆ ವಪಾಸ್ ಬಂದಿದ್ದೊ. ಇದ್ ಕೊಡಗ್‌ನ ಭಾಗಮಂಡಲ ಕಡೆನ ಜೆನಕೆ ಪ್ರೇರಣೆ ಆತ್. ಅದ್ಕೆ ತಕ್ಕಂಗೆ ಗುಡ್ಡೆಮನೆ ಅಪ್ಪಯ್ಯ ಗೌಡ, ತಮ್ಮಯ್ಯ ಗೌಡ ಅವ್ ಸುಳ್ಯಲಿ ನಾವು ಚಿಕ್ಕವೀರ


ಸುಬೇದಾರ್ ಗುಡ್ಡೆಮನೆ ಅಪ್ಪಯ್ಯ ಗೌಡ

ರಾಜನ ಕಂಡೊತ ಭಾಗಮಂಡಲಲಿ ಪ್ರಚಾರ ಮಾಡ್‌ದೊ ಇಲ್ಲಿ ಬಂಡಾಯಗಾರರ ಸೇರಿಕೆ ಹೊರ್‌ಟವರ ಸುಬೇದಾರ್ ಮಾದಯ್ಯ ತಡ್‌ದೊ. ಮತ್ತೆ ಜೆನಗ ಮಾದಯ್ಯ ಅವರನೆ ಸೆರೆ ಹಿಡ್ದ್ ಬಂಡಾಯಗಾರರ್‌ಗೆ ಕೊಟ್ಟೊ. ಮತ್ತೆ ಬೋಪು ದಿವಾನರ ಮಾತ್‌ನಂಗೆ ಬಂಡಾಯಕೆ ಜೆನ ಬೆಂಬಲಿಸದಂಗೆ ಇರಿಕನ ಜೆನರ ಬೇಡಿಕೆನಂಗೆ ಮಾದಯ್ಯ ಅವರ ಬಂಡಾಯಗಾರರ್ ವಾಪಸ್ ಕೊಟ್ಟೊ. ತಮ್ಮೊಟ್ಟಿಗೆ ನಾಡ್, ಬೇಂಗುನಾಡ್‌ನ ಜೆನ ಮಡಿಕೇರಿಗೆ ಮುತ್ತಿಗೆ ಹಾಕಿಕೆ ಬಂದವೆತ ನಂಬಿದ್ದ ಸುಬೇದಾರ್ ಗುಡ್ಡೆಮನೆ ಅಪ್ಪಯ್ಯ ಗೌಡರ್ ಮಡಿಕೇರಿಂದ 4 ಕಿಮೀ. ದೂರಲಿ ತಮ್ಮ ಜೆನರೊಟ್ಟಿಗೆ ತಂಬು ಹಾಕಿದ್ದೊ. ಆದ್‌ರೆ ಅವರ ನಾಡ್, ಬೇಂಗ್‌ನಾಡ್‌ನ ಜೆನರ ತಡೆ ಹಿಡಿದರ್‌ಲಿ ಬೋಪು ದಿವಾನರ್ ಗೆದ್ದ್‌ಬುಟ್ಟೊ. ಕಡೆಗೆ ಸುಬೇದಾರ್ ಗುಡ್ಡೆಮನೆ ಅಪ್ಪಯ್ಯ ಗೌಡರ ದಂಡ್ ಬ್ರಿಟಿಸರ್‌ಗೆ ಸರಣಾತ್.

ಅಬಿನವ ಕಲ್ಯಾಣಸ್ವಾಮಿ, ಸುಬೇದಾರ್ ಗುಡ್ಡೆಮನೆ ಅಪ್ಪಯ್ಯ ಗೌಡ, ಬೀರಣ್ಣ ಬಂಟ, ಲಕ್ಷ್ಮಪ್ಪ ಬಂಗರಸ, ಉಪ್ಪಿನಂಗಡಿ ಮಂಜ, ಕೆದಂಬಾಡಿ ರಾಮಯ್ಯ ಗೌಡ, ಚೀರಂಜಿ ಸುಬ್ರಾಯ, ಹುಲಿಕಡಿದ ನಂಜಯ್ಯ,

ಮಲ್ಲಪ್ಪ ಗೌಡ, ಕೂಜುಗೋಡು ಅಪ್ಪಯ್ಯ ಗೌಡ, ಕುಕನೂರು ಚಿನ್ನಯ್ಯ, ಸುಬೇದಾರ ಕೃಷ್ಣಯ್ಯ, ಕರಣಿಕ ಸುಬ್ಬಯ್ಯ, ಕುಡೆಕಲ್ಲ್ ಪುಟ್ಟಗೌಡ, ಕುಂಚಡ್ಕ ರಾಮ, ಚೆಟ್ಟಿಕುಡಿಯ, ಕುರ್ತಕುಡಿಯ, ಕೂಜುಗೋಡು ಕುಂಬಗೌಡ, ಹೊಗೆಸೊಪ್ಪು ಸೇಕ್, ಉಳುವಾರು ಕೃಷ್ಣ, ಕುಕ್ಕೆಟ್ಟಿ ಸುಬ್ಬಗೌಡ, ತಮ್ಮಯ್ಯಗೌಡ, ಬಡೆಕ್ಕಿಲ ವೆಂಕಟ್ರಮಣ ಬಟ್, ಸಿರಕಜೆ ಮಲ್ಲಯ್ಯ, ಮಣಯಾನ ರಂಗಪ್ಪ, ಪಟೇಲ ಶಂಕರನಾರಾಯಣ, ಮಣೆಗಾರ ನಾರ್ಣಪ್ಪ, ಅಮೀನ್ ವೆಂಕಟ, ಕುಂಚಡ್ಕ ತಿಮ್ಮ, ಮಡಿಯಾಲ ತಿಮ್ಮಣ್ಣಗೌಡ, ಮಾಲಿಂಗ, ಶೇಷಗಿರಿ, ಗುಡ್ಡೆ ತಿಮ್ಮಣ್ಣ, ಮುಳ್ಳ ಈಶ್ವರ ಸೋಮಯಾಜಿ, ಕುಕ್ಕೇಟಿ ಚೆನ್ನ, ಮುಂಗೆಣ್ಣ ಪುಟ್ಟಯ್ಯ, ಕೋಲ್ಚಾರು ಕೂಸಪ್ಪಗೌಡ, ಮಾನದ ರಂಗಪ್ಪ, ತ್ಯಾಂಪ, ಅಣ್ಣಪ್ಪ, ಪುಂಡುಸೆಟ್ಟಿ ಇವೆಲ್ಲ ಬಂಡಾಯದ ಮುಕ್ಯ ನಾಯಕರಾಗಿದ್ದೊ.

ಬಂಡಾಯಕೆ ಸಮ್ಮಂದಪಟ್ಟಾಂಗೆ 1157 ಜೆನರ ಸೆರೆಲಿ ಇಸಿದೊ. ಅವರ್‌ಲಿ 484 ಜೆನರ ವಿಚಾರಣೆ ನಡ್‌ಸದೆ ಹಂಗೆನೆ ಬುಟ್ಟೊ. 12 ಜೆನರ ಕೋರ್ಟ್‌ಮಾರ್‌ಸಲ್‌ಗೆ ಒಳಪಡ್‌ಸಿದೊ. 54 ಮೊಕದ್ದಮೆಗ ವಿಸೇಸ ಆಯೋಗದ ಮುಂದೆ ನಡ್‌ದ್ 417 ಜೆನರ ವಿಚಾರಣೆ ನಡ್ತ್. ಪುಟ್ಟಬಸಪ್ಪ, ಸುಬೇದಾರ್ ಗುಡ್ಡೆಮನೆ ಅಪ್ಪಯ್ಯ ಗೌಡ, ಬೀರಣ್ಣ ಬಂಟ, ಲಕ್ಷ್ಮಪ್ಪ ಬಂಗರಸ, ಉಪ್ಪಿನಂಗಡಿ ಮಂಜ ಅವರ ನೇಣ್‌ಗೆ ಕೊಟ್ಟೊ. ಕೆದಂಬಾಡಿ ರಾಮಯ್ಯ ಗೌಡ್‌ರ್‌ಗೆ ಸುರೂಲೆ ಗಲ್ಲ್ ಸಿಕ್ಸೆ ಕೊಟ್ಟಿದ್ದರೂ, ಮತ್ತೆ ಸಿಂಗಾಪುರಕೆ ಗಡಿಪಾರ್ ಮಾಡಿ ಅಲ್ಲಿ ಅವ್ಕೆ ಸಾಯ್‌ವವರೆಗೆ ಸಂಕೊಲೆ ಹಾಕಿ ಕೆಲ್‌ಸ ಮಾಡ್‌ಸಿಕಂಬ ಕಟು ಸಿಕ್ಸೆ ಕೊಟ್ಟೊ. ಸಾಕಸ್ಟ್ ಜೆನಕೆ ರಾಮಯ್ಯ ಗೌಡರ್‌ಗೆ ಕೊಟ್ಟ ತರದ ಸಿಕ್ಸೇನೆ ಕೊಟ್ಟೊ.

ಸುಮಾರ್ 35 ಜೆನ ವಿಚಾರಣೆ ಮಾಡಿಕಣ ಸತ್ತೇ ಹೋದೊ. ಒಟ್ಟ್‌ಲಿ ಬ್ರಿಟಿಸರ ವಿರುದ್ದ ಸಂಗಟನೆ ಆದ ಪ್ರಬಲ ಬಂಡಾಯಗಳ್‌ಲಿ ಇದೂ ಒಂದ್. (ಎ.ಪಿ.)

**ಕುಡೆಕಲ್ಲ್ ಪುಟ್ಟಗೌಡ :** 1837ರ ಹೋರಾಟದ ಮುಕ್ಯ ನಾಯಕರ್‌ಗಳ್‌ಲಿ ಒಬ್ಬ ಕುಡೆಕಲ್ಲ್ ಪುಟ್ಟಗೌಡ. ಇವರ ಬಗ್ಗೆ ಸುಬೇದಾರ್ ಪುಟ್ಟಗೌಡ, ಪುಟ್ಟ ಪಟೇಲ, ಪುಟ್ಟ ಮುನ್ಷಿ, ಅರಂಬೂರು ಪುಟ್ಟಗೌಡ, ಇಡ್ಯಡ್ಕ ಪುಟ್ಟಗೌಡ ತೇಳುವ ಬೇರೆ ಬೇರೆ ಹೆಸರುಗಳ್‌ಂದ ಬ್ರಿಟಿಷ್ ದಾಕಲೆಗಳ್‌ಲಿ ಬರ್‌ದೊಳೊ.. ಕಾಸರಗೋಡು ಮತ್ತೆ ಕುಂಬ್ಳೆಗಳ್‌ಲಿ ರೇವುಗಳ ಸ್ವಾದೀನಕೆ ತಕಂಬೊದು, ಟಪ್ಪಾಲ್ ವೆವಸ್ತೆನ ಮೇಲೆ ನಿಯಂತ್ರಣ ಮಾಡ್‌ದು, ಉಪ್ಪು ಮತ್ತೆ ಹೊಸೊಪ್ಪು. ಕೋಟಿಗಳ ಅದೀನಕೆ ತಕಂಬದು, ಕಂದಾಯ ಇಲಾಕೆ ಮತ್ತೆ ಕಜಾನೆನ ವಶಕ್ಕೆ ತಕಂಬದು, ಆ ಇಲಾಕೆನ ಉದ್ಯೋಗಿಗಳ ಮನ್ಸುನ ಬದುಲ್ಸಿದ್ ಅವರೊಟ್ಟಿಗೆ ಸೇರ್‌ಸಿಕಂಡದ್, ಮತ್ತೆ ಕೆಲ್ಸ ಮಾಡೊವುಕೆ ಸಂಬಳ ಬಟವಾಡೆ ಮಾಡ್‌ದು, ಮಂಗ್‌ಳೂರು ಆಕ್ರಮಣಲಿ ಸೇರಿಕಂಡದ್. ದಂಗೆನ ಸೈನ್ಯಕೆ ಸುಳ್ಯಲಿ ಊಟದ ವೆವಸ್ತೆ ಮಾಡ್‌ದು, ಹಿಂಗೆ ಸುಮಾರ್ ಪ್ರಕರಣಗಳ್‌ಲಿ ಇವು ಬ್ರಿಟಿಷ್‌ನವ್ಕೆ ಈ ಮೊಯಿಂಸಾ ಬೇಕಾಗಿದ್ದೊ. ದಂಗೆ ಮುಗ್ದ ಮೇಲೆ ಹೋರಾಟದ ದೊಡ್ಡ ನಾಯಕ ಕೆದಂಬಾಡಿ ರಾಮಯ್ಯ ಗೌಡರೊಟ್ಟಿಗೆ ಕಾರ್ಕಳ ಹಕ್ಕಲೆನ ಕಬ್ಬಿನಹಾಲೆ ಕಾಡ್‌ಲಿ ಕಂಡದ್ ಕುಡೆಕಲ್ಲ್ ಪುಟ್ಟಗೌಡರ ಮೇಲೆ ಇರ್‌ವ ಮತ್ತೊಂದು ಮುಕ್ಯ ಆರೋಪ. ಈ ಕಬ್ಬಿನಹಾಲೆ ಕಾಡ್‌ನ ಹಕ್ಕಲೆನೇ 1830–32ರ ನಗರ ರೈತ ಹೋರಾಟದ ಮೂಲಸ್ತಾನ ಆದ ನಗರ ಇರ್‌ದು. ಕಲ್ಯಾಣಪ್ಪನ ಕಾಟಕಾಯಿನ ದೊಡ್ಡ ಉದ್ದೇಸ ಇರ್‌ದೇ ಈ ನಗರ ಸಿಂಹಾಸನನ ಹಿಡಿದು ತೇಳಿದ್ ಲೆವಿನ್ ಮತ್ತೆ ಕಾಟನ್ ಹೇಳ್ತೊಳ. ಕೆದಂಬಾಡಿ ರಾಮಗೌಡ್ರು ಕಬ್ಬಿನಹಾಲೆ ಪ್ರದೇಶದ ಅಡಗುದಾಣಲಿ ಇದ್ದದರ ಗಮನಿಸಿರೆ ಇವರ ಹೇಳಿಕೆಗೆ ಮತ್ತಸ್ಟು ಪುಷ್ಟಿ ಸಿಕ್ಕಿದಾಂಗಾದೆ. ಲೆವಿನ್, ಕಾಟನ್ ಹೇಳಿಕೆ ಮತ್ತೆ ಇನ್ನ್ ಕೆಲವ್ ಉಲ್ಲೇಕಿತ ದಾಕಲೆಗ ಕಲ್ಯಾಣಪ್ಪನ ಕಾಟಕಾಯಿನ ನಗರ ರೈತ ಹೋರಾಟದ ಮುಂದುವರ್‌ದ ಬಾಗ ಆಗಿದ್ ನೋಡುವೆ.

ಸುಳ್ಯ ತೇಳುವ ಒಂದ್ ಸಣ್ಣ್ ಮಲೆನಾಡ್‌ನ ಹಳ್ಳಿಲಿ ಹುಟ್ಟಿದ್, ಸೂರ್‌ಯ ಮುಳ್‌ಂಗದ ಸಾಮ್ರಾಜ್ಯಶಾಹಿ ಬ್ರಿಟಿಷರ ಎದ್‌ರ್ ನಿತ್ತದ್, ಇಂದ್‌ನ ದಕ್ಷಿಣಕನ್ನಡ ಹಾಂಗೆ ಕಾಸರಗೋಡು ಜಿಲ್ಲೆಗಳ ಪೂರ ಮತ್ತೆ ಉಡುಪಿ ಹಂಗೆ ಕೊಡ್‌ಗ್ ಜಿಲ್ಲೆನ ಹೆಚ್ಚಿನ ಎಲ್ಲಾ ಕಡೆನ ಗೆದ್ದ್‌ದ್ ಎರ್‌ಡ್ ವಾರಗಳಸ್ಟ್ ಕಾಲ ಅಮರ ಸುಳ್ಯಕೆ ಸ್ವತಂತ್ರನ ಗೆದ್ದ್ ಕೊಡುವಲ್ಲಿ, ತನ್ನ ಅಸಾದಾರಣ ಮತ್ತೆ ಅತ್ಯದ್ಬುತ ಮುಂದಾಳುತನದ ಈ ಗಟ್ಟಿಜ್ಜ ನಾಯಕ ಕುಡೆಕಲ್ಲ್ ಪುಟ್ಟ ಗೌಡ್ರ ಜೊವಬ್ದಾರಿ ದೊಡ್ಡದ್. (ಎ.ಆರ್.ಜಿ.)

**ಅರೆಬಾಸೆ :** ಒಂದು ಬಾಸೆಲಿ ಪರಸ್ಪರ ಅರ್ತವ್ಯೆದ್ಯರನತೋರ್ಸುವ ಕನಿಸ್ಟತಮ ದ್ವನಿ ಗಟಕಗಳ 'ದ್ವನಿಮಾ'ತ ಗುರ್ತುಸುದು ಭಾಷಾವಿಜ್ಞಾನದ ವಾಡಿಕೆ, ಇಂತ ದ್ವನಿಮಾಗಳ ಅವರ ಗುಣ ಸ್ವಬಾವಗಳಿಗನುಗುಣವಾಗಿ ಎರ್‌ಡ್ ಜಾತಿ ಅತವಾ ವರ್ಗಂತ ವಿಂಗಡ್‌ಸ್‌ವ ಕ್ರಮ ಉಟ್ಟು, ಅದ್ ಹೀಂಗೆ:

(1) ಸ್ವರಗ

(2) ವ್ಯಂಜನಗ

ಎರ್‌ಡ್ ವಿದದ ಸ್ವರಗ ಒಳೋ.

ಅವುಂತೇಳಿರೆ:

ಅ) ಹ್ರಸ್ವ

ಆ) ದೀರ್ಗ

ಒಂದು ಮಾತ್ರಾಕಾಲಲಿ (ಒಂದು ಚಿಟಿಕೆ ಹೊಡಿವಷ್ಟೇ ಕಾಲಲಿ) ಉಚ್ಚಾರಣೆಯಾವ ದ್ವನಿಗಳ ಹ್ರಸ್ವಂತ ಕರೀದು. ಅದ್‌ಕ್ಕಿಂತ ಹೆಚ್ಚಿನ ಕಾಲ ಉಚ್ಚಾರಣೆಗೆ ತುಂಬ ಸ್ವರಗಳ ದೀರ್ಗಂತ ಕರ್‌ದವೆ. ಅದರ ಉಚ್ಚರಿಕಾಕನ ಬಾಯಲಿ ನಾಲಿಕೆ ಇರುವ ಸ್ತಾನಕ್ಕೆ ಅನುಸರಿ ಈ ಕೆಳಗೆ ಅವರ ಕೊಟ್ಟದರ ಕಾಣಕ್:





| | ಅ) ಹ್ರಸ್ವ | ಆ) ದೀರ್ಗ |
|---|---|---|
| ಉನ್ನತ: | ಇ, ɨ, ಉ | ಈ, ಊ |
| ಮದ್ಯ : | ಎ, ಒ | ಏ, ಓ |
| ನಿಮ್ನೋನ್ನತ: | ɛ, ɔ | ಆ, ɛ: |
| ನಿಮ್ನ: | ಅ | – |

ಉಚ್ಚಾರಣೆ ಸಮ್ಮಂದಿ ಸ್ವರಾಕ್ಸರಗ : Alphabet ಅಕ್ಸರ IPA ಗುರ್ತ್ Initial ಪದ ಸುರು Medial ಪದ ನಡು

ಅ /a/ ಅಡ್ಚಿಲ್ /aḍcilɨ/ ಮಳೆ /malɛ/

ಆ /a:/ ಆನೆ /a:nɛ/ ಕಾಟಿ /ka:ṭi/

ಅ್ /ə/ ಅತಿ /əti/ ಬಳಕೆಯಲ್ಲಿಲ್ಲ

ಇ / ɨ/ ಇದ್ /idɨ/ ಕಿಡಿ /kidi/

ಈ / i:/ ಈಗ /i:ga/ ಪೀಂಕ್ /pi:ŋkɨ/

ಇ್ /ɨ/ ಬಳಕೆಯಲ್ಲಿಲ್ಲ ಕದಿರ್/kadiri/

ಉ /u/ ಉಮಿ /umi/ ಕುಡಿ/kudi/

ಊ /u:/ ಊದು /u:du/ ಪೂರ/pu:ra/

ಎ /e/ ಎಲಿ /eli/ ಹೆರ್/ herɨ/

ಏ /e:/ ಏಳ್ /e:lɨ/ ನೇರ್ಳ್/ne:rḷɨ/

ಎ್ /ɛ/ ಎಪ್ಪತ್ತು /ɛppattu/ ನೆಳ/nɛḷa/

ಏ್ /ɛ:/ ಏ್ಮೆ /ɛ:mɛ/ ಬೇನೆ/bɛ:nɛ/

ಒ /o/ ಒಳ್ಳಿ /oḷḷi/ ಬೊಳ್ಳ /boḷḷa/

ಓ /o:/ ಓಡ್ /o:ḍu/ ಗೋಡೆ /go:ḍɛ/

ಒ್ /ɔ/ ಒ್ಳೆ /ɔḷe / ಸೊಂತೆ /sɔnṭɛ/

**ಉಚ್ಚಾರನೆ ಆದಾರಲಿ ವ್ಯಂಜನಗಳ ಸ್ತಾನಗ :**

| | |
|---|---|
| ಪ್ ಚ್ ತ್ ಟ್ ಕ್ | – ಕಟಿಣ ವ್ಯಂಜನಗ |
| ಬ್ ದ್ ಡ್ ಜ್ ಗ್ | – ಮೃದು ವ್ಯಂಜನಗ |
| ಮ್ ನ್ ಣ್ ಞ್ ಙ್ | – ಅನುನಾಸಿಕ ವ್ಯಂಜನಗ |
| ವ್ ಯ್ | – ಅರ್ದ ಸ್ವರಗ |
| ಸ್ ಹ್ | – ಗರ್ಸಕಗ |
| ಲ್ ಹ್ | – ಪಾರ್ಸಗಾಮಿಗ |
| ರ್ | – ಆಕಂಪಿತ |

**ಉಚ್ಚಾರಣೆ ಸಮ್ಮಂದಿ ವ್ಯಂಜನಗ ಮತ್ತೆ ಉದಾರ್‌ಣೆಗ :** Alphabet ಅಕ್ಸರ – IPA ಗುರ್ತ್– Initialಪದ ಸುರು– Medial ಪದ ನಡು

ಪ್ /p/ ಪಾಯ್‌ಸ/pa:yisa ಕೊಪ್ಪು /koppu/

ಬ್ /b/ ಬೊಡಿ/boḍi ಕೊಬ್ಬ್ /kobbu/

ಮ್ /m/ ಮರ/mara ಎಮ್ಮೆ /ɛmmɛ/

ತ್ /t/ ತುಟಿ/tuṭi ಕತ್ತೆ /kattɛ/

ದ್ /d/ ದುಡಿ/duḍi ಹೈದ /haida/

ನ್ /n/ ನಾ/na:/ ಗೂನು /gu:nu/

ಟ್ /ṭ/ ಟೊಳ್ಳ್/ṭoḷḷɨ/ ನೆಟ್ಟಂಗೆ /neṭṭaŋgɛ/

ಡ್ /ḍ/ ಡಬ್ಬಿ/ḍabbi/ ದೊಡ್ಡಿ /doḍḍi/

ಣ್ /ɳ/ ಬಳಕೆಯಲ್ಲಿಲ್ಲ ಅಣಿ /aɳi/

ಚ್ /c/ ಚೀಲ/ci:la/ ಕಿಚ್ಚಿ /kicci/

ಜ್ / j/ ಜೋಡ್ /jo:ḍu/ ಇಜ್ಜೆಲ್ /ijjelɨ/

ಞ್ /ɲ/ ಞಕ್ಕ್ /ɲakkɨ/ ಕುಞ್ಞಕ್ಕ /kuɲɲakka/

ಕ್ /k/ ಕೂಸು /ku:su/ ಹೊಕ್ಕುಳ್ /hokkiḷɨ/

ಗ್ /g/ ಗಗ್ಗರ /gaggara/ ಮಗ /maga/

ಙ್ /ŋ/ ಅಂಗ /aŋga/ಮಙ್ಙಣೆ /maŋŋanɛ/

ಯ್ /y/ ಯಡ್ಡ /yaḍda/ ಮೇಯಿ /me:yi/

ರ್ /r/ ರಾಗಿ /ra:gi/ ಮರ /mara/

ಲ್ /l/ ಲಂಗ /laŋga/ ತಲೆ /talɛ/

ವ್ /v/ ವಾಲಗ /va:laga/ ಮರ್ವಾಯಿ /marva:yɨ/

ಶ್ /ʃ/ ಶಂಕ /ʃaŋka/ ನಿಶ್ಚಯ /niʃcaya/

ಸ್ /s/ ಸರ /sara/ ತೊರ್ಸು /torsu/

ಹ್ /h/ ಹಾಲ್/ha:lɨ/ ಅಟ್ಟಹಾಸ /aṭṭaha:sa/

ಳ್ /ḷ/ ಬಳಕೆಯಲ್ಲಿಲ್ಲ ಹಾಳ್ /ha:ḷɨ/

**ಸಂದಿ :** ಪ್ರಕೃತಿ, ಪದ, ಪ್ರತ್ಯಯ ಇವರ ರೂಪಿಮಾಗಂತ ಹೇಳ್‌ವೆ. ಇವ್ಕೆ ಅರ್ತ ಉಟ್ಟು. ಅಂದರೆ ರೂಪಿಮಾಂತೇಳ್‌ದು ಅರ್ತವತ್ತಾದ ಗಟಕ. ಮಾತ್‌ಲಿ ಒಂದಕ್ಕಿಂತ ಹೆಚ್ಚಿ ಅರ್‌ತ ಗಟಕಂಗ ಸೇರ್‌ವ ಸಂದರ್‌ಬಗ ಒಳೊ. ಹಾಂಗೆ ಒಟ್ಟು ಸೇರ್‌ವ ಪ್ರಕ್ರಿಯೆನ 'ಸಂದಿ'ತ ಕರ್ದವೆ. ಹೀಂಗೆ ಸೇರ್‌ಕನ, ರೂಪಿಮಾಗಳ್‌ಲಿ ಕೆಲವು ಬದಲಾವಣೆಗೆ ಆವ ಸಂಬವನೂ ಉಟ್ಟು. ರೂಪಿಮಾಗಳ ಬಾಗವಾದ, ಸ್ವರ, ಅತವಾ ವ್ಯಂಜನಗಳ್‌ಲಿ, ಕೆಲೊವು ಬಾಸೆಗಳ್‌ಲಿ ಲೋಪ, ಆಗಮ, ಆದೇಶಂತ ನಡ್ಡದೆ. ಹೀಂಗೆ ಎರ್ಡ್ ಅಂಸಗ ಸೇರ್‌ಕನ, ಅವುಗಳ್‌ಲಿ ಯಾದಾರ್ ಸ್ವರ ಅತವಾ ವ್ಯಂಜನ ಕಾಣದೆ ಆದು ಲೋಪ, ಅವುಗಳ ಮದ್ಯೆ ಬಂದು ಹೊಸ ಸ್ವರ ಅತವಾ ವ್ಯಂಜನ ಬಂದ್ ಸೇರ್ದು ಆಗಮ. ಯಾದಾರ್ ಸ್ವರ ಅತವಾ ವ್ಯಂಜನ ಇದ್ದದರ ಕೆಡ್‌ಸಿ ಹೊಸ್‌ದಾಗೆ ಒಂದು ಸ್ವರ ಅತವಾ ವ್ಯಂಜನ ಬಾದು ಆದೇಶ, ಹೀಂಗೆ ಈ ಮೂರು ಅಂಶಗಳ ಸಂದಿ ಪ್ರಕ್ರಿಯೆಗಂತ ಕರ್ದವೆ. ಇನ್ನ್ನ ನಮ್ಮ ಅರೆಬಾಸೆಲಿ ನಡೆವ ಸಂದಿ ಪ್ರಕ್ರಿಯೆನ ನೋಡೊನೊ. ಮೇಲೆ ಹೇಳ್ದ ಮೂರು ತರದ ಪ್ರಕ್ರಿಯೆಗಳೂ ನಡ್ದೇ ತೀರಕುಂತೇಳ್ವ ಕಡ್ಡಾಯ ಏನೂ ಇಲ್ಲೆ. ಆಯಾ ಬಾಸೆಗಳ ಲಕ್ಷಣಗಳಿಗೆ ಅನುಸರ್‌ಸಿ ಅವು ಬರಕ್, ಬಾರದೆ ಇರಕ್.

**ನಾಮಪದಗ :** ವ್ಯಕ್ತಿ, ವಿಷಯ, ಸ್ತಳಗಳ ಸೂಚಿಸ್ವ ಪದಗಳ ನಾಮಪದಗಂತೇಳುವೆ. ಮಾತಾಡ್ಕನ, ಒಂದು ವಾಕ್ಯಲಿ, ಇವು ಬೇರೆ ಬೇರೆ ಅರ್ತಗಳ ಕೊಡ್ವ ಕೆಲವು ಪ್ರತ್ಯಯಗಳೊಟ್ಟಿಗೆ ಸೇರಿಕಂಡ್, ಬೇರೆ

ಬೇರೆ ವಿಷಯಗಳ ನಮ್ಮ ಅರಿವಿಗೆ ಬರ್ಸುವೆ. ಇಂತ ಪ್ರತ್ಯಯಗಳ ವಿಬಕ್ತಿಗಂತೇಳುವೆ. ಅರ್ತಗಳ ವಿಬಾಗಿಸಿ ಕೊಡುದರ್ದಾಗಿ ಇದರ ವಿಭಕ್ತಿಗಂತೇಳುದು. ಈ ವಿಭಕ್ತಿಗ ಯಾವ ನಾಮಪದಗಳ ಗಟಕಕ್ಕೆ ಸೇರುವೆನೋ ಅವುಗಳ ಪ್ರಕೃತಿಂತ ಕರೀದು ವಾಡಿಕೆ. ಏಳ್ ತರದ ವಿಬಕ್ತಿಗಂತ, ಹಿಂದೆನ ವೈಯಾಕರಣಂಗ ಗುರ್ತಿಸಿಯೊಳೊ. ಅವ್ಕೆ ಶಾಸ್ತ್ರೀಯವಾಗಿ ಬೇರೆ ಹೆಸರ್‌ಗ ಇದ್ದರೂ, ವ್ಯಾವಹಾರಿಕ ಅನುಕೂಲಕ್ಕಾಗಿ, ಪ್ರತಮಾ, ದ್ವಿತೀಯ, ತ್ರತೀಯ, ಚತುರ್ತಿ, ಪಂಚಮಿ, ಷಷ್ಠಿ, ಸಪ್ತಮಿಂತ ಕರ್‌ದ್, ಎಂಟ್ನೇದರ ಸಂಬೋದನೆಂತ ಕರ್ದವೆ. ಈ ವಿಬಕ್ತಿಗ, ಒಂದು ವಾಕ್ಯಲಿ, ನಾಮಪದ ಮತ್ತೆ ಕ್ರಿಯಾಪದಗಳಿಗೆ ಸಮ್ಮಂದ ಕಲ್ಪಿಸುವೆ. ಈ ಸಮ್ಮಂದನ 'ಕಾರಕ' ಸಮ್ಮಂದತ ಶಾಸ್ತ್ರೀಯವಾಗಿ ಹೇಳ್ವೆ. ಅವೆ ಕರ್ತೃ, ಕರ್ಮ, ಕರಣ, – ಹೀಂಗೆ ಹೆಸರ್‌ಗ, ಕಾರಕಗ ಎಷ್ಟ್? ವಿಬಕ್ತಿಗ ಎಷ್ಟ್? ತೆಲ್ಲ ದೊಡ್ಡ ಚರ್ಚೆ ಎದ್ದುಟು. ಅದೆಲ್ಲ ನಮ್ಮ ಈಗನ ಉದ್ದೇಶಕ್ಕೆ ಅಗತ್ಯ ಇಲ್ಲೆ.

**ವಿಬಕ್ತಿಗ ಏಳ್ ಮತ್ತೆ ಒಂದ್ (7+1) :** 1. ಪ್ರಥಮಾ, 2. ದ್ವಿತೀಯ, 3. ತೃತೀಯ, 4. ಚತುರ್ಥಿ, 5. ಪಂಚಮಿ, 6. ಷಷ್ಟೀ, 7. ಸಪ್ತಮಿ, 8. ಸಂಬೋಧನಾ

ಪ್ರತಮಾ ವಿಬಕ್ತಿಗೆ ಪ್ರತ್ಯಯ ಇಲ್ಲೆ. ಪ್ರಕೃತಿಯೇ ಪ್ರತಮಾದ ಕಾರ್ಯನಿರ್ವಹಿಸಿದೆ. ಉದಾರ್‌ಣೆಗೆ: ಮರ ಬೀತ್,

ರಾಮಣ್ಣ ಬಾತ್, ಕೂಸ್ ಅತ್ತ್‌ತ್. ಇಲ್ಲಿ ಮರ, ರಾಮಣ್ಣ, ಕೂಸು ನಾಮಪದಗ, ಆಯಾ ವಾಕ್ಯಗಲ್ಲಿ ಕರ್ತೃ ಸ್ತಾನ ವಹಿಸಿಯೊಳೊ.

ಹಿಂದೆನ ಕೆಲೊವು ವ್ಯಾಕರಣ ಪಂಡಿತ, ಕಡ್ಡಾಯವಾಗಿ ಪ್ರಥಮಾ ವಿಬಕ್ತಿ ಪ್ರತ್ಯಯನ ಹಾಕಿಯೇ ತೀರೊಕುಂತ ಸಿಸ್ಟ ಕನ್ನಡಲಿ 'ಮರ ಬಿತ್ತು' ತ ಹೇಳುವ ಬದ್ಲ್ ಮರವು ಬಿತ್ತು ತ ಹೊಳೆ ಹರಿಯುತ್ತದೆಂತ ಹೇಳುದರ 'ಹೊಳೆಯು ಹರಿಯುತ್ತದೆ: ಹೇಳ್ವ ಕ್ರಮನ ಅನುಸರ್‌ತಿದ್ರೂ, ಹೀಂಗೆ ಮಾಡಿರೆ ಬಾಸೆನ ಸಹಜ ರೂಪುಗೆ ಅಪಚಾರ ಮಾಡ್‌ದಾಂಗಾದೆ.

**ದ್ವಿತೀಯಾ ವಿಬಕ್ತಿಗೆ:**–ನ; ಉದಾರ್‌ಣೆಗೆ, ಮರನ ಕಡಿ, ಅಂವನ ಕರಿ.

**ತೃತೀಯಾ ವಿಬಕ್ತಿಗೆ:** – ನ್ದ; ಉದಾರ್‌ಣೆಗೆ, ಮರನ ಮನೆ ಕಟ್ಟಕ್, ಕೆಬಿನ್ದ ಕೇಳ್, ಕಣ್‌ನ್ದ ನೋಡು

**ಚತುರ್ಥೀ ವಿಬಕ್ತಿಗೆ:** – ಕೆ; ಉದಾರ್‌ಣೆಗೆ, ಅಕಾರಾಂತ ನಪುಸಂಕ ಲಿಂಗದ ಪ್ರಕೃತಿಗೆ –ಕೆ ಸೇರ್ಕನ ಕ್ ಆಗಮ ಆದೆ. ಉದಾ: ಮರ+ಕೆ ಮರಕ್ಕೆ, ಮರಕ್ಕೆ ನೀರ್ ಹೊಯ್ಯಿ, ದನಕ್ಕೆ ಹುಲ್ಲು ಹಾಕ್.

**ಪಂಚಮೀ ವಿಬಕ್ತಿ:** – ನ್ದ; ಇದ್ ಪ್ರತ್ಯಯದ ರೂಪುಲಿ ತೃತೀಯಾ ವಿಬಕ್ತಿನ ರೂಪಲೇ ಉಟ್ಟು. ಪಂಚಮೀ ವಿಬಕ್ತಿನ ಅರ್ತಲಿ ಪ್ರಯೋಗ ಆಕನ ಕ್ರಿಯಾಪದ, ಬಾ, ಹೋಗು ಮುಂತಾದ ಯಾದಾರ್ ಚಲನೆನ ಹೇಳುವ (ಅಕರ್ಮಕ–Intransitive) ಕ್ರಿಯಾ ಪದಗ ವಾಕ್ಯಲಿ ಬಂದವೆ. ಉದಾರ್‌ಣೆಗೆ : ಮನೆನ್ದ ಬಾತ್; ಮರನ್ದ ಹಣ್ಣ್ ಬೀತ್; ಇತ್ಯಾದಿ.

**ಷಷ್ಠಿ ವಿಬಕ್ತಿ:** ಅ; – ಅಕಾರಾಂತ ನಪುಂಸಕ ಲಿಂಗದ ಪ್ರಕೃತಿಗೆ ಷಷ್ಠಿ ವಿಭಕ್ತಿನ ತೋರುವ ಅ ಸೇಕನ ವ್– ಆಗಮ ಆದೆ. ಅ ಸೇರ್ಕನ – ದ್ – ಆಗಮ ಆದೆ. ಉದಾರ್‌ಣೆಗೆ : ಮರ+ಅ → ಮರದ; ಹಣ+ಅ → ಹಣದ; ಕೆಲೊವು ಸರ್ತಿ, –ನ್ ಆಗಮ ಆದೂ ಉಟ್ಟು, ಉದಾರ್‌ಣೆಗೆ: ಮರ+ ಅ → ಮರನ; (ಮರ ಶಬ್ದಲಿ ಮಾತ್ರ ಇದ್ ಕಂಡದೆ. ಇದೇ ಮೂಲ ರೂಪ ಆಗಿರೊಕು; ಮರದಂತೇಳು ಸಿಸ್ಟ ಕನ್ನಡದ ಪ್ರಬಾವಂದ ಆಗಿರಿಕೆ ಸಾಕ್), ಹಣ +ಅ → ಹಣನ;

**ಸಪ್ತಮಿ ವಿಬಕ್ತಿ:** – ಲಿ; ಇದಿಕೆ ಪ್ರತ್ಯಯ. ಪ್ರಕೃತಿಗೆ ನೇರವಾಗಿ ಇದ್ ಸೇರೆ. ಉದಾರ್‌ಣೆಗೆ : ಮರ+ಲಿ →ಮರಲಿ, ಮರಲಿ ಹಕ್ಕಿ ಕುದ್ದುಟು. ಊರು+ಲಿ → ಊರುಲಿ, ಊರುಲಿ ಮಳೆ ಬಂದುಟು

ಈ ಪ್ರತ್ಯಯ ನಪುಂಸಕ ವರ್ಗದ ನಾಮ ಪ್ರಕೃತಿಗಳಿಗೆ ಮಾತ್ರ ಸೇರ್ದೆ. ಬೇರೆ ಮಾನವ ವರ್ಗಲಿ, ಷಷ್ಠಿ ವಿಬಕ್ತಿ ಸೇರ್ದ ನಾಮಪದ ಆದ ಮೇಲೆ ಹಕ್ಕಲೆ, ಒಟ್ಟಿಗೆಂತೇಳ್ವ ಪದಗಳ ಮೂಲಕ ಇದ್ ವ್ಯಕ್ತವಾದೆ. ಉದಾರ್ಣೆಗೆ: ನನ್ನಕ್ಕಲೆ ಆ ಪುಸ್ತಕ ಉಟ್ಟು, ಅವನೊಟ್ಟಿಗೆ ಹೇಳ್ಬಡ, ಯಾರ ಹಕ್ಕಲೆನೂ ಹೇಳ್ಬಡ

**ಸಂಬೋದನಾ ವಿಬಕ್ತಿ :** ಯಾರಾರ್ ಕರಿಯಕನ – ಏಂತೇಳುವ ಉದ್ಗಾರ ಬಂದದೆ. ಅದರ ನಾಮಪದಕ್ಕೆ ಸೇರ್ಸಿ ಈ ವಿಬಕ್ತಿನ ಪ್ರಯೋಗ ಆದೆ. ನಿಜಾಗಿ ಇದ ಕ್ರಿಯಾಪದದೊಟ್ಟಿಗೆ ಸಂಬಂದ ಹೊಂದ್‌ದ್‌ಲೆ. ಹಾಂಗಾಗಿ ಇದರ ವಿಬಕ್ತಿಗಳ ಸಾಲಿಗೆ ಸೇರಿಕೆ ಸಾದ್ಯ ಇಲ್ಲೆ. ಕನ್ನಡವ ಸಂಪ್ರದಾಯ ವ್ಯಾಕರಣಗಲ್ಲಿ ಇದರ ಹೇಳ್ಯೊಳೊ. ಆ ಕಾರಣಕಾಗಿ ಇಲ್ಲಿ ಸೇರ್ಸಿಯೊಳೆ. ಉದಾರ್‌ಣೆಗೆ: ಮರ+ಏ → ಮರನೇ, ಮರನೇ ಹಣ್ಣೆ ಕೊಡು. ದೇವ್ರ+ಏ → ದೇವ್ರೇ, ದೇವ್ರೇ ಒಳ್ಳೆ ಬುದ್ದಿ ಕೊಡ್. ಇತರ ಕಡೆಗಲ್ಲಿ ನಾಮ ಪದದ ಅಂತ್ಯ ಸ್ವರನ ದೀರ್ಗ ಮಾಡಿರೆ ಸಾಕ್. ರಾಮಾ, ಸೀತೇ, ಅಪ್ಪಾ, ಅವ್ವಾ ಇತ್ಯಾದಿ.

**ನಾಮಪದ, ಕ್ರಿಯಾಪದ ವೆತ್ಯಾಸ :** 1. ಅಂವ ಹೈದ, 2. ಅಂವ ಬಾತ್. ಇವೆರ್‌ಡೂ ಪೂರ್ಣ ವಾಕ್ಯಗಳೇ. ಪದಗಳ ಅರ್ತನ ಬುಡ್ಸಿ ನೋಡಿರೆ 1ನೇ ವಾಕ್ಯಲಿ ಬಾವ 'ಹೈದ' ನಾಮಪದ. 2ನೇ ವಾಕ್ಯಲಿ ಬಾವ 'ಬಾತ್' ಕ್ರಿಯಾಪದ, ವಾಕ್ಯನ ವಿಶ್ಲೇಷಣೆ ಮಾಡ್‌ಕನ, ಆಖ್ಯೆ, ಆಖ್ಯಾತಂತ ಎರ್ಡ್ ವಿಬಾಗ ಆದವೆ. ಇವ್ಕೆ ಇಂಗ್ಲಿಸ್ಲಿ, Subject-Predicate ತ ಹೇಳ್ವೆ. ಹೈದ ಮತ್ತೆ ಬಾತ್‌ಂತೇಳ್ವ ಎರ್ಡ್ ಪದಗಳೂ ಆಖ್ಯಾತಗ ಆಗಿ ಇಲ್ಲಿ ಕಂಡವೆ. ಅಂದರೆ 'ಹೈದಂತೇಳ್ವ ಪದಕ್ಕೆ ನಾಮಪದಂತ ವಾಕ್ಯಲಿ ಹಣೆಪೊಟ್ಟಿ ಕಟ್ಟಿಕೆ ಸಾದ್ಯ ಇಲ್ಲೆ. ಅದ್ ಅದರ ಸ್ತಾನದ ಬಲಂದ, ಕ್ರಿಯಾಪದದ ಕಾರ್ಯ ಮಾಡ್ದೆ. ನಿಜಾದ ಕ್ರಿಯಾಪದ ಅಲ್ಲದೆನೂ, ಅದ್ ವಾಕ್ಯಾರ್ತನ ಪೂರ್ತಿ ಮಾಡ್ದೆ, ಹೀಂಗಿರ್ಕನ ಒಂದು ನೆಲೆಲಿ ನಾಮಪದ ಕ್ರಿಯಾಪದಂತೇಳುವ ವೆತ್ಯಾಸ ಮರೆಯಾದೆ. ಇಂತ ರಚನೆಗ ಕನ್ನಡಲಿ ಸಾದ್ಯ. ಬೇರೆ ದ್ರಾವಿಡ ವರ್ಗದ ಬಾಸೆಗಲ್ಲಿಯೂ ಇದೇ ಸಾದ್ಯ. ಉದಾರ್‌ಣೆಗೆ: ಇದ್ ಮನೆ, ಇದ್ ಮರ, ನನ್ನ ಅಣ್ಣ; ನನ್ನ ಅಕ್ಕ–ಇತ್ಯಾದಿ.





**ಸರ್ವನಾಮಗ:** ನಾಮಪದಗಳ ಬದ್‌ಲಿಗೆ ಆ ಸ್ತಾನಲಿ ಬಾವ ರೂಪಗಳಿಗೆ 'ಸರ್ವನಾಮಂತೇಳುವ ಹೆಸರ್ ಒಪ್ಪಿದೆ. ಈಗ ನಾವು ಇಂಗ್ಲಿಷಿನ ಮಾದರಿಗಳ ಅನುಸರಿ ಉತ್ತಮ ಪುರುಷ, ಮದ್ಯಮ ಪುರುಷ, ಮತ್ತೆ ಪ್ರತಮ ಪುರುಷಗಳ ಹೇಳ್ವ ರೂಪಗಳ ಎಲ್ಲದರ್ನೊ 'ಸರ್ವನಾಮ' ತ (=Pronoun) ಕರ್ದವೆ. ಆದರೆ ಹಳಗನ್ನಡ ವ್ಯಾಕರಣ ಸಂಪ್ರದಾಯಲಿ, ದೂರಾರ್ತಕ, ಮತ್ತೆ ಸಮೀಪಾರ್ತಕ ನಿರ್ದೇಶ ಮಾಡ್ವ ರೂಪಗಳ ಮಾತ್ರ ಸರ್ವನಾಮಗಂತ ಕರ್ದವೆ. ಉತ್ತಮ ಪುರುಷ, ಮದ್ಯಮ ಪುರುಷ ತೇಳುವ ರೂಪಗಳ್ಗೆ ಅವರ್ದೇ ಆದ ಒಂದು ಹೆಸರ್ ಇಲ್ಲೆ. ಹಳಗನ್ನಡ ವ್ಯಾಕರಣಗಳ್ಲಿ ಇವ್ಕೆ ನೀನ್, ಆನ್ ತಾನ್ ಗಳ್ತ ಕರ್ದವೆ. ಈಗ ಈ ಎಲ್ಲಾ ರೂಪಗಳ್ನೂ ಸೇರ್ಸಿ ಸರ್ವನಾಮಂತ ಕರಿದು ಇಂಗ್ಲಿಷ್ ಮಾದರಿಂದ, ಅದೂ, ಪಾಶ್ಚಾತ್ಯರ್ ನಮ್ಮ ದೇಸೀ ಬಾಸೆಗಳಿಗೆ ವ್ಯಾಕರಣ ರಚಿಸಿದ ಮೇಲೆ ರೂಡಿಗೆ ಬಾತ್‌ಂತ ಕಂಡದೆ.

**ಕ್ರಿಯಾಪದ :** ಹಳಗನ್ನಡಲಿ ಕ್ರಿಯಾ ಮೂಲರೂಪಕ್ಕೆ (Verbal root)–ಕುಂ ಅಥವಾ – ಗುಂತೇಳ್ವ ಪ್ರತ್ಯಯಗ ಸೇರಿ ಪೂರ್ಣಕ್ರಿಯಾ ಪದಗಳ (Finite Verb) ರಚನೆ ಆವ ಕ್ರಮ ಇತ್ತ್. ಈ ಪ್ರತ್ಯಯಗ ಎಲ್ಲ ಕಾಲಗಳಿಗೂ, ಎಲ್ಲ ಲಿಂಗ, ವಚನಗಳಿಗೂ ಸಮಾನವಾಗಿತ್ತ್, ಈ ತರದ ಕ್ರಿಯಾಪದ ರಚನೆ ಈಗ ಮಲೆಯಾಳಂ ಬಾಸೆಲಿ ಮಾತ್ರ ಕಂಡದೆ, ಈಗನ ಕನ್ನಡಲಿ ಇದರ ಕೆಲವೇ ಕೆಲೊವು ಅವಸೇಸಗ ಮಾತ್ರ ಒಳ್ದೊಳೊ.

ಸಿಸ್ಟ ಕನ್ನಡರೂಪಲಿ ಮೂರು ಕಾಲಗ, ಭೂತ, ವರ್ತಮಾನ, ಭವಿಷ್ಯತ್‌ಂತೇಳ್ವ ಕಾಲವಿವಕ್ಷೆ ಉಟ್ಟು, ವಾಕ್ಯದ ಆಕೇರಿಲಿ ಯಾವ ನಾಮಪದ ಉಟ್ಟೋ ಅದಿಕೆ ಸಂವಾದಿಯಾದ ಕ್ರಿಯಾಪದಗಳಿಗೆ ಸಂವಾದಿಯಾದ ಆಕ್ಯಾತ ಪ್ರತ್ಯಯ (ಸರ್ವನಾಮ ಪ್ರತ್ಯಯ–Pronominal Termination) ಕ್ರಿಯಾ ಪದದ ಕೊನೆಗೆ ಬಂದ್ ಪೂರ್ಣ ಕ್ರಿಯಾಪದಂದ ಕೂಡ್ಡ ವಾಕ್ಯ ರಚನೆ ಆದೆ. ಶಿಷ್ಟ ಕನ್ನಡಲಿ ಬೂತ ಮತ್ತು ಬವುಸ್ಯತ್ಕಾಲದ ಕ್ರಿಯೆಗಳ್‌ಗೆ ಒಂದೇ ತರದ ಸರ್ವನಾಮ ಪ್ರತ್ಯಯಗ ಒಳೊ, ವರ್ತಮಾನ ಕಾಲಕ್ಕೆ ಬೇರೆಯೇ ಆದ ಸರ್ವನಾಮ ಪ್ರತ್ಯಯ ಉಟ್ಟು.

ಅರೆಬಾಸೆಲಿ ವರ್ತಮಾನ, ಬೂತ ಮತ್ತೆ ಬವುಸ್ಯತ್ ಕಾಲದ ಕ್ರಿಯೆಗಳ ರಚನೆಲಿ, ಕ್ರಿಯಾಪದದ ಮೂಲರೂಪ ಕಾಂಬೊದು ಬವುಷ್ಯತ್ ಕಾಲದ ಕ್ರಿಯೆಗಳ್‌ಲಿ ಮಾತ್ರ, ವರ್ತಮಾನ ಕ್ರಿಯಾರೂಪಕ್ಕೆ ಬೂತಕಾಲವೇ ಮೂಲವಾಗುಟ್ಟು, ಇದೊಂದು ಸಂಯುಕ್ತ ರೂಪದ ಕ್ರಿಯಾಪದವಾಗಿ ಕಂಡದೆ. ಉದಾರ್‌ಣೆಗೆ,

| | ವರ್ತಮಾನ | ಬೂತಕಾಲ | ಬವುಸ್ಯತ್ಕಾಲ |
|---|---|---|---|
| ನಾ | ಬನ್ನೆ(ಬಂದನೆ) | ಬಂದೆ | ಬಾವೆ |
| ನೀ | ಬಂದಿಯ | ಬಂದ | ಬಾವ |
| ನಾವು | ಬಂದವೆ | ಬಂದೆ(ಬಂದೊ) | ಬಾವೊ |
| ನೀವು | ಬಂದರೆ | ಬಂದರಿ | ಬಾವೊರಿ |
| ನಾ | ಕೊಟ್ಟನೆ | ಕೊಟ್ಟೆ | ಕೊಡುವೆ |
| ನಾವು | ಕೊಟ್ಟವೆ | ಕೊಟ್ಟೊ | ಕೊಡುವೊ |
| ನಾ | ಹೋನೆ | ಹೋದೆ | ಹೋವೆ |
| ನೀ | ಬಂದಿಯ | ಬಂದ | ಬಾವ |
| ನಾವು | ಹೋದವೆ | ಹೋದೊ | ಹೋವೊ |
| ನೀ | ಹೋದಿಯ | ಹೋದ | ಹೋವ |
| ನೀವು | ಹೋದರೆ | ಹೋದರಿ | ಹೋವರಿ |
| ಅಂವ | ಬಂದವೆ | ಬಾತ್ | ಬಾದು |
| ಅದ್ | ಬಂದದೆ | ಬಾತ್ | ಬಾದು |
| ಅವು | ಬಂದವೆ | ಬಂದೊ | ಬಾವೊ |

ಪ್ರತಮ ಪುರುಷ ಸರ್ವನಾಮ ರೂಪಲಿ ಪುಲ್ಲಿಂಗ, ಪುಲ್ಲಿಂಗೇತರಂತ ವೆತ್ಯಾಸ ಇದ್ದರೂ ವಾಕ್ಯಲಿ ಬಾವ ಕ್ರಿಯಾಪದಲಿ ಆ ವೆತ್ಯಾಸ ಇಲ್ಲೆ. ಪೂರ್ಣ ಕ್ರಿಯಾಪದ ನಪುಂಸಕ ಲಿಂಗನ ಮಾತ್ರ ತೋರ್‌ಸಿದೆ.

**ಬನ್ನೆ, ಹೋನೆ :** ಈ ಎರ್‌ಡ್ ಕ್ರಿಯಾಪದಗ ವಿಸೇಸಾಗಿ ಕಂಡವೆ, ಸಿಸ್ಟ ಕನ್ನಡಲಿ ಬರುತ್ತೇನೆ. ಹೋಗುತ್ತೇನೆಂತ ಇದ್ದ್, ಕ್ರಿಯಾ ಮೂಲ, ಕಾಲವಾಚಕ ಮತ್ತೆ ಸರ್ವನಾಮ ಪ್ರತ್ಯಯಗಳ ಪ್ರತ್ಯೇಕ ಪ್ರತ್ಯೇಕವಾಗಿ ಗುರ್ತಿಸಿಕೆ ಸಾದ್ಯ ಉಟ್ಟು, ತರ್ ತೇಳ್ವ ದಾತು ಕೂಡ ತನ್ನೆಂತ ಆದೆ. ತರ್–ಬರ್– ತೇಳುವ ದಾತುಗಳ ಬುತರೂಪ ದಾತುಗ ತನ್– ಬನ್ ತ ಆದವೆ. ಈ ಮೂರನ್ನೂ ದಾತು+ಕಾಲವಾಚಕ+ಸರ್ವನಾಮ ಪ್ರತ್ಯಯಂತ ಬೇರೆ ಬೇರೆ ವಿಂಗಡ್ಸಿಕೆ ಸಾದ್ಯ ಆದುಲೆ. ಅವೆಲ್ಲವೂ ಸೇರಿರುವ ಸಂಶ್ಲಿಷ್ಟ (Inflected) ರೂಪಗ ಆಗಿ ಸೇರಿ ಹೋಗೊಳೊಂತ ಕಂಡದೆ. ಬಂದನೆ>ಬನ್ನೆ, ಹೋದನ>ಹೋನೆ; ತಂದನೆ>ತನ್ನೆಂತ ಆಗಿ–ರೊಕೂಂತ ಹೇಳೊಕಾದೆ.ವಿಶೇಷಂತೇಳಿರೆ, ಬನ್ನೆ, ಹೋನೆಂತೇಳುವ ಕ್ರಿಯಾಪದಗ ಅರೆಬಾಸೆಲಿದ್ದಾಂಗೆ ನೀಲಗಿರಿನ ಬಡಗರ ಮಾತ್ಲೂ ಬಳಕೆ ಆದೆ. ಬಡಗರೂ ಸಾ ತಮ್ಮ ಜಾತಿನ 'ಗೌಡ'ತೇ ಕರ್ಕಂಡವೆ. ನಮ್ಮ ಇತ್ತನ ಗೌಡರ್‌ಗೂ, ಇವ್ಕೂ ಏನಾರ್ ಸಾಂಸ್ಕೃತಿಕ ಸಮ್ಮಂದ ಉಟ್ಟೋಂತ ನೋಡ್ವ ಒಂದ್ ಶಾಸ್ತ್ರೀಯ ಅದ್ಯಯನದ ಅಗತ್ಯ ಉಟ್ಟು. (ಕೆ.ಕೆ.ಜಿ.; ವಿ.ಬಿ.)

**ಅರೆಬಾಸೆನ ನೆರೆಕರೆ :** ಕೊಡಗ್, ದಕ್ಷಿಣಕನ್ನಡ ಮತ್ತೆ ಕಾಸರಗೋಡ್ ಜಿಲ್ಲೆನ ಕೊಡವ, ತುಳು, ಮಲಯಾಳಿ ಬಾಸೆಗಳ ನೆರೆಕರೆಲಿ ಮಾತಾಡ್‌ವ ಬಾಸೆ ಅರೆಬಾಸೆ. ಈ ಬಾಸೆಲಿ ಇಂದ್‌ಗೂ ಕಾಂಬ ಕೆಲವ್ ವಿಸೇಸ ಪದಂಗ ಮೂಲದ್ರಾವಿಡ ಕಾಲಕ್ಕೆ ಸೇರ್‌ದಂಗೆ ಕಂಡದೆ. ಅರೆಬಾಸೆನ ಹೆಚ್ಚಿನ ಪದಗ ಹಳಗನ್ನಡಲಿನೂ ಕಾಂಬಕೆಸಿಕ್ಕಿದೆ. ಇದರ ನೋಡಿರೆ, ಅರೆಬಾಸೆನ ಪದಗಳ ಇತಿಯಾಸ ಕನಿಸ್ಟ ಎರಡ್ ಸಾವಿರ ವರ್‌ಸಗಳಿಗೂ ಹಿಂದೆ ಹೋದೆ. ಆದರೆ ಅವು ದಿನ ಬಳಕೆನ

ಬಾಸಾ ರೂಪಲಿ ಕಂಡದ್ ಹೆಚ್ಚಿತೇಳಿರೆ 500 ವರ್ಸಗಳ ಮೀರಿರ್‌ಕಿಲೆ. ಏಕೆತೇಳ್‌ರೆ ಅರೆಬಾಸೆನ ಪ್ರದಾನಾಗಿ ಮಾತಾಡ್‌ವ ಅರೆಬಾಸೆ ಪರಿಸರದ ಗೌಡಮುದಾಯದ ಜೆನಂಗ ಮೂಲತಹ ಹಾಸನ ಜಿಲ್ಲೆನ ಐಗೂರು ಪರಿಸರಕೆ ಸೇರ್‌ದವು. ಅಲ್ಲಿ ಹಿಂದೆ ಹೇಂಗೋ, ಹಂಗೇ ಇಂದುನೂ ಅರೆಬಾಸೆ ಇಲ್ಲೆ.

ಈಗನ ಹಾಸನ ಪರಿಸರಲಿರ್‌ವ ಐಗೂರು ಪ್ರಾಂತ್ಯಂದ ಕರಾವಳಿನ ಕಡೆಗೆ ಗೌಡ್ರುಗ ವಲಸೆ ಬಾಕೆ ನಿರ್‌ದಿಸ್ಟ ಕಾರಣಗೆಂತ? ಈ ವಲಸೆ ಯಾಗ ನಡ್ತು ತೇಳಿದ್ ಹೇಳಿಕೆ ಬರ್‌ದ್ ಇಸಿದ ಆದಾರಗ ಎಂತ ಇಲ್ಲೆ. ಬಾಯಿಮಾತ್‌ನ ಆದಾರಗಳ ಪ್ರಕಾರ ನೋಡ್‌ದಾದರೆ, ಐಗೂರ್ ಪ್ರದೇಸಲಿ ಕಂಡ ಕಡು ಬರ ಪರಿಸ್ತಿತಿ, (ಆ ಊರ್‌ಲಿ ಕಿಚ್ಚಿನ ಮಳೆ ಬಾತ್ ತೇಳುವ ನಂಬಿಕೆ ಜೆನರ್‌ಲಿ ಪ್ರಚಲಿತಲಿ ಉಟ್ಟು) ಅಲ್ಲಿನ ಸೀಮೆನ ಅರಸರ ಸೋಸಣೆ (ಈ ಬಗ್ಗೆ ಲಾವಣಿ ಒಂದ್ ಹಾಸನ ಜಿಲ್ಲೆನ ಸಕಲೇಸಪುರ ತಾಲೂಕುನ ಕೂಡು ರಸ್ತೆ ಪರಿಸರಲಿ ಈಗಲೂ ಉಟ್ಟು) ಇಂತ ಕಾರಣಗಳಂದ ನೋಡೊಕು. ಬಿಸಿಲೆ ಗಟ್ಟ ಇಳ್‌ದ್ ದನಗಳೊಟ್ಟಿಗೆ ಕುಲ್ಕುಂದಕೆ ಬಂದ ಜೆನ ಕುಮಾರದಾರಾ ಪರಿಸರಲಿ ನೆಲೆಕಂಡ ಸಾದ್ಯತೆನೂ ಉಟ್ಟು. ಕಂದ್ರಪ್ಪಾಡಿನ ಪುರುಸ ಬೂತ, ಪಂಜದ ಸಿರಾಡಿ ಬೂತ ಮತ್ತೆ ಏನೇಕಲ್ಲ್‌ನ ಬಚ್ಚ ನಾಯ್ಕ, ಕಿನ್ನಿ ಮಾಣಿ–ಪೂಮಾಣಿ ದೆವ್ವಂಗ ಗೌಡ್ರ ವಲಸೆನ ಬೇರೆ ಬೇರೆ ವಿಸಯಗಳ ಮೇಲೆ ಬೊಳ್ಪು ಕಾಣ್ಸಿದೆ. ಏನೇ ಇದ್ದರೂ ಈ ವಲಸೆ 15–16 ನೇ ಸತಮಾನಲಿ ನಡ್‌ದಿರ್‌ವ ಗಟನೆಂತೇಳಿ ಊಹೆ ಮಾಡಕ್. ಇದ್‌ಕೆ ಸೆರಿ ಆಗಿ, ಇಂದ್ ಅರೆಬಾಸಿಕ ಗೌಡ್ರು ಪ್ರದಾನ ಆಗಿರ್‌ವ ಪಂಜ ಮತ್ತೆ ಎಣ್ಮೂರು ಪ್ರದೇಸಲಿ ಕೋಟಿ ಚೆನ್ನಯ ತೇಳುವ ಅವುಳಿ ವೀರರ ಆರಾದನಾ ಕ್ರಮ ಉಟ್ಟು. ಎಣ್ಮೂರ್‌ಲಿ ನಡ್ದ ಹೋರಾಟಲಿ ಕೋಟಿ ಚೆನ್ನಯರ್ ಜೀವಕಳ್‌ಕಂಡವೆ. ಈ ಪರಿಸರಲಿ ಕೋಟಿ ಚೆನ್ನಯರ ಹುಟ್ಟು ಸಾದನೆ ಮತ್ತೆ ಸಾವುನ ವಿವರಿಸುವ ದೊಡ್ಡ ದೊಡ್ಡ ಪಾಡ್ದನಗ ಸಿಕ್ಕಿದೆ. ಆದರೆ ಈ ಆಚರಣಾ ಪ್ರಕ್ರಿಯೆಲಿ ಇಲ್ಲರೆ ಪಾಡ್ದನಗಳ್‌ಲಿ ಗೌಡರ ಉಲ್ಲೇಕ ಇಲ್ಲೆ. ಕೋಟಿಚೆನ್ನಯರ ಕಾಲನ 16 ನೇ ಸತಮಾನಂದ ಈಚೆಗೆ ತಾವ ಡಾ. ವಿವೇಕ ರೈ ಅವರ ವಾದನ ಒಪ್ಪಿಕಂಡರೆ, 16ನೇ ಸತಮಾನದ ಹೊತ್ತುಗೆ ಅರೆಬಾಸೆ ಪರಿಸರಲಿ ಗೌಡ್ರುಗ ಈಗನಂಗೆ ಪ್ರಬಲರಾಗಿತ್ತುಲೆ ತೇಳಿ ಊಹೆ ಮಾಡಿಕಂಬಕಾದೆ.

ಈ ಊಹೆಗೆ ಸರಿಯಾಗಿದ್ ಕರಾವಳಿನ ಗೌಡ್ರುಗ ಹಾಸನ ಜಿಲ್ಲೆನ ಹೊಸಕೋಟೆನ ಕೆಂಚಾಂಬಿಕೆ ದೇವುರಿಗೆ ಹರ್‌ಕೆ ಒಪ್ಪುಸುದರ ಕಾಣಕ್. ಹೊಸಕೋಟೆನ ಕೆಂಚಮ್ಮ ದೇಸ್ತಾನನ ಕ್ರಿ. ಸ. 1604ರ್‌ಲಿ ಸ್ತಾಪನೆಮಾಡ್‌ದ್ ತೇಳ್‌ದಕೆ ಸಾಸನಾದರಗೊಳೊ. ಈ ಹೊಸಕೋಟೆ ಕೆಂಚಮ್ಮಂಗೆ ಕರಾವಳಿನ ಗೌಡ್ರು ಈಗೊಳು ಹರ್‌ಕೆ ಒಪ್ಪ್‌ಸ್‌ವೆ ಮಾತ್ರಾಲ್ಲ, ಪಂಜ ಹಕ್ಕಲೆನ ಏನಡ್ಕ ಮನೆತನದವರ ಆಸ್ರಯಲಿ ಕೆಂಚಾಂಬಿಕೆಗೊಂದು ಗುಡಿನ ಕಟ್ಟಿಯೊಳ. ಈ ಅಂಸಗ ಹಾಸನ ಪರಿಸರಂದ ಗೌಡ್ರು ಸುಳ್ಯ ಪರಿಸರಕ್ಕೆ ವಲಸೆ ಬಂದ ಕಾಲನ ಹೆಚ್ಚಿಕಮ್ಮಿ 16ನೆ ಸತಮಾನಕೆ ನಿಗದಿಪಡಿಸಿಕೆ ಒತ್ತಾಯ್‌ಸಿದೆ. ಇದರ ಒಟ್ಟಿಗೆ ಸಕಲೇಸಪುರ ತಾಲೂಕುನ ಕೂಡುರಸ್ತೆನ ಹಕ್ಕಲೆ ಒಣಗೂರು ಸಬ್ಬಮ್ಮಂಗೂ ಗೌಡ ಸಮುದಾಯದವು ಹರ್‌ಕೆ ಒಪ್ಪ್‌ಸ್‌ವೆ. ಕೂಡು ಮಾರ್‌ಗದ ನೆರೆಕರೆಲಿ ಸಿಕ್ಕುವ ಮೌಕಿಕ ನಿರೂಪಣೆಗಳ ಪ್ರಕಾರ ಒಣಗೂರು ಸಬ್ಬಮ್ಮಂಗೂ 16ನೇ ಸತಮಾನಲಿ ಪ್ರವರ್ದಮಾನಕೆ ಬಂದ ದೆವ್ವ. ಅಂದ್‌ನಂಗೆ ಇಂದ್‌ಗೂ ಹಾಸನ ಪರಿಸರಲಿ ಅರೆಬಾಸೆ ಪ್ರಚಲಿತಲಿ ಇಲ್ಲೆ. ಇದ್ ಹೌದುಂತಾದರೆ ಅರೆಬಾಸೆಗೆ ಹೆಚ್ಚಿತೇಳಿರೆ 400ರ್‌ಂದ 500 ವರ್ಸಗಳ ಇತಿಯಾಸ ಒಳದ್ ತೇಳಿ ಹೇಳಕ್.

ಈ ಬಾಸೆನ ಬಗ್ಗೆ ಸುರುಗೆ ಸರ್‌ತಿ ಅದ್ಯಯನ ನಡ್‌ಸಿದವ್ ಡಾ. ಕೆ. ಕುಶಾಲಪ್ಪ ಗೌಡ್ರು. ಅವು ಅದರ ಗೌಡ ಕನ್ನಡ ತೇಳಿದ್ ಕರ್‌ದೊ, ಅಂತಾರಾಸ್ಟ್ರೀಯ ಓದೊವುಕೆ ಬಾಸೆನ ಪರ್‌ಚಯ ಮಾಡ್ದೊ. ಆದರೆ ಅರೆಬಾಸೆ ಪರಿಸರಲಿ ಗೌಡ್ರುಗಳ ಬುಟ್ಟು ಒಳ್‌ದವ್ ಕೂಡ ಈ ಬಾಸೆನ ಮಾತಾಡ್‌ದರ್‌ಂದ ಅರೆಬಾಸೆತೇಳ್‌ವ ಪದ ಬಳಕೆಲಿ ಒಳ್‌ತ್. ಈ ಬಾಸೆಲಿ ಕನ್ನಡ ಅರ್ದ ರೂಪಲಿ ಇರ್‌ದರ್‌ಂದ ಅದರ ಯಾರೋ ಅರೆಬಾಸೆತೇಳಿ ಕರ್‌ದಿರೊಕು. ಉದಾಹರಣೆಗೆ 'ಹೋಗುತ್ತೇನೆ' ತೇಳ್‌ವ ಕನ್ನಡ ಪದ ಅರೆಬಾಸೆಲಿ 'ಹೋನೆ', 'ಬರುತ್ತೇನೆ' 'ಬನ್ನೆ'. 'ತಿನ್ನುತ್ತೇನೆ' ತೇಳ್ದು 'ತಿಂದನೆ' ತೇಳಿದ್ ಆದೆ. ಕನ್ನಡಂದ ಈಗೀಗ ಕಾಣೆ ಆಗತಿರ್‌ವ ಋ, ಙ, ಪದಗೆಲ್ಲ ಈ ಬಾಸೆಲಿ ಈಗೊಳು ಒಳ್‌ದುಟು, ಇಸ್ಟಲ್ಲದೆ ಅದರ ಹೇಂಗೆ ಹೇಳೊಕುತನು ಗೌಡ್ರುಗಳಿಗೆ ಗೊತ್ತುಟು.

ಈ ಅರೆಬಾಸಿಕ ಗೌಡ್ರು ಬೇರೆ ಸಮುದಾಯದ ಜೆನರೊಟ್ಟಿಗೆ ಸೇರಿಕಂಡ್ ಕೊಡಗ್‌ಂದ ಬ್ರಿಟಿಸರ ಇಳ್‌ಸಿಕಾಗಿದ್ ಸುಮಾರ್ 5 ವರ್ಸಗಳ ಕಾಲ (1832–37) ಹೋರಾಡ್‌ದ್ 'ಕಲ್ಯಾಣಪ್ಪನ ಕಾಟಕಾಯಿ' ತೇಳಿದ್ ಹೆಸುರ್‌ಮಾಡಿಟು. ಅಂದ್ ಈ ಹೋರಾಟಂದ ಬ್ರಿಟಿಸರ ಅವಕೃಪೆಗೆ ಒಳಗಾದ ಸುಳ್ಯ ಪರಿಸರ ಅಬಿರುದ್ದಿ ಆಗದೆ ಹಿಂದೆ ಬೀತ್. 1970–80ರ ದಸಕಲಿ ಅಡ್‌ಕೆಗೆ ಒಳ್ಳ ಕ್ರಾಯ ಬಂದ ಮೇಲೆ ಸುಳ್ಯ ಅಬಿರುದ್ದಿ ಆತ್. ಇಂತ ಬೆಳವಣಿಗೆಗಳ ಒಟ್ಟಿಗೆ ಅರೆಬಾಸೆ–ಸಾಹಿತ್ಯಗಳ ಬಗೆಗೂ ನಿದಾನಾಗಿ ಜೆನಕೆ ತಿಳುವಳ್‌ಕೆ ಹೆಚ್ಚಾಕಂಡ್ ಹೋತ್. ಅಣ್ಣಾಮಲೈಲಿ ಇದ್ದ್, ಮುಂದೆ ಮದ್ರಾಸು ವಿಸ್ವವಿದ್ಯಾಲಯದ ಕನ್ನಡ ವಿಬಾಗದ ಮುಕ್ಯಸ್ತರಾಗಿ ಸೇವೆಸಲ್ಲಿಸಿದ್ ನಿವೃತ್ತರಾದ ಅಂತಾರಾಸ್ಟ್ರೀಯ ಕ್ಯಾತಿನ ಪ್ರಸಿದ್ದ ಬಾಸಾ ವಿಜ್ನಾನಿ ಪ್ರೊ. ಕೋಡಿ ಕುಶಾಲಪ್ಪ ಗೌಡ್ರು ಅರೆಬಾಸೆನ ಬಗ್ಗೆ ಇಂಗ್ಲಿಸ್‌ಲಿ ಪುಸ್ತಕ ಪ್ರಕಟಿಸಿದ ಸುರುನ ಮಹನಿಯರ್. ದಕ್ಷಿಣಕನ್ನಡ ಮತ್ತೆ ಕೊಡಗ್ ಗೌಡ ಸಮಾಜದವ್ ಪ್ರಕಟ್‌ಸಿದ ಸ್ಮರಣ ಸಂಚಿಕೆಗ ಇಂದ್‌ಗೂ ಅಮೂಲ್ಯ ಮಾಹಿತಿ ಕೊಡುವ ಕೃತಿಗ.





ಶ್ರೀ ಹೊದ್ದೆಟ್ಟಿ ಭವಾನಿ ಶಂಕರರ್ ಬರ್ದ ಅರೆಬಾಸೆನ ಪೊದ್ಯಗ ತುಂಬಾ ಜೆನರ ಆಕರ್‌ಸಿಸಿತ್. ಮುಕ್ಯ ಆಗಿದ್ ಅವು ಬರ್ದ 'ಮೇಗಡೆ ಮನೆನ ಮೋಂಟಿ ಗೂಡೆಗೆ ಮೊದ್‌ವೆ ಉಟ್ಟುಗಡ' ತೇಳುವ ಪೊದ್ಯ ಜನಪದ ಪೊದ್ಯಗಳ ಹಾಂಗೆ ಜನಪ್ರಿಯ ಆತ್. 1984ರ್‌ಲಿ ಪುರುಷೋತ್ತಮ ಬಿಳಿಮಲೆ ಅವ್, ಬಿ ಎ. ವಿವೇಕ ರೈ ಅವರ ಮಾರ್‌ಗದರ್‌ಸನಲಿ ಅರೆಬಾಸೆ ಪರಿಸರದ ಗೌಡ ಸಂಸ್ಕೃತಿನ ಮೇಲೆ ಮಹಾಪ್ರಬಂದನ ತಯಾರ್‌ಮಾಡಿದ್, ಮಂಗಳೂರು ವಿಸ್ವವಿದ್ಯಾಲಯಕೆ ಪಿಎಚ್ ಡಿ ಪದವಿಗಾಗಿ ಒಪ್ಪುಸಿಯೊಳೊ.

1991–92ರ್‌ಲಿ ಮಂಗಳೂರು ವಿಸ್ವವಿದ್ಯಾನಿಲಯದ ಕನ್ನಡ ವಿಬಾಗಲಿ ಕೆಲ್‌ಸ ಮಾಡಿಕಂಡಿರ್‌ಕನ ವಿಶ್ವನಾಥ ಬದಿಕಾನ ಅವು ಎಂ. ಫಿಲ್. ಅದ್ಯಯನಕೆ ಅರೆಬಾಸೆನ ಅಜ್ಜಿಕತೆಗಳ ತೆಕಂಡೊ. ಇದ್ಕಾಗಿ ಅವು ಸುಮಾರ್ 120 ಕತೆಗಳ ಕೂಡ್‌ಸಿಯೊಳೊ. ಅದರ್‌ಲಿ 100 ಕತೆಗಳಿಗೆ ವರ್‌ಗ ಮತ್ತೆ ಆ ಕತೆಗಳಿಗೆ 320 ಆಸಯಗಳ ಗುರ್‌ತುಸಿ 'ಗೌಡ ಕನ್ನಡದ ಜನಪದ ಕತೆಗಳು ವರ್‌ಗ ಮತ್ತು ಆಸಯ ಸೂಚಿ' ತೇಳ್‌ವ ಸಂಸೋದನ ಕೃತಿನ ಸಿದ್ದಪಡ್ಸಿ, ಅರೆ ಬಾಸೆನ ಅಜ್ಜಿಕತೆಗ ವಿಸ್ವ ವಿದ್ಯಾಲಯ ಮಟ್ಟಲಿ ಚರ್‌ಚೆಯಾಗುವಂಗೆ ಮಾಡ್ದೊ. ಅವರ ಸಂಸೋದನೆಲಿ ಅವು 7 ಹೊಸ ಉಪವರ್‌ಗಗಳ ಗುರ್‌ತ್‌ಸಿ ಗೌಡ ಕನ್ನಡದ ಕತೆಗಳ್‌ಲಿ ಜಾಣ ಕುದ್ಕನ(ನರಿ) ಜಾಣತನ ಮಾಡಿಕೆ ಹೋಗಿದ್ ಅಕೇರಿಗೆ ಅದೇ ಸತ್ತ್‌ಹೋವ ರೀತಿ ಅರೆಬಾಸೆನ ಅಜ್ಜಿಕತೆಗಳ ಅನನ್ಯತೆನ ಹೇಳ್‌ದೆ ತೇಳಿ ಅವ್ ವಾದಿಸಿದೊ. 1994ರ್‌ಲಿ ಈ ಸಂಸೋದನ ಗ್ರಂತ 'ಗೌಡ ಕನ್ನಡದ ಜನಪದ ಕತೆಗ – ವರ್‌ಗ ಮತ್ತೆ ಆಸಯ ಸೂಚಿ' ತೇಳ್‌ವ ಸೀರ್‌ಸಿಕೆಲೇ ಪ್ರಕಟ ಆತ್. ಅರೆಬಾಸೆನವೇ ಆದ ಡಿ.ವಿ.ಸದಾನಂದ ಗೌಡ್ರು ಕರ್ನಾಟಕದ ಮುಕ್ಯಮಂತ್ರಿಗಳಾದ ಹೊತ್ತುಲಿ ಅರೆಬಾಸೆಗೊಂದ್ ಅಕಾಡೆಮಿನೂ ಮಾಡಿ ಆಗುಟು.

ವಿಶ್ವನಾಥ ಬದಿಕಾನ ಅವು ಕೂಡ್‌ಸಿದ ಅರೆಬಾಸೆನ ಅಜ್ಜಿ ಕತೆಗಳ್‌ಲಿ ಅರೆಬಾಸೆನ ಪೊರ್‌ಲು ಎದ್ದ್ ಕಂಡದೆ. ಈ ಅಜ್ಜಿ ಕತೆಗಳ್‌ಲಿ ಎದ್ದ್ ಕಾಂಬ ವಿಸೇಸ ಗುಣಗತೇಳ್ರೆ ಕತೆಗಳ ಒಳಗೆ ಇರ್‌ವ ಕ್ರಿಯಾಸೀಲತೆ ಮತ್ತೆ ನಾಟಕೀಯತೆನ ಗುಣ. ಇವು ಕತೆನ ಕೇಳೊವರ ಸುಮ್ಮನೆ ಕತೆ ಕೇಳಿಕೆ ಬುಡದೆ, ಚುರ್‌ಕಾಗಿರಿಕೆ ಒತ್ತಾಯಿಸಿದೆ. ಉದಾರ್‌ಣೆಗೆ ಈ ಕತೆನ ನಿರೂಪಣೆನ ನೋಡಿ–

'ಒಂದ್ ಮೊಲಕ್ಕೆ ಈಚೆ ಕಾಡ್‌ಲಿ ಮೇದ್ ಮೇದ್ ಅದ್ಕೆ ಅಲ್ಲಿ ಎಲ್ಲಾ ಮುಗ್ತ್. ತಿಂಡಿ, ತಿನಸ್, ಹುಲ್ಲು ಎಲ್ಲಾ. ಆಚೆಕರೆಗೆ ಹೊಕು. ಹೇಂಗೆ ಹೋದು? ಮೊಲಕೆ ಎಲ್ಲ ದಾಟಿಕೆ ಆದೆನಾ'? ಅಕೇರಿಗೆ ಪ್ರಸ್ನೆಗ ಕೇಳವರ ಉತ್ತರ ಹೇಳಿಕೆ ಕುಟ್ಟಿದೆ. ಇದ್ ಒಂದ್ ಬಗೆಯಾದರೆ, ಇನ್ನೊಂದು ಬಗೆನ ನಿರೂಪಣೆಲಿ ಕತನ ಕ್ರಿಯೆಲಿ ನಾಟಕೀಯತೆ ಉಟ್ಟು. ಉದಾರ್‌ಣೆಗೆ– 'ಒಬ್ಬನೇ ಪೊದ್ಯ ಹೇಳಿಕಣೊಕ್, ಡೋಲ್ ಬೊಟ್ಟಿಕನಕ್, ಗಗ್ಗರ ಆಡಿಸಿಕೊಣೊಕ್, ನಿನ್ನ ಗಾಣ ದೆತ್ತ್‌ನ ಸತ್ತರೆ ಡೋಲ್ ಗಗ್ಗರ ಕೇಳ್‌ವಂತ ಹೇಳ್ತ್. ಇಂವ ಡೋಲ್ ಗಗ್ಗರ ಎಲ್ಲ ಕೊಟ್ಟತ್. ಕುಂಡತ ತಕಂಡ್ ಬಾತ್. ಬೇಲಿಕರೆಲಿ ನಿತ್ತ್ ಕಂಡ್ – ನಾಕತ್ತಿಲಿ ಗೆದ್ದೆ ತೈ ತಕ್ಕ ತೈಂತ ಹೇಳಿ ಕುಣೀದು. ಎತ್ತಿ ಗೆದ್ದೆ ತೈ ತಕ ತೈ, ಗಾನದೆತ್ತಿಲಿ ಗೆದ್ದೆ ತೈ ತಕ ತೈ, ಡೋಲ್ ಗಗ್ಗರಲಿ ಗೆದ್ದೆ ತೈ ತಕ ತೈಂತ ಹೇಳಿ ಕುಣ್ದತ್ ಆತ್.'

ಈ ಕ್ರಿಯಾತ್ಮಕತೆನೆ ಅರೆಬಾಸೆ ಅಜ್ಜಿಕತೆಗಳ ಜೀವ ತೇಳಕ್. ಕನ್ನಡದ ಕತೆಗಳ್‌ಲಿ ಈ ಗುಣ ಇರ್‌ದು ಹೊವ್‌ದಾದರು ಅರೆಬಾಸೆಲಿ ಅದ್ ಹೆಚ್ಚಿಗೆ ಉಟ್ಟು. ಕತೆಗಳ ಮುಕ್ತಾಯ ವಿಸೇಸ ಆಗಿರ್‌ದರ ಓದುಗರ್ ಗಮನಿಸಕ್. ಅಕೇರಿಗೆ ಇದ್ ಕೂಡಾ ಕೇಳವರ ಚುರ್‌ಕ್‌ಲಿ ಇಸಿಕೆ ಇರ್‌ವ ತಂತ್ರದಾಂಗೆ ಕಂಡದೆ. ಉದಾರ್‌ಣೆಗೆ– 'ಕುರೆ ಹಿಂಗೆ ಮಾಡ್ತ್. ಹಿಜ್ಜಿ ಗುಂಡಿ ತೆಗೆಕನ ಒಂದ್ ಹೂಂಸ್ ಹೋತ್. ಮತ್ತೆ ಹಿಜ್ಜಿ ಗುಂಡಿ ತೆಗಿಕನ ಮತ್ತೊಂದು ಹೂಂಸ್ ಹೋತ್. ಮತ್ತೆ ಅದರ್‌ಲಿ ಕುದ್ದ್‌ರ್‌ಕನ ಮೂರನೆ ಹೂಂಸ್ ಹೋಗಿ ಸತ್ತ್ ಹೋತ್. ಅದಕ್ಕೆ ಮೊಣ್ಣು ಮುಚ್ಚಿ ನಾವು ಬರೋಮಾ?'

'ನಾಯಿಗ ಹೊನ್ನಿ ಹಾರಿ ಬಿದ್ದ್ ಓಡ್ರೆ ಇವರ ಕೆಬಿ ಎಲ್ಲ ಹರ್ದೇ ಹೋತ್. ಇವ್ ಕತ್ತಿ ಬೆಡಿನ ಹೆಗ್‌ಲಿಗೆ ಹಾಕಿದೊ ಕೆಬಿಗೆ ಕೈ ಹಿಡ್ಕೊಂಡೊ. ಮನೆಗೆ ಹೋದೊ. –ಇವರ ಹೋಗಿ ನೀವ್ ನೋಡಿಕಂಡ್ ಬರಕಡ'. ಈ ಗುಣಗ ತುಳು ಜನಪದ ಕತೆಗಳ್‌ಲಿ ಕೂಡಾ ಹೆಚ್ಚಿಗೆ ಕಂಡದೆ.

ಗದ್ಯ ಪೊದ್ಯ ಒಟ್ಟಿಗೆ ಇದ್ದರೆ ಅದರ ಚಂಪೂ ತೇಳಿ ನಾವ್ ಕರ್‌ದವೆ. ಅರೆಬಾಸೆಲಿ ಚಂಪೂ ಸೈಲಿನ ಹೋಲುವ ತುಂಬಾ ಕತೆಗೊಳ. ಕೆಳಗೆನ ಬಾಗಗಳ ನೋಡಿ–

'ಬಾಳೆಪಾಪಕ್  
ನೂಲ ಕೈ ತಾಂಗಾಕ್  
ಅಳೆತ್ತರ ಕೆಂಡಕೂಡ್ ಅಲ್ಲಿ ಬಂದ್  
ಸತ್ಯ ಹೇಳ್ನೆಂತ' ಹೇಳ್ತ್‌ಗಡ  
ಅಲ್ಲಿಂದ ಸೀದ ಕುದ್ಕಣ್ಣನ ಮನೆಗೆ ಹೋತ್‌ಗಡ. ಅಲ್ಲಿ ಹೋಕನ  
'ಹಬ್ಬಾಂತ ಬಾರ  
ಹೊಸ್ತೂಂತ ಬಾರ  
ಇಂದೇಕೆ ಬಂದೆ ಚೋರೆಕ್ಕಾ  
ನೀರ್ ಚಾಪೆ ತನ್ನಿರೋಮಕ್ಕಳಿರಾಂತ' ಹೇಳ್ತ್‌ಗಡ. ನಿನ್ನ ನೀರ್‌ಚಾಪೆ ತೆಗ್ದ್ ಬೆಂಕಿಗೆ ಇಟ್ಟ್ ನನ್ನ ಮಕ್ಕಳ ತಿಂದ್‌ದರ ವಿಚಾರ್ಸಿಕೊಡ್‌ಂತ ಹೇಳ್ತ್‌ಗಡ.

ಪೊದ್ಯ ಗದ್ಯ ಮಿಸ್ರದ ಇಂತ ಕತೆಗ ಅರೆಬಾಸೆನ ಸತ್ವ ಶಕ್ತಿನ ತೋರ್‌ಸಿಕೊಟ್ಟದೆ. ತುಂಬಾ ಆಸ್ಚರ್‌ಯ ಆವ ಒಂದ್ ವಿಸಯನ ಇಲ್ಲಿ ಗಮನ್‌ಸೊಕು. ಜಗತ್ತ್‌ನ ಇಡಿ ಕುದ್ಕ ಜಾಣತನಕ್ಕೆ ಹೆಸರ್‌ವಾಸಿ ಆಗುಟು. ಆದರೆ ಅರೆಬಾಸೆನ ಕತೆಗಳ್‌ಲಿ ಅದ್ ಅದರ ದಡ್ಡತನಕೆ ಹೆಸರುವಾಸಿಯಾಗುಟು. ಏನಾರ್ ಜಾಣತನ ಮಾಡಿಕೆ ಹೋಗಿ, ಅಕೇರಿಗೆ ಜೆನರ ಕೈಲಿ ಸಿಕ್ಕಿ ಸಾಯಿದು ಇಲ್ಲಿನ ವಿಸೇಸ. ಉದಾರ್‌ಣೆಗೆ

'ನರಿನ ವಂಸ ಸರ್‌ವನಾಸ' ತೇಳ್‌ವ ಕತೆನ ಸಂಕ್ಷಿಪ್ತ ರೂಪ ಹೀಂಗುಟ್ಟು–

ಒಂದ್ ಊರ್‌ಲಿ ಒಬ್ಬ ಗೌಡ. ಅಂವನ ಮನೆಲಿ ಒಂದ್ ಹಂದಿನೂ, ಕುದ್‌ಕನು ಒಟ್ಟಿಗೆ ಕೆಲ್ಸ ಮಾಡಿಕಂಡಿದ್ದೊ. ಕುದ್‌ಕಂಗೆ ಗದ್ದೆ ಎಳ್ಳುವ ಕೆಲ್‌ಸ ನೆಲ ತೋಂಡುಕನ ಕುದ್‌ಕಂಗೆ ಒಂದ್ ಕಲ್ಲ್ ಸಿಕ್ಕಿತ್. ಅದರ ತೆಗೆಕಾಗದ ಕುದ್‌ಕ ಗೌಡಂಗೆ ದೂರು ಹೇಳಿದ್ ಮೊದ್ದ್ ಗುಂಡು ಇಸಿದ್ ಕಲ್ಲ್‌ನ ಒಡೆಕೆ ಹೇಳ್‌ತ್ ಹಾಂಗೆ ಮಾಡಿಕನ ಮೊದ್ದ್ ಗುಂಡುಗೆ ಕಿಚ್ಚಿಕೊಡಿಕೆ ಹಂದಿಗೆ ಹೇಳ್‌ವೆ. ಕಿಚ್ಚಿ ಕೊಟ್ಟುದ್ ಹಿಂದೆ ಬಾಕೆ ಆಗದೆ ಹಂದಿ ಎರ್‌ಡ್ ಕಣ್ಣುಗಳ ಕಳ್‌ಕಂಡ್, ಬಾಮಿಗೆ ಬೀತ್. ಕುದ್‌ಕ ಊರುಗೆಲ್ಲಾ ಇದರ ಹೇಳಿಕಂಡ್‌ಹೋತ್. ಜೆನ ಕಾಡ್‌ಹಂದಿ ಬಾಮಿಗೆ ಬಿದ್ದುಟು ತೇಳಿ ಗ್ರೇಸಿ, ಬಾಮಿಂದ ಅದರ ತೆಗ್‌ದ್, ಮಾಸ ಮಾಡಿ ಕೊಟ್ಟುಕಂಡ್ ಇರ್‌ಕನ ಕುದ್‌ಕ ಗೌಡನ ಮನೆಗೆ ಕಿಚ್ಚಿ ಬೀತ್ ತೇಳಿ ಬೊಬ್ಬೆ ಹಾಕಿತ್. ಜೆನ ಓಡ್‌ವೆ. ಕುದ್‌ಕ ಹಂದಿ ಮಾಸನೆಲ್ಲ ತಿಂದದೆ. ಒಳ್‌ದ ಮಾಸನ ಮೈಗೆಲ್ಲಾ ಅಂಟ್‌ಸಿಕಂಡ್ ಊರುಂದ ಹೊರಗೆ ಓಡ್‌ದೆ. ಓಡ್‌ವ ರಬಸಲಿ ಅಂಟ್‌ಸಿದ ಮಾಸ ಎಲ್ಲಾ ಬಿದ್ದುಹೋದೆ. ಸಿಟ್ಟುಬಂದ್‌ದ್ ಕುದ್‌ಕ ಒಂದ್ ಕಲ್ಲ್ ತಕಂಡ್ ಮೈಗೆಲ್ಲಾ ಅದರಲಿ ಗುದ್ದಿಕಂಡತ್. ಬೇನೆಲಿ ಬಾಪಿದ ಮೈಂದ ವಾಸನೆ ಹೊರ್ಟತ್. ಈ ವಾಸನೆ ಮೊದ್‌ವೆ ಉಂಬಕೆ ತಂದ ತುಪ್ಪಕ್ಕೆ ಮುಟ್ಟಿತ್. ಸಿಟ್ಟುಬಂದ್ ಜೆನ ಕುದ್ಕನ ಹಿಡೆಕೆ ತೀರ್ಮಾನ ಮಾಡ್‌ದೊ. ಹಲ್‌ಸ್‌ನ ಹಣ್ಣ್‌ನ ಮಾಯಣ ತಂದ್ ಮೊನ್‌ಸನ ಅಕಾರಲಿ ಮಾಡಿ ನಿಲ್ಲ್‌ಸಿದೊ. ಅದರ ಪರೀಕ್ಸೆಮಾಡಿಕೆ ಹೋದ ಕುದ್ಕನ ಮೈ ಎಲ್ಲಾ ಮೇಣ ಆತ್. ಮೇಣಕ್ಕೆ ಬಣ್ಣನು ಅಂಟಿತ್.ಆಗ 'ನಾ ದೆವ್ವ' ತೇಳ್‌ದೆ ಕುದ್‌ಕ. ಜೆನ ಕುದ್ಕನ ದೆವ್ವಕೆ ಕೋಲ ಕೊಡಿಕೆ ನಿರ್ದರಿಸಿದೊ ಕೋಲಕೆ ಊರ್‌ನ ಕುದ್‌ಕಂಗೆಲ್ಲ ಬಂದೊ. ಕತ್ತಿ ಬೆಡಿಹಿಡ್‌ದ್ ಜೆನಗ ಎಲ್ಲ ಕುದ್‌ಕಂಗಳ ಕೊಂದುಹಾಕಿದೊ.

ಜಾಣ ಕುದ್‌ಕನನೆ ಅತಿ ಜಾಣತನಂದ ಹಿಡ್‌ದ್ ಕೊಂದ್ ಹಾಕಿದ ಅರೆಬಾಸೆ ಸಮುದಾಯದ ಜನಪದ ಕತೆಗ ಹೀಂಗೆ ವಿಸೇಸ ಆಗಿದ್ ಉಟ್ಟು.. ಇಂತ ಕತೆಗಳ ಅದ್ಯಯನಂದ ಬೌದ್ದಿಕವಾಗಿ ನಾವುಗೆ ತುಂಬಾ ಲಾಬ ಉಟ್ಟು.

ಕವಿ ಕರುಣಾಕರ ನಿಡಿಂಜಿಯವ್ ಅರೆಬಾಸೆ ಪೊದ್ಯಗಳ ಸಂಕಲನಲಿ ಬಾವ ಆದುನಿಕ ಅನುಬವಗಳ ನೆಲೆಲಿ ನೋಡಿರೆ,

'ಅಗಸ್ತ್ಯಂತೇಳಂವ ಆಕಾಸದಂತಂವ
ಯಾಕೆ ಹರ್‌ದೆ ಹೋದೆ? ।ಕಾವೇರಿಯೆ।
ಗುಡ್ಡೆ ಕಾಡ್ ನಿಂಗಡ್ಡ ಬಂದರು ಅಂದ್
ನೋಡಿ ನೋಡದೆ ಹೋದೆ?
ನಾಡ್ ನಾಡ್‌ನ ಮಕ್ಕ ನೀಂಡಿ ಮೈ ಕೈ ಮುಗ್ದೊ
ಯಾಕೆ ನಿಲ್ಲದೆ ಹೋದೆ? ।ಕಾವೇರಿಯೇ।
ಲೋಪಾಮುದ್ರೆಯಾಗಿ ಯಾರ ಲೋಪ ಹೇಳ್
ಯಾಕೆ ನೀರೆ ಆದೆ? ।ಕಾವೇರಿಯೇ।
ಆಸೆ ಬಾಸೆ ಬುಟ್ ಬಯ್ಕೆ ಬೊಸ್‌ರ್ ಬುಟ್ಟ್
ಉಪ್ಪುನ ಕಡಲಾದೆ? ।ಕಾವೇರಿಯೆ।

ಇದೇ ಸಂಕಲನದ ತ್ರಿಪದಿಗಳ್‌ಲಿ ಹಜ್ಞಾ ವಿಸೇಸ ಉಟ್ಟು. ಅರೆಬಾಸೆಲಿ ಸಾಮಾನ್ಯ ಆಗಿ ಸಿಕ್ಕ್‌ವ ಜನಪದ ತ್ರಿಪದಿಗಳ ರಚಿಸಿಯೊಳ. ಅದರ ಬಾವ ಮಾತ್ರ ಹೊಸ್ತು.

ಉದಾರ್‌ಣೆಗೆ ಕೆಳಗೆನ ತ್ರಿಪದಿಗಳ ನೋಡಿ–
ಪಚ್ಚೆ ಸೀರೆ ಉಟ್ಟ್ ಗುಂಡ್ ಮಲ್ಲಿಗೆ ಮುಡ್ದ್
ಸೂರ್‌ಯದೇವ್ರ ಬೊಟ್ಟ್ ಹಣೆಮೇಲೆ । ನೀರಿಗೆ
ಚಂದ್ರದೇವ್ರ ಗಡಿಗೆ ತಲೆಮೇಲೆ.
ನೀಲಿ ದಾರಿಲಿ ನೀ ಮಾಲಿ ನಡಿವ ಪೊರ್‌ಲು
ನೂರು ನಾಲಿಕೆ ಹೇಳಿ ಸಾಲದವ್ವಾ । ನಿನ್ನ
ಬೆಳ್ಳಿ ಬೊಳುಪುಲಿ ನೆಂಪು ಮಾಡಿಕಣೆ.
ನಿಗಿ ನಿಗಿ ಕೆಂಡಕೆ ಕಿಡಿಯಾಗಿ ಹುಟ್ಟಿದವ್ವ
ಕಿಚ್ಚಿನ ಹೊಟ್ಟೆಲಿ ಕಟ್ಟಿದವ್ವ । ನಿನ್ನ
ನೆಂಗೆ ಮೋರೆನ ನೆಂಪು ಮಾಡಿಕಣೆ.
ಇದ್ ಯಾಕೆ ಯಾರಿಗೂ ಗೊತ್ತಿಲ್ಲೆ'

ಅರೆಬಾಸೆ ಸಂಸ್ಕೃತಿಲಿ ಹೊಸ ಹೊಸ ಪ್ರತಿಮೆಗಳಿರೊಕೇ. ಯಾದೇ ಬರಹಗಾರ ಇದ್‌ಕೆ ಬೆನ್ನ್ ಹಾಕಿರೆ, ಅವಂಗೆ ನಸ್ಟ. ಕವಿಗ ಅಂತಹ ಕೆಲವ್ ಹೊಸ ಪ್ರತಿಮೆಗಳ ತಕಂಡ್ ತಮ್ಮ ಕವನಗಳಿಗೆ ಜೀವ ತುಂಬ್‌ಸಿಕೊಂಡವೆ.

ಉದಾರ್‌ಣೆಗೆ ಅಜ್ಜ ಪಾಟ ಕವನ ಗಮನಿಸಕ್–
'ಗುತ್ತಿಮಂಡ್ಯ ದೈನ ಮೇಲೆ
ಕೊತ್ತಿನಾಂಗೆ ಕುದ್ದ ಬಾವ್ಲಿ
ಕಚ್ಚಿ ಹಾರಿಟೊಂದು ಗುತ್ತಿಮಂಡ್ಯ ಕಾಯಿನ
ಕತ್ತಿ ಚೂರಿ ಇಲ್ಲದೆನೆ
ಕಚ್ಚಿ ಕಚ್ಚಿ ಹರ್ದ್ ತಿಂದ್
ಬಿತ್ತ್ ತೆಗ್ದ್ ಚಾಳೆಬುಡಕೆ ಹಾಕಿ ಹೋತ್‌ರ (ಪಿ.ಬಿ.)

**ಅರೆಬಾಸೆ ಸಾಹಿತ್ಯ :** 15 ಡಿಸೆಂಬರ್ 2011ರ್‌ಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಸುರಾದ ಮೇಲೆ ಅರೆಬಾಸೆನ ಎಲ್ಲ ಪ್ರಕಾರಲೂ ಸಾಹಿತ್ಯ ರಚನೆಯಾದೆ.

**ಸಂಸೋದನೆ :** 1985ರ್‌ಲಿ ಪುರುಷೋತ್ತಮ ಬಿಳಿಮಲೆಯವು 'ಸುಳ್ಯ ಪರಿಸರದ ಗೌಡ ಸಮುದಾಯದ ಸಾಂಸ್ಕೃತಿಕ ಅಧ್ಯಯನ'ತ ಪಿಎಚ್.ಡಿ. ಅಧ್ಯಯನ ನಡೆಸಿಯೊಳೊ. ಇದ್ 2019ರ್‌ಲಿ 'ವಲಸೆ, ಸಂಘರ್ಷ ಮತ್ತು ಸಮನ್ವಯ'ತ ಪುಸ್ತಕಾತ್. 1992ರ್‌ಲಿ ವಿಶ್ವನಾಥ ಬದಿಕಾನರ್ 'ಗೌಡಕನ್ನಡದ ಜನಪದ ಕತೆಗಳು : ವರ್ಗ ಮತ್ತು ಆಶಯ ಸೂಚಿ' ಎಂ.ಫಿಲ್. ಅಧ್ಯಯನ ನಡೆಸಿಯೊಳೊ. ಇದ್




1994ರ್‌ಲಿ 'ಗೌಡಕನ್ನಡದ ಜನಪದ ಕತೆಗಳು : ವರ್ಗ ಮತ್ತು ಆಶಯ ಸೂಚಿ'ತ ಪುಸ್ತಕ, 2007ರ್‌ಲಿ ಪೂವಪ್ಪ ಕಣಿಯೂರು 'ಉಳ್ಳಾಕುಲು–ಐತಿಹಾಸಿಕತೆ, ಪ್ರಾದೇಶಿಕತೆ ಮತ್ತು ಆರಾಧನೆ'ತ ಪಿಎಚ್‌.ಡಿ. ಅಧ್ಯಯನ ನಡೆಸಿಯೊಳೊ. ಅರೆಬಾಸೆ ಪ್ರದೇಸಲಿ ಆರಾದಿಸಿಕಂಡ್ ಬಾವ ಉಳ್ಳಾಕುಲು ದೈವಗಳ ಇತಿಯಾಸ ದರ್ಶನ, ಪ್ರಾದೇಶಿಕ ಬಿನ್ನಾಂಸ, ಪ್ರದರ್ಸನ ನೆಲೆಂದ ನಡ್‌ತ್. 2009ರ್‌ಲಿ ಪೂವಪ್ಪ ಕಣಿಯೂರರ 'ಮೌಖಿಕ ಸಂಕಥನ', 2010ರ್‌ಲಿ ಕೋರನ ಸರಸ್ವತಿಯವರ 'ಕೊಡಗು ಗೌಡ ಸಮುದಾಯ–ಸಾಂಸ್ಕೃತಿಕಅನನ್ಯತೆ'ತ ಪಿಎಚ್‌.ಡಿ. ಅಧ್ಯಯನ ನಡೆಸಿಯೊಳೊ. ಅರೆಬಾಸೆ ಮಾತಾಡ್‌ವ ಕೊಡಗು ಗೌಡ ಸಮುದಾಯದ ಬೌಗೋಳಿಕ, ಸಾಮಾಜಿಕ ನೆಲೆ, ಆಹಾರ ಪೊದ್ದತಿ, ಜೀವನಕ್ರಮನ ಈ ಪುಸ್ತಕಲಿ ಮಾಡ್ಯೊಳೊ. 2014ರ್‌ಲಿ ಎ.ಸಿ. ಶೈಲಜಾ ಅವು 'ಕೊಡವರು ಮತ್ತು ಕೊಡಗಿನ ಗೌಡರ ಸಂಸ್ಕೃತಿ–ತೌಲನಿಕ ಅಧ್ಯಯನ'ತ ಪಿಎಚ್‌.ಡಿ. ಅಧ್ಯಯನ ನಡೆಸಿಯೊಳೊ. 2021ರ್‌ಲಿ ವಿದ್ಯಾಧರ ಕುಡೆಕಲ್ಲು ಅವರ 'ಅಮರ ಸುಳ್ಯ–1837',

**ಅರೆಬಾಸೆ ವ್ಯಾಕರಣ ಮತ್ತೆ ಅರೆಬಾಸೆ ಪದಕೋಶಗ :** 1970ರ್‌ಲಿ ಕೋಡಿ ಕುಶಾಲಪ್ಪ ಗೌಡರ ಅರೆಬಾಸೆ ಬಾಸಾವಿಜ್ಞಾನ ಮತ್ತೆ ವ್ಯಾಕರಣ ಪುಸ್ತಕಲಿ 'ಗೌಡಕನ್ನಡ' (ಅರೆಭಾಷೆ–ಐಪಿಎ–ಇಂಗ್ಲಿಷ್ ಶಬ್ದಕೋಶ) ಇಂಗ್ಲಿಸ್‌ನ 1874 ಪದಗ ಉಟ್ಟು. 2013ರ್‌ಲಿ ಗೌಡ ಸೋಶಿಯೋ ಎಜ್ಯುಕೇಶನ್ ಟ್ರಸ್ಟ್, ಸುಳ್ಯದಿಂದ ಪ್ರಕಟವಾದ ಕೆ.ಆರ್. ಗಂಗಾಧರ್‌ರ 'ಅರೆಭಾಷೆ–ಕನ್ನಡ–ಇಂಗ್ಲಿಷ್ ಶಬ್ದಕೋಶ' ಅರೆಭಾಷೆ ಗಾದೆಗ ಮತ್ತೆ ನುಡಿಗಟ್ಟ್‌ಗ ಪುಸ್ತಕಲಿ 3365 ಪದಗ ಉಟ್ಟು. 2019ರ್‌ಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಂದ ಪ್ರಕಟಾದ ಕೆ. ಕುಶಾಲಪ್ಪ ಗೌಡರ ಅರೆಬಾಸೆ(ಗೌಡ ಕನ್ನಡ) ವ್ಯಾಕರಣ ಪುಸ್ತಕಲಿ 1850 ಕನ್ನಡ–ಅರೆಬಾಸೆ ಪದಗ ಉಟ್ಟು. 2019ರ್‌ಲಿ ಗುಲ್ಬರ್ಗಾ ವಿಶ್ವವಿದ್ಯಾನಿಲಯದ ಎನ್‌ಡೇಂಜರ್ ಲಾಂಗ್ವೇಜಸ್ ವಿಬಾಗಂದ ಪ್ರಕಟಾದ ಜೆ. ರಾಮಸ್ವಾಮಿಯವರ 'ಎ ಗ್ರಾಮರ್ ಆಫ್ ಅರೆಬಾಸೆ' ಪುಸ್ತಕಲಿ 2000 ಅರೆಭಾಷೆ–ಐಪಿಎ–ಇಂಗ್ಲಿಷ್ ಪದಗ ಉಟ್ಟು.

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಂದ 2022ರ್‌ಲಿ ಪ್ರಕಟಾದ 'ಅರೆಭಾಷೆ ಪದಕೋಶ'–ಅರೆಬಾಸೆ–ಕನ್ನಡ–ಇಂಗ್ಲಿಷ್ ಡಿಕ್ಷನರಿ ಅರೆಭಾಷೆ–ಐಪಿಎ–ಕನ್ನಡ–ಇಂಗ್ಲಿಷ್–ಗಾದೆಗ, ನುಡಿಗಟ್ಟುಗ, ಒಗಟುಗ, ಅರೆಬಾಸೆ ಪದಪ್ರಯೋಗ ಮತ್ತೆ ಎರವಲು ಪದಗ ಹೀಂಗೆ 18 ಸಾವಿರಕ್ಕಿಂತ ಹೆಚ್ಚ್ ಪದಗಳ ಕೋಶ ತಯಾರಾಗುಟು.

**ಅರೆಬಾಸೆ ಗದ್ಯಕಾವ್ಯ :** 2014ರ್‌ಲಿ ಕೆ. ಕುಶಾಲಪ್ಪ ಗೌಡರ 'ಮಾನಸ ಮಹಾಭಾರತ', 2022ರ್‌ಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿಮತ್ತು ಸಾಹಿತ್ಯ ಅಕಾಮಿಯಿಂದ ಕೆ. ಕುಶಾಲಪ್ಪ ಗೌಡರ 'ಗಂಗಾವತರಣ ಭೀಷ್ಮೋದಯ' ಪುಸ್ತಕ ಪ್ರಕಟಾವುಟು.

**ಅರೆಬಾಸೆ ಕೋಶಗ :** 2022ರ್‌ಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿಮತ್ತು ಸಾಹಿತ್ಯಅಕಾಡೆಮಿಂದ 'ಅರೆಭಾಷೆ ಪಾರಂಪರಿಕ ಕೋಶ', 'ಅರೆಭಾಷೆ ಪದಕೋಶ', 'ಅರೆಭಾಷೆ ವಿಶ್ವಕೋಶ' ಪ್ರಕಟಾದೊ.

**ಸಂಸ್ಕೃತಿ ಮತ್ತೆ ಸಾಹಿತ್ಯ ಸಂಸೋದನೆ :** 1990ರ್‌ಲಿ ಪುರುಷೋತ್ತಮ ಬಿಳಿಮಲೆಯವರ 'ಕರಾವಳಿ ಜಾನಪದ', 2009ರ್‌ಲಿ ಪೂವಪ್ಪ ಕಣಿಯೂರು ಅವರ 'ಮೌಖಿಕ ಸಂಕಥನ' ಅರೆಬಾಸೆ ಪ್ರದೇಸದ ಸಾಂಸ್ಕೃತಿಕ ವಿಚಾರನ ಒಳಗೊಂಡ್ ಪ್ರಕಟ ಆವುಟು.

**ಜನಪದ ಸಾಹಿತ್ಯ :** 2014ರ್‌ಲಿ ಕೊಡಗು ಮತ್ತೆ ದಕ್ಷಿಣಕನ್ನಡ ಗೌಡ ಸಂಘವು ವಿಶ್ವನಾಥ ಬದಿಕಾನರ ಅರೆಬಾಸೆನ 120 ಜನಪದ ಕತೆಗಳ 'ಅರೆಬಾಸೆನ ಅಜ್ಜಿಕತೆಗ', 2015ರ್‌ಲಿ ಪೂಜಾರೀರ ಜಿ. ಮಾದಪ್ಪರ 'ಕುಂಕುಮ', ಎಂ.ಜಿ.ಕಾವೇರಮ್ಮನವರ 'ಅಜ್ಜಪ್ಪನ ಕತಾ ಭಂಡಾರಂದ ಹೆಕ್ಕಿದ ಕತೆಗ', 2019ರ್‌ಲಿ ಭವಾನಿಶಂಕರ ಅಡ್ತಲೆಯವು ಸಂಗ್ರಹಿದ ಜನಪದ ಕತೆಗಳ ಸಂಕಲನ 'ಅಪ್ಪ ಹೇಳ್‌ದ ಹತ್ತ್ ಕತೆಗ', 2021ರ್‌ಲಿ ಕುಂಞೇಟಿ ಶಿವರಾಮ ಗೌಡರ ಬಲೀಂದ್ರನ ಸಂಧಿ', 2022ರ್‌ಲಿ ತೆಕ್ಕಡೆ ಬಿ. ಕುಮಾರಸ್ವಾಮಿ ಸಂಗ್ರಹಿಸ್‌ದ 'ಅರೆಭಾಷೆ ಗಾದೆಗ', 'ಕಥೆಗಳ ಅಟ್ಟುಳಿ' ಅಕಾಡೆಮಿಂದ ಪ್ರಕಟಾವುಟು.

**ಸಂಸ್ಕೃತಿ ಸಮ್ಮಂದದ ಪುಸ್ತಕಗ :** 1970ರ್‌ಲಿ ಕೊಡಗು ಮತ್ತೆ ದಕ್ಷಿಣಕನ್ನಡ ಗೌಡ ಸಮಾಜ ಬೆಂಗಳೂರ್‌ಂದ 'ಗೌಡ ಸಮಾಜ ಸಂಸ್ಕೃತಿ', 1985ರ್‌ಲಿ ಕೊಡಗು ಗೌಡ ವಿದ್ಯಾಸಂಗ ಮಡಿಕೇರಿಂದ 'ಗೌಡ ಸಂಸ್ಕೃತಿ', 2000ನೇ ಇಸವಿಲಿ ಕೊಡಗು ಗೌಡ ಮಹಿಳಾ ಒಕ್ಕೂಟ ಪ್ರಕಾಶನಲಿ ಬೈತಡ್ಕ ಜಾನಕಿ ಬೆಳ್ಯಪ್ಪರ 'ಹಸೆಮಣೆ', 2003ರ್‌ಲಿ ಕೆ. ಚಿನ್ನಪ್ಪ ಗೌಡರ ಸಂಪಾದನೆಲಿ 'ಗೌಡ ಜನಾಂಗ – ಇತಿಯಾಸ ಮತ್ತು ಸಂಸ್ಕೃತಿ', 2014ರ್‌ಲಿ ಗೌಡರ ಯುವ ಸೇವಾ ಸಂಘ(ರಿ) ಸುಳ್ಯಂದ ಬರಮೇಲು ದೊಡ್ಡಣ್ಣ ಸಂಪಾದಿಸಿದ 'ಗೌಡರ ಸಂಸ್ಕೃತಿ', 2016ರ್‌ಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಂದ 'ಸಂಸ್ಕೃತಿಸಂಪತ್ತ್' ಪುಸ್ತಕ ಪ್ರಕಟಾದೊ.

**ಆತ್ಮಚರಿತ್ರೆ/ಅನುಬವ ಕತೆಗ :** 2015ರ್‌ಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಂದ 'ಬೇಟೆನ ಬಿರ್ಸ ಅಪ್ಪಯ ಗೌಡ್ರು', 2015ರ್‌ಲಿ ಕಟ್ರತನ ಕೆ. ಬೆಳ್ಯಪ್ಪನವರ 'ಬೆಳ್ಳಿಮುಷ್ಟಿ', 2016ರ್‌ಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಂದ ಎಂ.ಜಿ. ಕಾವೇರಮ್ಮನವರ 'ನೆಂಪುಗಳ ರಂಗೋಲಿ–ನಿಜ ಜೀವನ ಅನುಭವಗಳು', , 2018ರ್‌ಲಿ ಕೆ.ಆರ್. ತೇಜಕುಮಾರ್ ಬಡ್ಡಡ್ಕರ 'ಕಾಡ್‌ನ ಮಕ್ಕ' ಪುಸ್ತಕಗ ಪ್ರಕಟಾದೊ.

**ಕವನ ಸಂಕಲನ :** 2003ರ್‌ಲಿ ಬಂಟಮಲೆ ಪ್ರಕಾಶನಂದ 'ಸಡಗರ', 2003ರ್‌ಲಿ ಯಶವಂತ ಕುಡೆಕಲ್ಲ್‌ರ 'ತೊಂಬರ', 2003ರ್‌ಲಿ ಹೊದ್ದೆಟ್ಟಿ ಭವಾನಿಶಂಕರರ 'ಸಂತೃಪ್ತಿ', 2003ರ್‌ಲಿ ಹೊದ್ದಟಿ ಭವಾನಿಶಂಕರರ ಮೋಟಿಗೂಡೆನ ಮೊದುವೆ', 2007ರ್‌ಲಿ

ಯಶವಂತ ಕುಡೆಕಲ್ಲ್ ಅವರ 'ಜೇನೆರಿ', 2014ರ್‌ಲಿ ಕರುಣಾಕರ ನಿಡಂಜಿಯವರ 'ನೀಲಿದಾರಿ', 2015ರ್‌ಲಿ ಬೈತಡ್ಕ ಜಾನಕಿ ಬೆಳ್ಯಪ್ಪರ 'ಬೇರ್‌ಲಿ–ಚಿಗ್‌ರ್', 2015ರ್‌ಲಿ ಎಂ.ಜಿ.ಕಾವೇರಮ್ಮರ 'ಸರ್ಮಾಲೆ', 2016ರ್‌ಲಿ ಬಾರಿಯಂಡ ಜೋಯಪ್ಪರ 'ತೋರಣ', 2017ರ್‌ಲಿ ಹೊದ್ದೆಟ್ಟಿ ಭವಾನಿಶಂಕರರ 'ಅನುಭವಧಾರೆ', 2017ರ್‌ಲಿ ಹೊಸೊಲಿಕೆ ಯೋಗೀಶ್‌ರ 'ತಿಂಗೊಳ್ ಬೆಳ್ಕ್', 2019ರ್‌ಲಿ ಕರುಣಾಕರ ನಿಡಿಂಜಿಯವರ 'ನೆಗೆಬೇಕು ಕೇದಗೆ ಗೊನೆ ಹಾಂಗೆ', 2020ರ್‌ಲಿ ಸಂಗೀತ ರವಿರಾಜ್‌ರ 'ನಿರುತ್ತರ', 2021ರ್‌ಲಿ ಕುತ್ಯಾಳ ನಾಗಪ್ಪ ಗೌಡ(ಕಿರಣ)ರ 'ಯಾಕೀ ಕತೆ ಹಿಂಗಾತ್?', ಕಣಜಾಲ್ ಪೂವಯ್ಯರ ,ಮುತ್ತುಮಣಿ', 2022ರ್‌ಲಿ ಎಂ.ಜಿ.ಕಾವೇರಮ್ಮರ 'ಉಜ್ವಾಲ್' ಕಾವ್ಯ ಸಂಕಲನಗ ಪ್ರಕಟಾದೊ.

**ನಾಟಕಗ :** 1958ರ್‌ಲಿ ದಿ.ಕೊಳಂಬೆ ಪುಟ್ಟಣ್ಣ ಗೌಡ (ಅಪ್ರಕಟಿತ) 'ತಾಳಿ', 2015ರ್‌ಲಿ ಟಿ ಜಿ ಮುಡೂರರ 'ಬೊಳ್ಪಾಕನ ಮುಗ್ತ್' , 2017ರ್‌ಲಿ ಬೈತಡ್ಕ ಜಾನಕಿ ಬೆಳ್ಯಪ್ಪರ 'ಬೆಳ್ಳಿ ಚುಕ್ಕೆಗ' 2022ರ್‌ಲಿ ಪಿ.ಜಿ.ಅಂಬೆಕಲ್‌ರ 'ಗೂಡೆ ಬೇಕಾಗುಟ್ಟು–ನಾಟಕಗಳ ಜೊಂಗೆ', ಜಯಪ್ರಕಾಶ್ ಕುಕ್ಕೇಟಿ ಅನುವಾದಿಸ್‌ದ 'ಸಾಹೇಬ್ರು ಬಂದವೇ!!' ದೇವಜನ ಗೀತಾ ಮೋಂಟಡ್ಕ ಅನುವಾದ್‌ಸಿದ 'ಕಿರಗೂರಿನ ಗಯ್ಯಾಳಿಗ', ನಾಟಕ ಪುಸ್ತಕಗ ಪ್ರಕಟಾದೊ.

**ಕತಾ ಸಂಕಲನಗ :** 1994ರ್‌ಲಿ ಬಾರಿಯಂಡ ಜೋಯಪ್ಪರ 'ಚಾಂಪಾ', 2015ರ್‌ಲಿ ಲೋಕೇಶ್ ಊರುಬೈಲ್‌ರ 'ಗುಬ್ಬಿಗೂಡೆ', 2016ರ್‌ಲಿ ಕುಞ್ಞಿಟ್ಟಿ ಶಿವರಾಮ ಗೌಡ್ರ 'ಜೋನಿಬೆಲ್ಲ', 2016ರ್‌ಲಿ ಉದಯಕುಮಾರಿ ಚೆಂಬು ಅವರ 'ಹೊಸಬೊದ್ಕು', 2016ರ್‌ಲಿ ಲೋಕೇಶ್ ಕುಂಚಡ್ಕರ 'ಬೊಳ್ಪು',2017ರ್‌ಲಿ ಹೊದ್ದೇಟಿ ಭವಾನಿಶಂಕರರ 'ಅನುಭವ ಧಾರೆ', 2018ರ್‌ಲಿ ವಿನೋದ್ ಮೂಡಗದ್ದೆಯವರ 'ನೆನ್ಪುನ ಜೊಂಪೆ', 2019ರ್‌ಲಿ ಪುನೀತ್ ರಾಘವೇಂದ್ರ ಕುಂಟುಕಾಡರ 'ಮಿಣ್ಪುಳಿ', 2019ರ್‌ಲಿ ಪುಟ್ಟಣ್ಣ ಗೌಡ ಅಂಬೆಕಲ್‌ರ 'ತಬ್ಲಿ ಮಂಜ', 2019ರ್‌ಲಿ ಕಟ್ರತನ ಲಲಿತಾ ಅಯ್ಯಣ್ಣರ 'ಅಪೂರ್ವ ಸಂಗಮ' ಕತಾಸಂಕಲನಗ ಪ್ರಕಟಾದೊ.

**ಕಾದಂಬರಿಗ :** 2016ರ್‌ಲಿ ಜಯಮ್ಮ ಚೆಟ್ಟಿಮಾಡರ 'ಹಳೆ ಬಾಳ್‌ನ ಹರ್ದ ಹಾಳೆಗ', 2014ರ್‌ಲಿ ಕುಯಿಂತೋಡು ದಾಮೋದರರ 'ಇರುದರನ್ನೆಲ್ಲ ಬುಟ್ಟು', 2016ರ್‌ಲಿ ಕಟ್ರತನ ಲಲಿತಾ ಅಯ್ಯಣ್ಣರ 'ಮತ್ತೆ ಸಿಕ್ಕತ್ ಕುಂಕುಮ', 2018ರ್‌ಲಿ ಎಂ.ಜಿ.ಕಾವೇರಮ್ಮನವರ 'ಬೊದ್ಕ್', 2019ರ್‌ಲಿ ಸಂಗೀತ ರವಿರಾಜ್‌ರ 'ಕಲ್ಯಾಣಸ್ವಾಮಿ', 2019ರ್‌ಲಿ ಎಂ.ಜಿ.ಕಾವೇರಮ್ಮನವು ಅನುವಾದಿಸಿದ 'ಪುಂಸ್ತ್ರೀ' ಕಾದಂಬರಿಗ ಪ್ರಕಟಾದೊ.

**ಯಕ್ಷಗಾನಗ :** 2022ರ್‌ಲಿ ಮಾಧವ ಪೆರಾಜೆ ಅನುವಾದಿಸ್‌ದ 'ವೀರಮಣಿ ಕಾಳಗ', ಭವ್ಯಶ್ರೀ ಕುಲ್ಕುಂದ ಅನುವಾದಿಸ್‌ದ 'ಯಕ್ಷಜೊಂಪೆ' ಪ್ರಸಂಗಗ ಪ್ರಕಟಾದೊ.

**ಪ್ರವಾಸಕತನ :** 2022ರ್‌ಲಿ ದಾಮೋದರ ಕುಯಿಂತೋಡು ಅವರ 'ನೆಂಪುನ ಒರ್‌ತೆ– ದಕ್ಷಿನ ಪೀಠ ಭೂಮಿ ಮತ್ತೆ ಉತ್ತರ ಭಾರತದ ತಿರ್ಗಾಟದ ನೆಂಪುಗ' ಪುಸ್ತಕ ಪ್ರಕಟಾತ್.

**ಪ್ರಬಂದಗ :** 2022ರ್‌ಲಿ ಬಾರಿಯಂಡ ಜೋಯಪ್ಪರ 'ಚೆಂಚಿ', ಕೊಟ್ಟಕೇರಿಯನ ಲೀಲಾ ದಾಮೋದರರ 'ಅಟ್ಟಿ' ಪ್ರಬಂದ ಸಂಕಲನ ಪುಸ್ತಕ ಪ್ರಕಟಾತ್.

**ಸ್ಮರಣ ಸಂಚಿಕೆಗ :** 1968ರ್‌ಲಿ 'ಕೊಡಗು ಮತ್ತು ದಕ್ಷಿಣ ಕನ್ನಡದ ಗೌಡ ಸಮಾಜದ ಸಂಸ್ಕೃತಿ', 1970ರ್‌ಲಿ ಸೂದನ ಎಸ್ ಈರಪ್ಪ ಸಂಪಾದಕತ್ವಲಿ ಕೊಡಗು ಗೌಡ ವಿದ್ಯಾ ಸಂಘ, ಮಡಿಕೇರಿಂದ 'ಗೌಡ ದೊನಿ', 1985ರ್‌ಲಿ ದಕ್ಷಿಣಕನ್ನಡ ಮತ್ತೆ ಕೊಡಗುಜಿಲ್ಲಾ ಗೌಡ ಸಮ್ಮೇಳನದ 'ಸ್ಪಂದನ' ಸ್ಮರಣ ಸಂಚಿಕೆ, 1985ರ್‌ಲಿ ಮಂಗಳೂರ್‌ಂದ ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘ, ಕಲ್ಯಾಣ ಮಂಟಪ ಉದ್ಘಾಟನಾ ಸಮಾರಂಭ ಸ್ಮರಣ ಸಂಚಿಕೆ, 1985ರ್‌ಲಿ ಕೊಡಗು ಗೌಡ ವಿದ್ಯಾ ಸಂಘಂದ 'ಗೌಡ ಸಂಸ್ಕೃತಿ', 1996ರ್‌ಲಿ ದಕ್ಷಿಣ ಕನ್ನಡ ಮತ್ತೆ ಕೊಡಗು ಗೌಡ ಸಮ್ಮೇಳನ, ಸುಳ್ಯಂದ ಸ್ಮರಣ ಸಂಚಿಕೆ, 'ವೀಳ್ಯ', 2003ರ್‌ಲಿ ಡಾ.ಚಿನ್ನಪ್ಪ ಗೌಡ (ಸಂ) 'ಗೌಡ ಜನಾಂಗ– ಇತಿಯಾಸ ಮತ್ತು ಸಂಸ್ಕೃತಿ' ಬೆಳ್ಳಿಹಬ್ಬ ಸಂಚಿಕೆ, 1985ರ್‌ಲಿ ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘ, ಮಂಗಳೂರ್‌ನ ರಜತ ಮಹೋತ್ಸವ ಸ್ಮರಣ ಸಂಚಿಕೆ 'ಚಾವಡಿ', 2014ರ್‌ಲಿ ಪುತ್ತೂರು ತಾಲೂಕು ಗೌಡ ಸಮುದಾಯದ ಸಾಂಸ್ಕೃತಿಕ ಕೈಪಿಡಿ ಒಕ್ಕೊರಲು', 2019ರ್ಲಿ ಸುರನ ಅರೆಬಾಸೆ ಸಾಹಿತ್ಯ ಸಮ್ಮೇಳನದ ನೆಂಪಿನ ಪುಸ್ತಕ 'ಫಸಲ್', 2020ರ್‌ಲಿ ಎರಡನೇ ಅರೆಬಾಸೆ ಸಾಹಿತ್ಯ ಸಮ್ಮೇಳನ ನೆಂಪುನ ಸಂಚಿಕೆ 'ಐಮರ' ಪ್ರಕಟಾವುಟು.

**ತ್ರೈಮಾಸಿಕ ಸಂಚಿಕೆಗ :** ಕರ್ನಾಟಕ ಅರೆಭಾಷೆ ಸಂಸ್ಕೃತಿಮತ್ತು ಸಾಹಿತ್ಯ ಅಕಾಡೆಮಿಂದ 2011ರ್‌ಂದ 2021ರ ವರೆಗೆ ಒಟ್ಟು 23 ಹಿಂಗಾರ(ತ್ರೈಮಾಸಿಕ), 'ಸುರಗಿ'(ಓಂದು ಸಂಚಿಕೆ), ಕೊಡಗ್‌ಂದ ಪಟ್ಟಡ ಪ್ರಭಾಕರ(ಸಂ), 'ಕೊಡಗು ಸಂಗಾತಿ' (ಪಾಕ್ಷಿಕ), ಬೆಂಗಳೂರ್‌ಂದ ವಿನೋದ್ ಮೂಡಗದ್ದೆ (ಸಂ), 'ಮುಡ್ಪು'(ಪಾಕ್ಷಿಕ), ಸಂಚಿಕಗ ಪ್ರಕಟಾವುಟು.

**ಪುಸ್ತಕ ಡಿಜಿಟಲೈಸೇಶನ್ :** 2022ರ್‌ಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಂದ ಪ್ರಕಟಾದ ಮತ್ತೆ ಅರೆಬಾಸೆಗೆ ಸಮ್ಮಂದಿಸ್‌ದ 83 ಡಿಜಿಟಲ್ ಪುಸ್ತಕಗ, ಪಟ್ಟಡ ಪ್ರಭಾಕರ್ ಸಂಪಾದಿಸ್‌ದ 'ಕೊಡವ ಸಂಗಾತಿ' 142 ಸಂಚಿಕೆಗ, ಕೊಡಗು ದಕ್ಷಿಣ ಕನ್ನಡ ಒಕ್ಕಲಿಗ ಗೌಡ ಸಂಗದ ಸ್ಮರಣ ಸಂಚಿಕೆಗ ಪ್ರಕಟಾದೊ.

ಅರೆಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯಕ್ಕೆ ಸಮ್ಮಂದಿಸಿ ಕೆಲ್‌ಸ ಮಾಡ್‌ದವರ್ ಹಲವರ್. ಕೊಳಂಬೆ ಪುಟ್ಟಣ್ಣಗೌಡ, ಟಿ.ಜಿ. ಮುಡೂರು, ಕೋಡಿ ಕುಶಾಲಪ್ಪಗೌಡ, ಚೆ. ರಾಮಸ್ವಾಮಿ, ಪುರುಷೋತ್ತಮ




ಬಿಳಿಮಲೆ, ಕೆ. ಚಿನ್ನಪ್ಪಗೌಡ, ಸುಕುಮಾರ ಗೌಡ, ಕಾಣಿಚ್ಚಾರು ಸಂಕಪ್ಪಗೌಡ, ಅಡಪ್ಪಂಗಾಯ ಎಲ್ಯಣ್ಣಗೌಡ, ಕುತ್ಯಾಳ ನಾಗಪ್ಪಗೌಡ, ಚಿದಾನಂದಗೌಡ ಕೊಳಂಬೆ, ಎನ್.ಎಸ್.ದೇವಿಪ್ರಸಾದ್, ಜಯಮ್ಮ ಚೆಟ್ಟಿಮಾಡ, ಶೀಲಾವತಿ ಕೊಳಂಬೆ, ಕೆ.ವಿ.ವೆಂಕಟ್ರಮಣ, ಬೈತಡ್ಕ ಜಾನಕಿ ಬೆಳ್ಯಪ್ಪ, ಎಂ.ಜಿ.ಕಾವೇರಮ್ಮ, ಕೆ. ಆರ್. ಗಂಗಾಧರ, ಕುಯಿಂತೋಡು ದಾಮೋದರ, ಕಟ್ರತನ ಲಲಿತಾ ಅಯ್ಯಣ್ಣ, ಬಾರಿಯಂಡ ಆರ್. ಜೋಯಪ್ಪ, ಕೊಟ್ಟಕೇರಿಯನ ಲೀಲಾ ದಾಮೋದರ, ಪುಟ್ಟಣ್ಣ ಗೌಡ ಅಂಬೆಕಲ್, ಸೂದನ ಎಸ್ ಈರಪ್ಪ, ಕುಂಞಿಟ್ಟಿ ಶಿವರಾಮ ಗೌಡ, ಯಶವಂತ ಕುಡೆಕಲ್ಲು, ಹೊದ್ದೆಟ್ಟಿ ಭವಾನಿಶಂಕರ, ಪೂವಪ್ಪ ಕಣಿಯೂರು, ಪ್ರಭಾಕರ ಶಿಶಿಲ, ರೇವತಿ ನಂದನ, ಕೆ.ವಿ.ದಾಮೋದರಗೌಡ, ವಿಶ್ವನಾಥ ಬದಿಕಾನ, ಯದುಪತಿ ಗೌಡ, ಕರುಣಾಕರ ನಿಡಿಂಜಿ, ಕೋರನ ಸರಸ್ವತಿ, ವೇದಾ ದಯಾನಂದ ಮುಕ್ಕಾಟೀರ, ಪುತ್ತೂರು ಅನಂತರಾಜ್ ಗೌಡ, ಭವ್ಯಶ್ರೀ ಕುಲ್ಕುಂದ, ಜಯಪ್ರಕಾಶ್ ಕುಕ್ಕೇಟಿ, ದೇವಜನ ಗೀತಾ ಮೋಂಟಡ್ಕ ಯು. ಸುಬ್ರಾಯ ಗೌಡ, ಲೀಲಾ ದಯಾನಂದ, ಕೆ. ಆರ್. ವಿದ್ಯಾದರ, ಭರತೇಶ ಅಲಸಂಡೆಮಜಲು, ಮಾಧವ ಪೆರಾಜೆ, ಪೂಜಾರೀರ ಜಿ. ಮಾದಪ್ಪ, ಭವಾನಿಶಂಕರ ಅಡ್ತಲೆ, ತೆಕ್ಕಡೆ ಬಿ. ಕುಮಾರಸ್ವಾಮಿ, ಕಟ್ರತನ ಕೆ. ಬೆಳ್ಯಪ್ಪ, ಕಣಜಾಲ್ ಪೂವಯ್ಯ, ಸೀತಾರಾಮ ಕೇವಳ, ನೂಜಾಲು ಪದ್ಮನಾಭಗೌಡ, ಸಂಗೀತ ರವಿರಾಜ್, ಎ.ಕೆ. ಹಿಮಕರ, ಜಿ. ತುಕಾರಾಮ ನಿಡ್ಲೆ, ವೆಂಕಟ್ ಮೋಂಟಡ್ಕ, ಶ್ರೀನಿವಾಸ ಕಾರ್ಕಳ, ಯತಿರಾಜ ಭೂತಕಲ್ಲು, ಶಿವಣ್ಣ ನೆಲೆಮನೆ, ಶೇಷಗಿರಿ ಮೂಕಮಲೆ, ಸಂಜೀವ ಕುದ್ಪಾಜೆ, ಪ. ಯಂ. ಆನಂದಗೌಡ, ಲೋಕೇಶ್ ಊರುಬೈಲು, ಉದಯಕುಮಾರಿ ಚೆಂಬು, ವಿನೋದ್ ಮೂಡಗದ್ದೆ, ಪುನೀತ್ ರಾಘವೇಂದ್ರ ಕುಂಟುಕಾಡು, ಯೋಗೀಶ್ ಹೊಸೊಲಿಕೆ, ತೇಜಕುಮಾರ್ ಬಡ್ಡಡ್ಕ, ಜಯಶೇಖರ ಮಡಪಾಡಿ, ದಿನೇಶ್ ಹಾಲೆಮಜಲು, ಬಾಲಕೃಷ್ಣ ಭೀಮಗುಳಿ, ಸತ್ಯಪ್ರಕಾಶ ದೇರಪ್ಪಜ್ಜನ ಮನೆ, ಪುರುಷೋತ್ತಮ ಕೆ.ವಿ. ಕರಂಗಲ್ಲು, ಎಡಕೇರಿ ವಿಶ್ವನಾಥ, ಅನುರಾಧಾ ಕುರುಂಜಿ, ದೇವಸ್ಯ ಮನೋಹರ ಹೀಂಗೆ ಹಲವ್ ಮಂದಿ ಅರೆಬಾಸೆ ಸಾಹಿತ್ಯ, ಸಂಸ್ಕೃತಿ, ಸಂಸೋದನೆ ಪುಸ್ತಕಗಳ, ಲೇಕನಗಳ ಬರ್ದೊಳೊ. (ವಿ.ಬಿ.; ಪಿ.ಕೆ.ವಿ.)

**ಅಳ್‌ತೆ ಸಾದನಗ : ಕಳ್‌ಸಿಗೆ :** ಬತ್ತ, ರಾಗಿ, ಅಕ್ಕಿ ಅಳೆವ ಸೊತ್ತ್. ಇದರ ಬೆದ್ರ್‌ಲಿ, ಮರಲಿ ಮಾಡ್‌ವೆ. ಇದರ ಅಡಿ ಬಾಗಲಿ ನೆಲಲಿ ಲಾಯ್ಕ್ ಕುದ್ರಿಕೆ ಸಣ್ಣ ಕಾಲ್ ಉಟ್ಟು. ಇದ್ಕೂ ಪೊರ್‌ಲುಲಿ ಸೆಗಣಿ ಮೊಣ್ಣ್ ಬೆರ್‌ಸಿ ಪೂಜುವೆ. ಬೆದ್ರ್ ಕಳ್‌ಸಿಗೆನ ಮಾಯ್ಲರ್, ಕೊರಗ ಸಮುದಾಯದವು ಮಾಡಿರೆ, ಮರದ ಕಳ್‌ಸಿಗೆನ ಮರದ ಆಚಾರಿಗ ಮಾಡ್‌ವೆ. ಒಂದ್ ಕಳ್‌ಸಿಗೆಲಿ 14 ಸೇರ್ ಅಕ್ಕಿ, ಬತ್ತ ಹಿಡ್ದದೆ. ಇಂತಾ ಮೂರ್ ಕಳ್‌ಸಿಗೆ ಇದ್ದರೆ ಒಂದ್ ಮುಡಿ(42 ಸೇರ್) ಆದೆ. ಕೆಲವು ಕಡೆ 21 ಸೇರ್‌ನ ಬೆದ್ರ್‌ನ ಕಳ್‌ಸಿಗೆ ನು ಬಳಕೆಲಿ ಉಟ್ಟು. ಇದ್ ಅಕ್ಕಿ, ಬತ್ತ, ರಾಗಿ ಅಳೆಕೆ ಬೇಕಾದೆ. ಹಿಂದೆನ ಕಾಲಲಿ ಗದ್ದೆ ಉದ್ದ ಅಗಲನ ಒಂದ್ ಕಳಸೆ ಗದ್ದೆ, ಒಂದ್ ಮುಡಿ ಗದ್ದೆ ತ ಹೇಳುತ್ತಿದ್ದೊ. ಅಂದರೆ ಒಂದ್ ಮುಡಿಬತ್ತ ಬಿತ್ತ್, ನೇಜಿ ಹಿಡೆವಸ್ಟ್ ದೊಡ್ಡ ಗದ್ದೆತ ತಿಳ್ಕೊಣೊಕು.

**ಕೊಂಡೆ, ಪಾವು, ಸೇರ್ :** ಅಳತೆ ಮಾಡಿಕಾವ ಸೊತ್ತುಗ. ಪಿರಾಕ್ಲಿ ಜನ ಗದ್ದೆ, ತೋಟಲಿ ಬೆಳ್ದಿದ ಬೆಳೆನ ಸೇರ್, ಅರ್‌ದ ಸೇರ್, ಪಾವು, ಕೊಂಡೆ ಇದರ್‌ಲೆಲ್ಲ ಅಳತೆ ಮಾಡತಿದ್ದೊ. ಬೆದ್ರ್‌ನ ಕಡ್ದ್ ಕೊಂಡೆ ಮಾಡ್‌ವೆ. ದೊಡ್ಡ ಬೆದ್‌ರ್‌ಲಿ ಸೇರ್ ಮಾಡ್‌ವೆ. ಮರನ ಕೆತ್ತಿ ಸೇರ್, ಪಾವು, ಕೊಂಡೆ ಮಾಡ್‌ವೆ. ಸೇರ್‌ನ ಉರುಂಟು ಕೆತ್ತಿದು ಮಾಡ್‌ವೆ. ಕೆಲವು ಸೇರ್‌ಗೆ ಅಡಿಲಿ ಕಾಲ್ ಸ ಉಟ್ಟು. ಬೆದ್ರ್‌ನಹತ್ಯಾರ್ ಹಣ್ಣಿಗೊತ್ತಿದ್ದೊವು ಮಾಡಿಕಾದೆ. ಮರದ್ದ್ ಮಾತ್ರ ಮರದ ಆಚಾರಿಗಳೇ ಮಾಡ್ದು. ಇದರ್‌ಲಿ ಹಿಂದೆನವು ಬತ್ತ, ರಾಗಿ, ಜೋಳ, ಅಕ್ಕಿ ಎಲ್ಲ ಅಳತೆ ಮಾಡ್ತಿದ್ದೊ. ಬೀಜ, ಉಪ್ಪು ಹುಳಿ ಮೆಣ್ಸ್, ಹೀಂಗೆ ಎಲ್ಲಾ ಸಾಮಾನ್‌ಗಳ ಇದರ್‌ಲೆ ಅಳತೆ ಮಾಡತಿದ್ದೊ. ಹಂದಿ ಮಾಸಸ ಇದರ್‌ಲೆ ಅಳತೆ ಮಾಡ್ತಿದ್ದೊ. 1 ಸೇರ್‌ಂತೇಳಿರೆ 2 ಅರ್‌ದ ಸೇರ್, 1 ಸೇರ್‌ಗೆ 4 ಪಾವು, 1 ಪಾವುಗೆ 2 ಕೊಂಡೆ.



ಅಳತೆ ಸಾದನಗ

**ಮುಡಿ ಮತ್ತೆ ಕುದಂಟಿ :** ಅಕ್ಕಿ ಅಲ್ಲರ್ ಬತ್ತ ಹಾಳಾಗದ ಹಾಂಗೆ ಕಟ್ಟಿ ಇಸುದರ ಮುಡಿ ತ ಹೇಳ್‌ವೆ. ಗದ್ದೆ ಬೇಸಾಯ ಸುರು ಆಕನವೇ ಮುಡಿ ಕಟ್ಟುವ ಕ್ರಮ ಸುರು ಆಗಿರ್‌ದು. ಸುರುಲಿ ಉದ್ದ ಇರ್‌ವ ಲಾಯ್ಕ್‌ನ ಬಿಳ್‌ಗಿಲ್‌ನ ಕೊಮ್ಮುನಸ್ಟ್ ದಪ್ಪಕ್ಕೆ ಸೂಡಿ ಕಟ್ಟಿಕನೊಕು. ಅಂದಾಜ್ ಕಾರ್‌ನ ಚಕ್ರದಸ್ಟ್ ದೊಡ್ಡ ಬೆತ್ತ ಅಲ್ಲರ್ ಮಾದ್ರಿ ಬೊಳ್ಳಿನ ಚಕ್ರ ಮಾಡಿ ನೆಲಲಿ ಇಸೊಕು. ಅದರ ಮೇಲೆ ಸೂಡಿನ ಕೊಡೆ ಬುಡ್ಸಿದ ಹಾಂಗೆ ಪೊರ್‌ಲುಲಿ ಬುಡ್ಸಿ ಇಸೊಕು. ಬಿಳ್‌ಗಿಲ್‌ನ ಕಡೆ ನೊಡುಲಿ ಬಾವ ಹಾಂಗೆ ಮಾಡೊಕು. ಬುಡ್ಸಿಕನ ಎಲ್ಲಾ ಬಿಳ್‌ಗಿಲ್‌ನ ಸುತ್ತಳು ಹರ್‌ಂಡಿ ದೋಸೆನ ಹಾಂಗೆ ಉರುಂಟು ಆಕು. ಬಿಳ್‌ಗಿಲ್‌ನ ಕಡೆ ಮೇಲ್ಪುಡೆಗೆ ಬರೊಕು. ಮತ್ತೆ ಅದರ ಕಡೆನ ಸ ಬುಡ್ಸಿ ಮೆಟ್ಟಿ ಮೆಟ್ಟಿ ನೆಲಕ್ಕೆ ಸಮ ಮಾಡಿಕಾಂಕು. ಎಲ್ಲಿನು ಸೆರೆ ಕಾಣದ ಹಾಂಗೆ ಅದರ

ಮೇಲೆ ಬಿಳ್‌ಗಿಲ್‌ನ ಹರ್‌ಂಡೊಕು. ಎಲ್ಲಾ ಕಡೆಲೂ ಬಿಳ್‌ಗಿಲ್ ಸರಿ ಕುದ್ದ ಮೇಲೆ ಜಾಕ್ರತೆಲಿ ಅದರ ಒಳೆಗೆ ನಿತ್ತ್‌ಕಂಡ್ ಅಡಿಲಿದ್ದ ಚಕ್ರನ ಮೇಲೆ ಮೇಲೆ ಎತ್ತಿ ಒಳೆಗೆ ಗುಂಡಿ ಆಗುವ ಹಾಂಗೆ ಮಾಡೊಕು. ಒಳಗೆ ಇದ್ದ ಬಿಳ್‌ಗಿಲ್ ಉದ್‌ರದ ಹಾಂಗೆ ನೋಡಿಕಂಡ್ ಮೆಲ್ಲ



ಮುಡಿ

ಹೊರಗೆ ಬಂದ್ ಅದರ ಒಳಗೆ ಬತ್ತ ಅಲ್ಲರ್ ಅಕ್ಕಿ ತುಂಬುಸೊಕು. ಅಕ್ಕಿ ತುಂಬಿಸಿದ ಮೇಲೆ ಸುತ್ತೊಳು ಒಳೆಗಿಂದ ಬಿಳ್‌ಗಿಲ್‌ನ ಇಸಿದ್ ಎಲ್ಲಿಯೂ ಸೆರೆ ಕಾಣದ ಹಾಂಗೆ ಮಾಡಿಕಾಂಕು. ಕೊಡಿಲಿ ಇದ್ದ ಬಿಳ್‌ಗಿಲ್‌ನ ಸುತ್ತಿ ಸುತ್ತಿ ಅದರೊಳಗೆ ಒತ್ತಿ ಒತ್ತಿ ಇಸೊಕು. ಈ ಕೆಲ್ಸ ಮಾಡಿಕೆ ಇಬ್ಬೊರು ಬೇಕು.

ಮುಡಿ ಕಟ್ಟಿಕೆ ಬಿಳ್‌ಗಿಲ್‌ಂದಲೇ ಮಾಡ್ದ ಬೊಳ್ಳಿ ಬೇಕು. ಬಿಳ್‌ಗಿಲ್‌ನ ಹುರಿ ಮಾಡಿ ಬೊಳ್ಳಿ ಮಾಡ್‌ವೆ. ಬೊಳ್ಳಿನ ಮುಡಿಗೆ ಸುತ್ತಿ ಸುತ್ತಿ ಕಟ್ಟೊಕು. ಕಟ್ಟಿ ಆದ ಮೇಲೆ ಚಕ್ರನ ತೆಗ್ದವೆ. ಮುಡಿ ಉರುಂಟಾಗಿ ಬರೊಕು. ಉರುಂಟು ಬಾಕೆ ಕುದೆಂಟಿಲಿ ಮೆಲ್ಲ ಮೆಲ್ಲ ತಟ್ಟುವೆ. ಆಗ ಮುಡಿ ಗಟ್ಟಿನೂ ಆದೆ. ಕುದೆಂಟಂತೇಳಿರೆ ಗಟ್ಟಿ ಇರ್‌ವ ಮರಂದ ಮಾಡ್ದ ಒಂದ್ ಸೊತ್ತು. ಅದರ ಹುಣಿಸೆ ಮರಂದ ಮಾಡ್‌ವೆ. ಮುಡಿ ಕಟ್ಟುದು ಹಳ್ಳ ಬಜ್ಜ ಉಟ್ಟು. ಬೇಸಾಯ ಮಾಡೊವುಕೆ ಮುಡಿ ಕಟ್ಟಿಕೆ ಗೊತ್ತಿದ್ದದೆ. ಕೆಲವು ಜನ ಬಾರೀ ಲಾಯ್ಕಲಿ ಮುಡಿ ಕಟ್ಟುವೆ. ಅಕ್ಕಿ, ಬತ್ತ ಹಾಳಾಗದ ಹಾಂಗೆ ಮುಡಿ ಕಟ್ಟಿ ಇಸುವೆ. ಬಿಳ್‌ಗಿಲ್, ಅರ್‌ಕಿಲ್, ಮಳ್ಗಾಲ ಬೆಪ್ಪಂಗೆ ಉಟ್ಟು, ಅದರೊಳಗೆ ಇಸಿದ ಅಕ್ಕಿ ಬತ್ತ ಹಾಳಾದುಲೆ. ಮುಡಿ ಕಟ್ಟಿಕೆ ಒಂದ್ ಜಾತಿ ಮರದ ತೊಪ್ಪೆ ತೆಗ್ದ್ ಅದರ ತೆಳ್ಳಂಗೆ ಸಿಗ್ದ್ ಬೊಳ್ಳಿ ಮಾಡ್‌ವೆ. ಮುಡಿ ಅಕ್ಕಿ ಉಂಬಕೆ ಬಾರೀ ಲಾಯ್ಕಾದೆ. ಒಂದ್ ಮುಡಿಂತೇಳಿರೆ ಮೂರ್ ಕಳಸೆ. ಒಂದ್ ಕಳಸೆಂತೇಳಿರೆ ಹದ್‌ನಾಲ್ಕ್ ಸೇರ್. ಸೇರ್‌ಗೆ ನಾಕ್ ಪಾವು. ಒಂದ್ ಪಾವಿಗೆ ಎರಡ್ ಕುಡ್ತೆ. ಮುಡಿ ಅಕ್ಕಿನು ಗಾಳದ ಮೀನ್‌ನೂ ಸರಿ ಆದೆಂತ ಒಂದ್ ಗಾದೆ ಮಾತ್ ಉಟ್ಟು.

**ಮಾನ :** ಮಾನ ಅಳತೆ ಮಾಡ್‌ವ ಒಂದ್ ಹತ್ಯಾರ್. ಇದರ ಮರಂದ ಮಾಡ್‌ವೆ. ನೆಲಲಿ ಸಮ ಕುದ್ರಿಕೆ ಅಡಿಗೆ ಕಾಲ್ ಸ ಉಟ್ಟು. ಮರದ ಆಚಾರಿಗ ಇದರ ಮಾಡ್‌ವೆ. ಇದರ್‌ಲಿ ಅಕ್ಕಿ, ಬತ್ತ, ರಾಗಿ ಎಲ್ಲ ಅಳೆಕೆ ಆದೆ. ಮಾನಂತೇಳಿರೆ ಮೂರ್ವರೆ ಸೇರ್ ಅಕ್ಕಿ/ಬತ್ತ ಹಿಡೆವ ಒಂದ್ ಪಾತ್ರೆ. (ಎಂ.ಜಿ.ಕೆ.)

**ಆಟಿ ಕಳ್‌ಂಜ :** ಅರೆಬಾಸೆ ಪ್ರದೇಸಲಿ ಆಟಿ ತಿಂಗಳ್‌ಲಿ ಮಾತ್ರ ಮನೆಮನೆಗೆ ಮಾರಿ ತಕೊಂಡೋಕೆ ಬಾವ ಕೋಣ್‌ತ. ಇದೊಂದ್ ಆಚರಣಾತ್ಮಕ ಕೋಣ್‌ತ. ಆಶಾಡ ಪದಕೆ ಅರೆಬಾಸೆಲಿ ಆಟಿ ತೇಳ್‌ವೆ. (ನೋಡಿ : ಆಟಿತಿಂಗ) ತುಳುನಾಡ್‌ನ ಅಜಲ ಜೆನಾಂಗದವರ್‌ಲಿ ಪ್ರಚಲಿತ ಇರ್‌ವ ಕೋಣ್‌ತ ಪ್ರದಾನ ಆದ ಒಂದ್ ಜೆನಪದ ಕಲಾರೂಪ ಆಟಿಕಳೆಂಜ. ಆಟಿ (ಕರ್‌ಕಾಟಕ) ಅತವಾ ಅಷಾಡ ತಿಂಗಳ್‌ಲಿ ಪ್ರಚಲಿತವಾಗಿರುವ ಕೋಣ್‌ತ ಆಗಿರುದರ್‌ಂದ ಇದ್‌ಕೆ ಆಟಿಕಳೆಂಜ ತೇಳ್‌ವೆ. ಮಂಗಳೂರು ಕಡೆ ಕಡೆಂಜ ತೇಳಿನೂ ಕರ್‌ದವೆ. ಸುಳ್ಯ ತಾಲೂಕ್‌ಲಿ ಕಳೆಂಜೆನ ಒಟ್ಟಿಗೆ ಒಂದ್ ಹೆಣ್ಣ್ ವೇಸ(ಕನ್ನಿ)ವೂ ಇರುದರ್‌ಂದ ಕನ್ನಿ ಕಳೆಂಜ' ತೇಳ್‌ವೆ. ಬೆಳ್ತಂಗಡಿಲಿ ಜೋಡಿ ಆಟಿ ಕಳೆಂಜ ಇದ್ದದೆ. ಇವ್‌ಕೆ ಬಿರ್ಮರ ಮಾಣಿಲು ತೇಳಿನೂ ಹೆಸರುಟ್ಟು.

ವರ್‌ಸದ ಹನ್ನೆರಡ್ ತಿಂಗಳ್‌ಲಿ ವಿಪರೀತ ಮಳೆ ಬಾವ ತಿಂಗಂತೇಳಿರೆ ಅದ್ ಆಟಿ ತಿಂಗ. ತುಳುನಾಡ್‌ನ ಅಜಲ ಜೆನಾಂಗದವರ್‌ಲಿ ಪ್ರಚಲಿತ ಇರ್‌ವ ಕೋಣ್‌ತ ಪ್ರದಾನ ಆದ ಒಂದ್ ಜೆನಪದ ಕಲಾರೂಪ ಆಟಿಕಳೆಂಜ. ಸುಗ್ಗಿ ತಿಂಗಕೆ ವಿರೋದದ ತಿಂಗ ತೇಳ್ರೆ ಅದ್ ಆಟಿ. ಈ ತಿಂಗಲಿ ಆಟಿ ಕಳ್‌ಂಜದ ಕೋಣ್‌ತ ನಡ್‌ದದೆ. ಕಳ್‌ಂಜತೇಳಿರೆ 'ಕಳೆವಂವ', ಸಣ್ಣ ಹೈದ, ದುಸ್ಟ ಸಕ್ತಿಗಳ್‌ನ ಹೊಡ್‌ದೋಡ್ಸ್‌ವ ಮಾಂತ್ರಿಕ ತೇಳ್‌ವ ಅರ್‌ತ. ಆಟಿ ತಿಂಗಲಿ ತಿಂಬಕಿಲ್ಲದಿರ್‌ದು, ಕಾಯಿಲೆ ಕಸಾಲೆ ಬಾದು, ಹೆದ್‌ರಿಕೆ ಆದು, ಹಾಳ್ ಕರ್ನ್‌ಸ್‌ಗ ಬೀಳ್‌ದು ಇಂತದೆಲ್ಲ ಹೆಚ್ಚಿ ಇರ್‌ವ ಕಾಲ. ಇಂತ ಮಾರಿರೋಗ ಕಳೆವ ಮಾಯಕದ ಸಕ್ತಿನಾಂಗೆ ಬರಂವನೆ ಆಟಿ ಕಳ್‌ಂಜತ ಜೆನರ ಒಂದ್ ನಂಬಿಕೆ.

ಆಟಿ ತಿಂಗಳ ಬಗ್ಗೆ ಜೆನ ಕೆಲವ್ ನಂಬಿಕೆನ ಇಸಿಕಂಡಳೊ. ಅದ್‌ಕೆ ಕಾರಣನು ಉಟ್ಟು. ಈ ತಿಂಗಲಿ ತಿಂಬಕೆ ಉಂಬಕೆ ಬಾರೀ ಬಜ್ಜ. ಜಡಿಕೂಟ ಮಳೆಂದಾಗಿ ಯಾವ ಸೊತ್ತೂ ಬೆಳಿಯಕೆ ಆದುಲೆ, ಇಸಿಕಂಬಕೂ ಆದುಲೆ. ಅದರೊಟ್ಟಿಗೆ ಮಳೆಗಾಲಲಿ ಬಾವ ಕಾಯಿಲೆಗ ಬೇರೆ. ಆಟಿ ತಿಂಗಲಿ ಮಳೆ ಹೊಯ್‌ಕಂಡೇ ಇದ್ದದೆ, ಮಳೆ ಬಾತ್‌ಲೆಂತಾದರೆ ಬಿಸ್‌ಲ್. ಬಿಸ್‌ಲ್‌ಂತೇಳಿರೆ 'ಹನೆಸ ಒಡೆವಸ್ಟ್ ಬಿಸ್ಲ್!' ಹಿಂಗೆ ಮೊನ್‌ಸನ ಮೈಕೈಗೆ ಸುಕ ಇಲ್ಲೆ, ಮನ್‌ಸ್‌ಗೆ ಸಮಾದಾನ ಇಲ್ಲೆ, ಗೆಯ್ಯಕೆ ಕೆಲ್‌ಸ ಇಲ್ಲೆ. ಕೆಲ್‌ಸ ಇದ್ದರೂ ಮಾಡಿಕಾದುಲೆ. ಹಿಂಗಾಗಿ ಮೊಯಿಂಸಂಗೆ ಆಟಿ ತಿಂಗಂತೇಳ್‌ರೆ – ಹೆಂಗಪ್ಪಾ ದಿನ ಕಳೆದುಂತ





ಹೆದ್ರಿಕೆ! ಈ ಎಲ್ಲ ಕಾರಣಂದಾಗಿ ಸಮಾದಾನಕೆ ಜೆನಗ ಕೆಲವ್ ನಂಬಿಕೆನ, ಕಟ್ಟ್ ಕಟ್ಟಳೆನ, ಆಚರಣೆನ ಮಾಡಿಕಂಡ್ ಬಂದೊ. ಇಂತ ಆಚರಣೆಲಿ ಆಟಿಕಳ್‌ಂಜನ ಕೊಣ್‌ತನೂ ಒಂದ್ ಆಚರಣೆ.

ಆಟಿಲಿ ಬಾವ ಈ ಎಲ್ಲಾ ಕಸ್ಟಕೆ ಕಾಣದ ಸಕ್ತಿನೆ ಕಾರಣಂತ ನಂಬಿದ ಜೆನಗ ಮಾಯಕದ ಸಕ್ತಿನೇ ನಂಬಿಕಂಡ್ ಬಂದೊಳೊ. ಆ ಸಕ್ತಿಂದ ಮಾತ್ರ ಅವರವರ ಕಸ್ಟಕೆ ಪರಿಹಾರಂತ ನಂಬಿಕಂಡೊಳೊ.ಮೈಗೆ ಹಿಡ್‌ದ ಕೊಲೆ ಪೀಡೆನ ಮಾಟ ಮಂತ್ರಂದ ಬುಡ್‌ಸ್‌ವ ಕ್ರಿಯೆಗ ಹಳ್ಳಿಲಿ ಅಲ್ಲಲ್ಲಿ ನಡ್‌ದದೆ. ಮಂತ್ರ ತಂತ್ರನ ಅಜಲರ್ ಮಾಡ್‌ವೆ. ಬಣ್ಣರ್ ಮಾಡ್‌ವೆ. ಕಣಿಯರ್ ಸನು ಮಾಡ್‌ವೆ. ಈ ಆಟಿ ಕಳಂಜನ ಕಟ್ಟ್‌ನ ಅಜಲರ್,



ಕಳೆಂಜ

ಮುಗೇರರ್, ಬಣ್ಣರ್ ಮತ್ತೆ ಪರವರ್ ಸುಳ್ಯ, ಕಾಸರಗೋಡ್ ಬಾಗಲಿ ಕಟ್ಟುವೆ. ಆದರೆ ಹೆಚ್ಚಾಗಿ ಸುಳ್ಯಲಿ ಅಜಲರ್ ಕಟ್ಟ್‌ವ ಆಟಿಕಳ್‌ಂಜದ ಕೊಣ್‌ತ ಕಾಂಬಕೆ ಸಿಕ್ಕಿದೆ..

ಕಳಂಜ ನೊಟ್ಟಿಗೆ 'ಕನ್ಯಾ' ತ ಹೇಳ್‌ವ ಮೊರಿ ಕಳಂಜನೂ ಇದ್ದದೆ. ಬೆಳ್ತಂಗಡಿಲಿ ಮುಗೇರರ್ ಒಟ್ಟಿಗೆ ಎರ್‌ಡ್ ಕಳೆಂಜೆನ ಕಟ್ಟಿ ಕೊಣ್‌ದವೆ. ಕಳಂಜ ಕಟ್ಟೊವು ಕಾಲ್‌ಗೆ ಗಗ್ಗರ, ಸೊಂಟಕೆ ಕೆಂಪು ಬೆಳಿ ಬಟ್ಟೆನ ಕಟ್ಟ್‌ವೆ. ಅದರ ಮೇಲೆ ಚಾಳೆ ಒಲಿನ ಸಿಗ್‌ದ್ ಜರಿನಾಂಗೆ ಮಾಡಿ ಇಳ್‌ಸಿ ಬುಟ್ಟುವೆ, ತಲೆಗೆ ಮೊಡ್‌ಪಾಳೆ ಇಸ್‌ವೆ ಮೋರೆಗೆ ಕೆಂಚಿ ಗಡ್ಡನ ಹಾಕಿಕಂಡವೆ, ಪನೆ ಮರನ ಗರಿಂದ ಮಾಡ್‌ದ ಕೊಡೆ ಹಿಡ್‌ಕಂಡವೆ. ತೆಂಬರೆ ಹಿಡ್‌ದಂವ ಒಬ್ಬ ಕಳಂಜನ ಪಾಡ್ದನನ ಹೇಳ್‌ದೆ. ಮನೆ ಮನೆಗೆ ಹೋಗಿ ಇಜ್ಜಲ್‌ಲಿ ಕೊಣ್‌ತ ಸುರ್ ಮಾಡಿಕಂಡ್...

ಆಟಿಡ್ ಬತ್ತೆ ಕಳೆಂಜೆ ಮಾರಿ ಕಳೆಪೆನೋ  
ಮೂಡೈತ ಮಾರಿನ್ ಮೂಡಾಯಿಗ್ ಕೊಂಡೊಪೆನೋ  
ಆಟಿಡ್ ಮುಪ್ಪೊ ದಿನೊ ಕಳೆಂಜಗ್ ಮಾಮಿ ಇಲ್ಲಾಡ್  
ಬಾರೆದ ಕಂಡೆ ತಿಂದೆನೊ ಕಳೆಂಜೆ ಬಂಜಿ ಬುಳೆಪ್ಪಾವೊಂಡೆ  
ಮೂಂಡಿದ ಕಂಡೆ ತಿಂದೆನೊ ಕಳೆಂಜೆ ದೊಂಡೆ ಕಿರ್‌ಂಬಾವೊಂಡೆ  
ಮೂವೊಡ್ದ ಸಾಂತಣಿ ನಟ್ಯೆನೊ ಕಳೆಂಜೆ  
ಈವೋಡ್ದ ಪೆಲತ್ತರಿ ನಟ್ಯೇನೊ  
ಬಾಕಿಲ್ ಬಾಕಿಲ್ ಪೋಪೆನೊ ಕಳೆಂಜೆ ಮಾರಿ ಕಳೆಪೆನೋ  
ಆಟಿಡ್ ಬತ್ತೆನೋ ಕಳೆಂಜೆ ಸೋಣೊಡು ಪೋಪೆನೋ  
ಅರೆಬಾಸೆಲಿ :  
ಆಟಿಲಿ ಬಂದಂವ ಕಳೆಂಜ  
ಸೋಣಲಿ ಹೋದೆನೋ..  
ಆಟಿಲಿ ಬಂದಂವ ಕಳೆಂಜ,  
ಮಾರಿ ಕಳ್ದದೆನೋ  
ಮೂಡದ ಮಾರಿನ ಮೂಡಕೆ  
ತಕಂಡೋದೆನಾ..  
ಆಟಿಲಿ ಮೂವತ್ತ್ ದಿನ ಕಳೆಂಜ  
ಅತ್ತೆ ಮನೆಲೆನಾ  
ಬಾಳೆನ ಗೆಂಡೆ ತಿಂದತ ಕಳೆಂಜ,  
ಹೊಟ್ಟೆ ಬೆಳ್ಸಿಕಂಡತೋ..  
ಮೂಂಡಿನ ಗೆಂಡೆ ತಿಂದತ ಕಳಂಜ  
ದೊಂಡೆ ತೊರ್‌ಸಿದೆನಾ ಕಳೆಂಜ.  
ಕಳ್ದೊರ್‌ಸದ ಸಾಂತಾಣಿ ಬೇಡ್ದೆನೊ.  
ಈ ವರ್‌ಸದ ಹಲ್ಸ್ ನೆಕಿ ಬೇಡ್ದೆನೊ  
ಬಾಗ್‌ಲ್ ಬಾಗ್‌ಲ್ ಹೋಂವ ಕಳಂಜ  
ಮಾರಿ ಕಳ್ದದೆನೋ  
ಆಟಿಲಿ ಬಂದ ಕಳೆಂಜ, ಸೋಣಲಿ ಹೋದೆನೊ.

ಹಿಂಗೆ ತುಳು ಪಾಡ್‌ದನ ಹೇಳಿಕಂಡ್ ಕಳಂಜ ಕೊಣ್‌ದದೆ. ಪೊದ್ಯ ಮತೆ ಕೊಣ್‌ತಲಿ ಮಾಯಕದ ಸಕ್ತಿ ಕಂಡದೆ. ಕ್ರಿಸಿ ಮತ್ತೆ ಬೆಳೆಗೆ ಸಮ್ಮಂದಪಟ್ಟ ಸಂಗತಿಗ ಕಂಡ್ ಬಂದದೆ. ಕಳಂಜ ಅಂವನ ವೇಸಲಿ, ನಡೆ ನುಡಿಲಿ ಹೆದ್‌ರಿಕೆ ಹುಟ್ಸ್‌ವವನ ಹಾಂಗೆ ಕಂಡ್ ಬಂದರೂ ಮನೆವರ ಮನ್‌ಸ್‌ಲಿದ್ದ ಹೆದ್ರಿಕೆನ ದೂರ ಮಾಡಿ ಸಮಾದಾನ ಮಾಡಿ ಹೋದೆ.

ಕಳೆಂಜ ಅಷಾಡ ಮಾಸಲಿ ಮನೆಮನೆಗೆ ಹೋಗಿ 'ಮಾರಿ'ನ ನಿವಾರ್‌ಸಿದೆ. ಮೊನ್‌ಸರ್‌ಗಾಗಲೀ, ಪ್ರಾಣಿಗಳಿಗಾಗಲೀ ಬಾವ ಕಾಯಿಲೆನ ನಿವಾರಣೆ ಮಾಡ್‌ವ ಮಂತ್ರವಾದಿನಂಗೆ ಕಾಣ್‌ಸಿಕಂಡದೆ. ಆಟಿಕಳೆಂಜ ಸಂಪ್ರದಾಯಲಿ ಸುರುನ ಕಾರ್‌ಯ 'ಮಾರಿ ಕಳೆದು'. ಆಟಿಡ್ ಬತ್ತೆನೋ ಕಳೆಂಜೆ ಮಾರಿಕಳಪೆನೊ (ಆಷಾಡದಲ್ಲಿ ಬಂದನೋ ಕಳೆಂಜ ಮಾರಿ ಕಳೆಯುತ್ತಾನೋ) ಈ ಮಾತ್. ಆಟಿಕಳೆಂಜದ ಪಾಡ್‌ದನದ ಹೆಚ್ಚಿನ ಎಲ್ಲಾ ಪಾಟಗಳ್‌ಲಿ ಕಂಡ್ ಬಂದದೆ. ಮಾರಿ



ಕಳೆಂಜ

ತೇಳ್ವ ಪದಕ್ಕೆ ರೋಗ ತೇಳ್ವ ಅರ್ತ ರೂಡಿ ಆಗುಟು. ಹಿಂದೆ ಹಳ್ಳಿಗಳ್ಲಿ ಬಾದಿಸ್ತ್ತಿದ್ದ ಸಿಡುಬು, ಕಾಲೆರಾ, ಪ್ಲೇಗ್, ಇಂತೆಲ್ಲ ಸಾಂಕ್ರಾಮಿಕ ರೋಗಗಳ ಮಾರಿ ರೋಗ ತೇಳಿನೂ ಕರೆತಿದ್ದೊ ಈ ರೋಗಗ ಬಾಕೆ ಯಾದೊ ಗ್ರಾಮದೇವತೆನೇ ಕಾರಣ. ಅದರ ಸಿಟ್ಟ್‌ನ ತಗ್ಗ್‌ಸಿ ಅದ್‌ಕೆ ಬಲಿ ಕೊಟ್ಟ್ ಮಾರಿಹಬ್ಬನ ನಡ್‌ಸಿರೆ ಈ ರೋಗಗಳ ನಿವಾರ್‌ಸಕ್ ತೇಳ್‌ದು ಜೆನಪದರ ನಂಬಿಕೆ ಆಗುಟು

ಮಾರಿ ತೇಳ್ವ ಪದಕೆ ದೊಡ್ಡದ್ ತೇಳ್‌ದೆ ಮೂಲಾರ್ತ, ಮಾರಿ ಕಿಲೆಂಜಿ (ದೊಡ್ಡ ನೊಣ) ಮಾರಿಕಿದೆ (ದೊಡ್ಡ ಹಟ್ಟಿ) ಮಾರಿಬಲೆ (ದೊಡ್ಡ ಬಲೆ) ಇಲ್ಲಿ ಬಾವ ಮಾರಿ ಪದ ದೊಡ್ಡದ್ ತೇಳ್ವ ಅರ್ತ ಕೊಟ್ಟದೆ. ಮಾರಿ ತೇಳ್ವ ಪದನೇ 'ಮಾ(ಮಹಾ) ತೇಳಿ ಆದೆ. ಅದರ್‌ಂದ ದೊಡ್ಡ ರೋಗ ಸಾಂಕ್ರಾಮಿಕ ರೋಗ ಊರೆಲ್ಲ ಹರ್‌ಡಿ ಹೆಚ್ಚಿನವರ ಬಲಿ ತಕಂಬ ರೋಗಗಳಿಗೆ ಮಾರಿ ರೋಗ ತೇಳಿನೂ ಹೆಸ್‌ರ್ ಬಳಕೆಯಾಗಿರ್‌ದು. ಈ ಮಾರಿ ರೋಗನ ಜೆನಂಗಳಿಗೆ, ದನಕರ್‌ಗಳಿಗೆ ತಂದ್ ಹಾಕುವ ತೇಳಿ ನಾವು ಗ್ರೇಸಿಕಣುವ ದೇವತೆನ ಮಾರಿ, ಮಾರಿಯಮ್ಮ ತೇಳಿ ಕರ್‌ದೊ.

ಕಳೆಮುನಿ ತೇಳ್ವ ಪದಕೆ ಕಳೆದು (to remove) ತೇಳುವ ಅರ್ತ ಉಟ್ಟು. ಮೈಲಿ ಪ್ರೇತ ಅಲ್ಲರೆ ದುಸ್ಟಶಕ್ತಿಗ ಹುಕ್ಕುಟು ತೇಳ್ವ ನಂಬಿಕೆಂದ ಅದರ ಕಳೆವ (ಉಚ್ಚಾಟಿಸುವ) ಮಾಂತ್ರಿಕ ಆಚರಣೆ ತುಳುನಾಡ್‌ಲಿ ಉಟ್ಟು. ಈ 'ಕಳೆಮನಿ' ವಿದಿನ ನಿರ್‌ವಹಿಸಿಕೊಡುವ ಮಂತ್ರವಾದಿಗ ಈ ಕೊಣ್‌ತ ನಡ್‌ಸುವ ನಲಿಕೆಯವೇ ಆಗಿದ್ದವೆ. ತ ದುಸ್ಟಶಕ್ತಿಗಳ ಕಳೆವ ಮತ್ತೆ ಊರ್‌ಗೆ ಬಂದ ಮಾರಿರೋಗಗಳ ಕಳೆವಂವ ಆಗಿದ್ದ್ (ನಿವಾರಕನಾಗಿ) ಕಳೆಂಜ ಆರಾದನೆನ ಸೊರೂಪನ ಪಡ್‌ದಾಳ್‌ದ್..

**ಆಟಿ ಕಳ್ಂಜ ಪದದ ಹಿನ್ನೆಲೆ :** ಕಳೆಂಜ ಪದಲಿ ಬಾವ ಅಂಜ (ಅಣ್ಣ) ಎಂಬುದು ಆಣ್–ಜೇವು ತೇಳ್‌ದರ ಸಂಕ್ಷಿಪ್ತ ರೂಪ ತೇಳಿ ಹೇಳ್‌ವೆ. ಬಿ. ಎ. ವಿವೇಕ ರೈ ಅವು ಕಳೆಂಜ ಪದದ ನಿಸ್ಪತ್ತಿನ ಹಿಂಗೆ ಹೇಳಿಯೊಳೊ. ಕಳೆಂಜ ಪದಲಿ ಬಾವ ಅಂಜ (ಅಣ್ಣ) ತೇಳುದು ಅಣ್–ಜೇವು ತೇಳುದರ ಸಂಕ್ಷಿಪ್ತ ರೂಪ. ಆಣ್+ಜೇವು ಆಂಜೇವು (ಆಂಜೊವು ಕಳೆ+ಆಣ್+ಜೋವು– ಕಳೆ+ಆಣ್+ಜೆ+ಕಳೆಂಜೆ– ಕಳೆಂಜ. ಈ ವಿವರಣೆ ಹೆಚ್ಚ್ ಸರಿ ಉಟ್ಟು. ಕಳೆಂಜ ಕೊಣ್‌ತದ ಬಗ್ಗೆ ಸಮ್ಮಂದ ಪಟ್ಟಂಗೆ ಈ ಹೆಸರ್ ವಿರುದ್ದ ಆದೆ. ಮಾಲಗತ್ತಿಯವು ಕಳೆಂಜ ತೇಳ್ವ ಪದಕ್ಕೆ 'ಕುಮಾರ' ತೇಳುವ ಅರ್ತನ ಕೊಟ್ಟೊಳೊ. ಯಕ್ಸರ್‌ಗೆ ತುಳುಬಾಸೆಲಿ ಕುಮಾರ ತೇಳುವ ಪದ ಬಳಕೆಲಿ ಉಟ್ಟು. ಸಿರಿನ ಮಜ್ಜ ಕುಮಾರ, ಹೀಂಗಾಗಿ ಕಳೆಂಜ ಒಬ್ಬ ಯಕ್ಸ ತೇಳ್ವ ಪರಿಕಲ್ಪನೆನ ಮಾಡಿಕಣಕ್. ಬೆಳ್ತಂಗಡಿಲಿ ಕಳೆಂಜೆನ ಬೆರ್ಮೆರೆ ಮಾಣಿ ತೇಳಿ ಕರ್‌ದಿರ್‌ದು ಈ ಸಂಗತಿಗೆ ಹೆಚ್ಚ್ ಬಲ ಕೊಟ್ಟದೆ.

**ಆಟಿ ಕಳ್ಂಜ ಕೊಣ್‌ತದ ವಿವರ :** ಆಟಿ ಕಳೆಂಜ ಒಂದ್ ಕಾಲಕ್ಕೆ ಸರಿಯಾದ ಕೊಣ್‌ತ. ಇದರ ಹೆಸರೇ ಹೇಳ್‌ವಂಗೆ ತುಳು ತಿಂಗಳ ಆಟಿಲಿ (ಕರ್‌ಕಾಟಕ ಮಾಸ) ಈ ಕೊಣ್‌ತ ನಡ್‌ದದೆ. ಸಾಮಾನ್ಯ ಆಗಿ ಜುಲಾಯಿ ತಿಂಗಳ 17ನೇ ತಾರಿಕ್‌ಂದ ಸುರಾಗಿ ಅಗೋಸ್ತು ತಿಂಗಳ 15 ಅಲ್ಲರೆ 17ರಂದ್ ಮಗ್ದದೆ. ಆಯ ಊರು ಸೀಮೆನ ಚಾಕ್‌ರಿಲಿ ಇರ್‌ವ ಅಜಲರ್ ಆಟಿ ಕಳ್‌ಂಜನ ಕಟ್ಟಿದ್ ಮನೆ ಮನೆಗೆ ಹೋದವೆ. ಬೇರೆ ದೆವ್ವಗಳಂಗೆ ಕೊಣ್‌ತಲಿ ಉಗ್ರ ಇಲ್ಲದೆ, ಚೆಂಡೆನ ಪೆಟ್ಟ್‌ಗೆ ತಕ್ಕಂಗೆ ಹೆಜ್ಜೆ ಹಾಕಂಡೆ ಸಣ್ಣಕೆ ನಿತ್ತಲ್ಲೆ ಕಳ್‌ಂಜ ಹಿಂದೆ ಮುಂದೆ ಹೋಗಿ ಕೊಣ್‌ದದೆ. ದಾರಿಲಿ ಹೋಕನ ಮಕ್ಕಳ ಹೆದರ್‌ಸುವಂಗೆ, ಅಡ್ಡ ಸಿಕ್ಕಿದವರ ಏನಾರ್ ಚೇಸ್ಟೆ ಮಾಡ್‌ದರನು ಕಾಣಕ್.

ಅರೆಬಾಸಿಗರ ಮತ್ತೆ ತುಳುವರ ಆಟಿ ತಿಂಗ ಬೇಸಗೆ ಮತ್ತೆ ಮಳ್ಗಾಲದ ಒಂದ್ ಸಂದಿಕಾಲ. ಮಳ್‌ಗಾಲ ಸುರಾದಂಗೆ ಇಲ್ಲಿ ಕಾಂಬ ಸಿಡ್ಲ್ ಮಿಂಚ್, ಬಿರುಗಾಳಿ ಪ್ರವಾಹಗಳ ಕಾರಣಂದ ಜೆನ ಯಾಗೊಳು ಹೆದ್ರಿಕೆಲಿ ಇದ್ದವೆ. ಬೇಸಗೆಲಿ ಒಣ್‌ಗಿ ಹೋದ ದ್ಯೆಮರ ಬೊಳ್ಳಿಗಳೆಲ್ಲ ಮತ್ತೆ ಚಿಗ್‌ರಿ ಹಸ್‌ರಾಗಿ ಬೆಳ್‌ದವೆ. ಚೌಗು ಪ್ರದೇಶಗಳ್‌ಲಿ ಕೆಸು, ಚಗಟೆ, ಹುಲ್ಲು ಇಂತೆಲ್ಲ ದ್ಯೆಗ ತುಂಬಿ ಕಂಡವೆ. ಇದರ್‌ಂದಾಗಿ ಕ್ರಿಮಿಗ, ಉಮ್ಮಣಿ, ನೆಳ, ರೋಗಾಣುಗಳ ಹಾವಳಿ ಹೆಚ್ಚಾದೆ. ಉಮ್ಮಣಿಗಳ





ಕಾಟ ಇಪ್ರೀತ ಆದೆ. ಮಳೆ, ಸೆಕೆನ ಮಿಸ್ರ ಹವಾಮಾನಂದ ಚಳಿಜ್ವರ, ಕೆಮ್ಮು, ಮಲೇರಿಯ ಎಲ್ಲ ಕಡೆ ಕಾಣ್‌ಸಿಕಂಡದೆ. ಹಿಂಗಾಗಿ ಮಳೆಗಾಲದ ಕಡೆ ಕಾಲಲಿ ಜೆನ ರೋಗ ಹಿಡ್‌ದ್ ನರಳ್‌ದು ಹಿಂದೆ ಎಲ್ಲೆಲ್ಲು ಕಾಣ್‌ತ್ತಿತ್ತ್.

ಎಡೆಬುಡದೆ ಹೊಯ್‌ವ ಮಳೆಂದಾಗಿ ಜೆನಕೆ ಹೊರೆಗೆ ಹೋಕೆ ಆದುಲೆ. ಇಲ್ಲಿನ ಬಹುತೇಕ ಜೆನ ಕ್ರಿಸಿ ಕೆಲ್‌ಸದವಾಗಿದ್ದ್, ಕೆಲ್‌ಸಕೆ ಹೋಗದೇ ಇರುದರ್‌ಂದ ಉಂಬಕ್ಕೆ ತತ್ವಾರ. ಬೇಸಿಗೆಲಿ ತೆಗ್‌ದ್ ಇಸಿದ ದಾನ್ಯನೂ ಕೂಡ ಮಳೆಗಾಲದ ಕಡೆನ ತಿಂಗ ಬಾವಸ್ವರ್‌ಲಿ ಮುಗ್‌ದ್ ಹೋಗ್‌ತ್ತಿತ್ತ್. ಜೆನ ಉಂಬಕೆ ಗತಿ ಇಲ್ಲದೆ ತೆಗ್‌ದ್ ಇಸಿದ ಹಲ್ಸ್‌ನೆಕ್ಕಿ ಬೇಸಿ ತಿಂದ್ ಹೊಟ್ಟೆ ತುಂಬಿಸಿಕಂಬ ಪರಿಸ್ತಿತಿ ಬಾತಿತ್ತ್. ಹೊರಗೆ ಬೆಳ್ ಕೆಸ, ಚಗ್ತೆ, ಕನಲೆ (ಬಿದಿರ ಮೊಗ್ಗು) ಅಡ್ಡಬಾರೆಕಾಯಿ, ನರೆ, ಈಯೆರ್ ಇಂತ ಗೆಡ್ಡೆ ಗೆಣ್ಸ್‌ಗಳ ತಂದ್ ಬೇಸಿ ತಿಂದ್ ಹೊಟ್ಟೆ ತುಂಬಿಸಿಕಂಬ ಪರಿಸ್ತಿತಿ. ಆಟಿ ತಿಂಗಳ್‌ಲಿ ಎಲ್ಲಾ ಕಡೆ ಹೊಟ್ಟೆಗೆ ಬರ, ಕಾಯಿಲೆ ಕಸಲೆಗ ವಾತಾವರಣಲಿ ಹರ್‌ಡಿ ಕಣ್‌ತ್ತಿತ್ತ್. ಹಿಂಗೆ ಬಾರಿ ಕಸ್ಟದ ಈ ಕಾಲನ ಸ್ತಿತ್ಯಂತರ ಕಾಲ ಶೂನ್ಯಕಾಲ ತೇಳಿ ವಿದ್ವಾಂಸರ್ ಕರ್‌ದೊಳೊ.

ಹವಾಮಾನದ ಬದಲಾವಣೆಂದ ಈ ಕಾಲಲಿ ಆವ ರೋಗ ರುಜಿನಗಳ ಹೆದ್‌ರಿಕೆನ ಹದ್ದ್‌ಬಸ್ತ್‌ಗೆ ತಾಕೆ ಜೆನಪದ ವೈದ್ಯದ ವಿಶಿಸ್ಟ ಆಚರಣೆಗ ನಡ್‌ದ್ ಬಂದುಟು. ಅಜಲರ್ ಇಲ್ಲರೆ ಪಾಣಾರರ್ ಸೊತ ಜೆನಪದ ವೈದ್ಯರ್ ಆಗಿರ್‌ದರ್‌ಂದ ಈ ರೋಗ ಮತ್ತೆ ಹೆದ್‌ರಿಕೆನ ನಿವಾರಣೆಗೆ ಎರಡ್ ಮಾರ್‌ಗೋಪಾಯಗಳ್‌ನ ಕಂಡ್‌ಕಂಡೊಳೊ. ಸಸ್ಯಜೆನಪದ ವೈದ್ಯದ ಪ್ರಕಾರ ಆಟಿ ಅಮವಾಸೆನಂದ್ ಇಲ್ಲಿ ಬೆಳೆವ ಮೊದ್ದ್‌ನ ದೈ ಹಾಲೆ ಮರ (ಸಪ್ತಪರ್‌ಣಿ ಹಾಳೆ)ದ ಕೆತ್ತೆನ ತಂದ್ ಗುದ್ದಿ ಅರ್‌ದ್ ರಸ ತೆಗ್‌ದ್ ಕುಡ್‌ದ್. ಇದ್ ಸರ್‌ವ ರುಜಾಪಹಾರ ಮೊದ್ದ್ ತೇಳಿ ಪರಿಗಣಿಸಿಯೊಳೊ. ಈ ನಂಬಿಕೆ ತುಳುನಾಡ್‌ನ ಎಲ್ಲಾ ಕಡೆ ಉಟ್ಟು, ಹಾಂಗೆ ಇದ್ ಅರೆಬಾಸೆವರ್‌ಲು ಒಂದ್ ಆಚರಣೆಯಾಗಿ ಬೆಳ್ದು ಬಂದುಟು. ರೋಗ ಮತ್ತೆ ಹೆದ್‌ರಿಕೆನ ಪರಿಹಾರಕೆ ಇನ್ನೊಂದು ವೈದ್ಯ ಪೊದ್ದತಿ ದಾರ್ಮಿಕ ಮಾಂತ್ರಿಕ ಜೆನಪದ ವೈದ್ಯ (Magico religious Folk Medicine) ಇದರ ಪ್ರಕಾರ ಆಟಿ ಕಳೆಂಜ ಜೆನಪದ ಕೊಣ್‌ತ ನಡೆದದೆ. ಇದೊಂದು ಮಾಂತ್ರಿಕ ಕೊಣ್‌ತ. ಕಳೆಂಜ ಮಾಂತ್ರಿಕ ಆಗಿ ಜೆನಕೆ ಪ್ರತಿಬಯ ಹುಟ್ಟಿಸಿ ಅವರ್‌ಲಿ ಹುದುಗಿರುವ ಮೂಲಬಯನ ದೂರ ಮಾಡ್‌ದೆ. ಆಟಿ ಅಮವಾಸೆನ ಮೊದ್ದ್ ಕುಡಿವ ಆಚರಣೆ ಮತ್ತೆ ಮಾರಿ ಕಳೆವ ಕಳೆಂಜ ಕೊಣ್‌ತ ಹವಾಮಾನದ ಬದಲಾವಣೆ. ಹೊಟ್ಟೆಗೆ ಬರ ಮತ್ತೆ ರೋಗಂದ ಆವ ಮಾನಸಿಕ ಹೆದ್ರಿಕೆನ ನಿವಾರಿಸಿ ಜೆನಪದರ ಆರೋಗ್ಯನ ಹತೋಟಿಲಿ ಇಸಿಕೆ ಸಾದ್ಯ ಆದೆ.

**ಆಟಿ ಕಳ್‌ಂಜ ವೇಸ :** ಬಳಕೆನ ಪರಿಗಣಿಸಿ ಆಟಿಕಳೆಂಜ ಕೊಣ್‌ತತ ನಡೆವ ಪ್ರದೇಸಗಳ್‌ನ ಆರ್ ಮುಕ್ಯ ವಿಬಾಗ ಆಗಿದ್ ಮಾಡಿಯೊಳೊ. ಅದ್ ಯಾದೆಲ್ಲಂತ ಹೇಳಿರೆ 1. ಮತ್ತೂರು 2. ಬಂಟ್ವಾಳ, 3. ಕಾಸರಗೋಡು 4. ಮಂಗಳೂರು 5. ಸುಳ್ಯ ಮತ್ತೆ 7. ಬೆಳ್ತಂಗಡಿ, ಆಟಿಕಳೆಂಜ ಸಾಮಾನ್ಯವಾಗಿ ಒಬ್ಬನೇ ಕೊಣಿವ ಕೊಣ್‌ತ, ಒಟ್ಟಿಗೆ ತೆಂಬರ ಬೊಟ್ಟಿಕಂಡ್ ಪದ ಹೇಳ್‌ವವು ಇನ್ನೊಬ್ಬ ಇದ್ದವೆ. ಸುಳ್ಯ ತಾಲೂಕ್‌ಲಿ ಆಟಿ ಕಳೆಂಜೆನ ಒಟ್ಟಿಗೆ ಕನ್ನಿ ತೇಳುವ ಇನ್ನೊಂದು ಸ್ತ್ರೀವೇಸ ಕೂಡ ಇದ್ದದೆ. ಬೆಳ್ತಂಗಡಿಲಿ ಮೇರರ್ ನಡ್ಸುವ ಆಟಿಕಳೆಂಜ ಕೊಣ್‌ತಲಿ ಜೋಡಿ ಆಟಿಕಳ್‌ಂಜಗ ಇದ್ದವೆ.

ಸುಳ್ಯದ ಆಟಿಕಳೆಂಜೆನ ವೇಸಬೂಸಣ ಬೇರೆ ಎಲ್ಲಾ ಆಟಿಕಳೆಂಜೆನ ವೇಸ ಬೂಸಣಗಳ್‌ಂದ ವೆತ್ಯಾಸನ ಇಸಿಕಂಡುಟು. ಆಟಿಕಳೆಂಜೆನ ಒಟ್ಟಿಗೆ ಕನ್ನಿ ತೇಳುವ ಸ್ತ್ರೀ ವೇಸನೂ ಇದ್ದದೆ. ಕನ್ನಿ ವೇಸನ ಸಣ್ಣ ಪ್ರಾಯದ ಮಕ್ಕ ಹಾಕುವೆ. ಚಾಳೆ ಚಿರಿಲಿ ಮಾಡ್ದ ಜರಿನ ಸೊಂಟಕು ಗಂಟ್ಲ್ ಅಟಿಗು ಕಟ್ಟಿಕಂಡವೆಕೆಲವ್ ಅದರ ಮೇಲೆ ಬೈರಾಸ್ ಸುತ್ತಿ ಕಟ್ಟಿಕಂಡವೆ. ಅದ್ ಎದೆಲಿ ಇಳಿ ಬುಟ್ಟಂಗೆ ಕಂಡದೆ. ಮೋರೆಗೆ ಮೊಸಿ ಮತ್ತೆ ಸುಣ್ಣದ ಬೊಟ್ಟುಗಳ ಹಾಕಿಕಂಡವೆ. ತಲೆಗೆ ಮುಂಡಾಸ್ ಕಟ್ಟಿ ಅದರ ಮೇಲೆ ಹಾಳೆಂದ ಮಾಡ್‌ದ ಟೊಪ್ಪಿ ಇಸಿಕಂಡವೆ, ಈ ಟೊಪ್ಪಿಗೆ ಎರ್‌ಡ್ ಕೊಂಬುಗಳಂಗೆ ಮಾಡಿದ್ದವೆ. ಟೊಪ್ಪಿಗೂ ಸನಾ ಮೊಸಿ ಮತ್ತೆ ಸುಣ್ಣದ ಬೊಟ್ಟು ಹಾಕಿದ್ದವೆ. ಕೆಲ ಕಡೆ ಓಟೆ ಜಾತಿನ ಬೆದ್‌ರ್‌ಂದ ಮಾಡ್‌ದ ಟೊಪ್ಪಿ ಹಾಕಿ ಅವರ ಮೇಲೆ ಅಂಬಳ ಹೂ, ಕಾಗದ ಹೂ (ಬೋಗನ್ ವಿಲ್ಲ) ಇಂತ ಹೂಗಳ್‌ನ ಇಸಿಕಂಬದು ಉಟ್ಟು, ಕಣ್ಣ್‌ಗೆ ಹಾಳೆಂದ ಮಾಡ್‌ದ ಕನ್ನಡಕ ಹಾಕಂಡವೆ. ಹಾಳೆನ ತುಂಡುಂದಳೆ ಗಡ್ಡ ಕಟ್ಟಿಕೊಂಡವೆ. ಬಾಯಿಗೆ ಹಾಳೆಂದ ಮಾಡ್‌ದ ಕೋರೆ ಹಲ್ಲ್ ಇಸಿ ಕಂಡವೆ. ಕೈಲಿ ಪನೆ ಚತ್ರ ಮತ್ತೆ ಇನ್ನೊಂದ್ ಕೈಲಿ ಒಂದ್ ದೊಣ್ಣೆ ಇದ್ದದೆ. ಇತ್ತೀಚೆಗೆ ಹಾಳೆಂದ ಮಾಡ್‌ದ ವಿಕೃತ ರೂಪದ ಮುಕವಾಡನನೂ ಮೋರೆಗೆ ಕಟ್ಟಿಕೊಂಡವೆ. ಪುತ್ತೂರು ಕಡೆ ಸಣ್ಣ ಹೈದಂಗ ಕಳೆಂಜೆನ ವೇಸ ಹಾಕಿರೆ ಸುಳ್ಯಲಿ ಗಂಡಸರ್ ವೇಸ ಹಾಕುವೆ.

ಕನ್ನಿ ವೇಸದಾರಿ ನೆರಿಗೆ ಹಿಡ್‌ದ ಸೀರೆನ ಸೊಂಟಕ್ಕೆ ಸುತ್ತಿಕಂಡದೆ. ಮೈಗೆ ರವಕೆ, ಕೈಗೆ ಬಳೆಗ ಗಂಟ್ಲ್‌ಗೆ ಮಣಿ ಮಾಲೆ ತೊಟ್ಟುಕಂಡದೆ. ತಲೆಕೂದಲ್‌ನ ಬಾಚಿ ಸೂಡಿ ಕಟ್ಟಿಕಂಡದೆ. ಚಿರಿಂದ ಮಾಡ್‌ದ ರಾಕುಟಿ (ಸಣ್ಣ ಕಿರೀಟ)ನ ಸೂಡಿನ ಹಿಂದೆಂದ ಕಟ್ಟಿಕಂಡದೆ.

ಮೋರೆಗೆ ಆರದಾಳದ ಹಾಕಿದ್, ಅದರ ಮೇಲೆ ಒಂದೊಂದು ಸುಣ್ಣದ ಬೊಟ್ಟು, ಹಣೆಗೆ ಕೆಂಪು ಬೊಟ್ಟು, ಕೈಗೆ ಚಿರಿಂದ ಮಾಡ್‌ದ ಕೈದಂಡೆ ಕಟ್ಟಿಕಂಡದೆ. ಕನ್ನಿನ ಎರಡೂ ಕೈಲು ನೆಕ್ಕಿ ಸೊಪ್ಪುನ ಸೂಡಿಗ ಇದ್ದವೆ. (ಪಿ.ಆರ್.ಸಿ.; ಪಿ.ಕೆ.)

**ಇಗ್ಗ್‌ತಪ್ಪ ದೇವ್‌ರ ಬೆಟ್ಟ :** ಕೊಡ್‌ಗ್ ಜಿಲ್ಲೆನ ಪೊಡ್‌ವ ದಿಕ್ಕ್‌ನ ಗುಡ್ಡೆಗಳ ಸಾಲ್‌ಗಳ್‌ಲಿಶ್ ಶ್ರೀ ಇಗ್ಗ್‌ತಪ್ಪ ದೇವ್‌ರ ಬೆಟ್ಟ ಉಟ್ಟು, ಕೊಡಗ್‌ನ ಎರ್‌ಡ್‌ನೆ ದೊಡ್ಡ ಬೆಟ್ಟ ಇದಾಗುಟು. ಕೊಡಗ್‌ನ

ಸುರುನ ಮಲೆಬೆಟ್ಟ ತಡಿಯಂಡಮೋಳು. ಇದ್ ವಿರಾಜಪೇಟೆಂದ 18 ಕಿಲೋಮೀಟರ್ ಪೊಡುವಣ ದಿಕ್ಕಿಗೆ ಉಟ್ಟು. ಇದರ ಎತ್ತರ ಸುಮಾರ್ ಸಾವಿರದ 220 ಮಿ. ಈ ಗುಡ್ಡೆಗೆ ಮಲ್ಮ ತೇಳ್ವ ಹೆಸ್‌ರ್ ಸನು ಉಟ್ಟು. ಈ ಗುಡ್ಡೆನ ಬುಡಲಿ ಕುಂಜು (ಆಮ್ಮಂಗೇರಿ) ತೇಳ್ವ ಗ್ರಾಮಲಿ ಇಗ್ಗ್‌ತಪ್ಪ ತೇಳ್‌ವ ಪಾಡಿ ಸುಬ್ರಹ್ಮಣ್ಯ ದೇಸ್ತಾನ ಉಟ್ಟು. ಇದ್ ಕೊಡಗ್‌ನ ಒಂದೊಳ್ಳ ಪುಣ್ಯ ಕ್ಷೇತ್ರ. ಇಲ್ಲಿಗೆ ಕೊಡಗ್‌ನ ಎಲ್ಲಾ ಬಾಗದವ್ ಬಂದ್ ತುಲಾಬಾರ ಮತ್ತೆ ಹರಿಕೆ ಒಪ್ಪುಸುವೆ.

**ಶ್ರೀ ಇಗ್ಗ್‌ತಪ್ಪ ದೇಸ್ತಾನ :** ಮಲ್ಮ ಇಗ್ಗ್‌ತಪ್ಪ ದೇವ್‌ರ್ ನೆಲೆನಿತ್ತ ಜಾಗೆ. ಈ ಬೆಟ್ಟದ ಮೇಗಡೆ ಸುಮಾರ್ ಅರ್‌ದ ಎಕ್‌ರೆ ಸಮತಟ್ಟ್ ಜಾಗೆ ಉಟ್ಟು. ಈ ಜಾಗೆನ ನೊಡುಲಿ ಶ್ರೀ ಇಗ್ಗ್‌ತಪ್ಪ ದೇವ್‌ರ ಕಲ್ಲ್‌ನ ಮೂರ್‌ತಿ ಉಟ್ಟು. ಅದರ ಹಕ್ಕಲೆ ವರ್‌ಸ ಪೂರ್‌ತಿ ನೀರ್ ಇರ್‌ವ ಒಂದ್ ಕೆರೆ ಉಟ್ಟು. ಮಲ್ಮ ಬೆಟ್ಟಲಿ ವರ್‌ಸಕ್ಕೆ ನಾಕ್ ಸರ್‌ತಿ ಊರ್ ನಾಡವ್ ಸೇರಿ ಹಬ್ಬ ಮಾಡ್‌ವೆ. ಊರ್‌ನ ದೊಡ್ಡ ಹಬ್ಬ ಸುಮಾರಾಗಿ ಪೆರಾರ್‌ದೆ ತಿಂಗ (ಡಿಸೆಂಬರ್) ಮತ್ತೆ ಸುಗ್ಗಿ ತಿಂಗಲಿ (ಮಾರ್ಚ್) ಬಂದದೆ. ಈ ಸಮೆಲಿ ದೇವ್‌ರಿಗೆ ಪೂಜೆ ಮಾಡ್ದು ಕಾಣಿಕೆ ಹಾಕುದು ಮತ್ತೆ ಒಳ್ಳ ಒಳ್ಳ ಕಾರ್‌ಯಕ್ರಮ ಸನ ನಡ್ದದೆ. ಕೊಡಗ್‌ನ ಆಚಾರ ವಿಚಾರ, ಪೊದ್ದತಿಗ, ಹುಣ್ಣಿಮೆ ಬಾಕನ ದೇವ್‌ರ ಕಟ್ಟ್ ಪಾಡಿನ ಪ್ರಕಾರ ನಡಿಯೊಕು. ಈ ದೇಸ್ತಾನಲಿ ಕೊಡಗ್‌ಲಿ ನಡಿವ ಕೈಲ್ ಮೂರ್‌ತ ಮತ್ತೆ ಹುತ್ತರಿ ಹಬ್ಬಕ್ಕೆ ನಕ್ಷತ್ರ ಮೂರ್‌ತ ಮೊಡ್‌ಗುವೆ. ಇದರ ಪ್ರಕಾರ ಕೊಡ್‌ಗ್‌ಲಿ ವಾಸಮಾಡ್‌ವ ಎಲ್ಲಾ ಜೆನಾಂಗದವ್ ಈ ಹಬ್ಬನ ಆಚರಿಸುವೆ. ನಮ್ಮ ಹಿರಿಯರ್ ಹೇಳ್‌ವ ಪ್ರಕಾರ ಕೊಡಗ್‌ನ ನೆರೆ ಜಿಲ್ಲೆ ಆದ ಕೇರಳದ ಕಣ್ಣನೂರು ಜಿಲ್ಲೆ ಪಡುವಣ ದಿಕ್ಕ್‌ನ ಪಾಕಡ ತೇಳ್‌ವ ಜಾಗಂದ ಹುಟ್ಟಿ ಬೆಳ್ದ ಏಳ್ ಜೆನ ದೇವತೆಗ. ಅದರ್‌ಲಿ ಆರ್ ಜೆನ ಅಣ್ಣತಮ್ಮಂದಿರ್, ಒಂದೇ ತಂಗೆ ಸೇರಿ ಇತ್ತ ಕೊಡಗ್‌ನ ಕಡೆ ಗಡಿ ದಾಟಿ ಬಂದೊಗಡ. ಮಲ್ಮ ಬೆಟ್ಟಂದ ಹುಟ್ಟಿ ಬಾವ ಅಂಬುಲಹೊಳೆ ದಂಡೆಲಿ ಪಾಡಿತ್ತೊರ ಕಂಡಿ ತೇಳ್‌ವ ಜಾಗೆಲಿ ಮೊಲ್‌ಗಿದ್ದೊಗಡ. ಅಲ್ಲಿ ಬೇರೆ ಏನೊ ತೊಂದರೆ ಆಗಿ ತಂಗೆ ಅಲ್ಲಿಂದ ಮೂರ್ ಕಿಮೀ. ದೂರದ ಪೊನ್ನಂಗಾಲ ತೇಳ್‌ವ ಜಾಗೆಗೆ ಹೋಗಿ ನೆಲೆ ನಿತ್ತದ್ ತೇಳ್ವೆ. ಮತ್ತೆ ಅಣ್ಣಂದಿರ್ ಹಿರಿಯಣ್ಣ ಇಗ್ಗ್‌ತಪ್ಪ ಮಲ್ಮ ಬೆಟ್ಟಲಿ, ತಮ್ಮ ಪಾಲೂರಪ್ಪ ಪಾಲೂರ್ ಗ್ರಾಮಲಿ ಮತ್ತೊಬ್ಬ ತಮ್ಮ ಕಿರುನೆಲ್ಲಿ ಪೆಮ್ಮಯ್ಯ ಕೊಡ್‌ಗ್ ವೈನಾಡ್ ಗಡಿ ಜಿಲ್ಲೆ ತಿರುನೆಲ್ಲಿಂತೇಳ್‌ವ ಜಾಗೆಲಿ ನೆಲೆ ಊರಿಯೊಳೊತ ಇತಿಯಾಸಂದ ತಿಳ್‌ದ್ ಬಂದದೆ. (ಪಿ.ಅರ್.ಸಿ.)



ಶ್ರೀ ಇಗ್ಗ್‌ತಪ್ಪ ದೇಸ್ತಾನ

**ಉಡುಗೆ ಮತ್ತೆ ತೊಡುಗೆಗ :** ಗೌಡ್ರ್ ಮೂಲತಃ ಕ್ರಿಸಿಕರ್. ದಿನೊಳು ಗದ್ದೆ ಮತ್ತೆ ತೋಟಲಿ ದುಡ್ದವೆ. ಈ ಸ್ರಮಕೆ ತಕ್ಕಾಂಗೆ ಅವರ ಉಡುಗೆ ತೊಡುಗೆ, ಬಟ್ಟೆ ಬರೆಗ ಇದ್ದವೆ. ಮೊದ್ವೆನಂತ ಗೌಜಿನ ದಿನಗಳ್‌ಲಿ ಉಡ್ವ ಬಟ್ಟೆಗ ಒಂಚೂರು ಬೇರೆ ನಮೂನೆ ಇದ್ದದೆ.

**ಉಡ್ಗೆಗ :** ಕಮ್ಮುನ ಹಾಳೆಂದ ಮಾಡ್‌ವ 'ಮೊಡ್ಪಾಳೆ'ನ ಗೌಡ್ರ್ ತಲೆಲಿ ಮೊಡ್ಕಂಡವೆ. ಇದ್ ಮಳೆ, ಬಿಸ್ಲಂದ ಮತ್ತೆ ತೂಕದ ಸಾಮಾನ್ ಹೊರಿಕನ ತಲೆಗೆ ರಕ್ಷಣೆ ಕೊಟ್ಟದೆ. ತೂಕನ ನೋಡಿಕಂಡ್ ಮೊಡ್ಪಳೆ ಒಳೆಗೆ ಬಟ್ಟೆನ ಇಸಿಕಂಡವೆ. ಬೊಗ್ಗಿಕನ ತಲೆಂದ ಕೆಳೆಗೆ ಬೀಳದಂಗೆ. ತಲೆಗೂ ಮೊಡ್ಪಾಳೆಗೂ ಒಂದ್ ಬಟ್ಟೆನ ತುಂಡುಂದ ಬಿಗ್ದ್ ಕಟ್ಟ್‌ವೆ. ಕೆಲ್ಸ ಇಲ್ಲದೆ ಇರ್‌ಕನ ಇಲ್ಲರೆ ಪೇಟೆಗೆ ಹೋಕನ ತಲೆಗೊಂದ್ ಮುಂಡಾಸ್ ಕಟ್ಟಿ ಕಂಡವೆ.

ಹಿಂದೆನ ಕಾಲಲಿ ಸಾಮಾನ್ಯ ಕೆಲ್ಸ ಮಾಡಿಕನ ಮೈಮೇಲೆ ಎಂತನೂ ಹಾಕಿಕಣತಿತ್ತ್‌ಲೆ. ಸೊಂಟಲಿರ್‌ವ ಪಟೆನೂಲುಗೆ ಸಣ್ಣ ತೋಡ್ತ್ ಒಂದರ ಕಟ್ಟಿಕಣತಿದ್ದೊ. ಹಾಂಗೆ 'ಕೋಮಣ' ಕಟ್ಟಿಕಂಡೂ ದುಡಿತಿದ್ದೊಗಡ. ತೋರ್‌ತು ಮತ್ತೆ ಕೋಮಣಗ ಗೌಡರ್‌ಲಿ ಹೆಚ್ಚ್ ಕಾಂಬಕೆ ಸಿಕ್ಕ್‌ವ ಉಡುಗೆಗ. ಮನೆಂದ ಹೊರೆಗೆ ಹೊರ್‌ಡಿಕನ ಇಳಿಬುಟ್ಟ ಪಂಚೆ ಮತ್ತೆ ಅಂಗಿನ ಹಾಕಂಡವೆ. ಬೆಳ್ತಂಗಡಿ ಪರಿಸರಲಿ ಗೌಡ್ರ್ ಮೊಣ್ಕಾಲ್‌ಂದ ಕಾಗಡೆ ಪಂಚೆನ ಇಳಿಬುಡಿಕಾಗದ್‌ತ ನಂಬುವೆ. ಅದೀಗ ಬದಲಾಗುಟು. ಎಲ್ಲಾರ್ ಕುದ್ರಿಕನ ಪಂಚೆನ ಚೂರು ನೇಚಿಕಂಡ್ ಕುದ್ದ್ ಅದ್ಕೆ ಮೊಣ್ಣಾಗದಂಗೆ ಜಾಕ್ರತೆ ಮಾಡಿಕಂಡವೆ. ಗೌಜಿನ ದಿನಗಳ್‌ಲಿ, ಜಂಬರಕೆ ಹೋಕನ ಗೌಡ್ರ ಹೆಗಲ್ ಮೇಲೆ ಬೈರಾಸ್ ಒಂದಿದ್ದದೆ. ಅದೆ ಬೈರಾಸ್ ಅಗತ್ಯ ಬೀಳಿಕನ ಮುಂಡಾಸ್ ಆಗಿನೂ ಉಪಕಾರಕೆ ಆದೆ.

ಮೊದ್‌ವೆಗೆ ಹೋಕನ ಗೌಡ್ರ್ ಸಾಲ್ ಮತ್ತೆ ಮುಂಡಾಸ್ ಇದೆರ್‌ಡರನು ಹಾಕಂಡವೆ. ಮೀಸೆ ಇಲ್ಲದವ್ ಮುಂಡಾಸ್ ಎಂತಕೆ ಕಟ್ಟಕು ತೇಳ್ವ ಮಾತ್‌ನಂಗೆ ಮುಂಡಾಸ್ ಕಟ್ಟೊವು ಮೀಸೆ ಬುಟ್ಟಿದ್ದವೆ. ಗೌಡ ಹೆಣ್ಮಕ ಹಿಂದೆ ರವ್ಕೆ ಹಾಕಂಡಿತ್ಲೆ. ಇತ್ತೀಚೆಗೆ ಮಾತ್ರ ಎಲ್ಲವೂ ರವ್ಕೆ ಹಾಕುವೆ. ಸುಮಾರ್ 50 ವರ್ಷ ಪ್ರಾಯದ ಮೇಲೆನವ್ ರವ್ಕೆ ಹಾಕಂಬದ್‌ಲೆ. ಮುಂಗೈವರೆಗೆ ಉದ್ದ ಇರ್‌ವ ಉದ್ದ ಕೈ ರವ್ಕೆ, ಉದ್ದ ಕೈನ ಹಕ್ಕಲೆ ವೃತ್ತಾಕಾರಲಿ ಉಬ್ಬಿದ ಬುಗ್ಗೆ ಕೈ ರವಿಕೆಗ ಹಿಂದೆ ಜೆನಪ್ರಿಯ ಆಗಿತ್ತ್. ಈಗ ಅದು ಮಾಯ ಆಗುಟು. ಸೀರೆನ ಉಟ್ಟ್‌ಕಂಡ್ ಸೆರಂಗ್‌ನ ಹಿಂದೆನ ಪುಡೆಗೆ ಇಳಿ ಬುಟ್ಟವೆ. ಕೆಲ್ಸಕೆ ತಕ್ಕಂಗೆ ಸೆರಂಗ್‌ನ





ತಲೆಗೆ ಹೊದ್ದ್‌ಕಂಡವೆ, ಇಲ್ಲರೆ ಸೊಂಟಕ್ಕೆ ಬಿಗ್ದ್ ಕಟ್ಟುವೆ. ಲಾಯ್ಕ್ ನೆರಿ ಹಿಡ್ದ್ ಮುಂದೆಗೆ ಇಳಿಬುಡ್ದಂರ್‌ದ ಹೆಣ್ಮಕ ನಡೆಕನ ಪೊರ್‌ಲು ಕಂಡವೆ. ಹೊಕ್ಕುಳುನ ಕೆಳೆಗೆ ಅರ್ದಚಂದ್ರಾಕೃತಿಲಿ ಇಳಿಬುಟ್ಟ ಸೀರೆನ ಇನ್ನೊಂದ್ ಕೊಡಿ, ಹೆಣ್ಮಕಳಿಗೆ ವಿಸೇಸ ಆಗಿದ್ದದೆ. ಬಣ್ಣಗಳ್‌ಲಿ ತೌಡು ಬಣ್ಣನೆ ಹೆಚ್ಚಿಗೆ ಉಟ್ಟವೆ. ಸಣ್ಣಮಕ್ಕ ಉರ್‌ಬುಳಿನೆ ಇದ್ದವೆ. ಸುಮಾರ್ ನಾಕ್ ವರ್‌ಸಂದ ಮೇಲೆ ಗಂಡ್‌ಮಕ್ಕಳಿಗೆ ಕೋಮಣ ಕಟ್ಟುವೆ. ಹೆಣ್ಣ್ ಮಕ್ಕ ಲಂಗ ಉಟ್ಟವೆ. ತಲೆಕೂದಲ್ ಕಟ್ಟಿಕೆ ಬಟ್ಟೆನ ತುಂಡ್ ಇಲ್ಲರೆ ಬಾಳೆ ಚಾಂಬರ ಬಳ್ಸುವೆ.

ಮೊದ್‌ವೆಲಿ ಮೊದುಮಜ್ಜ ಆಗಲಿ ಮೊದೊಳಿಗೆ ಆಗಲಿ ಉಡ್‌ವ ಬಟ್ಟೆಗ ವಿಸೇಸ ಆಗಿದ್ದದೆ. ಮೊದುಮಜ್ಜಂಗೆ ಮೊಳ ಉದ್ದದ ಬಿಳಿ ಪಂಚೆನ ತಲೆಗೆ ಸುತ್ತಿ ಮುಂಡಾಸ್ ಕಟ್ಟಿದೆ. ಪಂಚೆನ ಕರೆ ಹೊರೆಗೆ ಕಾಂಬಂಗೆ ನೋಡಿಕಂಡ್ ಕಟ್ಟಿರ್‌ದಂರ್‌ದ ಮುಂಡಾಸ್‌ಗೆ ಹೊಸ ಕಳೆ ಬಂದಿದ್ದದೆ. ಇಸ್ಟೇ ಉದ್ದದ ಜರಿ ಇರ್‌ವ ಇನ್ನೊಂದ್ ಬಿಳಿ ಪಂಚೆನ ಎದೆಗೆ ಕತ್ರಿ (X) ಆಕಾರಲಿ ಸಂಪ್ರದಾಯದ ಪ್ರಕಾರ ಕಟ್ಟಿದ್ದವೆ. ಇದೆಲ್ಲ ಹೊಸ್ತೆ ಆಗಿರಕು. ಮೊದುಮಗಳ ತಲೆಗೆ ಬಿಳಿ ಚೌಕ ಒಂದರ ಹಾಕಿದ್ದವೆ. ಬಿಳಿ ರವ್ಕೆ ಮತ್ತೆ ಬಿಳಿ ಸೀರೆನ ದಾರೆಗಾಕನ ಉಡ್ಸಿದ್ದವೆ. ಮೊದ್‌ವೆಗೆ ಬಂದವೆಲ್ಲ ಮುಂಡಾಸ್ ಅಂಗಿ ಮತೆ ಪಂಚೆ ಉಟ್ಟಿದ್ದವೆ. ಸಾದರಣ ಗೌಡ್ರ ಸಾಮಾನ್ಯ ಬಟ್ಟೆ ಬರೆ ಉಡವು ಮೊದ್‌ವೆ ಜಂಬರಗಳ್‌ಲಿ ವಿಸೇಸ ಆಗಿ ಬಟ್ಟೆ ಉಡ್ದರ ಕಂಡ್ ಪೂಜಾರಿರ ಮೊಣ್ಣಪ್ಪ ಅವ್ 'ಒಂದ್ ಕಾಲಲಿ ಅಂತಸ್ತ್ ಸಂಪತ್‌ಲಿ ಮುಂದೆ ಇದ್ದ ಜೆನಾಂಗ ಅದ್‌ಂತ ಹೇಳ್‌ವೆ. ವಿದವೆಗಳ ಬಟ್ಟೆಬರೆಲಿ ಯಾದೆ ವೆತ್ಯಸ ಇಲ್ಲದಿರ್‌ದು ಗೌಡರ್‌ಲಿ ವಿಸೇಸ. ಹಾಂಗೆ ನೋಡಿಕೋದರೆ ವಿದವೆ ತೇಳ್‌ವ ಪರಿಕಲ್ಪನೆ ಇಲ್ಲೆ.

**ತೊಡ್‌ಗೆಗ :** ಸಂಪತ್ತ್‌ನ ತೋರ್‌ಸುದಕಾಗಿ ಪ್ರತಿಸ್ಟೆನ ಸಂಕೇತ ತೊಡ್‌ವ ಉಡ್‌ಪುಗ. ತೊಡುಗೆಲಿ ಸಾಂಸ್ಕೃತಿಕವಿಸೇಸತೆ ಇದ್ದದೆ. ದಾರ್ಮಿಕ ವಿಸೇಸತೆಗನು ಇದ್ದದೆ. ಪ್ರತೀ ಸಮುದಾಯದ ವಿಸೇಸತೆನ ಈ ತೊಡುಗೆಗಳ್‌ಲಿ ನಾವ್ ಕಾಣಕ್. ಸಮಾಜಲಿ ಮನ್ನಣೆನು ಸಿಕ್ಕಿದೆ. ಗೌಡ್ರುಗಳ್‌ಲಿ ಗಂಡ್‌ಸ್‌ಗ ಕೆಬಿಗೆ 'ಒಂಟಿ' ಹಾಕದಿದ್ದರೆ ಅವರ ಜಾತಿಂದ ಹೊರೆಗೆ ಹಾಕತಿದ್ದೊ. ಹೆಣ್ಮಕ್ಕ ಕಾಲುಂಗ್ರ, ಮೂಕುತಿ, ಇಲ್ಲದಿದ್ದರೆ ಅವ್ ಯಾದೆ ಜಂಬರಕೆ ಹೋವಂಗಿತ್ಲೆ.

ಮೊದ್ವೆ ದಿನದಂದ್ ಒಡವೆ ಪೆಟ್ಟಿಗೆನ ಹತ್ತ್ ಸಮಸ್ತರ ಎದ್ರ ಗಂಡ್‌ನ ಕಡೆವು ಹೆಣ್ಣ್‌ನ ಕಡೆವ್ಕೆ ಕೈ ನೇಚಿ ಕೊಡಕು. ಇದ್ಕೆ ಬಣ್ಣ ಬಂಗರ ಕೊಡ್ದು ತೇಳುವೆ. ಈ ಬಣ್ಣ ಬಂಗಾರ ಪೆಟಿಗೆಲಿ ಕಡ್ಮೆಂತೆಳಿರು ಇಸ್ಪಿಸ್ಟ್ ಚಿನ್ನ ಇರಕುಂತ ಉಟ್ಟು. ಇದರ ಮೊದೊಳಿಗೆ ಹಾಕೊಕೆಂತನು ಕ್ರಮ ಉಟ್ಟು. ಈ ಕಾರಣಂದಾಗಿ ಸುಮಾರ್ ಸರ್‌ತಿ ಬೇರೆವರ ಕೈಂದ ತಂದ ಒಡವೆಗಳ ಹೆಣ್ಮಕ ತೊಟ್ಟ್ ಕಂಡವೆ. ವೀಸೇಸ ದಿನಗಳ್‌ಲಿ ಬುಟ್ಟರೆ ಒಳ್ದ ದಿನಗಳ್‌ಲಿ ಒಡವೆಗಳ ಪೆಟಿಗೆಲಿ ಇಸಿದ್ದವೆ.

ಗಂಡಸ್‌ಗ ಸೊಂಟಕೆ ಪಟೆನೂಲ್ ಕಟ್ಟಿಕಂಡವೆ. ಇದ್ ಕಪ್ಪುನ ಪಟೆ ನೂಲ್ ಇಲ್ಲರೆ ಬೆಳ್ಳಿನ ನೂಲ್‌ದ್ ಇದ್ದದೆ. ಕೆಬಿಗೆ ಚಿನ್ನಂದ ಮಾಡ್ದ ಒಂಟಿನ ಹಾಕಂಡವೆ. ಇದರ ಟಿಕ್ಕಿಂತನು ಕರ್‌ದವೆ. ಹಿಂದೆ ಗೌಡ್ರ್‌ಗ ತಲೆಲಿ ಜುಟ್ಟು ಬುಡತಿದ್ದೊ, ಈಗ ಅದ್ ಇಲ್ಲೆ. ರಟ್ಟೆಗೆ ತಾಯ್ತ ಕಟ್ಟ್‌ವ ಸಂಪ್ರದಾಯ ಬಳಕೆಲಿ ಉಟ್ಟು. ತಿರುಪತಿ ವೆಂಕಟ್ರಮಣ ದೇವ್ರ್‌ಗೆ ಹರ್‌ಕೆ ಹೇಳಿಕಂಡವು ಕಾಲ್‌ಗೆ ಬೆಳ್ಳಿನ ಬೇಡಿ ಹಾಕಂಡವೆ. ಹರ್‌ಕೆ ಸಂದಾಯ ಆದ ಮೇಲೆ ಅದರ ತೆಗ್ದವೆ. ಅದ್ಕೆ ಮುಂದೆ ಎಲ್ಲಾರ್ ಆ ಮೊಯಿಂಸ ತೀರಿರೆ ಸುಡಿಕೆ ಮುಂದೆ ಕಾಲ್‌ಬಳೆನ ತುಂಡ್ ಮಾಡ್‌ವೆ.

ಹೆಣ್ಮಕ ತಲೆಗೆ ನೊಡು ಬಕ್ತಲೆ ಹಾಕುವೆ. ಕೂದಲ್‌ನ ತಲೆನ ಹಿಂದೆಗೆ ಕಟ್ಟಿ ಆ ಸೂಡಿ ಮೇಲೆ ಹೂ ಮುಡ್ದವೆ. ಪಾರಿಜಾತ ಹೂವ್ ಒಂದರ ಬುಟ್ಟು ಮತೆಲ್ಲ ನಮೂನೆನ ಹೂ ಮುಡ್ದವೆ. ಕೇದಗೆ ಮುಡ್ದರೆ ಹಾವುಗ ಹಿಂದೆ ಬಂದವೆಂತೇಳಿ ಮದ್ಯಾನದ ಮೇಲೆ ಇದರ ಮುಡಿದುಲೆ.

ಸಂತೆಲಿ ಬಳೆಗಾರ್‌ರ್ ಮಾಡ್ದ ಬೇರೆ ಬೇರೆ ನಮೂನೆನ ಬಣ್ಣ ಬಣ್ಣದ ಓಲೆನ ಹೆಣ್ಮಕ ಇಸಿಕಂಡವೆ. ಮೂಕುಗೆ ನತ್ತ್ ಇಲ್ಲರೆ ಮೂಕುತ್ತಿ ಇಸಿರೆ, ಕೆಬಿಗೆ ಕೊಪ್ಪು ಇಲ್ಲರೆ ಬುಗುಡಿನ ಇಸುವೆ. ಗಂಟ್ಲ್‌ಗೆ ತಾಳಿ ಹಾಕಂಡವೆ. ಈ ತಾಳಿನ ಯಾದೆ ಕಾರಣಕೆನು ಗಂಟ್ಲ್‌ಂದ ತೆಗೆಕಿಲ್ಲೆ. ಆಕಸ್ಮಾತ್ ಎಲ್ಲಾರ್ ತುಂಡಾಗಿ ಬಿದ್ದರೆ ಗಂಡಂಗೆ ಹಾಳ್‌ಂತ ಹೆಣ್ಮಕ ನಂಬುವೆ. ತಾಳಿನ ವಾಪಾಸ್ ಗಂಟ್ಲ್‌ಗೆ ಕಟ್ಟಿಕಂಬಲ್ಲಿವರೆಗೆ ಹೆಣ್ಮಕ ಉಂಬೊದುಲೆ. ಒಂದ್ ತೊಟ್ಟು ಮಡೆನು ನುಂಗಿಕಾಗದ್‌ತ ನಂಬಿಕೆ ಉಟ್ಟು. ತಾಳಿನೊಟ್ಟಿಗೆ ಬೇರೆ ಬೇರೆ ಒಡವೆಗ ಅವರವರ ಅಂತಸ್ತ್‌ಗೆ ಅನುಗುಣ ಆಗಿದ್ದದೆ. ಕೈಗೆ ಬಳೆಗಳ ಹಾಕಂಡವೆ. ಬರಿ ಕೈಲಿ ಇರಿಕಾಗದ್‌ತ ಸಾಸ್ತ್ರ ಪ್ರಕಾರ ಒಂದ್ ಬಳೆನಾರ್ ಹಾಕಂಡಿದ್ದವೆ. ಕೆಲ್ಸ ಮಾಡಿಕನ ಕೈಬಳೆ ತುಂಡಾದರೆ ಆಗಳೆ ಬಟ್ಟೆ ತುಂಡೊಂದರ ಕೈಗೆ ಕಟ್ಟಿಕಂಡವೆ. ಸೊಂಟಕೆ ಪಟೆನೂಲ್ ಹೆಣ್ಮಕನು ಕಟ್ಟಿಕಂಡವೆ. ಸಣ್ಣ ಮಕ್ಕಳಿಗೆಲ್ಲ ಈ ಪಟೆನೂಲು ಇಲ್ಲರೆ ನೇವಳನೆ ತೊಡುಗೆಗ.

ಮೊದುಮಜ್ಜನ ತೊಡ್‌ಗೆಗ ವಿಸೇಸ ಇದ್ದದೆ. ಅಂವನ ಮುಂಡಾಸ್‌ನ ಹೊರ ಬಾಗಕೆ ಹಣೆಗೆ ತಾಂಗುವಂಗೆ ಒಂದ್ ಮಾಲೆ ಕಟ್ಟಿದ್ದವೆ. ಇದರ ಮೂರ್‌ತದ ಮಣಿಂತೇಳುವೆ. ಪಿಂಗಾರಂದ ಮಾಡ್ದ ಇದ್ ಬಾರೀ ಲಾಯ್ಕ್ ಇದ್ದದೆ. ಚಿನ್ನದ ಬಾಸಿಂಗನನು ಮೂರ್‌ತದ ಮಣಿನೊಟ್ಟಿಗೆ ಕಟ್ಟಿದ್ದವೆ. ಕೆಬಿನ ಹೊರೆಗೆಂದ ಸುತ್ತ್ ಹಾಕುವಂಗೆ ಬಳೆ ಒಂದರ ಇಸುವೆ. ಬೆಳ್ಳಿಂದ ಈ ಬಳೆನ ಮಾಡಿದ್ದವೆ. ಈಗ ಇದರ ಹಾಕಂಬ ಸಂಪ್ರದಾಯ ಇಲ್ಲೆ. ಗಂಟ್ಲ್‌ಗೆ ಬಂಗಾರದ ಮಾಲೆ, ಕೈ ಬೆರ್‌ಲ್‌ಗೆ ಉಂಗುರ, ಕಾಲ್‌ಂಗುರನ ಮೊದುಮಜ್ಜ ಹಾಕಂಡಿದ್ದದೆ.

ಮೊದುಮಗಳ ಗಂಟ್ಲ್‌ಗೆ ನಮನಮೂನೆನ ಮಾಲೆಗಳ ಹಾಕುವೆ. ಮೂಕುತಿಂದ ಕೆಬಿನ ಓಲೆವರೆಗೆ ಜೋಡ್ಸಿದ ಚಿನ್ನದ ಮಾಲೆಗ ಈಗ ಇಲ್ಲೆ. ಆದರೆ ಸೊಂಟಕೆ ಡಾಬು ಕಟ್ಟಿಕಂಡವೆ. ಇದೆಲ್ಲ ಗೌಡ್ರ ಅಂತಸ್ತ್‌ನ ಮೇಲೆ ನಿರ್‌ದಾರ ಆದೆ. ಕಾಲ್‌ಗೆ ಚಪ್ಪಲ್ ಹಾಕಂಬ ಕ್ರಮ ಈಗೀಗ ಕಾಂಬವಂತದ್. ಹಾಂಗೆ ಇದರ್‌ಲಿ ಚರ್ಮದ ಚಪ್ಪಲ್‌ನನೆ ಗೌಡ್ರುಗೆ

ಹೆಚ್ಚ್ ಇಸ್ಪ ಪಟ್ಟವೆ. ಮನೆ ಒಳೆಗೆ ಗೌಡ್ರುಗ ಚಪ್ಪಲ್ ಹಾಕುದುಲೆ.

ಮೋರೆಲಿ ದಪ್ಪ ಮೀಸೆ ಬುಡ್ದು ಗೌಡ್ರ ಲಕ್ಷಣತ ಗಂಡ್‌ಸ್‌ಗ ನಂಬುದರ್‌ಂದ ದಪ್ಪ ಮೀಸೆ ಬುಟ್ಟವೆ. ಇದರ ಕೊಂಬ ಮೀಸೆಂತ ಕರ್‌ದವೆ. ಹಣೆಗೆ ಬಿಳಿ ಬಸ್ಮನ ಹಿಂಬೋತ್ತು ಹೊತ್ತುಗೆ ಅಡ್ಡಕೆ ಹಾಕಂಡವೆ. ಹೆಣ್ಮಕ ಹಣೆಗೆ ಕುಂಕುಮನ ಉರುಂಟಾಗಿ ಹಾಕಂಡವೆ.

ಮುಟ್ಟಾದ ಹೆಣ್ಮಕಳ ಉಡ್ಗೆ ತೊಡ್ಗೆಲಿ ಚೂರು ಕ್ರಮಂಗ ಇದ್ದದೆ. ಇವರ ಬಟ್ಟೆನ ಯಾರು ಮುಟ್ಟಿಕಿಲ್ಲೆ. ನಾಕ್ ದಿನ ಆಗಿ ಮೀದ ಮೇಲೆನೆ ಮುಟ್ಟುವಂತದ್ದ್. ಬಟ್ಟೆ ತೊಳೆಕೆ ಕಾಡ್‌ಲಿ ಸಿಕ್ಕವ ಸೀಗೆ ಕಾಯಿನ ಬಳ್ಸುವೆ. ಈಗೆಲ್ಲ ಸಾಬನ್ ಬಳ್ಸುವೆ. ಕಾಡಂದಿ ಗಂಟ್ಲ್‌ನ ರೋಮನ ಸೇರ್‌ಸಿ ಮಾಡ್ದ ಚೊಪ್ಪುಗೆ ಹಂದಿ ಉಬ್ಬ' ತೇಳುವೆ. ಇದರ ಚಿನ್ನ ಬಂಗಾರ ತೊಳೆಕೆ ಬಳ್ಸುವೆ. ಹವಾಮಾನದ ಬದಲಾವಣೆ ಗೌಡ್ರ ಬಟ್ಟೆ ಬರೆನೆ ಮೇಲೆ ವೀಸೇಸ ಆಗಿ ಎಂತಸ ಪ್ರಬಾವ ಬೀರ್‌ದುಲೆ. ಒಟ್ಟುಲಿ ಗೌಡ್ರುಗಳ್‌ಲಿ ಉಡ್ಗೆ ತೊಡ್ಗೆಗ ಸರಳ ಆಗಿರ್‌ದರ ಕಾಣಕ್. (ಪಿ.ಬಿ.)

**ಎಲೆ ಅಡಿಕೆ :** ಗೌಡರ ಸಾಂಸ್ಕೃತಿಕಬೊದ್ಕ್‌ಲಿ ಎಲಡ್ಕೆ ಮುಕ್ಯ ಪಾತ್ರ ವಹಿಸಿದೆ. ಹೆಚ್ಚಿನ ಗೌಡ್ರುಗ ಎಲ್ಲ ಎಲಡ್ಕೆ ತಿನೊವೆ. ಅದ್ ಗೌರವದ ಕೆಲ್ಸಂತ ನಂಬುವೆ. ಈ ತಿಂಬ ಎಲೆಲಿ 'ಪಂಚೋಳಿ' ಮತ್ತೆ 'ಮುಂಡೋಳಿ' ತ ಎರ್‌ಡ್ ಬಗೆ. ನಮೂನೆಗ ಒಳೊ. ಇದೆರ್‌ಡರ ಒಟ್ಟಿಗೆ ತಿಂಬೊಕೆ ಬೊತ್ತುಂತ ನಂಬಿಕೆ ಉಟ್ಟು. ಎರ್‌ಡ್ ಎಲೆಗೆ ಎರ್‌ಡ್ ಅಡ್ಕೆ ಹೋಳು ಸೇರ್‌ಸಿ, ಚಿಟಿಕೆ ಸುಣ್ಣನ ಉಜ್ಜಿ, ಬಾಯಿಗೆ ಹಾಕಂಡವೆ. ಕೆಲವ್ ಇದರೊಟಿಗೆ ಮೊಡ್ಚಿ ಹೆಸೊಪ್ಪು ತಿಂಬೊತ್ತಿದ್ದೊ. ಎಲಡ್ಕೆ ತಿಂಬಕನ ಬಾಯಿ ಕೆಂಪಾದರೆ ಪಾಕ ಸರಿ ಆಗುಟುತ ಅರ್‌ತ.

ಸುರು ಸುರುಗೆ ಎಲಡ್ಕೆ ತಿಂಬಕನ ತಲೆ ತಿರ್‌ಗಿದೆ. ಆಗ ಅಡ್ಕೆ ಸೊಕ್ಕಿಟುತ ಹೇಳ್‌ವೆ. ಅಡ್ಕೆ ಸೊಕ್ಕಿರೆ ತಿಂದವನ ಕೆಬಿಚೆಂಡೆ ಬಿಸಿ ಏರ್‌ದೆ, ಮೈ ಬೆಗರ್‌ದೆ, ತಲೆತಿರ್‌ಗಿ ಕಕ್ಕಿಕೆ ಬಂದದೆ. ಇದ್ಕೆ ಪರಿಹಾರಕೆ ತಣ್ಣೀರ್ ಇಲ್ಲರೆ ಮೊಜ್ಜಿಗೆ ಕುಡ್‌ಸಿ, ಕಾಯಿ ತಿನ್ಸುವೆ. ಎಲೆ ಅಡ್ಕೆನ ಸಾಮಾನ್‌ಗಳ ಸಣ್ಣ ಚೀಲಲಿ ತುಂಬುಸಿಸುವೆ. ಆ ಚೀಲನ ಸಂಚಿತ ಕರ್‌ದವೆ. ಹೆಣ್ಮಕ ಸಂಚಿನ ಅವರ ಸೀರೆನ ಸೆರ್‌ಂಗ್ ಕೊಡಿಗೆ ಕಟ್ಟಿಕಂಡರೆ, ಗಂಡ್‌ಸ್‌ಗ ಸಂಚಿನ ಸೊಂಟಕೆ ಸೆಕ್ಕ್‌ಸಿಕಂಡವೆ. ಎಲೆ ತಿಂದವ್ ಮಾತಾಡಿಕನ ಎದುರ ಇದ್ದವನ ಮೇಲೆ ಅದ್ ಹನಿ ಹನಿ ಆಗಿ ರೆಟ್ಟುದು, ತಿಂದವನ ಬಾಯಿನ ಎರ್‌ಡ್ ಮೂಲೆಲಿ ರಸ ಹೊರೆಗೆ ಬಾದು ಸರ್‌ವೇಸಾಮಾನ್ಯ ಆಗಿ ಕಾಣಕ್. ಉಂಬ ಮಾಡ್‌ದ ಮೇಲೆ ಎಲೆ ತಿಂದರೆ ಲಾಯ್ಕ್ ಜೀರ್‌ಣ ಆದೆತ ಹೇಳ್‌ವೆ. ಎಲೆ ತಿಂಬಕೆ ಬೇಕಾದ ಅಡ್ಕೆನ ನೀರ್‌ಲಿ ಹಾಕಿ ಇಸುವೆ. ಇದರ 'ನೀರಡ್ಕೆತ' ಕರ್‌ದವೆ. ಮಡ್ಕೆ ಇಲ್ಲರೆ ಮನೆನ ಹಿಂದೆನ ಕೊಟೆಗೆಲಿ ನೀರಡ್ಕೆನ ಹಾಕಿಸುವೆ. ಎಲೆನ ತಿಂಬಕನ ಒರ್‌ಸದೆ ತಿಂಬಕಾಗದ್, ಅದರ ತೊಟ್ಟುನ ನುಳ್ಳಿ ಕೆಪ್ಪೆಗೆ ಅಂಟ್‌ಸಿಕಂಡರೆ ಒಳ್ಳೆದ್‌ಗಡ, ಇರ್‌ಲ್ ಎಲೆ ಕೊಯ್ಯಕಾಗದ್ ಮೊದ್ವೆ ಆಗದವು ಮತ್ತೆ ಸೂತಕ ಇರೊವು ಎಲಡ್ಕೆ ತಿಂಬಕಾಗದ್‌ತ ನಂಬಿಕೆಗ ಉಟ್ಟು. ಬೀಡಿ, ಸಿಗರೇಟ್ ಮತ್ತೆ ನೆಸೆ ಎಳಿದು ಗೌಡರ್‌ಲಿ ಸಾಮಾನ್ಯ ಆಗಿ ಕಾಣಕ್. (ಪಿ.ಬಿ.)

**ಎಸ್. ಅಂಗಾರ :** ಕರ್ನಾಟಕ ರಾಜ್ಯದ ದಕ್ಷಿಣ ಕನ್ನಡ ಜಿಲ್ಲೆನ ಸುಳ್ಯ ತಾಲೂಕ್‌ನ ಎಸ್. ಅಂಗಾರ ಒಬ್ಬ ಭಾರತೀಯ ಜನತಾ ಪಾರ್ಟಿನ ರಾಜಕಾರಣಿ. ಅಂಗಾರ ಸುಳ್ಯ ತಾಲೂಕ್‌ನ ಅಮರಮುಡ್ನೂರು ಗ್ರಾಮದ ದಾಸನಕಜೆ ಮನೆಲಿ ಹುಟ್ಟಿದೊ. ಅಮರಮೂಡ್ನೂರು ಗ್ರಾಮದ ಕುಂಟಿಕಾನದಲಿ ನೆಲ್‌ಸಿಯೊಳೊ. ಅವು ಸುರುನ ಶಿಕ್ಷಣನ ಚೊಕ್ಕಾಡಿ ಸಾಲೆಲಿ ಮಾಡ್‌ದೊ. ಪತ್ನಿ–ವೇದಾವತಿ, ಮಜ್ಜ– ಗೌತಮ್, ಮಗ ಪೂಜಾಶ್ರೀ. ಅವ್ ಜನವರಿ 2021ರ್‌ಂದ ಕರ್ನಾಟಕ ರಾಜ್ಯದ ಮೀನುಗಾರಿಕೆ, ಬಂದರು ಮತ್ತೆ ಒಳನಾಡು ಸಾರಿಗೆ ಇಲಾಕೆಲಿ ಸಚಿವರಾಗಿದ್ದೊ. ಅವು ಕರ್ನಾಟಕ ವಿಧಾನ ಸಬೆ (ಮೀಸಲು) ಕ್ಷೇತ್ರಂದ ಆರ್ ಸರ್‌ತಿ ಎಂ.ಎಲ್.ಎ. ಆಗಿ ಆಯ್ಕೆ ಆಗಿದ್ ವಿಧಾನ ಸಬೆನ ಸದಸ್ಯ ರಾಗೊಳೊ. 2021ನೇ ಆಗಸ್ಟ್ 04 ರಂದ್ ಎರಡನೇ ಸರ್‌ತಿ ಮಂತ್ರಿ ಆಗಿ ಪ್ರಮಾಣ ವಚನ ಮಾಡ್‌ದೊ. ಬಿ.ಎಸ್. ಯಡಿಯೂರಪ್ಪ ಮಂತ್ರಿ ಮಂಡಲಲಿ ಬಂದರು ಮತ್ತೆ ಮೀನುಗಾರಿಕಾ ಹಾಂಗೆ ಚಿಕ್ಕಮಗಳೂರು ಜಿಲ್ಲಾ ಉಸ್ತುವಾರಿ ಸಚಿವರಾದೊ.



**ಒಕ್ಕಲಿಗರ್ :** ಸೌರಮಾನ ಮೇಸ ಮಾಸ ಆರಂಬಂದ ಒಕ್ಕಲಿಗರ ಹೊಸ ಬೊದ್ಕ್ ಸುರಾದೆ. ಮಳೆಬಿದ್ದಾಂಗೆನೇ ಏಣಿಲ್ ಬೆಳೆಗೆ ಗದ್ದೆಗಳ್‌ಲಿ ಬಿತ್ತ್ ಹಾಕಿ ನೇಜಿ ಮಾಡಿ ಗದ್ದೆಲಿ ನೀರ್ ಆಕನ ನಾಟಿ ಮಾಡ್‌ವೆ. ಬೇಸ ತಿಂಗಳ್‌ಲಿ ಪತ್ತನಾಜೆ ದಿನ ದೆವ್ವಗಳಿಗೆ ತಂಬಿಲ ಕೊಟ್ ಕತ್ತಲೆಗೆ ಕಾರ್‌ನೂರ್ ಗಳಿಗೆ ಬಳ್ಸಿ ಕೂಡಿ ಊಟ ಮಾಡ್‌ವೆ. ಗದ್ದೆಗೆ ಸೊಪ್ಪು, ಗೊಬ್ಬರ ಹಾಕಿ ಹಂಗೆ ಓ ತೇಳಿ ಹೇಳಿಕಂಡ್ ಎತ್ತ್‌ಗಳ್‌ಂದ ಗದ್ದೆ ಹೂಡುದೇ ಒಂದ್ ಪೊರ್‌ಲು. ಮೈಯಾಳ್ ಹಂಗೆ ಕೂಲಿಯವರ್‌ಂದ ಗದ್ದೆ ನಾಟಿ ಮಾಡ್ಸುವೆ. ಊಟ ತಿಂಡಿ, ಎಲಡ್ಕೆ ಕೊಟ್ಟು ಅಕ್ಕಿ, ಬತ್ತ ಕೂಲಿ ಕೊಟ್ಟರೆ ಇಂದ್ ರುಪಾಯಿ ಲೆಕ್ಕಲಿ ಕೂಲಿ ಕೊಡೋಕು. ನೇಜಿನಾಟಿ ಮಾಡಿಕಾಕನ ಮಳೆಗಾಳಿಂದ ರಕ್ಸಿಸಿಕಂಬಕೆ ಗೊರ್‌ಗ, ಕಿಂಜ್ಜೋಳು, ಪನ್ನೆ, ಕಂಬಳಿನ ಹೊದ್ದ್





ಸಂದಿ,ಪಾಡ್ದನ ಜಾನಪದ ಪದಗಳ ಹಾಡಿಕಂಡ್ ಕುಸಿಪಡತ್ತಿದ್ದೊ. ನಾಟಿನ ಕಡೇದಿನ ವಿಸೇಸ ಊಟ ಉಣತಿದ್ದೊ. ದೇವರಗದ್ದೆ, ದೆವ್ವದ ಗದ್ದೆಗಳಿಗೆ ತಿಮಾರ್ ತೇಳಿ ಕರೆತ್ತಿದ್ದ್ ನಾಟಿ ಮುಗಿಯಕಾಕನ ಪುತಾಳೆ, ಬಾಳೆದೈ ನೆಟ್ಟ್ ಪೂಜೆ ಮಾಡ್ತಿದ್ದೊ. ಕಾರ್ತಿಂಗಳೊಳಗೆ ನೇಜಿ ನಾಟಿ ಮುಗಿಯತ್ತಿತ್ತ್. ಆಟಿ ತಿಂಗಳ್‍ಲಿ ಯಾದೆ ಒಳ್ಳಕಾರ್ಯಂಗ ಗೌಡ್ರುಗ ಮಾಡ್ತಿತ್ಲೆ. ಆಟಿಕಳಂಜೆನ ವೇಸಕಟ್ಟಿದವು ಮನೆಮನೆಗೆ ಬಂದ್ ಕೊಣ್ದು ಅಕ್ಕಿ, ಕಾಯಿ, ದುಡ್ಡು ತಕಂಡ್ ಆಸೀರ್‌ವಾದ ಮಾಡ್‌ತ್ತಿದ್ದೊ. ಆಟಿ ತಿಂಗಳ್‍ಲಿ ಪತ್ರೊಡೆ, ಬೆದ್ರ್ ಕನಲೆ, ಕೆಸ ಸೊಪ್ಪುನ ಪಲ್ಯ, ಅಮಾಸೆ ದಿನ ಹಾಲೆ ಮರದ ಹಾಲ್ ಕುಡಿದು, ಸೋಣತಿಂಗಳ ಹಿರಣ, ಅಮವಾಸ್ಯೆ ದಿನ ಮಾಸದಡ್ಗೆ ಮಾಡುತ್ತಿದ್ದೊ. ಗೌಡಜೆನಾಂಗಲಿ ಸ್ರಾವಣ ಸನಿವಾರ ವೃತ ಆಚರಣೆ ಈಗಳು ಉಟ್ಟು. ಕೃಸ್ಣಾಸ್ಟಮಿ, ಗಣೇಶ ಚತುರ್ತಿಲಿ ದೇಸ್ತಾನ, ಬಜನಾಮಂದಿರ, ಶಾಲೆಗಳ್‍ಲಿ ಊರವು ಸೇರಿ ಪೂಜೆ, ಬಜೆನೆ ಮಾಡಿರೆ, ರಾತ್ರೆ ಯಕ್ಸಗಾನ ಮಾಡುತ್ತಿದ್ದೊ. ಮಾಲಯ ಅಮಾಸೆ ದಿನ ಪಿತೃ ಪಕ್ಸ ಪೂಜೆ ಈಗಲೂ ಉಟ್ಟು ತಲಕಾವೇರಿ ಸಂಕ್ರಮಣ ದಿನ ಗೌಡ್ರುಗ ಕೊಡಗ್‍ಲಿ ವಿಸೇಸ ಆಗಿದ್ ಕಾವೇರಮ್ಮಂಗೆ ಪೂಜೆ ಸಲ್ಲಿಸುವೆ.

ಪಂಡ್‍ಲಿ ಏಣಿಲ್ ಬತ್ತದ ಜಾತಿಗ ಆದ ಕಯಮೆ, ಅಳಿಯಂಡೆ, ದೊಡ್ಡರ, ಬಿಳಿಜಯ ಉಂಬಕ್ಕಾದರೆ, ಕಳಮೆ, ಗಂದಸಾಲೆ ಬೀರಸಾಲೆ ಗಮಗಮ ಇರುದರ್‌ಂದ ಪಾಯಸ, ಅರಳು, ಅವಲಕ್ಕಿಗೆ ಉಪಯೋಗಿಸಿರೆ, ಸುಗ್ಗಿ ಬೆಳೆಗೆ ಅತಿಕರಯ, ಬಿಳಿಮುಂಡ, ಬಿಟಿ, ಶಕ್ತಿ ಜಾತಿನ ಬತ್ತ, ಇನ್ನ್ ಕಾಡ್ ಕಡ್ದ ಗುಡ್ಡಜಾಗಲಿ ಕುಮೇರಿ ಕಯಮೆನ ಬೀಜ ಬಿತ್ತಿ ಬತ್ತ ಬೆಳೆತಿದ್ದೊ. ಸೆಪ್ಟಂಬರ್‌ಂದ ಅಕ್ಟೋಬರ್ ವರೆಗೆ ಏಣಿಲ್ ಬೆಳೆ ಕೊಯ್‌ಲ್ ಮಾಡ್‌ವೆ. ನೆರೆಕರೆವರ ಸಹಕಾರಲಿ ರೈತರ್ ಕೂಡಾಳ್ ಪೊದ್ದತಿನೊಟ್ಟಿಗೆ ಗದ್ದೆ, ತೋಟದ ಬೇಸಾಯ ಮಾಡ್‌ವೆ. ಕಾಯಿ, ಅಡ್ಕೆ ತೋಟಕೆ ಮೊದ್ದ್, ಗೊಬ್ಬರ ಇಂತ ಕೆಲಸಗ ಸಲೀಸಾಗಿ ಸಾಗುವೆ. ಗದ್ದೆಲಿ ಪೈರ್ ಬೆಳ್ದ್, ಕೆಂಪಾಗಿ ಬಾಗಿ ಕಂಗೊಳಿಸಿಕಾಕನ, ಮನೆನ ಅಟ್ಟದೂಳು ಗುಡ್ಸಿ, ದೆವ್ವ ಚಾವಡಿನ ಮನಾರ ಮಾಡಿ, ಬೊಳ್ಪುಗೆ ಮನೆನ ಯಜಮಾನ ಮೊಡಿ ಉಟ್ಟು ಗದ್ದೆಗೆ ಹೋಗಿ ಬತ್ತದ ಕದ್ರ್ ಎಳ್ದ್ ಬಾಳೆ ಎಲೆಲಿಸಿ ಪೊಲಿ ಪೊಲಿದೇವ ತೇಳಿ ಮನೆಗ ತಂದ್ ಒಂಬತ್ತ್ ಬಗೆ ಪಲಸೊಪ್ಪುಗಳ ಬಾಳೆಲೆಲಿ ಇಸಿ ಗಂದ ದೂಪಾರತಿ ಹೊತ್ತುಸಿ ಪೂಜೆ ಮಾಡಿ ದಡ್ಡಾಲ್ ಮರದ ಬೊಳ್ಳಿಂದ ಮನೆಗೆ, ಚಾವಡಿ, ಹಟ್ಟಿ, ತುಳಸಿ ಕಟ್ಟೆಗಳಿಗೆ ಕದ‌ರ್ (ಕೊರಲ್) ಕಟ್ಟುವದರ ಮನೆತುಂಬುಸುದು ತೇಳುವೆ. ಅದೇದಿನ ಹೊಸ್ತುಟ (ನೋಡಿ : ಹೊಸ್ತುಟ) ಮಾಡ್‌ವೆ. ಗದ್ದೆ ಕೊಯ್ಲಿಗೆ ಮುಂದೆ ಮನೆಯಜಮಾನ ಗದ್ದೆನ ಮೂಡನ ಪುಡೆಲಿ ನಾಕ್ ಹಿಡಿ ಕದ್‌ರ್ ಕೊಯ್ದ್ ಚೌಕಾಕಾರಲಿ ಇಸಿ ಐದ್ ಹಲ್ಸನ ಸೊಪ್ಪುನ ಕೊಟ್ಟೆಲಿ ದನದಹಾಲ್ ಅಲ್ಲರೆ ಕಾಯಿ ಹಾಲ್ ಹಾಕಿ ಗದ್ದೆಗೆ ಕೈ ಮುಗ್ದ್ ಮೂರು ಹಿಡಿ ಪೈರ್ ಕೊಯ್ದು ಮನೆಬಾಗ್ಲ್‌ಗೆ ಕಟ್ಟಿದ ಮೇಲೆ ಗದ್ದೆ ಕೊಯ್ಲ್ ಸುರಾದೆ. ಇದರಂಗೆ ಪಗ್ಗು ತಿಂಗಳ ಹದಿನೆಂಟರ್‌ಂದ ಗದ್ದೆನ ಮೂಡದ ಕಡೆಗೆ ಸರ್‌ಳಿ ದೈನ ಐದ್ ಗದ್ದೆ ಹಂಗೆ ಸಣ್ಣ ಗೆಲ್ಲ್ ನೆಟ್ಟ್ ಐದ್ ಹಿಡಿ ಬತ್ತ ಹಾಕಿ ಕೈಮುಗ್ದ್ ಬೇಡಿಕೊಂಡವೆ..

ಬತ್ತಪೈರ್ ಕೊಯ್ದ್ ಸೂಡಿಕಟ್ಟಿ ಬೆತ್ತದ ಪಡಿಲಿ ಕಟ್ಟ್ ಮಾಡಿ ಮನೆಗೆ ತಂದ್ ಇಜ್ಜಲ್ ಅಲ್ಲರೆ ಕೊಟೆಗೆಲಿ ಉರಂಟುಲಿ ರಾಸಿ ಮಾಡಿ ತೆನೆ ನೊಡುಗೆ ಬಾವಂಗೆ ಮಂಟಮೆ ಮಾಡಿ ಬೆತ್ತ ಅಲ್ಲರೆ ಕಾಡ್ ಬೊಳ್ಳಿಂದ ಮೆಡ್‌ದ ಪೊಡಿಲಿ ಸೂಡಿನ ಹೊಡ್ದ್ ಬತ್ತಂದ ಜೆಳ್ಳ್ ಬೇರೆ ಮಾಡಿ, ಒಣ್ಗುಸಿ, ಬಿಳ್ಗ್‌ಲ್‌ಂದ ಅಕ್ಕಿ ಬತ್ತಮುಡಿ ಕಲಾತ್ಮಕಾಗಿ ಬೊಳ್ಳಿಂದ ಸುತ್ತಿ ಅಟ್ಟಕ್ಕೇರ್‌ಸಿರೆ ಬೆದ್ರ್‌ಂದ ಮಾಡ್ದ ಕಣಜ ಮರಂದ ಮಾಡ್ದ ದೊಡ್ಡ ಪತ್ತಾಯ ಹಣೇವುಗಳ್‍ಲಿ ಬತ್ತ ತುಂಬಿ ಅಳ್ತೆಮಾಡಿ ಮನೆ ಅಲ್ಲರೆ ಕೊಟಗೆಗಳ್‍ಲಿ ಕೂಡ್ಸಿ ಮಡ್ಗುವೆ. ಅಕ್ಕಿ ಮತ್ತೆ ಬತ್ತನ ಅಳ್ತೆ ಮಾಡ್‌ವ ಪಾವ್, ಸೇರ್, ಕಳ್ಸಿಗೆ, ಮುಡಿ ಇದ್ದರೆ ಇಂದ್ ಕಿಲೋ, ಕ್ವಿಂಟಾಲ್, ಟನ್‌ಗಳಿಗೆ ಹೊಂದಿಕೊಂಡೊಳೊ. ಬಡ ರೈತರ್ ಮಳ್ಗಾಲಲಿ ಶ್ರೀಮಂತರ್‌ಂದ ಅಕ್ಕಿ, ಬತ್ತ ಸಾಲ ತೆಕಂಡರೆ ಗದ್ದೆ ಕೊಯ್ಲ್ ಮಾಡಿ ಒಂದಕೆ ಎರಡರಸ್ಟ್ ಬಡ್ಡಿ ಲೆಕ್ಕಲಿ ಬತ್ತ ಸಂದಾಯ ಮಾಡಕ್ಕಿತ್ತ್. ಆಗ ಬ್ಯಾಂಕ್, ಸೊಸೈಟಿ, ಸರಕಾರಂದ ಸಾಲ ಸಿಕ್ಕುದು ಬಜ್ಜ ಇತ್ತ್.

ಏಣಿಲ್ ಬೆಳೆ ತೆಗ್‌ದ ಮೇಲೆ ಸುಗ್ಗಿ ಬೇಸಾಯಕೆ ಗದ್ದೆ ಹೂಡಿ, ಹಟ್ಟಿಗೊಬ್ಬರ, ಸೊಪ್ಪು, ಚೂಟುಮೊಣ್ಣು, ಬೂದಿನ ಸಾವಯವ ಆಗಿದ್ ಹಾಕತಿದ್ದೊ. ಗದ್ದೆಗೋರಿ ದಿನ ನೆರೆ ಹೊರೆವರ್‌ಂದ ಎತ್ತ್‌ಗ ಹೂಡಿಕೆ ಬರತಿದ್ದೊ. ಎತ್ತ್ ಕೋಣಗಳ್‌ಂದ ಮದ್ಯಾಹ್ನ ಮುಟ್ಟ ಹೂಡಿ, ಅದರ ಮೈ ತೊಳ್ದ್, ಮನಾರಮಾಡಿ ಅವುಕ್ಕೆ ಬೇಸಿದ ಬತ್ತದೊಟ್ಟಿಗೆ ತೌಡು, ಉಪ್ಪು, ಕತ್ತರ್‌ಸಿದ ನೆಟ್ಟಿಕಾಯಿಂದ ಮಾದ್‌ದ ಮೊಡ್ಡಿ ತಿನ್ಸಿ ಕಡ್ಲೆ ಅಲ್ಲರೆ ಕಾಯಿ ಹಿಂಡಿನೊಟ್ಟಿಗೆ ಕಚ್ಚಿಕಳ್ಳ್ ಗಂಜಿ ತಿಳಿ ಕುಡಿಯಕೆ ಕೊಟ್ಟು ಮೈಕೈ ಹೆಗ್‌ಲಿಗೆ ಎಳ್ಳೆಣ್ಣೆ ಪೂಜಿ ವಿಶ್ರಾಂತಿ ಕೊಡುತ್ತಿದ್ದೊ. ಗದ್ದೆ ನಾಟಿಗೆ ಮುಂದೆ ಮೂರು ನಾಲ್ಕು ಸರ್‌ತಿ ಹೂಡಿ ಹಲಗೆ ಕಟ್ಟಿ ಮೊಣ್ಣ್ ಸಮತಟ್ಟಾಗುವಂಗೆ ಮಾಡ್‌ವೆ. ಗದ್ದೆಗೋರಿ ದಿನ ಗದ್ದೆಗೆ ಪುಕಾಳೆ, ಬಾಳೆಗಿಡ ನಟ್ಟ್ ಮಣ್ಣ್ ಪೂಜಿಸಿರೆ, ಗದ್ದೆ ಕರೆಗೆ ನಾಗಬನ ಇದ್ದರೆ ಪೂಜೆ ಮಾಡ್‌ವೆ. ಬೀಜ ಬಿತ್ತಿ ಅಲ್ಲರೆ ನೇಜಿನೆಟ್ಟ್ ಅದರ ಸಾಕಾಣಿಕೆ ಮಾಡಿ ಪೈರ್ ಲಾಯ್‌ಕ್ ಬಾವಂಗೆ ಮಾಡ್‌ವೆ. ಮುಂದೆ ದೀಪಾವಳಿ ಹಬ್ಬ ಮೂರುದಿನ ಗಡದ್ದ್‌ಲಿ ಎಣ್ಣೆಸ್ನಾನ, ಬೂತತಂಬಿಲ, ನಾಗಬನದ ಪೂಜೆ, ಬಲೀಂದ್ರ ಪೂಜೆ, ಗೋವು, ದಾನ್ಯ ಪೂಜೆ ನಡ್ಸುವೆ. ಕಡೇ ಹಬ್ಬದಿನದಂದ್ ಕಂಬಳ, ಕೋಳಿಕಟ್ಟ, ಬೇಟೆ ಇಂತ ಮನರಂಜೆನೆಗಳ ಊರ್‌ನವ್ ಸೇರಿ ನಡ್ಸುವೆ. ಜಾಲ್‌ನ ಹುಲ್ಲು ರಾಸಿಲಿ ಬೆಳ್ದದ ಅಳುಂಬು ಬಾರೀ ರುಚಿ ಇದ್ದದೆ. ಮಜಲ್ ಗದ್ದೆಗಳ್‍ಲಿ ಮನೆ ಕರ್‌ಚಿಗೆ ಸೊಪ್ಪು, ಮೆಣ್ಸ್, ಗೆಣ್ಸ್, ಹೊಸೆಪು ಬೆಳ್ದರೆ ಜಾಲ್‍ಲಿ ಬಸಲೆ, ತೊಂಡೆಕಾಯಿ ಬೆಳೆಯುತ್ತಿದ್ದೊ.

ಪೊನ್ನಿ ತಿಂಗಳ್‌ಲಿ ಅಂದರೆ ಜೆನವರಿಲಿ ಕೆಡ್ಡಸ ಹಬ್ಬಕೆ ಹಿಂದೆಲ್ಲ ಕಾಡ್‌ಗೆ ಬೇಟೆಯಾಡಿಕೆ ಹೋಗಿ ಕಡ್ವೆ, ಕಾಡ್ ಹಂದಿ, ಬೊರ್‌ಕ್ಯ, ಮೊಲ ಇಂತ ಮೃಗಗಳ ಬೇಟೆಯಾಡಿ ಎಲ್ಲವೂ ಪಾಲ್ ಮಾಡಿಕಂಬ ಪೊದ್ದತಿ ಇತ್ತ್. ಚೋಡಿ ಹಳ್ಳಗಳ್‌ಲಿ ಕೂಳಿ, ಗಾಳ, ಬಲೆ ಹಾಕುದು ತೋಟೆಹಾಕುದು ಜೂನ್ ತಿಂಗಳ್‌ಲಿ ಹೊಸಮೀನು, ಉಬೊರ್‌ಮೀನು ಗದ್ದೆ, ಮಜಲು ತೋಟಗಳಿಗೆ ಹತ್ತಿಕನ ಕತ್ತಲೆಗೆ ದೊಂದಿ ಹಿಡ್‌ಕಂಡ್ ಮೀನ್ ಬೇಟೆಯಾಡ್ತಿದ್ದೊ. ಒಣ್ಗಿಲ್ ಮೀನ್ ಗೈಪು ಗೌಡ್ರುಗಳಿಗೆ ಬಾರೀ ಇಸ್ಟ. ಸುಗ್ಗಿ ಕೊಯ್ಲು ಫೆಬ್ರವರಿ, ಮಾರ್‌ಚಿ ತಿಂಗಳ್‌ಲಿ ಮುಗ್ದ್, ಮುಂದೆನ ಬೇಸಾಯಕೆ ಗದ್ದೆ ಹೂಡಿ ದರ್‌ಗ್ ಹಾಕಿ, ಎಲ್ಲಂಡೆ, ಹೆಸ್ರು, ಉದ್ದು, ಎಳ್ಳ್ ಬೆಳೆಯುತ್ತಿದ್ದೊ. ಹಿಂಗೆ ರೈತಾಪಿ ಜೀವನ ಮೊದ್‌ವೆ, ಮುಂಜಿ, ಮನೆ ಒಕ್ಕುಲು,ದೆವ್ವಗ, ಯಕ್ಷಗಾನ, ಒತ್ತೆಕೋಲ, ಜಾತ್ರೆ, ಆಯನಗ ಬೇಸಿಗೆಲಿ ಪುರುಸೊತ್ತಿಲ್ಲದಸ್ಟ್, ಬರ್‌ತ್ತಿತ್ತ್. ತಾನ್ ಬೆಳ್ದು ಉಂಡ್ ಬೆರೇವ್ಕೂ ಕೊಟ್ಟ್ ಪ್ರತ್ಯಕ್ಸ ಪರೋಕ್ಸ ಆಗಿ ದೇಸ ಸೇವೆ ಮಾಡ್‌ವ ನೇಗಿಲಯೋಗಿನೇ ಶ್ರೀಮಂತ.

ಆದರೆ ಈಗನ ಹೊಸ ಜೀವನಕೆ ತಿರ್‌ಗಿಕಂಡ್ ಗದ್ದೆಗ ಅಡ್ಕೆ ತೋಟಕ್ಕೆ, ಮಜಲು ಗದ್ದೆಗ ರಬ್ಬರ್,, ಶುಂಟಿ, ಅರ್‌ಸಿನ, ವೆನಿಲ್ಲಾ, ಒಳ್ಳಮೆಣ್ಸ್, ಬೆಳೆಗ ಮಾರ್‌ಪಾಟ್ ಹೊಂದಿದ್ದರೆ ಕಾನ, ಬನಗಳ್‌ಲಿ ಬೆಳೆತ್ತಿದ್ದ ಗೇರ್ ಬೀಜದ ಬದಲ್‌ಗೆ ರಬ್ಬರ್ ದೈ ನೆಟ್ಟ್ ಆರ್‌ತಿಕ ಆಗಿ ಗಟ್ಟಿಯಾಗಿ ಪ್ರಸ್ತುತ ವಿದ್ಯಾವಂತ ಹೈದಜ್ಞ ಹಳ್ಳಿ ಜೀವನ ಮರ್‌ತ್ ನಗರವಾಸಿ, ವಿದೇಶವಾಸಿಗಳಾಗಿ ಗಂಟ್ ಕಟ್ಟಿಕಂಡ್ ಇದ್ದರೆ(ಹಣ ಸಂಪಾದನೆ) ಪ್ರಾಯದವ್, ನೊಡು ಪ್ರಾಯದವು ತಮ್ಮ ಪಂಡ್‌ನ ಜೀವನದ ಸುಕ ದುಃಕದ ನೆಂಪುಗಳ್‌ನ ನೆನ್ಸಿಕಂಡ್‌ದ್ ಕಾಲ ಕಳ್ದವೆ. (ಡಿ.ಜಿ.ಕೆ.)

**ಗೌಡ ಪದ ನಿಷ್ಪತ್ತಿ :** ಗ್ರಾಮ ವೃದ್ಯ ತೇಳುವ ಪದಂದ 'ಗಾವುಂಡ' ಬಂದುಟು. ಕಾಲಾಂತರಲಿ ಇದುವೇ 'ಗೌಡ' ಅಂತಾವುಟು (Narasimhiah 1961 : 110). ಸಂಸ್ಕೃತದ 'ಗೋವು' ಪದಂದ 'ಗೌಡ' ಪದ ಉತ್ಪತ್ತಿ ಆವುಟು. ದ್ರಾವಿಡ ಮೂಲದ್ದಾದ ಗೌಡ ಪದ 'ಬೆಟ್ಟ' ತೇಳುವ ಅರ್‌ತನು ಕೊಟ್ಟದೆ. 'ಗೌಡ' ತೇಳಿರೆ ಯಜಮಾನ ತೇಳಿ ಅರ್ತ. ಅದ್ ರಾಜ್ಯದ ಆಡಳಿತಾಂಗದ ಒಂದ್ ಹುದ್ದೆನ ಹೆಸರ್‌ನ ಸೂಚ್‌ಸಿದೆ. 'ಗೂಡ್' ತೇಳಿರೆ 'ಬೆಲ್ಲ' ತೇಳಿ ಅರ್ತ. ಬಂಗಾಳಲಿ ಕಬ್ಬು ಹೆಚ್ಚು ಬೆಳೆದರ್‌ಂದ ಅದರ 'ಗೌಡ ದೇಶ' ತೇಳಿ ಕರ್‌ದವೆ... ಗೌಡರ್ ಮೂಲತಃ ಬಂಗಾಳದವು. ಅಂದರೆ ಬೆಲ್ಲ ಮಾಡ್‌ವವು ತೇಳುವ ಅರ್‌ತ ಉಟ್ಟು. ಇಂದ್‌ಗೂ ಮಂಡ್ಯ ಕಡೆನ ಗೌಡರ ಕಸ್‌ಬು ಬೆಲ್ಲ ಮಾಡ್‌ದೆ ಆಗುಟು. ಗಂಗಾ ತೀರಂದ ದಕ್ಷಿಣಕ್ಕೆ ಬಂದ ಹಟ್ಟಿಕಾರರ್‌ಲಿ ಗೋವಳರದ್ದು ತೇಳಿ – ಶಾಕೆ. 'ಗೋಪಾಲರೇ ಗೌಡರಾದೋ, ಸಂಸ್ಕೃತದ 'ಗ್ರಾಮಕೂಟ' ಪದ ಪ್ರಾಕೃತಲಿ ಗಾಮ ಊಡ –ಗಾಮುಂಡ.

ಶ್ರೀ ನರಸಿಂಹಯ್ಯನವರ ವಾದಕೆ ಯಾದೇ ಸಾಸನಾದಾರಗ ಸಿಕ್ಕುಲೆ. ಗ್ರಾಮ ವೃದ್ದ ತೇಳ್ದಕೆ 'ಊರ್‌ನ ಬುದ್ದಿವಂತ, ಹಿರಿಯ' (ಕಿಟೆಲ್ 1894 : 1426) ತೇಳ್‌ವ ಅರ್‌ತ ಇರ್‌ದು ಹೌದಾದರೂ, ಶಾಸನಗ ಆ ಅರ್‌ತಲಿ 'ಗಾಮುಣ್ಣ' ತೇಳ್‌ವ ಪದನೇ ಬಳ್ಸುವೆ. ಸ್ಟುವರ್ಟರ್ ಯಾವ ಆದಾರಂದ 'ಗೋವು' ಪದಂದ ಗೌಡ ಪದ ಸಿದ್ದಿಸಿಟು ತೇಳಿ ಹೇಳ್‌ದನೋ ಗೊತ್ತಾದುಲೆ. ಬಾಸೆನ ವಿಜ್ಞಾನದ ದ್ರಿಸ್ಟಿಂದ 'ಗೋವು' ರೂಪ 'ಗೌಡ' ಆಗಿರಿಕಿಲೆ. ಸಾಂಸ್ಕೃತಿಕ ಆಗಿದ್‌ನು ಗೌಡ್ರ್‌ಗ ದನಸಾಂಕುದರ ಪ್ರದಾನ ಆಗಿ ಕೆಲ್ಸಂತ ಕಂಡ್ ಬಂದವಲ್ಲ. ಮೊಣ್ಣಪ್ಪನವರ ವಾದಕೂ ಬಾಸ ವಿಜ್ಞಾನದ ನೆಲೆಲಿ ಮತ್ತೆ ಸಾಂಸ್ಕೃತಿಕನೆಲೆಲಿ ಆದಾರ ಸಾಲದ್.

'ಗೌಡ' ಪದ ದ್ರಾವಿಡ ಮೂಲದ್ ತೇಳಿಯೊಳ. ಇದ್ ಕೂಡಾ ಸಂಶಯಾಸ್ಪದ. ಬೇರೆ ದ್ರಾವಿಡ ಬಾಸೆಗಳ್‌ಲಿ 'ಗೌಡ' ಪದ ಇಲ್ಲೆ. ತಮಿಳ್‌ಲಿ 'ಗಾವುಂಡರ್' ತೇಳ್‌ವ ಪದ ಒಂದ್ ಇತ್ತ್, ಅದ್ ಸಮುದಾಯ ಸೂಚಕ ಆಗುಟು. ಒಟ್ಟಿಗೆ ಅದ್ ಸ್ತಾನ ಸೂಚಕ ಆದ 'ಗಾಮುಣ್ಣ' ಪದಕೆ ಹಕ್ಕಲೆಲಿ ಉಟ್ಟು. ಪೂವಯ್ಯನವು 'ಗೂಡ್‌ಂದ ಗೌಡ ಬಂದುಟು' ತೇಳ್ದು ಬಾಯ್ಮಾತ್ ಆಗಿ ಹೋಗುಟು. ಆದರೆ ಗೌಡ್ರು ಬಂಗಾಳಂದ ಬಂದೊಳೊ ತೇಳ್‌ದರ ಒಪ್ಪಿಕಂಡರೆ, ಬಂಗಾಳಂದ ಕರ್ನಾಟಕದವರೆಗೆ 'ಗೂಡ್' ಪದದ ಕೆಲವ್ ರೂಪಗಾದರ್ ಸಿಕ್ಕಕ್ಕಿತ್ತ್. ಕಡೇ ಪಕ್ಷ ತೆಲುಗುಲಿ ಆದರೂ ಸಿಕ್ಕಕ್ಕಿತ್ತ್. ಒಟ್ಟಿಗೆ ಶಾಸನಗಳ್‌ಲಿ ಎಲ್ಲೂ ಈ ರೂಪದ ಪ್ರಯೋಗ ಇಲ್ಲೆ. ಡಾ. ಚಿದಾನಂದಮೂರ್‌ತಿ ಅವರ ವಾದ ಮಾತ್ರ ತರ್‌ಕ ಬದ್ದತೇಳಕ್. ಸಂಸ್ಕೃತದ ಗ್ರಾಮ ಕೂಟ ಪದ ಊರ ಮುಕ್ಯಸ್ತ ತೇಳ್‌ವ ಅರ್‌ತಲಿ ಬಳ್ಸಿಯೊಳೊ. ಅದೇ ಅರ್‌ತಲಿ 'ಗಾಮ ಊಡ, ಗಾಮ ಉಡ' ಪದ ಪ್ರಾಕೃತಲಿ ಪ್ರಯೋಗ ಆಗುಟು. 'ಗಾಮ ಉಡ'ನೆ ಕನ್ನಡಲಿ 'ಗಾಮುಣ್ಣ'ಆಗಿ 8–9ನೇ ಸತಮಾನಗಳ ಸಾಸನಗಳ್‌ಲಿ ಬಳ್ಸಿಯೊಳೊ. 12ನೇ ಸತಮಾನಲಿ ಈ ಪದ 'ಗಾವುಂಡ' ರೂಪನ ತಾಳಿ, 17ನೇ ಸತಮಾನದ ಸಾಸನಗಳ್‌ಲಿ 'ಗೌಡ' ತೇಳುವ ರೂಪನ ತಾಳಿಟು. ಮಾಕೋನಹಳ್ಳಿ ದೊಡ್ಡಪ್ಪ ಗೌಡ್ರೂ ಈ ಅಬಿಪ್ರಾಯನೇ ಕೊಟ್ಟೊಳೊ.

ಇಂದ್ ಬಳಕೆಲಿರುವ 'ಗೌಡ' ಪದನ ತುಳು ಮಾತಾಡ್‌ವ ಜೆನ 'ಗವುಂಡ' 'ಗಾವುಂಡ' ತೇಳಿ ಉಚ್ಚರ್‌ಸುವೆ. ಸಾಸನಗಳ್‌ಲಿ ಇರ್‌ವ ಪ್ರಯೋಗನೂ ಇದೇ ಆಗುಟು. 'ಗಾವುಂಡ' ಪದದ ಅರ್‌ತಲೆ 'ಗ್ರಾಮಕೂಟ' ತೇಳ್‌ವ ಪದನ ವಿಜಯನಗರ ಕಾಲದ ಶಾಸನಲಿನು ಬಳ್‌ಸಿಯೊಳೊ. ಗ್ರಾಮದ ಅಡಿಕಾರಿ ತೇಳ್ದು ಅದರ ಮೂಲಾರ್‌ತ ಇಂದ್‌ಗೂ ಗ್ರಾಮ ಗೌಡ, ಊರುಗೌಡ ತೇಳ್‌ವ ಪ್ರಯೋಗಗಳ್‌ಲಿ ಇದೇ ಅರ್‌ತ ಇದ್ದರೂ ಒಟ್ಟಾರೆ ಆಗಿ ಅದ್ ಜಾತಿ ಸೂಚಕ ಆಗುಟು. ಒಟ್ಟುಲಿ ಈ ಪದ ಬೆಳ್ದ್ ಬಂದಿರ್‌ದರ ಹಿಂಗೆ ಹೇಳಕ್. ಗ್ರಾಮಕೂಟ (ಸಂಸ್ಕೃತ)–ಗಾಮ ಉಡ, ಗಾಮಉಡ (ಪ್ರಾಕೃತ)–




ಗಾಮುಣ್ಣ (ಕನ್ನಡ)–ಗಾಮುಂಡ–ಗಾವುಂಡ –ಗವುಂಡ–ಗೌಂಡ–ಗೌಡ. ಇದರ್‌ಲಿ ಗಾವುಂಡ, ಗವುಂಡ ಮತ್ತೆ ಗೌಡ ಪ್ರಯೋಗಗ ಈಗಲೂ ಚಾಲ್ತಿಲುಟ್ಟು. (ಪಿ.ಬಿ.)

**ದಕ್ಷಿಣ ಕನ್ನಡ ಜಿಲ್ಲೆಲಿ ಗೌಡ ಸಮುದಾಯ ಬೆಳ್ದ್‌ಬಂದ ಹಿನ್ನೆಲೆ :** ಮನೆತನದ ಆಚರಣೆ, ಕೋಲ, ಕಂಬಳ, ದೆವ್ವ, ಒತ್ತೆಕೋಲ, ನೇಮ, ಜಾತ್ರೆ ಹೀಂಗೆ ಎಲ್ಲ ಕಡೆಲು ಗುರ್‌ತಿಸಿಕಂಡವು ಗೌಡ ಸಮುದಾಯದವು. 'ಮನೆತನ'ದವ್ ತಮ್ಮತಮ್ಮ ಊರ್‌ನ 'ಊರಗೌಡರಾದೊ;. 'ಊರಗೌಡ'ರ್ ಊರ ಯಜಮಾನರ್ ಆದೊ. ಪಟೇಲರಾದೊ, ದೇಸ್ತಾನದ ಮುಕ್ತೇಸರಾದೊ. ಗೌಡ್ರ್ ದಕ್ಷಿಣಕನ್ನಡ ಜಿಲ್ಲೆಗೆ ಹಾಸನ ಜಿಲ್ಲೆನ ಐಗೂರು ಸೀಮೆಂದ ಬಂದೊ. ಸುರುಗೆ ಗೌಡ್ರ್ ರಾಗಿನ ಪ್ರದಾನ ಬೆಳೆ ಆಗಿದ್ ಬೆಳಿತಿದ್ದೊ. 'ವಸ್ತು ವಿನಿಮಯ ಪೊದ್ದತಿಂದ ಹಣ ವಿನಿಮಯ ಪೊದ್ದತಿ'ಗೆ ಬದಲಾದ ಮೇಲೆ ಕ್ರಿಸಿ ಪೊದ್ದತಿಲಿ ಸುಮಾರ್ ಬದಲಾವಣೆ ಕಂಡ್‌ಬಾತ್. 'ರಾಗಿಕುಮರಿ'




ಒಕ್ಕಲಿಗ ಸಮುದಾಯ ಪತ್ತಿನ ಸಹಕಾರ ಸಂಘ ನಿ.

ಬೇಸಾಯಂದ ಸಂಪನ್ಮೂಲರಾಗಿ ಸಮತಟ್ಟಾದ ನೀರಾವರಿ ಪ್ರದೇಸಲಿ ಬತ್ತದ ಗದ್ದೆ ಕಟ್ಟಿಯೊಳೊ. 'ರಾಗಿಕುಮರಿ'ಲಿ ಮರಗೆಣ್ಸ್, ಒಳ್ಳಮೆಣ್ಸ್ ಬೆಳ್ದೊ. 'ರಾಗಿಕುಮರಿ' ಸೊಪ್ಪುನ ಗುಡ್ಡೆ ಹೋಗಿ, ಬೀಜದ ಕೊಚ್ಚಿ ಆಗಿದ್ ಬೆಳ್ತ್. ಗದ್ದೆ ಬೇಸಾಯಕೆ ಗೊಬ್ಬರದ ನೆಲೆ ಆಗಿದ್ ಸೊಪ್ಪುನ ಗುಡ್ಡೆ ಆಗಿ ಉಪಕಾರ ಆತ್. ಕಾಲಕ್ರಮೇಣ ಬತ್ತದ ಗದ್ದೆಲಿ ನೆಟ್ಟಿಕಾಯಿ ಮಾಡ್ದೊ. ತೊಂಡೆಕಾಯಿ ಚಪ್ಪರದಡಿವರೆಗೆ ಅಡ್ಕೆ ದೈ ಬೆಳ್ದ್ ಬತ್ತದಗದ್ದೆ ಅಡ್ಕೆ ತೋಟ ಆತ್. ಸೊಪ್ಪುನ ಗುಡ್ಡೆಗೆಲ್ಲ 'ರಬ್ಬರ್‌ತೋಟ'ಗಾಗಿ ಬದಲಾತ್. ಅಡ್ಕೆ ತೋಟಲಿ ಒಳ್ಳೆ ಮೆಣ್ಸ್, ವೆನಿಲ್ಲಾ, ಕೊಕ್ಕೋ, ಚಾಳೆ, ಬಾಳೆ, ಕಾಪಿ, ಏಲಕ್ಕಿ ಹೀಂಗೆ ಸುಮಾರ್ ವಾಣಿಜ್ಯ ಬೆಳೆಗ ಬಂದೊ. ಒಟ್ಟುಲಿ ದಕ್ಷಿಣಕನ್ನಡದ ಗೌಡ್ರುಗ ಕ್ರಿಸಿಕಾರ್ಯಲಿ ಗಟ್ಟಿ ಆದೊ.

ಶಿಕ್ಷಣ ಸಂಸ್ತೆಗಳ, ಸಂಗಟನೆಗಳ್‌ಂದಾಗಿ ಹೈದಂಗ ಗೂಡೆಗ ಸಮಾನ ಆಗಿ ಓದುವ ಶಿಕ್ಷಣ ಸಂಸ್ತೆಗಳ ಕಟ್ಟಿ ಓದೊವ್ಕೆ ಅನುಕೂಲ ಆವ ದುಡ್ಡುನ ಮೂಲನ ಕೊಡಕಾದೆ. ಓದ್‌ವ ಮಕ್ಕ ತಾಂತ್ರಿಕ ವೈದ್ಯಕೀಯ, ಕಾಮರ್ಸ್, ಅಕೌಂಟೆನ್ಸಿ, ಆಡಿಟಿಂಗ್ ಇಂತೆಲ್ಲ ಕಸುಬುಪರ ಶಿಕ್ಷಣನ ಕಲೆ, ವಿಜ್ಞಾನ, ಮಾನವಿಕದಂತ ಸಿಸ್ತ್‌ನ ವಿದ್ಯೆನ ಓದುದಕೆ ಎಡೆ ಮಾಡಿಕೊಡುವ ಜೊವಾಬ್ದಾರಿ ಸಂಸ್ತೆಗಳಿಗೆ ಇರಕಾದೆ. ಶೈಕ್ಷಣಿಕ ಮತ್ತೆವಾಣಿಜ್ಯ ಉದ್ದೇಸಕಾಗಿ ಕಂಪ್ಯೂಟರ್ ವಿದ್ಯೆನ ಕೊಡಿಕೆ ಕಂಪ್ಯೂಟರ್ ಕೇಂದ್ರಗಳ ಕಟ್ಟಕಾದೆ. ಊರ್‌ನ, ದೇಸದ ಹಾಂಗೆ ಹೊರದೇಸ ಮಟ್ಟದ ಪ್ರತಿಷ್ಟಿತ ಹಾಂಗೆ ಪ್ರತಿಬಾನ್ವಿತ ಜೆನಗಳ ಗುರ್‌ತುಸಿ ಸನ್ಮಾನ ಮಾಡಕಾದೆ. ಗ್ರಂತಾಲಯ, ವಾಚನಾಲಯ, ಮ್ಯೂಸಿಯಂ, ಪ್ರಯೋಗಾಲಯ, ಸಬಾಬವನ, ಒಳಾಂಗಣ ಮತ್ತೆ ಹೊರಾಂಗಣ ಕ್ರೀಡಾಂಗಣಗ, ಈಜುಕೊಳಂಗ, ಪಾರ್ಕ್‌ಗ ಮತ್ತೆ ಆರಾದನಾ ಕೇಂದ್ರಗಳ ಕಟ್ಟಿ ನಡ್ಸಿಕಣಕಾದೆ. ಉಪನ್ಯಾಸ, ಸಂವಾದ, ಸೆಮಿನಾರ್, ಕಾರ್ಯಗಾರ, ಸಮ್ಮೇಳನ, ತರಬೇತು ಸಾಲೆಗಳ ಏರ್ಪಾಟ್ ಮಾಡಿ ಸಮಾಜಕೆ ಅನುಕೂಲ ಮಾಡಿಕೊಡಕಾದೆ. ಶೈಕ್ಷಣಿಕ ಮಹತ್ವ ಇರ್‌ವ ದಿನಪತ್ರಿಕೆ, ವಾರಪತ್ರಿಕೆ, ಮಾಸಿಕ, ವಾರ್ಷಿಕ ಪುಸ್ತಕ ಇಂತೆಲ್ಲದರ ಕೂಡ್ಸಿ ಪ್ರಕಟ್ಸಕಾದೆ. ಎಲ್ಲಾ ತರದ ಸಾಮಾಜಿಕ, ಶೈಕ್ಷಣಿಕ ಮತ್ತೆ ಮಾನವೀಯ ಚಟುವಟಿಕೆಗೆ ಹಾಂಗೆ ಕಾರ್ಯಕ್ರಮಕೆ ಸಹಾಯದನ, ಅನುದಾನ ಕೊಡಕಾದೆ. ದೇಶ ವಿದೇಸಲಿ ಉಚ್ಚ ಶಿಕ್ಷಣ ಮತ್ತೆ ತರಬೇತಿಗಾಗಿ ಒಪ್ಪುವ ಪ್ರತಿಬಾವಂತ ಮಕ್ಕಳಿಗೆ ವಿದ್ಯಾರ್ತಿವೇತನ, ಶಿಷ್ಯವೇತನ, ಗೌರವದನ ಕೊಡಕಾದೆ. ಓದೊವ್ಕೆ ವಿದ್ಯಾರ್ತಿನಿಲಯಗಳ ಕಟ್ಟುದು; ಊರ್,ದೇಸ ಹಾಂಗೆ ವಿದೇಸದ ಹಬ್ಬ ಹರಿದಿನಗಳ, ಜಂಬರಗಳ, ಆಚರಣೆಗಳ ನಡ್ಸುದು, ಬೇರೆ ಬೇರೆ ಆಟಗ;ಆಟದ ತರಬೇತಿ ಸಿಬಿರಗಳ, ದೈಹಿಕ ಶಿಕ್ಷಣ ಕಾರ್ಯಗಳ ನಡ್ಸುದು; ಶೈಕ್ಷಣಿಕ ಮತ್ತೆ ಸಾಮಾಜಿಕ ಮಹತ್ವ ಇರ್‌ವ ಅದ್ಯಯನ ಪ್ರವಾಸ ಮತ್ತೆ ಸಾಹಸ ಕಾರ್ಯಗಳ ಏರ್ಪಡ್‌ಸಿ ಉಪಕಾರ ಮಾಡ್ದು; ಕಲೆ, ವಿಜ್ಞಾನ, ಸಾಹಿತ್ಯ, ಗೃಹವಿಜ್ಞಾನ, ಮಾನವಶಾಸ್ತ್ರ, ಲಲಿತಕಲೆ, ಕಸುಬುಶಿಕ್ಷಣ ಮತ್ತೆ ಮೂಲಬೂತ ವಿದ್ಯೆನ ಬೆಳ್ಸುದು ಮತ್ತೆ ಅಬಿರುದ್ದಿ ಮಾಡಿ ಇಂತಹ ಉದ್ದೇಸಗಳ ಪೂರೈಸುವ, ಅಬಿರುದ್ದಿಗೊಳ್ಳುವ, ಪ್ರಚಾರಮಾಡ್‌ವ ಜವಾಬ್ದಾರಿನ ಗೌಡ ಯುವ ಸಮುದಾಯ ನಡ್ಸಿಕೊಡಕಾದೆ.

**ಶೈಕ್ಷಣಿಕ ಸಂಗಟನೆ :** ದಕ್ಷಿಣಕನ್ನಡ ಶಿಕ್ಷಣ ಕ್ಷೇತ್ರಲಿ ದೇಸದ ಸುರುನ ನಗರತೇಳಿ ಹೆಸರ್ ಪಡ್‌ಕಂಡುಟು. ಈ ಜಿಲ್ಲೆನ ಸುಳ್ಯ, ಸುಬ್ರಹ್ಮಣ್ಯ, ಪುತ್ತೂರು, ಬೆಳ್ತಂಗಡಿ, ಬಂಟ್ವಾಳ, ವಿಟ್ಲ, ಮಂಗಳೂರು ಇಂತ ಕಡೆ ಶೈಕ್ಷಣಿಕ, ಸಾಹಿತ್ಯಕ, ಸಾಂಸ್ಕೃತಿಕ, ರಾಜಕೀಯ, ಸಂಸೋದನೆ, ವೈದ್ಯಕೀಯ, ಸಾಮಾಜಿಕ ಆಂದೋಲನ, ಪತ್ರಿಕಾವಲಯಲಿ ತಮ್ಮದೇ ಆದ ಸೆಳ್ತನ ಬೆಳ್ಸಿ ಗೌಡ್ರ್ ಬೆಳ್ದ್ ನಿತ್ತೊಳೊ. ಅಮರ ಸುಳ್ಯದ ಶಿಲ್ಪಿ ಶ್ರೀ ಕುರುಂಜಿ ವೆಂಕಟರಮಣ ಗೌಡ್ರ್ ಸುಳ್ಯ ಪರಿಸರಲಿ ಸುಮಾರ್ ಶಿಕ್ಷಣಸಂಸ್ತೆಗಳ ಹುಟ್ಟ್ ಹಾಕಿ ಕಟ್ಟಿ ಬೆಳ್‌ಸಿಯೊಳೊ.. ಇವರ

ಸಂಸ್ತೆಲಿ ಓದಿದ, ದುಡ್ದ ಗೌಡ ಯುವ ಸಮುದಾಯ ರಾಷ್ಟ್ರಮಟ್ಟಲಿ ಗುರ್ತ್‌ಸಿಕಂಡೊಳೊ. ಅಲ್ಲದೆ 'ಗೌಡ ಸೋಶಿಯೋ ಎಜ್ಯುಕೇಶನ್ ಫೌಂಡೇಶನ್(ರಿ)ಸುಳ್ಯ ದ.ಕ., ಗೌಡ ಯುವ ಸೇವಾ ಸಂಘ(ರಿ) ಸುಳ್ಯ ದ.ಕ., ಮಲ್ನಾಡ ಶಿಕ್ಷಣಸಂಸ್ತೆ ಸುಳ್ಯ ದ.ಕ., ದಕ್ಷಿಣಕನ್ನಡ ಜಿಲ್ಲಾ ಒಕ್ಕಲಿಗ ಸಂಘಟಣೆ, ಕೊಡಗು ಮತ್ತೆ ದಕ್ಷಿಣಕನ್ನಡ ಜಿಲ್ಲಾ ಒಕ್ಕಲಿಗ ಸಂಘಟಣೆಗ ಹತ್ತು ಹಲವಾರ್ ಕಾರ್ಯಕ್ರಮ ನಡ್ಸತೊಳೊ.



ಕೆ.ವಿ.ಜಿ. ವೈದ್ಯಕೀಯ ಕಾಲೇಜು

**ಶಿಕ್ಷಣ ಕ್ಷೇತ್ರ :** ಗೌಡ ಸಮುದಾಯಲಿ ಶಿಕ್ಷಣಕ್ಷೇತ್ರಲಿ ಸಾದನೆ ಮಾಡ್ದವು ಹಲವರ್. ಕೊಳಂಬೆ ಪುಟ್ಟಣ್ಣಗೌಡ, ಟಿ. ಜಿ. ಮುಡೂರು, ಕೋಡಿ ಕುಶಾಲಪ್ಪಗೌಡ, ಸುಕುಮಾರಗೌಡ, ಕಾಣಿಚ್ಚಾರು ಸಂಕಪ್ಪಗೌಡ, ಅಡಪ್ಪಂಗಾಯ ಎಲ್ಯಣ್ಣಗೌಡ, ಕುತ್ಯಾಳ ನಾಗಪ್ಪಗೌಡ, ಚಿದಾನಂದಗೌಡ ಕೊಳಂಬೆ, ಜಯಮ್ಮ ಚೆಟ್ಟಿಮಾಡ, ಶೀಲಾವತಿ ಕೊಳಂಬೆ, ಕೆ. ವಿ. ವೆಂಕಟ್ರಮಣ, ಶಿವಣ್ಣ ನೆಲೆಮನೆ. ಕೆ. ಚಿನ್ನಪ್ಪಗೌಡ, ಪುರುಷೋತ್ತಮ ಬಿಳಿಮಲೆ, ಪೂವಪ್ಪ ಕಣಿಯೂರು, ಯು. ಸುಬ್ರಾಯ ಗೌಡ, ಯು. ಪಿ. ಶಿವಾನಂದ, ಎ. ಕೆ. ಹಿಮಕರ, ತೇಜಕುಮಾರ್ ಬಡ್ಡಡ್ಕ, ಜಿ. ತುಕಾರಾಮ ನಿಡ್ಲೆ, ಕೆ. ಆರ್. ವಿದ್ಯಾದರ, ವೆಂಕಟ್ ಮೋಂಟಡ್ಕ, ಶ್ರೀನಿವಾಸ ಕಾರ್ಕಳ, ವಿಶ್ವನಾಥ ಬದಿಕಾನ, ಯದುಪತಿ ಗೌಡ, ಯತಿರಾಜ ಬೂತಕಲ್ಲ್, ಶೇಷಗಿರಿ ಮೂಕಮಲೆ, ಸಂಜೀವ ಕುದ್ಪಾಜೆ, ಕೆ. ಆರ್. ಗಂಗಾದರ, ಪ. ಯಂ. ಆನಂದಗೌಡ, ರೇವತಿ ನಂದನ. (ವಿ.ಬಿ.)

**ಒಕ್ಕಲಿಗರ ಹಿನ್ನೆಲೆ ರಾಜಕೀಯ–ಸಾಮಾಜಿಕ :** 'ಚರಿತ್ರೆನ ತಿಳ್ಕಣದ ಮೊನ್‌ಸಾ ಚರಿತ್ರೆನ ಸೃಷ್ಟಿಮಾಡಿಕಾಕಿಲೆ ಗಡ' ಹಿಂಗೆ ವಿದ್ವಾಂಸರ್ ಹೇಳಿಯೊಳೊ. ಗೌಡ್ರ ಕುಲ ಕಸುಬ್ ಕ್ರಿಸಿನೆ ಆದರೂ ತಮ್ಮ ಬೊದ್‌ಕ್‌ನ ಪಯಣಲಿ ರಾಜ್ಯನ ಕಟ್ಟಿದೊ. ರಾಜ್ಯನ ಆಳ್ದೊ, ಚರಿತ್ರೆನ ಏರಿಳಿಕೆನ ಆಗು ಹೋಗುಗಳ್‌ಲಿ ರಾಜ್ಯನ ಕಳ್ಕೊಂಡ, ರಾಜ್ಯದ ಉಸ್ತುವಾರಿಲಿ ತಮ್ಮ ತಾವು ತೊಡ್ಗುಸಿಕೊಂಡ. ವಿಜಯನಗರದ ಶಾಸನಗಳ್‌ಲಿ ಇವರ 'ಗೌಡ ಪ್ರಬು' ತೇಳಿ ನಮೂದಿಸಿಯೊಳೊ. (ರಾಜರಾಮ ಹೆಗ್ಡೆ, ಅಶೋಕ ಶೆಟ್ಟರ್ 2000 : 221). ತಲಕಾಡಿನ ಗಂಗರ್‌ಂದ (ಕ್ರಿ. ಶ. 200–1004) ಸುರಾಗಿ ಹೊಯ್ಸಳ, ವಿಜಯನಗರ, ಕೆಳದಿ (ಇಕ್ಕೇರಿ) ನಾಯಕರ್‌ಂದ ಗ್ರಾಮದ ಉಸ್ತುವಾರಿ, ಕಪ್ಪಕಾಣಿಕೆಗಳ ಸಂಗ್ರಹಣೆ 'ಗಾವುಂಡರ' ಆಗಿತ್ತ್. (ಸದರಿ ಪು. 20) ಗೌಡ್ರು ಸಾಮಂತರಾಗಿ, ಮಾಂಡಲೀಕರಾಗಿ, ಪಾಳೇಗಾರರಾಗಿ, ದಂಡನಾಯಕರಾಗಿ ಆಗದ ಸಾಮ್ರಾಜ್ಯಗಳ ಅದಿನಾಯಕರಾಗಿದ್ದೊ. ಇವರ್‌ಲಿ ಪ್ರಮುಕರಾದವ್ ತಲಕಾಡ್‌ನ ಗಂಗರು, ಬೇಲೂರ್‌ನ ಹೊಯ್ಸಳರು, ಕೆಳದಿ (ಇಕ್ಕೇರಿ) ನಾಯಕರ್, ನಾಡಪ್ರಬು ಬೆಂಗಳೂರು ಸ್ತಾಪಕ ಕೆಂಪೇಗೌಡ್ರು, ಕೊಡಗ್‌ನ ಹಾಲೇರಿ ವಂಶಸ್ತರ್ ವಕ್ಕಲಿಗ ಗೌಡ ಮೂಲದವೇ ಆಗೊಳ.

**ತಲಕಾಡ್ ಗಂಗರ್ :** ಕ್ರಿ. ಶ 200ರ ಹೊತ್ತುಲಿ ಇಬ್ಬರ್ ಅಣ್ಣತಮ್ಮಂದರ್ ಸಮುದ್ರಗುಪ್ತ ನೊಟ್ಟಿಗೆನ ಜಗಳ ಜಟ್ಟಿಂದಾಗಿ ಈಗದ ಬಿಹಾರದ ಸರಯೂ ನದಿನ ಕರೆಂದ ತಮ್ಮ ಕುಟುಂಬದ ಜೆನರೊಟ್ಟಿಗೆ ತೆಂಕದಕಡೆ ವಲಸೆ ಬಂದವೆ. ಇವರ ಪೈಕಿಲಿ ಒಬ್ಬ ಸಹೋದರ ಕಳಿಂಗನ ರಾಜಧಾನಿಯಾಗಿಸಿದ್ 'ಮೂಡದ ಗಂಗ ವಂಶ'ನ ಸ್ತಾಪಿಸಿತ್. ಇನ್ನೊಬ್ಬ ಕಾವೇರಿ ಹಳ್ಳದ ಕರೆಲಿ ತಲಕಾಡ್‌ನ ರಾಜಧಾನಿಮಾಡಿದ್ 'ಪೊಡ್‌ವ ಗಂಗ ವಂಶ'ದ ಮೂಲ ಪುರುಸ ಆತ್. ಇನ್ನೊಂದು ತರ್‌ಕಲಿ ಸಂಶೋದಕರಾದ ಆಡಿಗ ಮತ್ತೆ ಬಿ. ಶೇಕ್ ಆಲಿಯವರ ಪ್ರಕಾರ ಗಂಗವಾಡಿಕಾರರ್ ಮೂಡಲಿ ತಲಕಾಡು ಪ್ರದೇಶಲಿ ವಾಸ ಇದ್ದೊ. ಇದ್ ಕಾಡ್ ಪ್ರದೇಸ ಆಗಿತ್ತ್ ಆನೆಗ ಅಲ್ಲಿ ಹೆಚ್ಚಿಗೆ ಇದ್ದೊ. ಆನೆಗಳ ಹಿಡ್ದು ಪಳ್ಗಿಸುದರ್‌ಲಿ ನೈಪುಣ್ಯ ಪಡ್ದಾ ಈ ಕ್ರಿಸಿಮೂಲ ಸಮುದಾಯ ಐತಿಹಾಸಿಕ ಕಾಲ ಗಟ್ಟಲಿ ಆನೆ ಸೈನ್ಯ ಕಟ್ಟಿರೊಕು. ದಡಿಗ–ಮಾದವವರಂತಹ ಕುಸಾಗ್ರಮತಿಗ ರಾಜ್ಯ ಸ್ತಾಪನೆ ಸಾಹಸಕ್ಕೆ ಹೋಗಿ ರಾಜ್ಯ ಸ್ತಾಪಿಸಿರೊಕು ತೇಳಿ ಇನ್ನೊಂದು ವಾದ. ಗಜ ಮತ್ತೆ ಅಂಕುಶ ಇವರ ರಾಜಮುದ್ರೆಯಾಗುಟು (ಗಜಲಾಂಚನ). ಹಾಸನದ ಕೆಲವ್ ಕಡೆ ಗಂಗಡಿಕಾರ ವಕ್ಕಲಿಗರ 'ಮುಲ್ಲುಗೌಡರು' ತೇಳಿ ಕರ್‌ದವೆ. ಇದರ ಸಾಂಸ್ಕೃತಿಕಪರಿಕಲ್ಪನೆಲಿ ತೆಕಣಿಕನ ಅದರ ಅರ್ತ 'ಅಂಕುಶ' ಹಿಡ್ದವ್ ತೇಳಿ ಆದೆ. ಇಂದ್‌ನ ದಕ್ಷಿಣ ಕರ್ನಾಟಕದ ಬೆಂಗಳೂರ್, ದೇವನಹಳ್ಳಿ, ಕೋಲಾರ, ಮಂಡ್ಯ, ಮೈಸೂರ್, ಚಾಮರಾಜೆನಗರ, ಕೊಡಗ್, ಹಾಸನ, ಚಿಕ್ಕಮಗಳೂರು, ಶಿವಮೊಗ್ಗದ ಕೆಲವ್ ಬಾಗಗ ಅಲ್ಲದೆ ಈಗನ ತಮಿಳುನಾಡ್‌ನ ಊಟಿ, ಕೊಯಂಬತ್ತೂರು, ಈರೋಡು, ಹೊಸೂರು, ಡೆಂಕಣಿಕೋಟೆ, ಆನೆಕಲ್ ಇಂತ ಬಾಗಂಗ ಗಂಗರ ಆದಿಪತ್ಯಕ್ಕೆ ಒಳಗಾಗಿದ್ದೊ. ತಮಿಳುನಾಡ್‌ನ ಈ ಬಾಗಗಳ್‌ಲಿ ಈಗಲೂ ಕನ್ನಡನ ಮನೆಲಿ ಮಾತಾಡುವ ಕೊಂಗು ವೆಲ್ಲಾಲ ಗೌಂಡರ್‌ಗ ಕೂಡ ಗಂಗವಂಶಸ್ತರಾಗೊಳೊ. ಗಂಗರಾಜರ್ ತಮ್ಮ ದಂಡನಾಯಕರ ದಕ್ಷಿಣಕೆ ಕಳ್ಸಿದ್ದ್, ಮತ್ತೆ ಕಂಚೀಪುರಂದ ರಣಬೈರೇಗೌಡ ಬಡಗದಕಡೇ ಬಂದ್ ಅಂವನ ವಂಸಸ್ತರ್, ದೇವನಹಳ್ಳಿ, ದೇವರಾಯನದುರ್ಗ,

ಚನ್ನರಾಯದುರ್‌ಗ, ಮಾಕಳಿದುರ್‌ಗ, ಸಾವನದುರ್‌ಗ, ನಂದಿದುರ್‌ಗ ಬೇರೆ ಬೇರೆ ಕಡೇ ದುರ್‌ಗಗಳ ಕಟ್ಟಿ ವಿಜಯನಗರ ಸಾಮ್ರಾಜ್ಯದ ಮಾಂಡಲೀಕರಾಗಿದ್ದೊ. ಇವರ ವಂಸನೆ ಬೆಂಗಳೂರು ನಿರ್ಮಾಪಕ ಕೆಂಪೇಗೌಡ. ಕಾಲಚಕ್ರಕ್ಕೆ ಸಿಕ್ಕಿ ಗಂಗರ್ ಚೋಳರ್‌ಂದ ಸೋತ್ (1004 ಕ್ರಿ. ಶ) ತಮ್ಮ ರಾಜ್ಯನ ಕಳ್ಕೊಂಡ. ಎಲ್ಲಾ ವೊಕ್ಕಲಿಗ ಗೌದ್ರ ಮೂಲನು ಗಂಗವಾಡಿಕಾರ–ಗಂಗಡಿಕಾರ–ಗಂಗಟಿಕಾರ ತೇಳಿ ಗೊತ್ತಾದೆ. ಮತ್ತೆನ ದಿನಗಳ್‌ಲಿ ಈ ಸಮುದಾಯ ಸುಮಾರ್ ವಕ್ಕಲಿಗ ಗೌಡ ಕಬರ್‌ಗಾಗುಟು. ಗಂಗರ್ ಶೈವ ಮತ್ತೆ ಜೈನ ದರ್ಮಾನುಯಾಯಿ ಆಗೊಲೊ.

**ಹೊಯ್ಸಳ ಸಾಮ್ರಾಜ್ಯ :** ಗಂಗ ವಂಸದಂವಾದ 'ಅರೆಕಳ್ಳ ತೇಳ್ವ ಗಂಗ ದಂಡನಾಯಕರ ಮಜ್ಜ ನೃಪಕಾಮ (ಕ್ರಿ. ಶ. 977) ಇವಂಗೆ ಪೆರ್ಮನಾಡಿ ತೇಳುವ ಬಿರುದ್ ಇತ್ತ್. ಇವರ ವಂಸಸ್ತ ಹನ್ನೊಂದನೆ ಶತಮಾನಲಿ ಕರ್ನಾಟಕದ ಮಲೆನಾಡ್‌ನ ಒಬ್ಬ ಸಾಮಾನ್ಯ ಪ್ರಜೆ ಒಬ್ಬ ಜೈನ ಮುನಿ ಆಚಾರ್‌ಯ ಸುದ್ದತ್ತ ತೇಳವಂದ ಪ್ರಬಾವಿತ ಆಗಿ ಹೊಯ್ಸಳ ರಾಜವಂಶದ ಸ್ತಾಪಕ ಆದೆ. ಹೊಯ್ಸಳ ರಾಜರ್ ಹಿಂದು ಮತ್ತೆ ಜೈನ ಮತಾವಲಂಬಿಗ ಆಗಿದ್ದೊ. ಹೊಯ್ಸಳರಾಜ ಬಿಟ್ಟಿದೇವ ಕ್ರಿ. ಶ 1117ರ್‌ಲಿ ಚೋಳರಾಜನ ಸೋಲ್‌ಸಿ ತಲಕಾಡ್‌ನ ಹೊಯ್ಸಳ ಸಾಮ್ರಾಜ್ಯಕ್ಕೆ ಸೇರ್‌ಸಿತ್. ಬಿಟ್ಟಿದೇವ ಶ್ರೀರಾಮಾನುಜಾಚಾರ್‌ಯರ ಪ್ರಬಾವಕ್ಕೊಳಗಾಗಿ ಶ್ರೀ ವೈಷ್ಣವ ದರ್ಮನ ಸ್ವೀಕರ್‌ಸಿ ವಿಷ್ಣುವರ್ದನತೇಳಿ ಹೆಸರ್ ತಕಂಡದೆ. ಬೇಲೂರ್‌ಲಿ ಚನ್ನಕೇಶವ ದೇಸ್ತಾನನ ಕಟ್ಟಿ ಶ್ರೀ ವೈಷ್ಣವ ಮತನ ರಾಜದರ್ಮತೇಳಿ ಗೋಷಣೆ ಮಾಡ್ದೆ. ಕಾಲಾನುಕ್ರಮಲಿ ಹೊಯ್ಸಳ ರಾಜ್ಯ ವಿಜಯನಗರ ಸಾಮ್ರಾಜ್ಯದೊಟ್ಟಿಗೆ ಸೇರಿಕಂಡದೆ. ಇದರ್‌ಂದಾಗಿ ಮಲ್‌ನಾಡ್‌ನ ಗೌಡ್ರು ವೈಷ್ಣವರಾಗಿ ಸ್ರಿ ತಿರುಪತಿ ತಿಮ್ಮಪ್ಪನ ಆರಾದಕರಾದವೆ ಹಾಂಗೆ ನಾಮದಾರಿ ಗೌಡ್ರುಗತೇಳಿ ಇಂದಿಗೂ ಕರ್‌ಸಿಕಂಡವೆ.

**ಕೆಳದಿ (ಇಕ್ಕೇರಿ) ನಾಯಕರ್ :** ಕೆಳದಿ ನಾಯಕರ್ ಈಗನ ಶಿವಮೊಗ್ಗದ ಸಾಗರ ತಾಲೂಕುನ 'ಕೆಳದಿ' ಪಟ್ಟಣದವರಾಗೊಳ. ಮೂಲತ ಆಗಿ ಗಂಗವಂಶಸ್ತರಾಗಿದ್ದ್ ಗೌಡ ಮೂಲದವಾದರೂ ಬಸವಣ್ಣನವರ ಪ್ರಬಾವಕ್ಕೊಳಗಾಗಿ ಲಿಂಗದಾರಣೆ ಮಾಡಿದ್ ಶೈವ ಆರಾದಕರ್ ಶೃಂಗೇರಿ ಮಟದ ನೋಡಿಕಣವ್ ಆಗಿದ್ದೊ. ಇವರ ಆಳ್ವಿಕೆ ಕಾಲಲಿ ಸುಮಾರ್ ಗೌಡ ಕುಟುಂಬಗ ಲಿಂಗಾಯಿತ ಮತವಾಲಂಬಿಗಾದೊ. ಸುರುಲಿ ಕೆಳದಿರಾಜವಂಶ ವಿಜಯನಗರ ಸಾಮ್ರಾಜ್ಯದ ಅದೀನ ಮಾಂಡಲೀಕ ರಾಜರಾಗಿದ್ದ್ ವಿಜಯನಗರದ ಪತನದ ಮೇಲೆ (ತಾಳಿಕೋಟೆ ಕದನ 1575) ಸ್ವತಂತ್ರ ರಾಜರಾಗಿ ತಮ್ಮ ರಾಜ್ಯ ವಿಸ್ತಾರಕೆ ಪಣಕಟ್ಟಿದೊ. ತಮ್ಮ ರಾಜಧಾನಿನ ಈಗನ ಸಕಲೇಶಪುರ ತಾಲೂಕುನ ಇಕ್ಕೇರಿಗೆ ಸ್ತಳಾಂತರ್‌ಸಿದೊ.. ವಿಜಯನಗರ ಸಾಮ್ರಾಜ್ಯದ ಅದೀನಲಿ ದಕ್ಷಿಣಕನ್ನಡ ಪುತ್ತೂರು, ವಿಟ್ಲ, ಪಾಣೆಮಂಗಳೂರು, ಬೆಳ್ತಂಗಡಿ, ಸುಳ್ಯ ಮತ್ತೆ ಕೊಡಗ್ ಇಕ್ಕೇರಿ ನಾಯಕರ ಮಾಂಡಲೀಕ ಆಡಳ್ತಕೆ ಒಳಪಟ್ಟಿತ್ತ್.

ಗಂಗ ಸಾಮ್ರಾಜ್ಯದ ಕಾಲಲಿ ಸುರಾದ ಆಡೆಳ್ತ ಪೊದ್ದತಿಯಾದ 'ಊರಗೌಡ–ನಾಡಗೌಡ– ಸೀಮೆಗೌಡ' ಹಾಂಗೆ ಯುದ್ದ ಕಾಲಲಿ ರಾಜ್ಯಕ್ಕೆ ಸೈನ್ಯನ ಒದ್‌ಗ್‌ಸ್‌ವ ಜೊವಾಬ್ದಾರಿನ ಗೌಡ್ರುಗೆ ಗಂಗ, ಚಾಲುಕ್ಯ, ರಾಷ್ಟಕೂಟ, ಹೊಯ್ಸಳ, ವಿಜಯನಗರ ಮತ್ತೆ ಕೆಲದಿ ನಾಯಕರ ಆಳ್ವಿಕೆಲಿ ನಡ್ಡು ಬಾತ್.ಹಿಂಗೆ ಗೌಡ್ರುಗ ಕರ್ನಾಟಕ ಚರಿತ್ರೆಲಿ ದೊಡ್ಡ ಪಾಲ್ ಇವರದೆ ಆಗಿದ್ದ್ ಅದರ ಅಬಿರುದ್ದಿಲಿ ಪಾಲುದಾರರಾಗೊಳ.

**ಗೌಡರ ಪ್ರಸರಣ (ವಲಸೆ) ಕಾಲಲಿ ದಕ್ಷಿಣ ಕನ್ನಡ :** ದಕ್ಷಿಣಕನ್ನಡ ಪಂಡ್‌ನ ಕಾಲಲಿ ತುಳುನಾಡ್‌ತೇಳಿ ಕರ್‌ಕಂಡ್ ಇದ್ದೊ, ಈಗದ ದಲಿತರ್, ಕೊರಗರ್, ಮಾಯಿಲರ್, ಮೇರರ್, ಮಲೆ ಕುಡಿಯರ್, ಮುಗೇರರ್ ವಾಸ ಆಗಿದ್ದೊ. ಇದ್ ಕೊರ್‌ಗರ್ ಮತ್ತೆ ಮಾಯಿಲರ ಆಡಳ್ತಕ್ಕೆ ಒಳಪಟ್ಟಿತ್ತ್. ಈಗಳು ದಕ್ಷಿಣಕನ್ನಡದ ಸುಮಾರ್ ಕಡೆಗಳ್‌ಲಿ ಮಾಯಿಲರ ಕೋಟೆತೇಳುವ ಮೊಣ್ಣುನ ಕೋಟೆಗಳ ಪಳೆಯುಳಿಕೆಗ ಕಂಡ್ ಬಂದವೆ. ಸುಮಾರ್ 2000 ವರ್‌ಸಂದ ಇತ್ತಕೆ ಇತರ ಪ್ರಬಾವಿ ಜಾತ್ಯವು ವಲಸೆ ಬಂದಳ್ದುತ ತಿಳ್‌ದು ಬಂದದೆ. ಕೃಷ್ಣ ಹೆಗ್ಡೆ ಅವರ ಸಂಶೋದನೆ ಪ್ರಕಾರ ಬಂಟ ಸಮುದಾಯದ ಮೂಡಜರ್ ಮದ್ಯಪ್ರಾಚ್ಯ ಮೆಡಿಟೇರಿಯನ್ ಪ್ರಾಂತ್ಯಂದ ಸುರುಗೆ 'ಆಳ್ವಖೇಡ' ತೇಳಿ ಕರ್‌ಕಂಡ್ ಇದ್ದೊ. ಆಲೂಪ–ಆಳ್ವರು ರಾಜವಂಶಸ್ತರ್ (ಕ್ರಿ. ಶ. 200–1500) ಉಡುಪಿ ಮತ್ತೆ ಮಂಗಳೂರು ಕರಾವಳಿ ಪ್ರದೇಶನ ಕ್ರಿ. ಶ 200 ರ್‌ಂದ ಕ್ರಿ. ಶ 450 ಮುಟ್ಟ ಸ್ವತಂತ್ರ ಆಗಿನು ಅದಾಗಿ ಕದಂಬ, ಬನವಾಸಿ, ಹೊಯ್ಸಳ ಮತ್ತೆ ವಿಜಯನಗರ ಸಾಮ್ರಾಜ್ಯಗಳ ಮಾಂಡಲೀಕರಾಗಿ ಆಡಳಿತ ನಡ್‌ಸಿದೊ. ಅವಿಬಾಜ್ಯ ದಕ್ಷಿಣಕನ್ನಡದ ಅರಬೀ ಕಡಲ್‌ದ ಕರಾವಳಿ ಪ್ರದೇಸದ ಕಾಸರಗೋಡ್‌ಂದ ಬೈಂದೂರುವರೆಗೆ ಅಲೂಪರ ಆಳ್ವಿಕೆಗೆ ಒಳಪಟ್ಟಿತ್ತ್. ದಕ್ಷಿಣಕನ್ನಡನ ಆಳಿಕಂಡ್ ಇದ್ದ ಅಲೂಪರ್‌ಗ ಬಂಟ ಸಮುದಾಯಕೆ ಸೇರಿರೂ ಸುಮಾರ್ ಕುಟುಂಬಗ ಉದಾ : ಚೌಟರು, ಬಂಗರು, ಅಜಲರ್, ತೋಲಹರುಗಳ್‌ಲಿ ಹೆಚ್ಚಿನವು ಜೈನ ಮತಾವಲಂಬಿಗ. ಸುಮಾರು ನಾಲ್ಕನೇ ಸತಮಾನಲಿ ಕರ್ನಾಟಕ ಬಯಲು ಸೀಮೆಂದ ವಲಸೆ ಬಂದ ಸೆಟ್ಟಿ, ಜೈನ್, ಬಲ್ಲಾರರ್ ಕೂಡಾ ದಕ್ಷಿಣಕನ್ನಡಲೇ ನೆಲೆನ ಕಂಡೊ. ಇವೆಲ್ಲಾ 'ಮಾತೃ ಪ್ರದಾನ ಸಂತತಿ' ಕ್ರಮನ ಅವಲಂಬ್‌ಸುವೆ.

ಕ್ರಿ. ಶ 800ರ್‌ಂದ ಕ್ರಿ. ಶ. 1400 ನೆಡುಲಿ ದಕ್ಷಿಣಕನ್ನಡ ಮಲ್ನಾಡು ಪ್ರದೇಸಗಳ್‌ಲಿ ದಾರ್ಮಿಕ ಮತ್ತೆ ರಾಜಕೀಯ ಬಂಡಾಯಗ ನಡ್ತ್. ಶ್ರೀ ಶಂಕರಾಚಾರ್‌ಯರ್ ದಕ್ಷಿಣಕನ್ನಡ ಮತ್ತೆ ಮಲ್ನಾಡ್‌ನ ಎಲ್ಲಾ ದೇಸ್ತಾನಗಳ ಬೇಟಿ ಮಾಡಿ ಹಿಂದೂ ದರ್ಮದ ಶೈವ ಸಂಪ್ರದಾಯನ ಪುನರ್‌ಜೀವಗೊಳ್ಸಿ ಪ್ರಚಲಿತಲಿದ್ದ ಜೈನ ಸಂಪ್ರದಾಯನ ಬೆರ್‌ಸುವ ಪ್ರಯತ್ನ ಮಾಡಿದ್ ಶೃಂಗೇರಿಲಿ ಶಾರದಾ ಪೀಟನ ಸ್ತಾಪುಸಿದೊ. ಕ್ರಿ. ಶ 12ನೇ ಶತಮಾನದ ಸುರುಲಿ ರಾಮಾನುಜಾಚಾರ್‌ಯರ ಪ್ರಬಾವಂದ

ಹೊಯ್ಸಳ ಸಾಮ್ರಾಜ್ಯಲಿ ಶ್ರೀ ವೈಷ್ಣವ ದರ್ಮ ರಾಜದರ್ಮ ಆತ್. ಹೊಯ್ಸಳ ಮತ್ತೆ ವಿಜಯನಗರದ ಆಳ್ವಿಕೆಲಿ ಉಡುಪಿ ಮದ್ವಾಚಾರ್ಯರಿಂದಾಗಿ ವೈಷ್ಣವ ದರ್ಮಕ್ಕೆ ಪ್ರೇರಣೆ ಸಿಕ್ಕಿತ್. ಕೆಳದಿ (ಇಕ್ಕೇರಿ) ನಾಯಕರ್ ಲಿಂಗದಾರಣೆ ಮಾಡಿ ಲಿಂಗಾಯತ ದರ್ಮನ ಅನುಸರಿಸಿ ಶೃಂಗೇರಿ ಮಟದ ಸಂಯೋಗಂದ ಶೈವ ಸಂಪ್ರದಾಯನ ನೇಚಿ ಹಿಡಿವ ಪ್ರಯತ್ನನ ಮುಂದುವರ್‌ಸಿದೊ.

ಈ ಪರಿಸರಲಿ ನಿವಾಸಿಗಳಾದ ಗೌಡ್ರು ಕೂಡ ಇದರ್‌ಲಿ ಬಾಗಿದಾರರಾಗಿ ತಮ್ಮ ಮತಾವಲಂಬನೆಗಳ ಕಾಲಕ್ಕಣುವಾಗಿ ಬದಲಾಯಿಸಿ ಕಣಕಾತ್.

ಕರಾವಳಿ ಬಂದರುಗಳ್‌ಂದ ಎರಡನೇ ಸತಮಾನಂದ ರೋಮ್‌ನೊಟ್ಟಿಗೆ ಯಾ ಏಳನೇ ಶತಮಾನಂದ ಅರಬರ ಮುಕಾಂತರನೂ ಅಂತರಾಷ್ಟೀಯ ವ್ಯಾಪಾರ ನಡ್‌ತ್. ಹೊಯ್ಸಳ ಮತ್ತೆ ವಿಜಯನಗರದ ಹೊತ್ತುಲಿ ಅಂತರಾಷ್ಟೀಯ ವ್ಯಾಪಾರ ವೆವಹಾರಗಳಿಗೆ ಹೆಚ್ಚಿನ ಒತ್ತು ಸಿಕ್ಕಿತ್. ಆಲೂಪರು ಮತ್ತೆ ಬಲ್ಲಾಳರ್ ವಿಜಯನಗರದ ಮಾಂಡಲೀಕರಾದೊ. ವಿಜಯನಗರ ಸಾಮ್ರಾಜ್ಯಕ್ಕೆ ಈ ಪ್ರದೇಶ ಹೆಚ್ಚಿಗೆ ಬೇಕುಂತ ಕಂಡ್ ಬೇಕಲ್, ಕುಂಬ್ಳೆ, ಮಂಗಳೂರು, ಬಾರಕೂರು ನಂತ ಬಂದರುಗ ಪಾಶ್ಚಿಮಾತ್ಯ ಮತ್ತೆ ಚೀನ ದೇಶಗಳೊಟ್ಟಿಗೆ ಆಮದು ಮತ್ತೆ ರಫ್ತು ಬೆಳ್ತು. ಇಟಲಿನ ಪ್ರವಾಸಿ ವರ್‌ತಮ 1507 ರ್‌ಲಿ ಮಂಗ್ಳೂರ್‌ಗೆ ಬಾಕನ ಅರ್‌ವತ್ತ್ ಹಡ್ಗ್‌ಗ ಒಳ್ಳ ದರ್‌ಜೆನ ಅಕ್ಕಿ ಮತ್ತೆ ಸಂಬಾರ ಸಾಮಾನ್‌ಗಳ ತುಂಬಿದ್ ರಫ್ತು ಮಾಡಿಕೆ ತಯಾರ್ ಇತ್ತುತ ಬರ್‌ದುಟು.

ಈ ಹೊತ್ತ್‌ಲಿ ರಾಜರ ಸೈನ್ಯಲಿ ಹಾಂಗೇ ಶ್ರೀಮಂತರ ವ್ಯವಹಾರಕೆ ಕುದುರೆಗ ಹೆಚ್ಚಿಗೆ ಉಪಯೋಗ ಆಕಂಡಿತ್ತ್.ಆದರೆ ಕುದುರೆಗಳ ಸಂತಾನೋತ್ಪತ್ತಿ ಮಾಡ್‌ವ ಕ್ರಮ ಭಾರತಲಿ ಗೊತ್ತಿತ್ಲೆ. ಹಂಗಾಗಿ ಕುದುರೆಗಳ ಪೂರ ಪರ್ಷಿಯಾಂದ ಆಮದು ಮಾಡ್ತಾ ಇದ್ದೊ. ಕರಾವಳಿನ ಬಂದರುಗಳ್‌ಂದ ಬಯಲು ಸೀಮೆನ ರಾಜ್ಯಕೆ ಆಮದು ಮತ್ತೆ ರಫ್ತು ಸರಂಜಾಮುಗಳ ತಕಂಡ್ ಹೋಕೆ ಬಿಸ್ಲೆ, ಶಿರಾಡಿ, ಬಂಗಾಡಿ ಕಡ್ತಿಕಲ್ಲ್, ಕೊಡಗ್‌ನ ತೊಡಿಕಾನ ಇಂತ ಕಳ್ಳ ದಾರಿಗಳ್‌ಂದ ಎತ್ತ್‌ನ ಗಾಡಿನ ಕೆರಾವಾನ್‌ಲಿ ಸಾಗ್‌ಸತಿದ್ದೊ. ತೇಳಿದ್ ಅರಬ್ ಪ್ರವಾಸಿಗಾದ ಬತೂತ ಮತ್ತೆ ಅಬ್ದುಲ್ ರಜಾಕ್ ನಮೂದಿಸಿಯೊಳ.

ವಿಜಯನಗರದ ಸಾಮ್ರಾಜ್ಯ ತಾಳಿ ಕೋಟೆನ ಕದನ (1575 ಎ. ಡಿ) ಲಿ ಸೋತ್ ತಾಕತ್‌ನ ಕಳ್‌ಕಂಡ ಮೇಲೆ ಅವರ ಮಾಂಡಲೀಕರಾದ ಕೆಳದಿ (ಇಕ್ಕೇರಿ) ನಾಯಕರ್‌ಗೆ ದಕ್ಷಿಣಕನ್ನಡದ ಮೇಲೆ ತಮ್ಮ ಹತೋಟಿನ ಮುಂದುವರ್‌ಸುದು ಅನಿವಾರ್ಯ ಆಗಿತ್ತ್. ಆದರೆ ಇಕ್ಕೇರಿ ನಾಯಕರ್‌ಗೆ ಈ ದಿಕ್ಕ್‌ಲಿ ಕರಾವಳಿ ಪ್ರದೇಶದ ಅಲೂಪರ್‌ಂದ ಪ್ರಬಲ ವಿರೋದ ಬಾವ ಸಾದ್ಯತೆ ಇತ್ತ್.ಹಿಂದೆನ ಎರ್‌ಡೂ ಮಾಂಡಲೀಕ ರಾಜವಂಶಗ ಸೊತಂತ್ರ ಆಗಿ ತಮ್ಮ ತಮ್ಮ ಗಡಿಗಳ ಬೆಳ್ಸುವ ಅಂಬೆರ್‌ಪುಲಿದ್ದೊ. ಇಕ್ಕೇರಿ ನಾಯಕರ ಅದೀನಲಿದ್ದ ಪುತ್ತೂರು, ಸುಳ್ಯ, ಬೆಳ್ತಂಗಡಿ ಸೀಮೆಗಳ್‌ಲಿ ಅವರ ಅದಿನರಾಗಿ ಸ್ತ್ರೀ ಪ್ರದಾನ ಸಂತತಿನ ಅಸ್ಪ ಬಲ್ಲಾಳ್‌ರ್ ಆಳತಿದ್ದೊ.

ಬೊಯ್ಲ್ ಸೀಮೆನ ನಾಯಕರ್‌ಗೆ ತಮ್ಮ ಸೈನ್ಯಕೆ ಬೇಕಾದ ಕುದುರೆಗಳ ಪರ್ಷಿಯಾಂದ ಆಮದು ಮತ್ತೆ ಇತರ ಸಾಮಾನ್‌ಗಳ ರಫ್ತು ಇತ್ಯಾದಿ ಅಂತರಾಷ್ಟೀಯ ವಾಣಿಜ್ಯ ವೆವಹಾರಕೆ ದಕ್ಷಿಣಕನ್ನಡದ ಮೇಲೆ ಮತ್ತೆ ಹತೋಟಿ ಇಸಿಕಂಬ ಅವಶ್ಯಕತೆ ಇತ್ತ್. ಅದರಾಂಗೆ ಶೃಂಗೇರಿ ಮಟ ದಕ್ಷಿಣಕನ್ನಡಲಿ ಚಾಲ್ತಿಲಿದ್ದ ಜೈನ ಮತ್ತೆ ವೈಷ್ಣವ ದರ್ಮನ ಓಡ್ಸುವ ವಿಚಾರ ಇದ್ದ್ ಇಕ್ಕೇರಿ ನಾಯಕರ್‌ಗು ಶೃಂಗೇರಿ ಮಟದ ನೊಡುಲಿ ಒಳ್ಳ ಯೋಜನೆ ಮಾಡಿಕಂಡೊ.

ಇಕ್ಕೇರಿ ಸಂಸ್ತಾನದ ಚಿಕ್ಕಮಗಳೂರು, ಹಾಸನ ಮತ್ತೆ ಕೊಡಗ್‌ಲಿ ನೆಲ್ಸಿದ್ದ, ಇಕ್ಕೇರಿ ನಾಯಕರ್‌ಗೆ ರಕ್ತ ಸಮ್ಮಂದಿಗ ಆದ ಮತ್ತೆ ಶೈವ ಸಂಪ್ರದಾಯಸ್ತರಾದ ಗೌಡರ ಆಯ್ದ ಕುಟುಂಬಗಳ ಒತ್ತರೆ ದಕ್ಷಿಣಕನ್ನಡಕ್ಕೆ ವಲ್‌ಸೆ ಕಳ್‌ಸ್‌ವ ಏರ್ಪಾಡಾತ್. ಗೌಡ್ರುಗ ಬತ್ತದ ಕ್ರಿಸಿಲಿ ಪರಣಿತರ್, ಕೆಳದಿಯರಸರ ನಂಬಿಗಸ್ತರ್, ಶೈವ ಮೂಲದ ಆದಿನಾತ ಪಂತಕೆ ಸೇರ್‌ದವು, ಕಾಲ ಬೈರವೇಶ್ವರ ನ ಆರಾದಕರ್, 'ಪಿತೃಪ್ರದಾನ' ಸಂತತಿಯವು.ಹಿಂಗಾಗಿ ದಕ್ಷಿಣಕನ್ನಡಲಿ ಶೈವ ಸಂಪ್ರದಾಯನ ಹಬ್ಬುಸಿಕೆ ಮತೆ ಕೆಳದಿಯರಸರ ಸಾರ್‌ವಬೌಮತ್ವನ ಕಾಪಾಡಿಕೆ ಗೌಡ್ರುಗಳ ಒತ್ತರೆ ಕೆಳದಿ (ಇಕ್ಕೇರಿ) ಅರಸರ ದಂಡನಾಯಕರ ನೇತೃತ್ವಲಿ ದಕ್ಷಿಣಕನ್ನಡಕೆ ಕಳ್ಸಿಕೊಟ್ಟ. ಹಿಂಗೆ ಬಂದಂತ ಲಿಂಗಾಯತ ಮೂಲದ ದಂಡನಾಯಕರ್‌ಲಿ ಕೂಜುಗೊಡು ಕುಟುಂಬದವರ ಮೂಲಪುರುಸ ತಿಮ್ಮನಾಯಕ, ಬಲ್ನಾಡ್‌ನ ದಂಡನಾಯಕ, ಉಲ್ಲಾಲ್ತಿ, ಕದ್ರಿ, ವಿಟ್ಲಲ, ಕಂದ್ರಪಾಡಿಲಿ ನೆಲೆಕಂಡ ಪುರುಷ ಜೋಗಿಗ, ಬಳ್ಳಡ್ಕದ 'ಕಬರ್' ಬೊಳಿಗಳ ಮೂಲ ಪುರುಷ ಕುಮಾರಸ್ವಾಮಿ ಮುಕ್ಯ ಆಗಿದ್ದೊ.

ಇದ್ಕೆ ಸರಿಗಟ್ಟಾಗಿ ಗೌಡ್ರು ಸುಬಕಾರ್‌ಯಗಳ್‌ಲಿ ಊರಗೌಡನ ಒಕ್ಕಣೆ(ಆಚರಣಾ ಘೋಷಣೆ) ಈ ರೀತಿ ಉಟ್ಟು. 'ಅರಮನೆಯವರೆ (ಇಕ್ಕೇರಿ ರಾಜ ಕುಟುಂಬದವರೆ) ಗುರುಮನೆಯವರೆ (ಶೃಂಗೇರಿ ಮಟದವರೆ) ಹತ್ತ್ ಕುಟುಂಬ ಹದಿನೆಂಟ್ ಗೋತ್ರದ ಬಂದುಬಾಂದವರೆ, ಕಟ್ಟಮನೆ, ಮಾಗಣೆಮನೆ ಮತ್ತೆ ಇಲ್ಲಿ ಸೇರ್‌ದ ನೆಂಟರಿಸ್ಟರಲ್ಲೂ, ಬಂದು ಕೂಡಿರುವ ನೆಂಟರಿಸ್ಟರಲ್ಲೂ ಕೇಳಿಕಂಡ್ ನಿಮ್ಮೆಲ್ಲರ ಅನುಮೋದನೆನೊಟ್ಟಿಗೆ ಸುಬ ಕಾರ್‌ಯನ ನಡೆಸುವಂತೇಳುವೇ...'

ಇದರ್‌ಂದ ಸ್ಪಸ್ಟವಾದು ಏನ್ ತೇಳ್ರೆ ಇಂದ್‌ಗೂ ಈ ಗೌಡ ಸಮುದಾಯ ತಮ್ಮ ರಕ್ತ ಸಮ್ಮಂದಿ ಮತ್ತೆ ಪೋಷಕರಾದ ಕೆಲದಿ (ಇಕ್ಕೇರಿ) ನಾಯಕರ್‌ಗು, ಶೃಂಗೇರಿ ಮಟದ ಗುರುಗಳಿಗೂ ಕೈಮುಗ್ದ್ ಸುಬ ಕಾರ್‌ಯಗಳ ಸುರುಮಾಡ್‌ವೆ. ಕೆಲದಿ ಕವಿ ಲಿಂಗಣ್ಣ ಅಂವನ ಹಳೆಗನ್ನಡ 'ನೃಪವಿಜಯ' ಕಾವ್ಯಲಿ ಈ ಗೌಡ್ರ ವಲಸೆನ ಒಂದ್ ಸಾಮ್ರಾಜ್ಯದ ಚಕ್ರವರ್‌ತಿನ ದಂಡಯಾತ್ರೆತೇಳಿದ್ ವಿವರ್‌ಸಿಟು.




ಗೌಡ್ರುಗಳ ವಲಸೆ ಪ್ರಕ್ರಿಯೆ ತುಳುನಾಡ್‍ಗೆ ಕೆಳದಿಯರಸರ ಜಾತಿ ಮೂಲ ಕಾರಣವಾಗುಟು ತೇಳಿದ್ ಡಿ. ಜಿ. ನಡ್ಕರ ಅಬಿಪ್ರಾಯ ಕೂಡಾ ಆಗುಟು. ಗೌಡ್ರುಗ ಕೆಲದಿ ಅರಸರ ಕಾಲಲಿ ಬಹುಸಂಕೆಲಿ ವಲಸಿಗರಾಗಿದ್ದೊ ತೇಳ್ದಕೆ ಕೊಡುವ ಕಾರಣ ಇವು ಪರಸ್ಪರ ಒಂದೇ ಜಾತಿ ಮೂಲದವ್ ತೇಳಿಗೊತ್ತಾದೆ. ಕೆಲದಿಯರಸರ್ ಗಂಗ ಒಕ್ಕಲಿಗ, ಮೂಲದ ಲಿಂಗಾಯತ ಮತಸ್ತರಾಗಿ ಗುರ್‌ತತುಸಿಕೊಂಡೊವು. ಈ ಬಗ್ಗೆ ಶ್ರೀ ಪೂವಪ್ಪಕಣಿಯೂರವು ತಮ್ಮ ಕೃತಿ 'ಮೌಕಿಕ ಸಂಕತನ'ದಲ್ಲಿ ವಿವರವಾಗಿ ಚರ್‌ಚಿಸುವೆ. ಲಿಂಗಾಯತ ಮತಸ್ತರ್ ಗೌಡ್ರಾಗಿ ಪರಿವರ್‌ತನೆ ಆದ್ ಸುಳ್ಯ ಮತ್ತೆ ಹರಿಹರ ಪಲ್ಲತಡ್ಕ ಪರಿಸರಲಿ.

ಸುಳ್ಯದ ಬಳ್ಪ ತ್ರಿಶೂಲಿನಿ ದೇಸ್ತಾನದ ಹಕ್ಕಲೆನ ಕ್ರಿ. ಶ. 1572 ರ ಶಾಸನ ಒಂದ್ ಕೆಳದಿ ನಾಯಕ ರಾಜವಂಶದ ಸ್ತಾಪಕರಾದ ಚೌಡಪ್ಪ ಮತ್ತೆ ಬದ್ರಪ್ಪರ ಹೆಸರ್‌ನೊಟ್ಟಿಗೆ 'ಗವಡ' ಉತ್ತರ ಪದನ ಒತ್ತಿ ಹೇಳ್ದೆ. ಕೆಳದಿ ಸದಾಶಿವ ನಾಯಕನ (ಕ್ರಿ. ಶ 1544–1575) ಕಾಲದ ಶಾಸಲಿನಲಿ ಚವುಡಗೌಡ್ರು ಮಕ್ಕ, ಸದಾಶಿವ ನಾಯಕರ್ ಕುಕ್ಕೆ ಸುಬ್ರಾಯದೇವುರ್‌ಗೆ ಅಮೃತ ಪಡಿಗಾಗಿ ಇಮಾರು ಗದ್ದೆನ ರಾಜ ಕಂದಾಯ ಬಾಕಿ ಮಾಡಿದ್ ಸುಬ್ರಹ್ಮಣ್ಯ ದೇಗುಲಕೆ ದತ್ತಿ ಬುಟ್ಟಿತ್ತ್ ತೇಳಿ ವಿವರಿಸಿದೆ. (ಮೈಸೂರು ಗೆಜೆಡಿಯರ್ 1931 ನಂ : 347–48) ಕೆಳದಿಯರಸರ್ ಗೌಡ ಸಮುದಾಯಕೆ ಸೇರ್‌ದವ್. ವಿಜಯನಗರದರಸರ ಮಾಂಡಲೀಕರಾಗಿ ತುಳುನಾಡ್‍ನ ಅದಿಕಾರ ಕೆಳದಿಯರ್‌ಸರ್‌ಗೆ ಬಂದಿತ್ತ್.

ಕೆಳದಿನ ಗೌಡ ಮೂಲದ ಒಂದ್‌ನೇ ವೆಂಕಟಪ್ಪ ನಾಯಕನ (ಕ್ರಿ. ಶ 1713) ದಾಳಿನ ಪರಿಣಾಮಂದಾಗಿ ತುಳು ನಾಡ್‍ನ ಜೈನ ಬಲ್ಲಾಳರ್ ಶಿಶಿಲ, ಬೆಳ್ಳಾರೆ, ಕಾಂತಮಂಗಲ, ಬದ್ಯಡ್ಕ, ಕುಂಬ್ಳೆ, ಕಾಸರಗೋಡು ಪ್ರದೇಶಗಳ್‍ನ ಕಳ್ಕೊಂಡೊ. (ಗಣಪತಿರಾವ್ ಐಗಲ್ 2004). ವಿಜಯನಗರದರಸರ ಸದಾಶಿವರಾಯ ಕೆಳದಿನ ಅರಸ ಸದಾಶಿವನಾಯಕಂಗೆ ಇಡೀ ತುಳು ನಾಡ್‌ನ್‌ನ ಬುಟ್ಟುಕೊಟ್ಟು (ಕೆ. ಪಿ. ರಮೇಶ 1978–104) ಹೊಯ್ಸಳ ಮತ್ತೆ ವಿಜಯನಗರದ ಕಾಲಲಿಲಿ ಜೈನರ್ ಮತ್ತೆ ಮಾದ್ವರ್ ಪ್ರಸಿದ್ದಿಗೆ ಬಂದೊ.ಬಂಗೇರ ಇಂತೆಲ್ಲ ಮಾಂಡಲೀಕ ಅರಸರ್‌ಗೆಗೆ ಸಹಾಯಕರಾಗಿ ಸುಮಾರ್ ಬಲ್ಲಾಳರಿದ್ದೊ. ಒಕ್ಕಲಿಗ ಮೂಲ ಶೈವಮತೀಯ ಕೆಳದಿಯರ್‌ಸರ ಸಂದರ್‌ಬದ ತುಳು ನಾಡ್‌ಲಿ ಈ ಜೈನ ಬಲ್ಲಾಳರ್ ನಾಸ ಆದೊ (ಕೆ. ವಿ. ರಮೇಶ್– 1978) ತೇಳಿ ಚಾರಿತ್ರಿಕ ಸಂಶೋದಕರ್ ನಮೂದಿಸಿಯೊಳೊ.

ಸುಳ್ಯ ಮತ್ತೆ ಪುತ್ತೂರು ಮಾಗಣೆಗಳ 'ಮಾತೃ ಪ್ರದಾನ ಸಂತತಿ'ನ ಅಪ್ಪ ಬಲ್ಲಾಲ್ತಿಯರ್ ಆಳುತ್ತಿದ್ದೊದ್ದೊಂತೇಳಿನೂ ಇವರ ಬೂ ಆಸ್ತಿ ಅದಿಕಾರ ದೇಸ್ತಾನಗಳ ಉಸ್ತುವಾರಿ ಇತ್ಯಾದಿಗ ನಾವುಗೆ ಬಲ್ಲಾಳರ ಕಾಲಂದಳೆ ಬಂದುಟುತೇಳುವಂತದ್ ಗೌಡ ಮನೆತನಗ ಮೌಕಿಕ ಸಂಕತನಗಳ್‌ಂದ ಸಾಕ್ಷಿಯಾಗಿ ನಿರೂಪ್‌ಸ್‌ವೆ.

ತಲಕಾಡ್‍ನ ಗಂಗರಸರ್‌ಗೂ ತುಳುನಾಡ್‍ನೆ ಪ್ರಾಚೀನ ಅಲೂಪರಸರ್‌ಗೂ ರಾಜಕೀಯ ಸಮ್ಮಂದ ಇತ್ತ್ ತೇಳ್‌ದಕೆ ಇತ್ತೇಳು ಕೊಂಬಾರು ಬೋಳ್ನಡ್ಕದ ವೀರಗಲ್ಲ್‌ನ ಸೊರೂಪ ಲಕ್ಷಣಗ, ಗಂಗರ ಕಾಲದ ವೀರಗಲ್ಲ್‌ಗೆ ಸಾಮ್ಯತೆ ಉಟ್ಟು. (ಪೂವಪ್ಪ ಕಣಿಯೂರ್ 2009). ಗಂಗರ್ ಕೊಡಗ್‌ನ ಮತ್ತೆ ಚಿಕ್ಕಮಗಳೂರ್‌ನ ಆಳ್ದ ಕುರ್‌ತಾಗಿ ಶಾಸನಾದಾರಗ ಒಳೊ. (ಕೆ. ವಿ. ರಮೇಶ್ 1984) ಗಂಗರಸರು ಕ್ರಿ. ಶ. 350 ರ್‌ಂದಲೇ ಜೈನ ಮತ್ತೆ ಶೈವ ಸಂಪ್ರದಾಯಸ್ತರಾಗಿದ್ದೊ. ಗಂಗರಾಜ ಚಾವುಂಡರಾಯ ಶ್ರವಣಬೆಳಗೊಳಲಿ ಗೊಮಟೇಶ್ವರನ ವಿಗ್ರಹನ ಪ್ರತಿಸ್ಟಾಪಿಸಿತ್. (ಕ್ರಿ. ಶ 978–995) ಈ ಹೊತ್ತುಲೆ ದಕ್ಷಿಣಕನ್ನಡಲಿನು ಜೈನ ಹಬ್ಬಿತ್ತ್. ಅಳರಸರ್, ಬಲ್ಲಾಳರ್ ಇದರ್‌ರ್‌ದ ಪ್ರಬಾವಿತರಾದೊ.

ಗೌಡರ ಪ್ರಸರಣದ ಬಗ್ಗೆ ದಕ್ಷಿಣಕನ್ನಡಲಿ ಪ್ರಚಲಿತಲಿರ್‌ವ ಬೂತಾರಾದನೆನ ಪಾಡ್ದನಲಿನು ಮೌಕಿಕ ಇತಿಯಾಸಂದಳು ವಿವರಗ ಸಿಕ್ಕುವೆ. ಸುರೂನ ವಲ್‌ಸೆ ಕ್ರಿ. ಶ. ಸುಮಾರ್ 1530 ರ್‌ಲಿ ಈಗನ ಸಕಲೇಶಪುರ ತಾಲ್ಲೂಕ್‍ನ ಕೆಂಚಮ್ಮನ ಹೊಸಕೋಟೆನ ಗೌಡ ಸಮುದಾಯದವು ಇಕ್ಕೇರಿ ಸಂಸ್ತಾನದ ದಂಡನಾಯಕ ಆದ ಲಿಂಗಾಯತ ಮತಾವಲಂಬಿ ತಿಮ್ಮನಾಯಕನ ನೇತೃತ್ವಲಿ ಸುಬ್ರಹ್ಮಣ್ಯಕೆ ಕಳ್‌ಸಿ ಬಾಳುಗೋಡುನ ರತ್ನಪುರದ ಬಲ್ಲಾಳನ ಕೊಂದವೆ. ಈ ಪರಿಂದ ಗೌಡ್ರುಗ ಸುಬ್ರಹ್ಮಣ್ಯ, ಹರಿಹರ ಪಲ್ಲತಡ್ಕ, ಕೊಲಮೊಗ್ರು, ಸುಬ್ರಹ್ಮಣ್ಯ ದೇಸ್ತಾನದ ಸಂಕೇಶ ಅದಿಕಾರಿ (ಆಡಳಿತಾದಿಕಾರಿ) ಆಗಿ, ಇಕ್ಕೇರಿ ನಾಯಕನ ಪ್ರತಿನಿದಿ ಆಗಿದ್ ನಿತ್ತವೆ. ತಿಮ್ಮನಾಯಕ ಕಜ್ಜೋಡಿ ತೇಳ್‌ವ ಗೌಡ ಕುಟುಂಬದ ಗೂಡೆನ ಮೊದ್ವೆ ಆಗಿದ್ ಪ್ರತಿಸ್ಟಿತ ಕೂಜುಗೋಡು ಕುಟುಂಬದ ನಾಯರ್ ಗೋತ್ರದ ಮೂಲಪುರ್‌ಸ ಆದೆ. ಮುಂದೆ ಕೂಜುಗೋಡು ಮನೆ ಸುಳ್ಯ ಪರಿಸರದ ಗೌಡ ಸಮುದಾಯಕ್ಕೆ ಕಟ್ಟೆ ಮನೆ ಆದೆ.

ಇದಾದ ಕೆಲಹೊತ್ತ್‌ಲಿ ಇನ್ನೊಂದ್ ಕೆಲವ್ ಗೌಡ ಕುಟುಂಬಗ ಇಕ್ಕೇರಿ ದಂಡನಾಯಕನ ನೇತೃತ್ವಲಿ ಕುಕ್ಕೆ ಪಟ್ಟಣಕೆ (ಸುಬ್ರಹ್ಮಣ್ಯ) ಬಂದ್ ಇಳ್‌ದವೆ. (ಅಂದಾಜು ಕ್ರಿ. ಶ. 1535) ಆ ಹೊತ್ತುಲಿ ಕುಕ್ಕೆ ಪಟ್ಟಣ ಆಗನ ಮಟ್ಟದ ದೊಡ್ಡ ಪಟ್ಟಣ ಆಗಿ ಸುಬ್ರಹ್ಮಣ್ಯ ದೇಸ್ತಾನದ ಸುತ್ತ ಬೆಳ್ದಿತ್ತ್. ಇವ್‌ಕೆ ಇಕ್ಕೇರಿ ರಾಜರುಗಳ್‌ಂದನು, ಶೃಂಗೇರಿ ಮಟಂದಳು ಅಪ್ಪಣೆ ಕೊಟ್ಟಿದ್ದೊ. ಇಕ್ಕೇರಿ ರಾಜರ ಆಡಳ್ತಕೆ ಒಳಪಟ್ಟ ಕ್ರಿಸಿ ಬೂಮಿಗಳ, ದೇಸ್ತಾನದ ಉಸ್ತುವಾರಿ ಅದಿಕಾರನ ಗೌಡ ಸಮುದಾಯಕೆ ಹಸ್ತಾಂತರ್‌ಸೊಕುತೇಳಿ ಬಲ್ಲಾಳರ್‌ಗೆ ಹೇಳಿದ್ದೊ.

ಇಕ್ಕೇರಿ ಸಂಸ್ತಾನಂದ ಬಂದಿರುವಂತ ದಂಡನಾಯಕ ಮತ್ತೆ ಅಂವನ ತಂಗೆ ಉಲ್ಲಾಲ್ತಿ ತಮ್ಮವ್‌ಕೆ ನೆಲೆಯಾಕೆ ಕುಕ್ಕೆ ಪಟ್ಟಣನೆ ಸರಿಯಾದ ಜಾಗೆತೇಳಿ ನಿರ್ದರ್‌ಸಿ ಸುಬ್ರಹ್ಮಣ್ಯ ದೇಸ್ತಾನದ ದ್ವಜನ ತಮ್ಮ ಬಿಲ್ಲ್‌ಂದ ಅಂಬು ಬುಟ್ಟ್ ಕತ್ತರ್‌ಸಿ ಕೆಳಗೆ ಬೀಳ್ಸುವೆ. ಆ ಕಾಲಲಿ ಅಲ್ಲಿ ಸುರುಗೆ

ನೆಲೆ ನಿತ್ತಿದ್ದ ಅವ್ಕೆ ಶರಣಾಕುತನು ಇಲ್ಲರೆ ಯುದ್ದಕ್ಕೆ ಬಂದ್ ಯುದ್ದಕೆ ಕರೆವಂಗೆ ಇತ್ತ್. ಈ ಕಾಲಕೆ ಅಲ್ಲಿ ಸುರುಗೆ ನೆಲೆ ನಿತ್ತಿದ್ದ ದೇಸ್ತಾನದ ಆಡಳ್ತಾದಿಕಾರಿ ತಿಮ್ಮನಾಯಕ ಹೊಸ್ತಾಗಿ ಬಂದಿದ್ದ ದಂಡನಾಯಕನ ವಿಚಾರ್‌ಸಿಕಾಕನ ಅಂವ ನಮ್ಮ ಜೆನಕೆ ನೆಲೆ ಬೇಕಾಗಿಟೂತೇಳಿ ಇಲ್ಲಿನ ಅದಿಕಾರನ ನಾವ್ಗೆ ಬುಟ್ಟುಕೊಡಕುಂತ ಈ ಬಗ್ಗೆ ತಮ್ಮಲ್ಲಿ ಅಪ್ಪಣೆ ಇರ್‌ದಾಗಿ ತಿಳ್ಸಿದೆ. ಈ ಹೊತ್ತುಗೆ ಇತ್ತಂಡದವುಕೆ ನಾವ್ ಒಂದೇ ಮೂಲದವು ಮತ್ತೆ ಇಕ್ಕೇರಿ ನಾಯಕರ್ ಮತ್ತೆ ಶೃಂಗೇರಿ ಮಟದವು ನಮ್ಮ ಕಳ್ಸಿರ್‌ವ ಬಗ್ಗೆ ಮನದಟ್ಟಾದೆ. ನಾವು ಏ ಮುಂದೆಳೆ ಇಲ್ಲಿಗೆ (ಕುಕ್ಕೆ ಪಟ್ಟಣಕ್ಕೆ) ಬಂದಿದ್ದ್, ನೆಲೆನ ಕಂಡ್ ಕೊಂಡೊಳೊದಾಗಿ, ಹೊಸಬರ್‌ಗೆ ಇಲ್ಲಿ ನೆಲೆಯಿಲ್ಲೆಂತೇಳಿನೂ ಬದಲ್‌ಗೆ ಹೊಸ್‌ಬರ್ ಪುತ್ತೂರುನ ಮಹಾಲಿಂಗೇಶ್ವರ ದೇವರ್‌ಲಿಗೆ ಹೋಗಿ ನೆಲೆಕೋರುವಂಗೆ ಸೂಚನೆ ಕೊಟ್ಟವೆ. ದಂಡನಾಯಕ, ದಂಡನಾಯಕಿಯರ್ ಸೂಚನೆಗೆ ಒಪ್ಪಿ ನಾವುಗೆ ಈ ಬಗ್ಗೆ ಒಂದ್ ಪರಿಚಯ ಪತ್ರ ಮತ್ತೆ ಕುರುಹು ಕೊಡುಕೂಂತೇಳಿ ಕೇಳಿಕಾಕನ ಕಾಗಡೆ ಬಿದ್ದಿರ್‌ವ ದ್ವಜೆನ ಕುರುಹಾಗಿ ತೆಕಂಡ್‌ಹೋಕೆ ಹೇಳ್ದರ್‌ಂದಾಗಿ (ಇದರ್‌ಂದಾಗಿ ಇಂದ್‌ಗು ಕೂಡಾ ಸುಬ್ರಹ್ಮಣ್ಯಲಿ ದ್ವಜ ಮತ್ತೆ ದ್ವಜ ಸ್ತಂಬ ಇಲ್ಲೆ) ಕಾಜುಕುಜುಂಬನೆಂಬ ಪರಿಚಾರಕ ದ್ವಜನ ಹೊತ್ತ್‌ಕಂಡ್ ಪುತ್ತೂರುಗೆ ಬಂದ್ ಮಹಲಿಂಗೇಶ್ವರ ದೇವ್ರುಗೆ (ಇಲ್ಲಿ ಪುತ್ತೂರಿನ ಮಾಂಡಲೀಕ ಬಂಗರಸತೇಳಿ ಗೊತ್ತಾದೆ) ಸನ್ನದು ಮತ್ತೆ ಕುರುಹುನ ತೋರ್‌ಸಿಕಾಕನ ದೇವ್ರ್ (ಬಂಗರಸರ್) ತನ್ನ ಬಲನಾಡ್‌ಲಿ ನೆಲೆ ಕಂಡ್‌ಕಂಬಕೆ ಹೇಳ್‌ವೆ. ದಂಡನಾಯಕ ಮತ್ತೆ ಸೋದರಿ ದಂಡನಾಯಕಿ ಉಲ್ಲಾಲ್ತಿ ಬಲನಾಡ್‌ಲಿ ಈ ಮುಂದೆಳೆ ಅದಿಕಾರಲಿದ್ದ ಬಲ್ಲಾಳ್‌ರ ತಮ್ಮ ಅದಿಕಾರ ಸ್ತಾನನ ಬುಟ್ಟುಕೊಡುಕೂಂತ ಕೇಳಿಕನ ದೊಡ್ಡ ಪ್ರತಿಬಟನೆ ಸುರಾದೆ.ಹಿಂಗಾಗಿ ರಕ್ತಸಿಕ್ತ ಆದ ಯುದ್ದ ನಡ್ದ್ ದಂಡನಾಯಕ, ಉಲ್ಲಾಲ್ತಿಯರ್ ಬಲ್ಲಾಳ ಸಂತತಿನನೇ ನಿರ್‌ನಾಮ ಮಾಡ್ದರ್‌ಂದಾಗಿ 'ಮೌಕಿಕ ಐಹಿತ್ಯದಲ್ಲಿ' ತಿಳ್ದ್ ಬಂದದೆ. ಈ ಗೌಡರ ಪ್ರತಿಸ್ಟಿತ ಕುಟುಂಬ ಪುತ್ತೂರ್‌ನ ಬಲನಾಡು (ಬಲ್ನಾಡು) ಲಿ ನೆಲೆಕಂಡ್ ಐಗೂರು ಸೀಮೆಂದ ಬೆಳ್ತಂಗಡಿ, ಪುತ್ತೂರು, ವಿಟ್ಲ ಇತ್ಯಾದಿ ಸೀಮೆಗಳ್‌ಲಿ ಇತರ ಗೌಡ ಜೆನಾಂಗಕ್ಕೆ ವಲಸೆ ಬಂದ್ ನೆಲೆಕಂಡ್‌ಕಂಬಕೆ ಪ್ರೇರಣೆ ಆತ್ ಮತ್ತೆ ಬಲ್ನಾಡು ಮನೆ ತನದ 'ಬಲಸನ್ನ' ಗೋತ್ರದ ಗೌಡ್ರು ಈ ಪ್ರದೇಸದ ಕಟ್ಟೆಮನೆ ಆತ್.

ಅಕ್ಕಮ್ಮ ಮತ್ತೆ ದುಗ್ಗಮ್ಮಂತೇಳ್‌ವ ಬಲ್ಲಾಳ್ತಿಯರ್ ಒಳಲಂಬೆಲಿ ಆಳ್ವಿಕೆ ನಡ್ಸತಿದ್ದೊ. (ಅಂದಾಜ್ ಕ್ರಿ. ಶ 1540) ಇವರ ಆಳ್ವಿಕೆಗೆ ಗುತ್ತಿಗಾರ್, ನಾಲ್ಕೂರು, ಕಂದ್ರಪಾಡಿ, ದೇವರಚಳ್ಳ ಮತ್ತೆ ಮಡಪ್ಪಾಡಿ ಸೇರಿದಂಗೆ 5 ಗ್ರಾಮಗ ಸೇರಿದ್ದೊ. ಈ ಕಾಲಕೆ ಶಂಕರಪುರುಷ ಮತ್ತೆ ದೇವಾಂಗ ಪುರ್‌ಸತಿನ ಮಕ್ಕಳ ನಾಕ್ ಗಂಡ್ ಒಂದ್ ಹೆಸರ್‌ಲಿ ಶೃಂಗೇರಿ ಮಟಾದಿಪತಿಗಳ್‌ಂದ ದೀಕ್ಷೆನ ಪಡ್ದ್ ಕಾಸಿಲಿ ನವನಾತ, ಜೋಗಿಗಳ್‌ಂದ ಮಂತ್ರತಂತ್ರಗಳ್‌ಂದ ದೀಕ್ಷೆನ ಪಡ್ದ್ ಕಾಸೀಲಿ ಜೋಗಿನಿಯರಾದವೆ. ಇಕ್ಕೇರಿ ಅರಸರ್ ಮೂಲತ ಶೈವರಾದ ಇವರ ದಕ್ಷಿಣಕನ್ನಡಲಿ ಅದಾಗಲೇ ನೆಲೆ ಕಂಡಿದ್ದ ಗೌಡ ಸಮುದಾಯದ ಉಪಕಾರಂದ ತಮ್ಮ ಆಡೆಳ್ತ ಹಿಡ್ತನ ಬಲಪಡಿಸಿಕೆ ಮತ್ತೆ ಶೈವ ಸಂಪ್ರದಾಯನ ಪುನರ್‌ಸ್ತಾಪಿಸಿಕೆ ತುಳುನಾಡ್‌ಗೆ ಕಳುಹಿಸಿಕೊಟ್ಟವೆ. ಐದ್ ಜೆನ ಅಣ್ಣ ಮತ್ತೆ ತಂಗೆ ತುಳುನಾಡ್‌ನ ಶೈವ ಸ್ತಾನಗ ಆದ ಕದ್ರಿ, ವಿಟ್ಲ, ಪುತ್ತೂರ್, ಸುಬ್ರಹ್ಮಣ್ಯ, ತೊಡಿಕಾನ ಮಲ್ಲಿಕಾರ್ಜುನ ಹಂಗೆ ಭಾಗಮಂಡಲ–ತಲಕಾವೇರಿ ಇಂತೆಲ್ಲ ಜಾಗೆಗಳ್‌ನ ಸಂದರ್‌ಶಿಸಿ ಶೈವ ಸಂಪ್ರದಾಯನ ಪುನರ್‌ಜೀವನಗೊಳ್ಸಿದೊ ಆ ಕಾಲದ ಶೈವ, ಶಾಕ್ತ ಇಂತೆಲ್ಲ ದರ್ಮಗಳ್‌ಲಿ ತಾಂತ್ರಿಕ ಪರಂಪರೆಗ ಅಸ್ತಿತ್ವಲ್ಲಿದ್ದೊ. ಅದರ್‌ಲು ಶೈವ ಪರಂಪರೆ ಪಾಶುಪತನಾತಸಿದ್ದ, ಲಕುಲೀಶ, ಕಾಪಾಲಿಕದಂತ ಪ್ರತ್ಯೇಕ ವಿಭಾಗಗ ಇತ್ತ್. ಜೈನ ಮತ್ತೆ ವೈದಿಕ ದರ್ಮಗಳ ಮೇಲೆ ತಿರ್‌ಗಿ ಬೀಳಿಕೆ ಕಾರಣೀಬೂತನಾದಂವ ಜೋಗಿ ಪುರುಷ. ಮೂಲತಃ ಶೈವರಾದ ಗೌಡ ಸಮುದಾಯದ ಜೆನ ಕಂದ್ರಪಾಡಿನ ಆ ಕಾಲಲಿ ಆಳ್ತಿದ್ದ ಜೈನ ಬಲ್ಲಾಳರ ಮತ್ತೆ ನಾಗಾರಾದನೆ ಬ್ರಾಹ್ಮಣರ ರಕ್ತಸಿಕ್ತ ಆದ ಹೋರಾಟವೊಂದ್ ಮಾಡಿ ಏಕಕಾಲಲಿ ಹೊಡ್ದ್ ಓಡ್‌ಸಿದ ಪ್ರಸಂಗ ಕಂದ್ರಪಾಡಿಲಿ ನಡೆದಿತ್ತ್ (ಕೆ. ಆರ್. ವಿದ್ಯಾದರ–2001).

ಇನ್ನೊಬ್ಬ ಐಗೂರ್ ಸೀಮೆನ ದಂಡನಾಯಕ ಕುಮಾರ ಸ್ವಾಮಿ ತನ್ನ ತಮ್ಮನೊಟ್ಟಿಗೆ ಕ್ರಿ. ಶ. ಸುಮಾರ್ 1570 ರ್‌ಲಿ ಸುಳ್ಯಕೆ ಬಂದಿರ್‌ದು. ಇವು ತಮ್ಮ ನೆಂಟ್ರ್‌ಗಾದ ಕೂಜುಗೋಡು ಮನೆಗೆ ಬಂದ್ ಮತ್ತೆ ಸುಳ್ಯದ ಬಳ್ಪಡ್ಕಕ್ಕೆ ಬಂದವೆ.ಅವರ ತಮ್ಮ ಕುಂಭೈ ಸೀಮೆ ಸೇರಿ ಮಾಯ್ಪಾಡಿನ ರಾಜಕುಮಾರಿನ ಮೊದ್‌ವೆ ಆದೆ. ಅಣ್ಣ ಕುಮಾರಸ್ವಾಮಿ ತಾನ್ ಲಿಂಗಾಯತ ಮತಸ್ತನಾದ್ದರ್‌ಂದ ತನ್ನೊಟ್ಟಿಗಿದ್ದ ಶಿವಲಿಂಗನ ಬಳ್ಪಡ್ಕಲಿ ಸ್ತಾಪುಸಿದಂತ ಮಟ ಇಂದ್‌ಗು ಅಂವನ ವಂಸ ಮೂಲದ ಬಳ್ಪಡ್ಕ ಕುಟುಂಬದವರ್‌ಂದ ಲಿಂಗಾಯತ ವಿದಿನ ಪ್ರಕಾರ ಆರಾದಿಸಲ್ಪಟ್ಟದೆ. ಕಾಲಕ್ರಮೇಣ ಕುಮಾರಸ್ವಾಮಿ ಸುಳ್ಯಕೋಡಿ ಚೆನ್ನು ಬಳ್ಳಾಲ್ತಿನ ವಾರಸ್ದಾರ ಆದೆ. ಕುಮಾರಸ್ವಾಮಿ ವಂಶಸ್ತರ್ ಕವಲೊಡ್ದ್ 'ಕಬರ್' ಬೊಳಿ ತೇಳುವ 9 ಬೊಳಿಗೆ ಸೇರ್‌ವೆ.

ಕೂಜುಗೋಡು, ಕಟ್ಟೆಮನೆ, ಮೂಲದ ನಾಯರ್ ಗೋತ್ರ, ಬಲ್ನಾಡು ಕಟ್ಟೆಮನೆನ ಬಲಸನ್ನ ಗೋತ್ರ ಹಾಂಗೆ ಬಳ್ಪಡ್ಕದ ಕಬರ್ ಗೋತ್ರ ಮೂಲಪುರುಷರ್ ಒಂದೇ ಮೂಲದವಾಗಿದ್ದ್, ಲಿಂಗಾಯತ ಮತಸ್ತರಾಗಿದ್ದ್ ಈ ಗೋತ್ರಗಳ ನೊಡುಲಿ ಹೆಣ್ಣು ಕೊಡುವ–ತಾವ ಕ್ರಮ ಇತ್ಲೆ. ಈ ಗೋತ್ರದವು ಹೆಂಡ ಮತ್ತೆ ಹಂದಿ ಮಾಸ ತಿಂಬೊದುಲೆ.

**ಕೊಡಗ್‌ಲಿ ಗೌಡರ್** : ಕೊಡಗ್ ಪಂಡ್‌ದಲೂ ಮಲೆಕಾಡ್‌ಂದ ತುಂಬಿದ ಪ್ರದೇಸ. ಕೊಡಗ್, ಹಾಸನ ಮತ್ತೆ ಚಿಕ್ಕಮಗಳೂರು ಮಲ್ನಾಡು ಪ್ರದೇಶಗ ಗಂಗರಾಜರ ಅದೀನಕೆ ಒಳಪಟ್ಟಿದ್ದೊ. ಹಾಲೇರಿ, ಭಾಗಮಂಡಲದಂತ ಸಣ್ಣಪುಟ್ಟ ಊರುಗಾಗಿದ್ದೊ. ಭಾಗಮಂಡಲ ತಲಕಾವೇರಿಗೆ ಗಂಗರಾಜರ್ ತಮ್ಮ ಸೈನ್ಯದೊಟ್ಟಿಗೆ ತೀರ್ತ ಮೀಯಕೆ




ಬಂದ್ ಹೋಗತಿದ್ದೊ. ಕೊಡಗ್‌ನ ಹಳ್ಳಿಗಳ್‌ಲಿ ಕಪ್ಪ ಕಾಣಿಕೆಗಳ ವಸೂಲಿಗಾಗಿ ಮತ್ತೆ ಬಾಗಮಂಡಲದ ಬಗಂಡೇಶ್ವರ ದೇಸ್ತಾನದ ಕ್ಷೇತ್ರಪಾಲಕರಾಗಿ ತಮ್ಮವರ ನಿಲ್ಲ್‌ಸಿದ್ದೊ. ಅಲ್ಲಿನ ಊರೊವಾದ ಅಮ್ಮಕೊಡವರ್ ದೇವಳದ ಅರ್‌ಚಕರಾಗಿದ್ದೊ. ಗೌಡರ ಕೋಡಿ ಮನೆ ಮತ್ತೆ ನಿಡ್ಯಮಲೆ ಕುಟುಂಬದವು ಪಂಡ್‌ಂದಲೂ ತಾವು ತಲಕಾವೇರಿ ಹಂಗೆ ಬಗಂಡೇಶ್ವರ ದೇಸ್ತಾನಗಳ ಕ್ಷೇತ್ರ ಪಾಲಕರಾಗಿದುನು ತಕ್ಕರಾಗಿದುನು ದೆವ್ವ ಕಾರ್‌ಯಲಿ ತೊಡಗಿದ್ದವು ತೇಳಿ ಮೌಕಿಕ ಐಹಿತ್ಯದಿಂದ ತಿಳ್ದು ಬಂದದೆ. ಚೋಳರ ಕೈಲಿ ಗಂಗರಾಜರ್ ಸೋತ ಮೇಲೆ (ಕ್ರಿ. ಶ 1004) ಚೋಳರ್ ತಮ್ಮ ಸಮ್ಮಂದದವಾದ ರಾಜರಾಜ ಕೊಂಗಾಳ್ವ ಚೋಳ ಮತ್ತೆ ಚೆಂಗಾಳ್ವ ಚೋಳ ಬಾಗಮಂಡಲದಿಂದ ಆಳತಿದ್ದೊ.

ಕ್ರಿ. ಶ. 1550 ರಿಂದ 1590 ರ ತನಕ ಪಾಳೇಗಾರ ಕರ್‌ಣಂಬಾಹು ತೇಳಂವ ಆಳತಿತ್ತ್, ಕ್ರಿ. ಶ. 1590 ರ್‌ಲಿ ಹಾಲೇರಿ ರಾಜವಂಶ ಸ್ಥಾಪಕ ವೀರರಾಜು ಮತ್ತೆ ಅಂವನ ಮಾವ ಬೊಮ್ಮಗೌಡ ಕರ್‌ಣಂಬಾಹುನ ಓಡ್ಸಿ ಮೇಲೆನ ಕೊಡಗ್‌ನ ಪೂರ ತನ್ನ ವಶಕ್ಕೆ ತೆಗೆದುಕೊಂಡೊ. ನಿಡ್ಯಮಲೆ ಕುಟುಂಬದವರ ಭಾಗಮಂಡಲ ಬಗಂಡೇಶ್ವರ ದೇಸ್ತಾನಕು ಕೋಡಿ ಮನೆಯವರ ತಲಕಾವೇರಿಗೂ ಕ್ಷೇತ್ರಪಾಲಕರ್ ಮತ್ತೆ ಮುಕ್ಯ ತಕ್ಕರಾಗಿ (ಸಂಕೇತ ಅದಿಕಾರಿ) ನೇಮಿಸಿದ್ದೊ. ನಿಡ್ಡೆಮಲೆ ಕುಟುಂಬದ ಇನ್ನೊಂದ್ ಹೆಸರು 'ದರಗನ' ಅಂದರೆ ಇದು ಸಂಸ್ಕೃತ 'ದರೋಗನ' (ಕ್ಷೇತ್ರಪಾಲಕ) ತೇಳ್ದರ ಅಡ್ಡ ಹೆಸರಾಗುಟು.. ಇಂದ್‌ಗೂ ಬಗಂಡೇಶ್ವರ ದೇಸ್ತಾನದ ಬೂಮಿಗಳ ಆರ್. ಟಿ. ಸಿಲಿ ನಿಡ್ಯಮಲೆ ಕುಟುಂಬದವ್ ಜಂಟಿ ಕಾತೆದಾರರಾಗಿದ್ದವೆ. ವೊಕ್ಕಲಿಗ ಮೂಲದ ಗೌಡರ್ ಪಂಡ್‌ನ ಗಂಗರಕಾಲಂದಲೂ ಕೊಡಗ್‌ಲಿ ವಾಸವಾಗಿದ್ದೊ.

ಹಾಲೇರಿ ರಾಜವಂಸದ ಮೂಲ ಪುರುಷ ವೀರರಾಜು ತೇಳವ ಇಕ್ಕೇರಿ ವಂಸದ ರಾಜಕುಮಾರನಾಗಿದ್ದದೆ. ಇಂವ ಇಕ್ಕೇರಿ ಸದಾಶಿವ ನಾಯಕನ (ಕ್ರಿ. ಶ 1530–1577) ಸೋದರಳಿಯ. ಇವು ಗಂಗ ಮೂಲದವಾದೊ. ವೀರರಾಜು ತನ್ನ ಸಮ್ಮಂದದ ಕೊಡಗ್‌ನ ಹಾಲೇರಿನ ಊರಗೌಡನಾದ ಬೊಮ್ಮಗೌಡನಲ್ಲಿಗೆ ಬಂದ್ ಬೊಮ್ಮಗೌಡನ ಮಗಳ್ ನೀಲಮ್ಮನ ಮೊದ್‌ವೆ ಆಗಿ ಹಾಲೇರಿ ವಂಶದ ಸ್ಥಾಪಕನಾದೆ.

ಕ್ರಿ. ಶ. 1700 ರ್‌ಲಿ ಸೋಮಶೇಕರ ನಾಯಕ ಅಮರ ಸುಳ್ಯ ಮತ್ತೆ ಪುತ್ತೂರು ಮಾಗಣೆಗಳ್‌ನ ಹಾಲೇರಿ ಮನೆಸ್ತಾನಕೆ ದಾನ ಆಗಿ ಕೊಟ್ಟದೆ.ಹಿಂಗಾಗಿ ಈ ಪ್ರದೇಶಗ ಕೊಡಗ್‌ನ ಅವಿಬಾಜ್ಯ ಅಂಗವಾಗಿ ಕ್ರಿ. ಶ 1700 ರಿಂದ 1834 ರ ವರೆಗೆ ಒಳ್ದದೆ.

ಕ್ರಿ. ಶ 1793 ರ್‌ಲಿ ಹಾಲೇರಿ ರಾಜ ದೊಡ್ಡವೀರಪ್ಪ ಒಡೆಯ ಸುಬ್ರಹ್ಮಣ್ಯದ ಕೂಜುಗೋಡು ಮನೆನ ಕುಂಬಪ್ಪಗೌಡ ಮತ್ತೆ ಅಂವನ ಕುಟುಂಬದವರ ಮಡಿಕೇರಿನ ಓಂಕಾರೇಶ್ವರ ದೇವಾಸ್ತಾನ ಕಟ್ಟಿಕೆ ಉಸ್ತುವಾರಿಗೆ ಕರ್‌ಸಿಕಂಡತ್. ಹಾಲೇರಿಗೆ ಹಕ್ಕಲೆನ ಮಕ್ಕಂದೂರ್‌ಲಿ ಈ ಕುಟುಂಬಕೆ ಉಂಬಳಿ ಕೊಟ್ಟವೆ, ಮುಂದೆಗೆ ಈ ಕುಟುಂಬ 'ಕುಂಬಗೌಡನ' ಮನೆತೇಳಿ ಕರ್‌ಸಿಕಂಡದೆ

ಕ್ರಿ. ಶ. 1785 ರ್‌ಲಿ ಟಿಪ್ಪು ಸುಲ್ತಾನ ಕೊಡಗ್‌ಗೆ ಮುತ್ತಿಗೆ ಹಾಕಿ ಸುಮಾರು 80,000 ಕೊಡವರ ಬಂದಿಗಳಾಗಿ ಶ್ರೀರಂಗಪಟ್ಟಣಕ್ಕೆ ಕರ್‌ಕಂಡ್ ಹೋಗಿ ಮತಾಂತರ್‌ಸಿದೆ. ಇದರ್‌ಂದಾಗಿ ಕೊಡಗ್‌ನ ಹೆಚ್ಚಿನ ಬೂಮಿ ಹಡ್‌ಲ್ ಬಿದ್ದತ್. 1788 ರ್‌ಲಿ ದೊಡ್ಡವೀರರಾಜ ತನ್ನ ಹೆಣ್ಣ್ ಮತ್ತೆ ತಮ್ಮಂದಿರ್ ಲಿಂಗರಾಜು ಮತ್ತೆ ಅಪ್ಪಾಜಿಯವರೊಟ್ಟಿಗೆ ಶ್ರೀರಂಗಪಟ್ಟಣಂದ ತಪ್ಪಿಸಿಕಂಡ್‌ಬಂದ್ ಬ್ರಿಟೀಷರ ಮತ್ತೆ ಟಿಪ್ಪುನೊಟ್ಟಿಗೆ ಮಾಡಿಕಂಡ ಸಂದಾನದ ಪ್ರಕಾರ ಕೊಡಗ್‌ನ ತನ್ನ ಆಳ್ವಿಕೆನ ಪುನರ್ ಸ್ತಾಪಿಸಿದೆ. ಉತ್ತರ ಕೊಡಗ್‌ನ ಕ್ರಿಸಿ ಬೂಮಿನ ಉರ್‌ಜಿತೆಗಾಗಿ ತನ್ನದೆ ಆಳ್ವಿಕೊಳಪಟ್ಟ ಕೆಳಗಿನ ಕೊಡಗ್‌ಂದ ಅಮರ ಸುಳ್ಯ ಮತ್ತೆ ಪುತ್ತೂರು ಮಾಗಣೆಗಳ್‌ಂದ ಗೌಡ ಕುಟುಂಬಗಳ ಉತ್ತರ ಕೊಡಗ್‌ಗೆ ಕರ್‌ಸಿ ಹಡ್‌ಲ್ ಬಿದ್ದಿದ್ದ ಕ್ರಿಸಿ ಬೂಮಿನ ಉಂಬಳಿಯಾಗಿ ಕೊಟ್ಟ್ ಗೌಡರ ಎರ್‌ಡ್‌ನೆ undefined ಸರ್‌ತಿ ಹಬ್ಬಿಕಂಡ್ ಹೋಕೆ ಕಾರಣ ಆದವೆ.. ಹಿಂಗೆ ಹತ್ತ್ ಕುಟುಂಬ ಹದಿನೆಂಟ್ ಗೋತ್ರದ ಗೌಡ್ರು ಗಟ್ಟದ ಮೇಲೆನ ಹಾಂಗೆ ಕೆಳಗಿನ ಕೊಡಗ್‌ಲಿ 1834 ರ ವರೆಗೆ ಸಾಂತಿಂದ ಹಾಲೇರಿ ರಾಜರ ಆಶ್ರಯಲಿ ಬೊದ್ಕಿದೊ.

**ನಾಮ ಇಸಿಕಂಬ ಒಕ್ಕಲಿಗರ್ :** ಒಕ್ಕಲಿಗರ್‌ಲಿ ಶ್ರೀ ವೈಷ್ಣವ ಸಂಪ್ರದಾಯದ ನಾಮ ಇಸಿಕಂಬ ಒಕ್ಕಲಿಗರ್‌ತ ಹೇಳ್ವ ಇನ್ನೊಂದ್ ಪಂಗಡ ಉಟ್ಟು. ಶಿವಮೊಗ್ಗ ಜಿಲ್ಲೆನ ಮಲೆನಾಡ್ ತಾಲ್ಲೂಕ್, ಚಿಕ್ಕಮಗಳೂರ್ ಜಿಲ್ಲೆನ ನರಸಿಂಹರಾಜಪುರ, ಶೃಂಗೇರಿ, ಕೊಪ್ಪ ತಾಲ್ಲೂಕ್, ಮೂಡಿಗೆರೆನ ಕಳಸ, ಬಾಳೂರು ಹೋಬಳಿ, ದಕ್ಷಿಣಕನ್ನಡ ಜಿಲ್ಲೆನ ಪುತ್ತೂರು, ಸುಳ್ಯ ಬೆಳ್ತಂಗಡಿ ತಾಲ್ಲೂಕು ಮತ್ತೆ ಕೊಡ್‌ಗ್‌ಲಿ ಈ ನಾಮ ಹಾಕ್‌ವ ಒಕ್ಕಲಿಗರ್ ಹೆಚ್ಚ್ ಜೆನ ಒಳ. ಹಂಗೆನೆ ಬಯಲ್ ಸೀಮೆನ ನಾಗಮಂಗಲ, ಕುಣಿಗಲ್, ಬೇಲೂರು, ಪಿರಿಯಾ ಪಟ್ಟಣ, ಕಡೂರು ತಾಲ್ಲೂಕು ಮತ್ತೆ ಬೆಂಗಳೂರ್ ಪೇಟೆಲಿ ಕಡ್ಮೆ ಸಂಕೆಲಿ ಕಂಡ್ ಬಂದವೆ.

ನಂಬಿಕೆನ ವಿಚಾರ ವೇದಿಕೆಲಿ ಇದ್ದ ಶ್ರೀ ವೈಷ್ಣವ, ಹಂಗೆನೆ ವೀರಶೈವರ್‌ಲಿ ನಡ್ದಂತ ವಾದ ವಿವಾದಗ ಒಕ್ಕಲಿಗ ಜೆನಾಂಗಲೂ ಕಂಡ್ ಬಂದದೆ. ಒಕ್ಕಲಿಗರ್‌ಲಿ ಶೈವರ್ ನಾವು ಮೇಲ್‌ತ ಹಂಗೆನೆ ವೈಷ್ಣವರ್ ನಾವ್ ಮೇಲ್‌ತ ಈ ಗಲಾಟೆಗಳ್‌ಂದ ಬೇಜಾರಾದ ಹೆಚ್ಚಿನ ಒಕ್ಕಲಿಗರ್ ಗೌಡ ಸಮಾಜದ ಕುಟುಂಬಗ ಲಿಂಗದಾರಣೆ ಮಾಡಿಕಂಡ್ ಮೊದ್‌ಮಾಂಸ ಬುಟ್ಟು ವೀರ ಸೈವರೇ ಆದ. ಆದರೆ ಮಲೆನಾಡ್ ಪ್ರದೇಸಲಿ ಸೈವರ್ ನಾಮ ಹಾಕೊವ್‌ತ ಆಚರಣೆಲಿ ಉಟ್ಟೇ ಹೊರ್‌ತು ಮೊಯಿಂಸ ಮೊಯಿಂಸರ ನೆಡುಲಿ ಸಮ್ಮಂದ ಬೆಳ್ಸುವಲ್ಲಿ ಏನೂ ತೊಡ್ಕ್ ಆತ್ಲೆ. ಹಿಂದೆನ ತಲೆಮಾರುಗಳ್‌ಂದನೂ

ಇತ್ತಂಡಗಳ್ ಒಗ್ಗಟ್ಟ್‌ನ ಕಟ್ಟಿಕಂಡ್ ಬಂದೊಳ ಇದರ್‌ಂದಾಗಿ ಈಗ ಈ ಸೈವ ವೈಷ್ಣವ ತ ಹೇಳ್‌ವ ಬೇದನೇ ಹೊರ್ಟ್ ಹೋಗುಟು. ಈ ನಾಮದಾರಿ ಒಕ್ಕಲಿಗರ್ ಪಂಗಡ ಅನಾದಿಕಾಲಂದೊಳ್ ಇತ್ತ್‌ತ ಹೇಳಿಕೆ ಆದ್ಲೆ. ಈಗ ಸಿಕ್ಕಿರುವ ದಾಕಲೆಗಳ್‌ಂದ ಹಿಂಗೆ ಹೇಳಕ್.

ಸೈವ ದರ್ಮದ ಆಸ್ರಯದಾತರಾದ ಚೋಳ ರಾಜರ್‌ಂದ ಪಡ್ದಂತ ವಿಶಿಷ್ಟಾದ್ವೈತ ಶ್ರೀ ವೈಷ್ಣವ ಮತದ ಸ್ತಾಪಕರ್ ಆದ ಶ್ರೀ ರಾಮಾನುಜಚಾರ್ಯರ್(122ನೇ ಶತಮಾನ) ಅವರ ಕಾಟ ಸಹಿಸಿಕಣಿಕೆ ಆಗದೆ ಮೈಸೂರ್‌ಗೆ ಬಂದ್ ಹೊಯ್ಸಳರ ಆಸ್ರಯಲಿ ಮೇಲುಕೋಟೆಲಿ ಆಸ್ರಮ ಕಟ್ಟಿ ಶ್ರೀ ವೈಷ್ಣವ ಪಂತನ ಸಾರ್‌ದೊ. ಇವ್ ವಾದ ಮಾಡಿ ಜೈನ ಸನ್ಯಾಸಿಗಳ ಸೋಲ್ಸಿದೊ. ಇವರ ಉಪದೇಸದ ಪ್ರಬಾವಂದ ಹೊಯ್ಸಳ ಚಕ್ರವರ್‌ತಿ ಬಿಟ್ಟಿದೇವ ಮತಾಂತರ ಹೊಂದಿ, ವಿಷ್ಣುವರ್ದನ ತ ಹೆಸ್ರ್ ಇಸಿಕಂಡ್ ವೈಷ್ಣವ ಪಂತನ ಆಚರ್‌ಸಿಕಂಡ್ ಬೇಲೂರ್‌ನ ಶ್ರೀ ಚೆನ್ನಕೇಶವಸ್ವಾಮಿ ದೇವಾಲಯನ ಕಟ್ಟ್‌ಸಿತ್. ಈ ಎರ್‌ಡ್ ಕಾರಣಗಳ್‌ಂದ ಮೇಲುಕೋಟೆ ಮತ್ತೆ ಬೇಲೂರ್‌ಲಿ ವೈಸ್ಣವ ಮತದ ಪ್ರಚಾರ ಕೇಂದ್ರಗ ಹುಟ್ಟಿಕಂಡೊ. ಇವರ ಪ್ರಬಾವಂದಾಗಿ ಸೈವ ಸಂಪ್ರದಾಯದ ಸುಮಾರ್ ಒಕ್ಕಲಿಗ ಕುಟುಂಬದೊವ್ ಮತಾಂತರ ಆಗಿ ವೈಸ್ಣವರಾಗಿ ನಾಮದಾರಿ ಒಕ್ಕಲಿಗರ್ ಆದೊ. 'ನಾಮದಾರಿಗ' ಒಕ್ಕಲಿಗರ್‌ಲಿ ಮಾತ್ರ ಇರ್‌ದ್ ಅಲ್ಲ, ಹರಿಜನರ್‌ಲಿ ಸವರ್ಣಿಗರ್‌ಲಿ 'ನಾಮದಾರಿ'ಮತ್ತೆ 'ರೈವರ್' ತ ಹೇಳ್ವ ಎರ್‌ಡ್ ಪಂಗಡಗ ಒಳ. ಅದರ ಬಗ್ಗೆ ಇಲ್ಲಿ ವಿವರಣೆ ಕೊಡ್‌ವ ಅಗತ್ಯ ಕಾಂಬೊದ್ಲೆ. ಸೈವರ್ ಹಣೆಗೆ ಬಸ್ಮ ಹಾಕಂಬಂಗೆ ಇವ್ ಮೂಕುನ ಸೊರ್‌ತಕೆ ಹಣೆ ಮೇಲೆ ಕೆಂಪುಕುಂಕುಮ ಬೊಟ್ಟುನ ಉದ್ದದ ಗೆರೆ ಎಳ್ಕಂಡವೆ. ಅದರ್‌ಂದಾಗಿ ಇವ್ಕೆ 'ನಾಮದಾರಿ'ಗ ತ ಕರ್‌ದೊವೆ. ಸಾಗರಂದ ಪುತ್ತೂರ್ ಸುಳ್ಯ ಸಂಪಾಜೆವರೆಗೆ ಗಟ್ಟಗಳ ಪರ್‌ವತಶ್ರೇಣಿಲಿರುವ ನಾಮ ಹಾಕ್‌ವ ಒಕ್ಕಲಿಗ ಗೌಡ್ರ್‌ಲಿ ಸಂಪ್ರದಾಯಗ ಹೆಚ್ಚ್. ಇವರ್‌ಲಿ ಒಂದ್ ಸಿಸ್ತ್‌ನ ಗುಂಪುಗಾರಿಕೆ ಉಟ್ಟು. ಮನೆತನದ ಆಚಾರ ವಿಚಾರಗ ಪೂರ ಕಟ್ಟೆಮನೆವು ಹೇಳ್ದಂಗೆ ಇದ್ದದೆ. ಮೊದ್ವೆಮುಂಜಿ ಪೂರ ಬಟ್ರ್‌ಗಳ ಕೈಲೇ ಮಾಡ್ಸುವೆ ಆದ್ರೂ ಸುದ್ದ ಮಾಡ್ಸು, ಸಂಪ್ರೋಕ್ಷಣೆ, ಪುಣ್ಯಾರ್‌ಚನೆ, ಪಿಂಡಬುಡ್ಸು, ಇಂತದರೆಲ್ಲಾ ಮಾಡ್ಸುವೆ.

ಇವ್ ಆಚರ್‌ಸುವ ಹಬ್ಬ ಹರಿದಿನಗತ ಹೇಳ್ರೆ, ಹರಿಸೇವೆ, ಕೆಂಚಿರಾಯನ ಪೂಜೆ, ಶ್ರಾವಣ, ಶ್ರೀ ರಾಮನವಮಿ, ಕೃಷ್ಣಾಷ್ಟಮಿ ಆಗಿದ್ದರೂ ಇವ್ ಎಲ್ಲಾ ಹಿಂದು ಹಬ್ಬಗಳ ಆಚರಣೆ ಮಾಡ್ವೆ. ಸೈವರ್‌ಲಿ ಹಿರಿಯೊವ್ಕೆ ಮಾಡ್ವ ಪಿತೃಪಕ್ಷ ಕಾರ್ಯದಂಗೆ ಇವುನು ಆ ಕಾರ್ಯನ ಮಾಡ್ವೆ. ಆದರೆ ಬಯಲ್ ಸೀಮೆಲಿ ಇರೊವ್ ಸೋಣಲಿ ಹಿರಿಯರ ಹಬ್ಬ ಆಚರ್‌ಸುವೆ. ಮತ್ತೆ ಅಲ್ಲಿ ಮಾಸದ ಗೈಪು ಮಾಡ್ವೆ. ಮಲೆನಾಡ್ ಕಡೆ ಸೋಣಲಿ ಮೊದ್‌ಮಾಸ ಮನೆ ಒಳಗೆ ತಾಕೆ ಇಲ್ಲೆ. ಇವ್ ಹರಿಸೇವೆನ ಬಾರೀ ಗಡ್ಡ್‌ಲಿ ಮಾಡ್ವೆ. ಮೂರ್ ದಿನಮುಟ್ಟ ಉಪಾಸಮಾಡಿ ತೊಳ್ಸಿಕಟ್ಟೆ ಎದ್ರ್ ಚಪ್ಪರ ಹಾಕಿ ಸೃಂಗಾ ಮಾಡಿ, ಕತ್ತಲೆ ಇಡೀ ಗೋವಿಂದನ ನಾಮ ಸಂಕೀರ್‌ತನೆ, ಬಜೆನೆ, ಹರಿಕತೆ, ಯಕ್ಷಗಾನ, ಬಯಲಾಟ, ಕೋಲಾಟ, ಊಟ ಹಿಂಗೆ ಸೇವೆನೂ ನಡ್ದದೆ. ಹರ್‌ಸಯಲಿ ಕುಟುಂಬಲಿ ಒಬ್ಬ, ಇಲ್ಲರೆ ಕಟ್ಟೆಮನೆವು ನಡ್ಸುವೆ. ಅವುಕೆ ಒಳ್ದ ನೆರೆಕರೆವು ಅಲ್ಲರ್ ನೆಂಟ್ರ್‌ಗ ಉಪಕಾರ ಮಾಡ್ವೆ.

ಹರಿಸೇವೆ ಕೆಂಚರಾಯನ ಸೇವೆಲಿ ಮುಗ್ದದೆ. ಅದರ ಸೇವೆನ ವಿವರ ಹಿಂಗೆ ಉಟ್ಟು. ಹರಿಸೇವೆ ಮುಗ್ದ ಮಾರ್‌ನೆ ದಿನ ಮನೆಂದ ಹನಿಸ್ ದೂರಲಿ ಅದ್ಕಾಗಿ ಗೊತ್ತ್ ಮಾಡ್ದ ಜಾಗೆನ ಸುದ್ದ ಮಾಡಿ ಸೆಗ್‌ಣಿಗುಡ್ಸಿ, ಚಪ್ಪರ ಹಾಕಿ ತೋರಣ ಕಟ್ಟಿ ಹೂಗಳ ಮೇಲೆ ತ್ರಿಸೂಲನ ನಿಲ್ಸಿ, ಕಾಳ್ ಗಳಹಕ್ಕಲೆ ಕಡ್ಗ ಇಸುವೆ. ಕಾಳ್‌ಗಳರಾಸಿ ಎದ್ರ್ ನೀರ್ ತುಂಬುಸಿದ ಕಳ್ಸ ಇಸಿ ಅದರ್‌ಲಿ ಎರ್‌ಡ್ ನೆಕ್ಕಿದ್ಯೆನ ಗೆಲ್ಸ್ ಗಳ ಇಸುವೆ. ಕಳ್ಸ, ತ್ರಿಶೂಲ ಮತ್ತೆ ಕಡ್ಗಗಳಿಗೆ, ಬಸ್ಮ, ಗಂದ, ಅರ್‌ಶಿಣ, ಕುಂಕುಮ ಹಾಕಿ, ಹೂಗಳ್‌ಂದ ಅಲಂಕರ್‌ಸುವೆ.

ಕಳ್ಸದ ಹಕ್ಕಲೆ ಕುಂಬ ದೀಪ ಹೊತ್ತುಸುವೆ, ಅಗಲದ ಬಾಳೇಪಟ್ಟೆ ತಂದ್ ಒಂದ್ ಮೊಳ ಉದ್ದದ ಒಂದೇ ಅಳ್ತೆನ ಮೂರ್ ತುಂಡ್‌ಗಳ ಮಾಡಿ ಅದರ ತ್ರಿಕೋನಾಕಾರ ಮಾಡಿ ನಾರ್‌ಂದ ಕಟ್ಟಿ ಕಳ್ಸದ ಮುಂದೆ ಇಸುವೆ. ಅದರ್‌ಲಿ ಹಸಿ ಹಿಟ್ಟ್‌ನ 8–10 ಕಡ್ಬುಗಳ ಇಸುವೆ.

ಒಂದ್ ಕುರಿ ಇಲ್ಲರೆ ಕೋಳಿನ ತಂದ್ ಚಪ್ಪರದ ಎದ್ರ್ ನಿಲ್ಸ್‌ಸಿ ಕಲ್ಸ – ತ್ರಿಸೂಲಕೆ ಹಣ್ಣು ಕಾಯಿ – ದೂಪಾರತಿ ಮಾಡಿ ಪೂಜೆ ಮಾಡಿ ಎದುರಕೆ ನಿಲ್ಸಿದ ಪ್ರಾಣಿನ ಗಂಟ್ಲ್ ಕೊಯ್ದ್ ಬಾಳೆಪಟ್ಟೆಲಿರುವ ಕಡ್ಬುಗಳ ಮೇಲೆ ಹನಿಸ್ ರಕ್ತನ ಅರ್‌ಸುವೆ. ಮತ್ತೆ ಪ್ರಾಣಿನ ಮಾಸ ಮಾಡಿಕೆ ಸಾಗ್ಸುವೆ. ಆ ದಿನ ಹಬ್ಬ ಮಾಡಿಕಾಗಿ ಮಾಡ್ದ ಎಲ್ಲಾ ಬಗೆನ ಅಡ್ಗೆನ ತಂದ್ ಕಳ್ಸದ ಮುಂದೆ ಹಾಕಿದ ಎಲೆಗೆ ಹನಿಸ್ ಹನಿಸ್ ಬೈರವಂಗೆ ಬಳ್ಸುವೆ. ಮತ್ತೆ ಹಳಿ ದೂರ ಹೋಗಿ ಬೆನ್ಸ್ ಮಾಡಿ ನಿತ್ತವೆ, ಮತ್ತೆ ಬಂದ್ ದೂಪಾರತಿ ಮಾಡಿ ಹಿರಿಯೊವ್ ಯಾರಾರ್ ಪ್ರಾರ್ತನೆ ಮಾಡಿಕಂಡವೆ.

ಬೈರವೇಶ್ವರ ಈಗ ನಿಂಗೆ ನಡ್ಸಿದ ಹರಿಸೇವೆಲಿ ಏನಾರ್ ಲೋಪ ದೋಸಗ ಆಗಿರ್‌ದು, ಸಾವಿರ ತೊಪ್ಪುಗ ಆಗಿರ್‌ದು ಆ ತೊಪ್ಪುನೆಲ್ಲಾ ಒಪ್ಪು ಮಾಡಿಕಂಡ್, ಸಾಂಕಿದ ದನಕರ್‌ಗಳಿಗೂ, ಪಚ್ಚೆ ಪೈರ್‌ಗಳಿಗೂ, ಏನೊಂದ್ ಉಪದ್ರ ಮಾಡದೆ ಕುಟುಂಬದವರ, ನೆರೆಕರೆವರ, ಮಕ್ಕಳ್ ಮರಿಗಳ ನೀನೇ ಕಾಪಾಡಿಕಂಡ್ ಬರೊಕು' ತ ಪ್ರಾರ್‌ತನೆ ಮಾಡಿಕಂಡವೆ. ಹಿಂಗೆ ನಾಮದಾರಿಗ ಹಿಂದೆ ಕಾಲ ಬೈರವನ ಒಕ್ಕಲಾಗಿದ್ದ್ ಮುಂದೆ ವೈಸ್ಣವರಾಗಿದ್ ಬದಲಾದರೂ ಮೂಡ ಕಾಲಲಿ ಪೂಜಿಸಿಕಂಡ್ ಬಂದ ಕಾಲ ಬೈರವನ ಮರ್‌ತತ್ಲೆ. ಅಂವನ ಮೇಲೆನ ಬೊಕ್ತಿ ಕಡ್ಮೆ ಆತ್ಲೆ. ಹರಿ ಸೇವೆಂದ ಕೋಪ ಮಾಡಿಕಂಡ್ ಪ್ರಳಯ ರುದ್ರ ಲೋಕಕೆ ಎಲ್ಲಿ ಕೇಡ್ ಮಾಡ್ದೆ ಏನೋ ತ ಹೆದ್ರಿಕೆಲಿ ವರ್‌ಸದ ಒಂದ್ ದಿನ ಬೈರವನ ಪೂಜೆ ಮಾಡಿಕಂಡ್ ಬಂದೊಳ. ಎಲ್ಲಾ ನಾಮದಾರಿ ಕುಟುಂಬದೊವ್' ಶನಿವಾರದ ಆಚರಣೆ'ನ ನಿಯಮದಂಗೆ ಬಾರಿ ಕಟ್ಟ್




ನಿಟ್ಟ್‌ಲಿ ಆಚರ್‌ಸುವೆ. ಮತ್ತೆ ಕುಲದೇವ್ರು ತಿರುಪತಿ ವೆಂಕಟರಮಣ ದೇವ್ರ ಮನೇಲೇ ದೇವರ ಕೋಣೆಲಿ ಇಸಿ ಪ್ರತಿ ದಿನ ಪೂಜೆ ಮಾಡ್ವೆ. ಮಲೆನಾಡ್ಲಿ ವೈಷ್ಣವ ಪಂತ ಇಸ್ಟ್ ಆಳ ಆಗಿ ಬೇರೂರಿಕೆ ಕಾರಣ ಎಂತತತ ಅದ್ಯಯನ ಮಾಡಿಕೆ ಹೊರ್‌ಡ್ಕನ ಸುಮಾರ್ ವಿಸಯಗ ತಿಳ್ದ್ ಬಂದತ್.

'ನಾಥಪಂತ' – ಅವದೂತ ಯೋಗಿಗಳಿಗೆ ಕಾಪಾಲಿ ಕಾಳಮುಕಿ – ಜೋಗಿ ತ ಹೇಳ್ವ ಶಿಸ್ಯರ್ ಮತ ಪ್ರಚಾರ ಮಾಡಿಕೆ ಪಣ ತೊಟ್ಟಂಗೆ ವೈಷ್ಣವ ಮತದ ಪ್ರಚಾರಕ್ಕೆ ವೈಷ್ಣವ ಹೆಬ್ಬಾರರ್, ಓಷ್ಟಮಯ್ಯಂಗ, ಹರಿದಾಸರ್(ದೊಂಬಿದಾಸರ್) ಇಂತವು ಶಿಷ್ಯಂಗಾಗಿದ್ದೊ. ಇವರ್‌ಲಿ ವೈಷ್ಣವ ಹೆಬ್ಬಾರರ್ ಹೊಯ್ಸಳ ರಾಜರ ಆಸ್ರಯಂದ ಪ್ರಬಲರಾಗಿ ಮತ ಪ್ರಚಾರಲಿ ವಿಸೇಸ ಆಸಕ್ತಿ ಇಸಿಕಂಡೊವ್ ಆಗಿದ್ದೊ. ವೈಷ್ಣವ ಹೆಬ್ಬಾರರ ಮೂಡೀಕರ್, ಶ್ರೀರಂಗ ಮತ್ತೆ ಕಾಂಜೀವರಂ, ಕಡೆಂದ ವಲ್ಸೆ ಬಂದ್ ಮೈಸೂರ್ ದೇಸದ ಕಡಬ (ತುಮ್ಕೂರ್ ಜಿಲ್ಲೆ) 2ಗ್ರಾಮ (ಹಾಸನ ಜಿಲ್ಲೆ ಶ್ರೀರಂಗಪಟ್ಟ 4ಮೋಳೂರು (ಬೆಂಗಳೂರು ಜಿಲ್ಲೆ) ಮತ್ತೆ ಬೇಲೂರು, ಈ ಐದ್ ಕಡೆಲಿ ನೆಲೆ ಊರ್‌ದೊ. ಇದರ್‌ಂದ ಇವರ ಪಂಚಗ್ರಾಮಿಗ ತ ಕರ್‌ದ್ ಶ್ರೀ ವೈಷ್ಣವರ್‌ಲಿ ಉಪಪಂಗಡ ಆಗಿ ಒಳ್ಕಂಡ. ಇವು ಮತ್ತೆ ಇವರ ವಂಸದೊವರ ಪ್ರಚಾರಂದಾಗಿ ಹೆಚ್ಚ್‌ನ ಸೈವ ಕುಟುಂಬದೊವ್ ವೈಸ್ಣವ ದರ್ಮಕೆ ಮತಾಂತರ ಹೊಂದಿದೊ. ಈ ವಂಸದ ಜೆನ ಹೆಬ್ಬಾರರ್, ಹೊಯ್ಸಳ ಚಕ್ರವರ್‌ತಿಗಳ್‌ಂದ ಗುತ್ತಿಗೆ ಪಡ್ದ್ ಪೊಡ್‌ವ ಗಟ್ಟದ ಮಲೆ ಪ್ರಾಂತ್ಯ ಗಂಗಾಮೂಲ, ಕಳಸ, ಸರಿಯ ಗಳ ಆಳ್ವಿಕೆ ಮಾಡ್ದೊ.

**ಶಾಸನ 62 (1524ನೆ ಇಸ್ವಿ) :** ಕಳಸ ನಾಡ್‌ನ ಪಾರುಪತ್ಯಗಾರರಾಗಿ ಸಾವಿರ ಸೀಮೆನ ಮುಕ್ಯಸ್ತರ್ ಆದ ಮೂರ್ ಹೆಬ್ಬಾರ್‌ರ ಸಮ್ಮುಕಲಿ. ಈ ಸಾಸನಗಳ ಆದಾರಂದ ಮೂರ್ ಹೆಬ್ಬಾರರ್ ಮಲೆ ಪ್ರಾಂತ್ಯಲಿ ಅದಿಕಾರ ನಡೆಸ್ತಿದ್ದ ತ ಹೇಳ್ದು, ಇವ್ ಆಳ್ವಿಕೆ ಮಾಡ್ತಿದ್ದ ಪ್ರಾಂತ್ಯ, ಮಲೆಪ್ರಾಂತ್ಯ ಶೃಂಗೇರಿ ಹಕ್ಕಲೆ ಗಂಗಾಮೂಲಂದ ಕಳಸ, ನಿಡಿಗಲ್, ಸುಳ್ಯ ಸಂಪಾಜೆವರೆಗು ಹಬ್ಬಿತ್ ತ ಹೇಳ್ವ ವಿಚಾರ ಉಟ್ಟು. ಈ ವಂಸದ ಹೆಬ್ಬಾರರ್ ಈಗೊಳು, ನೆರಿಯ, ಕಳಸ ಮತ್ತೆ ಗಂಗಾಮೂಲಲಿ ಒಳ. ಈ ಸಾಸನ ಹುಟ್ಟಿಕೆ ಮುಂದೆನೇ ಮಲೆ ಪ್ರಾಂತ್ಯಲಿ ಒಕ್ಕಲಿಗ ಗೌಡ ಜೆನಾಂಗಲಿ ಜೀವನ ನಡೆಸ್ತಿದ್ದೊ ತ ಹೇಳ್ದಕೆ ಇನ್ನೊಂದ್ ಸಾಸನದ ಉದಾರಣೆ ಕೊಡಕ್.

**ಶಾಸನ (1246ನೆ ಇಸ್ವಿ) :** ಕಾರ್ಕಳಲಿ ಜಕ್ಕಲ ಮಹಾದೇವಿ ಆಳ್ವಿಕೆ ಮಾಡಿಕಂಡ್ ಇರ್‌ಕನ ಕಳಸದ ಕಳಸೇಶ್ವರ ಸ್ವಾಮಿನ ಸೇವೆನೆಂತೇಳಿ ಮಗುದಂಡ ಕೋಟಿಗವೊಂಡ ಬುಟ್ಟ ದತ್ತಿಂದಾಗಿ, ವೈಸ್ಣವ ಹೆಬ್ಬಾರರ ಆಡೆಳ್ತಕೆ ಒಳಪಡಿಕೆ ಮುಂದೆನೇ ಗೌಡ ಜೆನಾಂಗದೊವ್ ಈ ಮೇಲೆನ ಪ್ರಾಂತ್ಯಲಿ ಬೊದ್ಕ್ ನಡೆಸ್ತಿದ್ದೊ ಮತ್ತೆ ಇವ್ ಸಿರಿವಂತರ್, ಸುಸಂಸ್ಕೃತ ರ್ ಆಗಿದ್ದೊ ತ ತಿಳ್ಕಣಕ್. ದಕ್ಷಿಣ ಕೊಡಗ್‌ನ ನಾಮದಾರಿ ಗೌಡ ಸಮಾಜದೊವ್, ಕೊಡಗ್‌ನ ಅರಸರ ಕಾಲಲಿ ದಕ್ಷಿಣಕನ್ನಡ ಜಿಲ್ಲೆನ ಸುಳ್ಯ –ಸಂಪಾಜೆ ಕಡೆಂದ ವಲಸೆ ಬಂದೊವ್‌ಂತ ಕೊಡಗ್‌ನ ಇತಿಯಾಸಂದ ತಿಳ್ದ್ ಬಂದದೆ. (ಎಂ.ಡಿ.ಜಿ.)

**ಒಕ್ಕಲಿಗ ಗೌಡ ಸಮುದಾಯದ ಆಡೆಳ್ತ ವೆವಸ್ತೆ :** ದಕ್ಷಿಣಕನ್ನಡ, ಕೊಡಗು ಬಾಗಲಿ ನೆಲೆಕಂಡ್‌ಕಂಡಿರುವ ಗೌಡ ಸಮುದಾಯದ ಒಳ ಆಡೆಳ್ತ ವೆವಸ್ತೆ ಗಂಗರ ಆಡೆಳ್ತ ವೆವಸ್ತೆನ ಹಾಂಗೆನೆ ಕಂಡದೆ.

ಗಂಗರ ಸಾಮ್ರಾಜ್ಯಲಿ ಊರುಗೌಡ, ನಾಡಗೌಡ, ಸೀಮೆಗೌಡ್ರು ತೇಳುವ ಪದವಿಗಳ ಕಾಣಕ್. ಇದೇ ವೆವಸ್ತೆ ಚಾಲುಕ್ಯ, ಹೊಯ್ಸಳ, ವಿಜಯನಗರ ಹಾಂಗೆ ಇಕ್ಕೇರಿ ಸಂಸ್ತಾನಗಳ ಆಡೆಳ್ತಿಗೆಲಿನು ಮುಂದುವರ್‌ದುಟು.

ಕಟ್ಟೆಮನೆನ ಸೀಮೆಗೌಡರ್ ಶ್ರೇಣಿನ ಮೇಗಡೆ ಜಾಗೆಲಿದ್ದರೆ, ಅವರ ಕಾಗಡೆಲಿ ಮಾಗಣೆಗೌಡರ್ ಬಂದವೆ. ಮಾಗಣೆಗೌಡ್ರ ಕೆಳೆಗೆ ಊರಗೌಡ್ರು ಬಂದವೆ. ಊರಗೌಡನ ಒಟ್ಟಿಗೆ ಒತ್ತುಗೌಡ ಇದ್ದ್. ಊರುನ ಎಲ್ಲಾ ಗೌಡ ಕುಟುಂಬಗಳ ಇತರ ಸಮುದಾಯವರ ಕೂಡ ಇವು ನಿಯಂತ್ರಸತಿದ್ದೊ.

ದಕ್ಷಿಣಕನ್ನಡಲಿ ಎರ್‌ಡ್ ಕಟ್ಟೆಮನೆಗಳ ನಾವ್ ಕಾಣಕ್. ಅದ್ ಬಲ್ನಾಡು ಹಾಂಗೆ ಕೂಜುಗೋಡು ಕಟ್ಟೆಮನೆಗ. ಕೊಡ್‌ಗ್‌ನ ಗೌಡ್ರುಗೆ 'ಕುಂಬಗೌಡನ' ಕಟ್ಟೆಮನೆ. ಬಲ್ನಾಡು ಕಟ್ಟೆಮನೆವ್ ಬೆಳ್ತಂಗಡಿ, ಪುತ್ತೂರು, ವಿಟ್ಲ, ಬಂಟ್ವಾಳ ಹಾಂಗೆ ಕಾಸರಗೋಡು ಬಾಗದ ತುಳು ಗೌಡ್ರುಗಳ ನೋಡಿಕಂಡವೆ. ಇವರ ಅಡಿಲಿ ಈ ಕೆಳಗೆನ ಮಾಗಣೆನವ್ ಬಂದವೆ. (1) ವಿಟ್ಲ ಅಮ್ಮೆ, (2) ನರುವೋಲ್ದಡಿ, (3) ಕುಂಟಿನಿ, (4) ಪಲ್ಲದಾಲ, (5) ವಲಂಬ್ರ, (6) ಬಾಜಿಲ ಹಿರೇ ಬಂಡಾಡಿ, (7) ಕಾಯೆರ್‌ಮೊಗರು, (8) ಕನ್ನಡ್ಕ. (9) ನೆಲ್ಯಾಡಿ ಓಡಿತ್ತಡ್ಕ

ಬಲ್ನಾಡು ಕಟ್ಟೆಮನೆ ನಾಕ್ ಅಂಕಣದ ನಡುಲಿ ಒಳ ಮುಂದು ಇರ್‌ವ 'ಅರೆಬಾಸಿಗರ ಮತ್ತೆ ತುಳುವರ ಸುತ್ತು ಪಡ್ಪಿರೆ' ಮನೆನ ಕಟ್ಟಣ ಉಟ್ಟು. ಇದ್‌ಕೆ 300–400 ವರ್‌ಸಗಳ ಇತಿಯಾಸ ಉಟ್ಟು.

ನಾಕ್ ಕವಲ್‌ನ ಕೂಡುಕುಟುಂಬ ಉಟ್ಟು, ಎದುರದ ದೊಡ್ಡ ಚಾವಡಿನ ತೆಂಕ್‌ಗೆ ಮನೆ ದೆವ್ವಗಳ ಕೋಣೆ ಇದ್ದದೆ. ಇಂತ ಮನೆಗಳ ವಿಟ್ಲ ಅಮ್ಮೆ ಮಾಗಣೆ ಮನೆ ಹಾಂಗೆ ಪಾಡಿ, ಗೋಲ್ತಮಜಲ್ಲಿನೂ ಕಾಣಕ್. (ಎ.ಆರ್.ಜಿ.)

**ಗೌಡ ಸಮುದಾಯಲಿ ಇರ್‌ವ ನ್ಯಾಯ ವೆವಸ್ತೆ :** ಗೌಡ ಸಮುದಾಯ ಕೂಡ್ ಕುಟುಂಬ ವೆವಸ್ತೆಲಿ ಬೊದ್ಕಿಕೆ ಇಸ್ಟ ಪಡೋವು. ಕಾಲ ಕ್ರಮೇಣ ಸಣ್ಣ ಕುಟುಂಬ, ಚೊಕ್ಕ ಕುಟುಂಬ ವೆವಸ್ತೆಗೆ ಮಾರ್ ಹೋಗಿದ್ದೊ, ಆದುನೀಕರಣಂದಾಗಿದೊ, ಇಲ್ಲರೆ ಕುಟುಂಬದೊಲೆಗೆನ ಹೊಂದಾಣಿಕೆ ಸಮಸ್ಯೆಂದನೊ ಈ ಕೂಡ್ ಕುಟುಂಬ ವೆವಸ್ತೆ ಕಡ್ಮೆ

ಆಕಂಡ್ ಬಾತ್. ಈಗ ನಾಕಾರ್ ಅಪವಾದಗಳ ಬುಟ್ಟರೆ ಈ ವೆವಸ್ತೆ ತನ್ನತನನ ಕಳ್ಕಂಡುಟುತ ಆದೆ. ಈಗದ ತಲೆಮಾರ್ ಸಣ್ಣದಾದ ಕುಟುಂಬದ ವೆವಸ್ತೆ ಒಳ್ಳೆದ್‌ಂತ ಅದರ ಒಪ್ಪಿಕಂಡೊಳೊ.

ಗೌಡ ಸಮುದಾಯಲಿ ನ್ಯಾಯ ಪಂಚಾತಿಕೆ ಬೇರೆಬೇರೆ ತರಲಿ ನಡೆತ್ತಿದ್ದದ್ ಕಂಡ್‌ಬಂದದೆ. ದಕ್ಷಿಣಕನ್ನಡ ಮತ್ತೆ ಕೊಡಗ್‌ನ ಗೌಡ ಸಮುದಾಯದ ಒಳಾಡೆಳ್ತ ವೆವಸ್ತೆ ಗಂಗರ ಕಾಲದ ಆಡೆಳ್ತ ವೆವಸ್ತೆನಾಂಗೆ ಕಂಡ್‌ಬಂದದೆ. ಗಂಗರ ಕಾಲಲಿ ಊರ್‌ಗೌಡ, ನಾಡಗೌಡ ಮತ್ತೆ ಸೀಮೆಗೌಡ ತೇಳುವ ಆಡಳಿತ ವೆವಸ್ತೆನ ಮಜಲ್‌ಗ ಇದ್ದೊ. ಅದರಂಗೆ ಗೌಡ ಸಮುದಾಯದ ನ್ಯಾಯ ವೆವಸ್ತೆಲಿ ಪಟ್ಟೆದಾರ, ಊರುಗೌಡ, ಮಾಗಣೆ ಗೌಡ, ಕಟ್ಟೆಮನೆ ಗೌಡ ತೇಳ್‌ವ ಸ್ರೇಣೀಕೃತ ಆಡೆಳ್ತ ವೆವಸ್ತೆ ಇತ್ತ್. ಮಾಗಣೆ ಗೌಡ ಮತ್ತೆ ಕಟ್ಟೆಮನೆ ಗೌಡ್ರು, ಶೃಂಗೇರಿ ದರ್ಮಸಂಸ್ತಾನದ ಅಡಿಗೆ ಒಳಪಟ್ಟವೆ. ಇದ್ ಈಗದ ನ್ಯಾಯಾಂಗಲಿರ್‌ವ ಸ್ತರ ವೆವಸ್ತೆಗೆ ಹೋಲಿಕೆ ಉಟ್ಟ್, ಪಟ್ಟೆದಾರ ತೇಳ್ದು ಕೆಳಹಂತದ ನ್ಯಾಯದಾನದ ವೆವಸ್ತೆ ಆದರೆ ಶೃಂಗೇರಿ ಪೀಟ ಉನ್ನತ ಮತ್ತೆ ಕಡೆ ಮಜಲ್‌ನ ನ್ಯಾಯದಾನದ ವೆವಸ್ತೆಯಾಗಿತ್ತ್. ಗೌಡ ಸಮುದಾಯಲಿ ನ್ಯಾಯದಾನ ಪಂಡ್‌ಂದನೇ ನಡ್ಕಂಡ್‌ಬಂದ ಸಂಪ್ರದಾಯಗ, ಆಚಾರ ವಿಚಾರಗ,




ಗೌಡರ ಆಡೆಳ್ತ ವೆವಸ್ತೆ

ಕ್ರಮಂಗ, ಹಿರಿಯೊವು ಕಲ್ಸಿಕೊಟ್ಟ ಜೀವನ ಮಾರ್‌ಗಗ, ನಡೆ ನುಡಿಗ, ಜೀವನ ದರ್ಮದ ಮೇಲೆ ನಿರ್‌ದಾರ ಆಗ್ತಿತ್ತ್.

**ಪಟ್ಟೆದಾರ :** ಗೌಡ ಸಮುದಾಯ ಪಿತೃ ಪ್ರದಾನ ಕುಟುಂಬ ವೆವಸ್ತೆನ ಅಳವಡ್ಸಿಕೊಂಡುಟು. ಹಿಂದೆಲ್ಲಾ ಈ ಸಮುದಾಯಲಿ ಕೂಡು ಕುಟುಂಬ ವೆವಸ್ತೆಗೆ ಜಾಸ್ತಿ ಒತ್ತ್‌ಕೊಡ್ತಿದ್ದೊ. ಕುಟುಂಬದ ಎಲ್ಲಾ ನ್ಯಾಯಾಪಂಚಾತಿಕೆ ಆ ಕುಟುಂಬಲಿ ಹಿರಿಯಂವಗೆ ವರ್‌ಗಾವಣೆಯಾದೆ. ಅವರ 'ಪಟ್ಟೆದಾರ' ತೇಳಿ ಕರೆತ್ತಿದ್ದೊ. ಈ ಪಟ್ಟೆದಾರ ಇರ್‌ವ ಮನೆನ 'ಐನ್ ಮನೆ' ಇಲ್ಲರೆ 'ಮೂಲ ಮನೆ' ತೇಳುವೆ. ಪಂಡ್‌ನ ಕಾಲದ ಮನೆಗಳ್‌ಲಿ 'ಬಾಡೆ' ತೇಳಿ ಕರೆತ್ತಿದ್ದ ಒಂದ್ ಸಬಾಂಗಣ ರೂಪದ ವೆವಸ್ತೆ ಇರ್‌ತ್ತಿತ್ತ್. ಇದ್ ಕುಟುಂಬದ ಸದಸ್ಯರೆಲ್ಲ ಕುದ್ದ್ ಚರ್‌ಚೆ ಮಾಡ್‌ವ ಜಾಗೆ ಆಗಿತ್ತ್. ಇಲ್ಲಿ ಪಟ್ಟೆದಾರ ಕುದ್ರಿಕೆ 'ಐಮರ' ತೇಳುವ ವಿಸೇಸ ಆದ ಜಾಗೆ ಇತ್ತ್. ಇಲ್ಲಿ ಪಟ್ಟೆದಾರ ಕುದ್ದ್‌ದ್ ಕುಟುಂಬದ ಸದಸ್ಯರ ಸಮಸ್ಯೆಗಳ ಚರ್‌ಚೆ ಮಾಡಿ, ಪರಿಹಾರ ಕೊಡತಿದ್ದೊ.

**ಊರುಗೌಡ :** ಕುಟುಂಬದ ತಕರಾರ್‌ನ ಮನೆನ ಒಳೆಗೆ ಪಟ್ಟೆದಾರನ ಎದ್‌ರ್ ಬಗೆಹರಿಸಿಕೆ ಆಗದಿದ್ದಲ್ಲಿ ಅದರ ಮನೆನ ಹೊರಗೆನ ನ್ಯಾಯ ಪಂಚಾತಿಕೆಗೆ ತಕಂಡ್ ಹೋಗತಿದ್ದೊ. ಮನೆನ ಹೊರಗೆನ ನ್ಯಾಯಾದಾನ ವೆವಸ್ತೆನ ಸುರುನ ಮಜಲ್ 'ಊರುಗೌಡ'. ಇವರ ಎದುರಕ ತಕರಾರ್‌ಗಳ ಬಗೆಹರ್‌ಸಿಕಣಕಾಗಿತ್ತ್. ಒಂದ್ ಪ್ರದೇಸದ ಸುಮಾರ್ ಕುಟುಂಬಗಳ ನೋಡಿಕಂಬಕೆ ಊರುಗೌಡ ಇದ್ದದೆ. ಊರ್‌ನ ಕುಟುಂಬಗ ಮತ್ತೆ ಊರುಗೌಡನ ನಡುಲಿ ಮಾತ್‌ಕತೆಗೆ ಒಬ್ಬ 'ಒತ್ತುಗೌಡ' ಇದ್ದದೆ. ಇಂವನ 'ಬುದ್ಯಂತ' ತೇಳಿನೂ ಕರ್‌ದವೆ. ಊರ್‌ನ ಎಲ್ಲಾ ಗೌಡ ಕುಟುಂಬಗಳ ಮತ್ತೆ ಇತರೆ ಸಮುದಾಯನನೂ ಇಂವನೇ ನೋಡಿಕಣತಿತ್ತ್. ಕುಟುಂಬದ ಒಳಗೆನ ಪರಿಹಾರ ಕಂಡ್‌ಕಂಬಕೆ ಆಗದ ಸಮಸ್ಯೆಗಳ ಪಟ್ಟೆದಾರ ಈ ಒತ್ತುಗೌಡಂದಾಗಿ ಊರುಗೌಡನ ಹಕ್ಕಲೆ ತೆಕಂಡ್ ಹೋದೆ. ಮನೆ ಒಳೆಗೆನ ಕುಟುಂಬ ಸದಸ್ಯರ ಸಮಸ್ಯೆಗಳ ಊರುಗೌಡನ ಮುಂದೆ ಇಸುವೆ. ಈ ಸಮಸ್ಯೆಗೆ ನ್ಯಾಯ ಪಂಚಾಯತಿಕೆನ ಹೊತ್ತುಲಿ ಪಟ್ಟೆದಾರ ಹೇಳ್ದ ಪರಿಹಾರನನೂ ಊರುಗೌಡರ್ ತಿಳ್‌ಸುವೆ. ಅಲ್ಲಿ ಪೂರ ಚರ್‌ಚೆ ಮಾಡ್ದ ಮೇಲೆ ಊರುಗೌಡ ಒಂದ್ ಕಡೇ ಅಬಿಪ್ರಾಯಕೆ ಬಂದದೆ. ಅದರಂಗೆ ಕುಟುಂಬದ ಸದಸ್ಯರ್‌ಗೆ ಒಂದ್ ಪರಿಹಾರನ ಕೊಟ್ಟದೆ. ಕೆಲವೊಮ್ಮೆ ಊರುಗೌಡ ಇಲ್ಲದೆ ಇದ್ದ ಪಕ್ಸಲಿ ಈ ಒತ್ತುಗೌಡನೇ ಜವಾಬ್ದಾರಿನ ನಡ್ಸಿಕಂಡ್ ಹೋದೆ.

ಈ ಊರುಗೌಡರ್ ಬರೇ ಕುಟುಂಬದ ಒಳಗೆನ ಸಮಸ್ಯೆಗಳ ಮಾತ್ರ ಬಗೆಹರ್‌ಸುವ ಜವಾಬ್ದಾರಿ ಅಲ್ಲ. ಅಂವನ ಮೇಲ್ವಿಚಾರಣಾ ವ್ಯಾಪ್ತಿಗೆ ಒಳಪಟ್ಟ ಗೌಡ ಸಮುದಾಯದ ಕುಟುಂಬ–ಕುಟುಂಬಗಳ ನಡುಲಿ ಏರ್ಪಟ್ಟ ಸಮಸ್ಯೆಗಳನೂ ಕೂಡ ಅಂವ ಬಗೆಹರ್‌ಸಕಾದೆ. ಪ್ರತಿ ಒಂದ್ ಊರುಗೂ ಒಬ್ಬ ಊರುಗೌಡ ಇದ್ದದೆ. ಈ ಊರುಗೌಡ ಮತ್ತೆ ಒತ್ತುಗೌಡರ್ ಸಿಕ್ಕಕಾದ ಮೊರ್ಯಾದೆಲಿ ಅಂತಹ ವೆತ್ಯಾಸಗ ಇರತಿತ್ಲೆ ಆದರೆ ಊರುಗೌಡರ್ ಸಾಮಾನ್ಯ ಆಗಿ ಸುರುನ ಸ್ತನಮಾನ. ಗೌಡ ಸಮುದಾಯಲಿ ಈ ಹುದ್ದೆ ಬಾರಿ ಗೌರವದ ಹುದ್ದೆ ಆಗುಟು. ಸಾಮಾಜಲು ಇಂವ ಪ್ರತಿಷ್ಟಿತ ಮೊಯಿಂಸ ಆಗಿದ್ದ್ ಉನ್ನತ ಸನಮಾನಲಿ ಇದ್ದದೆ. ತನ್ನ ಮೇಲ್ವಿಚಾರಣೆಗೆ ಒಳಪಟ್ಟ ಗೌಡ ಕುಟುಂಬದ ಎಲ್ಲಾ ಜವಾಬ್ದಾರಿನೂ ಇಂವನ ಹೆಗಲ್ ಮೇಲೆ ಇದ್ದದೆ. ಹಂಗಾಗಿ ಅಂವನ ಕೈ ಅಡಿ ಬಾವ ಗೌಡ ಕುಟುಂಬಲಿ ನಡೆವ




ಯಾದೇ ಜಂಬರಲಿ ಅದರ್‌ಲು ವಿಸೇಸ ಆಗಿ ನೇಮ, ನಡಾವಳಿಗ ಮತ್ತೆ ಮೊದ್ವೆ ಜಂಬರಗಳ್‌ಲಿ ಇವಂಗೆ ಪ್ರತ್ಯೇಕ ಹೇಳಿಕೆ ಕೊಟ್ವವೆ. ಹಂಗೆನೇ ಅಂವಂಗೆ ಬೇರೆ ಕುದ್ರಿಕೆ ವೆವಸ್ತೆನ ಮಾಡಿ ಮೊರ್ಯಾದೆಂದ ಕರ್‌ಕಂಡ್ ಬಂದವೆ.

**ಮಾಗಣೆ ಗೌಡ :** ಊರ್‌ನ ಗೌಡ ಸಮುದಾಯದ ಹೆಚ್ಚಿನ ತಕರಾರ್‌ಗಳ ಸಾಮಾನ್ಯ ಆಗಿ ಊರ್‌ನ ಮಟ್ಟಲಿ ಊರುಗೌಡನೇ ಬಗೆಹರ್‌ಸಿದೆ. ಊರುಗೌಡಂದ ಕೂಡ ಪರಿಹಾರ ಮಾಡಿಕಾಗದಿದ್ದರೆ ಸಮಸ್ಯೆಗಳ ಬಗೆಹರಿಸಿಕೆ 'ಮಾಗಣೆ ಗೌಡ' ಇದ್ದದೆ. ಸಾಮಾನ್ಯ ಜೆನಂದ ಆರ್ ಊರು ಗೌಡರ ಮೇಲ್ವಿಚಾರಣೆ ನಡೆಸಿಕೆ ಒಬ್ಬ ಮಾಗಣೆ ಗೌಡ ಇದ್ದದೆ. ಅವರ ಮೇಲೆ ಪೂರ ಹಿಡ್ತ ಇಂವಗಿದ್ದದೆ. ಅದರಂಗೆ ಒಟ್ಟು 36 ಊರುಗೌಡಡ್ರುಗೆ 9 ಮಾಗಣೆ ಗೌಡ್‌ರ್ ಇದ್ದವೆ. ಇಂವನ ಕಾರ್ಯಕ್ಷೇತ್ರದ ಬೂಗೋಳಿಕ ವ್ಯಾಪ್ತಿಲಿ ದೊಡ್ಡದಾಗಿದ್ದದೆ. ಸಹಜ ಆಗಿ ಇವಂಗೆ ಜವಾಬ್ದಾರಿನು ಹೆಚ್ಚಿಗೆ ಇದ್ದದೆ. ಮಾಗಣೆ ಗೌಡನ ಸ್ತಾನಮಾನನೂ ಊರುಗೌಡನ ಸ್ತಾನಮಾನಂದಲು ಪ್ರತಿಸ್ಟೆದಾಗಿದ್ದದೆ. ಗೌಡ ಸಮುದಾಯದ ಜಂಬರಗಳ್‌ಲಿ ಇಂವಂಗೂ ಪ್ರತ್ಯೇಕ ಹೇಳಿಕೆ ಮತ್ತೆ ಕುದ್ರಿಕೆ ವೆವಸ್ತೆ ಇದ್ದದೆ.

**ಕಟ್ಟೆಮನೆ ಗೌಡ :** ಊರುಗೌಡ ಮತ್ತೆ ಮಾಗಣೆ ಗೌಡರ ಮೇಲೆ ಕಟ್ಟೆಮನೆ ಗೌಡ ಇದ್ದದೆ. ಕಟ್ಟೆಮನೆ ಗೌಡ್ರ್ ದುಡ್ಡು ಮತ್ತೆ ರಾಜಕೀಯ ಆಗಿದ್ ಗಟ್ಟಿ ಇದ್ದೊ. ಗೌಡ ಸಮುದಾಯದ ನ್ಯಾಯ ವೆವಸ್ತೆಲಿ ಇವ್ಕೆ ಹೆಚ್ಚಿನ ಅದಿಕಾರ ಮತ್ತೆ ಸ್ತಾನಮಾನ ಉಟ್ಟು. ಊರ್‌ಲಿ ಗೌಡ ಸಮುದಾಯಕೆ ಸಮ್ಮಂದಪಟ್ಟ ಮಾಹಿತಿಗಳ ಕಟ್ಟೆಮನೆ ಗೌಡ ಮಾಗಣೆ ಗೌಡರ್‌ಂದ ಪಡ್ಕಂಡರೆ ಮಾಗಣೆ ಗೌಡ್ರು ಊರುಗೌಡ್ರುಂದ ಪಡ್ಕಣ್ತಿದ್ದೊ. ದಕ್ಷಿಣಕನ್ನಡಲಿ ಬಲ್ನಾಡು ಕಟ್ಟೆಮನೆ ಮತ್ತೆ ಕೂಜುಗೋಡು ಕಟ್ಟೆಮನೆ ತೇಳುವ ಎರ್‌ಡ್ ಕಟ್ಟೆಮನೆಗ ಒಳೊ. ಬಲ್ನಾಡ್ ಕಟ್ಟೆಮನೆಯವು ಬೆಳ್ತಂಗಡಿ, ಪುತ್ತೂರು, ವಿಟ್ಲ, ಬಂಟ್ವಾಳ ಹಂಗೆ ಕಾಸರಗೋಡು ಬಾಗದ ತುಳು ಗೌಡ್‌ರ ನಿಯಂತ್ರಿಸಿರೆ ಕೂಜುಗೋಡು ಕಟ್ಟೆಮನೆವು ಅರೆಬಾಸೆ ಮಾತಾಡುವ ಗೌಡ್ರ ನಿಯಂತ್ರ್‌ಸುವೆ. (ಸಿ.ಬಿ.)

**ಶೃಂಗೇರಿ ದರ್ಮ ಸಂಸ್ತಾನ :** ಗೌಡ ಸಮುದಾಯದ ನ್ಯಾಯ ವೆವಸ್ತೆಲಿ ಶೃಂಗೇರಿ ಮಟ ದೊಡ್ಡ ಮತ್ತೆ ಕಡೇನ ನ್ಯಾಯದಾನದ ಜಾಗೆ ಆಗುಟು. ಇದರ ಗುರುಮಟ ತೇಳಿನೂ ಕರೆದವೆ. ಗೌಡ ಸಮುದಾಯದ ಉಸ್ತುವಾರಿ ನೋಡಿಕಂಬ ಎರಡೂ ಕಟ್ಟೆಮನೆಗ ಸೀದ ಶೃಂಗೇರಿ ಮಟದ ಅದಿಕಾರ ಮತ್ತೆ ಆಡೆಳ್ತಕೆ ಒಳಪಟ್ಟುಟು. ಕಟ್ಟೆಮನೆ ಗೌಡ್‌ರ ನೇಮಕ ಮಾಡ್‌ವ ಹಕ್ಕ್ ಶೃಂಗೇರಿ ಪೀಟಕ್ಕುಟ್ಟು. ಗೌಡ್ರ್‌ಗೆ ಸಮ್ಮಂದಪಟ್ಟಂಗೆ ಸಂದೇಸಗ, ಆದೇಸಗಳ ಕೊಡಕುತಾದರೆ ಶೃಂಗೇರಿ ಪೀಟ ಕಟ್ಟೆಮನೆ ಗೌಡರ ಮುಕಾಂತರನೆ ಸಮುದಾಯದನ ಮುಟ್ಟೊಕಿತ್.

ಕಟ್ಟೆಮನೆ ಗೌಡ್ರ ಮೂಲಕ ಶೃಂಗೇರಿ ಮಟ ಗೌಡ ಸಮುದಾಯದ ನಿಯಂತ್ರಣ ಹೊಂದಿತ್. ಹಿಂಗಾಗಿ ಗೌಡ ಸಮುದಾಯ ಶೃಂಗೇರಿ ಮಟದೊಟ್ಟಿಗೆ ನೇರ ಸಮ್ಮಂದ ಇಸಿಕಂಬಕೆ ಸಾದ್ಯಆತ್. ಕಟ್ಟೆಮನೆ ಗೌಡ್ರ್ ಅವ್‌ಕೆ ವಯ್ಸಿದ ಜವಾಬ್ದಾರಿನ ಸರಿಯಾಗಿ ನಿರ್ವಹಣೆ ಮಾಡದಿದ್ದರೆ ಸಮುದಾಯದ ಜೆನಂಗ ಸೀದ ಶೃಂಗೇರಿ ಮಟಕೆ ಹೋಗತಿದ್ದೊ. ಅಲ್ಲಿ ತಮ್ಮ ಸಮಸ್ಯೆಗಳ ಮುಂದಿಸತಿದ್ದೊ. ಶೃಂಗೇರಿ ಮಟಂದ ಹೊರ್‌ಡಿಸ್‌ತ್ತಿದ್ದ ಯಾದೇ ಸುದ್ದಿಗ ಗೌಡ್ರ ಆಡೆಳ್ತ ವೆವಸ್ತೆನ ಕೆಳಸ್ತರ ಆದ ಒತ್ತು ಗೌಡಂದ ಸಮುದಾಯದ ಎಲ್ಲಾ ಜೆನಂಗಳಿಗೂ ಎತ್ತತಿತ್.

ಕಾಲಕ್ರಮೇಣ ಸಮಾಜ ಆದುನಿಕ ನ್ಯಾಯವೆವಸ್ತೆಗೆ ಒಳಪಟ್ಟದ್ದರ್‌ಂದ ಈ ಗೌಡ ಸಮುದಾಯದ ಒಳಾಡೆಳ್ತ ವೆವಸ್ತೆ ಅದ್ಕಿದ್ದ ಮನ್ನಣೆನ ಕಳ್ಕಂಡತ್. ಈಗ ಈ ವೆವಸ್ತೆ ಅಸ್ತಿತ್ವನ ಕಳಕಂಡ್ ಇತಿಯಾಸದ


ಶೃಂಗೇರಿ ಮಠ

ಪುಟಲಸ್ಟೆ ಕಾಣುವಂತಾಗುಟು. ಆದರೂ ಗೌಡ ಸಮುದಾಯದ ಒಳಾಡೆಳ್ತ ವೆವಸ್ತೆನ ಬಾಗ್ ಆಗಿದ್ದ ಬಲ್ನಾಡು ಮತ್ತೆ ಕೂಜುಗೋಡು ಕಟ್ಟೆಮನೆ ಮನೆತನದವರ ಗೌಡ ಸಮುದಾಯದ ಜೆನಂಗ ಇಂದ್‌ಗು ಗೌರವಂದ ಕಂಡವೆ. (ಸಿ.ಬಿ.)

**ಗೌಡ ಸಮುದಾಯಲಿ ಊರ್ ಗೌಡ್ರ ಪಾತ್ರ :** ಬೊದ್ಕಿಕೆ ಬೇಸಾಯನೆ ನಂಬಿಕಂಡ ಗೌಡ ಸಮುದಾಯ ನಾಡ್‌ಗೆ ಬರ ಬಾಕನ ಇಲ್ಲರೆ ಬೆಳೆ ನಾಸಾಗಿ ಸುಮಾರ್ 5 ಸತಮಾನಗಳ್‌ಂದ ಅಂದ್‌ನ ಕಾಲಲಿ ಬಾರಿ ಕಾಡ್ ಉತ್‌ಪತ್ತಿ ಇದ್ದಂತ ಸುಳ್ಯ ಕಡೆಗೆ ಹಾಸನದ ಐಗೂರು ಕಡೆಂದ ವಲಸೆ ಬಂದೋಂತ ಸುಮಾರ್ ದಾಕಲೆಗ ತಿಳ್‌ಸ್‌ವೆ. ಹಿಂಗೆ ಬಂದ ಗೌಡ ಸಮುದಾಯ ಕ್ರಮೇಣ ಸುಳ್ಯ, ಪುತ್ತೂರು, ಬೆಳ್ತಂಗಡಿ, ಬಂಟ್ವಾಳ ತಾಲೂಕ್‌ನ ಹಂಗೆ ಕೇರಳದ ಹಳ್ಳಿ ಜಾಗೆಲೂ ನೆಲೆ ಕಂಡುಕೊಂಡೊ. ಮುಂದೆ ತುಂಬಾ ಜೆನಂಗ ಕೆಲ್‌ಸ

ಹುಡ್‌ಕಿಕಂಡ್ ಕೊಡಗ್‌ನ ಕಡೆನೂ ಹೋಗಿ ಒಕ್ಕಲಾದೊ. ಇವರ್‌ಲಿ ಹೆಚ್ಚಿನವು ಬೇಸಾಯನೇ ನಂಬಿಕಂಡಿದ್ದ್ ಕಸ್ಟ ಕಾರ್ಪಣ್ಯಗಳ್‌ಂದ ಬೊದ್‌ಕಿ ಈಚೆನೆ ದಿನಗಳ್‌ಲಿ ಸ್ವಂತ ನೆಲೆ ಕಂಡ್‌ಕಂಡೊಳೊ. ಇವು ಸುಳ್ಯ ಮತ್ತೆ ಕೊಡಗ್‌ಲಿ ಅರೆಬಾಸೆ ಹಂಗೆ ಪುತ್ತೂರು, ಬಂಟ್ವಾಳ, ಬೆಳ್ತಂಗಡಿಗಳಲಿ ತುಳುಬಾಸೆ ಮಾತಾಡ್‌ವೆ.

**ಗೌಡ ಸಮುದಾಯದ ನೆಲೆಗಟ್ಟ್ :** ಹತ್ತ್ ಕುಟುಂಬ, ಹದಿನೆಂಟ್ ಗೋತ್ರಕೆ ಸೇರ್‌ವ ಗೌಡರ್ ಅವರ್‌ದೇ ಆದ ವಿಸೇಸ ಕುಟುಂಬ ಕ್ರಮನ ನಡ್‌ಸ್‌ವೆ.ಬೇಸಾಯದ ಪಾಯ ಗಟ್ಟಿ ಇರ್‌ದರ್‌ಂದ ಇವರ ಬೊದ್‌ಕ್ ಮತ್ತೆ ಸಂಸಾರನ ನಂಟ್ ಇನ್ನೂಸ ಗಟ್ಟಿ ಆಗಿದ್ ಉಟ್ಟು. ಬೇರೆ ಕಡೆಂದ ಬಂದ್ ಸೇರ್‌ದ ಕಾರಣಕ್ಕೆ ಅಲ್ಲಿನ ಜೆನಂಗಳ ವಿರೋದ ಎದ್‌ರ್‌ಸಿಕೆ, ಹಂಗೆ ತಮ್ಮವರ ಒಳ್ಳಿಕಂಬಕೆ ಸೃಂಗೇರಿನ ಗುರುಪೀಟಾಂತ ಒಪ್ಪಿಕಂಡೊ. ಇದರ್‌ಂದಾಗಿ ತಮ್ಮವು ನಡ್‌ಕಂಬ ನಿಯಮಂಗಳ ಮಾಡಿಕಂಡೊ. ಗೌಡರ ಒಟ್ಟು ಸೇರ್‌ಸಿಕೆ ಮೂಡುಕಟ್ಟೆ ಮನೆ ಮತ್ತೆ ಪಡುಕಟ್ಟೆ ಮನೆತ ಎರಡ್ ಕಟ್ಟೆಮನೆಗ ಒಳೊ. ಈ ಕಟ್ಟೆಮನೆಗಳ್‌ಲಿ ಮಾಗಣೆ ಗೌಡ್ರು, ಊರು ಗೌಡ್ರು ಮತ್ತೆ ಒತ್ತು ಗೌಡ್ರು ಉಸ್ತುವಾರಿಲಿದ್ದವೆ. ಅವರ ಆ ಜಾಗೆಲಿ ಕುದ್ರುಸಿ ಕಟ್ಟೆಮನೆ ಗೌಡ್ರುಗೆ ಸನದು ಕೊಡ್ಸಿದ ದಾಕಲೆಗ ಉಟ್ಟು. ಇದರ್‌ಂದ ಗೌಡ ಸಮಾಜದವ್ ಅದರ್‌ದೆ ಕಟ್ಟ್ ಪಾಡ್‌ಗಳ್‌ಂದ ಸಮುದಾಯನ ಉಳ್ಸಿಕಂಡ್ ನಡ್ಸಿಕಂಡ್ ಬಂದೊ. ಸುಳ್ಯ ಕಡೆಲಿ ಕೂಜುಗೋಡು ಕಟ್ಟೆಮನೆ ಹಂಗೆ ಪುತ್ತೂರು ಕಡೆ ಬಲ್ನಾಡು ಕಟ್ಟೆಮನೆ ಉಸ್ತುವಾರಿಕೆಲಿ ಜೆನರ ಆಚರಣೆ ಮತ್ತೆ ಕ್ರಮಲಿ ವೆತ್ಯಾಸಗ ಉಟ್ಟುಂತ ಕಟ್ಟೆಮನೆ, ಮಾಗಣೆ, ಊರ್ ಗೌಡ್ರು ಮತ್ತೆ ಒತ್ತು ಗೌಡರ್‌ಗೆ ತಿಳ್‌ಸತಿದ್ದೊ ಅವು ಎಲ್ಲಾ ಕ್ರಮ, ಆಚರಣೆ ವಿಚಾರಲಿ ಪ್ರತಿ ಮನೆಗೂ ಸಂಗತಿ ಎತ್ತ್‌ಸ್‌ತಿದ್ದೊ. ಜಂಬರದ ಹೊತ್ತುಲಿ ಜಗಳ ಬಂದರೆ ಒತ್ತ್‌ಗೌಡರ್ ಊರುಗೌಡರ್‌ಗೆ, ಊರು ಗೌಡ್ರ್ ಮಾಗಣೆ ಗೌಡ್ರ್‌ಗೆ, ಮಾಗಣೆ ಗೌಡ್ರು ಕಟ್ಟೆಮನೆ ಗೌಡ್ರುಗೆ, ಕಟ್ಟೆಮನೆ ಗೌಡ್ರು ಶೃಂಗೇರಿ ಗುರುಪೀಟಕ್ಕೆ ನ್ಯಾಯ ತಕೊಂಡೋವ ಕ್ರಮ ಇತ್ತ್.

ಇನ್ನ್ ಮೊದ್‌ವೆಲಿ ತೆರವ್‌ನ ದುಡ್ಡುಲಿ ಒಂದ್ ಪಾಲ್‌ನ ಊರುಗೌಡರ್ ಮಾಗಣೆ ಗೌಡರ್‌ಗೆ ಮಾಗಣೆ ಗೌಡರ್ ಕಟ್ಟೆಮನೆ ಗೌಡರ್‌ಗೆ, ಕಟ್ಟೆಮನೆ ಗೌಡರ್ ಸೃಂಗೇರಿ ಗುರುಪೀಟಕ್ಕೆ ಕಳ್ಸಿ ಕೊಡುವ ಕ್ರಮನೂ ಇತ್ತ್. ಈಗ ಕಟ್ಟೆಮನೆ ಹಾಂಗೆ ಮಾಗಣೆ ಗೌಡ್ರ ಉಸ್ತುವಾರಿ ಕಡ್‌ಮೆ ಆಗಿ ಊರ್ ಗೌಡರ್ ಪ್ರತಿ ಊರ್‌ಲಿನೂ ಹಾಂಗೆನೆ ಒಳ್‌ಕಂಡ್ ಒಳೊ.

**ಊರ್ ಗೌಡರ ಅಗತ್ಯ :** ಗೌಡ ಸಮುದಾಯಲಿ ಊರ್ ಗೌಡ್ರ್ ಬಾರಿ ಅಗತ್ಯ ಜೆನ. ಏನೇ ಜಂಬರ ಇರ್‌ಲಿ, ಆಚರಣೆಗ ಇರ್‌ಲಿ ಎಲ್ಲ ಇವರ ಉಸ್ತುವಾರಿಲೇ ನಡೆತ್ತಿದ್ದದೆ. ಯಾದೇ ದೂರು ಜಗಳಗಳ ನ್ಯಾಯಪಂಚಾತಿಕೆ ಊರು ಗೌಡರ ಎದುರ್‌ಲಿ ನಡೆತ್ತಿತ್ತ್. ಊರ್ ಗೌಡ್ರ್ ಎರಡ್ ಕಡೆಯವರ ಮಾತ್ ಕೇಳಿ ಮತ್ತೆ ನ್ಯಾಯ ತೀರ್‌ಮಾನ ತೆಕಣತಿದ್ದೊ. ಎಲ್ಲಿಯಾರ್ ತೀರ್‌ಮಾನ ಆಗದೇ ಇದ್ದರೆ ದೂರುಗ ಮಾಗಣೆ ಗೌಡ್ರ್‌ಗೆ, ಕಟ್ಟೆಮನೆಯವುಕೆ ಎತ್ತಿ ಅವು ನ್ಯಾಯ ನೀತಿಂದ ಸಮಸ್ಯೆನ ಬಗೆ ಹರಿಸ್ತಿದ್ದೊ. ಊರ್‌ನ ಯಾದೇ ಆಚರಣೆಗ, ಕುಟುಂಬದ ಜಂಬರಗ, ದೆವ್ವ, ಕಳಿಯಾಟ ಕೋಲಗಳ್‌ಲಿ ಮಾಡ್‌ಸ್‌ವ ಹೊಣೆನ ಊರ್ ಗೌಡರೇ ವಹಿಸಿಕೊಂಡವೆ. ದೆವ್ವ ಅಬಯ ಹಂಗೆ ಪ್ರಸಾದನ ಊರ್ ಗೌಡರ್‌ಗೆ ಸುರುಗೆ ಕೊಟ್ಟದೆ. ಗೂಡೆ ನೋಡುವಲ್ಲಿಂದ ಮೊದ್‌ವೆ ತುಪ್ಪ ತೆಕಂಡ್ ಹೋವ ಜಂಬರಕೆ ಮುಟ್ಟ ಊರು ಗೌಡ ಇರೋಕು. ವಿಳೆಸಾಸ್ತ್ರ ಜಂಬರ ಊರುಗೌಡರ ಮುಕ್ಯಸ್ತಿಗೆಲಿ ನಡ್‌ದದೆ. ವಿಳೆಸಾಸ್ತ್ರ ಮತ್ತೆ ಮೊದ್‌ವೆ ಕಾರ್‌ಯಲಿ ಕೊಡುವ ಗುರ್‌ತುನ ವೀಳ್ಯ, ಚೌಕಿ ವೀಳ್ಯ, ದೇವರ ವೀಳ್ಯ, ಗುರು ವೀಳ್ಯ, ಸಲಾವಳಿ ವೀಳ್ಯ ಮಾತ್ ಕರಾರ್ ವೀಳ್ಯ, ವೀಳ್ಯ ಸಾಸ್ತ್ರದ ವೀಳ್ಯ, ಲಗ್ನ ವೀಳ್ಯ ಬಣ್ಣ ಬಂಗಾರದ ವೀಳ್ಯ ಮತ್ತೆ ತಾಯಿ ತಂದೆ ವೀಳ್ಯಗ ಊರ್ ಗೌಡರ ಮದ್ಯಸ್ತಿಕೆಲಿ ಕೈಬದಲ್ ಆವ ಗಳ್‌ಗೆಲಿ ಎಲ್ಲವುಕೂ ಕೇಳ್‌ವಂಗೆ ಊರು ಗೌಡ ಒಕ್ಕಣೆಗಳ ಹೇಳ್‌ವೆ. ಹಂಗೆ ಎಲ್ಲರ ಸಮ್ಮತಿ ಮತ್ತೆ ಒಪ್ಪಿಗೆನ ಪಡ್‌ಕಂಡವೆ. ಮೊದ್‌ವೆಗೆ ಸುರುನ ದಿನ ಎಣ್ಣೆ ಅರ್‌ಸಿನ ಹಂಗೆ ಮೊದ್‌ರಂಗಿ ಜಂಬರ ಆದಮೇಲೆ ಊರು ಗೌಡ್‌ರೆ ಮೊದು ಮಕ್ಕಳಿಗೆ ಮೂರ್‌ತ ಮಣಿನ ಕಟ್ಟುವೆ. ಮೊದ್‌ವೆ ನಡಿವ ಹೊತ್ತುಗೆ ಹರ್‌ಕೆ ದುಡ್ಡು ಕಟ್ಟಿಕಾಕನ ಊರು ಗೌಡರ್ ಹಾಜರಿದ್ದ್ ಹರ್‌ಕೆ ದುಡ್ಡುನ ಕಟ್ಟುವೆ. ತೆರವ್‌ನ ವೀಳ್ಯ ಕೊಡಿಕಾಕನ ಹೈದನ ಕಡೆನ ಊರ್ ಗೌಡರ್ ವೀಳ್ಯದೆಲೆ ಹಂಗೆ ಅಡಿಕೆ ಹೋಳ್‌ನೊಟ್ಟಿಗೆ 10.50 ರುಪಾಯಿನ ನೆರ್‌ದ ಸಬಿಕರ ಎದ್‌ರ ಗೂಡೆನ ಕಡೆನ ಊರು ಗೌಡರ್‌ಗೆ ಹಸ್ತಾಂತರಿಸುವೆ. ಈ ತೆರವಿನ ದುಡ್ಡುನ ರೂ. 10.50 ರ್‌ಲಿ ರೂ 1 25 ಪೈಸೆ ಊರು ಗೌಡರ ಬಾಬ್ತು ಉಟ್ಟು. ಇದರ ಗೂಡೆನ ಅಪ್ಪಂಗೆ ಕೊಟ್ಟವೆ. ತೆರವ್‌ನ ದುಡ್ಡುನ ಈ ಒಂದ್ ಪಾಲ್ ಊರು ಗೌಡರ್‌ಗೆ ಸೇರಕಾದೆ. ದಾರೆಲಿ, ದಾರೆ ಹೊಯ್ಯಕಾಕನ ಇತ್ತಂಡದ ಊರ್ ಗೌಡರ ಇರ್‌ವಿಕೆಲಿ ದಾರಾ ಕ್ರಮ ನಡ್ಸುವೆ. ಊರು ಗೌಡರ್ ಗಿಂಡಿಚೊಂಬುಲ್ಲಿದ್ದ ಹಾಲ್‌ನ ಮೂರು ಸರ್‌ತಿ ಮೊದೊಳಿಗೆ ಕಡೆಂದ ಮೊದುಮಜ್ಜನ ಕಡೆಗೆ, ಮೊದುಮಜ್ಜನ ಕಡೆಂದ ಮೊದೊಳಿಗೆ ಕಡೆನ ಗಿಂಡಿಚೊಂಬುಗೆ ಹೊಯ್ದ್ ಹಸ್ತಾಂತರ್‌ಸ್‌ವೆ ಅವರ ಅನುಮತಿ ಒಕ್ಕಣೆನೊಟ್ಟಿಗೆ ಮೊದೊಳಿಗೆ ಗಂಟ್‌ಲ್‌ಗೆ ಮೊದುಮಜ್ಜ ತಾಳಿ ಕಂಟಿ ಕಟ್ಟಿದೆ. ಸೇಸೆ ಪಚಾರದ ಹೊತ್ತುಲಿ ಮೊದುಮಕ್ಕಳ ಕುದ್ದುರ್‌ಸಿ ಮನೆನ ಯಜಮಾನ ನೆಂಟರಿಸ್ಟರ್‌ನ ಒಂದ್ ಚೊಂಬು ನೀರ್ ಕೊಟ್ಟ್ ಊರುಗೌಡರೆ ಸೇಸೆಗೆ ಕರ್‌ದವೆ. ಹೆಣ್ಣಿಳ್‌ಸಿ ಕೊಡುವ ಹೊತ್ತುಲಿ ಊರ್ ಗೌಡ್ರು ಹೆಣ್ಣ್‌ನ ಗಂಡ್‌ನ ಕಡೆಯವ್ಕೆ ಕೊಟ್ಟ್ ಸುಕ ಆಗಿ ಸಾಂಕಿ ಸಲಹಿಕೆ ಕೇಳಿಕಂಡವೆ. ತುಪ್ಪ ತಾವ ಕ್ರಮಲಿ ಗೂಡೆನ ಒಟ್ಟಿಗೆ ಹೋದ ಕುರುಂಟುನ ಊರ್ ಗೌಡರೇ ಗೂಡೆನ ಕಡೆಯವ್‌ಕೆ ಒಪ್ಪುಸುವ ಕ್ರಮ ಉಟ್ಟು. ಗೂಡೆನ ಕಡೆಯವಾಗಲೀ ಅಲ್ಲರೆ ಹೈದನ




ಕಡೆವಾಗಲೀ ಮೊದ್‌ವೆ ಹೊತ್ತುಲಿ ಯಾದೇ ತೊಪ್ಪುಗಳ ಮಾಡಿರೆ ಅವು ತೊಪ್ಪ ಕಾಣಿಕೆನ ಕೊಡ್‌ಸುವ ಕೆಲ್‌ಸನ ಊರಗೌಡ್ರು ಮಾಡ್‌ವೆ. ಒಟ್ಟು ಹೇಳೋಕುತಾದಾರೆ ಊರ್ ಗೌಡರೇ ಮೊದ್‌ವೆ ಜಂಬರಲಿ ಮುಕ್ಯ ಪಾತ್ರ ವಯ್‌ಸುವೆ.

ಹುಟ್ಟಿದ ಮೊಯಿಂಸಂಗೆ ಸಾವು ಕಟ್ಟಿಸಿದ ಬುತ್ತಿ. ಗೌಡ ಸಮುದಾಯಲಿ ಒಬ್ಬ ಮೊಯಿಂಸ ಸತ್ತರೆ ಆ ಊರ್‌ನ ಊರುಗೌಡರ್‌ಗೆ ಸುರುಗೆ ಹೇಳಿಕೆ ಕೊಟ್ಟವೆ. ಊರ್ ಗೌಡರ ಮುಕ್ಯಸ್ತಿಕೆಲಿ ಸತ್ತವನ ಒಪ್ಪ ಮಾಡ್‌ವೆ. ಅವರ ಮುಕ್ಯಸ್ತಿಕೆಲಿ ಊರ್‌ನವು ಹಂಗೆ ಕುಟುಂಬದವು ನಡ್ಕಂಡವೆ. ಹೆಣನ ಮೀಸುದು, ಸಿಂಗಾರ ಮಾಡುದ್, ಚಟ್ಟ ಕಟ್ಟುದು, ಒಪ್ಪಕೆ ಜಾಗೆ ಗೊತ್ತು ಮಾಡುದು, ಊರಗೌಡನ ಎದುರ್‌ಲೆ ನಡ್ಯೋಕು. ಸುಡುವ ಹೊತ್ತುಲಿ, ಕಾಟಕ್ಕೆ ಏರ್‌ಸಿಕೆ ಮುಂದೆ ಊರು ಗೌಡ ಬೆಂಡನೀರ್‌ನ ಮಾಯಿಣ ಸೊಪ್ಪುಲಿ ಕೊಡ್‌ಕಿ ಸುದ್ದ ಮಾಡ್ದ ಮೇಲೆನೇ ಹೆಣನ ಮೇಲೆ ಇಸುದು. ಮತ್ತೆ ಊರು ಗೌಡ ಹೆಣದ ಮೇಲೆನ ಬಿಳಿ ಬಟ್ಟೆನ ತೆಗ್‌ದ್ ಹರ್‌ದ್ ಕ್ರಮಕೆ ನಿಲ್ಲುವವಂಗೆ ಕೊಡೋಕು. ಇನ್ನೊಂದು ತುಂಡುನ ಊರವರ ಪರವಾಗಿ ಊರುಗೌಡರ ಕೈಲಿ ಹಿಡ್‌ಕಂಡ್ ಮುಂದೆನ ಕಾರ್‌ಯಗಳ ನಡ್‌ಸ್‌ವ ಜೊವಾಬ್ದಾರಿನ ಕೊಟ್ಟವೆ. ಕೊಳ್ಳಿ ಕೂಡ್‌ಸ್‌ವ ದಿನ, ಮೂರರ ಸುದ್ದ ಗೌಡರ್ ಹೇಳ್‌ದಾಂಗೆ ನಡ್ದದೆ. 11ನೇ ದಿನಲಿ ನಡಿವ ಬೊಜ್ಜದ ಕಾರ್‌ಯಲೂ ಊರು ಗೌಡಂದ್ದೇ ಮುಕ್ಯ ಆಗಿದ್ದವೆ. ಬೊಜ್ಜದ ದಿನ ಒಪ್ಪ ಮಾಡ್‌ದ ಜಾಗಲಿ ದೂಪೆ ಕಟ್ಟುವ ಜೆವಾಬ್ದಾರಿಸ ಊರು ಗೌಡಂದ್ದೇ ಆಗಿದ್ದದೆ. ದೂಪೆನ ಹಕ್ಕಲೆ ಊರ್ ಗೌಡ ಸೊರ್‌ಗಕೆ ಸಂದಾಯ ಮಾಡ್‌ವ ಮಾತ್‌ನ ಹೇಳಿ ಸೊರ್‌ಗಕೆ ಹೋಗಿ ತೇಳಿ ಹಾರ್‍ಯೆಸಿದ ಮೇಲೆ ದೂಪೆಗೆ ಅಕ್ಕಿ ಹಾಕಿದ ಮೇಲೆ ಮಕ್ಕ, ಕುಟುಂಬಸ್ತರ್ ಮತ್ತೆ ಊರ್‌ನವು ಸೊರ್‌ಗಕೆ ಹೋಗಿ ತೇಳಿ ಪ್ರಾರ್‌ತನೆ ಮಾಡಿಕಂಡವೆ. 16ರ ದಿನದ ಕ್ರಮಂಗನು ಊರು ಗೌಡ್ರ್ ಹೆಳ್‌ದಾಂಗೆ ನಡ್ದದೆ.

ಗೌಡ ಸಮುದಾಯಲಿ ಊರು ಗೌಡ ಇಲ್ಲದೆ ಯಾದೇ ಜಂಬರಗ ಆದುಲೆತ ಹೇಳಕ್. ಎಲ್ಲಿಯಾರ್ ಊರ್ ಗೌಡರ್ ಸೂತಕ ಇದ್ದರೆ ಅಂವನ ಜಾಗೆಲಿ ಊರಗೌಡರೇ ಗೊತ್ತು ಮಾಡ್‌ದ ಒತ್ತು ಗೌಡರ್ ಈ ಕಾರ್‌ಯನ ನಡ್‌ಸಿಕೊಟ್ಟವೆ. ಪಂಡ್‌ಂದಲೂ ಪ್ರಜಾಪ್ರಬುತ್ವಲಿ ಇರ್‌ವಾಂಗೆ ನಡ್ದ್ ಬಂದ ಗೌಡ ಸಂಪ್ರದಾಯಗ ವಿಸೇಸ ಆಗಿದ್ದ್ ಈ ಎಲ್ಲಾ ಕ್ರಮ ನಿಯಮಂಗಳ ಪಾಲ್‌ಸುವ ಹೊಣೆ ಊರು ಗೌಡರ್‌ಗೆಉಟ್ಟು. ಈ ಎಲ್ಲಾ ವಿಸಯಗ ಈಗನ ಪ್ರಜಾಪ್ರಬುತ್ವ ಮಾದರಿಂದಳೂ ಬಾರಿ ಗಟ್ಟಿ ಆಗಿದ್, ಸುಳ್ಳ್ ಮೋಸ ವಂಚನೆ ಇಲ್ಲದೆ ನಡ್‌ಕಂಡ್ ಬಂದುಟು. ಊರ್ ಗೌಡ ಜೆನಾಂಗದ ಊರ್‌ನ ರಾಯಬಾರಿಯಾಗಿ ನಡ್‌ಕಂಡ್ ಬಂದಿರ್‌ದು ಎಲ್ಲವುಕೂ ತಿಳ್‌ದ ಸಂಗತಿ ಆಗುಟು. ಕಾಲಕ್ರಮೇಣ ಆದುನಿಕತೆ ಮುಟ್ಟಿದ ಕಾರಣ ಕಟ್ಟೆಮನೆ, ಮಾಗಣೆ ಗೌಡ್‌ರ್‌ಗೆ ಅಸ್ಟೊಂದ್ ಮುಕ್ಯ ಅಲ್ಲರು ಈಗಳು ಊರ್ ಗೌಡರ್‌ಗೆ ಹೆಚ್ಚಿನ ಪ್ರಾದಾನ್ಯತೆ ಉಟ್ಟು. (ಸಿ.ಪಿ.)

**ಗೌಡಜೆನಾಂಗ ಮತ್ತೆ ನಾಥ ಸಂಪ್ರದಾಯ :** ತುಳುನಾಡ್‌ಲಿ ನಾಥ ಸಂಪ್ರದಾಯ ಒಳ್ಳ ಸ್ತಿತಿಲಿ ಇತ್ತ್ ತೇಳ್‌ದಕೆ ಸುಮಾರ್ ಪುರಾವೆಗ ಸಿಕ್ಕುವೆ. ಜಾಗೆಗಳ ಹೆಸರಿಸಿಕಂಡ್ ಮಟ, ಮಟಕಣಿ, ಮಟಂದೂರು, ಮಟಂತಬೆಟ್ಟು, ಜೋಗಿಯಡ್ಕ, ಜೋಗಿಬೆಟ್ಟು, ಜೋಗಿ ಗುಂಡಿ, ಕಲ್ಲೇಮಟ, ಕೊರಮಟ, ಸಾದುಮಟ, ಸಿದ್ದಕಟ್ಟೆ, ಸಿದ್ದಾಪುರ, ಸಿದ್ದಬೈಲು, ಸಿದ್ದೋಡಿ, ಬೈರಂಪುರ, ಬೈರಹಳ್ಳಿ, ಬೈರೋಣ ಇಂತ ಜಾಗೆಗಳ ಸ್ತಿತಿಗಳ್‌ಂದ ಇವರ ಅಸ್ತಿತ್ವನ ಗಮನ್ಸಕಾದೆ. ಜೈನಮಟ, ಬೌದ್ದಮಟಗಳಿದ್ದಂಗೆ ನಾತ ಸಂಪ್ರದಾಯನೂ ಒಂದ್. ಇದ್ ಐದ್ ತತ್ವಗಳಾದ–ಸಾಲೋಕ್ಯ, ಸಾರುಪ್ಯ, ಸಾಮಿಪ್ಯ, ಸಾಯುಜ್ಯ, ಸಾಷ್ಟಿತಗಳ ಪರಿಣತರಾಗಿದ್, ನಿಷ್ಣಾತ ಪವಿತ್ರ ಸಂತರ್‌ಗ. ಈ ಪೈಕಿ ಬೈರವು, ಸಿದ್ದರ್ ಅವದೂತ ಸ್ತಿತಿಂದ–ಯೋಗಸಿದ್ದಿಂದ ಯೋಗೀಶ್ವರರ್‌ತ ಕರ್‌ಸಿಕಣತಿದ್ದೊ. ಈ ಪೈಕಿ ನವನಾತ ಸಿದ್ದರ್ ಬಾರಿ ಮುಕ್ಯರಾದವೆ.

ಕ್ರಿಸ್ತ ಮೂಡಲಿ ಈ ಸಂಪ್ರದಾಯನ ಸಮಾಜಲಿ ಪಾರೀಶ್ವರನಾತ ಯೋಗಿ ತತ್ವ ಬೋದೆ ಮಾಡ್ತ್ ತೇಳಿ ಇತಿಯಾಸ ತಿಳ್‌ದದೆ. ಯೋಗ ಸಾದನೆಂದ ದೇವಸಿದ್ದಿ ಪಡ್ದ್ ಸನ್ಮಾರ್‌ಗಲಿ ನಡಿದೊಂದೆ ಶ್ರೇಸ್ಟತೇಳಿ ನೆನ್ನಿ ಇವ್ ಹೆಚ್ಚಾಗಿ ಅತೀ ಶ್ರೀಮಂತರ–ಆಳುವವರ ಆಸ್ರಯ ತಕಂಡ್ ಸುಕ ಸಂತೋಸಗಳ ಬಗ್ಗೆ ನಸ್ವರತೆನ ಪ್ರತಿಪಾದ್‌ಸಿ ಕಸ್ಟಲಿರ್‌ವವರ–ಜಾತಿ ಬ್ರಸ್ಟರ ತಮ್ಮ ಮತಕೆ ಸೇರ್‌ಸಿ ಅವರ ಉದ್ದಾರ ಮಾಡ್ದಕೆ ಮತ ಬೋದನೆ ಮಾಡ್ದವು. ಇವು ಅವರವರ ಕೆಬಿಗಳಿಗೆ ದೊಡ್ಡ ಮಕರ ಕುಂಡಲಗಳ ತೊಟ್ಟ್‌ಕಂಬದು. ತಲೆಲಿ ಜಟೆ ಇಳ್‌ಸಿ ರುದ್ರಾಕ್ಷಿಮಾಲೆ ಸುತ್ತಿಕಂಬೊದು, ಮೈಗೂ ಹಣೆಗೂ ಬಸ್ಮದಾರಣೆ ಮಾಡಿ ಹೆಗಲ್‌ಗೆ ಜೋಳಿಗೆ, ಸೊಂಟಕ್ಕೆ ಉಣ್ಣೆನ ಪಟೆನೂಲ್ ಕಟ್ಟಿಕಂಬದು, ಕೌಪೀನ ಬಟ್ಟೆ, ಕೈಲಿ ದಂಡ ಕಮಂಡಲ, ಶೌಲಿ, ತ್ರಿಶೂಲ ಇಂತದರ ಹಿಡ್ಕಂಬೊದು, ತೀರ್ತಯಾತ್ರೆ ಮಾಡ್‌ದು ಅಲ್ಲದೆ ಯೋಗ್ಯ ಜಾಗೆಗಳ್‌ಲಿ ಮಟಗಳ ಕಟ್ಟಿಸಿಕಂಬೊದು, ಮತ ಪ್ರಚಾರ ಮಾಡ್ದು. ಇವು ಈಶ್ವರನ ಆದಿನಾತ ಅಲ್ಲರೆ ಲೋಕೇಶ್ವರ ತೇಳುವ ಹೆಸರ್‌ಂದ ಪೂಜಿಸುವೆ. ಅಲ್ಲದೇ ಸಕ್ತಿನ ಬೈರವನ ಪೂಜೆ ಮಾಡ್‌ವೆ.

ಈ ಮತ ಮತ್ಸೇಂದ್ರನಾತ ಯೋಗೀಶ್ವರನ ಕಾಲಲಿ ಏಳಿಗೆ ಬಂದಿತ್. ಇಂವನ ಶಿಸ್ಯರಾದ ಗೋರಕನಾತ–ಜಾಲಾಂದರ ನಾತ – ಗೋಪೇಂದ್ರನಾತ – ಕನೀಫನಾತ – ಚರ್ಪಟಿನಾತ – ಔರಂಗಿನಾತ ಇಂತ 12 ಜೆನ ವಿದ್ವಾಂಸ ಮತಬೋದಕರ್ ಇದ್ದೊ. ಈಗನ ಉತ್ತರಪ್ರದೇಸಲಿ ಮುಕ್ಯಮಂತ್ರಿಯಾಗಿರುವ ಆದಿತ್ಯನಾತರ್ ಸನು ನಾತಪಂತಕೆ ಸೇರಿದ್, ಕದಿರೆ ಮತ್ತೆ ಚುಂಚನಗಿರಿಲಿ ದೀಕ್ಷೆ ಪಡ್ದವಾಗಿದ್ದೊ. ಮತ್ಸೇಂದ್ರನಾತ ಗೋರಕಪುರಲಿ ಮುಕ್ಯ ನಾತ ಮಟ ಸ್ಥಾಪನೆ ಮಾಡ್ದೊ. ಇದ್ ನಾತ ಸಂಪ್ರದಾಯದ ಮೂಲ ಜಾಗೆ ಆಗುಟು. ಇವ್ ಪ್ರತಿ 12 ವರ್‌ಸಕೊಮ್ಮೆ ನಾಸಿಕ್ ಪ್ರಾಂತ್ಯದ ತ್ರೈಯಂಬಕಲಿ ದರ್ಮಸಬೆನ ನಡ್‌ಸುದಲ್ಲದೆ ಅಂದ್ ನಿಗಂಟ್ ಮಾಡ್‌ದ ದಿಕ್ಕ್

(ಸ್ತಳ)ಗಳಿಗೆ ತೀರ್ತಯಾತ್ರೆ – ಮತ ಪ್ರಚಾರಕೆ ಹೋದಾಗಿತ್ತ್ ಆಯಾಯ ಜಾಗೆಗಳ ಅರಸರ ನಾತ ಸಂಪ್ರದಾಯಕೆ ತಮ್ಮ ಯೋಗ ಸಕ್ತಿಂದ ಮನೋಸಿದ್ದಿಂದ ಒಗ್ಗೂಡ್ಸಿಕಂಡ್ ಮಟ ಕಟ್ಟಿ ದರ್ಮದ ಬಗ್ಗೆ ವಿದ್ಯೆ ಕೊಡತಿದ್ದೊ. ತುಳುನಾಡ್‌ಲಿ ಮುಕ್ಯ ಆಗಿ ಕದಿರೆಯ ಮಟ ಒಂದಾಗಿತ್ತ್. ಮತ್ಸೇಂದ್ರನಾತ ಯೋಗಿಂದ ಈ ಮಟ ಕಟ್ಟುದಕೆ ಕಾರಣ ಆಗೊಲೊ. ಇಲ್ಲಿ ಯೋಗದ ಗುಹೆ ಹಾಂಗೆ ಯಜ್ಞ ಕುಂಡಗ ಒಳೊ. ಕಾಸರಗೋಡು ತಾಲೂಕು ಕುಂಬಳೆನ ಪೊಸೋಡಿಗುಂಪೆಯ ಹಕ್ಕಲೆ ಗುಡ್ಡಲಿ ಇವರ ಯೋಗ ಸಾದನೆನ ಹುಯೆಗ ಕುಟಚಾದ್ರಿ, ಸೂಡ ತೇಳುವಲ್ಲೂ ಇವರ ಮಟಗ ಯೋಗ ಸಾದನೆನ ಜಾಗೆಗ ಒಳೊ. ಹಾಂಗೆ ತುಳುನಾಡ್‌ಲಿ ಮೂರು ಮುಕ್ಯ ಮಟಗ ಇದ್ದೊ. ಕ್ರಿಸ್ತ ಶಕ 918 ರ್‌ಲಿ ಮಂಗಳೂರ್‌ನ ಆಳ್ತಿದ್ದ ಆಲೂಪ ಅರಸ ಕುಂದವರ್ಮ ತೇಳಂವ ನಾತ ಸಂಪ್ರದಾಯನ ಅನುಸರ್‌ಸಿ ಕದಿರೆಲಿ ಲೋಕೇಶ್ವರ ದೇವ್ರ ಪ್ರತಿಷ್ಠಾಪಿಸಿತ್. ಇದ್ ಈಗೊಳು ಕದಿರೆನ ಮಂಜುನಾಥ ದೇವಾಸ್ತಾನಲಿ ಉಟ್ಟು. ಕಂಚಿನ ಪ್ರತಿಮೆಯಾಗಿದ್ದ್, ಮೂರ್ ಮೋರೆಗ ಆರ್ ಕೈಗ ಒಳೊ. ಪದ್ಮಾಸನಲಿ ಇರ್‌ವ ತಲೆನ ಮೇಲೆ ಕಿರೀಟದ ಬದ್ಲ್ ಜಟೆ– ಜಟೆನ ಬುಡಲಿ ಮತ್ಸೇಂದ್ರನಾತನ ಸಣ್ಣ ವಿಗ್ರಹ ಕೆತ್ತಿಕಂಡ್ ಜಟೆನ ಮೇಲೆ ರುದ್ರಾಕ್ಷಿ ಮಾಲೆ ತೊಟ್ಟಂಗುಟ್ಟು. ಕೆಬಿಗೆ ಮಕರ ಕುಂಡಲಗ ಒಳೊ. ಹಿಂದೆ ಪ್ರಬಾವಳಿ ಉಟ್ಟು. ಅಲ್ಲದೇ ಇನ್ನೊಂದು ಪ್ರತಿಮೆ ಇದ್ದ್ ಒಂದೇ ಮೋರೆ ನಾಕ್ ಕೈಗ ಒಳೊ. ಪ್ರತಿಮೆನ ಪದ್ಮಾಸನಲಿ ಉಟ್ಟು. ಮತ್ತೊಂದ್ ಬೈರವನ ಮಕರ ಕುಂಡಲ ತೊಟ್ಟ ಪ್ರತಿಮೆ ಉಟ್ಟು. ಶೃಂಗೀವಾದ್ಯ ಕೈಲಿ ಹಿಡ್ದ್, ಕಾಲ್ ಬುಡಲಿ ವರಾಹ ಚಿತ್ರ ಉಟ್ಟು. ದೇವಾಲಯದ ಒಳಗೋಡೆಲಿ ಮತ್ಸೇಂದ್ರನಾತನ ಶಿಲಾವಿಗ್ರಹ ಉಟ್ಟು. ಶೃಂಗನಾತನ ಇನ್ನೊಂದು ಪ್ರತಿಮೆ ಸನಾ ಉಟ್ಟು.

ಕದಿರೆಲಿ ಗುಡ್ಡೆಲಿ ಮತ್ಸೇಂದ್ರನಾತನ ಮಟನ ಕಟ್ಟ್‌ಸಿಕೊಟ್ಟ ಅಲುಪ ಅರಸು ಕುಂದವರ್ಮ ನಾತ ಸಂಪ್ರದಾಯಕೆ ಅವಕಾಸ ಮಾಡ್‌ದು ಗೊತ್ತಾದೆ. ಈಗಳು ಈ ಮಟಲಿ 12 ವರ್ಷಕ್ಕೊಮ್ಮೆ ಪಟ್ಟಾಬಿಷೇಕ ಆಕು. ಸುರುಗೆ ಮತ್ಸೇಂದ್ರನಾತನ ಗುಡಿನ ಹಕ್ಕಲೆ ಬ್ರಾಹ್ಮಣ ಕ್ರಿಯೆಲು ಅದಾಗಿ ಮಟಲಿ ನಾತ ಸಂಪ್ರದಾಯದ ಪ್ರಕಾರ ನಡ್ಡದೆ. ವಿಟ್ಲದ ದೊರೆಗಳ್‌ಲಿ ಒಬ್ಬ ನಾತ ಸಂಪ್ರದಾಯನ ಅನುಸರ್‌ಸಿ ಯೋಗೀಶ್ವರನಾಗಿ ವಿಟ್ಲದ ಹಕ್ಕಲೆ ಮಟವೊಂದರ ಕಟ್ಟ್‌ಸಿ ಅಲ್ಲಿಯೇ ಇತ್ತ್. ಈ ಮಟಾದಿಪತಿಗೂ ಪಟ್ಟ ಆಕು. ಈಗಳು ಬೇರೆವರ ಸಹಕಾರದೊಟ್ಟಿಗೆ ನಡ್ಡದೆ. ತುಳುನಾಡ್‌ಲಿ ಇವು 12 ಮಟಗಳ ಕಟ್ಟಿಕೊಂಡಿದ್ದ್, ಪ್ರಕೃತ 2 ಮಟಗಳ್‌ಲಿ ಮಾತ್ರ ಪಟ್ಟಾಬಿಷೇಕ ನಡ್ಡದೆ. ಒಳ್ದಾಂಗೆ ಕಂಡ್ ಬಾದ್ಲೆ. ಇತ್ತೀಚೆಗೆ ಮರ್‌ಕಂಜ ಗ್ರಾಮಲಿ ಕಂಡ್ ಬರ್‌ತುಟ್ಟು, ಅಲುಪ ಅರಸನ ಆಡೆಳ್ತ ಕಾಲಲಿ ತುಳುನಾಡ್‌ನ ಕೆಲವ್ ಕಡೆ ಮಟಗ ದೇಸ್ತಾನ ಆಗೊಲೊ. ಅದಾದ ಮೇಲೆ ಈ ಮಟಲಿ ಸುಮಾರ್ ಬದಲಾವಣೆಗ ಆಗುಟು. ಪ್ರತಿ ಒಬ್ಬರನು ಸನ್ಯಾಸಿಗ ಆಗಿ ಮನೆ ಮಾಡಿಕಂಡ್ ಸಂಸಾರಿಗ ಆದೊ. ಸುಮಾರ್ 7ನೇ ಸತಮಾನದವರೆಗೆ ಹಿಂದೂಸ್ತಾನಲಿ ಇದ್ದ್ ದುಡ್ಡುಲಿ– ರಾಜಕೀಯ – ನೈತಿಕತೆಗಳ ಏಳುಬೀಳುಗಳ್‌ಂದ ಬದಲಾವಣೆಗ ಆಗಿರ್‌ದು. ಬಟ್ರ್‌ಂದ, ಜೈನಮತದವರ್‌ಂದ ತಡ್ದ ಕಾರಣ ಕಲ್ಲ್, ಮಾಸದ ಅರ್‌ಚನೆ, ಉಂಬದು ಹಂಗೆ ಅನೈತಿಕತೆ ಇಂತೆಲ್ಲ ಸಮಾಜ ನಿಂದನೆಂದ ಅಡ್ಡಿ ಆತ್.ಬಟ್ರ್‌ಗಳೆ ಹಿಂದು ದರ್ಮ ಸಮ್ಮಂದಕೆ ಹಕ್ಕುದಾರರ್‌ಂತ ನೆನ್‌ಸಿ ಒಳ್ದ ವರ್ಣದವ್ ಅನುಸರ್‌ಸುವ ವೆವಸ್ತೆಗೆ ಅದ್ವೈತಮತ ಹಂಗೆ ಶ್ರೀ ಶಂಕರಾಚಾರ್ಯರ ಮತ ಬೋದನೆ ಕಾರಣ ಆತ್. ಜೈನಕವಿಗಂತು ರಾಜರ ಹೊಗಳಿದ್ ಬೇಳ್‌ದೊ. ರಾಜರ್‌ಗ ಒಳ್ಕಂಡೊ, ನಾತಪಂತ ಕಡಿಮೆ ಆಕಂಡ್ ಬಾತ್.

ನಾತ ಸಂಪ್ರದಾಯದ ಹಿರ್ಮೆಲಿ ಪುರುಷರಾಯ ಸೋದರರ ಗುರ್‌ತ್‌ಸಕು. ಕುಕ್ಕೆ ಸುಬ್ರಾಯ ದೇವರ ಎದುರ ಹಾಕಂಬದು, ಪಾಡ್ದನಗಳ್‌ಂದ ತಿಳಿಯಕ್. ಸುಳ್ಯ ಮತ್ತೆ ಕೊಡಗ್ ಪರಿಸರದ ಹೆಚ್ಚಿನ ಕಡೆಗಳ್‌ಲಿ ದೆವ್ವಸ್ತಾನಲಿ ಪುರುಷರಾಯ ದೆವ್ವದ ಆರಾದನೆ ಉಟ್ಟು. ದೆವ್ವಕೆ ಸಮ್ಮಂದಪಟ್ಟಂಗೆ ದಂಡ, ತ್ರಿಶೂಲ, ಶೌಲ, ಇಂತ ಸೊತ್ತುಗಳ ಇಸಿ ದೆವ್ವಸ್ತಾನಲಿ ನೇಮಾದಿಗಳ ನಡ್ಸುವೆ. ವರ್‌ಸಾವದಿನ ತಂಬಿಲಗ ಕಾಡ್ ಪ್ರದೇಸಲಿ ನಡ್‌ದದೆ. ಅಗ್‌ಲ್ ಬಳ್ಸುದರ್‌ಲಿ ಕೋಳಿಮಾಸದ ಅಡ್ಗೆ– ರೊಟ್ಟಿ. ಸಹೋದರಂಗೆ ಜೋಳಿಗೆಲಿ ಅಕ್ಕಿ ತೆಂಗಿನಕಾಯಿ (ಪಡಿಅಕ್ಕಿ) ಕೊಡುದುಂತ ಹೇಳ್‌ವೆ. ಬೂಮಿ ಸಮ್ಮಂದನ ಇಸಿಕಂಡ ಪುರುಷ ದೆವ್ವದ ಆರಾದನೆ ಬೂಮಿನ ಹುಟ್ಟುವಳಿಂದ ಮಟಕೆ ಸಲ್ಲ್‌ಸ್‌ವ ಕ್ರಮ ಇದ್ದಿರ್‌ದ್‌ಕಂಡದೆ. ಕಾಲಾಂತರಲಿ ಬಿದ್ದ್ ಹೋಗಿ ಮಟದ ಅದಿಕಾರ ಕ್ರಿಸಿ ಬೂಮಿನ ಹಕ್ಕ್ ಒಡೆತನಗ ಬೇರೆವರ ಕೈಗೆ ಹೋತ್. ಕನ್ನಡಲಿ ಮಾತ್ ಕತೆ ಮಾಡುದರ್‌ಂದ 'ಕನ್ನಡ ದೇವತೆ' ತೇಳಿ ಮೊಗ್ರ ದೆವ್ವಸ್ತಾನಲಿ ಪುರುಷ ದೆವ್ವ ಆರಾದನೆ ಆದೆ. ಈಗಾಗಲೇ ಮರೆ ಆಗತಿರ್‌ವ ಸಿದ್ದವೇಸನು ಕಾರ್ಯಕ್ರಮನೂ ಅವೈದಿಕ ಕ್ರಿಯೆಲಿ ನಡೆದಿದ್ದರು ವೈದಿಕ ವಿಚಾರನ ತಿರಸ್ಕಾರ ಮಾಡ್ದರ ಗಮನಿಸಕ್. ಸುಳ್ಯ ಪರಿಸರದ ಕಂದ್ರಪ್ಪಾಡಿ ರಾಜೆನ್ ದೆವ್ವ ಪುರುಷರಾಯನ ಕ್ಷೇತ್ರನು ಪ್ರದಾನಾಗಿದ್ದ್, ಬೂಮಿ ಸಮ್ಮಂದ ಸಮಾಜ ಬಾಂದವರ್‌ಂದ ಆರಾದನೆಗೊಳ್ಳುತ್ತುಟ್ಟು. (ಎ.ಪಿ.)

**ಬಲ್ನಾಡು ಕಟ್ಟೆಮನೆ :** ಗೌಡ ಸಮಾಜದ ಆಡಳಿತ ಕೂಟಲಿ ಮುಕ್ಯ ಆದ್ದ್ ಕಟ್ಟೆಮನೆಗ. ಗೌಡ್ರುಗಳ ವಲಸೆ ಆದಮೇಲೆ ರಾಜಕೀಯ ಆಗಿ ಗಟ್ಟಿಲಿ ಅದಿಕಾರ ನಡ್ಸಿಕೆ ಮಾಡ್ದರ್‌ಲಿ ಕಟ್ಟೆಮನೆಗಳ ಪಾತ್ರ ದೊಡ್ಡದ್. ಪುತ್ತೂರುನ ಬಲ್ನಾಡ್ ಕಟ್ಟೆಮನೆ ಗೌಡರ ರಾಜಕೀಯ ಬೆಳವಣಿಗೆ ಹಂಗೆ ಏಳ್‌ಬೀಳ್‌ಗಳ್‌ನ ತೋರ್‌ಸಿದೆ.

ದಂಡನಾಯಕ ಉಲ್ಲಾಕುಳು ಹಂಗೆ ಉಲ್ಲಾಳ್ತಿ ಅವರ ಪರಿವಾರದೊಟ್ಟಿಗೆ ಇಕ್ಕೇರಿಂದ ಗಟ್ಟ ಇಳ್‌ದು ಕುಕ್ಕೆ ಪೇಟೆಗೆ ಬಾಕನ ಸುಬ್ರಾಯ ದೇವರ ಕೊಡಿಮರಲಿ ದೋಜ ಏರ್‌ತ್ತಿದ್ದದೆ. ಇವು




ಸುಬ್ರಾಯನೊಟ್ಟಿಗೆ ಲಡಾಯಿಮಾಡಿದ್ ಕೊಡಿಮರ ಕಡ್ಡ್ ದೊಜನ ವಸ ಮಾಡಿಕಂಡದೆ. ಇದ್ ಊರ್‌ನ ಬಲ್ಲಾಳನೊಟ್ಟಿಗೆ ನಡ್‌ದ ಲಡಾಯಿನ ತೋರ್‌ಸಿದೆ. ಈ ದೊಜದೊಟಿಗೆ ಬಲ್ನಾಡ್‌ಗೆ ಬಂದ ದಂಡನಾಯಕ ಹಂಗೆ ಬೇರೆ ಗೌಡ್ರು ಬಲ್ನಾಡ್‌ಲಿ ಅವರ ಅದಿಕಾರ ನಡ್ಸುವೆ.

ಬಲ್ನಾಡು ಬಂಗರಸನ ಆಡೆಳ್ತಕೆ ಸೇರ್‌ದ ನೆಲ ಆಗಿದ್ದ್, ಇಂದ್ ಪುತ್ತೂರ್‌ನ ಮುನ್ಸಿಫ್ ಕೋರ್ಟ್ ಇರುವಲ್ಲಿ ಅಂವನ ಅರಮನೆ ಒಂದಿತ್ತ್. ಇಂವನ ಕಾಲಲಿ ಬಲ್ನಾಡ್‌ಗೆ ಬಂದ ಗೌಡ್ರು ಅಂವನ ಆಸ್ತಾನಲಿ ಪಾಲ್ ತಕಂಬದಲ್ಲದೆ ಮಹಾಲಿಂಗೇಶ್ವರ ದೇಸ್ತಾನದ ಸೇವೆಲಿ ಸಾಂಕೇತಿಕ ಅದಿಕಾರಿಗ ಆದವೆ.

ದಂಡನಾಯಕ ಉಲ್ಲಾಕುಳು ಹಂಗೆ ಉಲ್ಲಾಳ್ತಿ ತೀರಿಹೋದ ಮೇಲೆ ದೆವ್ವತ್ವಕ್ಕೇರಿ ಬಲ್ನಾಡ್ ಕಟ್ಟೆಮನೆನ ಮನೆತನದ ದೆವ್ವಾಗಿ ಆರಾದನೆ ಆಗತೊಳೊ. ಮಲೆರಾಯಿ ಇವರ ಬಂಟನಾಗಿದ್ದ್, ಕಾಲಾಂತರಲಿ ಪುತ್ತೂರು ಸೀಮೆಗೆ ದೆವ್ವಾದವೆ. ಏಪ್ರಿಲ್ ತಿಂಗಳ 16 ರಂದ್ ನಡಿವ ಮಹಾಲಿಂಗೇಶ್ವರನ ಜಾತ್ರೆ ದಿನ ದೆವ್ವಗಳ ಬಂಡಾರನ ಪಲ್ಲಕ್ಕಿಲಿ ದೇಸ್ತಾನಕೆ ತಂದವೆ. ಗೌಡ ಜೆನಾಂಗದ ಬಲ್ನಾಡ್ ಕಟ್ಟೆಮನೆನ ದರ್‌ಸಿನ ಬೆಳ್ಚಪಾಡ ಬಿಲ್ಲುಬಾಣಗಳ್‌ನ ಹಿಡ್‌ದಿದ್ದದೆ. ಚತ್ರ–ಚಾಮರ, ದ್ವಜ, ಬಿರುದುನೊಟ್ಟಿಗೆ ದೆವ್ವಗ ಮಹಾಲಿಂಗೇಶ್ವರ ದೇವರ ಎದ್‌ರಾದವೆ.



ಬಲ್ನಾಡು ಕಟ್ಟೆಮನೆ

ದೇವರ ಉತ್ಸವ ಮೂರ್‌ತಿನೊಟ್ಟಿಗೆ ದೆವ್ವಗ ದೇಸ್ತಾನಕೆ ಪ್ರದಕ್ಷಿಣೆ ಬಂದವೆ. ರತೋತ್ಸವಲಿ ದೆವ್ವಗಳ ಬಂಡಾರನ ಹಿಡಿವ ಕಟ್ಟೆಮನೆನ ದರ್‌ಶನದಂವ ದರ್‌ಸಿನ ಬಾದು ನೋಡಿಕೆ ಲಾಯಕಿದ್ದದೆ. ಕಟ್ಟೆಮನೆನ ಗೌಡ್‌ರ್ ಸಂಪತ್ತ್‌ಲಿ ಹಂಗೆ ರಾಜಕೀಯ ಆಗಿ ಗಟ್ಟಿ ಇದ್ದದ್ ದೇಸ್ತಾನಲಿ ಅವ್‌ಕಿರುವ ಸ್ತಾನಮಾನಂದ ತಿಳ್ದದೆ. ಕ್ರಿ. ಶ. 1836–1837 ರ್‌ಲಿ ನಡ್‌ದ ಅಮರಸುಳ್ಯ ದಂಗೆ ಗೌಡ್‌ರ ಎದೆಗಾರಿಕೆಗೆ ಒಂದ್ ಒಳ್ಳ ಉದಾರ್‌ಣೆ. ಈ ಹೋರಾಟಲಿ ವಿಟ್ಲ, ಬಲ್ನಾಡು, ಬೆಳ್ತಂಗಡಿನ ಗೌಡ್‌ರ್ ಸೇರಿ ಬ್ರಿಟಿಸರ ಮೇಲೆ ದಂಗೆ ಎದ್ದಿದ್ದೊ. ಇವು ಕೆದಂಬಾಡಿ ರಾಮಗೌಡ, ಕಲ್ಯಾಣಪ್ಪರಂತ ವೀರರೊಟ್ಟಿಗೆ ಪುತ್ತೂರ್‌ನ ಆಂಗ್ಲ ಕಜಾನೆನ ಹೊಡಿ ಮಾಡ್‌ವೆ. ಇದರ ಪರಿಣಾಮ ಗೌಡ ಸಮುದಾಯ ಬ್ರಿಟಿಸರ ಹಗೆಗೆ ಬೀಳ್ವಾಂಗೆ ಆತ್. (ಎ.ಆರ್.ಜಿ.)

**ಒಡ್ಸಕತೆ :** ಜೆನಪದ ಸಾಹಿತ್ಯಲಿ ಪೊದ್ಯ, ಕತೆ, ಗಾದೆಗಳಂಗೆ ಒಡ್ಸಕತೆನೂ ಒಂದ್. ಸಾಹಿತ್ಯ ಪ್ರಕಾರ. ಮಾತ್‌ನ ಸಂಪ್ರದಾಯದ ಬೇರೆ ಬೇರೆ ಪ್ರಕಾರಗಳ್‌ಲಿ ಜೆನರ ಊಹೆ ಮಾಡ್‌ವ ಸಕ್ತಿಗೆ ಕನ್ನಡಿ ಹಿಡಿವ ಒಂದ್ ದೊಡ್ಡ ಪ್ರಕಾರ ಒಡ್ಸಕತೆ. ಸಾಮನ್ಯ ಇವು ಊಹೆನ ಮ್ಯಾಲೆ ಉತ್ತರನ ಹುಡ್‌ಕುವ, ಕೇಳ್ದಂಗೆ ಆಸ್ಚರ್‌ಯ ತಾವ, ಪ್ರಸ್ನೆಗಳಂಗೆ ಇರ್‌ವ ಹೇಳಿಕೆಗ ಹಿಂಗೆ ಪ್ರತಿಯೊಂದರ್‌ಲಿನೂ ಒಂದ್ ಸಮಸ್ಯೆ ಇದ್ದ್, ಅದರ ಸುಲಬಲಿ ಬುಡ್ಸಿಕೆ ಆಗದ ಹಾಂಗೆ ಅದರ ಕಟ್ಟಿದ್ದವೆ. ಇದರ್‌ಲಿ ಒಡ್ಸಕತೆನ ಕೇಳ್ದು ಒಂದಾದರೆ ಅದರ ಒಡಿಯುದು ಒಂದಾಗಿದ್ದದೆ.ಸುರುದರ್‌ಲಿ ಒಂದ್ ಗುಟ್ಟು ಇದ್ದದೆ. ಆ ಸುರೂದರ ಗುಟ್ಟುನ ಎರಡನೆದ್ ಬೊಳ್ಪುಗೆ ತಂದದೆ. ಯಾದೇ ಒಡ್ಸಕತೆ ಆದರೂ ಅದ್ ಸ್ವಸ್ಟ ಆಗಿರ್‍ದುಲೆ. ಅಸ್ಪಸ್ಟತೆ ಅದರ ಒಂದ್ ದೊಡ್ಡ ಗುಣ ಆಗಿದ್ದದೆ.

'ಒಡ್ಸಕತೆ' ಸಿಸ್ಟ ಕನ್ನಡನ 'ಒಡಗತೆ'ನ ರೂಪ ಆಗರ್‍ದು ತ ಕಂಡ್ ಬಂದದೆ. ಅಲ್ಲದೆ ಇದರ ಎದ್‌ರ್‌ಕತೆಂತನೂ ಕರ್‍ದವೆ. ಎರ್‌ಡ್ ಕಡೆವು ಎದ್‌ರ್ ಬದ್‌ರ್ ಕುದ್ದ್ ಒಡ್ಸಕತೆನ ಹೇಳಿ ಅದರ ಒಡ್ಸುವ ಕಾರ್‍ಯನ 'ಎದ್‌ರ್‌ಕತೆ' ತ ಕರ್‍ದವೆ. ಇಲ್ಲಿ ಹೋಲಿಕೆ ಮಾಡ್‌ವ ವಸ್ತು ಹೋಲಿಸಿಕೊಂಬ ವಸ್ತು ಎರಡೂ ಇದ್ದವೆ. ಸಾಮಾನ್ಯ ಆಗಿ ಒಡ್ಸಕತೆ ಅಂದರೆ ಪ್ರಸ್ನೆ ಮತ್ತೆ ಉತ್ತರ ಎರಡೂ ಇರೋಕು. ಒಡ್ಸಕತೆನ ಒಂದ್ ಮುಕ್ಯ ಸಂಗತಿ ಅದರ ಸಾರ್‌ವತ್ರಿಕತೆ. ಒಂದ್ ಕಡೆ ಕಾಂಬಕೆ ಸಿಕ್ಕುವ ಒಡ್ಸಕತೆಗ ಇನ್ನೊಂದು ಕಡೆನೂ, ಇನ್ನೊಂದು ಬಾಸೆಲೂ ಕಂಡ್ ಬಂದದೆ. ಇದ್ ಮೊಯಿಂಸ ಎಲ್ಲಲ್ಲೂ ಒಂದೇ ತರ ಯೋಚನೆ ಮಾಡ್‌ವೆ ತ ಹೇಳ್ದುರ ದೃಡಪಡ್ಸಿದೆ. ಅರೆಬಾಸೆನ ಒಡ್ಸಕತೆಗ ಪೊದ್ಯ ರೂಪಲಿ ಉಟ್ಟು ಪದ ರೂಪಲಿನೂ ಉಟ್ಟು. ಇದೊಂದು ಕಾವ್ಯಕಲೆ, ಇಲ್ಲಿ ರೂಪಕಗಳ ಮೂಲಕ ಒಡ್ಸಕತೆನ ಕಟ್ಟುವ ಕೆಲ್ಸ ಮುಕ್ಯ. ಗಾದೆಗಳಿಗಿಂತ ಒಡ್ಸಕತೆಗ ಒಂದ್ ಪರಿಮಿತಿಲಿ ಇದ್ದದೆ. ಯಾಕೆಂತೇಳಿರೆ ಒಡ್ಸಕತೆಗ ಹೆಚ್ಚಿನ ಅಂಸ ಸಮಾಜದ ಒಂದ್ ಬಾಗಕೆ ಮಾತ್ರ ಸಮ್ಮಂದಿಸಿದ್ದದೆ. ಆದರೆ ಗಾದೆಗ ನಮ್ಮ ಯಾಗೋಳು ಆಡ್‌ವ ಬಾಸೆನ ಬಾಗ ಆಗಿದ್ದದೆ.

ಒಡ್ಸಕತೆ ಒಬ್ಬ ಮತ್ತೊಬ್ಬಂಗೆ ಹಾಕ್‌ವ ಸವಾಲ್. ಒಂದ್ ವಸ್ತುಂದ ಇನ್ನೊಂದ್ ಕಾಣದ ವಸ್ತುನ ಕಂಡ್ ಹಿಡಿಯೋಕು. ಇದ್ ಅದರ ಕ್ರಮ. ಇದರ್‌ಲಿ ಒಂದ್ ಉಪಮಾನ ಇನ್ನೊಂದು ಉಪಮೇಯ. ಉಪಮಾನನ ಹೇಳಿದ್ದವೆ, ಉಪಮೇಯ ಆ ಉಪಮಾನಲಿ ಅಡ್‌ಗಿ ಇದ್ದದೆ. ಉಪಮಾನನ ಆದಾರಲಿ ಉಪಮೇಯನ ಕಂಡ್ ಹಿಡಿಯಕಾದೆ. ಹಿಂಗೆ ಒಡ್ಸಕತೆಲಿ ಎರಡ್ ವಸ್ತುಗ ಸಮೀಕರಣಗೊಂಡಿದ್ದದೆ.

**ಅವ್ವನೊಳಗೆ ಮಗ ಹೋದೆ, ಮಗನೊಳಗೆ ಅವ್ವ ಹೋದುಲೆ :** ಜೆನಪದರ್ ಸಮಾಜ, ಸಂಸ್ಕೃತಿ, ಸಂಪ್ರದಾಯ, ಕುಟುಂಬ, ಸಮ್ಮಂದ, ಆಚರಣೆ ಇವುಕೆ ಹೆಚ್ಚಿನ ಪ್ರಾಮುಖ್ಯತೆ ಕೊಡುವವು. ಈ ನೆಲೆಲಿ ಈ ಒಡ್ಸಕತೆ ಇವರ್‌ಲಿ ಬಳಕೆಲಿ ಉಟ್ಟು. ಹಿಂದೆನ ಕಾಲಲಿ ಮಗಕಳ ಮೊದ್‌ವೆ ಮಾಡಿ ಕೊಟ್ಟ ಮೇಲೆ ಹೆತ್ತ ಅವ್ವ ಮಗಕಳ ಮನೆಗೆ ಹೋಕಾಗದ್, ಮಗಕಳ ಮನೆಲಿ ಒಳಿಯಕಾಗದ್ ಹಿಂಗೆ ಸಮಾಜಲಿ ರಾಜ ಮಹಾರಾಜರ ಕಾಲಲೇ ನಿಸೇದಗ ಇದ್ದ ಉದಾಹರಣೆಗ ಉಟ್ಟು. ಆ ಒಂದ್ ಸಂಪ್ರದಾಯದ ಹಿನ್ನೆಲೆಲಿ ಈ ಒಡ್ಸಕತೆ ಹುಟ್ಟಿಕಂಡಿರುದು. ಈ ಒಡ್ಸಕತೆನ ಉತ್ತರ ಸೇರ್, ಮಾನ. ಇದರ ನಿಜವಾದ ಅರ್ತ ಸೇರ್‌ನೊಳಗೆ ಮಾನನ ಸರ್‌ಸ್‌ಕ್, ಆದರೆ ಮಾನದೊಳಗೆ ಸೇರ್ ಹಾಕಿಕೆ ಆದುಲೆ. ಇಲ್ಲಿ ಅವ್ವನ ಸೇರಿಗೆ ಮಗನ ಮಾನಕೆ ಹೋಲಿಸಿ ಚಮತ್ಕಾರಲಿ ಒಡ್ಸಕತೆನ ಮಾಡ್ದರ ಕಾಂಬಕ್. ಇಲ್ಲಿ ಜೆನಪದರ್ ಈ ಒಡ್ಸಕತೆನ ಮಾಡಿಕೆ ಬೇರೆ ಎಂತನೋ ಗ್ಯಾನ ಮಾಡ್ದು ಬೇಡ,. ಅವುಕೆ ಲಾಯ್ಕ್ ಗೊತ್ತಿರ್‌ದರನೆ ಬಲ್ಸಿಕಂಡರೆ ಸಾಕ್. ಯಾಗೋಳು ಬಳಕೆಗೆ ಬಾವ ಸೇರ್ ಮಾನನ ಗುರುತುಸುದು ಆ ಪರಿಸರಲಿರುವ ಜೆನಕೆ ಕಸ್ಟ ಆಕಿಲೆ. ಇದ್ ಒಡ್ಸಕತೆಲಿ ಕಂಡ್‌ಬಾವ ರೂಪಕ ಲಕ್ಷಣ. ಹಿಂಗೆ ಮಾತ್‌ನ ಸಂಪ್ರದಾಯದ ಸಾಹಿತ್ಯಲಿ ರೂಪಕಗಳನ ಬಳ್ಸಿಕಂಡ್ ಹೆಸ್‌ರ್ ಮಾಡಿ ಎಲ್ಲರ ಒಪ್ಪಿಗೆ ಪಡ್‌ಕಂಡ ಸುರೂನ ಪ್ರಕಾರ ಒಡ್ಸಕತೆ.

**ಕಣ್ಣ್ ಕಾಣದ ಅಜ್ಜ ಪಾಲ ದಾಟುದು :** ಜೆನಪದರ್ ಪರಿಸರನ ಬಾರಿ ಹಕ್ಕಲೆಂದ ಕಂಡವು. ಮೊಯಿಂಸಂಗೂ ಪರಿಸರಕೂ ನಡೂಲಿರ್‌ವ ಸಮ್ಮಂದ ಇಲ್ಲಿ ಮುಕ್ಯ ಆಗಿ ಕಂಡ್ ಬಂದದೆ. ಒಡ್ಸಕತೆಲಿ ಸಿಕ್ಕ್‌ವ ಪರಿಸರಪರ ಚಿತ್ರಗ ಇದಕೆ ಉದಾರ್‌ಣೆ. ಅಲ್ಲಿನ ಪರಿಸರಲಿ ಸಾಮಾನ್ಯ ಕಾಂಬಕೆ ಸಿಕ್ಕುವ ಉಂಬುಳು ಈ ಒಡ್ಸಕತೆನ ಉತ್ತರ. ಇಲ್ಲಿ ಒಂದ್ ಕ್ರಿಯೆ ನಡ್ದದೆ. ಸಂಕ ಇಲ್ಲೆ ಪಾಲ ದಾಟುವ ಕ್ರಿಯೆ. ಕಣ್ಣ್ ಕಾಣದ ಅಜ್ಜ ನಡಿಯಕೆ ಬೊತ್ತದೆ ದೊಣ್ಣೆನ ಊರಿ ಊರಿ ತಬ್ಬರ್‌ಸಿಕಂಡ್ ಮುಂದೆಗೆ ಹೋವ ಕ್ರಿಯೆ ಈ ಒಡ್ಸಕತೆನ ವಾಚ್ಯರೂಪ. ಉಂಬುಳುಗೂ ಕಣ್ಣ್ ಕಾಂಬಲೆ. ಅದ್ ಅದರ ಸರೀರದ ಒಂದ್ ಕೊಡಿಂದ ಗಟ್ಟಿ ಹಿಡ್‌ದ್ ನಿತ್ತ್ ಇನ್ನೊಂದ್ ಕರೆನ ಮುಟ್ಟಿ ಮುಟ್ಟಿ ಜಾಗನ ಗುರ್‌ತ್ ಮಾಡಿಕಂಡ್ ಮುಂದಕೆ ಹೋದೆ. ಇಲ್ಲಿ ಕ್ರಿಯೆ ಎರಡ್ ಆದರೆ ಎರಡಕೂ ಸರಿಯಾದ ಹೋಲಿಕೆ ಉಟ್ಟು, ಕಾಡೆಲ್ಲ ಸುತ್ತಿದೆ ಬಂದ್ ಮೂಲೆಲಿ ಕುದ್ದದೆ: ಇದ್ ಯಾಗೋಳುನ ಬೊದ್ಕ್‌ಲಿ ಕಾಂಬ ವಸ್ತು. (ಎಲ್.ಸಿ.ಕೆ.)

**ಕನ್ನೆಕಂಬ :** ಗೌಡ ಜೆನಾಂಗದವರ ಅಡ್ಗೆ ಕೋಣೆಲಿರ್‌ವ ಮರಂದ ಮಾಡ್ದ ಕಂಬ. ಅದ್ಕೆ ಕನ್ನಿಕಂಬಂತೇಳಿ ಕರ್‌ದವೆ. ಅದರ ಕನ್ನಿಕಂಬ, ಕನ್ನೆಕಂಬ, ಮೂರ್‌ತದ ಕಂಬ, ಕನ್ಯಾಕಂಬ, ಕನ್ನಿಕೋಂಬರೆಂತೇಳಿನೂ ಕರ್‌ದವೆ. ಇದ್ ಅಡ್ಗೆ ಕೋಣೆಲಿ, ನೊಡುಮನೆಲಿ, ದೆವ್ವದ ಕೋಣೆ ಅಲ್ಲರೆ ದೇವರ ಕೋಣೆಲಿನೂ ಕನ್ನಿಕಂಬ ಇದ್ದದೆ.

ಕನ್ನಿಕಂಬ ಆಯ ಇರ್‌ವ ಮನೆನ ಕೋಣೆನ ಆಗ್ನೇಯ ಅಲ್ಲರೆ ಇಸಾನ್ಯ ಬಾಗಲಿ ಜಾಸ್ತಿ ಕಾಂಬಕೆ ಸಿಕ್ಕಿದೆ. ಕೆಲವ್ ಕಡೆ ನೈರುತ್ಯಲು ಇದ್ದದೆ. ಇದರ ಹಕ್ಕಲೆ ಮನೆಲಿ ನಡೆವ ಎಲ್ಲ ಅಸುರ ಕ್ರಿಯೆಗ ನಡ್ದದೆ. ಇದ್ಕೆ ಕನ್ಯಾಮೂಲೆ/ಕನ್ನೆಮೂಲೆಂತ ಕರ್‌ದವೆ. ಕನ್ನಿಕಂಬನ ಮರಂದ ಕೆತ್ತಿ ಮಾಡ್‌ವ ಆಚಾರಿನ ಲೆಕ್ಕಲಿ ಸುಮಾರ್ ಮುಕ್ಕಾಲ್ ಕೋಲ್ ಉದ್ದ ಇದ್ದದೆ. ಇದ್ ಅಸ್ಟ ಪಟ್ಟಿ ಇದ್ದ್ ಸೋಂಟ, ನಾಳಿ, ಮೋರೆ ಮತ್ತೆ ತಲೆ ಇದ್ದದೆ. ತಲೆ ಬಾಗ ತಾವರೆ ಮೊಗ್ಗುನ ರೂಪಲಿ ಇದ್ದ್. ಎರಡ್ ಕೈಂದ ಹಿಡಿವಂಗೆ ದಪ್ಪ ಆಗಿದ್ದದೆ. ಎಂಟ್ ಪಟ್ಟಿ ಇದ್ದ್ ಚೌಕ ಪಟ್ಟಿ ಬಾವಂಗೆ ಇದ್ದದೆ. ಕಂಬದ ಕೊಡಿ ದೂಂಚಿ ಆಗಿ ನೋಡಿಕೆ ಮುಗುಳಿ, ಗೋಪ್ರದಂಗೆ ಕಂಡದೆ. ಎಂಟ್ ಪಟ್ಟಿ ಎಂಟ್ ದಿಕ್ಕ್‌ಗಳ ಸಮ್ಮಂದ ಕೂಡ ಸೂಚಿಸಿದೆ. ಪುಡೆಂದ ನೋಡ್ರೆ ನಾಮದಂಗೂ ಕಂಡದೆ. ಇದರ ಹಾಲ್ ಬಾವ ಗಟ್ಟಿ ಮರಂದ ಮಾಡ್ವೆ. ಹೆಚ್ಚಿನ ಕಡೆ ಕನ್ನಿಕಂಬ ಹಲ್ಸ್‌ನ ಮರದ್ದೆ ಆಗಿದ್ದದೆ. ಕುಟುಂಬದ ಮನೆ, ದೊಡ್ಡ ಮನೆ, ಐನ್ ಮನೆಲಿ, ಗುತ್ತು, ಬಾರಿಕೆ ಮನೆಗಳ್‌ಲಿ ಇರ್‌ವಂತದ್ ಸಾಮಾನ್ಯ. ಐನ್ ಮನೆನ ಕೈಯಾಲೆ ದಾಟಿಕನ ಎದ್‌ರ್ ಇರ್‌ವ ಕಂಬ. ಕೊಡವರ ಪೂಜೆನ ಕೋಣೆ ಮೀದಿ ಕೋಂಬರೆ/ದೇವರ ಕೋಂಬರೆಲಿ ಈ ಕನ್ನಿಕಂಬ ಇದ್ದದೆ.

ಮನೆ ಯಜಮಾನ ಆದಂವ ಮನೆ ಕಟ್ಟಿದ ಆಚಾರಿನ ಮುಕ್ಕಾರ್ ತೋರಣ ಮತ್ತೆ ಮನೆ ಒಕ್ಕುಲುನ ಹೇಳಿಕೆನೊಟ್ಟಿಗೆ ಕನ್ನೇಕಂಬ ನೆಡುವ ಬಗ್ಗೆನೂ ಹೇಳಿಕೆ ಕೊಟ್ಟ್ ಮಾತಾಡ್ಸಿ ಬರೋಕು. ಕನ್ನಿ ಕಂಬನ ಮನೆ ಒಕ್ಕಲ್‌ನ ಹಿಂದೆನ ದಿನ ಅಂದರೆ ಕುಟ್ಟಿ ಪೂಜೆ/ಗುತ್ತಿಪೂಜೆ ಹೊತ್ತಿಳಿಕನ ಮಾಡ್ವ ಕ್ರಮಗಳ ಒಟ್ಟಿಗೆ ಅಡ್ಗೆ ಕೋಣೆನ ಆಗ್ನೇಯ/ ಇಸಾನ್ಯ ದಿಕ್ಕಿಲಿ ಹಾಕ್ವೆ. ಕೆಲ್ಸ ಮಾಡ್ದ ಆಚಾರಿ ಮನೆನ ಯಜಮಾನನೊಟ್ಟಿಗೆ ಸೇರಿ ಇದರ ಮೊಣ್ಣೊಳಗೆ ಹಾಕ್ವೆ. ಆ ಗುಂಡಿಲಿ ಅರ್‌ಸಿನಲಿ ಕಲ್ಸಿದ ಬೆಳ್ತಕ್ಕಿ, ತೊಳ್ಸಿಕೊಡಿ, ನಾಕಾಣೆ ದುಡ್ಡು, ಒಟ್ಟ್‌ಗೆ ಪಂಚಲೋಹದ ಮುರ್‌ಕ್, ಅಲ್ಲರೆ ಚಿನ್ನ/ಬೆಳ್ಳಿನ ಮುರ್‌ಕು ಹಾಕಿ, ಹಾಲ್ ತುಪ್ಪ ಹೊಯ್ದ್, ಅದರ ಮೇಲೆ ಈ ಕನ್ನೆಕಂಬನ ಮೇಲೆ ಬಿಳಿ ಬಟ್ಟೆನ ಹೊದ್ಸಿ ಇಸಿದ್ ಬುಡ ಗಟ್ಟಿ ಮಾಡ್ವೆ. ಮನೆ ಕೆಲ್ಸ ಮಾಡ್ದ ಆಚಾರಿನೆ ಈ ಕ್ರಮನ ಮತ್ತೆ ಕ್ರಿಯೆಗಳ ಮಾಡ್ವೆ. ಇಲ್ಲಿ ಆಚಾರಿಗೆ ಕೊಡುವ ಮೊರ್‌ಯಾದಿ ಮೊದ್ವೆ ಮತ್ತೆ ಮನೆ ಒಕ್ಕುಲು ದಿನ ಮುಕ ತೋರಣ/ಮುಕ್ಕಾರ್ ತೋರಣಕ್ಕೆ ಕೊಡುವ ಮೊರ್‌ಯಾದಿ ಆದ ಒಂದ್ ಸೇರ್ ಅಕ್ಕಿ, ನಾಕಾಣೆ ದುಡ್ಡು, ಒಂದ್ ಕಾಯಿ, ಐದ್ ಎಲೆ, ಒಂದ್ ಅಡ್ಕೆನೊಟ್ಟಿಗೆ ಕನ್ನೆಕಂಬಕ್ಕೆ ಹೊದ್ಸಿದ್ದ ಬಟ್ಟೆನೂ ಕೊಡೊಕು. ಮುಕ್ಕಾರ್ ತೋರಣಂತೇಳಿರೆ ಎಲ್ಲ ಗೌಡ್ರ ಮನೆ ಒಕ್ಕಲ್ ಮತ್ತೆ ಮೊದ್ವೆನ ಹಿಂದೆನ ದಿನ ಮನೆನ ಎದ್‌ರ್‌ನ ಮಾಡ್‌ನ ಮೇಲೆ ಇಸಿಕೆ ಮೂರ್ ಕಾಲ್‌ನ ಮರಂದ ಮಾಡ್ವ '/\' ಅಕಾರಲಿ ಇರ್‌ವ ರಚನೆ ಆಗಿದ್ದದೆ. ನೋಡಿಕೆ ತ್ರಿಸೂಲನ ತಿರ್ರ್‌ಗಿಸಿ ಹಿಡ್ದ್ ಮೂರು ಆಂತರನಂಗೆ ಕಂಡದೆ. ಇದ್ ಪವಿತ್ರಂತೇಳುವ ನೆಲೆಲಿ ಪ್ರತಿ ಮನೆಲೂ ಇದ್ದದೆ.




ಕನ್ನಿಂತೇಳಿರೆ ಮೆತ್ತಂಗೆ, ಲಾಯಿಕ್, ಸೂಸ್ಮ, ಸಣ್ಣೆದ್ ತೇಳುವ ಅರ್‌ತ ಬಂದದೆ. ಬೈನೆ ಮರದ ಕೈನ ಎರಡ್ ಪುಡೆಲಿ ಕನ್ನಿಂತೇಳುವ ಕಪ್ಪು ಕಂದ್ ಬಣ್ಣದ ಬೊಳ್ಳಿ ಇದ್ದದೆ. ಈ ಕೈಗ ಮರಕ್ಕೆ ಗಟ್ಟಿ ತೊಬ್ಬಿದ್ ಹಿಡ್ಕಂಡ್ ಇದ್ದಾಂಗೆ ಇದ್ದವೆ. ಈ ಕನ್ನಿಬೊಳ್ಳಿ ಮೊಡ್ಪಾಳೆ ಮೊಡ್ಯೆಕನ ಬಲ್ಸುವೆ. ನೊಡಿಕೆ ಮೆತ್ತಂಗೆ ಆಗಿ ಬೇಕಾದಂಗೆ ಬೊಗ್ಗಿಸಿಕೆ, ಮೊಡ್ಯಕೆ



ಕನ್ನಿಕಂಬ

ಆದೆ. ಇದರ ಕೈ ಬಾಕನ ಸುರೂನ ಬೊಳ್ಳಿ ಕಂಡದೆ. ಹಂಗಾಗಿ ಈ ಹೆಸರ್ ಬಂದಿರ್‌ದು. ಬೆರಳ್‌ನ ಗಂಟ್ ಮತ್ತೆ ಉಗುರ್‌ನ ನಡ್ವೆ ಇರ್‌ವ ಜಾಗೆಗೂ ಕನ್ನಿಂತ ಕರ್‌ದವೆ. ಅದ್ ಸೂಸ್ಮ ಅಗಿದ್ದದೆ, ತಾಂಗಿರೆ ಮನಿ ಬಾರಿ ಬೇನೆ ಇದ್ದದೆ. ಗುಣ ಆಕೆನೂ ತುಂಬಾ ದಿನ ಹಿಡ್ದದೆ. ಹಲ್ಸ್‌ನ ಕೆಲವ್ ಕನ್ನಿಪಚ್ಚಿರ್ ಪಚ್ಚಿರ್‌ಗೆ ಅಂಟಿಕಂಡಿರ್‌ವ ಬಿತ್ತ್ ಇಲ್ಲದಂತೇಳುವ ಪೊಟ್ಟ್‌ಪಚ್ಚಿರ್ ಅಗಿದ್ದದೆ. ಹಂಗೆನೆ ಕಾಯಿನ ಮುಗಡಂದ ಗೊನೆನ ಹಿಡಕಂಡ ಜಾಗೆಗೆ ಕನ್ನಿಂತ ಕರ್‌ದವೆ, ಕನ್ನಿಕೊಟ್ಯಂತೇಳ್ರೆ ಗೂಡೆ ಹೊರಗಾಕನ ಕುದ್ರುವ ಕೋಣೆ. ಕನ್ನಿನೆಲಂತೇಳ್ರೆ ಕ್ರಿಸಿ ಮಾಡದ ಬೂಮಿ. ಕನ್ನಿಪೊಣ್ಣು, ಕನ್ನಿಕೆ, ಕನ್ಯಕಾ, ಕನ್ಯೆಂತೇಳಿ ಮೊದ್ವೆ ಆಗದ ಸಣ್ಣ ಪ್ರಾಯದ ಗೂಡೆನ ಕರ್‌ದವೆ. ಹಾಂಗಾಗಿ ಕನ್ನಿಕಂಬಂತೇಳ್ದು ಕನ್ಯೆ, ಮನೆ ಹೆಂಗ್ಸ್ ಸಮ್ಮಂದಪಟ್ಟ ನಂಬಿಕೆನ ಕಾರಣ ಕೂಡ ಆಗಿರ್‌ದೂ. ಬೇರೆ ಬಾಸೆಲಿ ಕೂಡ ಕನ್ಯೆ ಪ್ರಯೋಗ ಉಟ್ಟು. ತಮಿಳ್‌ಲಿ ಕನ್ನಿಂತ ಹೇಳ್ರೆ ಸುದ್ದ, ಸ್ರೇಸ್ಟ, ಪೂಜ್ಯ ಹಂಗೆನೆ ತಮಿಳುನಾಡಿಲಿ ಒಂದ್ ಜಾತಿ ನಾಯಿ ತಳಿನ ಹೆಸರ್‌ನೂ ಉಟ್ಟು. ಹಿಂದೆ ಗೂಡೆನ ಮೊದ್ವೆ ಮಾಡಿಕೊಡಿಕನ ಒಂದ್ ಈ ಜಾತಿ ನಾಯಿನ ಕೂಡ ಕೊಡ್‌ತಿದ್ದೊಂತ ಕತೆಗ ಒಳೋ. ಮೇಲೆನ ವಿವರಂದ ಕನ್ನಿಕಂಬ ಕೂಡ ಅದೇ ನಮೂನೆನ ಅರ್‌ತ ಕೊಟ್ಟದೆ. ಮರದ ಸಣ್ಣ ಕೊದಂಟಿ, ಮೂರ್‌ತ, ಸೂಸ್ಮ, ಸುದ್ದಾಚಾರಣೆ, ಹೆಣ್ಣ್ ಹೆಂಗ್ಸ್‌ಗೆ ಸಮ್ಮಂದ ಪಟ್ಟಂಗೆ ಅಗಿರ್‌ದು.

ಕನ್ನೆಕಂಬ ಒಂದ್ ಪವಿತ್ರದ ಕಂಬ. ಹಿರಿಯವು ದೇವರ ಕಲ್ಪನೆ ಇಲ್ಲದ ಕಾಲಲಿ ಸಕ್ತಿನ ಅರಾದನೆನ ನೆಲೆಲಿ ಈ ಕಂಬದ ಹಕ್ಕಲೆನೆ ಎಲ್ಲ ಕ್ರಮಗಳ ಮಾಡ್ತಿದ್ದೊ.ಹಂಗಾಗಿ ಹೆಚ್ಚಾಗಿ ಅಸುರ ಕ್ರಿಯೆಗ ನಡ್ದದೆ. ಇದರ ಗುರು ಹಿರಿಯರ ಕಂಬ, ಗುರು ಕಾರನವರ ಮೂಲ ತ ನಂಬುವೊ. ಮೊಯಿಂಸರ್ ಬೊದ್ಕ್‌ನ ದಿನಲಿ ಮತ್ತೆ ವರ್‌ಸಾಚರಣೆಲಿ ಎಲ್ಲೊವ್ ಬಂದ್ ಕುಟುಂಬದ ಮನೆಲಿ ಸೇರ್‌ತಿದ್ದೊ. ದೆವ್ವದ ಅಗೆಲ್ ಹಾಕಿಕೆ, ಕೊಲೆಗೆ ಅಗೆಲು ಇಸಿಕೆ(ಕಾರ್‌ನೂರುಗೆ ಇಸಿಕೆ), ಕೊಟ್ಟ ಹೆಣ್ಮಕ್ಕ ತೌರು ಮನೆಗೆ ಬಂದ್ ಹೋಕನ, ಅವು ಹೋವ ಹಿಂದೆನ ಇರ್‌ಲ್ ಕಲ್ಲ್‌ರ್ಟಿಗೆ ಎಡೆ ಇಸಿ ದೀಪ ಹೊತ್ತ್‌ಸಿ, ಬಿನ್ನೆ ಹೇಳಿ, ಅಕ್ಕಿ ಹಾಕಿ ಕೈ ಮುಗ್ದವೆ. ಕುಸಿನ ಜಂಬರ ಮಾಡ್‌ಕನ ಕೈ ಮುಗ್ಯೊದು, ಗಣಪತಿಗೆ ಇಸುದು, ಸಂಕ್ರಮಣದ ಅಡ್ಗೆ ಮಾಸದ ಅಡ್ಗೆ ಮಾಡ್ರೆ ಬೆಸೆಗೆಲಿ ಇಸುದು, ಕದ್‌ರ್ ಕಟ್ಟುದ್, ಕಾರ್‌ತಿಂಗ ಹರ್‌ಕೆ, ಗುರು ಕಾರ್‌ನೋರಿಗೆ ಇಸುದು, ತಿರುಪತಿ ತಿಮ್ಮಪ್ಪಂಗೆ ಮುಡ್ಪು ಹಣ ಕಟ್ಟಿಸುದು, ಹೊಸ್ತ್ ಅಕ್ಕಿನ ಉಂಬಕನ ಕೊಲೆಗೆ ಇಸಿದ್ ಪ್ರಾರ್‌ತನೆ ಮಾಡ್ದು, ಮೊದ್ವೆಗೆ ಮೊದ್ಲು ಗೂಡೆ/ಹೈದ ಸೋದರ ಮಾವನ ಮಾತಾಡ್ಸಿಕೆ ಬಾಕಾಕನ ಗುರುಕಾರ್‌ನೂರ್‌ಗೆ ಬಳ್ಸುದು, ಹೆಚ್ಚಾಗಿ ಗೂಡೆನ ಮನೆಲಿ ಮೊದ್ವೆ ಆಗಿ ಹೈದನ ಮನೆಗೆ ಹೊಕನ ಮನೆಯೊಳಗೆ ಕನ್ನಿಕಂಬ ಇರ್‌ವ ಗೋಡೆಲಿ ಹಸೆ ಬರ್‌ದಿದ್ದವೆ. ಅಲ್ಲೆ ಕುದ್ದ್ ಕುಡ್ತೆ ಹಾಲು ಕುಡ್ದ್ ಗೂಡೆನ ಮನೆಲಿ ಮಾಡ್ದ ಬೂಮಿಕ್ಕುವ ಸಾಸ್ತ್ರ ಮಾಡಿ ಆ ದಿನದ ಕ್ರಮ ಮಾಡ್ವೆ. ಬಿಸುನ ಕಣಿ ಇಸುದು, ಹಿರ್‌ಯರ ಆಸೀರ್‌ವಾದ ತಕಂಬೊದು ಎಲ್ಲನು ಕನ್ನಿ ಕಂಬನ ಕೇಂದ್ರ ಆಗಿಸಿಕಂಡ್ ಮಾಡ್ವೆ. ಎಲ್ಲ ಕ್ರಮನ ಕನ್ನಿಕಂಬದ ಎದ್ರೆ ಮಾಡ್ವೆ. ಕೆಲವ್ ಕಡೆ ಬೊರಿ ನೆಲಲಿ ಕ್ರಮ ಮಾಡಿರೆ ಕೆಲವ್ ಕಡೆ ಒಲಿ ಮೊಂದ್ರಿ ಹಾಸಿ, ಮಣೆ ಇಸಿ ಕ್ರಿಯಾಚರಣೆ ಮಾಡ್ವೆ. ಕೆಲವ್ ಕಡೆ ಬೊಳ್ಪುಗ ಎದ್ದ್ ಮನೆ ಹೆಂಗ್ಸ್ ಕನ್ನಿಕಂಬಕ್ಕೆ ದೀಪ ಇಸಿ ಅದೇ ದೀಪಂದ ಮಡ್ಲ್‌ಲಿ ಒಲೆಗೆ ಕಿಚ್ಚಿ ಮಾಡೊಕುಂತೇಳ್ವಾ ಕ್ರಮ ಕೂಡ ಉಟ್ಟು. ಇನ್ನ್ ಕೆಲವ್ ಮನೆಗಳ್‌ಲಿ ಹಿಂಬೊತ್‌ಗೆ ದೀಪ ಇಸ್‌ವ ಕ್ರಮನೂ ಉಟ್ಟು (ಕೇರಳದ ಮಲಯಾಳಿಗ ಇದೇ ಆಚರ್‌ಣೆ ಮಾಡ್ವೆ). ಮನೆ ಹೆಣ್ಮಕ್ಕಳೆ ದೀಪ ಇಸೊಕುಂತಾ ವಾಡಿಕೆನೂ ಉಟ್ಟು. ಒಟ್ಟಾರೆ ಬೊದ್ಕ್‌ನ ಮತ್ತೆ ವರ್‌ಸಾಚರಣೆಲಿ ಹಲವ್ ಕ್ರಮಗ ಕನ್ನಿಕಂಬನ ಇಸಿಕೊಂಡೇ ಆದೆ.

ಹಟ್ಟಿಲಿ ಹಸ್ ಕರ್ ಹಾಕಿರೆ ಒಂದಸ್ಟ್ ದಿನ ರಾತ್ರೆಗೆ ಮನೆ ಒಳಗೆ ಕನ್ನಿ ಕಂಬಕ್ಕೆ ಕಟ್ಟಿಹಾಕ್ವೆ. ಇದ್ ಅಡ್ಗೆ ಕೋಣೆಲಿ ಇರ್‌ವ ಕರ್ ಬೆಚ್ಚ ಇದ್ದದೆ, ಸಣ್ಣ ಕರ್‌ಗೆ ಹಟ್ಟಿಲಿ ಒಳ್ದ ದನಂಗ ಮೆಟ್ಟುದು ತೊಪ್ಪಿದೆ, ಹುಲಿ ಹೊರ್‌ದು ಕೂಡ ತೊಪ್ಪಿದೆ ತ ಜೆನಪದರ ನಂಬಿಕೆನೂ ಆಗಿರ್‌ದು. ಒಟ್ಟಿಗೆ ದನ ಕರ್ ಪವಿತ್ರಂತೇಳುವ ನೆಲೆನೂ ಆಗಿರ್‌ದು. ಕರ್ ಕಟ್ಟುದುಕೆ ಸಮರ್‌ತನೆ ಆಗಿದ್ ಅರೆಬಾಸೆ ಗೌಡರ್ ಗಂಗಾತೀರಂದ ದಕ್ಷಿಣಕೆ ಬಂದೊ. ಹಟ್ಟಿಕಾರರ್‌ಲಿ ಗೋವಳರದ್ದು ಒಂದ್ ಗುಂಪು. ಆ ಗೋವಳರೇ ಈ ಗೌಡರು ಆದೊಂತೇಳಿ ಕೂಡ ತಿಳ್ದು ಬಂದದೆ.

ಈ ಕಂಬ ಮನೆ ಒಕ್ಕಲ್‌ನ ಹೊತ್ತ್ ಅಂದರೆ ಮೂರ್‌ತದ ಹೊತ್ತ್‌ಕ್ಕೆ ಹಾಕ್ವ ಕಂಬ. ಹಂಗಾಗಿ ಇದರ ಮೂರ್‌ತದ ಕಂಬಂತ ಕೂಡ ಕರ್‌ದವೆ. ಅಡ್ಗೆ ಕೋಣೆಲಿ ಮನೆ ಒಕ್ಕೆಲ್ ಆದ ನೆಂಪುಗೆ ಹಾಕುವೆ. ಅಡ್ಗೆ ಮನೆ ದೆವ್ವ ದೇವರ್‌ಗ ಇದ್ದವೆಂತನೂ ಆಗಿರ್‌ದು.



**ಮನೆತುಂಬ್ಸುದು**

ಇದ್ ಪಂಡ್‌ನ ಕಾಲಂದಲೆ ಇದ್ದ ನಂಬಿಕೆ. ಬೆಳ್ತಂಗಡಿ ಪ್ರದೇಸಲಿ ಬಟ್ರ ಮನೆಲಿ ದೇವರ ಕೋಣೆಲಿನೂ ಕನ್ನಿಕಂಬ ಇದ್ದದೆ. 'ಇದ್ ಸಂಪತ್ತ್‌ನ, ಸಮೃದ್ದಿ ಗುರ್‌ತಿಸುವ ಪ್ರಕೃತಿ ಸಂಸ್ಕೃತಿನ ಆಚರಣೆ. ಹಿರಿಯರ ಆರಾದನೆ ಗುರುಕಾರ್ಣೆವರ ಆರಾದನೆ ಆಗಿರ್‌ದು. ಹಿರಿಯರ ನೆಂಪಿಸಿಕೆಂತ ಅವ್ ಇದರ ಒಂದ್ ಆರಾದನೆ ಮಾಡಿರ್‌ವೊ. ನಮ್ಮ ಹಿಂದೆಮುಂದೆನ ಆಗು–ಹೋಗುಗಳ ಕಾರ್‌ಯಕ್ಕೆ ಕಾರಣಕರ್‌ತರ್ ತ ನಂಬಿದೊ. ಹಿಂಗೆ ಆಚರಣಾ ರೂಪಲಿ ಹಿರಿಯರ್‌ಗೆ ಕೊಡುವ ಮರ್‌ಯಾದಿನೂ ಆದೆ. ಇದ್ ನ್ಯಾಯದ ಕಂಬ. ಸ್ತಳಮನೆತೇಂಳುವ ಆ ಊರಿನ ದೊಡ್ಡ ಮನೆಲಿ ನ್ಯಾಯ ಪಂಚಾತಿಕೆ ಆದೆ. ಅಲ್ಲಿ ಪಡ್ಪಿರೆಲಿ ಪಂಚಾತಿಕೆ ಮಾಡಿ ಕನ್ಯಾಕಂಬದ ಹಕ್ಕಲೆ ಪ್ರಮಾಣ ಮಾಡಿಕಂಡ್ ಇದ್ದ ಜಗಳನ ಅಲ್ಲಿಗೆ ಮುಗ್ಸಿ ಕೈ ಮುಗ್ದ್ ಅಡ್ಡಬಿದ್ದ್ ಹೋಕು ತ ಅನುಬವ ಪಟ್ಟವೆ. ದೆವ್ವನ ಅಕೇರಿಗೆ ಕಟ್ಟುತಾರ್ ಬೂಳ್ಯ ನುಡಿಕಟ್ಟಿಲಿ 'ಮೂಡಾಯಿ ಬಾಕಿಲ್ತ ರಾಸಿ ಪಡ್ಡೊಯಿ ಬಾಕಿಲ್ತ ದರ್ಮೊ, ಕನ್ನಿಕಂಬೊತ ಕುರಲ್'ತೇಳಿ ಬಂದದೆ. ಮತ್ತೆ ಮನೆನ ಹಿರಿಯವು ದ್ವೆವನ ಸುರುನ ಬೂಳ್ಯ ಪ್ರಸಾದ ತಕಂಡ್ ಕನ್ನಿ ಕಂಬೊದ ಹಕ್ಕಲೆ ಇಸಿದ್ ಅಡ್ಡ ಬಿದ್ದ್ ಮತ್ತೆ ಬಂದ ಎಲ್ಲವುಕ್ಕೂ ಬೂಳ್ಯಕೊಟ್ಟವೆ. ಹಂಗೆನೆ ಕುತ್ತಿ ಹಾಕುವ ದಿನದಂದ್ ಹಾಕುವ ಜಾಗೆಲಿ ಕನ್ನಿ ಕಂಬನ ಹಾಕುವ ಕ್ರಮ ನೋಡಿರೆ ಮನೆನ ಅದಾರ ಅಲ್ಲರೆ ಸುರುನ ಕುತ್ತಿನ ನೆಂಪುಗಾಗಿ ಹಾಕ್ವೆ.

ವಿಸೇಸ ದಿನಲಿ ಮತ್ತೆ ಒಳ್ಳೊ ಹೊತ್ತುಗೆ ಇದ್ಕೆ ಹೆಚ್ಚಿನ ಮೊರ್‌ಯಾದಿ ಉಟ್ಟು. ಮನೆನ ಯಜಮಾನ ಇದ್ಕೆ ಅರೆಬಾಸೆನ ಸುರುನ ತಿಂಗ ಅದ ಪೊಗ್ಗು ತಿಂಗಲಿ ಬರ್‌ವ ಬಿಸುನ ದಿನ ಮನೆಲಿ ಬೆಳ್ದ ಎಲ್ಲ ನೆಟ್ಟಿಕಾಯಿ, ಹಣ್ಣ್‌ಗಳ ಸುತ್ತೆಯೊಟ್ಟಿಗೆ ಕೇಪ್ಲ ಹೂ, ಕಾಲ್ದೀಪ, ಕನ್ನಡಿ ಇಸಿ ಬಿಸು ಕಣಿ ಇಸುದು, ಹಿರಿಯರ ಆಸಿರ್‌ವಾದ ತಕಂಬೊದು. ಹೊಸ್ತುನ ದಿನ ಕದಿರ್ ತೆನೆನ ಸುರೂಗೆ ಇದ್ಕೆ ಕಟ್ಟುದು, ಇದ್ ಅಡ್ಗೆ ಕೋಣೆಂದನೆ ನಮ್ಮ ಆಹಾರ ಮತ್ತೆ ಸಂಸ್ಕೃತಿಹುಟ್ಟಿರ್‌ದು ಅಗಿರ್‌ದೊ..

ತುಳುನಾಡ್‌ನ ಮೂಲ/ತಳ ಜೆನಾಂಗದ ಜೆನರ್‌ಲಿ ಮೊದ್ವೆಗೆ ಮುಂದೆ ಹೈದ ಇಲ್ಲರೆ ಗೂಡೆನ ಮನೆಲಿ ಕನ್ನಿಕಂಬನ ನೆಟ್ಟ್ ಗುರು ಉಳ್ಳಾಲ್ತಿ ಆರಾದನೆ ಮಾಡ್ವೆ. ಇದರ Edgar Thurston 'Milk Post'(ಹಾಲು ಕಂಬ) ತ ಕರ್‌ದದೆ. ಇಜ್ಜಾಲ್‌ಲಿ ಹಾಕಿದ ಚಪ್ಪರನ ನೊಡುಲಿ ಕನ್ನಿಕಂಬ (ಮುಹೂರ್‌ತ ಕಂಬ) ತೇಳಿ ಎರಡ್ ದಿನದ ಮಟ್ಟಿಗೆ ಹಾಕುವೆ. ಈ ಕಂಬನ ಅವರದೇ ಮೊಡ್ಯೊಳ ಕೊಟ್ಟ ಮಡಿ ಬಟ್ಟೆಲಿ ಸುತ್ತಿ ಸಿಂಗಾರ ಮಾಡ್ವೆ. ಕಂಬದ ಕೊಡಿಗೆ ಹಾಲೆ (Alstonia Scholaris) ಮರದ ಗೆಲ್ಲ್ ಕಟ್ಟ್‌ವೆ. ಈ ಹಾಲೆ ಮರ ಕೂಡ ಹಾಲ್ ಬರ್‌ವ ಮರ ಆಗಿರ್‌ದು ವಿಸೇಸ. ಮರದ ಹಕ್ಕಲೆ ಪಾಳೆ ಸಾಸ್ತ್ರಂತೇಳಿ ಊರ್‌ನ ಗುರ್‌ಕಾರ ಕ್ರಮ ಮಾಡ್ವೆ. ಮೊದ್ವೆ ಆಕೆ ಇರ್‌ವ ಹೈದ/ಗೂಡೆ ಎಣ್ಣೆ ಅರ್‌ಸಿನ ಆಗಿ ಮೀದ್ ಬಂದ್ ಮಡಿಬಟ್ಟೆ ಉಟ್ಟ್ ಕನ್ನಿಕಂಬದ ಎದ್‌ರ್ ನಿಲ್ಲೊಕು. ಕನ್ನಿಕಂಬದ ಎದ್‌ರ್ ಸ್ವಸ್ತಿಕ, ಕಲಸ–ಕನ್ನಡಿ, ದೀಪ, ವೀಳ್ಯ, ಗುರು–ಕಾಣಿಕೆ ಎಲ್ಲ ಇಸಿ ಮುತ್ತೈದೆರ್ ಕನ್ನಿಕಂಬಕೆ ಆರತಿ ಮಾಡ್ವೆ. ಗುರ್‌ಕಾರ್(ಯಜಮಾನ) ಕೈಮುಗ್ದ್ ನೂಲ್‌ಲಿ ಚುರ್‌ದ ಕರಿಮಣಿನ ಕನ್ನಿಕಂಬಕ್ಕೆ ಕಟ್ಟಿ ಮತ್ತೊಂದ್ ಕರಿಮಣಿನ ಹೈದ ಅಲ್ಲರೆ ಗೂಡೆನ ಗಂಟ್ಲ್‌ಗೆ ಕಟ್ಟ್‌ವೆ. ಮಾರ್‌ನೆ ದಿನ ದಿಬ್ಬಣ ಬಂದ ಹೈದ/ಗೂಡೆ ಅವರ ಅಪ್ಪ–ಅವ್ವನೊಟ್ಟ್‌ಗೆ ಕನ್ನಿಕಂಬಕ್ಕೆ ಮೂರ್ ಸುತ್ತ್ ಬಂದ್ ಅಡ್ಡ ಬೀಳ್ಸಿ ಕನ್ನಿಕಂಬದ ಎದ್‌ರೆ ದಾರೆ ಹೊಯ್ದ್ ಬುಟ್ಟವೆ. ಹೆಚ್ಚಾಗಿ ಮೊದ್ವೆ ಗೂಡೆನ ಕಡೆಲಿ ಇತ್ತ್. ಆಗ ಹೈದನ ಮನೆವು ಗೂಡೆನ ಮನೆಗೆ ಹೋಗಿ ಅಲ್ಲಿ ದೇಸೆ ಮಾಡಿ ಕಡೆಗೆ ಹಿಂದೆನ ದಿನ ಮೊದುಮಜ್ಜಗೆ ಕಟ್ಟಿದ ಮುಹೂರ್‌ತಮಣಿನ ಚಾಳೆಗೆ ಕಟ್ಟಿಬಂದವೆ. ಅಂದ್‌ನ ದಿನನೆ ಕನ್ನಿಕಂಬನ ತೆಗ್ದವೆ. ಅರೆಬಾಸೆ ಪ್ರದೇಸ ಗೌಡರ ಮನೆಲಿ ಅಲ್ಲಲ್ಲಿ ಮಟಗ ಉಟ್ಟು. ಕೆಲವ್ ಕಡೆ ಚಂದನದ ಬೊಂಬೆಗ, ಲೋಹದ ಮೂರ್‌ತಿಗ ಕಂಡದೆ, ಅದಕ್ಕೆ ಪೂಜೆ ಮಾಡಿಕೆ ಜೋಗಿ ಜೆನಾಂಗದವು ಪ್ರತಿ ತಿಂಗ ಬಂದವೆ. ಇದ್ 'ನಾತಪಂಥದ ಗುರ್‌ತು ಆಗಿರೊಕು ಕಂಡದೆ. ಅದ್ಕೇ ಹೆಚ್ಚಿಗೆ ಬಲ ಕೊಡುವಂಗೆ ಈ ಪ್ರದೇಸಲಿ ಇರ್‌ವ ಜಾಗೆನ ಹೆಸರ್‌ಗ ದಾಸರಮೂಲೆ, ದಾಸರಕೋಡಿ, ಸಿದ್ದಮೂಲೆ, ಸಿದ್ದಕಟ್ಟೆ ಹಂಗೆನೆ ಬೆಳ್ತಂಗಡಿ ಮತ್ತೆ ಸುಳ್ಯದ ತುಳು ಮತ್ತೆ ಅರೆಬಾಸೆ ಮಾತಾಡ್ವ ಪ್ರದೇಸಲಿ

ಆರಾದನಾ ಮಟ್ಟಲಿ ನಡಿವ ಪುರ್‌ಸೆರೆ ನಲಿಕೆ/ ಸಿದ್ದವೇಸ ಕಂಡ್‌ಬಂದದೆ. ಅದರ್‌ಲಿ ಬಾವ ಲಕಡಿ ಪೂಜೆ, ವೆಂಕಟರಮಣ ದೇವರ್‌ಗೆ ಕಟ್ಟ್‌ವ ಮೊಡ್ಪು ಹರ್‌ಸಯ ಕ್ರಮಗ ಎಲ್ಲ ಗೌಡರ್/ಸುಳ್ಯ ಪ್ರದೇಸ ತಾಂತ್ರಿಕ ಪಂತದ ನೇರ ಅನುಯಾಯಿಗಾಗಿದ್ದನೋ ಏನೊ? ತ ಕಂಡದೆ. ತಿನ್ಸ್‌ಲಿ ದೆವ್ವ ದೇವರ ನೋಡ್‌ವ ಜೆನಾಂಗ ಅಡ್ಗೆ ಮನೆನೆ ಪವಿತ್ರಂತೇಳಿ ಒಂದ್ ಪುಡೆಂದ ನೋಡ್ರೆ ಕನ್ನಿಕಂಬ ನಾಮದಂಗೆ ಇರ್‌ವ ಹಂಗೆನೆ ಲಿಂಗ ರೂಪಿ ಅಗಿರ್‌ವ ಕನ್ನಿ ಕಂಬ, ಸೈವ ಮೂಲದ ಕಾಪಾಲಿಕ, ಲಕುಲೀಸ, ಸಾಕ್ತ, ಪಾಸುಪತ ಪಂತಗಳ ಆಚರಣೆನ ಪಳೆಯುಳಿಕೆ ಕೂಡ ಆಗಿರ್‌ದು.

ಇಲ್ಲಿ ಬಳ್ಸ್‌ವ ಹಾಲು ಬಾವ ಮರ, ಹಾಲು ಕಂಬ ಇದ್ ಮೊಯಿಂಸನ ಆಚರ್‌ಣೆ ಮತ್ತೆ ಆರಾದನೆ ನೆಲೆಲಿ ಅಲ್ಲಲ್ಲಿ ಬೊಡ್ಕ್‌ನ ಬಾಗ ಅಗುಟ್. ಸಾಂಸ್ಕೃತಿಕಕಾರಣಂದ ಬಹುರೂಪದ ಉಪಯೋಗ ಆಗಿದ್ದ್ ನೆಟ್ಟ್ ಬೆಳ್ಸುವ ಕ್ರಿಸಿ ಕ್ರಮಗ ಕೂಡ ಬಂದಿದ್ದದೆ. ಕನ್ನಿ ಕಂಬಕೆ ಹೆಚ್ಚಾಗಿ ಹಲ್ಸ್‌ನ ಮರದ ತಿರ್ಳ್‌ನ ಬಳ್ಸಿಕಂಡ್ ಬಂದೊಳೊ. ತುಂಬಾ ದಿನ ಬಾಳಿಕೆ ಬರೋಕು ತ ತಿರ್ಳ್‌ನ ಉಪಯೋಗ ಮಾಡ್ವೆ. ಹಲ್ಸ್‌ನ ಮರಂದ ಮನೆನ ಕುರ್‌ಚಿ, ಬಾಗ್‌ಲ್, ಕೆತ್ತನೆಗೆ, ದೆವಸ್ತಾನಕ್ಕೆ, ಪೂಜೆಗೆ, ಕಾಸ್ಪಸಿಲ್ಪಕ್ಕೆ, ದೇಸ್ತಾನದ ರತಕ್ಕೆ ಹಿಂಗೆ ಸಂಸ್ಕೃತಿಲಿ ಪವಿತ್ರತೆನ ಒಟ್ಟಿಗೆ ಎಲ್ಲ ಕಡೆ ಪ್ರದಾನತೆ ಉಟ್ಟ್. ಇದ್ ಆಚಾರಿಗೆ ಕೆತ್ತಿಕೆ ಸುಲಬ ಅಗಿರ್‌ವ ಮೆತ್ತನೆ ಮರ ಅಗಿದ್ದದೆ. ಹಾಲ್ ಬಾವ ಮರ ಜೆನಪದರ ಮಾತ್‌ಲಿ ಪಲವಂತಿಕೆನ ಸಂಕೇತ ಅಡೆಂಗ್ಯುಟ್ಟು..

ಕನ್ನಿಕಂಬ ಇರ್‌ವ ಮನೆಲಿ ಒಂದಸ್ಟ್ ನಿಸೇದಗ, ಕಟ್ಟ್‌ಕಟ್ಟಲೆಗ ಇದ್ದದೆ. ಕನ್ನಿಕಂಬದ ಮೇಲೆ ಕುದ್ರಿಕೆ ಬೊತ್ತು, ಕಾಲಿಂದ ಮೆಟ್ಟಿಕೆ ಬೊತ್ತು, ಋತುಮತಿಯಾದವೂ ಬಾಕೆ ಅಗದ್, ಸೂತಕದವೂ ಹೋಕೆ ಅಗದ್, ಟೊಪ್ಪಿ ಇಸಿಕಂಡ್ ಹೋಕೆ ಅಗದ್‌ಂತ ಉಟ್ಟು. ಕೊತ್ತಿಗೆ ಇಸ್‌ವ ಗೆಂಜಿಪಾತ್ರೆನ ಕನ್ನೆಕಂಬದ ಒಸಿ ದೂರಲಿ ಇಸೊಕು ಇಲ್ಲರೆ ಮಡೆ ಅಗಿ ಅಸುದ್ದ ಅದೆ, ಸಣ್ಣ ಕೂಸುನೂ ಮುಟ್ಟಿಕೆ ಬೊತ್ತು. ಇದ್ ಸುದ್ದಾಚರಣೆ ಮತ್ತೆ ಪವಿತ್ರತೆ ನೆಲೆಲಿ ಉಟ್ಟು.

ಕನ್ನಿಕಂಬನ ಮನೆ ರಿಪೇರಿ ಅಲ್ಲರೆ ಹೊಸ ಮನೆ ಮಾಡಿಕನ ಹೊಸತ್ ಆವ ವರೆಗೆ ದೆವ್ವದ ಮುಗ ಇಸುವಂಗೆ ಬೇರೆನೆ ಕಡೆನೆ ಅಂದರೆ ಬಾಳೆಲೆಲಿ ಇಸೊಕು. ಬಾಳೆಲೆ ಅಂದರೆ ಮನೆನ ಹೊರಗೆ ಮೈಲಿಗೆ ಅಗದ ಅನುಕೂಲ ಜಾಗಲಿ ಇಸುದು, ಹೆಚ್ಚಾಗಿ ಒಂದ್ ಸಣ್ಣ ಮಾಡ್ ಮಾಡಿ ಇಸುದು. ಹೊಸ ಕನ್ನಿಕಂಬ ಮನೆ ಒಳಗೆ ಹಾಕಿದ ಮೇಲೆ ಇದರ ಹರಿವ ನೀರ್‌ಲಿ ಬುಟ್ಟವೆ. ಸುತ್ತಾಟದ ನೆಲೆಲಿ ಅರೆಬಾಸೆ ಗೌಡ್ರ ಮನೆಲಿ ದೇವರ ಸ್ಥಾಪನೆಯಾಗಲಿ, ದೇವರ ಕೋಣೆ ಆಗಲಿ ಇತ್ಲೆ. ದೆವ್ವದ ಬಂಡಾರದ ಕೋಣೆ ಮತ್ತೆ ಅಡ್ಗೆ ಕೋಣೆ ಮಾತ್ರ ಇತ್ತ್. ಆದರೆ ಈಗನ ಕಾಲಲಿ ಅಡ್ಗೆ ಮನೆಲಿ ಸೌದೆ ಒಲೆ ಮಾಯ ಆಗಿ, ಗ್ಯಾಸ್ ಸ್ಟವ್ ಇರ್‌ವ ಕಾರಣಕ್ಕೆ ಕನ್ನಿಕಂಬ ಅಡ್ಗೆ ಮನೆ ಬುಟ್ಟ್ ದೇವರ ಕೋಣೆ ಸೇರಿಟು.ಕೆಲವ್ ಮನೆಲಿ ಇದರ ಮಹತ್ವಂಗಗ ಕೂಡ ಮರ್‌ತ್ ಬುಟ್ಟೊಳ. ಹಿಂಗೆಲ್ಲ ಒಂದ್ ನೆಲೆಲಿ ಸುದ್ದ, ಪವಿತ್ರಂತೇಳಿರೆ ಮತ್ತೊಂದ್ ಸೃಸ್ಟಿನ ಬಹುರೂಪದ ರೂಪಲಿ ಉಪಕಾರ ಆವಂಗೆ ಈ ಕನ್ನಿಕಂಬ ಇಸೇಸಾಗಿ ಅರೆಬಾಸೆ ಪರಿಸರದ ಮನೆ–ಮನಸ್‌ಲಿ ಅರಾದನೆನ ಮೂಲ ಮತ್ತೆ ಕೇಂದ್ರ ಆಗುಟು. (ಬಿ.ಎ.)

**ಕರಡಿಕೊಣ್‌ತ** : ದಸರದ ಹೊತ್ತ್‌ಲಿ ತುಳುನಾಡ್‌ಲಿ ಕರಡಿಕೊಣ್‌ತನ ಕೊಣ್‌ದವೆ. ಹುಲಿವೇಸ, ಸಿಂಹವೇಸ, ಕರಡಿವೇಸಗಳ ಹಾಕಂಡ್ ಕೊಣ್ಯಕೆ ಇದೇ ಜಾತಿನವು ಆಕುತೇಳುವ ಪೊದ್ದತಿ ಇರ್‌ದುಲೆ. ಯಾರ್ ಬೇಕಾರ್ ಕೊಣಿಯಕ್. ಕರಡಿನ ಮುಕವಾಡ ಮರಂದ, ರಟ್ಟ್‌ಂದ ಅಲ್ಲರೆ ಕಾಗದದ ಗೊಜ್ಜಿಂದ ತಯಾರ್‌ಸುವೆ. ಉದ್ದದ ಮೋರೆ ಒಳಗೆ ಟೊಳ್ಳಾಗಿದ್ದ್ ತಲೆಗೆ ಹಾಕಂಬಂಗೆ ಮಾಡಿದ್ದವೆ. ಈ ಮುಕವಾಡಕೆ ಕಪ್ಪು ಪೈಂಟ್‌ನ ಕೊಟ್ಟಿದ್ದವೆ. ಎರ್‌ಡ್ ಕಡೆ ಕೆಬಿಗಳ ಜೋಡ್ಸಿದ್ದವೆ. ಕಣ್ಣ್, ಮೂಕ್ ಬಾಯಿನ ಬಿಳಿ ಬಣ್ಣಂದ ಬುಡ್‌ಸಿದ್ದವೆ. ಬಾಯೊಳಗೆಂದ ಕೆಂಪು ರಬ್ಬರ್‌ನ ತುಂಡುನ ಹಙ್ಞ ಹೊರಗೆ ಬುಟ್ಟು ನಾಲಗೆನ ಬುಡ್ಸಿದ್ದವೆ. ಕಲಾವಿದನ ಕಣ್ಣ್ ಗಳಿಗೆ ಸರಿಯಾಗಿ ಮುಕವಾಡಕೆ ಎರಡ್ ಒಟ್ಟೆ ಕೊರ್‌ದ್ ಅವ ಹೊರಗೆ ನೋಡುವ ಅವಕಾಶ ಕಲ್ಪಿಸಿದ್ದದೆ. ವೇಸದಾರಿ ತೆಳ್ಳಂಗೆನ ಗೋಣಿಚೀಲಂದ ಮಾಡ್‌ದ ಇಜಾರು ಮತ್ತೆ ನಿಲುವಂಗಿನ ಹಾಕಿಕಂಡಿದ್ದದೆ. ಈ ಅಂಗಿ ಮತ್ತೆ ಇಜಾರಿಗೆ ಪೂರ ಅರಿವೆ ಸುಟ್ಟು ಎಣ್ಣೆಲಿ ಕಲ್‌ಸಿ ಮಾಡ್ದ ಮೊಸಿನ ಉಜ್ಜುವೆ. ಗೋಣಿ ಚೀಲಂದ ಬುಡ್ಸಿ ತೆಗ್ದ ಬೊಕ್ಕ್‌ನ ಬೊಳ್ಳಿನ (ಸೆಣಬು ನಾರು)ಕಪ್ಪು ಮಾಡಿ ಅಂಗಿ ಮತ್ತೆ ಇಜಾರಿನ ಎಲ್ಲಾ ಕಡೆಗೂ ನೂಲುಂದ ಕಟ್ಟಿ ಬುಟ್ಟವೆ. ಅಂಗಿ ಕಲಾವಿದನ ತಲೆನ ಹಿಂದೆ ಮುಟ್ಟ ಇದ್ದದೆ. ಇನ್ನು ಕೆಲವ್ ಕಡೆ ಹಳೆನ ಕಪ್ಪು ಕಂಬಳಿನನೇ ಬಳ್ಸಿ ಅದರ್‌ಂದ ಇಜಾರು ಅಂಗಿಗಳ ಮಾಡಿ ಕಲಾವಿದಂಗೆ ತೊಡ್ಸುವೆ ಕರಡಿನ ಗಟ್ಲ್‌ಗೆ ಮುಕವಾಡ ಇಜಾರು ಅಂಗಿನ ಜೋಡ್ಸಿಕೆ ಒಂದ್ ಕಪ್ಪುನೂಲು ಕಟ್ಟಿದ್ದವೆ. ಈ ನೂಲುನೊಟ್ಟಿಗೆ ಗೆಜ್ಜೆ ಸರ ಜೋಡ್ಸಿದ್ದವೆ. ಕರಡಿನ ಕಾಲ್‌ಗು ಗೆಜ್ಜೆ ಕಟ್ಟಿದ್ದವೆ.

ಕರಡಿನೊಟ್ಟಿಗೆ ಕರಡಿ ಕೊಣ್ಸುವಂವ ಒಬ್ಬ ಇದ್ದದೆ. ಅಂವ ಪ್ಯಾಂಟ್, ಶರ್ಟ್ ಹಾಕಂಡಿದ್ದದೆ. ಶರ್ಟ್‌ನ ಮೇಲೆ ತೋಳಿಲ್ಲದ ಕೋಟು ಹಾಕಂಡಿದ್ದದೆ. ತಲೆಗೆ ಟೊಪ್ಪಿ ಇಸಿಕಂಡಿದ್ದದೆ.ಮೋರೆಗೆ ಕೆಂಪು ಬಣ್ಣ ಹಾಕಂಡಿದ್ದದೆ. ಅಂವನ ಕೈಲೊಂದು ಚಾಟಿ ಇದ್ದದೆ. ಅಂವ ಕೊಣ್‌ದಾಂಗೆನೆ ಕರಡಿ ಕೊಣ್ದದೆ. ನಡ್ದಂಗೆ ಕರಡಿ ನಡ್ದದೆ. ಕರಡಿ ಕೊಣ್ಸುವಂವನ ಬ್ರಿಟಿಷ್ ದೊರೆಗೆ ಹೋಲಿಕೆ ಮಾಡಿ ವೇಸ ಹಾಕಿದ್ದವೆ,.

ಈ ಕಲಾವಿದರ ಒಟ್ಟಿಗೆ ವಾಲಗ, ತಾಸೆ, ತಮಟೆನ ಹಿಮ್ಮೇಳನು ಇದ್ದದೆ. ತಾಳಕ್ಕೆ ಸರಿಯಾಗಿ ಕರಡಿ ಹೆಜ್ಜೆ ಹಾಕಿದೆ. ಕೊಣ್‌ತದ ಮುಕ್ತಾಯಲಿ ಮನೆವು ಕೊಟ್ಟ ದುಡ್ಡು, ದವಸ ದಾನ್ಯಗಳ್ನ ತಕಂಡ್

ತಂಡದವು ಮುಂದೇನ ಮನೆಗೆ ಹೋದವೆ, ಕರಡಿ ಕೊಣ್‍ತ ಒಂದ್ ಮನೋರಂಜನೆನ ಕೊಣ್‍ತ ಆಗಿರ್‌ದರ್‌ಂದ ಇದರ ಹಾಂಗೆ ಯಾವುದೇ ಆಚರಣೆಗ ಇರ್‌ದುಲೆ. (ಪಿ.ಆರ್.)

**ಕರ್ನಾಟಕ (ರಾಜ್ಯ)** : ಭಾರತ ದೇಸದ ಹಳೇ ಮತ್ತೆ ಬಿನ್ನ ಸಂಸ್ಕೃತಿಂದ ತುಂಬಿದ ರಾಜ್ಯ ಕರ್ನಾಟಕ. ಇಲ್ಲಿನ ಜೆನ ಮಾತಾಡ್‍ವ ಬಾಸೆ ಕನ್ನಡ. ದಕ್ಷಿಣ ಭಾರತದ ನೆಡುನ ಪ್ರದೇಸಲಿ ಪೊಡ್ವಕ್ಕೆ ಅರಬ್ಬೀ ಕಡಲ್‌ಕೆ ಹೊಂದಿಕಂಡ್ ಇರ್‌ವ ಕರ್ನಾಟಕ ಉತ್ತರ ಅಕ್ಷಾಂಶ 110 30' ಒದ 180 45' ಮುಟ್ಟ ಮೂಡ ರೇಕಾಂಶ 740 12' ರ್‌ಂದ 780 30' ಮುಟ್ಟ ಹಬ್ಬಿಟು. ಮೂಡ ಪೊಡ್ವ ಆಗಿ ಸು. 400ಕಿಮೀ ಮತ್ತೆ ತೆಂಕ ಬಡ್ಗ ಆಗಿ 770ಕಿಮೀ ಉಟ್ಟು. ರಾಜ್ಯದ ಗಡಿಗ – ವಾಯವ್ಯ ಮತ್ತೆ ಬಡ್ಗ ದಿಕ್ಕುಗಳ್‌ಲಿ ಮಹಾರಾಷ್ಟ್ರ, ಮೂಡಲಿ ಆಂದ್ರಪ್ರದೇಶ, ಆಗ್ನೆಯ ದಕ್ಷಿಣಲಿ ತಮಿಳ್‌ನಾಡ್, ನೈಋತ್ಯಲಿ ಕೇರಳ, ಪೊಡ್‍ವಲಿ ಅರಬ್ಬೀ ಕಡಲ್‌ಂದ ಕೂಡಿಟು.

ಪಂಡ್‌ನ ಕಾಲಲಿ ಕನ್ನಡ ಆಡ್‍ಬಾಸೆ ಆಗಿದ್ದ ಈ ನಾಡ್‌ನ ಒಟ್ಟು ಜಾಗೆ ಎಸ್ಟಿತ್ತ್‌ತೇಳಿದ್ ಸರಿಯಾಗಿ ಗೊತ್ತ್ಲೆ. ಕೆಲವ್ ಕಾಲಗಟ್ಟಲಿ ಬಡಗಲಿ ಔರಂಗಾಬಾದ್, ಮುಂಬಯಿ ಪುಡೆಂದ ತೆಂಕದ ನೀಲಗಿರಿವರೆಗೂ ಮೂಡಲಿ ಅನಂತಪುರ, ಕರ್‌ನೂಲುಗಳ ವರೆಗೂ ಕನ್ನಡ ಬಾಸೆ ಮಾತಾಡೊವು ಇದ್ದಂತೇಳ್ದಕ್ಕೆ ಪುರಾವೆಗ ಸಿಕ್ಕುವೆ. ಕನ್ನಾಡ್, ಕನ್ನಡ ನಾಡ್, ಕರ್ಣಾಟಕಂತೇಳ್ವ ಹೆಸ್ರ್‌ಗಳ್‌ಂದ ಹೆಸ್ರ್‌ವಾಸಿ ಆಗಿದ್ದ ಈ ನಾಡ್‌ನ ಕೆಲವ್ ಬಾಗಗ ಪ್ರಾಚೀನ ಕಾಲಲಿ ಗಂಗವಾಡಿ, ನೊಳಂಬವಾಡಿ, ಕುಂತಳ, ಎಡೆನಾಡ್, ತೊರೆನಾಡ್, ಮರುಕರೆಂತೇಳಿ ನೂರಾರ್ ಬಾಗ ಆಗಿ ರಾಜವಂಶಗಳ ಕೈಯೊಳಗೆ ಸಿಕ್ಕಿ ಹಂಚಿ ಹೋಗಿತ್ತ್.

19ನೆ ಸತಮಾನಲಿ ಮೈಸೂರ್ ಸಂಸ್ತಾನ ಮತ್ತೆ ಕೊಡಗ್ ರಾಜ್ಯಗ ಮಾತ್ರ ಇಡೀ ಕನ್ನಡ ಪ್ರದೇಸ ಆಗಿತ್ತ್. ಕನ್ನಡನಾಡ್‌ನ ಹೆಚ್ಚಿನ ಬಾಗಗ ಮದ್ರಾಸ್, ಮುಂಬಯಿ ಮತ್ತೆ ಹೈದರಾಬಾದ್ ಸಂಸ್ತಾನಗಳ್‌ಲಿ ಸೇರಿಹೋಗಿತ್ತ್. ಕನ್ನಡದ ನೆಲ ಎಲ್ಲಾ ಒಟ್ಟ್ ಕೂಡ್ಸಿ ಒಂದ್ ಇಡೀ ರಾಜ್ಯ ಆಗಿ ಎದ್ದದ್ 1957ರ ನವೆಂಬರ್ 1ಕ್ಕೆ. ಅಂದ್ ಭಾರತ ಸರ್‌ಕಾರದ ರಾಜ್ಯ ಪುನರ್‌ಗಟನೆನ ಅದಿನಿಯಮದ ಪ್ರಕಾರ 1957ಕ್ಕೆ ಹಿಂದೆ ಇದ್ದ, ಹಳೆ ಮೈಸೂರ್ ಸಂಸ್ತಾನದ ಎಲ್ಲ ಜಿಲ್ಲೆಗ, ಈ ಹಿಂದೆ 1953ರ್‌ಲಿ ಆಂದ್ರ ರಾಜ್ಯ ನಿರ್ಮಾಣ ಶಾಸನದ ಪ್ರಕಾರ ಮದ್ರಾಸ್ ರಾಜ್ಯಂದ ಮೈಸೂರ್ ರಾಜ್ಯಕೆ ಸೇರ್‌ಸಿದ್ದ ಬಳ್ಳಾರಿ ಜಿಲ್ಲೆ, ಮುಂಬಯಿ ರಾಜ್ಯಲಿದ್ದ ದಾರವಾಡ, ಉತ್ತರ ಕನ್ನಡ, ಬೆಳಗಾಂವಿ (ಚಂದಗಡ ತಾಲ್ಲೂಕ್ ಬುಟ್ಟು) ಮತ್ತೆ ಬಿಜಾಪುರ ಜಿಲ್ಲೆಗ, ಹೈದರಾಬಾದ್ ಸಂಸ್ತಾನಲಿದ್ದ ಗುಲ್ಬರ್‌ಗ (ಕೋಡಂಗಲ್ ಮತ್ತೆ ತಾಂಡೂರ್ ತಾಲೂಕ್‌ಗಳ ಬುಟ್ಟು), ರಾಯಚೂರ್(ಆಲಂಪುರ ಮತ್ತೆ ಗದ್ವಾಲ ತಾಲೂಕ್ ಬುಟ್ಟು), ಬೀದರ್ (ಬೀದರ್, ಹಮ್ನಾಬಾದ್, ಬಾಲ್ಕಿ ಮತ್ತೆ ಔರಾದ ತಾಲ್ಲೂಕುಗ ಮಾತ್ರ) ಈ ಜಿಲ್ಲೆಗ, ಮದ್ರಾಸ್‌ಲಿದ್ದ ದಕ್ಷಿಣಕನ್ನಡ ಜಿಲ್ಲೆ ಕಾಸರಗೋಡ್ ತಾಲೂಕ್ ಮತ್ತೆ ಅಮೀನ್‌ದೀವಿ ದ್ವೀಪಗಳ ವಿನಾ ಮತ್ತೆ ಕೊಯಮತ್ತೂರ್ ಜಿಲ್ಲೆನ ಬಳ್ಳಿಕೊಳ್ಳೇಗಾಲ ತಾಲೂಕ್ ಹಂಗೆನೇ ಹಿಂದೆನ ಕೊಡಗ್ ಸಂಸ್ತಾನ ಈ ಬಾಗಗ ಸೇರ್‌ದ ವಿಶಾಲ ಕರ್ನಾಟಕ ಮೈಸೂರ್ ರಾಜ್ಯಂತೇಳುವ ಹೆಸರ್‌ಂದ ರಚನೆ ಆತ್. ಹಿಂಗೆ ಉದಯ ಆದ ಕನ್ನಡ ನಾಡ್ ಹದ್ನಾರ್ ವರ್‌ಸ ಕಳ್ದ ಮೇಲೆ 1973 ನವೆಂಬರ್ 1ರಂದ್ ಕರ್ನಾಟಕಂತೇಳುವ ಹೆಸ್ರ್ ಪಡ್ಕಂತ್.

ಕರ್ನಾಟಕ ರಾಜ್ಯದ ಒಟ್ಟ್ ಜಾಗೆ ಇರ್‌ದು 1, 91, 791ಚ. ಕಿಮೀ. ಇಲ್ಲಿ ಬೊದ್ಕ್‌ವ ಒಟ್ಟು ಜೆನಂಗ 5, 27, 33, 958. ರಾಜ್ಯಲಿ ಪೇಟೆಗ ಗ್ರಾಮಂಗಳ ಸೇರಿ ಒಟ್ಟ್ 27, 077 ಜೆನವಸತಿ ಗಟಕಗ ಉಟ್ಟು. ಇಲ್ಲಿರುವ ಒಟ್ಟ್ ಪೇಟೆಗ 209. ಇದರ್‌ಲಿ ಬೆಂಗ್ಳೂರ್, ಮೈಸೂರ್ ಮತ್ತೆ ಹುಬ್ಬಳ್ಳಿ, ದಾರವಾಡ, ಮಂಗ್ಳೂರ್, ಬೆಳಗಾಂವಿ ದೊಡ್ಡ ನಗರಂಗ. ಇಲ್ಲಿ ಲಕ್ಷಂದಳೂ ಜಾಸ್ತಿ ಜೆನಸಂಕೆ ಇರ್‌ವ ಬೇರೆ ನಗರಂಗ ಎಸ್ಟ್‌ಂತೇಳ್ರೆ 124. 50, ಸಾವಿರಂದ ಲಕ್ಷದವರೆಗೆನ ಜೆನಸಂಕೆ ಇರ್‌ವ ನಗರಂಗ ಒಟ್ಟ್ 127. 20, ಸಾವಿರಂದ 50 ಸಾವಿರದೊರೆಗೆ ಜೆನಸಂಕೆ ಇರ್‌ವ 101 ಪಟ್ಟಣಗ ಒಳೊ.

ಭಾರತದ ಒಟ್ಟ್ ವಿಸ್ತೀರ್‌ಣಲಿ ಕರ್ನಾಟಕ ರಾಜ್ಯ (32, 80, 433) ಶೇ. 5. 85 ವಿಸ್ತೀರ್‌ಣ ಇರ್‌ವಂತದ್. ಭಾರತದ 28 ರಾಜ್ಯ ಮತ್ತೆ ಏಳ್ ಕೇಂದ್ರಾಡಳಿತ ಪ್ರದೇಶಗಳಿಗೆ ಹೋಲ್ಸಿರೆ ವಿಸ್ತೀರ್‌ಣ ಮತ್ತೆ ಜೆನಸಂಕೆಲಿ ಕರ್ನಾಟಕ ಒಂಬತ್ನೆ ಸ್ತಾನ ಪಡ್‌ದುಟ್ಟು.

ಆಡಳಿತ ಉದ್ದೇಸಕಾಗಿ ರಾಜ್ಯನ ನಾಕ್ ಕಂದಾಯ ವಿಬಾಗಂಗಾಗಿ 27 ಜಿಲ್ಲೆಗಾಗಿದ್ ಬಾಗ್ ಮಾಡ್ಯೊಳ. ಈ ಜಿಲ್ಲೆಗಳ್‌ಲಿ ಒಟ್ಟ್ 175 ತಾಲೂಕ್‌ಗ ಉಟ್ಟು. ರಾಜ್ಯದ ರಾಜಧಾನಿ ಬೆಂಗ್ಳೂರ್.

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ:** ಕರ್ನಾಟಕ ಅರೆಭಾಷೆ ಸಂಸ್ಕೃತಿಮತ್ತು ಸಾಹಿತ್ಯ ಅಕಾಡೆಮಿ, ಕರ್ನಾಟಕ ಸರಕಾರದ ಕನ್ನಡ ಮತ್ತು ಸಂಸ್ಕೃತಿನಿರ್ದೇಶನದ ಅಡಿಲಿ 2011ರ ದಸಂಬರ 15ರಂದ್ ಸ್ತಾಪನೆ ಆತ್. ಇದ್ ಅರೆಬಾಸೆ ಸಂಸ್ಕೃತಿ, ಸಾಹಿತ್ಯ ಹಾಂಗೆ ಆ ಬಾಗದ ನಾಡು–ನುಡಿನ ಕಾಪಾಡಿಕಂಬಕೆ ಮತ್ತೆ ಅರೆಬಾಸೆ ಕೆಲ್ಸ ಮಾಡಿಕೆ ಕಟ್ಟಿದಂತ ಸಂಸ್ತೆ. ಅರೆಬಾಸೆ ಮಾತಾಡ್‍ವ ಜನ ಕರ್ನಾಟಕ ರಾಜ್ಯದ ಕೊಡಗು ಮತ್ತೆ ದಕ್ಷಿಣ ಕನ್ನಡಜಿಲ್ಲೆನ ಕೆಲ ತಾಲೂಕುಗ ಹಾಂಗೆ ಕೇರಳ ರಾಜ್ಯದ ಕಾಸರಗೋಡ್‌ನ ಕೆಲ ಗ್ರಾಮಗಳ್‌ಲಿ ಅರೆಬಾಸೆವು ಒಳೊ. ಇವರ ಅರೆಬಾಸೆ ಸಂಸ್ಕೃತಿ, ಆಚಾರ ವಿಚಾರ, ಆಹಾರ ಪೊದ್ದತಿ, ಆರಾದನೆಗ ವಿಸೇಸ ಆಗುಟು. ಇಂತ ಬಗೆಲಿ ವಿಸೇಸ ಪಾರಂಪರಿಕ ವಿಸಯಗಳ ಒಳ್‌ಸಿಕಂಬಕಾಗಿ ಕರ್ನಾಟಕ ಅರೆಭಾಷೆ ಸಂಸ್ಕೃತಿಮತ್ತು ಸಾಹಿತ್ಯ ಅಕಾಡೆಮಿ ಕೆಲ್‌ಸ ಮಾಡ್‌ದೆ.




ಅರೆಬಾಸೆ ಜೆನಾಂಗದವ್ ಹೆಚ್ಚಾಗಿ ಇರ್‌ವ ದಕ್ಷಿಣಕನ್ನಡ ಜಿಲ್ಲೆನವ್‌ಕು ಕೊಡಗ್‌ನವರ ಸಂಸ್ಕೃತಿಆಚರಣೆಲಿ ವೆತ್ಯಾಸ ಉಟ್ಟು. ದಕ್ಷಿಣಕನ್ನಡಲಿ ದೆವ್ವಾರಾದನೆ, ಸುಗ್ಗಿ ಹಬ್ಬ ಆಚರಿಸಿಕಂಡ್ ಬಂದೊಳೊ. ಕೊಡಗ್‌ಲಿ ಹುತ್ತರಿ, ಕೈಲುಮುಹೂರ್ತ ಮತ್ತೆ ಆಟಿ ಹಬ್ಬನ ಆಚರ್‌ಸಿಕಂಡ್ ಬಂದೊಳೊ. ಕೊಡಗ್‌ನ ಅರೆಬಾಸೆ ಜೆನಾಂಗದವರ ಸಂಸ್ಕೃತಿ, ಸಂಗೀತ, ಕೊಣ್‌ತ, ವೇಸಬೂಸಣ ಬಿನ್ನ ಆಗಿದ್ದದೆ.

ಅರೆಬಾಸೆ ಲಾಂಚನ ಅರೆಬಾಸೆ ಪ್ರದೇಸದ ಕ್ರಿಸಿ ಸಂಸ್ಕೃತಿನ ಬಿಂಬಿಸ್ದೆ. ನೊಗ, ನೇಗಿಲ್, ಪನೋರ್, ಗೌಡರ ಹಸೆಮಣೆನ ಸೂರ‍್ಯ-ಚಂದ್ರರ್, ಮುಕ್ಕಾಲ್ ತೋರಣ, ವೀರ ಸಂಕೇತ ಬಿಲ್ಲ್-ಬಾಣ, ಸ್ವಸ್ತಿಕ, ಭೂಮಿನ ಪಲವಂತಿಕೆನ ಸಾಂಕೇತಿಕ ಕಲ್ಪನೆನ ಕಲಾಚಿತ್ರ ವ್ಯಕ್ತಪಡಿಸಿದೆ.

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಪುಸ್ತಕ ಪ್ರಕಟಣೆ, ಪದಕೋಶ, ವಿಶ್ವಕೋಶ, ಭಾಷಾಂತರ ಮತ್ತೆ ದಾಕಲೆಗಳ




ಅರೆಬಾಸೆ ಲಾಂಛನ

ಕೂಡಿಸ್‌ವ ಕೆಲಸಗಳ ಕೈಗೆ ತೆಕಂಡುಟು. ಇದರೊಟ್ಟಿಗೆ ಹೈದಂಗಳ ಗಟ್ಟಿಗೊಳ್‌ಸಿಕೆ ಯುವ ಸಾಹಿತಿಗಳಿಗೆ ವಿಚಾರ ಸಂಕಿರ್ಣ, ಸಾಹಿತ್ಯ ಶಿಬಿರ, ಕವಿಗೋಷ್ಠಿ ಸೇರ್‌ದಂಗೆ ಬೇರೆ ಬೇರೆ ಜಂಬರಗಳ ನಡ್‌ಸಿಟು. ಬಾಸೆ, ಸಂಸ್ಕೃತಿಉಳ್‌ಸಿ ಬೆಳ್‌ಸಿಕೆ ದಾಕಲೆ ರೂಪಲಿ ಕೂಡ್ಸ್‌ವ ಕೆಲಸನ ಅಕಾಡೆಮಿ ಮಾಡ್‌ತುಟ್ಟ್, ನಾಟಕ ಶಿಬಿರ, ಅರೆಬಾಸೆನ ಗಣ್ಯವ್ಯಕ್ತಿಗಳ ವ್ಯಕ್ತಿ ಚಿತ್ರಣಕೆ ಪ್ರೋತ್ಸಾಹ ಕೊಡ್‌ತುಟ್ಟು. 2020ರ ಸಾಲ್‌ಂದ ಡಿಸೆಂಬರ್ 15ರ ದಿನನ ಕರ್ನಾಟಕ ಅರೆಭಾಷೆ ಸಂಸ್ಕೃತಿಮತ್ತು ಸಾಹಿತ್ಯ ಅಕಾಡೆಮಿ ಅರೆಭಾಷೆ ದಿನಾಚರಣೆ ತ ಆಚರಣೆ ಮಾಡ್‌ತೊಳೊ.

**ಎನ್. ಎಸ್. ದೇವಿಪ್ರಸಾದ್ ಸಂಪಾಜೆ :** ಕೊಡ್‌ಗ್ ಜಿಲ್ಲೆ, ಮಡಿಕೇರಿ ತಾಲೂಕು, ಸಂಪಾಜೆ ನಂಜಯ್ಯನ ಮನೆ ಸಣ್ಣಯ್ಯ ಪಟೇಲ್ ಪೂವಮ್ಮ ದಂಪತಿಗಳ ಪುತ್ರನಾಗಿ 1942 ಏಪ್ರಿಲ್ 27ರಂದು ಹುಟ್ಟಿದೊ. ಇವು ಬಹುಮುಖಿ ಪ್ರತಿಭಾವಂತ ರಾಜಕೀಯ, ಧಾರ್ಮಿಕ, ಶೈಕ್ಷಣಿಕ, ಕಲೆ, ಸಾಹಿತ್ಯ, ಸಿನಿಮಾ, ನಾಟಕ, ಯಕ್ಷಗಾನ ಕ್ಷೇತ್ರಲಿ ಹಾಂಗೆ ಜನಪರ ಹೋರಾಟಲಿ ಅವರ ತೊಡ್‌ಗ್‌ಸಿಕಂಡೊವು. ಸಂಪಾಜೆ ಪ್ರೌಢಶಾಲಾ ಸ್ಥಾಪಕ ಮಂಡಳಿ ಸದಸ್ಯ, ಸಂಪಾಜೆ ಪಂಚಲಿಂಗೇಶ್ವರ ದೇವಸ್ಥಾನದ ಮೊಕ್ತೇಸರ ರಾಗಿ, ಕೊಡಗು ದ.ಕ. ಜಿಲ್ಲಾ, ಗೌಡ ಅಭಿವೃದ್ಧಿ ಸಂಘದ ಸಂಸ್ಥಾಪಕರಾಗಿ ಸೇವೆ ಮಾಡಿಯೊಳೊ

ಕರ್ನಾಟಕ ರಾಜ್ಯ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿನ ಸುರೂನ ಅಧ್ಯಕ್ಷರಾಗಿ, ಅಕಾಡೆಮಿಗೆ ಗಟ್ಟಿನ ಅಡಿಪಾಯ ಹಾಕಿ ಕೊಟ್ಟವ್. ಇವರು ಮಾಡ್‌ದ "3 ದಾರಿಗಳು" ಚಲನ ಚಿತ್ರಕ್ಕೆ ರಾಷ್ಟ್ರ ಪ್ರಶಸ್ತಿ ಮತ್ತು 5 ರಾಜ್ಯ ಪ್ರಶಸ್ತಿ ಬಂದುಟು. "ಅಪಹರಣ" ಟೆಲಿ ಚಿತ್ರ ನಿರ್ಮಾಪಕರು "ಗುಡ್ಡೆದ ಭೂತ" ಟಿ.ವಿ. ಧಾರಾವಾಹಿಲಿ ನಟನೆ ಮಾಡಿಯೊಳೊ. "ಶಿರಾಡಿ ಭೂತ" ನಾಟಕ ರಚಿಸಿ ನಿರ್ದೇಸನ ಮಾಡಿ ಸುಮಾರ್ ಕಡೆ ಭರ್ಜರಿ ಪ್ರದರ್ಶನ ಕಂಡ್ ಉತ್ತಮ ರಂಗಕರ್ಮಿ ಅಂತ ಅನ್‌ಸಿಕಂಡೊಳೊ. ಒಬ್ಬ ಸಾಹಿತಿ ಆಗಿದ್ ಕೊಡಗಿನಲ್ಲಿ ಜಾತೀಯತೆ, ಕೊಡಗಿನಲ್ಲಿ ಭಾಷಾ ಸಾಮರಸ್ಯ ತೇಳ್‌ವ ಕೃತಿಗಳ ಹೊರತಂದೊಳೊ. "ಅಮರ ಸುಳ್ಯದ ಸ್ವಾತಂತ್ರ್ಯ ಸಮರ" ಇವರ ಸಂಶೋಧನಾತ್ಮಕ ಕೃತಿ. ಅರೆಬಾಸೆಲಿ 'ಹೆಂಗಿತ್ ಹೆಂಗಾತ್' ತೇಳ್‌ವ ನಾಟಕನ ಕಟ್ಟಿಯೊಳೊ. 1837ರ ಸುಳ್ಯದ ಜನ ಬ್ರಿಟಿಷರ ವಿರುದ್ಧ ನಡ್‌ಸಿದ ಹೋರಾಟದ ಬಗ್ಗೆ ಊರ್ ಜೆನರ್ಲಿ ಅರಿವು ಮೂಡ್‌ಸಿಕೆ 1998ರ್‌ಲಿ "ಅಮರ ಕ್ರಾಂತಿ" ಉತ್ಸವ ನಡ್‌ಸಿ, ಸುಳ್ಯಂದ ಮಂಗಳೂರ್‌ನವರೆಗೆ ಕಾಲ್ನಡಿಗೆ ಜಾಥಾನ ಏರ್ಪಾಟ್ ಮಾಡಿ ಗೆದ್ದೊಳೊ.. 1998ರ್‌ಲಿ ಕೊಡಗ್ ಪ್ರಜಾವೇದಿಕೆನ ಕಟ್ಟಿ, ಕನ್ನಡ ಪರ ಸಂಘಟನೆಗಳ ಬೆಂಬಲ ಪಡ್‌ದ್‌ದ್, ಕೊಡಗು ಜಿಲ್ಲೆ ಕರ್ನಾಟಕದಿಂದ ಪ್ರತ್ಯೇಕ ಆಕಾಗದ್‌ತ ಹೋರಾಟದ ಫಲಶೃತಿ ಆಗಿ ಕೊಡಗು ಜಿಲ್ಲೆ ಕರ್ನಾಟಕಲೆ ಒಳಿವಂಗೆ ಮುಂದೆ ನಿತ್ತ್ ಹೋರಾಟ ನಡ್‌ಸಿದ ಧೀಮಂತ ನಾಯಕ. ಶ್ರೀಯುತರು ಒಬ್ಬ ಸಹಕಾರಿ ಧುರೀಣ.



ಮಡಿಕೇರಿ ತಾಲೂಕು ಭೂ ಅಭಿವೃದ್ಧಿ ಬ್ಯಾಂಕ್‌ನ ಅಧ್ಯಕ್ಷರಾಗಿ, ಕರ್ನಾಟಕ ರಾಜ್ಯ ಸಹಕಾರಿ ಭೂ ಬ್ಯಾಂಕ್‌ನ ಅಧ್ಯಕ್ಷರಾಗಿ ಸೇವೆ

ಸಲ್ಲ್‌ಸಿಯೊಳೊ. ಅಂತರಾಷ್ಟ್ರೀಯ ಸಂಸ್ಥೆ ಆದಂತ ಲಯನ್ಸ್ ಜಿಲ್ಲಾ ಪ್ರಾಂತೀಯ ಅಧ್ಯಕ್ಷರಾಗಿ ಅಮೇರಿಕಾ, ಜಪಾನ್ ಸಮ್ಮೇಳನಲಿ ಪ್ರತಿನಿದಿ ಆಗೊದ್ ಬಾಗವಹಿಸಿರುವ ಇವರ ಕರ್ನಾಟಕ ಅರೆಭಾಷೆ ಸಂಸ್ಕೃತಿಮತ್ತು ಸಾಹಿತ್ಯ ಅಕಾಡೆಮಿ ಗುರ್ತ್‌ಸಿ ಗೌರವ ಕೊಟ್ಟುಟು.

**ಕೊಲ್ಯದ ಗಿರೀಶ್ :** ಮಡಿಕೇರಿ ತಾಲೂಕು ಮದೆ ಗ್ರಾಮದ ಶ್ರೀ ಕೊಲ್ಯದ ರಾಮಪ್ಪ ಮತ್ತೆ ಶ್ರೀಮತಿ ಭವಾನಿಯವರ ಮಜ್ಞ ಕೊಲ್ಯದ ಗಿರೀಶ್ 1966 ರ್‌ಲಿ ಮಡಿಕೇರಿಲಿ ಜನಿಸಿದೊ. ಬಾಲ್ಯದ ಓದು ಮಡಿಕೇರಿಲಿ ಮುಗ್ಸಿ ಪುತ್ತೂರ್‌ನ ವಿವೇಕಾನಂದ ಕಾಲೇಜ್‌ಲಿ ಬಿ.ಕಾಂ. ಪದವಿನ ಪಡ್ಕೊಂಡೊಳೊ. ಕಾಲೇಜ್ ಜೀವನಲಿ ಒಳ್ಳೆ ನಾಯಕತ್ವ ಗುಣ ಮೈಗೂಡಿಸಿಕೊಂಡ ಇವು ಚೆಸ್ ಆಟಗಾರರಾಗಿ ಮಂಗಳೂರು ವಿಶ್ವವಿದ್ಯಾನಿಲಯನ ಪ್ರತಿನಿದಿಸಿಯೊಳೊ, ಬೆಂಗಳೂರ್‌ಲಿ ಸಿ.ಎ. ಇಂಟರ್ ಮಿಡಿಯೇಟ್ ಮಾಡಿ ವಿಪ್ರೋ ದಂತಹ ಹಲವು ಪ್ರತಿಸ್ಟಿತ ಕಂಪೆನಿಲಿ ದುಡ್‌ದೊಳೊ, ಮತ್ತೆ ಹುಟ್ಟೂರಿಗೆ ಮರಳಿ ಸಹಕಾರ ಕ್ಷೇತ್ರಕ್ಕೆ ಪ್ರವೇಶಿಸಿ ಮದೆ ಕ್ರಿಸಿ ಪತ್ತಿನ ಸಹಕಾರ ಬ್ಯಾಂಕ್ ಅದ್ಯಕ್ಸರಾಗಿ 10 ವರ್ಸ ನಿರ್ದೇಶಕರಾಗಿ ಸೇವೆ ಸಲ್ಲಿಸೊಳೊ. ಮದೆ ಮಾದುರಪ್ಪ ದೇವಸ್ಥಾನ ಜೀರ್ಣೋದ್ದಾರ ಸಮಿತಿ, ಗುಡ್ಡೆಮನೆ ಅಪ್ಪಯ್ಯಗೌಡರ ಸ್ಮಾರಕ ಸಮಿತಿ, ಮದೆ ಗೌಡ ಸಮಾಜದ ಸ್ಥಾಪಕ ಅಧ್ಯಕ್ಷತೆ, ಅರಣ್ಯ ಸಮಿತಿ ಸದಸ್ಯ, ಆಗಿದ್ದೊ. ಕರ್ನಾಟಕ ಅರೆಭಾಸೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿ ನೇಮಿಸಿ ನಮ್ಮ ಅರೆಭಾಸೆ ಸಂಸ್ಕೃತಿ ಮತ್ತೆ ಸಾಹಿತ್ಯನ ಬೆಳ್ಸುವ ಜವಾಬ್ದಾರಿನ ಇವ್ಕೆ ಕೊಟ್ಟೊಳೊ.



**ಪಿ.ಸಿ. ಜಯರಾಮ :** ಡಿಸೆಂಬರ್ 2017ರಂದ 2020 ರ ಅವದಿಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಅಧ್ಯಕ್ಷರ್. ಇವು ದಕ್ಷಿಣಕನ್ನಡ ಜಿಲ್ಲೆ ಸುಳ್ಯ ತಾಲೂಕ್‌ನ ಶ್ರೀ ಪಾಲ್ತಾಡು ಚೆನ್ನಪ್ಪ ಮತ್ತೆ ಶ್ರೀಮತಿ ಕಮಲ ದಂಪತಿಗಳ ಮಜ್ಞನಾಗಿ ಹುಟ್ಟಿದೊ. ಬಿ.ಎ. ಪದವಿಧರ. ವೃತ್ತಿಲಿ ಕೃಷಿಕರ್ ಮತ್ತೆ ವ್ಯಾಪಾರಸ್ತರ್. ಸಹಕಾರಿ, ಪಂಚಾಯತ್ ರಾಜ್, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಲಿ ಇವು ಸೇವೆ ಮಾಡಿಕಂಡೊಳೊ. ಮಡಪ್ಪಾಡಿ ಯುವಕ ಮಂಡಲದ ಅಧ್ಯಕ್ಷರಾಗಿ ಅಧ್ಯೆ ಶಾಶ್ವತ ಸಭಾಭವನನ ಒದಗಿಸ್ಯೊಳೊ. ಗ್ರಾಮ ಪಂಚಾಯ್ತಿನ ಸದಸ್ಯರಾಗಿ, ಎರಡ್ ಸರ್ತಿ ತಾಲೂಕು ಪಂಚಾಯತ್ ಸದಸ್ಯರಾಗಿ ದುಡ್ಡೊಳೊ. ಒಂದ್ ಸರ್ತಿ ಉಪಾಧ್ಯಕ್ಷರಾಗಿ, ಒಮ್ಮೆ ವಿಪಕ್ಷ ನಾಯಕರಾಗಿ ಕೆಲ್ಸ ಮಾಡಿಯೊಳೊ. ಸುಳ್ಯಲಿ 1995ರ್‌ಲಿ ಸುರಾದ ಗೌಡರ ಯುವ ಸೇವಾ ಸಂಘದ ಸ್ಥಾಪಕ ಕೋಶಾಧಿಕಾರಿಯಾಗಿ ಅಲ್ಲದೆ ಸುಳ್ಯದ ಗೌಡ ಸಮುದಾಯ ಭವನದ ನಿರ್ಮಾಣ ಸಮಿತಿಯ ಕೋಶಾಧ್ಯಕ್ಷರಾಗಿಯೂ ಸೇವೆ ಸಲ್ಲಿಸ್ತಾ ಒಳೊ. 1987 ರ್‌ಂದ ಇಲ್ಲಿ ಮುಟ್ಟ ಮಡಪ್ಪಾಡಿ ಸಹಕಾರಿ ಸಂಘದ ಅಧ್ಯಕ್ಷರಾಗಿ ಸೇವೆ ಮಾಡಿಕಂಡ್ ನಸ್ಟಲಿದ್ದ ಸಂಗನ ಬೆಳ್‌ಸಿ ಇಂದ್ ರಾಜ್ಯಮಟ್ಟಲಿ ಗುರ್ತು ಸುವಂಗೆ ಮಾಡಿಯೊಳೊ. 1997ಲಿ ಗೌಡ ಯುವ ಸೇವಾ ಸಂಘ ಸುಳ್ಯಂದ ಪ್ರಾರಂಭಿಸಿದ ಶ್ರೀ ವೆಂಕಟರಮಣ ಕ್ರೆಡಿಟ್–ಕೋ–ಆಪರೇಟಿವ್ ಸೊಸೈಟಿನ ಸ್ಥಾಪಕ ಅಧ್ಯಕ್ಷರಾಗಿ ನಿರಂತರ ಹತ್ತ್ ವರ್ಸ ಕೆಲ್ಸಮಾಡಿ ಉತ್ತಮ ಅಡಿಪಾಯ ಹಾಕಿ, ಇಂದ್ ಅದ್ ರಾಜ್ಯವ್ಯಾಪಿ ಹತ್ತ್ ಶಾಕೆಗಳ ಹೊಂದಿ ನಿರಂತರ ಲಾಬಲಿ ನಡಿತಾ ಉಟ್ಟು. ಟಿ.ಎ.ಪಿ.ಸಿ.ಯಂ.ಎಸ್. ಸುಳ್ಯ ಸ್ಕ್ಯಾಡ್ಸ್ ಮಂಗಳೂರ್‌ನ ನಿರ್ದೇಶಕರಾಗಿ ದುಡಿತಾ ಇರ್‌ವ ಇವ್ಕೆ 64ನೇ ಅಖಿಲ ಭಾರತ ಸಹಕಾರಿ ಸಪ್ತಾಹಲಿ 'ಉತ್ತಮ ಸಹಕಾರಿ' ತೇಲುವ ಪ್ರಶಸ್ತಿ ಕೊಟ್ಟ್ ಸನ್ಮಾನಿಸಿಯೊಳೊ. ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮಾಭಿವೃದ್ದಿ ಯೋಜನೆ, ಜನಜಾಗೃತಿ ವೇದಿಕೆ, ಸುಳ್ಯ ತಾಲೂಕು ಸಾಹಿತ್ಯ ಪರಿಷತ್‌ನ ಕಟ್ಟಿ ಬೆಳ್‌ಸ್‌ವ ಕೆಲ್ಸ ಮಾಡಿಯೊಳೊ.



**ಲಕ್ಷ್ಮೀನಾರಾಯಣ ಕಜೆಗದ್ದೆ :** ಕಜೆಗದ್ದೆ ಕುಟುಂಬದ ನಿವೃತ್ತ ಅಧ್ಯಾಪಕ ಚಿನ್ನಪ್ಪ ಗೌಡ ಗಂಗಮ್ಮ ದಂಪತಿಗಳ ಮಜ್ಞ ಲಕ್ಷ್ಮೀನಾರಾಯಣ ಕಜೆಗದ್ದೆ ಅವು 19 ಎಪ್ರಿಲ್ 1977ರ್‌ಲಿ ಕನಕಮಜಲ್‌ಲಿ ಹುಟ್ಟಿದೊ. ಪ್ರಾತಮಿಕ ಮತ್ತೆ ಪ್ರೌಡ ಶಿಕ್ಷಣನ ಕನಕ ಮಜಲ್‌ಲಿ ಮತ್ತೆ ಶ್ರೀ ಸೀತಾರಾಘವ ಕಾಲೇಜು ಪೆರ್ನಾಜೆಲಿ ಮಾಡ್ಡೊ. ಇವು ಕೆ.ವಿ.ಜಿ. ಪಾಲಿಟೆಕ್ನಿಕ್ ಸುಳ್ಯಲಿ ಇಲೆಕ್ಟ್ರಿಕಲ್ ಡಿಪ್ಲೋಮಾ ಓದಿದೊ. ಮುಂದೆ ಕ್ರಿಸಿ ಬೊದ್ಕುಗೆ ಇಳ್‌ದೊ. 1998ರ್‌ಲಿ ಕನಕಮಜಲ್ ಯುವಕಮಂಡಲ ಸದಸ್ಯ



ಆಗಿ ಸೇರ್‌ದ ಕಜೆಗದ್ದೆವು ಕೆಲ ಕಾಲಲೇ ಗ್ರಾಮಮಟ್ಟಲಿ ಒಂದೊಳ್ಳ ಸಂಘಟನೆನ ಕಟ್ಟಿ ಸಾಂಸ್ಕೃತಿಕ ಮತ್ತೆ ಸಮಾಜಮುಖಿ ಕಾರ್ಯಕ್ರಮ ಮಾಡಿ ಯುವಜನತೆಗೆ ರಾಷ್ಟ್ರಮಟ್ಟಲಿ ಮಾದರಿ ಆದೊ. ಸುಳ್ಯ ತಾಲೂಕು ಯುವಜನ ಸಂಯುಕ್ತ ಮಂಡಳಿನ ಅಧ್ಯಕ್ಷರಾಗಿ, ರಾಜ್ಯ ಚಲನಚಿತ್ರಮಂಡಳಿನ ಆಸ್ರಯಲಿ ಸುಳ್ಯ ತಾಲೂಕು ಬೆಳ್ಳಿಮಂಡಲ್ ಅಧ್ಯಕ್ಷರಾಗಿ, ಜಿಲ್ಲಾ ನೆಹರೂ ಯುವ ಕೇಂದ್ರದ ಸಲಹಾ ಸಮಿತಿ ಸದಸ್ಯ ಆಗಿ ಕೆಲ್ಸ ಕಾರ್‌ಯಗಳ ಮಾಡಿಯೊಳೊ. 2007–08ರ್‌ಲಿ ರಾಜ್ಯ ಯುವ ಪ್ರಶಸ್ತಿ, 2011–12 ರ್‌ಲಿ ರಾಷ್ಟ್ರೀಯ ಯುವ ಪ್ರಶಸ್ತಿನ ಹಿರಿಮೆನ ಪಡ್‌ಕಂಡೊ.

**ಕಾರ್ಯಪ್ಪ ಕೆ. ಎಂ. :** ಕಾರ್ಯಪ್ಪ ಕೆ. ಎಂ.(ಜೆನನ:1900– ಮರಣ:93) ಸ್ವತಂತ್ರ ಭಾರತ ಸೈನ್ಯದ ಸುರೂನ ಭಾರತೀಯ ಕಮಾಂಡರ್–ಇನ್–ಚೀಫ್. 1900 ಜೆನವರಿ 28 ಕೆ ಇವು ಕೊಡಗ್‌ಲಿ ಹುಟ್ಟಿದೊ. ಅಪ್ಪ ಕೊಡಂದೆರ ಮಾದಪ್ಪ, ಅಯ್ಯೆ ಕಾವೇರಿ. ವಿದ್ಯಾಬ್ಯಾಸ ಮಡಿಕೇರಿನ ಸೆಂಟ್ರಲ್ ಹೈಸ್ಕೂಲ್ ಮತ್ತೆ ಮದರಾಸಿನ ಪ್ರೆಸಿಡೆನ್ಸಿ ಕಾಲೇಜ್‌ಲಿ ಮುಗ್ಸಿದೊ. ಕಾರ್ಯಪ್ಪನವು ಸೇನೆಲಿ ಕಮಿಷನ್ ಹುದ್ದೆನ ಪಡ್ಕಂಡ (ಡಿಸೆಂಬರ್ 1919) ಸುರೂನ ಭಾರತೀಯ. ಸೈನಿಕ ಶಿಕ್ಷಣ ಆದಂಗೆ ಸುರೂಗೆ 2/88 ಕರ್ನಾಟಕ ರೆಜಿಮೆಂಟ್, ಅದಾದಂಗೆ 2–125 ನೆಯ ನೇಪಿಯರ್ ರೈಫಲ್ಸ್ ದಳಲಿ ಅಡ್ಜುಟೆಂಟ್ ಆಗಿ (1920–22) ಗೆಯ್ಮೆ ಮಾಡಿಯೊಳೊ. ಮೆಸಪೊಟೇಮಿಯ ದಳಲಿ 1922–23 ರ್‌ಲಿ 37 ಡೋಗ್ರಾ ರೆಜಿಮೆಂಟ್ ಮತ್ತೆ 1923–24 ರ್‌ಲಿ ರಾಜಪೂತ್ ದಳಲಿ ಇದ್ದೊ. ಇವು ಸೈನ್ಯಾದಿಕಾರಿಗಳ ಶಿಕ್ಷಣ ವಿದಾನ, ಜೀವನ ಕ್ರಮ ಇದರ ಅಬ್ಯಸಿಸುವ ಉದ್ದೇಸಂದ ಸ್ವತಃ ಪ್ರಪಂಚ ಪರ್‌ಯಟನೆಗೆ 1925 ರ್‌ಲಿ ಹೊರ್ಟೊ.

ಆಗ ಚೀನ, ಜಪಾನ್, ಸಂಯುಕ್ತಸಂಸ್ತಾನ, ಕೆನಡ, ಗ್ರೇಟ್ ಬ್ರಿಟನ್, ಫ್ರಾನ್ಸ್, ಬೆಲ್ಜಿಯಂ, ಜರ್ಮನಿ, ಸ್ವಿಟ್ಜರ್‌ಲೆಂಡ್, ಇಟಲಿ ಹಿಂಗೆ ಬೇರೆ ಬೇರೆ ದೇಸಗಳಿಗೆ ಹೋಗಿ ಬಂದೊ. 1922–30 ರ ಹೊತ್ತ್‌ಲಿ ಸುಮಾರ್ ಸರ್‌ತಿ ವಜೀರಿಸ್ತಾನಲಿ (ವಾಯುವ್ಯ ಗಡಿ ಪ್ರಾಂತ್ಯ) ಸೇವೆ ಸಲ್ಲಿಸಿಯೊಳೊ. ಕ್ವೆಟ್ಟ ಸ್ಟಾಫ್ ಕಾಲೇಜ್‌ಲಿ ಪ್ರೌಡಸೈನ್ಯ ಶಿಕ್ಷಣ ಪಡ್ಯಕೆ ಪ್ರವೇಸ ಪಡ್ದ (1933) ಸುರೂನ ಭಾರತೀಯ ಇವು. 1935 ರ್‌ಲಿ ಸಿಂಗಾಪುರದ ಹಡ್ಗ್ ಹಂಗೆ ವಿಮಾನ ನೆಲೆಗಳ ಪರೀಕ್ಷೆ ಸಂದರ್‌ಶನ ಮಾಡ್ದೊ. ಎರಡನೇ ಮಹಾಯುದ್ದಲಿ 19 ನೆ ಇಂಡಿಯನ್ ಡಿವಿಷನ್ ಪಡೆ ನೊಟ್ಟಿಗೆ ಸೇವೆ ಸಲ್ಲಿಸಿಕಂಡ್ ಇರಾಕ್, ಸಿರಿಯ ಹಂಗೆ ಇರಾನ್‌ಲಿ ಯುದ್ದರಂಗ ಪ್ರವೇಸ ಮಾಡ್ದೊ. 7ನೆ ರಾಜಪೂತ್ ರೆಜಿಮೆಂಟಿನ ಮಷಿನ್‌ಗನ್ ಪಡೆನ ಕಟ್ಟುವ ಕಾರ್‌ಬಾರ್‌ನ ಸರಕಾರ ಕಾರ್ಯಪ್ಪನವ್ಕೆ ವಹಿಸಿತ್. ಆ ಕೆಲಸನ ಇವು ತೃಪ್ತಿಕರವಾಗಿ ಮಾಡಿ ಮುಗ್ಸಿದೊ (1942).

1943–44ರ್‌ಲಿ ಇವು ಸುರೂಗೆ ಈಸ್ಟರ್ನ್ ಕಮಾಂಡ್ ಹುದ್ದೆಗೇರಿ ಕಡೆಗೆ 20 ನೆ ಡಿವಿಷನ್ನ್‌ನ ಅಸಿಸ್ಟೆಂಟ್ ಕ್ವಾರ್ಟರ್ ಮಾಸ್ಟರ್ ಜೆನರಲ್ ಆದೊ. ಈ ಹೊತ್ತ್‌ಲಿ ಬರ್ಮಾ ಯುದ್ದಲಿ ಅರಕಾನ್ ರಂಗ ಪ್ರವೇಶಮಾಡಿ ಯುದ್ದ ನಿರ್‌ದೇಸನ ಮಾಡಿ ತಮ್ಮ ಯುದ್ದತಂತ್ರ ನಿಪುಣತೆನ ತೋರ್‌ಸಿದೊ.

1944ರ್‌ಲಿ ಸೈನ್ಯ ಪುನರ್‌ವ್ಯವಸ್ತಾ ಸಮಿತಿನ (ಆರ್ಮಿ ರೀಆರ್‌ಗನೈಸೇಷನ್ ಕಮಿಟಿ) ಸದಸ್ಯರಾಗಿ ನೇಮಕ ಆದೊ. ಆ ಕಾಲಲಿ ಅಮೆರಿಕ ಸಂಯುಕ್ತ ಸಂಸ್ತಾನ ಮತ್ತೆ ಕೆನಡಗಳ ಪರ್‌ಯಟನೆ ಮಾಡಿ ವೆಸ್ಟ್ ಪಾಯಿಂಟ್ ತೇಳುವಲ್ಲಿ ಮಿಲಿಟರಿ ಅಕಾಡೆಮಿನ ಸಂದರ್‌ಶಿಸಿದೊ. 1947ರ್‌ಲಿ ಫ್ರಾಂಟಿಯರ್ ಬ್ರಿಗೇಡ್ ಗ್ರೂಪ್ ಸೈನ್ಯ ವಿಬಾಗದ ಅದಿಪತಿಯಾಗಿ ನೇಮಕ ಆದೊ. 1947ರ್‌ಲಿ ಇಂಪೀರಿಯಲ್ ಡಿಫೆನ್ಸ್ ಕಾಲೇಜ್‌ನ ಉನ್ನತ ಸೈನ್ಯ ಶಿಕ್ಷಣಕೆ ಆಯ್ಕೆಯಾದೊ.

ಭಾರತ ಸ್ವತಂತ್ರ ಆದ ಮೇಲೆ ಇವರ ಹೊಣೆಗಾರಿಕೆ ಹೆಚ್ಚಾತ್. 1947 ಜೂನ್‌ಲಿ ಗಳ್ಸಿದ ಮೇಜರ್ ಜೆನರಲ್ ದರ್‌ಜೆ ಸಮೇತ ಚೀಫ್ ಆಫ್ ಜೆನರಲ್ ಸ್ಟಾಫ್ ಆಗಿ 1947 ಆಗಸ್ಟ್ 15 ರಂದ್ ನೇಮಕ ಆದೊ. ಮುಂದೆ ಹಿಂಗೆ ಒಂದೊಂದೇ ದೊಡ್ಡ ದೊಡ್ಡ ಅದಿಕಾರನ ಒಂದೊಂದಾಗಿ ಏರಿ 1948ರ ಕಾಸ್ಮೀರ ಯುದ್ದಲಿ ಜೆನರಲ್ ದರ್‌ಜೆ ಸಮೇತ ಸೈನ್ಯದ ವರಿಸ್ಟಾದಿಕಾರಿಯಾದೊ. 1949 ಜೆನವರಿ 15 ರ್‌ಂದ ಭಾರತ ಸೈನ್ಯದ ವರಿಸ್ಟಾದಿಕಾರಿ ಆಗಿ 1953 ಜೆನವರಿ 15ರ ಮುಟ್ಟ ಸೇವೆ ಸಲ್ಲಿಸಿದೊ. ಈ ಹೊತ್ತ್‌ಲಿ ಭಾರತ ಸೇನೆ ಸುಮಾರ್ ಸುದಾರಣೆಗಳ ಕಂಡತ್. 1953ರ ಜುಲೈ ತಿಂಗಳ್‌ಲಿ ಆಸ್ಟ್ರೇಲಿಯಾ ಮತ್ತೆ ನ್ಯೂಜಿಲೆಂಡ್‌ಗೆ ಭಾರತದ ಹೈಕಮಿಷನರ್ ಆಗಿ 1957 ಏಪ್ರಿಲ್ ವರೆಗೆ ಆ ಹುದ್ದೆಲಿದ್ದೊ.



ಕಸುಬು ಆದಂಗೆ ಇವು ಮಡಿಕೇರಿಲಿ ನೆಲ್ಸಿದ್ದೊ ಬಾಳಸ್ಟ್ ಕಡೆ ಸಾರ್‌ವಜೆನಿಕ ಜಂಬರಗಳ್‌ಲಿ, ಸಂಘ ಸಂಸ್ತೆಗಳ್‌ಲಿ ಜೆನತೆನ ಒಳ್ಳ್‌ಗಾಗಿ ದುಡಿಯುತ್ತಿದ್ದೊ. ಇವ್ಕೆ ಭಾರತ ಸರಕಾರ ಫೀಲ್ಡ್ ಮಾರ್ಷಲ್ ಗೌರವ ಕೊಟ್ಟುಟು. ಇವು 1993 ರ್‌ಲಿ ತೀರಿ ಹೋದೊ. (ಮೂ.ನಾ.ವಿ.)

**ಕಾವೇರಿ :** ಕಾವೇರಿ ಭಾರತದ ಕರ್ನಾಟಕ ರಾಜ್ಯದ ಮುಖ್ಯ ಹೊಳೆಗಳ್‌ಲಿ ಒಂದ್. ಇದ್ ಕರ್ನಾಟಕ ರಾಜ್ಯದ ಕೊಡ್‌ಗ್. ಜಿಲ್ಲೆಲಿ ಹುಟ್ಟಿದ್ ತಮಿಳುನಾಡ್‌ಲಿ ಬಂಗಾಳಕೊಲ್ಲಿ ಕಡಲ್‌ನ ಸೇರ್‌ದೆ. ಇದ್

ಹುಟ್ಟಿದಲ್ಲಿಂದ ಸೇರ್‌ವ ಜಾಗೆನ ಉದ್ದ 475 ಮೈಲ್. ಹಿಂದು ಪುರಾಣಲಿ ಹೇಳ್ದ ಏಳ್ ಪವಿತ್ರ ಹೊಳೆಂಗಳ್‌ಲಿ ಕಾವೇರಿ ಹೊಳೆನೂ ಒಂದ್. ಇದರ ದಕ್ಷಿಣದ ಗಂಗಾ ತನೂ ಕರ್‌ದವೆ. ಜೆನ ತಮ್ಮ ಪಾಪಗಳ ಕಳ್ಕಂಬಕಾಗಿದೆ ಈ ಗಂಗೆಲಿ ಮೀವ ಪೊದ್ದತಿ ಉಟ್ಟು. ಈ ಜೆನರ್‌ಂದ ತನ್ನ ಮೇಲೆ ಅಂಟಿದ ಪಾಪನ ತೊಳ್ಕಂಬಕೆ ಗಂಗೆನೆ ವರ್ಷಕ್ಕೊಮ್ಮೆ (ತುಲಾ ಸಂಕ್ರಮಣದ ದಿನ) ಕಾವೇರಿ ಹೊಳೆ ಹುಟ್ಟಿದ ಜಾಗೆಲಿ ಮೀದದೆಂತೇಳುವ ನಂಬಿಕೆ ಜೆನರ ಮೊಯಿಂಸ್‌ಲಿ ಉಟ್ಟು. ಈ ಹೊಳೆಂದಾಗಿ ಇದರ ನೆರೆಕರೆ ಇರ್‌ವ ಜೆನಕೆ ಬಾರಿ ಉಪಕಾರ ಆಗ್ತಾವುಟ್ಟುಂತೇಳ್ರೆ ತಪ್ಪಾಕಿಲೆ. ಅಸ್ಟೆ ಅಲ್ಲದೆ ಮೈಸೂರ್ ಮತ್ತೆ ತಮಿಳುನಾಡ್ ರಾಜ್ಯಗಳ ಕ್ರಿಸಿ ಕೈಗಾರಿಕೆಗ ಬೆಳೆಕೂ ಈ ಹೊಳೆ ಕಾರಣ ಆವುಟು. ಈ ಹೊಳೆ ಹರೆವ ನಾಡ್‌ನ ಪವಿತ್ರ ನಾಡ್ ತ ಪರಿಗಣ್‌ಸ್ಯೊಳ.

**ಕಾವೇರಿ ನದಿನ ಹುಟ್ಟ್ :** ಕಾವೇರಿ ನದಿ ಕೊಡಗ್ ಜಿಲ್ಲೆಲಿ ಪೊಡ್ವ ಗಟ್ಟಗಳ ಬ್ರಹ್ಮಗಿರಿಲಿ (ಉ. ಅ 25ಹ ಪೂ. ರೇ. 75ಹ 34') (4447') ಹುಟ್ಟಿದೆ. ಈ ಹೊಳೆ ಹುಟ್ಟಿದ ಜಾಗೆಗೆ ತಲಕಾವೇರಿಂತೇಳಿ ಕರ್‌ದವೆ. ಬೆಟ್ಟದ ನೆತ್ತಿ ಮೇಲೆ ಅರಬ್ಬಿಕಡಲ್‌ದ ಹಕ್ಕಲೆ ಹುಟ್ಟುವ ಈ ಹೊಳೆ ಹರೆವ ದಾರಿಗೆ ಅಡ್ಡ ಬಾವ ಪರ್‌ವತಗಳ ದಾಟಿ ಮೂಡಕೆ ಮೋರೆ ಮಾಡಿ ಹರಿದು ಒಂದ್ ವಿಸ್ಮಯ.ಪೊಡ್ವಕೆ ಜಾರಿದ್ದರೆ ಅದರ ನೀರ್ ನೆಟ್ಟಂಗೆ ಅರಬ್ಬೀ ಕಡಲ್‌ನ ಸೇರ್‌ತಿತ್ತ್. ಆಗ ಮೂಡಲಿ ಅದ್ ಈಗ ಹರೆವ ಜಾಗೆ ನೀರಿಲ್ಲದೆ ಒಣ್‌ಗ್ಗಿ ತಿತ್ತ್. ಇದ್ ಗಟ್ಟದ ನೆತ್ತಿಗೆರೆನ ಪೊಡ್‌ವಕ್ಕಿರ್‌ವ ಜಾಗೆನ ಒಂದ್ ಬಾಗದ ನೀರ್‌ನ ಕಾವೇರಿ ಕೂಡ್ಸಿಕಂಡದೆ. ಜೂನ್‌ಂದ ಸೆಪ್ಟೆಂಬರ್‌ನ ವರೆಗೆ ಸೊರಿವ ಮಳೆಂದಾಗಿ ಆ ಕಾಲಲಿ ಕಾವೇರಿ ಉಕ್ಕಿ ಹರ್‌ದದೆ. ಇದ್ ಗಟ್ಟದ ಮೈದಾನಕೂ ತಮಿಳುನಾಡ್‌ನ ಬಯಲ್ ನೆಲಕ್ಕೂ ನೀರುಣ್ಸಿದೆ.

ಹುಟ್ಟಿದ ಜಾಗೆಂದ ಸಿದ್ದಾಪುರದೊರೆಗೆ ಆಗ್ನೇಯಕ್ಕೆ ಮೋರೆ ಮಾಡಿ ಪಡ್ವಕೆ ಮೋರೆ ಮಾಡಿ ಹರ್‌ಕಂಡೋಗಿ ಅಲ್ಲಿಂದ ಈಶಾನ್ಯ ದಿಕ್ಕ್‌ಲಿ ಹರೆವ ಕಾವೇರಿ, ಕೊಡಗ್‌ನ ಸುಮಾರ್ ಉಪನದಿಗಳ ತನ್ನೊಟ್ಟಿಗೆ ಸೇರ್‌ಸಿಕಂಡದೆ. ಇದ್ ಹುಟ್ಟಿದಲ್ಲಿಂದ ಮೂರ್ ಮೈಲಿ ಕಾಗಡೆ ಭಾಗಮಂಡಲಲಿ ಕಾವೇರಿನ ಕೂಡಿಕಂಬ ಹೊಳೆದ ಹೆಸ್ರ್ ಕನ್ನಿಕ. ಕೊಡಗ್‌ಲಿ ದಕ್ಷಿಣ ದಿಕ್ಕ್‌ಂದ ಕಾವೇರಿಗೆ ಬಂದ್ ಸೇರ್‌ವ ಕಕ್ಕಬೆ ಹೊಳೆ, ಕಾಡನೂರು ಹೊಳೆ ಮತ್ತೆ ಸಮ್ಮೆ ಹೊಳೆ ಮಡಿಕೇರಿ ಶ್ರೇಣಿನ ದಕ್ಷಿಣದ ಜಲಾನಯನ ಪ್ರದೇಸಂದ ಹರ್‌ದ್ ಬಾವ ಮುತ್ತಾರುಮುಡಿ ಹೊಳೆ ಕಾವೇರಿನ ಉತ್ತರ ಬಾಗಲಿ ಸೇರಿಕಂಡದೆ. ಈ ಬಾಗಲಿ ಕಾವೇರಿನ ಕೂಡಿಕಂಬ ಇನ್ನೊಂದು ಹೊಳೆಂತೇಳ್ರೆ ಚಿಕ್ಕ ಹೊಳೆ. ಕುಶಾಲನಗರಕೆ ಉತ್ತರಲಿ ಕಾವೇರಿನೊಟ್ಟಿಗೆ ಕೂಡಿಕಂಬ ಇನ್ನೊಂದ್ ಮುಕ್ಯ ಹೊಳೆಂತೇಳ್ರೆ ಅದ್ ಹಟ್ಟಿ ಅಲ್ಲರೆ ಹಾರಂಗಿ. ಕಕ್ಕೆಹೊಳೆ, ಜೇರನಹೊಳೆ, ಹಟ್ಟಿಹೊಳೆಗ ಹಾರಂಗಿನ ಸೇರಿಕಂಬ ಹೊಳೆಂಗ.

ಹುಟ್ಟಿದಲ್ಲಿಂದ ಗಟ್ಟದ ಇಳಿಜಾರ್‌ಲಿ ರಬಸಲಿ ಹರೆವ ಕಾವೇರಿ 8 ಕಿಮೀ. ದೂರ ಸಾಗ್‌ವ ಹೊತ್ತುಗೆ 450 ಮೀ. ನಸ್ಟ್ ಇಳ್ಜಾರ್‌ನ ಕಳ್ಕಂಡದೆ. ಭಾಗಮಂಡಲಂದಳೆ ಅದ್ಕೆ ದೊಡ್ಡ ಹೊಳೆದ ಲಕ್ಷಣಗ ಎಲ್ಲ ಸಿಕ್ಕಿದ್ದದೆ. ಅಡ್ಡಬಾವ ಬಂಡೆಗಳ್‌ಲಿ ಯಾವುದುನೂ ಅಸಾದ್ಯಂತೇಳಿ ಕಂಡತ್ಲೆ. ಪ್ರಾಚೀನ ಕಾಲದ ಹೊಳೆಗಳ ಚಿಹ್ನೆಗ ಎಲ್ಲಾ ಈ ಕಾವೇರಿಗೂ ಉಟ್ಟು.

ಹಾರಂಗಿ ಹೊಳೆದ ಒಟ್ಟಿಗೆ ಸೇರಿ ಮೈಸೂರ್–ಕೊಡಗ್ ಜಿಲ್ಲೆಗಳ ಗಡಿಮುಟ್ಟ ಹರ್‌ದ ತರುವಾಯ ಇದ್ ಹಾಸನ ಜಿಲ್ಲೆನ ದಕ್ಷಿಣಾಗ್ರಲಿ ರಾಮನಾತಪುರದ ಹಕ್ಕಲೆ ಬಲ ಬಾಗಕೆ ತಿರ್‌ಗಿ ಮೂಡಕೆ ಎದ್ರ್ ಮೋರೆ ಮಾಡಿ ಹರ್‌ದದೆ. ಅಲ್ಲಿಂದ ಇದ್ ಮೈಸೂರ್ ಜಿಲ್ಲೆನತ್ತ ಹೋದೆ. ಇದ್ ತುಂಬಾ ದೂರಂದಳೆ ಸಾಲಿಗ್ರಾಮದ ಹಕ್ಕಲೆನ ಚುಂಚನಕಟ್ಟೆಲಿ ಜಲಪಾತ ಆಗಿ, ಬೇಗನ ಒಂದಸ್ಟ್ ಕಡ್‌ಮೆ ಮಾಡಿಕಂಡ್ ಕೃಷ್ಣರಾಜನಗರದ ಮಾರ್‌ಗ ಆಗಿ ಮುಂದೆ ಕನ್ನಂಬಾಡಿ ಹಕ್ಕಲೆ ಕಾವೇರಿನ ಸೇರ್‌ವ ಉಪನದಿಗ ಹೇಮಾವತಿ ಮತ್ತೆ ಲಕ್ಷ್ಮಣತೀರ್‌ತಗ. ಹೇಮಾವತಿ ಕೊಡಗ್‌ನ ಉತ್ತರದಕ್ಷಿಣದ ಜಾಗೆಗಳ ನೀರ್‌ನ ಸೇರ್‌ಸಿಕಂಡ್ ಹಾಸನ ಜಿಲ್ಲೆಲೂ ಹರ್‌ದರೆ ಲಕ್ಷ್ಮಣ ತೀರ್‌ತ ಮೈಸೂರ್ ಜಿಲ್ಲೆಲೂ ಹರ್‌ದ್ ಬಂದದೆ.

ಕನ್ನಂಬಾಡಿ ಹಕ್ಕಲೆ ಮಂಡ್ಯ ಜಿಲ್ಲೆ ಸೇರ್‌ವ ಕಾವೇರಿ ಆ ಜಿಲ್ಲೆನ ತೆಂಕಲಿ ಹರ್‌ದ್, ತನ್ನ ಬೇಗನ ಇನ್ನೂ ಹನಿ ಕಡ್ಮೆ ಮಾಡಿಕಂಡ್, ಶ್ರೀರಂಗಪಟ್ಟಣಲಿ ಕವಲೊಡ್ದ್ ಅದರ ಒಂದ್ ದ್ವೀಪನಂಗೆ ಮಾಡಿ, ಮತ್ತೆ ಮೈಸೂರ್ ಜಿಲ್ಲೆನ ಬಡಗದ ಮೂಲೆಗೆ ಹೋದೆ. ಬನ್ನೂರು, ಸೋಸಲೆಗಳ ದಾಟಿದ ಮೇಲೆ ಸಿಕ್ಕುದು ತಿರುಮಕೂಡಲು ನರಸೀಪುರ. ಮೈಸೂರ್ ಜಿಲ್ಲೆನ ದಕ್ಷಿಣದ ಕಡೆಂದ ಹರ್‌ದ್ ಬಾವ ಕಪಿನಿ ಹೊಳೆ ಕಾವೇರಿನ ಸೇರ್‌ದು ಈ ಎಡೆಲಿ.

ಮಂಡ್ಯ–ಮೈಸೂರ್ ಜಿಲ್ಲೆಗಳ ಗಡಿ ಮುಟ್ಟಿ ತೆಂಕಕೆ ತಿರ್‌ಗಿ ತಲಕಾಡ್‌ನ ಎಡಕೆ ಬುಟ್ಟು ಮತ್ತೆ ಮೂಡಕೆ ಮೋರೆ ಮಾಡಿ ಹರೆವ ಕಾವೇರಿನ ಈ ವರ್‌ತನೆಂದಾಗಿ ತಲಕಾಡ್‌ನ ಸುತ್ತೆಲ್ಲ ಪೊಯ್ಯೆ ತುಂಬಿಟ್ಟು. ತಾನ್ ಹರೆವ ಜಾಗದುದ್ದಕೂ ತುಂಬಿಕಂಡ್ ಬಂದ ಪೊಯ್ಯೆನ್ನೆಲ್ಲ ತನ್ನೊಳಗೆಂದ ಹೊರಗೆ ಹಾಕಿಕೆ ಕಾವೇರಿಗೆ ಈ ತಿರ್‌ಗ್ ಬಾರಿ ಒಳ್ಳೆದ್. ಬಲಕಡೆಂದ ಹರ್‌ದ್ ಬಾವ ಸುವರ್‌ಣಾವತಿ ಹೊಳೆ ಕೂಡಿಕಂಬೊದು ತಲಕಾಡ್‌ನ ಹಕ್ಕಲೆನೆ. ಮತ್ತೆ ಕಾವೇರಿನ ದಿಕ್ಕ್ ಬದ್ಲಾದೆ. ಉತ್ತರಕ್ಕೆ ಎದ್ರ್ ಮೋರೆ ಹಾಕಿ ಹರ್‌ದ್, ಮಂಡ್ಯ ಜಿಲ್ಲೆ ನ ಗಡಿ ಮುಟ್ಟಿ ಶಿವನಸಮುದ್ರದ ಹಕ್ಕಲೆ ಕವಲೊಡ್ದ್ ಗಗನಚುಕ್ಕಿ ಬರಚುಕ್ಕಿ ಆಗಿ ದುಮ್ಮಿ‌ದೆ ಮತ್ತೆ ಒಂದಾಗಿ ಸಾಗಿದೆ. ಇಲ್ಲಿ ಕಾವೇರಿನ ಎರ್‌ಡನೆ ದೊಡ್ಡ ದ್ವೀಪ ತಲೆ ಎತ್ತಿದೆ.

ಕೇವಲ 80 ಕಿಮೀ. ದೂರಲಿ 800 ಮೀ. ನಸ್ಟ್ ಕಾಗಡೆ ಇಳಿವ ಕಾವೇರಿ ಹೊಳೆ ಆಮೇಲೆ ಬೆಂಗ್ಳೂರ್ ಜಿಲ್ಲೆನ ದಕ್ಷಿಣ ಅಂಚ್‌ನ ಸೋಕಿ ಹರ್‌ದದೆ. ಕಡಲ್‌ಮಟ್ಟಂದ ಸುಮಾರ್ 750 ಮೀ. ಎತ್ತರ ಇರ್‌ವ




ಮೈಸೂರ್ ಪ್ರಸ್ತಬೂಮಿನ ಪಲವತ್ತಾದ ಪ್ರದೇಸಲಿ ಹಾವುನಂಗೆ ಹರ್ದ್ ಅಗಲ ಹೆಚ್ಚಿಸಿಕಂಡ್ ನಿದಾನಕೆ ಹರ್ದ ಹಳ್ಳದ ಗುಣ ಶಿವನಸಮುದ್ರದಾಚೆಗೆ ವೆತ್ಯಾಸಾದೆ. ಮೈಸೂರ್‌ನ ಪ್ರಸ್ತಬೂಮಿಂದ ತಮಿಳುನಾಡ್‌ನ ತಗ್ಗ್ ಬಯಲ್ ಗೆ ಹರೆಕನ ಅದ್ರ ಬೇಗ ತುಂಬಾ ಹೆಚ್ಚಾದೆ. ಅದರ ಪ್ರವಾಹದ ಗಾತ್ರನ ಹಿಡಿವಸ್ಟ್ ಅಗಲದ ಜಾಗೆಗ ಇಲ್ಲದರ್‌ಂದಾಗಿ ಹಳ್ಳ ರಬೊಸಲಿ ಹರ್‌ದದೆ. ಗಟ್ಟಿಬಂಡೆಗ ಜೇಡಿಮೊಣ್ಣ್‌ನ ಹೆಪ್ಪುಗಳಂಗೆ ಸವ್ದ್ ಚಿಪ್ಪಾವುಟ್. ಅಲ್ಲಿ ಆದ 12–75 ಮೀ. ಚಾಳದ ಗುಂಡಿಗ ಈ ಹಳ್ಳದ ಅಬ್ಬರಕೆ ಉದಾಹರಣೆ. ಒಂದ್ ಕಡೆಂದ ನೋಡ್ದಾದರೆ ಈ ಹಳ್ಳ ಬಾರಿ ಸಣ್ಣದ್. ಹಿಂದೆ ಇದರ ಆಡ್‌ಗೂ ಕೂಡ ದಾಟಿಕೆ ಆಗ್ತಿತ್ತ್ ಗಡ. ಈಗ ಅದರ ಅಗಲ ಮುಂದೆನಂಗೆ ಇಲ್ಲೆ. ತುಂಬಾನೇ ಅಗಲ ಉಟ್ಟು. ಮೇಕೆದಾಟ್‌ಂತೇಳುವ ಹೆಸ್ರ್‌ಂದಲೇ ಈ ಜಾಗೆ ಪ್ರಸಿದ್ದಿ ಆವುಟು.



ಕಾವೇರಿ ಹಳ್ಳ

ಎತ್ತರ ನೆಲಂದ ತಗ್ಗ್‌ಗೆ ಜಾರ್‌ವ ಕಾವೇರಿ ಈ ದಾರಿಲಿ ಸುಮಾರ್ ಸಣ್ಣ ಸಣ್ಣ ಹಳ್ಳ ಕಣಿಗಳ ಕೂಡ್ಸಿಕಂಡದೆ. ಇವ್ ಗಳ ಪೈಕಿ ಕಣ್ವ ಮತ್ತೆ ಅರ್‌ಕಾವತಿ ಹಳ್ಳಗ ದೊಡ್ಡೊವು. ಇವು ಬೆಂಗಳೂರ್ ಜಿಲ್ಲೆಂದಾಗಿ ಹರ್‌ದ್ ಬಂದವೆ. ಇದರೊಟ್ಟಿಗೆ ಹಳ್ಳಗಳ ಅಗಲ ಮಾಡಿಕಂಡ್, ಇರ್‌ವ ತೊಂದರೆಗಳ ಆದಸ್ಟ್ ನಿವಾರ್‌ಸಿಕಂಡ್ ಹರ್‌ದದೆ. ಆದರ್‌ಂದ ಒಂದ್ ನಿರ್‌ದಿಸ್ಟ ದಾರಿನ ಕಟ್ಟಿಕಂಬಕೆ ಇನ್ನೂ ಆತ್ಲೆ.

ಕಾವೇರಿಂದ ಮೈಸೂರ್‌ಗೆ ಆಗಿರ್‌ವ ಉಪಕಾರ ಅಸ್ಟಿಸ್ಟಲ್ಲ. ಕಾವೇರಿ ಹರೆವ ಮಾರ್‌ಗದುದ್ದಕ್ಕೂ ಸುಮಾರ್ ಅಣೆಕಟ್ಟ್ ಗಳ ಕಟ್ಯೊಳ. ಈ ಹಳ್ಳದ ಎರಡೂ ಕರೆಲಿ ನೀರಾವರಿ ಸೌಲಬ್ಯ ಒದ್ಗುಸಿದ್ದ ಕಾಲುವೆಗಳ ಒಟ್ಟು ಉದ್ದ 1, 900 ಕಿಮೀ. ಇಲ್ಲಿನ ಅಣೆಕಟ್ಟ್‌ಗಳ್‌ಲಿ ಕೆಲವ್ ತುಂಬಾನೆ ಹಳೆಯವು. ಇವುಗಳ್‌ಲಿ ಕೆಲವ್ 1,000 ವರ್ಷಗಳ ಹಿಂದೆದ್. ಕನ್ನಂಬಾಡಿ ಹಕ್ಕಲೆ ಕಟ್ಟಿರ್‌ವ ಕೃಷ್ಣರಾಜಸಾಗರ ಕಟ್ಟೆ ಇತ್ತೀಚೆದ್. ಹಳ್ಳಂದ 38 ಮೀ, ಎತ್ತರ ಇರ್‌ವ ಕಟ್ಟೆ ಉದ್ದ 1, 996ಮೀ. ಜಲಾಶಯಲಿ ಹಿಡ್ದ್ ಇಸುವ ನೀರ್ ನ ಪ್ರಮಾಣ 1, 17, 50, 00, 000 ಗನ ಮೀಟರ್. ಶಿವನಸಮುದ್ರದ ಹಕ್ಕಲೆ ಇರ್‌ವ ವಿದ್ಯುತ್ಪಾದನೆ ಕೇಂದ್ರಕೆ ವರ್ಷ ಇಡೀ ನೀರ್ ಒದ್ಗುಸುದು ಮತ್ತೆ ಮೈಸೂರ್ ಮಂಡ್ಯಗಳಲ್ಲಿ ಹೆಚ್ಚಿನ ನೀರಾವರಿ ಸೌಲಬ್ಯ ಒದ್ಗುಸುದು ಕೃಷ್ಣರಾಜಸಾಗರ ಕಟ್ಟಿದರ ಮುಕ್ಯ ಉದ್ದೇಶ. ಶಿವನಸಮುದ್ರದ ಹಕ್ಕಲೆ ಕಟ್ಟಿದ ವಿದ್ಯುತ್ಪಾದನೆ ಮಾಡ್ವ ಕೇಂದ್ರ (1902) ಇಡೀ ಏಷ್ಯಾ ಕಂಡಲೇ ಬಾರಿ ಹಳೇ ದೊಡ್ಡ ವಿದ್ಯುತ್‌ಕೇಂದ್ರ.

ಮೈಸೂರ್‌ನ ಆಗ್ನೇಯದ ಕರೇನ ಉದ್ದಕೂ ಹರ್‌ದ್ ಹೊಗೇನಕಲ್ಲ್‌ನ ಹಕ್ಕಲೆ ಮತ್ತೆ ದುಮ್ಕಿ, ಕಡೆಗೆ ಮೈಸೂರ್‌ನ ಬುಟ್ಟು ತಮಿಳ್ ನಾಡ್‌ಗೆ ತಿರ್‌ಗ್‌ವ ಹೊತ್ತುಗೆ ಹಳ್ಳದ ದಿಕ್ಕ್ ಎರ್‌ಡ್ ಸರ್‌ತಿ ಬದ್ಲಾದೆ. ಹೊಗೇನಕಲ್ಲ್‌ನ ಹಕ್ಕಲೆ ದಕ್ಷಿಣಾಬಿಮುಕ ಮತ್ತೆ ಬೋಡಮಲ್ಯೆ ಮಲೆನ ಹಕ್ಕಲೆ ಮೂಡಾಬಿಮುಕ. ಹನಿ ದೂರ ಹಿಂಗೆ ಸಾಗಿಕನ ವಾಪಾಸ್ ಅದ್ ತೆಂಕಕೆ ಬಾಗಿದೆ.

ಪಾಲಾರ್‌ನ ನೀರ್‌ನ ಸೇರಿ ಮುಂದುವರೆವ ಕಾವೇರಿಗೆ ಮೆಟ್ಟೂರ್ ನ ಹಕ್ಕಲೆ ಒಂದ್ ಎತ್ತರದ ಕಟ್ಟೆ ಕಟ್ಟೋಳ. 5, 300' ಉದ್ದ 176' ಎತ್ತರದ ಕಟ್ಟೆ ಇದ್. ವಿದ್ಯುತ್ಪಾದನೆ ಮತೆ ನೀರಾವರಿ ಸೌಲಬ್ಯ ಒದ್ಗುಸುದು ಇದರ ಉದ್ದೇಸ. ಮೆಟ್ಟೂರು ಜಲಾಶಯಂದಾಗಿ ತಂಜಾವೂರ್‌ನ ಕಾವೇರಿ ಬೊಯ್ಲ್‌ಗೆ ನೀರ್ ಸರಬರಾಜಾವ ಬರವಸೆ ಏರ್‌ಪಟ್ಟುಟು.

ಮೆಟ್ಟೂರ್‌ಂದ ಮುಂದೆ ಬವಾನಿಯವರೆಗೆ ದಕ್ಷಿಣ ದಿಕ್ಕ್‌ಲಿ ಹರೆವ ಕಾವೇರಿಗೆ ಆ ಜಾಗೆಲಿ ಪಡ್ವಂದ ಹರ್‌ದ್ ಬಾವ ಬವಾನಿ ಹಳ್ಳ ಕೂಡಿಕಂಡದೆ. ಮತ್ತೆ ಮುಂದೆ ಮೂಡಾಬಿಮುಕ ಆಗಿ ಹರೆವ ಕಾವೇರಿನ ಚರ್‌ಯೆನೇ ಬದಲಾದೆ. ಕಡಲ್ ಹಕ್ಕಲೆ ಆದಂಗೆ ಅದರದ್ ಗಂಬೀರ ದ್ರಿಸ್ಟಿ, ಪಾತ್ರನೂ ದೊಡ್ಡದಾದೆ. ಅದರ ಕರೆನ ಉದ್ದದವರ್‌ಗೂ ಪಟ್ಟಣಗ ಎದ್ದ್ ನಿತ್ತೊಳೊ. ಕೊಯಮತ್ತೂರುನ ಆಲಂಬಾಡಿನ ಹಕ್ಕಲೆ ಹಳ್ಳದ ಪ್ರವಾಹದ ನೊಡುಲಿ ಅಡ್ಡ ಬಾವ ಬಂಡೆಗೆ ತಾಂಗಿ ತುಂತುರು ಹನಿಗ ಚಿಮ್ಮಿದೆ. ತಿರುಚ್ಚಿರಪಳ್ಳಿನ ಪ್ರಸಿದ್ದ ಬಂಡೆನ ದಾಟಿದ ಮೇಲೆ ಕಾವೇರಿ ಮತ್ತೆ ಕವಲ್ ಒಡ್ಡದೆ. ಇದರ್‌ಂದಾಗಿ ಹುಟ್ಟುವ ದ್ವೀಪನೇ ಶ್ರೀರಂಗಂ ಎರ್‌ಡ್ ಕವಲ್‌ಗ ತಿರುಚ್ಚಿರಪ್ಪಳ್ಳಿಂದ 16 ಕಿಮೀ. ದೂರಲಿ ಮತ್ತೆ ಸೇರ್‌ದೆ. ಮಹಾ ಅಣೆಕಟ್ಟ್(ಗ್ರ್ಯಾಂಡ್ ಅಣಿಕಟ್) ನಿರ್ಮಾಣ ಮಾಡ್ಯೊಳ ಈ ಜಾಗೆಲಿ.

ತಂಜಾವೂರ್ ಜಿಲ್ಲೆ ಮಹಾ ನೀರಾವರಿ ವೆವಸ್ತೆಗೆ ಇದೇ ಮೂಲ. ಇಲ್ಲಿದ್ ಭಾರತಲೇ ಬಾರಿ ಹಳೆ ನೀರಾವರಿ ವೆವಸ್ತೆ (2ನೆಯ ಶತಮಾನ). ಕುಂಬಕೋಣಂ, ಮಯೂರಂ, ಶಿರ್‌ಕಾ ಮತ್ತೆ ನನ್ನಿಲಂ ತಾಲ್ಲೂಕುಗಳಿಗೂ ತಂಜಾವೂರು, ಮನ್ನಾರ್‌ಗುಡಿ, ತಿರುತ್ತುರೈಪುಂಡಿ ಮತ್ತೆ ನಾಗಪಟ್ಟಿಣಂ ತಾಲ್ಲೂಕ್‌ಗಳ ಬಾಗಕ್ಕೂ ಕಾವೇರಿ ನೀರ್ ಸಿಕ್ಕಿದೆ ಇದ್ ತಮಿಳುನಾಡ್‌ನ ಬತ್ತದ ಕಣಜದ ಪ್ರದೇಶ.

ಮುಕಜಬೂಮಿನ ಪ್ರದೇಸಲಿ ಕಾವೇರಿ ಎರ್‌ಡ್ ಬಾಗ ಆಗಿ ಒಡ್ದದೆ. ಉತ್ತರಲಿ ಕೊಲ್ಲಡಂ, ದಕ್ಷಿಣದ ಕವಲು ಕಾವೇರಿಂತೇಳಿದೆ ಕರ್‌ಸಿಕಂಡದೆ. ತಂಜಾವೂರ್‌ನ ಮುಕಜಬೂಮಿ ಪ್ರದೇಶಲಿ ನೀರ್‌ಗಾಗಿ ಬಳ್ಸಿಕಂಡ್ ಒಳ್ದ ನೀರ್‌ನ ಉತ್ತರದ ಶಾಕೆಯಾದ ಕೊಲ್ಲಡಂಗೆ ಬುಟ್ಟವೆ. ಈಶಾನ್ಯಕೆ ಎದ್ರ್ ಮೋರೆ ಮಾಡಿ ಹರೆವ ಈ ಕವಲ್ ಪೋರ್ಟೋನೋವೋ ಹಕ್ಕಲೆ ಕಡಲ್ ಸೇರ್‌ದೆ. ಕಾವೇರಿನ ಎರ್‌ಡ್ ಶಾಕೆಗ ಸಮುದ್ರಲಿ ಸಂಗಮ ಆಕೆ ಮುಂದೆ ಕವಲ್ ಕವಲಾಗಿ ಒಡ್ದ್ ನೀರಾವರಿನ ಬಲೆ ಮೆಡ್ದುಟು. ಭಾರತಲಿ ಇರ್‌ವ ಬೇರಾವ ಹಳ್ಳನ ಕೂಡ ಇಸ್ಟ್ ಲಾಯ್ಕ್ ಆಗಿ ನೀರಾವರಿಗೆ ಉಪಯೋಗಿಸಿಕಂತ್ಲೆ ತ ಹೇಳ್ವೆ.


ಶಿವನಸಮುದ್ರ

ಕೊಡಗ್‌ನ ಪ್ರದೇಶಲಿ ಸಣ್ಣ ಚಾರ್ ಆಗಿ ಹುಟ್ಟಿ, ಕಾಲಾಂತರಲಿ ನೆರೆಕರೆ ಊರುನ ಸಂಪತ್ತ್ ವೃದ್ದಿಸಿಕೆ ಕಾರಣ ಆಗಿ, ಶಿವನಸಮುದ್ರಲಿ ತನ್ನ ಅಳ್ತೆನ ಹೆಚ್ಚಿಸಿಕಂಕನ ವಿದ್ಯುತ್ ಚಿಮ್ಮುಸಿ, ತಮಿಳುನಾಡ್‌ಲಿ ತನ್ನ ಪೊರ್‌ಲು ಹೆಚ್ಚಿಸಿಕಂಡ್ ಕಡಲ್‌ನ ಸೇರುವ ಈ ಹಳ್ಳದ ಉಪಕಾರಂದಾಗಿ ಜೆನ ಇದರ ಪವಿತ್ರ ಹಳ್ಳ ತ ಪೂಜಿಸುವೆ.

**ಪುರಾಣಲಿ ಕಾವೇರಿ :** ಕಾವೇರಿ ಹಳ್ಳದ ಹುಟ್ಟುನ ಕತೆ ಅಗ್ನಿಪುರಾಣಲಿ ಬಂದದೆ. ಮೂಡಕಾಲಲಿ ಕವೇರ ತೇಳ್ವ ಒಬ್ಬ ರಾಜ ಇತ್ತ್. ಅಂವ ಬ್ರಹ್ಮ ದೇವ್ರ ಒಲ್ಸಿಕಂಬಕಾಗಿ ತಪಸ್ಸ್ ಮಾಡ್ತ್. ಆಗ ಬ್ರಹ್ಮ ಅವಂಗೆ ಪ್ರತ್ಯಕ್ಷ ಆಗಿ ಅವಂಗೆ ಮೋಕ್ಷ ಸಿಕ್ಕಕಾರ್ ಹನಿ ಕಾಲ ಕಾಯೋಕು, ಅಲ್ಲಿವರೆಗೆ ಬ್ರಹ್ಮ ದೇವ್ರ ಮಗಳ್ ವಿಷ್ಣು ಮಾಯೆನ ತನ್ನ ಮಗಳಂಗೆ ನೋಡಿಕಣಕುತ ತ ಸಲಹೆ ಕೊಟ್ಟೊ. ಬ್ರಹ್ಮ ದೇವ್ರ ಇಸ್ಟದಂಗೆ ಕವೇರ ರಾಜ ವಿಷ್ಣು ಮಾಯೆನ ತನ್ನ ಅರಮನೆಲಿ ಸಾಂಕಿತ್. ವಿಷ್ಣು ದೇವ್ರ ಅಂಶ ಆದ ವಿಷ್ಣು ಮಾಯೆ ಬೆಳ್ದ್ ದೊಡ್ಡವಳಾಗಿ ಹಿಮಾಲಯಕ್ಕೆ ತಪಸ್ಸ್ ಮಾಡಿಕೆ ಹೋತ್. ಆಗ ಕವೇರ ರಾಜಂಗೆ ಮೋಕ್ಷ ಸಿಕ್ಕಿತ್. ವಿಷ್ಣುಮಾಯೆನ ತಪ್ಪಸ್ಸ್ ಗೆ ವಿಷ್ಣು ದೇವ್ರು ಒಲ್ದ್ ಅವಳ್‌ಂದ ಜೆನಕ್ಕೆ ಉಪಯೋಗ ಆಕುಂತೇಳಿ ಅವಳ್ ಎರ್‌ಡ್ ರೂಪ ಪಡ್ದ್ ಒಂದ್ ರೂಪಲಿ ಸಹ್ಯ ಪರ್‌ವತಲಿ ಹಳ್ಳ ಆಗಿ ಹುಟ್ಟೋಕು ಇನ್ನೊಂದು ರೂಪಲಿ ಲೋಪಾಮುದ್ರೆಂತೇಳುವ ಹೆಸ್ರ್ ಲಿ ಅಗಸ್ತ್ಯ ಋಷಿನ ಹೆಣ್ಣಾಕು ತೇಳಿ ವಿಷ್ಣು ದೇವ್ರು ವರ ಕೊಟ್ಟೊ. ವಿಷ್ಣುಮಾಯೆಗೆ ವಿಷ್ಣು ದೇವ್ರು ವರ ಕೊಡ್ವ ಕಾಲಲಿ ಅಗಸ್ತ್ಯ ಮುನಿಗ ಬ್ರಹ್ಮ ದೇವ್ರ ಕುರ್‌ತ್ ತಪಸ್ಸು ಮಾಡ್ತಿದ್ದೊ. ಆಕನ ಬ್ರಹ್ಮ ದೇವ್ರ್ ಪ್ರತ್ಯಕ್ಷ ಆಗಿ ಲೋಪಾಮುದ್ರೆನ ಮೊದ್ವೆ ಆಕುಂತೇಳ್ದ. ಬ್ರಹ್ಮ ದೇವ್ರ್ ಹೇಳ್ದಂಗೆ ಅಗಸ್ತ್ಯ ಋಷಿಗ ಲೋಪಾಮುದ್ರೆ ರೂಪ ತಳ್ದ ವಿಷ್ಣು ಮಾಯೆ ಇರ್‌ವಲ್ಲಿಗೆ ಬಂದ್ ಅವಳ ಮೊದ್ವೆ ಆದೊ. ಅಗಸ್ತ್ಯ ಲೋಪಾಮುದ್ರೆನ ಮೊದ್ವೆ ಆದ ಮೇಲೆ ಅಗಸ್ತ್ಯ ಋಷಿ ಗೆ ದಕ್ಷಿಣ ಭಾರತಲಿ ನೀರ್‌ಗೆ ಬರವುಟ್ಟು ತ ಗೊತ್ತಾದೆ. ಆಗ ಅಗಸ್ತ್ಯ ಲೋಪಾಮುದ್ರೆನೊಟಿಗೆ ನೀರ್‌ನ ರೂಪ ತಳ್ದ್ ಕಮಂಡಲಲಿರಿಕೆ ಕೇಳಿಕಂಡವೆ. ಲೋಪಾಮುದ್ರೆ ಗಂಡ ಹೇಳ್ದಂಗೆ ಮಾಡ್ದೆ. ಅಗಸ್ತ್ಯರ್ ಕಮಂಡಲ ಹಿಡ್ಕಂಡ್ ಸಹ್ಯಪರ್‌ವತಶ್ರೇಣಿನ ಬ್ರಹ್ಮಗಿರಿಗೆ ಬಂದವೆ.

ಬ್ರಹ್ಮ ದೇವ್ರ್ ಆ ಬೆಟ್ಟಲಿ ತಪಸ್ಸ್ ಮಾಡ್ದರ್‌ಂದಾಗಿ ಅದ್ಕೆ ಬ್ರಹ್ಮಗಿರಿಂತೇಳಿ ಹೆಸ್ರ್ ಬಂದದ್. ಈ ಜಾಗೆಲಿ ವಿಷ್ಣು ನೆಲ್ಲಿ (ಅಮಲಕ ಮರ)ಮರದ ರೂಪ ಪಡ್‌ದಿದ್ದೊ. ಆಮಲಕ ಮರದ ರೂಪಲಿದ್ದ ವಿಷ್ಣುನ ಪೂಜಿಸಿಕೆ ಕೈಲಾಸಲಿ ಹರೆತಿದ್ದ ವಿರಜಾ ಹಳ್ಳದ ನೀರ್ ನ ಬ್ರಹ್ಮ ತನ್ನ ಶಂಕಲಿ ತಂದ್ ಅದರ ಮರಕ್ಕೆ ಹಾಕಿಕನ ಅಗಸ್ತ್ಯ ಋಷಿ ಅಲ್ಲಿಗೆ ಬಂದ್ ಕಮಂಡಲನ ಅಲ್ಲಿದ್ದ ದೊಡ್ಡ ಚಪ್ಪಟೆ ಕಲ್ಲ್ ಮೇಲೆ ಇಸಿ ಮೀಯಕೆ ಹೋದವೆ. ಇದೆ ಹೊತ್ತಿಗೆ ಅಲ್ಲಿ ಜೋರ್ ಬಿರ್‌ಗಾಳಿ ಬೀಸಿದೆ, ಆಕನ ಕಲ್ಲ್ ಮೇಲೆ ಇಸಿದ ಕಮಂಡಲ ಕೆಳಗೆ ಬಿದ್ದದೆ. ಆಕನ ಕಮಂಡಲಿ ಇದ್ದ ನೀರ್ ಸೂಸಿ ವಿರಾಜ ಹಳ್ಳದ ನೀರ್ ನನು ಸೇರಿಕಂಡ್ ಕಾವೇರಿ ತೀರ್‌ತಕುಂಡಿಗೆಂದ ಹರ್‌ದದೆ. ಹಳ್ಳ ಆಗಿ ಬಂದ ಲೋಪಮುದ್ರೆ ವಿಷ್ಣು ಮಾಯೆ ಆಗಿರ್‌ಕನ ಕವೇರ ರಾಜ ಅವಳ ಸಾಂಕಿದರ್‌ಂದಾಗಿ ಆ ಹಳ್ಳಕ್ಕೆ ಕಾವೇರಿಂತ ಹೇಳ್‌ವ ಹೆಸ್ರ್ ಬಾತ್.

**ಸ್ಕಂದ ಪುರಾಣಲಿ ಕಾವೇರಿ ಹಳ್ಳದ ಹುಟ್ಟುನ ಬಗ್ಗೆ ಎರ್‌ಡ್ ಕತೆ ಉಟ್ಟು. ಸುರುದ್ :** ಭಾರತದ ನೊಡುಲಿ ಇರ್‌ವ ವಿಂದ್ಯಾ ಪರ್‌ವತ ಒಮ್ಮೆ ಸೂರ್‌ಯನಸ್ಟ್ ಎತ್ತರ ಬೇಕುಂತೇಳಿ ಬೆಳೆತ ಹೋತ್. ಸೂರ್‌ಯ ಮತ್ತೆ ನಕ್ಷತ್ರಗಳ ದಾರಿಗೂ ಅಡ್ಡ ಬಾತ್. ಆಕನ ಅವ್‌ಗಳ ಬೊಳ್ಪುಗೂ ಸಂಕಟ ಬಾತ್. ಪರ್‌ವತದ ಈ ಬೆಳವಣಿಗೆನ ತಡ್ದ್ ತಗ್ಗ್‌ಸಿಕಾಗಿ ದೇವ್ರ್ ಗ ಎಲ್ಲಾ ಅಗಸ್ತ್ಯ ನ ಉಪಕಾರ ಬೇಡುವೆ. ಅದ್ಕೆ ಅಗಸ್ತ್ಯ ಒಪ್ಪಿ, ಅದ್ಕೆ ಬೇಕಾದ ಸಕ್ತಿನ ಕೊಡೊಕುಂತೇಳಿ ಈಶ್ವರನ ಬೇಡಕಂಡ್ ತಪಸ್ಸ್ ಮಾಡಿಕಂಕನ ಈಶ್ವರ ದೇರ ಕೃಪೆ ಸಿಕ್ಕಿದೆ. ಅಗಸ್ತ್ಯ ಋಷಿಗೆ ಇಸ್ಟಬಂದಲ್ಲಿ ದೇವ್ರ ಪೂಜೆ ಮಾಡಿಕೆ ಯಾಗೋಳ್ ಅಂವನೊಟ್ಟಿಗೆ




ನೀರ್ ಇರ್ ವಂಗೆ ವರ ಕೊಟ್ಟ್ ಅಂವನ ಕಮಂಡಲಲಿ ಇರೊಕುಂತ ಕೈಲಾಸಪರ್ವತಲಿ ಹರೆವ ಕಾವೇರಿಗೆ ಹೇಳ್ದೆ. ಆಗ ಕಾವೇರಿ ಅಗಸ್ತ್ಯ ನ ಕಮಂಡಲ ಸೇರ್‌ದೆ. ಅಗಸ್ತ್ಯ ಅದರ ಹಿಡ್ಕಂಡ್ ಹಿಮಾಲಯಂದ ಹೊರ್ಟ್ ಭಾರತಕ್ಕೆ ಬಾಕನ ವಿಂಧ್ಯ ಪರ್ವತ ಸಿಕ್ಕಿ ಬಕ್ತಿಂದ ನಮಿಸಿದೆ. ಆಗ ಅಗಸ್ತ್ಯ ನಂಗೆ ದಕ್ಷಿಣ ಭಾರತಕ್ಕೆ ಹೋಕೆ ಇರ್‌ದಂದಾಗಿ ತಾನ್ ಹಿಂದಕ್ಕೆ ಬಾಕನ ಮುಟ್ಟ ಲೇಲೆ ಎದ್ರದೆ ನಮಸ್ಕಾರ ಮಾಡ್ವ ಸ್ತಿತಿಲೇ ಇರೊಕುಂತೇಳಿ ವಿಂಧ್ಯ ಪರ್ವತದೊಟ್ಟಿಗೆ ಹೇಳಿ ದಕ್ಷಿಣಭಾರತಕ್ಕೆ ಹೊರ್ಟದೆ. ಅದಾಗಿ ಉತ್ತರ ಭಾರತಕೆ ಬಾದೇ ಇಲ್ಲೆ. ಇದರ್‌ಂದಾಗಿ ವಿಂಧ್ಯ ಪರ್ವತ ಅದೇ ಸ್ತಿತಿಲೇ ಇದ್ದದೆ ತ ಪುರಾಣಲಿ ಹೇಳ್ಯೊಳ. ಅಗಸ್ತ್ಯ ದಕ್ಷಿಣ ಭಾರತಲಿ ಸಹ್ಯ ಪರ್ವತದ ಬ್ರಹ್ಮಗಿರಿಗೆ ಬಂದ್ ಅಲ್ಲಿ ತಪಸ್ಸ್ ಮಾಡ್ತಿತ್ತ್. ಆ ಹೊತ್ತ್‌ಲಿ ಸೂರಪದ್ಮಂತೇಳ್ವ ಒಬ್ಬ ರಕ್ಕಸ ತನ್ನ ತಪಶ್ಯಕ್ತಿಂದ ಅಲ್ಲಿ ಮಳೆ ಬೀಳ್ದರ ತೊಪ್ಪುಸಿದೆ. ಇದರ್‌ಂದಾಗಿ ಇಂದ್ರಂಗೆ ಸಂಕಟ ಬಂದದೆ. ದಕ್ಷಿಣ ದೇಶಲಿ ಬೇಕಾದಸ್ಟ್ ನೀರ್ ಇರ್‌ವಂಗೆ ಮಾಡೊಕುಂತ ಗಣಪತಿನ ಬೇಡಿಕಂದೆ. ಗಣಪತಿ ಕಕ್ಕೆ ರೂಪಲಿ ಬಂದ್ ಅಗಸ್ತ್ಯ ನ ಹಲ್ಕಲೆ ಇಸಿಕಂಡ್ ಇದ್ದ ಕಮಂಡಲನ ಮೊಗ್ಚಿ ಹಾಕಿದೆ. ಆಗ ಕಾವೇರಿ ಅಲ್ಲಿಂದ ಹರ್‌ದದೆ.

**ಸ್ಕಂದಪುರಾಣಲಿ ಕಾವೇರಿ ಬಗ್ಗೆ ಇರ್‌ವ ಎರ್‌ಡನೆ ಕತೆ :** ಮಕ್ಕ ಇಲ್ಲದ ಕವೇರ ಮುನಿ ನಂಗೆ ಮಕ್ಕ ಆಕುಂತೇಳಿ ಬ್ರಹ್ಮಗಿರಿಲಿ ಬ್ರಹ್ಮನ ಬೇಡಿಕಂಕೆ ತಪಸ್ಸ್ ಮಾಡ್ದೆ. ಆಗ ಬ್ರಹ್ಮ ಅಂವನ ಬಕ್ತಿಗೆ ಮೆಚ್ಚಿ ತನ್ನ ಸಾಕ್ ಮಗಳಾದ ಲೋಪಾಮುದ್ರೆನ ಅವಂಗೆ ಕೊಟ್ಟದೆ. ಅಂದ್‌ಂದ ಲೋಪಾಮುದ್ರೆ ಕವೇರನ ಮಗ ಕಾವೇರಿಂತೇಳಿ ಕರ್‌ಸಿಕಂಡದೆ. ಕಾವೇರಿ ತನ್ನ ಸಾಕ್ ಅಪ್ಪಂಗೆ ಮೋಕ್ಷ ಆಕುಂತೇಳಿ ಬಯಸಿ ಹಳ್ಳ ಆಗಿ ಹರೆಕು ಮತ್ತೆ ತನ್ನಲ್ಲಿ ಮೀಯೊವು ಪಾಪಗಳ್ಳಂದ ಮುಕ್ತಿ ಪಡೆಕು ತ ವರ ಕೊಡೊಕುಂತೇಳಿ ಬ್ರಹ್ಮಗಿರಿಲಿ ಬ್ರಹ್ಮನ ತಪಸ್ಸ್ ಮಾಡ್ದೆ. ಬ್ರಹ್ಮ ಅವಳ ಬಕ್ತಿ ಮೆಚ್ಚಿ ಅವ್ಳ್ ಕೇಳ್ದ ವರ ಕೊಟ್ಟದೆ.

ಅವ್ಳ್ ಬ್ರಹ್ಮಗಿರಿಲಿ ತಪಸ್ಸ್ ಮಾಡಿಕಂಡ್ ಇರ್‌ಕನ ಅಲ್ಲಿಗೆ ಅಗಸ್ತ್ಯ ಋಷಿ ಅಲ್ಲಿಗೆ ಬಂದ್ ತನ್ನ ಮೊದ್ವೆ ಆಕುಂತೇಳ್ದೆ. ಅವ್ಳಿಗೆ ಹಳ್ಳ ಆಗಿ ಹುಟ್ಟಿ ಪಾಪಗಳ ತೊಳೆಕುಂತೇಳ್ವ ಆಸೆ ಹೆಚ್ಚಿದ್ದರೂ ಅಗಸ್ತ್ಯನ ಬೇಡಿಕೆನ ಕಡೆಗಣಿಸಿಕೆ ಆಗದೆ ಅಂವನ ಮೊದ್ವೆ ಆಕೆ ಒಂದ್ ಷರತ್‌ನ ಮೇಲೆ ಒಪ್ಪಿದೆ. ಮೊದ್ವೆ ಆದ ಮೇಲೆ ಅವಳೊಟ್ಟಿಗೆ ಯೋಗೊಳ್ ಇರೊಕು ಅವಳ ಒಬ್ಬಳನೆ ಬುಡಿಕಾಗದ್ ಇದ್ರ ತಪ್ಪಿರೆ ಹಳ್ಳ ಆಗಿ ಹರ್‌ದ್ ಹೋಕೆ ಅವ್ಳಿಗೆ ಅವಕಾಶ ಕೊಡೊಕುಂತೇಳಿ ಷರತ್ ಹಾಕಿದೆ. ಅಗಸ್ತ್ಯ ಇದ್ಕೊಪ್ಪಿ ಅವ್ರ ಮೊದ್ವೆ ಆದೆ. ನೀರ್ ನ ರೂಪಲಿ ಕಾವೇರಿ ಇದ್ದ ಕಮಂಡಲನ ಅಗಸ್ತ್ಯ ಒಮ್ಮೆ ಶಿಸ್ಯರ ಕೈಲಿ ಕೊಟ್ಟ್ ಕನ್ನಿಕಾನದಿಗೆ ಸಂಧ್ಯೋಪಾಸನೆಗೆ ಹೋಕನ, ಅಗಸ್ತ್ಯ ನಂಗೆ ಕೊಟ್ಟ ಮಾತ್‌ಗೆ ತಪ್ಪಿತ್‌ಂತೇಳಿ ಕಾವೇರಿ ಕಮಂಡಲಂದ ಬ್ರಹ್ಮಗಿರಿ ನ ತೀರ್‌ತಕುಂಡಿಗೆಗೆ ಹಾರಿ ಅಲ್ಲಿಂದ ಹಳ್ಳ ಆಗಿ ಹರ್‌ದದೆ. ಆಗ ಅಗಸ್ತ್ಯನ ಶಿಸ್ಯರ್ ಅವುಳ್ ಹಳ್ಳ ಆಗಿ ಹರೆದರ ತಡ್ಡವೆ. ಅವುಳ್ ತೀರ್‌ತಕುಂಡಿಗೆನ ಮುಂದೆ ಇರ್‌ವ ತೀರ್‌ತಕೊಳದ ಬಲಬಾಗಲಿ ಇಳಿಜಾರ್‌ಲಿ ಕಲ್ಲ್‌ಬಂಡೆನ ಅಡಿಬಾಗಲಿ ಹರ್‌ದ್ ಕೆಳಗೆ ಕಾಣಿಸಿಕಂಡದೆ. ಅಲ್ಲಿಂದ ಭಾಗಮಂಡಲಕ್ಷೇತ್ರ ಎತ್ತಿಕನ ಸುರುನೆ ಉಪನದಿ ಕನ್ನಿಕ ಕಾವೇರಿನ ಸೇರಿಕಂಡದೆ. ತನ್ನ ಹೆಣ್ಣ್ ನಂಗೆ ಹೇಳದೆ ಹಳ್ಳ ಆಗಿ ಹರ್‌ದದಕ್ಕೆ ಅಗಸ್ತ್ಯಂಗೆ ಕೋಪ ಬಂದದೆ. ಆಗ ಬ್ರಹ್ಮ ಅಲ್ಲಿಗೆ ಬಂದ್ ಅವಂಗೆ ಸಮದಾನ ಮಾಡ್ದೆ. ಆಮೇಲೆ ಅಗಸ್ತ್ಯ ಬ್ರಹ್ಮ ಗಿರಿಂದ ಸುಮಾರ್ 20ಮೈಲಿ ದೂರಲಿ ಇರ್‌ವ ಬಲಮುರಿಲಿ ಕಾವೇರಿನ ತಡ್ದ್ ತನ್ನ ಹೆಣ್ಣ್ ಆಗಿ ಇರ್‌ವಂಗೆ ಕೇಳಿಕಂದೆ. ಈಶ್ವರನ ವರದಂಗೆ ಒಂದ್ ರೂಪೊಲಿ ಅಗಸ್ತ್ಯನ ಹೆಣ್ಣಾಗಿದ್ದ್ ಇನ್ನೊಂದ್ ರೂಪೊಲಿ ಹಳ್ಳ ಆಗಿ ಹರೆಕೆ ಕಾವೇರಿ ಒಪ್ಪಿದೆ.. ಮೂಡ ಸಮುದ್ರನ ಸೇರೋವರೆಗೆ ದಾರಿಲಿ ಕಾವೇರಿ ಯಾವ ಯಾವ ಜಾಗೆಗಳ ಮತ್ತೆ ಕ್ಷೇತ್ರಗಳ ಎದ್ರ್ ಲಿ ಹರ್‌ದ್


ಹಾರಂಗಿ ಆಣೆಕಟ್ಟ್

ಹೋಕುಂತೇಳಿ ಅಗಸ್ತ್ಯ ಅವ್ಳಿಗೆ ಹೇಳ್ದೆ. ಕಾವೇರಿ ದೇವತೆನ ಕೊಡ್ಗರ್ ತಮ್ಮ ಕುಲದೇವತೆಂತೇಳಿ ನಂಬಿ ಪೂಜೆ ಮಾಡ್ವೆ. ಕಾವೇರಿ ದೇವತೆನ ವರಂದ ಕೊಡಗ್ ಲಿ ವ್ಯವಸಾಯಕ್ಕೆ ಬೇಕಾದ ಮಳೆ ಆದೆಂತೇಳಿ ಮತ್ತೆ ಬತ್ತದ ಪಸಲ್ ಲಾಯ್ಕ್ ಬಂದದೆಂತೇಳಿ ಕೊಡಗ್ ನ ಜೆನ ನಂಬುವೆ.

**ಕಾವೇರಿ ಪುಣ್ಯಕ್ಷೇತ್ರಗ :** ಹುಟ್ಟಿದಲ್ಲಿಂದ ಸಂಗಮದವರ್‌ಗೂ ಕಾವೇರಿ ದಂಡೆ ಮೇಲೆ ತುಂಬ ಪುಣ್ಯಕ್ಷೇತ್ರಗ ಒಳ. ಅದರ್‌ಲಿ ಸುರುದು ತಲಕಾವೇರಿ. ವರ್‌ಸ ಇಡೀ ಕಾವೇರಿ ನೀರ್‌ಲಿ ಮೀದ್ ಪೂಜೆ ಮಾಡ್ದು ಪುಣ್ಯಂತೇಳಿ ಜೆನರ್‌ಲಿ ನಂಬಿಕೆ ಇದ್ದರೂ ತುಲಾ ಸಂಕ್ರಮಣದ ದಿನ ಕಾವೇರಿ ನೀರ್‌ಲಿ ಮೀಯೊದರ್‌ಂದ ಹೆಚ್ಚ್ ಪುಣ್ಯ ಸಿಕ್ಕಿದೆಂತೇಳ್ದ್ ಹಿಂದೆಂದಲು ಜೆನರ ಮೊಯಿಂಸ್‌ಲಿ ಇರ್‌ವ ನಂಬಿಕೆ. ತುಲಾಸಂಕ್ರಮಣದಂದ್ ಕಾವೇರಿ ತೀರ್‌ತ ಆ ಮುಹೂರ್‌ತಕೆ ಸರಿಯಾಗಿ

ತೀರ್‌ತ ಕುಂಡಿಗೆಲಿ ಉಕ್ಕಿ ಹರ್‌ದದೆ. ಆ ಹೊತ್ತುಗೆ ಸರಿಯಾಗಿ ತೀರ್‌ತಕುಂಡಿಗೆನ ಎರ್‌ಡ್ ಕಡೆ ನಿತ್ತ್ ಕಂಡ್ ಇದ್ದ ಬಟ್ರ್‌ಗ ತಾಮ್ರದ ಕೊಡ್ಪಾಣಲಿ ತೀರ್‌ತಕುಂಡಿಗೆನ ತೀರ್‌ತ ತುಂಬುಸಿಕಂಡ್ ಅದರ ಎದ್ರ್‌ನ ಕೆರೆಲಿ ಮೀಯಕೆ ಇಳ್ದ ಜೆನರ ಮೇಲೆ ಚೋಂಪುವೆ. ಅದಾಗಿ ಆ ದಿನ ಅಲ್ಲಿ ನೆರ್‌ದಿದ್ದ ಎಲ್ಲವೂ ತೀರ್‌ತ ಮೀದವೆ. ತನ್ನಲ್ಲಿ ವರ್‌ಸ ಇಡೀ ಮೀವ ಬಕ್ತರ್‌ಂದ ಬಂದ ಪಾಪನ ತೊಳ್ಕಂಕಾಗಿ ಗಂಗೆ ಕಾವೇರಿಗೆ ಬಂದ್ ಆ ದಿನ ಮೀದದೆಂತೇಳ್ದು ಜೆನರ ನಂಬಿಕೆ. ಕೊಡಗ್ ಲಿ ಕಾವೇರಿ ದಂಡೆ ಮೇಲೆ ಇರ್‌ವ ಒಳ್ದ ಪವಿತ್ರ ಕ್ಷೇತ್ರಗ ಯಾವುದೆಲ್ಲಂತೇಳ್ರೆ ಭಾಗಮಂಡಲ, ಹರಿಶ್ಚಂದ್ರ, ಬಲಮುರಿ, ಗುಹೆ ಮತ್ತೆ ರಾಮಸ್ವಾಮಿ ಕಣಿವೆ. ಹಾಸನ ಜಿಲ್ಲೆನ ರಾಮನಾತಪುರ ಒಂದ್ ಹೆಸ್ರ್‌ವಾಸಿ ಯಾತ್ರೆಜಾಗೆ. ಚುಂಚನಕಟ್ಟೆಲಿರುವ ಕಾವೇರಿನ ಜಲಪಾತ ಕಣ್ಣಿಗೆ ಇಂಪ್ ಕೊಡ್‌ವಂತದ್. ದಂಡೆ ಮೇಲೆ ಇರ್‌ವ ಶ್ರೀರಾಮ ದೇಸ್ತಾನನು ತುಂಬಾ ಹೆಸ್ರ್ ಪಡ್ದಂತದ್. ಇಲ್ಲಿ ಮತ್ತೆ ರಾಮನಾತಪುರಲಿ ವರ್ಷಕ್ಕೊಮ್ಮೆ ಜಾತ್ರೆ ನಡ್ದದೆ. ಇನ್ನ್ ಕೃಷ್ಣರಾಜಸಾಗರದ ಬೃಂದಾವನನಂತೂ ಬಣ್ಣಿಸಿಕೆ ಸಾದ್ಯ ಇಲ್ಲೆ. ಅಸ್ಟ್ ಲಾಯ್ಕ್ ಉಟ್ಟ್. ಅದರ ನೋಡಿಕೆ ಎರ್‌ಡ್ ಕಣ್ಣ್ ಸಾಲದ್. ಇಲ್ಲಿನ ಕಟ್ಟೆ ಹಕ್ಕಲೆ ಕಾವೇರಿನ ಪ್ರತಿಮೆ ಮಾಡಿ ಇಸ್ರೊಳ. ಶ್ರೀರಂಗಪಟ್ಟಣಕೆ ಹಕ್ಕಲೆ ಹನಿಸ್ ಮೇಲೆ ನೊಡುಗುಡ್ಡೆಂತೇಳಿ ಉಟ್ಟ್. ಅದ್ ಹಕ್ಕಿಗಳಿಗೆ ಹೆಸ್ರ್‌ಹೋದಂತದ್. ಅದ್ ರಂಗನತಿಟ್ಟ್ ಪಕ್ಷಿದಾಮ ತೇಳಿದೆ ಪ್ರಸಿದ್ದಿ ಪಡ್ದುಟು. ಇಲ್ಲಿಗೆ ವಿಸ್ವದ ಬೇರೆಬೇರೆ ಕಡೆಗಳ್‌ಂದ ಬೇರೆ ಬೇರೆ ಜಾತಿನ ಹಕ್ಕಿಗ ಬಂದವೆ.

ಶ್ರೀರಂಗಪಟ್ಟಣದ ಹಕ್ಕಲೆ ಕವಲ್ ಒಡೆವ ಕಾವೇರಿನ ಒಂದ್ ಬಾಗ ಹನಿಸ್ ದೂರ ಪೊಡ್‌ವಾಬಿಮುಕ ಮಾಡಿ ಹರ್‌ದದೆ. ಈ ಕಾರಣಂದಾಗಿ ಈ ಬಾಗ ಹಿಂದುಗಳಿಗೆ ಸುಬಕಾರ್‌ಯಗಳಿಗೂ ಬೊಜ್ಜ ಮಾಡಿಕೆನೂ ಅದ್ ಹೇಳಿ ಮಾಡ್ಸಿದ ಜಾಗೆ. ಕಾವೇರಿನ ಮೂರ್ ದೊಡ್ಡ ದ್ವೀಪಂಗಳ ಪೈಕಿ ಸುರುದ್ ಶ್ರೀರಂಗಪಟ್ಟಣ. ಇಲ್ಲೂ ಎರ್‌ಡ್‌ನೇ ದ್ವೀಪ ಶಿವಸಮುದ್ರಲೂ, ಮೂರನೆದಾದ ಶ್ರೀರಂಗಂಲೂ ರಂಗನಾತನ ವಿಗ್ರಹಗ ಒಳ. ಶ್ರೀರಂಗಪಟ್ಟಣ ಇತಿಯಾಸಲೇ ಪ್ರಸಿದ್ದಿ ಪಡ್‌ದ ಜಾಗೆ. ತಲಕಾಡ್ ಹಕ್ಕಲೆ ಮಾದವಮಂತ್ರಿಂತೇಳುವ ಅಣೆಕಟ್ಟ್ ಉಟ್ಟು. ಜಾಗೆನು ಹೌದು. ಎದೆಗೇರ್‌ಸಿದ ಬಿಲ್ಲ್‌ನಂಗೆ ಬಾಗಿ ಹರೆವ ಹಳ್ಳಕೆ ಇಲ್ಲೊಂದು ಮಡು ಏರ್‌ಪಟ್ಟುಟು. ಅದ್ಕೆ ಮಾಲಿಂಗಿ ಮಡುಂತೇಳಿ ಕರ್‌ದವೆ. ತಲಕಾಡ್ ಕೂಡ ಇತಿಯಾಸಪ್ರಸಿದ್ದಿ ಪಡ್‌ದ ಜಾಗೆ. ಗಂಗರಸರ್ ಇಲ್ಲಿ ರಾಜ್ಯಬಾರ ಮಾಡಿದ್ದೊಗಡ. ತಲಕಾಡ್‌ನ ಪಂಚಲಿಂಗಗ ಹನ್ನೆರಡುವರ್ಷಕ್ಕೊಮ್ಮೆ ತುಂಬಜೆನರ ಯಾತ್ರಿಕರ ಆಕರ್ಷಿಸಿದೆ.

ಶ್ರೀರಂಗಂದಾಚೆಗೆ ಕಲ್ಲಣೈಲಿ ಚೋಳರಾಜ ಕರಿಕಾಲನ ದೊಡ್ಡ ಪ್ರತಿಮೆ ಉಟ್ಟ್. ಕಾವೇರಿನ ನೀರ್‌ಗಾಗಿ ಉಪಯೋಗಿಸಿಕಂಡ ಸುರುನ ರಾಜ ಇಂವನೆ. ತಿರುಚ್ಚಿರಪ್ಪಳ್ಳಿ ಮತ್ತೆ ತಂಜಾವೂರ್ ಜಿಲ್ಲೆಗಳ್‌ಲಿ ಅಲ್ಲಲ್ಲಿ ಕಲ್ಲ್‌ಲಿ ಕಾವೇರಿಹಳ್ಳಕೆ ಅಣೆಕಟ್ಟು ಕಟ್ಟಿಸಿಟು. ತಿರುಚ್ಚಿರಪ್ಪಳ್ಳಿನ ಒರೈಯೂರ್‌ಂದ ಕಾವೇರಿ ಪೂಂಪಟ್ಟಿನಂಗೆ ತನ್ನ ರಾಜಧಾನಿನ ಬದಲಾಯಿಸಿಕಂತ್. ಅಲ್ಲಿಂದ ಮುಂದೆ ಸಿಕ್ಕವ ಇನ್ನೊಂದ್ ಮುಕ್ಯ ಜಾಗೆಂತೇಳ್ರೆ ಕುಂಬಕೋಣಂ, ಇಲ್ಲೂ ಹನ್ನೆರಡ್ ವರ್ಷಕ್ಕೊಮ್ಮೆ ಜಾತ್ರೆ ನಡ್‌ದದೆ.

ತಂಜಾವೂರಿನಿಂದೀಚೆಗೆ ಸಿಕ್ಕುವ ಇನ್ನೊಂದ್ ಪವಿತ್ರ ಜಾಗೆ ತಿರುವಾರೂರು, ಮಯೂರಂ ಇನ್ನೊಂದ್, ತಿರುವೈಯಾರ್ ತ್ಯಾಗರಾಜರ ತಪೋಬೂಮಿ. ಅಲ್ಲಿ ಇವರ ಸಮಾದಿ ಉಟ್ಟು. ಪ್ರತಿವರ್‌ಸನು ಇವರ ಪುಣ್ಯತಿತಿನಂದ್ ದಕ್ಷಿಣದೇಸದ ಸಂಗೀತಪ್ರೇಮಿಗ ಇಲ್ಲಿ ಸೇರಿ ತ್ಯಾಗರಾಜರನ ಆರಾದನೆ ಮಾಡ್ವೆ. ಅದಾಗಿ ಪವಿತ್ರ ಜಾಗೆ ಚಿದಂಬರಂ ಇಲ್ಲಿ ಒಂದೇ ಗುಡಿಲಿ ಶಿವ, ವಿಷ್ಣು ಇಬ್ಬೊರಿಗೂ ಪೂಜೆ ಮಾಡ್‌ವೆ. ಕಾವೇರಿ ಕಡಲ್‌ಲಿ ಕೂಡುವ ಜಾಗೆನು ಪವಿತ್ರನೆ. ಅದ್ ಹೆಸ್ರ್‌ವಾಸಿಯಾದ ಕಾವೇರಿ ಪೂಂಪಟ್ಟಿನಂ. **(ಡಿ.ಎನ್.ಕೆ.; ಜಿ.ಕೆ.ಜಿ.)**

**ಕಾಸರಗೋಡು :** ಕಾಸರಗೋಡು ಕೇರಳ ರಾಜ್ಯಲಿರ್‌ವ ಒಂದ್ ಜಿಲ್ಲೆ. ಈ ಜಾಗೆ ಪಯಸ್ವಿನಿ ಹಳ್ಳ ಮತ್ತೆ ಅರಬ್ಬಿ ಕಡಲ್ ಸೇರುವಲ್ಲಿ ಉಟ್ಟು. ಕಾಸರಗೋಡು ಜಿಲ್ಲೆ ಕೇರಳದ ಬಡಗ್‌ನ ಕೊಡಿ ಬಾಗಲಿ ಇರ್‌ವಂತದ್. ಈ ಜಿಲ್ಲೆನ ವಿಸ್ತೀರ್ಣ 376. 34ಚ. ಮೈ ಉಟ್ಟು. ಕಾಸರಗೋಡುನ ಬಡ್ಗ ಮತ್ತೆ ಮೂಡಲಿ 'ದಕ್ಷಿಣಕನ್ನಡ ಜಿಲ್ಲೆ', ತೆಂಕಲಿ ಹೊಸದುರ್‌ಗ (ಕಾಞಂಗಾಡ್) ತಾಲೂಕು, ಪಡ್ವ ಬಾಗಲಿ ಅರಬ್ಬಿ ಕಡಲ್ ಉಟ್ಟು. ಇದ್ ಕಾಸರಗೋಡುನ ಸುತ್ತ ಇರ್‌ವಂತದ್. ಕಾಸರಗೋಡು ಜಿಲ್ಲೆ ಸಮತಟ್ಟುನ ಜಾಗೆ ಅಲ್ಲ ಇದ್ ಎತ್ತರ ತೆಗ್ಗ್‌ನ ಜಾಗೆ. ಇಲ್ಲಿ ಕಡಲ್‌ದ ಕರೆಲಿ ಇರ್‌ವ ದೈ ಮರಗ ಕಲ್ಲ್‌ನ ಗುಡ್ಡೆಗ(ಲ್ಯಾಟರೈಟ್) ಮೂಡಕೆ ಹೋಕನ ಎತ್ತರ ಆಕಂಡು ಹೋದೆ.. ಸಣ್ಣ ಸಣ್ಣ ಕಡ್‌ಇ ಹಳ್ಳಗ, ಅಬ್ಬಿಗ ಇರ್‌ವ ಕಾಸರಗೋಡುಲಿ ಅಡ್ಕೆ, ಬತ್ತ, ಕಾಯಿ, ಬೀಜ, ಇಂತದರ ಬೆಳ್ಯಕೆ ಎಲ್ಲಾ ಅನುಕೂಲ ಇರ್‌ವ ಫಸಲು ತುಂಬಿದ ಬೂಮಿ ಉಟ್ಟು. ಕಡಲ್ ಕರೆಂದ ಮೂಡಕೆ ಸುಮಾರು ಇಪ್ಪತ್ತು ಮೈಲಿ ಹೋಕನ ಅಲ್ಲಲ್ಲಿ ಹಿಡ್ಮ ಕಾಡ್‌ಗ ಕಾಂಬಕೆ ಸಿಕ್ಕಿದೆ. ಕಾಸರಗೋಡು ಜಿಲ್ಲೆನ ಕನಿಸ್ಟ ಉಸ್ಣತೆ 160ಸೆಂ. –26.70ಸೆಂ. ಗರಿಸ್ಟ ಉಸ್ಣತೆ 24.60 ಸೆಂ. –350ಸೆಂ. ಉಟ್ಟು. ಇಲ್ಲಿ ಜೂನ್ ತಿಂಗಳ್ನ ಸುರುಂದ ಹಿಡ್ದು ಐದು ತಿಂಗ ಮಳೆಗಾಲ ಆಗಿದ್ದದೆ.

ಇದ್ ಪೊಡ್‌ವ ಗಟ್ಟದ ನೊಡುಲಿ ಹುಟ್ಟಿ ಚಂದ್ರಗಿರಿನ ಹಕ್ಕಲೆ ಅರಬ್ಬಿ ಕಡಲ್‌ನ ಸೇರುವ ಪಯಸ್ವಿನಿ ಹಳ್ಳ,ಈ ತಾಲ್ಲೂಕುನ ಹಳ್ಳಂಗಳ್ಲಿ ಉದ್ದ ಮತ್ತೆ ಅಗಲದ ಹಳ್ಳ ಆಗುಟು. ಇದರೊಟ್ಟಿಗೆ ಮೊಗ್ರಾಲ್, ಕುಂಬಳೆ, ಸಿರಿಯ ಮತ್ತೆ ಉಪ್ಪಳ ಹಳ್ಳಗ ಸ ಒಳ. ಈ ತಾಲ್ಲೂಕುನ ಮುಕ್ಯ ಬೆಳೆ ಬತ್ತ. ತಗ್ಗುನ ಬೊಯ್ಲ್‌ನ ಜಾಗೆಲಿ ವರ್‌ಸಲಿ ಮೂರ್ ಸರ್‌ತಿ




ಬತ್ತದ ಬೆಳೆಗ ಬೆಳ್ದವೆ. ಅಡ್ಕೆ ತೋಟಗ ಕೂಡ ಮುಖ್ಯ ಬೆಳೆನೆ. ಇಲ್ಲಿ 8000 ಎಕ್ಕರೆನಸ್ಟು ಅಡಿಕೆ ತೋಟಗ ಒಳ. ಬೀಜ ಮತ್ತೆ ಒಳ್ಳೆ ಮೆಣ್ಸ್ ಇಲ್ಲಿನ ಬೊದ್ಕುನ ಬೆಳೆಗ. ಕಡಲ್‌ದ ಕರೆನ ಜಾಗೆಲಿ ಚಾಳೆಗಳ ಜಾಸ್ತಿ ಬೆಳ್ದವೆ. ಕಾಸರಗೋಡುಂದ ಇಪ್ಪತ್ತೆರಡ್ ಮೈಲಿ ದೂರಲಿ ಕೇಂದ್ರೀಯ ಪ್ಲಾಂಟೇಶನ್ ಸಂಶೋದನಾ ಸಂಸ್ತೆ ಉಟ್ಟು. ಭಾರತದ ಚಾಳೆ, ಅಡ್ಕೆ, ಕೊಕ್ಕೊ ಮತ್ತೆ ಬೀಜದ ಸಂಶೋದನೆಗೆ ಸಮ್ಮಂದಪಟ್ಟ ಪ್ರದಾನ ಕೇಂದ್ರ ಇದ್. ಹಿರೇಹಳ್ಳಿ (ಮೈಸೂರು), ಪೀಚಿ (ಕೇರಳ), ಪಲೋಡ್ (ಕೇರಳ), ಮೋತಿನಗರ (ಪೊಡ್‌ವ ಬಂಗಾಳ), ಕಾಹಿಕುಚಿ (ಅಸ್ಸಾಂ) ಇದ್ ಈ ಕೇಂದ್ರದ ಶಾಕೆಗ. ಜಗತ್ತ್‌ನ ಬೇರೆ ಬೇರೆ ಕಡೆಂದ ತರ್‌ಸಿ ಪ್ರಯೋಗ ಮಾಡ್ದ ನಲ್ಲತ್ತೈದ್ ಜಾತಿನ ಚಾಳೆ ಮರಗಳ ನರ್‌ಸರಿನೂ ಇಲ್ಲಿ ಉಟ್ಟು.

ಕಾಸರಗೋಡು ಸುಮಾರ್ ಜಾತಿಗ, ಮತ, ದರ್ಮಗ ಬೇರೆ ಬೇರೆ ಬಾಸೆಗ, ಸಂಸ್ಕೃತಿಗ ಇರ್‌ವ ಪೊರ್‌ಲುನ ಜಾಗೆ. ಈ ತಾಲ್ಲೂಕುನ ಜೆನಸಂಕೆ 3, 44, 931(1970 ಏಪ್ರಿಲ್–ಮೇ ನ ಅಂದಾಜು)


ಬೇಕಲ್ ಕೋಟೆ

ಹವ್ಯಕ ಬಟ್ರುಗ (ಕನ್ನಡ), ಶಿವಳ್ಳಿ ಬಟ್ರುಗ (ತುಳು), ಕೋಟದವು (ಕನ್ನಡಗ,)ಗೌಡ್ರುಗ (ಅರೆಬಾಸೆ), ಕರ್‌ಹಾಡರ್‌ಗ (ಮರಾಟಿ), ಸ್ತಾನಿಕರ್‌ಗ (ತುಳು), ಸಾರಸ್ವತರ್‌ಗ (ಕೊಂಕಣಿ), ಗೌಡಸಾರಸ್ವತರ್‌ಗ (ಕೊಂಕಣಿ), ಚೆನಿವಾರರ್ (ಕನ್ನಡ), ಬಂಟರ್‌ಗ (ತುಳು), ಬಂಟ ಅತ್ವಾ ನಾಡವರ್‌ಗ (ಕನ್ನಡ), ಬಿಲ್ಲವರ್‌ಗ (ತುಳು–ಮಲಯಾಳ), ನಾಯರ್‌ಗ (ಮಲಯಾಳ), ಗಾಣಿಗರ್‌ಗ (ಕನ್ನಡ–ಮಲಯಾಳ), ಕುಂಬಾರರ್‌ಗ (ತುಳು–ಮಲಯಾಳ), ಮರಾಟಿಗ (ಮರಾಟಿ–ಕನ್ನಡ), ಕೊರಗ (ತುಳು), ಹರಿಜೆನ (ತುಳು), ಮಾದಿಗರ (ಕನ್ನಡ), ಬೈರ (ಕನ್ನಡ), ಮಾಪ್ಲೆಗ (ಮಲಯಾಳ), ತುರುಕರ್‌ಗ (ಹಿಂದೂಸ್ತಾನಿ), ಕ್ರೈಸ್ತರ್‌ಲಿ ಪ್ರಾಟೆಸ್ಟಂಟರ (ಕನ್ನಡ–ತುಳು), ಕ್ಯಾತೊಲಿಕರ್‌ಗ (ಕೊಂಕಣಿ)– ಅವರವರ ಜಾತಿಗನುಗುಣ ಆಗಿ ಅವರವರ ಬಾಸೆ ಮಾತಾಡಿಕಂಡವೆ. ಆಚಾರಿ ಕೆಲ್ಸ, ಚಿನ್ನಬೆಳ್ಳಿ ಕೆಲ್ಸ ಕಬ್ಬಿಣದ ಕೆಲ್ಸ, ಹೊಲಿಗೆ, ಮಡ್ಕೆ ಮಾಡ್‌ದು, ಬೀಡಿ ಕಟ್ಟುದು, ಮೊಂದ್ರಿ ಮೆಡಿದು. ಇಂತ ಸಣ್ಣ ಸಣ್ಣ ವ್ಯಾಪಾರ ಮಾಡಿಕಂಡ್ ಬೊದ್ಕುಕೆ ಗೈಯೊವವರ ಸಂಕೆ ಇಲ್ಲಿ ಜಾಸ್ತಿ. ಬೀಜದ ಫ್ಯಾಕ್ಟರಿ, ಗರಗಸದ ಫ್ಯಾಕ್ಟರಿ, ಮೀನು ಸಾಂಕುದು (ಮತ್ಸೋದ್ಯಮ), ವಾಹನಗಳ ರಿಪೇರಿ, ಇಂತ ಗೈಮೆ ಕೂಡ ಇಲ್ಲಿ ಉಟ್ಟು.

ಈ ತಾಲ್ಲೂಕುನ ದೊಡ್ಡ ಮಾರ್‌ಗದ ಉದ್ದ ತೆಂಕಂದ ಬಡ್ಗಕೆ 30 ಮೈಲಿ. ಕಾಸರಗೋಡುಂದ ಮೂಡಕೆ ಜಾಲ್ಸೂರು ಮಾರ್‌ಗದ ಉದ್ದ 30 ಮೈಲಿ. ಕಾಸರಗೋಡುಂದ ಈಶಾನ್ಯದ ಕಡೆ ಪುತ್ತೂರುಗೆ ಹೋಕನ ಮಾರ್‌ಗದ ಉದ್ದ 21 ಮೈಲಿ ದೂರ. ಒಳ್ದವು ಸಣ್ಣಸಣ್ಣ ಮಾರ್‌ಗಗ ದಕ್ಷಿಣ ರೈಲ್ವೆನ ಬ್ರಾಂಡ್ ಗೇಜ್ ಮಾರ್‌ಗ ಈ ತಾಲ್ಲೂಕುಂದ ಕರಾವಳಿನ ಕಡೆಗೆ 22 ಮೈಲಿಗಳಸ್ಟ್ ದೂರ ದಾಟಿ ಹೋದೆ.

**ಇತಿಯಾಸ :** ದಕ್ಷಿಣಕನ್ನಡಲಿ ಮೆಡ್ರಾಸ್ ಸರ್‌ಕಾರದ ಆಡೆಳ್ತ ಇರಿಕನ ಹೊಸದುರ್‌ಗನೂ ಸೇರಿ ಈ ತಾಲ್ಲೂಕು ದಕ್ಷಿಣಕನ್ನಡ ಜಿಲ್ಲೆನ ಒಂದ್ ಬಾಗ ಆಗಿತ್ತ್. 1956 ರ್‌ಲಿ ಬಾಸೆಗೆ ಸೆರಿಯಾಗಿ ಪಾಲ್‌ಮಾಡಿ ರಾಜ್ಯಗ ಆದ ಮೇಲೆ ಈ ತಾಲ್ಲೂಕು ಕೇರಳ ರಾಜ್ಯಸರ್‌ಕಾರದ ಆಡೆಳ್ತಕ ಒಳಪಟ್ಟತ್. 1957ರ ಜೆನವರಿ 1ರಂದು ಹೊಸದುರ್‌ಗ (ಕಾಞಂಗಾಡು) ಪ್ರತ್ಯೇಕ ತಾಲ್ಲೂಕಾತು. ಕಾಸರಗೋಡು ಜಿಲ್ಲೆಲಿ ಒಂದ್ ಪುರಸಬೆನು ಹದ್ನೆಂಟ್ ಪಂಚಾಯಿತಿನೂ ಉಟ್ಟು. ಕಾಸರಗೋಡು ಜಿಲ್ಲೆಲಿರುವ 134 ಲೋಯರ್ ಪ್ರೈಮರಿ ಶಾಲೆಗ 65 ಅಪ್ಪರ್ ಪ್ರೈಮರಿ ಶಾಲೆಗ 20 ಪ್ರೌಡಶಾಲೆಗ, ಹಾಂಗೆನೆ ಒಂದ್ ಕುರ್‌ಡರ ಶಾಲೆ ಉಟ್ಟು. ಕನ್ನಡ–ಮಲೆಯಾಳಂ ಶಾಲೆಗ ಎರಡೂ ಉಟ್ಟು. ಕನ್ನಡ ಶಾಲೆನ ಸಂಕೆ ಹಞ್ಞ ಹೆಚ್ಚೇ ಉಟ್ಟು. ಒಂದ್ ಉಪಾದ್ಯಾಯರ ಶಿಕ್ಷಣ ಕೇಂದ್ರ ಉಟ್ಟು. ಒಂದ್ ಸಂಸ್ಕೃತ ಕಾಲೇಜೂ ಮತ್ತೆ ಪದವಿ ಕ್ಲಾಸ್ ಮತ್ತೆ ಕನ್ನಡ ಎಂ. ಎ. ಇರ್‌ವ ಒಂದ್ ಸರ್‌ಕಾರಿ ಕಾಲೇಜೂ ಇಲ್ಲಿ ಉಟ್ಟು.

**ಇತಿಯಾಸ, ಸಂಸ್ಕೃತಿಗಳ ಜಾಗೆಗ :** ಕಾಸರಗೋಡು ಸಬ್ದದ ನಿಸ್ಪತ್ತಿನ ಸಾದ್‌ಸಿಕೆ ಬೇಕಾದ ಆದಾರಗ ಸಿಕ್ಕುದು ಕಸ್ಟ. ಕಾಯರ ಮರಗ/ಕಾಸರಕ ಮರಗ ಹೆಚ್ಚಿಗೆ ಇದ್ದ ಕಾರಣ ಕಾಸರಕನ ಕಾಡು ಕಾಸರಗೋಡು ಆತ್‌ಂತ ಅಬಿಪ್ರಾಯ ಉಟ್ಟು. ಕಾಯರ ಮರಂಗ ಈ ಜಾಗೆಲಿ ಈಗನು ಅಲ್ಲಲ್ಲಿ ಕಾಂಬಕೆ ಸಿಕ್ಕಿದೆ. ಕಾಸರಗೋಡುನ ಹೊರವಲಯಲಿ ಕರಂದ ಕಾಡು, ಬಾರಿಕಾಡು (ಬಾಳೆಕಾಡು) ತೇಳ್‌ವ ಜಾಗೆಗ ಈಗನು ಉಟ್ಟು. ಕಾಸರಗೋಡು ಗೆ ಕಾಸಾರಕ್ರೋಡ (ಕೊಳಗಳ ಸಂಗಮ) ಕಾಸರಗೋಡು ಆತುಂತ ಹೇಳ್ದು ಅವರ ವಾದ.

ಪೊಸಡಿಗುಂಪೆನ ಗುಹೆಗ ಈ ಜಾಗೆನ ಇತಿಯಾಸಕ್ಕೆ ಸಮ್ಮಂದಿಸಿದ ಹಾಂಗೆ ಒಂದ್ ಪ್ರಾಚೀನ ಗುಹೆ ಉಟ್ಟು. ಯಜ್ಞಕುಂಡಗ ತ್ರಿಶೂಲಗ ಇರ್‌ವ ಲ್ಯಾಟರೈಟ್ ಕಲ್ಲ್‌ನ ಗುಹೆಗ ಮತ್ಸ್ಯೇಂದ್ರನಾತನ ಕಾಲದ್ ತೇಳಿ ಊಹೆ ಮಾಡ್ಯೋಳ. ಅಡೂರುನ ಹಕ್ಕಲೆ ಇರ್‌ವ ಗುಹೆ ಪೌರಾಣಿಕ

ಹಿನ್ನಲೆ ಇರ್‌ವಂತದ್ದು. ಕಾಸರಗೋಡುನ ಬಟ್ಟಂಬಾರೆ ಗುಡ್ಡೆಲಿ ಪೊಸಡಿಗುಂಪೆನ ಗುಹೆನ ಮಾದರಿಲಿ ಒಂದ್ ಸಣ್ಣ ಗುಹೆ ಕೂಡ ಉಟ್ಟು. ಪೆರ್‌ಲದ ಹಕ್ಕಲೆ ಇರ್‌ವ ಹಿಂದೆನ ಕಾಲದ ಕೋಟೆನ ಹೆಸರ್ ಮಾಯಿಲಕೋಟೆ. ತುಳುನಾಡುನ ಅರಸರ ಆಡಳಿತಕ್ಕೆ ಒಳಪಟ್ಟ ಇಲ್ಲಿನ ಮೂಲನಿವಾಸಿಗ ಆದ ಮಾಯಿಲರ್‌ಗ ಬಲಲಿ ಕಟ್ಟಿದ ಕೋಟೆ ಇದ್.

ಹಂಗಳದ ಕದಂಬರ ರಾಜ ನಾಲ್ಕನೆ ಮಯೂರವರ್ಮ ಸ್ತಾಪನೆ ಮಾಡ್ದ ನಾಲ್ಕ್ ಕೇಂದ್ರಗಳಲ್ಲಿ ಕಾಸರಗೋಡು ಕೇಂದ್ರನೂ ಒಂದ್. ಇದ್ ಕುಂಬಳೆ ಸೀಮೆ ಅತವಾ ಕುಂಬಳೆ ರಾಜ್ಯತೇಳಿ ಕರ್‌ಸಿಕಂಡದೆ... ತುಳುನಾಡುನ ತೆಂಕು ಗಡಿಲ್ಲಿದ್ದ ಕುಂಬಳೆ ರಾಜ್ಯಕೆ ಉತ್ತರಲಿ ಸೀರೆಹೊಳೆ, ತೆಂಕಲಿ ಪಯಸ್ವಿನಿ, ಪಡ್ವಕೆ ಅರಬ್ಬೀ ಕಡಲ್, ಮೂಡಲಿ ಅಡೂರು–ಇವು ಆಗ ಇದರ ಚತುರ್‌ಗಡಿಗ. ಕುಂಬಳೆ ರಾಜಮನೆತನದ ಸ್ತಾಪಕ 4ನೆ ಮಯೂರ ವರ್ಮ. ಇಕ್ಕೇರಿ ಅರಸರ ದ್ರಿಷ್ಟಿ ಕುಂಬಳೆ ರಾಜ್ಯದ ಮೇಲೆ ಬಿದ್ದದ್ ಕ್ರಿ. ಶ. 1500ರ್‌ಲಿ ಆಕನ. ಕೆಳದಿನ ಅರಸ ಸದಾಶಿವನಾಯಕ (1513–1546) ಕಾಸರಗೋಡು ಕೋಟೆನ ಕಟ್ಸ್‌ಸಿ. ತೊಲಗದ ಕಂಬದ (ಗಟ್ಟಿನ ಜಯಸ್ತಂಬನ) ಕಟ್ಟಿದೊ. ಕೋಟೆನ ವಿಸ್ತೀರ್ಣ 5 ಎಕರೆ. ಗೋಡೆಗಳ ಪೂರಾ ಲ್ಯಾಟರೈಟ್ ಅಲ್ಲೊ ಕೆಂಪು ಕಲ್ಲ್‌ಲಿ ಕಟ್ಯೊಳ.ಪಡ್ವದ ಹೆಬ್ಬಾಗ್ಲ್, ಮೂಡಲಿ ಗುಪ್ತದ್ವಾರ, ಬೀಳಿಕಾಗಿರುವಂತ ಬತೇರಿ, ಕೋಟೆ ಒಳೆಗೆ ಇರ್‌ವ ಮಾರುತಿ ದೇವರ ಸಣ್ಣ ದೇಸ್ತಾನ ಮತ್ತೆ ಅದರ ಕರೆಲಿ ಚಾಳನೂ ಅಗಲನೂ ಇದ್ದ ದೊಡ್ಡ ಹಾಳ್ ಬಾಮಿ ಉಟ್ಟು. ಈ ಕೋಟೆ ಇಕ್ಕೇರಿ ಅರಸರ ಕೈತಪ್ಪಿ ಬ್ರಿಟಿಷರ ವಸ ಆದ ಮೇಲೆ ಬ್ರಿಟಿಷರ್‌ಗ ಮಾರುತಿ ದೇಸ್ತಾನದ ಪೂಜೆಬಟ್ರು ಶಂಬಟ್ರ್‌ಗೆ ಈ ಕೋಟೆನ ಅದಿಕಾರನ ವಯ್ಸಿಕೊಟ್ಟ. ಶಂಬಟ್ಟರ್‌ಂದ ಚಂದಾವರ್ ಗಣಪಯ್ಯತೇಳೋವು ಐದ್ ರೂಪಾಯಿ ಎರಡೂವರೆ ಆಣೆಗೆ ಮೂಲ ಗೇಣಿಗೆ ಈ ಜವಾಬ್ದಾರಿ ಪಡ್ಕಂಡ. ಗಣಪಯ್ಯನ ಕುಟುಂಬದ ಒಕ್ಕಲುಗ ಈಗಳೂ ಕೋಟೆ ಒಳೆಗೆ ಜೀವನ ನಡ್ಸುವೆ. ಹೊರಕೋಟೆಲಿ ಒಂದ್ ದೆವ್ವದ ಗುಡಿ ಉಟ್ಟು. ನರಕಚತುರ್‌ದಶಿನ ಕಾಲಲಿ ಬೈದ್ಯರ್‌ಗ ಕಟ್ಟುವ ಚಾಮುಂಡೇಶ್ವರಿ. ದೂಮಾವತಿ, ರಾಜದೆವ್ವದ ಕೋಲ ಬಾರೀ ಗೌಜಿಲಿ ನಡ್ದದೆ.

ಕುಂಬಳೆ, ಕೋಟೆ ಉದ್ದಗಲಲಿ ಕಾಸರಗೋಡು ಕೋಟೆನಸ್ಪೇ ಉಟ್ಟು. ಕೊಡಿಯಾಲ, ಮೂಡಬಿದರೆ, ಮೂಲ್ಕಿ, ಉಳ್ಳಾಲ, ಕುಂಬಳೆ, ಪುದುಂವೆಟ್ಟು, ಬೆಳ್ಳಾರೆ, ಕಾಂತಮಂಗಲ, ಬಂದಡ್ಕ, ಚಂದ್ರಗಿರಿ, ಬೇಕಲ, ಹೊಸದುರ್‌ಗ ಇಂತ ಕೋಟೆಗಳ ಬಲಪಡ್ಸಿದವ ಇಕ್ಕೇರಿ ರಾಜರಾಮನ ದೊಡ್ಡ ಮಜ್ಜ ವೆಂಕಟಪ್ಪನಾಯಕ. 1514ರ್‌ಲಿ ದುರ್‌ತೆ ಬಾರಬೋಸ್ ತೇಳ್ವ ಪೋರ್‌ಚುಗೀಸ ಒಬ್ಬ ಹೊರದೇಸಂದ ಕುಂಬಳೆ ಕೋಟೆಗೆ ಬಾತ್. ಈ ಕೋಟೆಂದ ಮಾಲ್ಡಿವ್ ದ್ವೀಪಗಳಿಗೆ ಅಕ್ಕಿನ ಕಳ್ಸುತಿದ್ದ ಅದ್ಕೆ ಪಗರಕೆ ಹುರಿ ಬೊಳ್ಳಿ ಪೂರ ತೆಕಂಣ್ತಿದ್ದಂತ ಅವ ಹೇಳಿಟು. ಈ ಕೋಟೆಂದ ಪೋರ್‌ಚುಗೀಸರ್ ಬೇಕಾದಸ್ಟ್ ಸಾಮಾನ್‌ಗಳ ಸಾಗಿಸ್ತಾ ಇದ್ದ. ಕುಂಬಳೆನ ಗುತ್ತುನ ಅರಸ ಇಮ್ಮಡಿ ಜಯಸಿಂಹ ಪಾಂಡ್ಯರಾಜೆನ ಚಂದ್ರಗಿರಿನ ಹಕ್ಕಲೆ ಸೋಲ್ಸಿ ಹಿಮ್ಮೆಟ್ಸ್‌ವಸ್ಟ್ ಇದ್ ಗಟ್ಟಿಮುಟ್ಟಾಗಿ ಇತ್ತ್. ಕುಂಬಳೆಸೀಮೆ ಬಲ ಕಳ್ಕಂಬಕೆ ಸುರಾದು 17ನೆ ಶತಮಾನಲಿ.

ಆಗ ಕುಂಬ್ಳೆಲಿ ಆಡಳ್ತ ಮಾಡಿಕಂಡಿದ್ದ ಕೃಷ್ಣರಾಯ ಕುಂಬಳೆಗೆ 7ಮೈಲಿ ದೂರಲಿ ಮಾಯಿಪ್ಪಾಡಿಲ್ಲಿ (ಸಿರಿಬಾಗಿಲು) ಬೇರೆನೆ ಅರಮನೆನ ಕಟ್ಟಿಕಂಡ್ ಬೊದ್ಕಿಕೆ ಸುರುಮಾಡ್ತು. ಆದರೆ ಅಂವನ ಒಬ್ಬ ರಾಣಿ ಮಾತ್ರ ಕುಂಬಳೆ ಅರಮನೆನ ಬುಡದೆ ಅಲ್ಲಿಯೇ ಒಳ್ಕಂಡಿತ್ತ್. ಮಾಯಿಪ್ಪಾಡಿ ಅರಮನೆಲಿ ಬೀಡ್ ಬುಟ್ಟ ರಾಜೆನ ವಂಶಸ್ತರ್ ಈಗಲೂ ಒಳ. ಈ ಕೋಟೆಗಲ್ಲದೆ ಇಕ್ಕೇರಿ ಅರಸರ ಕಾಲಲಿ ಕಟ್ಟಿದ ಚಂದ್ರಗಿರಿ ಕೋಟೆ, ಬಂದೆಡ್ಕ, ಪಳಲಿಕೋಟೆ ಇಂತ ಇತಿಯಾಸದ ಕಟ್ಟಡಗ ತಾಲ್ಲೂಕುಲಿ ಉಟ್ಟು.

ಅಡೂರು, ಮದೂರು, ಕಾವು ಮತ್ತೆ ಕಣಿಪುರಗಳ ದೇವಾಲಯಗ ಕುಂಬಳೆ ಅರಸರ ಕಾಲಂದಲೂ ಪ್ರಸಿದ್ದಿ ಹೊಂದಿಟು.. ಅರ್‌ಜುನ ಪಾಶುಪತಾಸ್ತ್ರನ ಪಡಿಯಕೆ ತಪಸ್ಸುಮಾಡ್ದ ಇಂದ್ರಕೀಲನೆ ಅಡೂರುತೇಳ್ದು ಅಲ್ಲಿನ ಸ್ತಳಪುರಾಣ ಕೂಡ ಹೌದು. ಅದ್ಕೆ ಉರುಡೂರು ತೇಳ್ದು ಮತ್ತೊಂದು ಹೆಸರು. ಕುಂಬಳೆ ರಾಜ್ಯದ ಅರಸಂಗ ಆಡಳಿತ ಪತ್ರ ವೆವಹಾರಕೆ ಉಪಯೋಗ ಮಾಡತಿದ್ದ ಶ್ರೀ ಉರುಡೂರು ಮಹಾಲಿಂಗೇಶ್ವರ ಪ್ರಸನ್ನ ತೇಳ್ವ ಮುದ್ರೆ ಅಡೂರು ಶ್ರೀ ಮಹಾಲಿಂಗೇಶ್ವರನ ಅಂಕಿತಲಿ ಇರ್‌ವಂತದ್. ಅಡೂರು ಶ್ರೀ ಮಹಾಲಿಂಗೇಶ್ವರ ದೇಸ್ತಾನಲಿ ಚಾಳುಕ್ಯರ ಅರಸ 2ನೆ ಮಯೂರವರ್ಮನ ಕನ್ನಡ ಶಾಸನ ಉಟ್ಟು..

ಕಾಸರಗೋಡುಂದ ಈಶಾನ್ಯಕೆ ಐದ್‌ಮೈಲಿಲಿ ಮದೂರು ಶ್ರೀ ಮದನಂತೇಶ್ವರ ದೇವಾಲಯ ಉಟ್ಟು. ತಲೆ ಆಡ್ಸುವ ಚಾಳೆಗ, ಕೊಣೆವ ಕಮ್ಮುನ ದೈಗ, ಸುತ್ತೊಳೂ ಫಸಲ್ ತುಂಬಿದ ಗದ್ದೆಬೊಯ್ಲ್‌ಗ, ಎದುರುಲಿ ಮದುವಾಹಿನಿ, ಕರೆಲಿ ದೊಡ್ಡಕೆರೆ; ಪ್ರಶಾಂತ ಪರಿಸರ. ಶ್ರೀಮದನಂತೇಶ್ವರ ದೇಸ್ತಾನದ ಎದುರ ಮಂಟಪಲಿ ಪುತ್ರಕಾಮೇಸ್ಟಿಯಾಗಂದ ಶ್ರೀರಾಮಜೆನನದವರೆಗೆನ ಕತಾವೃತ್ತಾಂತನ ಮರಗಳ್‌ಲಿ ಕೆತ್ತಿಸ್ಯೊಳ ದೇಸ್ತಾನದೊಳಗೆ ಮೂಡನ ಪುಡೆವಾಗಿ ಶ್ರೀ ಸಿದ್ದಿ ವಿನಾಯಕನ ದೇವರ ವಿಗ್ರಹ ಉಟ್ಟು. ಈ ಮೂರ್‌ತಿ ಮದರು ತೇಲ್ವ ಹರಿಜೆನ ಹೆಂಗ್ಸ್ ಒಂದಕೆ ಹುಲ್ಲು ಹೆರಿಯಕನ ಸಿಕ್ಕಿತ್ತ್ ಆದರ್‌ಂದ ಈ ಜಾಗೆಗೆ ಮದರೂರು, ಮದೂರು, ತೇಳಿ ಹೆಸರ್ ಬಾತ್‌ತೇಳಿ ಸ್ತಳ ಪುರಾಣ ಉಟ್ಟು. ಈ ದೇಸ್ತಾನಲಿ ಸುಮಾರ್ ದುಡ್ಡು ಕರ್‌ಚೆ ಮಾಡಿ ಮೂಡಪ್ಪ ಸೇವೆ ಬಾರಿ ಗೌಜಿಲಿ ಮಾಡ್‌ವೆ.

ಕಾವು (ಮುಜುಂಗಾವು) ಶ್ರೀ ಪಾರ್ತಸಾರತಿ ದೇಸ್ತಾನ ಮುಚುಕುಂದ ಮುನಿ ಸ್ತಾಪನೆ ಮಾಡ್ದ್‌ತೇಳಿ ಮಾತ್ ಉಟ್ಟು. ದೇಸ್ತಾನ ಎದುರುಲಿರ್‌ವ ದೊಡ್ಡ ಕೆರೆಗೆ ಮುಚುಕುಂದ ತೀರ್ತಂತ ಹೆಸರು ಉಟ್ಟು, ಕಣಿಪುರಲಿ ಶ್ರೀ ಗೋಪಾಲಕೃಷ್ಣ ದೇಸ್ತಾನ ಉಟ್ಟು, ಕಣಿಪುರಕೆ




ಕಣ್ವಪುರ, ಕಣಿಯರ, ಕುಂಬಳೆ ತೇಳ್ವ ಹೆಸರ್‌ಗನು ಉಟ್ಟು. ಇಲ್ಲಿ ಶ್ರೀ ಗೋಪಾಲಕೃಷ್ಣ ಮೂರ್ತಿನ ಕಣ್ವಮುನಿಗ ಪ್ರತಿಸ್ಥಾಪನೆ ಮಾಡ್ದ ಸ್ತಳಪುರಾಣ ಉಟ್ಟು. ಈ ಮೂರ್‌ತಿ ತೆಂಕುತಿಟ್ಟು ಯಕ್ಷಗಾನ ಕಲಾವಿದರ ಆರಾದನೆನ ದೆವ್ವ. ಮಂಜೇಶ್ವರದ ಶ್ರೀ ಅನಂತೇಶ್ವರ ದೇಸ್ತಾನದ ಮದ್ವಮತಾನುಯಾಯಿಗಳಾಗಿದ್ದ ಗೌಡಸಾರಸ್ವತರ್‌ದ್ (ಕೊಂಕಣಿಗ). ಬದ್ರ ನರಸಿಂಹ ಇಲ್ಲಿನ ಪ್ರದಾನ ದೇವತೆ. ಶಿವಲಿಂಗಲಿ ವಿಷ್ಣು ದೇವರ ಸನ್ನಿದಾನನ ನಂಬಿ ಆರಾದನೆ ಮಾಡಿಕಂಡ್ ಬಾವ ಶುದ್ದ ವೈಷ್ಣವ ಕ್ಷೇತ್ರ ಮಂಜೇಶ್ವರ. ಬದ್ರನರಸಿಂಹಮೂರ್‌ತಿನ ಸಿಂಹಾಸನದ ಹಿಂದೆ ಇಡೀ ಗರ್‌ಬಗುಡಿಲಿ ಒಂಬತ್ ಅಡಿ ಎತ್ತರ ಇರ್‌ವ ಒಂದ್ ದೊಡ್ಡ ಹುತ್ತ ಉಟ್ಟು. ಇದ್ಕೆ ಸಮ್ಮಂದಪಟ್ಟಂಗೆ ಷಷ್ಟಿ ಕಾಲಲಿ ಐದ್ ದಿನಗಳ ಜಾತ್ರೆ ನಡ್ಡದೆ.. ಬಾಳ ಸಂಪತ್ತು ತುಂಬಿ ತುಳುಕಿದ್ದ ಈ ಕ್ಷೇತ್ರ ಆಗಾಗ ಲೂಟಿ ಆಗಿ ಮತ್ತೆ ಜೀರ್‌ಣೋದ್ದಾರ ಆದ ಇತಿಯಾಸ ಉಟ್ಟು.ಕುಂದಾಪುರದ ಉತ್ತರಗಡಿಂದ ತಲಚೇರಿಯವರೆಗೆ ಗೌಡ ಸಾರಸ್ವತ ಸಮಾಜದ ಹದ್ನೆಂಟ್ ಪೇಟೆನ ದೇಸ್ತಾನಂತ ನೆನ್ಸಿದ ವೈಶಿಷ್ಟ ಇದ್ಮುಟ್ಟು. ಇಲ್ಲಿ 135 ವರ್‌ಸದ ಹಿಂದೆ ಕಟ್ಟಿದ ಒಂದ್ ಬ್ರಹ್ಮರತ ಉಟ್ಟು. ಇದರ ಎತ್ತರ 17', ಅಗಲ 17'. ಅಟ್ಟಳಿಗೆಂದ ಅಲಂಕೃತ ಮಾಡ್ದ 71 ಅಡಿ ಎತ್ತರಕ್ಕೇರ್‌ವ ರಮ್ಯರತ ಉಟ್ಟು. ಈ ದೇಸ್ತಾನದ ಹೊರಬಾಗಲಿ ಒಂದ್ ಜೋಗಿ ದೆವ್ವದ ಕಲ್ಲ್‌ಟ್ಟು. ಇದು ಬೂತಪ್ರೇತಗಳ ಬುಡ್ಸಿದೆತೇಳ್ವ ನಂಬಿಕೆಉಟ್ಟು. ದಿನೊಳು ಸುಮಾರ್ ಯಾತ್ರಾರ್ತಿಗ ಇಲ್ಲಿ ಬಂದವೆ. ಕರ್‌ಹಾಡಲ್ಲಿ ಬಟ್ರ್‌ಗಳ ದೇವಸ್ಥಾನ ಉಟ್ಟು. ಅಗಲ್ಪಾಡಿ, ಮಲ್ಲ, ತೈರೆ, ಬಾಯಾರುಲಿ ಈ ಸಮಾಜದವು ನಂಬಿ ಆರಾದಿಸುವ ದುರ್‌ಗಾ ಪರಮೇಶ್ವರಿ ದೇಸ್ತಾನಗ ಉಟ್ಟು. ಇದರ ಮಟಂತೇಳಿ ಕರ್‌ದವೆ. ಅಗಲ್ಪಾಡಿ ದೇಸ್ತಾನಲಿ ನಡಿವ ಅನ್ನದಾನದ ಹೆಸರ್‌ಂದ ದುರ್ಗಾಪರಮೇಶ್ವರಿ ಅನ್ನಪೂರ್‌ಣೇಶ್ವರಿತಾಗುಟು. ಇಲ್ಲಿ ಪ್ರತಿವರ್‌ಸ ಮಾಗಶುದ್ದ ಪಂಚಮಿಂದ ದಶಮಿನವರೆಗೆ ವೈಬವಪೂರ್‌ಣ ಜಾತ್ರೆ ನಡ್ದದೆ. ಎರಡು ಎಕರೆ ಜಾಗೆನ ಸೇರ್‌ಸಿ ಈ ದೇಸ್ತಾನದ ಹಕ್ಕಲೆನೆ ಒಂದ್ ದೊಡ್ಡ ಕೆರೆ ಉಟ್ಟು. ಕರ್‌ಹಾಡ ಬ್ರಾಹ್ಮಣಸಮಾಜಲಿ ಸಾಮಾಜಿಕ, ದಾರ್ಮಿಕ ಮತ್ತೆ ಸಾಂಸ್ಕತಿಕ ಕಾರ್‌ಯ ಚಟುವಟಿಕೆಗಳ ಆಶ್ರಯಸ್ತಾನ ಆಗುಟು ಈ ಕ್ಷೇತ್ರ. ಪೆರಡಾಲದ ಶ್ರೀ ಉದನೇಶ್ವರ ಕಿಡೂರು ಶ್ರೀ ಮಹಾಲಿಂಗೇಶ್ವರ, ಕಾಟುಕುಕ್ಕೆ ಶ್ರೀ ಸುಬ್ರಹ್ಮಣ್ಯೇಶ್ವರ, ಕುಂಟಿಕ್ಕಾನ ಶ್ರೀ ಶಂಕರನಾರಾಯಣ ಇಂತ ಎಲ್ಲಾ ದೇವತೆಗಳ ಇಲ್ಲಿ ಹವ್ಯಕಸಮಾಜದವು ಆರಾದನೆ ಮಾಡ್‌ವೆ. ಕಾಸರಗೋಡುಂದ ಎರಡ್ ಮೈಲಿ ಈಶಾನ್ಯಕ್ಕೆ ಇರ್‌ವ ವಿಷ್ಣು ಮಂಗಲ ಕ್ಷೇತ್ರ ಬಾರಿ ಹಳೇ ದೇಸ್ತಾನ. ಈ ಕ್ಷೇತ್ರದ ತೆಂಕ ಬಾಗಲಿರ್‌ವ ಕೆರೆಗೆ ಚಕ್ರತೀರ್ತತೇಳಿ ಹೆಸರ್.

ಕುಂಬಳೆನ ಅರಸ ಆದ ಜಯಸಿಂಹ ಶ್ರೀ ಮದ್ವಾಚಾರ್‌ಯರ ಇಲ್ಲಿಗೆ ಬರಮಾಡಿಕಂಡಿತ್ತ್‌ತನು, ಅದರ ತಿಳ್ದ ಕಾವು ಮಟದ ತ್ರಿವಿಕ್ರಮಪಂಡಿತ (ಶ್ರೀ ಶಂಕರಾಚಾರ್‌ಯರ ಶಿಸ್ಯ) ಶ್ರೀ ಮದ್ವಾಚಾರ್‌ಯರೊಟಿಗೆ ಮತ ಚರ್‌ಚೆಗೆ ನಿತ್ತನು. ಎಂಟ್ ದಿನಗಳವರೆಗೆ ನಡೆದ ವಾದದಲಿ ತ್ರಿವಿಕ್ರಮ ಪಂಡಿದ ಸೋತ್ ಆಚಾರ್‌ಯರ ಶಿಸ್ಯ ಆತ್‌ತ ಹೇಳಲಾಗುಟು. ಇವಿಬ್ಬರ್ ಚರ್‌ಚೆ ನಡ್ಸಿದ ಜಾಗೆಗೆ ಕೂಡಲು ತ ಹೆಸರಾತ್.

ಇದಲ್ಲದೆ, ಮುಳಿಯೂರು ಶ್ರೀ ಸುಬ್ರಹ್ಮಣ್ಯೇಶ್ವರ ದೇವಾಲಯ, ಅನಂತಪುರದ ಅನಂತೇಶ್ವರ ದೇವಾಲಯ, ಕಾಸರಗೋಡಿನ ಮಲ್ಲಿಕಾರ್‌ಜುನ ಮತ್ತೆ ವೆಂಕಟರಮಣ ದೇವಾಲಯ–ಇವೆಲ್ಲ ಪ್ರೇಕ್ಷಣೀಯ ಕ್ಷೇತ್ರಗ.

ಕಾಸರಗೋಡ್‌ಂದ ಮೂಡಕೆ 7ಮೈಲಿ ದೂರಲಿ ಎಡನೀರು ಮಟ ಉಟ್ಟು. ಶ್ರೀ ಶಂಕರಾಚಾರ್‌ಯರ ಶಿಸ್ಯಪರಂಪರೆಲಿ ಪ್ರಖ್ಯಾತರಾದ ತ್ರೋಟಿಕಾಚಾರ್‌ಯರ ಕಾಲಲಿ ಸ್ತಾಪಿತ ಆದ ಮಟ ಇದ್. ಈ ಮಟಾದೀಶರಾಗಿ ದರ್ಮಪ್ರಚಾರಮಾಡ್ದ ಹದಿಮೂರು ಜೆನ ಗುರುಗಳ ಸಮಾದಿಗ ಇಲ್ಲುಟ್ಟು. ಮಟದ ಆವರಣಲಿ ಶ್ರೀ ಗೋಪಾಲಕೃಷ್ಣ ದೇವಾಲಯ ಉಟ್ಟು. ಶ್ರೀಮದೀಶ್ವರಾನಂದ ಸ್ವಾಮೀಜಿಯವರ ಉಚಿತ ಶಿಕ್ಷಣ ಪ್ರೌಡಶಾಲೆ ಈ ಮಟದ ಆಶ್ರಮಲಿ ನಡೆತುಟ್ಟು. ಇದ್ ದರ್ಮ, ಸಂಸ್ಕೃತಿ, ಸಾಹಿತ್ಯ, ಕಲೆ ಮುಂತಾದದರ ಅಬಿವೃದ್ದಿಗೊಳಿಸಿಕಂಡಿರ್‌ವ ಒಂದ್ ಕ್ಷೇತ್ರ.

ಅಡೂರುಲಿ ಏರ್‌ದ ಕೊಡಿ (ದ್ವಜಾರೋಹಣ) ಮದೂರುಲಿ ಇಳಿಯಕುತ ಸಂಪ್ರದಾಯ ಉಟ್ಟು. ಮೀನಮಾಸ ಸಂಕ್ರಮಣಲಿ ಸುರಾಗಿ ಮೇಷಮಾಸದ ಐದನೆ ದಿನ ಜಾತ್ರೆಗ ಮುಳ್ದದೆ. ಅಡೂರು, ಕಾಸರಗೋಡು, ಪೈಕ, ಬೆದರಡ್ಕ, ಅಂಬಲಡ್ಕ, ಪುತ್ತಿಗೆ ಮತ್ತೆ ಮದೂರುಗಳ್‌ಲಿ ತಲಾ ಐದ್ ದಿನಗಳಾಂಗೆ ಒಟ್ಟ್ ಮೂವತ್ತೈದು ದಿನಗ ಎಡೆಬುಡದೆ ನಡಿದು ಇಲ್ಲಿನ ಜಾತ್ರೆಗಳ ವಿಸೇಸ.

ಕಾಸರಗೋಡ್‌ನ ತಳಂಗೆರೆಲಿರುವ ಪಳ್ಳಿ ಮಾಲಿಕ್ ದೀನಾರನ ಕಾಲಲಿ ಕಟ್ಟಿದ್‌ತ ಪ್ರತೀತಿ ಇರ್‌ವ ಬಾರಿ ಹಳೇ ಪಳ್ಳಿ. ಈ ತಾಲ್ಲೂಕುಲಿ ಅಲ್ಲಲ್ಲಿ ಸುಮಾರ್ ಪಳ್ಳಿಗೊಳೊ. ಹತ್ತಕ್ಕೂ ಹೆಚ್ಚಿ ಚರ್‌ಚ್‌ಗ ಈ ತಾಲ್ಲೂಕುಲುಟ್ಟು. ಮಂಜೇಶ್ವರಲಿ ಒಂದ್ ಜೈನಬಸದಿ, ಕಾಸರಗೋಡುನ ನೆಲ್ಲಿಕುಂಟೆಲಿ ಒಂದ್ ವೀರ ಶೈವಮಟ–ಇದ್ ಜೈನ ಮತ್ತೆ ಶೈವಮತಪ್ರಚಾರಶಾಕೆ ಆಗಿ ಒಳ್ದುಟು.

ಕಾಸರಗೋಡು ಜಿಲ್ಲೆ ತೆಂಕುತಿಟ್ಟು ಯಕ್ಷಗಾನದ ತೌರು. ಯಕ್ಷಗಾನಲಿ ಪ್ರಸಿದ್ದ ಆದ ಪಾರ್‌ತಿಸುಬ್ಬ (ಸು. 1760–1820) ಕುಂಬಳೆಯಂವ. ಕೂಡ್ಲು ಶ್ರೀ ಗೋಪಾಲಕೃಷ್ಣ ಯಕ್ಷಗಾನ ಸಬಾ, ಕುಂಬಳೆ ಶ್ರೀ ಗೋಪಾಲಕೃಷ್ಣ ಯಕ್ಷಗಾನ ಮಂಡಲಿ, ಇಚ್ಲಂಪಾಡಿ ಮೇಳ ಮತ್ತೆ ಕೊರಕೋಡು ಮೇಳಗ ಯಕ್ಷಗಾನ ಕಲೆನ ವಿಸ್ತಾರಗೊಳಿಸಿದ ಕಲಾಮಂಡಲಗ. ಈ ತಾಲ್ಲೂಕ್‌ಲಿ ತಾಳಮದ್ದಲೆನ ಕಲಾವಿದರಿಲ್ಲದ ಗ್ರಾಮ ಇಲ್ಲೆ, ಬಾಸೆ ಇಲ್ಲದೆ ಅವ್ಯಾಹತವಾಗಿ ಪ್ರೋತ್ಸಾಹ ಪಡ್ದ್ ಬೆಳೆತಿರ್‌ವ ಕಲೆ ಇದ್. ಮಲಯಾಳ ಮಾತೃಬಾಷೆ ಆಗಿರುವವು ಕನ್ನಡ ಯಕ್ಷಗಾನ ಕಲಾವಿದರ್ ಸುಮಾರೊಳೊ.

ಕನ್ನಡದ ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈ ಅವು ಕಾಸರಗೋಡು ಜಿಲ್ಲೆನವು ಈಗಳೂ ಇಲ್ಲಿ ಸುಮಾರ್ ಹಿರಿಕಿರಿಯ ಕನ್ನಡ ಕವಿಗೊಳೊ. ಕಂಬಳ, ಕೋಳಿಕಟ್ಟ, ಅಳಿಯಸಂತಾನಕಟ್ಟು, ದಸರಾ ಉತ್ಸವ, ದೀಪಾವಳಿ, ಸಸ್ಪಿಯ ಉತ್ಸವ–ಮುಂತಾದ ಆಚರಣೆಗಳ್‌ಲಿ ದಕ್ಷಿಣದ ತುಳು ಸಂಸ್ಕೃತಿ ಇಲ್ಲಿ ಬೇರೂರಿ ನಿತ್ತುಟು. ಮರುಮಕ್ಕತ್ತಾಯಂ, ಕತಕ್ಕಳಿ, ಓಣಂ ಇಂತ ಮಲಯಾಳ ಸಂಸ್ಕೃತಿನ ಉತ್ಸವಕೂ ಇದ್ ಆಹ್ವಾನ ಕೊಟ್ಟುಟು.

ಕುಂಬಳೆನ ಅರಸರ ಕಾಲದಲಿ ಪ್ರಸಿದ್ದಿ ಇದ್ದ ಅಡೂರು, ಮದೂರು, ಕಾವು ಮತ್ತೆ ಕಣಿಪುರಗಳ ದೇಸ್ತಾನಗಳಾಂಗೆನೆ ಆ ಕಾಲದಂಳೂ ಪ್ರಸಿದ್ದಿಲಿರ್‌ವ ನಾಲ್ಕ್ ದೆವ್ವ ಸ್ತಾನಗ ಈ ತಾಲ್ಲೂಕುಲುಟ್ಟು. ಪೈಕ, ಬೆದರಡ್ಕ, ಅಂಬಲಡ್ಕ ಮತ್ತೆ ಪುತ್ತಿಗೆ–ಇವೇ ಆ ನಾಲ್ಕು ದೆವ್ವಸ್ತಾನಗ. ಪಂಜುರ್‌ಲಿ, ದೂಮಾವತಿ (ಜುಮಾದಿ). ಕಲ್ಲುರ್ಟಿ, ಕಲ್ಕುಡ, ಅಣ್ಣಪ್ಪ ದೆವ್ವಗಳಂತ ತುಳು ದೆವ್ವಗಳಾಂಗೆ ಪಿಲಿಚಾಮುಂಡಿ, ಮುತ್ತಪ್ಪದೆವ್ವ, ಬೆಳ್ಚಪಾಡ, ರಕ್ತೇಶ್ವರಿ ಇಂತ ಮಲಯಾಳಿ ದೆವ್ವಗಳ ನಂಬಿ ನಡಿವ ಜಾಗೆ ಇದ್. ಹಿಂದೂಗಳೂ ಬ್ಯಾರಿಗಳೂ ನಂಬುವ ಅಲಿಬೂತ ಈ ತಾಲ್ಲೂಕುನ ವಿಸೇಸ ದೆವ್ವ

ವಿಷ್ಣು, ಶಿವ, ಶಕ್ತಿ, ನಾಗ ಮತ್ತೆ ದೆವ್ವಗ ಆರಾದನೆ ಆವ, ಹಿಂದೂ, ಮುಸ್ಲಿಂ, ಕ್ರೈಸ್ತ ಮತ್ತೆ ಜೈನ ಸಮುದಾಯಗಳ, ವಿವಿದ ಬಾಷೆಗಳ ಜಾನಪದ ಕಲೆಗಳ, ಕಲಾವಿದರ, ಮದುರಮೈತ್ರಿನ ಸಂಗಮಸ್ತಳ–ಕಾಸರಗೋಡು ಜಿಲ್ಲೆ. (ಬಿ.ಕೆ.ಟಿ.)

**ಕುಕ್ಕೆ ಸುಬ್ರಹ್ಮಣ್ಯ :** ಕರ್ನಾಟಕ ರಾಜ್ಯಲಿ ದಕ್ಷಿಣಕನ್ನಡ ಜಿಲ್ಲೆನ ಕಡಬ ತಾಲೂಕ್‌ಲಿ ಇರ್‌ವ ಒಂದ್ ಹೆಸರ್‌ವಾಸಿ ಜಾಗೆ ಕುಕ್ಕೆ ಸುಬ್ರಹ್ಮಣ್ಯ. ಇಲ್ಲಿ ಈಶ್ವರ ದೇವ್ರ ಮಜ್ಜ ಷಣ್ಮುಕ ದೇವ್ರ ನಾಗ ದೇವ್ರ ರೂಪಲಿ ಅಂದರೆ ಸುಬ್ರಹ್ಮಣ್ಯಂತೇಳ್ವ ಹೆಸ್ರ್‌ಲಿ ಪೂಜಿಸುವೆ. ಈ ಜಾಗೆಗೆ ಪುಸ್ಪಗಿರಿಂತಳೂ ಕರ್‌ದವೆ. ಇದ್ ಸುಳ್ಯಂದ 44 ಕಿಮೀ. ದೂರ ಮತ್ತೆ ಪುತ್ತೂರ್‌ಂದ 33 ಕಿಮೀ ದೂರಲಿ ಉಟ್ಟು. ಇದ್ ಕುಮಾರಪರ್‌ವತ, ಮತ್ತೆ ಶೇಷಪರ್‌ವತಂತೇಳುವ ಎರ್‌ಡ್ ಪರ್‌ವತಗಳ ನೊಡುಲಿ ಇರ್‌ವ ಬಾರಿ ಪೊರ್‌ಲುನ ಜಾಗೆ. ಈ ದೇಸ್ತಾನದ ಜಾಗೆಗೆ ಪಂಡ್‌ಲಿ ಕುಕ್ಕೆ ಪೇಟೆತ ಹೆಸ್ರ್ ವಾಸಿ ಆಗಿತ್ತ್‌ಂತೇಳಿ ಶಾಸನಗಳ್‌ಂದ ತಿಳ್ದ್ ಬಂದದೆ. ಸ್ಕಂದಪುರಾಣದ ಸನತ್ಕುಮಾರ ಸಂಹಿತೆಲಿ ಸಹ್ಯಾದ್ರಿಕಂಡ ತೀರ್ತಕ್ಷೇತ್ರ ಮಹಿಮಾ ನಿರೂಪಣದೊಳೆಗೆ ಈ ಕ್ಷೇತ್ರನ ವರ್ಣನೆ ಮಾಡ್ಯೊಳೊ. ಇಲ್ಲಿಗೆ ಆದಿ ಶಂಕರಾಚಾರ್‌ಯರ್ ಬಂದಿದ್ದೊಂತೇಳಿ ಆನಂದಗಿರಿ ಬರ್‌ದ ಶಂಕರವಿಜಯ ಗ್ರಂತಂದ ತಿಳ್ದದೆ.

ಈ ದೇಸ್ತಾನ ಊರ್‌ನ ನೊಡುಲಿದ್ದ್, ಹಳ್ಳ ಕಾಡ್ ಗುಡ್ಡೆಗಳ್‌ಂದ ಕೂಡಿದ್ ಕಣ್ಣ್‌ಗೆ ತೊಂಪ್ ಕೊಡುವ ಬಾರಿ ಪೊರ್‌ಲ್‌ನ ಜಾಗೆ. ಇದ್ ನಾಗಗ(ಒಳ್ಳಾವು) ಓಡಾಡುವ ಜಾಗೆ. ಇಲ್ಲಿ ಸುಬ್ರಹ್ಮಣ್ಯ ದೇವ್ರ್‌ಗೆ ಮಾಡ್ವ ಪೂಜೆ ಸರ್‌ಪಗಳ ರಾಜ ವಾಸುಕಿ ದೇವ್ರಿಗೆ ಸಂದದೆ. ಈ ದೇಸ್ತಾನದೊಳಗೆ ಸುಬ್ರಹ್ಮಣ್ಯ, ಲಕ್ಷ್ಮೀನರಸಿಂಹ, ಉಮಾಮಹೇಶ್ವರ ದೇವ್ರ ಗುಡಿಗ ಒಳ. ಸುಬ್ರಹ್ಮಣ್ಯದೇವರ ಗುಡಿ ಒಳಗಿರ್‌ವ ಲಿಂಗ ಕುಕ್ಕೆ ಸುಬ್ರಹ್ಮಣ್ಯ ತೇಳಿಯೇ ಹೆಸ್ರ್ ವಾಸಿ. ಈ ದೇಸ್ತಾನದ ಬಡಗ ಬಾಗಲಿ ಬಾರಿ ಹಳೆ ಕಾಲದ ಶಂಕರಮಟ ಉಟ್ಟು. ಲಕ್ಷ್ಮೀನರಸಿಂಹ ದೇಸ್ತಾನ ಮಾದ್ವಮಟದ ಉಸ್ತುವಾರಿಕೆಗೆ ಸೇರ್‌ದೆ. ಇಲ್ಲಿ ವರ್‌ಸಕ್ಕೊಮ್ಮೆ ಬಾರಿ ಗೌಜಿಲಿ ಜಾತ್ರೆ (ಸುಬ್ರಹ್ಮಣ್ಯ ಸಸ್ಪಿ)ನಡ್ದದೆ. ಸುಬ್ರಹ್ಮಣ್ಯದ ಹಕ್ಕಲೆ ವಿಸೇಸ ಜಾತಿನ ಬೆತ್ತ ಸಿಕ್ಕಿದೆ.

ಈ ಜಾಗೆ ಎಲ್ಲಾ ತರದ ನಾಗ ದೋಸಗಳ ಪರಿಹಾರ ಮಾಡ್‌ವ ಪವಿತ್ರ ಜಾಗೆಂತೇಳುವ ನಂಬಿಕೆ ಉಟ್ಟು. ಅದ್ದಾಗಿದೆ ದೇಸದ ಬೇರೆ ಬೇರೆ ಕಡೆಗಳ್‌ಂದ ಜೆನಂಗ ಸರ್‌ಪ ಸಂಸ್ಕಾರ, ನಾಗಪ್ರತಿಸ್ಟೆ, ಆಶ್ಲೇಷ ಪೂಜೆ ಮಾಡ್ಲಿಕೆ ಇಲ್ಲಿಗೆ ಬಂದವೆ. ಇಲ್ಲಿ ಜೆನ ತಮ್ಮ ಕಸ್ಟಗಳ ನಿವಾರಣೆ ಮಾಡಿಕಾಗಿ ಬೀದಿ ಮಡೆಸ್ನಾನ, ಮಡೆಮಡೆಸ್ನಾನ ಸೇವೆ ಮಾಡ್‌ವೆ. ಈ ದೇಸ್ತಾನದ ಹಕ್ಕಲೆ ಕುಮಾರದಾರಾ ಹಳ್ಳ ಹರ್‌ದದೆ 'ಕುಮಾರದಾರೆಲಿ ಮೀದ್, ಕುಕ್ಕೆಲಿಂಗನ ನೋಡಿ, ಕೊಪ್ಪರಿಗೆ ಅನ್ನ ಉಂಡ' ತೇಳುವ ಮಾತ್ನಂಗೆ ಇಲ್ಲಿ ದಿನೋಳು ಅನ್ನದಾನ ನಡ್ದದೆ. ಮೂಲ ಮೃತ್ತಿಕೆ(ಹುತ್ತದ ಮೊಣ್ಣ್) ಇಲ್ಲಿನ ಮುಕ್ಯ ಪ್ರಸಾದ. ಧರ್ಮಸ್ಥಳಕೆ ಹೋಕನ ಅತವಾ ಬಾಕನ ಇಲ್ಲಿಗೆ ಬಕ್ತರ್ ಬೇಟಿ ಕೊಡ್ವ ವಾಡಿಕೆ ಉಟ್ಟು.



ಕುಕ್ಕೆ ಶ್ರೀ ಸುಬ್ರಹ್ಮಣ್ಯ ದೇಸ್ತಾನದ ದ್ವಾರ

**ಕುಮಾರದಾರ :** ಭಾರತದ ದೊಡ್ಡ ಹಳ್ಳಂಗಳ್‌ಲಿ ಕುಮಾರದಾರ ಹಳ್ಳನೂ ಒಂದ್. ಕರ್ನಾಟಕದ ಸುಳ್ಯ ತಾಲೂಕ್‌ನ 2 ದೊಡ್ಡ ಹಳ್ಳಂಗಳ್‌ಲಿ ಒಂದಾದ ಇದ್ ಕೊಡಗ್ ಜಿಲ್ಲೆನ ಪುಸ್ಪಗಿರಿ ಮಲೆಲಿ ಹುಟ್ಟಿ ಮುಂದೆ ಹರ್‌ಕಂಡ್ ಹೋಗಿ ದಕ್ಷಿಣಕನ್ನಡ ಜಿಲ್ಲೆನ ಪುತ್ತೂರು ತಾಲೂಕುನ ಉಪ್ಪಿನಂಗಡಿಲಿ ನೇತ್ರಾವತಿ ಹಳ್ಳನ ಕೂಡಿಕಂಡದೆ. ಇದ್ ಮುಂದೆ ಪೊಡುವಕೆ ಮೋರೆ ಮಾಡಿ ಹರ್‌ದ್ ಮಂಗಳೂರ್‌ನ ಹಕ್ಕಲೆ




ಅರಬ್ಬಿ ಕಡಲ್‌ನ ಸೇವರ್‌ದೆ. ಇದರ ಒಟ್ಟು ಉದ್ದ 80 ಕಿಲೋಮೀಟರ್ ಉಟ್ಟು. ಕರ್ನಾಟಕದ ಹೆಸರ್‌ವಾಸಿ ದೇಸ್ತಾನಗಳ್ಲಿ ಒಂದಾದ ಕುಕ್ಕೆ ಸುಬ್ರಹ್ಮಣ್ಯದ ಶ್ರೀ ಕುಕ್ಕೆ ಸುಬ್ರಹ್ಮಣ್ಯ ದೇಸ್ತಾನವು ಕುಮಾರದಾರ ಹಳ್ಳದ ಕರೆಲಿ ಉಟ್ಟು.ಅಲ್ಲದೆ ಕರ್ನಾಟಕದ ಪೊರ್‌ಲುನ ಜಲಪಾತಗಳ್ಲಿ ಒಂದಾದ



ಕುಮಾರದಾರ

'ಮಲ್ಲಳ್ಳಿ' ಜಲಪಾತ ಇದೆ ಕುಮಾರದಾರ ಹಳ್ಳಂದ ಆಗಿರುವಂತದ್.

ಸುಬ್ರಹ್ಮಣ್ಯ ಜಾತ್ರೆನ ಹೊತ್ತುಲಿ ಹರ್‌ಕೆ ಹೊತ್ತ ಬಕ್ತರ್ ಈ ಹಳ್ಳಲಿ ಮೀದ್‌ದ್ ಸುಬ್ರಹ್ಮಣ್ಯ ದೇಸ್ತಾನದವರೆಗೆ ಸುಮಾರ್ ಎರಡ್ ಕಿಲೋಮೀಟರ್‌ಗಳಸ್ಟ್ ಉದ್ದದ ಮಾರ್‌ಗಲಿ ಉರುಳು ಸೇವೆ ಮಾಡಿ ಸುಬ್ರಹ್ಮಣ್ಯ ದೇವ್‌ರಿಗೆ ಹರಕೆನ ಒಪ್ಪುಸುವೆ. ಹಿಂಗೆ ಈ ಹಳ್ಳಲಿ ಮೀದ್ ದೇವ್‌ರಿಗೆ ಉರ್‌ಳ್ ಸೇವೆ ಮಾಡ್‌ದರ್‌ಂದ ಅಂತವರ ಕಾಯಿಲೆನೂ ಪಾಪನೂ ಪರಿಹಾರ ಆದೆತೇಳ್‌ವ ನಂಬಿಕೆ ಉಟ್ಟು. (ಡಿ.ಎನ್.ಕೆ.)

**ಕುರುಂಜಿ ವೆಂಕಟ್ರಮಣ ಗೌಡ :** ಸುಳ್ಯದ ಪ್ರತಿಸ್ಟಿತ ಕುರುಂಜಿ ಮನೆತನಲಿ ದಿವಂಗತ ಮಾಲಿಂಗ ಮಾಸ್ತರ್ ಹಾಂಗೆ ಲಕ್ಷ್ಮೀ ದಂಪತಿನ ಮಜ್ಜ ಆಗಿ 26 ಡಿಸೆಂಬರ್ 1928ರ್‌ಲಿ ಹುಟ್ಟಿದೊ. ಕುರುಂಜಿ ಅವ್‌ಕೆ ಬಾಲ್ಯಂದಲೇ ಕಾಡ್‌ದ ಬಡತನ ಅವರ ಬೊದ್ಕ್‌ಗೆ ಒಂದ್ ಗುರಿನ ಕೊಟ್ಟತ್. 15ನೇ ವರ್ಸಲಿ ಅಪ್ಪನ ಕಳ್‌ಕಂಡ್ ಸಂಸಾರದ ಹೊರೆನ ಹೊತ್ತೊ. ಇದ್ದ ಹಳ ಕ್ರಿಸಿ ಲಾಬಲಿ ಕುಟುಂಬ ನಡ್ಸಿಕೆ ಕಸ್ಟ ಆಕನ ಸಣ್ಣ ಗೂಡಂಗಡಿ ಇಸಿದ್ ಯಾಪಾರಕೆ ಸುರು ಮಾಡ್ದವು. ಇದರ್‌ಂದಾಗಿ ಅವು 8ನೇ ತರಗತಿ ಮಾತ್ರ ಓದಿಕೆ ಸಾದ್ಯ ಆತ್. ಹೀಂಗೆ ಓದಿಕಾಗದೆ ಇದ್ದ ಬೇನೆ ಮುಂದೆ ಅವು ಸುಳ್ಯಲಿ ಶಿಕ್ಷಣ ಸಂಸ್ತೆ ಸ್ತಾಪನೆ ಮಾಡಿಕೆ ಕಾರಣಾತ್.

ಶಿಕ್ಷಣ ಸಂಸ್ತೆನ ಸ್ತಾಪಕ ಕುರುಂಜಿಯವು ಅಕಾಡೆಮಿ ಆಫ್ ಲಿಬರಲ್ ಎಜುಕೇಶನ್ ಸಂಸ್ತೆನ ಕಟ್ಟಿ ಕುರುಂಜಿಬಾಗ್‌ನ ಕಟ್ಟಿದೊ. 1976ರ್‌ಲಿ ನೆಹರೂ ಸ್ಮಾರಕ ಮಹಾವಿದ್ಯಾಲಯನ ಕಟ್ಟದ್ ವಿದ್ಯಾದೀವಿಗೆ ಬೆಳ್‌ಗಿಸಿದೊ. ಮತ್ತೆ ಒಂದೊಂದೇ ವಿದ್ಯಾ ಸಂಸ್ತೆಗ ಹುಟ್ಟಿಕಂಡೊ. ಕೆವಿಜಿ ಮೆಡಿಕಲ್, ಡೆಂಟಲ್, ಇಂಜಿನಿಯರಿಂಗ್, ಆಯುರ್ವೇದ ಮೆಡಿಕಲ್, ಕೆವಿಜಿ ನರ್ಸಿಂಗ್, ಪಾಲಿಟೆಕ್ನಿಕ್, ಐಟಿಐ, ಕಾನೂನು ಹೀಂಗೆ ಬೆಂಗಳೂರು, ಕೊಡಗ್ ಸುಮಾರ್ ಕಡೆಗಳ್‌ಲಿ 50ರಸ್ಟ್ ವಿದ್ಯಾ ಸಂಸ್ತೆ ಮಾಡ್‌ದೊ.

1950ರ್‌ಲಿ ಕುರುಂಜಿಯವರ ಪ್ರಬಾವಂದ ಬೋರ್ಡ್ ಹೆಸ್ಕೂಲ್ ಮಾಡಿಕೆ ಸಾದ್ಯ ಆತ್. ಕುರುಂಜಿಯವು ಸೊತ ಒಬ್ಬ ಕಲಾವಿದರಾಗಿದ್ದೊ. ಸುಳ್ಯ ಅಬಿವ್ರದ್ದಿಗೆಂತ ದುಡ್ಡು ಕೂಡ್‌ಸಿ ಎರಡ್ ಸಾಮಾಜಿಕ ನಾಟಕ ಆಡ್‌ಸಿದೊ. ಮುಂದೆ ಸುಳ್ಯ ಪ್ರತ್ಯೇಕ ತಾಲೂಕು ಆಕುತ ಪ್ರಯತ್ನ ಪಟ್ಟೊ. ಸುಳ್ಯಲಿ ತಾಲೂಕು ಕೇಂದ್ರ, ನ್ಯಾಯಾಲಯ, ಆಸ್ಪತ್ರೆ, ವಿದ್ಯುತ್, ದೂರವಾಣಿ ಸಂಪರ್ಕ ಕೇಂದ್ರಗಳ ಸ್ತಾಪನೆಗೆ ದುಡ್ದೊ. ಸುಳ್ಯದ ಜನ ಅವರ ಅಮರ ಸುಳ್ಯದ ಶಿಲ್ಪಿಂತ ಕರ್‌ದೊ. ಕುರುಂಜಿಯವರ ಸಾದನೆನ ಗುರ್‌ತಿಸಿ ಅಮೆರಿಕಂದ ಪ್ರತಿಸ್ಟಿತ ಫ್ಲೋರಿಡಾ ವಿಶ್ವವಿದ್ಯಾನಿಲಯ ಗೌರವ ಡಾಕ್ಟರೇಟ್ ಕೊಟ್ಟ್ ಗೌರವಿಸಿದೊ. ರಾಜೀವ್ ಗಾಂಧಿ ರಾಷ್ಟ್ರೀಯ ಏಕತಾ ಪ್ರಶಸ್ತಿ, ಗ್ಲೋರಿ ಆಫ್ ಇಂಡಿಯಾ ಅಂತಾರಾಷ್ಟ್ರೀಯ ಪ್ರಶಸ್ತಿ, ಆರ್ಕ್ ಆಫ್ ಇಂಡಿಯಾ ಅಂತಾರಾಷ್ಟ್ರೀಯ ಪ್ರಶಸ್ತಿ, ನೇಶನ್ಸ್ ವಿಕಾಸ ಜ್ಯೋತಿ ಪ್ರಶಸ್ತಿ, ನ್ಯಾಶನಲ್ ಎಕ್ಸೆಲೆನ್ಸ್ ಅವಾರ್ಡ್,



ಇಂದಿರಾ ಗಾಂಧಿ ಸದ್ಭಾವನಾ ಪ್ರಶಸ್ತಿ, ರಾಷ್ಟ್ರೀಯ ರತನ್ ಅವಾರ್ಡ್, ಮನು ಕುಲಭೂಷಣ ಅವಾರ್ಡ್, ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ಗೋಲ್ಡ್ ಸ್ಟಾರ್ ಮಿಲೇನಿಯಂ ಅವಾರ್ಡ್, ಉಡುಪಿ ಪರ್ಯಾಯ ಪ್ರಶಸ್ತಿ, ಮದರ್ ತೆರೆಸಾ ಎಕ್ಸಲೆನ್ಸ್ ಅವಾರ್ಡ್, ಪ್ರೆಡ್ ಆಫ್ ಇಂಡಿಯಾ ಅವಾರ್ಡ್, ರಾಜೀವ್‌ಗಾಂಧಿ ಶಿರೋಮಣಿ ತೇಳುವ ಪ್ರಶಸ್ತಿಗ ಬಾತ್.

**ಕುರೆ ಕೋಣ್‌ತ :** ಮಂಗ/ಕುರೆಗಳ ಸಾಂಕಿ ಕೊಣ್ಸುದರ ಕುರೆಕೊಣ್ಸುದುತ ಹೇಳ್‌ವೆ. ಹಿಂದೆ ಇವು ಮನೆ ಮನೆಗೆ ಬರ್‌ತಿದ್ದ. ಇವರ 'ಕೊರ್‌ಂಬ'ತ ಕರೆತಿದ್ದ. ಕುರೆನ ಸಾಕಿ ಅದ್ಕೆ ಬುದ್ದಿ ಕಲ್ಸಿ,

ಅನುಕರಣೆ ಮಾಡ್ನಿ, ಮತ್ತೆ ಕೊಣ್‌ತ ನಡ್ಸುದೇ ಇವರ ಉಪಕಸುಬು. ಈ ಜಾತಿನ ಎಲ್ಲಾ ಮನೆಲಿನು ಕುರೆಗಳ ಸಾಕಣೆ ಇತ್ತ್. ಸಾಕಿದ ಕುರೆನ ಕುತ್ತಿಗೆಗೆ ಸಂಕೋಲೆ ಹಾಕಿ, ಕೊಣ್ಸುವಂವ ಮನೆಮನೆಗೆ ಕರ್‌ಕಂಡ್ ಹೋದೆ. ಅಂವನ ಕೈಲಿ ಒಂದ್ ನಾಗರ ಬೆತ್ತ ಇರ್‌ತಿತ್ತ್. ಸಿಕ್ಕಿದ ಅಕ್ಕಿ ಬತ್ತ ಹಾಕಿಕಂಬಕೆ ಹೆಗ್ಲ್ ಮೇಲೆ ಒಂದ್ ಜೋಳಿಗೆ ಇರ್‌ತಿತ್ತ್.

ಕುರೆನ ಕೊಣ್ಸಂವ ಮನೆನ ಒಳಗೆ ನೆಲಲಿ ಕುದ್ದಂಗೆ ಮಂಗನು ಕೂಡ ಅಂವನ ಹಕ್ಕಲೆ ಚುರ್‌ಕರ ಕುದ್ದ್‌ಕಂಬೊತ್ತಿತ್ತು. ಮನೆವರ ಒಪ್ಪಿಗೆ ಪಡ್ದ್ ಅವ ಕುರೆಗೆ ಕೊಣ್ಯೆಕೆ ಹ್ಫೂಂ ಕೊಡತಿತ್ತ್. ಬೇರೆ ಬೇರೆ ತರದ ಕೊಣ್‌ತಗಳ ನಡ್ಸಿದ ಮೇಲೆ ಕೆಲವ್ ಕೆಲ್ಸಗಳ ಮಾಡಿ ತೋರ್‌ಸಿಕೆ ಕುರೆನೊಟ್ಟಿಗೆ ಹೇಳುತ್ತಿತ್ತ್. ನೀರ್ ಹೊತ್ತುಕಂಡ್ ಬಾವ ಹೆಣ್ಣ್, ನಾಟಿ ಮಾಡ್ದು, ಊಟ ಮಾಡ್ದು, ತೊಟಿಗಿಲ್ ತೂಗುದು ಹಿಂಗೆ ಸುಮಾರ್ ತರ ಮೊಯಿಂಸರ್ ಮಾಡ್‌ವಂಗೆ ಅದ್ ಮಾಡಿ ತೋರ್‌ಸುತ್ತಿತ್ತ್. ಅಕೇರಿಗೆ ಅವ 'ಹಿಂದೆನ ಕಾಲಲಿ ಮೊದೊಳಿಗೆ ಹೋದು ಹೆಂಗೆ ಮಂಗಣ್ಣ... ?'ತ ಕೇಳ್ಕನ ಅದ್ ಕೈ ಕಟ್ಟಿ, ತಲೆ ತಗ್ಗಿಸಿ, ಹೆಜ್ಜೆಗೆ ಹೆಜ್ಜೆ ಇಸಿ ಮೆಲ್ಲ ನಡೆತಿತ್ತ್. 'ಈಗನ ಮೊದೊಳಿಗೆ ಹೋದು ಹೆಂಗೆ ಮಂಗಣ್ಣ.... ?'ತ ಕೇಳ್‌ಕನ ಕೈ ಬೀಸಿಕಂಡ್, ಮೋರೆ ಮೇಲೆತ್ತಿ, ಆಚೆ ಈಚೆ ನೋಡಿಕಂಡ್ ನಡೆತ್ತಿತ್ತ್. ಈ ತಮಾಸೆನ ನೋಡ್‌ದ ಮನೆವೆಲ್ಲಾ ಕುಸಿ ಪಡ್ತಿದ್ದ. ಮಕ್ಕ ಅಂತೂ ಬಾರಿ ಕುಸಿ ಪಡ್ತಿದ್ದ. ಮನೆ ಒಳಗೆಂದ ಹುಗ್ಗೆ, ದೋಸೆ, ನೆಟ್ಟಿಕಾಯಿ, ಹಣ್ಣ್‌ಗಳ ತಂದ್ ಮಂಗಂಗೆ ಕೊಟ್ಟ್ ಕುರೆನೊಟ್ಟಿಗೆ ಕೈಕೈ ಕೊಡತಿತ್ತ್. ಮನೆ ಎದುರು ಕುರೆ ಕೊಣ್ಸಿದವಂಗೆ ದುಡ್ಡುನ ರೂಪಲಿಯೋ, ಬಿತ್ತ್‌ನ ರೂಪಲಿ ಕೊಡ್ತಿದ್ದ. ಈಗ ಈ ಕುರೆನ ಕೊಣ್ಸುವ ಆಟ ನಿತ್ತುಟು. ಈಗನ ಸರ್‌ಕಾರ ಹಂಗೆನೆ ಪ್ರಾಣಿ ದಯಾಸಂಗದವು ಪ್ರಾಣಿಗಳ ಕೊಣ್‌ತ ನಡ್ಸುವೆತ ಹೇಳಿ ಯಾದರನು ಸಾಂಕುದರ ಕೂಡಾ ನಿಲ್ಲ್‌ಸಿಯೊಳೊ. (ಪಿ.ಆರ್.)

**ಕುಶಾಲನಗರ :** ಕರ್ನಾಟಕ ರಾಜ್ಯದ ಕೊಡಗ್ ಜಿಲ್ಲೆಲಿ ಕುಶಾಲನಗರ ಒಂದ್ ಮುಕ್ಯ ನಗರ. ಈ ನಗರ ಕಾವೇರಿ ಹೊಳೆಂದ ಸುತ್ತುವರ್‌ದುಟ್ಟು. ಕೊಡಗ್‌ಗೆ ಕುಶಾಲನಗರ ಒಂದ್ ಹೆಬ್ಬಾಗಿಲ್ ಇದ್ದಂಗೆ. ಜೆನಸಂಕ್ಯೆನ ಆದಾರಲಿ ಮಡಿಕೇರಿ ಹಾಂಗೆ ವಿರಾಜಪೇಟೆ ತಾಲ್ಲೂಕ್ ಹೊರತ್ ಪಡ್‌ಸಿ ಇದ್ ಕೊಡ್‌ಗ್‌ನ ಮೂರನೇ ದೊಡ್ಡ ನಗರ ಆಗುಟು. ಅಲ್ಲದೆ ಇದೊಂದ್ ಕೊಡಗಿನ ಬಹುಮುಕ್ಯ ವಾಣಿಜ್ಯ ನಗರ ಸ ಆವುಟು. ಇದರ ಹಿಂದೆನ ಇತಿಯಾಸನ ಗ್ಯಾನ ಮಾಡಿರೆ ಇಲ್ಲಿನ ಜೆನ ಮಾತಾಡಿಕಂಬ ಪ್ರಕಾರ ಹೈದರ್ ಆಲಿ ಕುಸಾಲನಗರಕೆ ಈ ಹೆಸ್‌ರ್ ಇಟ್ಟದ್‌ತ ಗೊತ್ತಾದೆ. ಯಾಕೆಂತ ಹೇಳಿರೆ ಹೈದರ್ ನ ಮಜ್ಜ ಟಿಪ್ಪು ಹುಟ್ಟಿದ ಸುದ್ದಿ ಸಿಕ್ಕಿಕನ ಕುಸಿಲಿ ಈ ನಗರಕ್ಕೆ 'ಕುಸ್ಯಾಲ್ ನಗರ' ತ ಹೆಸ್‌ರ್ ಇಸಿತದ್‌ತ ಹೇಳ್‌ವೆ. ಆದರೆ ವಾಸ್ತವಾಂಸ ಟಿಪ್ಪು ಹುಟ್ಟಿದ್ 1750ರ್‌ಲಿ ಆದರೆ ಹೈದರ್ ಕೊಡ್‌ಗ್ ಪ್ರವೇಸ ಮಾಡ್ದೇ 1770ರ್‌ಲಿ ಬ್ರಿಟೀಸರ್ ಕೊಡ್‌ಗ್‌ನ ವಸಪಡ್‌ಸಿಕಂಡ ಮೇಲೆ ಕುಶಾಲನಗರಕ್ಕೆ 'ಪ್ರಸರ್ ಪೇಟೆ'ತ ಹೆಸ್‌ರ್ ಮೊಡ್‌ಗಿದೊ. ಅಂದ್‌ನ ಕೊಡಗ್‌ನ ಅದಿಕಾರ ವೈಸಿಕಂಡಿದ್ದ ಬ್ರಿಟಿಸ್ ಸೇನಾನಿ 'ಜೇಮ್ಸ್ ಸ್ಟುವಾರ್ಟ್ ಪ್ರಸರ್' ನ ಹೆಸ್‌ರ್‌ನನೆ ಕುಶಾಲನಗರಕ್ಕೆ ಇಸಿದೊ. ಒಟ್ಟಾರೆ ಈಗ ಈ ನಗರನ 'ಕುಶಾಲನಗರಂತನೇ ಗುರ್‌ತಿಸುವೆ.

ಕುಶಾಲನಗರಲಿ ಒಂದ್ ಸರ್‌ಕಾರಿ ಬಸ್ ನಿಲ್ದಾಣ ಉಟ್ಟು. ಈ ನಿಲ್ದಾಣಂದ ಹೊರ ಜಿಲ್ಲೆಗಳಿಗೆ ಅಲ್ಲದೆ ಹೊರ ರಾಜ್ಯಗಳಿಗೂ ಬಸ್‌ನ ವೆವಸ್ತೆ ಉಟ್ಟು. ಕೊಡ್‌ಗ್‌ಲಿ ರೈಲ್ವೆ ಸೇವೆ ಸದ್ಯಕ್ಕೆ ಇಲ್ಲೆ. ಅಂದರೂ ಮೈಸೂರುಂದ ಹಿಡ್ದ್ ಕುಶಾಲನಗರ ವರೆಗೆ ರೈಲ್ವೆ ಸೇವೆ ಸುರು ಮಾಡೊಕುಂತ ಉಟ್ಟು. ಆದ್‌ರೆ ಅದರ ಕೊಡಗ್‌ನ ಪರಿಸರವಾದಿಗ ತಿರಸ್ಕರಿಸಿಯೊಳ. ಈ ಪೇಟೆಗೆ ಹಕ್ಕಲೆನ ವಿಮಾನ ನಿಲ್ದಾಣತೇಳಿರೆ ಮೈಸೂರು. ಅಂತಾರಾಷ್ಟೀಯ ವಿಮಾನ ನಿಲ್ದಾಣ ಕೊಡ್‌ಗಿಗೆ ಹಕ್ಕಲೆನ ಕಣ್ಣೂರ್‌ಲಿ ಉಟ್ಟು. ಭಾರತೀಯ ವಿಮಾನ ನಿಲ್ದಾಣ ಪ್ರಾದಿಕಾರ ಕೊಡ್‌ಗ್‌ನ ಕುಶಾಲನಗರ ತಾಲ್ಲೂಕ್‌ಲಿ ಸಣ್ಣ ವಿಮಾನ ನಿಲ್ದಾಣನ ಸ್ತಾಪನೆ ಮಾಡೊಕುಂತ ಚಿಂತನೆ ನಡ್‌ಸಿಯೊಳ.

ಕಳ್ದ 2011ರ ಜೆನಗಣತಿ ಪ್ರಕಾರ ಕುಶಾಲನಗರ 15, 327 ಜೆನಸಂಕ್ಯೆ ಹೊಂದಿತ್ತ್. ಅದರ್‌ಲಿ ಶೇಕಡಾ 53% ಗಂಡ್‌ಜೆನ ಇದ್ದರೆ ಶೇಕಡಾ 47% ರಷ್ಟ್ ಹೆಣ್ಣ್ ಜೆನಗ ಇದ್ದೊಳ. ಕುಶಾಲನಗರ ಸೇಕಡಾ 89.53 ರಷ್ಟ್ ಸಾಕ್ಷರತೆ ಹೊಂದಿಟು. ಅದರ್‌ಲೂ ರಾಜ್ಯದ ಸಾಕ್ಷರತಾ ಪ್ರಮಾಣ 75.37% ಕ್ಕಿಂತ ಹೆಚ್ಚಿ ಉಟ್ಟು. ಗಂಡ್‌ಜೆನರ ಸಾಕ್ಷರತಾ ಪ್ರಮಾಣ ಶೇಕಡ 82% ಮತ್ತೆ ಹೆಣ್ಣ್ ಜೆನರ ಸಾಕ್ಷರತಾ ಪ್ರಮಾಣ 73% ಆಗುಟು.

ಕುಶಾಲನಗರಕ್ಕೆ ಹಕ್ಕಲೆನ ಊರುಗ ತೇಳಿರೆ ಅದ್ ಮುಳ್ಳುಸೋಗೆ, ಕೂಡುಮಂಗ್‌ಳೂರು, ಕೂಡಿಗೆ ಹಿಂಗೆ ಸುಮಾರ್ ಊರುಗ ಒಳ. ಕುಶಾಲನಗರಲಿ ನಾವ್ಗೆ ಎರಡ್ ಪ್ರತಿಸ್ಟಿತ ಸಮುದಾಯಗಳ್‌ನ ಕಾಣಕ್. ಅದ್ ಅರೆಬಾಸೆ ಗೌಡ ಜೆನಾಂಗ ಮತೆ ಕೊಡವ ಜೆನಾಂಗ. KIADB ಕೈಗಾರಿಕಾ ಜಾಗೆ ಕುಶಾಲನಗರ ಹಕ್ಕಲೆ ಇರ್‌ವ ಕೂಡ್ಲೂರುಲಿ ಕಾಂಬಕೆ ಸಿಕ್ಕಿದೆ. ಇಲ್ಲಿ ಹೆಚ್ಚೆಚ್ಚ್ ಕಾಪಿ ಕೈಗಾರಿಕೆಗ ಒಳ.

ಕುಶಾಲನಗರ ಅತಿ ಹೆಚ್ಚಿ ಸಾಕ್ಷರತಾ ಪ್ರಮಾಣ ಪಡ್‌ಕಂಡಿರ್‌ದಕೆ ಕಾರಣ ಇಲ್ಲಿರೊ ಕಲಿಕಾ ವಾತಾವರಣನೇ ಆಗುಟು. ಇಲ್ಲಿ 7 ಕಾಸಗಿ ಸಾಲೆಗ, ಒಂದ್ ಸರ್‌ಕಾರಿ ಸಾಲೆ (ಒಂದ್ ಸರ್‌ಕಾರಿ ಪ್ರತಮ ದರ್‌ಜೆ ಕಾಲೇಜ್), ಒಂದ್ ಪಾಲಿಟೆಕ್ನಿಕ್ ಕಾಲೇಜ್, ಒಂದ್ ಇಂಜಿನಿಯರಿಂಗ್ ಕಾಲೇಜ್ ಉಟ್ಟು. ಅಲ್ಲದೆ ಇಲ್ಲಿಗೆ ಹಕ್ಕಲೆ ಇರೊ ಕೂಡಿಗೆಲಿ ಹೆಚ್ಚಾಗಿ ಗಮನಿಸುವಂಗೆ ಒಂದ್ ಕ್ರೀಡಾ ಸಾಲೆ ಮತ್ತೆ ಸೈನಿಕ ಸಾಲೆ ಸನ ಉಟ್ಟು. ಈ ಪೇಟೆಗೆ ಹಕ್ಕಲೆನ ಪ್ರವಾಸಿ ಜಾಗೆಗತೇಳಿರೆ ಅದ್ ಕಾವೇರಿ, ಹಾರಂಗಿ, ದುಬಾರೆ, ಚಿಕ್ಲಿಹೊಳೆ, ಅಯ್ಯಪ್ಪ ಸ್ವಾಮಿ ದೇಸ್ತಾನ, ಕಣಿವೆ, ನಿಸರ್‌ಗದಾಮ, ಟಿಬೆಟ್ ಕ್ಯಾಂಪ್ ಇಂತದೆಲ್ಲ. (ಪಿ.ಡಿ.)




**ಕ್ರಿಸಿ ಜಾನಪದ :** ಅಗೆ ತೆಗೆಯುದು, ನಾಟಿ ನೆಡ್‌ದು, ಪೂಕರೆ, ಬತ್ತಬೇಸಾಯ, ಬೇಸಾಯ ಕೆಲ್ಸದ ಸಾಮಾನ್‌ಗ

**ಅಗೆ ತೆಗೆದು :** ಕೊಡ್‌ಗ್ ಪ್ರದೇಸಲಿ ಬೇಸಾಯಲಿ ಬತ್ತನ ಬಿತ್ತ್ ಹಾಕಿದ ಮೇಲೆ ಮೊಳ್ಕೆ ಒಡ್‌ದ್ ಮೇಲೆ ಬಂದ ಹುಲ್ಲ್‌ನ ಅಗೆತ ಕರ್‌ದವೆ. ಇದರ ಸುಳ್ಯದ ಕಡೆ ನೇಜಿ ತೇಳಿ ಇರ್‌ದವೆ. ಗದ್ದೆಲಿ ನಾಟಿ ಮಾಡಿಕೆ ಈ ಅಗೆನ. ಬೆಳ್‌ದ ಈ ಅಗೆನ ನಾಟಿ ಮಾಡಿಕೆ ತೆಗಿದರ ಅಗೆ ತೆಗೆದುತ ಹೇಳ್‌ವೆ. ಅಗೆತೆಗೆವ ದಿನ ಬೊಳ್ಪುಗೆ ಮನೆ ಯಜಮಾನ್‌ತಿ ಸುದ್ದ ಬಟ್ಟೆ ಉಟ್ಟ್ ಹಾಲ್, ಅಕ್ಕಿ, ಬೆಲ್ಲನ ಗದ್ದೆಗೆ ತಕಂಡ್ ಹೋದವೆ. 'ದೋರೆ' ಸೊಪ್ಪ್‌ನ ತಂದ್ ಗದ್ದೆನ ಪುಣಿ ಮೇಲೆ ಸೊಪ್ಪುನ ಮೂಡ ದಿಕ್ಕಿಗೆ ಮೋರೆ ಇರ್‌ವಂಗೆ ಇಸಿಬುಟ್ಟ್ ಅದರ್‌ಲಿ ಈ ಹಾಲ್ ಅಕ್ಕಿ ಬೆಲ್ಲ, ಹೂ ಇಸಿ ಪೂಜೆ ಮಾಡಿ ಮೂಡಕೆ ತಿರ್‌ಗಿ ನಿತ್ತ್ ಶ್ರೀಮೂಲ ಕಾವೇರಮ್ಮ ಮತ್ತೆ ಇಗ್ಗುತಪ್ಪ ದೇವ್‌ರ್‌ನ ಬಕ್ತಿಲಿ ಪ್ರಾರ್‌ತನೆ ಮಾಡಿಕಂಡವೆ. ಅಗೆಗೆ (ನೇಜಿಗೆ) ಹಾಲ್ ಹಾಕಿ 'ಪೊಲಿಯ'ತ ಹೇಳಿ ಅಗೆ ತೆಗ್‌ದವೆ.

**ಅಗೆ ಪೂಜೆ :** ಸುರುನ ಸರ್‌ತಿ ಅಗೆ ತೆಗ್‌ದ ಮೇಲೆ ಮಾಡ್‌ವ ಪೂಜೆಗೆ ಅಗೆ ಪೂಜೆಂತ ಕರ್‌ದವೆ. ಒಂದೊಂದ್ ಕುಟುಂಬಲಿ ಯಾರ ಕಡೆವು ಅಕೇರಿಗೆ ಅಗೆ ತೆಗ್‌ದವೆನೊ ಅಲ್ಲಿ ಎಲ್ಲಾ ಹೆಣ್ಮಕ ಸೇರಿ ಗಾಡಿನ ಏರಿನ ಲಾಯಿಕ್ ಸಾರ್‌ಸುವೆ. ಸುರುಳಿ ಸೊಪ್ಪುಲಿ ಅಕ್ಕಿ, ಹಣ್ಣ್, ಹೂ, ವೀಳ್ಯದೆಲೆ ಇಸಿವೆ. ಪೂಜೆ ಮಾಡ್‌ದ ಮೇಲೆ ಅಗೆಂದಲೇ ರಸ ತೆಗ್‌ದ್ ಸುಣ್ಣದ ಬೊಟ್ಟು ಇಸಿಕಂಡವೆ. ಇದರ ಅಗೆ ಪೂಜೆತ ಕರ್‌ದವೆ.

**ನೇಗಿಲು ಪೂಜೆ :** ಗದ್ದೆ ಹೂಡ್ದು ಮುಗೆತಿದ್ದಂಗೆ ನೇಗ್ಲ್, ನೊಜ್ಜ ಕೊಟ್ಟುಪಿಕ್ಕಾಸ್‌ಗೆ ಮಾಡ್‌ವ ಪೂಜೆ. ರೈತರ್ ಕ್ರಿಸಿ ಕೆಲ್ಸಕೆ ಉಪಯೋಗ ಮಾಡ್ತಿದ್ದ ಎಲ್ಲಾ ಸಾಮಾನ್‌ಗಳ ಲಾಯ್ಕ್ ತೊಳ್ದ್ ಶ್ರೀಗಂದ ಹಾಕ್‌ತಿದ್ದೊ. ಎಲ್ಲಾ ಕ್ರಿಸಿ ಸಾಮಾನ್‌ಗಳ ಹೂಂದ ಅಲಂಕರ್‌ಸಿ ಕುಟುಂಬದ ಎಲ್ಲಾ ಗಂಡಸರ್ ಮಕ್ಕ ಸೇರಿ ಮಾಡ್‌ವ ಪೂಜೆ. ಗುರು ಕಾರಣಿಕರ ನೆನ್ಸಿ ಶ್ರೀ ಕಾವೇರಮ್ಮನ ಗುರುಹಿರಿಯರ್ ತಮ್ಮ ಎಲ್ಲಾ ಕಾರ್ಯಕಲಾಪಂಗಳಿಗೆ, ಬಿತ್ತಿದ ಬೆಳೆಗೆ, ದನಕರ್‌ಗಳಿಗೆ, ಸಮೃದ್ಧಿಯಾಗಿ ಬೆಳೆ ಬೆಳೆದಕೆ ಕಾಲಕಾಲಕೆ ಸರಿಯಾಗಿ ಮಳೆ ಆಗಿ ಸಮೃದ್ಧಿ ಆಗಲಿತ ಪಾರ್‌ತಿಸಿ (ತೊಳಸಿದ ಒಟ್ಟಿನ) ನೈವೇದ್ಯನ ದೇವ್‌ರಿಗೆ ಇಸಿ ದೇವ್ರ ನೆನ್ಸಿ ಪ್ರಸಾದ ತಕಂಡವೆ. (ಎಂ.ಎಸ್.)

**ಬತ್ತ ಬೇಸಾಯದ ಕ್ರಿಯಾ ಸ್ವರೂಪ :** 1. ವರ್‌ಸದ ಸುರು : ಸೌರಮಾನದ ಕಾಲ ಲೆಕ್ಕಾಚಾರ ಇಸಿಕಂಡ್ ವರ್‌ಸನ ಲೆಕ್ಕ ಹಾಕಿರೆ ನಾವ್ಗೆ ಜಾನಪದ ಸಂಸ್ಕೃತಿಲಿ ಪಗ್ಗು ತಿಂಗಳ್‌ಂದ ಹೊಸ ವರ್‌ಸ ಸುರಾದೆ. ಸುಗ್ಗಿ ಅಕೇರಿಂದ (ಸುಗ್ಗಿ ಮೂವತ್ತಂರ್‌ದ) ಹಿಂದೆನ ಬೇಸಾಯ ಜೀವನನ ಮುಗ್ಸಿದ್ ಮಾರನೆ ದಿನ ಬೊಳ್ಪುಂದ ಹೊಸ ಬೇಸಾಯ ಜೀವನ ಕ್ರಮಲಿ ನಡಿದೇ ಈ ಹೊಸ ವರ್‌ಸ.

ಬತ್ತ ಬೇಸಾಯದ ಸುರುವಾತ್‌ಲಿ ಸಾಸ್ತ್ರಕೆ ಬರೆ ಹಿಡಿವ' ಕ್ರಮ ಪಗ್ಗು 1ರ ಸೂರ್‌ಯ ಮೂಡುವ ಹೊತ್ತ್‌ಲಿ ನಡ್ಡದೆ. ಅಂದ್‌ಂದ ಪುರುಸೊತ್ತು ಇಲ್ಲದಂಗೆ ಸುರಾವ ಅರೆಬಾಸಿಗರ ಮತ್ತೆ ತುಳುವರ ಕೆಲ್ಸ ಕಾರ್‌ಯಂಗ ಬರ್‌ವ ವರ್‌ಸದ ಸುಗ್ಗಿ 30ರವರೆಗೆ ಒಂದಿಡೀ ವರ್‌ಸ ನಡ್ಡದೆ. ಬೆಳೆನ ಬವಿಸ್ಯಕೆ ಮಳೆನನೆ ನಂಬಿಕಂಡಿರ್‌ವ ಅರೆಬಾಸೆ ನಾಡ್‌ಲಿ ಜೆನಂಗ, ಪಗ್ಗು ತಿಂಗಳ್‌ಲಿ ಮಳೆ ಹಿಡಿದರ್‌ಂದ ಹೊಸವರ್‌ಸಲಿ ಕ್ರಿಸಿ ಕೆಲ್ಸ ಸುರು ಮಾಡ್ದರ್‌ನೂ ಅದರೊಟ್ಟಿಗೆ ಒಗ್ಗುಸಿಕಂಡೊಳೊ.

ಪಗ್ಗು 1ರ 'ಬಿಸು' ಅರೆಬಾಸೆನ ಜೆನಕೆ ಹಬ್ಬದ ದಿನ. ಅರೆಬಾಸೆ ಸಂಸ್ಕೃತಿಲಿ ಈದಿನ ದುಡ್ಮೆಗೆ ರಜೆ ಕೊಡುವ ದಿನನೂ ಆಗಿದ್ದದೆ. ಹಂಗಾಗಿ ಬೇಸಾಯ ಸಂಸ್ಕೃತಿಲಿ ದುಡಿಮೆನೇ ಹಬ್ಬಂತೇಳಿ ಗ್ರೇಸಿಕಂಡದರ ಬಿಸುನ ಆಚರಣೆಂದ ತಿಳ್ಯಕ್. ವೈದಿಕ ಪುರಾಣದ ಕಲ್ಪನೆನ 'ವಿಶು' ಆಚರಣೆ ನಮ್ಮಲ್ಲಿ ನಡೆಯದೆ ಇರ್‌ದಕೆ ಇದ್‌ಕೂಡ ಒಂದ್ ಉದಾರ್‌ಣೆ. ಗದ್ದೆ ಹೂಡ್‌ವ ಕಾರ್‌ಯ ಮುಗ್ದ ಮೇಲೆ ಅದೇ ದಿನ ಬಿತ್ತನೆನ ಕಾರ್‌ಯ 'ಪುಂಡಿಬಿತ್ತ್' ಹಾಕುದರ್‌ಂದ ಸುರಾದೆ. ಹಂಗಾಗಿ ಹೂಡ್ದು ಹಂಗೆ ಬಿತ್ತುದು ಇದೆರ್‌ಡರ ಸಾಸ್ತ್ರ, ಅರೆಬಾಸೆಯವರ ವರ್‌ಸಮೊಗ್ಚುವ ಸುರುನ ದಿನಂದಳೇ ಸುರಾದೆ.

ಅರೆಬಾಸೆವರ ವರ್‌ಸ ಮೊಗ್ಚುವ ಸುರುನ ಕ್ರಮಗ ಹೂಡುದ್ ಮತ್ತೆ ಬಿತ್ತುದರ್‌ಂದಲೇ ಸುರು ಆದು ಮೊಯಿಂಸನ ಸಾಂಸ್ಕೃತಿಕಇತಿಯಾಸ ಮೊಗ್‌ಚಿ ತಿರ್‌ಗಿ ಬಂದಾಂಗೆ ಕಂಡ್‌ಬಂದದೆ. ಅಲ್ಲಿಂದ ಮುಂದೆಗೆ ವರ್‌ಸ ಇಡೀ ತಾಪತ್ರೆ ಇಲ್ಲದೆ ಈ ಕ್ರಿಯೆ ಸಾಗೆಂಡ್ ಹೋದೆ. ಆದ್ದರ್‌ಂದ ಬೇಸಾಯನೇ ಬೊಡ್ಕಂತ ನೊಂಬಿದ ಜೆನಗ ಈ ರೀತಿಲಿ ಅರೆಬಾಸೆನ ನಾಡೊಳಗೆ ಪ್ರತ್ಯೇಕ ಬೇಸಾಯ ಸಂಸ್ಕೃತಿನ ಕಟ್ಟಿಕೆ ಕಾರಣ ಆಗೊಳೊ.

**ಏಣೆಲ್ ಬೇಸಾಯ :** ಬೇಸಾಯದ ಕೆಲ್ಸಲಿ ಕಾಲಮಾನಕೆ ಹೊಂದಿಕೆ ಆವಂಗೆ ಬೆಳೆವ ಬೆಳೆಲಿ ಮೂರ್ ಮುಕ್ಯ ಪಾಲ್ ಮಾಡಿಯೊಳೊ. ಅದರ್‌ಲಿ ಸುರುನ ಬೆಳೆನೆ ಏಣೆಲ್ ಅಲ್ಲರೆ ಏಣಿಲ್ ತೇಳುವೆ.

**ಏಣೆಲ್ ಪದದ ಒಡ್ಸಿದ ಅರ್‌ತ :** ಏಣೆಲ್ ತುಳುಬಾಸೆನ ಪದ. ತುಳು ನಿಘಂಟ್‌ಲಿ ಹೇಳ್ದಂಗೆ ಅರ್‌ತವಿವರಣೆನ ಪ್ರಕಾರ ಏಣಿಲು ತೇಳ್ವ ಪದನ 'ಏಣೆಲು', 'ಏಣೇಲ್', 'ಏಣಿಲು', 'ಏನೆಲ್' ಹಿಂಗೆಲ್ಲ ರೂಪಲಿ ಬಳ್ಸುವೆ. ಇದ್ಕೆ ಬತ್ತದ 'ಸುರುನ ಬೆಳೆ', 'ಮುಂಗಾರು ಬೆಳೆ' ಅಲ್ಲರೆ 'ಕಾರ್‌ತಿ ಬೆಳೆ'ತ ಅರ್‌ತ ಉಟ್ಟು. ಏಣಿಲ್‌ತೇಳ್ವ ಪದ 'ಏನೆಲ್' ಪದಂದ ಬಂದಿರ್‌ವ ಸಾದ್ಯತೆ ಉಟ್ಟು. ಸಾಮಾನ್ಯ ಆಗಿ 'ಏ' ತೇಳ್ದು ಗತ್ತ್ ಮತ್ತೆ ಹೆಗ್ಗಳಿಕೆನ ಅರ್‌ತಲಿ ಉಚ್ಚರ್‌ಸಿಕನ ಸುರುನ ಪದಕೆ ಸೇರ್‌ವ ತುಂಡ್ ಆಗುಟು. ಇಲ್ಲಿ 'ನೆಲ್' ತೇಳುವ ಪದಕೆ 'ಏ' ತೇಳ್ವ ಗತ್ತ್‌ನ ಪದ ಸೇರಿ 'ಏನೆಲ್' ಅಂತಾಗಿರ್‌ದು. ಏಣೆಲು ಬೆಳೆಲಿ ಕಂಡ್‌ಬಾವ ಸಮೃದ್ದ ಬತ್ತ ಪಸಲ್‌ನ ಹಿನ್ನಲೆಲಿ 'ಏ' ತೇಳ್ವ ಹೆಗ್ಗಳಿಕೆನ ಪದಕೆ 'ನೆಲ್' ಕೂಡಿಕಂಡಿರ್‌ದು. ಆದ್ದಂರ್‌ದ ಅದ್ 'ಏನೆಲ್'ತ ಬಳ್ಸಿ ಮುಂದೆ

ಏಣೆಲ್ ಆಗಿರ್‌ದುತೇಳಕ್. ಅರೆಬಾಸೆಲಿ ಇದೆ ಪದನ ಒಡ್ಸಿರೆ ಸುರುಗೆ ಗದ್ದೆಗಿಲ್ಲಿ ಹೂಡ್‌ವ ನೇಗ್ಲ್‌ಂದ ಸಿಕ್ಕವ ಬೆಳೆಗೆ ಏಣೆಲ್‌ತ ಬಾಯ್ಮಾತ್‌ಲಿ ಬಂದಿರಿಕೂ ಸಾಕ್. ಇದ್ ಬುಟ್ಟರೆ ಏಣೆಲ್ ಪದಕೆ ಬೇರೆಯಾವ ಅರ್‌ತಗ ಕಾಂಬೊದ್ಲೆ.



ಬೇಸಾಯದ ಕಾಲ ಚಕ್ರ

**ಏಣೆಲ್ ಬೆಳೆನ ಕಾಲ :** ವರ್‌ಸ ಮೊಗಿವ ಅರೆಬಾಸೆ ತಿಂಗದ ಲೆಕ್ಕಚಾರದ ಪ್ರಕಾರ ಸುರುನ ಬೆಳೆ ಆದ ಏಣೆಲ್ ಮುಂಗಾರ್ ಬೆಳೆ ಆಗುಟು. ಪಗ್ಗು ಸುರುಂದ ನಿರ್‌ನಾಲ್‌ವರೆಗೆನ ಕಾಲನ ಏಣೆಲ್ ಬೆಳೆನ ಕಾಲಾವದಿ ತೇಳುವೆ(ಏಪ್ರಿಲ್ ಮೇ ತಿಂಗಳ್‌ಂದ ಸೆಪ್ಟಂಬರ್, ಅಕ್ಟೋಬರ್ ತಿಂಗಳವರೆಗೆ). ಮೂರ್ ಬೆಳೆಗೆ ಕಾಲದ ಹೊಂದಾಣಿಕೆನ ಪ್ರಕಾರ ಮಳ್ಗಾಲದ ಬೇಸಾಯ ಪಗ್ಗುಂದ ನಿರ್‌ನಾಲ್ ವರೆಗೆ 'ಏಣೆಲ್'(ಮೇ ತಿಂಗಂಳ್ದ ಸೆಪ್ಟಂಬರ್). ಚಳಿಗಾಲದ ಬೇಸಾಯ ನಿರ್‌ನಾಲ್‌ನಿಂದ ಪೊನ್ನಿ ತಿಂಗಳವರೆಗೆ ಸುಗ್ಗಿ ಬೇಸಾಯ(ಅಕ್ಟೋಬರ್ ತಿಂಗಂಳ್ದ ಜೆನವರಿ). ಬೇಸಿಗೆ ಕಾಲದ ಬೇಸಾಯ ಮಾಯಿಂದ ಪಗ್ಗು ವರೆಗೆ ಕೊಳ್ಕೆ(ಜೆನವರಿಂದ ಏಪ್ರಿಲ್)ಬೆಳೆಂತಾಗುಟು. ಮೂರು ಬೆಳೆಲಿ ಹೆಚ್ಚಿಗೆ ಕಾಲ, ತೇಳಿರೆ ಸುಮಾರ್ ಅರ್‌ದ ವರ್‌ಸ ಕಾಲನ ಏಣೆಲು ಬೆಳೆಲೇ ಕಳಿಯಕಾದೆ. ಪಗ್ಗು ತಿಂಗಂಳ್ದ ಸೋಣ ತಿಂಗಳವರೆಗೆ (ಮೇ –ಆಗಸ್ಟ್)ಊರುಲಿ ಬಾವ ಜೋರು ಮಳೆಂದಾಗಿ ಅಕೇರಿಗೆ ನಿರ್‌ನಾಲ್, ಜಾಲ್ತ ತಿಂಗಳ್‌ಲಿ ಪಸಲ್‌ನ ಕೊಯ್ಲ್ ನಡ್ದದೆ(ಸೆಪ್ಟೆಂಬರ್, ಅಕ್ಟೋಬರ್). ಆದರೆ ಆ ತಿಂಗಳ್‌ಲಿ ಮಳೆ ಬಾರದೆ ನೀರ್ ಇಲ್ಲದೆ ಬೇಸಾಯ ಸುರು ಮಾಡಿಕೆ ನಿದಾನ ಆದೆ. ಹಂಗಾಗಿ ಬೇಸಾಯಕೆ ಬೇಕಾಗಿ ನಡೆವ ಎಲ್ಲಾ ಕ್ರಮಂಗ ಬರೀ ಹೆಸ್‌ರಿಗೆ ಮಾತ್ರ ಆಯಾ ತಿಂಗಳ್‌ಲಿ ನಡ್ದದೆ. 'ಏಣೆಲ್ ಮಳೆನೀರ್, ಸುಗ್ಗಿ ಹದನೀರ್, ಕೊಳ್ಕೆ ಅಡಿ ನೀರ್'ತೇಳ್ವ ಗಾದೆ ಈ ಕಾರಣಂದಳೆ ಹುಟ್ಟಿಟು. ಏಣೆಲ್ ಬೆಳೆ ಮಳೆ ನೀರ್‌ಂದಲೇ ಬೆಳಿವಂತದಾಗುಟು. ಊರ್ ತಂಪಾಗಿರ್‌ವ ಕಾಲಲಿ ನಡೆವ ಏಣೆಲ್ ಬೇಸಾಯ ಚಳಿಗಾಲದ ಸುರುಲಿ ಮುಗ್ದದೆ. ಆದ್ದರ್‌ಂದ ಏಣೆಲ್ ಬೆಳೆ ಮತ್ತೆ ಮಳೆಗೆ ಹಕ್ಕಲೆನ ಸಮ್ಮಂದ ಉಟ್ಟು. ಊರುಲಿ ಮಳೆ ನಿತ್ತ್‌ಬುಟ್ಟು ಅಪ್ರೂಪಕೆ ಹೊಯ್ದರೆ ಬೆಳೆಲೂ ವೆತ್ಯಾಸ ಕಂಡ್‌ಬಂದದೆ. ಹಾಂಗಾಗಿ ನಾಡೊಳೆಗೆ ಸರಾಗ ಹೊಯ್ವ ಮಳೆಂದಾಗಿ ಏಣೆಲ್ ಬೇಸಾಯನೂ  ಲಾಯ್‌ಕ್‌ಲಿ ನಡ್ದದೆ.

**ಬೇಸಾಯಕೆ ಹೊರ್‌ಡುದು :** ಸುಗ್ಗಿ ತಿಂಗಳ ಅಕೇರಿಗೆ (ಮಾರ್ಚ್ ಏಪ್ರಿಲ್) ಸುಗ್ಗಿ ಬೇಸಾಯದ ಹುಲ್ಲುನ ರಾಸಿ ಹಾಕುವ ಹುಲ್ಲು ಮಂಟಮೆನ ಕೆಲ್ಸನ ಮಾಡಿ ಮುಗ್ಸುವೆ. ಚೂರುಚೂರು ಕೊಳ್ಕೆ ಬೇಸಾಯ ಇದ್ದರೂ ಅದರ ಕೊಯ್ಲ್ ಮುಗ್ಸಿ ಮುಂದೆನ ಬೇಸಾಯಕೆ ತಯ್ಯಾರಿ ನಡ್ದದೆ. 'ಮಾಯಿಂದ ಮೇಲೆ ಮಳ್ಗಾಲ' (ಮಘ ತಿಂಗಳ ನಂತರ ಮಳೆಗಾಲ) ಸುರಾದರ್‌ದ ಬೆಳೆಬೆಳಿವ ಜಾಗೆನ ನೆರೆಕರೆ ಇರ್‌ವ ಕಾಡ್‌ಕಡ್ಡಿಗಳ ತೆಗ್ದ್ ಮನಾರ ಮಾಡ್ವ ಕಾರ್‌ಯ ನಡ್ದದೆ. ಪಗ್ಗು ಒಂದರಂದ್ ಸುರೂಗೆ ಹೂಡಿಕೆ ಬೇಕಾದ ದನಗಳ ತಾವ ಕಾರ್‌ಯ ಹೆಚ್ಚಿಕಮ್ಮಿ ಸುಗ್ಗಿಲಿ ಮುಗ್ದಿದ್ದದೆ. ಹಾಂಗೆ ಪಗ್ಗು ಒಂದರಂದ್ ಹೂಡಿಕೆ ಸುರುಮಾಡಿ, ಪಗ್ಗು ಹದ್ನೆಂಟಕೆ ಬಿತ್ತ್ ಬಿತ್ತುವ ಕ್ರಮ ಇದ್ದದೆ.

ಸುಗ್ಗಿ ಕಡೇ ದಿನ ಆದ ಸಂಕ್ರಮಣದಂದ್ (ಸುಗ್ಗಿ 30) ಒಕ್ಕಲ್‌ತನದ ಲೆಕ್ಕಾಚಾರಂಗ ಮತ್ತೆ ಬಾವ ಬೇಸಾಯದ ಬಗ್ಗೆ ಮಾತ್ ಕತೆಗ ನಡ್ದವೆ. ಬೇಸಾಯ ಕೆಲ್ಸದ ಹೊತ್ತುಲಿ ಕೆಲ್ಸದ ಜೆನಂಗಳಿಗೆ ತಿಂಬಕಾಗಿ ಹಪ್ಪಳ, ತೋಳೆ, (ಉಪ್ಪ್‌ಲಿ ಹಾಕಿಟ್ಟ ಹಲ್ಸ್‌ನ ತೊಳೆ)ಗೆಳ್ಸ್, ಮಾಯಿನ ಮಿಡಿ ಇಂತದರೆಲ್ಲ ಕೂಡಿಸಿಕಂಡವೆ. ಸುಗ್ಗಿ ಬತ್ತನ ಬೇಸಿ, ಒಣ್ಗುಸಿ, ಬೇಸಾಯ ಹೊತ್ತುಲಿ ಬಳ್ಸಿಕೆ ಬೇಕಾದಸ್ಟ್ ಬಿತ್ತುವ ಬಿತ್ತ್‌ನ ಜಾಗ್ರತೆಲಿ ತೆಗ್ದಿಸಿಕಂಡಿದ್ದವೆ. ಗದ್ದೆಗೆ ದರ್‌ಗ್ ಮತ್ತೆ ಗೊಬ್ಬರನ ಕೂಡ್‌ಸಿ ಇಸಿ, ಹಂಗೇ ಗದ್ದೆಲಿ ಅಲ್ಲಲ್ಲಿ ರಾಸಿ ಹಾಕುದು, ಚೂಟ್ ಮೊಣ್ಣ್ ತಯಾರ್ ಮಾಡ್‌ವ ಕೆಲ್ಸಗ ಪಗ್ಗು ತಿಂಗಳ್‌ಂದ ಸುರುಗೆ ನಡ್ದದೆ. ಬೇಸಾಯಕೆ ಬೇಕಾದ ನೊಗನೇಗ್ಲ್ ಮತ್ತೊಳ್ದ ಹತ್ಯಾರ್‌ಗಳ ಜೋಡ್ಸುವ ಕಾರ್‌ಯನೂ ಇದೇ ಹೊತ್ತುಲಿ ನಡ್ಸುವೆ. ಬೇಸಾಯ ಕೆಲ್ಸ ಸುರಾಕೆ ಮುಂದೆನೆ ಎಲ್ಲಾ ಸಾಮಾನ್‌ಗಳ ಜೋಡ್ಸುವ ಕಾರ್‌ಯನೂ ಬೇಸಾಯದ ತಯ್ಯಾರಿನ ಹಂತಲಿ ಕಂಡ್ ಬಂದದೆ. ಈ ಎಲ್ಲಾ ತಯ್ಯಾರಿಗ ನಡ್ದ್, ಬರ್‌ವ ಮಳೆಗೆ ರೈತರ್ ಕಾದ್‌ಕಂಡ್ ಇದ್ದವೆ.

**ಪಗ್ಗು 18ರ 'ಕೈ ಬಿತ್ತ್' :** ಬೇಸಾಯ ಸಂಸ್ಕೃತಿಲಿ ಉಳ್ಮೆಗೆ ಕೊಟ್ಟಸ್ಟೇ, ಬಿತ್ತನೆಗೂ ಮೊರ್‌ಯಾದಿ ಕೊಟ್ಟವೆ. 'ಪಗ್ಗು 1' ಬೇಸಾಯ ಸುರು ಮಾಡ್‌ವ ದಿನ. ಆದರೆ ಪಗ್ಗು 18 ಬೇಸಾಯದ ಎರಡ್ ಮುಕ್ಯ ದಿನ. ಅರೆಬಾಸೆ ಪ್ರದೇಸಲಿ ಪೂರ 'ಕೈ ಬಿತ್ತ್' ಹಾಕುವ ಈ ಕ್ರಮ ಪಗ್ಗು 18ರಂದೇ ನಡ್ಸುವೆ... ಕೋಟಿ–ಚೆನ್ನಯ ಪಾಡ್ದನಲಿ 'ಪಗ್ಗೂಡು ಪದಿನೆಣ್ಮೊಲ್ಕೆ ಬನ್ನಾಗ ನಾಲೆರು ಮಾದಾಯೆರ್‌ಯೆಣಿಲ್ ಬುಳೆಬೆಂದೆರ್'.




(ಪಗ್ಗು18ನೇ ದಿನ ಬಾಕನ ನಾಲ್ಕ್ ಎತ್ತ್‌ಗಳ ತಿರ್‌ಗ್‌ಸಿದೊ., ಏಣೆಲ್‌ನ ಬೆಳೆನ ಬೆಳ್ಡೊ) ತೇಳ್ವ ಸಾಲೊಂದು ಪಗ್ಗು ಹದಿನೆಂಟರ ಮಹತ್ವನ ವಿವರ್‌ಸದೆ. ಅದ್ಕೊ ಸುರುಗೆ ನಾಟಿ ಮಾಡಿಕೆ ಬೇಕಾದಸ್ಟ್ ಗದ್ದೆನ 4 ಸರ್‌ತಿ ಹೂಡಿ ಹದಮಾಡ್‌ವೆ. ಪಗ್ಗು 18ರ ಬೆಳ್ಗರ್ ಬಿತ್ತ್ ಬಿತ್ತುವ ಕಾರ್‌ಯ ನಡ್ಡದೆ. ಆ ದಿನ ಬಿತ್ತಿರೆ ಮೂರ್‌ತ ನೋಡಿಕ್ಕಿಲ್ಲೆಂತೇಳುವ ನಂಬಿಕೆ ಉಟ್ಟ್... ಬರೆ ಹಿಡ್ದ ದಿನಂದ 18 ದಿನಗಳ ಕಾಲಾವಕಾಸ ಇರ್‌ದರ್‌ಂದ ಹೂಡುವ ಕಾರ್‌ಯಂಗಳ ಮುಗ್ಸುವ ಲೆಕ್ಕಲಿ ಪಗ್ಗು 18ಕ್ಕೆ ಕೈಬಿತ್ತ್ ಹಾಕ್‌ವ ದಿನಂತೇಳಿ ತೀರ್‌ಮಾನಿಸಿಯೊಳೊ. ಪಗ್ಗು 18ರ ಹೊತ್ತ್‌ಗಾಕಾನ್ನೆ ಮಳೆ ಸುರು ಆಗಿದ್, ನೀರ್‌ನ ಸಮಸ್ಯೆ ಇಲ್ಲದ ಕಾರಣ ಆ ದಿನ ಅರೆಬಾಸೆ ನಾಡ್‌ನ ಎಲ್ಲಾ ಕಡೆ ಬಿತ್ತ್ ಬಿತ್ತುವ ಕಾರ್‌ಯ ನಡ್ಡದೆ. ಗದ್ದೆನ ಮೂಡಮೂಲೆಲಿ ಚೂರ್ ಮೊಣ್ಣ್‌ನ ಕಳಬರ್‌ಸಿ ಐದ್ ಜೊತೆ 'ಸರ್ಳಿ ಸೊಪ್ಪುನ ಜೋಡ್ಸಿದ್ ಅದರ ಮೇಲೆ ಬಿತ್ತನೆ ಬಿತ್ತ್ ಹಾಕಿ ಕೈ ಮುಗ್ದ್ ಅದೇ 'ಕಳಕ್ಕೆ' ಬಿತ್ತ್ ಬಿತ್ತುದ್ದಕ್ಕೆ(ಬತ್ತ ಬಿತ್ತುದಕೆ) ಕೈ ಬಿತ್ತ್ ಬಿತ್ತುದುಂತೇಳುವೆ. ಮತ್ತೆ ಸರ್ಳಿ ಗೆಲ್ಲ್‌ನ ಮರೆಗಾಗಿ ಸುತ್ತ ಊರುವೆ. ಸರ್ಳಿ ತಂಪು ಕೊಡುವ ದೈ ಆದ ಕಾರಣ, ಪಗ್ಗು ತಿಂಗಳ ಉರಿಬಿಸ್ಲ್‌ನ ಕಾರ ತಡೆವ ಸಕ್ತಿ ಹೊಂದಿದ್ದದೆ. ಒಟ್ಟಿಗೆ ಸರ್ಳಿ ಸೂತಕದ ಸಂಕೇತ ಕೂಡ ಹೌದು. ಆಗಸ್ಟೆ ಬಿತ್ತಿದ ಬಿತ್ತ್ ಸೂತಕದ ಗುರ್‌ತ್ ಆದ ಕಾರಣ ಸರ್ಳಿನ ಸೂತಕದ ಸಂಕೇತ ಆಗಿ ಇಲ್ಲಿ ಬಳ್ಸ್‌ವೆ. ಜೆನಪದ ಬದುಕಿನ ಬೇರೆ ಬೇರೆ ನೆಲೆಗಳ್‌ಲಿ ಸರ್ಳಿದೈ ಮುಕ್ಯ ಆಗಿರ್‌ದರ ನೋಡಕ್.

'ಕೈ ಬಿತ್ತ್' ಹಾಕ್‌ವ ಕ್ರಮ ಬರೀ ಬೇಸಾಯಗಾರಂಗೆ ಮಾತ್ರ ಒಳಪಟ್ಟದರ್‌ಂದ ಅದರ ಒಳ್ದ ಹಬ್ಬಗಳಂಗೆ ಎಲ್ಲದರಂಗೆ ಆಚರಣೆ ಮಾಡಿಕೆ ಆದುಲೆ. ವರ್‌ಸ ಮೊಗ್ಚುವ ಸೂರ್‌ಯ ದೇವ್ರ ನಡೆಲಿ ಪಗ್ಗು 18 (ಮೇ ತಿಂಗಳ 1 ಆತವಾ 2)ರಂದ್ ಸೂರ್‌ಯ ನೊಡುನೆತ್ತಿಲಿ ಬಾವ ಒಂದೇ ಒಂದ್ ದಿನಂತೇಳಿಯೂ, ವರ್‌ಸದ ಬೇರಾವ ದಿನನೂ ಸೂರ್‌ಯ ನೊಡುನೆತ್ತಿಗೆ ಬಾದುಲೆಂತ ಜೆನಪದರ್ ಕಾರಣ ಕೊಟ್ಟ್ ಪಗ್ಗು 18ರ ಒಳ್ಳ ದಿನಂತ ಕಂಡವೆ. ಸೌರಮಾನ ಕಾಲಲೆಕ್ಕಚಾರಕೆ ಒತ್ತ್ ಕೊಡ್‌ವ ಅರೆಬಾಸೆ ಜೆನಗ ಸೂರ್‌ಯನ ಈ ರೀತಿನ ವಿಸೇಸ ಚಲನೆನ ನೋಡಿ ಪಗ್ಗು 18ರ ಕೈ ಬಿತ್ತ್ ಹಾಕ್‌ವ ದಿನಂತ ಅಂದಾಜಿ ಮಾಡಿರ್‌ವೊ. ಬೆಳೆಬೆಳಿವ ಕ್ರಿಯೆನ ನಿರ್‌ದಾರ ಮಾಡ್ದರ್‌ಲಿ ಸೂರ್‌ಯನ ನಡೆ ಮುಕ್ಯ ಪಾತ್ರ ವಯ್ಸಿದರ್‌ಂದ ಅರೆಬಾಸೆನವು ಸೂರ್‌ಯಂಗೆ ಮಹತ್ವದ ಜಾಗೆ ಕೊಟ್ಟಿರ್‌ವ ಸಾದ್ಯತೆ ಉಟ್ಟ್, ಆದ್ದರ್‌ದ ಬೇಸಾಯ ಸಂಸ್ಕೃತಿನ ಹಿನ್ನೆಲೆಲಿ ಸೌರಮಾನ ಕಾಲಲೆಕ್ಕಾಚಾರ(ತಿಂಗ ಲೆಕ್ಕಚಾರ) ಮಾಡಿಕಂಡೊಳೊ. ಕೆಲವ್ ಜಾಗೆಗಳ್‌ಲಿ ಚಂದ್ರಮಾನ ಕಾಲಲೆಕ್ಕದ ಆದಾರಲಿ ಪಗ್ಗು 18ರ ಬದಲ್ ಸುಗ್ಗಿ 18ರಂದ್ ಕೈ ಬಿತ್ತ್ ಹಾಕುವ ಕ್ರಮ ಕಂಡ್ ಬಂದದೆ. ಸುಗ್ಗಿ ಹದ್ನೆಂಟರ ಕಡುಬೇಸಿಗೆನ ಕಾಲ ಆಗಿದ್, ನೀರಿಲ್ಲದ ಕಾಲಾವದಿ. ಮಳೆ ಬೀಳಿಕೂ ಇನ್ನೂ ಹಳ್ಳು ದಿನಗಳ ಅಂತರ ಇರ್‌ದರ್‌ಂದ ಚಾಂದ್ರಮಾನ ಕಾಲಲೆಕ್ಕಾಚಾರ ಸುಗ್ಗಿ 18 ಬೇಸಾಯದ ಸುರುವಾತ್‌ಗೆ ಸರಿಯಾದ ಕಾಲ ಅಲ್ಲ. ಈ ತಿಳ್‌ವಳಿಕೆ ಅರೆಬಾಸೆ ಜೆನಪದರ್‌ಗೆ ಇರುದರ್‌ಂದ ಸೌರಮಾನ ಕಾಲಲೆಕ್ಕಾಚಾರ ಪಗ್ಗು 18ರ ಬಿತ್ತ್ ಬಿತ್ತುವ ದಿನಂತ ಗೊತ್ತು ಮಾಡಿಯೊಳೊ. ಹಂಗೆನೇ ಮಂಗಳವಾರ ಮತ್ತೆ ಶುಕ್ರವಾರದಂದ್ ಗದ್ದೆಗೆ ಬಿತ್ತ್ ಬಿತ್ತಿಕಾಗದ್‌ಂತೇಳುವ ನಂಬಿಕೆ ಅರೆಬಾಸೆವರ್‌ಲಿ ಉಟ್ಟ್, ಆದರೆ ಪಗ್ಗು 18 ಯಾದೇ ದಿನ ಆದರೂ ಈ ನಂಬಿಕೆಗ ಆ ದಿನ ಲೆಕ್ಕಕೆ ಬಾದುಲೆ. ಪಗ್ಗು 18ರಂದ್ ಬಿತ್ತ್ ಬಿತ್ತದೇ ಇದ್ದಲ್ಲಿ ಮಂಗಳವಾರ ಮತ್ತೆ ಶುಕ್ರವಾರನ ಬುಟ್ಟ್ ಒಳ್ದ ದಿನಗಳ್‌ಲಿ ಬಿತ್ತ್ ಬಿತ್ತಕ್.

**ಉಳುಮೆ :** ಪಗ್ಗು 1ಕ್ಕೆ ಗದ್ದೆಗೆ ಬರೆ ಹಾಕಿರೆ ಹೂಡುವ ಕಾರ್‌ಯ ಸುರಾತ್‌ಂತ ಅರ್‌ತ. ಮುಂದೆ ಯಾದೇ ದಿನ ಆದರೂ ಹೂಡುದರ ಮುಂದುವರ್‌ಸಕ್. ಸಾಮಾನ್ಯ ಆಗಿ ಒಂದ್ ಗದ್ದೆನ ನೆಡುದಕ್ಕಿಂತ ಮುಂದೆ ಹತ್ತ್ ಸರ್‌ತಿ ಹೂಡೋಕುತ್ತುಟ್ಟು. ತಪ್ಪಿರೆ 8 ಸರ್‌ತಿಯಾರ್


ಗದ್ದೆ ಹೂಡ್‌ದ್

ಹೂಡೋಕ್‌ಂತೇಳುವಂತದ್ದ್. ಹಿಂಗೆ ಹೂಡಿ ಆಗದಿದ್ದಲ್ಲಿ 'ಅಡಪು ತತ್ತಿ ಕಂಡದ ಕೊಡಿಪು ತಪ್ಪಾಂದ್' (ಉಳುಮೆ ತಪ್ಪಿದ ಗದ್ದೆಲಿ ಕಳೆಯ ಮೊಳಕೆ ನಿಲ್ಲಿಕ್ಕಿಲ್ಲೆ) ತೇಳುವ ಗಾದೆನಂಗೆ ಬೇಸಾಯದ ಮೊಳ್ಕೆ ಸರಿ ಬಾಕಿಲೆಂತ ಜೆನಂಗ ನಂಬಿಯೊಳ. ಪಗ್ಗು 7ರ ಹೊತ್ತುಗೆ ಒಂದೆರ್‌ಡ್ ಮಳೆ ಬೀಳ್ದರ್‌ಂದ ಹೂಡಿಕೆ ಸುಲ್‌ಬ ಆದೆ. ಸಾಮಾನ್ಯ ಲೆಕ್ಕಾಚಾರ ಒಂದರ ಪ್ರಕಾರ ಒಂದ್ ಮುಡಿ ಗದ್ದೆನ ಹೂಡಿಕೆ ಗಟ್ಟಿಮುಟ್ಟುನ ಕೋಣಗಾದರೆ ಎರಡ್ ದಿನಲಿ ಒಂದ್ ಸಾಲ್ ಪೂರೈಸಕ್. ದಿನಕ್ಕೆ ಅರ್‌ದ ಸಾಲ್‌ನಂಗೆ ಹೂಡಿಕೆ ಆವ ಎತ್ತ್ ಗಾದರೆ ಅದೇ ಅಳ್ತೆನ ಗದ್ದೆಗೆ ನಾಕ್ ದಿನ ಬೇಕಾದೆ. ಕೋಣಗಳ ಹೊತ್ತಾರೆ 6 ಗಂಟೆಂದ ಮದ್ಯಾನ 1 ಗಂಟೆವರೆಗೂ ಹೂಡಕ್. ಎತ್ತ್‌ಗಾದರೆ 6 ಗಂಟೆಂದ 9 ಇಲ್ಲರೆ 10 ಗಂಟೆವರೆಗೆ ಮಾತ್ರ ಹೂಡ್ಸಿಕೆ. ಹೂಡಿಕೆ ಮುಂದೆ ಬೊಳ್ಪುನ 4 ಗಂಟೆನ ಹೊತ್ತುಗೆ ಎತ್ತ್‌ಗಳ, ಕೋಣಗಳ ಆರೈಕೆ ನಡ್ದದೆ. ಅವ್‌ಕೆ ತಿಂಬಕೆ

ಹುಲ್ಲ್, ಮೊಡ್ಡಿ, ಕುಡು, ಇಂತವೆಲ್ಲ ಕೊಟ್ಟ್ ಹೊಟ್ಟೆ ತುಂಬುಸುವೆ. ತಿಂದ್ ಸುಮಾರ್ 2 ಗಂಟೆಗಳ ಮೇಲೆ ಅಂದರೆ 6 ಗಂಟೆಂದ ಹೂಡಿಕೆ ಸುರು ಮಾಡ್‌ವೆ. ನೀರ್‌ನ ಒತ್ತಡ ಹೆಚ್ಚ್ ಇರ್‌ವ ಗದ್ದೆಗಳ್‌ಲಿ ಬೊಳ್ಪುಗೆ ಹೂಡಿಕೆ ಆಗದ್ದರೆ ಮಾತ್ರ ಹಿಂಬೊತ್ತ್‌ಲಿ ಹೂಡುವೆ. ಅಲ್ಲರೆ ಹಿಂಬೊತ್ತ್(ಬೈಸಾರಿ)ಗೆ ಹೂಡುವ ಕ್ರಮ ಬಾಳ ಕಡ್ಮೆ. ನೀರಿಲ್ಲದೆ ಹೂಡಿಕೆ ಮೂರು ಸಾಲ್ ಹೂಡುದರ್‌ನ 'ಪೊಡಿಕ್ಕ್‌ಸಾಲ್'(ಹುಡಿಗೆ ಸಾಲು)ತೇಳುವೆ. ಈ ಪೊಡಿಕ್ಕ್‌ಸಾಲ್ ಮಾಡಿಕಾಕನ ಗದ್ದೆನ ದೊಡ್ಡ ದೊಡ್ಡ ಮೊಣ್ಣು ಹಿಂಟೆಗಳ ಹೊಡಿ ಮಾಡಿ, ಗದ್ದೆನ ಸಮತಟ್ಟ್ ಮಾಡ್‌ವೆ. ಒರ್‌ತೆ ನೀರಿಲ್ಲದಿದ್ದರೆ ಹಕ್ಕಲೆ ಚೋಡಿಗೆ, ಹಳ್ಳಕ್ಕೆ ಕಟ್ಟ, ಅಣೆಕಟ್ಟ್ ಕಟ್ಟಿ ಮಳೆ ನೀರ್‌ನ ಗದ್ದೆಗೆ ಬುಟ್ಟವೆ. ಈ ನೀರ್‌ಗೆ ಮತ್ತೆ ನಾಲ್ಕ್ ಸಾಲ್ ಹೂಡೋಕು. ನೀರ್‌ಗೆ ಒಂದ್ ಸಾಲ್ ನೆಟ್ಟ ಮೇಲೆ ಗದ್ದೆ ಪುಣಿನ ಕೆತ್ತಿ ಸುಮಾರ್ ಒಂದ್ ಮೀಟರ್ ದೂರಕೆ ಹುಲ್ಲ್‌ನ ಇಟ್ಟವೆ. ಹಿಂಗೆ ಗದ್ದೆ ಪುಣಿನ ಕೆತ್ತಿದ ಮೇಲೆ ಮೂರ್ ಸಾಲ್ ಹೂಡುವೆ. ಕಡೆಗೆ ಒಮ್ಮೆ ಹಲಗೆನ ಎಳ್ದ್ ಗದ್ದೆನ ಮಟ್ಟಸ ಮಾಡ್‌ವೆ. ಹಿಂಗೆ ಒಟ್ಟು ಒಂಬತ್ತ್ ಅಲ್ಲರೆ ಹತ್ತ್ ಸರ್‌ತಿ ಉಳ್ಮೆ ಮಾಡಿ ಗದ್ದೆನ ಹದ ಮಾಡಿ, ನಾಟಿ ಕೆಲ್ಸಕಿಳ್ದವೆ. ಗಂಡ್‌ಸ್‌ಗ ಮಾತ್ರ ಗದ್ದೆ ಹೂಡುವೆ. ಸಾಂಸ್ಕೃತಿಕಇತಿಯಾಸದ ದ್ರಿಸ್ಟಿಂದ ಹೂಡುವ ಮತ್ತೆ ಬಿತ್ತುವ ಕಾರ್‌ಯ ಗಂಡಸರ್‌ಂದಳೂ ಬಿತ್ತಿದರ ಪೋಂತುವ ಕಾರ್‌ಯ ಹೆಣ್ಮಕ್ಕಂಳ್ದಳೂ ನಡೆದದರ್‌ನ ಪ್ರಪಂಚದ ಎಲ್ಲ ಕಡೆ ಜೆನಪದ ಬೊದ್ಕ್ ಗುರ್‌ತಿಸಿದೆ. ಇಲ್ಲಿನ ಉಳ್ಮೆಗೆ ಗಂಡಸ್‌ನ ಸಾಮರ್‌ತ್ಯ ಹಾಂಗೆ ಯಜಮಾನ್ಯ ವೆವಸ್ತೆನ ಪ್ರತಿನಿದಿಸುವ ಹಿನ್ನಲೆಂತೇಳಕ್. ಜೆನಪದರ ಪ್ರಕಾರ ಗದ್ದೆ ಹೂಡ್ದು ಒಂದ್ ಕಲೆ. ಆ ಕಲೆನ ಒಲ್ಸಿಕಂಬಕೆ ಆಗದೇ ಇದ್ದರೆ ಎತ್ತ್‌ಗಳ ಕಾಲ್ಗೆ ಬೇನೆ ಆಕನ, ನೇಗ್ಲ್ ಬಾರೀಬೇಗ ಸವ್ದ್ ಹೋಗವ, 'ಪೊರಿ' (ಸಾಲು) ಬುಟ್ಟು ಹೋವ, ಎತ್ತ್‌ಗಳ ಹೆಗ್‌ಲಿಗೆ ಬೇನೆ ಆವ ಸಾದ್ಯತೆಗ ಹೆಚ್ಚ್. ಈ ಕಾರಣಕ್ಕಾಗಿ ಜೆನಂಗ ಹೂಡಿಕೆ ಬಾರಿ ಸಣ್ಣ ಪ್ರಾಯಲೇ ಕಲ್ತ್‌ಕಂಡ್ ಬುಟ್ಟವೆ...

**ಗೊಬ್ಬರ :** ಮೂರ್ ಸರ್‌ತಿ ಹೊಡಿಗೆ ಸಾಲ್ ಮಾಡ್ದ ಮೇಲೆ ಗದ್ದೆಗೆ ದರ್‌ಗ್ ತಂದ್ ಹಾಕುವೆ. ದರ್‌ಗ್‌ನ ಬೆದ್ರ್‌ನ ಕೊಂಟೆಗೆಲಿ ತಂದ್ ಗದ್ದೆನ ಅಲ್ಲಲ್ಲಿ ರಾಶಿ ಹಾಕುವೆ. ನೀರ್‌ಗೆ ಕೊಡುವ ಹೊತ್ತ್‌ಲಿ ಈ ದರ್‌ಗ್‌ಗಳ ಹರ್‌ಂಡಿ ಹೂಡುವೆ. ನೀರ್‌ಗೆ ಒಂದ್ ಸಾಲ್ ಹೂಡ್ದ ಮೇಲೆ ಕಾಡ್‌ನ ಸೊಪ್ಪು ಮತ್ತೆ ಹಟ್ಟಿಗೊಬ್ಬರ ಹಾಕುವೆ. ಸೊಪ್ಪುನ ಸಣ್ಣಂಗೆ ಕತ್ತ್‌ರ್‌ಸಿ ಗದ್ದೆ ಇಡಿ ಹರ್‌ಡುವೆ. ಹಿಂಗೆ ಹರಂಡಿ ಮೂರ್ ದಿನ ಕಳ್ದದ ಮೇಲೆ ಮತ್ತೆ ಹೂಡಿಕೆ ಸುರುಮಾಡ್‌ವೆ. ಈ ಹೊತ್ತುಗಾಕನ ಸೊಪ್ಪು ಕರ್‌ಗಿ, ಅದರ ರಸ ನೀರ್‌ನೊಟ್ಟಿಗೆ ಸೇರ್‌ಕಂಡಿದ್ದದೆ. ಸೊಪ್ಪು, ಗೊಬ್ಬರ ಹಾಕಿದ ಮೇಲೆ ಗದ್ದೆನ ನೀರ್‌ನ ಹೊರಗೆ ಬುಡುವಂಗಿಲ್ಲೆ. ಗೊಬ್ಬರ ಹಾಕಿ ಮತ್ತೆ ಎರಡ್ ಸಾಲ್ ಹೂಡಿರೆ ಹೂಡುವ ಕೆಲ್‌ಸ ಮುಗ್ದಂಗೆ. ಸಾಮಾನ್ಯ ಹೆಚ್ಚ್ ನೀರಿರುವ ಗದ್ದೆಗಳಿಗೆ ಏಣೆಲ್ ಬೇಸಾಯಕಾಕನ ಸೊಪ್ಪು ಹಾಕುದು ಕಡ್ಮೆ. ಗೊಬ್ಬರನೂ ಕೊಚ್ಚಿ ಹೋವ ಸಾದ್ಯತೆ ಇರ್‌ದರ್‌ಂದ ನೀರ್ ಹದಲಿ ಇರ್‌ವ ಗದ್ದೆಗಳಿಗೆ ಮಾತ್ರ ಸೊಪ್ಪು ಗೊಬ್ಬರ ಹಾಕುವೆ. ಸಾಂಪ್ರದಾಯಿಕ ಬೇಸಾಯ ಪೊದ್ದತಿಲಿ ಹಿಂಗೆ ಗೊಬ್ಬರದ ಬಳಕೆ ಹೆಚ್ಚ್. ರಾಸಾಯನಿಕ ಗೊಬ್ಬರಗಳ ಬಳಕೆಂದ ಮುಂದೆ ಬೇಸಾಯಲಿ ಬಳಕೆ ಮಾಡ್ತಿದ್ದ ಸೊಪ್ಪು ಗೊಬ್ಬರಲಿನೂ ವ್ಯತ್ಯಾಸ ಇರ್‌ದರ ಗಮನ್ಸಕ್. ಒಳ್ಳ ಸಾರಂದ ಕೂಡ್ದ ಸೊಪ್ಪುನೇ ಬಳ್ಸುದು. ಈ ಹಂತಲಿ ನಿರಂತರ ಆವಿಸ್ಕಾರಗ ನಡ್ದ ಸಾದ್ಯತೆಗ ಹೆಚ್ಚ್.

**ನೇಜಿ :** ಬತ್ತದ ಎಳೇ ದೈನ ಅಂದರೆ ಹುಲ್ಲುನಂಗಿರಕನ ಅದರ 'ನೇಜಿ'(ಅಗ) ತೇಳುವೆ. ಪಗ್ಗು 18ಕ್ಕೆ ಒಟ್ಟ್ ಗದ್ದೆಗೆ ಬೇಕಾದಸ್ಟ್ ಬಿತ್ತ್ ಬಿತ್ತಿರೆ ಹಣ್ಣಿ ದಿನಲಿ ಅಗೆ ಬಂದದೆ. ಏಣೆಲ್ ಬೆಳೆನ ಅಗೆ ಬಿತ್ತ್‌ನ ಮೊಳ್ಕೆ ಬರ್ ಸದೆ ಹೆಚ್ಚಿನ ಕಡೆಗಳ್‌ಲಿ ಬಿತ್ತ್‌ವೆ. ಬಿತ್ತಿದ ಎರಡ್ ಮೂರ್ ದಿನಲಿ ಬಿತ್ತ್ ಮೊಳ್ಕೆ ಬಂದದೆ. ಈ ಹಂತಲಿ ಬಿತ್ತಿದ ಬೀಜೆನ ಜೋಪಾನ ಮಾಡ್‌ವ ಕೆಲ್ಸ ನಡೆಯೋಕು. ಸಾಮಾನ್ಯ ಲೆಕ್ಕಚಾರವೊಂದರ ಪ್ರಕಾರ 1 ಮುಡಿ ಗದ್ದೆ ಬೇಸಾಯಕೆ 1/2 ಮುಡಿ ಜಾಗೆಲಿ ನೇಜಿ ಹಾಕಕಾದೆ. ಬಿತ್ತ್ ಲಾಯ್ಕ್ ಮೊಳ್ಕೆ ಬಂದರೆ 1 ಸೇರ್ ಬಿತ್ತ್‌ಗೆ 100 ಕಂತೆ ಬೆಳೆ ಬೆಳೆವ ಅಂದಾಜ್ ಇದ್ದದೆ. ಅಗೆ ಕೀಳಿಕೆ ಉಸಾರ್ ಇರುವವ್ಕೆ 50 ಅಲ್ಲರೆ 60 ಕಂತೆಗಳ ಮಾತ್ರ ಕೀಳಿಕೆ ಆದೆಂತೇಳುವ ಲೆಕ್ಕಚಾರನೂ ಉಟ್ಟು. 1 ಮುಡಿ ಗದ್ದೆಗೆ 1 ಮುಡಿ (42 ಸೇರ್) ಬತ್ತದ ಬಿತ್ತ್‌ನ 1/2 ಮುಡಿ ಜಾಗೆಲಿ ಬಿತ್ತಕ್ಕಾದೆ. ಹಿಂಗೆ 1 ಮುಡಿ ಬಿತ್ತಿರೆ ಸುಮಾರ್ 4200 ಕಂತೆ ಅಗೆ ಸಿಕ್ಕುದೂಂತೇಳುವ ಲೆಕ್ಕಾಚಾರ ಜೆನಪದರ್‌ಲಿ ಉಟ್ಟು. ಆದರೆ ಸಾಮಾನ್ಯ 3000 ಕಂತೆ ಅಗೆ ಅಂತೂ ಸಿಕ್ಕಿಯೇ ಸಿಕ್ಕಿದೆ. ಅಗೆಗಾಗಿ ಬತ್ತ ಬಿತ್ತಿದ ಮೇಲೆ ಗದ್ದೆನ ಒಳ್ದ ಜಾಗೆನ ಮೂರ್ ಸರ್‌ತಿ ಹೂಡಿ ಮಳೆ ನೀರ್‌ಗಾಗಿ ಕಾದವೆ. ಮಳೆ ಬಾರದೇ ಇದ್ದಲ್ಲಿ ಈ ನೇಜಿಗಾಗಿ ಕಟ್ಟದ ನೀರ್‌ನ ಉಪಯೋಗ್ಸುವೆ. ಪಗ್ಗು 18ರ್‌ಂದ್



ಬೇಸಾಯ ಸಮೆಲಿ ಹಲ್ಸ್‌ನ ಹಣ್ಣ್ ತಿಂಬೊದು





ಅಗೆಗೆ ಬಿತ್ತ್ ಬಿತ್ತಿರೆ ಬೇಸ 2ನೇ ವಾರಲಿ (ಮೇ 23) ಅಗೆ ಕೀಳಕ್. ಏಣೆಲಿಗೆ ಬೆಳೆವ **'ಕಯಮ್ಮೆ'** ಬೀಜ ಆದರೆ ಸುಮಾರ್ 25 ದಿನಗಳ ಬೆಳವಣಿಗೆ ಅಗೆಗೆ ಬೇಕಾದೆ. ಬೇಸಿಗೆಲಿ ನೆಟ್ಟಿಕಾಯಿ ಬೆಳ್ದ ಗದ್ದೆಗಾದರೆ ಅಗೆ ರಪ್ಪ ಬೆಳೆವ ಸಾದ್ಯತೆ ಇದ್ದದೆ. ಬೀಜದ ಬತ್ತಕಾಗಿ ಪ್ರತ್ಯೇಕ ಕದ್ರ್ ಕೊಯ್ದ್ ಒಣ್ಗಿಸಿ ಮುಡಿ ಕಟ್ಟಿ ಇಸುವೆ. ಬಿತ್ತುವ ಹೊತ್ತುಲಿ ಆ ಬತ್ತನ ಬಳ್ಸಿಕಂಡವೆ.


ನೇಜಿ ಕೀಳ್ದು

**ನೇಜಿ ಕೀಳ್ದು :** ನಮ್ಮ ಊರುಲಿ ಬೇಸ 25ರ ಹೊತ್ತುಗೆ ಅಗೆ ಕೀಳುವ ಕೆಲ್ಸ ಸುರಾದೆ. ಮಳೆ ಜಾಸ್ತಿ ಆಗ್ತಿದ್ದಂಗೆ ಅಗೆ ಕೀಳ್ವ ಕೆಲ್ಸ ಜೋರಾದೆ. ಅರೆಬಾಸೆ ಪದೇಸಲಿ ನೇಜಿ ತೆಗೆವ ಕೆಲ್ಸ ಹೆಚ್ಚಾಗಿ ಹೆಣ್ಮಕ್ಕಳ್ದ್. ಇದೇ ಹೊತ್ತುಲಿ ಬೇಸಾಯಕೆ ಸಮ್ಮಂದ ಪಟ್ಟ ಪಾಡ್ದನಗಳ ಹಾಡುವೆ. ಏಳ್ ಜೆನ ಇದ್ದರೆ ಒಂದ್ ಮುಡಿ ಗದ್ದೆ ಅಗೆನ ಕೀಳಿಕೆ ಒಂದ್ ದಿನ ಬೇಕುಂತೇಳ್ವ ಲೆಕ್ಕಾಚಾರ ಉಟ್ಟು. ನೇಜಿನ ತೆಗ್ದ್ ಅದರ ಬೇರ್‌ಲಿ ಅಂಟಿಕಂಡ ಮೊಣ್ಣ್‌ನ ಲಾಯ್ಕ ತೊಳ್ದ್ ಕಂತೆ ಕಟ್ಟುವೆ. ಮತ್ತೆ ಅದರ ಕೊಡಿನ ಕತ್ತರ್‌ಸುವೆ.

**ಗದ್ದೆಗೋರಿ :** ಬೇಸಾಯ ಸಂಸ್ಕೃತಿಲಿ ದುಡಿಮೆನ ಆಚರಣಾತ್ಮಕ ತರಲಿ ತೊಡ್ಗುಸಿಕಂಬ ತುಂಬ ಉದಾಹರಣೆಗ ಸಿಕ್ಕುವೆ. ಅದರ್‌ಲಿ ಗದ್ದೆಗೋರಿ ಮುಕ್ಯದ್ದ್. ಏಣೆಲ್ ಬೇಸಾಯದ ಅಗೆ ಕಿತ್ತ ಮೇಲೆ ನಡೆವ ಒಂದ್ ದಿನದ ಎಲ್ಲ ಸೇರಿ ಹೂಡಿ, ನಾಟಿ ಮಾಡ್ದರ ಗದ್ದೆಗೋರಿತ ತೇಳುವೆ. ಸಹಕಾರ ತತ್ವದ ಹಿನ್ನೆಲೆಲಿ ಹುಟ್ಟಿಕಂಡ ಈ ದುಡ್ಮೆ ಸಾಮೂಹಿಕ ಬೊದ್ಕುನ ರೂಪುಸಿಕೆ ಕಾರಣಾಗುಟು. ಸುಗ್ಗಿ ಬೆಳೆನ ಹೊತ್ತುಗೆ ನಂಬಿಕೆನ ನೆಲೆಲಿ ನಡಿವ ಗದ್ದೆಗೋರಿಗು ಏಣೆಲು ಬೆಳೆನ ಸಂದರ್ಬಲಿ ವ್ಯಾವಹಾರಿಕ ನೆಲೆಲಿ ನಡೆವ ಗದ್ದೆಗೋರಿಗು ವ್ಯೆತ್ಯಾಸ ಉಟ್ಟು. ಏಣೆಲ್ ಬೇಸಾಯದ ಗದ್ದೆಗೋರಿಗೆ ಯಾದೇ ವಿಸೇಸ ಆಚರಣಾತ್ಮಕ ಮಾನ್ಯತೆ ಇಲ್ಲದಿದ್ದರೂ ದುಡ್ಮೆ ಮುಕ್ಯ ಆಗುಟು. ಕೂಡಿ ಮಾಡಿ ಕೆಲ್ಸ ಮಾಡ್‌ವ ಕ್ರಮ ಇದಾವುಟು.

ಊರ್‌ನ ಎಲ್ಲಾ ಮನೆಗಳ ಒಂದೊಂದು ಜೊತೆ ಎತ್ತುಗಳ ಒಬ್ಬನ ಗದ್ದೆಗೆ ತಂದ್ ಕೂಡಿದ್ ಹೂಡಿ ಮುಗ್ಸುವ ಪೊದ್ದತಿ ಗದ್ದೆಗೋರಿ. ಈ ರೀತಿನ ಬೇಸಾಯದ ಕ್ರಮನ 'ಪಗರಕೆ ಹೂಡ್ದು' ತೇಳುವೆ. ಒಗ್ಗಟ್ಟಾಗಿ ಕೆಲ್ಸ ಮಾಡಿಕೆ ಸುರುನ ಆದ್ಯತೆನ ಕೊಡುವ ಹಿನ್ನಲೆಲಿ ಗದ್ದೆಗೋರಿ ನಡ್ದದೆ. ಬೇಸಾಯ ಬಾರಿ ಕಸ್ಟನೂ ತುಂಬಾ ದಿನ ನಡಿವ ಕೆಲ್ಸ ಆಗಿರ್‌ದರ್‌ಂದ ಮತ್ತೆ ಒಬ್ಬ ಮೊಯಿಂಸ ಅಲ್ಲೊ ಒಂದ್ ಕುಟುಂಬಂದ ಮಾಡಿಕೆ ಸಾದ್ಯ ಇಲ್ಲೇಂತೇಳಿ ಈ ಕೂಡಿಯಾಡಿ ಮಾಡ್‌ವ ಬೇಸಾಯ ಕ್ರಮ ಬಂದಿರ್‌ದು. ಇಂತಿಸ್ಟ ಕಾಲದ ಒಳಗೆ ಏಣೆಲು ಕೆಲ್ಸ ಮುಗ್ಸಕಾದ ಅನಿವಾರ್‌ಯತೆ ಇರುದರ್‌ಂದ ಈ ಸಾಮೂಹಿಕ ದುಡಿಮೆ ಜೆನಪ್ರಿಯ ಆವುಟು. ಗದ್ದೆಗೋರಿ ಒಂದ್ ಮನೆಗೆ ಹಂಗೆ ಅಲ್ಲಿ ಸೇರ್‌ದ ಕೆಲಸದ ಆಳ್‌ಗಳಿಗೆ ಮಾತ್ರ ಸಮ್ಮಂದ ಪಟ್ಟದ್ದ್ ಆಗಿರದೆ, ಒಟ್ಟು ಊರುಗೆ ಹಬ್ಬದ ವಾತಾವರಣನ ಹುಟ್ಟಾಕಿದೆ. ಇಂತ ಸಾಮೂಹಿಕ ದುಡಿಮೆಂದಾಗಿ ಕೆಲ್ಸ ಸುಲಾಬಾದಲ್ಲದೆ ದುಡ್ಮೆನ ಸ್ರಮನೂ ತಗ್ಗಿದೆ. ಹಿಂಗಾಗಿ ಬೇಸಾಯದಂತ ಕಟಿಣ ಕೆಲ್ಸನ ಹಗುರ ಮಾಡ್‌ವ ಉಸ್ಲಾಂಸ ತುಳು ಜೆನಪದರದ್ದ್. ಎಸ್ಟೇ ವಿಸ್ತೀರ್ಣದ ಗದ್ದೆಗ ಇದ್ದರೂ ಒಂದ್ ದಿನದ ಗೋರಿಲಿ ಕೆಲ್ಸನ ಮುಗ್ಸಿ ಆರಾಮಲಿರುವ ಪರಿಕಲ್ಪನೆ ಇಲ್ಲಿದ್. ಈ ಹಂತಲಿ ನಡೆವ ಪೊದ್ಯ, ತಮಾಸೆ, ಕತೆ, ಗಾದೆಗಳ ಮೂಲಕ ಒಟ್ಟು ಗುಂಪು ಕೆಲ್ಸದೊಟ್ಟಿಗೆ ಸಾಂಸ್ಕೃತಿಕವಾತಾವರಣ ಕಟ್ಟಿ ಕೊಟ್ಟದೆ. ಏಣೆಲ್‌ನ ಗದ್ದೆಗೋರಿ' ಬರೇ ಸ್ರಮಕ್ಕೆ ಮಾತ್ರ ಮಹತ್ವ ಕೊಡುದರ್‌ಂದ ಒಳ್ದ ಆಚರಣೆಗ ಇಲ್ಲಿ ಲೆಕ್ಕಕ್ಕಿಲ್ಲೆ. ಅದರ್‌ಂದ ಆಚರಣೆ ಮಾಡದೆ ಸ್ರಮನ ತಗ್ಗ್‌ಸುವ ನೆಲೆಲಿ ಮೌಕಿಕ ಸಾಹಿತ್ಯ ಪ್ರಕಾರಗ ಸ್ರಮದೊಟ್ಟಿಗೆ ಅಂಟಿಕಂಡದೆ. ಇಲ್ಲಿ ಮೌಕಿಕ ಸಾಹಿತ್ಯಕೂ ಸ್ರಮಕೂ ಒಂದೇ ಲೆಕ್ಕಲಿ ಪ್ರಾದಾನ್ಯ ಇದ್ದರೂ ಏಣೆಲ್ ಬೇಸಾಯನೂ ಸ್ರಮಕ್ಕೆ ಹೆಚ್ಚಿನ ಮಹತ್ವ ಕೊಟ್ಟದರ ಗಮನ್ಸಕ್. ಇದ್ಕೆ ಮುಕ್ಯ ಕಾರಣ ಅಂದಾಜಿಗೆ ಸಿಕ್ಕಿದೆ. ಮಳೆ, ಬೇಸಾಯ ಸಾರ್‌ವತ್ರಿಕವಾಗಿರ್‌ದು, ಕೆಲಸದ ಆಳ್‌ಗಳ ಅಬಾವ ಮತ್ತೆ ನಿಗಂಟ್ ಮಾಡ್ದ ಹೊತ್ತುಲಿ ಬೇಸಾಯನ ಮುಗ್ಸೋಕೂಂತೇಳುವ ಒತ್ತಡನೆ ಆಗಿದ್ದದೆ. ಅದರ್‌ಂದ ಏಣೆಲ್ ಬೇಸಾಯದ ಗದ್ದೆಗೋರಿ ತೇಳಿರೆ ಶ್ರಮ ನಿರ್‌ವಹಣೆನ ತಂತ್ರಂತೇಳ್ದರ ಅರ್‌ತ ಮಾಡಿಕಣಕ್. ಬೇರೆ ಆಚರಣೆಗ ಇಲ್ಲದೇ ಇರುದು ಇದಿಕ್ಕೆ ಒಳ್ಳ ಉದಾರ್‌ಣೆ.

**ನಾಟಿ :** ಕಡೆನ ಎರಡ್ ಸಾಲ್ ಹೂಡಿ ಆದ ಮೇಲೆ (ಒಂಬತ್ತು ಅಲ್ಲರೆ ಹತ್ತ್ ಬಾರಿ) ನಾಟಿ ಕೆಲ್ಸ ಸುರಾದೆ. ಅರೆಬಾಸೆ ಪ್ರದೇಸನ ಪೂರ ನಾಟಿ ಕೆಲ್‌ಸನ ಸುರುಮಾಡಿಕೆ ಇಂತದೇ ದಿನತೇಳಿ ಇಲ್ಲೆ. ಅದೇ ರೀತಿ ನಾಟಿ ಕೆಲ್ಸನ ಸಾಮಾನ್ಯ ಹೆಣ್ಣಾಳ್‌ಗ ಮಾಡುದರ್‌ನು ಕಂಡವೆ. ಗಂಡಸ್‌ಗ ಗದ್ದೆ ಪುಣಿನ ಕೆತ್ತುವ, ಅಗೆ ಸೂಡಿನ ತಂದ್ ಹಾಕುವ ಕೆಲ್ಸನ ಮಾಡ್‌ವೆ. 'ಕೈಗುಣ ಒಳ್ಳದುಟ್ಟು" ತೇಳಿ ಸುದ್ದಿ ಮಾಡ್‌ವೆ. ಇರುವ ಕೆಲಸದಾಳ್ ಅಲ್ಲರೆ ಮನೆನ ಯಜಮಾನಿ ಸುರುನ ನಾಟಿ ಸುರು ಮಾಡುದು ವಾಡಿಕೆ. ಸಾಮಾನ್ಯ **'ಚೋಟಿ'** (ಗೇಣಿ)ಗೆ ಒಂದರಂಗೆ ಒಂದ್ **'ಹತ್ತ್'** ನೇಜಿ ನೆಟ್ಟವೆ. ಹೆಚ್ಚ್ ಚೋಳಿರ್‌ವ ಕೆಂಪಗದ್ದೆಲಿ(ಕೆಸರು

ಗದ್ದೆ) ನಾಟಿನ ಬಾಳ ಎಚ್ಚರ್‌ಕೆಂದ ಮಾಡ್‌ವೆ. ಜೋಳುನ ಒಳೆಗೆ ನೇಜಿ ನೂಕಿ ಹೋದರೆ ಅದ್ ಮತ್ತೆ ಚಿಗುರುದು ಕಸ್ಟ ಇರುದರ್‌ಂದ ಈ ರೀತಿನ ಎಚ್ಚರಿಕೆಲಿ ಇದ್ದವೆ. ನಾಜೂಕಾದ ಕೆಲಸಗಾರರ್ ಹತ್ತು ಜೆನ ಇದ್ದರೆ ಒಂದ್ ದಿನಲಿ ಸುಮಾರ್ ಒಂದ್ ಮುಡಿ ಗದ್ದೆನ ನೆಟ್ಟ್ ಮುಗಿಸಬುಟ್ಟವೆ. ನಾಟಿನ ಹೊತ್ತುಲಿ ಪಾಡ್ದನ ಹೇಳ್‌ವ ಬದಲ್ ಪೊದ್ಯ, ಗಾದೆ, ಒಡ್ಸ್‌ಕತೆಗಳ ಸಂದರ್ಬಾನುಸಾರವಾಗಿ ಬಳ್ಸುವೆ. ಹಿಂಗೆ ಮಾಡ್ದರ್‌ಂದ ಕೆಲಸ ಬೇಗ ಆದೆ, ಹಂಗೆ ಶ್ರಮ ಕಡಿಮೆಯಾದೆತ ನಂಬಿಕೆ ಉಟ್ಟು.

**ನಾಟಿ ನೆಡ್ಡು :** ಮನೆನ ಯಜಮಾನ ನಾಟಿ ನೆಡ್‌ವ ಗದ್ದೆನ ಹದ ಮಾಡಿ ಗದ್ದೆಗೆ ಅಗೆಹಾಕಿ ಗದ್ದೆನ ಏರಿ/ಪುಣಿ ಮೇಲೆ ಒಂದ್ ಮೂಲೆನ ಲಾಯ್ಕ್ ಗುಡ್ಸಿ ಹೂ, ಗಂದದ ಕಡ್ಡಿ ದೂಪ ಹೊತ್ತುಸಿ, ಹರಳೆ ಸೊಪ್ಪುಲಿ ಹಾಲ್ ಅಕ್ಕಿ ಬೆಲ್ಲನ ಇಸಿ ನೈವೇದ್ಯ ಇಸಿ ಪೂಜೆಮಾಡಿ ಬಾಂತೇಳಿ ದೊಡ್ಡ ಸ್ವರಲಿ ಕರ್‌ದ್‌ದ್ ಹುರುಪುಂದ ನಾಟಿ ನೆಟ್ಟ್‌ಕಂಡ್ ಸಾಗುವೆ. ಅದಾಗಿ ನಾಟಿಗೆ ಬಂದವೆಲ್ಲ ನಾಟಿ ನೆಡಕಿ ಸುರು ಮಾಡ್‌ವೆ. ಅಗೆ ಮತೆ ನಾಟಿಕೆಲ್ಸನ ಒಬ್ಬಂದೊಬ್ಬ ಕೂಡಿಕಂಡ್ ಒಗ್ಗಟ್ಟಾಗಿ ಮಾಡ್‌ವೆ.

ಜೆನಂಗ ನಾಟಿ ಮತ್ತೆ ಅಗೆ ಕೆಲ್ಸಲಿ ಇರಿಕನ ಈ ಕಾಲಲಿ ಅವ್ಕೆ ಬೇರೆ ಯಾವ ರೀತಿನ ಸಂತೋಸ ಕೂಟಕೆ ಹೋಕೆ ಮತೆ ಗಮ್ಮತ್ ಉಂಬಕೆ ಅವ್ಕಾಸ ಇಲ್ಲದಿರ್‌ದರ್‌ಂದ ಪ್ರತಿ ಒಬ್ಬ ಸದಸ್ಯನ ಪರವಾಗಿ ಒಂದ್ ಕೂಡು ಊಟ ಏರ್ಪಾಟ್ ಮಾಡಿ ಹಾಂಗೆ ಕೆಲ್ಸನೂ ಹಾಳಾಗದೆ ಹಾಂಗೆ ಒಂದೊಂದ್ ಕಂಬಳ ನಾಟಿತೇಳಿ ಏರ್ಪಾಟ್ ಮಾಡ್‌ವೆ. ಈ ಕಂಬಳ ನಾಟಿಲಿ ಗಮ್ಮತ ಮಾಡಿ ಗದ್ದೆಲಿ ಓಟದ ಸ್ಪರ್‌ದೆನ ಇಸುವೆ. ದಕ್ಷಿಣಕನ್ನಡದ ಕಡೆ ಕೋಣ ಕಂಬಳ ಇದ್ದದೆ. ಯಾರ್ ಈ ಓಟಲಿ ಗೆದ್ದವೆನೊ ಅವ್ಕೆ ಇನಾಮು ಕೊಟ್ಟವೆ. ಇನಾಮುನ ಮನೆನ ಯಜಮಾನ ಗೆದ್ದವ್ಕೆ ಕೊಟ್ಟವೆ. ಈ ತರದ ಕಂಬಳಕ್ಕೆ ಕೊಂಬು ವಾಲಗನ ಸೇರ್‌ಸುದು ಉಟ್ಟು. ಈ ಕಂಬಳದ ಓಟ ನೋಡಿಕೆ ಸುತ್ತ ಊರುನ ಜೆನಂಗೆಲ್ಲ ಬಂದವೆ. ಅದೊಂದ್ ಸಣ್ಣ ಜಾತ್ರೆನ ಹಾಂಗೆ ಇದ್ದದೆ. ಕೆಲ್ಸಮಾಡಿ ಬೊಚ್ಚಿದವ್ಕೆ ಇದೊಂದ್ ಗೌಜಿನ ದಿನ. ಓಡುದರೊಟಿಗೆ ನಾಟಿ ನೆಡುದರ್‌ಲಿನು ಸ್ಪರ್‌ದೆಗ ಒಳೊ. ನಾಟಿ ನೆಡಿಕನ ಚುರ್‌ಕಾಗಿ ನೆಡದವರ ಹಾಸ್ಯ ತಮಾಸೆ ಮಾಡ್‌ವೆ. ನಾಟಿ ನೆಡುವ ಹೊತ್ತುಲಿ ಸುಮಾರ್ ಕತೆ, ಒಡ್ಸ್‌ಕತೆ ಹೇಳ್ದರ್‌ಂದ ಕೆಲ್ಸದ ಬಝ್ಝ ಇರದೆ ನಾಟಿ ನೆಡ್ಡು ಬಾರಿ ಸುಲಬಲಿ ಸಾಗಿದೆ. ಇದರಂಗೆ ಹೆಣ್ಮಕ್ಕ ಅಗೆ ತೆಗೆಕೆ ಬಾಕನ ಮನೆನ ಯಜಮಾನ್ತಿ ಬಂದ ಹೆಣ್ಮಕ್ಕಳಿಗೆ ಎಲೆ ಅಡ್ಕೆನ ಕೊಟ್ಟ್ ಕರ್‌ದ್ ಒಗಟ ಕತೆ ಸೋಬಾನೆಗಳ್‌ಂದ,ಕುಸಾಲ್‌ಗೆ ಮಾಡಿಕಂಡ್ ಕುಸಿಂದ ಕೆಲ್ಸನ ಮಾಡ್‌ವೆ.

ಇದೆಲ್ಲ ನೋಡಿಕನ ನಮ್ಮ ಪಂಡ್‌ನವು ಹೇಂಗೆ ಒಗ್ಗಟ್ಟ್‌ಲಿ ಕೆಲ್ಸ ಕಾರ್ಯಗಳ ಮಾಡ್ತಿದ್ದೊಂತ ಗೊತ್ತಾದೆ. ಕೆಲ್ಸ ಕಾರ್ಯಕೆ ಹೇಂಗೆ ಕೂಡಿಕಂಬೊದು ಇತ್ತ್‌ಂತ ಗೊತ್ತಾದೆ. ಕೆಲ್ಸನ ಕೂಡಿದ್ ಕುಸಿಕುಸಿಂದ, ನೆಗಾಡಿಕಂಡ್ ಮಾಡತಿದ್ದೊಂತ ಗೊತ್ತಾದೆ... ನಾಟಿನೆಟ್ಟ ಆ ದಿನದ ನಾಟಿನ ಎಲ್ಲವು ನಾಟಿ ಕೂಡುವ ಹೊತ್ತುಲಿ ಓ ಹೊಯ್ಯಾ ಓಹೋ ಹೊಯ್ಯಾತೇಳಿ ಎಲ್ಲವು ಜೋರು ಹೇಳ್‌ವೆ ಆಗ ನೆರೆಕರೆವ್ಕೇ ಕಂಬಳ ನಾಟ ಕೂಡಿಟುತ ಗೊತ್ತಾದೆ.

ನಾಟಿಕೆಲ್ಸ ಮುಗೆಕನ ಗಣೋದಿ ತ ಪೂಜೆನ ಮಾಡ್‌ವೆ. ಆಗ ಮನೆನ ಯಜಮಾನ ಗದ್ದೆನ ಏರಿನ ಮೂಲೆನ ಶ್ರೀ ಗಣಪತಿಗೆ ನೈವೇದ್ಯ ಇಸಿ ಕಳಕಳಿ ನಾಟಿ, ಶ್ರೀ ಕಾವೇ ರಮ್ಮನ ಮನದಂಗೆ, ಇನ್ನು ತಪ್ಪನ ಶಿಕರದಂತೆ, ಕಾವೇರಿ ವಾಟಿಪಡದಂತೆ ದೇವ್‌ರ್‌ಗೂ ನಂಗೂ ಸಮಪಾಲ್ ಆವಂಗೆ ಏರಿಗೂ ಬಾರಿಗೂ ಮುಟ್ಟಿ ಬೆಳೆವಂಗೆ ಬೆಳೆಲಿಂತ ಹಾರೈಸಿ ನಾಟಿನ ಮುಗ್ಸುವೆ. ಶ್ರೀ ಗಣಪತಿಯ ಪ್ರಸಾದನ ಎಲ್ಲವ್ಕೆ ಕೊಟ್ಟವೆ.

**ಗದ್ದೆ ಆಳುದು :** 'ಕಂಡೊ ಆಳುನೆ';ಗದ್ದೆ ಆಳುದ್, ಒಂದ್ ಕೆಲ್ಸ ಮಾಡ್‌ವ ಕ್ರಮ. ಗದ್ದೆನ ನಾಟಿ ಮುಗ್ದ ಮೇಲೆ ಕೈಲಿದ್ದ ಅಗೆನ ಹಿಡ್ಕಂಡ್ ಗದ್ದೆ ಪುಣಿಲಿ ನಿತ್ತ್ ಹೇಳ್‌ವ ಹೇಳಿಕೆ. 'ಕಂಡೊ ಆಳುನೆ' ಅತವಾ ಗದ್ದೆ ಆಳುದು. ಪಾಡ್ದನ ಹೇಳಿಕೆ ಗೊತ್ತಿರುವ ಹೆಂಗಸ್ ಗದ್ದೆ ಆಳುವ ಹೇಳಿಕೆನ ಗಟ್ಟಿಯಾಗಿ ಹೇಳ್ಕಂಡ್, ಈ ಹೇಳಿಕೆನ ಕಡೆ ಸಾಲ್‌ಗಾಕನ ಉಳ್ದ ಹೆಣ್ಮಕ 'ಕೂ...' ತೇಳಿ ಸೊರ ಸೇರ್‌ಸುವೆ. ನಿಜ ಜೀವನಲಿ ಪುರೇಸಿಕೆ ಆಗದ ಬೇಡಿಕೆಗಳ ಮುಂದುವರ್‌ಸ 'ಕಂಡೊ ಆಳುನೆ' ಹೇಳಿಕೆನ ಹೇಳಿಕಂಡ್, ಪಸ್‌ಲ್ ತುಂಬಕುತೇಳಿ ಗ್ರೇಸಿಕಂಡವೆ. ಅರೆಬಾಸೆ ಪೆದೇಸದ ಪ್ರಮುಕ ಮೂರ್ ಬಾಗದ 'ಕಂಡೊ ಆಳುದ್' ಹೇಳಿಕೆನ ಕೂಡ್ಸಿ ಇಸಿಯೊಳೊ. ಈ ಮೂರು ಹೇಳಿಕೆಲಿ ಮಂಗ್ಳೂರ್ ಬಾಗದ ಹೇಳಿಕೆ ಬೇಸಾಯದ ಕಾಲಕ್ಕೆ ತಕ್ಕ ಇದ್ದ್, ಕಾಸರಗೋಡು ಹಂಗೆ ಸುಳ್ಯ ಕಡೆನ ಹೇಳಿಕೆಗ ಬೇಸಾಯಕಾಕನ ಅಪ್ರಸ್ತುತಂತೇಳುವಂತದರ ಗುರ್‌ತ್‌ಸಕ್. ಕಾಸರಗೋಡು ಹಂಗೆ ಸುಳ್ಯ ಬಾಗದ ಹೇಳಿಕೆಗ ಬಲೀಂದ್ರ ಪಾಡ್ದನಗಳ್‌ಲಿ ಬಾವ ಹೇಳಿಕೆಗಳನೆ ಬಳ್ಸಿಕಂಡದ್ದರ ಗುರ್‌ತ್‌ಸಕ್. ತೇಳ್‌ರೇ ಬಲೀಂದ್ರ ಅರೆಬಾಸೆ ಪ್ರದೇಸಕೆ ಮತ್ತೆ ಯಾಗ ಬಾವೋಂತೇಳುವ ಗೊತ್ತಿಲ್ಲದರ ಹೇಳಿಕೆಗ ಇವೆಲ್ಲ. ಈ ಪ್ರದೇಸದ ಎಲ್ಲಾ ಕಡೆಲು ಇದೇ ತರದ ಹೇಳಿಕೆಗ ಸಿಕ್ಕುವೆ.

ತನ್ನ ಯಜಮಾನನ ಪಸ್‌ಲ್, ದುಡಿವ ಜೆನ್‌ರ ಕೈಲಿ ಉಟ್ಟ್‌ಂತೇಳುದಕ್ಕೆ 'ಕಂಡೊ ಆಳುನ' ಹೇಳಿಕೆ ಒಳ್ಳೆ ಉದಾರ್‌ಣೆ. ಗದ್ದೆಲಿ ನಾಟಿ ಕೆಲ್ಸ ಮಾಡ್ದ ಎಲ್ಲಾ ಕೆಲ್ಸದ ಜೆನಗ ಒಟ್ಟಿಗೆ ಗದ್ದೆಗೆ ಸುತ್ತು ಬಂದ್‌ಕಂಡ್ ಈ ಹೇಳಿಕೆ ಹೇಳ್ದು ಬೆಳೆನ ಬೊವಿಸ್ಯನ ಬಗ್ಗೆ ಈ ವರ್‌ಗಕ್ಕಿರುವ ಅಪಾರ ಕಾಳಜಿನ ತೋರ್‌ಸಿದೆ. ತಮ್ಮ ಕೈಲಿ ಒಳ್ದಿರುವ ನೇಜಿನ ಹಿಡ್ದ್ ಸಮೃದ್ದಿನ ಬೇಡಿಕೊಂಬೊದು ಹಂಗೆ ಸದ್ದಾಗಿ ತಮ್ಮ ಯಜಮಾನ ಯಜಮಾನ್ತಿಗ ಹಕ್ಕ್‌ದಾರಾಗಲಿಂತೇಳಿ ಬಯ್ಸುದು ಕೆಳವರ್‌ಗದ ಸ್ವಾಮಿನಿಸ್ಟೆನ ತೋರ್‌ಸಿದೆ ನಾವ್‌ಗೆ ಎಸ್ಟೇ ಕಸ್ಟ ಬಂದರೂ ತಮ್ಮ ಯಜಮಾನನ ಕುಸಿಲಿ ಇರೋಕುಂತೇಳುವ ಪ್ರಾರ್‌ತನೆ ಇಲ್ಲಿಟ್ಟು.




**ಕದಿಕೆ ಕಟ್ಟುದು :** ಏಣೆಲ್ ಬೇಸಾಯದ ನಾಟಿಲಿ ನಡೆವ ಕಡೆನ ಕ್ರಿಯಾಚರಣೆ 'ಕದಿಕೆ ಕಟ್ಟುನ' (ನೋಡಿ : ಕದಿಕೆ) ಈ ಕದಿಕೆ ಕಟ್ಟುವ ಕ್ರಿಯಾಚರಣೆ ಅರೆಬಾಸೆ ಪದೇಸನ ಕೆಲವ್ ಪ್ರದೇಸಗಳಲಿ ಮಾತ್ರ ಕಂಡ್ ಬಂದದೆ. ದೊಡ್ಡ ಗದ್ದೆನ ನೇಜಿ ಕೆಲ್ಸ ಮುಗ್ದ ಮೇಲೆ ಕೆಲ್ಸದವರ ಪಾಡ್ದನ ಹೇಳ್ವ ಹೆಂಗ್ಸ್ ಈ ಕ್ರಿಯಾಚರಣೆ ನೆರವೇರಿಸಿದೆ. ತನ್ನ ಕೈಲಿರುವ ನೇಜಿನ ಗದ್ದೆಂದ ನೀರ್ ಹೊರಗೆ ಬೀಳುವ ಗಂಡಿನ ಹಕ್ಕಲೆ ನೆಟ್ಟದೆ. ವೃತ್ತಾಕಾರ ಆಗಿ ನೆಡುವ ಈ ನೇಜಿನ ನೆಡುಲಿ



ಪೈರ್ ಹೊಡೆದು

'ಕಾಡ್ ಕೆಸ'ನ ನೆಟ್ಟವೆ. ಈ ಕ್ರಿಯೆನ 'ಕಡಿಕೆ ಕಟ್ಟುದು' ತೇಳುವೆ. ಸುಳ್ಯ ಪ್ರದೇಸಲಿ ಬಹುತೇಕ ಕಡೆಗಳ್‌ಲಿ ಈ ಕ್ರಮ ಕಂಡ್‌ಬಂದದೆ. ಈ ಕ್ರಮ ಮುಕ್ಯ ಆಗಿ ದುಡಿವ ಮತ್ತೆ ದುಡ್ಸುವ ಈ ಎರ್‌ಡ್ ವರ್‌ಗಗಳ ನೊಡುಲಿ ಸಾಂಸ್ಕೃತಿಕಕೊಟ್ಟುತಕಂಬದರ ಬಿಂಬ್‌ಸಿದೆ. ಕೆಳವರ್‌ಗದವರ ಮುಕ್ಯ ಆಹಾರ ಮತ್ತೆ ಬಡತನದ ಕಾಲಲಿ ಉಪಕಾರಕೆ ಬಾವ 'ಕೆಸ' ಬತ್ತದ ಒಟ್ಟಿಗೆ ಸಮೃದ್ದಿನ ಪಡಿಯೋಕುಂತೇಳುವಂತದರ್‌ನ ಕಾಣಕ್. ಸ್ರೀಮಂತರ ಆಹಾರ ಬತ್ತ ಹಂಗೆ ಬಡವರ ಆಹಾರ ಆದ ಕೆಸ ಪರಸ್ಪರ ಒಂದಾಗಿ ಅರೆಬಾಸೆ ಪದೇಸನ ಜಾತಿನ ಸಾಮರಸ್ಯ ಕಂಡ್ ಬಂದದೆ. ಬೇಸಾಯ ಸಂಸ್ಕೃತಿಲಿ ಜಾತಿನ ಬೇದ ಚೊರೆಗ ಇಲ್ಲದೆ ಸಮಾನ ದ್ರಿಸ್ಟಿಕೋನ ಇದಾಗುಟು.ಇದ್ಕೆ ಪೂರಕ ಆಗಿದ್ ಅತಿಕರೆನ ಬತ್ತದ ಇತಿಯಾಸನ ಗ್ರೇಸಿರೆ ಹಂಗೆ 'ಅತಿಕರೆಯ' ಬತ್ತ, ಗಟ್ಟ ಇಳ್ದ್ ಒಟ್ಟಿಗ ಬಂದುಟುಂತೇಳ್ದಕೆ ವಿವರಣೆ ಸಿಕ್ಕಿದೆ. ಹಂಗಾಗಿ ಬತ್ತಕೆ ಸಿಕ್ಕುವ ಮಾನ್ಯತೆನ ಕೆಳವರ್‌ಗ ಕೆಸದ ದೈಗು ಕೊಡಿಕೆ ಪ್ರಯತ್ನ ಪಟ್ಟದೆ. ಈ ಕಾರಣಂದಲೇ ಹೊಸ ಅಕ್ಕಿ ಉಂಬ ಹೊತ್ತುಲು ಕೆಸ ಪಲ್ಯನ ಕಡ್ಡಾಯ ಮಾಡೊಕು.

ಬೇಸಾಯದವ್ ಬಳ್ಸವ ಸೊತ್ತ್‌ಗಳ್‌ಲಿ 'ಕಡಿಕೆ' ತೇಳಿರೆ ಬತ್ತ ಕೂಡಿಸ್‌ವ ಇಸುವ ವೃತ್ತಾಕಾರದ ಕಣಜ. ನಾಟಿನ ಹೊತ್ತುಲಿ ಪಲ ಕೊಡ್‌ವ ಅಗೆಂದಲೇ ಇಂತ ಕಣಜ ಕಟ್ಟಿ, ಅದರೊಳಗೆ ಕೆಸ ತುಂಬಿಸುದರ್‌ಂದ ಕೆಳವರ್‌ಗಕೆ ಮೇಲ್ವರ್‌ಗ ರಕ್ಸಣೆ ಕೊಟ್ಟದೆಂತೇಳುವ ತಾತ್ವಿಕ ಅರ್‌ತ ಕಂಡ್ ಬಂದದೆ. ಈ ಕ್ರಿಯೆನ ಕೆಳವರ್‌ಗದ ಹೆಣ್ಮಕ ಮಾಡ್‌ದು ಇನ್ನೂ ಅರ್‌ತಬದ್ದ ಆಗಿದ್ದದೆ. 'ಕಡಿಕೆ ಕಟ್ಟುವ' ಕ್ರಿಯೆ ನಡ್ದ್ ನೀರ್ ಕೆಳೆಗೆ ಹರ್‌ದ್ ಬೀಳ್ದು 'ಕಡಿ'ನ ಕರೆಲಿ. ನಂಬಿಕೆನ ಪ್ರಕಾರ, ಹರಿವ ನೀರ್‌ಗೆ ಸಾಸ್ತ್ರ ಇಲ್ಲೆ. ಯಾದೇ ಜೆನಾಂಗದ ಜೆನ ಆದರೂ ಹರಿವ ನೀರ್‌ನ ಮುಂದೆ ಎಲ್ಲ ಒಂದೇ. ಆದ್ದರ್‌ಂದ 'ಕಡಿಕೆ ಕಟ್ಟುವ' ಕ್ರಿಯೆಲಿ ಕಾಂಬ ವರ್‌ಗಗಳ ಸಾಂಸ್ಕೃತಿಕಒಗ್ಗಟ್ಟ್ ಹರಿವ ನೀರ್‌ನ ಮುಂದೆ, ವರ್‌ಗ ಸಮಾನತೆನ ಸೂಚ್‌ಸಿದೆ. ಬೇಸಾಯದ ಪ್ರತೀ ಹಂತಲೂ ಅರೆಬಾಸೆ ಪ್ರದೇಸನ ಕೆಳವರ್‌ಗ ಮತ್ತೆ ಮೇಲ್ವರ್‌ಗ ಪರಸ್ಪರ ಕೂಡಿಕಂಬ ಸಾಂಕೇತಿಕ ಅಬಿವ್ಯಕ್ತಿ ಈ ಕ್ರಿಯಾಚರಣೆಂದ ಕಂಡದೆ.

**ಕಾಪು :** ಬೇಸಾಯದ ನಾಟಿ ಕೆಲ್ಸ ಮುಗ್ದ ಮೇಲೆ ಗದ್ದೆನ ನೊಡುಲಿ 'ಕಾಪು' ನೆಡುವ ಕ್ರಮ. 'ಕಾಪು' ತೇಳ್ದಕೆ ಕಾಯೋದು, ತಡ್ಕ, ನಿರೀಕ್ಸೆ ಮಾಡ್, ಪಾರ ಕಾಯೋದು, ಕಾಪಾಡ್, ರಕ್ಸಿಸ್ ಇಂತವೆಲ್ಲ ಅರ್‌ತಗ ಉಟ್ಟು. ಪ್ರಾಣಿ ಪಕ್ಸಿಗಳ್‌ಂದ ಹಂಗೆ ಮೊಯಿಂಸನ ದ್ರಿಸ್ಟಿ ತಾಂಗದಂಗೆ ಬೆಳೆನ ರಕ್ಸಣೆ ಮಾಡಿಕೆ ಬತ್ತದ ಗದ್ದೆ, ತರಕಾರಿನ ಹಿತ್ಲ್, ಇಲ್ಲೆಲ್ಲ ನೆಡುವ ಕಳ್ಳಿ, ಮಾಯಿಪುನ ಸೂಡಿ, ಇಂತದರೆಲ್ಲ ಕಟ್ಟಿದ ಕೋಲ್, ಬೆರ್‌ಚ ತೇಳುವ ಅರ್‌ತನ ನಿಗಂಟ್ ಕೊಟ್ಟದೆ. ಗದ್ದೆಗಳ್‌ಲಿ ನಾಟಿ ನೆಟ್ಟ ಮೇಲೆ ಅದ್ಕೆ ದ್ರಿಸ್ಟಿ ತಾಂಗದಿರ್‌ಲಿಂತೇಳಿ ನೆಡ್‌ವ ಕೆಲವೊಂದು ಮರದ ಗೆಲ್ಲ್‌ಗಳಿಗೆ 'ಕಾಪು' ತೇಳುವೆ. ಏಣೆಲು ಬೆಳೆಗಳ್‌ಲಿ ಕಾಯರದ ಮರದ ಗೆಲ್ಲ್‌ಗಳ ಹೆಚ್ಚಾಗಿ ನೆಟ್ಟವೆ. ಬತ್ತ ಸಂಸ್ಕೃತಿನ ಪ್ರತೀ ಪ್ರದೇಸಲಿನೂ ಕಾಪು ಒಂದಲ್ಲ ಒಂದ್ ರೀತಿಲಿ ನೆಟ್ಟವೆ. ಸುಳ್ಯ, ಪುತ್ತೂರು, ಕಾಸರಗೋಡು ಈ ಬಾಗದ ಗದ್ದೆಗಳಿಗೆ 'ಕಾಸರಕದ ಕಣೆ' ಅಲ್ಲರೆ ಬೆದ್ರ್ ನ 'ಅಂಡೆ' ಒಳಗೆ ಕಳ್ಳಿ ದೈನ ತುಂಬ್‌ಸಿ ಮಂಗಳವಾರ ಅಲ್ಲರೆ ಐತ್ವಾರ ಗದ್ದೆನ ನೆಡು ಬಾಗಲಿ ಊರಿಸುವೆ. ಮಂಗಳೂರು, ಬೆಳ್ತಂಗಡಿ, ಬಂಟ್ವಾಳ ಕಡೆ ಕಾಯರ ಕಣೆಂದ ಕಳ್ಳಿನ ಊರ್‌ದೇ ಹೆಚ್ಚ್.

ಮಂಗಳೂರು ತಾಲ್ಲೂಕ್‌ನ ಕೆಲವ್ ಬಾಗಲಿ 'ಕಾಪು' ಒಂದ್ ಆಚರಣಾತ್ಮಕ ರೂಪನ ಪಡ್ದುಟು. ಎಲ್ಲಾ ಕಡೆಲು ಏಣೆಲ್ ಬೆಳೆನ ಕಡೆನ ದಿನ ನಾಟಿ ಮುಗ್ದ ಮೇಲೆ ದೆವ್ವಗಳ ಗದ್ದೆಗಳಿಗೆ ಅಲ್ಲರೆ 'ಬಾಕಿತಿಮಾರ್' ಗದ್ದೆಗಳಿಗೆ ಕ್ರಮಪ್ರಕಾರ 'ಕಾಪು' ನೆಟ್ಟವೆ. ಇದ್ ಸಾಮಾನ್ಯ ಸುಗ್ಗಿ ಕಾಲದ ಪೂಕರೆಗೆ ಬದಲಾಗಿ ಆಚರಣೆಗೊಂಡದೆ. ಗದ್ದೆನ ಯಜಮಾನ ಹಾಂಗೆ ನಾಟಿ ಗದ್ದೆಲಿ ಪದ ಹೇಳ್‌ವ ಹೆಂಗಸ್ ಇವರಿಬ್ಬರೂ ಗದ್ದೆಗೋರಿನ ಹಿಂದೆನ ದಿನಂದಳೆ ಮಡಿಲಿರುದ್, ಆ ರಾತ್ರಿ ಇಬ್ಬರೂ ಉಪಾಸ ಇರ್‌ದು ಗದ್ದೆಲಿ 'ಕಾಪು' ಹಾಕಿದ ಮೇಲೆನೇ ಅವಿಬ್ಬರೂ ಉಂಬೊದು ಇಲ್ಲಿನ ಸಾಮಾಜಿಕ ಸಮ್ಮಂದದ ಮುಕ್ಯ ಸಂಗತಿ ಇದ್.

'ಕಾಪು' ತೇಳ್‌ದು ಕಾಪಾಡಿಕಂಬ ತಂತ್ರ ಆಗಿದ್ದ್ ಇದ್ ಆಚರಣಾತ್ಮಕ ನೆಲೆಲಿ ನಡ್ದದೆ. ಕಾಯರ ಹಂಗೆ ಕಳ್ಳಿನ ಬಗ್ಗೆ ಜೆನಪದರ ನಂಬಿಕೆ ಈ ಕ್ರಿಯಾಚರಣೆನ ಮೇಲೆ ಪ್ರಭಾವ ಬೀರ್‌ದೆ. ಸುಮಾರ್ ಸರ್‌ತಿ ಈ ಎರ್‌ಡ್ ದೆವ್ವಗಳ ರಕ್ಷಣೆಗೂ, ತಡೆಗಾಗಿನೂ ಜೆನಪದರ್ ಬಳ್ಸುದರ ಗುರ್‌ತುಸಕ್. ಈ ಎರ್‌ಡೂ ದೈಮರಲಿ ಇರ್‌ವ ಪ್ರಕೃತಿ ಕೊಡ್‌ವ ಗುಣಂದಾಗಿ ಜೆನಪದರ್‌ಲಿ ರಕ್ಷಣಾತ್ಮಕ ಆಗಿ ಪ್ರತ್ಯೇಕ ಜಾಗೆ ಉಟ್ಟು. ಜೆನರ ಪ್ರಕಾರ ದೈಮರಕೆ ಅತಿಮಾನುಸ ಕಲ್ಪನೆ ಇರ್‌ದರ್‌ಂದ ಗದ್ದೆನ ಪಾರ ಕಾಯ್‌ವ ಕೆಲ್ಸ ಕೊಟ್ಟೊಳೊ. ಸಮೃದ್ದಿ ಅಳ್ದ್ ಹೋವಲ್ಲಿ ಮೊಯಿಂಸನ ಕೆಟ್ಟ ದ್ರಿಸ್ಟಿ ಬಾರೀ ಪರಿಣಾಮ ಬೀರುದರ್‌ಂದ ಆ ದ್ರಿಸ್ಟಿನ ನೀವಾಳ್ಸಿಕಾಗಿ ಕಳ್ಳಿನ ಶಕ್ತಿ ಆಗಿದ್ ಬಳ್ಸಿಕಂಡಿರುವ ಸಾದ್ಯತೆ ಉಟ್ಟು. ಗದ್ದೆ ತುಂಬ ಬೆಳ್ದ್ ನಿಲ್ಲ್‌ವ ಪೈರ್‌ನ ಮೇಲೆ ಹೆಂಗಿದ್ದರೂ ಮೊಯಿಂಸನ ದ್ರಿಸ್ಟಿ ಬಿದ್ದದೆ. ಈ ದ್ರಿಸ್ಟಿ ಹಾಳ್‌ಂತೆಳುವ ನಂಬಿಕೆ ಜೆನಪದರ್‌ಲಿ ಇದ್ದ್ ಅದರ ತೊಪ್ಪುಸುವ ಉದ್ದೇಸಂದ ಕಾಪು ನೆಟ್ಟವೆ. ದೈಯ್ಯಾಗಲಿ ಮೊಯಿಂಸಾಗಲಿ ಸಣ್ಣತ್ತಿರ್‌ಕಾಕನ ಅದರ ಮೇಲೆ ದ್ರಿಸ್ಟಿನ ಕೇಡ್ ಹೆಚ್ಚಾಗಿದ್ದದೆ ತೇಳುವಂತದ್ ನಂಬಿಕೆ. ಎಳ್ತ್‌ಲೇ ಲಾಯ್ಕ್ ರಕ್ಷಣೆ ಕೊಡೋಕುತೇಳುವ ಉದ್ದೇಸ ಇಲ್ಲಿ ಕಂಡದೆ. ಕಳ್ಳಿದೈನ ಹಾಲ್ ಕಣ್ಣ್‌ಗೆ ಕೇಡ್ ಬಗೆವ ವಿಸಕಾರಕ ಹಾಲ್ ಆಗಿದ್ದದೆ. ಈ ಕೇಡ್‌ನ ತೋರ್‌ಸುವ ದ್ರಿಸ್ಟಿಂದ ಕಳ್ಳಿನ ಬೇಸಾಯದ ಸುರೂಗೆನೇ ಬಳ್ಸುವೆ. ಇದ್ಕೆ ಪೂರಕ ಆಗಿದೆ ಜೆನಪದ ಸಂಸ್ಕೃತಿಲಿ ಎಳೆ ಕೂಸುಗೆ ದ್ರಿಸ್ಟಿ ಚುಕ್ಕಿ ಹಾಕ್‌ವ, ಕಾಯರದ ಸೊಪ್ಪು ಇಸುವ ನಂಬಿಕೆ ಜಾರಿಲಿದ್ದಿರ್‌ದು. ಅದರ್‌ಂದ ನಾಟಿ ಮಾಡ್ದ ಸುರುಗೇ ಬೆಳೆನ ರಕ್ಸ್‌ಸುವ ಜವಾಬ್ದಾರಿನ 'ಕಾಪು'ನ ಮೇಲೆ ಜೆನಗ ಹೊರ್‌ಸಿಬುಟ್ಟವೆ.

**ಕಳೆ :** ಏಣಿಲು ನಾಟಿಯಾದ ಒಂದ್ ತಿಂಗಳ ಮೇಲೆ ನಾಟಿ ಗದ್ದೆಲಿ ಬೆಳೆವ ಬೇರೆ ಕಾಡ್ ದೈಗಳ 'ಕಳೆ' ತೇಳುವೆ. ಬತ್ತದ ಬೇಸಾಯಲಿ ಸುಮಾರು 40 ಜಾತಿನ ಕಳೆಗ ಒಳೊಂತೇಳುವೆ. ಈ ಕಳೆಗಳ ಕಿತ್ತ್ ಬೆಳೆನ ಕಾಪಾಡ್‌ವ ಕ್ರಿಯೆ ತುಳು ಕಾಲಗಣನೆನ ಆಟಿ 15 (ಜುಲೈ ಕಡೆ) ರ ಮೇಲೆ ಸುರಾದೆ. ಗದ್ದೆಗಳ್‌ಲಿ ಬೆಳೆವ ಕಳೆಗಳ್‌ಲಿ ದೊಂಡೆಹುಲ್ಲು, ಸಾರಿಹುಲ್ಲು, ಕೋರಹುಲ್ಲು, ನೊರೆಹುಲ್ಲು, ಮಾವು, ಕೊಣಲೆ (ಗಂಡುಬತ್ತ) ಇಂತವೆಲ್ಲ ಮುಕ್ಯ ಆಗಿಉಟ್ಟು. ಸುಮಾರ್ ನಾಲ್ಕೈದ್ ಜೆನ ಇದ್ದರೆ ಒಂದ್ ಮುಡಿ ಗದ್ದೆದ್ ಕಳೆನ ಒಂದ್ ದಿನಲಿ ಕಿತ್ತ್ ಮುಗ್‌ಸಿಕೆ ಸಾದ್ಯ ಉಟ್ಟು. 'ಕೊಣಲೆ'ನ ಅತ್ಯಂತ ದರಿದ್ರದ (ಕೆಟ್ಟದಾದ) ಕಳೆಂತೇಳಿ ಜೆನಪದರ್ ಗ್ರೇಸಿಯೊಳ. 'ಕೊಣಲೆ' ಸಾಮಾನ್ಯ ಅಗೆನ ಹಾಂಗೆ ಇದ್ದ್, ಬೇರೆ ಮಾಡಿಕೆ ಆಗದ ಕಳೆ ಆಗುಟು. ದರಿದ್ರ ಹಿಡ್ದವನ ಗದ್ದೆಲಿ ಮಾತ್ರ 'ಕೊಣಲೆ' ಬೆಳ್ದದೆಂತ ತೇಳ್‌ವ ನಂಬಿಕೆ ತುಳು ಜೆನಪದರ್‌ಲಿ ಉಟ್ಟು. ತುಳು ಬೇಸಾಯ ಸಂಸ್ಕೃತಿಲಿ 'ಒಬ್ಬ ಮೊಯಿಂಸ ಹಾಳಾಗಿ ಹೋಗಲಿ' ತೇಳಿ ಸಾಪ ಕೊಡುವ ಬದಲ್ 'ಅಂವನ ಗದ್ದೆಲಿ ಕೊಣಲೆ ಬೆಳೆಯಲಿ' ತೇಳುವ ವಾಡಿಕೆನೂ ಉಟ್ಟು. ನೀರ್‌ನ ಪಸೆ ಹೆಚ್ಚಾದ್ದಲ್ಲೆಲ್ಲಾ 'ಕೊಣಲೆ' ತನ್ನಸ್ಟಕೆ ಬೆಳಿವ ದೈ ಆಗಿದ್ದ್, ಅದರ ನಿಯಂತ್ರಣಕೆ ತಾಕೆ ಕಸ್ಟ ಉಟ್ಟು. 'ಕಳಮೆ ಕಂಡೊಟು ಕೊಣಲೆದ ಬಿತ್ತ್' (ಕಳಮೆ ಗದ್ದೆಲಿ ಕಳೆನ ಬೀಜ) ತೇಳುವ ಗಾದೆ ಒಂದ್‌ಟ್ಟು. ಈ ಗಾದೆ 'ಕಳಮೆ' ಬತ್ತದ ಬಿತ್ತ್‌ಗು ಕೊಣಲೆ ಬೀಜಕು ಇರುವ ಸಮ್ಮಂದನ ತಿಳ್‌ಸಿದೆ.

ಆಟಿ ತಿಂಗಳ್‌ಲಿ ಗದ್ದೆಂದ ಕಳೆಕಿತ್ತ ಮೇಲೆ ಮತ್ತೆ ಗದ್ದೆಗೆ ಇಳಿವ ಆವಸ್ಯಕತೆ ಕೊಯ್ಲ್ ಆವ ಮುಟ್ಟ ಇರ್‌ದುಲೆ. ಆಟಿ ಅರೆಬಾಸೆವ್ಕೆ ಹಜ್ಞಾ ತಟಪಟದ ಕಾಲ. ಪ್ರಕೃತಿಲಿ ಆವ ಬದಲಾವಣೆಂದಾಗಿ, ಮಾನಸಿಕ ದೈರ್‌ಯನ ಕುಂದ್‌ವ ಕಾಲ ತೇಳುವ ನಂಬಿಕೆ ಉಟ್ಟು. ಆದ್ದರ್‌ಂದ ಇದ್ ಬೆಳೆಗಳ ಪಸ್ಲ್‌ನ ಕಡ್ಮೆ ಮಾಡ್‌ವ ಸಾದ್ಯತೆ ಕೂಡ ಇರ್‌ದರ ಜೆನಗ ಒಪ್ಪುವೆ. ಆಟಿನ ಕಾಲಮಾನದ ಅಪಾಯ ಹಂಗೆ ದೆದ್ರಿಕೆನ ತಪ್ಪಿಸಿಕಂಬಕೆ ಜೆನಗ ಮಾಯಕ ಶಕ್ತಿನ ನಂಬಿ ಹೋದು ಸಾಮಾನ್ಯ. ಮಾರಿ ಕಳಿದಕಾಗಿ 'ಆಟಿ ಕಳೆಂಜ'ನ ಕೊಣ್ಸಿ ರೋಗನ ಕಿತ್ತ್ ಹಾಕಿಕೆ ಪ್ರಾರ್‌ತನೆ ಮಾಡ್‌ವೆ. ಅದೇ ರೀತಿ ಬೆಳೆಗಳಿಗೆ ಬಾವಂತ ಕಂಟಕ, ಕಳೆಗಳ್ನ ಕಿತ್ತ್ ಹಾಕುವ ಕ್ರಿಯೆನೂ ಆಟಿ ತಿಂಗಳ್‌ಲಿ ನಡ್ದದೆ.

**ಕರಿಕೊಳ್ಳಿ :** ಬೇಸಾಯ ಗದ್ದೆನ ರೋಗ ಬಾದೆನ ಹಂಗೆ ನೀಚ ದ್ರಿಸ್ಟಿನ ತೊಪ್ಪುಸುವ ತಂತ್ರವೊಂದರ 'ಕರಿಕೊಳ್ಳಿ ಇಸುದು ತೇಳುವೆ. ಒಂದೇ ಲೆಕ್ಕದ ಬೆದ್ರುನ 4 ತಟ್ಟೆಗಳ ಒಂದ್ ಕೊಡಿನ ಹೊತ್ತುಸಿ ಮೊಸಿ ಆದ ಕೊಡಿನ ಮೇಲೆಗೆ ಮೋರೆ ಬಾವಂಗೆ ಗದ್ದೆನ ಅಲ್ಲಲ್ಲಿ ಊರುದುಟ್ಟು. ಇದ್ ಆಟಿ ತಿಂಗಳ ಮಂಗಳವಾರ ಇಲ್ಲರೆ ಐತ್ವಾರದಂದ್ ಬೆಳ್ಗಾರ್ ಹೊತ್ತುಗೆ ನಡ್ದದೆ. ಇದರ 'ಪುಂಡಿ'ತ ನಂಬಿರ್‌ವ ಅರೆಬಾಸೆನವು ಇದರ್‌ಂದ ಹುಳುಬಾದೆ, ಬೆಂಕಿರೋಗದಂತ ಬಾದೆಗ ನಾಸ ಆದೆಂತೇಳುವ ನಂಬಿಕೆನೂ ಉಟ್ಟು. ಆಟಿನ ಆ ಬೆಳೆಗಳ ಕಾಪಾಡುವ ತಂತ್ರಗಳ್‌ಲಿ ಕರಿಕೊಳ್ಳಿನ ಕ್ರಿಯಾಚರಣೆನೂ ಒಂದಾಗುಟು. ಜೆನಪದ ನಂಬಿಕೆನ ಪ್ರಕಾರ, ಉರಿವಕೊಳ್ಳಿಗೆ (ಕೊಳ್ಳಿ) ದ್ರಿಸ್ಟಿ ತೆಗೆವ ಸಕ್ತಿ ಉಟ್ಟು. ಬೇಟೆಂದ ಸಿಕ್ಕಿದ ಪ್ರಾಣಿನ ಮಾಸ ಮಾಡ್ದ 'ಅಜಕಲ' (ಮಾಂಸ ಮಾಡಿದ ಜಾಗೆ)ಕ್ಕೆ ಕರಿಕೊಳ್ಳಿಂದ ಗೆರೆ ಎಳೆವ, ಅದರ್‌ದ ದುಸ್ಟ ಸಕ್ತಿನ ದೂರ ಓಡ್ಸುವ ಕ್ರಿಯಾ ವಿದಿ ಬೇಟೆ ಸಂಸ್ಕೃತಿಲೂ ಕಂಡವೆ. ಬೆಳೆಗಳಿಗೆ ಬಾವ ಹೆಚ್ಚಿನ ರೋಗಗ ದುಸ್ಟ ಮಾನವನ ದ್ರಿಸ್ಟಿಂದ ಬಾದುಂತೇಳುವ ನಂಬಿಕೆ ಜೆನರ್‌ಲಿ ಉಟ್ಟು. ಇದರ ತಪ್ಪ್‌ಸ್‌ವ ತಂತ್ರ ಆಗಿ ಕರಿಕೊಳ್ಳಿ ನೆಟ್ಟವೆ.

**ನೀರಾವರಿ :** ಏಣಿಲು ಬೆಳೆ ಮಳೆನ ನಂಬಿ ನಡೆವ ಬೇಸಾಯ ಕ್ರಮ. ಪಗ್ಗು ತಿಂಗಳ್‌ಲಿ (ಏಪ್ರಿಲ್) ಗದ್ದೆನ ಹೂಡಿ ನಾಟಿಗಾಗಿ ಮೋಡನ ನೋಡಕಾಗದ ಹಂಗೆ ಮಳೆ ಬಂದಲ್ಲಿ ಮಾತ್ರ ಬೆಳೆ ತೆಗೆವ ಪರಿಸ್ತಿತಿ. ನಾಡ್‌ಲಿ ಉಳ್ಮೆ ಮಾಡ್‌ವ ಹೊತ್ತುಲಿ ಮಳೆ ನೀರೇ ಆದಾರ. ಒರ್‌ತೆ ಆಗದಿದ್ದರೂ ಚೋಡಿಗಳಿಗೆ ಕಟ್ಟ ಕಟ್ಟಿ ಮಳೆನ ನೀರ್‌ನ ಉಳ್ಮೆಗೆ ಬಳ್ಸದೂ ಇತ್ತ್. ಉಳ್ಮೆ ಹಂಗೆ ನಾಟಿ ಆದ ಮೇಲೆ ಸುಮಾರ್ 15 ದಿನಂಗಳವರೆಗೂ ಒಂದ್ ಅಂಗುಲದಸ್ಟ್ ನೀರ್ ಇದ್ದೇ ಇರೋಕುತ್ತುಟ್ಟು.




ಈ ಹೊತ್ತುಗೆ ನಾಟಿಗೆ ಜೀವ ಹಿಡ್ದ್ 'ಪಿಳ್ಳೆ' (ಹೆಚ್ಚುವರಿ ಚಿಗುರ್ ಮೊಳ್ಕೆ) ಬಾದರ್‌ಂದ ಈ ಪ್ರಮಾಣದ ನೀರ್ ಅಗತ್ಯ. ಇನ್ನು ಮುಕ್ಯ ಆಗಿ ಕಳೆಗಳ ಬಿತ್ತ್ ನೀರ್‌ಲಿ ತೇಲಿ ಹೋವ ಇಲ್ಲರೆ ಮೊಳ್ಕೆ ಆಗದೇ ಇರ್‌ದು ಉಟ್ಟು. 25 ದಿನಗಳ ಮೇಲೆ ನೀರ್‌ನ ಪ್ರಮಾಣ ಕಡಿಮೆ ಇದ್ದರೆ 'ಪಿಳ್ಳೆ' ಲಾಯ್ಕ ಬಂದದೇಂತೇಳಿ ಮತ್ತೆ ನೀರ್ ಜಾಸ್ತಿ ಮಾಡೊಕೂಂತ ಉಟ್ಟು. ಹೆಚ್ಚಿನ ಕಡೆಗಳ್‌ಲಿ ಕಾರ್ತಿಂಗಳ್‌ಲಿ(ಜೂನ್–ಜುಲೈ) ಜೋರು ಮಳೆ. ಇದರ್‌ಂದ ಗದ್ದೆಲಿ ನೀರ್‌ನ ಒಂದೇ ಹದಲಿ ಕಾಯೋದು ಕಸ್ಟ.ಹಿಂಗಾಗಿ ಬೇಕಾದ ನೀರ್‌ಂದ ಹೆಚ್ಚಿನ ಹರಿವ್‌ನ ಕಣಿಲಾಗಿ ಹೊರಗೆ ಬುಟ್ಟವೆ. ಯಾಗೋಳು ಬೊಳ್ಪುಗೆ ಗದ್ದೆಗೆ ನೀರ್ ಬುಡುವ ಹಂಗೆ ಅದರ ನೋಡಿಕಣಕಾದೆ. ತುಳು ಜಾನಪದ ಪಾಡ್ದನಗಾದ ಕೋಟಿ ಚೆನ್ನಯ, ಬಲೀಂದ್ರ, ಮಲಾರ ಪಂಜುರ್‌ಲಿ, ಸಿರಿ ಇಂತದರ್‌ಲಿ ಬೇಸಾಯ ಗದ್ದೆನ ನೀರ್‌ನ ನಿರ್‌ವಹಣೆನ ಬಗ್ಗೆ ವಿವರಣೆ ಉಟ್ಟು. ನಾಟಿನ 25 ದಿನಗಳ ಮತ್ತೆ ನೀರಿನ ಪ್ರಮಾಣನ 2 ಅಂಗುಲಕೆ ಏರ್‌ಸಿಕುತುಟ್ಟ್. ಸೋಣ (ಜುಲೈ ಆಗಸ್ಟ್) ತಿಂಗಳವರೆಗೆ ಇಸ್ಟೆ ಪ್ರಮಾಣದ ನೀರ್ ಗದ್ದೆಲಿ ಉಳಿಯೊಕುತ್ತುಟ್ಟು. ಸೋಣ (ಆಗಸ್ಟ್ ಕೊನೆ) 25ರ ಮೇಲೆ ಪೈರ್ ತೆನೆಬುಟ್ಟು, 'ಕಾಯಿಕಟ್ಟಿಕೆ' ಸುರಾದೆ. ಐದಾರು ದಿನಲೇ ತೆನೆ ಬೆಳ್ದ್ ಬಾಗುದರ್‌ಂದ ನೀರ್‌ನ ತಗ್ಗ್‌ಸಕು. ಕೊಯ್ಲಿಗೆ ನಾಕೈದ್ ದಿನ ಮುಂದೆನೇ, ಗದ್ದೆನ ನೀರ್ ಪೂರ ಆರ್‌ಸೋಕು.

**ಕೊಯ್ಲ್ :** ಏಣೆಲ್ ಬೆಳೆನ ಕೊಯ್ಲ್ ನಿರ್‌ನಾಲ 5ರ ಒಳಗೆ (ಸೆಪ್ಟಂಬರ್ 30 ರ ಒಳಗೆ) ಸಾಮಾನ್ಯ ಆಗಿ ಮುಗ್ದದೆ. ಸೋಣ ತಿಂಗ ಇಡೀ ಮಳೆ ಬಿದ್ದರೆ ಕೊಯ್ಲ್‌ಗೆ ತೊಂದರೆ ಆವಂಗೆ ಇದ್ದದೆ. ಸಾಮಾನ್ಯ ಕೊಯ್ಲ್‌ನ ಲೆಕ್ಕಾಚಾರಲಿ ಒಂದ್ ಮುಡಿಗದ್ದೆನ ಏಳ್ ಕೂಲಿಯಾಳ್‌ಗ ಒಂದೇ ದಿನಲಿ ಕೊಯ್ದ್ ಸೂಡಿ ಕಟ್ಟಿ ಬುಡವು. ಅಸ್ಟೆ ಜೆನ ಮಾರ್‌ನೆ ದಿನ ಅದರ ತಂದ್ ಹಾಕಿ, ಮುಂದೆನ ಒಂದ್ ದಿನಲಿ ತೆನೆ ಹೊಡ್ದ್ ಬತ್ತನ ಮನೆ ಒಳಗೆ ತಂದ್‌ಬುಟ್ಟವೆ. ಸುಮಾರ್ 21 ಕೂಲಿಯಾಳ್‌ಗ ಇದ್ದರೆ ಒಂದೇ ದಿನಲಿ ಒಂದ್ ಮುಡಿ ಗದ್ದೆದ್ ಕೊಯ್ಲ್‌ನ ಮುಗ್ಸಿಬುಡಕ್. ಏಣೆಲ್ ಕೊಯ್ಲ್‌ನ ಹೊತ್ತುಲಿ ಯಾದೆ ತುಳು ಜೆನಪದ ಸಾಹಿತ್ಯಗಳ ಬಳಕೆ ಆದುಲೆ. ಬಿಸ್‌ಲ್ ನ ಕಾರ ಹಂಗೆ ಕೊಯ್ಲ್‌ನ ಹೊತ್ತುಲಿ ಇದ್ಕೆ ಹೊಂದಿಕಣದೇ ಇರುದ್ ಇದರ ತಡೆಗೆ ಕಾರಣ ಆಗಿರುದು. ಸುಗ್ಗಿ ಬೇಸಾಯ ಮಾಡ್‌ವ ಬೇಸಾಯಗಾರರ್ ಏಣೆಲ್ ಕೊಯ್ಲ್‌ನ ಬಾರೀ ಬೇಗ ಮುಗ್ಸಿ ಮುಂದೆನ ಬೇಸಾಯಕೆ ಸುರುಮಾಡಿಕಂಡವೆ.

ಸುಗ್ಗಿ ಬೇಸಾಯ ಇಲ್ಲದ ಬೇಸಾಯಗಾರರ್ ನಿರ್‌ನಾಲ್ 20–25 ರೊಳಗೆ (ಅಕ್ಟೋಬರ್ 15–20) ಮಾಮೂಲಿ ಕೊಯ್ಲ್‌ನ ಮುಗ್ಸಿ ಬುಟ್ಟವೆ. ಕೊಯ್ಲ್‌ಗೆ ದಿನ ನೋಡ್‌ವ, ಕೈಗುಣ ಪಾಲ್ಸುವ ಸಂಪ್ರದಾಯನೂ ಕಂಡು ಬಂದದೆ. ಗದ್ದೆಂದ ಸುರುಗೆ ಒಂದ್ ಕಟ್ಟ್ ಪೈರ್‌ನ ಹೊತ್ತ್ ತರುವಂವ 'ಪೊಲಿ... ಪೊಲಿ...... ಪೊಲಿ....... ' ತೇಳಿಕಂಡ್ ಮನೆನ ಜಾಲ್‌ಲಿ ಹಾಕೊಕುತ ಉಟ್ಟು. ಇದೇ ಹೊತ್ತುಗೆ ಮನೆನ ಒಳಗೆ ಕಾಲ್ ದೀಪ ಹೊತ್ತುಸಿ ಇಸಕುತೇಳುವ ನಂಬಿಕೆನೂ ಉಟ್ಟು.

ಬತ್ತದ ತೆನೆನ ಸೂಡಿಗಳ ಮನೆ ಜಾಲ್‌ನ ಮುಂದೆ ಒಟ್ಟಿ ಇಸುವೆ. ಇದರ 'ಮೆದೆ' ಇಸುದುತ ತೇಳುವೆ. ಎರಡ್ ಕಟ್ಟ್ ಪೈರ್‌ನ ಎದ್‌ರ್ ಬದ್‌ರ್ ಇಸಿ ಅದರ ಮೇಲೆ 'ಮಾದ್‌ರಿ ಬೊಳ್ಳಿಂದ ಮೆಡ್ದ 'ಪೊಡಿ' (ಹೊಡೆ ಮಂಚ)ಇಸಿ ಕೈಯಿ ಹೊಡ್ದವೆ. ಕೆಲವ್ ಪ್ರದೇಸಗಳ್‌ಲಿ ಕೂಲಿಯಾಳ್‌ಗ ಸುರುನ ಸೂಡಿನ ಹೊಡೆಯಕನ 'ಪೊಲಿ... ಪೊಲಿ... ಪೊಲಿ... ' ತೇಳಿ ಗಟ್ಟಿಯಾಗಿ ಹೇಳೋಕು, ಅದ್ ಕೊಯ್ಲಾದ ಗದ್ದೆಗೆ ಕೇಳೋಕುಂತೇಳುವ ನಂಬಿಕೆ ಉಟ್ಟು. ಹಂಗೆನೇ ಸುರುಗೆ ಹೊಡ್ದ ಬಿಳ್ಗಿಲ್ ಸೂಡಿನ ಮನೆನ 'ಮಾಡ್‌ಗೆ ಇಡೋಕುಂತನು, ಅಸ್ಟ್ ಎತ್ತರದ ಬತ್ತದ ರಾಸಿ ಜಾಲ್‌ಲಿ ಬಂದದೆಂತೇಳುವ ನಂಬಿಕೆ ಉಟ್ಟು. ಬತ್ತದ ಪೈರ್‌ನ ಕಡೆ ಸೂಡಿನ ಹಿಂಗೇ ಮಾಡ್‌ವೆ. ಬತ್ತದ ರಾಸಿ 'ಮಾದೇರಿ ಪೊಡಿ'ನ ಮುಟ್ಟುವಸ್ಟ್ ಎತ್ತರಕೆ ನಿಲ್ಲಿಕಾಕಾನ 'ಪೊಲಿ' ಕರೆಯೋಕುತ್ತುಟ್ಟು. ಕೆಲವ್ ಪ್ರದೇಸಗಳ್‌ಲಿ ನಲಿಕೆ ಜೆನಾಂಗದ ಕೂಲಿಯಾಳ್‌ಗ ಬತ್ತದ ಬಿಳ್ಗಿಲ್ ರಾಸಿನ ಮೇಲೆ ನಿತ್ತ್ ಈ ಪೊಲಿನ ಕರ್‌ದವೆ. ಮತ್ತೆ ಪೊಡಿಗೆ ಕಾಯಿ ಹೊಡೆದೂ ಉಟ್ಟು. ಹಾಂಗೆನೆ ತೆನೆ ಹೊಡ್ದ್ ಮುಗ್ದ ಮೇಲೂ ಪೊಡಿ ತೆಗೆವ ಹೊತ್ತುಲಿನೂ ಇದೇ ರೀತಿ ಪೊಲಿ ಕರೆಯುವ ಸಂಪ್ರದಾಯ ಉಟ್ಟು.



ಕೊಯ್ಲ್

**ಪೊಲಿ :** ಬೇಸಾಯ ಸಂಸ್ಕೃತಿನ ಉನ್ನತ ಪರಿಕಲ್ಪನೆಗಳ್‌ಲಿ ಪೊಲಿಗೆ ಮಹತ್ವದ ಜಾಗೆ ಉಟ್ಟು. ಕ್ರಿಸಿಗೆ ಸಮ್ಮಂದಪಟ್ಟ ಸಮೃದ್ದಿನ ಗೇನನ ತೋರ್‌ಸುವ ಆಚರಣಾತ್ಮಕ ಪದನೇ 'ಪೊಲಿ'. ಇದ್ ಸಮೃದ್ದಿನ ಸಂಕೇತ. ಆಚರಣೆನ ನೆಲೆಲಿ ಹಂಗೆ ಬಾಸೆನ ನೆಲೆಲಿ 'ಪೊಲಿ' ತೇಳುವ ಪದನೇ ಹೆಚ್ಚ್ ಬಳ್ಸುವೆ. ಪೊಲಿಗೆ ಹೋಲಿಕೆ ಆವ ಪದಗನೂ ಬೇರೆ ಬೇರೆ ಬಳಕೆಲಿ ಇದ್ದರೂ ಎಲ್ಲನು ಸಮೃದ್ದಿನ ನೆಲೆಲಿ ಹುಟ್ಟಿಕಂಡದ್ದಾಗಿಟು.

**ಪೊಲಿ ಪದ ವಿವರ :** 'ಪೊಲಿ' ದ್ರಾವಿಡ ಬಾಸೆಂದ ಬಂದ ಪದ. ತುಳು ನಿಗಂಟ್‌ಲಿ ಇದ್ಕೆ 'ಐಶ್ವರ್‌ಯ, ಸಮೃದ್ದಿ, ಬಾಗ್ಯ, ಸಂಪತ್ತ್', 'ಮಂಗಳ, ಸುಬ, ಬಾಗ್ಯ, ಬತ್ತದ ಕಣಜ, ಬೆಳೆರಾಶಿ, ಪೈರ್', 'ದಾನ್ಯ ಸಾಲ ಪಡ್ದದಕ್ಕೆ ದಾನ್ಯ ರೂಪಲಿ ಕೊಡುವ ಹೆಚ್ಚುವರಿ ದಾನ್ಯ', ಲಕ್ಷ್ಮೀ ಚೋಳ್ ಇಂತ ಅರ್‌ತಗ ಒಳೊ. ಪೊಲಿ ಸಬ್ದಕೆ 'ಹೊಸ ಬತ್ತ್' ತೇಲುವ ಅರ್‌ತನ ಬಿ. ಎ. ವಿವೇಕರೈ ಯವು ಕೊಟ್ಟವೆ. ಕನ್ನಡ–ಕನ್ನಡ ನಿಘಂಟಿನಲ್ಲಿ, ಪೊಲಿಗೆ 'ದಾನ್ಯ ರೂಪದ ಬಡ್ಡಿ' ತೇಳುವ ಅರ್‌ತನು ಸಿಕ್ಕಿದೆ. 'ಪೊಲಿ' ತೇಳುದು ಸಮೃದ್ದಿ, ವೃದ್ದಿ ಎಂಬ ಅರ್‌ತಲಿ ಹೆಚ್ಚ್ ಬಳ್ಸುವೆ. ಬತ್ತದ ಬೆಳೆವ ಬೇರೆಬೇರೆ ಹೊತ್ತುಲಿ 'ಪೊಲಿ' ತೇಳುವ ಪದಕ್ಕೆ ಬಳಕೆ ಹಂಗೆ ಆಚರಣೆ ತೇಳುವ ಅರ್‌ತನು ಉಟ್ಟು. ಅದರ್‌ಂದ ಪೊಲಿ ಪದ ಮೂಲಬೂತ ಆಗಿ ಬತ್ತ ಬೇಸಾಯದ ಹಿನ್ನೆಲೆಂದಲೇ ಹುಟ್ಟಿಕಂಡಾಳ್ದ್. ಬತ್ತದ ನಾಟಿ ಕೆಲ್ಸ ಮುಗ್ದ್ ಪೈರು ತೆನೆ ಬುಡ್‌ವೆ ಹಂತಲಿ ಮುಂದಕ್ಕೆ 'ಪೊಲಿ' ತೇಳುವ ಪದ ಹಂಗೆ ಆಚರಣೆ ಹಬ್ಬಿಕಂಡದ್ದೇ ಇದ್ಕೆ ಉದಾರಾಣೆ.

**ಪೊಲಿನ ಹೊತ್ತು :** 'ಮನೆ ತುಂಬುಸುವ', 'ಪೇರರಿ' ಇಸುವ, ಬತ್ತನ ಮನೆಗೆ ತಾವ, ಮತ್ತೆ ಅದರ ಸುರುಗೆ ಬಳ್ಸುವ ಬೇರೆ ಬೇರೆ ಹೊತ್ತುಲಿ 'ಪೊಲಿ' ಪದಗ ಬಳ್‌ಕೆ ಆದೆ. ಬತ್ತನ ರಾಸಿ ಹಾಕಿ ಅದ್ಕೆ 'ಪೊಲಿ ಹಾಕುವ' ಕ್ರಿಯಾಚರಣೆಗ ನಮ್ಮ ಕೆಲವ್ ಕಡೆಲಿ ಕಂಡ್‌ಬಂದದೆ. ಬೇಸಾಯಕೆ ಸಮ್ಮಂದ ಪಟ್ಟ ಕೊಣ್‌ತ, ಆಚರಣೆ, ಆರಾದನೆಲಿನು 'ಪೊಲಿ' ಪದದ ಬಳಕೆ ಹೆಚ್ಚಾಗಿ ಕಂಡ್‌ಬಂದದೆ. ಬತ್ತ ಹಂಗೆ ಇನ್ನ್ ಬೇರೆ ದಾನ್ಯಗಳ ಇನ್ನೊಬ್ಬಂಗೆ ಬಡ್ಡಿಗೆ ಕೊಡ್‌ವ ಹೊತ್ತುಲಿನೂ 'ಪೊಲಿ' ತೇಳುವ ಪದನೂ ಬಳಕೆಯಾದೆ. ಅಂದರೆ ಸಂಪತ್ತ್ ನ ಹೆಚ್ಚ್ ಮಾಡ್‌ವ ಎಲ್ಲಾ ಪರಿಕಲ್ಪನೆಲಿನು 'ಪೊಲಿ' ತ ಪದ ಬಳಕೆಯಾದೆ.

**ಪೊಲಿ ಕರೆದು :** ಬತ್ತದ ತೆನೆನ ಹೊಡ್ದ್ ರಾಸಿ ಬಿದ್ದ ಬತ್ತನ ಅಳ್ತೆ ಮಾಡ್‌ವ ಕ್ರಮಕೆ ಬೇಸಾಯ ಸಂಸ್ಕೃತಿಲಿ ಪೊಲಿ ಕರೆದು ತೇಳುವೆ. ನಿರ್‌ದಿಸ್ಟ ಆದ ಅಳೆವ ಸಾದನನ ಬಳ್ಸಿ 'ಕಳಸಿಗೆ' ಒಟ್ಟ್ ಸಿಕ್ಕಿದ ಬತ್ತದ ಪ್ರಮಾಣನ ತಿಳ್ಕಂಬ ಕ್ರಮ ಇದ್. ಹಿಂಗೆ ಪೊಲಿ ಕರೆದಕೆ ಮುಂದೆ ಸೀಮೆನ ಇಲ್ಲರೆ ಊರು ದೆವ್ವ ದೇವ್ರುಗೆ ಒಂದೆರ್‌ಡ್ ಸೇರ್ ಬತ್ತನ ತೆಗ್ದಿಸುದು ಕ್ರಮ. ಮತ್ತೆ ಅಳ್ತೆ ಮಾಡಿಕೆ ಸುರುಮಾಡ್‌ವೆ. ದೊಡ್ಡ ಸೊರ ಇರ್‌ವ, ತೂಕ ನೇಚಿಕೆ ಸಕ್ತಿ ಇರುವಂವ ಪೊಲಿ ಕರೆಕೆ ಸುರು ಮಾಡ್ದೆ. ಪೊಲಿ ಕರೆವ ಹೊತ್ತುನ ಲೆಕ್ಕಕೆ ತೆಕಂಡ್ ಜೆನಗ ಕೆಲವೊಂದ್ ನಿಯಮನ ಪಾಲ್ಸುವೆ. ಅಂದರೆ ದಿನದ ಮದ್ಯಾನದ ಮೇಲೆ ಆದರೆ ಬತ್ತ ತುಂಬಿದ ಕಳಸಿಗೆನ ಎಡ ಪುಡೆಗು ಅದ್ಕೆಂದ ಮುಂದೆ ಆದರೆ ಬಲ ಪುಡೆಗೆ ಮೊಗ್ಚಕೂಂತ ನಿಯಮ ಉಟ್ಟು. ಹತ್ತ್ ಕಳ್ಸಿಗೆ ಆದ ಮೇಲೆ ಮತ್ತೆ ಒಂದ್ ಕಳ್ಸಿಗೆ (ಹನ್ನೊಂದನೆಯದ್ದು) ಅಳ್ತೆ ಮಾಡಿ ಮುಂದೆನ ಒಂದ್ ಕಳ್ಸಿಗೆನ (ಹನ್ನೆರಡನೆಯದ್ದು) 'ಬತ್ತೊ' ಅಲ್ಲರೆ 'ಕೊಲಾತೊ' (ಕೂಲಿ) ತೇಳಿ ಹತ್ರ ಹಾಕಕುತುಟ್ಟ್ ಜೊಳ್ಳು ಪೊಳ್ಳು ತೆಗ್ದ್ ಬತ್ತ ಅಳತೆ ಮಾಡ್ದಾದರೆ ಹತ್ತರ ಮೇಲೆ ಒಂದರ 'ಬತ್ತೊ' ತೇಳಿ ತೆಗ್ದಿಸು. ಹನ್ನೊಂದ್ ಕಳ್ಸಿಗೆ ಅಳ್ತೆ ಮಾಡಿ ಒಂದೆರಡ್ ಕಳ್ಸಿಗೆನಸ್ಟ್ ಬಾಕಿ ಒಳ್ದರೂ ಅದರ್‌ನ ಪೊಲಿ ಕರೆಯದೇ 'ಅಡಿಪಡಿ' ತೇಳಿ ರಾಸಿ ಹಾಕುದುಟ್ಟು. ಪೊಲಿ ಕರೆಕಾಕಾನ ಪೊಲಿ ಒಂದ್, ಪೊಲಿ ಎರ್‌ಡ್ ತೇಳಿ ಹೇಳ್‌ವ ಪೊದ್ದತಿನೂ ಇಲ್ಲೆ. ಪೊಲಿ ಹತ್ತರ್‌ನ್ನ 'ಪತ್ತಚ್ಚಿಯೇ' ತೇಳುವೆ. ಇಲ್ಲಿ 'ಎಚ್ಚಿ' ತೇಳಿರೆ 'ಹೆಚ್ಚಾಗ್' ತೇಳ್‌ವ ಅರ್‌ತ ಉಟ್ಟು. ಪೊಲಿ 'ಪತ್ತಚ್ಚಿ' ತೇಳಿರೆ ಸಂಪತ್ತು ಹತ್ತ್‌ಪಟ್ಟ್ ಹೆಚ್ಚಾಗುಟೂಂತ ಅರ್‌ತ ಮಾಮೂಲಿ ಆಗಿ ಅರೆಬಾಸೆನ ಪ್ರತಿಸ್ಟಿತ ಮನೆತನಗಳ್‌ಲಿ ಮೂಲದ 'ಕಾಪಡ' ಪೊಲಿ ಕರೆದು ಕ್ರಮ. ಜೋರು ಸೊರಲಿ ಇಂಪಾಗಿ ಪೊಲಿ ಕರೆಯುವವ್ಕೆ ಹೆಚ್ಚಿನ ಆದ್ಯತೆ ಇದ್ದದೆ. ಏಣೆಲ್ ಬೇಸಾಯಲಿ ಬತ್ತದ ಜೊಳ್ಳು, ಕಸಕಡ್ಡಿಗಳ ಹೆಚ್ಚ್ ಸುದ್ದ ಮಾಡದೆ ಅಳ್ತೆ ಮಾಡುದೇ ಹೆಚ್ಚ್.

**ಬಿಳ್ಗಿಲ್ ಮಂಟಮೆ :** ಬತ್ತದ ಪೈರ್‌ಂದ ಬತ್ತನ ಬೇರೆ ಮಾಡ್ದ ಮೇಲೆ ಬಿಳ್ಗಿಲ್ ಸಿಕ್ಕಿದೆ. ಇದರ 'ಬೈಹುಲ್ಲು' ಅತವಾ ಒಣ್ಗಿಲ್‌ಹುಲ್ಲುಂತ ಹೇಳ್‌ವೆ. ಬೇಸಿಗೆಲಿ ಮೇವು ಕಮ್ಮಿ ಹಂಗೆ ಮಳೆಗಾಲಲಿ ಮೇವು ಸಿಕ್ಕದೇ ಇರ್‌ಕಾಕಾನ ದನಕರ್‌ಗಳಿಗೆ ಬಿಳ್ಗಿಲ್ ಕೊಟ್ಟವೆ. ಏಣೆಲ್ ಬೇಸಾಯದ ಒಣ್ಗಿಲ್ ಹುಲ್ಲ್‌ನ ಕೊಯ್ಲಾದ ಮೇಲೆ ಗದ್ದೆಲಿ ಹರ್‌ಂಡಿ ಒಣ್ಗುಸುವೆ. ಒಣ್ಗಿದ ಮೇಲೆ ಸೂಡಿ ಕಟ್ಟಿ ಅದರ 'ಮುಂಡ' ಕಟ್ಟುವೆ. ಚೌಕಾಕಾರದ ಮುಟ್ಟೆನ ಕೊಡಿ ಬಾಗಲಿ ಮಾಡ್ ಮಾಡುದೂ ಉಟ್ಟು. ಒಣ್ಗಿಲ್ ಹುಲ್ಲುನ ಒಳೆಗೆಪುಡೆಗೆ ನೀರ್ ಇಳಿಯದಂಗೆ ಈ ಮಾಡ್‌ನ ತಯಾರ್ ಮಾಡ್‌ವೆ. ಹಿಂಗೆ ಮುಂಡ ಕಟ್ಟಿರೆ ಹುಲ್ಲು ಕೆಲವ್ ವರ್‌ಸಗಳವರೆಗೆ ಹಾಳಾಗದಂಗೆ ಇದ್ದದೆ. ಊರುನ ಕೆಲ ಕಡೆಲಿ ಒಣ್ಗಿಲ್ ಹುಲ್ಲುನ ಮುಂಡ ಕಟ್ಟುದಲ್ಲದೆ ಹಟ್ಟಿನ ಅಟ್ಟದ ಮೇಲೆನೂ ಇದರ್‌ನ ಒಟ್ಟಿ ಇಸುವೆ. ಮೊದ್‌ವೆ ಸಮ್ಮಂದಗಳ ಬೆಳ್ಸುವ ಹಂತಲಿ ಹುಲ್ಲು ಮುಂಡನೂ ಲೆಕ್ಕಕ್ಕೆ ಬರ್‌ತ್ತಿತ್ತ್. ಒಬ್ಬ ಮೊಯಿಂಸನ ಸ್ತಾನಮಾನ ಅಳಿವಲ್ಲಿ ಒಣಗಿಲ್‌ಹುಲ್ಲ್‌ನನು ಲೆಕ್ಕ ತೆಗೆತಿದ್ದೊ.



ಬಿಳ್ಗಿಲ್ ಮಂಟಮೆ




**ಸುಗ್ಗಿ ಬೇಸಾಯ :** ಅರೆಬಾಸೆವರ್‌ಲಿ ಬೇಸಾಯದ ಮುಕ್ಯ ಕಾಲಂತೇಳಿರೆ 'ಸುಗ್ಗಿ'. ಸುಗ್ಗಿ ಬೇಸಾಯದ ಒಟ್ಟಿಗೆ ಬಾರಿ ನಂಬಿಕೆ, ಆಚರಣೆ, ಆರಾದನೆಗಳೇ ಈ ಮಹತ್ವನ ಎತ್ತಿ ಹಿಡಿಯಕೆ ಕಾರಣ. ಏಣೆಲ್ ಎಲ್ಲ ಕಾಲಲಿನೂ ಬೆಳೆವ ಬೆಳೆಯಾದರೆ, ಸುಗ್ಗಿ ಅದ್ರುಸ್ಟದ ಸಂಕೇತನೂ, ಸ್ರಮದ ಮೌಲ್ಯ ಆಗಿದ್ ಬೆಳೆವ ಬೆಳೆ ತೇಳುವ ನಂಬಿಕೆ. ಸುಗ್ಗಿನ ಜೆನಪದ ನಂಬಿಕೆಲಿ 'ಮೊದೊಳಿಗೆ' 'ಮೊದುಮಜ್ಜ' ತೇಳಿ ಕರ್‌ದವೆ. ಮೊದೊಳಿಗೆ ಸಾಮಾಜಿಕ ಆಗಿ ಎಸ್ಟ್ ಮಹತ್ವವನ ಪಡ್ದುಟೊ ಅಸ್ಟೆ ಮಹತ್ವವನ ಸುಗ್ಗಿ ಬೇಸಾಯನೂ ಪಡ್ದದೆ. ಸುಗ್ಗಿ 'ಹದನೀರ್' ಮತ್ತೆ 'ಹನಿನೀರ್' (ಹನಿನೀರು) ಮೂಲ. ಬಾರಿ ಗೌಜಿನ ಬೆಳೆ ಆಗಿದ್ ಸುಗ್ಗಿನ, ಏಣೆಳ್‌ನಂಗೆ ಎಲ್ಲ ಕಡೆ ಬೆಳೆವಲ್ಲಿ ಕೆಲವ್ ತೊಡ್ಕ್‌ಗ ಒಳೊ. ಚೋಡಿ,ಸೊರ್‌ಂಗ, ಕಟ್ಟದ ನೀರ್, ಹರ್‌ದು ಬಾವ ಪ್ರದೇಸಕೆ ಮಾತ್ರ ಸುಗ್ಗಿ ಬೇಸಾಯ ಇದ್ದದೆ. ಇದರ ಅದ್ರುಸ್ಟದ ಬೆಳೆತನು ಕರ್‌ದವೆ.ಅದರ್‌ಂದ ಇದ್ಕೆ ಬರಿ ಕಸುಬುನ ನೆಲೆಂದ ಮಾತ್ರ ಅಲ್ಲದೇ ಆರಾದನೆನ ನೆಲೆನೂ ಉಟ್ಟು. ಸುಗ್ಗಿ ಬೇಸಾಯದ ಸುರುಂದ ಕಡೆವರೆಗೆ ಎಲ್ಲಾ ಕ್ರಿಯಾ ಸ್ವರೂಪಲೂ, ಒಂದಲ್ಲ ಒಂದ್ ಕ್ರಿಯಾಚರಣೆಗ ಉಟ್ಟು ಇದ್ ಸುಗ್ಗಿನ ಬಗ್ಗೆ ಇರ್‌ವ ದಾರ್‌ಮಿಕ ಬಾವನೆನ ಬೆಳ್ಸಿಕೆ ಉಪಕಾರಾಗುಟು.

**ಸುಗ್ಗಿ ಪದ ಅರ್‌ತ :** ಎರಡ್ ಅರ್‌ತಗಳ್‌ಲಿ 'ಸುಗ್ಗಿ' ತೇಳುವ ಪದನ ಬಳ್ಸುವೆ. ಒಂದ್ ಸೌರಮಾನದ 12ನೆ ತಿಂಗ (ಮೀನ, ಮಾರ್ಚ್, ಏಪ್ರಿಲ್) ಅಂತಾದಾರೆ, ಇನ್ನೊಂದ್ ಬೇಸಾಯದ ಎರಡ್‌ನೆ ಬೆಳೆಂತ ಅರ್‌ತ. ಸುಗ್ಗಿ ತೇಳ್‌ದಕೆ ಜಾಸ್ತಿ, ಹೆಚ್ಚ್, ಬಾರಿ ತೇಳುವ ಅರ್‌ತ ಉಟ್ಟು. ಬೇಸಾಯ ಸಂಸ್ಕ್ರುತಿಲಿ ಸುಗ್ಗಿ ಬೆಳೆನ ಬಗೆಗಿನ ಕಲ್ಪನೆನು ಇದೇ ಅರ್‌ತಲಿ ಉಟ್ಟು. ಬೆಳೆ ಕಡ್ಮೆ ಆದರೂ ಪಸಲ್‌ನ ದ್ರಿಸ್ಟಿಂದ ಇದ್ ಜಾಸ್ತಿನೆ ಆಗಿದ್ದದೆ. ಈ ಬೆಳೆನ ಕಾಲಾವದಿಲಿ ಜೆನಪದ ಪರಿಸರಲಿ ಆವ ಉಲ್ಲಾಸ, ಸಂತೋಸನೇ ಸುಗ್ಗಿ ಸೌರಮಾನದ 12ನೆ ತಿಂಗಳಾದ 'ಸುಗ್ಗಿ'ಗೂ ಬೇಸಾಯದ ಪರಿಕಲ್ಪನೆಲಿ ಬಳ್ಸುವ 'ಸುಗ್ಗಿ' ತೇಳ್‌ವ ಪದಕು ಯಾದೇ ತರದ ಸಮ್ಮಂದ ಇಲ್ಲೆ. ಅಂದರೆ ಸೌರಮಾನದ 'ಸುಗ್ಗಿ' ಮಾಸಂದ ಸುರುಗೆ ನಾಡ್‌ನ ಹೆಚ್ಚಿನ ಕಡೆಗಳ್‌ಲಿ ಸುಗ್ಗಿ ಬೇಸಾಯದ ಕೊಯ್ಲ್ ಮುಗ್ದಿದ್ದದೆ. ಆದರೆ ಸುಗ್ಗಿ ಬೆಳೆ ಸಮ್ರುದ್ದಿನ ಕಾಲ ಆದರ್‌ಂದ ಇದ್ಕೆ ತನ್ನದೇ ಆದ ಸ್ತಾನಮಾನಗ ಒಳೊ. ಈ ಅವದಿಲಿ ಆವ ಇಪ್ರೀತ ಮಳೆನ ಸೊರೂಪ ಕಾಣೆ ಆಗಿ ತೊಂಪಾದ ಹಂಗೆ ಲಾಯ್ಕ್‌ನ ಸೀತಗಾಳಿ ತುಂಬಿದ್ದದೆ. ಹಗ್‌ಲ್ ಬಿಸ್ಲ್ ಇದ್ದರೂ ಇರ್‌ಲ್‌ನ ಚಳಿ ಹಂಗೆ ಹಿಮಂದಾಗಿ ಬಿಸ್‌ಲ್‌ನ ಕಾರ ಮತ್ತೆ ಮಳೆನ ಹೊಡ್‌ತಂದ ಮುಕ್ತಿ ಸಿಕ್ಕಿದ್ದದೆ. ಈ ಕಾರಣಂದ ಸುಗ್ಗಿ ಬೇಸಾಯದ ಕಾಲಾವದಿ ಮೊಯಿಂಸ್‌ಗೆ ಕುಸಿ ಕೊಡುದಲ್ಲದೆ ಕುಸಿನ ಹೆಚ್ಚಿ ಮಾಡ್ದೆ ಆದರ್‌ಂದ ಗೌಜಿನ ತೋರ್‌ಸ್‌ವ ಪದನಾಂಗೆ 'ಸುಗ್ಗಿ' ಬಳಕೆಲಿ ಉಟ್ಟು.

**ಸುಗ್ಗಿನ ಉಳ್ಮೆ :** ಏಣೆಲ್ ಕೊಯ್‌ಲ್ ಮುಗ್ದ ಕೂಡ್‌ಲೆ ಸುಗ್ಗಿ ಹೂಡಿಕೆ ಸುರು ಮಾಡ್‌ವೆ. ಸುಗ್ಗಿ ಬೇಸಾಯ ಮಾಡ್‌ವ ಬೇಸಾಯಗಾರರ್ ಕಾಲಾವದಿನ ಆಯಾಯ ಬೆಳೆಗೆ ಹೊಂದಿಕಂಬಾಂಗೆ ಬಳ್ಸುದರ್‌ಂದ 'ನಿರ್‌ನಾಲ್' (ಒಕ್ಟೋಬರ್)ತಿಂಗಳ ಕಡೆನ ದಿನಗಳ್‌ಲಿ ಹೂಡಿಕೆ ಸುರು ಮಾಡ್‌ವೆ. ಸುಗ್ಗಿ ಬೆಳೆಗೆ ಆರ್ ಸರ್‌ತಿ 'ಸಾಲ್' ಹೂಡೋಕೂಂತ ನಿಯಮ ಉಟ್ಟು. ನೀರ್ ಸಾಕಾಗದೆ ಇರುದರ್‌ಂದ ಇದ್ದ ನೀರ್‌ನ ಒಳ್‌ಸಿಕಂಬಕೆ ಆರ್ ಸರ್‌ತಿ ಹೂಡುದು ಉಪಯೋಗಕೆ ಬಂದದೆ. ಮೂರ್‌ನೆ ಸರ್‌ತಿ ಹೂಡ್ದ ಮೇಲೆ ಗದ್ದೆ ಪುಣಿನ ಕೆತ್ತಿ ಹೊರಮೈಗೆ ಚೋಳ್ ಪೂಜಿ ನೀರ್ ಸೋರದಂಗೆ ಮಾಡ್‌ವೆ. ಮತ್ತೆ ಸೊಪ್ಪು ಗೊಬ್ಬರ ಹಾಕಿ, ಮತ್ತೆರಡ್ ಸರ್‌ತಿ ಹೂಡುವೆ. ಗದ್ದೆಗೋರಿನ ಹೊತ್ತುಲಿ ಒಂದ್ ಜೋಡಿ ಎತ್ತ್ ಅಲ್ಲರೆ ಕೋಣಗಳ ಎಳಿಯಕೆ ತೇಳಿ ಇಸಿದ್ದವೆ. ಸುಗ್ಗಿಲಿ ನಾಟಿ ಕೆಲ್‌ಸಂದಳು ಬಿತ್ತನೆನೇ ಹೆಚ್ಚ್. ಚೋಳಾಗುವಂಗೆ ಮಾಡಿ ಅದರ್‌ಲಿ ಬಿತ್ತಿದ ಬಿತ್ತ್ ಹುಕ್ಕ್ ಹೋವಂಗೆ ಮಾಡ್‌ವೆ. ಇದರ್‌ಂದ ನೀರ್ ಹರ್‌ದ್ ಹೋದರ್‌ಂದ ಬಿತ್ತ್ ಒಂದೆ ಕಡೆ ಸೇರುದ್ ತಪ್ಪಿದೆ. ಸುಗ್ಗಿಲಿ ನೀರ್ ಕಮ್ಮಿ ಇರುವ ಕಾರಣ ನೀರ್‌ನ ಬಗ್ಗೆ ಹೆಚ್ಚಿ ಜಾಗ್ರತೆ ಮಾಡ್‌ವೆ. ಆರ್ ಸರ್‌ತಿ ಹೂಡಿ ಹಂಗೆ ಪುಣಿಗೆ ಮೆತ್ತಿದ ಚೋಳ್‌ಂದಾಗಿ ಸುಗ್ಗಿ ಗದ್ದೆಲಿ ನೀರ್ ಇಂಗುದು ಕಡಿಮೇಂತ ಹೇಳ್‌ವೆ.

**ಬಿತ್ತ್ ಮೊಳಕೆ :** ಸುಗ್ಗಿ ಗದ್ದೆಗೆ ಬಿತ್ತ್ ಬಿತ್ತುವ ನಾಕ್ ದಿನಂದ ಮುಂದೆ ಬತ್ತನ ಮೊಳ್ಕೆ ಬಾಕೆ ಇಸುವೆ. (ಈ ಬೇಸಾಯಕ್ಕೆ ಸಾಮಾನ್ಯ ಆಗಿ ಅತಿಕರೆನ ಬತ್ತನೇ ಬಿತ್ತ್‌ವೆ) ಬೊಳ್ಪುಗೆ ಬಿತ್ತ್‌ನ ನೀರ್‌ಲಿ ಹಾಕಿ, ಅದೇ ದಿನ ಹಿಂಬೊತು, ಸೆಗಣಿ ನೀರ್‌ಲಿ ಪದ್‌ನಿಕೆ ಇಸುವೆ. ಮತ್ತೆ ಬಿತ್ತ್ ಮೊಳ್ಕೆ ಬಾಕೆ ಇಸಿದ ಕುಕ್ಕೆಲಿ 'ನೆಕ್ಕಿ' ಸೊಪ್ಪುನ ಹರಂಡುವೆ. ಇದರ ಮೇಲೆ ಸೆಗಣಿ ನೀರ್‌ಲಿ ಕಲ್ಸಿದ ಬಿತ್ತನೆ ಬಿತ್ತ್‌ನ ಹಾಕಿ ಮೇಲರಗೆ ಮತ್ತೆ ನೆಕ್ಕಿ ಸೊಪ್ಪುನ ಹರಂಡುವೆ. ಸೆಕೆ ಬಾವ ದ್ರಿಸ್ಟಿಂದನು ಹಿಂಗೆ ನೆಕ್ಕಿ ಸೊಪ್ಪುನ ಹರಂಡುವೆ. ಅದರ ಮೇಲೆ ಪದ್‌ನಿಸಿದ ಗೋಣಿ ಚೀಲಲಿ ಹಾಕಿ ತೂಕದ ಕಲ್ಲೊಂದರ ಇಸುವೆ. 2 ದಿನಗಳ್‌ಲಿ ಬಿತ್ತ್ ಮೊಳ್ಕೆ ಬಂದಿದ್ದದೆ. ಹಿಂಗೆ. ಮೊಳ್ಕೆ ಬಂದ ಬಿತ್ತ್‌ನ 'ಹುಡಿ ಬಿತ್ತನೆಗೆ' ಅಲ್ಲರೆ 'ನೀರ್ ಅಗೆಗೆ' ಬಳ್ಸುವೆ. ಬತ್ತ ಹುಟ್ಟಿಬಾಕೆ ಬಿಸಿ ಬಾರಿ ಮುಕ್ಯ ಆಗಿರ್‌ದರ್‌ಂದ ಸೊಪ್ಪುನ ಸಾಕಕೆ, ತೂಕದ ಕಲ್ಲ್ ಗಾಳಿ ಅಡ್ಡಾಡುದರ ಪೂರ ನಿಲ್ಸುದರ್‌ಂದ ಬಿತ್ತನೆ ಬಿತ್ತ್ ಬಾರಿ ಬೇಗ ಮೊಳ್ಕೆ ಬಂದದೆ.

**ಸುಗ್ಗಿನ ನಾಟಿ :** ಸುಗ್ಗಿಗೆ ನಾಟಿ ಮಾಡ್‌ವ ಪೊದ್ದತಿ ಬಾರಿ ಕಡ್ಮೆ. ಹೆಚ್ಚಿನ ಕಡೆಗಳ್‌ಲಿ ಮೊಳ್ಕೆ ಬಂದ ಬಿತ್ತ್‌ನನೆ ಬಿತ್ತುದು ಕ್ರಮ. ಬಿತ್ತುದರ್‌ಂದಳು ಹೊಡಿಗೆ ಬಿತ್ತುದು ಹಂಗೆ ನೀರ್‌ಗೆ ಬಿತ್ತುದು ತೇಳ್‌ವ ಎರ್‌ಡ್ ನಮೂನೆಗ ಒಳೊ. ಇದಲ್ಲದೇ 'ಹಿಡಿಬಿತ್ತ್' ಎಲ್ಲಂದಳು ಒಳ್ಳ ಬಿತ್ತನೆ ಕ್ರಮ.

**ಪುಂಡಿ ಬಿತ್ತ್ (ಹಿಡಿಬಿತ್ತನೆ) :** ಗೊಬ್ಬರದ ಅಂಸ ಇರುವ ಮೊಣ್ಣೊಟ್ಟಿಗೆ(ಸೂಟ್ ಮಣ್ಣ್) ಮೊಳ್ಕೆ ಬಂದ ಬಿತ್ತ್‌ನ ಜಾಕ್ರತೆಂದ ಕಲ್ಸಿ, ಹದಮಾಡ್ದ ಗದ್ದೆನ ಅಲ್ಲಲ್ಲಿ ಒಂದೊಂದು ಹಿಡಿ ಬಿತ್ತ್‌ನ ಬಿತ್ತುದ್ದಕೆ 'ಪುಂಡಿ ಬಿತ್ತ್'(ಹಿಡಿಬಿತ್ತನೆ) ತೇಳುವೆ. ಹಿಡಿಬಿತ್ತ್‌ಲಿ 'ಹುಡಿಗೆ ಹಾಕುವ ಹಿಡಿಬಿತ್ತ್', 'ನೀರ್‌ಗೆ ಹಾಕುವ ಹಿಡಿ ಬಿತ್ತ್' ತೇಳುವ ಎರಡ್ ತರ ಉಟ್ಟು.

**ಗೆರೆಗೆ ಹಾಕುವ ಪುಂಡಿಬಿತ್ತ್ :** ಹಿಂಗೆ ಹಿಡಿ ಬಿತ್ತ್ ಸಾಮಾನ್ಯ ಏಣಿಲ್ ಬೆಳೆಗೆ ಬಳಸುದೇ ಹೆಚ್ಚ್. ಮಳೆ ಬಾರದೇ ಇದ್ದಲ್ಲಿ ಉಳುಮೆ ಮಾಡಿಕನ ನೇಗ್‌ಲ್‌ನ ಗೆರೆಗೆ ಬಿತ್ತ್ ಬಿತ್ತಿಕಂಡ್ ಹೋದವೆ. ಒಂದೊಂದೇ ಬತ್ತ ಉದ್ದಕೆ ನಿಲ್ಲುವಂಗೆ ಈ ತರದ ಬಿತ್ತನೆ ನಡ್ಸುವೆ ಒಂದ್ ಗೆರೆ ಇಡಿ ಆಗಿ ಬಿತ್ತಿದ ಮೇಲೆ ಇನ್ನೊಂದ್ ಗೆರೆ ಎಳೆವ ಹೊತ್ತುಗೆ ಸುರುನ ಗೆರೆನ ಮೊಣ್ಣ್ ಬಿತ್ತ್‌ನ ಮುಚ್ಚಿದೆ. ಹೊಸ ಗೆರೆ ಹುಟ್ಟಿಕಂಡ್ ಅದರ್‌ಲಿ ಬಿತ್ತ್ ಬಿತ್ತಿಕಂಡ್ ಹೋದವೆ. ಹಿಂಗೆ ಬಿತ್ತನೆನ 'ಗೆರೆ ಹಿಡಿಬಿತ್ತ್' ತೇಳಿ ಕರ್‌ದವೆ. ಬೀಜ ಹಾಕಿ ಮುಗ್‌ದ ಮೇಲೆ ಹಲಗೆ ಎಳ್ದ್ ಗದ್ದೆನ ನೆಡೂಲಿ ಹಂಗೆ ಸುತ್ತನೂ ನೀರ್‌ನ 'ಪಾತಿ' ಮಾಡ್‌ವೆ.

**ನೀರ್‌ಗೆ ಪುಂಡಿ ಬಿತ್ತ್ :** ಹಿಂಗೆ ಹಿಡಿಬಿತ್ತ್ ಬಿತ್ತನೆ ಸುಗ್ಗಿ ಬೇಸಾಯಕೆ ನಡ್ಡದೆ. ಗದ್ದೆಗೋರಿನ ದಿನ 'ಕುರುಂಟು' (ನೀರ್ ಅರ್ಪಿ ಹೋಕಾಗಿ ಕಣಿ ಮಾಡಿಕೆ ಬಳ್ಸುವ ಸಾದನ) ಎಳ್ದ್ ಗದ್ದೆನ ನೀರ್‌ನ ಪೂರ ಅರ್ಪುವೆ. ಒಂದ್ ದಿನ ಕಳ್ದಮೇಲೆ ಈ ಗದ್ದೆಲಿ ಬಿತ್ತುವೆ. ದೊಡ್ಡ ಗದ್ದೆಗ ಆದರೆ ನಾಕೈದ್ ಜೆನ ಸಾಲಾಗಿ ನಿತ್ತ್ ಮೊಣ್ಣ್ ಮತ್ತೆ ಮೊಳ್ಕೆ ಮಿಸ್ರ ಬಿತ್ತ್‌ನ ಹಾಕುವೆ. ಗೇಣುದ್ದಕೆ ಒಂದ್ ಹಿಡಿನಂಗೆ ಈ ಬಿತ್ತ್‌ನ ಹಾಕುವೆ. ಹಿಡಿಬಿತ್ತ್ ಹಾಕಿದ ಎರಡ್ ದಿನಗಳವರೆಗೆ ಬಿತ್ತಿದ ಗದ್ದೆಗೆ ನೀರ್ ಬುಡುವ ಕ್ರಮ ಇಲ್ಲೆ. ಮೂರ್‌ನೆ ದಿನ ಬುಡುವ ನೀರ್‌ನ 'ಬಿದೆ ನೀರ್' (ಮೊಳಕೆ ಬಂದ ಬತ್ತದ ಬೀಜಕೆ ಬುಡುವ ನೀರ್) ತೇಳುವೆ. ಬಿತ್ತಿದ ಬಿತ್ತ್ ಮೊಳ್ಕೆ ಬಂದದ್ ಮುಂದೆನ ಬೆಳವಣಿಗೆ ನೀರ್‌ನ ಅವಲಂಬಿಸಿದೆ. ಅರೆಬಾಸೆ ಪದೇಸಲಿ ಬೇಸಾಯ ಕ್ರಮಗಳ್‌ಲಿ 'ಹಿಡಿ ಬಿತ್ತ್' ಬೇಸಾಯನೂ ಹೆಸ್ರ್ ವಾಸಿಯಾದ ಮಾದರಿ.

**ಅಗೆ/ನೇಜಿ ನಾಟಿ :** ಇತ್ತೀಚೆನ ದಿನಗಳ್‌ಲಿ ಸುಗ್ಗಿ ಬೇಸಾಯಲೂ ಅಗೆ ನಾಟಿ ಕ್ರಮ ಹೆಚ್ಚಾಗಿ ಮಾಡ್‌ವೆ. ಏಣಿಲ್ ಕೊಯ್‌ಲ್ ಹೊತ್ತುಲೇ ಬಿತ್ತ್ ಬಿತ್ತಿ ಸುಗ್ಗಿ ನೇಜಿ ಕೀಳಿಕೆ ತಯಾರಾದವೆ. ಆದರೆ ಸುಗ್ಗಿನ ಬೇಸಾಯದ ಹೊತ್ತುಲಿ ತುಳು ಜೆನಪದ ಸಾಹಿತ್ಯಗಳ ಬಳಕೆ ಇಲ್ಲೆ. ಮಂಗಳೂರು ತಾಲ್ಲೂಕ್‌ನ ಕೆಲ ಬಾಗಲಿ ಸುಗ್ಗಿ ಬೇಸಾಯದ ಪ್ರದಾನ ಗದ್ದೆಗಳಿಗೆ ಪಾಡ್ದನ ಹೇಳಕೂಂತೇಳುವ ನಂಬಿಕೆ ಉಟ್ಟು. ಸುಗ್ಗಿ ಬೇಸಾಯದ ಹೊತ್ತುಲಿ ಸುಮಾರ್ ಆಚರಣೆಗ ಮತ್ತೆ ಆರಾದನೆ ಸೊರೂಪಗ ಅರೆಬಾಸೆ ಪ್ರದೇಸದ ಎಲ್ಲ ಕಡೆ ಕಂಡ್ ಬಂದದೆ. ಈ ಬೆಳೆನ ಬಗ್ಗೆ ಪವಿತ್ರ ಆದ ಜಾನಪದ ನಂಬಿಕೆ ಒಳ್ದ ಬೇಸಾಯ ಕ್ರಮಂದ ಇದರ ಪ್ರತ್ಯೇಕ ಆಗಿ ನೋಡಿಕೆ ಅವಕಾಸ ಮಾಡಿಕೊಟ್ಟದೆ. ಸುಗ್ಗಿ ಬೇಸಾಯ ಇಡಿಯಾಗಿ ಆಚರಣೆ ಮಾಡಿಕಂಬ ಕಾರಣ ಸ್ರಮದ ಮೌಲ್ಯನೂ ಇಲ್ಲಿ ಮಾಯ ಆದೆ. ಸುಗ್ಗಿನ ಉಳ್‌ಮೆನ ಕೊಯ್ಲ್‌ನವರೆಗೂ ಸ್ರಮದ ಒಟ್ಟಿಗೆ ಆಚರಣೆಗ ನಡ್ಕಂಡೆ ಇದ್ದವೆ.

**ಸುಗ್ಗಿನ ಕಲ್ಯಾಂಡೆ :** ಸುಗ್ಗಿ ಬೇಸಾಯ ಮುಗ್ದ ಮೇಲೆ ಗದ್ದೆನ ನೆಡುಲಿ 'ಕಲ್ಯಾಂಡೆ' ಊರ್‌ವ ಕ್ರಮ ಒಂದುಟ್ಟು. ತ್ರಿಕೋನಾಕಾರದ ಕತ್ರಿ ಒಂದರ ಕೋಲ್‌ಂದ ಮಾಡಿ ಅದರ ಕೊಡಿಗೆ 'ಮಾದ್‌ರಿ ಬೊಳ್ಳಿಲಿ ಮೆಡ್ದ್ ಸಣ್ಣದೊಂದು ಕುಕ್ಕೆ ನಂಗೆ ಮಾಡ್‌ವೆ. ಈ ಕುಕ್ಕೆಲಿ ಚೋಳು ಮೊಣ್ಣ್ ತುಂಬ್‌ಸಿ ಅದರ್‌ಲಿ ಕಳ್ಳಿ, ನೆಕ್ಕಿ, ಕೋರಿ ಹುಲ್ಲು, ರಾವಿಜ ಸೊಪ್ಪ್, ನೆಲ್ಲಿ ಇಂತದೆಲ್ಲ ದೈಗಳ ನೆಟ್ಟವೆ. ಅರೆಬಾಸೆ ಪ್ರದೇಸನ ಕೆಲವ್ ಕಡೆಲಿ ಏಣೆಲ್ ಬೆಳೆಗೂ ಈ ಕ್ರಮ ಉಟ್ಟು. ಇದಲ್ಲದೆ ಬೆದ್ರ್‌ನ ಅಂಡೆ ಒಳಗೆ ಇದೇ ದೈಗಳ ಹಾಕಿ ನೆಡುವ ಸಂಪ್ರದಾಯನೂ ಉಟ್ಟು. 'ಕಳ್ಳಿದ ಅಂಡೆ' ತೇಳ್ದೆ 'ಕಲ್ಯಾಂಡೆ' ತೇಳಿ ಬಳ್ಸುವೆ. ಏಣೆಲ್ ಬೆಳೆಗೆ ಕಾಪು ನೆಡುವ ಸಂಪ್ರದಾಯದ ಹಿಂದೆ ಇರ್‌ವ ಹಿನ್ನಲೆನೇ 'ಕಲ್ಯಾಂಡೆ' ನೆಡ್‌ವ ಸಂಪ್ರದಾಯದ ಹಿಂದೆನೂ ಕಂಡ್ ಬಂದದೆ. ಇಲ್ಲಿ ಬಾವ ಎಲ್ಲಾ ದೈಗಳ ಬಗ್ಗೆನೂ ತುಳು ಜೆನಪದರೊಟ್ಟಿಗೆ ನಕರಾತ್ಮಕ ನಂಬಿಕೆ ಉಟ್ಟು. ಈ ದೈಗಳ ವಿಸೇಸ ಗುಣಗಳ ಮೊಯಿಂಸಂಗೆ ಕೇಡ್ ಆವಂಗೆ ಮಾಡಿಕೂ ಬಳ್ಸುವೆ.

**ಆರೈಕೆ :** ಸುಗ್ಗಿ ಬೇಸಾಯಕೆ ಆರೈಕೆ ಬಾರಿ ಮುಕ್ಯ. ಇದರ್‌ಲಿ ಸುರುನ ಆರೈಕೆ ನೀರ್‌ಂದ ಆದೆ.ಕಾಲಕಾಲಕೆ ನೀರ್‌ನ ಮಟ್ಟನ ಸರಿತೂಗ್ಸುದು ಅಗತ್ಯ. ಸುಗ್ಗಿಗೆ ಬಿತ್ತ್‌ಬಿತ್ತಿ ಸುಮಾರ್ 15 ದಿನ ಕಳೆವ ಹೊತ್ತಿಗೆ ಹುಳು ಆವ ಸಾದ್ಯತೆ ಇದ್ದದೆ. ಇದರ್‌ಂದ ತೊಪ್ಪುಸಿಕೆ ಜೆನಗ ತಮ್ಮದೇ ಆದ ತಾಂತ್ರಿಕ ವಿದಾನ ಒಂದರ ಅಳವಡ್ಸ ತಿದ್ದೊ. ಸೂರ್‌ಯ ಮೂಡಿಕೆ ಮುಂದೆ ಉರ್ಬುಳಿ ಆಗಿ 'ಮಲೆ ಪಾಜೆವೂ' (ಗರಗಸ) ಮರದ ಗೆಲ್ಲ್‌ನ ಕೈಂದನೆ ಮುರ್‌ದು ತಂದ್ ಅದರ್‌ಂದ ಪೈರ್‌ನ ಗುಡ್ಸಿ, ನೀರ್ ಹರ್‌ದು ಹೋವ 'ಗಡಿಯ' ಹಕ್ಕಲೆ ಈ ಗೆಲ್ಲ್‌ನ ಊರಿರೆ ಹುಳ ಬಾದೆ ಕಡಿಮೆ ಆದೆ ತೇಳ್‌ವ ನಂಬಿಕೆ ಉಟ್ಟು. ಇದಲ್ಲದಿದ್ದರೆ 'ಕಡುಕಾರೆ' (ಕಾರೆ ಮುಳ್ಳ್ ನ ಕಾಯಿ)ನ ಗುದ್ದಿ ಗದ್ದೆಗೆ ನೀರ್ ಬೀಳ್‌ವ ಜಾಗೆಲಿಸಿರೆ ಅದರ ನೊರೆ ಗದ್ದೆ ಪೂರ ಹರಂಡಿ ಹುಳುಬಾದೆನ ತೊಪ್ಪುಸಿದೆತ ಹೇಳ್‌ವೆ.

ನೀರಾವರಿ ವೆವಸ್ತೆ : 'ಹದನೀರು', ಇರ್‌ವ ಪ್ರದೇಸಲಿ ಬೆಳೆವ ಬೆಳೆ ಸುಗ್ಗಿ. ಹರ್‌ದ್ ಬಾವ ನೀರ್‌ಂದನೇ ಉಳ್ಮೆ ನಡ್ದದೆ. ಅದರೆ ಮತ್ತೆನ ದಿನಲಿ ಹರಿವ ನೀರ್ ಆರುದರ್‌ಂದ ಚೋಡಿಗೆ 'ಕಟ್ಟೆ' ಕಟ್ಟಿ ಬೆಳೆಗೆ ನೀರ್ ಬುಟ್ಟವೆ.. ಇಲ್ಲರೆ ಚೌಂಟೆ ಮೊಗ್‌ಚಿ ನೀರ್ ಬುಟ್ಟವೆ. 'ಕೈ ಬಿತ್ತ್'' ಹಾಕಿದಲ್ಲಿ ಮೂರ್ ದಿನಗಳ ಮೇಲೆ 'ಬುಡು ನೀರ್'' ಬುಟ್ಟವೆ. ಇದರ 'ಅಮೆನೀರು' ತೇಳುವೆ.




ತುಳುನ 'ಅಮೆ' ತೇಳಿರೆ 'ಪುರುಡು' ತೇಳಿ ಅರ್ತ. ಹೆಣ್ಣ್ ಹೆರ್‌ಗೆ ಆದ ಮೇಲೆ ಕೆಲ ದಿನಂಗಳವರೆಗೆ ಈ 'ಅಮೆ ಇದ್ದದೆ. ಹಂಗೆನೇ ಬಿತ್ತನೆ ಮೇಲೆ ಒಂದೆರಡ್ ದಿನ ಈ 'ಅಮೆ' ಬೇಸಾಯ ಸಂಸ್ಕೃತಿಲೂ ಕಂಡ್ ಬಂದದೆ. 'ಬಿದೆ' ಲಾಯ್ಕ್ ಬಂದ ಮೇಲೆ ನೀರ್‌ನ ಒಂದ್ ಅಂಗುಲದವರೆಗೆ ನಿಲ್ಸ್‌ಸ್‌ವೆ. ನೇಜಿ ದೊಡ್ಡದಾಗ್‌ತ್ತಿದ್ದಂಗೆ 1/2 ಅಂಗುಲದಸ್ಟ್ ನೀರ್‌ನ ಜಾಸ್ತಿಮಾಡಿಕಂಡ್ ಹೋದವೆ. ಕತ್ತಲೆ ಹೊತ್ತ್‌ಲಿ ಬೀಳುವ ಮಂಜು ಬಿದೆನ ಬೆಳವಣಿಗೆಗೆ ಒಳ್ಳ ನೀರ್‌ನ ಪಸೆ ಕೊಟ್ಟದೆ. ಅತಿಕರೆನಂತ ತಳಿಗ ನೀರಿಲ್ಲದಿದ್ದರೂ ಚಳಿಗಾಲದ ಮಂಜ್‌ಂದಲೇ ಬೆಳ್ದದೆ. ಹರ್‌ದ್ ಬಾವ ನೀರ್ ಕಡ್ಮೆ ಆಕನ ಹಿಂದೆಂದಲೂ ಚೌಂಟೆಗ ನೀರೆಳಿವ ಸೊತ್ತ್‌ಗ ಆಗಿದ್ದೊ. ಇಂದ್ ಯಂತ್ರೋಪಕರಣಗಳ ಬಳಕೆ ಇದ್ದರೂ, ಅಲ್ಲಲ್ಲಿ ಚೌಂಟೆಗಳ ಉಪಯೋಗನ ಗಮನಿಸಕ್. ಯಾಗೋಳು ಬೊಳ್ಪುಗೆ ಮತ್ತೆ ಹಿಂಬೊತು ಇಂತಿಸ್ಟ್ 'ಮರ್ಗಿಲ್' (ಏತದ ನೀರೆತ್ತುವ ಮರ್‌ಗಿಲ್) ನೀರ್ ಹಾಕೊಕೂಂತೇಳುವ ಲೆಕ್ಕಾಚಾರ ಉಟ್ಟು.

**ಸುಗ್ಗಿ ಕೊಯಿಲ್ :** ಬಿಸ್ಲನ ಕಾರ ಹೆಚ್ಚಾಗಿರ್‌ವ ಕಾಲಲಿ ಸುಗ್ಗಿ ಬೆಳೆ ಕೊಯ್ಲ್‌ಗೆ ಬಂದಿದ್ದದೆ. ಏಣಿಲ್ ಬೆಳೆನ ಲೆಕ್ಕಾಚಾರದಂಗೆ ಒಂದ್ ಮುಡಿ ಗದ್ದೆನ ಏಳ್ ಜೆನ ಇದ್ದರೆ ಒಂದ್ ದಿನಲಿ ಕೊಯ್ದು ಮುಗ್ಸಕ್. ಇನ್ನೆರಡ್ ದಿನಲಿ ಅದೇ ಜೆನರ್‌ಂದ ಪೈರ್ ನ ಹೊತ್ತ್ ಸಾಗ್ಸುವ ತೆನೆ ಹೊಡ್ದ್ ಸುದ್ದ ಮಾಡ್‌ವ ಕೆಲ್ಸನ ಮಾಡಕ್. ಸುಗ್ಗಿ ತೆನೆನ ರಾಸಿ ಹಾಕ್‌ವ ಬದ್‌ಲ್ ಸುತ್ತ 'ಮೆದೆ' ಕಟ್ಟುವೆ. ಹಿಂಗೆ ಮೆದೆ ಕಟ್ಟುದರ್‌ಂದ ಪೈರ್‌ಗೆ ಸಾಕ ತಟ್ಟಿ ಬತ್ತ ಬಾರಿ ಬೇಗ ಪೈರ್‌ಂದ ಉದುರ್‌ದೆ. ಸುಗ್ಗಿ ಬತ್ತನ ಅಳೆವ ಕ್ರಮ ಕಡ್‌ಮೆ ಬದಲ್‌ಗೆ ಬತ್ತನ ಮನೆ ಒಳೆಗೆ ರಾಸಿ ಹಾಕುದುಟ್ಟು. ಸುಗ್ಗಿಲಿ ಪಸಲ್ ಹೆಚ್ಚಾಗಿದ್ದ್ ಒಂದ್ ಮುಡಿ ಗದ್ದೆಲಿ 30 ಮುಡಿ ಬತ್ತ ಸಿಕ್ಕಿದೆತ ಲೆಕ್ಕಚಾರ ಮಾಡಕ್.

ಸುಗ್ಗಿಲಿ ಅತಿಕರೆ ಬೆಳ್ದರೆ ಬಿಳ್ಗಿಲ್ ಮತ್ತೆ ಬತ್ತ ಜಾಸ್ತಿ ಸಿಕ್ಕುದುಟ್ಟು. ಸುಗ್ಗಿ ಕೊಯ್ಲ್‌ನ ಕಾಲಲಿ ಮಳೆ ಇಲ್ಲದರ್‌ಂದ ಬೈಹುಲ್ಲು ಒಣ್ಗಿಸಿಕೆ ಒಳ್ಳದ್. ಏಣಿಲ್ ಬೆಳೆನಂಗೆ ಬತ್ತನ ಸೊರ್‌ತ ರಾಸಿ ಹಾಕದೆ ಸುಗ್ಗಿನ ಜೆಳ್ಳ್ ಹಂಗೆ ಕಾಡ್‌ನ ಲಾಯ್ಕ್‌ಲಿ ತೆಗ್ದ್ ಮನೆ ಒಳಗೆ ರಾಸಿ ಹಾಕುವೆ. ಸುಗ್ಗಿ ಕೊಯ್ಲ್ ಕೆಲ್ಸ ಬಾರಿ ಕಸ್ಟ. ಬಿಸ್‌ಲ್‌ನ ಕಾರಕೆ ಕೆಲ್ಸದಾಳ್‌ಗಳಿಗೆ ಬೇಗ ಸುಸ್ತಾದೆ. ಸುಗ್ಗಿ ಕೊಯ್ಲ್‌ಲಿ ಅಸ್ಟ್ ಗೌಜಿ ಅಸ್ಟಾಗಿ ಇರ್‌ದುಲೆ. ಮಾತ್‌ಕತೆಗ ಜಾಸ್ತಿ ಇರದಕ್ಕೆ ಇದೇ ಕಾರಣ.

**ಕೊಳ್ಕೆ :** ಕೊಳ್ಕೆ ಅರೆಬಾಸೆ ಪ್ರದೇಸಲಿ ಬೆಳೆವ ಮೂರ್‌ನೆ ಬೇಸಾಯ. ಬೇಕಾದಸ್ಟ್ ನೀರಾವರಿ ವೆವಸ್ತೆ ಇರ್‌ವ ಪ್ರದೇಸಲಿ ಮಾತ್ರ ಕೊಳ್‌ಕೆ ಬೇಸಾಯ ನಡ್ದದೆ. ಕೊಳಕೆನ ಕಾಲಾವದಿ ಕಡಿಮೆ ಇರ್‌ದರ್‌ಂದ ಕಮ್ಮಿ ದಿನಲಿ ಪಸ್‌ಲ್ ಕೊಡುವ ತಳಿಗಳ್‌ನೇ ಹೆಚ್ಚಾಗಿ ಬೆಳ್ಸುವೆ. ಕೊಳಕೆಗೆ 'ಅಡಿನೀರು' ಮೂಲ. ಅರೆಬಾಸೆ ಪ್ರದೇಸದ ಕೆಲವ್ ಜಾಗೆಲಿ ಬೆಳೆವ ಕೊಳಕೆ ಅಸ್ಟಾಗಿ ಪ್ರಾಮುಕ್ಯತೆ ಪಡ್ತ್‌ಲೆ. ಈ ಕಾರಣಕ್ಕಾಗಿದೆ ಕೊಳಕೆ ಬೇಸಾಯಕೆ ಹೆಚ್ಚಿನ ಮಾನ್ಯತೆನೂ ಇಲ್ಲೆ. ಜೆನಪದ ಸಾಹಿತ್ಯದ ಬಳಕೆ ಆಗಲಿ, ಆರಾದನಾ ಆಚರಣೆಗ ಆಗಲಿ ಈ ಬೇಸಾಯದೊಟ್ಟಿಗೆ ಇಲ್ಲೆ. ಕೊಳಕೆ ಬೆಳೆನ ನಿರ್‌ವಹಣೆ ಹಂಗೆ ಬೇಸಾಯ ಕ್ರಮ ಸುಗ್ಗಿ ಬೇಸಾಯನಂಗೇ ಹೆಚ್ಚಾಗಿ ಕಂಡ್‌ಬಂದದೆ. ನೀರಾವರಿ ವೆವಸ್ತೆ ಬುಟ್ರೆ ಒಳ್ದಂಗೆ ಸುಗ್ಗಿ ಬೇಸಾಯ ಕ್ರಮಕ್ಕೂ ಕೊಳಕೆ ಬೇಸಾಯ ಕ್ರಮಕ್ಕೂ ವೆತ್ಯಾಸ ಇಲ್ಲೆ. ಅದರ್‌ಂದ ಇಲ್ಲಿ ಕೊಳಕೆನ ಕುರಿತಾಗಿ ಪ್ರತ್ಯೇಕ ವಿವರಣೆನ ಕೊಟ್ಟಿರುದ್‌ಲೆ. ಅರೆಬಾಸೆ ಪ್ರದೇಸಲಿ ಬಾರಿ ಕಮ್ಮಿ ಈ ಬೆಳೆನ ಬೆಳೆತಿರ್‌ದಕೆ ಇದೇ ಕಾರಣ.

**ಪಟ್ಲ :** ಅರೆಬಾಸೆ ಪ್ರದೇಸದ ಹಳ್ಳದ ಕರೆನ ಜಾಗೆಲಿ ಬೆಳಿವ ಬೆಳೆನ 'ಪಟ್ಲ' ಬೇಸಾಯ ತೇಳುವೆ. ಏಣಿಲ್ ಮತ್ತೆ ಸುಗ್ಗಿನ ನೆಡುನ ಕಾಲಾವದಿಲಿ ಬೆಳೆವ ಬೆಳೆ 'ಪಟ್ಲ' (ಆಟಿ ಕಡೆನ ಅವದಿಂದ ಬೊಂತೆಲ್ ವರೆಗೆ) ಆಟಿ 15ರ ಮೇಲೆ 'ಪಟ್ಲ' ಬೇಸಾಯಕೆ ನೇಜಿ ಹಾಕುವೆ. ಸೋಣ ತಿಂಗಳ ಅಕೇರಿಗೆ ಮುಂದೆನೆ ನಾಟಿ ಮಾಡ್‌ವೆ. ಕೆಲವೊಂದು ವರ್‌ಸ ಆಟಿ ಕಡೆಗೆ ಅಲ್ಲರೆ ಸೋಣ ತಿಂಗಳ ಸುರುಗೆ ಬೇಸಾಯ ಸುರುಮಾಡುದುಟ್ಟು. ಈ ಕಾಲ ಮಳೆ ಇಲ್ಲರೆ ಹಳ್ಳ ನೀರ್‌ನ ಹೊಂದಿಕಂಡಿದ್ದದೆ. ಸುಮಾರ್ ಐದು ಸರ್‌ತಿ 'ಪಟ್ಲ' ಗದ್ದೆನ ಹೂಡ್‌ದು, ಸೊಪ್ಪುಗೊಬ್ಬರ ಹಾಕಿ ಮತ್ತೆ ಎರ್‌ಡ್ ಸರ್‌ತಿ ಹೂಡ್ದು ವಾಡಿಕೆ. ಏಣಿಲ್ ಬೇಸಾಯ ಮುಗ್ಸಿದ ಜೆನ (ಕೂಲಿ) ಆರಾಮಲಿ ಇರುದರ್‌ಂದ 'ಪಟ್ಲ' ಬೇಸಾಯಕೆ ಆಳ್‌ಗಳ ಸಮಸ್ಯೆ ಬಾದು ಕಮ್ಮಿ.

ನೀರ್ ಹೆಚ್ಚಿಗೆ ಇರ್‌ದೆ 'ಪಟ್ಲ' ಬೆಳೆ ಬೆಲೆಕೆ ಮುಕ್ಯ ಕಾರಣ. ಅರೆಬಾಸೆ ಪ್ರದೇಸಲಿ ಸುಮಾರ್ ಹಳ್ಳ, ಹಂಗೆ ದೊಡ್ಡ ಚೋಡಿಗಳ ಕರೆಲಿ ಬತ್ತ ಬೆಳೆವ ಗದ್ದೆಗ ಇದ್ದವೆ. ಆಟಿ ತಿಂಗಳವರೆಗೆ ಹೊಡೆವ ಇಪ್ರೀತ ಮಳೆಂದಾಗಿ ಈ ಹಳ್ಳಂಗಳ್‌ಲಿ ಬಾರೀ ನೀರ್ ಹರ್‌ದ್ ಬಂದದೆ. ಅಲ್ಲದೇ ಗದ್ದೆಗಳ್‌ಲಿ ಕೆಲವ್ ತಿಂಗಳ ಕಾಲ ನೀರ್ ತುಂಬಿಕಂಡಿದ್ದದೆ. ಇದರ್‌ಂದಾಗಿ ಆ ಪ್ರದೇಸಲಿ ಬೆಳೆ ಬೆಳೆಯಕೆ ಕಸ್ಟ. ಆಟಿ ತಿಂಗಳ ಮೇಲೆ ನೀರ್‌ನ ಪ್ರಮಾಣ ತಗ್ಗುದರ್‌ಂದ ಬೇಸಾಯ ಕೆಲ್ಸಕೆ ತೊಡ್ಗಿಕಣಿಕೆ ಸುಲ್‌ಬ. ಅದರ್‌ಂದ ಇದರ 'ಪಟ್ಲ' ಬೆಳೆ ತೇಳ್‌ವೆ. ದೊಡ್ಡ ಹಳ್ಳಗಾದ ನೇತ್ರಾವತಿ, ಕುಮಾರದಾರ, ಪಯಸ್ವಿನಿ, ಚಂದ್ರಗಿರಿ ಈ ಹಳ್ಳಂಗಳ ಉಳಿಯ ಪ್ರದೇಸಲಿ ಸಾಮಾನ್ಯ ಪಟ್ಲ ಬೆಳೆ ಕಂಡ್‌ಬಂದದೆ. ಕಾಲದ ದ್ರಿಸ್ಟಿಂದ ನೋಡ್‌ದು ಬುಟ್ಟರೆ ಏಣೆಲ್ ಬೆಳೆ ಕ್ರಮಕು, ಪಟ್ಲ ಬೆಳೆನ ಕ್ರಮಕು ಹೆಚ್ಚಿನ ವೈತ್ಯಾಸ ಇಲ್ಲೆ.

**ಕುಮೇರಿ ಬೇಸಾಯ :** ಅರೆಬಾಸೆ ಜೆನಂಗ ಇರ್‌ವ ಗುಡ್ಡಗಾಡ್ ಪ್ರದೇಸಲಿ ಪಂಡ್‌ಂದಳೆ ಬೆಳೆತ್ತಿದ್ದ ಮುಕ್ಯ ಬೆಳೆನ 'ಕುಮೇರಿ' ಅಲ್ಲರೆ 'ಕುಮರಿ' ಬೇಸಾಯ ತೇಳ್‌ವೆ. ಏಣೆಲ್ ಬೆಳೆನ ಹೊತ್ತು ಬೆಳಿವ ಕುಮೇರಿ ಬೇಸಾಯ ಪಂಡ್‌ನ ಬೇಸಾಯ ಕ್ರಮನಂಗೆ ಉಟ್ಟು. ಗುಡ್ಡೆಕಾಡ್‌ಲಿ ಬೊದ್ಕುವ ಬೇರೆ ಬೇರೆ ಬುಡಕಟ್ಟ್ ಜೆನಾಂಗಗ ಈ ಬೆಳೆನ ಮೂಲ ಕಸುಬು ಆಗಿದ್ ಬೆಳೆತ್ತಿದ್ದೊ. ಮುಂದೆ ಇದೇ ಬೇಸಾಯ ನಾಗರಿಕ

ಪೊದ್ದತಿಂದಾಗಿ ಬೊಯ್ಲ್ನ ಪ್ರದೇಸಲಿ ಬೆಳ್ದಿರ್‌ವ ಸಾದ್ಯತೆ ಉಟ್ಟು. ಬಾರಿ ಸ್ರಮದ ಈ ಬೇಸಾಯ ಪೊದ್ದತಿ ಮಳೆನ ನೋಡಿಕಂಡ್ ಬೆಳೆವ ಬೆಳೆ.

**ಕುಮೇರಿ ಬೇಸಾಯದ ಇತಿಯಾಸ :** ಎಸ್ಟ್ ಕಾಲಂದ ಕುಮೇರಿ ಬೇಸಾಯ ನಡೆತ್ತಿತ್ತ್‌ಂತ ಸರಿಯಾಗಿ ಗ್ರೇಸಿಕೆ ಸಾದ್ಯ ಇಲ್ಲೆ. ಬೇಟೆಂದ ಬೇಸಾಯದ ಕಡೆಗೆ ತನ್ನ ಕಸುಬುನ ತಿರ್‌ಗಿಸಿಕಂಡ ಮೇಲೆಂದ ಕುಮೇರಿ ಬೇಸಾಯ ಪೊದ್ದತಿನ ಮೊಯಿಂಸರ್ ಸುರು ಮಾಡಿರೋಕು


ಕುಮೇರಿ ಬೇಸಾಯ

ಕಂಡದೆ. ಅರೆಬಾಸೆ ಪ್ರದೇಸಕೆ ಸಮ್ಮಂದ ಪಟ್ಟಾಂಗೆ ಪರಸುರಾಮ ಸೃಸ್ಟಿನ ಕತೆ ಒಂದ್ ಕುಮೇರಿ ಬೇಸಾಯದ ಕಲ್ಪನೆನ ಹೇಳ್ದೆ. ಅರೆಬಾಸೆ ಪ್ರದೇಸಲಿದ್ದ ಬಯಂಕರ ಕಾಡ್‌ನ ಕಡ್ದ್ ಅಲ್ಲಿ ಬೇಸಾಯ ಕೆಲ್ಸನ ಸುರು ಮಾಡ್ದೋಂತೇಳುವ ಅಂಸ ಈ ಪುರಾಣದ ಕಲ್ಪನೆಂದ ತಿಳ್ದದೆ. ಈ ಪ್ರದೇಸಲಿ ಬೊದ್ಕ್‌ವ ಬುಡಕಟ್ಟ್ ಜೆನಾಂಗಗಳ್‌ಲಿ ಹೆಚ್ಚಿಗೆ ನಡೆತಿರ್‌ವ ಈ ಬೇಸಾಯ ಪೊದ್ದತಿ ಇತ್ತೀಚಿನವರೆಗೂ ಬಳಕೆಲಿದ್ದದ್ ಕಂಡ್‌ಬಂದದೆ. ಇಲ್ಲಿನ ಪ್ರದೇಸಕೆ ವಲಸೆ ಬಂದ ಮರಾಟಿ ಜೆನಾಂಗದವರೊಟ್ಟಿಗೆ ಪಂಡ್‌ಂದಲು ಕುಮೇರಿ ಬೇಸಾಯನೆ ನಡೆತಿದ್ದದ್. ಗಿರಿಜೆನವರ್‌ಗಕೆ ಸೇರ್‌ವ ಈ ಜೆನಾಂಗ ಮರಾಟರ ಅರಸ ಶಿವಾಜಿನ ಕಾಲಲಿ ಕರಾವಳಿ ಮಲೆನಾಡ್‌ಗೆ ಬಂದಿರುವೊತೇಳಿ ನಂಬುವೆ.

ಮರಾಟಿ ಬಾಸೆ ಮಾತಾಡ್‌ವ ಇವ್ ಕುಮೇರಿ ಬೇಸಾಯಲಿ ಪಳ್ಗಿದ್ದೊ, ಆದರೆ ಮರಾಟಿ ಜೆನಾಂಗ ವಲಸೆ ಬಾಕೆ ಮುಂದೆನೆ ಇಲ್ಲಿನ ಮೂಲ ಜೆನಗ ಆದ ಮೇರ, ಕೊರಗ, ಮನ್ಸ ಇಂತ ಜೆನಾಂಗ ಈ ಬೆಳೆನೊಟ್ಟಿಗೆ ಹಕ್ಕಲೆನ ಸಮ್ಮಂದ ಇಸಿಕಂಡಿರ್‌ವ ಸಾದ್ಯತೆ ಉಟ್ಟು. ಈ ಕಾರಣಂದಾಗಿ ಇಂದ್‌ಗೂ ಈ ಜೆನಾಂಗಗ ಬೇಸಾಯ ಕ್ರಮಲಿ ಸುರುನ ಜಾಗೆ ಪಡ್ಕೊಂಡುಟು. ಆದರ್‌ಂದ ಅರೆಬಾಸೆ ಪ್ರದೇಸನ ಕುಮೇರಿ ಬೇಸಾಯ ಇಲ್ಲಿನ ಮೂಲನಿವಾಸಿಗಳ್‌ಂದನೇ ಸುರುವಾತ್‌ಂತ ಗ್ರೇಸಕ್. ಇದ್ಕೆ ಸರಿ ಆಗಿ ತುಳುಪಾಡ್ದನಗಳ್‌ಲಿ ಕುಮೇರಿ ಬೇಸಾಯದ ಪ್ರಸ್ತಾಪ ಸಿಕ್ಕಿದೆ.

**ಕುಮೇರಿ ಬೆಳಿವ ಕ್ರಮ :** ಕುಮೇರಿ ಬೆಳೆವ ಪ್ರದೇಸದ ಹುಡ್‌ಕಾಟನ ಸುರೂಗೆ ಅರೆಬಾಸೆ ಪ್ರದೇಸದ ಗುಡ್ಡಗಾಡ್ ಜೆನಂಗ ನಡ್ಸತಿದ್ದೊ. ಸಾಮಾನ್ಯ ಕೆಡ್ಡಸಂದ (ಫೆಬ್ರವರಿ) ಮುಂದೆನೆ ಈ ಬೇಸಾಯಕೆ ಸರಿಗಟ್ಟಾದ ಕಾಡ್ ಗುಡ್ಡೆನ ಹುಡ್ಕತಿದ್ದೊ. ಮತ್ತೆ ಆ ಪ್ರದೇಸಲಿರುವ ದೊಡ್ಡ ಮರಗಳ ಗೆಲ್ಲ್ ಕಡೆತ್ತಿದ್ದೊ. ಕೆಳೆಗಿದ್ದ ಗಿಡ್ಡೆಗಳ ಕಡ್ದ್ ಅಲ್ಲಲ್ಲಿ 'ಗುಡ್ಡೆ' ಹಾಕತಿದ್ದೊ. ಸುಮಾರ್ ಒಂದ್ ತಿಂಗ ಕಳ್ದ ಮೇಲೆ ಆ ಪ್ರದೇಸಕ್ಕೆ ಕಿಚ್ಚಿ ಹಾಕಿ ಎಲ್ಲಾ ಬಲ್ಲೆಗಳ್‌ನ ಸುಡತ್ತಿದ್ದೊ. ಹಿಂಗೆ ಕಿಚ್ಚಿ ಹಾಕಿ 15 ದಿನ ಕಳ್ದ ಮೇಲೆ, ಹೊತ್ತದೇ ಒಳ್ದ ಅಡರ್ ಸೌದೆಗಳ ಮತ್ತೆ ಗುಡ್ಡೆ ಹಾಕಿ ಹೊತ್ತಿಸ್‌ತ್ತಿದ್ದೊ. ಆ ಬೂದಿನ ಸುತ್ತೊಳು ಹರಂಡ್‌ತ್ತಿದ್ದೊ. ಪಗ್ಗು ತಿಂಗಳ್‌ಲಿ ಬೀಳ್‌ವ ಸುರುನ ಮಳೆನ ಮೇಲೆ ಕುಮೇರಿ ಒಕ್ಕುವ ಕೆಲ್ಸ ನಡ್ದದೆ. 'ಪರ್‌ವಾಯಿ' ತೇಳ್ವ ಮೊಣ್ಣು ಎಳಿವ ಹತ್ಯಾರ್‌ಂದ ಕುಮೇರಿ ಮೊಣ್ಣ್‌ನ ಎರಡ್ ಇಂಚ್ ಸೀಳ್‌ತ್ತಿದ್ದೊ. ಎತ್ತರದ ಪ್ರದೇಸಗಳ್‌ಲಿ ಅಡ್ಡಕೆ ಸಮತಟ್ಟ್ ಪ್ರದೇಸಗಳ್‌ಲಿ ಉದ್ದಕೆ ಮೊಣ್ಣ್‌ನ ಸೀಳ್‌ತ್ತಿದ್ದೊ. ಈ ಸೀಳ್ದ ಕಣಿಲಿ ಗೇಣಿಗೆ ಒಂದರಂಗೆ ಬಿತ್ತ್ ಬಿತ್ತತಿದ್ದೊ. ಹಿಂಗೆ ಬಿತ್ತನೆ ಏಪ್ರಿಲ್ ತಿಂಗಳ ಕಡೆನ ವಾರಲಿ ನಡೆತ್ತಿತ್ತ್. ಕುಮೇರಿ ಬಿತ್ತಿದ ಮೇಲೆ ಒಟ್ಟು ಜಾಗೆಗೆ ಬೇಲಿ ಹಾಕುವ ಕೆಲ್ಸ ನಡೆತ್ತಿತ್ತ್. ಬಿತ್ತನೆ ಕಾರ್‌ಯ ನಡ್ದ್ ಸುಮಾರು 20, 25 ದಿನಗಳೊಳಗೆ ಅಗೆಲಿ 'ಪಿಳ್ಳೆ' ಬಾಕೆ ಸುರಾತತಿತ್ತ್ ಅಲ್ಲಿವರೆಗೆ ಬಿತ್ತಿದ ಬಿತ್ತ್‌ನ ಕಾದೇ ಕಾಯೋಕುಂತೆನ್ ಇಲ್ಲೆ. ಮಾತ್ರ ಕುಮೇರಿನ ಜಾಕ್ರತೆಲಿ ನೋಡಿಕಣಕಾಗಿತ್ತ್.

**ಕುಮೇರಿ ಕಾಪಾಡಿಕಂಬೊದು :** ರಣ ಕಾಡ್‌ನ ನೊಡುಲಿ ಬೆಳೆವ ಬೆಳೆ ಇದಾದರ್‌ಂದ ಎಲ್ಲ ಕಾಡ್ ಪ್ರಾಣಿಗಳ ಕಾಟನೂ ಇರತಿತ್ತು. ಅದರ್‌ಲೂ ಮುಕ್ಯ ಆಗಿ ಹಂದಿ, ಮೊಲ,ಕುರೆಗ, ಹಕ್ಕಿ, ಎಲಿ, ಹೆಗ್ಗಣಗಳ್‌ಂದ ಬೆಳೆನ ಕಾಪಾಡಿಕಂಬಕೆ ಬಾರೀ ಕಸ್ಟ ಆಗ್‌ತ್ತಿತ್ತ್. ಹಂದಿ, ಮೊಲಕೆ ಬೇಲಿನ ಸುತ್ತ ಉರ್‌ಲು ಇಸತಿದ್ದೊ. ಹಾಂಗೆ ಹಕ್ಕಿ ಕುರೆಗಳ ಬಿಲ್ಲ್‌ಕಲ್ಲ್‌ಂದ ಓಡ್ಸ್‌ತ್ತಿದ್ದೊ. ಇಲಿ ಹೆಗ್ಗಣಗಳ್‌ನ ವಿಸ, ಎಲಿಕತ್ತ್‌ರಿ ಅಲ್ಲರೆ ಅಡ್ಚಿಲ್ ಇಸಿ ಕೊಲ್ಲತಿದ್ದೊ.

**ಮಾಡ್‌ಕೋಲು :** ಕುಮೇರಿ ಬೆಳೆ ಕಾಯ್‌ವ ಬಿಡಾರಕೆ 'ಮಾಡಂಕೋಲು' ತೇಳ್‌ವೆ. ಇದ್ ಆರ್ ಕಂಬಗಳ ಎರಡ್ ಮಾಡ್‌ನ ಅಟ್ಟಳಿಗೆ. ನೊಡುಲಿ ಎರಡ್ ದೊಡ್ಡ ಕಂಬಗಳ್‌ನ ಹಾಕಿ ಆಚೆ ಈಚೆ ಎರಡೂ ಪುಡೆಗೆ ಎರಡೆರಡ್ ಸಣ್ಣ ಕಂಬಗಳ್‌ಂದ ಹಾಕತಿತ್ತ್ ಮತ್ತೆ ಎರಡ್ ಪುಡೆಲಿ ಮಾಡ್ ಕಟ್ಟತಿದ್ದೊ. ಸುಮಾರ್ ಆರ್ ಅಡಿ ಎತ್ತರ ಇರ್‌ವ ಅಟ್ಟಳಿಗೆ, ಆ ಅಟ್ಟಳಿಗೆ ಹತ್ತಿಕೆ ಬೆದ್‌ರ್‌ನ ಏಣಿ. ಅಟ್ಟಳಿಗೆ ಕೆಳೆಗೆ ಪುಡೆ ಒಣ್ಗಿಲ್ ಕಿಚ್ಚಿ ಹಾಕ್‌ವೆ. ಈ ಕಿಚ್ಚಿಂದಾಗಿ ಮಾಡಂಕೋಲುನ ಹಕ್ಕಲೆ ಯಾದೇ ಪ್ರಾಣಿಗನೂ ಬಾದುಲೆ. ಅದಲ್ಲದೆ ಉಮ್ಮಣಿಗಳ

ಬಾದೆನೂ ಇರ್‌ದುಲೆ. ಹಿಂಗೆ ಮಾಡಂಕೋಲ್‌ನ ಕುಮೇರಿನ ನೊಡುಲಿ ಮಾಡ್‌ತ್ತಿದ್ದೊ. ಈ ನೊಡುಂದ ಕುಮೇರಿನ ನಾಕ್ ಮೂಲೆಗೂ ಬೊಳ್ಳೀ ಕಟ್ಟಿ ಅದರ ಕೊಡಿಗೆ ಡಬ್ಬಿ ಅಲ್ಲರೆ ಸದ್ದ್ ಹೊರಡ್‌ಸುವ ಎಂತಾರ್ ಕಟ್ಟುವೆ. ಇರ್‌ಲ್ ಹೊತ್ತ್ ಈ ಬೊಳ್ಳಿನ ಎಳೆದರ್‌ಂದ ಸದ್ದ್ ಹೊರ್‌ಟ್ ಯಾದೇ ಪ್ರಾಣಿಗನೂ ಬೆಳೆನ ಹಕ್ಕಲೆ ಬಾತಿಲ್ಲೆ.



ಮಾಡ್‌ಕೋಲು

**ಕುಮೇರಿ ಕಳೆ :** ಕುಮೇರಿ ಬಿತ್ತನೆ ಆಗಿ ಒಂದ್ ತಿಂಗ ಕಳ್ದ ಮೇಲೆ ಬೆಳೆನ ನೊಡುಲಿ ಬೆಳೆವ ಕಳೆನ ಕಿತ್ತವೆ. ಇದರ ಕಡ್ದ್ ಮತ್ತೆ ಬೆಳೆನ ಬುಡಕ್ಕೆ ಹಾಕುದರ್‌ಂದ ಗೊಬ್ಬರ ಸಿಕ್ಕಿದೆ.ಕಾಡ್ ಬಲ್ಲೆ ಅಡರ್ ತೆಗ್ದ್ ಒಟ್ಟು ರಾಸಿ ಹಾಕಿ ಹೊರಗೆ ದೂರಲಿ ಕಿಚ್ಚಿನು ಹಾಕತಿದ್ದೊ. ಗುಡ್ಡೆ ಜಾಗಲಿ ಬೇಸಾಯ ಮಾಡ್ದರ್‌ಂದ ಕಳೆಗ ಜಾಸ್ತಿ ಇರ್‌ತ್ತಿತ್ತ್. ಇದ್ಕೆ ಕಳೆ ಕೀಳ್ದೆ ಒಂದೇ ದಾರಿಯಾಗಿತ್ತ್.

**ಕುಮೇರಿ ರೋಗ :** ಕುಮೇರಿ ಬೆಳೆಗೆ ಮುಕ್ಯ ಆಗಿ 'ಬೆಂಬು' (ಬೆಂಕಿ) ರೋಗ ಹೆಚ್ಚು ತಟ್ಟಿದೆ. ಅಂದರೆ ಬೆಳ್ದ ಬೆಳೆಲಿ ಅಲ್ಲಲ್ಲಿ ಕರ್‌ಂಚಿದಾಂಗೆ ಕಂಡುಬಾದೇ ಬೆಂಕಿ ರೋಗ. ಇದರ ತಡಿಯಕೆ ಆಟಿ ತಿಂಗಳ ಮಂಗಳವಾರ 'ಕರಿಕೊಳ್ಳಿ' ಊರ್‌ವ ಕ್ರಮ ನಡೆತ್ತಿತ್ತ್. ಅದಲ್ಲದಿದ್ದರೆ ಬೆಚ್ಚ ಬೂದಿನ ರೋಗ ಹಿಡ್ದ ಪೈರ್‌ಗೆ ಕೊಡ್ಕಿ ರೋಗನ ತಡೆತಿದ್ದೊ. ಈ ರೋಗ ಬುಟ್ರೆ ಬೇರೆ ಯಾದೇ ರೋಗಗ ಕುಮೇರಿ ಬೆಳೆಗೆ ಬಾದು ಕಡ್ಮೆ. ಬೆಳೆ ಪಸ್‌ಲ್‌ನ ದ್ರಿಸ್ಟಿಂದ ಕೆಲವೊಂದ್ ಮಂತ್ರ ತಂತ್ರದ ಕ್ರಮಂಗ ಕೂಡ ಇತ್ತ್...

**ಕುಮೇರಿ ನಂಬಿಕೆ ಮತ್ತೆ ಆಚರಣೆ :** ನಡೂ ಕಾಡ್‌ಲಿ ಬೆಳೆವ ಕುಮೇರಿ ಬೆಳೆನ ಕಾಪಾಡಿಕೆ ಬರೇ ಮೊಯಿಂಸಂದ ಮಾತ್ರ ಆಕಿಲೆ ತೇಳುವ ಕಾರಣಕಾಗಿ ಜೆನಪದರ್ ಕೆಲವೊಂದು ನಂಬಿಕೆ, ಆಚರಣೆಗಳ್‌ನ ನಡ್ಸತಿದ್ದೊ.

**ಬಂಬು ಕಟ್ಟುವುದು :** ಕುಮೇರಿ ಬೆಳೆನ ತೆನೆಗೆ ತಟ್ಟ್‌ವ ರೋಗನ ತಡಿಯಕೆ ಮನ್ಸ ಜೆನಾಂಗ ಅಲ್ಲರೆ ಮೇರ ಜೆನಾಂಗದ ಮುಕ್ಯಸ್ತರ್ ನಡ್ಸುವ ಕ್ರಿಯಾಚರಣೆನ ಮುಸ್ಸಿ ತೆಗಿಯೊದು ತೇಳಿ ಕರ್‌ದವೆ. ಒಂದ್ ಮರದ ಕೆಂಪು ಕೆತ್ತೆ ಚೋಲಿನ ತಂದ್ ಈ ಕೆತ್ತೆ ಯಾವ ಮರದ್ದ್‌ಂತೇಳಿ ಯಾರಿಗೂ ಹೇಳಿಕಾಗಾದ್‌ಂತೇಳುವ ನಂಬಿಕೆ ಉಟ್ಟು. ಬೆಳೆಗೆ ಗಾಳಿ ಬೀಸ್‌ವ ದಿಕ್ಕ್‌ಲಿ ಕೋಲೊಂದಕೆ ಊರಿ ಇಸತ್ತಿದ್ದೊ. ಈ ಕ್ರಮನು ಯಾರೂ ನೋಡುವಂಗಿಲ್ಲೆ ಹಂಗೆ ಇದರ ನಡ್ಸುವಂವ ಯಾರೊಟ್ಟಿಗೆನೂ ಮಾತಾಡಿಕೆ ಬೊತ್ತೂಂತೇಳುವ ನಂಬಿಕೆನೂ ಇತ್ತ್. ಈ ಕೆತ್ತನೆಂದಾಗಿ ಹರ್‌ದ್ ಬಾವ ಗಾಳಿಂದಾಗಿ ಬೆಳೆಗೆ ಹಿಡ್‌ದಿರುವ ರೋಗ ದೂರ ಆದೆಂತೇಳುವ ನಂಬಿಕೆ ಜೆನಪದರದಾಗಿತ್ತ್. ಇಂದ್ ಅರೆಬಾಸೆ ಪೆದೇಸಲಿ ಕುಮೇರಿ ಬೆಳೆ ಮಾಡದೇ ಇರ್‌ದರ್‌ಂದ ಈ ತರದ ಮಾಂತ್ರಿಕ ಆಚರಣೆಗ ಇಂದ್ ಮಾಯ ಆಗತುಟ್ಟ್.

**ಕುಮೇರಿ ಮಂಜ :** ಕುಮೇರಿ ಮಾಡ್‌ವಲ್ಲಿ 'ಚೈಂಬೆರ್' ದೆವ್ವದ ಆರಾದನೆ ಹೆಚ್ಚಾಗಿ ನಡೆತ್ತಿತ್ತ್. ಕುಮೇರಿ ಬಿತ್ತುವ ಮುಂದೆನೆ 'ಚೈಂಬೆರ್' ದೆವ್ವಕೆ ಹರ್‌ಕೆ ಹೇಳಿಕಣ್‌ತ್ತಿದ್ದೊ. ಬೆಳೆ ಲಾಯ್ಕ್‌ಲಿ ಬೆಳ್‌ದ್ ನಿತ್ತ್ ಆಟಿ ಸಂಕ್ರಮಣಂದ 'ಚೈಂಬೆರ್' ದೆವ್ವಕೆ 'ಮಂಜ' ನಡೆತ್ತಿತ್ತ್. ಈ ಮಂಜ ಚೈಂಬೆರ್ ದೆವ್ವಕಲ್ಲದೆ 'ಮಲೆ' ದೆವ್ವಂಗಳಿಗೂ ಕೊಡ್‌ತ್ತಿದ್ದೊ.

**ಮಲೆ ದೆವ್ವ :** ಮಲೆದೆವ್ವಗಳ ಆರಾದನೆ ಕುಮೇರಿ ಪ್ರದೇಸಲಿ ತುಂಬ ಮುಕ್ಯ ಆಗಿತ್ತ್. ಈ ದೆವ್ವಗಳ ಬಗ್ಗೆ ಬಾಳ ನಂಬಿಕೆಗ ಕುಮೇರಿ ಬೇಸಾಯಗಾರರ್‌ಲಿ ಇರ್‌ದರ್‌ಂದ ಇದರ ಹೆಚ್ಚಾಗಿ ನಂಬತ್ತಿದ್ದೊ. ಕೆಲಸಗಾರರ ದಾರಿ ತೊಪ್ಪುಸುದು, ಕಾಡ್‌ನ ಆಚೆ ಕರೆಂದ ಕರೆದಂಗೆ ಕೇಳ್ಸುದ್, ಮೈಕೈ ತೊರ್‌ಸುದು, ತಕಂಡ್ ಹೋದ ಬುತ್ತಿ ಹಳ್‌ಸಿ ಹೋದು ಇಂತ ತೊಂದರೆಗ ಮಲೆದೆವ್ವಗಳ್‌ಂದಳೆ ಆದೂಂತೇಳಿ ಜೆನಪದರ್ ಗ್ರೇಸಿಕಂಡಿದ್ದೊ. ಇಂತದರ ದೂರ ಮಾಡಿಕಾಗಿ ಮಲೆದೆವ್ವಳಿಗೆ 'ಮಂಜ'ನ ನಡ್ಸತ್ತಿದ್ದೊ...

**ಇಜ್ಜಾಲ್ ಪೂಜೆ :** 'ಜಾಲ್/ಇಜ್ಜಾಲ್ ಪೂಜೆ' ಕುಮೇರಿ ಬೆಳೆನ ಕೊಯ್ಲ್ ಮುಗ್ದ ಮೇಲೆ ನಡ್ಸುವ ಕ್ರಿಯಾಚರಣೆ. ಕುಮೇರಿ ಬತ್ತಂದಲೇ ಅಕ್ಕಿ ತೆಗ್ದ್ ಅದರ ರೊಟ್ಟಿ ಮತ್ತೆ ಪದ್‌ಂಜಿ, ಎಸಂಡ್ ಗೈಪು ಮಾಡತಿದ್ದೊ. ಇದರನೇ ಕುಮೇರಿಲಿ ಮಾಡ್ದ ಇಜ್ಜಲ್‌ಲಿ ಬಡ್ಸ್‌ತ್ತಿದ್ದೊ. ಕುಮೇರಿ ಬೇಸಾಯದ ಮುಕ್ಯ ಯಜಮಾನ ಪ್ರಾರ್‌ತನೆ ಮಾಡಿಕಂಡದೆ. ಬೆಳೆನ ಕಾದ ಎಲ್ಲಾ ದೆವ್ವಗಳ ನೆಂಪುಸಿಕಂಬ ಮಾದರಿಲಿ ಈ ಪ್ರಾರ್‌ತನೆ ನಡೆತ್ತಿತ್ತ್. ಪ್ರಾರ್‌ತನೆ ಆದ ಮೇಲೆ ಮಾಡಿಸಿದ ಅಡ್ಗೆನ ಎಲ್ಲವೂ ಒಟ್ಟಿಗೆ ಕುದ್ದು ಉಂಬತ್ತಿದ್ದೊ.

**ಕಡೆಗೆ :** ಅರೆಬಾಸೆ ಪ್ರದೇಸದ ಬೇಸಾಯ ಕೆಲ್ಸಗ ಬರೇ ಅದೊಂದ್ ಕಸುಬು ಮಾತ್ರ ಅಲ್ಲ. ಅದೊಂದು ಸಂಸ್ಕೃತಿನ ಪಾಲ್‌ನು ಹೌದು. ಅಂದರೆ ಬೇಸಾಯದ ಈ ಎಲ್ಲ ಕೆಲ್ಸ ಕಾರ್ಯದ ಹಿಂದೆ ಸುಮಾರ್

ಆಚರಣೆಗ, ಆರಾದನೆ, ನಂಬಿಕೆಗ ಮತ್ತೆ ಕ್ರಿಯಾವಿದಿಗ ಚಾಲ್ತಿಲುಟ್ಟು. ಇದೆಲ್ಲರ ಒಟ್ಟಿಗೆ ಇರ್‌ವ ವೆವಸ್ತೆನೆ ಸಂಸ್ಕೃತಿತೇಳಿ ತಿಳ್ಕೊಡ್ ಅಬಿಪ್ರಾಯ ಪಟ್ಟವೆ. ಈ ಸಂಸ್ಕೃತಿನ ಬಗ್ಗೆ ಇರ್‌ವ ಚರ್ಚೆ ಬಾರಿ ದೊಡ್ಡದ್. ಕ್ರಿಯಾರೂಪದ ಇನ್ನೊಂದು ಮೋರೆನಂಗೆ ಇರ್‌ವ ಇದ್ ಈ ಕಾರಣಂದ ಬಾರಿ ಮುಕ್ಯ ಆಗುಟು. (ಎಸ್.ಕೆ.)

**ಕ್ರಿಸಿ ಕೆಲ್ಸದ ಸೊತ್ತುಗ : ಅಡ್‌ಕೆ ಮಣೆ :** ಅಡ್‌ಕೆ ಮಣೆ ತೇಳ್ರೆ ಕೊಮ್ಮಿಗೆ ಹತ್ತಿಕೆ ಇರ್‌ವ ಮಣೆ. ಇದರ ಮಾಡಿಕೆ ಗಟ್ಟಿ ಮರದ ಹಲಗೆ ಮತ್ತೆ ಹುರಿಬೊಳ್ಳಿ ಬೇಕ್. ಹಲಸ್‌ನ ಮರದ ತೋರದ ಬೇರ್, ಬೊಳ್ಳಿ ಕಾಯರ ಮರಲೂ ಮಾಡ್ವೆ. ಅಂದಾಜ್ ಮೂರ್ ಗೇಣ್‌ನಸ್ಟ್ ಉದ್ದ, ಒಂದ್ ಗೇಣ್‌ನಸ್ಟ್ ಅಗಲ, ಒಂದೂವರೆ ಅಂಗುಲದಸ್ಟ್ ದಪ್ಪ ಇರ್‌ವ



ಅಡಿಕೆ ಮಣೆ

ಮರದ ಹಲಗೆಲಿ ಮಾಡ್ವೆ. ಮರನ ಪೊರ್‌ಲು ಕೀಸಿ ಮೂಲೆಲಿ ದೂಂಚಿ ಇಲ್ಲದ ಹಾಂಗೆ ಮಾಡಿಕಾಂಕು. ನಡೂಲಿ ಒಂದ್ ಒಟ್ಟೆ ಮಾಡೊಕು. ಅಂದಾಜ್ ಎರಡ್ ಮಾರ್ ಉದ್ದದ ದಪ್ಪದ ಹುರಿ ಬೊಳ್ಳಿನ ಎರಡ್ ಮಡ್ಕೆ ಮಡಿ ಒಟ್ಟೆಲಿ ಸುರ್‌ದ್ ಅಡಿಬಾಗಲಿ ಗಂಟ್ ಹಾಕಿ ಪೀಂಕದ ಹಾಂಗೆ ಮಾಡಿರೆ ಅಡಿಕೆ ಮಣೆ ತಯಾರ್ ಆದೆ. ಇದರ ಮರದ ಆಚಾರಿಗ ಮಾಡ್ವೆ. ಕೆಲವರ್ ಮರಕ್ಕೆ ಹತ್ತೊವು ಅವ್ವಕ್ಕೆ ಬೇಕಾದ ಮಣೆನ ಅವ್ವವ್ವೆ ಮಾಡಿಕಂಡವೆ.

ಕೊಮ್ಮಿಗೆ ಹತ್ತೊವು ಮಣೆಲಿರ್‌ವ ಬೊಳ್ಳಿನ ಕೊಮ್ಮಿಗೆ ಒಂದ್ ಸುತ್ತು ತಂದ್ ಬೊಳ್ಳಿನ ಕೊಡಿಲಿರ್‌ವ ಎರಡ್ ಎಳೆನ ನಡೂಲಿ ಮಣೆನ ಹುಗ್ಗ್‌ಸಿ ಎಳ್ದವೆ. ಆಗ ಕೊಮ್ಮುಲಿ ಮಣೆ ನೇತಾಡ್ದೆ. ಮರ ಹತ್ತೋವು ಕಾಲಿಗೆ ಹಾಳೆಂದ ಮಾಡ್ದ 'ತಳೆ' ಕೋಸಿಕಂಡಿದ್ದವೆ. ತಳೆತೇಳ್ರೆ ಒಂದ್ ಬೊಳ್ಳಿನ ಎರಡ್ ಕಡೆಲಿ ಒಟ್ಟು ಸೇರ್‌ಸಿ ಗಂಟ್ ಹಾಕಿದ ಒಂದ್ ಹತ್ಯಾರ್. ಅದ್ ಕೊಮ್ಮನ ತೋರ ಮತ್ತೆ ಎರಡ್ ಪಾದದ ಅಳತೆನಸ್ಟ್ ಇರೊಕು. ಅದರೊಳಗೆ ಕಾಲ್ ಹಾಕಿ ಕೊಮ್ಮಿಗೆ ಕಾಲ್ ಕೊಡಿಕೆ ಆವಸ್ಟ್ ಇರೋಕು. ಒಂದ್ ಕೈಲಿ ಕೊಮ್ಮನ ಹಿಡ್ಕಂಡ್ ಮತ್ತೊಂದು ಕೈಲಿ ಬೊಳ್ಳಿನ ಹಗೂರಲಿ ಮೇಲೆ ನೂಕಿಕನ ಮೇಲೆ ಮೇಲೆ ಹೋದವೆ. ಬೇಕಾದಸ್ಟ್ ಎತ್ತರಕೆ ಹೊದ ಮೇಲೆ ಪುಕುಳಿ ಅಡಿಗೆ ಮಣೆನ ತಂದ್ ಅದರ್‌ಲಿ ಅಚೆ ಈಚೆ ಕಾಲ್ ಹಾಕಿ ಕುದ್ದವೆ. ಆಗ ಬೊಳ್ಳಿ ಗಟ್ಟಿ ಆಗಿ ಕೊಮ್ಮುಲಿ ಹಿಡ್ಕಂದೆ. ಇದರ ಅಡಿಕೆ ತೆಗೆಕೆ, ಮೊದ್ದು ಬುಡಿಕೆ ಬಳಸ್ವೆ. ಅಡಿಕೆ ಮಣೆ ಹಿಡ್ಕಂಡ್ ಮರ ಹತ್ತಿದವಂಗೆ ಜಾರ್‌ವ, ಬೀಳ್ವ ಹೆದ್ರಿಕೆ ಇರ್‌ದುಲೆ.

**ಒಚ್ಚಿಮರ :** ಕತ್ತಿ, ಬಾಜಿ, ಬೀಸತ್ತಿ, ಹರ್‌ತ ಮಾಡ್‌ವ ಮರಂದ ಮಾಡ್ದ ಒಚ್ಚಿಮರ. ಹಿಂದೆ ಮುಂದೆ ಕೂಸ್‌ನ ಒಚ್ಚುವ ಹಂಗೆ ಕತ್ತಿನ ಒಚ್ಚಿ ಹರಿತ ಮಾಡ್‌ವ ಕಾರಣ ಒಚ್ಚಿ ಮರಂತ ಹೆಸ್ರ್ ಬಂದಿರ್‌ದು. ಕೋಳಿ ಬಾಳ್ ಮೊಸೆವ ಒಚ್ಚಿ ಮರ ಕಾಯರ ಮರದ ಬೇರ್‌ಲಿ ಮಾಡ್‌ವೆ. ಇದರ ಕೆತ್ತಿಕೆ ಗೊತ್ತಿದ್ದೊವು ಯಾರೂ ಸ ಮಾಡಕ್. ಮರದ ಅಚಾರಿಗ ಹಳ್ಳಿಲಾಯ್ಕ್ ಮಾಡ್‌ವೊ. ಇದ್ ಕಲ್ಲ್‌ಲಿ ಸ ಉಟ್ಟು. ಇದರ ಕಲ್ಲ್ ಕುಟಿಗರ್ ತಯಾರ್ ಮಾಡ್‌ವೆ. ಬೊಳ್ಗಲ್ಲ್‌ನ ಕುಟ್ಟಿ ಪೊಡಿ ಮಾಡಿ ಒಚ್ಚಿಮರದ ಮೇಲೆ ಹಾಕಿ ಕತ್ತಿನ ಒಚ್ಚೊಕ್. ಬಾಳ್, ಕತ್ತಿ, ಬಾಳ್ಕತ್ತಿ, ಕೊಡಾರಿ, ಮೊಚ್ಚಿ ಮೊಸೆಕೆ ಒಚ್ಚಿ



ಒಚ್ಚಿಮರ.

ಮರ ಬೇಕ್. ಆದರೆ ಆ ಒಚ್ಚಿಮರ ಹೀಂಗೆ ಇರ್‌ದುಲೆ. ಅದ್ ಉದ್ದ ಇದ್ದ್ ದಪ್ಪ ಸ ಉಟ್ಟು. ಆದರೆ ಮರದ ಒಚ್ಚಿಲಿ ಬಾಳ್ ಲಾಯ್ಕ್ ಮೊಸೆಕಾದೆಗಡ. (ಎಂ.ಜಿ.ಕೆ.)

**ಒನಲೆ :** ತೊಡ್ಪೆನ ಹಾಂಗಿರ್‌ವ ದವಸ ದಾನ್ಯಾದಿಗಳ ವಂಚುವ ಸೊತ್ತು. ಕಣ್ಣ್+ತಡ್ಪೆ=ಕಂಚಡ್ಪೆ ಆಗುಟು. ಇದರ ಬೆತ್ತಂದ ಮಾಡ್ದು. ಒನಲೆಲಿ ಎರಡ್ ನಮೂನೆಗ ಉಟ್ಟು. ಒಂದ್ ಒನಲೆಗೆ ನಡೂಲಿ ಒಟ್ಟೆ ಉಟ್ಟು. ಇನ್ನೊಂದು ಹಳ್ಳದೊಡ್ಡದಿದ್ದ್ ನಡುಲಿ ಒಟ್ಟೆ ಇರ್‌ದುಲೆ. ಒಟ್ಟೆ



ಒನಲೆ

ಇರ್‌ವ ಒನಲೆಲಿ ಒಟ್ಟೊಟ್ಟೆ ಇರೊಕಾರ್ ಅದರ ಮೆಡೆಕನ ನೊಡುಲಿ ಬೆತ್ತನ ಹಳ್ಳಿದೂರ ದೂರ ಇರ್‌ವಾಂಗೆ ಮಾಡೊಕು. ಇದ್ಕೆ ತೊಡ್ಪೆಂತ ಹೇಳ್‌ವೆ. ಬೆತ್ತ ಮೆಡೆವ ಕೊರಗರ್, ಅಜಲರ್, ಮಲೆಕುಡಿಯರ್ ಒನಲೆನ ಮೆಡ್ದವೆ. ಒನಲೆಲಿ ಬತ್ತನ ಮಿದ್ದ್ ತಗ್ಗವೆ. ಒನಲೆಲಿ ತೌಡ್ ಬೇರೆ ಅಕ್ಕಿ ಬೇರೆ ಮಾಡಿಕೆ ಆದೆ. ರಾಗಿಲಿ ಕಲ್ಲ್, ಕಾಡ್ ಮಿನಿ ಇದ್ದರೆ ಒಟ್ಟೆ ಇಲ್ಲದ ಒನಲೆ ಅಲ್ಲರ್ ತೊಡ್ಪೆಲಿ ಹೊಡ್ಕೊಕು. (ಎಂ.ಜಿ.ಕೆ.)

**ಒನ್ಕೆ :** ಒನ್ಕೆ ಬತ್ತ ಮಿಜೆಕೆ ಬೇಕಾದ ಹತ್ಯಾರ್. ಇದ್ ಹೆಚ್ಚ್ ಕಮ್ಮಿ ನಮ್ಮ ರಾಜ್ಯದ ಎಲ್ಲಾ ಊರ್‌ಲೂ ಇರ್‌ವಂತದ್ದ್. ಒನ್ಕೆ ಅಂದಾಜ್ ಐದ್ ಆರ್ ಪೀಟ್ ಉದ್ದ ಉಟ್ಟು. ಇದ್ ಕಡೆ ಮತ್ತೆ ಕೊಡಿಲಿ ಹಳ್ಳ ತೋರ ಇದ್ದ್ ನಡುಲಿ ಸಪೂರ ಉಟ್ಟು. ಇದರ ಒಂದ್ ಕೊಡಿಲಿ ಕಬ್ಬಿಣಂದ ಮಾಡ್ದ ಬಳೆ ಉಟ್ಟು. ಅದ್ಕೆ ಕಂಕಣತ ಹೇಳ್‌ವೆ. ಒನ್ಕೆನ ಹೆಚ್ಚಾಗಿ ಚಾಳೆ, ತಾಳಿ ಮರಂದ ಮಾಡ್‌ವೆ. ಅದ್ ಅಲ್ಲರ್ ಗಟ್ಟಿ ಇರ್‌ವ ಕೆಲವು ಮರಂದಲೂ ಮಾಡ್‌ವೆ. ಇದರ ಮರದ ಆಚಾರಿಗ ಮಾಡ್‌ವೆ.

ಬತ್ತಂದ ಅಕ್ಕಿ ಮಾಡಿಕೆ ಬೇಸಿ ಒಳ್‌ಂಗಿಸಿದ ಬತ್ತನ ನೆರ್‌ಗುಳಿಗೆ ಹಾಕಿ ಇದರ್‌ಲಿ ಮಿಜೇದು. ಮಿಜೇದುಂತೇಳಿರೆ ನೆರ್‌ಗುಳಿಗೆ ಬತ್ತ ಹಾಕಿ ಒನ್ಕೆನ ಎತ್ತಿ ಎತ್ತಿ ಕುಟ್ಟುದು. ಒಬ್ಬನೇ ಕುಟ್ಟದು ಇಬ್ಬೊರು ಕುಟ್ಟುದು ಮೂರ್ ಜನ ಕುಟ್ಟುದೂ ಉಟ್ಟು. 'ಆಗಸಲಿ ಹಾರ್‌ದೆ ಗಿಡ್‌ಜ್ಜ ಅದರ ಕಾಲ್‌ಗೆ ಬೆಳ್ಳಿ ಕಡ್‌ಗ ಅದರ ಮಾಡ್ತ್ ಬಡಗಿ ಹೈದ' – ಉತ್ತರ ಒನಕೆ ತೇಳುವ ಒಡ್ಪೋ ಕತೆನೂ ಉಟ್ಟು. (ಎಂ.ಜಿ.ಕೆ.)

**ಒರಳ್ ಕಲ್ಲ್ :** ಎಲೆ ಅಡಿಕೆ ಗುದ್ದಿಕೆ ಇರ್‌ವ ಕಲ್ಲ್. ಇದರ ಒರ್‌ಳ್ ಕಲ್ಲ್‌ಂತ ಹೇಳ್‌ವೆ. ಇದ್ ಹೆಚ್ಚ್ ಕಮ್ಮಿ ನೂರು ವರ್‌ಸಂದ ಬಳಕೆಲಿ ಉಟ್ಟು. ನೋಡಿಕೆ ಸಣ್ಣ ಕಡ್ಕಲ್‌ನ ಹಾಂಗೇ ಉಟ್ಟು. ಅದರೆ ಕಡ್ಕಲ್‌ನ ಹಾಂಗೆ ಪುಡೆಲಿ ಜಾಗೆ ಇಲ್ಲೆ, ಬರೇ ಗುಂಡಿ ಮಾತ್ರ ಉಟ್ಟು. ಗುದ್ದುವ ಕಲ್ಲ್ ಕಡ್ಕಲ್ಲ್ ಗುಂಡು ಕಲ್ಲ್‌ನ ಹಾಂಗೆ ಇರದೆ ಹಳ್ಳ ಸಪೂರ ಆಗಿ ಗೇಣ್‌ನಸ್ಟೇ ಉದ್ದ ಉಟ್ಟು. ಇದರ ಕರ್‌ಗಲ್‌ಂದ ಮಾಡ್ದು. ಒಳ್ಳ ಕರ್‌ಗಲ್ಲ್‌ಲಿ ಕಲ್ಲ್ ಕುಟಿಗರೇ ಇದರ ಮಾಡ್‌ವೆ. ಪ್ರಾಯದವುಕೆ ಎಲಾಡ್ಕೆ ತಿಂಬೊಕರ್ ಅಡಿಕೆನ ಅಗೆಕೆ ಆದುಲೆ. ಯಾಕೆಂತೇಳಿರೆ ಅವರ ಹಲ್ಲ್ ಉದುರಿದ್ದದೆ, ಅಲ್ಲರ್ ಹಲ್ಲ್ ಬೇನೆ ಉಟ್ಟು. ಹಾಂಗಾಗಿ ಅಡಿಕೆನ ಗುದ್ದೊಕಾದೆ. ಅಡಿಕೆ ಮತ್ತೆ ಸುಣ್ಣ ಪೂಜಿದ ಎಲೆನ ಗುಂಡಿಗೆ ಹಾಕಿ ಗುದ್ದುವ ಕಲ್ಲ್‌ಲಿ ಗುದ್ದುವೆ. ಆಗ ಅಡಿಕೆನೊಟ್ಟಿಗೆ ಎಲೆ ಸಣ್ಣದಾದೆ. ಅದರ ಬಾಯಿಗೆ ಹಾಕಿ ಅಜ್ಜ ಅಜ್ಜಿಗ ಇಜ್ ಇಜ್ ಮಾಡಿಕನ್ ಇದ್ದವೆ. ಈ ಕಲ್ಲ್‌ಲಿ ಎಲೆ ಅಡಿಕೆ ಮಾತ್ರ ಗುದ್ದುದು ಅಲ್ಲ. ಮೊದ್ದುನ ಸೊಪ್ಪು, ಮೊದ್ದುನ ಬೇರ್, ಗೆಯ್ಪುಗೆ ಬೇಕಾದ ಬೆಳ್ಳುಳ್ಳಿ, ಶುಂಟಿ, ಒಳ್ಳಮೆಣಸ್, ಏಲಕ್ಕಿ ಹಿಂಗೆ ಎಂತ ಬೇಕಾರು ಗುದ್ದಿಕೆ ಆದೆ. ಕೆಲವ್ ಕಡೆ ಮರಂದ ಮಾಡ್ದ ಒರಳ್ ಕಲ್ಲ್ ಸ ಉಟ್ಟು. (ಎಂ.ಜಿ.ಕೆ.)

**ಕಿಡಿಂಜೋಳು/ಪಣೆ/ಗೊರಗೆ :** ಕಿಡಿಂಜೋಳು, ಪಣೋಳಿ, ಗೊರಗ್ ತೇಳಿರೆ ಮಳೆ ಬಾಕನ ನೆನೆಯದ ಹಾಂಗೆ ತಲೆಗೆ ಹಾಕಿ ಕೆಲ್ಸ ಮಾಡಿಕಾವ ಒಂದ್ ಸೊತ್ತು. ಕಿಡಿಂಜೋಳ್‌ಗೆ ಅರೆಬಾಸೆಲಿ ಮತ್ತೆ ತುಳುಲಿ ಕೆಡೆಂಜೋಳು ತ ಹೇಳ್ರೆ ಕನ್ನಡಲಿ ಗೊರಬೆತ ಹೇಳ್ವೆ. ಕಿಡಿಂಜೋಳುನ ಚಾಳೆ ಮಡ್ಲ್‌ಂದ ಮಾಡ್ದು. ಇದ್ದರ್‌ಲಿ ಒಳ್ಳ ಬೆಳ್ದ ದೊಡ್ಡ ಮಡಲ್‌ನ ತೆಗ್ದ್ ಕಿಚ್ಚಿಲಿ ಬಾಡ್ಸಿ ಅದರ ಬುಡ್ಸಿ ಸೂಂಪೆನ ಹಾಂಗೆ ಸುತ್ತಿ ಒಳ್‌ಂಗಿಕೆ ಇಸ್‌ವೆ. ಕಿಡಿಂಜೋಳು ಮಾಡಿಕಾಕನ ಒಳ್‌ಂಗಿದ ಮಡ್ಲ್‌ನ ನೀರ್‌ಲಿ ಕಂತ್ಸಿ ಬುಡ್ಸಿಕಾಂಕು. ಒಂದೂವರೆ ಗೇಣ್‌ನಸ್ಟ್ ಬೆದ್ರ್ ನಾಲ್ಕ್‌ಐದ್ ಕಡ್ಡಿನ ಪೊರ್‌ಲು ಕೀಸಿ ಬಾಸ್ ಮಾಡಿ ಒಂದ್ ಕೊಡಿ ಚೂಪು ಮಾಡಿಕಾಂಕು. ಇನ್ನೊಂದು ಕಡೆಲಿ ಅಂದಾಜ್ ಎರಡಿಂಚಿನಸ್ಟ್ ಸೀಳಿಕಾಂಕು. ಇದ್ಕೆ ನಾರ್‌ಕಣೆ ತ ಹೇಳ್ವ ಒಂದ್ ಜಾತಿ ದೆಯ್ಯಿನ ಚೋಲಿ ತೆಗ್ದ್ ಒಳ್‌ಂಗಿಸಿ ಮಾಡ್ದ ಗಟ್ಟಿ ಬೊಳ್ಳಿ ಬೇಕು. ಗಟ್ಟಿ ಇರ್‌ವ ಬೇರೆ ಬೊಳ್ಳಿನು ಸಾ ಆದೆ.


ಕಿಡಿಂಜೋಳು

ಮೆತ್ತಂಗೆ ಆದ ಮಡ್ಲ್‌ನ ಬುಡ್ಸಿಕಾಂಕು. ಸುರೂಗೆ ಎರಡ್ ಮಡ್ಲ್‌ನಬಟ್ಟಿಗೆ ಒಂದರ ಮೇಲೆ ಒಂದ್ ಇಸಿಕಾಂಕು. ಕಡ್ಡಿ ಇರ್‌ವಲ್ಲಿ ನಡೂಲಿ ಮಡ್ಚಿದ್ ಅದರ ಎಡೆಲಿ ಇನ್ನೆರಡ್ ಬುಡ್ಸಿದ ಮಡ್ಲ್‌ನ ಇಸಿದ್ ಬೆದ್ರ್ ಕಡ್ಡಿಲಿ ಅಂದಾಜ್ ಮುಕ್ಕಾಲ್ ಗೇಣ್‌ಗೆ ಒಂದರ ಹಾಂಗೆ ಕುತ್ತಿಕಾಂಕು. ಎಲ್ಲಾ ಮಡ್ಲ್‌ನ ಕಡೆ ಒಂದೇ ಸಮ ಇರ್‌ವ ಹಾಂಗೆ ಇಸೊಕು. ಮತ್ತೆ ಅದರ ಎಡೆಗೆ ಇನ್ನೆರಡ್ ಮಡ್ಲ್‌ನ ಜೋಡ್ಸಿ ಕುತ್ತಿಕಂಡ್ ಹೋಕು. ಹೀಂಗೆ ಕಡ್ಡಿನ ಮುಕ್ಕಾಲ್ ಬಾಗ ಕುತ್ತಿದ ಮೇಲೆ ಕಡ್ಡಿನ ಕಡೆಲಿ ಸೀಳ್ ಮಾಡ್ದರ ಒಳಗೆ ಬೊಳ್ಳಿನ ಸುರ್‌ದ್ ಕಡ್ಡಿನ ಎಳೆಕು. ಮತ್ತೆ ಮಡ್ಲ್‌ನ ಎಡೆಗೆ ಮಡ್ಲ್ ಸೇರ್‌ಸಿಕಂಡ್ ಹೋಗಿ ಎಸ್ಟ್ ದೊಡ್ಡ ಕಿಡಿಂಜೋಳು ಬೇಕೋ ಅಸ್ಟ್ ಮಡ್ಲ್ ಜೋಡ್ಸೊಕು. ಅಕೇರಿಗೆ ಸುರೂಲಿ ಮಾಡ್ದ ಹಾಂಗೇ ಎರಡ್ ಮಡ್ಲ್‌ನ ಸಿಕ್ಕಿಸಿ ಮುಗ್ಸೊಕು. ಎಲ್ಲಾ ಕಡೆಲೂ ಮಡ್ಲ್ ಲಾಯ್ಕ್‌ಲಿ ಒಂದರ ಒಳಗೆ ಇನ್ನೊಂದು ಸರಿ ಕುದ್ದುಟೋ ತ ನೋಡಿ ಎಳ್ದ್ ಸರಿ ಮಾಡಿಕಾಂಕು. ಎರಡೂ ಪುಡೆಗೂ ಬೆತ್ತ ಅಲ್ಲರ್ ಬೆದ್ರ್‌ನ ಅಂದಾಜ್ ಒಂದ್ ಅಂಗುಲದಸ್ಟ್ ಅಗಲ ಇರ್‌ವಾಂಗೆ ಉದ್ದಕ್ಕೆ ಸೀಳಿ ಕೀಸಿ ಲಾಯ್ಕ್ ಮಾಡಿ ಕಿಡಿಂಜೋಳುನ ಉದ್ದಕ್ಕೆ ಇಸಿ ಒಳ್ದ ಬೊಳ್ಳಿನ ಮೊಡ್‌ಚಿ ಮಡ್ಲ್‌ನ ಸುರಿಯೊಕು. ಆಗ ಕಿಡಿಂಜೋಳು ನೆಟ್ಟಂಗೆ ನಿಲ್ಸಿಕೆ

ಆದೆ. ಮತ್ತೆ ಅದರ ಕೊಡಿಗೆ ದಬ್ಬಣಕ್ಕೆ ಬೊಳ್ಳಿ ಸುರ್ದ್ ಹೊಲಿಗೆ ಹಾಕೊಕು. ಹೊಲಿಗೆ ಹಾಕಿ ಆದ ಮೇಲೆ ಉಳ್ದ ಮಡ್ಲ್‌ನ ಕತ್ರ್‌ಸಿ ಬುಡೊಕು. ಕಿಡಿಂಜೋಳುನ ಹಾಂಗೇ ಪಣೆಂತೇಳುವ ಮರದ ಸೋಗೆಲಿ ಸ ಮಾಡ್‌ವೆ. ಮತ್ತೆ ಕೆಲವು ಕಡೆ ದಪ್ಪಕೆ ದೊಡ್ಡಕೆ ಇರ್‌ವ ಸೊಪ್ಪುನ ಜೋಡ್ಸಿ ಹೊಲಿಗೆ ಹಾಕಿ ಸ ಮಾಡ್‌ವೆ. ಆದರೆ ಇಂತಹ ಕಿಡಿಂಜೋಳುನ ಮೊಡ್ಚಿಕೆ ಆದುಲೆ. ಕಿಡಿಂಜೋಳುನ ಎಲ್ಲಾ ಜಾತಿ ಸಮುದಾಯದವು ಮಾಡ್‌ವೆ. ಹೆಳ್ಮಕ್ಕ ಸ ಮಾಡ್ವೆ. ಮಳೆ ಬಾಕನ ಕಿಡಿಂಜೋಳುನ ತಲೆಗೆ ಹಾಕಿ ಸೊಪ್ಪು, ಹುಲ್ಲು, ಗದ್ದೆ ಕೆಲ್ಸ, ತೋಟದ ಕೆಲ್ಸ ಎಲ್ಲ ಮಾಡಿಕಾದೆ.

ಹಿಂದೆನ ಕಾಲಲಿ ಎಲ್ಲೊವುಕೂ ಕಿಡಿಂಜೋಳು ಬೇಕಾಗಿತ್ತ್. ಮಕ್ಕ ಸಾಲೆಗೆ ಹೋಕೆ ಸ ಕಿಡಿಂಜೋಳೇ ಬೇಕಾಗಿತ್ತ್. ಮಳೆಗಾಲ ಚಂಡಿ ಆದ ಕಿಡಿಂಜೋಳುನ ಕತ್ತಲೆಗೆ ಮಲ್ಗಿಕೆ ಮುಂದೆ ಬೆಸೆಗೆಲಿ ಅಲ್ಲರೆ ಒಲೆ ಚಿಂಟೆಲಿ ಇಸುತ್ತಿದ್ದೊ. ಹಾಂಗೆ ಇಸಿರೆ ಬೊಳ್ಪಾಕನ ಕಿಡಿಂಜೋಳು ಪೊರ್‌ಲು ಒಳ್‌ಂಗಿದೆ. ಲಾಯ್ಕ್ ಒಳ್‌ಂಗಿರೆ ಅದ್ ಜಾಸ್ತಿ ಬಾಳ್ತರ ಬಂದದೆ. ನಮ್ಮ ಹಿಂದೆನ ತಲೆಮಾರ್‌ನವು ಬೇಸಾಯನ ಮಾಡಿಕಂಡ್ ಬಂದೊವು. ಅವು ಚಳಿ, ಮಳೆ, ಗಾಳಿ, ಬಿಸ್ಲ್‌ಂತ ನೋಡದೆ ಇಡೀ ದಿನ ಗೆಯ್ಯೋದೆ ಬೊದ್ಕಾಗಿತ್ತ್. ಆಗಲೇ ಮಳೆಗಾಲ ಗದ್ದೆ, ತೋಟದ ಕೆಲ್ಸಕ್ಕೆ ಕಿಡಿಂಜೋಳು ಮಾಡಿಕಂಡಿರ್‌ವೊ. (ಎಂ.ಜಿ.ಕೆ.)

**ಕದಿಕೆ :** ಅರೆಬಾಸೆ ಪ್ರದೇಸಲಿ ಬತ್ತ ಅಲ್ಲರ್ ಅಡಿಕೆನ ಇಸಿಕೆ ಆವ ಒಂದ್ ಬಗೆ ಸೊತ್ತು. ಗದ್ದೆ ಬೇಸಾಯ ಮಾಡ್‌ವ ಮನೆಗಳ್‌ಲಿ ಇದ್ ಇರೊಕಾದ ಸೊತ್ತು. ಬೆದ್ರ್‌ಂದ ಅಲ್ಲರ್ ಅಮೆ ಓಟೆಂದ ಇದರ ಮಾಡಿಕಾದೆ. ಸುರುಲಿ ಬೆದ್ರ್‌ನ ಹಳ್ಳು ತೋರ ಇರ್‌ವ ಹಾಂಗೆ ಎರಡ್ ಸಲಿಕೆ ಮಾಡಿಕಾಂಕು. ಬಾಗ ಮಾಡ್ದ ಬೆದ್ರ್‌ನ ಅಂದಾಜ್ ಒಂದ್ ಅಂಗುಲದಸ್ಟ್ ಸೀಳಿ ತೆಳ್ಳಂಗೆ ಕೀಸಿ ಪೊರ್‌ಲ್ ಮಾಡಿಕಾಂಕು. ಅದರ ಮೊಂದ್ರಿನ ಹಾಂಗೆ ಸೆರೆ ಇಲ್ಲದ ಹಾಂಗೆ ಮೆಡೆಕು. ಹೀಂಗೆ ಮೆಡೆಕನ ಅದರ ಎರಡೂ ಕಡೆಲೂ ಸುರೂಲಿ ಮಾಡ್ದ ಸಲಿಕೆ ಇರ್‌ವ ಹಾಂಗೆ ಮಾಡಿಕಾಂಕು. ಹೀಂಗೆ ಮೆಡೆಕನ ಸಲಿಕೆ ಮೊಂದ್ರಿನ ಎರಡೂ ಕಡೆಲೂ ಹಳ್ಳು ಜಾಸ್ತಿ ಇರ್‌ವ ಹಾಂಗೆ ನೋಡಿಕಾಂಕು. ಕದಿಕೆ ಅಂದಾಜ್ ಐದ್ ಅಡಿ ಅಗಲ ಹತ್ತ್ ಅತವಾ ಕೊಂಬರೆ ಉದ್ದ ಅಗಲ ಹೊಂದಿಕೊಂಬಾಂಗೆ ಉದ್ದ ಉಟ್ಟು. ಹೀಂಗೆ ಮೆಡ್ದ ಮೇಲೆ ಅದರ ಎರಡೂ ಪುಡೆಗೂ ಸೆಗಣಿ ಮೆತ್ತುವೆ. ಸೆಗಣಿಗೆ ಮೊಣ್ಣ್ ಬೆರ್‌ಸಿನೂ ಮೆತ್ತುವೆ. ಮೆಂತೆ ಮತ್ತೆ ಪೇಪರ್‌ನ ನೆನೆಹಾಕ್‌ವೆ. ಅದರ ಕಡ್ದ್ ಮೆತ್ತಿ ಬಿಸಿಲ್‌ಲಿ ಒಣ್‌ಗಿಸಿರೆ ಹೆಚ್ಚಿ ಸಮೆ ಬಾಳಿಕೆ ಬಂದದೆ. ಕೊರಗರ್, ಅಜಲರ್, ಮಲೆಕುಡಿಯ ಸಮುದಾಯದವು ಕದಿಕೆನ ಮೆಡ್ದವೆ. ಬೇರೆ ಸಮುದಾಯದ ಜನಗ ಸ ಮೆಡ್ದವೆ. ಏಣೆಲ್ ಬೇಸಾಯಲಿ ಬೆಳ್ದ ಬತ್ತನ ಹೊಡ್ಕಿ ಬಿಸಿಲ್‌ಲಿ ಒಣಂಗಿಸಿ ದಾಸ್ತಾನ್ ಇಸಿಕಾಕನ ಕದಿಕೆ ಬೇಕಾದೆ. ಬತ್ತ ಹಾಳಾಗದ ಹಾಂಗೆ ಜಾಗ್ರತೆಲಿ ಇಸಿಕೆ ಕದಿಕೆಲಿ ಹಾಕಿಸಕ್. ಮನೆ ಒಳಗೆ ಬೆಚ್ಚಂಗೆ ಇರ್‌ವ ಕೋಣೆಲಿ ಬಿಳ್ಗ್‌ಲ್‌ನ ದಪ್ಪಕ್ಕೆ ಹರ್‌ಂಡಿ ಕದಿಕೆ ಕಟ್ಟುವೆ. ಬತ್ತ ತುಂಬಿಸಿಕೆ ಬೇಕಾದಸ್ಟ್ ದೊಡ್ಡದ್ ಮಾಡಿ ಕದಿಕೆ ಕಟ್ಟುವೆ. ಕದಿಕೆನ ಬುಡ್ಸಿ ನೆಲಲಿ ಹರ್‌ಂಡಿದ ಬಿಳ್ಗ್‌ಲ್ ಮೇಲೆ ನಿಲ್ಸೊಕು. ಬರೇ ನೆಲಲಿ ಹಾಕಿರೆ ತೊಂಪು ಸೀತಂದ ದಾಸ್ತಾನ್ ಇಸಿದ ಬತ್ತ ಹಾಳಾದೆ. ಹಂಗಾಗಿ ಸುರೂಗೆ ಉಂಡೈ ಬಿಳ್ಗ್‌ಲ್ ಹಾಕಿ ಅದರ ಮೇಲೆ ದಪ್ಪಂಗೆ ಬಿಳ್ಗ್‌ಲ್ ಹರ್‌ಂಡೊಕು. ಕದಿಕೆನ ಎರಡೂ ಪುಡೆಲಿರುವ ಕೊಮ್ಮುನ ಸಲಿಕೆ ಅಲ್ಲರೆ ಬೆದ್ರ್‌ನ ಅಟ್ಟೆನ ಹಕ್ಕಲೆ ಮಾಡಿ ಎಳ್ದ್ ಕಟ್ಟೊಕು. ಮತ್ತೆ ಅದರೊಳಗೆ ಬತ್ತನ ಸರ್‌ಯೊಕು.. ಬತ್ತ ತುಂಬ್‌ಸಿ ಆದ ಮೇಲೆ ಮೇಲೆಂದ ಮತ್ತೆ ಬಿಳ್ಗ್‌ಲ್ ಹರ್‌ಂಡ್‌ವೆ. ಹೀಂಗೆ ಮಾಡಿರೆ ಬತ್ತ ಬೆಪ್ಪಂಗೆ ಇದ್ದ್ ಹಾಳಾದುಲೆ. ಈ ಕದಿಕೆನ ಮನೆಲಿ ಜಂಬರ ಇರಿಕನ ಚಪ್ಪರದ ಸುತ್ತೊಳು ಮದೆ ಮಾಡಿಕೆ, ಬೂತದ ಕೊಡಿಯಡಿನ ಸುತ್ತೊಲು ಕಟ್ಟ್‌ತಿದ್ದೊ. ಬತ್ತ ಬೇಸಾಯ ಕೈದ್ ಆದ ಮೇಲೆ ಕದಿಕೆಲಿ ಅಡಿಕೆ ತುಂಬಿಸುತ್ತಿದ್ದೊ. ಈಗಲೂ ಬತ್ತ ಬೇಸಾಯ ಇದ್ದೊವು, ಅಡಿಕೆ ತೋಟದವು ಕದಿಕೆನ ದಾಸ್ತಾನ್ ಮಾಡಿಕೆ ತ ಬಳಸ್‌ವೆ. (ಎಂ.ಜಿ.ಕೆ.)

**ಕೊಮ್ಮೆ :** ಬತ್ತ, ರಾಗಿ ಹಾಕಿಸುವ ಕಳಸೆನಾಂಗೆ ಕಾಂಬ ದೊಡ್ಡ ದಾಸ್ತಾನ್ ಸಾದನ. ಇದ್ ಬೆದ್ರ್‌ನಬಾಸ್ಲ್‌ಲಿ ಅಲ್ಲರ್ ಬೆತ್ತದ ಬಾಸ್‌ಲಿ ಮಾಡ್ದ ಕುಕ್ಕೆ. ಇದರ ಮಾಯ್ಲರ್, ಅಜಲರ್, ಮಲೆಕುಡಿಯರ್ ಮಾಡ್‌ವೆ. ಇದರ ಒಳಗೆ ಗಾಳಿ ಹೋಗದ ಹಾಂಗೆ ಒಳ ಪುಡೆಗು ಹೊರ ಪುಡೆಗೂ ಸೆಗ್ಣಿ ಉಜ್ಜಿ ಲಾಯ್ಕ್ ಮಾಡ್‌ವೆ. ಸೆಗಣಿನ ಒಟ್ಟಿಗೆ ಮೊಣ್ಣುನ ಬರ್‌ಸುವೆ. ಇದರ್‌ಲಿ ಬತ್ತ, ರಾಗಿ, ಅಕ್ಕಿ ಯಾವ್ದ್ ಬೇಕಾರ್ ಹಾಕಿಸಿ ಮುಚ್ಚಿಸಿರೆ ಎಸ್ಟ್ ದಿನಕೂ ಹಾಳಾಕಿಲೆ. ಬೆಪ್ಪಂಗೆ –ಬೆಚ್ಚಂಗೆ ಉಟ್ಟು. ಇದರ್‌ಲಿ ಸುಮಾರ್ 5 ಕಳ್‌ಸಿಗೆ ಅಕ್ಕಿ / ಬತ್ತ ಹಿಡ್ದದೆ. ಬೇಸಾಯ ಮಾಡ್‌ವ ಎಲ್ಲಾ ಊರ್‌ಲೂ ಇದ್ ಉಟ್ಟು. ಇದರ ನೊಡೂಲಿ ದೊಡ್ಡದಾಗಿ ಕಾಂಬೊದರ್‌ಂದ ದೊಡ್ಡ ಹೊಟ್ಟೆವುಕೆ ಕೊಮ್ಮೆ ಬಂದುಟು ತ ತಮಾಸೆ ಮಾಡ್ದು ಉಟ್ಟು. (ಎಂ.ಜಿ.ಕೆ.)


ಕೊಮ್ಮೆ

**ಕೊರಿಂಗೆ :** ನಾರ್ ಜಾತಿ ಮರಂದ ಕೊರಿಂಗೆ ಮಾಡ್‌ವೆ. ಕೆಲವು ಜನಂಗ ಬೈನೆ ಹಾಳೆನ ಒಣ್‌ಗ್‌ಸಿದ್ ಮಾಡ್‌ವೆ. ಮರಂದ ಮಾಡ್ದ ಕೊರಿಂಗೆ ಹೆಚ್ಚ್ ಸಮಯ ಬಾಳ್ತರ ಬಂದದೆ. ಇದ್ ನೋಡ್ಕನ ಕೈ ಮರ್‌ಗ್ಗಿಲ್‌ನಂಗೆ ದೂರಕೆ ಕಂಡದೆ. ಆದರೆ ಇದರ ಬಾಯಿಪುಡೆ ನೀರ್ ಚೊಂಪಿಕೆ ಸುಲಬ ಆವಂಗೆ ಬಾಜಿಲಿ ಕೆತ್ತಿ ಮಾಡ್‌ವೆ. ಹಿಂದೆ ಅಡಿಕೆ ತೋಟಕೆ ಬುಡ್ ನೀರ್ ಇರ್‌ವ ಕಡೆ ನೀರ್ ಚೊಂಪಿಕೆ ಉಪಯೋಗ ಆತಿತ್. ಡ್ರಿಪ್, ಸ್ಪಿಂಕ್ಲರ್ ಬಂದ ಮೇಲೆ ಇದ್ ನಿತ್ತ್ ಹೋತ್. ಕೆಲವು ಮನೆಗಳ್‌ಲಿ ಕೊಟೆಗೆ ಅಟ್ಟಲಿ ಹಳೆ ಕೊರಿಂಗೆಗ ಕಂಡವೆ. ಈ ಕೊರಿಂಗೆಗೆ ಎದ್‌ರ್‌ಲಿ ಒಟ್ಟೆ ಮಾಡಿ ಬೊಳ್ಳಿ ಕಟ್ಟಿ ಎಡ್ದ ಕೈಲಿ ಹಿಡ್ದ್ ಬಲ್ದ ಕೈಲಿ ಕೊರಿಂಗೆನ ಹಿಡಿಲಿ ಹಿಡ್ದ್ ನೀರ್‌ನ ಚೋಂಪುದು ಒಂದ್ ಚಾಲಾಕ್‌ನ ಕೆಲ್ಸ. ಅಬ್ಬೆಸ ಮಾಡ್ಡೆತ್ತಾರ್ ಕೊರಿಂಗೆಲಿ ನೀರ್ ಚೋಂಪಿಕೆ ಸಾದ್ಯನೆ ಇಲ್ಲೆ. ಹಿಂದೆನವು ಸುಲಬ ರೀತಿಲಿ ಯಾಂತ್ರಿಕ ಉಪಯೋಗನ ಮಾಡ್ತಿದ್ದೊ ತ ಹಿಂಗೆ ನಮ್ಮ ಗಮನಕ್ಕೆ ಬಂದದೆ. ದೊಡ್ಡ ಮಟ್ಟಲಿ ಚೊಂಟೆಲಿ ನೀರ್ ಮೊಗ್ಚುದು ಹಿಂದೆ ಇತ್. ಕೊರಿಂಗೆ ಅದರ ಸುಲಬ ಮತ್ತೆ ಸರಳ ರೂಪ. (ಕು.ಶಿ.)

**ಚೊಂಟೆನ ಮರ್‌ಗಿಲ್ :** ನೀರ್ ಮೇಲೆ ಎತ್ತಿ ತಾಕೆ ಆವ ಒಂದ್ ಸೊತ್ತು. ಇದ್ಕೆ ಚೊಂಟೆನ ಮರ್‌ಗಿಲ್‌ತ ಹೇಳ್‌ವೆ. ಈ ಮರ್‌ಗಿಲ್‌ನ ಸತ್ತ ಬಾಳೆ, ಬೈನೆ ಅಲ್ಲರ್ ತಾಳೆ ಮರದ ಬುಡನ(ನೆಲದ ಒಳಗೆಂದಲೇ) ಕಡ್ದ್ ಕೆತ್ತಿ ಮಾಡ್ದು. ಈ ಮರ್‌ಗಿಲ್‌ಗೆ ಸತ್ತ ಮರ ಆದರೆ ಅದರ ಒಳಗಿದ್ದದರ ತೆಗೆಕೆ ಸುಲಾಬ ಆದೆ. ಮರ್‌ಗಿಲ್‌ನ ನಡುಲಿ ಅಡಿ ಪುಡೆಗೆ ಒಟ್ಟೆ ಮಾಡಿ ಅದ್ಕೆ ಮರದ ತುಂಡುನ ಗೂಟದ ಹಾಂಗೆ ಹುಗ್ಸಿ ಗಟ್ಟಿ ಮಾಡಿಕಾಂಕು. ಅದರ ಒಳ ಪುಡೆಲಿ ಗೂಟಕ್ಕೆ ಸುತ್ತೊಳು ಕೈ ತಾಂಗ್‌ನ ಹಾಂಗೆ ಇಸಿ ಗಟ್ಟಿ ಮಾಡಿಕಾಂಕು. ಆ ಗೂಟದ ಮರದ ತುಂಡುನ ಮರ್‌ಗಿಲ್‌ನ ಬಾಯಿಂದ ಹಣ್ಣಮೇಲೆಂದ ತುಂಡು ಮಾಡಿ ಅದ್ಕೆ ಒಟ್ಟೆ ಮಾಡಿಕಂಡವೆ. ಇದರ ಚಿಮುಣೆಣ್ಣೆ ಡಬ್ಬಿಂದಲೂ ಮಾಡಿಕಾದೆ. ಇದರ ಮಾಡಕರ್ ಮರದ ಆಚಾರಿಗಳೇ ಬೇಕು.

ಆಳಲಿ ಇರ್‌ವ ನೀರ್‌ನ ಮೇಲೆ ಎತ್ತಿ ತಾಕೆ ಹಿಂದೆನವು ಚೊಂಟೆಂತೇಳುವ ಒಂದ್ ಸೊತ್ತುನ ಮಾಡಿಕಂಡಿದ್ದ. ಆ ಚೊಂಟೆಲಿ ನೀರ್‌ನ ಮೇಲೆ ಎತ್ತಿ ತರೋಕುಂತಾದರೆ ಅದ್ಕೆ ಮರ್‌ಗಿಲ್ ಬೇಕು. ಮೊಯಿಂಸರ್ ಬೇಸಾಯ ಮಾಡಿಕೆ ಸುರು ಮಾಡಿಕನವೇ ಕಲ್ತಿರುವ ಕೆಣಿ. ಹಳ್ಳಿಲಿ ಅಲ್ಲಲ್ಲಿ ಚೋಡಿ, ಹಳ್ಳ ಪಳ್ಳಗ ಎಲ್ಲ ಉಟ್ಟು. ಅದರ್‌ಂದ ನೀರ್ ಎತ್ತರದ ಜಾಗೆಗೆ ಹೊತ್ತ್‌ಕಂಡ್ ಹೋಕೆ ಹಣ್ಣ ಬಜ ಆದೆ. ಅದ್ಕೆ ಈ ಕೆಣಿ ಕಲ್ತಿರೋಕು.

ಹಳ್ಳಪಳ್ಳದ ನಡೂಗೆ ಆಗುವ ಹಾಂಗೆ ಅದರ ಎರಡೂ ಕರೆಲಿ ಕಂಬ ಹಾಕಿ ಅದರ ಕೊಡಿಲಿ ಅದ್ಕೆ ಅಡ್ಡಕ್ಕೆ ಒಂದ್ ಮರ ಅಲ್ಲರ್ ಕಮ್ಮುನ ಕಟ್ಟಕು. ಅಲ್ಲಿಂದ ಎತ್ತರದ ಪುಡೆಗೆ ಒಂದ್ ತೋಳುನಸ್ಟ್ ಅಗಲಕ್ಕೆ ಪಾಲ ಹಾಕೊಕು. ಪಾಲದ ಕರೆಲಿ ಒಂದ್ ದಂಬೆನ ಎತ್ತರಲಿರುವ ಮತ್ತೊಂದ್ ಕಡೆಗೆ ಜೋಡ್ಸುವೆ. ಮತ್ತೆ ಎತ್ತರದ ಪುಡೆಲಿ ಹಳ್ಳದ ಕರೆಲಿ ಎತ್ತರದ ಎರಡ್ ಕಂಬ ಹಾಕಿ ಅದ್ಕೆ ಅಡ್ಡ ಕಟ್ಟೊಕು. ಆ ಅಡ್ಡಕ್ಕೆ ನಡೂಲಿ ಉದ್ದದ ಕೊಮ್ಮು ಅಲ್ಲರ್ ಸಪೂರದ ಮರದ ಕಂಬನ ಇಸಿ ಜಾರದ ಹಾಂಗೆ ಕಟ್ಟೊಕು. ಆ ಅಡ್ಡ ಕಂಬದ ಮತ್ತೊಂದು ಕೊಡಿಗೆ ಬಾರದ ಕಲ್ಲ್ ಕಟ್ಟೊಕು. ಕಲ್ಲ್ ಕಟ್ಟಿಕನ ಅದರ ಮತ್ತೊಂದು ಕೊಡಿ ಮೇಲೆ ಹೋಕು. ಆಗ ಅದ್ ತ್ರಾಸ್‌ನ ಹಾಂಗೆ ಕಂಡದೆ. ಮೇಲೆ ಹೋದ ಕೊಡಿಗೆ ಸಪೂರದ ಗಳೆನ ನೇತಾಡುವ ಹಾಂಗೆ ಕಟ್ಟೊಕು. ಆ ಗಳೆ ಎಳೆಕನ ನೀರಿಗೆ ತಾಂಗುವ ಹಾಂಗೆ ನೇತಾಡಿಕನ್ ಇರೋಕು. ನೇತಾಡುವ ಗಳೆನ ಕೊಡಿಗೆ ಮರ್‌ಗಿಲ್ ಅಲ್ಲರ್ ಡೊಬ್ಬಿನ ನೊಡುಲಿರುವ ಮರದ ಒಟ್ಟೆಗೆ ಕೀಲ್ ಹಾಕಿ ಜೋಡ್ಸಿಕಾಂಕು.

ಕಲ್ಲ್‌ನ ಬಾರಕ್ಕೆ ಚೊಂಟೆನ ಕಡೆ ನೆಲಕ್ಕೆ ತಾಂಗಿದೆ. ಹಳ್ಳ ಅಲ್ಲರ್ ಚೋಡಿನ ನಡುಗೆ ಎತ್ತರಲಿರುವ ಪಾಲಲಿ ನಿಂತ್ ಗಳೆನ ಎಳ್ದ್ ನೀರಿಗೆ ಕಂತ್ಸಿ ಮರ್‌ಗಿಲ್‌ಗೆ ನೀರ್ ತುಂಬುಸೊಕು. ನೀರ್ ತುಂಬಿದ ಮೇಲೆ ಏತನ ಮೇಲೆ ಎತ್ತೊಕು. ಮೇಲೆ ಎತ್ತಿಕೆ ಬಜ ಆದುಲೆ ಯಾಕೆಂತೇಳಿರೆ ಕಡೆಲಿ ಕಲ್ಲ್‌ನ ಬಾರಕ್ಕೆ ಅದ್ ಸುಲಾಬಲಿ ಮೇಲೆ ಹೋದೆ. ನೀರ್ ಮೇಲೆ ಬಾಕನ ಮರ್‌ಗಿಲ್‌ನ ಬೊಗ್ಗಿಸಿ ದಂಬೆಗೆ ನೀರ್‌ನ ಮೊಗ್ಚೊಕು. ನೀರ್ ದಂಬೆಲಿ ಹರ್‌ದ್ ಹೋಗಿ ಅದರ ಕೊಡಿಲಿ ಮಾಡ್ದ ಗುಂಡಿಗೆ ಬಿದ್ದದೆ. ಅಲ್ಲಿಂದ ಮತ್ತೆ ಬೇಕಾದಲ್ಲಿಗೆ ತಕಂಡ್ ಹೋಗಿ ಹೊಯ್‌ಕಣಕ್. ಇಂತದೇ ಮರ್‌ಗಿಲ್‌ಲಿ ಹಿಂದೆ ಅಂಗಡಿಗಳ್‌ಲಿ ಉಪ್ಪು ತುಂಬಿಸಿ ಇಸ್‌ತಿದ್ದೊ. (ಎಂ.ಜಿ.ಕೆ.)

**ತೊಡಜ್ :** ಕತ್ತಿ ಕೆಲ್ಸ ಮಾಡವು ಸೊಂಟಕ್ಕೆ ಕಟ್ಟಿಕಂಡ 'ಕೊಕ್ಕೆ' ಬಳ್ಳಿನ ತೊಡಜ್‌ತ್ತೇಳಿವೆ. ಕತ್ತಿ ನೇಕೆನಂಗೆ ಸೊಂಟದ ಕೊಕ್ಕೆಗೆ ಕತ್ತಿನ ಸೆಕ್ಕಿಕಂಡವೆ. ಅದ್ ಕಬ್ಬಿಣದ ಕೊಕ್ಕೆ, ಸೊಂಟದ ಸರೀ ನಡುಲಿರುವಂಗೆ ಕಟ್ಟಿಕಂಡವೆ. ಹೆಚ್ಚಾಗಿ ಕೊಕ್ಕೆ ಕತ್ತಿನೇ ಸೆಕ್ಕಿಕಂಬೊದು ಜಾಸ್ತಿ. ಬೇಲಿ ದೈ ಕಡೆಕನ ಬೇಲಿ ಕಟ್ಟಕನ ಒಮ್ಮೆ ಕಡೆದು, ಹಿಂದೆ ಸೆಕ್ಕುದು. ಇಲ್ಲರೆ ಯಾವ್ದಾರ್ ಮರಕ್ಕೆ ಕೊಡ್ಪುವೆ ಅಲ್ಲರೆ ಬೇಲಿ ಕರೆಲಿಯೋ ನೆಲವೋ ಬಡ್ಕತ ಕತ್ತಿನ ಹಾಕಿ ಮರಿದಕೆ ಈ ತೊಡಜ್‌ನ ಕಟ್ಟಿಕಂಡವೆ.ಇದ್ ಇದ್ದರೆ ಕತ್ತಿ ಎಲ್ಲಿನೂ ತೊಪ್ಪಿ ಹೋದುಲೆ.ಮರ ಹತ್ತಿ ಕಳ್ಳ್ ಇಳ್‌ಸವ್ ಕೊಂಬು ಕೊಯ್ಯಕೆ ಉಪಯೋಗ ಮಾಡ್‌ವ ಕತ್ತಿನ ತೊಡಜ್‌ಲಿಕಂಡೆ ಮರ ಹತ್ತಿವೆ, ಇಳ್ದವೆ. (ಎಂ.ಜಿ.ಕೆ.)

**ನೇಕೆ :** ಕತ್ತಿ ನೇಲ್ಸಿ ಇಸುವ ಹತ್ಯಾರ್. ತುಳುಲಿ ಕತ್ತಿಕೋಲು, ಕನ್ನಾಜಿ ತ ಹೇಳ್‌ವೆ. ನೇಕೆನ ಸಪೂರದ ಬೆದ್ರ್ ಅಲ್ಲರ್ ಅಮೆ ಓಟೆಲಿ ಮಾಡಿಕಾದೆ. ಎರಡ್ ಅಲ್ಲರ್ ಮೂರ್ ಗಂಟ್ ಇರ್‌ವ ಓಟೆ ಅಲ್ಲರ್ ಬೆದ್ರ್ ತಕನ್ ಅದರ ಎರಡ್ ಪುಡೆಗೆ ಗಂಟ್‌ಂದ ಗಂಟಿಗೆ ಕತ್ತಿ ಹೋವಸ್ಟ್ ಸೀಳಿ ತೆಗೆಕು. ಮತ್ತೆ ಅದರ ಬೊಳ್ಳಿಲಿ ಎತ್ತರಲಿ ನೇತಾಡಿಸಿ ಕಟ್ಟುವೆ. ಇದರ ಯಾರೂ ಮಾಡಕ್. ಗದ್ದೆ ತೋಟ ಬೇಸಾಯ ಮಾಡ್‌ವ ಮನೆಲಿ ಬೇರೆ ಬೇರೆ ನಮೂನೆದ್ ಕತ್ತಿಗ ಉಟ್ಟು, ಕೆಯ್ಯಿ ಕೊಯ್ಯಕೆ



ನೇಕಿ

ಹಲ್ಲ್ ಕತ್ತಿ – ಗರಗಸದ ಹಾಂಗೇ ಹಲ್ಲ್ ಇರ್‌ವ ಕತ್ತಿ, ಹಾಂಗೇ ಸೊಪ್ಪು ಹೆರೆಕೆ ಹಲ್ಲಿಲ್ಲದ ಒಂದ್ ಕತ್ತಿ, ಹುಲ್ಲು ಹೆರೆಕೆ ಒಂದ್ ಹಳ್ಳಸಣ್ಣ ಕತ್ತಿ, ಸೌದೆ ಕಡೆಕೆ ದೊಡ್ಡ ಕತ್ತಿ – ಕಡ್ಪತ್ತಿ ಹಿಂಗೆ ನಮೂನೆ ನಮೂನೆದ್ ಕತ್ತಿ ಉಟ್ಟು. ಇದರ ಅಡಿಲಿ ಇಸಿರೆ ಮೊಣ್ಣ್ ಕಾರ್‌ದೆ. ಅದ್ಕೆ ಬೇಕಾಗಿ ಕತ್ತಿ ನೇಕೆಲಿ ಕತ್ತಿನ ನೇತಾಡ್ಸಿ ಇಸುವೆ. ಹಾಂಗೆ ಮನೆಗಳ್‌ಲಿ ಬಗೆ ಬಗೆನ ಕತ್ತಿಗ ಉಟ್ಟು. ಗಂಜಿ ಇಕ್ಕುವ ಸೆಡೆ, ಗೈಪು ಇಕ್ಕುವ ಸೆಡೆ, ಪೊಜ್ಜಿ ಇಕ್ಕುವ ಸೆಡೆ, ಪಾಯಸ ಇಕ್ಕುವ ಸೆಡೆ, ಹಾಲ್ ಕಾಯಿಸುವ ಸೆಡೆ ಹೀಂಗೆ ತರತರದ್ ಉಟ್ಟು. ಅದರ ಸ ನೇಕೆಲೇ ಇಸುದು. (ಎಂ.ಜಿ.ಕೆ.)

**ನೇಗ್‌ಲ್ :** ಗದ್ದೆ ಬೇಸಾಯ ಮಾಡಿಕಾಕಿನ ಎತ್ತ್ ಅಲ್ಲರ್ ಕೋಣಗಳ ಹೆಗಲ್‌ಗೆ ಇಸಿದ ನೋಗದ ನಡುಗೆ ಕಟ್ಟುವ ಸೊತ್ತು. ತುಳುಲಿ ಇದ್ಕೆ ನಾಯೆರ್ ತ ಹೇಳ್‌ವೆ. ಇದರ ಪ್ರಯೋಜನ ಗದ್ದೆ ಬೇಸಾಯ ಮಾಡ್‌ವ ಎಲ್ಲಾ ಕಡೆಲೂ ಉಟ್ಟು. ಆದರೆ ಊರುಂದ ಊರಿಗೆ ಇದರ ರೂಪಲಿ ಯತ್ಯಾಸ ಕಂಡದೆ. ದಕ್ಷಿಣಕನ್ನಡ ಮತ್ತೆ ಉಡುಪಿ ಜಿಲ್ಲೆಲಿ ನೇಗಿಲ್ ಹೀಂಗೆ ಉಟ್ಟು. ಇದ್ ಗದ್ದೆಗೆ ಎತ್ತ್ ಕಟ್ಟಿಕೆ ಸುರು ಆಕನವೇ ಇದ್ದ ಸೊತ್ತು. ಇದರ್‌ಲಿ ಎರಡ್ ಬಾಗ ಉಟ್ಟು. ಒಂದ್ ನೊಗಕ್ಕೆ ಜೋಡ್ಸುವ ಉದ್ದದ ಮರದ ಬಡಿಗೆ. ಇದ್ ಅಂದಾಜ್ ಒಂದೂವರೆ ಮಾರ್ ಉದ್ದ ಇದ್ದ್ ಕೈ ತೋಳುಂದ ಹಳ್ಳಸಪೂರ ಉಟ್ಟು. ಇನ್ನೊಂದು ಸುಮಾರ್ ಒಂದ್ ಮಾರುದ್ದದ



ನೇಗ್‌ಲ್

ನೇಗಿಲ್. ನೇಗಿಲ್‌ನ ಇದ್ಕೆ ಜೋಡ್ಸುವೆ. ನೇಗಿಲ್ ಕೊಡಿಲಿ ದೂಂಚಿ ಇದ್ದ್ ಒಸಿ ಒಸಿಯೇ ಒಂದೂವರೆ ಗೇಣ್‌ನಸ್ಟ್ ಉದ್ದಕ್ಕೆ ಅಗಲ ಆಗ್ತಾ ತ್ರಿಕೋನಾಕಾರಕ್ಕೆ ಹೋದೆ. ಮತ್ತೆ ಸಪೂರ ಆಗ್ತಾ ಹೋಗಿ ಕಡೆಲಿ ಹಳ್ಳಬೊಗ್ಗಿಸಿ ಹಿಡೆಕೆ ಕೈನ ಹಾಂಗೆ ಮಾಡ್‌ವೆ. ಕೊಡಿನ ಅಡಿ ಪುಡೆಲಿ ದಂಬೆನ ಹಾಂಗೇ ಕೆತ್ತುವೆ. ಮೇಲ್ಪುಡೆಲಿ ಒಂದೂವರೆ ಗೇಣ್‌ನಸ್ಟ್ ಕೆತ್ತಿ ಒಂದೂವರೆ ಅಂಗುಲದಸ್ಟ್ ಚಪ್ಪಟೆ ಮಾಡ್‌ವೆ. ಇದ್ ಪಣ್ಣೋಳು ಇಸಿಕೆ. ಪಣ್ಣೋಳುಂತೇಳಿರೆ ಕಬ್ಬಿಣಂದ ಉಳಿನ ಹಾಂಗೆ ತೆಳ್ಳಂಗೆ ಮಾಡ್ದ ಒಂದ್ ಸೊತ್ತು. ಇದರ ಕೊಡಿ ಉಳಿನ ಬಾಯಿನ ಹಾಂಗೆ ಸರ್‌ತ ಉಟ್ಟು. ಕಡೆಲಿ ಒಂದ್ ಅಂಗುಲದಸ್ಟ್ ಸಪೂರ ಮಾಡಿ ಬೊಗ್ಗಿಸಿ ಚೂಪು ಉಟ್ಟು. ನೇಗಿಲ್‌ನ ಕೊಡಿಗೆ ಪಣ್ಣೋಳುನ ಕೊಡಿ ಇಸಿ ಕಡೆಲಿರುವ ಚೂಪುನ ನೇಕಿಲ್ಗೆ ಹೊಡ್ದ್ ಇಸುವೆ. ಪಣ್ಣೋಳುನ ಕೊಡಿಲಿ ಹಳ್ಳಬುಟ್ಟು ಒಂದ್ ಒಟ್ಟೆ ಉಟ್ಟು. ಆ ಒಟ್ಟೆಗೆ ಆಣಿ ಹೊಡ್ದವೆ.

ಇದರ ಮರದ ಆಚಾರಿಗ ಮಾಡ್‌ವೆ. ಬೇರೆ ಜನಂಗ ಸ ಮಾಡೊವು ಒಳ. ನಾರ್ ಇರ್‌ವಂತಾ ಮರಲಿ ತೇಳಿರೆ ಗರ್‌ದ ಮರ ಕಾಯರ ಮರಲಿ ಮಾಡ್‌ವೆ. ಗದ್ದೆಲಿ ಎತ್ತ್ ಕಟ್ಟಿಕೆ ನೊಗ ಇಸಿದ ಮೇಲೆ ನೇಗಿಲ್ ಜೋಡ್ಸಿ ಎತ್ತ್‌ಳ ಹೊಡ್ದವೆ. ಆಗ ನೇಗಿಲ್‌ನ ನೆಲಕ್ಕೆ ಕುತ್ತುವೆ. ಎತ್ತ್ ಎಳೆಕನ ನೇಗಿಲ್‌ಲಿ ಮೊಣ್ಣ್ ಸೀಳಿ ಮೇಲೆ ಬಂದದೆ. ಆಗ ಮೊಣ್ಣ್ ನುಸುಳಾದೆ. ಗದ್ದೆಗೆ ಹಾಕಿದ ಸೊಪ್ಪು, ಗೊಬ್ಬರ ಎಲ್ಲ ಅಡಿ ಮೇಲಾದೆ. ಮತ್ತೆ ಮತ್ತೆ ಹಿಂಗೆ ಮಾಡಿ ಮೊಣ್ಣ್‌ನಹದ ಮಾಡ್‌ವೆ. ಆಗ ನೇಜಿ ನಡಿಕೆ ಅಲ್ಲರ್ ಬಿತ್ತ್ ಬಿತ್ತಿಕೆ ಒಳ್ಳೆದ್ ಆದೆ. (ಎಂ.ಜಿ.ಕೆ.)

**ನೊಜ್ಜ :** ಗದ್ದೆ ಹೂಡಿಕನ ಎರಡ್ ಎತ್ತ್ ಅಲ್ಲರ್ ಕೋಣಗಳ ಹೆಗ್ಲ್‌ಗೆ ಕಟ್ಟುವ ಮರದ ಸೊತ್ತು. ಇದರ ತುಳುಲಿ 'ನುಗ' ತ ಹೇಳ್‌ವೆ. ಗದ್ದೆ ಬೇಸಾಯ ಮಾಡ್‌ವ ಎಲ್ಲಾ ಊರ್‌ಲೂ ಇದರ ಪ್ರಯೋಜನ ಪಡ್ದವೆ. ದಕ್ಷಿಣಕನ್ನಡ ಮತ್ತೆ ಉಡುಪಿ ಜಿಲ್ಲೆಲಿ ಇಂತ ನೊಜ ಉಟ್ಟು. ಬೇರೆ ಕಡೆ ಹಳ್ಳಬೇರೆ ತರಲಿ ಉಟ್ಟು. ಗದ್ದೆ ಬೇಸಾಯ ಮಾಡಿಕೆ ಸುರು ಆಕನವೇ ಇದ್ ಇದ್ದಿರ್‌ದು. ಇದರ ಹೆಚ್ಚಾಗಿ ಗಟ್ಟಿ ಇರ್‌ವ ಹಗುರದ ಮರಲೇ ಮಾಡ್‌ವೆ. ಬೇರೆ ಮರಲಿ ಮಾಡಿರೆ ಬೇಗ ತುಂಡಾದೆಗಡ. ಮರದ ಆಚಾರಿಗಳೇ ಇದರ ಮಾಡ್ದು. ಗೊತ್ತಿದ್ದೊವು ಬೇರೆ ಜನಂಗ ಸ ಮಾಡ್‌ವೆ. ಇದ್ ಗದ್ದೆ ಹೂಡಿಕನ ಎರಡ್ ಎತ್ತ್‌ಳ ಹೆಗ್ಲೆ ಇಸಿ ಕಟ್ಟುವೆ.



ನೊಜ್ಜ

ಹಾಂಗೆ ಮಾಡಿರೆ ಎತ್ತ ಒಟ್ಟಿಗೆ ಹೋದವೆ. ಮತ್ತೆ ಇದರ ನಡುಗೆ ನೇಗ್ಲ್ ಕಟ್ಟಕೆ ಬೇಕಾದೆ. ಕೋಣಂಗಳ್ಗೂ ಹಿಂಗೆ ನೊಜ ಕಟ್ವೆ. ಹಿಂದೆ ಎತ್ತ ಗಾಡಿ ಇತ್ತ್. ಆ ಗಾಡಿ ಎಳೆಕೆ ಎರಡ್ ಎತ್ತ್ ಉಟ್ಟು. ಎತ್ತಳ ಕುತ್ತಿಗೆಗೆ ನೊಜ ಕಟ್ಟಿ ಅದ್ಕೆ ಗಾಡಿನ ಕಟ್ವೆ. ಗದ್ದೆಲಿ ಕೋಣಗಳ ಓಡ್ಸುವ ಆಟ– ಕಂಬಳ ದಕ್ಷಿಣಕನ್ನಡ, ಕಾಸರಗೋಡು ಮತ್ತೆ ಉಡುಪಿ ಜಿಲ್ಲೆಲಿ ಉಟ್ಟು. ಕಂಬ್ಳದ ಕೋಣಗಳಿಗೆನು ನೊಜ ಬೇಕು. ಕೆಲವು ಜೆನ ನೊಜನ ಬಾರೀ ಪೊರ್‌ಲು ಕೆತ್ತುವೆ. ಅದರ್‌ಲಿ ಚಿತ್ರ ಕೆತ್ತಿ ಲಾಯ್ಕ್ ಮಾಡ್‌ವೆ.(ಎಂ.ಜಿ.ಕೆ.)

**ಪೊಡಿಮಂಚ :** ಕೆಯ್ಯಿ ಹೊಡೆಕೆ ಬೇಕಾದ ಸೊತ್ತು. ಮಂಚದ ಹಾಂಗೇ ಇದ್ದದರ್‌ಂದ ಇದ್ಕೆ ಪೊಡಿಮಂಚ ತ ಹೆಸ್ರಾತ್.

ಗದ್ದೆ ಬೇಸಾಯ ಸುರು ಆದ ಮೇಲೆ ಮೊಯಿಂಸರ್ ಕೆಯ್ಯಿ ಹೊಡೆಕೆ ಇಂತಾ ಪಡಿಮಂಚನ ಮಾಡಿಕೊಂಡೊಳೊ. ಇದ್ ಮರದ



ಪೊಡಿಮಂಚ

ಆಚಾರಿಗ ಮಾಡ್ದ್. ಇದ್ ಬತ್ತದ ಕೆಯ್ಯಿ ಹೊಡೆಕೆ ಬೇಕಾದೆ. ಗದ್ದೆಂದ ಕೆಯ್ಯಿ ಕೊಯ್ದು ಮೇಲೆ ಕೆಯ್ಯಿಂದ ಬತ್ತ ಬೇರೆ ಮಾಡೊಕಾರೆ ಕೆಯ್ಯಿನ ಹೊಡೆಕು. ಹಾಂಗೆ ಹೊಡೆಕೆ ಈ ಮಂಚ ಬೇಕಾದೆ. ಪಡಿಮಂಚನ ಹಿದೆನವು ಇನ್ನೂ ಸುಲಬಲಿ ಆಗುವ ಹಾಂಗೆ ಮಾಡ್ತಿದ್ದೋ. ಸಮತಟ್ಟ್ ಇರ್‌ವ ನೆಲಲಿ ಅಂದಾಜ್ ಒಂದ್ ಗಜದಸ್ಟ್ ಎತ್ತರದ ನಾಲ್ಕ್ ಮರದ ಗೂಟ ಹಾಕೊಕು. ಅದ್ ಅಂದಾಜ್ ಒಂದ್ ಗಜ ಅಗಲ ಮೂರ್ ಅಲ್ಲರ್ ನಾಲ್ಕ್ ಗಜ ಉದ್ದ ಇರೊಕು. ಆ ಗೂಟಕ್ಕೆ ಸುತ್ತೊಳು ಕೊಮ್ಮಿನ ಸಲಕೆ ಅಲ್ಲರ್ ಸಪೂರದ ಮರನ ಕಟ್ಟೊಕು. ಅದರ ಮೇಲೆ ದೂರ ದೂರಕ್ಕೆ ಸಲಕೆನ ಇಸಿ ಕಟ್ಟೊಕು. ಮತ್ತೆ ಮಾದ್ರಿ ಬೊಳ್ಳಿ ಅಲ್ಲರ್ ಇಂಜಿರ್ ಬೊಳ್ಳಿನ ಸಲಿಕೆಗೆ ನೇಯ್ಯೋಕು. ಆಗ ಅದ್ ಮಂಚನ ಹಾಂಗೇ ಆದೆ. ಕೆಯ್ಯಿ ಹೊಡೆಕೆ ಮುಂದೆ ಪಡಿಮಂಚಕ್ಕೆ ಕಾಯಿ ಹೊಡೆವ ಕ್ರಮ ಉಟ್ಟು. (ಎಂ.ಜಿ.ಕೆ.)

**ಪೊಳ್ಮನೆ – ಕೈ ಮುಟ್ಟಿ – ಆನೆ ಮುಟ್ಟಿ :** ಇಜ್ಜಾಲ್ ಹದ ಮಾಡಿ ಹೊಡೆಕೆ, ಗೋಡೆ ಹೊಡೆಕೆ ಇದ್ ಬೇಕಾದೆ. ಇದರ್‌ಲಿ ಎರಡ್ ನಮೂನೆ ಉಟ್ಟು. ಒಂದ್ ಸಣ್ಣದ್ ಕೈ ಮುಟ್ಟಿ. ಅದ್ ಅಡಿ ಸಪಾಯಿ ಇದ್ದ್ ಹಿಡ್ಕಂಕೆ ಕೈ ಉಟ್ಟು. ಇದ್ ಮೊಣ್ಣನಗೋಡೆ ಕಟ್ಟಕನ ಗೋಡೆ ಸಪಾಯಿ ಮಾಡಿಕೆ ಬೇಕಾದೆ. ಇದರ್‌ಲಿ ಹೊಡ್ದರೆ ಗೋಡೆ, ನೆಲ ಗಟ್ಟಿಯಾದೆ. ಇನ್ನೊಂದು ಆನೆ ಮುಟ್ಟಿ. ಇದ್ ಉರ್‌ಟ್ ಇರ್‌ವ ಮರದ ತುಂಡ್‌ನ ಒಂದ್ ಕಡೆ ಸಪಾಯಿ ಮಾಡಿ ಅದ್ಕೆ ಹಿಡೆಕೆ ಹಿಡಿ ಹಾಕ್‌ವೆ. ಇನ್ನೊಂದು ರೀತಿಲಿ ಎರಡೂ ಪುಡೆಲಿ ಸಪಾಯಿ ಮಾಡಿ ನಡೂಲಿ ಒಟ್ಟೆ ಮಾಡಿ ಅದ್ಕೆ ಹಿಡಿ ಹಾಕಿದ್ದ್ ಸ ಉಟ್ಟು. ಇದ್ ಬಾರ ಜಾಸ್ತಿ. ಇಜ್ಜಾಲ್‌ಲಿ ಕಲ್ಲ್ ಮಿನಿ ಇದ್ದರೆ ಗುದ್ದಿ ಒಳಗೆ ಮಾಡಿಕಾದೆ. ಇದರ ಹೆಚ್ಚಾಗಿ ಕಾಯರ ಮರಲಿ ಮರದ ಆಚಾರಿಗ ಲಾಯ್ಕ್ ಮಾಡ್‌ವೆ. ಮಳೆಗಾಲ ಇಜ್ಜಾಲ್ ಮಳೆ ನೀರ್ ಬಿದ್ದ್ ಹೊಂಡ ಗುಂಡಿ ಆಗಿದ್ದದೆ.

ಅರೆಗಾಲ ಇಜ್ಜಾಲ್‌ಲಿ ಬತ್ತ ಅಡಿಕೆ ಹರ್‌ಂಡಕಾರ್ ಇಜ್ಜಾಲ್ ಸಪಾಯಿ ಇರೋಕು. ಅದ್ಕೆ ಇಜ್ಜಾಲ್‌ನ ಹಸಿ ಹಸಿ ಇರಿಕನೇ ಇದರ್‌ಲಿ ಹೊಡ್ದ್ ಸಪಾಯಿ ಮಾಡ್‌ವೆ. ಇಜ್ಜಾಲ್‌ಲಿ ಕಲ್ಲ್ ಮಿನಿ ಇದ್ದರೆ ಆನೆಮುಟ್ಟಿಲಿ ಹೊಡ್ದ್ ಸಪಾಯಿ ಮಾಡಿಕಾದೆ. ಇದರ್‌ಲಿ ಗೋಡೆ ಹೊಡೆಕೆ ಆದುಲೆ. ಅದ್ಕೆ ಕೈ ಮುಟ್ಟಿ ಪೊಳ್ಮನೆನೇ ಬೇಕಾದೆ. (ಎಂ.ಜಿ.ಕೆ.)

**ಬರೆಕಲ್ಲ್ :** ಬರೆಕಲ್ಲ್ ಅಂದರೆ ಬರೆ ಹಾಕುವ ಕಲ್ಲ್. ಇದ್ಕೆ ಕುರುಂಟ್ ಕಲ್ಲ್ ತ ಹೇಳ್‌ವೆ. ಗದ್ದೆ ಬೇಸಾಯ ಮಾಡೋವುಕೆ ಇದ್ ಬೇಕಾದೆ. ಇದ್ ಕರ್‌ಗಲ್ಲ್‌ಂದ ಮಾಡ್ದ ಕಲ್ಲ್. ಹೆಚ್ಚ್ ಕಮ್ಮಿ ಕಡ್ಕಲ್‌ನ ಗುಂಡು ಕಲ್ಲ್‌ನ ಹಾಂಗೇ ಉಟ್ಟು. ಹಜ್ಜಸಪೂರ ಆಗಿದ್ದ್ ಕೊಡಿಲಿ ಒಟ್ಟೆ ಉಟ್ಟು. ಈ ಒಟ್ಟೆ ಬೊಳ್ಳಿ ಹಾಕಿ ಎಳೆಕೆ ಇರ್‌ವಂತದ್ದ್. ಇದರ ಕಲ್ಲ್ ಕುಟ್ಟಿಗರ್ ಮಾಡ್ದು. ಗದ್ದೆಗೆ ಎತ್ತ್ ಕಟ್ಟಿ ಗೋರಿ ಮಾಡಿ ಪುಂಡಿ ಬಿತ್ತುವೆ ಅಲ್ಲರ್ ಬಿತ್ತ್ ಹಾಕುವೆ. ಹೀಂಗೆ ಮಾಡಿಕನ ಗದ್ದೆಲಿ ನೀರ್ ನಿಲ್ಲಿಕಾಗದ್. ಗದ್ದೆಲಿರುವ ನೀರ್ ಎಲ್ಲ ಇಳ್ದ್ ಹೋಕು. ಹಾಂಗೆ ಇಳ್ದ್ ಹೋಕರ್ ಗದ್ದೆಲಿ ಸಣ್ಣಕೆ ಕಣಿ ಮಾಡೊಕು. ಕಣಿ ಮಾಡಕರ್ ಬರೆಕಲ್ಲ್‌ನ ಒಂದ್ ಬೊಳ್ಳಿಗೆ ಕಟ್ಟಿ ಎಳ್ದವೆ. ಆಗ ಗದ್ದೆ ತುಂಬಾ ಕಣಿ ಆದೆ. ಆ ಕಣಿಲಿ ಗದ್ದೆಲಿದ್ದ ನೀರೆಲ್ಲ ಇಳ್ದ್ ಹೋದೆ. ಹಾಂಗಾಗಿ ಇದ್ಕೆ ಬರೆಕಲ್ಲ್‌ಂತ ಹೇಳ್‌ವೆ. (ಎಂ.ಜಿ.ಕೆ.)

**ಪೊಂಚು ಕುಕ್ಕೆ :** ತೋಟಲಿ ಬಿದ್ದ ಅಡಿಕೆ ಹೆರ್‌ಕಿಕೆ ಬೇಕಾದ ಕುಕ್ಕೆ. ಹಾಂಗಾಗಿ ಪೊಂಚುಕುಕ್ಕೆನ ಅಡಿಕೆ ಕುಕ್ಕೆತ ಹೇಳ್‌ವೆ. ಇದರ ಬೆತ್ತಂದ ಮಾಡ್‌ವೆ. ಮಾದ್ರಿ ಬೊಳ್ಳಿಂದಲೂ ಮಾಡಿಕಾದೆ. ಬೆತ್ತದ ಬಾಸ್‌ಲಿ ಅಲ್ಲರ್ ಮಾದ್ರಿ ಬೊಳ್ಳಿಲಿ ಇದರ ಮೆಡೆಕು. ಮೆಡೆಕೆ ಗೊತ್ತಿದ್ದೊವು ಯಾರೂ ಮುಡ್ದವೆ. ಕುಕ್ಕೆ ಮೆಡೆವ ಮಾಯ್ಲರ್, ಕೊರಗರ್, ಮಲೆಕುಡಿಯರ್ ಇದರ ಮಾಡ್‌ವೆ. ಅಡಿಕೆ ಹೆರ್‌ಕಿಕೆ ತೋಟಕೆ ಹೋಕನ ಇಂತಾ ಕುಕ್ಕೆ ಬೇಕಾದೆ. ಅಡಿಕೆ ಹೆರ್‌ಕಿ ಇದರ್‌ಲಿ ಹಾಕುದರ್‌ಂದಾಗಿ ಇದ್ಕೆ ಅಡಿಕೆ ಕುಕ್ಕೆಂತ ಹೆಸ್ರಾತ್. ಹೆಸ್ರ್ ಅಡಿಕೆ ಕುಕ್ಕೆಂತಾದರೂ ಇದರ್‌ಲಿ ಬೀಜ ಹಾಕಿಕೂ ಆದೆ. ಒಳ್‌ಂಗಿದ ಅಡ್ಕೆ ಚೊಲ್ಲಿ ಇದ್ಕೆ ಹಾಕಿಕೂ ಆದೆ. ಬೇರೆ ಏನಾರ್ ಸ ಹಾಕಿಕೆ ಆದೆ. (ಎಂ.ಜಿ.ಕೆ.)

**ಬೆತ್ತದ ಹರಿವಾಣ :** ಬೆತ್ತದ ಬೊಳ್ಳಿಂದ ಮಾಡ್ದ ಹರಿವಾಣ. ಬಟ್ಟಲ್‌ನ ಹಾಂಗೇ ಇರ್‌ವ ಎಲೆ ಅಡಿಕೆ ಹಾಕಿಸಿಕೆ ಆವ ಒಂದ್ ಸೊತ್ತು. ಬೆತ್ತದ ಬೊಳ್ಳಿನ ಸಪೂರಕ್ಕೆ ಸಿಗ್ದ್ ಕೀಸಿ ಪೊರ್‌ಲು ಮಾಡಿ ಇದರ ನೇಯ್ದುವೆ. ಇದರ್‌ಲಿ ಎತ್ತರದ್‌ಸ ಉಟ್ಟು. ಎತ್ತರ ಇದ್ದ ಹರಿವಾಣ ಗುಂಡಿ ಆಗಿದ್ದದೆ. ಮತ್ತೆ ಅದ್ಕೆ ಅಡಿಗೆ ಪೀಟದ ಹಾಂಗೇ ಉಟ್ಟು. ಬೆತ್ತದ ಬೊಳ್ಳಿಲಿ ಅಲ್ಲರ್ ಕಾಡ್ ಬೊಳ್ಳಿಲಿ ಸ ಇದರ ಮಾಡಕ್. ಕೊರಗರ್, ಮಲೆ ಕುಡಿಯರ್, ಅಜಲ ಜೆನಂಗ ಇದರ ಮಾಡ್‌ವೆ. ಬೇರೆ ಜೆನಂಗ ಸ ಇದರ ಮಾಡ್‌ವೆ. ಇದರ್‌ಲಿ ಎಲೆ ಅಡಿಕೆ ಹಾಕಿಸಿಕೆ ಆದೆ. ಜಂಬರದ ಮನೆಲಿ ಎಲೆ ಅಡಿಕೆ ಹರಿವಾಣ ಅಲ್ಲಲ್ಲಿ ಇಸ್‌ವ ಕ್ರಮ ಉಟ್ಟು. (ಎಂ.ಜಿ.ಕೆ.)



ಬೆತ್ತದ ಹರಿವಾಣ

**ಬೆದ್ರ್ ಏಣಿ :** ಇದ್ ಬೆದ್ರ್‌ನಏಣಿ, ಅಟ್ಟಕ್ಕೆ ಹತ್ತಿಕೆ ಬೇಕಾದ ಸೊತ್ತು. ದೊಡ್ಡ ಬೆದ್ರ್‌ಲಿ ಗಂಟ್‌ನ ಹಕ್ಕಲೆ ಕಾಲ್ ಇಸಿಕೆ ಆವ ಹಾಂಗೇ ಲಾಯ್ಕ್ ಕೊಯ್ದ್ ಏಣಿ ಮಾಡ್‌ವೆ. ಇದರ ಯಾರೂ ಮಾಡಿಕಾಂಕ್. ಏಣಿನ ಬೇರೆ ಬೇರೆ ನಮೂನೆಲಿ ಮಾಡ್‌ವೆ. ಎರಡ್ ಬೆದ್‌ರ್‌ಗೆ ಒಂದೇ ಅಳ್ತೆಗೆ ಗಂಟ್‌ನ ಹಕ್ಕಲೆ ಸಣ್ಣ ಸಣ್ಣ ಒಟ್ಟೆ ಮಾಡಿ ಅಡ್ಡಕ್ಕೆ ಬೆದ್ರ್‌ನಅಲ್ಲರ್ ಕೊಮ್ಮನ ಗಟ್ಟಿ ತಟ್ಟೆನ ಒಂದೇ ಅಳ್ತೆಗೆ – ಅಂದಾಜ್ ಅರ್‌ದ ಗಜದಸ್ಟ್ ತುಂಡು ಮಾಡಿ ಒಟ್ಟೆಗೆ ಎರ್‌ಡ್ ಬೆದ್ರೆ ಹುಗ್ಗಿಸಿ ಕಟ್ಟಿರೆ ಏಣಿ ತಯಾರ್ ಆದೆ. ಕೆಲವ್ ಕಡೆ ಮರದ ಏಣಿ ಉಟ್ಟು. ಕೊಮ್ಮಿಗೆ ಚಾಳೆಗೆ ಹತ್ತಿಕೆ ಬೆದ್ರ್‌ನಗೆಲ್ಲ್‌ನಕಾಲ್ ಇಸಿಕೆ ಬೇಕಾದಸ್ಟೇ ಬುಟ್ಟ್ ತುಂಡು ಮಾಡಿ ಏಣಿ ಮಾಡ್‌ವೆ. ಅದ್ಕೆ ಕೇರ್‌ಪುಂತ ಹೇಳ್‌ವೆ. ಮನೆಲಿ ಅಟ್ಟಕ್ಕೆ ಹತ್ತಿಕೆ ಅಲ್ಲರ್ ಎತ್ತರಕ್ಕೆ ಹತ್ತಿಕನ ಬೇಕಾದೆ. (ಎಂ.ಜಿ.ಕೆ.)

**ಮಾಯ್ಪು ಸೂಡಿ :** ನೆಲಲಿ ಹರ್‌ಂಡಿರುವ ಕಾಡ್, ಕಡ್ಡಿ, ದೂಳುನೆಲ್ಲ ಗುಡ್ಸಿ ಮನಾರ ಮಾಡಿಕಿರುವ ಒಂದ್ ಸೊತ್ತು. ಒಂದ್ – ಕೊಮ್ಮನ(ಅಡಿಕೆ ಮರದ) ಸೋಗೆಲಿ ಮಾಡ್‌ವಂತದ್ದ್. ಹಣ್ಣಾಗಿ ಉದುರ್‌ದ ಸೋಗೆಲಿ ಲಾಯ್ಕ್ ಇರ್‌ವ ಮತ್ತೆ ಜಾಸ್ತಿ ಉದ್ದ ಇರ್‌ವ ಸೋಗೆನ ತಂದ್ ಅದರ ಸೋಗೆನ ಜಾಗ್ರತೆಲಿ ತೆಗೆಕು. ಸೋಗೆಂದ ಕಡ್ಡಿನ ಸಿಗ್ದ್ ತೆಗೆಕು. ಬೇಕಾದಸ್ಟ್ ಕಡ್ಡಿ ಆದ ಮೇಲೆ ಕಡ್ಡಿನ ಪೊರ್‌ಲು ಒಳ್‌ಂಗಿಸೊಕು. ಹೆಚ್ಚ್ ಕಮ್ಮಿ ಒಳ್ಳ ಮಾಯ್ಪು ಆಕರ್ ನಾಕೈದ್ ಸೋಗೆ ಬೇಕಾದು. ಎಸ್ಟೇ ಜಾಗ್ರತೆಲಿ ಸೋಗೆನ ಸಿಗ್ದರೂ ಸೋಗೆನ ಸೀಂಕ್ ಅದರ್‌ಲೆ ಉಳ್ಕಂಡದೆ. ಪೊರ್‌ಲು ಒಳ್‌ಂಗಿದ ಕಡ್ಡಿನ ಒಟ್ಟು ಸೇರ್‌ಸಿ ದೊರಗ್ ಇರ್‌ವ ನೆಲಲಿ ಹಾಕಿ ಎರಡೂ ಕೈಲಿ ಪೊರ್‌ಲು ಉಜ್ಜೊಕು. ಆಗ ಕಡ್ಡಿಲಿ ಇರ್‌ವ ಸೋಗೆ ಹುಡಿ ಹುಡಿಯಾಗಿ ಉದರ್‌ದೆ. ಒಂದ್ ಪುಂಡಿ ಕಡ್ಡಿನ ಕೈಲಿ ಹಿಡ್ಕಂಡ್ ಕಡೆನ ಒಟ್ಟು ಸೇರ್‌ಸಿ ಒಂದ್ ಮರದ ತುಂಡು ಮೇಲೆ ಇಸಿ ಕತ್ತಿಲಿ ಕಡ್ದರೆ ಲಾಯ್ಕಾದೆ. ಮತ್ತೆ ಕಡ್ಡಿಗಳ ಒಟ್ಟು ಸೇರ್‌ಸಿ ಕಟ್ಟ ಹಾಕಿರೆ ಮಾಯ್ಪು ತಯ್ಯಾರಾದೆ. ಇನ್ನೊಂದು ರೀತಿ ತೇಳಿರೆ – ಚಾಳೆ ಕಡ್ಡಿಂದ ಮಾಡ್ದು. ಇದರ ಮಾಡಿಕೆ ಹಣ್ಣಾಗಿ ಬಿದ್ದ ಚಾಳೆ ಮಡ್ಲ್ ಆದುಲೆ. ಹದಾ ಬೆಳ್ದ ಚಾಳೆ ಮಡ್ಲ್‌ನತೆಗ್ದ್ ಅದರ ಕತ್ತಿ ಅಲ್ಲರ್ ಚೂರಿಲಿ ಸಿಗ್ದ್ ಕಡ್ಡಿ ಬೇರೆ ಮಾಡೊಕು. ಕಡ್ಡಿನ ಪೊರ್‌ಲು ಕೀಸಿರೆ ಕಡ್ಡಿ ಲಾಯ್ಕ್ ಆದೆ. ಈ ಕಡ್ಡಿನೂ ಕಡೆ ಕತ್ತರಿಸಿಕಣಕು ಮತ್ತೆ ಕಡ್ಡಿನ ನೆರಳ್‌ಲಿ ಒಳ್‌ಂಗಿಸಿ ಕಟ್ಟ ಹಾಕಿರೆ ಮಾಯ್ಪು ಆದಂಗೆ. ಮಾಯ್ಪುನ ಹಳ್ಳಿಲಿರುವ ಹೆಚ್ಚಿನವು ಮಾಡಿಕಂಡವೆ. ಮತ್ತೆ ಯಾರೂ ಮಾಡಿಕೆ ಆದೆ. ಮನೆಲಿ, ಆಪೀಸ್‌ಲಿ ಅಲ್ಲರ್ ಬೇರೆ ಕಡೆಗಳ್‌ಲಿ ಗುಡ್‌ಸಿಕೆ ಇದ್ ಬೇಕಾದೆ. ಹಾಂಗೇ ಬತ್ತ, ರಾಗಿ, ಜೋಳ, ಅಕ್ಕಿ ಇದರೆಲ್ಲ ಗುಡ್ಸಿ ರಾಸಿ ಮಾಡಿಕೂ ಬೇಕ್. ಗುಡ್ಸಿ ಗುಡ್ಸಿ ಮಾಯ್ಪು ಸಮ್ದ್ ಸಮ್ದ್ ಸಣ್ಣದಾದೆ. ಅದರ ಕುಂಟು ಮಾಯ್ಪು ತ ಹೇಳ್‌ವೆ. ಇದರ್‌ಲಿ ಇಜ್ಜಾಲ್ ಗುಡ್ಸಿಕೆ ಅಲ್ಲರ್ ಜಾಲಿಗೆ ಸೆಗಣಿ ಗುಡ್ಸಿಕೆ ಒಳ್ಳದಾದೆ. ಕೊಮ್ಮನ ಕಡ್ಡಿ ಮಾಯ್ಪುಂದಲೂ ಚಾಳೆ ಕಡ್ಡಿ ಮಾಯ್ಪು ಬಾಳ್ತರ ಜಾಸ್ತಿ. ಹಳ್ಳಿಲಿ ಎಲ್ಲರ ಮನೆಲೂ ಕೊಮ್ಮನ ಸೋಗೆಂದ ಮಾಡ್ದ ಮಾಯ್ಪು ಉಟ್ಟು. ಪೇಟೆಲಿರೊವುಕೆ ಚಾಳೆ ಮಡ್ಲ್‌ನಕಡ್ಡಿಂದ ಮಾಡ್ದ ಮಾಯ್ಪು ಅಂಗಡಿಲಿ ಸಿಕ್ಕಿದೆ. ಕೊಡಗ್‌ಲಿ ಹಾಸನ ಜಿಲ್ಲೆಲಿ ಬೇರೆ ತರದ ಮಾಯ್ಪು ಉಟ್ಟು. ಅದರ್‌ಲೂ ಕಾಪಿ ಬೆಳಿವವರ್‌ಲಿ ಕಾಪಿ ಗುಡ್ಸಿಕೆಂತ ತುಂಬಾ ಗೆಲ್ಲ್ ಇರ್‌ವ ದೆಯ್ಯಿನ ಕಡ್ದ್ ಅದರ ಮಾಯ್ಪುನ ಹಾಂಗೆ ಮಾಡ್‌ವೆ. ಯಾರಾರ್ ತೊಪ್ಪು ಕೆಲ್ಸ ಮಾಡಿರೆ ಅವಂಗೆ 'ಮಾಯ್ಪು ಸೂಡಿಲಿ ಹೊಡ್ದನೆ' ತ ಹೇಳ್‌ವೆ. ಮತ್ತೆ ಬೇಡದ ಕಲ್‌ಸ ಮಾಡ್ದವಂಗೆ ಹೆಂಗ್‌ಸರ್ ಎಲ್ಲ ಸೇರಿಕಂಡ್



ಮಾಯ್ಪು ಸೂಡಿ





ಮಾಯ್ಪು ಸೂಡಿಲಿ ಹೊಡ್ದವೆ. ಮಾಯ್ಪು ಸೂಡಿಲಿ ಹೊಡೆದು ಅವ ಮರ್‌ಯಾದೆ ತ ನಂಬಿಕೆ. ಗುಡ್ಸಿಕನ ಗಂಡಸರ ಕಾಲಿಗೆ ಮಾಯ್ಪು ತಾಂಗಿಸಿಕಾಗದ್ ತ ನಂಬಿಕೆನೂ ಉಟ್ಟು. (ಎಂ.ಜಿ.ಕೆ.)

**ಮಿಜ :** ಮೀನ್‌ನ ಗೋರಿನ ಹಾಂಗೇ ಕಾಂಬ ಒಂದ್ ಸೊತ್ತ್. ಇದರ ಬೆತ್ತದ ಬೊಳ್ಳಿಂದ ಮಾಡ್‌ವೆ. ಹಿಂದೆನ ಪುಡೆ ಎತ್ತರ ಇದ್ದ್ ಎದ್ರ್ ಪುಡೆ ತಗ್ಗ್ ಇರ್‌ವ ಒನಲೆನ ಹಾಂಗೇ ಮಾಡ್ದ ಒಂದ್ ಹತ್ಯಾರ್. ಇದರ ಬೆತ್ತಂದ ಅಲ್ಲರ್ ಬೆದ್ರ್‌ನಬಾಸ್‌ಂದಲೂ ಮಾಡಿಕಾದೆ. ಇದರ ಕೊರಗರ್, ಮಾಯ್ಲರ್ ಮಾಡ್‌ವೆ. ಮನೆ ತುಂಬಿಸಿಕೆ ಮಿಜ ಬೇಕ್. ಯಜಮಾನ ಮನೆ ತುಂಬಿಸಿಕೆ ಬೇಕಾದ ಸೊತ್ತುಗಳ ಇದರ್‌ಲಿ ಮನೆಗೆ ತಾದು. ಹಿಂದೆ ಮಳೆಗಾಲ ಕಳ್ದ ಮೇಲೆ ಅಂದರೆ ಆಟಿ ಕಳ್ದ್ ಸೋಣ ತೀಂಗಳ್‌ಲಿ ಚೌತಿಗೆ ಮುಂದೆ ಹೊಸ್ತು ಮಾಡ್‌ವ ಕ್ರಮ ಇತ್ತ್. ಅದ್ಕೆ ಮುಂದೆ ಮನೆ ತುಂಬುಸುವ ಕ್ರಮವೂ ಇತ್ತ್. ಅದ್ಕೆ ಬೇಕಾಗಿ ಹೆಳ್ಮಕ್ಕ ಎಲ್ಲ ಸೆರಿಕಂಡ್ ಮನೆಲಿ ಅಟ್ಟ ಅಡಿ ಹೊಗೆ, ಕರಿ, ಬಲೆ, ಗುಡ್ಸಿ ಮನಾರ ಮಾಡಿಕಂಡವೆ. ನೆಲಕ್ಕೆ ಸಗಣಿ ಕೆರ್‌ದ್ ಲಾಯ್ಕ್ ಮಾಡ್‌ವೆ. ಅದಾದ ಮೇಲೆ ಬೊಳ್ಪುಗೆ ಮನೆ ಯಜಮಾನ ಮೀದ್ ಸುದ್ದ ಆಗಿ ಗದ್ದೆಗೆ ಹೋಗಿ ಬತ್ತದ ಕದ್ರ್ ಕೊಯ್ದ್ ಅದರ ಈ ಮಿಜಲಿ ಇಸಿಕಂಡ್


ಮಿಜ

ಮಳ್ಗಾಲ ಬೆಳ್ಸಿದ ನಟ್ಟಿಕಾಯಿ– ಸೋಂತೆಕಾಯಿ, ಹೀರೆಕಾಯಿ, ಕುಂಬಳ, ಕೆಂಬುಡೆ ಹೀಂಗೆ ಎಲ್ಲ ಕೊಯ್ದ್ ತುಂಬಿಸಿ ಅದರೊಟ್ಟಿಗೆ ಹಿಂಟೆಂಗೆ– ಇಟ್ಟೋವು ಸೊಪ್ಪು ದಡ್ಡಲ್ ಮರದ ತೊಪ್ಪೆದ್ ಬೊಳ್ಳಿ ಎಲ್ಲ ತಕಂಡ್ ಮನೆಗೆ ಬಂದದೆ. ಯಜಮಾನ ಮನೆಗೆ ಬಾಕನ ಮನೆ ಯಜಮಾಂತಿ ಮೆಟ್ಲಿ ಅಂವನ ಕಾಲಿಗೆ ನೀರ್ ಹೊಯ್ಯಕೆ ಉಟ್ಟು. ಮತ್ತೆ ಯಜಮಾನ ಮಿಜಲಿ ತಂದ ಎಲ್ಲಾ ಸೊತ್ತುಗಳ ದೇವರ ಕೋಣೆಲಿ ದೇವರ ಎದ್ರ್ ಇಸಿ, ದೀಪಕ್ಕೆ ಅಕ್ಕಿ ಹಾಕಿ, ಕೈ ಮುಗ್ದ್ ಬೇಡಿಕಂಡದೆ. ಮನೆವು ಎಲ್ಲಾ ದೇವ್ರುಗೆ ಕೈ ಮುಗ್ದವೆ. ಅದಾದ ಮೇಲೆ ಹಿಂಟೆಂಗೆ ಸೊಪ್ಪುಲಿ ತೆನೆನ ಸುತ್ತಿ ದಡ್ಡಲ್ ಬೊಳ್ಳಿಲಿ ಕಟ್ಟಿ ಮನೆ ಬಾಗ್ಲ್‌ಗೆ, ಹಟ್ಟಿಗೆ, ಅಡಿಗೆ ಕೋಣೆಗೆ ವಾಹನ ಅಲ್ಲರ್ ಯಂತ್ರಗಳೇನಾರ್ ಇದ್ದರೆ ಮತ್ತೆ ಬೇಸಾಯಕ್ಕೆ ಬೇಕಾದ ಎಲ್ಲಾ ಹತ್ಯಾರ್‌ಗೆ ಕಟ್ಟಿಕೆ ಉಟ್ಟು ಇದ್ಕೆ ಮನೆ ತುಂಬುಸುದುಂತ ಹೇಳ್ದು. ಮಿಜ ಇತ್ಲರ್ ತೊಡ್ಪೆ ಅಲ್ಲರ್ ಒನಲೆನೂ ಆದೆ. (ಎಂ.ಜಿ.ಕೆ.)

**ಮೆಂಟೆ :** ದನಗಳ ಗಂಟ್‌ಲ್‌ಗೆ ಕಟ್ಟ್‌ವ ಬೆದ್ರ್‌ನಗಂಟೆ ಮೆಂಟೆ. ಮೆಂಟೆ ಮಾಡಿಕೆ ಒಳ್ಳ ಬೆದ್ರ್ ಬೇಕು. ತೋರ ಇರ್‌ವ ಬೆದ್ರ್‌ನ ಒಂದ್ ಗಂಟ್ ಇರ್‌ವ ಹಾಂಗೆ ಅಂದಾಜ್ ಒಂದೂವರೆ ಗೇಣ್‌ನಸ್ಟ್ ತುಂಡು ಮಾಡಿಕಾಂಕು. ಗಂಟ್‌ನ ಮೇಲೆ ಪೊರ್‌ಲು ತುಂಡು ಮಾಡಿ ಕೆರ್‌ಸಿ ಲಾಯ್ಕ್ ಮಾಡಿಕಾಂಕು. ಎರಡ್ ಪುಡೆಲಿ ಕಾಗಡೆಂದ ಮೇಲೆ ಮುಟ್ಟ ಗಂಟ್‌ನ ಹಕ್ಕಲೆ ಮೂರ್ ಅಂಗುಲದಸ್ಟ್ ಬುಟ್ಟ್ ಉದ್ದಕ್ಕೆ ಒಂದ್ ಬೆರಳ್‌ನಸ್ಟ್ ಅಗಲಕ್ಕೆ ಕೊಯ್ದ್ ತೆಗೆಕು. ಅದರ ಕೊಡಿಲಿ ಒಂದ್ ಸಣ್ಣ ತ್ರಿಕೋನದಸ್ಟ್ ಕೊಯ್ದ್ ತೆಗೆಕು. ಗಂಟ್‌ನ ಹಕ್ಕಲೆ ಹಾಂಗೇ ಬುಟ್ಟ ಜಾಗಲಿ ಬೊಳ್ಳಿ ಕಟ್ಟಿಕೆ ಆವ ಹಾಂಗೆ ಚಡಿ ಮಾಡಿಕಾಂಕು. ಇನ್ನ್ ಸಪೂರದ – ಒಳಗೆನ ಗೋಳಿ ಸಪೂರ ಇರ್‌ವ, ಕಡೆ ಬೆದ್ರ್ ತುಂಡ್ ಎರಡ್ ಬೇಕ್. ಅದ್ ಅಂದಾಜ್ ನಾಕ್ ಅಂಗುಲ ಉದ್ದ ಇರೊಕು. ಅದ್ಕೆ ಒಂದ್ ಗಂಟ್ ಇರೊಕು. ಅದರ ಗಂಟ್‌ಂದ ಕಾಗಡೆ ಕರ್‌ಕಿ ಕರ್‌ಕಿ ಸಪೂರ ಮಾಡಿಕಾಂಕು. ಮತ್ತೆ ಗಂಟ್‌ನ ನಡುಲಿ ಒಟ್ಟೆ ಮಾಡೊಕು. ಆ ಒಟ್ಟೆಗೆ ಗಟ್ಟಿ ಇರ್‌ವ ಸಪೂರದ ಬೊಳ್ಳಿನ ಹುಗ್ಗುಸಿ ಅದರ ಗಂಟ್‌ನ ಕಾಕಡೆ ಗಂಟ್ ಹಾಕಿ ನೇತಾಡ್ಸೊಕು. ಬೊಳ್ಳಿ ತೋರನು ,ಉದ್ದ ಇರೊಕು. ಈಗ ತೋರದ ಬೆದ್‌ರ್‌ಗೆ ಚಡಿ ಮಾಡ್ದಲ್ಲಿಗೆ ಹಙ್ಙತೋರದ ಬೊಳ್ಳಿನ ಕಟ್ಟಿಕಾಂಕು. ಅದ್ ದನದ ಕುತ್ತಿಗೆಗೆ ಕಟ್ಟಿಕೆ ಆಗುವ ಹಾಂಗೆ ಇರೋಕು. ಅದರ ಕಟ್ಟಿದ ಮೇಲೆ ಎರಡೂ ಪುಡೆಗೂ ಕೊಯ್ದ್ ತೆಗ್ದ ಪುಡೆ ಬುಟ್ಟ್ ಸಪೂರದ ಬೊಳ್ಳಿಲಿ ನೇತಾಡ್‌ಸಿಕೆ ಆವ ಹಾಂಗೆ ಮಾಡ್ದ ಬೆದ್ರ್‌ನಬೊಳ್ಳಿನ ಕಟ್ಟೊಕು. ಈಗ ಮೆಂಟೆ ತಯಾರ್ ಆತ್. ಮೆಂಟೆನ ಹಳ್ಳಿಲಿ ಹೆಚ್ಚಿನೊವು ಮಾಡ್‌ವೆ. ದನಗಳಿಗೆ ಮೆಂಟೆ ಕಟ್ಟಿರೆ ಅದ್ ಹೋಕನ ಬಾಕನ ಗಂಟೆನ ಹಾಂಗೆ ಟಾಂಕ್ ಟಾಂಕ್ ಟಾಂಕ್ ತ ಸಬ್ದ ಕೇಳ್ತಾ ಉಟ್ಟು. ಕೆಲವು ದನಂಗ ತೋಟಕ್ಕೆ ಗದ್ದೆಗೆ ಬಂದ್ ಬಾಳೆ, ನಟ್ಟಿ ದೆಯ್ಯಿ, ಬೆಳೆ ಎಲ್ಲಾ ಕದ್ದ್ ತಿಂಬೊತ್ತಿದ್ದೊ. ಅವು ತಿಂಬಾಕನ ಮೆಂಟೆ ಸಬ್ದ ಕೇಳಿ ದನಂಗ ಬಂದೊಳತ ಅದರ ಬೆರ್‌ಸಕ್. ಓಡ್ಸಿಕೆ ಈಗ ಸುಲಬ ಆದೆ. ಇನ್ನೊಂದು ರೀತಿಲಿ ಸ ಮೆಂಟೆನ ಮಾಡ್‌ವೆ. ಇದ್ ಸಣ್ಣ ಪೆಟ್ಟಿಗೆನ ಹಾಂಗೇ ಉಟ್ಟು. ಅದರ ಕುತ್ತಿಗೆಲಿ


ಮೆಂಟೆ

ನೇತಾಡ್ಸಿ ಕಟ್ಟಿಕೆ ಆವ ಹಾಂಗೆ ಒಟ್ಟೆ ಉಟ್ಟು. ಇದರ ಮರಂದಲೇ ಮಾಡ್ದು. ತೆಳ್ಳನೆ ಹಲಗೆಲಿ ಈ ಪೆಟ್ಟಿಗೆ ಮಾಡ್‌ವೆ.

ಅದರ ಒಳಗೆ ಗಟ್ಟಿ ಇದ್ದ ಕಲ್ಲ್, ಜಲ್ಲಿ ಕಲ್ಲ್ ಒಳ್ಳದ್ ಹಾಕುವೆ. ದನದ ಕುತ್ತಿಗೆ ಆಡಿಕನ ಇದರ ಒಳಗೆ ಇರ್‌ವ ಕಲ್ಲ್ ಪೆಟ್ಟಿಗೆಗೆ ತಾಂಗಿ ಸಬ್ದ ಬಂದದೆ. (ಎಂ.ಜಿ.ಕೆ.)

**ಮೊಡ್ಪಾಳೆ :** ಮೊಡ್ಪಾಳೆಂತ ಹೇಳ್‌ರೆ ಕಮ್ಮುನ ಹಾಳೆಲಿ ಮಾಡ್‌ವ ಟೊಪ್ಪಿ. ಇದರ ಮೊಟ್ಪಾಳೆ, ಮಡ್ಪಳೆ, ಕೊಟ್ಪಾಳೆ ತ ಅರೆಬಾಸೆಲಿ ಕರ್ದವೆ. ಮೊಡ್ಪಾಳೆಲಿ ಹಲವು ಬಗೆಗ ಉಟ್ಟು. ಅಡ್ಡವಾಗಿ ದರಿಸುವ ಹಾಳೆಯ



ಮೊಡ್ಪಾಳೆ

ಟೊಪ್ಪಿಗೆ ಅಡ್ಡಮೊಡ್ಪಾಳೆ, ದೊಡ್ಡ ಇರುವ ಮೊಡ್ಪಾಳೆ ಗೋಂಪ ಮೊಡ್ಪಾಳೆ, ಈಂದ್‌ನ ಬೊಳ್ಳಿನ ಹೆಣ್ದ್ ಅಲಂಕಾರ ಮಾಡ್ದ ಮೊಡ್ಪಾಳೆಗೆ ಕನ್ನಿಮೊಡ್ಪಾಳೆ, ಒಂದ್ ಪಕ್ಕ ಚೂಪು ತುದಿ ಇರ್‌ವ ಮೊಡ್ಪಾಳೆ ಕೊಂಬುಮೊಡ್ಪಾಳೆ, ನೆರಿಗೆ ಇರ್ವ ಮೊಡ್ಪಾಳೆ ನೆರಿಮೊಡ್ಪಾಳೆ. ಇದ್ ನೋಡಿಕೆ ಮೊಟ್ಟೆಯಾಕಾರಲಿ ಇದ್ದದೆ. ಮೊಡ್ಪಾಲೆಗೆ ಕಡೆ ಕೊಡಿಂತ ಉಟ್ಟು. ಕೊಡಿ ಬಾಗ ಕೊಟ್ಟುನ ಆಕಾರ ತಲೆ ಮುಂಡ ಬಾಗಕ್ಕೂ ಕಡೆ ಬಾಗ ತಲೆ ಹಿಂಬಾಗಕ್ಕೂ ಇದ್ದದೆ. ಇನ್ನ್ ಮೊಡ್ಪಾಲೆನ ಎಡ ಪಕ್ಕ ಮತ್ತೆ ಬಲ ಪಕ್ಕ ಹಾಲೆನ ಮಡ್‌ಚಿ ಕಟ್ಟುವೆ. ಎರಡು ಪಕ್ಕಲಿ ಹಾಳೆನ ಮಡ್‌ಚಿದ ನೆರಿಗೆಗ ಇದ್ದ್ ಮೊಡ್ಪಾಳೆಗೆ ಒಂದ್ ಪೊರ್ಲುನ ರೂಪೊ ಕೊಟ್ಟವೆ. ಮೊಡ್ಪಾಳೆ ಮಾಡಿಕೆ ಅಡಿಕೆ ಮರದ ಹಾಳೆನ ಕೊಡಿ ಬಾಗ ಅಕು. ಸೋಗೆ ಹಣ್ಣ್ ಅಕನ ಮೊರಕ್ಕೆ ಅಂಟಿಕಂಡ ಹಾಳೆ ಬಿದ್ದದೆ. ಹಾಂಗೆ ಕೆಳ್ಗೆ ಬಿದ್ದ ಲಾಯಿಕಿನ ಸೋಗೆನ ಕಡ್ದ್ ಬೇರೆ ಬೇರೆ ಮಾಡಿ ಅದರ ಬಿಸಿಲಿಲಿ ಒಣ್ಗಿಸಿ ಬೆಚ್ಚ ಇರ್ವ ಜಾಗಲಿ ಇಸೊಕು. ಮೊಡ್ಪಾಳೆ ಮೊಡೆಯೆಕನ ಒಣ್ಗಿದ ಹಾಳೆಗೆ ಹನಿಸ್ ನೀರ್ ಹನಿಸಿ ರಾತ್ರೆ ಇಸಿರೆ ಬೋಳ್ಪಿಗೆ ಮೆತಂಗೆ ಅದೆ. ಮೊಡ್ಪಾಲೆನ ನಲಿಕೆ ಜನಾಂಗದವು ಮೊಡ್‌ದವೆ. ದೈವದ ಕೋಲ ಕಟ್ಟ ನಲಿಕೆ ಜನಾಂಗವ್‌ರ ಕೆಲ್ಸ ಪತ್ತನಾಜೆ ಮುಗ್ದದೆ. ಆಮೇಲೆ ಮಳೆಗಾಲಲಿ ಮೊಡ್ಪಾಳೆನ ಹೆಣೆವ ಕೆಲ್ಸ ಮಾಡ್ವೆ. ಹಾಳೆಗಳ್‌ಲಿ ಮರ್ಪಾಲೆ, ನೆಯಿಪಾಲೆಂತ ವಿದ ಉಟ್ಟು. ಮರ್ಪಾಲೆ ಸೆಗಣಿ ಕೆರೆಕನ ಬಳಸ್‌ವೆ. ಮರ್ಪಾಲೆ ಗಟ್ಟಿಯಾಗಿ ಇದ್ದದೆ. ಬಗ್ಗಿಕನ ಬಗ್ಗುದ್‌ಲೆ. ಅದರ ಮರಕೆಡ್ಡಿಂತೇಳ್ವೆ. ಮೊಡ್ಪಾಳೆಗೆ ನೆಯಿಪಾಲೆ ಲಾಯ್ಕ್, ಇದ್ ಮೆತ್ತಂಗೆ ಅಗಿ ಲಾಯಿಕಿಲಿ ಬಗ್ಗಿಸಿಕೆ ಆದೆ. ಅದರ ಎರಡ್ ಪಕ್ಕ ತಲೆ ಅಳತೆ ಹಿಡಿವಸ್ಟ್ ಕೊಯ್ದ್ ನೆರಿ ಬರುವಂಗೆ ಮಾಡೊಕ್. ಕೊಡಿನ ಮೊಡ್ಜಿ ಕೊಟ್ಟು ಬರುವಂಗೆ ಮಾಡಿ ಬೊಳ್ಳಿ ಕಟ್ಟೊಕ್. ಈ ಬೊಳ್ಳಿ ಬೈನೆ ಮರದ ಸೋಗೆನ ಎರಡ್ ಕಡೆ ಕನ್ನಿಂತೇಳುವ ಬೊಳ್ಳಿ ಇರುದು ಅದ್ ಸೋಗೆನ ಮರಕ್ಕೆ ಗಟ್ಟಿ ಅಪ್ಪಿಕಂಡ್ ಹಿಡಕಂಡ್ ಇದ್ದವೆ. ಇಲ್ಲರೆ ದಡ್ಪಾಲೆ ಮರದ ಜೋಂಕು ಬೊಳ್ಳಿನ ಸೂಜಿಲಿ ಹಾಕಿ ನೆಯ್ದವೆ. ಇದರ ನೆಯ್ಯಕೆ ಲಾಯಿಕ್‌ನ ಕೆಣಿ ಬೇಕ್. ನೆಯ್ಯವನ ಕೈ ಚಾಲಕ್‌ನ ರೂಪಲಿ ಮೊಡ್ಪಾಲೆಗೆ ಲಾಯಿಕ್ನ ಸುರ್ಪೊ ಬಾದು. ಹಿಂಗೆ ತಯಾರ್ ಮಾಡಿಕೆ ಏನೂ ಕರ್ಚಿಲ್ಲೆ. ಕ್ರಸಿಕರ್ ತೋಟಲಿ, ಗುಡ್ಡೆಲಿ, ಗದ್ದೆಲಿ ಕೆಲ್ಸ ಮಾಡ್‌ಕನ ತಲೆಗೆ ಬಿಸ್‌ಲ್ ತಾಂಗದಂಗೆ, ಹಂಗೆನೆ ಮಳೆ ಬಾಕನ ತಲೆಗೆನೀರ್ ಎಳಿಯದಾಂಗೆ ಇದ್ ಅವ್ಕೆ ರಕ್ಷಾಕವಚ ಅಗಿದ್ದದೆ. ಹಂಗೆನೆ ತೂಕದ ಹೊರೆ ಹೊರ್ಕನ, ಗೊಬ್ಬರ ಹೊರಿಕನ ತಲೆ ಒತ್ತದಂಗೆ ಇದರ ಇಸ್‌ವೆ. ಒಟ್ಟಾರೆ ಇದ್ ತಲೆಗೆ ಇಸ್‌ವ ಕಮ್ಮುನ ಹಾಳೆನ ಹೊದಿಕೆ. ತಲೆಗೆ ಕಟ್ಟುವ ಮುಂಡಾಸ್ ನಂಗೆ ಇದ್ದದೆ, ಇದರ ತುಳುಲಿ ತರೆತ್ರಂತೇಳಿ ಕರ್‌ದವೆ. ಮೊಡ್ಪಾಲೆ ಇಸಿರೆ ಕೆಲ್ಸದವುಂತ ಗುರ್‌ತ ಅದೆ. ಬೇಸಾಯ ಮತ್ತೆ ಸಂಸ್ಕೃತಿನ ಸಂಕೇತನೂ ಆದೆ. ಮಲೆನಾಡ್‌ನೆ ಜನಗ ಕಾಡ್‌ಲಿ ಹೋಕನ ತಲೆಗೆ ಅಡರ್, ಬೊಳ್ಳಿ ತಾಂಗದಂಗೆ, ಮುಳ್ಳು ಪರಂಕದಂಗೆ, ಕ್ರಿಮಿಕೀಟಗ, ಹಾವುಗ ತಲೆಗೆ ಬೀಳದಂಗೆ ಜಾಗ್‌ರತೆಗೆ ಇಸ್ವೆ. ಮೊಡ್ಪಾಳೆ ತಲೆಗೆ ಇಸುಕಂಬೊದರ್‌ಲಿ ಕೆಲವು ನಿಷೇಧಗ ಉಟ್ಟು. ಅಂತವರ್‌ಲಿ ದೆವ್ವದ ಚಾಕರಿ ಮಾಡ್ವ ಪೂಜಾರಿಗ, ದೆವ್ವಕಟ್ಟಂವ, ಮೊಡ್ಯೊಳ, ಸೂಟೆ ಹಿಡೆಂವ(ಕಾಪಡ) ಮೊಡ್ಪಾಳೆ ಇಸಿಕೆ ಬೊತ್ತುಂತ ಸಾಮಾಜಿಕ ಕಟ್ಟಲೆ ಉಟ್ಟು. ಮುಂಡಾಸ್‌ನಂವ ಬಾದ್‌ಲೆ, ಮೊಡ್ಪಳೆಯವಂಗೆ ಕೊಡ್‌ದುಲೆಂತ ಒಂದು ಗಾದೆನೂ ಉಟ್ಟು. (ಬಿ.ಎ.)

**ಹಲ್ಲ್ ಕತ್ತಿ :** ಕೆಯ್ಯಿ ಕೊಯ್ಯುವ ಕತ್ತಿ. ಕತ್ತಿ ಬಾಯಿಲಿ ಗರಗಸದ ಹಾಂಗೆ ಹಲ್ಲ್ ಇರ್‌ದರ್‌ಂದ ಹಲ್ಲ್ ಕತ್ತಿಂತ ಹೇಳ್‌ವೆ. ಬತ್ತದ ಬೇಸಾಯ ಸುರು ಆಕನವೇ ಇಂತಾ ಕತ್ತಿ ಇದ್ದಿರ್‌ದು. ಇದ್ ನೋಡಿಕೆ ಮಾಮೂಲಿ ಕತ್ತಿನ ಹಾಂಗೇ ಉಟ್ಟು, ಆದರೆ ಹಳ್ಳು ಎದ್ರ್‌ಗೆ ಬೊಗ್ಗಿಕನ್ ಉಟ್ಟು. ಹಿಡಕೆ ಮರದ ಹಿಡಿ ಉಟ್ಟು. ಕತ್ತಿನ ಬಾಯಿಲಿ ಗರಗಸದ ಹಲ್ಲ್‌ನ ಹಾಂಗೇ ಹಲ್ಲ್ ಉಟ್ಟು. ಇದರ ಕಬ್ಬಿಣದ ಆಚಾರಿಗ ಮಾಡ್‌ವೆ. ಇದರ್‌ಲಿ ಕೆಯ್ಯಿ ಕೊಯ್ಯೊಕೆ ಲಾಯ್ಕ್ ಆದೆ. ಕೆಯ್ಯಿ ಬುಟ್ಟೊರೆ ಹುಲ್ಲ್ ಕೊಯ್ಯಕೆ ಆದೆ. ಸೊಪ್ಪು ಸೌದೆಗೆ ಈ ಕತ್ತಿ ಆದುಲೆ. ಕೆಯ್ಯಿ ಕೊಯ್ಯೊಕೆ ಬೇರೆ ಮಾಮೂಲು ಕತ್ತಿನೂ ಆದೆ. ಹೆಚ್ಚ್ ಕಮ್ಮಿ ನಮ್ಮ ರಾಜ್ಯದ ಎಲ್ಲಾ ಊರ್‌ಲೂ ಇಂತದೇ ಕತ್ತಿ ಇರ್‌ದು. (ಎಂ.ಜಿ.ಕೆ.)

**ಹೆಡೆಗೆ :** ಹೆಡೆಗೆ ಸಾಮಾನ್‌ನ ತುಂಬಿಸಿ ಹೊರಿಕೆ ಬೇಕಾದ ಸೊತ್ತು. ಹೆಡೆಗೆನ ಮಾದ್ರಿ ಬೊಳ್ಳಿಲಿ, ಇಂಜಿರ್ ಬೊಳ್ಳಿಲಿ ಮತ್ತೆ ಬೆತ್ತದ ಬೊಳ್ಳಿಲಿ ಮಾಡ್‌ವೆ. ಮಾದ್ರಿ ಬೊಳ್ಳಿನ ಸಿಗ್ದ್ ಎರಡ್ ಬಾಗ ಮಾಡಿ ಅಲ್ಲರ್

ಸಪೂರದ ಬೊಳ್ಳಿ ಆದರೆ ಹಾಂಗೇ ಮುಡ್ದವೆ. ಇಂಜಿರ್ ಬೊಳ್ಳಿ ಆದರೆ ತೋರದ ಬೊಳ್ಳಿನ ತೆಳ್ಳಂಗೆ ಸಿಗ್ದ್ ಮುಡ್ದವೆ. ಬೆತ್ತನ ಸಿಗ್ದ್ ಅದರ ಬೆಂಡ್ ತೆಗ್ದ್ ಅದರ ಬಾಸ್ಲಿ ಹೆಡೆಗೆ ಮಾಡ್‌ವೆ. ಇದರ ಎರಡ್ ಪುಡೆಲೂ ಕೈ ಉಟ್ಟು. ಬೆತ್ತದ ಹೆಡೆಗೆನ ಬೆತ್ತದ ಬಾಸ್ಲಿ ಹಕ್ಕಲೆ ಹಕ್ಕಲೆ ಮುಡ್ದವೆ.



ಹೆಡೆಗೆ

ಇಂಜಿರ್ ಬೊಳ್ಳಿ ಹಕ್ಕಲೆ ಹಕ್ಕಲೆ ಉಟ್ಟು ಮತ್ತೆ ಬಾಸ್ ಹಜ್ಞ ಅಗಲ ಉಟ್ಟು. ಮಾದ್ರಿ ಬೊಳ್ಳಿದ್ ಬೆತ್ತದ ಹೆಡೆಗೆನ ಹಾಂಗೇ ಉಟ್ಟು. ಹೆಡೆಗೆನ ಕೊರಗರೇ ಮೆಡ್ಯೊದು. ಅಜಲರ್, ಮಾಯ್ಲುರ್ ಮೆಡ್ದವೆ. ಬಾಕಿದ್ದೊವು ಸ ಕಲ್ತ್‌ದ್ ಮಾಡಿಕಂಡವೆ. ಮೊಣ್ಣ್ ತುಂಬಿಸಿಕೆ, ಅಡ್ಕೆ ತುಂಬಿಸಿ ತಾಕೆ ಮಾದ್ರಿ ಬೊಳ್ಳಿನ ಹೆಡೆಗೆ, ಬೆತ್ತದ ಹೆಡೆಗೆ ಆದೆ. ಇಂಜಿರ್ ಹೆಡೆಗೆಗೆ ಸೆಗಣಿ ಮೆತ್ತಿ ಅದರ ಸೆರೆ – ಕಣ್ಣ್ ಮುಚ್ಚಿರೆ ಬತ್ತ ರಾಗಿ ಅಕ್ಕಿ ಎಲ್ಲ ತುಂಬಿಸಿಕೆ ಆದೆ. ಬೆತ್ತ ಸಿಗ್ದ್ ಸಪೂರ ಮಾಡಿ ಮೆಡ್ದ ಹೆಡೆಗೆ ಹುಗ್ಗೆ ತೋಂಡಿಕೆ ಆದೆ. ಬೆತ್ತದ ಬಾಸ್ ಸಪೂರ ಮಾಡ್ದಸ್ಟ್ ಹೆಡೆಗೆ ಲಾಯ್ಕ್ ಕಂಡದೆ ಮತ್ತೆ ಅದರ್‌ಲಿ ಸೆರೆ ಕಮ್ಮಿ ಉಟ್ಟು. (ಎಂ.ಜಿ.ಕೆ.)

**ಗದ್ದೆಗೋರಿನ ಹೇಳಿಕೆ ಕೊಣ್‌ತ :** ಬೇಸಾಯಗಾರರ್‌ಗೆ ಗದ್ದೆಗೋರಿ ಒಂದ್ ವಿಸೇಸ ಹಬ್ಬ. ಕ್ರಿಸಿ ಸಮ್ಮಂದಿ ಹಬ್ಬನ ಬಾರಿ ಗೌಜಿಲಿ ಬೇಸಾಯ ಮಾಡ್‌ವ ಮನೆವು ನಡ್ಸ್‌ತ್ತಿದ್ದೊ. ಊರುನ ಗಣ್ಯರ್‌ಗೆ ಮಾತ್ರ ಅಲ್ಲದೆ ಸಾಮಾನ್ಯ ಜೆನಂಗಳಿಗೆ ಕೂಡ ಡಂಗುರ ಸಾರಿ ಹೇಳಿಕೆ ಕೊಡುವ ಪೊದ್ದತಿ ಉಟ್ಟು. ಗದ್ದೆಗೋರಿಗೆ ದಿನ ನಿಗಂಟ್ ಆದ ಕೂಡಲೆ ಗೋರಿನ ದಿನಂದ ಒಂದ್ ವಾರಕೆ ಮುಂದೆ ಪಾಣಾರನೊಬ್ಬ ವಿಸೇಸ ಬಟ್ಟೆ ಹಾಕಿಕಂಡ್ ತೆಂಬರೆ ಬೊಟ್ಟಿಕಂಡ್ ಮನೆಮನೆಗೆ ಹೋಗಿ ಕೊಣ್ದ್‌ದ್ ಸಾರಿ ಹೇಳಿ ಮನೆವರ್‌ಂದ ಕಾಣಿಕೆ ಪಡೆವ ಕ್ರಮ ಇತ್ತ್.

**ಹೇಳಿಕೆ ಕೊಡವನ ವೇಸಬೂಸಣ :** ಡಂಗುರ ಸಾರಿಕೆ ಹೋಗೊವು ಈ ಕೊಣ್‌ತಕೆ ಅವರ್‌ದೆ ಬಗೆಲಿ ವೇಸಬೂಸಣಗಳ ತೊಟ್ಕಂಡವೆ. ಕೆಂಪು ಇಜಾರು ಹಾಕಿ ಕೆಂಪು ಉದ್ದಕೈನ ಅಂಗಿ ತೊಟ್ಟವೆ. ಸೊಂಟಕೆ ಚಿರಿ ಲಂಗ ಕಟ್ಟುವೆ. ಕೈಗೆ ಕೈನಾಗ, ಗಂಟ್ಲ್‌ಗೆ ತಿಗಲೆ ಜವರಿ ಇಳಿ ಬುಟ್ಟವೆ, ಅದರ ಮೇಲೆ ಹೂನ ಮಾಲೆ ಹಾಕಿಕಂಡವೆ. ತಲೆಗೆ ತಲೆಪಟ್ಟಿಕಟ್ಟಿ, ಕಿಬಿಗೆ ಕೆಬಿ ಅಣಿ ಚಿರಿಂದನೇ ಮಾಡ್‌ದ ಓಲೆ ಇದ್ದದೆ. ಮೋರೆಗೆ ಅರ್‌ದಾಲ ಹಾಕಿ ಕೆಂಪು ಕಪ್ಪು ಚುಕ್ಕಿ ಇಸಿ ನಾಮ ಹಾಕಿಕಂಡವೆ. ಕಾಲ್‌ಗೆ ಗಗ್ಗರ ಕಟ್ಟಿಕೊಂಡವೆ. ಅಲ್ಲರೆ ಇನ್ನು ಕೆಲವ್ ಕೊರ್‌ಗ ವೇಸ ಹಾಕಿಕೊಂಡವೆ. ಮೈಯೆಲ್ಲಾ ಕಪ್ಪು ಬಣ್ಣ ಮೆತ್ತಿಕಂಡ್ ಕೋಂಟು ಮುಟ್ಟಾಳೆ ಹಾಕಿಕಂಡ್ ಕಾಂಗ್ ಬಟ್ಟೆ ತೊಟ್ಟ್‌ಕಂಡ್ ಕೈಲಿ ಕೊಳಲ್ ಉರ್‌ಗಿದ್ ಕೊಣ್ಕಂಡ್ ಹೇಳಿಕೆ ಕೊಟ್ಟ್ ಬಂದವೆ.

**ಹೇಳಿಕೆನ ಮಾತ್‌ಗ :** ಕೊಣ್‌ತ ಮುಗ್ದ ಮೇಲೆ ವೇಸ ಹಾಕಿದಂವ ಕೋಮಟಿ ಸೊರಲಿ ಮನೆನ ಯಜಮಾನರ್‌ಗೆ ಕಂಬಳಕೆ ಬಾಕೆ ಹೇಳಿಕೆ ಕೊಟ್ಟದೆ. ಗುರುವಾರ ಕತ್ತಲೆಂದ ಕಂಬಳದ ಸುರಾದೆ. ಆ ಇರ್‌ಲ್ ನಾಗ ತನಿಪನ ಕ್ರಮ ಇದ್ದದೆ. ಮತ್ತೆ ಬೂತ ಕೋಲಗ ನಡ್‌ದದೆ. ಮಾರನೆ ದಿನ ಮೂರೆ ಕಾರ ಇದ್ದದೆ. ಮದ್ಯಾನ ಹೊತ್ತುಗೆ ಎಲ್ಲ ಮುಗ್ದದೆ ತ ಹೇಳುವೆ. ಇಲ್ಲಿ ಹೇಳಿಕೆ ಕೊಡುವವು ಕಂಬಳದ ಕ್ರಮನೆಲ್ಲ ಹೇಳಿ ಕಂಬಳದ ಸುರುನ ದಿನ ಎತ್ತ್‌ಗಳ ಹೊಡ್ಕಂಡ್ ನೊಜ್ಜ ನೇಗ್‌ಲ್ ಹಿಡ್ಕಂಡ್ ಕಂಬಳಕೆ ಬರೋಕು ತೇಳ್‌ವ ಬದ್‌ಲ್ ಎತ್ತುಗಳ ಗುಡ್ಡೆಗೆ ಹೊಡಿಯಕು, ನೊಜ್ಜ ನೇಗ್ಲ್ ಹೆಗ್‌ಲಿಸಿಕಂಡ್ ಸನಿವಾರ ನೀವೆಲ್ಲ ಬನ್ನಿತೇಳಿ ಹಾಸ್ಯ ಮಾಡ್‌ದೆ. ಇಂತ ಹಾಸ್ಯದ ಮಾತ್ ಅಂವನ ಎಲ್ಲವ್ ನೋಡುವಾಂಗೆ ಮಾಡ್ದೆ. ಬರಿ ಹೇಳಿಕೆ ಮಾತ್ರ ಕೊಟ್ಟರೆ ಅಂವನ ಕಡೆಗೆ ಗಮನ ಕೊಡೊವು ಯಾರೂ ಇರುದುಲೆ.ಗಟ್ಟಿಲಿ ಹೇಳಿರೆನು ಪ್ರಯೋಜೆನ ಇಲ್ಲೆ. ಯಾರಾರ್ ಮಾತಾಡ್ಸಿರೆ ಮಾತ್ರ ಅವಂಗೆ ಒಂದ್ ಕಾಯಿನೊ ಪೊಡಿಕಾಸ್ ಸಿಕ್ಕುದು, ಈ ಕೊಣ್‌ತದ ಬಗೆಗೆ ಯಾದೇ ಆಚರಣೆಗ ಇರ್‌ದುಲೆ. ಆದರೆ ಮಾತ್‌ಲೆ ಕೊಣ್‌ತಗಳ ಹೇಂಗೆ ಬಳ್‌ಸಿಕಣಕ್ ತೇಳ್‌ದಕೆ ಇದೊಂದ್ ಒಳ್ಳ ಉದಾರಣೆ. (ಪಿ.ಆರ್.)

**ಪೂಕಳೆ ಹಾಕುದು :** ಗದ್ದೆಗೋರಿನ ದಿನ ಮದ್ಯಾನದವರೆಗೆ ಗದ್ದೆಲಿ ಗದ್ದೆಗೋರಿ ನಡ್ಸುವೆ. ಊರ್‌ನವೆಲ್ಲ ತಮ್ಮ ತಮ್ಮ ಜೋಡಿ ಎತ್ತ್‌ಗಳ ತಂದ್ ಉಳುಮೆ ಸುರ್‌ಮಾಡ್‌ವೆ. ಕೆಲವೊಮ್ಮೆ ಪರವೂರ್‌ನವು



ಪೂಕಳೆ ಹಾಕುದು

ಕೂಡ ತಮ್ಮ ಜೊತೆ ಎತ್ತುಗಳೊಟ್ಟಿಗೆ ಬಂದ್ ಹೂಡಿಕೆ ಸೇರ್‌ದು ಉಟ್ಟು. ಹೂಡುವ ಹೊತ್ತುಗೆ ಗದ್ದೆನ ಹಕ್ಕಲೆರ್‌ವ ನಾಗಬನಲಿ ಬಟ್ರ್‌ಗ ನಾಗತಂಬಿಲ ನಡ್ಸುವೆ. ಹೂಡಿ ಆದ ಮೇಲೆ ಕೂಡಿರುವ ಜೊತೆ ಎತ್ತುಗಳ ಅದೇ ಗದ್ದೆಲಿ ಪೋರ್‌ತ್‌ಗೆ ಓಡ್ಸಿ ಕಂಬಳ ನಡ್ಸುವೆ. ತುಳುನಾಡ್‌ನ ಪ್ರಸಿದ್ಧ ಜಾನಪದ ಕ್ರೀಡೆ ಕಂಬಳ ಗದ್ದೆಗೋರಿಂದಳೆ ಸುರು ಆತ್ ತೇಳ್ದು ವಿದ್ವಾಂಸರ್ ಅಬಿಪ್ರಾಯ ಪಟ್ಟವೆ. ಕಂಬಳ ಮುಗ್ದ ಮೇಲೆ ಉಳುಮೆ ಮಾಡ್ದ ಎತ್ತುಗಳ ಗದ್ದೆಂದ ಮೇಲೆಗೆ ಹತ್ತ್‌ಸುವೆ. ಯಜಮಾನನ ಮನೆನ ಒಂದ್ ಜೊತೆ ಎತ್ತ್‌ನ ಗದ್ದೆಯೊಂದರ್‌ಲಿ ಕಡೇಲಿ ನಿಲ್ಸ್‌ಸಿ ಬುಟ್ಟವೆ. ಆ ಎತ್ತ್‌ಗಳಿಗೆ ಕೋಲ್ತಿರಿಂದ ಆರತಿ ಮಾಡಿ ಕುರ್‌ದಿ ನೀರ್ ಚೋಂಪುವೆ. ಇದರ ಕುರ್‌ದಿ ಮೀಸುದುತ ತೇಳುವೆ ಮತ್ತೆ ಎತ್ತ್‌ಗಳ ದುಂಡ್ ತೊಳ್ದ್ ಮೇಯಕೆ ಬುಟ್ಡವೆ. ಕೂಡ್ದವೆಲ್ಲ ಊಟ ಮಾಡ್‌ವೆ. ಮದ್ಯಾನ ಮೇಲೆ ಮನೆನ ಯಜಮಾನ, ಕುಟುಂಬದವ್, ಒಳ್ದವ್ ಚಾವಡಿಲಿ ಇಲ್ಲರೆ ಗದ್ದೆನ ಕರೆಲಿ ಕಟ್ಟಿದ ಮಂಟಪಲಿ ಸೇರುವೆ. ಪರವೂರ್‌ಂದ ಬಂದ ನೆಂಟ್ರ್‌ಗಳಿಗೆ ಸತ್ಕಾರ ನಡ್ದದೆ. ಕೂಡ್ದ ಜೆನರ ಮುಂದೆ 'ಎರುಕೋಲ' ಮತ್ತೆ 'ಕುದುರೆ ಕೋಲ' ನಡ್ದದೆ. ಇದಾದ ಮೇಲೆ ಪೂಕರೆ ಹಾಕುವ ಕ್ರಮ ಸುರಾದೆ.

ಸಾದಾರಣ 20ರ್‌ಂದ 25 ಅಡಿವರೆಗಿನ ಎತ್ತರದ ಕಮ್ಮು ಇಲ್ಲರೆ ದೂಪದ ಮರನ ಪೂಕರೆ ಮಾಡಿಕೆ ಬಳ್‌ಸುವೆ. ಮರದ ನೊಡುಂದ ಮೇಲೆ ಅಲ್ಲಲ್ಲಿ ಒಟ್ಟೆ ಮಾಡಿ ಅದ್ಕೆ ಒಂದೊಂದ್ ಮಾರು ಉದ್ದದ ಮರದ ಹಲಗೆಗಳ ಜೋಡ್‌ಸುವೆ. ಕೆಳಬಾಗದ ಅಡ್ಡಗ ಹೆಚ್ಚ್ ಉದ್ದ ಇದ್ದವೆ. ಮೇಲೆಗೆ ಹೋದಂಗೆ ಸಣ್ಣಿತಾದೆ. ಮರದ ನಡುಂದ ಕೊಡಿವರೆಗೆ ಅಡ್ಡ ತಟ್ಟೆಗಳಿಗೆ ಹೂನ ಮಾಲೆ ಹಾಕಿದ್ದವೆ. ಇದರ ಪೂಕರೆ ತೇಳುವೆ. ಕೋಣೆ ಕೋಣೆ ಆಗಿರುವ ಪೂಕರೆನ ನೆಟ್ಟಂಗೆ ನಿಲ್ಸಿಕಾಕನ ಒಂದ್ ಸಿಂಗರ್‌ಸಿದ ತೇರ್‌ನಾಂಗೆ ಕಂಡದೆ. ಪೂಕರೆನ ಬಂಡಿಗೇರಿಸುವೆ. ಬಂಡಿಲಿ ಪೂಕರೆನ ಮಾಡ್ದ ಆಚಾರಿ ಕುದ್ದಿದ್ದದೆ. ಅಂವ ಹೇಳ್ದಾಂಗೆ ಸೇರ್‌ದ ಜೆನ ಬಂಡಿನ ಗದ್ದೆಗೆ ಬೊಳ್ಳಿ ಹಾಕಿ ಎಳ್‌ದವೆ.ಆಚರಿ ಅಂವನ ಕೈಚಳ್ಕಂದ ಮಾಡ್‌ದ,ಕೆಲ ಕೊಂತಾಣ ಮಾಡಿ ಪೂಕರೆ ಏರ್‌ದ ಬಂಡಿ ಮುಂದೆಗೆ ಹೋವಂಗೆ ಮಾಡ್‌ದೆ. ಕೊಂಬು, ವಾಲಗ, ತಮಟೆ, ಡೋಲಿನ ಹಿಮ್ಮೇಳದವು ಬಂಡಿನ ಹಿಂದೆ ಹಾಕುವೆ.ಕೂಡ್ದ ಜೆನ ಕೂಡಾ ಮೆರವಣಿಗೆಲಿ ಹೋದವೆ. ಗದ್ದೆನ ನಡುಲಿ ಒಂದ್ ಹೊಂಡ ತೆಗ್ದ್ ಅದ್ಕೆ ಹಾಲ್ ಹೊಯಿದ್ ಪೂಕರೆನ ನೆಟ್ಟವೆ. ಮತ್ತೆ ಬಂಡಿನ ಹಿಂದೆಗೆ ಎಳ್‌ದ್ ತಂದವೆ.

ಪೂಕರೆ ನೆಟ್ಟ ಮೇಲೆ ಎಲ್ಲವೂ ಯಜಮಾನನ ಮನೆನ ಕಡೆ ಬಂದವೆ. ಯಜಮಾನ ಮೆರವಣಿಗೆನ ಮುಂದೆ ಇದ್ದದೆ. ಅಂವ ಮನೆ ಸೇರಿಕಾಕನ ಮನೆನ ಹೆಣ್ಮಕ್ಕ ಅಂವನ ಕಾಲ್‌ಗೆ ನೀರ್ ಹೊಯಿದ್ ಆರತಿ ಮಾಡಿ ಕುಂಕುಮ ಹಾಕಿ ಒಳಗೆ ಕರ್‌ಕಂಡವೆ. ಕಾಪಾಡನು (ಮುಗ್ಗೇರ ಗುರಿಕಾರ) ಉರಲ್ ಹೇಳಿಕಂಡ್ ಗದ್ದೆಂದ ಬಂದ್ ಮನೆನ ಇಜ್ಜಲ್‌ಲಿ ನಿತ್ತದೆ. ಮನೆವು ಅವಂಗೆ ಒಂದ್ ಬಾಳ್‌ಲೆಲಿ ಹುಗ್ಗೆ ಸಾರ್ ಹಾಕಿ ಕೊಟ್ಟವೆ. ಅಂವ ಊಟ ಮಾಡ್‌ದೆ. ಒಂದ್ ಬಳ್ಳ ಬತ್ತ ಕುರಿ ಮುದ್ರೆ ಕೋಲ್ತಿರಿನ ಮನೆಯೊಳಗೆಂದ ದೆವ್ವದ ಪೂಜಾರಿ ತಂದ್ ಅಜಲರ ಮೂಪಂಗೆ ಕೊಟ್ಟದೆ.

ಅದರ ಅಂವ ತೆಕಂಡ್ ಇಜ್ಜಲ್‌ನ ಮೂಲೆಲಿಸಿದೆ. ಆ ದಿನ ಕತ್ತಲೆಗೆ ಬೂತ ಕೋಲಗ ನಡ್‌ದವೆ. (ಪಿ.ಆರ್.)

**ಕೆಡ್ಡಸ ಹಬ್ಬ :** ಕೆಡ್ಡಸ ಹೇಳ್ರೇ ಬೂಮಿ ಅವ್ವ ಮುಟ್ಟಾವ ದಿನತ ನಂಬಿಕೆ. ಈ ದಿನ ಗೌಡ ಜೆನಂಗ ಕೆಡ್ಡಸ ಹಬ್ಬ ಮಾಡ್‌ವೆ. ಈ ಆಚರಣೆನ ಪೆಬ್ರವರಿ ತಿಂಗಳ ಸುರುನ ವಾರಲಿ ಆಚರಣೆ ಮಾಡ್‌ವೆ. ಕೆಡ್ಡಸ ಬಾಕೆ ವಾರ ಇರ್‌ಕನನೇ ದಲಿತ ಜೆನಂಗ, ಅವರ ನಾವು ಅಜಲರ್ ತ ಹೇಳ್‌ವೆ. ಈ ಅಜಲರ್ ಮನೆ ಮನೆಗೆ ಹೋಗಿ ಕೆಡ್ಡಸದ ಬಗ್ಗೆ ಜೆನಂಗಳಿಗೆ ಹೇಳ್ವೆ, ಮತ್ತೆ ಅವು ಹೇಳ್ದ ದಿನದಂದ್


ಕೆಡ್ಡಸ

ಈ ಹಬ್ಬದ ಆಚರಣೆ ಮಾಡ್ದು ಪೊದ್ದತಿ. ಕೆಡ್ಡಸದ ಆಚರಣೆ ಮೂರ್ ದಿನಂಗಳವರೆಗೆ ನಡ್ದದೆ. ಸುರುನ ದಿನ ಬತ್ತದ ಗುಡ್ಡೆಗೆ ಮುಳ್ಳಿಸುದು, ಎರ್ಡನೇ ದಿನ ಬೂಮಿಗೆ ಎಣ್ಣೆಹಾಕುದು, ಮತ್ತೆ ಮೂರ್‌ನೇ ದಿನಕ್ಕೆ ಕೆಡ್ಡಾಸ ಬೇಟೆ.

ಮೂರ್‌ನೆ ದಿನದ ಸಿಕಾರಿಗೆ ಗೌಡ್ರ್‌ಗ ತುಂಬ ಒತ್ತು ಕೊಟ್ಟವೆ ಕೆಡ್ಡಾಸತ ಹೇಳ್‌ರೇ ಸಿಕಾರಿನೊಟ್ಟಿಗೆ ನಂಟಸ್‌ತನ ಇದ್ದಂಗೆ. 'ಕೆಡ್ಡ'ತ ಹೇಳಿರೆ ಸಿಕಾರೀಂತನೂ ಹೇಳ್‌ವೆತ ಅಮೃತ ಸೋಮೇಸ್ವರ ಹೇಳಿಯೊಳೊ. ಕೆಡ್ಡಾಸಲಿ ಕಾಡ್ ಮಾಸ ತಿನದ್ದರೆ ಎಲುಗೆ ಸಕ್ತಿ ಇರ್‌ದುಲೆ ಗಡ, ಹಂಗೆಂತ ಹೇಳ್‌ವ ಗಾದೆ ಮಾತ್ ಕೂಡ ಅರೆಬಾಸೆಲಿ ಉಟ್ಟು. ಕೆಡ್ಡಾಸ ದಿನ ಏನ್ ಸಿಕ್ಕಿತ್ಲರೆ ಹಸಿಮೀನ್ ಗೈಪು ಮಾಡಿಯಾರ್ ಉಂಡವೆ ನಮ್ಮ ಗೌಡ್ರುಗ. ಸಿಕಾರಿನ ಹಿಂದೆನ ದಿನ ನಲಕ್ಕೆ ಎಣ್ಣೆಕೊಡ್‌ವ ಕ್ರಮ, ಮೈ ನೆರ್‌ದ ಬೂಮಿ ಎಣ್ಣೆಕೊಡ್ವ ಸಾಸ್ತರಲಿ ಬೂಮಿ ಮೀದ್ ಮಡಿ ಆದೆ ಗಡ. ಹಂಗೇ ಇಜ್ಜಲ್ ಮುಂದೆನ ಬಾಗ್ಲ್‌ಲಿ ಸೆಗ್‌ಣಿ ಕೆರ್‌ದ್ ಅಲ್ಲಿ ಮಾಯ್ನಸೊಪ್ಪು ಕಾಯೆಣ್ಣೆ, ಹಲ್‌ಸ್‌ನ ಸೊಪ್ಪು ಸರ್ಳಿ ಸೊಪ್ಪು, ವೀಳ್ಯದೆಲೆ, ಅಡ್ಕೆ, ಸೀಗೆ, ಮಾಯ್‌ಪುನ ಸೂಡಿ, ಕತ್ತಿ,ಮೊಸಿ ತುಂಡ್ ಮತ್ತೆ ಬೆಳ್ಳಂಗೆ ಬಟ್ಟೆ ಹಾಕಿ ಇಸುವೆ. ಅಕ್ಕಿನ ಹೊರ್‌ದ್ ಹೊಡಿಮಾಡಿ, ಬೆಲ್ಲ ಹಾಕಿ ನೆಣ್ಣೆ ಅಕ್ಕಿನ ಇಸುವೆ. ಮನೆನ ಹಿರಿಯವ್ ಇದ್‌ಕೆ ಕೈ ಮುಗ್ದವೆ. ಮೈನೆರ್‌ದ ಹೆಣ್ಣ್ ಬೇಕಾದ ಸಾಮಾನ್‌ನ ಇಲ್ಲಿ ನಾವ್ ಕಾಣಕ್. ಹೆಣ್ಣ್ ಮೈನೆರಿಯಕನ ಮೀದ್ ಮೊಡಿಯಾಕೆ ಬಳ್ಸ್‌ವ ಸಾಮಾನ್‌ನ ಇಲ್ಲಿ ಕಾಣಕ್. ಕೆಡ್ಡಾಸದ ಸುರೂನ ದಿನ ಮನೆಲಿ ರಾಸಿ ಹಾಕಿದ ಬತ್ತಕೆ ಮುಳ್ಳಿಸುವೆ. ಕಾಡ್‌ಂದ ತಂದ ಒಂದ್ ಬಗೆನ ಮುಳ್ಳ್ (ಚೂರಿಮುಳ್ಳ್) ಸಣ್ಣ ಕಲ್ಲ್‌ನ ಬತ್ತದ ಮೇಲಿಸಿ ಒಟ್ಟಿಗೆ ಒಂದ್ ಸಣ್ಣಕತ್ತಿ ಇಸುವೆ. ದಲಿತ ಜೆನರ್‌ಲಿ ಗೂಡೆ ಮುಟ್ಟಾಕನ ಮುಳ್ಳು ಮೆಟ್ಟಿದ್ ತೇಳಿ ಹೇಳ್ವೆಗಡ. (ಪಿ.ಬಿ.)

ಒಕ್ಕಲ್ ಆದಮೇಲೆ ಬತ್ತನ ಪೂಜೆ ಮಾಡ್‌ವ ಹಬ್ಬ ಕೆಡ್ಡಾಸ ಹಬ್ಬ. ಇದರ ತುಳು ತಿಂಗದ ಪೊನ್ನಿ ತಿಂಗಲಿ ಮಾಡ್‌ವೆ. ಈ ಹಬ್ಬ ಮೂರ್ ದಿನ ಇದ್ದದೆ, ಸುರುನ ದಿನ ಲಕ್ಷ್ಮಿ ನ ಮನೆಗೆ ಹೋಕೆ ಬೊತ್ತ್ ತೇಳಿ ಬತ್ತದ ಕಡಿಕೆ ಮೇಲೆ ಚೂರಿ ಮುಳ್ಳು, ಕತ್ತಿ ಮತ್ತೆ ಕಲ್ಲ್‌ನ ಆಡ್ಕಿ ಇಸುವೆ.ಹಿಂಗೆ ಕಲ್ಲ್ ಮುಳ್ಳು ಕತ್ತಿ ಎಲ್ಲಾ ಬತ್ತದ ಕಡಿಕೆ ಮೇಲೆ ಇಸಿರೆ ಬತ್ತ ಹಂಗೇ ಇದ್ದದೆ ತ ನಂಬಿಕೆ, ಹಂಗೇ ತೂಕ ಇಸಿದ ಮೂರು ದಿನಂಗಳವರೆಗೆ ಅಲ್ಲಿಂದ ಬತ್ತನ ತೆಗಿಯಕೆ ಬೊತ್ತು. ಎರ್‌ಡನೇ ದಿನ ಮನೆ, ಇಜ್ಜಲ್ ಗುಡ್ಸಿ ಮನೆ ಮಕ್ಕ ಯೆಲ್ಲಾ ಮೀದ್ ಒಗ್ದ ಬಟ್ಟೆ, ಕುಪ್ಪಸ ಹಾಕಿ ಆರಾಮಲಿ ದಿನ ಕಳ್ಯಕು. ಅಂದ್ ಕೆಲವ್ ಬೇಟೆಗೆ ಹೋವ ಹುಚ್ಚಿ ಇರೊವು ಕಾಡ್‌ಗೆ ಹೋಗಿ ಬೇಟೆ ಆಡ್‌ವೆ, ಇನ್ನ್ ಕೆಲವ್ ಕಾಯರಕಾಯಿ ಉಮರ್ ಬೊಳ್ಳಿ ಗುದ್ದಿ ರಸ ತೆಗ್ದ್ ಅದ್ಕೆ ಬೂದಿ ಮಿಸ್ರ ಮಾಡಿ ಚಾರ್, ಚೋಡಿಗಳಿಗೆ ಹಾಕಿ ಮೀನ್, ಯೆಸ್‌ಂಡ್ ಹಿಡ್ದವೆ. ಇನ್ನ್ ಕೆಲವ್ ಜೆನಂಗ ಕೋಳಿ ಕಟ್ಟ, ಜುಗಾರಿ ಆಟ ಆಡ್‌ವೆ. ಹಿಂಗೇ ಆ ದಿನ ಯಾವ ಕೆಲ್ಸನೂ ಮಾಡದೆ ಮಾಸ, ಹಿಟ್ಟ್, ರುಚಿಯಾದ ಅಡ್ಗೆ ಮಾಡಿಕಂಡ್ ಕುಸಿಲಿ ದಿನ ಕಳ್ದವೆ. ಮಾರ್‌ನೆ ದಿನದ ಮೇಲೆ ಬೇಸಿಗೆ ಕಾಲ ಬಂದದೆ ಹೇಳಿ ಬೂತಾಯಿ ತಣ್ಣಂಗೆ ಇರೋಕು ತೇಳಿ ನೆಲಕ್ಕೆ ಎಣ್ಣೆ ಬುಡುವ ಸಾಸ್ತ ಮಾಡಿಕೆ ಮನೆನ ಮುಂದೆನ ಇಜ್ಜಲ್‌ಗೆ ಸೆಗ್‌ಣಿ ಕೆರ್‌ದ್ ಅದೇ ಜಾಗೆಲಿ ಪೊರ್‌ಲ್‌ನ ರಂಗೋಲಿ ಹಾಕಿ ಕಾಯೆಣ್ಣೆ ಹೊಯ್ದ್ ಸೆಗ್‌ಣಿ ಕೆರ್‌ದ ಜಾಗೆಲಿ ಮೊಸಿ ಚೂರು, ಸೀಗೆಚೂರು ಕತ್ತಿನ ಇಸುವೆ. ಇದರ ನಂಬಿಕೆ ಎಂತ ಹೇಳ್ರೆ ಬೂಮಿತಾಯಿ ವರ್‌ಸ ಪೂರಾ ಅಸುದ್ದ ಅಗಿದ್ದದೆ, ಹಂಗೆ ಈ ಕೆಡ್ಡಾಸದ ಹೊತ್ತುಲಿ ಮೀಸಿ ಮೊಡಿಮಾಡಿ ಸುದ್ದ ಆಕು ತೇಳುವ ನಂಬಿಕೆ. ಹಿಂಗೇ ಕೆಡ್ಡಸ ಹಬ್ಬನ ಮೂರ್ ದಿನಗಳವರೆಗೆ ಆಚರ್‌ಸುವೆ. (ಎಂ.ಎಂ.ಎಸ್.)

ಅರೆಬಾಸಿಗರ್ ಮತ್ತೆ ತುಳು ನಾಡ್‌ಲಿ ಬತ್ತ ಬೇಸಾಯನ ಹೊಂದಿಕಂಡ್ ನಡ್‌ಸ್‌ವ ಆಚರಣೆ ಕೆಡ್ಡಸ. ತುಳು ತಿಂಗಳ ಪೊನ್ನಿಲಿ (ಸಾಮಾನ್ಯ ಪೆಬ್ರವರಿ 9ನೇ ದಿನಾಂಕ) 27ನೇ ದಿನಂದ ಸುರು ಆಗಿ ಕುಂಬ ಸಂಕ್ರಮಲಿ ಮುಗ್ದದೆ. ಜೆನಪದರ ನಂಬಿಕೆ ದೆವ್ವ ದೇವರುಗೆನು ನಮ್ಮ ಹಾಂಗೆ ಬಾವನೆ–ಪ್ರವೃತಿಗ ಉಟ್ಟುಂತ ನೆನ್ನೊಳ. ಕೆಡ್ಡಸ ಆಚರಣೆಲಿ ಈ ಸಂಗತಿನ ಕಾಂಬಕೆ ಸಾದ್ಯ ಆದೆ. ಕೆಡ್ಡಸಂತೇಳ್ರೆ ಮೈಲೆ ಕಳೆವ ಆಚರಣೆ. ಕ್ರಿಸಿಗೆ ಆದಾರ ಆಗಿರುವ ಬೂಮಿನೂ ಪ್ರಯೊಜೆನನ ಸಕ್ತಿ ಇರ್‌ವ ಹೆಣ್ಣಿನ ಹಾಂಗೆ, ತ ಗ್ರೆಸಿ, ಬೂಮಿನೂ ಪ್ರಾಯನ ಹೆಣ್ಣ್‌ಗೂ ತಿಂಗಳಾವರ್‌ತಿ ಮುಟ್ಟಾಗುವ ಹಾಂಗೆ ವರ್‌ಸಾವರ್‌ತಿಲಿ ಒಮ್ಮೆ 'ಮುಟ್ಟು' ಆದೆ ತೇಳ್‌ವ ನಂಬಿಕೆನ ಕೆಡ್ಡಸ ಆಚರಣೆಲ್ಲಿ ಕಂಡವೆ. ಈ ಅಚರಣೆ ಮೂರು ದಿನಗಳ್‌ಲಿ ನಡ್ದದೆ. ಬೂಮಿನ ಒಡೆತನನೊಟ್ಟಿಗೆ ಈ ಆಚರಣೆ ನೇರ ಸಮ್ಮಂದ ಪಡ್ಕೊಂಡುಟ್ಟು. ಬೂರಹಿತರ್ ಈ ಆಚರಣೆನ ನಡ್ಸುವ ಪೊದ್ದತಿ ಇಲ್ಲೆ.

ಕೆಡ್ಡಸನ ವಿದಿ–ವಿದಾನ ತುಂಬಾ ಉಟ್ಟು, ಸುರುನ ದಿನ ಜಾಲುನ ಒಂದ್‌ಕರೆಲಿ ಸೆಗಣಿ ಗುಡ್ಸಿ ಸುದ್ದ ಮಾಡ್‌ವೆ. ಬಿಳಿ ಬೂದಿ/ ಜೇಡಿಮೊಣ್ಣುಂದ ಚೌಕ ಬರ್‌ದವೆ ಬೆಳ್ಚರ್‌ಗೆ ಚೌಕ ಬರ್‌ದರ್‌ಲಿ ಬಾಳೆಲಿ 'ನನ್ನೆರಿ' ಬಳ್ಸುವೆ. (ಅಕ್ಕೊಡಿ, ಹೊದ್‌ರಿ, ಬೆಲ್ಲದಹೊಡಿ ಸೇರ್‌ಸಿ ಮಾಡ್ವ ಒಂದ್ ಬಗೆನ ತಿಂಡಿ). ಇದ್ ಪುಸ್ಟಿಗೆ ಸಮ್ಮಂದಿಸಿದ ಪದಾರ್‌ತನ ಸಂಕೇತ. ಇದ್ ಸುರುನ ಸರ್‌ತಿ ಮುಟ್ಟಾವ ಗೂಡೆಗೆ ಮೊದ್ದ್ ಮಾಡ್‌ವ ರೂಡಿನ ತೋರ್‌ಸಿದೆ. ಈ ದಿನದ ಮದ್ಯಾಹ್ನದ ಊಟಲಿ ನುಗ್ಗೆ– ಬದನೆಕಾಯಿನ ಸಾಂಬಾರ್ ಇರೊಕುಂತ ನಂಬಿಕೆಲಿ ಇದ್ದೆ ಇದ್ದದೆ. ಇಲ್ಲರೆ ಎಲುಬು ನುಗ್ಗುನುರಿಯಾದೆ ತ ನೆನ್ಸುವೆ. ಎರಡನೆ ದಿನ ನಡು ಕೆಡ್ಡಸ. ಈದಿನ ಕೋಳಿ ಕಟ್ಟ ನಡ್ದದೆ. ಮೀನುಬೇಟೆ ಮಾಡ್ವೆ. ಈ ದಿನದ ಕಾಡ್‌ನ ಮೃಗ ಬೇಟೆನ ಪ್ರತ್ಯೇಕ ಕೆಡ್ಡಸನ ಬೇಟೆಂತ ಕರ್‌ದವೆ. ಕೆಡ್ಡಸದ ದಿನಲಿ ಕಾಡ ಮೃಗಗ ಕಾಲಕುಂಟ ರೋಗಲಿದ್ದವೆ ತ ಜೆನಗ ನಂಬ್ಯೊಳ. ಈ ಕಾರಣಕೆ ಬೆಳೆಗೆ ತೊಂದರೆ ಕೊಡ್ವ ಮೃಗನ ಬೇಟೆ ಪೊಲ್ಲಿ. ಆ ದಿನದ ಬೇಟೆ ಸಂಗತಿನ ಊರುನ ಅಜಲ ಮನೆಮನೆಗೆ ಮುಟ್ಟಸಿದೆ. ಜೆನ ಸೇರಿ ಬೇಟೆ ಮಾಡ್ದ ಮೃಗಗಳ ಪಾಲ್ ಮಾಡಿಕಂಡವೆ. ಜೆನಂಗಳಿಗೆ ಮನೋರಂಜೆನೆನೂ ಆದೆ.

ಮೂರನೇ ದಿನ ಕುಂಬ ಸಂಕ್ರಮಣ. ಬೆಳ್ಗರ್‌ಗೆ ಕೋಳಿ ಕೂಂಗುವ ಹೊತ್ತುಲಿ ಸುರುಗೆ ಚೌಕ ಬರ್‌ದದರ್‌ಲಿ ಮನೆನ ಮುತ್ತೈದೆ ಹೆಂಗ್‌ಸು ತಲೆಲಿ ಏಳ್ ಸರ್ಳಿ, ಮಾಯಣ ಸೊಪ್ಪುಗಳ ಕೊಡಿ ಪಡ್ವ ದಿಕ್ಕ್‌ಗೆ ಇರುವಾಂಗೆ ಜೋಡ್ಸಿ ಇಸಿದೆ. ಚಿಪ್ಪಿಗಳ್‌ಲಿ ಸೀಗೆ, ಅರ್‌ಸಿನ ಕಾಯಿ ಹಾಲು, ಗರಿಕೆ ಕೊಡಿಗ, ಎಣ್ಣೆನ ಜೋಡ್ಸುವೆ. ಚಾಳೆ ಒಲಿಂದ ಮಾಡ್ದ ತೆಟ್ಟಿನ ಮೇಲೆ ನೀರ್ ಚೊಂಬು ಕರೆಲೆ ಮಣೆ ಮೇಲೆ ದೀಪನ ಹೊತ್ತುಸುವೆ. ಹೆಣ್ಣ್‌ನ ಐತ ಮಾಡಿಕೆ ಬೇಕಾದ ಕುಂಕುಮ ಕರ್‌ಡಿಕೆ, ಕನ್ನಡಿ, ಆಬರಣ ಇಸಿ ಆದ ಮೇಲೆ ಸೀಗೆ, ಅರಸಿನ, ಕಾಯಿ ಹಾಲ್ನ ನೆಲನ ಮೇಲಿಂದ ಸೇರ್‌ಸುವೆ. ಈ ವಿದಿ ಋತುಮತಿ ಕನ್ನಗೆ ಮಾಡ್ವ ಋತುಸಾಂತಿ ವಿದಿನ ನೆಂಪುಸಿದೆ. ನೆಲನ ನೀರ್‌ಂದ ಚಿಮ್ಮಿಸಿದ ಮೇಲೆ ಎಣ್ಣೆನ ನೆಲದ ಮೇಲೆ ಹೊಯ್ದುವೆ. ಈ ಎಣ್ಣೆ ಹೊಯ್ಯುವ ವಿದಿ ಕೆಡ್ಡಸನ ಮುಕ್ಯ ಅಂಗ ಆದ ಕಾರಣಂದ ಕೆಡ್ಡಸನ 'ಬೂಮಿಗೆ ಎಣ್ಣೆ ಹೊಯ್ಯುವ ಆಚರಣೆಂತನೂ ಕರ್‌ದವೆ. ಪುಸ್ಪವತಿ ಆದ ನೆಲವೆಣ್ಣ್‌ನ ಮೈಲೆ ಕಳ್ದ್ ಫಲವತಿಯಾಗುವಂಗೆ ಹರಸಿ ಮನೆನೊಳಗೆ ಕರ್‌ಕಂಡ್ ಬಾವ ಬಗೆನ ನಾವಿಲ್ಲಿ ಕಂಡವೆ. ಎಣ್ಣೆ ಹೊಯ್ದದಾದ ಮೇಲೆ ಇಸಿದ ಐತನ ಸಾಮಾನ್‌ಗಳೊಟ್ಟಿಗೆ ಅಡುಗೆ ಮನೆಗೆ ಬಂದ್ ಮಣೆಲಿ ದೀಪ ಹೊಯ್ಸಿ ಎದ್‌ರ್‌ಲಿ ನಮೂನೆ ನಮೂನೆನ ತರ್‌ಕಾರಿಂದ ಮಾಡ್ದ ಗೈಪುಗಳೊಟ್ಟಿಗೆ ಅಕ್ಕಿ ತಿಂಡಿಗಳ ಎಡೆ ಬಳ್ಸಿದ್ ಸಕಲ ಸಂಪತ್ತ್ ಮತ್ತೆ ಸಂತಾನ ಪ್ರಾಪ್ತಿನ ಕೊಡೋಕುಂತ ಬಿನ್ನೆಮಾಡಿಕಂಡವೆ.

ವಿದ್ವಾಂಸರ್ ಕೆಡ್ಡಸನ 'ಬೂಮಿ ಅವ್ವ ಮೀವ ಹಬ್ಬ ತೇಳಿ ಕರ್‌ದೊಳೊ. ಕೆಡ್ಡಸ ಪದ ಪರಿಕಲ್ಪನೆನ ಅವು ಕೇಟ, ಕೆಡ್ಡ, ಕೆಡ್ಡ ಪದಗ ಪಡೆವ ಬೇಟೆ ಅರ್‌ತಂದ ಗ್ರಹಿಸೊಳೊ. ಹಾಂಗೆತ್ತೇಳಿ ಕೆಡ್ಡಸನ ಬೇಟೆಂತ ಹೇಳಿದೆ ಅರ್‌ತನ ಗ್ರಹಿಸುದು ಸರಿ ಕಾಂಬೋದ್‌ಲೆ. ಕೆಡ್ಡಸ ಆಚರಣೆ ಆವ ದಿನಮಾನಂದ ಗ್ರಹಿಸಿರೆ ಈ ಇದ್ ಚಳಿಕಾಲ. ಪ್ರಾಣಿಗಳ ಕಾಲ್ ಒಡ್ದು ಈ ಕಾಲಲಿ ಸಾಮಾನ್ಯ ಸಂಗತಿ. ಬೇಟೆ ಆಡ್ದು ಸುಲಬ. ಚಳಿಂದ ಬೇಸಿಗೆಗೆ ಹೊರಳ್ವ ಈ ಕಾಲಲಿ ಪ್ರಕೃತಿಲಿ ಸಮತೋಲನ ತಪ್ಪಿದೆ. ವಸಂತ ಕಾಲನ ಗಾಳಿ ಬೀಸಿಕೆ ಸುರು ಅದೆ ಈ ಗಾಳಿನ 'ಕೆಡ್ದಸನ ಕರೆಗಾಳಿ' ತೇಳಿ ಕರಿದು ಕ್ರಮ. ಮುಟ್ಟಾದ ಕಾಲಲಿ ಹೆಣ್ಣ್‌ನ ಸ್ತಿತಿನೂ ಅಸ್ಟೆ; ಅವ್ಯವಸ್ತಿತ ಸ್ತಿತಿನೆ. ಒಟ್ಟಾರೆ ಈ ಸಂಕ್ರಮಣ ಕಾಲ ಕೆಟ್ಟ್ ಹೋದ ಬಗೆಲಿ ಇದ್ದದೆ,ಈ ಕೆಟ್ಟ ಸ್ತಿತಿಂದ ಸಜ ಸ್ತಿತಿಗೆ ಸುಬ ಹಾರೈಸ್ಸುವ, ಅದರ್‌ಂದ ಸಮೃದ್ಧಿನ ಬಯಸ್ವ ಹಬ್ಬನೇ ಕೆಡ್ಡಸ ಆಚರಣೆ. ಕೆಡುವಾಸಂದ ಕೆಡ್ಡಸ ತ ಹೇಳೊಕು.

ಕೆಡ್ಡಸನ ಹಿನ್ನೆಲಿ ಸುಮಾರ್ ನಂಬಿಕೆಗ ಇದ್ದು ಇವ್ ಎಲ್ಲನೂ ಹೆಣ್ಣ್‌ನ ಹೊಂದಿಕಂಡೆ ಒಳೊ. ಕೆಡ್ಡಸಲಿ ಬೂಮಿನ ಉಳುಮೆ ಮಾಡಿಕಾಗದ್. ಹೆಣ್ಣು ಆ ದಿನಗಳ್‌ಲಿ ಹೊರಗಾಕೆ ಆಗದ್. ಹೆಣ್ಣ್ ತೂಕ ಹೆಜ್ಜೆ ಹಾಕಿಕ್ಕಾಗದ್. ಮುತ್ತೈದೆ ಹೆಣ್ಣ್ ಮಾತ್ರ ಕೆಡ್ಡಸ ಆಚರಣೆ ನಡ್ಸಿಕೊಡೋಕು. ಇದ್ ನಂಬಿಕೆಗ. ಈ ಆಚರಣೆಲಿ ಹೆಣ್ಣ್ ಸಮ್ಮಂದನೇ ಜಾಸ್ತಿ ಇರ್‌ದು. ಜೆನ್ಮ ನಿಡ್ವ ಅಂದರೆ ಹೊರಗಾಗುವ ಹೆಣ್ಣಿಗೆ ಮಾತ್ರ ಫಲವತ್ತತೆ ಇರ್‌ದು. ಸೂತಕ ಆಂದರೆ ದೋಸ. ಕರೆ ಗಾಳಿ ಬೀಸುವ, ಮತ್ತೆ ವಸಂತ ಕಾಲಲಿ ಮರ ದೈಗ ಹೂ ಬುಟ್ಟ್ ಫಲ ಬುಡಿಕೆ ತಯಾರಾವ ಕಾಲಲಿ ನಡೆವ ಕೆಡ್ಡಸ ಆಚರಣೆನ ಕ್ರಿಯಾ ವಿದಿಗ ನೆಲದಮಣ್ಣ್ ಫಲವತಿಯಾಕುತ ಹಾರೈಕೆಲಿ ಸಾಂಕೇತಿಕ ಅರ್‌ತನ ಪಡ್ದವೆ. ಕೆಡುವಾಸ> ಕೆಡ್ವಾಸ>ಕೆಡ್ಡಾಸ>ಕೆಡ್ಡಸ ಹಿಂಗೆ ಕೆಡ್ಡಸ ಪರಿಕಲ್ಪನೆನ ಗ್ರಹಿಸಕ್. (ಪಿ.ಕೆ.)

**ಕೆಡ್ಡಸದ ಹೇಳಿಕೆ ಕೊಣ್‌ತ** : ಸುಳ್ಯನವರ ಹಬ್ಬಗಲ್‌ಲೆ ಕೆಡ್ಡಸ ವಿಸೇಸದ್. ಇದ್ ಅರೆಬಾಸಿಗರ ಮತ್ತೆ ತುಳುವರ ಪೊನ್ನಿ (ಪುಯಿಂತೆಲ್) ತಿಂಗಳ 27ರ್‌ಂದ ಸಂಕ್ರಮಣದವವರೆಗೆ ನಡ್ದದೆ. ಸೌರಮಾನದ ಮಕರ ಮಾಸದ 27ರ್‌ಂದ ಸುರಾದೆ. (ಫೆಬ್ರವರಿ 10ರಿಂದ 13ರವರೆಗೆ) ಈ ಕಾಲಲಿ ದೈಮರಗ ಸೊಪ್ಪುಗಳ ಉದ್‌ರಿಸಿಕಂಡ್ ಬೋಳಾಗಿದ್ದವೆ. ಜಾನಪದರ್ ಬೂಮಿ ದೇವಿನ ಹೆಣ್ಣ್ ತೇಳಿ ನೆನ್ಸುವೆ. ಹೆಣ್ಣ್ ಋತುಮತಿಯಾಗಿ ಮೀದ್ ಬಂದ್ ಗರ್‌ಬದರ್‌ಸಿ ಹೊಸ ಸೃಸ್ಟಿನ ಮಾಡ್‌ದೆ ತೇಳುದು ಜೆನರ ನಂಬಿಕೆ. ಈ ಹೊತ್ತುಲಿ ನಾಕ್ ದಿನ ಬೂಮಿದೇವಿ ಬಾರಿ ದುರ್‌ಬಲ ಆಗಿರುದರ್‌ಂದ ಮೊಣ್ಣ್ ಅಗೆಯಕಾಗದ್, ಉಳುಮೆಮಾಡಿಕಾಗದ್, ದೈಮರಗಳ ಕಡಿಯಕಾಗದ್ ಇಂತೆಲ್ಲ ನಂಬಿಕೆಗ ಒಳೊ. ಅಸ್ಟ್ ಮಾತ್ರ ಅಲ್ಲ ಕೆಡ್ಡಸಲಿ ಹಿಂದೆನ ಕಾಲಲಿ ಸಾಮೂಹಿಕ ಬೇಟೆ ನಡೆತಿತ್ತ್. ಈ ಕಾಲಲಿ ಚಳಿಂದಾಗಿ ಪ್ರಾಣಿಗಳಿಗೆ ಕಾಲು–ಬಾಯಿ ಬೇನೆ ರೋಗ ಬಂದದೆ. ಹಾಂಗಾಗಿ ಓಡಿಕೆ ಆದುಲೆ. ಹೆಂಗಸರ್ ಕೂಡ ಒನಕೆಲಿ ಬೊಡ್ದ್ ಮೃಗಂಗಳ ಕೊಲ್ಲಕ್ ತೇಳುವ ನಂಬಿಕೆ ಉಟ್ಟು. ಹಿಂದೆನ ಕಾಲಲಿ ಕಾಡ್ ಹೆಚ್ಚಾಗಿತ್ತ್. ಕಾಡ್‌ಲಿ ಪ್ರಾಣಿಗ ತುಂಬಿದ್ದರ್‌ಂದ ಹಂದಿ, ಜಿಂಕೆ ಇಂತೆಲ್ಲ ಪ್ರಾಣಿಗಳ್‌ಂದ ಕ್ರಿಸಿಗೆ ತುಂಬಾ ಉಪದ್ರ ಆಗ್‌ತ್ತಿತ್ತ್. ಈ ಎಲ್ಲ ಕಾರಣಗಳ್‌ಂದ ವರ್ಷಕ್ಕೊಮ್ಮೆ ಕೆಡ್ಡಸದ ದಿನ ಬೇಟೆ ಪೊಲ್ಲಿ ಸಂಪ್ರದಾಯ ಆತ್.

**ಕೆಡ್ಡಸದ ಹೇಳಿಕೆ** : ಕೆಡ್ಡಸ ಸುರು ಆವ ನಾಕೈದ್ ದಿನಗಳ ಮುಂದೆ ನಲಿಕೆಯವು ತೆಂಬರೆ ಬಡ್‌ದ್ಕೊಂಡ್ ಊರುನ ಮನೆ ಮನೆಗಳಿಗೆ ಹೋಗಿ ವಚನ ರೂಪಲಿರ್‌ವ ಹೇಳಿಕೆನ ಕೊಟ್ಟು ಕೊಣ್ದು ಮನೆವು ಕೊಟ್ಟ ಅಕ್ಕಿ ಕಾಯಿ ತೆಕಂಬ ಪೊದ್ದತಿ ಉಟ್ಟು. ಕೆಡ್ಡಸದ ಹೇಳಿಕೆ ಕೊಡುವವ್‌ಕೆ ನಿರ್‌ದಿಸ್ಟ ವೇಸಗ ಇರ್‌ದುಲೆ. ಕೆಲವ್ ಇಜಾರು ಹಾಕಿ ನಿಲುವಂಗಿ ಹಾಕಂಡ್ ಸೊಂಟಕೆ ಕಟ್ಟಿಕೊಂಡವೆ.ಮೋರೆಗೆ ಅರ್‌ದಾಳ ಹಾಕಿ ಕೆಂಪು ಬೊಟ್ಟು ಇಸಿಕಂಡವೆ. 'ಈಗೀಗ ಬರಿ ಪಂಚೆ ಉಟ್ಟ್,ಮೊಡಿನ ಉದ್ದ ತೋಳುನ ಅಂಗಿ, ಕೊರಳಿಗೆ ಸರ, ಹಣೆಗೆ ನಾಮ, ತಲೆಗೆ ಮುಂಡಾಸು, ಹೆಗಲಿಗೆ ಶಾಲು ಹಾಕಿಕಂಡವೆ. ಕೈಲಿ ತೆಂಬರೆ ಹಿಡ್‌ದ್‌ಕಂಡ್ ನಿಂತಲ್ಲೇ ಕೈ ಕಾಲ್ ಅಲ್ಲಾಡ್ಸಿ ಹಾವಬಾವ ಪ್ರದರ್‌ಶಿಸಿ ಹೇಳಿಕೆ ಕೊಟ್ಟವೆ. 'ಸೋಮಾರ ಕೆಡ್ಡಸ ಮುಟ್ಟುನೆ, ಅಂಗಾರ ನಡು ಕೆಡ್ಡಸ ಬುದವಾರೊ ಬಿರಿಪುನೆ. ಪಜಿ ಕಡ್ಡರೆ ಬಲ್ಲಿ ನುಂಗೆಲ್ ಪೊಲಿಪ್ಯರೆ ಬಲ್ಲಿ, ಅರಸುಲೆ ಬೋಂಟೆಗ್ ಸರ್‌ವೆರ್ ಉಲ್ಲಾಯನಕುಲು ಪೋವೊಡುಗೆ, ವಲಸಾರಿ ಮಜಲ್ ಕೂಡ್ದು ವಲಸಾರಿ ದೇರ್




ಪಾಲೆಚ್ಚಾರ್‌ಗ್ ಜಪ್ಪುನಗ ಉಲ್ಲಾಲ್ತಿನಕುಲು ಕಡೆಪಿಕಲ್ಲ ಕಂಜಿನ್ ನೀರ್ ಪಾಡೊಡು. ಓಡುಡು ಕಡೆವೊಡು, ಕಲ್ಲಡ್ ಪತ್ತವೊಡು ಮಲ್ಲ ಮಲ್ಲ ಮುರ್‌ಗೋಲು ಜತ್ತೊಂದು ಬರ್‌ಪ. ಬಣ್ಣೆಲ್ಲ ಬರಿಂಕ, ಉಬ್ದುಲ್ಲ ಪಂಜಿ ನಾಲ್ಕಾರ ಕಡಮ ಮಲ್ಲಿ ಉಳ್ಳ ಉರೆ ಜತ್ತೊಂದು ಬರ್‌ಪ. ಕಟ್ಟ ಇಜ್ಜಂದಿ ಬೆಡಿ ಕದಿಕಟ್ಟಂದಿನ ಪಗರಿ, ಕೈಲ ಕಡೆಲ ಉಜ್ಜೆರ್‌ಗೊಂಜಿ ಏರ್‌ಪು ಏರ್‌ಪಾದ್ ಇಲ್ಲ ಮುಡಂಕಿಲ್ಡ್ ಉಂತೊಡು. ಮುರ್‌ಗೊಲೆಗ್ ತಾಂಟವೊಡು. ಮಲ್ಲ ಮಲ್ಲ ಮುರ್‌ಗೊಲೆನ್ ಜೈಪೊಡು, ಎಂಕ್ ಅಯಿತ್ತ ಕೆಬಿ, ಕಾರ್, ಕೈ, ಉಪ್ಪು, ಮುಂಚಿ, ಮುಳಿ ಕೊರೊಡು ತೇಳಿರೆ, 'ಸೋಮವಾರ ಕೆಡ್ಡಸ ಸುರಾದೆ. ಮಂಗಳವಾರ ನಡುಕೆಡ್ಡಸ, ಬುದವಾರ ಮುಗಿದು. ಹಸಿ ಕಡಿಯಕಾಗದ್ ಒಣಗಲ್ ಮುರಿಯಕಾಗದ್. ಅರಸರ ಬೇಟೆಗೆ ಎಲ್ಲಒಡೆಯರ್ ಹೋಕಡ, ವಲಸಾರಿ ಮಜಲ್‌ಲಿ ಕೂಡಿ ವಲಸಾರಿ ಬೆನ್ನಟ್ಟಿ ಪಾಲೆಚ್ಚಾರಿಗೆ ಇಳಿಯಕನ ಒಡತಿಯರ್ ಅರೆಯುವ ಕಲ್ಲಿನ ಗುಂಡು ಕಲ್ಲ್‌ನ ನೀರ್‌ಲಿ ಹಾಕೋಕು. ದೊಡ್ಡ ದೊಡ್ಡ ಮೃಗಗ ಕಾಡ್ ಇಳ್ಕಂಡ್ ಬಂದವೆ. ಬಣ್ಣದ ಬರ್‌ಕ(ಕಾಡು ಕುರಿ), ಬಿರುಸ ರೋಮದ ಹಂದಿ, ನಾಕ್ ಕಾಲಿನ ಕಡವೆ, ಚುಕ್ಕೆ ಜಿಂಕೆಗ ಇಳ್‌ಕಂಡ್ ಬಂದವೆ. ಕಟ್ಟ್ ಇಲ್ಲದ ಬೆಡಿ, ಗರಿ ಇಲ್ಲದ ಅಂಬು,ಸೆಡೆನ ಹಿಡಿ, ಒನಕೆಗೊಂದು ಗರಿಕಟ್ಟೆ ಮನೆನ ಹಿಂದೆ ಮೈಲಿ ನಿತ್ತ್ ಕಣೋಕು. ಮೃಗಗಳಿಗೆ ತಾಂಗಿಸೋಕು. ದೊಡ್ಡ ದೊಡ್ಡ ಮೃಗಗಳ್‌ನ ಗೆಲ್ಲೋಕು. ನಂಗೆ ಅದರ ಕಾಲು, ಕೆಮಿ, ಉಪ್ಪು,ಮೆಣ್ಸ್, ಹುಳಿ ಕೊಡೋಕುತ ಹೇಳುವೆ.

**ವಿಶ್ಲೇಸಣೆ :** ಈ ಹೇಳಿಕೆಲಿ ಹಾಸ್ಯಪ್ರಜ್ಞೆ, ಗ್ರಾಮೀಣ ಜೀವನೋಲ್ಲಾಸ ಗಮನ್ಸಕ್. ಈ ಹೇಳಿಕೆಂದಾಗಿ ಬೇಟೆಯಾಡಿಕೆ ಊರವೆಲ್ಲ ತಮ್ಮ ತಮ್ಮ ಬೆಡಿ, ನಾಯಿಗಳ ಕರ್‌ಕಂಡ್ ಒಟ್ಟು ಸೇರುವೆ. ನಡು ಕೆಡ್ಡಸದ ದಿನ ದೊಡ್ಡ ಬೇಟೆನ ಸಂಪ್ರದಾಯ. ಹೊರ್‌ಡುವ ಮುಂದೆ ಪುರ್‌ಸಬೂತ ಹಾಂಗೆ ಮುಗೇರು ದೆವ್ವಗಳ್‌ನ. (ಈ ದೆವ್ವಗ ಬೇಟೆಗೆ ಸಾಕಾರ ಆವ ದೆವ್ವಗ) ಪ್ರಾರ್ತನೆ ಮಾಡಿ ಕಾಡ್‌ನ ಹುಗ್ಗುದು ರೂಡಿ.ಅಜಲರ್ ಡೋಲು ಬೊಟ್ಟಿಕಂಡ್ ಬೇಟೆಗಾರರ್‌ಗೆ ಪಾಸಡಿ ಕೊಟ್ಟ್‌ಕಂಡ್, ಹೊಗಳಿ ಕೇಕೆ ಹಾಕಂಡ್ ಒಂದಸ್ಟ್ ದೂರ ಹೋಗಿ ಒಂಚೂರು ಪೊಯ್ಯೆ ತೆಗ್‌ದ್ ಮುಂದೆ ಇಸಿ ಹೋದವೆ.

ಇದೊಂದು ಮೃಗಾಕರ್ಷಣೆನ ತಾಂತ್ರಿಕ ವಿದಿನ ಪಳೆಯುಳಿಕೆ. ಅದಾಗಿ ಬೇಟೆಗಾರರ್ ಉತ್ಸಾಹದಿಂದ ಮುನ್ನುಗ್ಗುವೆ. ಬೇಟೆಲಿ ಸುರುಗೆ ಮೃಗಕ್ಕೆ ಹೊಡ್ಡು ರಕ್ತ ಚಿಮ್ಮಿಸಿದವ್‌ಕೆ ಸುರುನ ದಾಯ (ಪಾಲು), ಹಂದಿ ಹೊಡ್ದವಂಗೆ ಮೂರು ದಾಯ ತಲೆ, ಕೈ, ನಡಗುಂಡಿ (ಬೆನ್ನಲುಬಿನ ಬಾಗ) ಉಳ್‌ದದ್ ಎಲ್ಲವುಕೂ ಸಮಪಾಲ್. ಮೃಗದ ಕರಿಯಡನ ತೆಗ್ದ್ ಕಿಚ್ಚಿಲಿ ಸುಟ್ಟು ಕಾಡುದೆವ್ವಂಗಳಿಗೆ ಅರ್‌ಪುಸಿ ಅಲ್ಲೇ ಹಂಚಿಕಂಡ್ ತಿಂಬೊತ್ತಿದ್ದೊ. ಪುರುಸ ದೆವ್ವ ಹಂಗೆ ಮುಗೇರು ದೆವ್ವಕೆ ಪಾಲ್ ತೆಗ್ದ್ ಇಸಿ ಅದರ ಆರಾದಕರ್ ಮನೆಗೆ ತಕಂಡ್ ಹೋಗಿ ಗೈಪು ಮಾಡಿ ಎಡೆಬಡಿಸುವೆ. ಊರ್ ಪಟೇಲರಿಗೆ ಊರಿನ ಗಣ್ಯರಿಗೂ ಪಾಲು ಕಳುಹಿಸಿಕೊಟ್ಟವೆ. ಬೇಟೆ ನಾಯಿನ ಪಾಲ್‌ನ ಒಡೆಯರ್ ಪಡ್ಕಂಡವೆ.. ಡಂಗುರ ಸಾರ್‌ದ ಅಜಲರ್‌ಗು ಒಂದ್ ಪಾಲ್‌ಉಟ್ಟು. ಅಜಕಲ (ಪಾಲು ಹಂಚುವಿಕೆ) ಮುಗ್ದ ಮೇಲೆ ಅಜಲ 'ನನ ದುಂಬುಗುಲ ಇಂಚನೆ ನಡಪೊಡು (ಇನ್ನು ಮುಂದೆನೂ ಹಿಂಗೆ ನಡೆಯೋಕು)' ತೇಳಿ ಪ್ರಾರ್ತನೆ ಸಲ್ಲಿಸುವೆ. ಹೊರಡಿಕಾಕನ ಹುಸಿಗುಂಡು ಹೊಡ್ದು, ಹೊರಡುವ ಕ್ರಮ ಉಟ್ಟು. ಕೆಡ್ಡಸ ಬೂಮಿದೇವಿ ಮೀವ ಹಬ್ಬ. ಈ ಹಬ್ಬ ಸ್ತ್ರೀ ಪ್ರದಾನ ಆಗಿರ್‌ದರ್‌ಂದ ಇದರ ಆಚರಣೆಲಿ ಹೆಣ್ಮಕ್ಕಳೆ ಮುಂದೆ ಇದ್ದವೆ..

ಆ ದಿನದ ಅಡ್ಗೆ ಕೆಲಸಗ ಮಹಿಳೆಯರ ಬದ್‌ಲ್ ಪುರುಷರು ಮಾಡೋಕು, ಪುರುಷರ್ ಮಾಡ್‌ವ ಬೇಟೆ ಇತ್ಯಾದಿ ಕೆಲ್ಸಗಳ ಹೆಣ್ಮಕ ನಡ್ಸೊಕು.. ಆದರೆ ಹಾಂಗೆ ವಾಸ್ತವಕೆ ನಡೆಯುದುಲೆ. ತಮಾಸೆಗೆ ಡಂಗುರ ಸಾರುವವು ಹೆಂಗಸರ ಬೇಟೆಗೆ ಕರೆದವೆ. ಕೆಡ್ಡಸಲಿ ಹೆಸರ್, ಹುರುಳಿ ಅಕ್ಕಿ ಇಂತೆಲ್ಲ ಬಿತ್ತ್‌ಗಳ ಹೊರ್‌ದ್, ಹೊಡಿಮಾಡಿ ಬೆಲ್ಲ ಕೊಬ್ಬರಿ ಹಾಕಿ ಕಲ್ಸಿ, ನನ್ಯರಿ (ಕುಡು ಅರಿ) ತೇಳುವ ತಿಂಡಿ ಮಾಡ್‌ವೆ. ಸಸ್ಯಹಾರಿಗ ಆ ದಿನ ಬದನೆ ನುಗ್ಗೆಕೋಲು ಗೈಪು ಮಾಡಿ ತಿನೊಕು ತೇಳುವ ಕ್ರಮ ಉಟ್ಟು. ಮಾಂಸಾಹಾರಿಗ ಮೃಗ, ಕೋಳಿ ಅಲ್ಲರೆ ಮೀನ್‌ನ ಅಡ್ಗೆ ಮಾಡಿ ಊಟ ಮಾಡ್‌ವೆ. (ಪಿ.ಆರ್.)

**ಕೆ. ಚಿದಾನಂದ ಗೌಡ :** 1942. ಕರ್ನಾಟಕ ರಾಜ್ಯದ ಕುವೆಂಪು ವಿಶ್ವವಿದ್ಯಾನಿಲಯಲಿ ಉಪಕುಲಪತಿ ಆಗಿದ್ ಸೇವೆ ಮಾಡ್‌ದ ಭಾರತೀಯ ಶಿಕ್ಷಣತಜ್ಞರ್. ಚಿದಾನಂದ ಗೌಡ್ರ್ 15 ಜೂನ್ 1942ರ್‌ಲಿ ಸುಳ್ಯದ ಹಕ್ಕಲೆನ ಚೊಕ್ಕಾಡಿ ಗ್ರಾಮದ ಕೊಳಂಬೆಲಿ ಹುಟ್ಟಿದೊ. ಅವ್ 1964ರ್‌ಲಿ ಬೆಂಗಳೂರ್‌ನ ವಿಶ್ವೇಶ್ವರಯ್ಯ ಕಾಲೇಜ್ ಆಫ್ ಇಂಜಿನಿಯರಿಂಗ್‌ಲಿ ಎಂಜಿನಿಯರಿಂಗ್ ಪದವಿನ ಮುಗ್‌ಸಿದೊ.



1969ರ್‌ಲಿ ಬರೋಡಾ ವಿಶ್ವವಿದ್ಯಾಲಯ ಮಹಾರಾಜ ಸಯಾಜಿರಾವ್ ಇಂಜಿನಿಯರಿಂಗ್ ಕಾಲೇಜಿಲಿ ಸ್ನಾತಕೋತ್ತರ ಪದವಿ ಪಡ್‌ಕಂಡೊ. ಅವು ಬೆಂಗಳೂರ್ ತಿರ್‌ಗಿ ಬಂದ್ 1979ರ್‌ಲಿ ಭಾರತೀಯ ವಿಜ್ಞಾನ ಸಂಸ್ತೆಲಿ ಅವರ ಪಿಎಚ್.ಡಿ. ಪದವಿನ ಮುಗ್‌ಸಿದೊ. ಅವ್ ಡಾಕ್ಟರೇಟ್ ಮೇಲೆನ ಸಂಸೋದನೆಗೆತ

ಯುನೈಟೆಡ್ ಸ್ಟೇಟ್ಸ್‌ನ ನಾಸಾಲಿ ಎರಡ್ ವರ್ಸ ಮತ್ತೆ ಫ್ರಾನ್ಸ್‌ಲಿ ಒಂದ್ ವರ್ಸ ಇದ್ದೊ. ಅವ್ ಕನ್ನಡದ ಕವಿ ಕುವೆಂಪು ಅವರ ಎರಡನೇ ಮಗ ತಾರಿಣಿನ ಮೊದ್‌ವೆ ಆದೊ.

ಚಿದಾನಂದಗೌಡ್ರ್ ಮೈಸೂರ್‌ನ ಶ್ರೀ ಜಯಚಾಮರಾಜೇಂದ್ರ ಇಂಜಿನಿಯರಿಂಗ್ ಕಾಲೇಜ್‌ಲಿ ಕಂಪ್ಯೂಟರ್ ಸೈನ್ಸ್ ವಿಬಾಗಲಿ ಪ್ರಾಧ್ಯಾಪಕರ್ ಆಗಿದ್ದೊ. ಹಾಂಗೆ ಅದೇ ವಿಬಾಗಲಿ ಮುಖ್ಯಸ್ತರ್ ಆದೊ. ಸುಮಾರ್ 5 ವರ್ಸ ಕಾಲ ಕಾಲೇಜ್‌ನ ಉಪ ಪ್ರಾಂಶುಪಾಲ ಆಗಿದ್ದೊ. ಮುಂದೆ ಸುಮಾರ್ ಒಂದೂವರೆ ವರ್ಸದಸ್ಟ್ ಸಮಯ ಪ್ರಾಂಶುಪಾಲರಾಗಿದ್ದೊ. ಅವು INRIA° ಸಂದರ್ಶಕ ಪ್ರಾಧ್ಯಾಪಕ ರಾಗಿದ್ದೊ. 18 ಜನವರಿ 2002ರ್‌ಲಿ ಕುವೆಂಪು ವಿಶ್ವವಿದ್ಯಾನಿಲಯಲಿ ಉಪಕುಲಪತಿಯಾಗಿ ನೇಮಕ ಆದೊ. ಅವು 19 ಜನವರಿ 2006 ರವರೆಗೆ ಈ ಹುದ್ದೆಲಿ ಇದ್ದೊ. ಅವು ಜ್ಯೂರಿಚ್, ಪ್ಯಾರಿಸ್, ಟೋಕಿಯೊ ಮತ್ತೆ ಲಕ್ಸೆಂಬರ್ಗ್‌ಲಿ ತಾಂತ್ರಿಕ ಸಮ್ಮೇಳನಗಳ ಅಧ್ಯಕ್ಷತೆ ವಯ್‌ಸಿಯೊಳೊ. ಮೈಸೂರು ವಿಶ್ವ ವಿದ್ಯಾ ನಿಲಯದ ಇಂಟರ್ ನ್ಯಾಷನಲ್ ಸ್ಕೂಲ್ ಆಫ್ ಇನ್ಫರ್ಮೇಷನ್ ಮ್ಯಾನೇಜ್ಮೆಂಟ್‌ಲಿ ಕಂಪ್ಯೂಟರ್ ಸೈನ್ಸ್‌ನ ಹೆಸರಾಂತ ಪ್ರಾಧ್ಯಾಪಕ ಆಗಿದ್ ಕೆಲಸ ಮಾಡ್ಯೊಳೊ. ಇಂಗ್ಲಿಸ್ – ಮಾತಾಡ್‌ವ ಜಗತ್ತ್‌ಲಿ ಸಾಂಕೇತಿಕ ದತ್ತಾಂಸ ವಿಸ್ಲೇಸಣೆ ಮಾಡ್‌ದರ ಪಿತಾಮಹತ ಇವರ ಕರ್‌ದವೆ. ಕುವೆಂಪು ವಿಶ್ವವಿದ್ಯಾನಿಲಯಲಿ ಮೂಲಬೂತ ಸೌಕರ್ಯಗಳ ಸುದಾರ್‌ಸಿದ ಕೀರ್ತಿ ಇವ್‌ಕೆ ಉಟ್ಟು. ಕುವೆಂಪು ವಿಶ್ವವಿದ್ಯಾನಿಲಯಲಿ ವೆವಹಾರ ಆಡಳ್ತ, ಸೂಕ್ಷ್ಮ ಜೀವವಿಜ್ಞಾನ, ಜೀವರಸಾಯನ ಶಾಸ್ತ್ರದ ಹೊಸ ವಿಬಾಗಂಗಳ ಸುರ್‌ಮಾಡ್‌ವ ಜೊವಾಬ್ದಾರಿನ ಅವ್ ಹೊತ್ತಿದ್ದೊ. ದೂರ ಶಿಕ್ಷಣ ಕಾರ್ಯಕ್ರಮ ಅವರ ಅದಿಕಾರ ಇರಿಕನ ಒಂದೊಳ್ಳೆ ಬೆಳವಣಿಗೆನ ಕಂಡತ್. ಇವು ಕನ್ನಡ ಮತ್ತೆ ಇಂಗ್ಲಿಸ್‌ಲಿ ಪುಸ್ತಕಗಳ ಬರ್‌ದೊಳೊ. ಅವರ ಕೆಲವು ಕನ್ನಡ ಪುಸ್ತಕಗಳ್‌ಲಿ ಇಂಜಿನಿಯರಿಂಗ್ ಗೀತೆಗ (ಎಂಜಿನಿಯರಿಂಗ್ ಹಾಡುಗಳು – 1980), ಪುಟಾಣಿಗಳ ವಿಜ್ಞಾನ ಪದ್ಯಗ (ಮಕ್ಕಳಿಗಾಗಿ ವಿಜ್ಞಾನದ ಕವನಗ – 1984) ಮತ್ತೆ ಸಂಪರ್ಕ ಮಾಧ್ಯಮಲಿ (ಸಂವಹನ ಮಾಧ್ಯಮ – 1999) ಸೇರ್‌ವೆ. 1986ರ್‌ಲಿ ಚಿದಾನಂದ ಗೌಡ ಅವರ ಪುಟಾಣಿಗಳ ವಿಜ್ಞಾನ ಪದಗ ಪುಸ್ತಕಕೆ ಕನ್ನಡ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದುಟು. ಇಂಜಿನಿಯರಿಂಗ್‌ಗೆ ಕೊಟ್ಟ ಕೊಡುಗೆನ ಗುರ್‌ತಿಸಿ 1995ರ್‌ಲಿ ಅವ್‌ಕೆ ಎಂ. ವಿಶ್ವೇಶ್ವರಯ್ಯ ತಾಂತ್ರಿಕ ಪ್ರಶಸ್ತಿ ಕೊಟ್ಟೊಳೊ. 2019ರ್‌ಲಿ ಇವ್ ರಾಜ್ಯೋತ್ಸವ ಪ್ರಶಸ್ತಿನ ಪಡ್ದೊಳೊ.

**ಕೆ. ಚಿನ್ನಪ್ಪ ಗೌಡ :** ದಕ್ಷಿಣ ಕನ್ನಡ ಜಿಲ್ಲೆನ ವಿಟ್ಲದ ಕೂಡೂರು ತೇಳ್‌ವ ಊರುಲಿ ಚಿನ್ನಪ್ಪ ಗೌಡರ್ ಹುಟ್ಟಿದೊ. ಅವ್ ಸುರುನ ಶಿಕ್ಷಣನ ವಿಟ್ಲಲೇ ಮಾಡಿ ಮದರಾಸು ವಿಶ್ವವಿದ್ಯಾನಿಲಯಲಿ ಎಂ.ಎ. ಕನ್ನಡ. ಮಂಗಳೂರು ವಿಶ್ವವಿದ್ಯಾನಿಲಯಲಿ ಡಾ. ಬಿ.ಎ. ವಿವೇಕ ರೈ ಮಾರ್ಗದರ್ಶನಲಿ 'ಭೂತಾರಾಧನೆ–ಜಾನಪದೀಯ ಅಧ್ಯಯನ' ವಿಸಯಕೆ ಪಿ.ಹೆಚ್.ಡಿ. ಪದವಿ ಪಡ್‌ದೊ.

ತುಳು ಸಾಹಿತ್ಯ ಮತ್ತೆ ಸಂಶೋದನೆಲಿ ಮಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ಸ್ನಾತಕೋತ್ತರ ಅಧ್ಯಯನ ಕೇಂದ್ರ ಪ್ರಾಧ್ಯಾಪಕರಾಗಿದ್ದ ಚಿನ್ನಪ್ಪ ಗೌಡರ್ ಭೂತಾರಾಧನೆ ಕೆಲವು ಅಧ್ಯಯನಗಳು, ಜಾಲಾಟ, ಸಂಸ್ಕೃತಿ ಸಿರಿ, ಗೌಡ ಸಂಸ್ಕೃತಿ ಮತ್ತು ಆಚರಣೆಗಳು, ಸೇರಿಗೆ, ಸಿರಿ ಮಹಾಕಾವ್ಯದ ಬಗ್ಗೆ ಶ್ರೀ ಗೋಪಾಲ ನಾಯಕ್ (ಎರಡು ಸಂಪುಟಗಳು), ರತ್ನಮಾನಸ ಹೀಂಗೆ 25 ರ್‌ಂದ ಹೆಚ್ಚಿಗೆ ಕನ್ನಡ ಮತ್ತು ತುಳು ಎರಡ್ ಬಾಸೆಲಿ ಸಾಹಿತ್ಯ ರಚನೆ ಮಾಡಿಯೊಳೊ. ಡಾಕ್ಟರೇಟ್ ಆದಮೇಲೆನ ಫಿನ್‌ಲ್ಯಾಂಡ್‌ನ ಪ್ರೊ. ಲೌರಿ ಹೊಂಕಾ ನೇತೃತ್ವಲಿ ಓರಲ್ ಎಪಿಕ್ ಪ್ರಾಜೆಕ್ಟ್‌ನ ಮೌಖಿಕ ಮಹಾಕಾವ್ಯಗಳು : ಪಠ್ಯ, ಪಠ್ಯೀಕರಣ ಮತ್ತೆ ಅನುವಾದ ಸಂಶೋಧನೆನ ಮಾಡ್‌ದೊ. ತುರ್ಕು ವಿಶ್ವವಿದ್ಯಾಲಯ, ಫಿನ್‌ಲ್ಯಾಂಡ್, ಟ್ಯೂಬಿಂಗೆನ್ ವಿಶ್ವವಿದ್ಯಾಲಯ, ಜರ್ಮನಿ ವೂರ್ಜ್‌ಬರ್ಗ್ ವಿಶ್ವವಿದ್ಯಾಲಯ, ಜರ್ಮನಿ ವಾಸೆಡಾ ವಿಶ್ವವಿದ್ಯಾಲಯ, ಟೋಕಿಯೊ, ಜಪಾನ್‌ಗಳ್‌ಲಿ ವಿಸೇಸ ಉಪನ್ಯಾಸಕರಾಗಿ ಕೆಲ್ಸ ಮಾಡಿಯೊಳೊ.



ಇವು ಎಸ್.ಡಿ.ಎಂ. ಪದವಿ ಕಾಲೇಜಿಲಿ ಸಹಾಯಕ ಪ್ರಾಧ್ಯಾಪಕರಾಗಿ, ಮಂಗಳೂರು ವಿಶ್ವವಿದ್ಯಾನಿಲಯದ ಕುಲಸಚಿವರಾಗಿ, ಮಂಗಳೂರು ವಿಶ್ವವಿದ್ಯಾನಿಲಯದ ಎಸ್.ವಿ.ಪಿ. ಅಧ್ಯಯನ ಸಂಸ್ತೆಲಿ ಪ್ರಾಧ್ಯಾಪಕರಾಗಿ ವಿಬಾಗದ ಅಧ್ಯಕ್ಷರಾಗಿ ಸೇವೆ ಮಾಡಿಯೊಳೊ. ಮಂಗಳೂರು ವಿಶ್ವವಿದ್ಯಾನಿಲಯ ಕಲಾ ನಿಕಾಯದ ಡೀನ್, ರಿಜಿಸ್ಟ್ರಾರ್, ಯಕ್ಷಗಾನ ಅಧ್ಯಯನ ಕೇಂದ್ರದ ನಿರ್ದೇಶಕರಾಗಿದ್ದೊ. ಕರ್ನಾಟಕ ರಾಜ್ಯ ತುಳು ಸಾಹಿತ್ಯ ಅಕಾಡೆಮಿ ಮತ್ತೆ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿನ ಸದಸ್ಯ ಆಗಿದ್ದೊ. ಹಾವೇರಿ ಕರ್ನಾಟಕ ಜಾನಪದ ವಿಶ್ವವಿದ್ಯಾನಿಲಯಲಿ ಉಪಕುಲಪತಿ ಆಗಿ ಸೇವೆ ಮಾಡಿಯೊಳೊ.

ಇವ್‌ಕೆ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ, ವಾಸುದೇವ ಭೂಪಾಲಂ ದತ್ತಿ ಪ್ರಶಸ್ತಿ, ಡಾ.ಶಿವರಾಮ ಕಾರಂತ ದತ್ತಿ ಪ್ರಶಸ್ತಿ, ಕು.ಶಿ ಜಾನಪದ ಪ್ರಶಸ್ತಿ, ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಸಂದೇಶ ಪ್ರಶಸ್ತಿ, ಕರ್ನಾಟಕ ರಾಜ್ಯ ತುಳು ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಹೀಂಗೆ ಸುಮಾರ್ ಪ್ರಶಸ್ತಿಗಳ ಪಡ್‌ದೊಳೊ.




**ಕೆ. ಜಿ. ಬೋಪಯ್ಯ :** 1951. ಕೊಂಬಾರನ ಜಿ. ಬೋಪಯ್ಯನವ್ ಕೃಸಿಕರಾಗಿದ್ದ ಕೊಂಬಾರನ ಗಣಪತಿ ಮತ್ತೆ ಚಿನ್ನಮ್ಮನವರ ಐದನೇ ಕೂಸಾಗಿ ಮಡಿಕೇರಿ ತಾಲೂಕುನ ಕಾಲೂರು ಗ್ರಾಮಲಿ 1951ರ ಅಕ್ಟೋಬರ್ ತಿಂಗಳ ಹದಿನೇಳನೇ ತಾರೀಕ್‌ಗೆ ಹುಟ್ಟಿದೊ. ಇವ್ ತಮ್ಮ ಪ್ರಾಥಮಿಕ ವಿದ್ಯಾಭ್ಯಾಸನ ಕಾಲೂರ್‌ನ ಸರಕಾರಿ ಶಾಲೆಲಿ ಮುಗ್‌ಸಿದೊ. ಮತ್ತೆನ ವಿದ್ಯಾಭ್ಯಾಸನ ಗಾಳಿಬೀಡು ಮತ್ತೆ ಚೆಟ್ಟಳ್ಳಿಲಿ ಸರಕಾರಿ ಸಾಲೆಲಿ ಪೂರೈಸಿದೊ. ಮಡಿಕೇರಿನ ಫೀಲ್ಡ್ ಮಾರ್ಷಲ್ ಕಾರ್ಯಪ್ಪ ಕಾಲೇಜುಲಿ ಬಿಎಸ್ಸಿ ಪದವಿನ ಮುಗ್ಸಿದೊ. ಸಣ್ಣ ಪ್ರಾಯಲಿ ರಾಷ್ಟ್ರೀಯ ಸ್ವಯಂಸೇವಕ ಸಂಘದ ಸಂಪರ್ಕಕೆ ಬಂದ ಕಾರಣ ತುರ್ತು ಪರಿಸ್ಥಿತಿನ ವಿರೋದ್‌ಸ್‌ವ ಹೋರಾಟಕೆ ಇಳಿಕಾಗಿ ಬಾತ್. ಕೊಡಗು ಮತ್ತು ಮೈಸೂರುಲಿ ಜೈಲುವಾಸನ ಅನ್‌ಬವುಸಿಕಾಕನ ಇವು ಸುಮಾರ್ ಹಿರಿಯ ನಾಯಕರ ಸಂಪರ್ಕಕೆ ಸಿಕ್ಕಿದೊ. ಜೈಲುಲಿ ಇರಿಕನ ಕಾನೂನು ವೆವಸ್ತೆನ ಬಗ್ಗೆ ಹೆಚ್ಚಿನ ಆಸಕ್ತಿ ಬಂದ ಕಾರಣ ಇವ್ ಬೆಂಗಳೂರುನ ಬಿ ಎಮ್ ಎಸ್ ಕಾಲೇಜುಲಿ ಕಾನೂನು ಪದವಿನ ಓದಿದೊ. 1981ನೇ ಇಸವಿಲಿ ಕೊಡಗ್‌ಗೆ ತಿರ್‌ಗಿದ ಇವು ತಮ್ಮ ವಕೀಲ ವೃತ್ತಿನ ಶಿವಕುಮಾರ್ ವಕೀಲರ ಮಾರ್ಗದರ್ಶನಲಿ ಸುರು ಮಾಡಿ ಜಿಲ್ಲೆಲಿ ಒಳ್ಳ ವಕೀಲರಾಗಿ ಹೆಸರು ಮಾಡ್‌ದೊ..



ಕರ್ನಾಟಕ ರಾಜ್ಯದ ಹನ್ನೆರಡನೆ ವಿಧಾನಸಭೆಗೆ ಮಡಿಕೇರಿ ಕ್ಷೇತ್ರಂದ ಶಾಸಕರಾಗಿ 2004ರ್ಲಿ ಸುರುನ ಸರ್‌ತಿ ಆಯ್ಕೆ ಆದೊ. 2008ರ ಕರ್ನಾಟಕದ ಹದಿಮೂರನೆ ವಿಧಾನಸಭೆಗೆ ವಿರಾಜಪೇಟೆ ಕ್ಷೇತ್ರ ಶಾಸಕರಾಗಿ ಆಯ್ಕೆ ಆಗಿದ್ ವಿಧಾನಸಭೆನ ಅಧ್ಯಕ್ಷರಾಗಿದ್ ಕೆಲಸ ಮಾಡ್‌ದೊ. 2013 ಮತ್ತೆ 2018ರ್ಲಿ ವಿರಾಜಪೇಟೆ ಕ್ಷೇತ್ರಂದ ಶಾಸಕರಾಗಿ ಆಯ್ಕೆಯಾಗಿ ಸರಕಾರಿ ಜಮೀನುಗಳ ಹಿತರಕ್ಷಣಾ ಸಮಿತಿನ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಾ ಒಳೊ. ವಿಸೇಸಾಗಿರ್‌ವ ಕೊಡಗಿನ ಭೂ ಕಾನೂನು ಮತ್ತೆ ಅರಣ್ಯ ಕಾಯಿದೆ ಹಾಂಗೆ ರೈತರ ಸಮಸ್ಯೆಗಳ ಬಗ್ಗೆ ಎರಡ್ ದಶಕಗಳಿಂದ ವಿರೋಧ ಪಕ್ಷಲಿ ಇದ್ದರೂ ಅಲ್ಲೊ ಆಡಳಿತ ಪಕ್ಷಲಿ ಇದ್ದರೂ ಸದನಲಿ ಸಮರ್ಥ ಆಗಿದ್ ವಾದ ಮಂಡನೆ ಮಾಡಿಯೊಳೊ.

**ಕೆದಂಬಾಡಿ ಜತ್ತಪ್ಪ ರೈ :** 1916–2003. ಕನ್ನಡಲಿ ಬೇಟೆ ಸಾಹಿತ್ಯನ ಬರ್‌ದ 'ಬೇಟೆಯ ನೆನಪುಗಳು' ತೇಳ್‌ವ ಕೃತಿನ ಬರ್‌ದ ಮೃಗಯಾ ಸಾಹಿತಿ. ದಕ್ಷಿಣ ಕನ್ನಡ ಜಿಲ್ಲೆ ಪುತ್ತೂರ್ ತಾಲೂಕ್‌ನ ಪಾಣಾಜೆ ಗ್ರಾಮದ ಕೆದಂಬಾಡಿಲಿ 1916 ಫೆಬ್ರವರಿ 11ಕೆ ಹುಟ್ಟಿದೊ. ಕನ್ನಡಲಿ ಬೇಟೆ ಸಾಹಿತ್ಯನ ಬರ್‌ದ್ 'ಬೇಟೆಯ ನೆನಪುಗಳು' ತೇಳ್‌ವ ಕೃತಿನ ಹೊರತಂದೊಳೊ. ಇವರ ಅಪ್ಪ ಮುಂಡಾಡಿ ಪಿಲಿಮಜಲು ದಾಸ ರೈ, ಅಯ್ಯೆ ಕೆಡಂಬಾಡಿ ಸೀತಮ್ಮ. ಸುರುಲಿ ಮರ್‌ದಾಳ ಮತ್ತೆ ಬೆಳ್ಳಾರೆ ಪ್ರಾತಮಿಕ ಸಾಲೆಲಿ, ಕಡೆಗೆ ಪುತ್ತೂರು ಬೋರ್‌ಡ್ ಹೈಸ್ಕೂಲ್‌ಲಿ, ಮುಂದೆ ಪೆರಡಾಲದ ಮಹಾಜನ ಸಂಸ್ಕೃತ ಕಾಲೇಜ್‌ಲಿ ವಿದ್ಯಾಬ್ಯಾಸ ಮಾಡ್‌ದೊ. ಮಂಗಳೂರ್ ಸರಕಾರಿ ಕಾಲೇಜ್‌ಲಿ ಕನ್ನಡ ವಿದ್ವಾನ್ ಪ್ರವೇಶ ಪರೀಕ್ಷೆ ತಕಂಡ್ ಮದರಾಸು ಪ್ರಾಂತ್ಯಲೆ ಸುರುನ ಸ್ತಾನ ಪಡ್ದ್ ಪಾಸಾದೊ. ಓದು ಮುಂದುವರ್‌ಸದೆ ಊರ್‌ಗೆ ತಿರ್‌ಗಿ ಬಂದೊ. ಹಳ್ಳಿಗೆ ಬಂದ್ ಮೊಣ್ಣ್‌ನ ಮಜ್ಜ ಆಗಿ, ಕ್ರಿಸಿಕ ಆಗಿ, ಹಂದಿ, ಕೋಳಿ ಸಾಕಣೆ, ಬೇಟೆ, ಕಂಬಳ, ಕೋಳಿಕಟ್ಟ, ಸಾಹಿತ್ಯ, ಸಂಗೀತ, ಯಕ್ಷಗಾನ, ಪುಸ್ತಕ ಓದುದು, ಕಾವ್ಯ ಓದುದು, ಒಳಾಂಗಣ ಆಟಗ, ಬಾಲ್ ಬ್ಯಾಡ್ಮಿಂಟನ್, ಪಂಚಾಯತಿಕೆ, ಪಾಕಶಾಸ್ತ್ರ ಇಂತ ಕೂಟಲಿ ಸೇರಿಕಂಡ್ ಜೀವನನ 60 ವರ್ಸ ಕಳ್‌ದೊ. ಆದರೆ ಈ ಬೇಟೆಗಾರ ಬಂಟರ್‌ಲಿ ಒಬ್ಬ ಸೃಜನಶೀಲ ಬರಹಗಾರ ಆಗಿದ್ದೊತ ಬೊಳುಪುಗೆ ಬಂದದ್ ಬಾರಿ ತಡ ಆಗಿ. ಬವುಸ ಕನ್ನಡಲಿ ಬೇಟೆ ಸಾಹಿತ್ಯ ಬರ್‌ದವರ್‌ಲಿ ಜತ್ತಪ್ಪ ರೈಗ ಸುರುನ ಸಾಲ್‌ನವು.



1978ರ್‌ಲಿ 'ಬೇಟೆಯ ನೆನಪುಗಳು' ಇವರ ಸುರುನ ಪುಸ್ತಕ ಬಾತ್. ಈ ಪ್ರೇರಣೆಲಿ1979ರ್‌ಲಿ 'ಈಡೊಂದು ಹುಲಿ ಯೆರಡು', 1982ರ್‌ಲಿ 'ಬೇಟೆಯ ಉರುಳು', 1988ರ್‌ಲಿ 'ಬೆಟ್ಟದ ತಪ್ಪಲಿನಿಂದ ಕಡಲ ತಡಿಗೆ', ತೇಳ್ವ ಪುಸ್ತಕ ಪ್ರಕಟ ಮಾಡಿ ಕನ್ನಡದ ಜಿಮ್ ಕಾರ್ಬೆಟ್‌ತ ಮನೆಮಾತಾದೊ. 1984ರ್‌ಲಿ 'ಕರ್ಮಯೋಗಿ ಬೆಳ್ಳಾರೆ ನಾರಾಯಣ ಶೇಕ', 1994ರ್‌ಲಿ 'ತಲೆಬುರುಡೆ ಬುಡ್ಸಿದ ಕೊಲೆ ರಹಸ್ಯ'(ಅನುವಾದ) ಪುಸ್ತಕಗಳ ಬರ್‌ದೊ. 1982ರ್‌ಲಿ ಎಸ್.ವಿ.ಪರಮೇಶ್ವರ ಭಟ್ಟರ ಇಂದ್ರಚಾಪ ಕನ್ನಡ ಪುಸ್ತಕನ 'ತುಳುತ್ತಪೊರ್ಲು', 1989ರ್‌ಲಿ ಡಿ.ವಿ.ಜಿ. ಅವು ಕನ್ನಡಕೆ ಅನುವಾದಿಸಿದ 'ಉಮರ್ ಖಯ್ಯಾಮನ ರುಬಾಯತ್'ನ

'ಕುಜಲಿ ಪೂಜೆ' 1994ರ್‌ಲಿ ಇಂಗ್ಲಿಸ್ ಕವಿ ಬ್ರೌನಿಂಗನ 'ದಿ ಪೈಡ್ ಪೈಪರ್ ಆಫ್ ಹ್ಯಾಮಲಿನ್' ಹಾಂಗೆ ಕುವೆಂಪುರವರ 'ಬೊಮ್ಮನ ಹಳ್ಳಿಯ ಕಿಂದರಜೋಗಿ'ನ 'ಅಸನಿಯಾಗೊ ಕಾಂತಗಜೋಗಿ', 1982ರ್‌ಲಿ ಕುವೆಂಪು ಅವರ 'ಯಮನ ಸೋಲುಪಡಿಲಿ ಪಂಪೆ', 'ಯಮನ ಸೋಲು', 1986ರ್‌ಲಿ ಠಾಕೂರರ ಕಾಬೂಲಿವಾಲ ಕತೆ ತುಳು ಕಾಬೂಲಿವಾಲ, 1986ರ್‌ಲಿ ಕುವೆಂಪು ಅವರ 'ಬೆರಳ್ಗೆ ಕೊರಳ್' ಹಾಂಗೆ ಗೋವಿಂದ ಪೈಗಳ 'ಹೆಬ್ಬೆರಳು' 'ಸೂದ್ರೆ ಏಕಲವ್ಯ', 1983ರ್‌ಲಿ ಶಿವರಾಮ ಕಾರಂತರ 'ಚೋಮನದುಡಿ' 'ತುಳು ಚೋಮನದುಡಿ', 1984ರ್‌ಲಿ ನಿರಂಜನರ ಚಿರಸ್ಮರಣೆ 'ಮದಪ್ಪಂದಿ ನೆಂಪು', 1988ರ್‌ಲಿ ಮುದ್ದಣನ ಶ್ರೀರಾಮಾಶ್ವಮೇಧ 'ಸಿರಿ ರಾಮಾಶ್ವಮೇಧ' ತ ತುಳುಗೆ ಅನುವಾದಿಸಿಯೊಳೊ. ಶೃಂಗಾರಶಯ್ಯ, ಜ್ವಾಲಾಮುಖಿ ತೇಳ್‌ವ ಕನ್ನಡ ಕಾದಂಬರಿ, ತುಳು ಭಗವದ್ಗೀತೆನನೂ ಅಳಕೆ ರಾಮಯ್ಯ ರೈ ಜೀವನಚರಿತ್ರೆನ ಇವು ಬರ್ದೊಳೊ. ಇವ್ ಪುತ್ತೂರು ತಾಲ್ಲೂಕು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದೊ. 1995ರ್‌ಲಿ ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿನ ಸುರುನ ಗೌರವ ಪ್ರಶಸ್ತಿ ಇವ್ಕೆ ಸಿಕ್ಕಿತ್. 1997ರ್‌ಲಿ ಅಸನಿಯಾಗೊ ಕಾಂತಗಜೋಗಿ ತೇಳ್ವ ಪುಸ್ತಕಕೆ ಕೇಂದ್ರ ಸಾಹಿತ್ಯ ಅಕಾಡೆಮಿನ ಭಾಷಾ ಸಮ್ಮಾನ ಪ್ರಶಸ್ತಿ, ಪೊಳಲಿ ಶೀನಪ್ಪ ಹೆಗ್ಗಡೆ ಪ್ರಶಸ್ತಿ ಬಾತ್. ಇವರ 'ಬೇಟೆಯ ನೆನಪುಗಳು' ಭಾರತದ 12 ಬಾಸೆಗೆ ಅನುವಾದ ಆಗುಟು. ಈ ಪುಸ್ತಕನ ನ್ಯಾಷನಲ್ ಬುಕ್ ಟ್ರಸ್ಟ್‌ಂದ 'ರೆಮಿನಿಸೆನ್ಸಸ್ ಆಫ್ ಎ ಹಂಟರ್' ತೇಳಿ ಸಿ.ಎನ್.ರಾಮಚಂದ್ರನ್ ಇಂಗ್ಲಿಷ್‌ಗೆ ಅನುವಾದ ಮಾಡಿಯೊಳೊ. 1999ರ್‌ಲಿ ಇವ್ಕೆ ಮೃಗಯಾ ಸಾಹಿತ್ಯ ನಿರ್ಮಾತೃ, ತುಳು ಭಾಷಾ ಬೀಷ್ಮ ತ ಬಿರುದು ಬಂದುಟು. ಇವು 2003 ಜೂನ್ 22ರಂದ್ ಸ್ವರ್ಗ ಸೇರ್ದೊರ್. (ವಿ.ಎನ್.)

**ಕೆ. ವಿ. ಗೌಡ** : ಕೂಜುಗೋಡು ಕಟ್ಟೆಮನೆ ವೆಂಕಟರಮಣ ಗೌಡ ಇವು ಸುಳ್ಯದ ಕೂಜುಗೋಡ್‌ಲಿ ಹುಟ್ಟಿದೊ. ಸಮಾಜದ ಮುಂದಾಳಾಗಿದ್ದ ಕೆ.ವಿ. ಗೌಡ್ರು ಶ್ರೇಷ್ಠ ರಾಜಕೀಯ ಮುತ್ಸದ್ದಿಯಾಗಿ ಹೆಸ್ರ ಮಾಡಿದ್ದೊ. ವೆಂಕಟ್ರಮಣ ಗೌಡ್ರು (ಸುಳ್ಯ, ಬೆಳ್ತಂಗಡಿ, ಪುತ್ತೂರು), ಪುತ್ತೂರು ವಿಧಾನಸಭಾ ಕ್ಷೇತ್ರಂದ ಸುರುನ ಶಾಸಕರಾಗಿ 1952ರ್‌ಲಿ ಸೊತಂತ್ರ ಭಾರತದ ಸುರುನ ಚುನಾವಣೆಲಿ ಗೆದ್ದ್ ಮದ್ರಾಸ್ ವಿಧಾನಸಭೆ ಸದಸ್ಯರಾಗಿ ಆಯ್ಕೆ ಆದೊ. ಇದೇ ಪುತ್ತೂರು ಕ್ಷೇತ್ರಂದ 1957 ಮತ್ತೆ 1963ರ್‌ಲಿ ಚುನಾವಣೆಲಿ ಗೆದ್ದ್ ಎರಡ್ ಸರ್ತಿ ಮೈಸೂರು ವಿಧಾನಸಭೆ ಸದಸ್ಯರಾಗಿ ಆರ್‌ಸಿ ಬಂದೊ. ನ್ಯಾಯವಾದಿ ಆಗಿ ಪುತ್ತೂರ್‌ಲಿ ಕೆಲ್ಸ ಮಾಡ್ತಿದ್ದ ಇವ್ ಒಬ್ಬ ಸಾದು ಮತ್ತೆ ಒಳ್ಳ ಜೆನನಾಯಕ.



ಕೂಜುಗೋಡು ಮನೆತನದ ಹಿರಿಯೊವು 1837ರ್‌ಲಿ ಇಂಗ್ಲಿಸರ ಎದ್ರ್ ಅಮರಸುಳ್ಯ ಮತ್ತೆ ಕೊಡಗ್‌ನ ಸುರುನ ಸ್ವಾತಂತ್ರ ಹೋರಾಟಲಿ ಪ್ರಮುಕರಾಗಿ ಇದ್ದೊಂತ ಚಾರಿತ್ರ ದಾಕಲೆ ವುಟ್ಟು, 2020 ಅಂಚೆ ಇಲಾಕೆಂದ ಪ್ರಸಿದ್ಧ ಕೂಜುಗೋಡು ಕಟ್ಟೆಮನೆ ದಿ.ವೆಂಕಟ್ರಮಣ ಗೌಡ್ರ ಸ್ಮರಣಾರ್ತ ಅಂಚೆ ಲಕೋಟೆನ ಪುತ್ತೂರು ಮುಖ್ಯ ಅಂಚೆ ಕಛೇರಿ ಬುಡುಗಡೆ ಮಾಡಿಯೊಳೊ. (ಕು.ಶಿ.)

**ಕೆಳದಿ ರಾಜವಂಶ** : 17ನೇ ಸತಮಾನದ ಸುರೂಗೆ 18ನೇ ಸತಮಾನದ ಮೂರನೇ ಪಾದದವರೆಗೆ ಕರ್ನಾಟಕದ ಮಲೆನಾಡ್ ಮತ್ತೆ ಕರಾವಳಿ ಪ್ರದೇಸಗಳ್‌ಲಿ ರಾಜ್ಯಬಾರ ಮಾಡ್ದ ಒಂದ್ ಮನೆತನ ಕೆಳದಿ. ಈ ವಂಸದವು ಸುರುಗೆ ವಿಜಯನಗರದ ಸಾಮಂತರಾಗಿದ್ದ್, ಆ ರಾಜ್ಯ ನೆಲ ಕಚ್ಚಿದ ಮೇಲೆ ಸ್ವತಂತ್ರರಾದೊವು..

ಕೆಳದಿ ಅರಸರ ರಾಜ್ಯ ಏರ್ ಸ್ತಿತಿಲಿ ಇರ್‌ಕಾಕನ ಈಗದ ಶಿವಮೊಗ್ಗ, ದಕ್ಷಿಣಕನ್ನಡ, ಚಿಕ್ಕಮಗಳೂರು ಮತ್ತೆ ಹಾಸನ ಜಿಲ್ಲೆಗಳ ಹೆಚಿನ ಬಾಗ, ಉತ್ತರ ಕನ್ನಡ, ದಾರವಾಡ, ಚಿತ್ರದುರ್‌ಗ ಜಿಲ್ಲೆಗಳ ಕಾಗಡೆ ಬಾಗ ಮತ್ತೆ ಕೇರಳದ ಹಳ್ಳಾ ಜಾಗೆಗಳಸ ಒಳಗೊಂಡಿತ್. ಈ ರಾಜ್ಯದ ರಾಜಧಾನಿಗ ಕ್ರಮಲಿ ಕೆಳದಿ, ಇಕ್ಕೇರಿ ಮತ್ತೆ ಅಕೇರಿಗೆ ಬಿದನೂರು (ನಗರ), ಹಳ್ಳಕಾಲ ಬುವನಗಿರಿ ಇಲ್ಲರೆ ಕವಲೆದುರ್‌ಗ ಆಗಿತ್. ಹಂಗಾಗಿ ಈ ಅರಸರ ಇತಿಯಾಸಕಾರರ್ ಕೆಳದಿ, ಇಕ್ಕೇರಿ ಅಲ್ಲೊ ಬಿದನೂರ್‌ನ ನಾಯಕರ್‌ಂತೇಳಿ ಕರ್‌ದೊಳೊ. ಆದರೆ ಈ ವಂಸ ಕೆಳದಿಂದ ಬಂದದರ್‌ಂದಲೂ ಅವರ ಯಾಗೋಳು ಕೆಳದಿನಾಯಕರ್‌ಂತೇಳಿಯೇ ಕರ್‌ಕಂಡಿರ್‌ಂದಲೂ ಕೆಳದಿ ತೇಳುವ ಹೆಸರೇ ಸರಿ. ಮಲೆನಾಡ್‌ನೆ ರಾಜ್ಯ ಆದ ಇದ್ಕೆ ಮಲೆರಾಜ್ಯಂತೇಳುವ ಹೆಸ್ರೂ ಇತ್. ಗಂಡಬೇರುಂಡ ಈ ವಂಸದವರ ರಾಜ ಲಾಂಚನ ಆಗಿತ್. ಇವರ ವಂಸದ ಇತಿಯಾಸ ಬರೀಯಕೆ ಹಿರಿಯ ಬಸವಪ್ಪನಾಯಕ ಬರ್‌ದ ಶಿವತತ್ತ್ವರತ್ನಾಕರಂತೇಳುವ ಸಂಸ್ಕೃತ ವಿಸ್ವಕೋಸ, ಲಿಂಗಣ್ಣ ಬರ್‌ದ ಕೆಳದಿ ನೃಪವಿಜಯಂತೇಳುವ ಕನ್ನಡ ಚಂಪೂಗ್ರಂತ, ಆ ಕಾಲದ ಬೇಕಾದಸ್ಟ್ ಬೇರೆ ಬೇರೆ ಶಾಸನಗ ಮತ್ತೆ ಪೆಟ್ರೊ ಡೆಲವೆಲ್ಲೆ, ಪೀಟರ್ ಮಂಡಿ, ಅಲೆಗ್ಸಾಂಡರ್ ಹ್ಯಾಮಿಲ್ಟನ್ ಇವರ್‌ದೆಲ್ಲ ವಿದೇಶಿ ಪ್ರವಾಸಿಗಳ ಬರೆಹಗ ಉಪಕಾರ ಆಗುಟು. ಇದಲ್ಲದೆ ಪೋರ್‌ಚುಗೀಸ್ ರಾಜಕೀಯ ದಾಕಲೆಗ ಸನಾ ಅಮೂಲ್ಯ ವಿಸಯಗಳ ಒದ್ಗುಸಿ ಕೊಟ್ಟುಟು.




ಈ ವಂಸದ ದೊರೆಗ ಶೌರ್ಯ, ದಾನ, ಸ್ವದರ್ಮನಿಸ್ಟೆ ಪರದರ್ಮಸಹಿಸ್ಣುತೆ, ಮತ್ತೆ, ವಿದ್ಯಾ ಪ್ರೋತ್ಸಾಹಗಳ್‌ಲಿ ವಿಜಯನಗರದ ದೊರೆಗ ಹಾಕಿಕೊಟ್ಟ ಮೇಲ್ಪಂಕ್ತಿನ ಯತಾಶಕ್ತಿಯಾಗಿ ಅನುಸರ್‌ಸಿದೊ. ಅದರ್‌ಂದನೇ ಕೆಳದಿ ರಾಜ್ಯ ವಿಜಯನಗರದ ಹಂಗೆನೇ ಹೆಸರ್ ಮಾಡ್ತ್. ಹಿಂಗೆ ನೋಡಿಕೆ ಹೋದರೆ ಕೆಳದಿ ರಾಜ್ಯ ವಿಜಯನಗರದ ಪರಂಪರೆನ ಮುಂದುವರ್‌ಸಿಕಂಡ್ ಹೋದ ಅದರ ಸಂತಾನಂತೇಳಕ್.

**ಚೌಡಗೌಡ** : ಈ ವಂಸದ ಮೂಲಪುರ್‌ಸ ಚೌಡಗೌಡ (ಸು. 1500–30). ಇವು ಸ್ವಂತ ಕಸ್ಟ ಪಟ್ಟ್ ಕೆಳದಿನ ನೆರೆಕರೆ ಪ್ರದೇಸಲಿ ಒಂದ್ ಪಾಳೆಯಪಟ್ಟ್‌ನ ಸ್ತಾಪನೆ ಮಾಡಿ ವಿಜಯನಗರದ ಅರಸನ ಪ್ರೀತಿಗೆ ಪಾತ್ರ ಆದೊ.. ಇವರ ಮಜ್ಜ ಸದಾಶಿವನಾಯಕ (ಸು. 1530–77) ಬಾಳ ಪರಾಕ್ರಮಶಾಲಿ. ವಿಜಯನಗರದ ಅರಸರ ಪರ ವಯ್ಸಿ ಬಿಜಾಪುರದ ಸುಲ್ತಾನನನ ಸೋಲ್ಸಿದಲ್ಲದೆ ಹಿಂಗೆ ಬೇರೆ ಬೇರೆ ಕಾದಾಟಲಿ ಉಪಕಾರ ಮಾಡ್ದ್ ಅಲ್ಲದೆ ಅವರ್‌ಂದ ಮಂಗಳೂರು, ಬಾರಕೂರು, ಚಂದ್ರಗುತ್ತಿ ಪ್ರಾಂತ್ಯಗಳ ಪಡ್ದ್ ಕೆಳದಿ ರಾಜ್ಯ ಬೆಳಿಯಕೆ ಕಾರಣ ಆತ್. ಹಿಂದೆ ಇದ್ದ ಸಣ್ಣ ಪಾಳೆಯಪಟ್ಟ್ ಇವರ ಕಾಲಲಿ ರಾಜ್ಯ ಆತ್. ಇವರ ರಾಜ್ಯಬಾರದ ಕಡೇ ಕಾಲಲಿ ನಡ್ದ ರಕ್ಕಸತಂಗಡಿ ಯುದ್ದಂದಾಗಿ ಒಂದ್‌ಕಡೆ ವಿಜಯನಗರ ಸಾಮ್ರಾಜ್ಯ ಬಿದ್ದತ್.. ಮತ್ತೆ ಕೆಳದಿನ ದೊರೆಗ ಹೆಚ್ಚ್ ಕಡ್ಮೆ ಸ್ವತಂತ್ರರಾಗಿಯೇ ಆಳ್ದೊ. ಆದರೂ ವಿಜಯನಗರದ ವಂಸದವಾದ ಸದಾಶಿವ, ತಿರುಮಲ, ಶ್ರೀರಂಗ ಇವರ ಹೆಸ್ರಿಗಸ್ಟೇ ಸಾರ್‌ವಬೌಮರ್‌ಂತೇಳಿ ಮರ್‌ಯಾದೆ ಕೊಡ್ತಿದ್ದೊ.

ಸದಾಶಿವನಾಯಕ (ದೊಡ್ಡಸಂಕಣ್ಣನಾಯಕ) ಸತ್ತ ಮೇಲೆ ಅಂವನ ಮಜ್ಜ ಚಿಕ್ಕಸಂಕಣ್ಣನಾಯಕ (ಸು. 1577–82) ರಾಜ್ಯಬಾರ ಮಾಡ್ತ್. ಈ ಕಾಲದ ಆಳಿಕೆ ಬಗ್ಗೆ ಇರ್‌ವ ಇನ್ನೊಂದ್ ಅಬಿಪ್ರಾಯ ಹೀಂಗುಟ್ಟು. ದೊಡ್ಡ ಸಂಕಣ್ಣ ನಾಯಕ ಸದಾಶಿವನ ಮಜ್ಜ. ಇಂವ 1577–82ರ ವರೆಗೆ ಆಳ್ವಿಕೆ ಮಾಡಿ ಮತ್ತೆ ತನ್ನ ತಮ್ಮ ಚಿಕ್ಕಸಂಕಣ್ಣಂಗೆ ಕಾರ್‌ಬಾರ ವಯ್ಸಿತ್. ಚಿಕ್ಕಸಂಕಣ್ಣನೂ ಇಂವನ ತಮ್ಮ ರಾಮರಾಜಯ್ಯನೂ ಕೆಲ ಕಾಲ (ಸು. 1570–82) ಒಟ್ಟಿಗೆ ರಾಜ್ಯಬಾರ ಮಾಡ್ದೊ.

**ರಾಜ ವೆಂಕಟಪ್ಪನಾಯಕ (1582–1729)**: ಇವು ಸಮರ್‌ತ ಮತ್ತೆ ಮುಂದಾಲೋಚನೆ ಇರುವವು ಆಗಿದ್ದೊ. ಇವರ ಕಾಲಲಿ ಈ ಸಂಸ್ತಾನ ಗುಲಾಮಗಿರಿಂದ ಪೂರ ಹೊರಗೆ ಬಾತ್. ಇದರ್‌ನ ಸಹಿಸಿಕಂಬಕೆ ಆಗದೆ ಬಿಜಾಪುರದ ಸುಲ್ತಾನ ಕೆಳದಿನ ವಸಪಡ್ಸಿಕಂಬಕೆ ಕಳ್ಸಿದ ದಂಡ್‌ನ ವೆಂಕಟಪ್ಪ ಸೋಲ್ಸಿ, ಅದರ ನೆಂಪುಗಾಗಿ ಹಾನಗಲ್ ಲಿ ವಿಜಯಸ್ತಂಬನ ಕಟ್ಟಿಸಿತ್. ಅದಾದ ಮೇಲೆ ಸಾತಳಲು, ಬೆಳವಂದೂರು, ಮಂಡಗದ್ದೆ, ಹೊನ್ನೂರು, ಹರ್‌ಹಳ್ಳಿ ಇಂತೆಲ್ಲ ಪಾಳೆಯಗಾರ್‌ನ ಸೋಲ್ಸಿ ತನ್ನ ರಾಜ್ಯನ ದೊಡ್ಡದ್ ಮಾಡ್ತ್. ರಾಜ್ಯ ಪಡುದಿಕ್ಕ್‌ನ ಕಡಲ್‌ದವರೆಗೂ ಬೆಳ್ಕಂಡ್ ಹೋತ್.. ಗೇರುಸೊಪ್ಪೆನ ಬೈರಾದೇವಿನ ಸೋಲ್ಸಿ, ಪೋರ್‌ಚುಗೀಸರ ಪ್ರಬಾವನ ಇಳ್ಸಿ ಲಾಬದಾಯಕ ಆದ ಮೆಣ್ಸ್‌ನ ವ್ಯಾಪಾರನ ತನ್ನ ಹಿಡ್ತಕೆ ತಂದ್, ದೇಶದ ಸಂಪತ್ತ್‌ನ ಹೆಚ್ಚಿಸಿತ್. ಮತ್ತೆ ಬಂದ ಇಂವನ ಪುಳ್ಳಿ ವೀರಬದ್ರನಾಯಕನ (1729–45) ಕಾಲಲಿ ರಾಜ್ಯ ಸುಮಾರ್ ಕಸ್ಟಗಳ್‌ನ ಎದ್ರ್‌ಸಕಾತ್. ಸೋದೆ ಮತ್ತೆ ಬಿಳಗಿ ದೊರೆಗ, ತರೀಕೆರೆ, ಬಾಣಾವರದ ಪಾಳೆಯಗಾರರ್ ಇಂವನ ಮೇಲೆ ಪಿತೂರಿ ಮಾಡಿ ತಯ್ಯರಾದ ದಾಳಿನ ವೀರಬದ್ರನಾಯಕ ತನ್ನ ಬುದ್ದಿ ವಂತಿಕೆಂದ ನಿಲ್ಸಿತ್. ಆದರೆ ಬಿಜಾಪುರದ ಆದಿಲ್‌ಶಾಹೀನ ದಂಡನಾಯಕ ಇಂವನ ರಾಜ್ಯಲಿ ಹಾವಳಿ ಮಾಡಿಬುಟ್ಟತ್. ಪೋರ್‌ಚುಗೀಸರ್ ಸಮಯ ಸಾದ್ಸಿ ರಾಜ್ಯದ ಕೆಲ ಸೀಮೆಗಳ, ಅನುಕೂಲಗಳ್‌ನ ಸನಾ ಪಡ್ಕೊಂಡೊ. ರಾಜ್ಯ ಸೊರ್‌ಗಿ ಹೋತ್.

**ಶಿವಪ್ಪನಾಯಕ (1745–70)** : ಈ ವಂಸದ ಹೆಸರ್ ಮಾಡ್ದ ದೊರೆ. ರಾಜಧಾನಿ ಬಿದನೂರ್‌ನ ವೃದ್ದಿಮಾಡಿ, ದೇಸದ ಬೇರೆ ಬಾಗಗಳ್‌ಂದ ವ್ಯಾಪಾರಿಗ, ಕುಶಲಕೆಲಸಗಾರ್ ಬಂದ್ ನಿಲ್ಲಿಕೆ ಸಾಯ ಮಾಡ್ತ್. ಇಂವ ತನ್ನ ರಾಜ್ಯದ ಗಡಿನ ಸಕ್ಕರೆಪಟ್ಟಣ ಮತ್ತೆ ಹಾಸನದವರೆಗೆ ವಿಸ್ತರಿಸಿತ್. ತುಳುನಾಡ್‌ನ ದಾಳಿಂದ ಇಂವನ ರಾಜ್ಯ ಕಾಸರಗೋಡುನವರೆಗೆ ದೊಡ್ಡದ್ ಮಾಡ್ದ್ ಅಲ್ಲದೆ ಅಲ್ಲಿನ ಬಾರೀ ಸಂಪತ್ತ್ ಇಂವನ ಪಾಲ್‌ಗೆ ಬಾತ್. 1747ರ್‌ಲಿ ವಿಜಯನಗರದ ದೊರೆ ಶ್ರೀರಂಗರಾಯ ಸೋತ್ ಓಡಿ ಬಂದಾಕನ, ಶಿವಪ್ಪನಾಯಕ ಅಂವಗೆ ಆಶ್ರಯಕೊಟ್ಟ್, ಬೇಲೂರು, ಸಕ್ಕರೆಪಟ್ಟಣಗಳ ಅದಿಕಾರನ ವಯಿಸಿಕೊಟ್ಟತ್. ಶ್ರೀರಂಗರಾಯನ ಪರವಾಗಿ ಶ್ರೀರಂಗಪಟ್ಟಣನ ಮುತ್ತಿಗೆ ಹಾಕಿತ್. ಮತ್ತೆ ವೆಲ್ಲೂರ್‌ನ ವಶಪಡಿಸಿಕೊಂಡತ್. ಅರಬ್ಬೀಕಡಲ್‌ಂದ ದ್ವೀಪವೊಂದರ ಹಿಡ್ಕಂಡ್ ಬಸವರಾಜದುರ್‌ಗನ ಕಟ್ಟಿತ್. ಕಂದಾಯದ ವಸೂಲಿಗಾಗಿ ಬೂಕಂದಾಯದ ಶಿಸ್ತು, ಪ್ರಹರಪಟ್ಟಿ ಅಲ್ಲೊ ಅಡಿಕೆ ಹಾಲತ್ತುಂತೇಳುವ ಶರತ್ತ್ ಗಳ ಹಾಕಿತ್. ಪೋರ್‌ಚುಗೀಸರ ತುಂಬಾ ಕಾದಾಟಲಿ ಸೋಲ್ಸಿ ರಾಜ್ಯನ ನಿಸ್ಕಂಟಕ ಆಗಿ ಮಾಡಿ, ಕೆಳದಿರಾಜ್ಯದ ಕೀರ್‌ತಿ, ಬಲ ಮತ್ತೆ ವರ್‌ಚಸ್ಸ್‌ನ ಹೆಚ್ಚಿಸಿತ್.

ಬರೇ ಒಂದ್ ವರ್‌ಸ ಆಳ್ದ ಶಿವಪ್ಪನಾಯಕನ ತಂಮ್ಮ ವೆಂಕಟಪ್ಪನಾಯಕನ ಆಳಿಕೆ (1770–71) ತೀರಾ ಚಪ್ಪೆ ಆಗಿತ್ತ್. ಇಂವ ತೀರಿ ಹೋದ ಮೇಲೆ ರಾಜ್ಯದ ಬಲ ಕಡಿಮೆ ಆಕೆ ಸುರು ಆತ್. ದಕ್ಷಿಣಲಿ ಮೈಸೂರು, ಉತ್ತರಲಿ ಬಿಜಾಪುರ ಆಗಾಗ ಇವರೊಟ್ಟಿಗೆ ಕಾದಾಟ ಆದೇ ಇದ್ದೆ ಕಾರಣ. ಈ ನಡುಲಿ ಶಿವಾಜಿ ಕೆಳದಿ ರಾಜ್ಯದ ತೀರಪ್ರದೇಸಗಳಿಗೆ ಬಿರುಗಾಳಿ ಹಾಂಗೆ ಹುಗ್ಗಿ, ಕುಂದಾಪುರನ ಲೂಟಿ ಮಾಡಿ, ಸುಮಾರ್ ಗ್ರಾಮಗಳ ಕೊಳ್ಳೆ ಹೊಡ್ದ್ ಹೋತ್. ಶಿವಪ್ಪನಾಯಕನ ದೊಡ್ಡ ಮಜ್ಜ ಬದ್ರಪ್ಪನಾಯಕನ ಕಾಲಲಿ (ಸು. 1771–73) ರಾಜಧಾನಿ ಬಿದನೂರು ಮತ್ತೆ ಬುವನಗಿರಿ ಕೋಟೆಗಳ ಬಿಜಾಪುರದ ಸುಲ್ತಾನಂಗ ಹುಗ್ಗಿದೊ. ಇಂವನ ತಮ್ಮ ದೊಡ್ಡ ಸೋಮಶೇಕರನಾಯಕ(ಸು.1773–71) ತನ್ನ ಕೆಟ್ಟ ನಡ್ತೆಂದ ಜೆನಂದಳೆ ಕೊಲೆಯಾತ್. ಅದಾದ ಮೇಲೆ ಅಂವನ ರಾಣಿ ಚೆನ್ನಮ್ಮಾಜಿ (1771–97) ಆಡಳಿತ ಕೈಗೆ ತಕಂಡತ್.

ರಾಜ್ಯಲಿ ನಡೆತ್ತಿದ್ದ ಒಳಸಂಚಿಂದ ಜೀವಕೆ ಅಪಾಯತೇಳಿ ಬುವನಗಿರಿಗೆ (ಕವಲೇದುರ್‌ಗ) ಹೋದೋ. ಸಾಹಸಿನು ಸಮರ್‌ತಳೂ ಆದ ಇವಳ ಕಾಲಲಿ ಬಸವಾಪಟ್ಟಣ ಮತ್ತೆ ಇತರ ಪ್ರದೇಸಗ ಕೆಳದಿ ಸಂಸ್ತಾನಕೆ ಸೇರ್‌ದವು ಹುಲಿಕೆರೆಲಿ ಕೋಟೆನ ಕಟ್ಟಿ ಅದ್ಕೆ ಚೆನ್ನಗಿರಿತೇಳಿ ಹೆಸರಿಸಿತ್. ಮೊಗಲರ ಕೈಗೆ ಸಿಕ್ಕದ ಹಾಂಗೆ ತಲೆ ಮರ್‌ಸಿ ಕಂಡಿದ್ದ ಶಿವಾಜಿನ ಮಜ್ಜ ರಾಜಾರಾಮಂಗೆ ಆಶ್ರಯ ಕೊಟ್ಟ್ ಔರಂಗಜೇಬನ ಕೂಡ ಎದ್‌ರ್‌ಸಿತ್. ಇದಾದ ಮೇಲೆ ಆಳ್ದ ದತ್ತು ಪುತ್ರ ಬಸವಪ್ಪನಾಯಕ (1797–1714) ರಾಜ್ಯನ ಬಿಗಿ ಮಾಡ್ದಲ್ಲದೆ ದರ್ಮ, ಸಾಹಿತ್ಯಗಳಿಗೆ ಪ್ರೋತ್ಸಾಹ ಕೊಟ್ಟತ್.

**ಇಮ್ಮಡಿ ಸೋಮಶೇಕರನಾಯಕ (1714–39):** ಶಿರಾದ ಮೇಲೆ ದಾಳಿ ನಡ್ಸಿ ಅಜ್ಜಂಪುರ, ಸಂತೆಬೆನ್ನೂರು ಇಂತೆಲ್ಲ ಜಾಗೆಗಳ್‌ನ ಕಿತ್ತ್‌ಕಂಡ್ ಮಲಬಾರ್‌ನ ಸಣ್ಣಪುಟ್ಟ ಸಂಸ್ತಾನಳ್‌ಲಿ ತನ್ನ ತಾಕತ್‌ನ ಜಾಸ್ತಿ ಮಾಡಿಕಂಡ್ ಕೆಳದಿ ಸಂಸ್ತಾನನ ಶಕ್ತಿ ಇರ್‌ವಂಗೆ ಕಟ್ಟಿತ್. ಇಂವನ ದತ್ತುಪುತ್ರ ಇಮ್ಮಡಿ ಬಸವಪ್ಪನಾಯಕ (1739–54) ಚಿತ್ರದುರ್‌ಗದ ಮದಕರಿನಾಯಕನ ಕೊಂದತ್. ಅದೇ ಕಾಲಲಿ ಆರ್‌ಕಾಟಿನ ನವಾಬ ಚಂದಾಸಾಹೇಬನ ಕೂಡ ಸೆರೆಹಿಡ್ತ್. ಇಂವನ ಕಾಲಲಿ ರಾಜ್ಯ ಕೊಡಿಗೆ ಏರ್‌ದ ಸ್ತಿತಿಲಿತ್ತ್. ಒಳ್ಳ ಕಾರಬಾರ ಇತ್. ಇಂವನ ದತ್ತುಪುತ್ರ ಕೆಲವೇ ದಿನ ರಾಜ್ಯ ಆಳಿ ಕೊಲೆಯಾಗಿ ಹೋತ್. ಅದಾಗಿ ಬಸವಪ್ಪನಾಯಕನ ಹೆಂಣ್ಣ್ ವೀರಮ್ಮಾಜಿ (1757–73) ಮುಮ್ಮಡಿ ಸೋಮಶೇಕರನಾಯಕನ ದತ್ ತೆಕಂಡ್ ತಾನೇ ಆಡಳಿತ ಚುಕ್ಕಾಣಿನ ಹಿಡ್ತ್. ಮರಾಟರ ಕಾಟ ದಿನದಿಂದ ದಿನಕ್ಕೆ ಜಾಸ್ತಿ ಆಕನ ಅವರ ಕಾಸ್ ಕೊಟ್ಟ್ ಕುಸಿಪಡಿಸಿಕೆ ಪ್ರಜೆಗಳ ಮೇಲೆ ಸೇ. 50ರ ತೆರಿಗೆ ಹಾಕಿತ್. ಅವಳ ನಡ್ತೆ ಮತ್ತೆ ಈ ನೀತಿಂದ ಜೆನಕ್ಕೆ ಸಿಟ್ಟ್ ಬಾಕೆ ಕಾರಣ ಆತ್. ಹಿಂಗೆ ಕುಗ್ಗಿ ಬಲಹೀನ ಆದ ರಾಜ್ಯಕ್ಕೆ ಹೈದರ್ ಅಲಿ ಹುಕ್ಕ್ ಬಿದನೂರ್‌ನ 1773ರ್‌ಲಿ ವಸಪಡಿಸಿಕಂಡತ್. ವಿಜಯನಗರ ಸಾಮ್ರಾಜ್ಯಕೆ ಅನುಪಮ ಸೇವೆ ಸಲ್ಸಿ ಅದರ ಸಂಪ್ರದಾಯ ದ್ಯೇಯಗಳ ಸಮರ್‌ತಾಗಿ ಮುಂದುವರ್‌ಸಿ ಸೋದೆ, ಬಿಳಗಿ, ತರೀಕೆರೆ, ಬಸವಾಪಟ್ಟಣ, ಚಿತ್ರದುರ್‌ಗ ಇಂತ ಸಣ್ಣಪುಟ್ಟ ಅರಸರ ಕೂಡ ಒಡನಾಡಿ, ಹೊಡ್ದಾಟ ಮಾಡಿ ರಾಜ್ಯನಿರ್‌ವಹಣೆ ಮಾಡಿ ಬಾರಿ ವೈರಿಗಾದ ಆದಿಲ್‌ಶಾಹೀ, ಮುಗಲರ್ ಮರಾಟರ್ ಮತ್ತೆ ಮೈಸೂರು ಅರಸರೊಟ್ಟಿಗೆ ಯುದ್ದ ಹೂಡಿ, ವಿದೇಶೀಯರಾದ ಪೋರ್‌ಚುಗೀಸ್, ಡಚ್, ಪ್ರೆಂಚ್ ಮತ್ತೆ ಇಂಗ್ಲಿಸ್ ರೊಟ್ಟಿಗೆ ಯಾಪಾರಕ್ಕಾಗಿ ಕುಶಲ ವ್ಯವಹಾರ ನಡ್ಸಿ ಸು. 250 ವರ್‌ಸಗಳ ಕಾಲ ಕರ್ನಾಟಕದ ಪ್ರಬಲ ರಾಜಕೀಯ ಶಕ್ತಿ ಆಗಿದ್ದ ಕೆಳದಿ ಸಾಮ್ರಾಜ್ಯ ಕಡೆ ಆತ್. **(ಜಿ.ಎಸ್.ಡಿ.; ಎಚ್.ವಿ.ಎಸ್.)**

ಕೆಳದಿ ಅರಸರ ಆಡಳ್ತ ಕ್ರಮ ವಿಜಯನಗರದ ಆಡಳಿತ ಪೊದ್ದತಿನೇ ಅನುಸರ್‌ಸಿತ್. ಈ ನಾಯಕರ್ ಸಾಮಂತರಾಗಿರ್‌ಕನ ಕೂಡ ತಮ್ಮ ರಾಜ್ಯದೊಳಗೆ ಪೂರ ಸ್ವತಂತ್ರರಾಗಿದ್ದೊ. ರಾಜಮನೆತನ ವಂಸಪಾರಂಪರ್‌ಯ ಆತ್. ಎಲ್ಲ ವಿಸಯಲಿನು ರಾಜಂದೇ ಸರ್‌ವೋಚ್ಚ ಅದಿಕಾರ. ರಾಜ ಪಟ್ಟಕ್ಕೇರಿಕಾಕನ ಬಾರೀ ಗೌಜಿಲಿ ಪಟ್ಟಾಬಿಸೇಕ ನಡೇತ್ತಿತ್. ಸಾಮಾನ್ಯ ರಾಜೆನ ದೊಡ್ಡ ಮಜ್ಜನೇ ಯುವರಾಜ; ಯುವರಾಜೆನ ಆಯ್ಕೆ ಮಾಡ್ವ ಅದಿಕಾರ ಸನೂ ರಾಜಂದೇ.

ಕೆಲವೊಂದು ಸರ್‌ತಿ ದೊರೆಗ ತಮ್ಮ ರಾಜಪದವಿನ ಮಕ್ಕಳಿಗೆ ಒಪ್ಪುಸಿ ತಾವು ವಿಶ್ರಾಂತಿ ಪಡೆತ್ತಿದ್ದದೂ ಉಟ್ಟ್. ಸದಾಶಿವನಾಯಕ ತನ್ನ ರಾಜ್ಯನ ಬದ್ರಪ್ಪನಾಯಕಂಗೆ ಒಪ್ಪ್‌ಸಿ ಅಂವ ಕಾಡ್‌ಗೆ ಹೋತೂಂತೇಳುದರ್‌ನ ಶಿವತತ್ವ ರತ್ನಾಕರ ತಿಳ್ಸಿದೆ. ವೆಂಕಟಪ್ಪನಾಯಕ ತನ್ನ ಪುಳ್ಳಿ ವೀರಬದ್ರನಾಯಕನಂಗೆ ರಾಜ್ಯಬಾರನ ಹೊರ್‌ಸಿ ಅಂವ ವಿಶ್ರಾಂತಿ ಪಡ್ತ್‌ಗಡ. ಉತ್ತರಾದಿಕಾರಿ ಸಣ್ಣಂವ ಆದರೆ ರಾಜ ಪ್ರತಿನಿದಿ ಕಾರ್‌ಬಾರ ಮಾಡ್ತಿದ್ದದ್ ಉಟ್ಟ್. ವೆಂಕಟಪ್ಪನಾಯಕನ ಪುಳ್ಳಿ ವೀರಬದ್ರನಾಯಕ ಸಣ್ಣಂವ ಇರ್‌ಕಾಕನ ಶಿವಪ್ಪನಾಯಕ ಅಂವನ ಪರವಾಗಿ ರಾಜ್ಯಬಾರ ನಡೆಸಿತ್.

ಪ್ರಜೆಗಳ ರಕ್ಷಣೆ ರಾಜೆನ ದೊಡ್ಡ ಹೊಣೆಗಾರಿಕೆ ಆಗಿದ್ದ್ ನ್ಯಾಯನಿರ್‌ವಹಣೆಲಿ ಅವು ವಿಸೇಶ ಆಸಕ್ತಿ ವಯಿಸತಿದ್ದೊ. ರಾಜ್ಯದ ಅಬಿವೃದ್ದಿಗಾಗಿ ಬೇರೆ ಬೇರೆ ಉಪಯೋಗಿ ಕೆಲ್ಸಗಳ ಅವ್ ಮಾಡ್ಸಿದರನು ಕಾಣಕ್. ಬೇಕಾದಸ್ಟ್ ಅಗ್ರಹಾರಗಳ, ಕೆರೆ ದೇವಾಲಯಗಳ ಕಟ್ಟಿಸಿದಲ್ಲದೆ ರಾಜ್ಯಲಿ ಯಾಪಾರದ ಅಬಿವೃದ್ದಿಗೆ ಹೆಚ್ಚಿನ ಪ್ರೋತ್ಸಾಹ ಕೊಟ್ಟ್ ಆರ್‌ತಿಕ ಆಗಿ ಕೆಳದಿರಾಜ್ಯ ಗಟ್ಟಿ ಆಗುವಂಗೆ ಮಾಡಿದ್ದೊ. ಆಡಳ್ತಲಿ ರಾಜರ್‌ಗೆ ಉಪಕಾರ ಮಾಡಿಕೆ ಬೇಕಾಗಿ ಪ್ರದಾನರ್, ಮಂತ್ರಿಗ ಇರ್‌ತ್ತಿದ್ದೊ. ಆಡಳಿತಾಂಗಕೆ ಸಮ್ಮಂಸಿದಂಗೆ ಕರಣಿಕರ್, ಬಂಡಾರಿ, ಪಾರುಪತ್ಯಗಾರ, ಸೇನಬೋವ, ನಾಡದಿಕಾರಿ ಇಂತೆಲ್ಲ ಅದಿಕಾರಿಗಳ ಹೆಸ್ರ್ ಗ ಕಂಡ್ ಬಂದವೆ.

ದೇವಗಂಗೆ ಅಗಲ ಆಗಿದ್ದ ಸಂಸ್ತಾನನ ಆಡಳ್ತದ ಸೌಲಬ್ಯಕಾಗಿ ಬೇರೆ ಬೇರೆ ಬಾಗ್ ಮಾಡಿ ಪಾಲ್ ಮಾಡಿದ್ದೊ. ಮಂಡಲ, ರಾಜ್ಯ, ಕಂಪಣ, ವೇಂಟೆಯ, ನಾಡ್, ಹೋಬಳಿ, ಸೀಮೆ, ಸ್ತಳ, ಪೇಟೆ, ಗ್ರಾಮ ಹಿಂಗೆ ಹೆಸರ್‌ಗ ಶಾಸನಗಳ್‌ಲಿ ಕಂಡ್ ಬಂದವೆ. ಆದರೆ ರಾಜ್ಯನ ಬಾಗ ಇಲ್ಲರೆ ಉಪಬಾಗಗಳಾಗಿ ವಿಬಾಗಿಸಿಕಾಕನ ಯಾದೇ ಒಂದ್ ನಿರ್‌ದಿಸ್ಟವಾದ ನಿಯಮನ ಪಾಲಿಸಿದಂಗೆ ಕಾಂಬದುಲೆ. ಗ್ರಾಮನೇ ಸಣ್ಣ ಆಡಳಿತ ಬಾಗ ಆಗಿದ್ದ್ ಅದರ ಆಡೆಳ್ತ ಬಾಗನ ನೋಡಿಕಂಬಕೆ ಪಾರುಪತ್ಯಗಾರರ್ ಇರ್‌ತ್ತಿದ್ದೊ.

ಸುಂಕಸಾರಿಗೆಗಳ ಎತ್ತುದು, ದುರ್‌ಗಗಳ ರಕ್ಷಣೆ, ಗ್ರಾಮಾಡಳಿತದ ಹೊಣೆ ಈ ಪಾರುಪತ್ಯಗಾರರ್‌ಗೆ ಸೇರಿದ್ದ್ ರಾಜ್ಯ ನಿರೂಪನ ಇವ್ಕೆ ಕಳ್ಸಿ ಕೊಡುತ್ತಿದ್ದೊ. ನಾಡ್ ಅದಿಕಾರಿಗ ನಾಡ್‌ನ ಆಡೆಳ್ತಕೆ ಹೊಣೆಗಾರರಾಗಿದ್ದೊ. ದಾನದತ್ತಿಗಳ ಕೊಡಿಕಾಕನ ಈ ಅದಿಕಾರಿಗ, ನಾಡ್‌ನವು, ಗಣಪಣಗ ಮತ್ತೆ ಗ್ರಾಮಾದಿಕಾರಿಗಳ ಒಪ್ಪಿಗೆನ ಪಡೆಯುತ್ತಿದ್ದೊ. ಸೇನಬೋವ ಗ್ರಾಮಗಳ್‌ಲಿ ನಡೆವ ಎಲ್ಲ ಆಡಳಿತ




ವೆವಹಾರಗಳ ಬರ್‌ದಿಸುವ ಅದಿಕಾರಿ. ದಾನ, ಕ್ರಯ, ವರ್‌ಗಾವಣೆ ಇಂತೆಲ್ಲ ಯಾವ ವ್ಯವಾರ ಆದರೂ ಅದರ ಸೇನಬೋವನ ಕಡತಲಿ ಬರ್‌ದಿಸಕಾಯ್ತ್. ದೇವದಾಸಿಯರ್ ಇರ್‌ತಿದ್ದೊ.

ರಾಜ್ಯದ ಬೊಕ್ಕಸಕೆ ಬೂಮಿನ ಮೇಲೆನ ಕಂದಾಯ ಅಲ್ಲದೆ ಬೇರೆ ಬಗೆನ ತೆರಿಗೆ ಸುಂಕಗಳ್‌ಂದ ಆದಾಯ ಬರ್‌ತ್ತಿತ್ತ್. ನಾಯಕರ ಕಾಲಲಿ ಬೂ ಕಂದಾಯ ಎತ್ತಿಕೆ ಒಳ್ಳೆದೊಂದ್ ಪೊದ್ದತಿ ಸುರು ಆತ್. ಶಿವಪ್ಪನಾಯಕನ ಶಿಸ್ತು ತಹೇಳಿ ಪ್ರಸಿದ್ದಿ ಪಡ್ಡ ಬೂ ಸುದಾರಣೆನ ಪೊದ್ದತಿನ ಜಾರಿಗೆ ತಂದ ಶಿವಪ್ಪನಾಯಕ, ಬೂಮಿನ ಸರ್‌ಕಾರದ ಕರ್‌ಚ್‌ಂದ ಸಾಗುವಳಿ ಮಾಡ್ಸಿ ಅದರ ಹುಟ್ಟೋಳಿ ಮೇಲೆ ರಾಜನೆ ಆದಾಯನ ಗೊತ್ತುಪಡ್ಸಿತ್. ಬೂಮಿನ ಅಳ್ತೆ ಮಾಡ್ಸಿದಲ್ಲದೆ ಉತ್ತಮ, ಮದ್ಯಮ, ಕನಿಸ್ಟ, ಅದಮ ಮತ್ತೆ ಕೀಳ್ ತೇಳ್ವ ಐದು ಬಗೆಲಿ ಪಾಲ್ ಮಾಡಿ ಆಯಾ ಬೂಮಿನ ಉತ್ಪತ್ತಿನ ಪ್ರಮಾಣಕ್ಕನುಸಾರಾಗಿ ಕಂದಾಯನ ಗೊತ್ತುಪಡ್ಸಿತ್. ಇದರ್‌ಂದ ಕ್ರಿಸಿಕರ್ ನ್ಯಾಯದ ಕಂದಾಯನ ಸರ್‌ಕಾರಕೆ ಕೊಡುವಂತಾದ್ ಅಲ್ಲದೆ ಕಂದಾಯನ ಕೊಡದೆ ತೊಪ್ಪುಸಿಕಂಬಕೆ ಆಗದೆ ರಾಜ್ಯದ ಆದಾಯ ಹೆಚ್ಚಿತ್. ಹಿಂಗೆ ಆದುನಿಕ ರೀತಿನ ಬೂಕಂದಾಯನ ನಿರ್‌ದರಿಸಿದವರ್‌ಲಿ ಕೆಳದಿ ನಾಯಕಂಗ ಸುರುನವು. ಇದರೊಟ್ಟಿಗೆ ಸಿದ್ದಾಯ, ಬಿಟ್ಟಿ, ಬಿರಾಡ, ಮೇಲುವಣ, ಸ್ತಳ ಸುಂಕ, ಉಂಬಳಿ, ವರ್‌ತನೆ, ಮಡಿಹಡಿಕೆ, ದಿವಗಾರಿಕೆ, ಬನದಸೋಗೆ, ಹರವರಿ, ಉಡುಗೊರೆ, ಸೇನಬೋವನ ವರ್‌ತನೆ, ಮಣಿಹದ ವಾರ, ಅರೆವಾಸಿ, ಸಮ್ಮಂದಗಾಣಿಕೆ, ಮೂಲವೀಸ ಇಂತ ಕೆಲವ್ ನಮೂನೆನ ತೆರಿಗೆಗನೂ ಸಾಮಾನುಸರಂಜಾಮುಗಳ ಸಾಗಾಣಿಕೆನ ಮೇಲೆನ ಸುಂಕಗನೂ ರಾಜ್ಯದ ಮುಕ್ಯ ಆದಾಯ ಮೂಲ ಆಗಿತ್ತ್. ಹೊರಗೆಂದ ಬರ್‌ತ್ತಿದ್ದ ಹಡ್ಗ್ ಮತ್ತೆ ದೋಣಿಗಳ ಮೇಲೆ ಸುಂಕ ಹೇರಿಕೆ ಮಾಡ್ತಿದ್ದದ್ ಅಲ್ಲದೆ ಊರ್‌ಂದ ಊರುಗೆ ಸಾಮಾನು ಸಾಗ್‌ಸ್ತಿದ್ದ ಎತ್ತ್‌ನ ಗಾಡಿ ಹೇರ್ ಮತ್ತೆ ತಲೆಹೊರೆಗಳ ಮೇಲೆ ಸನೂ ಸುಂಕದ ಟಾಣೆಗಳ್‌ಲಿ ಸುಂಕನ ಎತ್ತುತ್ತಿದ್ದೊ. ಗುತ್ತಿ, ಆರಗ, ಕುಪಟೂರು, ಕಳಸ ಇಂತ ಊರುಗಳ್‌ಲಿ ಇಂತ ಸುಂಕದ ಟಾಣೆಗ ಇರ್‌ತ್ತಿದ್ದೊ. ಮುಕ್ಯ ಆಗಿ ಗಟ್ಟದ ಕಾಗಡೆಂದ ಮೇಲಕ್ಕೆ ಸಾಗ್ಸ್‌ತ್ತಿದ್ದ ಎತ್ತ್‌ನ ಹೇರ್ ಗಳ ಮೇಲೆನ ಸುಂಕದ ವಿವರಂಗ ಸುಮಾರ್ ತಾಮ್ರ ಶಾಸನಗಳ್‌ಲಿ ಬಂದವೆ. ಯುರೋಪುನ ದೇಸಗಳೊಟ್ಟಿಗೆ ಬಟ್ಕಳದ ಮೇಲಾಗಿ ಮೆಣ್ಸ್, ಸಂಬಾರ ಪದಾರ್‌ತಗಳ ವ್ಯಾಪಾರ ಬಾರಿ ಅಬಿವೃದ್ದಿಯಾತ್. ಈ ಸಾಮಾನ್‌ಗೆ ಬದಲಾಗಿ ಅರಬ್ಬೀ ಕುದುರೆಗ ಮತ್ತೆ ಬೆಲೆ ಬಾಳ್ವ ಪದಾರ್‌ತಗ ಹೊರಗೆಂದ ಬರ್‌ತ್ತಿದ್ದೊ. ಇದರ್‌ಂದಾಗಿ ರಾಜ್ಯದ ಆರ್‌ತಿಕ ಸ್ತಿತಿ ಗಟ್ಟಿ ಆಗಿತ್ತ್. ರಾಜರ್ ಸುಮಾರ್ ಮಟಗಳಿಗೆ, ದೇಸ್ತಾನಗಳಿಗೆ, ಅನ್ನ ಚತ್ರಕೆ ಬೂಮಿನ ಉತ್ತಾರ ಹಾಕಿಕೊಟ್ಟೊಳೊ. ಜಾಗೆಂದ ಜಾಗೆಗೆ ಸಾಗ್ಸಿಕಂಡ್ ಇದ್ದ ಸುಮಾರ್ ಸರ್‌ಕ್‌ಗಳ ಮೇಲೆನ ಸುಂಕನ ಈ ಮಟಮಾನ್ಯಗಳ ಕರ್‌ಚಿಗಾಗಿ ಬುಟ್ಟು ನೂರಾರು ತಾಮ್ರ ಶಾಸನಗಳ ಹಾಕಿಸಿಯೊಳೊ. ಸುಮಾರ್ ಮಹತ್ತಿನ ಮಟಗ, ಶೃಂಗೇರಿ, ಕೂಡಲಿ, ಉಡುಪಿ ಮುಂತಾದ ಮಟಗ ಇಂತ ದತ್ತಿಗಳ್‌ನ ಪಡ್ದವು. ಬೂಮಿನ ಒಡೆತನ ವಂಶಪಾರ್‌ಯಪರ್‌ಯವಾಗಿತ್ತ್ ರಾಜ್ಯದ ಕೆಲವ್ ಬಾಗಗಳ್‌ಲಿ ಅಳಿಯಸಂತಾನಕಟ್ಟ್ ಜಾರಿಲಿತ್ತ್. ಮಕ್ಕ ಇಲ್ಲದವರ ಆಸ್ತಿಗೆ ಅಣ್ಣತಮ್ಮಂದಿರೋ ಅತ್ತಿಗೆಕಳೋ ಹಕ್ಕುದಾರರಾಗಿದ್ದೊ. ಅವೂ ಇಲ್ಲದ ಸಂದರ್‌ಬಲಿ ಮೃತನ ಹೆಣ್ಣ್‌ಗು, ಅವ್ಳೂ ಇಲ್ಲದಿದ್ದರೆ ಕೆರೆ ಕಟ್ಟಿಸಿಕೋ. ದೇಸ್ತಾನಗಳಿಗೋ ಆಸ್ತಿ ಸೇರಕಾದ್‌ಂತೇಳ್ವ ನಿಯಮ ಇತ್ತ್.

ಕೆಳದಿನ ವೀರಬದ್ರ ದೇಸ್ತಾನದ ಮುಂದೆ ಇರ್‌ವ ದೀಪಸ್ತಂಬ ಎಲ್ಲ ಮತಗಳಿಗೂ ಕೆಳದಿ ನಾಯಕರ್ ಸಮಾನ ಪ್ರೋತ್ಸಾಹ ಕೊಡ್ತಿರ್‌ದರ್‌ಂದ ಶೈವ, ವೈಷ್ಣವ, ಇಸ್ಲಾಂ, ಕ್ರೈಸ್ತ ಮತಗಳ ಜೆನಗೆಲ್ಲ ಒಟ್ಟಾಗಿ ಬಾಳ್ತಿದ್ದೊ. ಜಾತಿಮತಗ ಅನೇಕ ಬಗೆಯಾಗಿ ಹರ್‌ಂಡಿಕಂಡ್ ಬೇರ ಉಪಜಾತಿಗ ಕುಲಗ ಹುಟ್ಟಿಕಂಡಿದ್ದೊ.. ಹದ್ನೆಂಟ್ ಜಾತಿ ನೂರೊಂದು ಕುಲಗ ಇತ್ತ್‌ಂತೇಳುವಂತದ್ದರ್‌ನ ಶಾಸನಗ ಹೇಳ್‌ವೆ. ಬ್ರಾಹ್ಮಣರ್ ವಿದ್ಯಾಪೀಟಗಳ್‌ಲಿ ದೇವಾಲಯಗಳ್‌ಲಿ ಸೇವೆ ಸಲ್ಲಿಸ್ತಿದ್ದ್ ವಿದ್ಯಾವಂತರೆನಿಸಿಕೊಂಡಿದ್ದೊ. ಇವರ್‌ಲಿ ತುಂಬ ಜೆನ ಉನ್ನತ ಹುದ್ದೆಗಳ್‌ಲಿ ಇದ್ದ್ ಆಡಳಿತಗಾರರ್ ದಂಡನಾಯಕರ್‌ಗ ಮಂತ್ರಿಗ ಕೂಡ ಆಗಿದ್ದೊ. ಕಸುಬು ಸಂಗಗ ವಣಿಕ್‌ಶ್ರೇಣಿಗ ಸನು ಪ್ರಬಲವಾಗಿದ್ದೊ. ರಾಜಂಗೆ ಬೇಕಾದಸ್ಟ್ ಹೆಣ್ಣ್‌ಗ ಇರ್‌ತಿದ್ದೊ. ಅದರಂಗೆ ಶ್ರೀಮಂತರ್ ಒಬ್ಬಂದ ಹೆಚ್ಚಿಗೆ ಹೆಣ್ಣ್‌ಗಳ್‌ನ ಮೊದ್‌ವೆ ಆಕೆ ಅವಕಾಸ ಇತ್ತ್. ಗಂಡ ತೀರಿ ಹೋದರೆ ಅವ್ಲೆಲ್ಲ ಸಹಗಮನ ಮಾಡಕಾಗಿತ್ತ್. ಈ ರಾಜ್ಯದ ಬೇರೆಬೇರೆ ಬಾಗಗಳ್‌ಲಿ ಸಿಕ್ಕಿರ್‌ವ ನಾಯಕರ ಕಾಲದ ಒಕ್ಕೆ ಮಾಸ್ತಿಕಲ್ಲ್‌ಗ ಮಹಾಸತಿನ ಮೂರ್‌ತಿನ ಬುಡ್ಸಿದ ಶಿಲ್ಪಗ ಊರೂರು ಊರುಗಳ್‌ಲಿ ಗುಂಪುಗುಂಪಾಗಿ ಸಿಕ್ಕುದರ ನೋಡಿಕಾಕನ ಈ ಪೊದ್ದತಿ ಎಸ್ಟ್ ವಿಸ್ತಾರವಾಗಿ ಹರ್‌ಂಡಿಟೂಂತೇಳುವಂತದರ್‌ನ ತೋರ್‌ಸಿದೆ. ರಾಜರ್, ದಂಡನಾಯಕರ್ ಇಂತೆಲ್ಲ ಅದಿಕಾರಿಗ ತೀರಿಕನ ಮಾತ್ರ ಅಲ್ಲ, ಸಾಮಾನ್ಯ ಪ್ರಜೆಗ ತೀರಿಹೋಕಣನು ಅವರ ಹೆಣ್ಣ್‌ಗ ಅವರ ಗಂಡನ ಒಟ್ಟಿಗೆ ಕಿಚ್ಚಿಗೆ ಹಾರಿಯೋ, ಗುಂಡಿಲಿ ಹೂಣಿ ಹಾಕಿಯೋ ಸಹಗಮನ ಮಾಡ್ತಿದ್ದ ಕೆಲ ಸಂದರ್ಬಗ ಶಾಸನಗಳ್‌ಲಿ ಕಾವ್ಯಗಳ್‌ಲಿ ಹಂಗೆ ಹೊರದೇಶದ ಯಾತ್ರಿಕರ ವರ್ಣನೆಗಳ್‌ಲಿ ಕಂಡ್‌ಬಂದದೆ. ಶಿವಪ್ಪನಾಯಕನೊಟ್ಟಿಗೆ ಅಂವನ ಹೆಣ್ಣ್‌ಗಳ್‌ಲಿ ಇಬ್ಬೊರು ಲಿಂಗಮ್ಮಾಜಿ, ನಾಗಮ್ಮಾಜಿ, ಸಹಗಮನ ಮಾಡ್ದೊ. ಸಹಗಮನನ ಕಣ್ಣಾರೆ ಕಂಡ ಯಾತ್ರಿಕ ಪೆಟ್ರೋಡೆ ಎಲ್ಲ ಸತಿಗ ಆಗ್ತಿದ್ದ ಹೆಂಗ್‌ಸ್‌ಗ ಸ್ವಂತ ಇಚ್ಚೆಂದ ಆಚರಿಸ್ತ ಇದ್ದದರ, ಅವರ ದೈರ್‌ಯ ಸ್ತೈರ್‌ಯಗಳ್‌ನ ಮೆಚ್ಚಿ ಸಹಗಮನ ನಡೆತ್ತಿದ್ದ ರೀತಿನ ವಿವರ್‌ಸಿಟು. ವಿಜಯನಗರಲಿ ಇದ್ದಂಗೆ ವೇಶ್ಯೆಗ ರಾಜಾಸ್ತಾನಗಳ್‌ಲಿ ಇರುತ್ತಿದ್ದೊ. ವೈಬವಂದ ಸುರು ಆಗ್ತಿದ್ದ ರಾಜರ ಒಡ್ಡೋಲಗಗ ಸಂಗೀತ, ನೃತ್ಯಗಳ್ಗೆ ಪ್ರೋತ್ಸಾಹ ಸಿಕ್ಕಿಕೆ ಅವಕಾಸ ಮಾಡಿಕೊಟ್ಟಿತ್ತ್. ಹಬ್ಬ ಹರಿದಿನಗಳ್‌ಲಿ ಅರಮನೆ, ದೇವಾಲಯಗಳ್‌ಲಿ

ವಿಶೇಸ ಆದ ಉತ್ಸವಗ, ನೃತ್ಯ ಮೇಳ ಸಂಗೀತ ಕುಸ್ತಿ ಇಂತದ್ ನಡೆತ್ತಿದ್ದೊ. ನಾಟ್ಯಶಾಲೆಗ ಇದ್ದದ್ದಕ್ಕೂ ಆದಾರಗ ಇದ್ದೊ. ವೆಂಕಟಪ್ಪನಾಯಕ ನಾಟ್ಯಶಾಲೆ ಒಂದರ ಕಟ್ಟಿಸಿತ್ತ್. ನಾಯಕರ್‌ಗ ಸಾಹಿತ್ಯರಚನೆಗೆ ಹೆಚ್ಚಿನ ಪ್ರೋತ್ಸಾಹ ನೀಡಿದ್ದೊ. ಸುಮಾರ್ ಶಾಸ್ತ್ರ ಗ್ರಂತಗ, ಕಾವ್ಯಗ ಇವರ ಆಸ್ತಾನದ ವಿದ್ವಾಂಸರ್‌ಂದ ರಚನೆ ಆದವು. ವೆಂಕಟಪ್ಪನಾಯಕನ ಆಸ್ತಾನಲಿ ತಿರುಮಲಬಟ್ಟ, ರಂಗನಾತ ದೀಕ್ಷಿತ, ಅಶ್ವಪಂಡಿತ, ಬಟ್ಟೋಜಿ ದೀಕ್ಷಿತ ಇಂತೆಲ್ಲ ಪಂಡಿತರಿದ್ದೊ. ಅವು ಶಿವಗೀತ, ಶಿವಾಷ್ಟಪದಿ, ತಂತ್ರಸಾರಬಾಸ್ಯ, ಮಾನಪ್ರಿಯ, ತತ್ವಕೌಸ್ತುಬ ಇಂತೆಲ್ಲ ಶಾಸ್ತ್ರ ಗ್ರಂತಗಳ ಬರ್‌ದಿದ್ದೊ ಸ್ವತಃ ನಾಯಕರೇ ಸಾಹಿತ್ಯರಚನೆ ಮಾಡಿದ್ದೊ. ಬಸವಪ್ಪನಾಯಕ ಶಿವತತ್ವರತ್ನಾಕರಂತೇಳುವ ವಿಶ್ವಕೋಶಸದೃಶ ಉದ್ದ ಗ್ರಂತನ ಬರ್‌ದುಟು ಇದರ್‌ಲಿ ತನ್ನ ವಂಸದ ಚರಿತ್ರೆನೂ ಸೇರ್‌ಸಿಟು. ಸುಬಾಷಿತ ಸುರದ್ರುಮ ಸನಾ ಇವಂದ ರಚನೆ ಆದದ್ದ್. ಸೋಮಶೇಕರ ನಾಯಕನ ಮಂತ್ರಿ ನಿರ್‌ವಾಣಯ್ಯ ಶಿವಪೂಜಾವಿದಾನ, ಇಮ್ಮಡಿ ಬಸವಪ್ಪನಾಯಕನ ಮಂತ್ರಿ ಷಡಕ್ಷರಿ ವೀರಶೈವದರ್ಮ ಶಿರೋಮಣಿನ, ಮರಿತೋಂಟದಾರ್‌ಯನೆಂಬ ಕವಿ ವೀರಶೈವಾನಂದ ಚಂದ್ರಿಕೆನ ಸನಾ ಬರ್‌ದೊಳೊ. (ಎಂ. ಎಚ್.)

**ರಾಮೇಶ್ವರ ದೇಸ್ತಾನ :** ಕೆಳದಿ ಅರಸರ ಆಳಿಕೆಗೆ ಸಮ್ಮಂದ್‌ಸಿದ ಶಿವತತ್ವರತ್ನಾಕರ, ಕೆಳದಿನೃಪವಿಜಯ ಇಂತ ಸ್ತಳೀಯ ಕೃತಿಗಳ್‌ಲಿ ಕೂಡ ಪಯೆಸ್, ಡೆ ಲ ವೆಲ್ಲೆ ಮುಂತಾದ ವಿದೇಶೀಯರ ಬರಹಂಗಳ್‌ಲಿನು ಸುಮಾರ್ ಸಮಕಾಲೀನ ಕೋಟೆಕೊತ್ತಲಗಳ, ಸುಂದರ ನಗರಗಳ ವೈಬವಯುತ ಅರಮನೆ ಮತ್ತೆ ದೇವಾಲಯಗಳ ವರ್‌ಣನೆಗ ಸಿಕ್ಕಿವೆ. ಈ ವಾಸ್ತು ಕೃತಿಗಳಲ್ಲಿ ಸುಮಾರ್ ಇಂದ್‌ಗು ಒಳ್ಕಂಡ್ ಬಂದುಟು.

ಸಮಕಾಲೀನ ವಾಸ್ತುಗಳ ಪೈಕಿ ಶಿವಮೊಗ್ಗ ಜಿಲ್ಲೆಲಿರ್‌ವ (ಬಿದನೂರು) ಕೋಟೆ ಇದ್ದದರ್‌ಲ್ಲಿ ಒಳ್ಳ ಸ್ತಿತಿಲಿ ಒಳ್ಕಂಡುಟು. ಕೆಳದಿ ಅರಸರ್ ತಮ್ಮ ರಾಜಧಾನಿನ 1738ರ ಹೊತ್ತುಗೆ ಅಲ್ಲಿಗೆ ಬದಲ್ಸಿರು ಈಗ ಅಲ್ಲಿರ್‌ವ ಬಹುತೇಕ ಕಟ್ಟಣಗಳ ಶಿವಪ್ಪನಾಯಕನ ಕಾಲಲಿ ಕಟ್ಟಿರೊಕುತ ಗ್ರೇಸಕ್. ಕೆಳದಿ ರಾಜವಂಶದ ಪತನದ (1773), ಹೈದರ್ ಅಲಿ ಮತ್ತೆ ಟಿಪ್ಪುಸುಲ್ತಾನರ ಕಾಲಲಿನೂ ಈ ಕೋಟೆ ಲಾಯ್ಕನ ಸ್ತಿತಿಲಿ ಇದ್ದ್, ಕಾಲಹೋದಾಂಗೆ ಹಾಳಾಕೆ ಸುರಾತ್. ಕೋಟೆ ಇಡಿ ಕಲ್ಲ್‌ನ ಕಟ್ಟಣ; ವಿನ್ಯಾಸಲಿ ಮಾಯ್ನಕಾಯಿನ ಹಾಂಗೆ ಸುತ್ತ ಕಂಳ್ಗಂದ ಸುತ್ತುವರ್‌ದುಟು. ಅದೇ ಜಿಲ್ಲೆನ ಚೆನ್ನಗಿರಿಲಿ ಎರಡ್ ಸುತ್ತುನ ಕೋಟೆ ಉಟ್ಟು. ಅದ್ ರಾಣಿ ಚೆನ್ನಮ್ಮಾಜಿ ಕಟ್ಟಿಸಿದ್‌ಂತೇಳ್ದು ಗೊತ್ತಾದೆ. ಹಂಗೆನೇ ಕವಲೆದುರ್‌ಗ, ಹೊನ್ನಾವರ, ಕುಮಟ, ಬಾರಂಗಿ ಕಡೆಗಳ್‌ಲಿ ಆ ಕಾಲದ ಕೋಟೆಗಳ ಅವಶೇಸಗ ಕಂಡ್‌ಬಂದವೆ. ಇಕ್ಕೇರಿನ ಅಗೋರೇಶ್ವರ ದೇಸ್ತಾನದ, ಪ್ರವೇಶದ್ವಾರದ ಹೊರಗೆನ ನೋಟ. ಲೌಕಿಕ ವಾಸ್ತುಕೃತಿಗಳಿಗೆ ಸಮ್ಮಂದ್‌ಸಿದಂಗೆ ನಗರದ ಒಳಕೋಟೆನ ಒಳಬಾಗಲಿದ್ದ ಶಿವಪ್ಪನಾಯಕನ ಕಾಲದ ಅರಮನೆನ ಕೆಲವ್ ಕಂಬಗ ಮತ್ತೆ ಅಡಿಪಾಯಗ ಮಾತ್ರನೇ ಒಳ್ದುಟು. ಅವುಗಳ್‌ಲಿ ದರ್‌ಬಾರು, ಹಜಾರ, ಒಳಕೋಣೆ ಇಂತವು ಇದ್ದ ಜಾಗೆಗಳ ಮಾತ್ರ ಗುರ್‌ತ್ ಹಿಡಿಯಕ್. ಇಕ್ಕೇರಿ ಮತ್ತೆ ಕೆಳದಿನ ಅರಮನೆಗಳ್‌ಲಿ ಏನೂ ಒಳ್ದಿಲ್ಲೆಂತನೇ ಹೇಳಕ್. ಈ ಕೋಟೆಗಳ ರಚನೆಲಿ ಭಾರತೀಯ – ಇಸ್ಲಾಮೀ ಸಂಪ್ರದಾಯದ ಚಾಯೆನೇ ಹೆಚ್ಚಾಗಿ ಕಂಡ್ ಬಂದದೆ. ಅಲ್ಲದೆ 17 ಮತ್ತೆ 18ನೆಯ ಶತಮಾನಗಳ್‌ಲಿ ದಕ್ಷಿಣ ಭಾರತದ ಐರೋಪ್ಯ ವಾಸ್ತುಶಿಲ್ಪಿಗಳ ಕೈವಾಡ, ಅಲ್ಲಿನ ಸಂಪ್ರದಾಯದ ಪ್ರಬಾವ ಕೆಳದಿ ಕಟ್ಟಡಗಳ ಮೇಲೆ ಇರ್‌ವ ಸೂಚನೆಗ ಉಟ್ಟು. ಇವ್ಗಗಳ ವ್ಯವಸ್ತಿತ ಅದ್ಯಯನ ಇನ್ನೂ ನಡೆದಲ್ಲೆ.

ಈ ಕಾಲದ ವೈಬವನ ತೋರ್‌ಸುವ ಸುಮಾರ್ ಕೆರೆಗ ಇನ್ನೂ ಒಳ್ಳ ಸ್ತಿತಿಲಿ ಒಳ್ದುಟು. ಇದರ್‌ಲಿ ನಗರದ (ನೋಡಿ) ದೇವಗಂಗೆ ಒಂದ್ ವಿಚಿತ್ರ ರೀತಿನ ಕೃತಿ. ಇಲ್ಲಿ 285' ಉದ್ದ 98' ಅಗಲದ ಪ್ರಾಂಗಣದ ನಡುಲಿ ಸುಮಾರ್ ಕೆರೆಗಳ ಕಟ್ಸ್‌ಸಿ ಆವುಟು. ಕೆರೆಗಳ ಅಡಿವಿನ್ಯಾಸ ಪದ್ಮ, ನಕ್ಷತ್ರ ಹಿಂಗೆ ಬೇರೆ ಬೇರೆ ಆಕಾರಗಳ್‌ಲಿ ಉಟ್ಟು. ಇವೆಲ್ಲಕ್ಕೂ ಕಾಡ್ ನಡುಂದ ಹರಿವ ಸಣ್ಣ ಚೋಡಿನ ತಿರ್‌ಗಿಸಿ ನೀರ್ ಬುಡ್ತಿದ್ದೊ. ಈ ಕೆರೆಗಳ ಅಂತಃಪುರದವರ ಜಲಕ್ರೀಡೆಗಾಗಿ ಕಟ್ಟಲಾಗಿತ್ತ್ ತೇಳ್ವಂತದ್ದ್ ಪ್ರತೀತಿ. ಚಂಪಕಾ ಸರಸ್ಸು ತೇಳಿ ಕರಿವ ಇನ್ನೊಂದ್ ಲಾಯ್ಕನ ಕೆರೆ ಶಿವಮೊಗ್ಗ ಜಿಲ್ಲೆನ ಆನಂದಾಪುರಲಿ ಉಟ್ಟು.

ಕೆಳದಿ ಅರಸರ ಆಳ್ವಿಕೆನ ಕಾಲಲಿ, ಅವು ಆಳ್ತಿದ್ದ ಮಲೆನಾಡ್‌ನ ಬಾಗಗಳ್‌ಲಿ ಒಂದ್ ವಿಸೇಸ ನಮೂನೆನ ದೇವಾಲಯ ರಚನಾಶೈಲಿ ಬೆಳ್ದು ಬಂದುಟು. ಇದೇ ಕಾಲಲಿ ದಕ್ಷಿಣ ಭಾರತದ ಬೇರೆ ಕಡೆಲಿ ಪ್ರಚಲಿತ ಆಗಿದ್ದ ವಿಜಯನಗರ ತರದ ದ್ರಾವಿಡ ವಾಸ್ತುಶೈಲಿನ ಮತ್ತೆ ಹಿಂದೆ ಇದೇ ಮಲೆನಾಡ್ ಪ್ರದೇಸಲಿ ವಿಸೇಸಾಗಿ ಮೆರ್‌ದ ಹೊಯ್ಸಳ ವಾಸ್ತುಶೈಲಿನ ಮಿಸ್ರಣ ಇಲ್ಲಿ ಕಂಡ್‌ಬಂದದೆ. ಈ ಸಂಕರ ಶೈಲಿನ ಇಕ್ಕೇರಿ ಶೈಲಿ ಅಲ್ಲರೆ ಮಲೆನಾಡು ಶೈಲಿಂತೇಳಿ ಕರಿವ ಪರಿಪಾಟ ಉಟ್ಟು. ಇಕ್ಕೇರಿಲಿರ್‌ವ ಸು. 1520 ಲಿ ಕಟ್ಟಿಯಾದ ಅಗೋರೇಶ್ವರ ದೇವಾಲಯ ಈ ಶೈಲಿಗೆ ಒಳ್ಳ ಉದಾಹರಣೆ (ನೋಡಿ : ಇಕ್ಕೇರಿ). ಜಗಲಿನ ಮೇಲೆ ಬುಡ್ಸಿದ ಈ ದೇವಾಲಯದ ಅಡಿಪಾಯ ಸುಮಾರ್ ಚತುರಕಾರಲುಟ್ಟು. ಆದರೆ ಪರಿಗದ ಓಟನ ಅಲ್ಲಲ್ಲಿ ಹಿಂದೆಗೆ ಮುಂದೆಗೆ ಜಗ್ಗಿರ್‌ದರ್‌ಂದ ಕೊಡಿಗ ಹಲ್ಲ್ ನ ಸಾಲ್‌ನಾಂಗೆ ಕಂಡ್ ಬಂದದೆ. ಈ ಅಂಶಗ ಹೊಯ್ಸಳ ಶೈಲಿನ ಅನುಕರಣೆ. ಗುಡಿಲಿ ಗರ್‌ಬಗೃಹ, ತೆರ್‌ದ ಸುಕನಾಸಿ ಮತ್ತೆ ಮುಂದೆ ಮಂಟಪ ಉಟ್ಟು. ಗರ್‌ಬಗೃಹದ ಹೊರಬಿತ್ತಿನ ಮೇಲೆ ದೇವಕೋಷವಿಗ, ಸಿಂಹಪಟ್ಟಿಕೆ ಮತ್ತೆ ಗೋಪುರಗಳ ಅಲಂಕರಣವುಟ್ಟು. ಸೂರುನ ಬಾಗಲಿ 'ಖ' ಆಕಾರದ ಕಪೋತ ಉಟ್ಟು. ಮೇಲೆನ ಗೋಪುರ ಎರ್‌ಡ್ ತಲಗಳ್‌ಲಿ ಉಟ್ಟು. ಸಣ್ಣ ಗೋಪುರಗಳ ಮತ್ತೆ ನಿಂತ ಸಿಮ್ಮಗಳ ಶಿಲ್ಪಗಳ್‌ಂದ ಇದ್




ಅಲಂಕೃತ ಆಗುಟು. ಮಂಟಪದ ಹೊರಗೋಡೆನ ಮೇಲೆಸ ಚೂರ್ ಉಬ್ಬಿದ ಶಿಲ್ಪಗ, ಜಾಲಂದ್ರಗ ಮತ್ತೆ ಕಮಾನಿನಾಕೃತಿನ ಕೋಷವಿಗ ಒಳೊ. ಗರ್‌ಬಗೃಹಲಿ ಪ್ರದಕ್ಷಿಣಾಪತವುಟ್ಟು. ಈ ದೇವಾಲಯಲಿ ಒಳಗೆಂದ ಕೆತ್ತಿದ ದಂಡ್‌ಗಳ ಮಾಲೆ ಇರ್‌ವ ಜಗತಿ, ಸುಕನಾಸಿಯ ಮೇಲೆ ಚಾಚಣಿಕೆಯಿರ್‌ವ ಕಲ್ಲ್‌ನ ಶಿಕರ, ಗುಂಡಾದ ಮತ್ತೆ ಷೋಡಶ ಮುಕದ ಕಂಬಗ, ದ್ವಾರ ಮತ್ತೆ ಹೊರಗೋಡೆನ ಅಲಂಕರಣ ವಿನ್ಯಾಸಗ ಹೊಯ್ಸಳಶೈಲಿನ ಅಂಶಗಳ ತಲಗಳ ಮತ್ತೆ ದ್ವಾರ ಇರ್‌ವ ಗೋಪುರ, ಚತುರ ಆಕಾರದ ಮಂಟಪ, ಸಿಂಹಬೋದಿಗೆ ಇರುವ ಸುಮಾರ್ ಕಂಬಗ ಮತ್ತೆ ಅರೆಕಂಬಗ ಮತ್ತೆ ಸುಕನಾಸಿಂದ ಸುರು ಆವ ಪ್ರದಕ್ಷಿಣಾ ಪತ ಇದ್ ದ್ರಾವಿಡ ಶೈಲಿನ ಅಂಶಗಳ ತೋರ್‌ಸಿದೆ.

ಮೇಲೆನ ಹಾಂಗೆ ಇರ್‌ವ ಪಾರ್‌ವತಿ ಗುಡಿನ ನವರಂಗದ ಬಾಗಿಲುವಾಡ ಮತ್ತೆ ಕಿಟ್ಕೆಗಳ್‌ಲಿ ಚೂಪುತಲೆನ ಕಮಾನುಗಳ ಉಪಯೋಗಿಸಿರ್‌ದು ವಿಸೇಸ. ಈ ಅಂಸ ಭಾರತೀಯ ಮುಸ್ಲಿಮ್ ವಾಸ್ತುಶೈಲಿಂದ ಬಂದದ್ದ್.

ಸುಮಾರ್ 1512ರ್‌ಲಿ ಕಟ್ಟಿದ್ದಾಗಿರ್‌ವ ಕೆಳದಿನ ರಾಮೇಶ್ವರ ದೇವಾಲಯ ಇದೇ ಮಿಸ್ರ ಸೈಲಿಲಿರ್‌ವ ಸಣ್ಣ ಕಟ್ಟಣ. ಈ ಗುಡಿನ ಜಗಲಿನ ಹೊರಮೈ ಒಂದ್ ದಿಂಡ್‌ನ ಮೇಲೆ ವಾದ್ಯಗಾರರ ಮತ್ತೆ ನರ್‌ತಕರ ಶಿಲ್ಪಗ ಉಟ್ಟು. ಮೇಲೆನ ಗೋಪುರ ಚತುರಾಕಾರಲಿ ಉಟ್ಟು. ವಿನ್ಯಾಸಲಿ ಗರ್‌ಬಗೃಹ, ಪ್ರದಕ್ಷಿಣ ಪತಕ್ಕೆಡೆಯಿರುವ ಸುಕನಾಸಿ, ಸಣ್ಣ ನವರಂಗ ಮತ್ತೆ ಮುಕಮಂಟಪ ಇರುವ ಈ ಗುಡಿನ ಮುಂದೆನ ಮಂಟಪಲಿ ಸುತ್ತನು ಒರಗು ಬೆಂಚುಗಳಿರ್‌ದು ವಿಸೇಸ. ಕೆಳದಿನ ವೀರಬದ್ರ ದೇವಾಲಯ ರಚನೆ (ಸು. 1530–40), ನಗರದ ನೀಲಕಂಟೇಶ್ವರ ಮತ್ತೆ ಆಂಜೆನೇಯ ದೇವಾಲಯಗ ಹಂಪನೂರ ರಂಗನಾತಸ್ವಾಮಿ ದೇಸ್ತಾನ, ಮೆಳಿಗೆಯ ಜೈನಬಸದಿನಂತ ಇದೇ ಕಾಲದ ಬೇರೆ ಕಟ್ಟಣಗಳ್‌ಲಿ ಕೂಡ ಕೆಳದಿ ವಾಸ್ತುಸಂಪ್ರದಾಯದ ಅಚ್ಚ್‌ನ ಕಾಣಕ್.

ಕೆಳದಿಶೈಲಿನ ಶಿಲ್ಪಗ ಸಮಕಾಲೀನ ವಿಜಯನಗರ ಮತ್ತೆ ಬಂದ ಶಿಲ್ಪಸಂಪ್ರದಾಯಲೇ ಉಟ್ಟು. ವಾಸ್ತುರಚನೆಲಿ ಚೂರು ಹೊಯ್ಸಳ ಅಂಶಗ ಈ ಕಾಲದ ಕಟ್ಟಡಗಳ್‌ಲಿ ಕಂಡ್ ಬಂದರೂ ಅವುಗಳ ರಚನೆಗೆ ಒರಟುಕಲ್ಲ್‌ಗಳ್‌ನ ಉಪಯೋಗಿಸಿದರ್‌ಂದ, ಹೊಯ್ಸಳ ಕಾಲದ ಶಿಲ್ಪಗಳ ನಯನಾಜೂಕು, ಸೂಕ್ಷ್ಮ ಅಲಂಕರಣಗ ಇವುಗಳ್‌ಲಿ ಮೂಡಿಬಾಲ್ಲೆ. ದೇವಾಲಯಗಳ ಹೊರಗೋಡೆಗಳ ಶಿಲ್ಪಗಳ ವಾಸ್ತುವಿನ್ಯಾಸಲಿ ಹೊಯ್ಸಳ ಶೈಲಿನ ರೀತಿನೇ ಅನುಸರ್‌ಸಿರು ಒಂದೊಂದೇ ಶಿಲ್ಪಗಳ ಪ್ರತ್ಯೇಕಾಗಿ ನೋಡಿರೆ ಇದ್ ಹೊಯ್ಸಳ ಶಿಲ್ಪಗಳ ಅತಿ ಅಸಮರ್‌ಪಕ ಅನುಕರಣೆಗಳಂಗೆ ಕಂಡ್ ಬಂದವೆ. ಶಿಲ್ಪಗಳ್‌ಲಿ ಒಂಚೂರು ಒರಟುತನ ಎದ್ದ್ ಕಾಂಬ ಅಂಶ. ಹೆಚ್ಚಿನವೆಲ್ಲ ಶಾಸ್ತ್ರ ಮತ್ತೆ ಸಂಪ್ರದಾಯದ ಹಿಡ್ತಲಿ ಸಿಕ್ಕಿಹಾಕಂಡ್ ಶಿಲ್ಪಿನ ಸ್ವಪ್ರತಿಬೆನ ಸುಲಬ ಪ್ರಕಟನೆ ಸಾದ್ಯ ಆಲ್ಲೆ. ಆದರೆ ಇಕ್ಕೇರಿ ದೇವಾಲಯದ ನಂದಿ, ಕೆಳದಿನ ವೀರಬದ್ರ ದೇವಾಲಯದ ಬುವನೇಶ್ವರಿಗ ಈ ಕಾಲದ ಉತ್ತಮ ಮಟ್ಟದ ಶಿಲ್ಪಗಂತೇಳಕ್. ವೀರಬದ್ರ ದೇವಾಲಯದ ಗಂಡಬೇರುಂಡ ಇರುವ ಬುವನೇಶ್ವರಿ ಒಂದ್ ಅಸದೃಶ ಕಲಾಕೃತಿ. ಈ ಕಾಲದ ದೇವಾಲಯಗಳ ಮೇಲೆ ಇರ್‌ವ ನರ್‌ತಕರ್, ವಾದ್ಯಗಾರರ್ ಇಂತೆಲ್ಲ ಶಿಲ್ಪಗ ಕೂಡ ಅನೇಕ ವೀರಗಲ್ಲು ಮತ್ತೆ ಮಾಸ್ತಿ ಕಲ್ಲ್‌ಗ ಸಮಕಾಲೀನ ಸಾಮಾಜಿಕ ಸ್ತಿತಿನ ಮೇಲೆ ಬೆಳ್ಕ್ ಚೆಲ್ಲಿವೆ.

ಈ ವಂಸದ ಅರಸರ ಚಿನ್ನದ ನಾಣ್ಯಗ ಇಕ್ಕೇರಿ ವರಹಗಂತೇಳಿ ಪ್ರಸಿದ್ದ ಆಗುಟು. ಇದರ್‌ಲಿ ಸದಾಶಿವನಾಯಕನ ಕಾಲದವು ಮಾತ್ರ ಸಿಕ್ಕಿಟು. ಇತರ ಅರಸರ ಆಳಿಕೆಲೂ ಇಂತದೆ ನಾಣ್ಯಗಳನೆ ಮತ್ತೆ ಮತ್ತೆ ಅಚ್ಚು ಹಾಕುತ್ತಿದ್ದಿರೋಕು. ಪ್ರಾಯಶಃ ಈ ಕಾರಣಂದಲೇ ಆ ಅರಸುಮನೆತನದ ಬೇರೆ ರಾಜರ ನಾಣ್ಯಗ ಯಾದೂ ಸಿಕ್ಕಿತ್ಲೆಂತೇಳುದ್ ಕೆಲವ್ ವಿದ್ವಾಂಸರ ಅಬಿಪ್ರಾಯ.

ಸದಾಶಿನವಾಯಕನ ನಾಣ್ಯಗ ವಿಜಯನಗರದ ಹರಿಹರ, ದೇವರಾಯ, ಸದಾಶಿವರಾಯ ಇವರ ನಾಣ್ಯಗಳ ಮಾದರಿಲೇ ಉಟ್ಟು. ವೃತ್ತಾಕಾರದ ಈ ನಾಣ್ಯಗಳ ಮುಮ್ಮುಕಲಿ ಬಲಗೈಲಿ ತ್ರಿಶೂಲನ, ಎಡಗೈಲಿ ಮೃಗನ ಹಿಡ್ದ್ ಎಡ್ದತೊಡೆನ ಮೇಲೆ ಪಾರ್‌ವತಿನ ಕುದ್ದುರ್‌ಸಿಕಂಡಿರ್‌ವ ಉಮಾಮಹೇಶ್ವರನ ಚಿತ್ರ, ಹಿಮ್ಮುಕಲಿ ಎರ್‌ಡ್ ಇಲ್ಲರೆ ಮೂರು ಅಡ್ಡ ಗೆರೆಗಳ ನೊಡುಲಿ 'ಶ್ರೀಸದಾಶಿವ' ತ ನಾಗರಾಕ್ಷರದ ಬರೆವಣಿಗೆ ಕಂಡ್‌ಬಂದದೆ. (ಎಸ್. ಎನ್.)

**ಕೇದಗಡಿ ಗುಡ್ಡಪ್ಪ ಗೌಡ :** ಇವು ಕಾಸರ್‌ಗೋಡ್ ತಾಲೂಕ್‌ನ ಕೆದಗಡಿ ಕುತ್ತಿಮುಂಡ ಮನೆತನದ ಸುಬ್ರಾಯ ಗೌಡ ಮತೆ ಗೌರಮ್ಮ ದಂಪತಿಗಳ ಮಂಜನಾಗಿ 13–11–1928ರ್‌ಲಿ ಹುಟ್ಟಿದೊ.

ಮನೆಕಡೆ ಆರ್ಥಿಕ ಸಮಸ್ಯೆಂದಾಗಿ ಪ್ರಾಥಮಿಕ ಶಿಕ್ಷಣನ ಅರ್ಧಲೇ ನಿಲ್ಸಿ, ಮುಂದೆ ಯಕ್ಷಗಾನಲಿ ಹೆಸ್‌ರ್ ಮಾಡ್ದಾ ಕಿರಿಕ್ಕಾಡ್ ಮಾಸ್ತರ್ ವಿಷ್ಣು ಭಟ್ರಾ ಪರ್ಚಯ ಆಗಿ ಅವರೊಟ್ಟಿಗೆ ಅರ್ಥಗಾರಕೆನ ಜ್ಞಾನನ ಪಡ್ಕಂಡೊ, ಹಾಂಗೆ ಬನಾರಿ ಶ್ರೀ ಗೋಪಾಲ ಕೃಷ್ಣ ಯಕ್ಷಗಾನ ಕಲಾ ಮಂದಿರಲಿ ನಾರಾಯಣ ಭಟ್ರೊಟ್ಟಿಗೆ ನಾಟ್ಯನ

ಕಲ್ತ್‌ಕಂಡೊ. ಸುರುಲಿ ಅಭಿಮನ್ಯು ವೇಷಲಿ ಶ್ರೀ ಕೆದಗಡಿ ಗುಡ್ಡಪ್ಪ ಗೌಡ್ರು ಯಕ್ಷ ಲೋಕಕೆ ಕಾಲಿಸಿದೊ, ಮುಂದೆ ಕದ್ರಿಮೇಳ,ಮೂಲ್ಕಿ,ಕೂಡ್ಲು, ಮೂಚ್ಚೂರು ಶ್ರೀ ದುರ್ಗಾಪರಮೇಶ್ವರಿ ಮೇಳಲಿ ವೇಷನ ಹಾಕಿದ್ ಕಟೀಲು ಮೇಳನ ಸೇರಿಕಂಡಡೊ. ಐದ್ ದಸಕಕ್ಕೆನೂ ಹೆಚ್ಚಿನ ಸಮಯ ಯಕ್ಷಗಾನ ರಂಗಸ್ಥಳಲಿ ಕೊಣ್‌ದು ಅಬಿನಯಮಾಡ್ದೊವು. ಇವರ ಯೌವ್ವನಲಿ ಅಭಿಮನ್ಯು, ಬಬ್ರುವಾಹನ, ಶ್ರೀದೇವಿ, ಕಯಾದು ಪಾರ್ಟ್‌ಗಳ ಮಾಡಿದ್ ಜನಕೆ ಇಷ್ಟ ಆದವ್ ಮುಂದೆ ಇವು ಕರ್ಣ ,ಕಂಸ, ತಾಮ್ರದ್ವಜ, ಸುಧನ್ವೆ, ದೂರ್ವಾಸ, ರಕ್ತಬೀಜ, ಅತಿಕಾಯ, ಹಿರಣ್ಯಕಶಿಪು, ಅರುಣಾಸುರ, ತಾಮ್ರದ್ವಜ, ವೀರಮಣಿ ಮುಂತಾದ ಪಾತ್ರಗಳಿಗೆ ಜೀವ ತುಂಬಿ ಯಕ್ಷ ಪ್ರೇಮಿಗ ಸೇರ್ದಂಗೆ ಇಡೀ ನಾಡು ಅವರ ಗುರ್ತುಸುವಂಗೆ ಮಾಡ್‌ತು. ಇವುಕೆ ಕರ್ನಾಟಕ ಜಾನಪದ ಮತೆ ಯಕ್ಷಗಾನ ಅಕಾಡೆಮಿ ,ದಕ್ಷಿಣ ಕನ್ನಡ ಜಿಲ್ಲೆನ ಯಕ್ಷಗಾನೋತ್ಸವ 2004ರ ಇನಾಮುಗ ಸೇರ್‌ದಂಗೆ 60ರ್‌ಂದ ಹೆಚ್ಚಿನ ಇನಾಮುಗಳ ಇವು ಪಡ್‌ಕಂಡೊಳ, ಇವು 6–1–2008ರ್‌ಲಿ ತೀರಿ ಹೋದ. ಕೆದಗಡಿ ಗುಡ್ಡಪ್ಪ ಗೌಡ್‌ರ ಹೆಣ್ಣುನ ಹೆಸ್‌ರ್ ಚೆನ್ನಮ್ಮ, ಗುಡ್ಡಪ್ಪ ಮತ್ತೆ ಚೆನ್ನಮ್ಮ ದಂಪತಿಗಳಿಗೆ ಮೂರ್ ಜೆನ ಗಂಡ್ ಮತೆ ಒಂದು ಹೆಣ್ಣು ಮಕ್ಕ ಹಾಂಗೆ ಮೊಮ್ಮಕಳೂ ಒಳೊ. (ಕೆ.ಜಿ.ಕೆ.)

**ಕೊಡಗ್ :** ಕೊಡಗ್ ಜಿಲ್ಲೆ ಮಡಿಕೇರಿಂದ ಪ್ರಕಟ ಆಗ್ತಾ ಇರ್‌ವ ವಾರಪತ್ರಿಕೆ. 1921 ಜೂನ್ 1ರ್‌ಲಿ ಸುರು ಆತ್ ರಾಷ್ಟ್ರ ಹೋರಾಟಲಿ ಬ್ರಿಟಿಷ್ ಸರ್‌ಕಾರದ ದಬ್ಬಾಳಿಕೆಗೆ ಒಳಗಾಗಿ ಬದ್ರತಾ ಇಡುಗಂಟ್ ನ ಎಲ್ಲಾ ಸರ್‌ತಿ ಕಳ್ಕಂಡ್, 1942ರ್‌ಲಿ ಸುಮಾರ್ 6 ತಿಂಗಳ ವರೆಗೆ ಮುಟ್ಟುಗೋಲು ಹಾಕಿ ಬೇರೆ ಬೇರೆ ಕಸ್ಟಗಳ ಎದ್‌ರ್‌ಸೊಕಾಗಿ ಬಂದರ್‌ನು ಪತ್ರಿಕೆ ಅದರ ರಾಷ್ಟ್ರ ದ್ಯೇಯಂದ ಬದಲಾಗದೆ ನಡ್ದ್ ಬಂದುಟು. ಇದರ್‌ಲಿ ರಾಜಕೀಯ, ಆರ್ತಿಕ, ಸಾಮಾಜಿಕ ವಿಸಯಗ, ದರ್ಮ, ಕ್ರಿಸಿ, ಆರೋಗ್ಯ ಇತ್ಯಾದಿಗಳಿಗೆ ಸಮ್ಮಂದ ಪಟ್ಟ ಲೇಕನಗ, ಕತೆ, ಕವನ, ಜಿಲ್ಲಾ ಹಂಗೆನೆ ಒಳ್ಳೆ ವರ್ತಮಾನಗ, ಓದುಗರ ಓಲೆಗ ಪ್ರಕಟ ಆದೆ. ಸುರುಂದ 1964ರ ವರೆಗೆ ಪಂದ್ಯಂಡ ಬೆಳ್ಯಪ್ಪ ಸಂಪಾದಕರಾಗಿದ್ದೊ. ಮತ್ತೆ ಬಿ. ಡಿ. ಗಣಪತಿಯವು ಸಂಪಾದಕರಾದೊ. ಪತ್ರಿಕೆನ ಸುವರ್ಣ ಮಹೋತ್ಸವನ 1972ರ್‌ಲಿ ಆಚರಿಸಿದೊ. (ಬಿ.ಡಿ.ಜಿ.)

ಕರ್ನಾಟಕದ ನೈಋತ್ಯ ಬಾಗಲಿರುವ ಒಂದ್ ಜಿಲ್ಲೆ. ಉತ್ತರ ಅಕ್ಷಾಂಶ 110 56' – 120 50' ಮತ್ತೆ ಮೂಡ ರೇಕಾಂಶ 750 22' – 760 12' ನೊಡುಲಿ ಹಬ್ಬಿದೆ. ಈ ಜಿಲ್ಲೆ ಮೂಡಲಿ ಮೈಸೂರು, ಬಡ್ಗಲಿ ಹಾಸನ ಮತ್ತೆ ದಕ್ಷಿಣಕನ್ನಡ ಜಿಲ್ಲೆಂದಲೂ ಪಡುವ ಮತ್ತೆ ತೆಂಕಲಿ ಕೇರಳ ರಾಜ್ಯಂದಲೂ ಸುತ್ತುವದು9ಟು. ಕೊಡಗ್ ನ ಗರಿಷ್ಠ ಉದ್ದ ತೆಂಕಬಡ್ಗಕೆ 96ಕಿಮೀ; ಗರಿಷ್ಠ ಅಗಲ ಮೂಡಪಡ್ವಕೆ 64ಕಿಮೀ ಮಡಿಕೇರಿ, ವಿರಾಜಪೇಟೆ ಮತ್ತೆ ಸೋಮವಾರಪೇಟೆ ತಾಲೂಕುಗ ಹನ್ನೊಂದು ಹೋಬಳಿಗ 304 ಗ್ರಾಮಗ ಇರುವ ಕೊಡಗ್ ಜಿಲ್ಲೆನ ಒಟ್ಟು ವಿಸ್ತೀರ್ಣ 4, 104ಚ. ಕಿಮೀ. ಜೆನಸಂಕ್ಯೆ 5, 45, 322. ಇದರ ಆಡಳಿತ ಕೇಂದ್ರ ಒಳದ್ ಮಡಿಕೇರಿಲಿ.

ಇಲ್ಲಿರ್‌ವ ಪೊಡ್‌ವಣ ಗಟ್ಟಂಗಳ ಮುಕ್ಯ ಶ್ರೇಣಿ ಕೊಡಗ್‌ನ ಬೆನ್ನೆಲು ಆಗಿ ಉಟ್ಟು. ಇದ್ ವಾಯುವ್ಯಂದ ತೆಂಕಕೆ, ಸುಬ್ರಹ್ಮಣ್ಯಂದ ಬ್ರಹ್ಮಗಿರಿನ ಪೊಡ್‌ವಮಾರ್‌ಗದವರೆಗೆ ಹಬ್ಬಿಟು. ಇದರ ಉದ್ದ 96ಕಿಮೀ ಇದರ್‌ಂದಳೂ ಹೆಚ್ಚಿಗೆ ಉಟ್ಟು. ಇದಂರ್‌ದ ಮೂಡದ ಕಡೆ ಕೈಬೆರ್ಳ್ ನಾಂಗೆ ಕುತ್ತಾನು ಕುತ್ತ ಮಲೆಗ ಒಳೊ. ನೆಲೆಯ ಸೇವಾ ಸುಬ್ರಹ್ಮಣ್ಯ ಇಲ್ಲರೆ ಪುಷ್ಪಗಿರಿಲಿ ಪರ್‌ವತಂಗಳ ಎತ್ತರ ಸಮುದ್ರ ಮಟ್ಟಂದ 1908ಮೀ. ಈ ಎಡೆಂದ ಕವಲೊಡೆವ ಸುಮಾರ್ ಶ್ರೇಣಿಗಳ ಪೈಕಿಲಿ ತುಂಬಾ ಮುಕ್ಯದ್ ಕೋಟೆಬೆಟ್ಟ; ಮಡಿಕೇರಿಂದ 14ಕಿಮೀ ಉತ್ತರಲಿರುವ ಇದರ ಎತ್ತರ 1792ಮೀ. ಮಡಿಕೇರಿನ ಹಕ್ಕಲೆ ಸುರಾಗಿ ಪಡ್ವಕೆ ಹೋದು ಬೇಂಗುನಾಡು ಶ್ರೇಣಿ. ಇದ್ಲೂ ಗಟ್ಟಗಳ ಮುಕ್ಯ ಮಲೆಗಳ ನೊಡುಲಿ ತುಂಬಾ ಸಣ್ಣ ಸಣ್ಣ ಕಣಿವೆಗ ಒಳೊ. ಇವ್ ಕೂಡುವ ಎಡೆಲಿ ಒಳದೇ ಬ್ರಹ್ಮಗಿರಿ. ಕಾವೇರಿ ಹಳ್ಳ ಇಲ್ಲೇ ಹುಟ್ಟುದು. ಇದ್ಕೆ ಬಡಗಕೆ ಇರ್‌ದು ಸಂಪಾಜೆ ಕಣಿವೆ. ಮಂಗ್ಳೂರು ಮಾರ್‌ಗ ಇಲ್ಲಿಂದಾಗಿದೆ ಸಾಗಿದೆ. ಬ್ರಹ್ಮಗಿರಿನ ಎಡೆಂದ ಮುಂದೆ ಪೊಡ್‌ವ ಗಟ್ಟಗಳ ಮುಕ್ಯಶ್ರೇಣಿ ಹೋದು ಆಗ್ನೇಯಾಬಿಮುಕವಾಗಿ. ತುಂಬೆಮಲೆ, ಇಗ್ಗುತಪ್ಪ ದೇವ್ರ ಶಿಕರ, ತಡಿಯಂಡಮೋಳು ಮತ್ತೆ ಸೋಮಮಲೆ ಮುಕ್ಯ ಶಿಕರಗ. ಈ ಶ್ರೇಣಿಗೆ ತೆಂಕಲಿ ಇರ್‌ವ ಪೆರಿಯಂಬಾಡಿ ಗಾಟಿಂದಾಗಿ ಕಣ್ಣೂರುಗೆ ಮಾರ್‌ಗ ಉಟ್ಟು. ಕೊಡಗ್ ನ ಆಗ್ನೇಯ ಕೊಡಿಲಿರುವ ಶ್ರೇಣಿ ಮಲೆನಾಡ್. ಇದೂ ಬ್ರಹ್ಮಗಿರಿನ ಹೊರೆಗೆ, ಕೊಡಗ್‌ನ ತೆಂಕದ ಮೂಲೆಗ. ವೈನಾಡ್‌ಂದ ಕೊಡಗ್‌ನ ಬೇರೆ ಮಾಡ್ವ ಶ್ರೇಣಿಗ ಇದ್. ಇಲ್ಲಿರ್‌ವ ದೊಡ್ಡ ಶಿಕರನೆ ದವಸಿಬೆಟ್ಟ, ಇದರ ಸುತ್ತ ಪ್ರದೇಶ ಬಾರೀ ಲಾಯಿಕುಟ್ಟು. ಅದರ ಹೆಸ್ರ್ ಹುಯಲೆ ಮಲೆ. ಕೊಡಗ್‌ನ ಪಡ್ವದ ಕರೆಗೆ ಹಕ್ಕಲೆ ಇರ್‌ವ ಮಲೆಗಳ್‌ಲಿ ಮುಕ್ಯ ಆದ್ದ್ ಹನುಮನಬೆಟ್ಟ ಮತೆ ಪೆರೆಮಾಲೆ ಮಲೆ. ಬ್ರಹ್ಮಗಿರಿಂದ ಕಿಗ್ಗಟ್ಟ್‌ನಾಡ್‌ನ ಕಡೆಗೆ ತುಂಬಾ ಕವಲ್ ಹಬ್ಬಿಟು. ಈ ಮಲೆಗ ಕುತ್ತ ಇರುವಂತವು. ವಿರಾಜಪೇಟೆನ ಹಕ್ಕಲೆನ ಅಂಬಟೆ ಬೆಟ್ಟ, ಬೆಟ್ಟಂಗಾಲ, ಕುಂಡದಬೆಟ್ಟ, ಸಿದ್ದೇಶ್ವರ ಬೆಟ್ಟ ಇವು ಮುಕ್ಯ. ಇನ್ನ್ ಕೆಲವ್ ಕವಲುಗ ಮೂಡದ ಕಡೆಗೆ ಜಾರಿ, ಏರಿಳ್ದ್ ಸಾಗಿ, ದೊಡ್ಡ ಬತ್ತದ ಬೊಯ್ಲ್‌ಗ ತಬ್ಬಿಕೊಂಡೊಳ. ಬೇಂಗುನಾಡು ಶ್ರೇಣಿ ಮಡಿಕೇರಿನ ದಕ್ಷಿಣಲಿ ಎರ್‌ಡ್ ಕವಲಾಗಿ ಮುಂದೆ ನಡ್ದದೆ. ಒಂದ್ ಕವಲ್ ನೂರೊಕ್ಕಲು ಗುಡ್ಡೆಲಿ ಮುಗ್ದರೆ ಇನ್ನೊಂದ್ ಕವಲು ಡೊಂಕುಡೊಂಕಾಗಿ ಕುಸಾಲನಗರದ ಕಡೆಗೆ ಸಾಗಿದೆ. ಇದರ ಕೊಡೀನ ಗುಡ್ಡೆ ಕಲ್ಲೂರುಬೆಟ್ಟ. ಇಲ್ಲಿ ತೇಗದ ಕಾಡ್ ವಿಸೇಸ. ಕೋಟೆಬೆಟ್ಟದ ಉತ್ತರಕೆ ಇರ್‌ದು ಸಂತೆಹಳ್ಳಿ ಗುಡ್ಡೆಗ. ಮುರ್‌ಕಿಬೆಟ್ಟನೇ ಇದರ ಕೊಡಿ. ಕೊಡಗ್‌ನ ಉತ್ತರದ ಗಡಿಂದ ಕಾವೇರಿ ಕಡೆಗೆ ಒಂದ್ ಶ್ರೇಣಿ ಹಬ್ಬಿಟು. ಮಾಲಂಬಿ ಮತ್ತೆ ಕನಗಲುಬೆಟ್ಟ ಇದರ ಮುಕ್ಯಶಿಕರಂಗ.




ದಕ್ಷಿಣದ ಕಾಶ್ಮೀರತ ಕರೆವ ಇಡೀ ಕೊಡಗ್ ಪ್ರದೇಶ ಪರ್‌ವತಮಯ ಆಗಿದ್ದರ್‌ನು ಒಂದರ್‌ಂದ ಒಂದರ ಲಕ್ಷಣಲಿ ವೆತ್ಯಾಸ ಉಟ್ಟು. ಇದ್ ಪಡ್ವಂದ ಮೂಡಕೆ ಇಳ್ವಾರ್ ಉಟ್ಟು. ಮಡಿಕೇರಿ ಪ್ರಸ್ತಬೂಮಿನ ಎತ್ತರ ಕೋಟೆನ ಹಕ್ಕಲೆಲಿ ಸಮುದ್ರಮಟ್ಟಂದ 1270ಮೀ. ಮೂಡದ ಕುಸಾಲನಗರದ ಹಕ್ಕಲೆ 907ಮೀ. ಸರಾಸರಿ 1170ಮೀ. ಎತ್ತರ ಇರ್‌ವ ಈ ಪ್ರಸ್ತಬೂಮಿ ಮಡಿಕೇರಿನ ಉತ್ತರಕೆ 42ಕಿಮೀ ದೂರಲಿರ್‌ವ ಸೋಮವಾರಪೇಟೆನ ವರೆಗೂ ಹಬ್ಬಿಟು. ಸೋಮವಾರಪೇಟೆನ ಹಕ್ಕಲೆ ಪರ್‌ವತಂಗ ಅಷ್ಟು ಎತ್ತರನು ಅಗಲನು ಮಂದ ಇಲ್ಲೆ. ಅಲ್ಲಿ ನೊಡುನೊಡುಲಿ ಪಚ್ಚೆ ಇಳಿಜಾರ್‌ಲಿ ಬಾರೀ ಕಾಡುಗಳೂ ಉಟ್ಟು. ಇವು ಯುರೋಪ್‌ನ ಉದ್ಯಾನ ನೆಲದ ದೃಶ್ಯನ ನೆಂಪುಗೆ ತಂದವೆತ ಹೇಳ್ದುಟ್ಟು. ಮಡಿಕೇರಿನ ಹಕ್ಕಲೆನ ಗುಡ್ಡೆಗ ಹಕ್ಕಕ್ಕಲೆ, ಕುತ್ತ, ಒಳ್ಬೆಗಳ ನಡುಲಿ ಗುಂಡಿ ಹೆಚ್ಚೆ ಉಟ್ಟು. ಕಾಡ್ ತುಂಬಾ ಮಂದಲಿ ಉಟ್ಟು. ಕುಸಾಲನಗರದ ಹಕ್ಕಲೆ ಹೋದಾಂಗೆ ಕರ್ನಾಟಕ ಪ್ರಸ್ತಬೂಮಿನ ಅಗಾಲದ ಬೊಯ್ಲ್‌ಗ ಸುರಾದವೆ. ಇಲ್ಲಿ ನೊಡುನೊಡುಲಿ ಒಂಟಿ ಗುಡ್ಡೆಗೊಳೊ. ವಿರಾಜಪೇಟೆನ ಕಡೆಲಿ ಬೆರ್ಪುನಾಡ್ ಮತ್ತೆ ಕಡ್ಯೆಟ್ ಕಡೆಲಿ ಕಾಡ್ ಅಷ್ಟೇನಿಲ್ಲೆ. ವಿಶಾಲ ಗದ್ದೆ ಬೊಯ್ಲ್‌ಗಳ ಹೆಗ್ಲ್ ಮೇಲೆ ಲಾಯಿಕ್‌ನ ಹುಲ್ಲುನ ಅಡ್ಡಂಗಳ ಕಾಣಕ್. ಕೊಡಗ್‌ನ ಮೂಡ ಎಲ್ಲೆ ಹಕ್ಕಲೆ ಕಾವೇರಿ ಮತ್ತೆ ಲಕ್ಷ್ಮಣತೀರ್‌ತಗಳ ನೊಡುಲಿ– ಪರ್ಣಪಾತೀ ಮರಗಳ ದೊಡ್ಡಾ ಕಾಡುಟ್ಟು. ಇದ್ಕೆ ಪಡ್ವಲಿ ಪಚ್ಚೆನ ಕಾಡ್ ಹಬ್ಬಿಟು. ಬೆದ್ರ್ ಹಿಂಡ್ಲ್ ಇಲ್ಲಿನ ವಿಸೇಸ. ಒಟ್ಟಾಗಿ ಹೇಳ್ದಾದರೆ ಪರ್‌ವತಶಿಕರಂಗ ಹುಲ್ಲುಂದಲೂ ಕಣಿವೆಗ ಮತೆ ಪರ್‌ವತಸಾನುಪ್ರದೇಸಗ ಇಲ್ಲದ ಜಾಗೆಗ ಪಚ್ಚೆ ಕಾಡುಗಳ್‌ಂದ ಕೂಡಿಟು. ಇಡೀ ಕೊಡಗೇ ಪಚ್ಚೆ. ಇಲ್ಲಿ ಕಾಡ್ ದೈಮರಗಳೆ ಹೆಚ್ಚ್. ಅಲ್ಲಲ್ಲಿ ಕಾಪಿ ಮತ್ತೆ ಒಳ್ಳ ಬೆಳೆಗಳಿಗೆ ಇದರ ಕಡ್ದ್ ತೆಗ್ದೊಳೊ.


ಹೊನ್ನಮ್ಮನ ಕೆರೆ

ಧಾರವಾಡ ಶಿಲಾರಚನೆಗೆ ಸೇರ್‌ದ ಗಾರ್‌ನಿಟಿಪೆರಸ್ ಬಯೋಟೈಟ್, ಸಿಲ್ಲಿಮನೈಟ್ ಮತ್ತೆ ಗಾರ್‌ನಿಟಿಪೆರಸ್ ನೈಸ್‌ಗ ಪದರಶಿಲೆಗ ಜಿಲ್ಲೆಲಿ ವಿಸೇಸ ಆಗಿ ಹಬ್ಬಿಟು. ನಡುನಡುಲಿ ಡಾಲೆರೈಟ್, ಬೆಣಚು, ಗ್ರಾನೈಟ್ ಮತ್ತೆ ಚಾರ್‌ನೈಟ್ ಶಿಲೆಗನು ಉಟ್ಟು. ಎತ್ತರದ ಜಾಗೆಲಿ ಜಂಬಿಟ್ಟಿಗೆನ ಮೊಣ್ಣು, ಹಳ್ಳದ ಕರೆಲಿ ಮತೆ ಕಣಿವೆಲಿ ಮೆಕ್ಕಲು ಮೊಣ್ಣ್ ನ ಹರಹು ಉಟ್ಟು. ತುಂಬಾ ಕೆಳದರ್ಜೆನ ಕಾಗೆಬಂಗಾರದ ನಿಕ್ಷೇಪಂಗ ಕುಶಾಲನಗರ, ಮಡಿಕೇರಿ ಹಕ್ಕಲೆನು ಮತೆ ಶ್ರೀಮಂಗಲನಾಡ್‌ನ ಕೆಲ ಪ್ರದೇಸಲಿ ಉಟ್ಟು. ಮಡಿಕೇರಿ ಮತೆ ಸಿದ್ದಾಪುರದ ಹಕ್ಕಲೆ ಕ್ಯಾನೈಟ್ ಸಿಕ್ಕಿದೆ. ಜಿಲ್ಲೆಲಿ ಕನಿಜಸಂಪತ್ತ್ ಹಜ್ಜನೆ ಒಳದ್.

ಕೊಡಗ್‌ನ ಮುಕ್ಯ ನದಿ ಕಾವೇರಿ (ನೋಡಿ). ಬ್ರಹ್ಮಗಿರಿಲಿ ಇದ್ ಹುಟ್ಟಿದೆ. ಇದ್ ಸಿದ್ದಾಪುರದವರೆಗೂ ಆಗ್ನೇಯಾಬಿಮುಕ ಆಗಿ ಹರ್‌ದ್, ಅಲ್ಲಿಂದ ಈಶಾನ್ಯಕ್ಕೆ ದಿಕ್ಕ್ ಬದಲ್ಸಿ, ಚೂರ್ ದೂರ ಜಿಲ್ಲೆನ ಮೂಡ ಗಡಿಲಾಗಿ ದಾಟಿ, ಶಿರಂಗಾಲದ ಹಕ್ಕಲೆ ಜಿಲ್ಲೆನ ಬುಟ್ಟದೆ. ಇದರ ಎರಡ್ ಮುಕ್ಯ ಸಣ್ಣ ಹಳ್ಳಂಗ ಆದ ಹೇಮಾವತಿ ಮತೆ ಲಕ್ಷ್ಮಣತೀರ್‌ತಗ ಕ್ರಮಲಿ ಬಡ್ಗ ಮತ್ತೆ ತೆಂಕದ ಕೊಡಗ್‌ಗಳ್‌ಲಿ ಹರ್‌ದದೆ. ಹೇಮಾವತಿನೆ ಕೊಡಗ್‌ನ ಉತ್ತರ ಗಡಿರೇಕೆ. ಕೊಡಗ್‌ಲಿ ಕಾವೇರಿನ ಸೇರ್‌ವ ಉಪನದಿಗ, ಕನ್ನಿಕೆ, ಕಕ್ಕಬೆ, ಕಾಡನೂರು ಹಳ್ಳ, ಮುತ್ತಾರುಮುಡಿ, ಚಿಕ್ಕಹೊಳೆ ಮತೆ ಹಾರಂಗಿ. ಕಕ್ಕೆಹೊಳೆ, ಚೇರನಹೊಳೆ, ಮಾದಪುರ ಮತ್ತೆ ಹಟ್ಟಿಹೊಳೆ –ಇದ್ ಹಾರಂಗಿನ ಸಣ್ಣ ಹಳ್ಳಂಗ. ಪಡ್‌ವಕೆ ಹರೆವ ಒಂದ್ ದೊಡ್ಡ ಹಳ್ಳಂತ ಹೇಳಿರೆ ಬರಪೊಳೆ. ಇದ್ ನೈಋತ್ಯಲಿ ಮಲಬಾರ್‌ನ ಕಡೆಗೆ ಸಾಗಿದೆ. ಸಾರತ್, ಕುಮಾರದಾರಾ ಮತ್ತೆ ಪಯಸ್ವಿನಿ ಬೇರೆ ಹಳ್ಳಂಗ. ಸಾರತ್ 434' ಎತ್ತರಂದ ಬಿದ್ದದೆ. ಕೊಡಗ್ ನ ಹಳ್ಳಂಗ ಮಳ್ಗಾಲಲಿ ತುಂಬಿ ಹರ್‌ದವೆ. ಬೇಸಿಗೆಲಿ ಈ ಹಳ್ಳಂಗಳ ಸುಲಾಬಲಿ ದಾಟಿಕಾದೆ

ಕೊಡಗ್ ಜಿಲ್ಲೆನ ವಾಯುಗುಣ ಸಾಮಾನ್ಯ ಆಗಿ ತಂಪಿದ್ದದೆ. ಮೂಡಂದಲೂ ಪಡುವದ ಊರುಗ ಹೆಚ್ಚ್ ತಂಪಿದ್ದದೆ. ಏಪ್ರಿಲ್–ಮೇ ಗಳಲ್ಲಿ ಗರಿಷ್ಟ ಉಷ್ಣತೆ. ಜೆನವರಿಲಿ ಕನಿಷ್ಟ. ಮಳೆ ಮೂಡಂದ ಪಡ್ವಲಿ ಹೆಚ್ಚ್. ಬಾಗಮಂಡ್ಲಲಿ ವಾರ್ಷಿಕ ಮಳೆ 6030ಮಿಮೀ. ಜಿಲ್ಲೆನ ಮೂಡಕೆ ಇರ್‌ವ ಕುಸಾಲನಗರಲಿ 1120ಮಿಮೀ. ಜಿಲ್ಲೆನ ಸರಾಸರಿ ಮಳೆ 2725ಮಿಮೀ. ಸರಾಸರಿ ವರ್ಷಲಿ 118 ಮಳೆದಿನಗ.

ಕೊಡಗ್ ನ ಪ್ರಾಣಿಗ ಬೇರೆ ಪ್ರದೇಸಗಳ್‌ಲಿ ಇರ್‌ವ ಪ್ರಾಣಿಗಳ್‌ಂದ ವೆತ್ಯಾಸ ಏನಿಲ್ಲೆ. ಕೊಡಗ್ ಲಿ ಅವ್ಕೆ ಕಾಡ್ ಗಳ ರಕ್ಷಣೆ, ಬೇಕಾದಷ್ಟ್ ಕುಡೆವ ನೀರು ಇರ್‌ದರ್‌ಂದ ಅವು ಇಲ್ಲಿ ಹೆಚ್ಚಾಗಿ ಒಳೊ. ಇಲ್ಲಿನ ಮಾಸ ತಿಂಬ ಪ್ರಾಣಿಗ ಮಳ್ಗಾಲಲಿ ಹಕ್ಕಲೆನ ಜಿಲ್ಲೆಗಳಿಗೆ ಹೋದವೆ. ಹಳ್ಳಗ ಇರ್‌ವಲ್ಲಿ ತುಂಬಾ ಕುತ್ತದ ಗುಡ್ಡೆಗ ಇಲ್ಲದಿರ್‌ವಲ್ಲಿ ದೊಡ್ಡ ದೊಡ್ಡ ಮೃಗಂಗ ಒಳೊ. ಉತ್ತರ ಮೂಡ ದಕ್ಷಿಣ ಪ್ರದೇಸಗಳ್ಲ ಬೇರೆಬೇರೆ ಬಗೆನ ಮೃಗಂಗ ಒಳೊ. ಕಪ್ಪು ಬೂದಿ ಮತ್ತೆ ಕಂದು ಬಣ್ಣಗಳ ಮಂಗಗ ಹೆಚ್ಚ್. ನಾಯಿ ಜಾತಿನ ಪ್ರಾಣಿಗಳ್‌ಲಿ ಕೆನ್ನಾಯಿ ಮುಕ್ಯವಾದ್ದ್. ಈ ಪ್ರಾಣಿ ತೋಳನಾಂಗೆ ಇದ್ದದೆ, ತುಂಬಾ

ಬಯಂಕರ. ಹುಲಿ, ಕಿರುಬ, ಹುಲಿಬೆಕ್ಕು, ಕಾಡ್ ಹಂದಿ, ಕರಡಿ, ಕತ್ತೆ ಕಿರುಬ, ಮುಳ್ಳ್ ಹಂದಿ, ಪುನುಗು ಬೆಕ್ಕುಗ, ಮುಂಗುಸಿ, ಆಮೆ, ಕಡವೆ, ಕೆಂಪ, ಜಿಂಕೆ, ಆನೆ, ಕಾಡೆಮ್ಮೆಗಳೂ ಒಳೊ. ನಾಗರಹಾವು, ಹೆಬ್ಬಾವುಗ, ಅಪರೂಪಕೆ ಹಳ್ಳಂಗಳ್ಲಿ ಮೊಸಳೆ ಇರ್‌ದುಟ್ಟು. ಗಿಡ್‌ಜ್ಜ, ಹದ್ದು, ಮೀನ್ಕುಳ್ಳ (ಮಿಂಚುಳ್ಳಿ), ಮರಕೊಟ್ಕೋಗಿಲೆ, ಕುರ್ಣಿ(ಮೈನ) ಸುಮಾರ್ ಹಕ್ಕಿಗೊಳೊ.

ಕೊಡಗು ಜಿಲ್ಲೆನ ಮೂರನೆ ಒಂದ್ ಬಾಗ ಕಾಡ್‌ಂದ ಕೂಡಿಟು. ರಕ್ಷಿತ ಅರಣ್ಯ ಪ್ರದೇಶಗ ಸೇರಿ 1, 25, 952ಹೆ. ಕಾಡ್ ಉಟ್ಟು. ತೇಗ, ಬೀಟೆ, ಹೊನ್ನೆ, ಶ್ರೀಗಂದ ಇವು ಮುಕ್ಯವಾದ ಮರಗ. ಮಾಗ್ವಾನಿ ಮರಗಳ ಕಾಡ್‌ಗಳ ಸರ್‌ಕಾರದ ಅರಣ್ಯ ಇಲಾಕೆ ಅಬಿವೃದ್ದಿ ಮಾಡ್ತಾ ಉಟ್ಟು. ಬೆಂಕಿಕಡ್ಡಿ ಕೈಗಾರಿಕೆಗೆ ಬೇಕಾದ ಮೆದುಮರಗಳ ನೆಟ್ಟು ಬೆಳ್ಸುವೆ. ಕೊಡಗ್ ನ ಜೆನರ ಮುಕ್ಯ ಕಸುಬು ಕ್ರಿಸಿ. ಬತ್ತ, ರಾಗಿ ಮುಕ್ಯ ಬೆಳೆಗ. ಕಾಪಿ, ಕೊಡಗ್ ನ ಮತ್ತೊಂದು ಮುಕ್ಯ ಕ್ರಿಸಿ ಉತ್ಪನ್ನ (ಸು. 83, 150ಹೆ). ಕಿತ್ತಳೆ ಬೆಳೆನೂ ವಿಸೇಸ. ಏಲಕ್ಕಿ, ಮೆಣ್ಸ್ ಬೆಳ್ದವೆ. ಅಡಿಕೆ ಇನ್ನೊಂದು ಪಸಲ್. ಮಡಿಕೇರಿ ಹಕ್ಕಲೆ ಚಹ ತೋಟನು ಉಟ್ಟು. ಮಾವುಕೂಟ, ಜೋಡುಪಾಲ, ಸಂಪಾಜೆ ಮತ್ತೆ ಕಡಮಕಲ್ಲ್‌ಗಳ್‌ಲಿ ರಬ್ಬರ್ ತೋಟಗೊಳ. ಬೆಟ್ಟದ ಕೆಳಗೆ ಸಂಪಾಜೆ, ಪೆರ್ಜ(ಪೆರಾಜೆ) ಮತ್ತೆ ಚೆಂಬುಗಳಲ್ಲಿ ಅಡ್ಕೆ, ಕಾಯಿ ಮತ್ತೆ ಬೀಜ ಬೆಳ್ದವೆ.

ಜೇನುಸಾಕಣೆ ಕೊಡಗ್‌ನ ಒಂದ್ ಮುಕ್ಯ ಉದ್ಯಮ. ಭಾಗಮಂಡಲಿ ಮದುವನತ ಜೇನುಸಾಕಣೆ ಕೇಂದ್ರ ಉಟ್ಟು. ಕೊಡಗ್ ಜೇನು ಉತ್ಪಾದಕರ ಸಂಗ ಈ ಉದ್ಯಮದ ಬೆಳೆವಣಿಗೆಗೆ ಕೆಲ್ಸ ಮಾಡ್ತಾ ಉಟ್ಟು. ಭಾಗಮಂಡಲದ ಕೇಂದ್ರಲಿ ಜೇನುಸಾಂಕೊವ ತರಬೇತಿ ಕೊಟ್ಟವೆ. ಶನಿವಾರಸಂತೆ ಮತ್ತೆ ಶಿರಂಗಾಲಲಿ ಕೈಮಗ್ಗದ ಬಟ್ಟೆ ತಯಾರಾದೆ. ಶನಿವಾರಸಂತೆಲಿ ನೇಯ್ಗೆನ ಸಾಲೆ ಉಟ್ಟು. ಶಿರಂಗಾಲಲಿ ಕೈಮಗ್ಗ ನೇಕಾರರ ಸಹಕಾರ ಸಂಗ ಸುರುವಾವ್ಟು. ವಿರಾಜಪೇಟೆ ತಾಲೂಕ್ ನ ಮಲೆನಾಡ್ ಲಿ ಬೆತ್ತದ ಸಾಮಾನು ಮಾಡ್ವವರ ಒಂದ್ ಸಹಕಾರ ಸಂಗ ಉಟ್ಟು. ಪೊನ್ನಂಪೇಟೆನ ಹಕ್ಕಲೆನ ಮಡಕೆಬೀಡು ಕುಂಬ ಕೈಗಾರಿಕೆನ ಕೇಂದ್ರ. ಇಲ್ಲಿ ಇದರ ಒಂದ್ ಶಾಲೆ ಉಟ್ಟು ಮಡಿಕೇರಿಲಿ ಪ್ಲಾಸ್ಟಿಕ್ ಚೀಲ ತಯಾರ್‌ಸುವ ಕಾರ್‌ಕಾನೆನೂ ತುಕ್ಕುಹಿಡೆದ ಉಕ್ಕುನ ಪಾತ್ರ ತಯಾರ್‌ಸುವ ಕಾರ್‌ಕಾನೆನೂ ಉಟ್ಟು. ಕೂಡಿಗೆಲಿ ಕಾಪಿ ಪರಿಷ್ಕರಣ ಕಾರ್‌ಕಾನೆ ಉಟ್ಟು. ಮಡಿಕೇರಿಲಿ ಒಂದ್ ಸರ್‌ಕಾರಿ ಮುದ್ರಣಾಲಯನೂ ಗಾಡಿಗಳ ರಿಪೇರಿ ಕಾರ್ಯಾಗಾರನೂ ಉಟ್ಟು.

1954ರ್‌ಲಿ ಸರ್‌ಕಾರ ಮೂರ್‌ಕಲ್‌ಲಿ ಒಂದ್ ಮರ ಕೊಯ್ಯ್‌ವ ಕಾರ್‌ಕಾನೆ ಸುರುಮಾಡ್ತ್. ಕೊಡಗ್ ನ ಮುಕ್ಯಬೆಳೆ ಬತ್ತ ಆದ್ದರ್‌ಂದ ಇಲ್ಲಿ ತುಂಬಾ ಅಕ್ಕಿ ಗಿರಣಿಗೊಳೊ. ಮಡಿಕೇರಿಲಿ ನಾಲ್ಕ್ ಸಣ್ಣ ಎಂಜಿನಿಯರಿಂಗ್ ಕಾರ್ಯಾಗಾರಗಳೂ, ಸೋಮವಾರಪೇಟೆ ಮತ್ತೆ ಕೂಡಿಗೆಲಿ ಒಂದೊಂದ್ ವ್ಯವಸಾಯೋಪಕರಣ ಕಾರ್‌ಕಾನೆನೂ ಉಟ್ಟು. ಕಾಪಿ ತೋಟಗಳಿಗೆ ಬೇಕಾದ ಉಪಕರಣಗ ಇಲ್ಲಿ ತಯಾರಾದವೆ. ರಾಜ್ಯದ ಒಳ್ದ ಜಿಲ್ಲೆಗಳಲ್ಲಿರುವಾಂಗೆ ಕೊಡಗ್‌ಲಿ ಸುಮಾರ್ ಜಾತಿ ಮತಗಳ ಜೆನಗ ಒಳೊ. ಎರವರು, ಕುಡಿಯರು, ಬೆಟ್ಟ ಕುರುಬರು, ಜೇನು ಕುರುಬರು, ಕೊರಗರು, ಪಣಿಯರು –ಇವು ಗಿರಿಜೆನ್ರ್; ಹರಿಜೆನರ್ ಹೆಚ್ಚಿನ ಸಂಕ್ಯೆಲಿ ಒಳೊ. ಇಲ್ಲಿನ ಕೊಡವರ್ ವಿಶಿಷ್ಟ ಜೆನಗ. ಕದಂಬ ವಂಶದ ಚಂದ್ರವರ್ಮ ಇವರ ಮೂಲಪುರುಷ ತ ಹೇಳ್ವೆ. ಶತ್ರುಗಳ ಆಕ್ರಮಣಂದಾಗಿ ಸ್ವಂತ ರಾಜ್ಯ ಬುಟ್ಟು ಬಂದ್ ಕೊಡಗ್


ಓಂಕಾರೇಶ್ವರ ದೇಸ್ತಾನ

ಲಿ ನೆಲ್ಸಿದ ಕದಂಬ ಸೈನಿಕರ್ ಇವರ ಮೂಲಪುರುಷರ್ ಆಗಿರುವತ ಹೇಳ್ವೆ. ಕೊಡಗ್ ನ ಜೆನರ ಸಂಸ್ಕೃತಿವಿಶಿಷ್ಟವಾದ್. ಕತ್ತಿ ಬೆಡಿ ಇವ್ಕೆ ಪ್ರೀತಿ. ಹುತ್ತೆರಿ ಕೊಣ್‌ತ, ಬೊಳಕಾಟ, ಕೋಲಾಟ ಇವು ಕೊಡಗ್ ನ ಜೆನಪದ ಕೊಣ್‌ತಗ. ಇವು ವೀರರಸ ಪ್ರದಾನ. ಹುತ್ತೆರಿ ಹಬ್ಬಲಿ ಕೋಲಾಟ ಮುಕ್ಯವಾದ್. ಪರಿಯಕುಳಿ ಹೇಳ್ವಂತದ್ ಯುದ್ದ ನೃತ್ಯ. ಬೊಳುಕಾಟ ಅಕಿಲ ಭಾರತ ಪ್ರಸಿದ್ದಿ ಪಡ್ದುಟು. ಕೈಲ್‌ಪೊಳದ್, ಕಾವೇರಿ ಸಂಕ್ರಮಣ, ಹುತ್ತೆರಿ, ಶಿವರಾತ್ರಿ, ಉಗಾದಿ, ಷಷ್ಠಿ, ವಿಷ್ಣು ಸಂಕ್ರಮಣ –ಇವು ಕೊಡವರ ಮುಕ್ಯ ಹಬ್ಬಗ. ಕೊಡಗರ ಬಟ್ಟೆ ಗ ವೈಶಿಷ್ಟಪೂರ್ಣ. ಗಂಡ್ ಸರ್ ಹಬ್ಬಹರಿದಿನ, ಮೊದ್ವೆಲಿ ಜರಿಪೇಟ, ಕರಿಯ ಮೇಲಂಗಿ, ಜರಿ ಇರ್‌ವ ನಡುದಟ್ಟಿ ತೊಟ್ಟು ಬಲಕೆ ಬೆಳ್ಳಿನ ಒರೆಲಿ ಕತ್ತಿ ದರ್‌ಸುವೆ. ಸೆರ್‌ಂಗ್ ನ ಹಿಂದಕ್ಕೆ ಬುಟ್ಟು ವಿಶಿಷ್ಟ ರೀತಿಲಿ ಸೀರೆ ಉಡ್ದು ತುಂಬಕೈನ ರವ್ಕೆ ತೊಟ್ಟ್ ಹೆಂಗ್ ಸರ ಕ್ರಮ. ವಿಸೇಸ ದಿನಗಳ್‌ಲಿ ಇವು ತಲೆಗೆ ಜರಿಹೊದಿಕೆನ ಕಟ್ಟುವೆ. ಕೊಡವವ್ಕೆ ಅವರ್‌ದೇ ಆದ ಬಾಸೆ ಉಟ್ಟು. ಅದ್ ಕೊಡವ ನುಡಿ. ಅದ್ಕೆ ಲಿಪಿಯಿಲ್ಲೆ. ಅದ್ ಕನ್ನಡ, ತಮಿಳ್, ಮಲಯಾಳಂ ಶಬ್ದಗಳ್‌ಂದ ಕೂಡಿಟು. ಕನ್ನಡ ಮೂಲ ಶಬ್ದಗಳೇ ಹೆಚ್ಚ್. ಅಪ್ಪನೆರವಂಡ ಅಪ್ಪಚ್ಚಕವಿ, ನಡಿಕೇರಿಯಂಡ ಚಿಣ್ಣಪ್ಪ ಇವು ಕೊಡವ ಬಾಸೆನ ಮುಕ್ಯ ಕೃತಿಕಾರರ್. ಕನ್ನಡ ಕೊಡಗ್‌ನ ವ್ಯವಹಾರ ಬಾಸೆ.




ಕೊಡಗ್‌ನ ಜಿಲ್ಲಾ ಕೇಂದ್ರ ಆದ ಮಡಿಕೇರಿಗೂ ಜಿಲ್ಲೆನ ಮುಕ್ಯ ಜಾಗೆಗಳಿಗೆ ಲಾಯಿಕ್‌ನ ಮಾರ್‌ಗಗೊಳೊ. ಬೆಂಗ್ಳೂರು, ಮೈಸೂರು, ಮಂಗ್ಳೂರು, ಹಾಸನ, ಚಿಕ್ಕಮಗಳೂರು, ಉಡುಪಿ, ತಲಚೇರಿ, ಕಣ್ಣಾನೂರು ಸುಮಾರ್ ಕಡೆಗೆ ಬಸ್ ಮಾರ್‌ಗಗೊಳೊ.

ಜಿಲ್ಲೆನ ಹುಗ್ಗಿ, ಮಡಿಕೇರಿನ ಮಾರ್‌ಗ ಆಗಿ ಸಂಪಾಜೆಗೆ ಹೋಗಿ ಮುಂದುವರೆವ ಮೈಸೂರು – ಮಂಗ್ಳೂರು ಹೆದ್ದಾರಿ, ಮಡಿಕೇರಿಂದ ಸಿದ್ದಾಪುರ ವಿರಾಜಪೇಟೆಗೆ ಆಗಿ ಕಣ್ಣಾನೂರು ಮುಟ್ಟುವ ಮಡಿಕೇರಿ – ತಲಚೇರಿ ಹೆದ್ದಾರಿ, ಮಡಿಕೇರಿಂದ ಮಾದಾಪುರ, ಸೋಮವಾರಪೇಟೆ, ಶನಿವಾರ ಸಂತೆಲಿ ಆಗಿ ಹೋವ ಮಡಿಕೇರಿ – ಕೊಡ್ಲಿಪೇಟೆ ಹೆದ್ದಾರಿ, ಮಡಿಕೇರಿಂದ ಮೂರ್‌ನಾಡು ಆಗಿ ವಿರಾಜಪೇಟೆ ಹೋವ ಮಾರ್‌ಗ, ಮಡಿಕೇರಿ – ಭಾಗಮಂಡಲ ಮಾರ್‌ಗ, ವಿರಾಜಪೇಟೆಂದ ಗೋಣಿಕೊಪ್ಪಲು, ತಿತ್ತಿಮತ್ತಿ ಮತೆ ಆನೇಚೌಕೂರು ಮಾರ್‌ಗ, ವಿರಾಜಪೇಟೆ ಹುಣ್ಸೂರು ಹೆದ್ದಾರಿ, ಗೋಣಿಕೊಪ್ಪಲಿಂದ ಪೊನ್ನಂಪೇಟೆ ಹುದಕೇರಿ ಕುಟ್ಟಲ್ಯಾಗಿ ಹೋವ ಗೋಣಿಕೊಪ್ಪಲು ಮಾನಂದವಾಡಿ ಹೆದ್ದಾರಿ, ನಾಪೊಕ್ಲು ಕಕ್ಕಬೆ ಕಡಂಗ ಕದನೂರು ವಿರಾಜಪೇಟೆ ಹೆದ್ದಾರಿ, ಕುಶಾಲನಗರಂದ ಕೂಡಿಗೆಂದಾಗಿ ಮಡಿಕೇರಿ ಕೊಡ್ಲಿಪೇಟೆ ಹೆದ್ದಾರಿನ ಸೇರ್‌ವ ದಾರಿ, ಕೂಡಿಗೆ–ಶಿರಂಗಾಲ ಮಾರ್‌ಗ – ಇವು ಜಿಲ್ಲೆನ ಮುಕ್ಯ ರಸ್ತೆಗ. ಕೊಡಗ್ ಲಿ ರೈಲ್ ಮಾರ್‌ಗ ಇಲ್ಲೆ.

ಜಿಲ್ಲೆನ ಕೇಂದ್ರ ಮಡಿಕೇರಿ, ಇದ್ ಪ್ರವಾಸಿ ಕೇಂದ್ರ ಕೂಡಾ. ತಲಕಾವೇರಿ, ಭಾಗಮಂಡಲ, ರಾಮಸ್ವಾಮಿ ಕಣಿವೆ, ಕೂಡಿಗೆ, ನಾಲ್ಕುನಾಡು ಅರಮನೆ, ಇಗ್ಗುತಪ್ಪದೇವರ ಶಿಕರ, ಚೆಟ್ಟಳ್ಳಿ ಇದೆಲ್ಲ ಬೇರೆ ಪ್ರೇಕ್ಷಣೀಯ ಜಾಗೆಗ.

ವಿರಾಜಪೇಟೆ, ಪೊನ್ನಂಪೇಟೆ, ಗೋಣಿಕೊಪ್ಪಲು, ಸೋಮವಾರಪೇಟೆ, ಶನಿವಾರಸಂತೆ, ಕೊಡ್ಲಿಪೇಟೆ, ಕುಶಾಲನಗರ, ಶುಂಟಿಕೊಪ್ಪ –ಇವು ಒಳ್ದ ಮುಕ್ಯ ಊರುಗ. ಅಮ್ಮತ್ತಿ, ಸಿದ್ದಾಪುರ, ಪೊಲ್ಲಿಬೆಟ್ಟ, ತಿತ್ತಿಮತ್ತಿ, ಬಾಳೆಲೆ –ಇವು ಕಾಪಿ ವ್ಯವಸಾಯ ಕೇಂದ್ರಗ. ಪೊಲ್ಲಿಬೆಟ್ಟ, ತಿತ್ತಿಮತ್ತಿ, ಬಾಳೆಲೆ –ಇವು ಕಿತ್ತಳೆ ತೋಟಕ್ಕೂ ಹೆಸ್ರಾವ್ದು (ಎಂ.ಆರ್.ಆರ್.)

**ಕೊಡಗ್‌ನ ಕೈಮಾಡ :** ಕೊಡ್‌ಗ್‌ನ ಮನೆತನಗಳ ಮೂಲಪುರ್‌ಸನ ಹೆಸರ್‌ಲಿ ಕಟ್ಟಿದ ಸ್ಮಾರಕ ಕಟ್ಟಾಣಕೆ ಕೈಮಡ ತೇಳ್‌ವೆ. ಈ ಮೂಲ ಪುರ್‌ಸ ಆಯಾಯ ಮನೆತನಗಳಿಗೆ ಗುರುಕಾರೋಣ, ಕುಲದೆವ್ವ, ಆದಿಗುರು, ಸನ್ನಿದಿ ಪುರುಸ ಆಗಿದ್ದವೆ. ಈ ಸ್ಮಾರಕ ನೆಲೆಗ ಮನೆತನದ ಇತಿಯಾಸ ಗುಡಿನೂ ಆಗಿದ್ದದೆ. ಆ ವಂಸದ ಪರಂಪರೆಲಿ ಬಂದ ದಾರ್ಮಿಕ ಸಂಪ್ರದಾಯಗಳ, ಸಾಂಸ್ಕೃತಿಕಆಗು ಹೋಗ್‌ಗಳ, ಜೆನಪದ ಪೊದ್ಯಗಳ, ಆಚರಣೆಗ–ಕಲೆಗಳ ಬೆಳ್ಸುವ ಕೇಂದ್ರದ ಹಾಂಗೆ ತೇಳಿರೆ ಸಾಂಸ್ಕೃತಿಕಸೊಗಸ್, ವಂಸದ ಗೌರವ, ಬಕ್ತಿ ಮೌಲ್ಯ, ಸ್ಮಾರಕ ಆಗಿದ್ದ್ ತಾತ್ಕಾಲಿಕ ಅಗತ್ಯಗ ಈ 'ಕೈಮಾಡ'ಗ ಆಗ್ಯೊಳ.

ಮುಕ್ಯ ಆಗಿದ್ ಅಮ್ಮ ಕೊಡವ–ಕೊಡವ ಜೆನಾಂಗಗಳ್‌ಲಿ 'ಕೈಮಾಡ' ಗಳಿರುವಂಗೆನೇ ಕೋಯವ, ಐರೀರ, ಹೆಗ್ಗಡೆ, ಗೊಲ್ಲ, ಕಾಪಳರ್‌ಲಿ, ದಲಿತ ವರ್‌ಗದ ಕೆಂಬಟ್ಟಿಗಳ್‌ಲಿ, ಗೌಡ ಮತೆ ಜಮ್ಮ ಮಾಪಿಳ್ಳೆ ಮನೆತನಗಳ್‌ಲಿನು ಇಂತದೆ ಹಿರಿಯರ ಸ್ಮಾರಕ ನೆಲೆಗ ಒಳೊ. ಕೊಡ್‌ಗ್‌ನ ಸೋಮವಾರಪೇಟೆ ತಾಲೂಕುನ ಯಡೂರಿನ, ಚೌಡ್ಲು, ಬಾಚಿನಾಡ ಇಂತ ಗೌಡ ಜೆನಾಂಗದ ಮಾಳಗಳ್‌ಲಿ ಕೊಲೆಕಲ್ಲುಗಳ ವೀರ ಹಿರಿಯರ ಸ್ಮರಣಾರ್ತ ಕರಡು ಲಾಳಾಕಾರಲಿ ಜೋಡ್ಸಿ ಇಸಿದ್ ಕಾಂಬಕೆ ಸಿಕ್ಕಿದೆ.

ಕೊಡ್‌ಗ್‌ನ ಮತ್ತೆ ದಕ್ಷಿಣಕನ್ನಡದ ಹೆಚ್ಚಿನ ಗೌಡ ಹಾಂಗೆನೆ ಕೊಡವ ಐನ್‌ಮನೆ/ತರವಾಡು ಮನೆಗಳ್‌ಲಿ 'ಕನ್ನಿ ಕೋಂಬರೆ' ತೇಳುವ ಬಿನ್ನೆ ಮಾಡಿಕಂಬ ಕೋಣೆ, ಕನ್ನಿಕಂಬಗಳ ಅಸ್ತಿತ್ವ ಉಟ್ಟು. ಕನ್ನಿ ತೇಳಿರೆ 'ಕನ್ಯೆ' ತೇಳ್ವ ಅರ್‌ತನು ಉಟ್ಟು. ಒಟ್ಟಿಗೆ 'ಕನ್ನಿ ಕೊಂಬರೆ' ಐನ್‌ಮೆನನ ನೈರುತ್ಯ ದಿಕ್ಕ್‌ಗೆ ಇದ್ದದೆ. ಇದ್ ಗೌಡ ಜೆನಾಂಗದ ಪಂಡ್‌ಕಾಲದ ಆದಿಶಕ್ತಿ ಆರಾದನಾ ಪೊದ್ದತಿ ಆಗುಟು. ಅದರಾಂಗೆ ಕೊಡವರ್ ಮತ್ತೆ ಗೌಡ್ರು ಗುರುಕಾರ್‌ನೂರುಗಳ ಆರಾದಿಸಿಕಂಡ್ ಬಂದ್‌ಕಂಡಿದ್ದ್, ಮಾತಾಪಿತೃರ ಕುರ್‌ತಂಗೆ ಸಂಯುಕ್ತ ಆರಾದನಾ ಪೊದ್ದತಿಗೆ ಅವಕಾಸ ಉಟ್ಟು. ಇದ್ ಮೂಲತಃ ಕೊಡ್‌ಗ್ ಮತ್ತೆ ದಕ್ಷಿಣಕನ್ನಡದ ಮೂಲನಿವಾಸಿ ರೈತಾಪಿ ಜೆನಾಂಗಗಳ ಸಮ್ಮಿಸ್ರ ಸಂಸ್ಕೃತಿನ ಪೊದ್ದತಿ ತೇಳಕ್. (ಎ.ಆರ್.ಜಿ.)

**ಕೊಡಗ್‌ನ ಗೌಡಜೆನ :** ಕೊಡಗ್‌ನ ಸೋಮವಾರ ಪೇಟೆ ಮತೆ ಭಾಗಮಂಡಲದ ಪರಿಸರಲಿ ಗೌಡ್ರ್ ಒಳೊ. ಇದರ್‌ಲಿ ಸೋಮವಾರ ಪೇಟೆ ಪರಿಸರದ ಗೌಡರ್ ಕನ್ನಡ ಮಾತಾಡಿರೆ ಭಾಗಮಂಡಲ ಪರಿಸರದ ಗೌಡ್ರ್ ಅರೆಬಾಸೆನವು. ಅದ್ಯಯಯನ ಪುಸ್ತಕಗಳ್‌ಲಿ ವಿವರ್‌ಸಿದಂಗೆ ಐಗೂರ್ ಪರಿಸರಂದ ಕಾರಣಾಂತರಂದ ವಲ್‌ಸೆ ಹೋದವರ್‌ಲಿ ಸನಿವಾರ ಸಂತೆ ಆಗಿ ಸೋಮವಾರ ಪೇಟೆ ಮುಟ್ಟಿದ ಒಂದ್ ಗುಂಪಾದರೆ, ಬಿಸಿಲೆ ಗಟ್ಟ ಇಳ್‌ದ್ ಸುಳ್ಯಲಿ ಹಬ್ಬಿಕಂಡವು. ಹಾಂಗೆ ತೊಡಿಕಾನ ಆಗಿ ಭಾಗಮಂಡಲ ಪರಿಸರಕೆ ವಲಸೆ ಹೋದವರ್‌ದ್ ಇನ್ನೊಂದದ್ ಗುಂಪು. ಐಗೂರ್ ಸೀಮೆಗೆ ಸೇರ್‌ದ ಕೆಂಚಮ್ಮನ ಹೊಸಕೋಟೆನ ಕೆಂಚಮ್ಮ ದೇವ್ರ್ ಎಲ್ಲ ಕಡೆನೂ ಕಾಂಬಕೆ ಸಿಕ್ಕ್‌ವ ದೆವ್ವ.

ಕೊಡಗ್‌ನ ಗೌಡರ ಬಗ್ಗೆ ಹೀಂಗೊಂದ್ ಮಾತುಟ್ಟು 'ಟಿಪ್ಪುನ ಕಾಲಲಿ ಹೆಚ್ಚಿನ ಪ್ರಮಾಣದ ಜೆನಂಗ ಕೊಡಗ್‌ಂದ ಮೈಸೂರು ಜಿಲ್ಲೆಗೆ ಕಳ್‌ಸಿದರ್‌ಂದ ಕೊಡಗ್‌ಲಿ ಗೌಡ ಜೆನಗ ಕಮ್ಮಿ ಆದೊಂತ. ಹಾಂಗಾಗಿ ಇಲ್ಲಿನ ಬಹುತೇಕ ಕ್ರಿಸಿ ಬೂಮಿಗ ಹಾಳ್ ಬಿದ್ದೊ. ಕ್ರಿ. ಶ. 1792 ರ್‌ಲಿ ಅಮರ ಸುಳ್ಯ ಮಾಗಣೆಗ ಕೊಡಗ್‌ನ ಹಾಲೇರಿ ಅರಸರ್‌ಲಿ ಪ್ರಖ್ಯಾತ ಆದ ದೊಡ್ಡ ವೀರರಾಜೇಂದ್ರಂಗೆ ಸಿಕ್ಕಿತ್. ಇತಿಯಾಸದ ಪ್ರಕಾರ ಗೌಡ ಜೆನಾಂಗದವು ದಕ್ಷಿಣಕನ್ನಡ ಜಿಲ್ಲೆಗೆ ಕೊಡಗ್‌ಗೆ

ಬಂದ್ ನೆಲೆ ನಿಲ್ಲುವಂಗೆ ಮಾಡ್‌ವ ಕಾರ್ಯಲಿ ಇವು ಮುಕ್ಯ ಪಾತ್ರ ವಯಿಸಿಕಂಡೋ. ಇದೇ ಹಾಲೇರಿ ಅರಸ ದೊಡ್ಡ ವೀರರಾಜೇಂದ್ರ ದಕ್ಷಿಣಕನ್ನಡ ಜಿಲ್ಲೆನ ಪ್ರದೇಸಗ ಅವರ ವಸಕ್ಕೆ ಬಂದ ಮೇಲೆ ಅರಸ ದೊಡ್ಡ ವೀರರಾಜೇಂದ್ರ ಅಲ್ಲಿ ಬೊದ್ಕೆಂಡಿದ್ದ ಗೌಡ ಜೆನಾಂಗದವರ, ಜೆನಗ ಕಮ್ಮಿ ಇದ್ದ ಕೊಡಗ್‌ಗೆ ಬಂದ್ ನೆಲೆ ನಿಲ್ಲಿಕೆ ಅನ್‌ಕೂಲ ಮಾಡಿ ಕೊಟ್ಟೊ. ಹಿಂಗೆ 18ನೇ ಶತಮಾನದ ಅಕೇರಿ ಹಾಂಗೆ 19ನೇ ಸತಮಾನದ ಸುರುಲಿ ಗೌಡ ಜೆನಾಂಗದವ್ ಕೊಡಗ್‌ಗೆ ಬಂದ್ ನೆಲ್ಸಿದೊ. ಇವು ದಕ್ಷಿಣಕನ್ನಡ ಜಿಲ್ಲೆಂದ ಬಂದ್ ಭಾಗಮಂಡಲ ಮತ್ತೆ ನಾಪೋಕ್ಲು ನಾಡ್, ಮಡಿಕೇರಿ ಮತ್ತೆ ಗಾಳಿಬೀಡು ನಾಡ್‌ಗಳ್‌ಲಿ ನೆಲೆ ನಿತ್ತೋ. ಸುಮಾರ್ ಕ್ರಿ. ಶ 1799 ರ್‌ಂದ ಕ್ರಿ. ಶ 1808ರ ವರೆಗೆನೂ ಕೊಡಗ್‌ಲಿ ನೆಲೆನಿತ್ತ ಗೌಡ ಜೆನಾಂಗದವ್ಕೆ ರಾಜ ದೊಡ್ಡ ವೀರರಾಜೇಂದ್ರ ಅವು ನೆಲೆನಿತ್ತ ಬೂಮಿನ ಕ್ರಿ. ಶ 1808ರ್‌ಲಿ ಜಮ್ಮಾ ಇಲ್ಲರೆ ಉಂಬಳಿ ಆಗಿದ್ ಕೊಟ್ಟೊ. ಮತ್ತೆನ ಕಾಲಲಿ ಇವು ಕೊಡಗ್‌ನ ಮಡಿಕೇರಿ, ವೀರಾಜಪೇಟೆ ಹಾಂಗೆ ಸೋಮವಾರ ಪೇಟೆಗಳ್‌ಲಿ ನೆಲ್ಸಿ ಕೊಡಗ್‌ನ ಕಾಯಂ ನಿವಾಸಿಗ ಆದೋ.

1830ರ ಹೊತ್ತುಗೆ ನಡ್ದ ಅಮರ ಸುಳ್ಯದ ದಂಗೆ ಕೊಡಗ್‌ನ ಗೌಡ್ರೂ, ಸುಳ್ಯದ ಗೌಡ್ರೂ ಒಟ್ಟಾಗಿ ಹೋರಾಡ್ದೋ. ಕೆದಂಬಾಡಿ ರಾಮಯ್ಯಗೌಡ ಮತ್ತೆ ಗುಡ್ಡೆಮನೆ ಅಪ್ಪಯ್ಯಗೌಡ ಇಬ್ಬರ್ ಒಟ್ಟಾಗಿದ್ದ್ ಹೋರಾಟಕ್ಕೆ ನಾಯಕತ್ವ ವಯಿಸಿದವು. ಊರು ಮತ್ತೆ ನೆಲೆನ ವೆತ್ಯಾಸದ ಮತ್ತೆನ ಕಾಲಗಳ್‌ಲಿ ಎರ್‌ಡ್ ಕಡೆನ ಗೌಡ್ರಲಿ ಚೂರ್ ಚೂರ್ ವೆತ್ಯಾಸಗ ಆಗುಟು. ಮುಕ್ಯ ಆಗಿದ್ ಕೊಡಗ್‌ನ ಗೌಡ್ರ್‌ಗ ಅಲ್ಲಿನ ಕೊಡವರ ಸಾಂಸ್ಕೃತಿಕಬೊದ್ಕ್‌ನ ಪ್ರಬಾವಕೆ ಒಳಗಾದೊ. ಇದರ್‌ಲಿ ಜೀವನ ಸೈಲಿಂದ ಹಬ್ಬ ಆಚರ್ಣೆಗಳ್‌ಲಿ ಹೆಚ್ಚಾಗಿ ಕಾಣಕ್.

ಕೈಲ್ ಮೂರ್‌ತ ಕೊಡವರ ಹಬ್ಬ. ಪ್ರಸ್ತುತ ಕೊಡಗ್‌ಲಿ ಇರ್‌ವ ಗೌಡ್ರ್‌ಗನು ಇದರ ಆಚರ್‌ಸುವೆ. ಬೇಸಾಯ ಮಾಡೊವೆಲ್ಲವುನು ತಮ್ಮ ತಮ್ಮ ಆಯುದ ಕ್ರಿಸಿನ ಹತ್ಯಾರ್‌ಗಳ ತೊಳ್ದ್ ಮನಾರ ಮಾಡಿ ಅದ್ಕೆಲ್ಲ ಪೂಜೆ ಮಾಡ್ದಕೆ ಕೈಲ್ ಮೂರ್‌ತಂತ ಹೇಳ್‌ವೆ. ಆಗ ಹೇಳ್‌ವ ಪೊದ್ಯ ಕೊಡವ ಬಾಸೆಲೆ ಉಟ್ಟು. ಕಾವೇರಿ ಸಂಕ್ರಮಣನನು ಕೂಡ ಕೊಡಗ್‌ನ ಗೌಡ್ರ್ ಬಾರಿ ಗೌಜಿಂದ ನಡ್ಸುವೆ. ಆ ದಿನ ಗೌಡ್ರ ಕುಟುಂಬಂದ ಕನಿಸ್ಟ ಒಬ್ಬಾರ್ ಕಾವೇರಿ ಉಗಮ ಸ್ತಾನಕೆ ಹೋಗಿ ಮೀದ್ ತೀರ್‌ತನ ಮನೆಗೆ ತಂದವೆ. ಮನೆಲಿ ಯಾರಾರ್ ಸತ್ತಿದ್ದರೆ, ಸತ್ತವನ ಕರ್‌ಮಕೆ ನಿತ್ತಂವ ಸಂಕ್ರಮಣದ ದಿನದಂದ್ ಬಾಗಮಂಡ್ಲಕೆ ಹೋಗಿ ತೀರ್ತ ಮೀದ್ ಬಂದವೆ. ಬಾಗಮಂಡ್ಲಂದ ತೀರ್‌ತ ತಾಕನನೂ ಬಾರಿ ಗೌಜಿ ಇದ್ದದೆ. ಮನೆನ ತೊಳ್ದ್ ಸಿಂಗರ್‌ಸಿದ್ದವೆ. ಎಲ್ಲವು ಬಿಳಿ ಬಟ್ಟೆ ಉಟ್ಟಿದ್ದವೆ. ಬಗೆಬಗೆನ ತಿಂಡಿತಿನ್ಸ್‌ಗಳ ಮಾಡಿದ್ದವೆ. ಕಾವೇರಮ್ಮಂಗೆ ಪೂಜೆ ಮಾಡಿ ಇಡಿ ದಿನ ಬಕ್ತಿಲಿ ಕಳ್ದವೆ.

**ಕೊಡಗ್‌ನ ಗೌರಮ್ಮ** : 1912 1939. ಕೊಡಗಿನ ಗೌರಮ್ಮನವು 1912ರ್‌ಲಿ ಕೊಡಗ್‌ನ ಮಡಿಕೇರಿಲಿ ಹುಟ್ಟಿದೊ. ಇವರ ಅಪ್ಪ ರಾಮಯ್ಯನವು ಮಡಿಕೇರಿಲಿ ವಕೀಲರಾಗಿದ್ದೊ. ಇವರ ಗಂಡ ಶ್ರೀ ಬಿ ಟಿ ಗೋಪಾಲ ಕೃಷ್ಣಯ್ಯ ಮತ್ತೆ ಮಂಜ ವಸಂತಕುಮಾರ.ಇವ್ ಸಾಹಿತ್ಯ ಕ್ಷೇತ್ರನ ಪ್ರವೇಸ ಮಾಡ್ದ ಅವರ 19ನೆ ಪ್ರಾಯಲಿ" ಪುನರ್ವಿವಾಹಂತೇಳುವ ಕತೆಂದಾಗಿ .ಅವರ್‌ದು ಒಟ್ಟು ಕತೆಗ 21 ಮಾತ್ರ. 1939ರ್ಲಿ ಗೌರಮ್ಮನವು ಅಕಾಲಿಕ ಮರಣ ಹೊಂದಿದ ಮೇಲೆ "ಕಂಬನಿ" ಮತ್ತೆ "ಚಿಗುರು" ತೇಳ್‌ವ ಎರಡ್ ಕವನ ಸಂಕಲನಲಿ ಅವರ 21 ಕಥೆಗ ಪ್ರಕಟ ಆದೊ. ದ.ರಾ ಬೇಂದ್ರಯವು ಈ ಎರಡ್ ಸಂಕಲನಗಳಿಗೆ ಮುನ್ನುಡಿ ಬರ್‌ದ್ ಚೋದ್ಯೆ ಮಾಡಿ ಹೊಗಳಿಯೊಳೊ.. "ವಾಣಿಯ ಸಮಸ್ಯೆ", "ಸನ್ಯಾಸಿ ರತ್ನ", "ಮನುವಿನ ರಾಣಿ" , "ಆಹುತಿ", "ಮರದ ಬೊಂಬೆ", "ಕೌಸಲ್ಯಾ ನಂದನ ಇವು ಗೌರಮ್ಮನವು ಬರ್‌ದ ಕೆಲವು ಕಥೆಗ. ಗೌರಮ್ಮನವು ಸುರುಲಿ ಶ್ರೀಮತಿ ಬಿ ಟಿ ಜಿ ಕೃಷ್ಣಂತೇಳಿನೇ ಅವರ ಹೆಸರ್‌ನ ಬರೆತಿದ್ದೊ. ಕೊಡಗ್‌ನ ಹೊರಗೆ ಇದ್ದ ಓದುಗರ್ ಹಾಂಗೆ ಸಾಹಿತ್ಯ ಪ್ರೇಮಿಗ ಶ್ರೀಮತಿ ಗೌರಮ್ಮನವರ ಪ್ರೀತಿಲಿ ಕೊಡಗ್‌ನ ಗೌರಮ್ಮ ಅಂತೇಳಿ ಕರ್‌ದ್ ಜನಪ್ರಿಯಗೊಳ್ಸಿದೊ. ಗಾಂಧೀಜಿಯವು ಕೊಡ್‌ಗ್‌ಗೆ ಬಂದಿರಿಕನ ಅವರ ಸ್ವಾತಂತ್ರ್ಯ ಸಂಗ್ರಾಮ ಮತ್ತೆ ಹರಿಜನೋದ್ದಾರ ನಿಧಿಗೆ ತನ್ನ ಮೈಮೇಲಿದ್ದ ಮಂಗಳ ಸೂತ್ರ, ಕಿವಿ ಓಲೆ, ಮೂಗುಬೊಟ್ಟು, ಬುಟ್ಟ್ ಬೇರೆಲ್ಲ ಒಡವೆಗಳ ಮಹಾತ್ಮರ ಕೈಗೆ ಕೊಟ್ಟೊ. ಅಲ್ಲದೇ ಮತ್ತೆ ಚಿನ್ನಾಭರಣ ಹಾಕುದ್ಲೆತ ಗೌರಮ್ಮ ಪ್ರಮಾಣ ಮಾಡಿದ್ದೊ. ಈ ಘಟನೆ ಹರಿಜನ ಪತ್ರಿಕೆನ 02.03.1934ರ ಸಂಚಿಕೆಲಿ ಸನ ಪ್ರಕಟ ಆತ್. ಗೌರಮ್ಮನವು 13.04.1939ರ್‌ಲಿ ತಮ್ಮ ಮನೆ ಹಕ್ಕಲೆನ ಹರಿತಾ ಇದ್ದ ಹರದೂರು ಹಳ್ಳಲಿ ಈಜಿಕೆ ಹೋದವು ಮುಳ್‌ಂಗಿ ಅಕಾಲಿಕ ಮರಣ ಹೊಂದಿದೊ. (ಎಂ.ಬಿ.)



**ಕೊಡವ ಬಾಸೆ ಮತ್ತೆ ಸಾಹಿತ್ಯ** : ಕರ್ನಾಟಕದ ಒಂದ್ ಜಿಲ್ಲೆ ಆಗಿರ್‌ವ ಕೊಡಗ್‌ಲಿ ನೆಲೆ ಊರಿ ಅಲ್ಲಿನ ಮೂಲ ಮೊಣ್ಣ್‌ನವೇ ಆದ ಕೊಡಗ್‌ನವುಕೆ, ಕನ್ನಡಲಿ ಕೊಡವ ಜೆನಾಂಗ ತೇಳ್ವೆ. ಇವು ಮಾತಾಡ್ವ ಬಾಸೆ 'ಕೊಡವ ಬಾಸೆ'. 1956ರ್‌ಲಿ ಕರ್ನಾಟಕ





ರಾಜ್ಯದೊಟ್ಟಿಗೆ ಸೇರಿಸಿಕೆ ಮುಂದೆ ಕೊಡಗ್ ಒಂದ್ ಸ್ವತಂತ್ರ ರಾಜ್ಯ ಆಗಿತ್ತ್. ಕೊಡಗ್‌ನ ಸಮುದಾಯದ ಜೆನಂಗಳಿಗೆ ಅವರದೇ ಆದ ಸಂಸ್ಕೃತಿಉಟ್ಟು ಅದರೊಟ್ಟಿಗೆ ಅವು ಮಾತಾಡ್ವ ಬಾಸೆನೂ ಅವರ ಸಂಸ್ಕೃತಿನ ಆಚಾರ ವಿಚಾರಗಳ ಪೊರ್‌ಲುಲಿ ಮಡ್ಗಿಕಂಡುಟು. ಈ ಬಾಸೆನ ಅವ್ವಬಾಸೆ ಮಾಡಿಕಂಡವು 'ಕೊಡವ ತಕ್ಕ್' ತ ಕರ್‌ದವೆ. ಅದ್ ಮಾತ್ರ ಅಲ್ಲ ಕಡಗಿ, ಬುರ್‌ಗಿ, ಕುರ್ಜ ಕೊವಟು ತೇಳಿನು ಈ ಬಾಸೆನ ಕರ್‌ಕಂಡವೆ. ಈ ಬಾಸೆನ ಕೊಡಗ್‌ನವು ಮಾತ್ರ ಅಲ್ಲದೆ ಅಲ್ಲಿ ಜೀವನ ನಡ್ಸುವ ಬೇರೆ ಬೇರೆ ಸಮುದಾಯದವು ಆದ ಅಯಿರಿ, ಮಲೆಕುಡಿಯ, ಕೆಂಬಟ್ಟಿ, ಕಪಾಲ, ಮರಿಂಗಿ, ಹೆಗ್ಗಡೆ, ಕಾವಡಿ, ಕೊಲ್ಲಿ, ಕೋಲೆಯ, ಕೊಯವ, ಗೊಲ್ಲ, ಬಣ್ಣ, ಕನ್ಯಾ ಗಾಣಿಗ, ಮಲಯ ಮತ್ತೆ ಮೇದ ಈ ಸಮುದಾಯದ ಜೆನಂಗ ಕೂಡ ಕೊಡಗ್ ಬಾಸೆ ಮಾತಾಡ್ವೆ ಕೊಡಗ್‌ನ ಜೆನಂಗ ಮನೆಯವರೊಟ್ಟಿಗೆ ಹೊರಗೆ ಸಿಕ್ಕುವ ಕೊಡವರೊಟ್ಟಿಗೆ ಕೊಡಗ್ ಬಾಸೆ ಮಾತಾಡ್ವೆ. ಆದರೆ ಹೊರಗೆನ ವ್ಯವಹಾರಗಳಿಗೆ ಮಾತ್ರ ಕನ್ನಡ ಬಾಸೆನ ಬಳಕೆ ಮಾಡಿಕಂಡವೆ.

ಕೊಡವ ಬಾಸೆ ದಕ್ಷಿಣ ದ್ರಾವಿಡ ಪಂಗಡಕೆ ಸೇರ್‌ದ ಬಾಸೆ. ಈ ಬಾಸೆಗೆ ಲಿಪಿ ಇಲ್ಲೆ. ಲಿಕಿತ ರೂಪದ ದಾಕಲೆ ಸಿಕ್ಕದರುಂದಾಗಿ ಈ ಬಾಸೆನ ಮೂಲ ಸ್ವರೂಪ ಹೇಂಗೆ ಇತ್ತುಂತ ತಿಳಿಯಕೆ ಆದುಲೆ. ಈಗ ಮಾತಾಡ್ವ ಕೊಡಗ್ ಬಾಸೆಲಿ ಅ, ಇ ಇ ಉ, ಎ, ಎ, ಒ ಹಿಂಗೆ ಏಳ್ ಹ್ರಸ್ವ ಸ್ವರಗ ಒಳ. ಆ, ಈ, ಈಗ, ಏ, ಏ, ಓ ಹಿಂಗೆ ಏಳ್ ದೀರ್‌ಗ ಸ್ವರಗ ಒಳ. ಕ, ಗ, ಙ; ಚ, ಜ, ಞ : ಟ, ಡ, ಣ;ತ, ದ, ನ;ಪ, ಬ, ಮ; ಯ ರ ಲ ವ ಶ ಷ ಸ ಹ ಳ ಇಂತ ವ್ಯಂಜೆನಸ ಉಟ್ಟು ಕೊಡಗ್ ಬಾಸೆಲಿ ಮಹಾಪ್ರಾಣ ಇಲ್ಲೆ. ಪದ ಕೂಡ್ಸಿಕನ ಒಟ್ಟುನ ವ್ಯಂಜೆನಗ ಬೇರೆ ಬಾಸೆನ ಪದಗಳ ಬಳಕೆ ಮಾಡ್ಕನ ಮಾತ್ರ ಬಂದದೆ. ಪ್ರೇಮ, ಬ್ರಹ್ಮ, ತ್ರಿವೇಣಿ, ತ್ಯಾಗ, ದೃಡ, ದ್ವೇಷ, ಹಿಂಗೆ ಪದಗಳ ಮದ್ಯಲಿ ದ್ವಿತ್ವಗ ದ್ರಾವಿಡ ಬಾಸೆನ ಪದಗಳ್‌ಲಿ ಬಂದದೆ. ಅಪ್ಪೆ, ಅಬ್ಬಿ, ಎತ್ತಟಿ, ಹಿಂಗೆ... ಒಟ್ಟುನ ವ್ಯಂಜೆನಗ ಬೇರೆ ದೇಶದ ಪದಲಿ ಒಂದ್ ಚೌಕಟ್ಟ್‌ನ ಒಳಗೆ ಬಾವಂತದ್. ಆದರೆ ದೇಶ್ಯ ಪದಗಳ್‌ಲಿ ಅವು ಎರ್‌ಡ್ ಸ್ವರಗ ಸಂದಿಯಾರ್‌ಂದ ಇಲ್ಲಂತಾರೆ ಸ್ವರಲೋಪ ಕ್ರಿಯೆಂದ ಸಾದ್ಯ ಆಗುವಂತದ್ದು.

ಸಬ್ದಗಳ್‌ಲಿ ದ್ವಿವರ್ಣ(ಡೈಸಿಲಬಿಕ್)ಮತ್ತೆ ತ್ರಿವರ್ಣ(ತ್ರೈಸಿಲಬಿಕ್) ಇಂತ ಹಣ್ಣಾ ಸಬ್ದಗ ಲೆಕ್ಕಲಿ ಸುಮಾರು ಒಳ. ಪುಲ್ಲಿಂಗ, ಸ್ತ್ರೀ ಲಿಂಗ ನಪುಂಸಕ ಈ ಮೂರು ಲಿಂಗ ಪ್ರಬೇದಗ ಏಕವಚನಲಿನೂ ಸುರುನ ಪುರುಷ ಸರ್‌ವನಾಮಲಿನೂ ಇದ್ದದೆ. ಬಹುವಚನಲಿ ಸ್ತ್ರೀ, ಪುಲ್ಲಿಂಗಂತ ಹೇಳಿ ಒಂದ್ ರೂಪ ಮಾತ್ರ ಉಟ್ಟು. ಉದಾರ್‌ಣೆಗೆ : ಅವಂ(ಪು) ಅವು(ಳ್) ಸ್ತ್ರೀ ಅದ್ (ನಪುಂ) ಅವು–ಅಯಂಗ(ಸ್ತ್ರೀ– ಪುಂ ಬಹುವಚನ) ಇಡಿ ಕ್ರಿಯಾಪದ ಇದರ್‌ಲಿ ವಚನ ವೆತ್ಯಾಸಗಳ ಮಾತ್ರ ಲೆಕ್ಕಕ್ಕೆ ತೆಕಂಡವೆ. ಲಿಂಗಗಳ ಆದಾರ ಇಲ್ಲೆ. ಉದಾ : ಬಂದೆ – ನಾ ಬಂದೆ; ಬಾತ – ನಾವು ಬಂದ; ಬಂದಿಯ – ನೀ ಬಂದ; ಬಂದಿರ – ನೀವು ಬಂದೆರಿಯ; ಬಾತ – ಅವ, ಅವ್ವು, ಅದು, ಅವು, ಅವುಗ, ಬಂದ, ಅದು ಬಾತು, ಬಂದುಟ್ಟು, ಬಂದೊಳ, ; ಅಂದರೆ ಲಿಂಗ – ವಚನ ಬೇದಗಳ ತಿಳ್ಯಕೆ ವಾಕ್ಯಲಿ ಸರ್‌ವನಾಮ ಇದ್ದರೆ ಮಾತ್ರ ಸಾದ್ಯ ಆದೆ.

ಬಾಸೆನದ್ರಿಸ್ಟಿಂದ ನೊಡ್ದಾರೆ ಕೊಡವ ಬಾಸೆ ತಮಿಳು, ಮಲೆಯಾಳ ಬಾಸೆಗಳಿಗೆ ಹಕ್ಕಲೆ ಉಟ್ಟುತಾ ಬಾಸೆನ ವಿಜ್ಞಾನಿಗ ಹೇಳ್‌ವೆ. ಆದರೆ ಹೊರಗೆನ ವ್ಯವಹಾರಗ ಎಲ್ಲಾ ಕನ್ನಡ ಬಾಸೆಲೆ ನಡೆದರ್‌ಂದ ಸುತ್ತ ಬೌಗೋಳಿಕ ಪ್ರದೇಶನೂ ಕನ್ನಡ ಕೊಡಗ್‌ನ ಸುತ್ತ ಇರುದಂದನು ಕೊಡಗ್ ಬಾಸೆನ ಮೇಲೆ ಕನ್ನಡ ಬಾಸೆನ ಗಾಳಿ ಬೀಸುದು ಅನಿವಾರ್ಯ ಆಗುಟು.

ಪದಕೋಶಲಿ ಕನ್ನಡಕೆನೂ ಕೊಡಗ್‌ಗೆನೂ ಸಮ ಇರ್‌ವ ಸುಮಾರು ಪದಗಳ ಒಳ. ಅಗೋಷ, ಗೋಷ ವ್ಯೆತ್ಯಾಸ ಇರ್‌ವ ಸ್ಪರ್ಶ, ಸ್ಫೋಟಕ ವ್ಯಂಜೆನಗ ಕನ್ನಡಲಿ ಇರ್‌ವ ಹಾಂಗೇ ಕೊಡಗ್‌ಲಿನೂ ಉಟ್ಟು. ಕನ್ನಡಲಿ ಪ ಕಾರ ಹ ಕಾರ ಆದಾಂಗೆ ಕೊಡಗ್‌ಲಿನು 'ಹ' ದ್ವನಿ ದ್ವನಿಮಾ ಮಟ್ಟಕ್ಕೆರದೇ ಉತ್ತಮಪುರುಷ ಸರ್‌ವನಾಮದ ಬಹುವಚನಲಿ ಅಬಿವ್ಯಾಪಕ (ಇನ್‌ಕ್ಲೂಸಿವ್) ಮತ್ತೆ ವ್ಯಾವರ್‌ತಕ (ಎಕ್ಸ್‌ಕ್ಲೂಸಿವ್) ತೇಳ್ವ ವೆತ್ಯಾಸ ಉಟ್ಟು. ತಮಿಳು, ಮಲೆಯಾಳಂ, ತುಳು – ತೆಲುಗುಲಿನು ಈಗನು ಉಟ್ಟು.

ಹಳೆಗನ್ನಡದಲ್ಲಿದ್ದ ಈ ಪ್ರಕ್ರಿಯೆ ಹೊಸಗನ್ನಡಲಿ ಇಲ್ಲದಂದ ಕೊಡಗ್‌ಲಿನೂ ಇಲ್ಲೆ. ಪೂರ್ಣ ಕ್ರಿಯಾಪದಲಿ ಲಿಂಗ ನಿರ್‌ದೇಶನ ಇಲ್ಲದ ಪ್ರಕ್ರಿಯೆ, ಇದು ಕನ್ನಡದ ಉಪಬಾಸೆ ಆದ ಗೌಡ ಕನ್ನಡನ ಹೋಲಿದೆ. ಉದಾ : ನಾ ಬಂದೆ (ಗೌಕ; ಕೊ); ನಾವು ಬಂದ (ಗೌಕ), ನಾವು ಬಾತ್ (ಕೊ); ನೀ ಬಂದ (ಗೌಕ), ನೀ ಬಂದಿಯ (ಕೊ); ಅದ್ ಬಾತ್ (ಗೌಕ), ಅವ ಬಾತ್ (ಕೊ), ಅಂದರೆ ಅವ್ವು ಬಾತ್, ಅದು ಬಾತ್ (ಗೌಕ); ಅಂದರೆ ಅದು ಬಾತು, ಅವು ಬಂದೂ (ಗೌಕ); ಅಯಂಗ – ಅವು ಬಾತ್ (ಕೊ) ಅಂದರೆ ಅವು ಬಂದ : ಪೂರ್ಣ ಕ್ರಿಯೆ ಬಹುವಚನಕ್ಕೆ ಏಕರೂಪ ಇರುದು ಕೊಡಗ್ ಮತ್ತೆ ಗೌಡ ಕನ್ನಡಗಳೆರ್‌ಡರ್‌ಲು ಕಾಂಬಕ್ಕೆ ಸಿಕ್ಕಿದೆ. ಗೌಡ ಕನ್ನಡಲಿ ಪ್ರತಮ ಪುರುಷ ಲಿಂಗನಿರ್‌ದೇಶನ ಇದ್ ಕೊಡಗ್ ಬಾಸೆಲಿ ಇಲ್ಲೆ. ಕೊಡಗ್ ವಚನವೆತ್ಯಾಸನ ತೋರ್‌ಸುದ್ಲೆ. ಈ ಅಂಶಗ ಕೊಡಗ್ – ಕನ್ನಡ ಬಾಸೆನ ಮೇಲೆ ಇರ್‌ವ ಪ್ರಬಾವ ತೋರ್‌ಸಿದೆ. ಈಗನ ಕೊಡಗ್ ಬಾಸೆಲಿ ಪಾರಸೀ, ಅರಬ್ಬೀ, ಉರ್‌ದು ಪದಗ ಕೆಲವ್ ಸೇರಿ ದಿನಬಳ್ಕೆನ ಮಾತುಲಿ ಉಟ್ಟು. ಉದಾ : ಹುಕುಂ, ಹಜಾಮ, ಹುಷಾರ್ ಹಿಂಗೆ ಇನ್ನು ಕೊಡವ ಬಾಸೆನ ಸುರುಗೆ ಪರಿಚಯಿಸಿಕೊಟ್ಟವು ಕಾಲ್ವೆಲ್, ಗೇಟರ್ ಮತ್ತೆ ಕೆಲವ್ ವಿದ್ವಾಂಸರುಗ. ಈ ಬಾಸೆಗೆ ಬುರುಡೆ ವ್ಯಾಕರಣ ಬರ್‌ದವ ಕೋಲ್ ತೇಳಂವ.

ಕೊಡವ ಬಾಸೆನ ಜೆನಪದ ಪದಗ ಇಲ್ಲರೆ ಬೇರೆ ಕೆಲ ಈಚೆನ ಸಾಹಿತ್ಯ ರಚನೆಗ ಪೂರಾ ಕನ್ನಡ ಲಿಪಿಲಿನೇ ಬರ್‌ದೊಳ. ಅಲ್ಲದೆ ಬರ್‌ದ ಸಾಹಿತ್ಯನೂ ಕಮ್ಮಿನೇ ಉಟ್ಟು. ಇದರ್‌ಲಿ ಪಟ್ಟೋಲೆ, ಪಳಮೆ, ಅಪ್ಪಚ್ಚು ಕವಿನ ನಾಕು ನಾಟಕ, ಕುತ್ತುಂಬೊಳಿಚ್ಚ ಇವ್ ಹೆಸರು ಮಾಡ್ದ ಕೃತಿಗ. ಪಳಮೆತೇಳುವ ಪೊದ್ಯಗ ಸಾಮೂಹಿಕ ಕಾರ್ಯಕ್ರಮಲಿ ಅಂದರೆ ಕೊಣ್‌ತ, ಮೊದ್ವೆ, ಸಾವು ಇಂತ ಸಮಯಲಿ ಹೇಳ್ವಂತದ್ದು. ಇದರ ಬುಟ್ಟು ಇನ್ನು ಹೆಚ್ಚಿಗೆ ಸಾಹಿತ್ಯ ಕ್ರಿಸಿ ಕೊಡವ ಬಾಸೆಲಿ ನಡ್ದತ್ಲೆ.

ಆದರೆ ಕೊಡವ ಬಾಸೆಗೆ ಈಗ ಹೊಸ ಅಕಾಡೆಮಿ ಆದರ್‌ಂದ ತುಂಬಾ ಕಾರ್ಯಕ್ರಮಗಳ ನಾವು ನಿರೀಕ್ಷೆಲಿ ಒಳ. ಈ ಬಾಸೆ ಇನ್ನು ಅಬಿವೃದ್ಧಿ ಆಗಿ ಸಮಾಜಲಿ ಒಳ್ಳ ಸ್ತಾನಮಾನ ಸಿಕ್ಕಲಿತ ನಮ್ಮ ಆಶಯ ಕೂಡ. (ಕೆ.ಕೆ.ಜಿ.)

**ಕೊಡವ ಸೀಮೆನ ಜೆನಪದ ಕೊಣ್‌ತಗ : ಉಮ್ಮತ್ತಾಟ್ :** ಕೊಡವ ಹೆಣ್ಮಕ್ಕಳಿಗೆ ಮಾತ್ರನೇ ಮೀಸಲಾದ ಕೊಣ್‌ತ ಉಮ್ಮತ್ತಾಟ್ ಕೊಣ್‌ತ. ಇದರ ಹಿನ್ನೆಲೆಲಿ ಸಮುದ್ರ ಮತನದ ಕತೆ ಉಟ್ಟು. ಸಮುದ್ರ ಮತನ ಕಾಲಲಿ ಉದ್ಬವಿಸಿದ ಅಮೃತನ ರಕ್ಕಸರಿಗೆ ದಕ್ಕದಂಗೆ ಮಾಡಿಕೆ ಮೋಹಿನಿ ರೂಪ ತಾಳ್ದ ವಿಷ್ಣು ತನ್ನ ನಾನಾ ರೀತಿಯ ಹಾವಬಾವ, ಒನಪು ವಯ್ಯಾರ, ವಿಬ್ರಮ ವಿಲಾಸಗಳ್‌ಂದ ರಕ್ಕಸರ ಕಣ್ಣ್‌ಕಟ್ಟ್ ಮಾಡಿ ಸುರರ್‌ಗೆ ಅಮೃತನ ಹಂಚಿದ ಸಂಕೇತನೆ ಉಮ್ಮತ್ತಾಟ್ ತೇಳಿ ಕೊಡವರ ನಂಬಿಕೆ. ಈ ಕತೆಂದಳು ಹೆಚ್ಚಾಗಿ ಉಮ್ಮತ್ತಾಟ್' ತೇಳುದು ಕೊಡವರ ಕುಲದೇವತೆ ಆದ ಕಾವೇರಮ್ಮನ ಆರಾದನೆ ತೇಳುವೆ. ಗೀತ–ನರ್‌ತನನ ಇರ್‌ವ ಈ ಸೌಮ್ಯ ಕಲೆನ ಸಾಮಾನ್ಯಾಗಿ ಕೊಡವ ಹೆಣ್ಮಕ್ಕ ತಮ್ಮ ಹಬ್ಬ ಹರಿದಿನಗಳ್‌ಲಿ ಮಾತ್ರ ಪ್ರದರ್ಶಿಸುವೆ.


ಉಮ್ಮತ್ತಾಟ್

ತಲೆಗೆ ಕೆಂಪು ಬಟ್ಟೆ, ತುಂಬುದೋಳಿನ ರವುಕೆ, ಹಿಂದೆಗೆ ನೆರಿಗೆ ಬುಟ್ಟು ಉಟ್ಟ ಸೀರೆ, ಗಂಟ್ಲ್‌ಲಿ ಮಣಿಮಾಲೆ, ಕೈಗಳ್‌ಲಿ ಬಳೆ, ಹಣೆಲಿ ಕುಂಕುಮದ ಬೊಟ್ಟು ಹಿಂಗೆ ತಮ್ಮ ಸಾಂಪ್ರದಾಯಿಕ ಉಡುಗೆ ತೊಡುಗೆಗಳ್‌ನ ದರಿಸಿದ ಹೆಣ್ಮಕ್ಕ ಉಂಗುರಾಕೃತಿಲಿ ನಿಂತವೆ. ನಡುಲಿ ದೀಪವೊಂದರ ಹೊತ್ತಿಸಿಟ್ಟವೆ. ಕೈಲಿ ಕಂಚಿನ ತಾಳ ಹಿಡ್‌ದ್ ನಡುಲಿ ಹೊತ್ತುಸಿಸಿದ ದೀಪದ ಸುತ್ತ ಹಾಡಿಕಂಡ್ ಕೊಣ್ದವೆ. ಮೊದ್‌ವೆ ಆಗದ ಗೂಡೆಗಳೇ ಹೆಚ್ಚಾಗಿ ಪಾಲ್ಗೊಳ್ಳುವ ಈ ಕೊಣ್‌ತಲಿ ಇಂತಿಷ್ಟೇ ಜೆನಗ ಇರೋಕು ತೇಳುವ ನಿಯಮೇನಿಲ್ಲೆ. ಕೆಲವ್ ಗೂಡೆಗ ಹನೀಸ್ ಹಕ್ಕಲೆ ನಿತ್, ಕಾವೇರಿ ತಾಯಿನ ಮೇಲೆ ಸ್ತುತಿ ಗೀತೆಗಳ್‌ನ ಹಾಡುತ್ತಿದ್ದವೆ. ಪ್ರತಿ ಹಾಡ್‌ಗೂ ಕೋಣಿವ ಗೂಡೆಗ, ಸುತ್ತುವ, ತಾಳ ಹಾಕುವ ಮತ್ತೆ ಕೋಣಿಯುವ ಗತ್ತು ಬಂಗಿಗ ವೆತ್ಯಾಸವಾಕಂಡ್ ಹೋದೆ. ಒಮ್ಮೆ ತಮ್ಮಷ್ಟಕ್ಕೆ ತಾವೇ ತಾಳ ಹಾಕಿರೆ, ಮತ್ತೊಮ್ಮೆ ಇಬ್ಬಿಬ್ಬರು ಎದುರಾಗಿ ತಾಳಕ್ಕೆ ತಾಳ ಕೊಟ್ಟವೆ. ಮಗದೊಮ್ಮೆ ಎಡಕ್ಕೆ, ಬಲಕ್ಕೆ ತಿರ್‌ಗಿ ಎದುರು ತಾಳ ಕೊಟ್ಟವೆ. ಕೆಲ ಸರ್‌ತಿ ಕೆಲವ್ ನಿತ್, ಕೆಲವ್ ಕುದ್ದು ತಾಳ ಹಾಕುವೆ. ನಿಂತ ಗೂಡೆಗ ಹಾಡುವ ಹಾಡುಗಳ್‌ನ ಪುನರುಚ್ಚರಿಸುತ್ತಾ ಕೋಣಿಯುವ ಗೂಡೆಗ ಯಾವ ಬಂಗಿಗಳ್‌ಲಿ ಕೋಣಿಯುತ್ತಿದ್ದರೂ ಸಹ ನಡೆ ಮಾತ್ರ ಮಂದಗತಿಯೇ ಇದ್ದದೆ. ತಾಳದ ಗತಿ ಹೆಚ್ಚಾದಂಗೆ ಎಲ್ಲರ ನಡೆನೂ ಸಹ ಜೋರಾಗಿ ಕೊಡಿ ಮುಟ್ಟಿದಂಗೆ ಪ್ರದರ್ಶನಕ್ಕೆ ಕಳೆ ಕಟ್ಟಿದೆ.

ಪೊರ್‌ಲುನ ಕೊಡವ ಗೂಡೆಗ ಕೊಣೆದು ಕಣ್ಣಿಗೆ ಹಬ್ಬ, ದೀಪದ ಸುತ್ತ ಕುಣಿವ ಸಂಗೀತ ನೃತ್ಯದ ಮದುರ ಮಿಸ್ರದ ಉಮ್ಮತ್ತಾಟ್ ಏಳು ಬಗೆನ ಕೊಣ್‌ತದ ಪ್ರಕಾರ ಗಳ ಒಳಗೊಂಡುಟು, ಹಾಡುಗಳಲ್ಲಿನೂ ಸಹ ಕೇವಲ ಕಾವೇರಿ ಮಾತೆಯ ಸ್ತುತಿಯಷ್ಟೇ ಅಲ್ಲದೆ, ಕೊಡಗಿನ ಜೆನತೆ, ಸುಂದರ ಪರಿಸರ, ಕೊಡವರ ಅತಿತಿ ಸತ್ಕಾರ ಇವೇ ಮೊದಲಾದವು ಗಳ್‌ನ ಒಳಗೊಂಡಿದ್ದದೆ.

ಕಾವೇರಿ ಮಾತೆಯ ಮಂಗಳದೊಟ್ಟಿಗೆ ಕೊಣ್‌ತನೂ ಮುಕ್ತಾಯ ಗೊಂಡದೆ. ಉಮ್ಮತ್ತಾಟ್ ಕೊಣ್‌ತಕ್ಕೆ ಆರಾದನೆನು ಮೋರೆನು ಉಟ್ಟು, ಮನರಂಜೆನೆ ಮೋರೆನು ಉಟ್ಟು. ಕೊಡವ ಗೂಡೆಗ ತಮ್ಮ ಕುಸಿಗೆ ಸುಗ್ಗಿ ಮತ್ತೆ ವಸಂತ ಕಾಲಲಿ, ದೇವರ ಉತ್ಸವ, ಸಮಾರಂಬಗಳ್‌ಲಿ ಹಾಡಿ ಕೊಣ್ದು ನಲ್ದವೆ. (ಪಿ.ಎಸ್.)

**ಎರವರ ಕೊಣ್‌ತ :** ಕೊಡಗಿನ ಅಮ್ಮತ್ತಿ, ಪೊನ್ನಂಪೇಟೆ, ಗೋಣಿಕೊಪ್ಪ, ಶ್ರೀಮಂಗಲ ಸೇರ್‌ದಂಗೆ ವಿರಾಜಪೇಟೆನ ಸುತ್ತಮುತ್ತಲ ಕಾಡುಗಳ್‌ಲಿ ವಾಸಿಸುವ ಬುಡಕಟ್ಟು ವರ್‌ಗದವರ ಕೊಣ್‌ತ ಎರವರ ಕೊಣ್‌ತ. ಸೇರ್‌ದ ಎರವರ್ ತಮ್ಮ ದಿನೋಳುನ ದುಡಿಮೆನ ಬೊಚ್ಚೆಲ್ ಆರ್‌ಸಿಕೆ ಕತ್ತಲೆ ಹೊತ್ತು ತಾವು ವಾಸಿಸುವ ಗುಡಿಸಲ್‌ಗಳ ಮುಂದೆ ಕಿಚ್ಚಿ ಹಾಕಿಕಂಡ್ ಅದರ ಸುತ್ತ ಸಾಮೂಹಿಕವಾಗಿ ಪೊದ್ಯ ಹೇಳಿಕಂಡ್ ಕುಣ್‌ದವೆ. ಕೊಣ್‌ತಲಿ ಇಸ್ಟೇ ಜೆನ ಇರೋಕು ಇಂತವೇ ಇರೋಕುಂತಾಗಲಿ ಕಟ್ಟುಪಾಡುಗ ಏನಿಲ್ಲೆ. ಮಕ್ಕಳ್‌ಂದ ಹಿಡ್ದು ಅಜ್ಜಂದ್‌ರವರೆಗೆ ಹೆಣ್ಣು ಗಂಡ್‌ತೇಳುವ ಬೇದ ಇಲ್ಲದೆ




ಎಲ್ಲರೂ ಕೊಣ್ಡವೆ. ಆಯಾಸ ಪರಿಹಾರ ಮತ್ತೆ ಮನರಂಜೆನೆನೆ ಎರವರ ಕೊಣ್‌ತದ ಉದ್ದೇಸ, ಎರವರ ಕೊಣ್‌ತಕ್ಕೆ ಹಿಮ್ಮೇಳ ಒದಗಿಸುವ ವಾದ್ಯಗ ದುಡಿ ಮತ್ತೆ ಚೀನೀ ವಾದ್ಯ, ದುಡಿ ಕೊಡವರ್‌ಲಿ ಬಳಕೆಲಿರುವ ಚರವಾದ್ಯ, ಎರವರ್ ಬಳ್ಸುವ ಚೀನೀ ವಾದ್ಯ ಅವಿಕಶ್ವೇ ಮೀಸಲಾದ ವಿಶಿಷ್ಟ ಗಾಳಿ ವಾದ್ಯ, ಶ್ರುತಿ ಸೇರ್‌ದಂಗೆ ಇಡಿಯಾಗಿ ಮರಂದಳೆ ತಯಾರ್‌ಸಿದ ವಾದ್ಯ ಇದ್. ಇದರ್‌ಂದ ಹೊರಡುವ ನಾದ ಅಂತೂ ಸುಶ್ರಾವ್ಯವಾಗಿಟ್ಟು. ದುಡಿನ ಲಯಬದ್ಧ ಬೊಟ್ಟಟ ಮತ್ತೆ ಚೀನೀ ವಾದ್ಯದ ನಾದ ಮಾದುರ್ಯಕ್ಕೆ ಎರವರ್ ಉತ್ಸಾಹಂದ ಕೇಕೆ ಹಾಕಂಡ್ ಮೈ ಬಾಗಿಸಿ ಬಳ್‌ಕಿಸಿ ಜೋಲಿ ಹೊಡಕಂಡ್ ಕೊಣ್ಡವೆ. ಒಟ್ಟುಲಿ ಎರವರ ಕೊಣ್‌ತ ಸ್ವಸಂತೋಷಕ್ಕಾಗಿ ಪ್ರದರ್ಶನ ಮಾಡ್‌ವ ಕೊಣ್‌ತ, ಇಡೀ ಎರವ ಸಮುದಾಯ ಇಡಿ ಕೊಣ್‌ತಲಿ ಕೂಡ್ದರ್‌ಂದ ಪ್ರೇಕ್ಷಕರ್ ಇರುದುಲೆ. (ಸಿ.ಎಸ್.)

**ಕಪ್ಪೆಯಾಟ್ :** ಒಂದೊಳ್ಳ ವೇದಿಕೆನ ನಡುಲಿ ಹೊತ್ತುಸಿದ ದೀಪದ ಸುತ್ತ ನಿತ್ತ ನಾಕ್‌ಜೆನ, ಬಿಳಿನ ಕುಪ್ಪಸ ತೊಟ್ಟ್ ದುಡಿ ಬೊಟ್ಟಿಕಂಡ್ ಹಾಡ್‌ತ್ತಿದ್ದವೆ. ಪೊದ್ಯ ಮತ್ತೆ ದುಡಿನ ತಾಳಕ್ಕೆ ಅನುಸಾರಾಗಿ ಕೊಡವ ಕಲಾವಿದರ್ ತಮ್ಮ ಸಾಂಪ್ರದಾಯಿಕ ವೇಷ ಬೂಷಣಗಳ ತೊಟ್ಟ್ ಒಂದೆ ಗತಿಲಿ ಕೊಣ್ಡವೆ. ಕಪ್ಪೆಯಾಟಲಿ ಹಲವು ಪ್ರಕಾರಗ ಒಳೊ. ಸಮಸ್ತೆ ಆಟ್, ಚಾರಿ ಆಟ್, ಕೊರ್‌ತಿ ಆಟ್, ಪೀಚೆಕರ್‌ತಿ ಆಟ್, ಕೆಡವುಕ್ ಆಟ್ ಇಂತವೆಲ್ಲ. ಈಗ ಕೊಡವರ ಸಾಂಪ್ರದಾಯಿಕ ವಾದ್ಯ ಸಂಗೀತ ಆದ ವಾಲಗದೊಟ್ಟಿಗೆ ಕೊಣಿವ ಈ ಕೊಣ್‌ತಲಿ ಡೋಲುನ ಮದ್ಯೆ ಮದ್ಯೆ ಕೋಣಿಯುವವು ಹಾಡಿರೂ ಕೂಡ ವಾಲಗದ ಗತಿನೆ ಅವರ ಕೊಣ್‌ತದ ಮೂಲ ಬಂಡವಾಳ, ದೇವತಾರಾದನೆ ಈ ಕೊಣ್‌ತದ ಮೂಲ ಉದ್ದೇಸ. ಇತ್ತೀಚೆಗೆ ಕಣ್ಮರೆ ಆಕಂಡಿರ್‌ವ ಕೊಣ್‌ತ ಆದರೂ, ಕೊಡಗ್ ಜಿಲ್ಲೆನ ದೇವಣಗೇರಿ, ಬಾಡಗ, ಬಲಂಬೇರಿಯ ಹೈದಂಗ ಈ ಕಲೆನ ರೂಡ್‌ಸಿಕೊಂಡು ಬರ್‌ತೊಳೊ. (ಸಿ.ಎಸ್.)

**ಕುಡಿಯರ ಕೊಣ್‌ತ :** ಕೊಡಗ್, ಚಿಕ್ಕಮಗಳೂರು, ದಕ್ಷಿಣಕನ್ನಡ ಜಿಲ್ಲೆಗಳ್‌ಲಿ ವಾಸ ಆಗಿರುವ ಮಲೆಕುಡಿಯರ್ ತೇಳಿ ಹೆಸರಾದ ಬುಡಕಟ್ಟು ಜೆನಾಂಗದವರ ಕೊಣ್‌ತ. ಕೊಡಗ್‌ನ ಕುಡಿಯ ಗಂಡಸರ್ ಹಂಗೆ ಹೆಣ್ಮಕ ಸೇರ್‌ದಾಂಗೆ ಗುಂಪಾಗಿ ಪ್ರದರ್ಶಿಸುವೆ. ಕೊಡವರ ರೀತಿಲೇ ಬಿಳಿ ನಿಲುವಂಗಿ, ಪಾಯಿಜಾಮ, ನಡುವಿಗೆ ಬಟ್ಟೆ, ತಲೆಗೆ ಪೇಟ ತೊಟ್ಟ ಗಂಡಸರ್ ಮತ್ತೆ ಕೊಡವ ಹೆಣ್ಮಕ್ಕಳ ಹಂಗೆ ವೇಸಬೂಷಣಗಳ್‌ನ ತೊಟ್ಟ ಕುಡಿಯ ಹೆಣ್ಮಕ ತಮ್ಮ ಎರ್‌ಡ್ ತೋಳುಗಳ ನೇಚಿ ಕೈಗಳ ಬಾಗಿಸಿಕಂಡ್ ಬೊಗ್ಗಿ,ಎದ್ದ್ ಹಿಂದೆ ಮುಂದೆ ತಿರ್‌ಗಿಕಂಡ್ ಬಾರಿ ಪೊರ್‌ಲುಲಿ ಕೊಣ್‌ದವೆ. ಈ ಕೊಣ್‌ತಕೆ ಡೋಲು ಹಿಮ್ಮೇಳದ ವಾದ್ಯ, ಕೊಡವರ ಕೊಂಬಾಟ್, ಪೀಲಿಯಾಟ್‌ಗಳಂಗೇ ಕುಡಿಯರ ಕೊಣ್‌ತನೂ ಸಹ ನಿದಾನಾಗಿ ಸುರಾಗಿ ರಬಸದ ಗತಿಲಿ ಹೋದೆ. (ಸಿ.ಎಸ್.)

**ಕುರುಬಾಟ್ :** ಕೊಡಗ್‌ನ ಕಾಡ್‌ಗಳ್‌ಲಿ ಬೊದ್ಕುವ ಕಾಡ್ ಕುರುಬರ್ ಕೂಡಿ ಕೊಣಿವ ಕೊಣ್‌ತನೇ ಕುರುಬಾಟ್. ತಮ್ಮದೇ ಆದ ಕನ್ನಡನೂ ಅಲ್ಲದ, ಕೊಡವ ಬಾಷೆನೂ ಅಲ್ಲದ ಹಳೆಗನ್ನಡನ ಹೋಲುವ ಬಾಸೆಲಿ ಹಾಡಿಕಂಡ್ ವಿಶಿಷ್ಟ ರೀತಿಲಿ ಕಿಚ್ಚಿನ ಸುತ್ತ ಕೋಲು ಹೊಡಕಂಡ್ ಕೊಣ್‌ದವೆ. ಕೈಲಿ ಹಿಡ್‌ದ ಸುಮಾರು ಒಂದ್ ಅಡಿ ಉದ್ದದ ಕೋಲ್‌ನ ಬಾರಿ ನ್ಯಾಕ್‌ಲಿ ತಿರ್‌ಗಿಸಿಕಂಡ್ ಕಾಡ್‌ನ ದೇವತೆನ ಬಗ್ಗೆ ಹಾಡಿಕಂಡ್ ಕೊಣ್‌ದವೆ. ಹಿಮ್ಮೇಳಕೆ ಯಾದೇ ವಾದ್ಯಗ ಇರದಿದ್ದರೂ ಪೊದ್ಯನ ಅನುಸರ್‌ಸಿ ಬಾರೀ ರಬಸಲಿ ಶಿಸ್ತ್‌ಲಿ ಕೊಣ್ಡವೆ. ತಿತಿಮತಿ ಮತ್ತೆ ಕಾನೂರ್‌ನ ಕಾಡುಗಳ್‌ಲಿ ವಾಸಿಸುವ ಕುರುಬರ್ ಈ ಕೊಣ್‌ತನ ಪ್ರದರ್ಶಿಸುವೆ. (ಸಿ.ಎಸ್.)

**ಕೈತಲೆ ಆಟ್ :** ಬದ್ರಕಾಳಿ ಆರಾದನೆನ ಹಿನ್ನೆಲೆಲಿ ಬೆಳ್ದ್ ಬಂದಿರುವ 'ಕೈತಲೆ ಆಟ್' ಕೊಡಗ್ ಜಿಲ್ಲೆಗೆ ಮೀಸಲಾದ ವಿಶಿಷ್ಟ ಕಲಾ ಪ್ರಕಾರ, ಮಹಾಕಾಳಿ ದೇಸ್ತಾನಗಳ್‌ಲಿ ಮಾತ್ರನೇ ಪ್ರದರ್ಶನ ಆವ 'ಕೈತಲೆ ಆಟ್'ಲಿ ಗಂಡ್‌ಸ್‌ಗ ಮಾತ್ರ ಪಾಲ್ಗೊಂಡವೆ. 'ಕೈತಲೆ ಆಟ್' ಪ್ರದರ್ಶನಕೆ ಇಸ್ಟೇ ಜೆನ ಇರೋಕುಂತೇಳುವ ನಿಯಮ ಏನಿಲ್ಲೆ. ಯಾರು ಬೇಕಾರೂ ಈ ಕೊಣ್‌ತಲಿ ಸೇರಕ್. ಆದರೆ ಅವು ಕಾಳಿನ ಆರಾದಕರಾಗಿರೋಕು ಅಷ್ಟೆ. ಬಿಳಿನ ಕುಪ್ಪಸ ತೊಟ್ಟು, ದಟ್ಟಿ ಉಟ್ಟು, ತಲೆಗೆ ರುಮಾಲು ಕಟ್ಟಿ ಕೈಲಿ ಚೌರಿ ಹಿಡ್ದ್ ಕೊಣೆವ ಕಲಾವಿದರ್‌ಗೆ ಹಿಮ್ಮೇಳದ ದನಿನ ಕೊಡುವ ಪರೆ, ಜಾಗಟೆಯಕಾರದ ಕಂಚಿನ ತಟ್ಟೆ ಮತ್ತೆ ಡೋಲು, ಜಾಗಟೆನ ಸುಮಾರ್ ಒಂದೂವರೆ ಅಡಿ ಉದ್ದದ ಮರದ ತುಂಡುಂದ ಬೊಡಿಯಕಾಕನ ವಿಸೇಸ ನಮೂನೆನ ನಾದ ಹೊರಹೊಮ್ಮಿದೆ. ಕೊಣ್‌ತಲಿನು ಆರೇಳ್ ಬಗೆಗ ಒಳೊ. ಮಾರ್ಚ್ ತಿಂಗಳ ನೊಡುಬಾಗಲಿ ಕೊಡಗ್‌ಲಿ ಇರ್‌ವ ಬದ್ರಕಾಳಿ ದೇಸ್ತಾನಗಳ್‌ಲಿ ಹಗಲ್‌ಲಿ ನಡೆವ ಈ ಕೊಣ್‌ತ ಬಯ-ಬಕ್ತಿ ಗಳೊಟ್ಟಿಗೆ ಮನರಂಜೆನೆನ ಕೊಟ್ಟದೆ.

ಕೋಲ್‌ನ ಅತಿ ಜಾಣ್ಮೆಂದ ತಿರ್‌ಗಿಸಿಕಂಡ್ ಕಾಡ್‌ನ ದೇವತೆನ ಬಗ್ಗೆ ಪೊದ್ಯ ಹೇಳಿಕಂಡ್ ಕೊಣ್‌ದವೆ. ಹಿಮ್ಮೇಳಕೆ ಯಾದೇ ವಾದ್ಯಗ ಇಲ್ಲದಿದ್ದರೂ ಹಾಡ್‌ನ ಅನುಸರಿಸಿ ಬಾರೀ ರಬಸಲಿ ಶಿಸ್ತಿಗಿಂತ ಕೊಣ್‌ದವೆ. ತಿತಿಮತಿ ಮತ್ತೆ ಕಾನೂರಿನ ಕಾಡುಗಳ್‌ಲಿ ಬೊದ್‌ಕುವ ಕುರುಬರ್ ಈ ಕೊಣ್‌ತನ ಪ್ರದರ್ಶಿಸುವೆ. (ಸಿ.ಎಸ್.)

**ಕೊರ್‌ತಿ ಆಟ :** ಕೊಡವರ ತೋಟಗಳ್‌ಲಿ ಕೆಲ್‌ಸಕೆ ಬಂದ ತಮಿಳ್‌ನಾಡ್‌ನ ಜೆನ ತಮ್ಮೊಟ್ಟಿಗೆ ಕೊಡಗ್‌ಗೆ ತಕಂಡ್‌ಬಂದ ಕಲೆ ಕೊರ್‌ತಿ ಆಟ, ಸ್ವಚ್ಚಂದವಾದ ಮನರಂಜೆನಾ ಕಲೆ, ಕೋಲಾಟಲಿ ಐದಾರು ಜೆನಗ ಕಲಾವಿದರ್ ಇದ್ದವೆ. ತಲೆಗೆ ಬಟ್ಟೆನ ಚೆಲ್ಲ್‌ಗಳ್‌ನ ಮೆಡ್ದ್ ಮಾಲೆಯಾಗಿ ಕಟ್ಟಿದ ಪೇಟ, ಕೊರಳಿಗೆ ಮಣಿಸರ, ಮುಕ ಮತ್ತೆ ಮೈಗೆಲ್ಲಾ ಕಪ್ಪು-ಕೆಂಪು ಬಣ್ಣ ಮೆತ್ತಿ ಕಾಲ್‌ಗೆ ಗೆಜ್ಜೆ ಕಟ್ಟಿ ಕೊಣ್‌ದವೆ. ಕೊರ್‌ತಿ ಕೊಣ್‌ತಕೆ ಹಿಮ್ಮೇಳದ ವಾದ್ಯ ಕಾಲಿ ಡಬ್ಬಗ.

ಕೊಣ್‌ತಲಿ ಇಬ್ಬರು ಹೆಣ್ಣು ವೇಷದಾರಿಗ.ಹಬ್ಬ ಹರಿದಿನಗಳ್‌ಲಿ,ಕುಸಿನ ಸಮಾರಂಬಗಳ್‌ಲಿ ಕೈಲಿ ಹಿಡ್ದ ಕಾಲಿ ಡಬ್ಬಗಳ ಡಣ–ಡಣ ಸದ್ದ್ ಬಾವಂಗೆ ಬೊಟ್ಟಿಕಂಡ್, ಅದರ ಗತ್ತಿಗೆ ತಕ್ಕಂಗೆ ಕೊಣ್‌ದವೆ. ಹೆಣ್ಣ್ ವೇಸದಾರಿಗ ಮತ್ತೆ ಗಂಡ್ ವೇಸದಾರಿಗ ಕೂಡಿದ್ ಹಕ್ಕಿಪಿಕ್ಕಿಯವರ ಆಟಗಳ್‌ನ ಅಬಿನಯಿಸುವೆ. ಮನೆ ಮನೆಗಳಿಗೆ ಹೋಗಿ ಅವರ ಇಜ್ಜಲ್‌ಲಿ ಕೊಣಿಯದ್ ಮನೆಯವರ್‌ಂದ ದುಡ್ಮೆನ ರೂಪಲಿ ಅಕ್ಕಿಬತ್ತ ಪಡ್ದವೆ. (ಸಿ.ಎಸ್.)

**ಕೊಂಬಾಟ್ :** ಕೊಡಗ್ ಜಿಲ್ಲೆಲಿ ಕಂಡ್‌ಬಾವ ನಮೂನೆನ ಜೆನಪದ ಕಲೆಗಳ್‌ಲಿ 'ಕೊಂಬಾಟ್' ವಿಸೇಸ ಆದ ಕೊಣ್‌ತ., ದೇವತಾರಾದನೆನ ಹಿನ್ನೆಲೆಲಿ ಬೆಳ್‌ದ್ ಬಂದಿರುವ ಈ ಕೊಣ್‌ತನ ಹಬ್ಬ ಹುಣ್ಣಿಮೆಗಳ್‌ಲಿ, ಜಾತ್ರೆ ಉತ್ಸವಗಳ್‌ಲಿ ಪ್ರದರ್ಶಿಸುವೆ. ಕೊಡಗ್‌ನ ಸಾಂಪ್ರದಾಯಿಕ ವೇಷಬೂಷಣಗಳ್‌ನ ದರಿಸಿದ ಕಲಾವಿದರ್ ಕೈಲಿ ಜಿಂಕೆನ ಕೊಂಬುಗಳ್‌ನ ಹಿಡ್ದ್ ಇಲ್ಲರೆ ತಲೆನ ಮೇಲೆ ಸಾರಜ್ಜದ ಕೊಂಬುಗಳ ಕಟ್ಟಿಕಂಡ್ ಅಲ್ಲರೆ ಕೈಲಿ ನವಿಲುಗರಿ ತೆಂಡೆಗಳ್‌ನ ಹಿಡ್‌ದ್ ಕೊಣ್ದವೆ. ಕೊಣ್‌ತಲಿ ಇಸ್ಟೇ ಜೆನ ಕಲಾವಿದರಿರೋಕು ತ ನಿಯಮ ಏನ್ ಇಲ್ಲೆ. ಕಲಾವಿದರ್ ಎರಡ್ ಸಾಲ್‌ಲಿ ಪರಸ್ಪರ ಎದುರೆದುರ ನಿತ್ತ್ ಸುತ್ತು ಸಾಲ್‌ಲಿ ಕೊಣ್‌ದವೆ. ಕೊಣಿಯಕಾಕನ ಜಿಂಕೆನ ಕೊಂಬು ಇಲ್ಲರೆ ಪೀಲಿ ಹಿಡ್‌ದ ಕೈಗಳ್‌ನ ತರ ತರಲಿ ಬೀಸುವೆ.


ಕೊಂಬಾಟ್

ಬಸ್ಮಾಸುರನ ಸಂಹಾರ ಮಾಡಿಕೆ ವಿಷ್ಣು ಅವತಾರ ಎತ್ತಿಕಾಕನ ಮಾಡ್‌ದ ನಾನಾ ಬಗೆನ ನೃತ್ಯಗಳ್‌ಲಿ, ಒಂದ್ ಸರ್‌ತಿ ಕೊಂಬುನ ಹಿಡ್‌ದ್ ಮತ್ತೊಂದು ಸರತಿ ಪೀಲಿನ ಹಿಡ್‌ದ್ ನರ್‌ತನ ಮಾಡ್‌ತ್. ಅದರ ಪ್ರತಿರೂಪವಾಗಿ ಕೊಂಬಾಟ್ ಕೊಣ್‌ತನ ಪ್ರದರ್ಶಿಸಲಾದೆ ತೇಳಿ ಕೊಡವರ್ ನಂಬುವೆ.

ಉತ್ತರ ಕೊಡಗ್‌ನ ಪಾರಾಣಿ ಮತ್ತೆ ಕೊಳಂಚೇರಿ ಸುತ್ತಮುತ್ತ ಈ ಕೊಣ್‌ತ ಕಂಡುಬಂದದೆ. ದುಡಿ, ಡೋಲು, ಕೊಂಬು, ಪರೆ, ತಾಳ ವಾದ್ಯಗ ಹಿಮ್ಮೇಳದ ವಾದ್ಯಗ. (ಸಿ.ಎಸ್.)

**ಕೊಂಬು ಕೊಟ್ಟ ವಾಲಗ :** ಕೊಂಬುಕೊಟ್ಟ ವಾಲಗ ನಮ್ಮ ಚಿಟ್ ಮೇಳಲಿ, ಕರಡೆ ಮಜಲಿನಂಗೆ ವಾದ್ಯ ಮೇಳ. ಈ ಮೇಳಲಿ ಕೊಂಬು, ಮೌರಿ, ಶ್ರುತಿ, ತಾಳ, ಪರೆ, ಡೋಲುಗಳಿದ್ದವೆ. ಕೊಡವರ ಹಬ್ಬಹರಿದಿನಗಳ್‌ಲಿ ಜಾತ್ರೆ, ಉತ್ಸವಗಳ್‌ಲಿ, ದೇಸ್ತಾನಗಳ ಮುಂದೆ ಈ ವಾದ್ಯಮೇಳನ ಪ್ರದರ್ಶಿಸುವೆ. ಕೊಂಬು ಕೊಟ್ಟ ವಾಲಗಲಿ ಸಾಮಾನ್ಯ ಆಗಿ ಏಳು ಜೆನ ಇದ್ದ್ ಒಬ್ಬೊಬ್ಬನು ಒಂದೊಂದು ವಾದ್ಯನ ನುಡ್ಸುವೆ. ಇಡ್ಕೆ ಸಪ್ತ ವಾದ್ಯಮೇಳ ತೇಳಿನೂ ಕರಿಯೋದುಟ್ಟು. ಕಲಾವಿದರ್ ತಲೆಗೆ ಪೇಟಿ, ಅಂಗಿ, ಅಂಗಿನ ಮೇಲೊಂದು ಕರಿಯ ಕೋಟು, ದಟ್ಟಿ ಪಂಚೆ, ಹೆಗಲ ಮೇಲೊಂದು ಶಲ್ಯ, ಸೊಂಟಕ್ಕೆ ರೇಷ್ಮೆ ವಸ್ತ್ರದ ನಡುಕಟ್ಟು ತೊಟ್ಟವೆ.

ಕೊಂಬು ಕೊಟ್ಟ ವಾಲಗದ ಕಲಾವಿದರ್ ಅನಕ್ಷರಸ್ತರಾದರೂ ಸಂಗೀತ ಜ್ಞಾನವುಳ್ಳವು. ಯಾವ ಯಾವ ಹೊತ್ತುಲಿ ಎಂತ ರಾಗಗಳ್‌ನ ನುಡ್ಸೊಕು ತೇಳುವ ಪರಿಜ್ಞಾನನ ಇರವು. ವೈವಿದ್ಯಮಯ ರಾಗ–ಗತಿಗಳ ಸರಕ್ ಇವರ್‌ಲಿ ಉಟ್ಟು.

ಕೊಂಬು ಕೊಟ್ಟ ವಾಲಗದ ರಾಗ ಗತಿಗೆ ಕೊಡವರ್ ಗತ್ತಿನ ಹೆಜ್ಜೆಗಳ್‌ನ ಹಾಕಂಡ್ ಕೊಣ್ದವೆ. ಈ ವಾದ್ಯತಂಡವಿಲ್ಲದೆ ಕೊಡಗ್‌ನ ಬಹುತೇಕ ಯಾವ ಜೆನಪದ ಕಲೆ, ಪ್ರದರ್ಶನ, ಸುಬ – ಅಸುಬ ಕಾರ್ಯಕ್ರಮಗಳೂ ನಡೆಯೋದ್‌ಲೆ. ಅಮ್ಮತ್ತಿ ಮತ್ತೆ ಹುದಿಕೇರಿಗಳ್‌ಲಿರುವ ತಂಡಗಳಿಗೆ ಒಳ್ಳ ಹೆಸರುಟ್ಟು. (ಸಿ.ಎಸ್.)

**ಜೋಯಿಪಾಟ್ :** ಹುತ್ತರಿ ಹಬ್ಬದ ಮಾರನೆ ದಿನ ಕೊಡವರ್ ಕೊಣೆವ ಜೋಯಪಾಟ ಕೊಣ್‌ತ. ಬೂತ–ವರ್‌ತಮಾನ ಬವಿಸ್ಯದ ಸಂಗತಿಗಳ್‌ನ ಅಬಿವ್ಯಕ್ತಿಸುವ ವಿಶಿಷ್ಟ ಕಲಾ ಪ್ರಕಾರ, ಬಯಲುಸೀಮೆನ ವೀರಗಾಸೆ ಮತ್ತೆ ವೀರಬದ್ರನ ಕೊಣ್‌ತದ ಹಿನ್ನೆಲೆನೆ ಜೋಯಿಪಾಣೆ ಕೊಣ್‌ತಕ್ಕೆ ಉಟ್ಟು. ದಕ್ಷಬ್ರಹ್ಮನ ಯಜ್ಞಕುಂಡಕೆ ಪಾರ್‌ವತಿ ಬಲಿಯಾದ ವಿಚಾರ ತಿಳ್ದ ಪರಶಿವ ಉಗ್ರ ಕೋಪಂದ ತನ್ನ ಜಟೆನ ಕಿತ್ತ್ ನೆಲಕ್ಕೆ ಬೊಡಿಯಕಾಕನ ಹುಟ್ಟಿದ ವೀರಬದ್ರ ದಕ್ಷಯಜ್ಞನ ದ್ವಂಸ ಮಾಡ್‌ತ್. ಈ ಹಿನ್ನೆಲೆಲಿ ಕೊಣಿಯುವ ಜೋಯಿಪಾಟ್' ಕೊಣ್‌ತದ ಪೊದ್ಯಗಳೇ ಜ್ಯೋತಿಷ್ಯಪಾಟ್, ಜೋಯಿಪಾಟ್ ಕೊಣ್‌ತಲಿ ಹತ್ತ್ ಜೆನ ಕಲಾವಿದರಿರ್ ಇದ್ದವೆ. ನಾಲ್ಕ್ ಜೆನ ಕಲಾವಿದರ್ ಕೊಡವರ

ಸಾಂಪ್ರದಾಯಿಕ ವೇಷಬೂಷಣಗಳ್‌ನ ತೊಟ್ಟಿದ್ದವೆ. ಒಳ್ದ ಆರ್ ಜೆನ ಕಲಾವಿದರ್ ವಿವಿದ ಬಗೆನ ವೇಸಗಳ ತೊಟ್ಟಿದ್ದವೆ. ಒಬ್ಬ ಹೆಣ್ಣ್ ವೇಸ ಹಾಕಿರೆ, ಮತ್ತೊಬ್ಬ ಬಿಳಿನ ಕುಪ್ಪಸ ತೊಟ್ಟು ಒಂದ್ ಕೈಲಿ ಬೆತ್ತ ಮತ್ತೊಂದು ಕೈಲಿ ಪರಿಯ ಹಿಡ್ದ ಕುರುಡನ ವೇಸ, ಇನ್ನೊಬ್ಬ ಮೈಗೆ ಚಿಂದಿ ಬಟ್ಟೆಗಳ್‌ನ ಉಟ್ಟು ಬೀಲ ಕಟ್ಟಿಕಂಡ್ ಮಂಗನ ವೇಸ, ಮರದ ಕತ್ತಿನ ಕೈಲಿ ಹಿಡ್ದ ಕೊರಮನ ವೇಸ, ಬಾಳೆನ ಚಾಂಬರೆ ಕಟ್ಟಿ ಕೊಕ್ಕರೆ ಗಳಂಗೆ ವೇಸ ಹಾಕುವವು ಹಿಂಗೆ ವೈವಿದ್ಯಮಯ ವೇಸದಾರಿಗ ಇದ್ದವೆ. ಇದೆಲ್ಲ ಪರೆ ಇಲ್ಲರೆ ಮೇದರ ಡೋಲು, ಜಾಗಟೆಯಾಕಾರದ ಕಂಚಿನ ತಟ್ಟೆ, ದುಡಿ ವಾದ್ಯಗಳ ಹಿಮ್ಮೇಳದ ಗತ್ತಿಗೆ ತಕ್ಕಂಗೆ ಕೊಣ್ದವೆ. (ಸಿ.ಎಸ್.)

**ಡೋಲುಪಾಟ್ :** ಕೊಡವರ್‌ಲಿ ಬಗವತಿ ಮತ್ತೆ ಬದ್ರಕಾಳಿ ಹಬ್ಬದ ಸಂದರ್‌ಬಗಳ್‌ಲಿ ಕೊಣೆವ ಡೋಲುಪಾಟ್ ಒಂದ್ ಗಾಯನ ಕಲೆ. ಕೊಡವರ್ ಮತ್ತೆ ಕೊಡಗ್‌ಲಿ ವಾಸಿಸುವ ಹರಿಜೆನರ್ ಈ ಕಲೆನ ಪ್ರದರ್ಶಿಸುವೆ. ಕೊಡವರ್ ತಮ್ಮ ಸಾಂಪ್ರದಾಯಿಕ ವೇಸಗಳ್‌ನ ದರಿಸಿ ಸೊಂಟಕ್ಕೆ ಕಟ್ಟಿಕೊಂಡ ಸಣ್ಣ ಡೋಲು ಇಲ್ಲವೆ ದುಡಿಗಳ್‌ನ ಬಾರಿಸಿಕಂಡ್ ಹಾಡಿರೆ, ಹರಿಜೆನರ್ ತಮ್ಮ ದಿನನಿತ್ಯದ ಬಟ್ಡೆನೇ ತಂದ್ ತೊಟ್ಟು ಹಾಡುವೆ. ಹಾಡಿಗೆ ಡೋಲು ಮತ್ತೆ ತಾಳಗ ಹಿಮ್ಮೇಳ ಕೊಟ್ಟವೆ. ಡೋಲುಪಾಟ್‌ಲಿ ಒಳ್ಳ ಸೊರ ಇರ್‌ವ ಎಸ್ಟ್ ಜೆನ ಕಲಾವಿದರ್ ಬೇಕಾರೂ ಸೇರಕ್.

ದೇವರ ಪೂಜಾದಿ ಹೊತ್ತುಲಿ ನಿರ್‌ದಿಷ್ಟ ಸ್ತಳಗಳ್‌ಲಿ ಈ ಗಾಯನ ಕಲೆ ನಡ್ದದೆ. ಸಾಮಾಜಿಕ ಬೊದ್ಕ್ ಲಾಯ್ಕಿರೋಕು ತೇಳುವ 'ಡೋಲುಪಾಟ್'ನ ಮೂಲ ಆಶಯ, ಡೋಲುಪಾಟ್‌ಲಿ ಮನೆತನಗಳ ಇತಿಯಾಸನ ಹೇಳ್‌ವೆ. ಒಟ್ಟುಲಿ ಜೆನಕೆ ಮನರಂಜೆನೆನ ಕೊಡುದ ರೊಟ್ಟಿಗೆ ಉತ್ತಮ ಜೀವನ ನೀತಿನ ಹೇಳಿ ಕೊಟ್ಟದೆ. (ಸಿ.ಎಸ್.)

**ದಪ್ಪು ಕೊಣ್‌ತ :** ಜೆನಪದ ವಾದ್ಯ ಆದ, ದಪ್ಪುನ ತಾಳಕೆ ಅನುಸಾರವಾಗಿ ಕೊಣಿವ ಕೊಣ್‌ತನ ದಪ್ಪು ಕೊಣ್‌ತ ತೇಳಿ ಕರ್‌ದವೆ. ಚರಂದ ಮಾಡ್‌ದ ದಪ್ಪು ವಾದ್ಯ ಆಕಾರಲಿ ದಮ್ಮಡಿಗಿಂತ ದೊಡ್ಡದಿದ್ದದೆ. ಕುಂಬಳಿ ಮರಂದ ಮಾಡ್ದ ಹೊಳವಿನ ಒಂದ್ ಬಾಯಿಗೆ ಹದ ಮಾಡ್ದ ಆಡ್‌ನ ಚರನ ಬಿಗ್ದ್ ದಪ್ಪು, ವಾದ್ಯನ ಸಿದ್ದಗೊಳಿಸುವೆ. ಕಲಾವಿದಂಗೆಲ್ಲ ಈ ವಾದ್ಯನ ಕೈಲಿ ಹಿಡ್ದ್ ಬಾರ್‌ಸಿಕಂಡ್ ಅದರ ತಾಳಕೆ ತಕ್ಕಂಗೆ ಕೊಣ್ದವೆ.

ಇದ್ ಕೊಡ್‌ಗ್ ಜಿಲ್ಲೆನ ಕೊಂಡಂಗೇರಿ, ಎಮ್ಮೆಮಾಡ್ ಇಂತ ಪ್ರದೇಶಗಳ್‌ಲಿ ಇರುವ ಕೊಡವ ಮಾಪಿಳ್ಳೆ ಜೆನಾಂಗದವರ್‌ಲಿ ಕಂಡ್ ಬಂದದೆ. ಇವು ಹಿಂದೊಮ್ಮೆ ಕೊಡವರಾಗಿದ್ದ್, ಟಿಪ್ಪುಸುಲ್ತಾನನ ಕಾಲಲಿ ಮತಾಂತರಗೊಂಡರೂ, ಕೊಡವ ಸಂಪ್ರದಾಯನ ಉಳ್‌ಸಿಕಂಡಿರುವ, ಆದರೆ ಮಲಯಾಳಿ ಬಾಷೆನ ಮಾತನಾಡುವ ಮುಸ್ಲಿಂ ಜೆನಾಂಗಕ್ಕೆ ಸೇರ್‌ದ ಕೊಡವ ಮಾಪಿಳ್ಳೆಗ. ಮಾಪಿಳ್ಳೆಯವು ತಮ್ಮ ಆಚರಣೆಗಳಿಗೆ ಸಂಮ್ಮಂದಪಟ್ಟಂಗೆ ಹಬ್ಬ ಮುಂತಾದ ಸಂದರ್ಬಗಳ್‌ಲಿ ಈ ಕೊಣ್‌ತನ ದೇಸ್ತಾನ ಹಂಗೆ ಪಳ್ಳಿನ ಹಕ್ಕಲೆ ಪ್ರದರ್ಶಿಸುವೆ. ಕೆಲವೊಮ್ಮೆ ಸಾರ್‌ವಜೆನಿಕರ ಒತ್ತಾಯದ ಮೇರೆಗೆ ಯಾವ ಕಡೆ ಆದರು ಸರಿ ಈ ಕೊಣ್‌ತನ ಕೊಣಿದು ಕಂಡ್ ಬಂದದೆ. ಹೆಚ್ಚಾಗಿ ವಯಸ್ಕರೇ ಇರ್‌ವ ಈ ಕೊಣ್‌ತಲಿ ಕನಿಷ್ಟತೇಳಿರೆ 6ರ್‌ಂದ 30 ಜೆನರವರೆಗೆ ಕಲಾವಿದರಿದ್ದವೆ.ಯಾಗೋಳುನ ಅಂಗಿಗಳಾದ ಟೋಪಿ,ಸರ್ಟ್ ಹಂಗೆ ಸುತ್ತು ಇಜಾರನ ತೊಟ್ಟು ಕೈಲಿ ದಪ್ಪು ವಾದ್ಯನ ಹಿಡ್‌ದಿದ್ದವೆ. ಕೈಲಿ ಇರುವ ದಪ್ಪುನ ತಟ್ಟಿಕಂಡ್, ತಮ್ಮ ದೇವ್‌ರ ಬಗ್ಗೆ ಹಾಡಿಕಂಡ್ ವಿಶಿಷ್ಟ ಹೆಜ್ಜೆಗಳ್‌ಲಿ ಕೊಣ್ದವೆ. ಕೈಲಿನ ದಪ್ಪುನ ತಲೆನ ಮೇಲೆಂದ ತಂದ್ ಮೊಣಕೈಗೆ ಮುಟ್ಟುಸಿ ಮತ್ತೆ ಮುಂಗೈಯಿಂದ ಹೊಡ್ದ್ ಒಮ್ಮೊಮ್ಮೆ ಜೋರ್‌ಲಿ, ಮತ್ತೊಮ್ಮೆ ನಿದಾನಕೆ ಸುತ್ತಕೆ ಕೊಣ್‌ದವೆ. ಈ ಕೊಣ್‌ತಕ್ಕೆ 'ದಪ್ಪರಾವತಿ' 'ದಪ್ಪು ಆಟ' ತೇಳಿನೂ ಹೆಸರುಟ್ಟು. (ಸಿ.ಎಸ್.)

**ಪರಿಯಕಳಿ :** ಇದೊಂದ್ ಬಗೆನ ಯುದ್ದನೃತ್ಯ. ಹಿಂದೆ ಗ್ರಾಮಗಳ ಜೆನಂಗ ಸಮಬಲರಾಗಿ ನಿತ್ತ್ ಈ ಕೊಣ್‌ತಲಿ ಕಾದಾಡುತ್ತಿದ್ದೊ ಗಡ. ದಿನ ಕಲ್ದಾಂಗೆ ವೈಯಕ್ತಿಕ ದ್ವೇಷಾಸೂಯೆಗ ಹೆಚ್ಚಿ ಈ ಕೊಣ್‌ತದ ಅವಕಾಶಗಳ್‌ನ ಬಳ್ಸಿಕಂಡ್ ಎದುರಾಳಿಗಳ ಸದೆಬಡಿಯೋದು ಹೆಚ್ಚಾದಂಗೆ, ನಿಜವಾದ ಕೊಣ್‌ತದ ಅವಕಾಶಗಳ ಕರೆಗಿಸಿ, ಕೆಲವ್ ನಿಬಂದನೆಗಳ ಮೇಲೆ ಕಣ್ಣ್‌ಕಟ್ಟ್‌ಗೆ ಪರಿಯಕಳಿನ ಪ್ರದರ್ಶಿಸುತ್ತ ಬಂದೊಳೊ.

ಹುತ್ತರಿ ಕೋಲಾಟಲಿ ಬಳ್ಸುವಂತ ಎರಡ್ ಬೆತ್ತದ ಕೋಲುಗಳ ಪರಿಯಕಳಿಲಿ ಬಳ್ಸುವೆ. ಸುರೂಗೆ ಕೋಲುಗಳ ಹಿಡ್ದ ಕಲಾವಿದರ್ ಕೊಂಬು ಕೊಟ್ಟ ವಾಲಗ ವಾದ್ಯಗಳ ಹಿಮ್ಮೇಳದೊಟ್ಟಿಗೆ ಲಾಯ್ಕ ಕೊಣ್ದವೆ. ಕೊಣ್‌ತ ನಿಲ್ಲಿಸೋಕುಂತಾ ನಿಗಂಟ್ ಆದ ಕೂಡಲೇ ಮೇದ ಪರೆ ಹೊಡ್ದದೆ. ಕಲಾವಿದರ್ ಎಲ್ಲವೂ ಗುಂಪಾಗಿ ಕೈಲಿ ಹಿಡ್ದ ಕೋಲುಗಳಂದ ಅಣಕದ ಯುದ್ದ ಸುರು ಮಾಡ್‌ವೆ. ಒಂದ್ ಕೋಲ್‌ನ ಎದುರಾಳಿನ ಪೆಟ್ಟು ತಡೆದಕೆ, ಮತ್ತೊಂದ್ ಕೋಲ್‌ನ ಎದುರಾಳಿನ ಮೇಲೆ ಆಕ್ರಮಣ ಮಾಡ್ದಕೆ ಬಳ್‌ಸುವೆ. ಪರಿಯಕಳಿಲಿ ತಟ್ಟೆ ಪರಿಯಕಳಿ ರೋಚಕವಾದ ಕೊಣ್‌ತ,

ಪರಿಯ ಕಲಾವಿದರ್ ಗುಂಪಾಗಿ ಬಾಗವಹಿಸಿರೆ, ತಟ್ಟೆ ಪರಿಯಕಳಿಲಿ ಏಕಕಾಲಕೆ ಇಬ್ಬೊರು ಮಾತ್ರ ಹೊಡ್ದಾಡುವೆ. ಬೆತ್ತಗಳ ಬದ್‌ಲಿಗೆ, ಬೆತ್ತದಿಂದ ಮೆಡ್ದ ಗುರಾಣಿಯಾಕಾರದ ತಟ್ಟೆನ ಮತ್ತೆ ಸುಮಾರ್ ಆರ್ ಅಡಿ ಉದ್ದದ ಬೆತ್ತದ ಕೋಲ್‌ನ ಬಳ್‌ಸುವೆ. ಈ ತಟ್ಟೆ ಮತ್ತೆ ಕೋಲುಗ ಗುರಾಣಿ ಮತ್ತೆ ಕಡ್ಗಗಳ ಹಾಂಗೆ ಇದ್ದವೆ.ಎಡಗೈಲಿ ತಟ್ಟೆ, ಬಲಗೈಲಿ ಕೋಲು ಹಿಡ್ದ ಹುಡ್ಗ ಅಕಾಡಕೆ ಇಳ್ದ್ ತನ್ನ ಸಮವಯಸ್ಕರ ದ್ವಂದ್ವಯುದ್ದಕ್ಕೆ ಕರ್‌ದದೆ. "ನಾ ಬಾಳ್, ನೀ ಬಾಳೆ, ಏಡ ಕೊದ ಇಳಿವ ಚಂಜ್ಞಾದಿ ಬಾಳ್, ಇಗ್ಗುತಪ್ಪ ಬಾಳ್, ಬಯಚೂರಪ್ಪ ಬಾಳ್, ಬಾಳ್ ಬಾಳಿರೆ ಬಾಳ್ (ನಾನೂ ಬಾಳಿನೆ. ನೀನೂ ಬಾಳ್, ನನ್ನೊಟ್ಟಿಗೆ ಕಣಕ್ಕಿಳ್ದ ಸ್ನೇಹಿತರ್ ಬಾಳಲಿ, ಇಗ್ಗುತಪ್ಪ ಬೈತೂರಪ್ಪ ದೇವ್ರುಗಳೂ

ಬಾಳಲಿ, ಎಲ್ಲವೂ ಬಾಳಲಿ)' ತ ಪೊದ್ಯ ಹೇಳಿಕಂಡ್ ವೀರ ಕೊಣ್‌ತ ಕೊಣ್ಕಂಡ್ ಕರ್‌ದದೆ. ಹಿಂಗೆ ಕರ್‌ದ ಹೈದನೊಟ್ಟಿಗೆ ಸೆಣ ಸಾಡಿಕೆ ಕಳಕೆ ಇಳಿಂವವನೂ ಸಹ ಅದರಾಂಗೆ ಹಾಡಿಕಂಡ್ ಕಾದಾಡಿಕೆ ಸುರು ಮಾಡ್‌ವೆ.

ಇಬ್ಬೊರೂ ಹಿಮ್ಮೇಳದ ವಾದ್ಯಗಳ ಅಬ್ಬರಕೆ ಸರಿಯಾಗಿ ಕೊಣ್ಕಂಡ್ ಒಬ್ಬರೊಬ್ಬ ಎದುರ್‌ಸಿ ಹೋರಾಡುವೆ. ಒಬ್ಬರೊಬ್ಬರ ಕಾಲ್‌ಗೆ ಹೊಡೆವ, ಅದರ ಕಿಣಿಂದ ತಪ್ಪಿಸಿಕಂಬ, ಹಾರಿ ಹೊಡೆಯಕೆ ನೋಡುವ, ಹಾರ್‌ವ, ಹಿಂಗೆ ಕತ್ತಿ ಹೋರಾಟಲಿ ನಡ್ಸುವ ಎಲ್ಲ ಬಗೆನ ವರಸೆಗಳ ಪರಿಯಕಳಿಲಿ ಕಾಣಕ್. ಕೆಲವ್ ಸರ್‌ತಿ ಇಬ್ಬರೂ ಸಮ ಶಕ್ತಿವಂತರಾಗಿದ್ದಾಕನ ಹೋರಾಟ ಬೀಕರ ರೂಪ ಪಡೆದುಟ್ಟು, ಆಕನ ಪ್ರೇಕ್ಷಕರ್ ನಡುಗೆ ಬಂದ್ ಇಬ್ಬರ್‌ನೂ ಸಮಾದಾನಪಡ್ಸುವೆ. ಪರಿಯಕಳಿ ಹೋರಾಟಲಿ ಯಾರೂ ಸೊಂಟದ ಮೇಲೆಬಾಗಕೆ ಹೊಡೆಯ ಕಾಗದ್, ಹಂಗೇನಾರ್ ಹೊಡ್‌ದರೆ ದಂಡ ತೆರಕಾದೆ. ಹೋರಾಟದ ಕಡೆಲಿ ಸ್ಪರ್ದಿಗ ಇಬ್ಬೊರೂ ಒಬ್ಬರ್‌ಂದೊಬ್ಬ ತೊಬ್ಬಿಕಂಡ್ ಕೊಣ್ದ್ ಮುಗ್ಸುವೆ.ಕೊಡಗ್‌ನ ದೇವಣಗೇರಿ, ಬೆಟ್ಟಗೇರಿ ಇಂತ ಕಡೆಗಳ್‌ಲಿ ಹೆಸ್ರ್‌ವಾಸಿಯಾದ ತಟ್ಟೆ ಪರಿಯಕಳಿ ಕಲಿಗ ಒಳೊ. (ಸಿ.ಎಸ್.)

**ಪೀಲಿಯಾಟ್ :** 'ಪೀಲಿ' ತೇಳಿರೆ ಕೊಡವ ಬಾಸೆಲಿ ನವಿಲುಗರಿಯ ಕಂತೆ, ಬೆನ್ನ್ ಮೇಲೆ ನವಿಲು ಗರಿಗಳ್‌ನ ಕಟ್ಟಿಕಂಡ್ ದುಡಿ, ಡೋಲು, ಕೊಂಬು, ಪರೆ, ತಾಳ ವಾದ್ಯಗಳ ಸಂಗೀತಕೆ ಅನುಗುಣಾಗಿ ಕೋಣೆವ ಕೊಣ್‌ತಕೆ 'ಪೀಲಿಯಾಟ್' ತೇಳಿ ಕರ್‌ದವೆ. ನೋಡ್‌ಕನ ನವಿಲ್‌ನಾಂಗೆ ಕೋಣೆವ ಈ ಪೊರ್‌ಲುನ ಕೊಣ್‌ತ ದೇವತಾರಾದನೆನ ಲೆಕ್ಕಲಿ ಬೆಳ್ದ್ ಬಂದುಟು. ಇಂತಿಷ್ಟೆ ಜೆನಂಗ ಇರೋಕೂಂತ ನಿಯಮ ಏನಿಲ್ಲೆ. ಸಾಮಾನ್ಯಾಗಿ ದೇಸ್ತಾನದ ಹಕ್ಕಲೆ ಪ್ರದರ್ಶಿಸುವ ಈ ಕೊಣ್‌ತಲಿ ಕಲಾವಿದರ್ ದೇಸ್ತಾನದ ಪ್ರಕಾರದ ಸುತ್ತಳು ನವಿಲ್‌ನಂಗೆ ಕೊಣ್ಕಂಡ್, ಬೊಬ್ಬೆ ಹಾಕಂಡ್, ಒನಪು ವಯ್ಯಾರಗಳ ಮಾಡ್ದರ ನೋಡಿಕೆ ಬಾರಿ ಲಾಯ್ಕಿದ್ದದೆ.

ಕೊಡಗ್‌ನ ವೀರಾಜಪೇಟೆ ತಾಲ್ಲೂಕ್‌ನ ಕೆದಮುಳ್ಳೂರು, ಶ್ರೀಮಂಗಲದ ಕಾಡುಗಳ್‌ಲಿ ಬೊದ್ಕುವ ಕುಡಿಯರ ಪೀಲಿಯಾಟ್ ಕೊಣ್‌ತಲಿ ಗಂಡಸರ್ ಪ್ರತ್ಯೇಕವಾಗಿ ಮತ್ತೆ ಹೆಣ್ಮಕ್ಕ ಗಂಡಸರು ಒಟ್ಟಾಗಿ ಕೊಣ್ದವೆ. ಕೊಡವರಂಗೆನೆ ಬಿಳಿನ ನಿಲುವಂಗಿ, ಪಾಯಿಜಾಮ, ನಡುವಿಗೆ ವಸ್ತ್ರ, ತಲೆಗೆ ಪೇಟ ತೊಟ್ಟ ಗಂಡಸರ್ ಮತ್ತೆ ಕೊಡವ ಹೆಂಗಸರಂಗೆ ಕುಡಿಯ ಮಹಿಳೆಯರ್ ನೆರಿಗೆ ಹಿಂದೆಗೆ ಹಾಕಿ ಹೆಗಲ ಮೇಲೆಂದ ಸೆರ್‌ಗ್ ತಂದ್ ಎದೆಗೆ ಕಟ್ಟುವೆ. ಡೋಲುನ ಸದ್ದ್‌ಗನುಗುಣವಾಗಿ ತಮ್ಮ ಎರಡೂ ತೋಳುಗಳನ್ನೆತ್ತಿ ಕೈಗಳ್‌ನ ಬಾಗಿಸಿಕಂಡ್ ಬೊಗ್ಗಿ ಎದ್ದ್ ಹಿಂದೆ ಮುಂದೆ ತಿರ್‌ಗಿಕಂಡ್ ಕೊಣೆವ ರೀತಿ ಬಾರೀ ಪೊರ್‌ಲು.

ಪೀಲಿಯಾಟ್ ಕೊಡಗ್‌ಲಿ ಪ್ರತಿ ವರ್ಷ ನಡೆವ ಬದ್ರಕಾಳಿ ಉತ್ಸವದ ಸಂದರ್‌ಬಲಿ ಹೆಣ್ಣ್ ದೇವ್ರ ಆರಾದನೆಗಾಗಿ ರೂಡಿಗೆ ಬಂದ ಕೊಣ್‌ತ. ಈ ಕೊಣ್‌ತಲಿ ಎಸ್ಟ್ ಜೆನ ಬೇಕರೆ ಇರಕ್. ಇಂತಿಷ್ಟೇ ಜೆನ ಇರೋಕು ತೇಳುವ ನಿಯಮ ಏನಿಲ್ಲೆ. ಸಾಮಾನ್ಯಾಗಿ ದೇಸ್ತಾನಗಳ ಹಕ್ಕಲೆ ಪ್ರದರ್ಶಿಸುವ ಈ ಕೊಣ್‌ತಲಿ ಕಲಾವಿದರ್ ದೇಸ್ತಾನದ ಸುತ್ತ ನವಿಲಿನಂಗೆ ಕುಪ್ಪಳಿಸಿಕಂಡ್, ಕೇಕೆ ಹಾಕಂಡ್, ಒನಪು ವಯ್ಯಾರಗಳ್‌ನ ಪ್ರದರ್ಶಿಸುದರ್‌ನ ನೋಡಿಕೆ ಬಾಳ ಲಾಯ್ಕಿದ್ದದೆ. (ಸಿ.ಎಸ್.)

**ಬಾಳೋಪಾಟ್ :** ಕೊಡಗ್‌ಲಿ ಮಾತ್ರ ಕೇಳಿ ಬಾವ ಪ್ರದಾನಾಗಿ ಜೀವನದ ಬಗ್ಗೆ ಹಾಡಾದರ್‌ಂದ 'ಬಾಳೋಪಾಟ್' ತೇಳಿ ಹೆಸರಾಗುಟು. ಹಬ್ಬ ಹರಿದಿನಗಳ್‌ಲಿ, ಉತ್ಸವ ಸಮಾರಂಬಗಳ್‌ಲಿ ಕೊಡವರಂಗೆ ವೇಸ ಹಾಕಂಡ್ ದುಡಿ ವಾದ್ಯನ ಬೊಟ್ಟಿಕಂಡ್ ಹಾಡುವೆ. ಈ ಪೊದ್ಯಗಳ ಹೇಳ್‌ವ ಗುಂಪುಲಿ ನಾಕ್ ಜೆನ ಇದ್ದವೆ. ಇವೆಲ್ಲವೂ ಬಿಳಿನ ಬಣ್ಣದ ಉದ್ದದ ನಿಲುವಂಗಿನ ಹಾಕಂಡವೆ. ಇದರ ಕುಪ್ಪಿಯ ತೇಳುವೆ. ನಿಲುವಂಗಿನ ಮೇಲೆ ಸೊಂಟಕೆ ಮೂರು ನಾಕ್ ಸುತ್ತು ಸುತ್ತಿದ ಉದ್ದ ಇರ್‌ವ ಕೆಂಪು ಬಣ್ಣದ ರೇಷ್ಮೆ ದಟ್ಟಿನ (ಇದರ್‌ನ ಚೇಲೆ ತೇಳುವೆ) ಕಟ್ಟಿಕೊಂಡಿದ್ದವೆ. ಬಿಳಿನ ರುಮಾಲು ಇಲ್ಲರೆ ಕೆಂಪು ಬಟ್ಟೆನ ತಲೆಗೆ ಕಟ್ಟಿಕಂಡ್ ಕೈಲಿ ಕಂಚಿಂದ ಮಾಡ್ದ ದುಡಿವಾದ್ಯನ ಹಿಡ್ದಿದ್ದವೆ. ಇವೆಲ್ಲವ್ ಒಂದ್ ಕಡೆ ನಿತ್ತ್ ದುಡಿವಾದ್ಯನ ಬೊಟ್ಟಿಕಂಡ್ ಅದರ ನಾದದ ಗತ್ತ್‌ಗೆ ಅನುಸಾರಾಗಿ ಪೊದ್ಯಗಳ ಹೇಳಿಕೆ ಸುರು ಮಾಡ್‌ವೆ. ಸುರೂಗೆ ಗುಂಪುನ ಇಬ್ಬೊರು ಪೊದ್ಯದ ಮುಂದೆ ಎರಡ್ ಸಾಲುಗಳ ಹೇಳಿ ಸುರು ಮಾಡ್‌ವೆ. ಮತ್ತಿಬ್ಬೊರು ಅದರ ಮುಂದೆನ ಎರ್‌ಡ್ ಸಾಲುಗಳ ಹೇಳಿ ಮುಂದರ್‌ಸಿಕಂಡ್. ಇದೇ ಕ್ರಮಲಿ ಪೊದ್ಯಗಳ ಹೇಳಿಕಂಡ್ ಹೋದವೆ. ಹಾಡ್ ಮತ್ತೆ ವಾದ್ಯಗ ಸಮಗೂಡಿ ಸಾಗುವ ಬಾಳೋಪಾಟ್‌ಲಿ ಕಲಾವಿದರ್ ಒಂದೇ ಜಾಗೆಲಿ ನಿತ್ತ್ ಹಾಡುದರ್‌ಂದ ಕೊಣ್‌ತ ಇಲ್ಲೆ. (ಸಿ.ಎಸ್.)

**ಬಿಲ್ಲಾಟ್ :** ಕೊಡಗ್‌ಲಿ ಪ್ರತಿ ವರ್‌ಸ ನಡೆವ ಬದ್ರಕಾಳಿ ಉತ್ಸವದ ಹೊತ್ತುಲಿ ಹೆಣ್ಣ್ ದೇವರ ಆರಾದನೆಗಾಗಿ ರೂಡಿಗೆ ಬಂದ ಕೊಣ್‌ತ. ಈ ಕೊಣ್‌ತಲಿ ಎಸ್ಟ್ ಜೆನ ಬೇಕಾರೂ ಬಾಗವಹಿಸಕ್. ಹಾಡುವವು ಬಿಳಿನ ಬಣ್ಣದ 'ಕುಪ್ಪಿಯ'ನ, ಕುಣಿಯುವವು ಕಪ್ಪು ಬಣ್ಣದ 'ಕುಪ್ಪಿಯ'ನ ದರಿಸುವೆ. ಕೊಡವರ ವೇಸನ ದರಿಸುವ ಈ ಕಲಾವಿದರ್ ಕೈಲಿ ಸಣ್ಣ ಚೌರಿ, ಕೊಂಬುಗಳ ಹಿಡ್‌ಕಂಡ್ ಮೇದರ ಗಂಟೆನ ನಾದಕೆ ಸರಿಯಾಗಿ ಕೊಣ್ದವೆ. ಈ ಕೊಣ್‌ತಲಿ ಕೊಡವರ್ ಕೋಣಿಯವು ಆದರೆ ಮೇದರ್ ಹಿಮ್ಮೇಳ ಒದ್ಗುಸುವೆ.

'ಮಣಿ' ತೇಳ್ವ ವಾದ್ಯನ ಈ ಕೊಣ್‌ತಕೆ ವಿಸೇಸಾಗಿ ಬಳ್ಸುವೆ. ಕಂಚಿಂದ ಮಾಡ್ದ ಈ ವಾದ್ಯ 10 ಅಂಗುಲ ಸುತ್ತಳತೆಂದ ಕೂಡಿದ್ದದೆ. ಒಂದ್ ಅಡಿ ಉದ್ದ ಒಂದೂವರೆ ಅಂಗುಲ ದಪ್ಪದ ಗಡುಸಾದ ಮರದ ಕೋಲ್‌ಂದ ಅದರ ಬೊಡಿಯುವು ಇದರ ಒಟ್ಟಿಗೆ ಸಂದರ್ಬಾನುಸಾರವಾಗಿ ಎರಡು ಪರೆನ ಬಳಸುವೆ. (ಸಿ.ಎಸ್.)




**ಬೋಳುಕಾಟ್ :** ಬೊಳುಕಾಟ್ ಕೊಡವರ್‌ಲಿ ರೂಡಿಲಿರ್‌ವ ಸಮರ ಕೊಣ್‌ತ. ಈ ಕೊಣ್‌ತ ಕೊಡವರ ವೀರ ಪರಂಪರೆನ ಶೌರ ಸಾಹಸಗಳ ಬಾವನಾತ್ಮಕ ವೈವಿದ್ಯತೆನ ತೋರ್‌ಸಿದೆ. ಸದ್ಯಕೆ ಬೊಳುಕಾಟ್ ಮನರಂಜೆನೆನ ಆಟ ಆಗಿ ಕೊಡಗ್ ಜಿಲ್ಲೆಲಿ ಒಳ್ಕಂಡ್ ಬಂದುಟು. ಬೊಳಕ್ ತೇಳಿರೆ ಕೊಡವ ಬಾಸೆಲಿ ಬೆಳ್ಕ್, ದೀಪ ತೇಳಿ ಅರ್ತ. ಪರಶಿವ



ಬೋಳುಕಾಟ್

ಬಸ್ಮಾಸುರನ ಸಂಹಾರ ಮಾಡ್ದ ಮೇಲೆ ವೀರಾವೇಶಲಿ 32 ಬಗೆನ ನೃತ್ಯ ಪ್ರಕಾರಗಳ ಪ್ರದರ್ಶಿಸಿತ್ ಗಡ. ಅದರ ಪ್ರತಿರೂಪವಾದ ಬೊಳುಕಾಟ ಸನಾ ಒಂದ್ ಬಗೆನ ನೃತ್ಯಗಡ. ಬೆಳಕ್‌ನ ಸುತ್ತ ನಮನಮೂನೆಲಿ ಕೊಡವ ಗಂಡಸ್‌ಗ ಸುಮಾರು 17 ಬಗೆನ ಕೊಣ್‌ತ ಹಾಕುವೆ.

ಬೋಳುಕಾಟ್‌ಲಿ ಇಷ್ಟೇ ಕಲಾವಿದರ್ ಇರೋಕು ತೇಳುವ ನಿಯಮ ಇಲ್ಲೆ ಆದರೂ ಸುಮಾರ್ 15 ರಿಂದ 20 ಜೆನ ಪಾಲ್ಗೊಂಡವೆ. ತಮ್ಮ ಸಾಂಪ್ರದಾಯಿಕ ವೇಷಬೂಸಣಗ ಆದ ಬಿಳಿನ ಅಂಗಿ, ಅದರ ಮೇಲೊಂದ್ ಕರಿಯ ನಿಲುವಂಗಿ, ತಲೆಗೆ ಬಿಳಿನ ರುಮಾಲ್, ಸೊಂಟಕೆ ರೇಷ್ಮೆ ಪಟ್ಟಿ ಕಟ್ಟಿ ಪೀಚೆಕತ್ತಿ ಸೆಕ್ಕಿಸಿಕಂಡ್ ಎಡಗೈಲಿ ಚಾಮರ, ಬಲಗೈಲಿ ಬಿಚ್ಚುಗತ್ತಿ ಹಿಡ್ದ್ ಎಣ್ಣೆ ದೀಪದ ಸುತ್ತಕೆ ನಿತ್ತವೆ. ಹಾಡೊವು ಕುತ್ತೆಂಬೊಳಿಚದ ಸುತ್ತ ಬಂದ್ ಪ್ರಶಸ್ತಿ ವೇದಿಕೆಲಿ ನಿತ್ತ್ ತಮ್ಮ ಸಾಂಪ್ರದಾಯಿಕ ದುಡಿ ವಾದ್ಯ ಬಾರಿಸಿಕಂಡ್ ಹಾಡುವೆ. ತಂಡದ ನಾಯಕ ಪೊದ್ಯದೊಟ್ಟಿಗೆ ಕೊಣ್‌ತ ಸುರು ಮಾಡ್‌ದೆ. ಆಗ ಎಲ್ಲವೂ ಚಾಮರಗಳ್‌ನ ಬೀಸಿಕಂಡ್ ಕೊಣ್‌ದವೆ. ಕೊಣ್‌ತಕ್ಕೆ ಹಿನ್ನೆಲೆ ಆಗಿದ್ ಪರೆ, ಡೋಲು, ತಾಳ ವಾದ್ಯಗಳ್‌ನ ಬಳ್‌ಸುವೆ.

ವಾದ್ಯಗಳ ಸದ್ದ್‌ಗೆ ಸರಿಯಾಗಿ ಗತ್ತ್‌ನ ಹೆಜ್ಜೆಗಳ ಹಾಕಂಡ್ ಮಂಡಲಾಕಾರಲಿ ಕೊಣ್ದವೆ.ಬಾವಸೂಚಕ ಉದ್ಗಾರಗ ಆದ ಹೋ, ಹೇ, ಹಾ ತೇಳಿ ಕೂಗಿ ಕಂಡ್ ಕೊಣ್‌ತದ ಗತಿನ ಬದಲ್ಸುವೆ. ಕೊಣ್‌ತದ ಕೆಲವ್ ನಮೂನೆಗಂತು ನೋಡವರ ರೋಮ ಕುತ್ತ ಮಾಡ್‌ವಂಗಿದ್ದದೆ. ಕೈಲಿ ಹಿಡ್ದಿರುವ ಕತ್ತಿಗ ಬೇರೆಯ್ಕೆ ತಾಂಗದಂಗೆ ಬಾರಿ ಜಾಕ್ರತೆಲಿ ಇದ್ದವೆ. (ಸಿ.ಎಸ್.)

**ಆಟಪಾಟ್ :** ಕೊಡಗ್‌ನ ರಂಗಬೂಮಿಲಿ ಏಕಾಂಕಗಳ ಪ್ರದರ್ಶನ ಉಟ್ಟು. ಬಯಲು ಸೀಮೆಲಿ ಇರುವಂಗೆ ಯಕ್ಷಗಾನ, ಬಯಲಾಟ, ದೊಡ್ಡಾಟ–ಸಣ್ಣಾಟ, ಗೊಂಬೆಯಾಟಗ ಕಂಡುಬಾದುಲೆ. ಆದರೆ ಹಾಸ್ಯ ಪ್ರದಾನ ಆದ 'ಬೋಡ್ ನಮ್ಮ ಆಟಪಾಟ್' ತೇಳುವ ರಂಗರೂಪ ಕಂಡುಬಂದದೆ. ಇದರ ಸುಗ್ಗಿ ಮುಗ್ದ ಮೇಲೆನ ದಿನಗಳ್‌ಲಿ ಹಬ್ಬದ ದಿನಗಳ್ಲಿ ಮಾಡ್‌ವೆ. ಸಾಮಾನ್ಯಾಗಿ ಅಕ್ಟೋಬರ್‌ಂದ ಮೇ ತಿಂಗಳವರೆಗೆನ ಕಾಲಲಿ ಇರ್‌ಲ್ ಹೊತ್ತು ನಡ್ಸುವೆ.ಇದ್ ಒಂದ್ ತರಲಿ ಹಗರಣ ಇದ್ದಂಗೆ. ಹೈದಂಗ ಮಾಪಿಳ್ಳೆ, ಒಡ್ಡ, ಸನ್ಯಾಸಿ, ಜೋಗಿ, ನೃತ್ಯಗಾತಿ ಮುಂತಾದ ವೇಸಗಳ ಹಾಕಂಡ್ ಊರು ಮನೆ ಎಲ್ಲನೂ ತಿರ್‌ಗೆಂಡ್ ಬಂದವೆ. ತಮಾಸೆ, ಗೇಲಿನ ಪೊದ್ಯಗಳ ಹಾಡ್ದು, ಬೆತ್ತಂದ ಮಾಡ್ದ ಕುದುರೆಗಳ ಹೊತ್ತು ಕುದುರೆ ಸವಾರಿ ಮಾಡ್‌ವಂಗೆ ಕೊಣಿಯದು ಇಂತದೆಲ್ಲ. ಒಟ್ಟುಲಿ ಜೆನರ ಕುಸಿ ಪಡ್ಸುದಕ್ಕಾಗಿ ಹುಟ್ಟಿಕಂಡ ಕಲೆ ಇದ್. (ಸಿ.ಎಸ್.)

**ಬೂತದ ಕೊಣ್‌ತ :** ಕೊಡ್‌ಗ್‌ನ ಮೂಲ ನಿವಾಸಿತೇಳಿ ಕರಿವ ಮಲೆಯರ್ ಮತ್ತೆ ಪಣಿಕರ್ ಮೂಲಂದ ದೆವ್ವಾರಾದಕರ್. ಇವು 'ತೆರೆ' ತೇಳುವ ದೆವ್ವದ ಕೋಲ ನಡ್ಸುವೆ. ಈ ಕೋಲಲಿ ಯಕ್ಷಗಾನದ ಪಾತ್ರದಾರಿಗಳಾಂಗೆ ಮೋರೆಬಣ್ಣ, ಅಲಂಕಾರ, ತಲೆನ ಮೇಲೆ ಮತ್ತೆ ಸೊಂಟಕೆ ಚಾಳೆ ಚಿರಿಂದ ಮಾಡ್ದ ಜರಿಗಳ ತೊಟ್ಟ್ ತುಳು–ಮಲೆಯಾಳ ಮಿಸ್ರದ ಪಾಟ್‌ಗಳ ಹೇಳಿಕಂಡ್ ಯಕ್ಷಗಾನದ ಕೊಣ್‌ತದಾಂಗೆ ಕೊಣ್‌ದವೆ. ಹಿಮ್ಮೇಳಕೆ ಚೆಂಡೆ ಮತ್ತೆ ನಾಗಸ್ವರ ವಾದ್ಯ ಇದ್ದದೆ. ಪಣಿಕ್ಕರ್ ಮತ್ತೆ ಪರಾಜಿಯವ್ ದೆವ್ವದ (ಬೂತ)ಕೊಣ್‌ತನ ಕಸುಬು ಆಗಿದ್ ನಡ್ಸಿಕಂಡ್ ಬರ್‌ತೊಳೊ. (ಸಿ.ಎಸ್.)

**ವಾಲಗಾಟ್ :** ಕೊಡ್‌ಗ್ ಜಿಲ್ಲೆಲಿರುವ ಜೆನಪದ ಕೊಣ್‌ತ. ವಾಲಗ ವಾದ್ಯಗಳ ಲಾಯ್ಕ್‌ಲಿ ಬಳ್ಸಿಕಂಡ್ ಕೊಣಿದರ್‌ಂದ ಇದ್ಕೆ ವಾಲಗಾಟ್ ತೇಳಿನೂ ಹೆಸರಾಗಿಟು. ಇದ್ ಹೆಚ್ಚಾಗಿ ಹಬ್ಬ ಹರಿದಿನ,ಮೊದ್‌ವೆ, ಸಾರ್‌ವಜೆನಿಕ ಸಬೆ ಹಂಗೆ ಜಂಬರಗಳ್‌ಲಿ ಕುಸಿಲಿ ಕೊಣಿವ ಕೊಣ್‌ತ. ಹಿರಿಯರ ಸಾವ್‌ನ ಹೊತ್ತುಲಿ ಈ ಕೊಣ್‌ತ 'ಕುವರೆ' ತೇಳುವ ದುಃಕಸೂಚಕ ವಾದ್ಯದ ಹಿನ್ನೆಲೆ ನೊಟ್ಟಿಗೆ ಬೇರೊಂದು ತರಲಿ ನಡ್ದದೇಂತ ಹೇಳ್‌ವೆ. ಹಿಂದೆ ರಾಜ ಮಹಾರಾಜರ್‌ಗಳ ನಡುವೆ ಯುದ್ದಗ ನಡೆತ್ತಿದ್ದ ಹೊತ್ತುಲಿ ಗೆದ್ದೊವು ಊಟೋಪಚಾರ ನಡ್ಸಿ ವಾಲಗದೊಟ್ಟಿಗೆ ಕೊಣ್ದ್ ವಿಜಯೋತ್ಸವನ ಆಚರಿಸುತ್ತಿದ್ದೊ ಗಡ. ವಾಲಗಾಟ್ ಕೊಣ್‌ತಲಿ ಕೂಡ್‌ವ ಕಲಾವಿದರ ಸಂಕೆಗೆ ಮಿತಿ ತೇಳ್ದು ಇಲ್ಲೆ. ಸಾಂಪ್ರದಾಯಿಕ ಬಟ್ಟೆ ಹಾಕಂಡ ಕಲಾವಿದರೊಟ್ಟಿಗೆ ದಿನಬಳ್ಕೆನ ಬಟ್ಟೆ ಹಾಕಂಡ ಕಲಾವಿದರ್‌ನು ಸೇರಿ ಕೊಣ್ದವೆ. ಈ ಕೊಣ್‌ತಕ್ಕೆ ಹಿನ್ನೆಲೆ ಆಗಿದ್ ವಾಲಗ, ಮೋರಿ, ಡೋಲು, ತಾಳ, ಪರೆ, ಕೊಂಬು ಇಂತೆಲ್ಲ ವಾದ್ಯಗಳ ವಾಲಗಾಟ್‌ಲಿ ಬಹುತೇಕ ಗಂಡ್‌ಸ್‌ಗಳೆ ಕೊಣಿದಾದರ್‌ನು ಈಚೆಗೆ ಹೆಣ್ಣ್ ಮಕ್ಕಳೂ ಕೂಡಿಕಂಬದು ರೂಡಿ ಆಗುಟು. ವಾಲಗಾಟ್‌ಲಿ ಗಂಡ್‌ಸ್‌ಗ ಕೈಲಿ ಪೀಚೆಕ ಒಡಿಕತ್ತಿಗಳ ಹಿಡ್ದ್ ಕೊಣಿದ್ರನು ಕಾಣಕ್. (ಸಿ.ಎಸ್.)

**ಸುಗ್ಗಿ ಕೊಣ್‌ತ :** ಕೊಡಗ್ ಹುತ್ತರಿ ಹಬ್ಬದ ಮತ್ತೆನ ದಿನಗಳ್‌ಲಿ ಕೋಣಿವ ಸುಗ್ಗಿ ಕೊಣ್‌ತ. ಸುಮಾರ್ ಹತ್ತ್ ಹದ್‌ನೈದ್ ಜೆನ ಕಲಾವಿದರ್ ತಮ್ಮ ಸಾಂಪ್ರದಾಯಿಕ ವೇಸಗಳ ತೊಟ್ಟ್ ಕೈಗಳ್‌ಲಿ ಬಿಚ್ಚುಗತ್ತಿ ಇಲ್ಲರೆ ಬಾಳ್ ಹಿಡ್ದ್, ಕತ್ತಿಗಳ ಬೀಸಿಕಂಡ್ ವಿಸೇಸಾಗಿ ಕೊಣ್ದವೆ. ಸುಗ್ಗಿ ಕೊಣ್‌ತನೂ ಸ ಪರಿಯಕದ ಹಂಗೆನೇ ಪ್ರಾಚೀನ ಯುದ್ದ ನೃತ್ಯ. ಹಿಮ್ಮೇಳದ ಡೋಲ್‌ನ ಸದ್ದ್‌ಗೆ ಕೋಣಿವ ಈ ಕೊಣ್‌ತಲಿ ಆರ್ ಬಗೆನ ಹೆಜ್ಜೆಗ ಒಳೊ. ಕೊಡಗ್‌ನ ಗೌಡರ್ ಅಲ್ಲರೆ ಜಮ್ಮ ಕೊಡಗರ್ ಈ ಕೊಣ್‌ತನ ಪೊದ್ದತಿನಾಂಗೆ ಬೆಳ್ಸಿಕೊಂಡ್ ಬಂದೊಳೊ. ಶನಿವಾರಸಂತೆ, ಚಿಂಬಳೂರು ಊರುಲಿ ಈ ಕೊಣ್‌ತ ಕಂಡ್ ಬಂದದೆ. (ಸಿ.ಎಸ್.)

**ಹುತ್ತರಿ ಕೋಲಾಟ :** ಕೊಡವರ ದೊಡ್ಡ ಹಬ್ಬ ಪುತ್ತರಿ ಅತವಾ ಹುತ್ತರಿ. ಬತ್ತದ ಕೊಯಿಲ್‌ನ ಕಟಾವು ಮಾಡ್‌ವ ಸುಗ್ಗಿಗೆ ಕೊಡವರ್ ಹುತ್ತರಿ ತೇಳಿ ಕರೆದವೆ. ಈ ಹಬ್ಬನ ಅತ್ಯಂತ ವಿಜ್ರಂಬಣೆಂದ ಆಚರಿಸುವ ಕೊಡವರ್ ತಮ್ಮ ಸಾಂಪ್ರದಾಯಿಕ ವೇಷಬೂಷಣಗಳ ತೊಟ್ಟ್ ಕೋಲಾಟನ ಪ್ರದರ್ಶಿಸುವೆ. ಸುಮಾರ್ ಮೂರು ನಾಲ್ಕು ಅಡಿ ಉದ್ದದ ಬೆತ್ತದ ಕೋಲುಗಳ್‌ನ ಕೈಲಿ ಹಿಡ್‌ಕಂಡ್ ಕುಣಿವ ಕೊಣ್‌ತ ಹುತ್ತರಿ ಕೋಲಾಟ ತೇಳಿನೇ ಹೆಸರಾಗಿಟು. ಸುಗ್ಗಿನ ಸಂಬ್ರಮದ ಕುಸಿ ಮತ್ತೆ ಮನರಂಜೆನೆ ಈ ಕೊಣ್‌ತದ ಉದ್ದೇಶ, ಊರಮುಂದೆ ಅಂದರೆ ಅಡ್ಕದ ನಡುಲಿರುವ ಅಸ್ವತ ಮರದ ಸುತ್ತಕೆ ಸಾಂಪ್ರದಾಯಿಕ ವೇಸ ಹಾಕಂಡ ಕೊಡವರ್ ಹಾಡಿಕಂಡ್ ಕೋಲು ಹುಯ್ಯಕಂಡ್ ಕೊಣ್ದವೆ. ಪರೆ ತೇಳುವ ಚರ ವಾದ್ಯ ಈ ಕೊಣ್‌ತಲಿ ಹಿಮ್ಮೇಳನ ಒದ್ಗ್‌ಸಿದೆ. ಕೋಣಿವವು ಕೊಡವರಾದರೆ ಪರೆ ಹೊಡೆಯುವಂವ ಮೇದರ,ಪೊದ್ಯಲಿ ಹಾಸ್ಯ ನೀತಿ, ಚೋದ್ಯ, ಗೇಲಿಗ ಕಂಡ್ ಬಂದವೆ. ಹುತ್ತರಿ ಕೋಲಾಟಲಿ ಜಪ್ಪ ಕೋಲು ಚಂದ ತೊರೆಕೋಲು, ಪಾತುರೆಕೋಲು ಹಿಂಗೆ ನಾನಾ ಬಗೆಗ ಒಳೊ. (ಸಿ.ಎಸ್.)

**ಕೊರಗರ್ :** ಕೊರಗ ತೇಳುದು ಒಂದ್ ಸಮುದಾಯದ ಹೆಸರ್. ತುಳುನಾಡ್‌ನ ಮೂಲ ಸ್ತಾನ ಆದ ಕೊರಗರ್ ಕ್ರಿಸ್ತಪೂರ್ವ ಮೂರ್‌ನೇ ಸತಮಾನದಿಂದೀಚೆ ಬೊದ್ಕಿಕಂಡೋಳಂತೇಳ್‌ವ ಒಂದ್ ಮಾತ್ ಉಟ್ಟು. ಬೂಮಂಡಲದ ರಾಜರುಂದ **‘ಕೋಶರ್’** ತೇಳಿ ಗುರ್‌ತಿಸಿಕಂಡ ಇವು ಇಂದ್ **‘ಕೊರಗರ್** ತೇಳಿ ಗುರುತಿಸುವ ಜೆನಗಳೇ ಹಿಂದೆನ **‘ಕೋಶೆರ್’** ಆಗಿದ್ದದ್‌ತ ಹೇಳ್‌ವ ಒಂದ್ ಸಂಸಯ ಇದ್ದರೂ ಕೊರಗರ್ ತುಳುನಾಡ್‌ನ ಬುಡಕಟ್ಟ್ ನ ಪಂಡ್‌ನ ಲಕ್ಷಣಗಳ ಪಡ್ಕಂಡ ಒಂದೇ ಜೆನವರ್‌ಗತ ಹೇಳ್ದು ಸತ್ಯ.ಪಡುವದ ಕಡಲ್ ಕರೆನ ಉದ್ದಗಲ ತುಳುನಾಡ್‌ಲಿ ಬುಡಕಟ್ಟು ಪಂಡುನ ಜಾತಿ ಸಮಾಜವಾದಲಿ ಬದಲಾವಣೆ ಆಕಂಡ್ ಇದ್ದರು. ಕಾಡ್ ಗುಡ್ಡೆಲಿ ಗೈದ್ ತಿಂದ್ ಬೊದ್ಕಿದವು. ಅವು ತಿಂಬ ತಿನ್ಸ್‌ಂದಾಗಿ ಇವರ **‘ಮುಟ್ಟದವು’** ತೇಳಿ ನಡೆಸಿಕಂಡು ಬಂದಿರೋಕುತ ಹೇಳ್ದಕೆ ಯಾವ ರೀತಿಲಿನೂ ಯಾವ ದಾಕಲೆನೂ ಇಲ್ಲೆ ಆದರೂ ಇವು ಕಾಡ್‌ಗುಡ್ಡೆತೇಳಿ ಮುಕ್ಕಾಲಿಗೆ (ಗುಲಾಮ) ಗೈದವು ಆಗಿರೋಕುತೇಳುವೆ. ಗೊಜ್ಜೆಗ ಹೊಲೆಯರ್ ತೇಳಿ ಊರುಂದ ಹೊರಗೆ ಇರುವ ಕೂಪುಲಿ ಅವು ಬೊದ್ಕಕಾತ್. ಬೂಮಿನ ಯಜಮಾನಿಕೆಗಾಗಿ ಪೊರ್‌ಂಬಿ ಅರಸರುಂದ ಪಂಡುನ ಕಾಲಲಿ ಊರುಗೆ ಗುರಿಕಾರರಾಗಿ ಅಂದರೆ ಮುಕಂಡರಾಗಿ ಬದುಕಿದ್ದೊ ಮತ್ತೆ ಬಂದ ಜೆನಗ ಅವರ ಒಳ್ಳೆ ಕೆಲಸ ಮಾಡೋವು ತ ನೆನೆಸಿಕಂಡೊಳ. ಅವು ಬೊದ್‌ಕಿದ ಜಾಗೆಂದ ನಕ್ಷೆನ ಹುಡುಕಿ ನೋಡಿರೆ ಕೋಟೆನ ಉತ್ತರಕ್ಕೆ ಇರ್‌ವ ಕನ್ನಡ ದೇಸಲಿ ಇರುವ ಕೊರಗರು. ಇವರ ಉತ್ತರದ ಕೊರಗರ್‌ತೇಳಿ ಹೇಳ್‌ವೆ. ಇವು ಮಾತಾಡುವ ಬಾಸೆಂದಾಗಿ



**ಕೊರಗರ ಡೋಲು**

ಈ ಸ್ಪಷ್ಟ ವೆತ್ಯಾಸ ಗೊತ್ತಾದೆ. ಅಲ್ಲದೆ ಸಮಾಜಲಿನು ಕೊರಗರ್‌ನೂ ಐದ್ ಗುಂಪಾಗಿ ಬದುಕುವ ರೀತಿ ಉಟ್ಟು. 1. ಅಂಡೆ ಕೊರಗರ್, 2. ಸೊಪ್ಪು ಕೊರಗರ್, 3. ತಿಪ್ಪಿ ಕೊರಗರ್, 4. ಒಂಟಿ ಕೊರಗರ್, 5. ಕಪಡ ಕೊರಗರ್

ಹಿಂದೆನ ಕಾಲಲಿ ಕೊರಗರ್ ಪೇಟೆಗೆ ಬರೊಕಾರು ಆ ಊರುನ ಯಜಮಾನನ ಒಪ್ಪಿಗೆ ತೆಕಣಕು ಅಲ್ಲದೆ ಎಲ್ಲನು ನಡೆವ ದಾರಿಲಿ ಇವುಕೆ ಉಗೆಕೆನೂ ಇಲ್ಲೆ. ಹಂಗಾಗಿ ಗಂಟ್ಲ್‌ಗೆ ಬೆದುರುನ ಅಂಡೆ ಇಲ್ಲರೆ ಚೆಪ್ಪಿನ ಬಳ್ಳಿಲಿ ಕಟ್ಟಕಾಗಿತ್ತು. ಹಂಗಾಗಿ ಇವು ಅಂಡೆ ಕೊರಗರ್. ಮಂಗಳೂರು, ಮುಲ್ಕಿ ಮತ್ತೆ ಪುತ್ತೂರುಲಿ ಇವು ಒಳೊ. ಹೊಸ ಬಟ್ಟೆ ಉಡಿಕೆ ಮುಂದೆನ ಕಾಲಲಿ ಕೊರಗರ್ ಗೆ ಅವಕಾಸ ಇತ್ತುಲೆ. ಹಂಗಾಗಿ ಹೆಣಕ್ಕೆ ಹಾಕಿದ ಬಟ್ಟೆಗಳ ತೆಗ್ದು ಸುತ್ತಿಕಂಡವೆ. ಅವೇ ಕಪಡ ಕೊರಗರ್. ಕುಂದಾಪುರ ಬೈಂದೂರ್ ಆಚೆ ಇವು ಇದ್ದೊ. ಸೊಪ್ಪುನ ಮಾನ ಮುಚ್ಚಿಕೆ ಸೊಂಟದ ಸುತ್ತ ಸುತ್ತಿಕೊಂಡು ಬೊದ್‌ಕ್‌ವವು ಸೊಪ್ಪು ಕೊರಗರ್. ಕಾರ್ಕಳ, ಹೆಬ್ರಿನಾಚೆ ನೋಡಿಕೆ ಸಿಕ್ಕುವೆ. ಚೆಪ್ಪಿಲಿ ಮಾಡ್‌ದ ಬಳೆ, ಸರ




ಆಬರಣ ಎಲ್ಲಾ ಹಾಕೊಂಡು ಬೊದುಕಿದವು ತಿಪ್ಪಿ ಕೊರಗರ್. ಕೆಮಿಗೆ ಚಕ್ಕುಲಿನಂಗೆ ದೊಡ್ಡ ಬಳೆಗಳ ಹಾಕೋವು ಒಂಟಿ ಕೊರಗರ್. ಇವು ಒಡಿಪು, ಬ್ರಹ್ಮಾವರದಾಚೆ ಒಳೊ. ಈಗ ಕೊರಗರ್ ಸಾಮಾಜಿಕವಾಗಿ ಒಳೆಗೆನ ಗುಂಪುಗಳ ಗಮನಿಸದಿದ್ದರೆ ಮೊದ್‌ವೆ ಸಮಯಕೆ ಇದ್ ತುಂಬಾ ಮುಕ್ಯ ಆದೆ.

ಎಲ್ಲಾ ಗುಂಪುಗಳ್‌ಂದ ಒಂದೇ ತರದ 'ಗೋತ್ರ' ಕಂಡ ಕಾರಣ ಇವು ಒಂದೇ ಮೂಲದವು ಆಗಿರೋಕುತೇಳ್ವ ಒಂದ್ ಆಲೋಚನೆ ಉಟ್ಟು. ತುಳುನಾಡ್‌ನ ಉದ್ದಕೆ ಇರುವ ಕೊರಗರ್ ಮಂಗಳೂರು ಕಂಕನಾಡಿಂದ ಕುದ್ರೋಳಿ ಗುಡ್ಡೆ, ಮರವೂರು, ಬಜ್ಪೆ, ಬೈಕಂಪಾಡಿ, ಮುಲ್ಕಿ, ಮದ್ಯ, ಹಳೆಯಂಗಡಿ, ಕಿನ್ನಿಮುಲ್ಕಿ, ಕೊರಂಗ್ರಪಾಡಿ, ಕುತ್ಪಾಡಿ, ಕುಂದಾಪುರಪೇಂಟೆ, ಅಸೋಡು, ವಕ್ವಾಡಿ, ನಾಡ, ಅಮಾಸೆಬೈಲ್‌ಲಿ ಹೆಚ್ಚಿನ ಸಂಕೆಲಿ ಒಳ. ಸಾಮಾನ್ಯವಾಗಿ ಇವ್ ಮನೆ ಕಟ್ಟಿ ಕುದ್ರುಕನ ಒಬ್ಬೊಬ್ಬನೆ ಕುದ್ರುದು ಬಾರಿ ಕಮ್ಮಿ.

ಕಾಡುತ್ಪತ್ತಿಗಳ ನೆಡುಲಿ ಬದುಕುವವು ಆದ ಕಾರಣ ಕಾಡ್ ಕರೇಲಿ ಸಣ್ಣ ಸಣ್ಣ ಬಿಡಾರಗಳ ಬೆದುರುನ ಕೋಲು ಮತ್ತೆ ಚಾಳೆ ಮಡಲ್‌ಲಿ ಕಟ್ಟಿಕಂಡಿದ್ದವೆ. ಇಂತ ಮನೆಗಳಿಗೆ ಆಗ ಗೋಡೆ ಇತ್ತುಲೆ. ಮಾತ್ರ ಅಲ್ಲ ನಾಕ್ ಮಾಡ್‌ನೆ ಮನೆಗಳ ಕಟ್ಟಿಕೆ ಇತ್ಲೆ. ಮಾಡುಗೆ ಕೆದ್‌ಲ್ ಹುಲ್ಲು, ಬಿಳ್ಗಿಲ್ ಹಾಕಿಕೆನೂ ಇಲ್ಲೆ. ಇಂತ ಕಟ್ಟು ಕಟ್ಟಲೆಲಿ ಬೊದ್‌ಕಿಕಂಡಿದ್ದ ಇವರ ಮನೆಗಳ ಬೊಟ್ಟಗ ತೇಳಿ ಹೇಳ್ತಾ ಇದ್ದ. ಈಗ ಕಾಲನಿ ತೇಳಿ ಹೇಳ್‌ವೆ. ಸಾದು ಸ್ವಬಾವ ಮೆತ್ತಂಗೆ ಮನಸ್ಸುನ ಇವು ಮೇಲೆನ ಜಾತಿ ಅವರ ಕಡೆ ಕಾಲುನ ಡೊಂಟಲಿ ಕಸ್ಟಪಟ್ಟು ಬದ್ಕಿದವು.

ಕಾಡ್ ಗುಡ್ಡೆನ ಸೆರಂಗ್‌ಲಿ ಬೊದ್‌ಕಿಕಂಡಿದ್ದ ಇವು ಬೇರೆವು ಕೊಟ್ಟ ಸಾಮಾನ್‌ಗಳ ತೆಕಂಡ್ ಮೊದ್ವೆ ಮಾಡಿಕಂಡ್ ಒಳ್ಳೆ ರೀತಿಲಿದ್ದ. ಮಾದೆರಿನ ಬೊಳ್ಳಿಗಳ ಪಾಂದಿಸಿ ಹೆಡಗೆ, ಕುಡುಪು, ಕುಕ್ಕೆ, ಪುಡಾಯಿ, ತಡ್ಪೆ ಹೆಣ್ದು. ಅದರ ತಂದ್ ಊರುಲಿ ಬೇರೆ ಜಾತಿಯವುಕೆ ಮೊದ್ದ್ ಬದಲ್‌ಗೆ ಅಕ್ಕಿ ಬತ್ತ ಹಿಡ್ಕೊಂಡು ಹೋತಿದ್ದ. ಅವುಕ್ಕೆ ಕೊರಗರ ಡೋಲು ಎಲ್ಲಾ ಹೊತ್ತುಲಿ ಬೇಕು. ಊರುನ ಜಾತ್ರೆಗ್ 'ದೋಲ ನಲಿಕೆ' ಇದ್ದದೆ. ಕಂಬಳದ ಮುಂದೆನ ದಿನ ಕಂಬಳದ ಗದ್ದೆನ ಪಾರಕೆ ಇರ್‌ಲಿಡಿ ಕುದ್ದು ಬೊಳ್ಪವರೆಗೆ ಇರ್‌ವ ಕಟ್ಟು ಕಟ್ಟಲೆ ಇತ್ತು.

ಗುತ್ತುನ ಗುರುಕಾರ ಸತ್ತರೆ ಬೊಟ್ಟುವ ಡೋಲು ಇಡೀ ಊರುಗೆ ಸತ್ತ ಸುದ್ದಿನ ಹೇಳ್ತಾ ಇದ್ದೊ. ನಮ್ಮ ಸಂಸ್ಕೃತಿನ ಬೇರ್‌ನ ನೆಲೆಂದಾಗಿ, ಬೇರೆ ಜಾತಿಯವರ್‌ಂದ ಬೇರೆನೇ ಆಗಿ ಒಳೆವ ಇವುಕೆ ಕೆಲವ್ ದೇಸ್ತಾನಗಳಲ್ಲಿ ಇಂದ್‌ಗು ಅಕ್ಕಿ ಎಣ್ಣೆ ಕೊಡುವ ಕ್ರಮ ಉಟ್ಟು. ತುಳುನಾಡುಲಿರುವ ಕೆಲವ್ ದೇಸ್ತಾನದ ಮೂಲಗ, ಕೊರಗ ಹೆಣ್ಮಕ್ಕಳಿಗೆ ಕಾಡುಲಿ ಬೊಳ್ಳಿ ಕೊಯಕನ ಹುಲ್ಲು ಹೆರೆಯಕನ ಕತ್ತಿನ ಕೊಡಿ ತಾಗಿ ನೆತ್ತರು ರಟ್ಟಿ 'ದೇವರ ಮೂರ್‌ತಿ ಸಿಕ್ಕಿದು'ತೇಳಿ ಜೆನಪದರು ಹೇಳ್‌ವೆ. ಅದಕ್ಕೆ ಸ್ತಳ ಪುರಾಣಸ ಉಟ್ಟು.

ಅಲ್ಲದೆ ಬೇರೆ ಜಾತಿಲಿ ಕೂಡ ಕೊರಗತೇಳಿ ಹೇಳ್ವ ಹೆಸರು ಉಟ್ಟು. ಈ ನಾಡುಲಿ ಸುರುಗೆ ಬಾಳಿ ಬೊದುಕಿದವು ಇವೇ ಆಗಿರೋಕು. ಕೊರಗರ್ ಬೊದ್‌ಕ್‌ವ ರೀತಿ ನೀತಿಗಳೂ ತುಳು ಸಂಸ್ಕೃತಿನ ಬೇರುಗಳೇ ಆಗಿರೋಕು. ಅವು ಕೂಸು ಹುಟ್ಟಿಕನ, ಮೊದ್‌ವೆಲಿ, ಸಾವು, ನ್ಯಾಯಪಂಚಾಯಿತಿಗೆ, ಊಟೋಪಚಾರ, ಕುಟುಂಬ ಸಂಸಾರ ದೆವ್ವದೇವರನ್ನ ನಂಬಿಕೆಗ ಅರೆಬಾಸಿಗರ ಮತ್ತೆ ತುಳುವರ ಬದ್‌ಕ್‌ನ ಮೂಲ ನೆಲೆನ ಹೇಳ್ವೆ

ಕೂಸು ಹುಟ್ಟುಕನ ಕೊಪ್ಪಲಿದ್ದ ಕೊರಗರ್ ಪೆದ್ದೋಳ್ತಿ (ಬಾಣಂತಿ) ತನಕೆ ಸಮ್ಮಂದದ ಮನೆಗೋದವೆ. ಐದ್ ದಿನ ಕಳ್ದು ಆರನೇ ದಿನ ಸಮಾಜದ ಬಂದುಗಳ ಕರ್‌ದ್ ಕೂಸು ಅಮ್ಮನ ಮೀಸಿ ಅಮೆ ಕಳ್ದವೆ. ಮೊಂದ್ರಿಲಿ ಕುದ್ರುಸಿ ಅಮ್ಮ ಮತ್ತೆ ಕೂಸುಗೆ ತೊಡ್ವೆಲಿ ಅಕ್ಕಿ ಕಾಯಿ ಎಣ್ಣೆ ಇಸಿ ಹೊತ್ತಿಸುವೆ. ಅದರ್‌ಲಿ ಬಾಣಂತಿಗೆ ಅಮೆ ಮಾಡಿಕೆ ಗಮ್ಮತ್ ಅಡಿಗೆ ಮಾಡಿ ಬಳ್ಸುವೆ. ಕುಲದೆವ್ವನ ನೆನ್ಸಿ ಬಳ್ಸಿ ಕೂಸುಗೆ ಅಂದೇ ಹೆಸರು ಇಸುವೆ. ಕೂಸುನ ಸೊಂಟಕ್ಕೆ ಕಪ್ಪು ನೂಲು ಹಾಕಿ ಹೆಸರು ಇಸುವ ಹಕ್ಕು ಕುಟುಂಬದ ಹಿರಿಯವುಕ್ಕೆ ಸಿಕ್ಕಿದೆ.

ಐತಾರ ಆದರೆ ಐತೆ, ಮಂಗಳವಾರ ಆದರೆ ಅಂಗಾರೆ, ಸನಿವಾರ ಆದರೆ ತನಿಯೆ ಹಿಂಗೇ ಹೆಸರು ಇಸುವೆ. ಹೆಣ್ಣು ಮಕ್ಕಳಿಗೆ ಬೂದಿ, ತುಕ್ರಿ, ಚೋಮ ಹಿಂಗೇ ಹೆಸರು ಇಸುವ ಕ್ರಮ ಇತ್. ಇವುಕ್ಕೆ ಐತಾರನೇ ಸುರುನ ಒಳ್ಳೆ ದಿನ. ಪಂಡುಲಿ ಕೂಸು ತೊಟ್ಟಿಲ್‌ಲಿ ಇರುಕನನೇ ಬಾವಂಗೆ ಮದ್ವೆ ಮಾಡಿದ್ದವೆ. ಒಂದೇ ಬೊಳಿಲಿ ಮದ್ವೆ ಆಗುವಾಂಗೆ ಇತ್ಲೆ. ನಿಸ್ಚಯ ಗೂಡೆನ ಮನೇಲೀ ಆದರೆ ಮೊದ್ವೆ ಹೈದನ ಮನೇಲಿ ಆದೆ. ಹೈದ ಒಂದ್ ಗೂಡೆನ ಮೊದ್ವೆ ಆಕರ್ 'ತೆರ' ಕೊಡೊಕು. ಗೂಡೆನ ಅವ್ವ, ಅಪ್ಪಂಗೆ ಅಕ್ಕಿ ಇಲ್ಲರ್ ದುಡ್ಡುನ ರೂಪಲಿ ಕೊಡುವ ಕ್ರಮ ಈಗನು ಉಟ್ಟು. ಬದಿ ಕಳಿದು ಬದಿ ತೆಕಂಬೋದು. ಇಂದುಸಾ ಈ ಸಮಾಜಲಿ ಇಲ್ಲೆ. ಮೊದ್ವೆನ ಮುಂದೆನ ಎರ್‌ಡ್ ದಿನ ನಾಕ್ ಕಡೆಂದ ಹೆಣ್ಮಕ್ಕ ಬಂದು ಮೀಸುವೆ. ಮೊದ್ವೆನಂದು ಹೈದ ಮತ್ತೆ ಗೂಡೆನ ಬಾಮಿ ಕಟ್ಟೆ ಮೇಲೆ ಕುದ್ರಿಸಿ ಮೀಸುವೆ. ಹೈದನ ಬತ್ತದ ಮುಡಿಲಿ ಕುದ್ರಿಸಿರೆ ಗೂಡೆನ ಅದರುಂದ ಕೆಳಗೆ ಕುಕ್ಕೆ ಕಂಕಣೆ ಹಾಕಿ ಅದರ ಮೇಲೆ ಕುದ್ರುಸುವೆ. ಗೂಡೆನ ಗಂಟ್ಲ್‌ಗೆ ಕಪ್ಪು ಬಿಳಿ ಮಣಿಸರ ಹಾಕಿ ಕೊಳ್ಳೆ ಮೆದಲ್ ಹಾಕುವೆ. ಎರಡು ಕುಟುಂಬದವು ಸೂರ್ಯನ ನೆನ್ಸಿ ಮೊದ್ಮಗಳಿಗೆ ಮೊದುಮಣ್ಣಿಗೆ ದೇಸೆ ಹಾಕುವೆ. ಹೈದ, ಗೂಡೆಗೆ ಎರಡು ಬೆಳ್ಳಿನ ಪಾವಲಿ ಕೊಡೊಕು. ಮೊದ್‌ವೆ ಲೆಕ್ಕಲಿ ಆರು ಊಟ ಕೊಡೊಕು. ಗಂಜಿ ತೇಳಿ ಊಟ ಅಲ್ಲದೆ ಮೀನು ಮಾಸದ ಊಟನೂ ಇದ್ದದೆ. ಮೊದ್ವೆ ಆದ ಹೈದ. ಗೂಡೆನ ನಡುವೆ ವೈ ಮನಸ್ಸು ಬಂದರೆ ಕುಟುಂಬದ ಹಿರಿಯರ ಒಪ್ಪಿಗೆಲೆ ಬಿಡುಗಡೆ ಆಗುವ ಅವಕಾಸ ಇತ್. ಹೆಣ್ಣ್ ಸತ್ತ ಹೈದ, ಗಂಡ ಸತ್ತ ಹೆಣ್ಣು ಕೂಡಾ ಮೊದ್ವೆ ಆಕೆ ಆಗತಿತ್. ಹೆಣ್ಣು ಮಗಳ್‌ಂದ ಸಂಸಾರ ಬೆಳ್ದದೆತ ಹೇಳ್ವ ನಂಬಿಕೆಗೆ ಅಳಿಯ

ಸಂತಾನ ಕಟ್ಟ್ ಹೇಳ್ದು. ಅವ್ವನ ಕುಟುಂಬದ ಕೊಂಡಿ ಇವರದು. ಮುಂದೆ ಉರುಂದ ಊರಿಗೆ ಹೋಗಿ ಬೊದುಕಿಕೊಂಡಿದ್ದ ಇವು ಈಗ ಸರಕಾರ ಕೊಟ್ಟ ಜಾಗೆಲಿ ಗುಂಪು ಗುಂಪಾಗಿ ಅಲ್ಲಲ್ಲಿ ನೆಲೆ ನಿಂತೋಳ. ಮನೆ ಯಜಮಾನ ಹಿರಿಯರೇ ಆಗಿದ್ದೊ. ಅಮ್ಮಂದ ಮಗಂಗೆ ಅದಿಕಾರದ ಹಕ್ಕು ಇದ್ದರೂ ಪಂಡ್‌ಲಿ ಕೂಡು ಕುಟುಂಬ ಇದ್ದೋವು ಈಗ ಗಂಡ ಹೆಣ್ಣು ಮಕ್ಕ ತ ಬೊದುಕುವೆ. ಆದರೂ ಹಿರಿಯವುಕ್ಕೆ ಗಂಡನ ಅವ್ವನ, ಅಪ್ಪ, ಅತ್ತೆ, ಮಾವನ ಬಾರಿ ಮಾನ ಮರ್ಯಾದೆ ಕೊಟ್ಟು ಮಾತಾಡುವ ಬಾಸೆ ಇವರ್‌ದ್. ಎಲ್ಲರ ಹಕ್ಕಲೆ ಅವ, ಇವ ಹೇಳಿ ಮಾತಾಡುವೆ. ಇವು ಹಾಕಂಬ ಬಟ್ಟೆ ಬರೆ ನೋಡಿರೆ. ಗಂಡುಗ ಸಾಮಾನ್ಯ ಆಗಿ ಸೊಂಟಕೆ ತುಂಡು ಬಟ್ಟೆ ಸುತ್ತುವೆ ಕೆಮಿಗೆ ಪಿತ್ತಲೆನ ಒಂಟಿನ ಮತ್ತೆ ಕೈಗೆ ಕಬ್ಬಿಣದ ಬಳೆನ ಹಾಕಂಬ ಸೊಂಟಕ್ಕೆ ಗುಮ್ಮನ ಎಲುಬುನ ಜೋಡ್ಸಿ ಮಾಡ್ದ ತೊಡಂಕ್ ಹೇಳ್ವ ಸೊಂಟ ಪಟ್ಟಿ ಹಾಕಂಡವೆ. ಅದ್ಕೆ ಮೊರೆ ಕತ್ತಿ ಸಿಕ್ಕಿಸಿಕಂಡಿದ್ದವೆ. ಗಿಡ್‌ಜ್ಜನ ಕಾಲ್‌ನ ಎಲುಬುಂದ ಕೊಕ್ಕೆ ಮಾಡಿ ಅದಕ್ಕೆ ಸೆಕ್ಕ್‌ಸಿ ಅದರ ತೊಡಂಕ್‌ಗೆ ಸಿಕ್ಕಿಸಿಕಂಡಿದ್ದವೆ. ತಲೆಗೆ ಎಲ್ಲರಂಗೆ ಹಾಳೆನ ಕೊಂಬರ್ ಮುಟ್ಟಾಳೆ ಇದ್ದದೆ. ಹೆಂಗಸರೊಟ್ಟಿಗೆ ಒಂದ್ ವರ್‌ಗದವು ತುಂಡೆ ಹೇಳ್ವ ಕಪ್ಪು ಬಟ್ಟೆನ ನೆರಿಗೆ ಹಾಕದೇನೆ ಸುತ್ತಿಕಂಡವೆ. ಎದೆಲಿ ಬಿಳಿ ಬಣ್ಣದ ರಾಕಿನ್ ಹಾಕಿ ಸೆರಂಗ್ ಹೊದ್ದುಕಂಡವೆ.ಗಂಟ್ಲ್‌ಗೆ ಮಣಿಸರ ಹಾಕೊಂಡವೆ. ಈ ಮಣಿಸರನ ಪ್ರಾಣಿ ಪಕ್ಷಿಗಳ ಎಲುಂದ ಅವೇ ಮಾಡಿಕಂಡವೆ. ತಲೆಗೆ ಎಲ್ಲರಾಂಗೆ ಹೂವು ಮುಡಿಯದೆ 'ಕಿನ್ನಾರ'ಹೇಳ್ವ ಬೇಲಿಲಿ ಸಿಕ್ಕುವ ಹೂ ಮುಡ್ದವೆ. ಬೇಟೆ ಆಡ್ದು ಇವರ ಕುಲ ಕಸುಬು ಅಲ್ಲ, ಅದರ್‌ಲಿ ಹೆಚ್ಚಿ ಉಮೇದು ಕೂಡ ಇಲ್ಲೆ. ಕೆರೆ, ಬಾಮಿ, ಪಳ್ಳಗಳ್‌ಲಿ ನೀರ್ ಆರುಕನ ದರ್‌ಗು ಅಡಿಲಿರುವ ಏಮೆಗಳ ತಂದ್ ತಿಂಬೊತ್ತಿದ್ದೊ. ಕೈಲಿ ಒಂದ್ ದೂಂಚಿನ ಕೋಲು ಹಿಡ್ಕಂಡು ಕುಟ್ಟಿ ಕುಟ್ಟಿ ಹುಡುಕಿಕಂಡು ಹೋಗಿ ಏಮೆಗಳ ಬೇಟೆ ಮಾಡ್‌ವೆ. ಬಿಳಿ ಏಮೆ ಇವುಕ್ಕೆ ಬಾರಿ ಇಸ್ಟದ ಮಾಸ. ಅದರ ತಿಂದರೆ 'ಕೊಟ್ಟ'(ಕುಷ್ಟ)ಬಾದ್ಲೆತೇಳುವ ನಂಬಿಕೆ ಉಂಟು. ಊರುಲಿ ದನ, ಕರು ಸತ್ತಕನ ಕೊರಗರು ಹೇಳಿ ದಾಟುವ ಕ್ರಮ ಇತ್ತು. ಅವರ ಗುರ್‌ಕಾರ ಹೇಳಿ ಕಳಿಸಿರೆ ಅದರ ಮಾಸ ಬೇಯಿಸಿ ತಿಂಬೊತ್ತಿದ್ದೊ, ಚರ್ಮನ ಹದ ಮಾಡಿ ಡೋಲುಗೆ ಹಾಕಿ ಬೊಟ್ಟುವೆ. ಹಿಂಗೆ ಸತ್ತ ದನಗಳ ತೆಕಂಡು ಹೋಕೆ ಅವೇ ಬಂದವೆ. ಕೊರಗರ್‌ಗೆ ಬೊದ್‌ಕ್‌ವ ಕುಸಿ ಪಡಿಯೋಕು ಹೇಳ್ವ ಆಲೋಚನೆ ಇದ್ದೋವು. ಬೀಸ ನಡೆಕೆನ ಕೊನಿದು, ಕೆಮಿ ಒಡೆವ ದೋಲುನ ಕೊಣ್‌ತ, ಕಾಡ್ ಬೆದುರುಲಿ ಮಾಡ್ದ ಕೊಳಲು, ಅದರ ಒಟ್ಟಿಗೆ ಕಂಚಿನ ಕಂಟದಂತ ತಾಳದ ಸ್ವರಕ್ಕೆ ಸರಿಯಾಗಿ ಕುಣಿಯುದುತೇಳಿರೆ ಬಾರಿ ಕುಸಿ.ಕೊಣಿದು ಇವರ ಬೊದ್ಕುನ ಒಂದ್ ಬಾಗನೇ ಆಗುಟು. ಊರುನ ದೇಸ್ತಾನದ ಜಾತ್ರೆಗೆ, ಬೂತ ದೆವ್ವ, ಕಾಲಾವದಿತ ನೇಮಲಿ, ನಾಗಮಂಡಲ, ಡಕ್ಕೆ ಬಲಿ, ಮಾರಿ ಪೂಜೆ, ಗೋಂದಲು, ಅಷ್ಟಮಿ, ಕಂಬುಲ, ಹಿಂಗೆ ಊರು ಮತ್ತೆ ನಾಡು ಸಮ್ಮಂದ ಜಾತ್ರೆ ಮತ್ತೆ ವಿಸೇಸ ಆಚರಣೆಗ ಉಟ್ಟು ಹಬ್ಬಗಳ್ಳಿ ದೂರದ ಕೊಲೆಂಜಿಲಿ ಊಟ ಮಾಡಿ. ಹೈದ–ಗೂಡೆಗ ಮಕ್ಕ, ಅಜ್ಜಂದಿರು ಎಲ್ಲಾ ಸೇರಿ ಹೆಜ್ಜೆ ಹಾಕುದು ಇವುಕ್ಕೆ ಗೌಜಿ. ಮಾರ್‌ನೆಮಿ ಹಬ್ಬಕೆ ಮನೆ ತುಂಬುಸಿ ಮತ್ತೆ ಮನೆ ಮನೆಗೆ ಬಂದು ಅಂಗಳಲಿ ದೋಲ ಕೊಣ್‌ತ ಕುಣ್ದು. ಅಕ್ಕಿ ಬತ್ತ ಹಿಡ್ಕೊಂಡು ಹೋದವೆ. ಈ ಕೊಣ್‌ತ 'ಬೊಂತೆಲ್‌ದ ನಲಿಕೆ' ಹೇಳಿ ಹೇಳ್ವ. ಸೂರ್ಯ ದೇವರ ಬಾರಿ ನಂಬುವೆ ಕೊರಗರ್. ಅದಕ್ಕೆ ಸಮ್ಮಂದಿಸಿದ ಆಚರಣೆಗ ಈಗ ಕಮ್ಮಿಯಾಗುಟು. ಕಾಡು ಕರೆಲಿ ಬೊದ್ಕುಕಿಕಂಡಿದ್ದ ಈ ಜೆನಕೆ ಕಾಯರ್ ಮರಂದ ಅಡಿಲಿ ಒಂದ್ ಕಲ್ಲ್ ಹಾಕಿ ಅದರ ನಂಬುವೆ. ಅಯಿಕೆ ಕಾಟಂತೇಳಿ ಹೇಳ್ವೆ. ಮಳೆಗಾಲಕೆ ಮುಂದೆ ಸುಡು ಬಿಸಿಲಿಗೆ ಮದ್ಯಾಹ್ನದ ಹೊತ್ತುಗೆ 'ಕಾಟ'ದ ಎದುರು ಜೋಡು ಕೊಡಿ ಎಲೆ ಹಾಕಿ ಅರಿಸಿನ ಹಾಕಿ ಬೇಸಿದ ಊಟನ ಬಡ್ಸಿ ಕುಟುಂಬದ ಹಿರಿಯರ್‌ಗೆ ಇಸಿ. ಮುಡಿಪು ಇಸಿ ಮತ್ತೆ ಅದರ ಪ್ರಸಾದ ಆಗಿ ತೆಕಂಡವೆ. ಈಗ ಮತ್ತೆ ಅದೇ ಕುಟುಂಬದ ಮೂಲ ಮನೆಗೆ ವರ್ಷಕೊಮ್ಮೆ ಆಡ್ ಬಳ್ಸಿ ಕಳ್ದವೆ. ಇವೆಲ್ಲ ಈಗ ಬಾಕಿ ಜಾತಿಯವರ ದೆವ್ವಗಳ ನಂಬುವೆ. ಕೊರಗತನಿಯ ಕೊರಗರ್ ನಂಬುವ ಕುಲದೆವ್ವ. ಆದರೆ ಕೊರಗರಲ್ಲದೆ ಬೇರೆ ಜಾತಿಯವು ಕೊರಗ ತನಿಯನ ನಂಬುವೆ. ಆದರೆ ಕೋಲ ಕೊಡ್ದು ಕೆಳಗೆ ಜಾತಿಯವು ಮಾತ್ರ. ಇಂದ್‌ಗೂ ವರ್‌ಸಕೊಮ್ಮೆ ಕುಟುಂಬದ ತರವಾಡು ಮನೆಲಿ ಕುಟುಂಬದ ಯಜಮಾನಿಕೆಲಿ ಕೊರಗರ ದೆವ್ವ ಕೊರಗತನಿಯಂಗೆ ನಿತ್ಯದ ಕೋಲ ತ ಹೇಳಿ ಸಲ್ಲಿಸುವೆ. ಚೌತಿ ಇವರ ಬಾರಿ ಗೌಜಿನ ಹಬ್ಬ. ಮುಂದೆನ ದಿನ ರಾತ್ರಿ ಉಪವಾಸ ಮಾಡಿ ಕಳಿ ಕುಡೆಯದೆ, ಮಾಸ ತಿನ್ನದೆ ಇದ್ದವೆ.ಮೊದ್‌ವೆ ಆಗದೆ ನೆರ್‌ದ ಗೂಡೆ ಸೂರ್ಯ ಹುಟ್ಟಿಕೆ ಮುಂದೆ ಜಾಲುಲಿ ಸೆಗಣಿ ಗುಡಿಸಿ ಶುದ್ದ ಮಾಡ್ದೆ. ಹೊಸ ಬೊಳ್ಳಿಂದ ಮಾಡ್ದ ಹೆಡಗೆಲಿ ಗಣಪತಿ ದೇವರ ಹೆಸರುಲಿ ಅವಲಕ್ಕಿ, ಬಾಳೆ ಹಣ್ಣು, ಕಬ್ಬುಗಳ ದೇವರಿಗೆ ಇಸುವೆ. ಕುಟುಂಬದವರ ಪರವಾಗಿ ಮೊದೊಳಿಗೆ ಗೂಡೆ ಕಾಡುನ ಹೂಗಳ ಇಸಿ ಬೇಡಿಕಂಡದೆ. ಹಿಂಗೆ ಮಾಡಿರೆ ಶುದ್ದಲಿರುವ ಗೂಡೆನ ಪೂಜೆಗೆ ದೇವರು ಒಕಂಡವೆ ಹೇಳ್ದು ಇವರ ನಂಬಿಕೆ. ಕೊರಗರ್‌ಲಿ ಆಟಿಕಳಂಜದಂತ ಒಂದ್ ಆಚರಣೆ ಉಟ್ಟು. ಇದರ ಅವು 'ಚುಣ್ಣಕಟ್ಟುನು' ಹೇಳ್ವೆ

ಕೊರಗರ ಗಂಡುಮಜ್ಜ ಒಬ್ಬ ಸೊಂಟಕ್ಕೆ ನೆಕ್ಕಿಸೊಪ್ಪು ಕಟ್ಟಿಕಂಡು ಇಡೀ ಮೆಯಿಗೆ ಕೆಂಪು ಪೂಜಿ ಡೋಲು, ಕೊಳಲು ತಾಟಿ ಬೊಟ್ಟಿಕಂಡ್ ಮನೆ ಮನೆಗೆ ಹೋದವೆ. ಕುರುದಿ ನೀರುನ ಮನೆನ ಗುರಿಕಾರ ವೇಷ ಹಾಕಿದವಂಗೆ ಹನಿಸುವೆ. ಸೀಕಲಿದ್ದ ಕೂಸುನ ವೇಸ ಹಾಕಿದ ಅಂವನ ಕೈಗೆ ಉಸಾರು ಇಲ್ಲದ ಕೂಸುನ ಕೊಟ್ಟು ವಾಪಸ್ ತೆಕಂಡವೆ ತಡ್ಪೆಲಿ ಒಳ್ಳಮೆಣಸು, ಒಣ್‌ಂಗಿಲ್ ಮೀನ್, ಅರಿಶಿನ ಕೊಂಬು, ಮಸಿನ ಇಸಿ ಕಳ್ದವೆ. ಅನಿಷ್ಟ ಕಳಿಯಕೆ ಕೈಳೆವ ಇದು ಒಂದ್ ದಾರ್ಮಿಕ ವಿದಿ. ಕಾಡ್‌ಲಿ ಇದ್ದರೂ ಕಾಡುನ ಬದುಕುಲಿ ತಮ್ಮ ನೆನಪುಗಳ




ಹಕ್ಕಲೆ ಮಾಡ್ದ ಕೊರಗರು ಅಲ್ಲಿ ಬೊಳ್ಳಿ, ಬೆದರುಲಿ, ಬದುಕುನ ಕಸುಬುನ ಕಟ್ಟಿಕಂಡೊಳ. ಕೊಜಂಬೆ, ಎಲಿಬೂರು, ಚೇನೇರಿ, ಸೂರು, ಮಾದೇರಿ ಬೂರು (ಬೊಳ್ಳಿ)ಗಳ ಕಡ್ದು ಬುಟ್ಟಿ ಮೀನುನ ಕುತ್ತೆರಿ, ಬತ್ತ ತುಂಬ್‌ಸುವ ಕದಿಕೆ, ದನ ಕರುಗಳ ಮೈ ಉಜ್ಜುವ ಉಜ್ಜು ಕುಚ್ಚಿ, ತಡ್ಪೆ, ಕಳಸೆ, ಪೆಟಾರಿ, ತೊಟ್ಟಿಲ್ನ ತಯಾರಿ ಮಾಡಿಕಂಡವೆ. ಪ್ರಾಣಿಗಳ ಎಲು, ಚರ್ಮಗಳ ಮಾರುದಲ್ಲದೆ ಮೊದ್ಲಳಿಗೆ ಬೇಕಾದಂತ ನಾರ್ ಬೇರ್‌ಗಳ ಕಾಡ್‌ಲಿ ಹುಡಿಕಿಕಂಡ್ ತಾದರ್‌ಲಿ ಬಿರ್‌ಸರ್.

ಅಲ್ಲದೆ ಗಟ್ಟಕ್ಕೆ, ಕಾಪಿ ತೋಟಕ್ಕೆ ಕೂಲಿ ಕೆಲಸಕ್ಕೂ ಹೋಕೊಂಡಿದ್ದ. ಜಾತಿ ಸಮಾಜಲಿ ಬೇರೆ ಆಗಿ ತೋರುವ ಕೊರಗರನ್ನ ಬಂದುತ್ವ ಸಮಾಜಲಿ ಮಡಿ ಮೈಲಿಗೆನ ಬಗ್ಗೆ ವಿಸೇಸ ಆಲೋಚನೆ ಇತ್ತ್. ಗಮ್ಮತ್ತುನ ಉಂಬಕ್ಕೆ ಒಬ್ಬನ ಎಲೆ ಊಟ ಇನ್ನೊಬ್ಬನ ಎಲೆಗೆ ಬಿದ್ದರೆ. ಊಟ ಮಾಡೋವು ಪೂರಾ ಉಂಬೊದು ಬುಟ್ಟು ಎದ್ದವೆ. ತೊಪ್ಪು ಮಾಡಿದವಂಗೆ ಎಲ್ಲರ ಎದುರು ನಿಲ್ಲಿಸಿ ತೊಪ್ಪು ದಂಡ ಹಾಕುತಿದ್ದ. ಅವ ಇನ್ನೊಂದು ಸರ್‌ತಿ ಗೆಡ್ಡೆನ ಊಟನ ಇಡೀ ಸೇರ್‌ದ ಜೆನಕ್ಕೆ ಕೊಡೊಕು. ಒಂದ್ ವೇಳೆ ಅದ್ಕೆ ಒಪ್ಪದಿದ್ದರೆ ಜಾತಿಂದ ಹೊರಗೆ ಹಾಕೊಂಡಿದ್ದ ಹೇಳ್‌ವ ವಿಚಾರ ಹಿರಿಯರಿಂದ ತಿಳ್ದದೆ. ತಲೆಗೆ ಇಸುವ ಮುಟ್ಟಾಳೆಲಿ ಕಳಿ ಅಡಂಗಿಸಿ ಇಸುವ ಆಚರಣೆ ಮುಂದೆನು ಇತ್ತು. ಕಳಿ ಅಡಂಗಿಸುವವ ಒಂದ್ ಹನಿ ನೆಲಕ್ಕೆ ಒಂದ್ ಹನಿ ಹಾಕಿದರೂ ಅವಂಗೂ ತೊಪ್ಪು ದಂಡ ಇತ್ತು. ಜಾತಿಲಿ ತನ್ನಂದ ಕೆಳಗೆ ಇದ್ದ ಜಾತಿಯವರೊಟ್ಟಿಗೆ ಗಂಡು ಹೆಣ್ಣು ಸಮ್ಮಂದ ಇಸಿಕಂಡರೆ ಅವರ ಜಾತಿಂದ ಹೊರಗೆ ಇಸಿಕಂಡಿದ್ದ. ಬೇರೆ ಜಾತಿನ ಗೂಡೆನ ಗಂಡು ಕುಲಕ್ಕೆ ವಿಸೇಸ ಆಚರಣೆ ಜಾರಿಲಿ ಇತ್ತು. ಕಾಡು ಕೆರೆನ ಕರೆಲಿ ಇಲ್ಲರೆ ಹಳ್ಳದ ಕರೆಲಿ ಸಾಲಾಗಿ ಕಟ್ಟಿದ ಏಳ್ ಬಿಡಾರಗಳ ಬೆದ್‌ರ್‌ನ ಕಟ್ಟಿಕಂಡ್ ತೊಪ್ಪು ಮಾಡ್ದ ಗೂಡೆ ಕೆರೆಲಿ ತಲೆಗೆ ಮೆಯಿಗೆ ಮೀದು ಬಾಕನ ಜಾತಿನ ಗುರಿಕಾರ ಈ ಬಿಡಾರಕೆ ಕಿಚ್ಚಿ ಕೊಟ್ಟದೆ. ಅದರ ಒಳಗೆ ಓಡಿಕಂಡ್ ಏಳು ಬಿಡಾರ ದಾಟಿ ಅವುಳು ಓಡಿ ಬರೋಕು. ಆಗ ಆ ಗೂಡೆಗೆ ಹೊಸ ಜೆನ್ಮ ಸಿಕ್ಕಿದೆ. ಅದ್ ಪವಿತ್ರತ ಹೇಳ್ವ ಏಳ್ ಜೆನ್ಮದ ಪಾಪ ಕೂಡ ಪವಿತ್ರ ಅತ್ ಹೇಳ್ವ ನಂಬಿಕೆ ಇತ್ತ್. ಇದೆ ಹೊತ್ತಲಿ ತೊಪ್ಪುಮಾಡ್ದ ಗಂಡ್‌ಗೆ ಕೋಲುಲಿ ಸರಿ ಬೊಡ್ಯೆತಿದ್ದ. ಗುಡಿಸಲ್ ಹೊತ್ತಿಸಿ ಆದರ ಬೂದಿನ ಹೈದ ಗೂಡೆನ ಮೈಗೆ ಪೂಜಿ ಅರಿಶಿನ ಹಾಕಿ ಓಕುಳಿ ನೀರ್‌ನ ಚಿಪ್ಪುಳ್ಸಿ ಅವರ ಸುದ್ದ ಮಾಡಿ ಜಾತಿಗೆ ಸೇರಿಸ್ತಾ ಇದ್ದ. ಇದ್ಕೆ ಅವ ಕರ್‌ಚಿನ ತಪ್ಪಿತಸ್ತರೇ ಕೊಡೋಕಿತ್ತು. ಕಾಡು ಮತ್ತೆ ನಾಡ್‌ನ ಗಡಿಗೆ ಬಂದ ಕೊರಗರ್ ಮಾಯ ಮತ್ತೆ ಜೋಗದ ನಡುನ ಸಮ್ಮಂದ ಬೆಲ್ಸುವ ನಂಬಿಕೆ ಉಟ್ಟು. ಈ ಜೆನಾಂಗದ ಜೆನಂಗಳಲ್ಲಿ ಒಂದ್ ವಿಸೇಸ ಶಕ್ತಿ ಉಟ್ಟು. ಅವರ ತೃಪ್ತಿ ಮಾಡಿರೆ ಒಳ್ಳೆದು ಅದೆಂತ ನಂಬುವೆ. ಗ್ರಹಚಾರ ದೋಸಕೆ ಪ್ರತಿ ಸನಿವಾರ ಕೊರಗರ್‌ಗೆ ಉಂಬಕೆ ಹಾಕುವೆ. ಇದ್ಕೆ ನೀಚಾನ್ನದಾನ ಹೇಳ್ವೆ. ಮಕ್ಕ ಇಲ್ಲದವು ಕೊರಗರ್‌ಗೆ ಉಂಬಕೆ ಹಾಕಿರೆ ಮಕ್ಕ ಆದವೆತ ಹೇಳ್ವ ನಂಬಿಕೆ ಉಟ್ಟು. ಸೀಕ್ ಬರದಾಂಗೆ ಇಲ್ಲರೆ ಸೀಕ್ ಬಂದವ ಗುಣ ಆಕೆ ರಕ್ಷಣಾ ಮಾಟ ಹೇಳಿ ಹೇಳ್ವೆ. ಮೊನ್ನ್‌ನ ಮಡಿಕೆಗೆ ಹಣ್ಣು ತುಪ್ಪ ಎಣ್ಣೆ ಹಾಕಿ ಸೀಕ್ ಇದ್ದವ ಅಂವನ ಮೋರೆ ನೋಡಿ ಅದ್ಕೆ ಕೂದಲ್ ಮತ್ತೆ ಉಗುರು ಹಾಕಿ ಕೊರಗರಿಗೆ ಕೊಟ್ಟರೆ ಸೀಕ್ ಹೋದೆ ತ ನಂಬಿಕೆ ಇತ್ತು. ಹೆಣ್ಣು ಮಗಲ್ ಮೈಗೆ ಹಾಕಿದ ಬಟ್ಟೆನ ತೆಗ್ದ್ ಕೊರಗೆದಿ ಕೊಟ್ಟದೆ.

ಹಾಳು ಪೂರಾ ನಂಗೆ ಇರಲಿ ಒಳ್ಳೆದು ಪೂರಾ ನಿಂಗೆ ಇರಲಿತ ಹೇಳಿ ಗ್ರಹಚಾರ ಕಮ್ಮಿಯಾದೆಂತ ಹೇಳ್ವ ನಂಬಿಕೆ ಇತ್ತ್. ಮೇಲೆ ಜಾತಿನವು ಹೆತ್ತ ಕೂಸುನ ಕೊರಗೆದಿ ತೆಕಂಡು ದ್ರಿಸ್ಟಿ ತೆಗೆವ ಕ್ರಮ ಉಟ್ಟು. ಕೊರಗೆದಿಗೆ ಹೊಟ್ಟೆ ತುಂಬಾ ಉಂಬಕೆ ಹಾಕಿ ತಲೆಗೆ ಎಣ್ಣೆ ಹಾಕಿ ಅಕೇರಿಗೆ ಕೂಸುನ ಅವರ ಕೈಂದ ತೆಕಂಡವೆ. ಆ ಹೆಂಗಸು ಕೂಸುಗೆ ಹೊಟ್ಟೆ ತುಂಬಾ ಹಾಲು ಕೊಟ್ಟು ಅದಕ್ಕೆ ಕೊರಗರ ಕೊರಪೋಳು ತ ಹೆಸರು ಇಸುವೆ. ಕೂಸುನ ಹೆತ್ತವ್ವ ತಡ್ಪೇಲಿ ಅಕ್ಕಿ, ಕಾಯಿ, ಸೀರೆ, ದುಡ್ಡು ಇಸಿ ಕೊಟ್ಟರೆ ಅದರ ತೆಕಂಡು ಕೂಸುನ ವಾಪಸ್ ಕೊಟ್ಟವೆ. ಇಂತ ಕಟ್ಟಲೆ ಅಮಾಸೆನಂದ್ ನಡ್ದದೆ. ಇದರುಂದ ಕೂಸುನ ಆಯ್ಸ್ ಹೆಚ್ಚಾದೆಂತೇಳಿ ನಂಬಿಕೆ. ತುಳುನಾಡ್ಲಿ ಬಾರಿ ಹೆಮ್ಮೆ ಪಡೆವ ಕಂಬಳಲಿ 'ಪನಿ ಕುಲ್ಲುನು' ದರ ಕೊರಗರ್ ನಡ್ಸಿಕೊಟ್ಟವೆ. ಗೈಮೆ ಗದ್ದೆ ಸಾಗುವಳಿಗೆ ಸಮ್ಮಂದ ಪಟ್ಟ ದತ್ತಿ ಗದ್ದೆಲಿ ಎತ್ತ್ ಓಡ್ಸುವ ಈ ಆಚರಣೆಲಿ ಅವು ಒಂದ್ ಪಾತ್ರ ಆಗಿದ್ ಬಂದವೆ. ಕಂಬುಳದ ಮುಂದೆನಂದ್ ಹಗಲು ಇರ್‌ಲ್ ನಿದ್ರೆ ಮಾಡದೆ ಡೋಲ್ ಬೊಟ್ಟಿಕಂಡು ಕಂಬಳದ ಗುರಿಕಾರಂಗೆ ಬೈಕಂಡು, ಬಪ್ಪರ್ ಮಾತಾಡಿಕಂಡು ಕಳಿ ಕುಡ್ಕಂಡು ಬೊಳ್ಪು ಮಾಡ್‌ವೆ. ಮಂಜೊಟ್ಟಿಗೆ ಕೋಣಂಗ ಇಳ್ದರೆ ಮುಂದೆಗೆ ಕಂಬಳದ ಗದ್ದೆಲಿ ಇನ್ನೊಬ್ಬ ಅದರ ಓಡ್ಸಿದೆ. ಕಂಬಳದ ಗದ್ದೆಲಿರುವ ನೀಚ ಶಕ್ತಿಗ ಓಡ್‌ವ ಕೋಣಗಳಿಗಾಗಲಿ, ಹೈದಂಗಳಿಗಾಗಲಿ ಸೋಂಕಿಕೆ ಬೊತ್ತುತ ಹೇಳಿ ಇಂತ ಆಚರಣೆ ತ ಹೇಳ್‌ವೆ. ಡೋಲು ಬೊಟ್ಟುದು ಕುಣೆದರುಂದ ಯಾದೇ ಬೇಡದ ಸಕ್ತಿಗ ಕಂಬಳದ ಗದ್ದೆಗೆ ಬಾಕೆ ಸಾದ್ಯ ಇಲ್ಲೆ ಹೇಳ್‌ವ ನಂಬಿಕೆ ಉಟ್ಟು. ಕೊರಗರ್ ತುಳುನಾಡ್‌ಲಿರ್‌ವ ಎಲ್ಲಾ ರೀತಿ ರಿವಾಜ್ಲಿ ಹಿಂದೆನೇ ನೆಲೆ ಆದವುಂತ ಕಂಡು ಬಂದವೆ. ಇದ್ಕೆ ಅವು ಮಾತಾಡ್‌ವ ಬಾಸೆನು ಸಾಕ್ಷಿಯಾಗುಟು. ತುಳುನೆ ಆದರೂ ಅದರ್‌ಲಿ ಇರ್‌ವ ವ್ಯಂಜೆನ ಸ್ವರದ ಉಚ್ಚಾರಣೆ ಮತ್ತೆ ಬಳಕೆಲಿ ಅದರ ವ್ಯಾಕರಣಾಂಸಂದ್ದಾಗಿ ಅದ್ ಉತ್ತರ ದ್ರಾವಿಡ ಬಾಷೆ ಆದ ಬ್ರಾಹೂಯಿಗ್ ಹಕ್ಕಲೆ ಉಟ್ಟಂತೇಳಿ ಬಾಷಾ ವಿಜ್ಞಾನಿಗ ಹೇಳ್ವೆ. ಕೊರಗ ಬಾಸೆ ಒಂದ್ ಉಪಬಾಷೆ. ಅಲ್ಲದೆ ಅದ್ ಬೇರೆನೇ ಬಾಸೆ ಆಗಿದ್ದದೆತ ಹೇಳ್ವ ಚರ್‌ಚೆ ಇದ್ದರು ದ್ರಾವಿಡ ಬಾಷಾ ವಿಜ್ಞಾನಲಿ ಕೊರಗ ಬಾಸೆಗು ವಿಸೇಸ ಮೊರ್ಯಾದೆ ಉಟ್ಟು. ಕೊರಗ ತನಿಯ ಕೊರಗರ ಮೂಲ ಪುರುಷ. ಮೇಲೆ ಜಾತಿನವರ ಅನ್ಯಾಯ ಮೋಸನ ನಿಲ್ಸಿದ್ದವೆ. ಹಂಗಾಗಿ ಒಬ್ಬ ಸಾಂಸ್ಕೃತಿಕವೀರ ಆಗಿ ಕೊರಗರ್ ಇಂದುಸಾ ಅಂವನ ನಂಬಿಕಂಡು ಬಂದೋಳ.

ಬಟ್ರ್‌ಗ ಅಲ್ಲದೆ ಬೇರೆ ಎಲ್ಲಾ ಜಾತಿಯವು ಕೊರಗಜ್ಜಂಗೆ ಹರ್‌ಕೆ ಹೇಳಿಕಂಡ್ ನಂಬುವೆ.ದನಕರ್‌ಗನೊ ಅಲ್ಲರೆ ಯಾದೆ ಸೊತ್ತ್ ಕಳ್ದ್ ಹೋದರೆ ಕೊರಗಜ್ಜಂಗೆ ಕುಡಿಯಕೆ ಕೊಟ್ಟನೆತೇಳಿ ಹರ್‌ಕೆ ಹೇಳಿಕಂಡವೆ. ಕೊರಗ ತನಿಯಂಗೆ ಜೇಟಿಗೆ ಇಲ್ಲದೆ ತಿಂಗೊಳ್ ಬೊಳ್ಪುಲಿ ಕೊಡುವ ಕೋಲನ ಹೆಣ್ಮಕ ನೋಡಿಕೆ ಬೊತ್ತುತ ಉಟ್ಟು.

ಹಿಂಗೆ ಕೊರಗರ್ ಕಾಡ್‌ಂದ ನಾಡ್‌ವರೆಗೆ, ನಾರ್ ಬೇರ್‌ಂದ ದೆವ್ವ ದೇವ್ರ ವರೆಗೆ ಒಳೊ.ಹಳೆ ಸಂಸ್ಕೃತಿನ ಬೇರ್‌ಗ ಇವರ್‌ಲಿ ಇನ್ನು ಉಟ್ಟು. ಗಂಡ್ ಹೆಣ್ಣ್ ಬೇದ ಇಲ್ಲದೆ ಎಲ್ಲವು ಮೊಯಿಂಸರ್‌ತೇಳ್‌ವ ನಂಬಿಕೆನ ಕಟ್ಟ್‌ಪಾಡ್‌ಗ, ಕ್ರಮಗ ಇಂದ್ ಬದಲಾಕಂಡುಟ್ಟು. ಕೊರಗರ್ ಕಾಡ್‌ಬುಟ್ಟ್ ಊರ್‌ಗೆ ಬಂದೊಳೊ. ದುಡಿಮೆ ಮಾಡಿ ಸಂಪಾದ್‌ಸ್‌ತೊಳೊ, ಓದ್‌ಬರ ಕಲಿತೊಳೊ. (ಜಿ.ಸಿ.)

**ಕೊಳಂಬೆ ಪುಟ್ಟಣ್ಣ ಗೌಡ :** 1903–1981. ಇವ್ 1903ರ ಜುಲೈ 15ರಂದ್ ಸುಳ್ಯ ತಾಲ್ಲೂಕ್‌ನ ಚೊಕ್ಕಾಡಿಲಿ ಹುಟ್ಟಿದೊ. ಇವರ ಅಪ್ಪ ಸುಬ್ರಾಯಗೌಡ, ಅಯ್ಯೆ ಸುಬ್ಬಮ್ಮ. ಸುಳ್ಯದ ಹಕ್ಕಲೆನ ಅಮರ ಪಡ್ನೂರು ಗ್ರಾಮದ ಅಜ್ಜನಗದ್ದೆ ಸಾಲೆಲಿ ಪ್ರಾಥಮಿಕ ಶಿಕ್ಷಣ ಮಾಡ್‌ದೊ. ನಾಲ್ಕನೆ ತರಗತಿನ 'ದರ್ಬಾರ' ತೇಳ್‌ವ ಪರೀಕ್ಸೆಲಿ ಉತ್ತೀರ್ಣ ಆದ್ದಲ್ಲದೆ ಇನಾಮು ಪಡ್‌ಕಂಡಿದ್ದೊ. 1924ರ್‌ಲಿ ಅಧ್ಯಾಪಕರ ತರಬೇತಿ ಪಡ್‌ದ್ ಅವ್ ಓದಿದ ಅಜ್ಜನಗದ್ದೆ ಸಾಲೆಗೆ ಮಾಸ್ಟ್‌ರಾಗಿದ್ ಸೇರಿ, ವಿದ್ವಾನ್ ಪರೀಕ್ಸೆಲಿ ಪಾಸಾದ ಮೇಲೆ ಮುಖ್ಯೋಪಾಧ್ಯಾಯು ಆಗಿದ್ ಬಡ್ತಿ ಪಡ್‌ಕಂಡೊ. ಅದಾಗಿ ಪಂಜ, ಕೋಟಿಮುಂಡುಗಾರು, ಬೊಬ್ಬೆಕೇರಿ ಉಪ್ಪಿನಂಗಡಿ,, ಮಾಣಿ, ಪುತ್ತೂರು ಇಂತ ಕಡೆಲೆಲ್ಲ ಕೆಲ್‌ಸ ಮಾಡಿ 1958ರ್‌ಲಿ ಸುಳ್ಯದ ಬೋರ್ಡ್ ಹೈಸ್ಕೂಲ್‌ಲಿ ಮಾಸ್ಟ್‌ರ್ ಆಗಿರಿಕನ ನಿವೃತ್ತರಾದೊ. ಮಾಸ್ಟ್‌ರ್



ಕಾಲಲಿ ಇವ್‌ಕೆ ಸಾಹಿತ್ಯದ ದೋಸ್ತಿಗ ಆಗಿದ್ದೊವ್ ಎಂ.ಎಸ್. ಕಾಮತ್, ಉಗ್ರಾಣ ಮಂಗೇಶರಾವ್, ಮೊಳಹಳ್ಳಿ ಶಿವರಾಯರು. ಇವರ ಪ್ರೋತ್ಸಾಹಂದ ಕತೆ, ಕವನ, ನಾಟಕಗಳ ಕಟ್ಟ್‌ತಿದ್ದೊ. ಯಕ್ಷಗಾನ ಕಲೆ ಮನೆತನಕೆ ಬಂದ ಹವ್ಯಾಸ, ಯಕ್ಷಗಾನದ ಬಗ್ಗೆ ಇವ್ ಬರ್‌ದ ಸುರುನ ಕೃತಿ 'ಅಂಧಕಾಸುರ ಕಾಳಗ' 1926ರ್‌ಲಿ ಪ್ರಕಟ ಆತ್. ಯಕ್ಷಗಾನ ಕಲೆಲಿ ಹೆಸರ್ ಮಾಡ್‌ದವಾಗಿದ್ದ್ ರಂಗದ ಮೇಲೆನು ಸುಮಾರ್ ಪಾತ್ರಗಳ ನಿರ್ವಯಿಸತಿದ್ದೊ. ಅದರ್‌ಲಿ ಕೃಷ್ಣಸಂಧಾನ ಪ್ರಸಂಗಲಿ ಕೌರವನ ಪಾತ್ರದಾರಿ ಆಗಿದ್ ಅವರ ಮಾತ್‌ನ ಸೈಲಿಂದ ಜನಪ್ರಿಯ ನಟರ್ ಆದೊ. ದೇರಾಜೆ ಸೀತಾರಾಮಯ್ಯ, ಅಜ್ಜನಗದ್ದೆ ಕಲಾವಿದರೊಟ್ಟಿಗೆ ನಾಟಕ ರಂಗನ ಬೆಳ್‌ಸಿದೊ.. 'ಶಾರದಾಂಬ ಕೃಪಾ ಪೋಷಿತ ಯಕ್ಷಗಾನ ಮಂಡಲಿ' ತೇಳ್‌ವ ಸಂಸ್ತೆನ ಕಟ್ಟಿದೊ. ಕವನ, ಸಣ್ಣಕತೆ, ನಾಟಕ ಇಂತ ಪ್ರಕಾರಗಳ್‌ಲಿ ಸುಮಾರ್ ಕೃತಿಗಳ ಕಟ್ಟಿಯೊಳೊ. 'ಹೂವೀಡು', 'ಮಾತಿಲ್ಲ ಮಾತಿಲ್ಲ' ತೇಳ್‌ವ ಎರ್‌ಡ್ ಶಿಶು ಸಾಹಿತ್ಯ ಕೃತಿಗ ಮುಕ್ಯ ಆದಂತದ್. 'ಕಾಲೂರ ಚೆಲುವೆ', 'ನುಡಿವಣಿಗಳು' ಅಚ್ಚಕನ್ನಡದ ವಿಸೇಸ ಕೃತಿಗ. ಆಂಡಯ್ಯನ ಕಬ್ಬಿಗರ ಕಾವ, ಮುಳಿಯ ತಿಮ್ಮಪ್ಪಯ್ಯನವರ ಸೊಬಗಿನ ಕಾವ್ಯ ಮಾರ್ಗಲಿ ಕಟ್ಟಿದಂತ ಕೃತಿಗ. ಸುಮಾರ್ 440 ಚೌಪದಿಂದ ಕೂಡಿರ್‌ವ 'ಕಾಲೂರ ಚೆಲುವೆ' ಬಾರೀ ಲಾಯ್‌ಕ್‌ನ ಕಾವ್ಯ ಆಗಿದ್ದರೆ 'ನುಡಿವಣಿಗಳು' ಮುಕ್ತಕಗಳ ಸಂಕಲನ. ಇವರ ಮತ್ತೊಂದು ಮುಕ್ಯ ಕೃತಿ ತೇಳಿರೆ 'ಅಚ್ಚ ಕನ್ನಡದ ನಿಘಂಟು'. ಹಸ್ತ ಸಾಮುದ್ರಿಕಾ ಸಾಸ್ತ್‌ರನ ಕಲಿವ ಆಸಕ್ತಿಂದ ಕಲ್ತಿದ್ದ ಪುಟ್ಟಣ್ಣ ಗೌಡ್ರ್ 'ಬೆರಳುಗಳಿಂದ ಅದೃಷ್ಟ' ತೇಳ್‌ವ ಹಸ್ತ ಸಾಮುದ್ರಿಕಾ ಸಾಸ್ತ್‌ರದ ಪುಸ್ತಕನ ಬರ್‌ದೊಳೊ.

ಬಹುಮುಖ ಪ್ರತಿಬೆ ಆಗಿದ್ದ ಪುಟ್ಟಣ್ಣ ಗೌಡ್ರ್ ಯಕ್ಷಗಾನಲಿ ಪಾತ್ರ ಮಾಡ್‌ದಾಂಗೆ ಹರಿಕಥೆಗಳನು ಮಾಡಿ ಜನರ ಮನ್ಸ್‌ನ ಗೆದ್ದದ್ದೊ. ಸೊತಂತ್ರ್ಯ ಹೋರಾಟಲಿ ಕೂಡಿದ್ ಸುಮಾರ್ ದೇಶಭಕ್ತಿಗೀತೆಗಳ ಬರ್‌ದ್‌ದ್ 'ಪರಡೆ ಕಳಿ ಗಂಗಸರ' ತೇಳ್‌ವ ತುಳು ಪೊದ್ಯ ಬಹುಜನಪ್ರಿಯ ಪೊದ್ಯ ಆಗಿತ್ತ್. ಅಚ್ಚಕನ್ನಡ ಪದ ಪ್ರಯೋಗಗಳ್‌ಂದ ಬಾಸೆನ ಪೊರ್‌ಲ್‌ನ ಹೆಚ್ಚಿಸಿ ಸಾಹಿತ್ಯ ಹಾಂಗೆ ಯಕ್ಷಗಾನ ಕಲೆನ ಸಾಂಕತಿದ್ದೊ.

**ಕೋಡಿ ಕುಶಾಲಪ್ಪ ಗೌಡ :** 1931–2022. ಕನ್ನಡ ಬಾಸೆನ ವಿದ್ವಾಂಸರ್, ಬರಹಗಾರರ್, ದ್ರಾವಿಡಾಲೊಜಿಸ್ಟ್ ಮತ್ತೆ ಬಾಸಾತಜ್ಞರ್, ದ್ರಾವಿಡ ಬಾಸಾ ವಿಜ್ಞಾನ ಹಾಂಗೆ ಕನ್ನಡ ಉಪಬಾಸೆಗಳ ಅದ್ಯಯನಲಿ ಪ್ರೊ.ಕೆ. ಕುಶಾಲಪ್ಪ ಗೌಡರದ್ ದೊಡ್ಡ ಹೆಸ್ರ್. ಆದುನಿಕ ಬಾಸಾ ವಿಜ್ಞಾನ ಮತ್ತೆ ಪರಂಪರಾಗತ ವ್ಯಾಕರಣ ಸಾಸ್ತ್ರಲಿ ಗೇನ ಪಡ್ಕಂಡ ಅಂತಾರಾಷ್ಟ್ರ ಮಟ್ಟದ ವಿದ್ವಾಂಸರ್. ಮದ್ರಾಸ್ ವಿಶ್ವವಿದ್ಯಾಲಯಂದ ಬಿ.ಎ.(ಆನರ್ಸ್), ಎಂ.ಎ. ಮತ್ತೆ ಅಣ್ಣಾಮಲೈ ವಿ.ವಿಂದ ಭಾಷಾ ವಿಜ್ಞಾನ ಡಿಪ್ಲೊಮಾ, ಎಂ.ಲಿಟ್. ಮತ್ತೆ ಪಿಎಚ್.ಡಿ. ಅದ್ಯಯನ ಮಾಡ್ದ ಪದವೀದರರ್. 1963ರ್‌ಲಿ ಅವ್ ಅಣ್ಣಾಮಲೈ ವಿಶ್ವವಿದ್ಯಾಲಯಂದ ಡಾಕ್ಟರೇಟ್ ಪದವಿ ಪಡ್‌ದೊಳೊ.

ಕೋಡಿ ಕೃಷ್ಣಪ್ಪ ಮತ್ತೆ ಕೋಡಿ ಗೌರಮ್ಮ ಅವ್ಕೆ ಮಂಜನಾಗಿ 1931ರ ಮೇ 31ರಂದು ಕೊಡಗ್ ಜಿಲ್ಲೆನ ಬಡಗ ಬಾಗದ ಪೆರಾಜೆನ ಕೋಡಿಲಿ ಜೆನಿಸಿದೊ. 03.09.2022ರಂದ್ ಪುತ್ತೂರ್‌ಲಿ ತೀರಿ ಕೊಂಡೊ.




ಕೋಡಿ ಕುಶಾಲಪ್ಪ ಗೌಡರ್ ಸುಳ್ಯಲಿ ಬೋರ್ಡ್ ಹೈಸ್ಕೂಲ್, ಪುತ್ತೂರ್ ಫಿಲೋಮಿನಾಲಿ ಹಾಂಗೆ ಮಡಿಕೇರಿಲಿ ವಿದ್ಯಾಬ್ಯಾಸ ಸುರುಮಾಡ್‌ದೊ.

ಮದ್ರಾಸ್‌ನ ಪ್ರೆಸಿಡೆನ್ಸಿ ಕಾಲೇಜ್‌ಲಿ ಸಹಾಯಕ ಕನ್ನಡ ಪ್ರಾಧ್ಯಾಪಕರಾಗಿ ವೃತ್ತಿ ಜೀವನ ಆರಂಬ್‌ಸಿದ ಇವ್ ಅಣ್ಣಾಮಲೈ ವಿಶ್ವವಿದ್ಯಾನಿಲಯಲಿ



ಭಾಷಾ ವಿಜ್ಞಾನ ಪ್ರೌಢ ಅಧ್ಯಯನ ಕೇಂದ್ರಲಿ ನಿರ್ದೇಸಕರಾಗಿ ಸೇವೆ ಮಾಡ್ಯೊಳೊ. ಕ್ರಿ.ಶ.1000 ರ್‌ಂದ 1400 ರ ವರೆಗೆ ದಕ್ಷಿಣ ಕನ್ನಡ ಮತ್ತೆ ಉತ್ತರ ಕನ್ನಡ, ಕೊಡಗ್ ಜಿಲ್ಲೆನ 'ಕನ್ನಡ ಶಾಸನಗಳ ಭಾಷಿಕ ಅಧ್ಯಯನ' ಮಾಡ್ಯೊಳೊ. 'ಕನ್ನಡ ಭಾಷಾವಲೋಕನ'(1984), 'ಕನ್ನಡ ಭಾಷೆ ಮತ್ತು ವ್ಯಾಕರಣಗಳು: ಒಂದು ಅಧ್ಯಯನ' (1987), 'ಕನ್ನಡ ತಿರುಳು ಕನ್ನಡ ಮತ್ತು ಸಮಾಜ'(1991), 'ಕನ್ನಡ ಭಾಷೆ ಮತ್ತು ವ್ಯಾಕರಣಗಳ ಒಂದು ಸಮೀಕ್ಷೆ'(2008), 'ಕನ್ನಡ ಸಂಕ್ಷಿಪ್ತ ವ್ಯಾಕರಣ'(2014), 'ವಡ್ಡಾರಾಧನೆನ ಭಾಷಿಭಾಷಿಕ ಅಧ್ಯಯನ', 'Gowdakannada'(1970), 'AGrammar of Kannada', 'Dravidian Caste System', 'A Course in Modern Kannada'(1991) ಇಂತ ಬಾಸಾ ವಿಜ್ಞಾನ ಪುಸ್ತಕಗಳ ಬರ್ದೊಳೊ. ಗಂಗಾದೇವಿ ವಿರಚಿತ ಮಧುರಾವಿಜಯಂ, ಕಂಬನ, ಪವಿತ್ರಗಳು (ಜಯಸೆಂಧಿಲ್ ನಾಥನ್ ಅವರೊಡನೆ) ಅನುವಾದ ಕೃತಿಗ; ಊರೊಸಗೆ, ಕಡಲ ತಡಿಯ ಕನವರಿಕೆ, ಕಮಲ ನಿಮೀಲನ, ದಕ್ಷಿಣ ಕನ್ನಡ ಜಿಲ್ಲೆನ ಕೈಫಿಯತ್ತುಗಳು, ಸಿಂಜಿನಿ – ಸೃಜನಶೀಲ ಕೃತಿಗಳ ಬರ್ದೊಳೊ. ಸುಳ್ಯಲಿ 1994ರ್‌ಲಿ ನಡ್‌ದ ದಕ್ಷಿಣ ಕನ್ನಡ ಜಿಲ್ಲಾ ಸಾಹಿತ್ಯ ಸಮ್ಮೇಳನದ ಗುರ್‌ಕಾರ್‌ರ ಗೌರವ ಪಡ್ಕೊಂಡೊಳೊ. ಮರಗೋಡ್‌ಲಿ 2003 ರ್‌ಲಿ ನಡ್ದ ಮಡಿಕೇರಿ ತಾಲೂಕು ಕನ್ನಡ ಸಾಹಿತ್ಯ ಸಮ್ಮೇಳನ ಗುರಿಕಾರ ಆಗಿದ್ ಪಾಲ್ ಪಡ್‌ದೊಳೊ. ಸಾಹಿತ್ಯ ಸಂಶೋದನೆನ ಗೈಮೆನ ಗುರ್‌ತಿಸಿ ಅವ್ಕೆ ಚಿದಾನಂದ ಪ್ರಶಸ್ತಿ, ಕರ್ನಾಟಕ ಅರೆಭಾಷೆ ಸಂಸ್ಕೃತಿಮತ್ತು ಸಾಹಿತ್ಯ ಅಕಾಡೆಮಿನ ಗೌರವ ಪ್ರಶಸ್ತಿ, ಕೆವಿಜಿ ಪ್ರಶಸ್ತಿ, 'ಕನ್ನಡ ಭಾಷಾವಲೋಕ'ನ ಕೃತಿಗೆ– 'ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿ' ಪ್ರಶಸ್ತಿ, 'ಆಳ್ವಾಸ್ ನುಡಿಸಿರಿ' ಪ್ರಶಸ್ತಿ, ಮುಳಿಯ ಪ್ರಶಸ್ತಿ, ಸೇಡಿಯಾಪು ಪ್ರಶಸ್ತಿ, ಸೋವಿಯತ್ ಲ್ಯಾಂಡ್ ಪ್ರಶಸ್ತಿ ಹೀಂಗೆ ಸುಮಾರ್ ಪ್ರಸಸ್ತಿಗ ಬಂದುಟು.

ನಾಡ್‌ನುಡಿ ಚಿಂತನೆ ನೆಲೆಲಿ ಕೆಲ್ಸ ಮಾಡ್ದ ಕುಶಾಲಪ್ಪ ಗೌಡರ್ ಅರೆಬಾಸೆಲಿ ಲಾಯ್ಕನ ಗೆಯ್ಮೆ ಮಾಡ್ಯೊಳೊ. 2014ರ್‌ಲಿ ಪುರಾಣ ಕತೆನ ಅರೆಬಾಸೆಲಿ 'ಮಾನಸ ಮಹಾಭಾರತ', 2019ರ್‌ಲಿ ಅರೆಬಾಸೆ ಮತ್ತೆ ವ್ಯಾಕರಣ ಬಗೆಲಿ 'ಅರೆಭಾಷೆ(ಗೌಡಕನ್ನಡ) ವ್ಯಾಕರಣ' ತೇಳ್‌ವ ಪುಸ್ತಕ ಬರ್ದೊಳೊ.

**ಕೋಲಾಟ :** ಕೋಲಾಟ ಜೆನಪದ ಮನರಂಜೆನಾ ಕಲೆ. ಕೋಲುಗಳ್‌ಂದ ಆಡ್‌ವ ಆಟ ಆದ್‌ರ್‌ಂದ ಇದ್ಕೆ ಕೋಲಾಟತ ಹೇಳ್‌ವೆ. ಸಂಗೀತ ಮತ್ತೆ ಕೊಣ್‌ತ ಎರಡೂ ಇರ್‌ದರ್‌ಂದ ಈ ಆಟನ ಗ್ರಾಮ ಬೊದ್ಕುನ ಒಂದ್ ವಿಸೇಸ ಮನರಂಜೆನೆ ಕಲೆ ಆಗುಟು. ಸುಗ್ಗಿ ಕಾಲದ ಹಬ್ಬಗಳ್‌ಲಿ ಕೊಣ್‌ತ ಮಾಡ್‌ವೆ. ಕೋಲಾಟ ಹಳ್ಳಿಲಿ ತುಂಬಾ ಹೆಸ್‌ರ್ ಪಡ್ಕೊಂಡುಟು.

ಕೋಲಾಟಲಿ ಸುಮಾರ್ ಎಂಟರ್‌ಂದ ಇಪ್ಪತ್ನಾಲ್ಕ್ ಜೆನಗ ಕೋಲ್ ಆಡ್‌ವ ಕಲಾವಿದರಿದ್ದವೆ. ಹೈದಂಗ ಮತ್ತೆ ದೊಡ್ಡೊವು ಇದರ್‌ಲಿದ್ದವೆ. ಕೊಣ್‌ತಲಿ ಕೋಲುಗಳ್ದೇ ದೊಡ್ಡ ಪಾತ್ರ. ಕೋಲುನ ನೀರಂಜಿ, ಬೈನೆ, ಪೇರ್ಳ, ಕಾರೆ ಇಂತ ಮರ ದೈಗಳ್‌ಂದ ಮಾಡ್‌ವೆ. ಆಟಲಿ ಗೆಜ್ಜೆ, ತಾಳ ಮತ್ತೆ ದಮ್ಮಡಿಗಳ ಬಳ್ಸುವೆ. ತಾಳ ಮತ್ತೆ ದಮ್ಮಡಿ ಬಾರ್‌ಸಿಕೆತ ಬೇರೆನೇ ಪರಿಣತರಿದ್ದವೆ. ಕೊಣ್ಯವು ಅವರ ಕಾಲ್‌ಗ್ ಗೆಜ್ಜೆ ಕಟ್ಟಿಕಂಡವೆ. ಇದ್ ಅವರ ಕೊಣ್‌ತಕೆ ಆವೇಸ, ಹುಮ್ಮಸ್ಸ್ ಕೊಟ್ಟದೆ. ತಾಳ ಹಾಕ್‌ವ ಮತ್ತೆ ದಮ್ಮಡಿ ಬೊಡೆಯೊದ್ ಕೊಣ್‌ತನ ಗಟ್ಟಿಗೊಳ್ಸಿದೆ.

**ಕೋಲಾಟದ ಒಂದ್ ದೃಸ್ಯ :** ಕೋಲಾಟಲಿ ಸುಮಾರ್ ರೀತಿಗ ಕಂಡ್‌ಬಂದವೆ. ಆಟಗಾರರ್ ವೃತ್ತಾಕಾರಲಿ ಸುತ್ತಿಕಂಡ್ ಅವರ ಎರ್‌ಡ್ ಕೈಗಳ ಕೋಲುಗಳ್‌ಂದ ಒಂದರ್‌ರ್‌ದ ಒಂದ್ ಹೊಡೆತಿದ್ದರೆ ಇದ್ಕೆ ಸುತ್ತಕೋಲುತ ಹೇಳ್ವೆ. ಇದರ ವಿಸ್ರಾಂತಿನ ಆಟತನೂ ಕರೆದುಟ್ಟು. ಕೋಲುಗ ಬೇರೆವರ ಕೋಲುಗಳಿಗೆ ಹೊಡ್ದರೂ ಹೊಡೆದ ಹಾಂಗೆ ಹಾರ್ಲೆ ಅದ್ ಹಾರ್‌ಗಟಕುತ ಕರ್‌ಸಿಕಂಡದೆ. ಇದರ್‌ಲಿ ಆಟಗಾರರ್ ಸಾಮಾನ್ಯವಾಗಿ ಕೋಲುಗಳ ಮತ್ತೊಬ್ಬರ ಕೋಲುಗಳಿಗೆ ಹೊಡ್ದವೆ. ತೇರುಕೋಲ್‌ಲಿ ಅರ್‌ದ ಜೆನ ಹಿಂದಕೆ ಒಳ್ದರ್‌ದ ಜೆನ ಅವರ ಮೇಲೆ ಬೊಗ್ಗಿದಾಂಗಿದ್ದ್ ತೇರ್ ನಂಗೆ ಸಾಗುದರ್‌ಂದ, ಈ ಹೆಸ್ರ್ ಬಂದಾಂಗೆ ಕಂಡದೆ. ಆಟಗಾರರ ಮನೆನ ದಾಟಿಕಂಡ್ ಕೋಲು ಕೊಡುವ ರೀತಿಗೆ ಮನೆಕೋಲ್‌ತೇಳ್ವೆ. ಒಬ್ಬೊಬ್ಬ ಆಟಗಾರನೂ ಒಬ್ಬೊಬ್ಬರ್‌ನೇ ದಾಟಿ ಕೋಲುಕೊಡುವ ವಿದಾನಕೆ ಒಂದ್ಮನೆ ಕೋಲುತೇಳ್ವೆ, ಇಬ್ಬೊರ ದಾಟಿ ಕೋಲು ಕೊಡುವ ವಿದಾನಕ್ಕೆ ಎರ್‌ಡ್ ಮನೆ ಕೋಲು ತ ಕರ್‌ದವೆ.

ಜಡೆಕೋಲ್‌ತ ಹೇಳ್ದು ಕೋಲಾಟಲಿ ಒಂದ್ ವಿಸೇಸ ಬಗೆ. ಆಟದ ಸುರೂಗೆ ಬೊಳ್ಳಿಗಳ್‌ಂದ ಜಡೆನ ನೆಯ್ದ್ ಜೋಡ್ಸಿ ಅದರ್‌ಂದ ಕೊಡಿನ ಜಡೆ ಅತವಾ ಬೊಳ್ಳಿನ ಬುಡ್ಸಿ ಬುಡೊಕು. ಈ ಬುಟ್ಟ ಬೊಳ್ಳಿಗ ಸೇರ್‌ಸಿದ ದಿಂಡುಜಡೆನ ಯಾದಾದರೊಂದ್ ಗೂಟಕೆ

ಕಟ್ಟಿದ್ದವೆ. ಒಳ್ದ ಬಿಚ್ಚಿದ ಬೊಳ್ಳಿಗಳ ಕಲಾವಿದರ್ ಸೊಂಟಕ್ಕೆ ಕಟ್ಟಿದ್ದವೆ. ಕೋಲು ಹೊಡೆಕನ ಬಿಚ್ಚಿದ ಬೊಳ್ಳಿಗಳೆಲ್ಲಾ ಸೇರ್‌ಸಿಕಂಡ್ ಜಡೆನ ಆಕಾರಕೆ ತಿರುಗುದರ್‌ಂದ ಇದ್ಕೆ ಜಡೆಕೋಲು ತ ಹೆಸ್ರ್ ಬಂದುಟು. ಗೀಜಗನ ಕೋಲು ಮತ್ತೊಂದು ವಿಸೇಸ ರೀತಿನ ಆಟ. ಎರ್‌ಡ್ ಕೈಲೂ ಜೋಡ್ಸಿಕಂಡಿರ್‌ವ ಕೋಲುಗಳ ಎಡಕ್ಕೊಂದು ಸರ್‌ತಿ ಬಲಕ್ಕೊಂದು ಸರ್‌ತಿ ಕೊಟ್ಟು, ಮೂರ್‌ನೆ ಪೆಟ್ಟಿಗೆ ಎರ್‌ಡ್ ಕೈಗಳ ಮೇಲೆತ್ತಿ ಹೊಡ್ದು ಬಲಲಿದ್ದವಂನ ಎಡಕ್ಕೆ ಎಡಲಿದ್ದಂವ ಬಲಕ್ಕೆ ವೃತ್ತಾಕಾರಲಿ ಸುತ್ತುದೇ ಈ ಆಟದ ಸ್ವಾರಸ್ಯ. ಕಾಲ್‌ಸಂದ್‌ನ ಕೋಲು ವಿಚಿತ್ರ ಇದ್ದದೆ. ಆಟಗಾರರ್‌ಲಿ ಇಬ್ಬೊರು ಎದ್ರು ಬದ್ರು ನಿತ್ತ್‌ಕಂಡಿದ್ದ್, ಪ್ರತಿಯೊಬ್ಬನೂ ಸುರೂಗೆ ಅಂವನ ಎಡಕಾಲ್‌ನ ಎತ್ತಿ ಎರ್‌ಡ್ ಕೈಗಳ ಕೋಲುಗಳ ಅಲ್ಲಿ ಬೊಡ್ದದೆ. ಮತ್ತೆ ಇದೇ ತರಲಿ ಬಲಕಾಲ್‌ನ ಎತ್ತಿ ಬೊಡ್ದದೆ. ಎರ್‌ಡ್ ಕಾಲುಗಳ್‌ಲಿ ಈ ತರಲಿ ಕೋಲು ಹೊಡ್ದಮೇಲೆ ಮುಂದೆ ಮತ್ತೊಬ್ಬಂಗೆ ಕೋಲು ಕೊಟ್ಟದೆ. ಇದೇ ತರಲಿ ಪುನರಾವರ್‌ತನೆ ಸಾಗಿ ಆಟ ಮುಗ್ದದೆ. ಇದ್ ನೋಡಿಕೆ ತುಂಬಾ ಲಾಯಿಕಿದ್ದದೆ.

ಉಯ್ಯಾಲೆ ಆಟ ಉಯ್ಯಾಲೆನಾಂಗೆ ಪೊರ್‌ಲುನ ಚಲನೆ ಕಂಡ್‌ಬಂದದೆ. ಸುರೂಲಿ ಆಟದ ಜೆನಗ ವೃತ್ತಾಕಾರಲಿ ನಿತ್ತ್ ಎಡಕ್ಕೊಮ್ಮೆ ಬಲಕ್ಕೊಮ್ಮೆ ಕೋಲು ಕೊಡ್ತಿದ್ದವೆ. ಮತ್ತೆ ನಡುಲಿ ನಾಲ್ಕ್ ಜೆನ ಎದುರ್ ಬದ್ರಾಗಿ, ಒಳ್ದ ನಾಕ್ ಜೆನ ಆಚೆ ಈಚೆ ನಿತ್ತ್ ಕೋಲುಕೊಟ್ಟವೆ. ಮತ್ತೆ ಆಚೆ ಈಚೆ ಇದ್ದವು ನೆಡುಲಿ ಬಂದ್, ನಡುಲಿದ್ದವು ಅತ್ತಕೆ ಹೋದವೆ. ಈ ತರದ ಬೀಸ್‌ನ ಆಟಂದಾಗಿ ಉಯ್ಯಾಲೆ ಚಿತ್ರ ಕಣ್ಣಿಗೆ ಕಟ್ಟಿದೆ. ಪೈಪೋಟಿಲಿ ಆಡುದು 'ವಾದದ ಕೋಲ್‌ನ' ವಿಸೇಸ. ಇದ್ಕೆ ನಿಲ್‌ಕೋಲ್ ತ ಹೆಸ್ರುಟ್ಟು. ಸರಿಪಾಲಾಗಿ ನಿತ್ತ ಆಟಗಾರರ್ ಪ್ರಸ್ನಾರ್‌ತಕವಾದ ಸವಾಲ್–ಜವಾಬ್ ರೀತಿನ ಪೊದ್ಯಗಳ ಹೇಳಿಕಂಡ್ ಒಬ್ಬರ್‌ಂದೊಬ್ಬ ಆಕರ್‌ಸಕ ಬಂಗಿಲಿ ಓಡ್ಸಿಕಂಡ್ ಹೋದೇ ಈ ಆಟದ ವಿಸೇಸ. ಇದರ್‌ಲಿ ಕೋಲುಗ ಸದ್ದ್ ಮಾಡದೆ ಪೊದ್ಯ ಮತ್ತೆ ನಡಿಗೆ ಮುಕ್ಯ ಆಗಿದ್ದದೆ. ಕೋಲಾಟ ಮುಗೆವ ಹಂತಲಿ ಕೊರವಂಜಿ ಕೋಲ್‌ನ ಆಡ್ವೆ, ಇದರ್‌ಲಿ ಕೊರವಂಜಿ ವೇಸದ ಆಟಗಾರನ ಮತ್ತೊಬ್ಬ ಹಿಡೆಕೆ ಹೋದೆ. ಕೋಲು ಹೊಡೆತಿರಂವ ಒಳ್ದವರ ನೆಡುಲಿ ಕೊರವಂಜಿ ತಪ್ಪಿಸಿಕಂಬೊಕೆ ಪ್ರಯತ್ನಿಸಿದೆ. ಅವ್ಳ ಓಡ್ಸಿಕಂಡ್ ಹೋಗ್ತಾ, ಕಡೆಗೊಮ್ಮೆ ಹಿಡ್ದದೆ. ಇದರ ಮತ್ತೆ ಮಂಗಳದೊಟ್ಟಿಗೆ ಆ ದಿನದ ಕೋಲಾಟ ಮುಗ್ದದೆ.

ಕೋಲಾಟಲಿ ಬಳ್ಸುವ ಪದಗಳ್ದೂ ಒಂದ್ ಮುಕ್ಯ ಪಾತ್ರ. ಆಟಕೆ ಸಂಗೀತದ ಹಿನ್ನಲೆ ಕೊಡ್ದರೊಟ್ಟಿಗೆ ಆಟದ ಬಂಗನ ಕಡಿಮೆ ಮಾಡಿ, ಲಾಯ್ಕ್‌ಲಿ ಕಾಂಬಾಂಗೆ ಮಾಡಿದ್ ಗೌಜಿಲಿ ನಾಟ್ಸುವಾಂಗೆ ಮಾಡ್ದು ಇದರ ಉದ್ದೇಸ.

ಕೋಲಾಟದ ಪೊದ್ಯಕೆ ಸಮ್ಮಂದಪಟ್ಟಂಗೆ ಕೆಲವ್ ಮಾತ್‌ಗಳ ಇಲ್ಲಿ ಹೇಳಕ್. ಈ ಎಲ್ಲ ಪೊದ್ಯಗ ಮೂಲತಃ ಕೋಲಾಟಕ್ಕಾಗಿದೆ ಕಟ್ಟಿಯಾಳ್ದ್‌ತ ಯಾಗೊಳೂ ಹೇಳಿಕಾದುಲೆ. ಯಾಕೆಂತೇಳ್ರೆ ಕೋಲಾಟ ಅದರ ಸುರೂನ ಹಂತಲಿ ಒಳ್ದ ಜೆನಪದ ಆಟಗಳಂಗೇನೇ ಒಂದ್ ಆಟ ಆಗಿದ್ದ್ ಕ್ರಮೇಣ ಕೊಣ್‌ತ ಮತ್ತೆ ಪೊದ್ಯಗಳ ಅಳವಡಿಸಿಕಂಬೊದರ ಒಟ್ಟಿಗೆ ಕಲೆಯಾಗಿ ಬದಲಾದ್‌ತ ಹೇಳಕ್. ಇದರ್‌ಂದಾಗಿ ಪೊದ್ಯಗ ಕೋಲಾಟಕೆ ಮತ್ತೆ ಬಂದ್ ಸೇರ್‌ದಾಗಿರ್‌ದುತ ತಿಳ್ದದೆ. ಅಲ್ಲದೆ ಸುರುಸುರೂಲಿ ಬೇರೆ ಬೇರೆ ಹೊತ್ತುಲಿ ಹೇಳತಿದ್ದ ಪದಗಳನೇ ಪಲ್ಲವಿ ಅನುಪಲ್ಲವಿ ಅಲ್ಲರೆ ಮುಮ್ಮೇಳ ಹಿಮ್ಮೇಳಗಳ ಹೊಂದುಸಿಕಂಬೊದರೊಟ್ಟಿಗೆ ಕೋಲಾಟಕೆ ಬಳ್ಸಿಕೊಂಡತ ಕಂಡದೆ. ಕೋಲಾಟಕಾಗಿ ಮಾಡ್ದ ರಚನೆಗ ಇದ್ದಾಗಿದೆ ಬರ್‌ದ ಮತ್ತೆನ ಪಲಂತ ಹೇಳಕ್.

ಪೊದ್ಯ ಬರಿವ ದ್ರಿಸ್ಟಿಂದ ಕೋಲಾಟದ ಪದಗಳ ಬಾವಗೀತೆನಾಂಗು ಮತ್ತೆ ಕಲಾತ್ಮಕತೆ ಇರುವಂಗೆ ಪಾಲ್ ಮಾಡಿಕಂಬೊಕೆ ಸಾದ್ಯ ಉಟ್ಟು.



ಕೋಲಾಟ

ಕೋಲಾಟಕಾಗಿ ಕಟ್ಟಿದ ಪೊದ್ಯಗ ಹೆಚ್ಚಾಗಿ ಸುರೂನ ಬಾಗಲಿ ಕಂಡದೆ. ಹಂಗಾಗಿ ಬಾವಗೀತಾತ್ಮಕ ಪೊದ್ಯಗಳ ಮತ್ತೆ ಎರ್‌ಡ್ ಬಾಗ ಆಗಿ ಮಾಡಿಕಣಕ್. ಕೋಲಾಟಕಾಗಿದೇ ಬರ್‌ದಂತದ್ ಮತೆ ಬೇರೆ ಹೊತ್ತುಲಿ ಬಳ್ಸಿಕಂಡಂತದ್. ಕೋಲಾಟಕಾಗಿ ರಚನೆ ಆದ ಪೊದ್ಯಗ ಅದರ ರೂಪಲಿ ಸಾಮಾನ್ಯ ಆಗಿ ಸಣ್ಣದಾಗಿದ್ದವೆ. ಒಂದ್ ಪಕ್ಸ ತುಂಬಾ ದೊಡ್ಡದಾಗಿದ್ದರೆ ಪದಪ್ರಾಸಗ, ಪುನರಾವರ್‌ತನೆಗ ಒಂಚೂರು ಸರಿಬಾದ್ಲೆ. ಇಂತವುಗಳ್‌ಲಿ ತರ್‌ಕಬದ್ದ ಅರ್‌ತನ ಆಗಲಿ ಕ್ರಿಯೆನಾಗಲಿ ನಿರೀಕ್ಸೆ ಮಾಡಿಕಿಲ್ಲೆ. ಬದ್ಲಾಗಿ, ಆಟ ಮತೆ ಕೊಣ್‌ತಕೆ ಸರಿಹೊಂದುವ ಪದ ನರ್‌ತನಚರಣಂದಾಗಿ ಮಾತ್ರ ಇವು ಕಾಣ್ಸಿಕಂಡದೆ.

ಕೋಲಾಟದ ಪದಗಳ್‌ಲಿ ಕತೆ ಇರ್‌ವ ಸುಮಾರ್ ಪೊದ್ಯಗ ಸಿಕ್ಕುವೆ. ಈ ಬಗೆನ ಹೆಚ್ಚಿನ ಪೊದ್ಯಗ ಮೂಲತಃ ಬೇರೆ ಸಂದರ್ಬದಾಗಿದ್ದ್ ಕೋಲಾಟಕೆ ಅಳವಡಿಸಿಕಂಡಿರ್‌ವ ಸಾದ್ಯತೆ ಹೆಚ್ಚ್‌ತ ಕಂಡದೆ. ಹಿಂಗೆ ಹೊಂದಿಸಿಕಂಬೊಕನ ಪದಗ ಕೋಲಾಟದ ಗತಿಗೆ ಹೊಂದಿಕಂಡ್ ಬದಲಾದರ್‌ಂದ ಅವುಗಳ ಮೂಲರೂಪನ ನಿಜವಾಗಿ





ತೋರ್‌ಸಿಕೊಡ್‌ದು ಕಸ್ಟ ಆದೆ. ಕತೆಗ ದೊಡ್ಡದಾಗಿರ್‌ಕನ, ಅದರ ನಿಲ್ಸಿ ಇಲ್ಲೆರ್ ಕೆಲವೊಂದ್ ಬಾಗನ ತಕಂಡ್ ಒಳ್ದದರ ಹೇಳದೇ ಬುಡ್‌ದು ಉಟ್ಟು. ಆಟಲಿ ಬೇರೆಬೇರೆ ನಮೂನೆ ತಾಕೆ ಹಿಂಗೆ ಮಾಡಿಕಂಡವೆ ತ ಮೇಲ್ನೋಟಕೆ ಕಂಡರೂ ನಿಜವಾಗಿ ದೊಡ್ಡ ಪೊದ್ಯಗಳ ಕೋಲಾಟಲಿ ತಾದು ಕಸ್ಟ ಇರ್‌ದು ಕಾರಣ ಆಗಿರೊಕುತ ಕಂಡದೆ. ಏಕೆತ ಹೇಳ್ರೆ ಕೋಲಾಟಲಿ ಉತ್ಸಾಹ ಪ್ರದಾನವಾಗಿದ್, ಇದ್ಕೆ ಬಾವಗೀತಾತ್ಮಕ ಪದಗ ಹೊಂದಿಕಂಬಂಗೆ, ನಿದಾನ ಗತಿನದ್ ಪೊದ್ಯಗ ಹೊಂದಿಕಂಬೊದುಲೆತ ಕಂಡದೆ. ಇದರ್‌ಂದಾಗಿ ಈ ಬಗೆನ ಕೆಲವ್ ಪೊದ್ಯಗ ಅರ್‌ತ ಆಗದೆ ಒಗಟ್‌ನ ಸ್ವರೂಪನ ಪಡ್ದುಕಂಬೊದೂ ಉಟ್ಟು. ಆಗ ಕ್ರಿಯೆ ನಡ್ದಾಂಗೆ



ಕೋಲಾಟ

ಕಂಡರೂ ಅದ್ ಅಸ್ಪಸ್ಟತೆನ ದಾರಿಲಿದ್ದದೆ ಬುಟ್ಟು, ಸರಿಯಾಗಿದ್ ಕಾಂಬೊದುಲೆ. ಆದ್ದರ್‌ಂದ ಇದರ್‌ಲಿ ಆಟ ಮತ್ತೆ ಅದರ ಬೇರೆ ಬೇರೆ ಬಂಗಿಗ ಮುಕ್ಯನೇ ಹೊರತು, ಅದ್ಕೆ ಸಮ್ಮಂದಪಟ್ಟ ಪೊದ್ಯಗ ಯಾಗೊಳೂ ಪ್ರದಾನ ಕ್ರಿಯೆನ ಪಾತ್ರನ ವಯಿಸುದುಲೆತ ಹೇಳಕ್. ಒಂದ್ ಪಕ್ಸ ವಯಿಸಿಕಂಡರೆನು ಸುರುನ ಎರ್‌ಡರ ಒಟ್ಟು ಪರ್‌ಣಾಮನ ನೋಡೊವ್ಕೆ ಬಾರಿ ಲಾಯ್ಕ್‌ಲಿ, ಒಳ್ಳ ರೀತಿಲಿ ಹೇಳ್ದು ಇದರ ಮುಕ್ಯ ಉದ್ದೇಸವಾಗಿದ್ದದೆ.

ಹೀಂಗೆ ಎಲ್ಲ ಸಂಗತಿಗಳ ನೋಡ್ಕನ ಕೋಲಾಟಕೆ ಸಮ್ಮಂದಪಟ್ಟ ಪೊದ್ಯಗಳ ಒಂದ್ ಪ್ರತ್ಯೇಕ ಪೊದ್ಯ ಪ್ರಕಾರಂತ ಕರೆಕೆ ಸಾದ್ಯನಾಂತ ಹೇಳ್ವ ಅನ್ಮಾನ ಬಂದದೆ. ಕೋಲಾಟದ ಉದ್ದೇಸಕಾಗಿ ರಚನೆ ಆದ ಪೊದ್ಯಗಳ್‌ಲಿ ಈ ಪ್ರಸ್ನೆ ಮಾಮೂಲಾಗಿ ಇರ್‌ದುಲೆತ ಇದ್ದರೂ ಇದ್ಕಾಗಿ ಅಳವಡ್ಸಿಕಂಡ ಬೇರೆಪೊದ್ಯಗಳ ನೋಡಿಕನ ಈ ಪ್ರಸ್ನೆ ಹುಟ್ಟಿಕಂಡದೆ. ಕೆಲವ್ ಹೊತ್ತುಲಿ ಯಾವ ಪೊದ್ಯಗಳ ಬೇಕರು ಕೋಲಾಟದ ತಂತ್ರಗಳ ಬಳ್ಸಿಕಂಡ್ ಹೇಳಕ್‌ತ ಕಂಡದೆ. ಇಂತ ಹೊತ್ತುಲಿ ಅಂತೂ ಮೇಲೆನ ಪ್ರಸ್ನೆ ಹೌದುಂತಾದೆ. ಆದರೆ ಕೋಲಾಟದ ಮೂಲ ಪೊದ್ಯಗಳ್‌ಲಿ ಆಗಲಿ, ಅದರ ಪದಗಳ್‌ಲಿ ಆಗಲಿ ಒಂದಲ್ಲ ಒಂದ್ ರೀತಿಲಿ ಕೋಲಾಟದ ತಾಂತ್ರಿಕ ಬಾಗ ಕೆಲಸ ಮಾಡ್ದರ್‌ಂದ, ಇದರ ಒಂದ್ ಪ್ರತ್ಯೇಕ ಪ್ರಕಾರಂತೇಳಿ ಕರಿದರ್‌ಲಿ ಅರ್‌ತ ಉಟ್ಟುಂತ ಹೇಳಕ್. ಈ ಪ್ರಕಾರದ ಮೇಲೆ ಎಸ್. ವಿ. ರಂಗಣ್ಣನವರ ಕೋಲ್ ಕೋಲ್ ಕೂಡಿ ಬರಲಿ ಬಿ. ಜಿ. ಸಂಕೇಶ್ವರ ಅವರ 'ಕೋಲಿನ ಪದಗಳು', ರಾಮಚಂದ್ರ ವೆಂಕಟೇಶ ಕರಗುದರಿ ಅವರ 'ಕೋಲು ಹಾಡುಗಳು' (1934) ಕ. ರಾ. ಕೃ. ಅವರ 'ಕೋಲು ಮಲ್ಲಿಗೆ ಕೋಲೆ' (1962), ಎಂ. ಸಿ. ವಸಂತಕುಮಾರ್ ಅವರ 'ಕೋಲು ಪದಗಳು' (1970), ಡಿ. ಕೆ. ಈರೇಗೌಡ ಅವರ ಕೋಲಾಟದ ಪದಗಳು (1974)ಇಂತೆಲ್ಲ ಗ್ರಂತಗ ಬರ್‌ದೊಳೊ. (ಆರ್.ಜಿ.)

**ಗೌಡರ ಕುಟುಂಬದ ಸಮ್ಮಂದಗ :** ಗೌಡರ ಕುಟುಂಬದ ಸಮ್ಮಂದಗ ಹೆಚ್ಚಿಗೆ ಕೂಡಿಕಂಡಿದ್ದದೆ. ಅತ್ತೆ ಸೊಸೆನ ಸಮ್ಮಂದ ತೀರಾ ದ್ವೇಸನೂ ಅಲ್ಲದ, ಆತ್ಮೀಯನೂ ಅಲ್ಲದ ನೊಡುಲಿ ಇದ್ದದೆ. ಮನೆಗೆ ಯಾರಾರ್ ನೆಂಟ್ರ್‌ಗ ಬಂದರೆ ಬಿನ್ನಾಬಿಪ್ರಾಯಗಳ ಮರ್‌ತ್ ಒಟ್ಟಾಗಿ ಕೆಲ್ಸ ಮಾಡ್‌ವ ಕ್ರಮನ ಕಾಣಕ್.

'ತಂದೆಮೂಲ' ಮಕ್ಕಳ್‌ಕಟ್ಟ್ ಕುಟುಂಬದ ಗೌಡ್ರ್‌ಗಳ್‌ಲಿ ಅಪ್ಪನ ಕಡೆನ ರಕ್ತ ಸಮ್ಮಂದಕೆ ವಿದಿವಿದಾನಲಿ ಹೆಚ್ಚಿನ ಮಹತ್ವ ಇರ್‌ದರ ಕಾಣಕ್. ಜೀವನಾವರ್‌ತನದ ಆಚರಣೆಲಾಗಲಿ, ವಾರ್ಷಿಕಾವರ್‌ತನದ ಆಚರಣೆಲಾಗಲಿ ಅಪ್ಪನ ಕಡೆವ್ಕೆ ಸುರುನ ಮೊರ್‌ಯಾದಿ ಕೊಟ್ಟವೆ. ಆದರೆ, ಬಾವನಾತ್ಮಕ ಆಗಿ ಅಯ್ಯನ ಕಡೆನ ಸಮ್ಮಂದಗ ಹೆಚ್ಚಿಗೆ ಇದ್ದದೆ. ಅಯ್ಯನ ಅಪ್ಪ ಮತ್ತೆ ಅಯ್ಯಕ, ಅಂದರೆ ಅಜ್ಜ ಅಜ್ಜಿಗ ಪಿಳ್ಳೆಗೆ ಹೆಚ್ಚಿಗೆ ಪ್ರೀತಿ. ಹಬ್ಬ ಇಲ್ಲರೆ ಬೇರೆ ವಿಸೇಸ ಜಂಬರಕೆ ಪಿಳ್ಳೆಕಳಿಗೆ ಅಯ್ಯನ ಕಡೆಯವು ಬಟ್ಟೆ ಹೊಲ್ಸಿ ಕೊಟ್ಟವೆ. ಸಾಲೆಗೆ ರಜೆ ದಿನಗಳ್‌ಲಿ ಮಕ್ಕ ಅಯ್ಯನ ಮನೆಗೇ ಹೆಚ್ಚಿಗೆ ಹೋದು. ಅಯ್ಯನ ಅಣ್ಣ ಇಲ್ಲರೆ ತಮ್ಮ, 'ಸೋದರಮಾವ' ತ ಕರ್‌ಸಿಕಂಡ್ ಕುಟುಂಬದ ಸಮ್ಮಂದಲಿ ಮುಕ್ಯ ಪಾತ್ರ ವಯ್ಸಿಕಂಡವೆ. ಮೊದ್‌ವೆ, ಸಾವ್ ಇಲ್ಲರೆ ಮುಕ್ಯ ಕಾರ್‌ಯಗಳ್‌ಲಿ ಸೋದರಮಾವ ಹಾಜರಿರಕಾದೆ. ಸೋದರ ಅತ್ತೆ ಮತ್ತೆ ಸೋದರ ಮಾವನ ಮೇಲೆ ಕುಟುಂಬದ ಜೆನಕೆ ವಿಸೇಸ ಪ್ರೀತಿ ಇದ್ದದೆ. ಕುಟ್‌ಂಬ ಕುಟುಂಬಂದ ಹೊರ್‌ತಾದ ಮೊಯಿಂಸ ಒಬ್ಬ ಮನೆಗೆ ಬಂದರೆ ಕುಟುಂಬದವ್ ಅಂವನ ಮನ್‌ಮೂಡಕಲಿ ಸ್ವಾಗತ ಮಾಡ್‌ವೆ. ಅಂವ ಜಾತಿಯಂವ ಆದರೆ ಇನ್ನೂ ಹೆಚ್ಚಿನ ಮೊರ್‌ಯಾದಿ ಇದ್ದದೆ. ಕೆಳಜಾತಿಯಂವ ಆದರೆ ಹಿಙ್ಙ ಕಮ್ಮಿ, ಮೇಲ್ಜಾತಿಯಂವ ಆದರೆ ಹೆಚ್ಚಿನ ಗೌರವ ಕೊಟ್ಟವೆ. ಬಟ್ರ್‌ಗೆ ಬೆಂಡ ಸತ್ಕಾರ ಕೊಟ್ಟರೆ, ದಲಿತರ್‌ಗೆ ತಿಂಬಕೆ ಎಲೆಡ್ಕೆ ಕೊಟ್ಟವೆ. ಯಾದೇ ಗೌಡರ್ ಅಂವನ ಕುಟುಂಬದವ್ ಬಾರಿ ಹಕ್ಕಲೆನವಾಗಿದ್ದರೆ ನೆಂಟ್ರ್‌ಗೆ ಮತ್ತೆನ ಜಾಗೆ. ತಮ್ಮದೇ 'ಬೊಳಿ'ಯವ್ಕೆ ಒಟ್ಟಾರೆ ಗೌರವ ಸಂದ ಹಾಂಗೆ ಬೇರೆವ್‌ಕು ಕೊಟ್ಟವೆ.

ತಮ್ಮಂದ ಹೆಚ್ಚಿ ಪ್ರಾಯದವರ ಸಾಮಾನ್ಯ ಆಗಿ ಹೆಸರ್ ಹೇಳಿ ಕರ್‌ಯದೆ, ಸಮ್ಮಂದ ಸೂಚಕ ಪದಗಳ ಬಳ್‌ಸ್‌ವೆ. ಅದ್ಕೆ ವಿರುದ್ದ ಆಗಿ ತನ್ನಂದ ಸಣ್ಣವರ ಕರೆಕನ ಹೆಸರ್ ಹೇಳಿ ಕರೆವ ಕ್ರಮ ರೂಡಿಲುಟ್ಟು. ಹೆಸರುನು ಹೇಳಿ, ಅದರೊಟಿಗೆ ಸಮ್ಮಂದವಾಚಕಗಳ ಸೇರ್‌ಸಿ ಕರಿವ ಕ್ರಮನೂ ಉಟ್ಟು. ಉದಾ : ಲಾವಪ್ಪ ಮಾವ, ನೇಮಿ ಚಿಕಪ, ದ್ಯಾಮ ಅತ್ತೆ, ತಮ್ಮಪ್ಪ ಬಾವ ಹಿಂಗೆ. ಒಟ್ಟುಲಿ, ಗೌಡ್ರ್‌ಗೆ ಕುಟುಂಬ ಸುರೂನ ಜಾಗೆ ಆಗುಟು. ಅಲ್ಲಿ ಅಪ್ಪನೆ ಪ್ರದಾನ ಆಗಿ ಕಾರ್‌ಯ ನಿರ್‌ವಹಣೆ ಮಾಡ್‌ದೆ.. ಅಂವನ ಮಾತ್ ಕಡೆದ್ ಆಗಿದ್ದದೆ. ಕೂಡ್‌ಕುಟ್‌ಂಬಲಿ ಪ್ರಾಯಲಿ ಹಿರಿಯಂವ ಆದ ಉನ್ನತ ಸ್ತಾನನ ಅಲಂಕರ್‌ಸಿದೆ. ಅಂವ ಕುಟುಂಬದ ಮುಕ್ಯ ಎಲ್ಲ ಕೆಲ್‌ಸ್‌ಗಳ ಮಾಡ್‌ದೆ. ಇಂತ ಹೊತ್ತ್‌ಲಿ ಸಾಮಾಜಿಕ ಸಮ್ಮಂದಗ ಹೆಚ್ಚಿ ಕೂಡಿಕಣದೆ ಸುಲಬದ್ದಾಗಿದ್ದದೆ. ಒಂದ್ ಮನೆಂದ ಒಬ್ಬನೇ ನಿರ್‌ಣಯ ಕೊಡುವ ಹೊತ್ತ್‌ಲಿ ನ್ಯಾಯ ತೀರ್ಮಾನಗಾಗಲೀ, ಇತರ ಮಾತುಕತೆಗಳಲ್ಲಾಗಲೀ ಹೆಚ್ಚ್ ತೊಂದರೆಗ ಹುಟ್ಟುದುಲೆ. ವ್ಯವಹಾರಗಳ್‌ಲಿ ಮನೆನ ಯಜಮಾನ ಮಾತ್ರ ಕೂಡ್‌ದರ್‌ಂದ ಕೂಡು ಕುಟುಂಬ ಪೊದ್ದತಿ ಇರ್‌ವಲ್ಲಿ ಸಾಮಾಜಿಕ ಗಲಾಟೆಗ ತುಂಬ ಕಮ್ಮಿ ಇರ್‌ತ್ತಿತ್.

ಆದರೆ ಕೂಡು ಕುಟುಂಬಗಳ ಸಂಕೆ ಕಮ್ಮಿ. ಹೊಸ ತಲೆಮಾರ್‌ಗೆ ಸಿಕ್ಕ್‌ವ ಆದುನಿಕ ವಿದ್ಯಾಬ್ಯಾಸಂದಾಗಿ ಕುಟುಂಬದ ಮೇಲೆನ ಹಿಡ್‌ತನ ಹಿರಿಯರ್ ಕಳ್‌ಕಣ್‌ತ ಒಳೊ. ಒಂದ್ ಮನೆಲಿ ತುಂಬಾ ಜೆನ ವೆವಾರ ಮಾಡ್‌ತಾ ಒಳೊ. ಇದರ್‌ಂದಾಗಿ ಸಾಮಾಜಿಕ ಸಮ್ಮಂದಗ ಮತ್ತೆ ವೈಯಕ್ತಿಕ ಸಮ್ಮಂದಗ ಹೆಚ್ಚ್ ಸಂಕೀರ್‌ಣ ಆವುಟು. (ಪಿ.ಬಿ.)

**ಕುಟುಂಬ ಮತ್ತೆ ರಕ್ತ ಬಾಂದವ್ಯ :** ಒಬ್ಬ ಮೊನ್‌ಸನ ಸಾವು ವೈಯಕ್ತಿಕಾಗಿ ಒಂದ್ ಕುಟುಂಬಕೆ ಸಮ್ಮಂದ ಪಟ್ಟದಾದರೂ, ಅದ್‌ಕೂ ಮೀರಿ ಅದ್ ಸಮಾಜದ ಆಗ್ ಹೋಗುಗಳ್‌ಗೆ ಸಮ್ಮಂದ ಪಟ್ಟದ್‌ತೇಳ್ದು ವಿದ್ವಾಂಸರ ಅಬಿಪ್ರಾಯ ಆಗುಟು. ಸಮಾಜದ ಆರ್‌ತಿಕ, ರಾಜಕೀಯ ಚಟುವಟಿಕೆಗಳ ಬಾಗ ಆಗಿರ್‌ವ ಮೊಯಿಂಸನ ಸಾವು ಸಮಾಜಕ್ಕೊಂದ್ ನಸ್ಟ ಹೌದಾದರೂ, ಸೂಸ್ಮಾಗಿ ನೋಡಿಕನ ಅದ್ ಕುಟುಂಬಕ್ಕಾದ ನಸ್ಟತನೆ ಗೊತ್ತಾದೆ. ಗೌಡರ ಅಂತ್ಯ ಸಂಸ್ಕಾರದ ಅಂದರೆ ಸಾವುನ ವಿದಿಗಳ್‌ಲಿ ಸತ್ತವನ ರಕ್ತ ಬಾಂದವರೇ ನಿರ್‌ಣಾಯಕ ಸ್ತಾನನ ವಹಿಸುವೆ. ಈ ಅರ್‌ತಲಿ ಇದ್ ಸಮಾಜಗಳ ರೂಪುಗೊಳ್ಳಿಕೆ ಮುಂದೆನೆ ಇದ್ದ ಬಂದುತ್ವದ ವೆವಸ್ತೆನ ಸಂಕೇತಿಸಿದೆ. ಹೆಣನ ಎತ್ತುವಲ್ಲಿಂದ ಸುರಾವ ಕಾರ್‌ಯಗ ಹದಿನಾರರ ಕೊಲೆಗೆ ಸೇರ್‌ಸುವರೆಗೆ ಎಲ್ಲ ರೀತಿನ ಆಚರಣೆಗಳ್‌ಲೂ ಸತ್ತವನ ತಮ್ಮ ಇಲ್ಲರೆ ಮಜ್ಜನೇ ಮುಕ್ಯ ಪಾತ್ರ ವಯ್ಸುವೆ.ಸರ್ರಲಿ ಏನಾರ್ ಸಮಸ್ಯೆ ಇರವ್ಕೆ ಕೆಲ ಕೆಲ್‌ಸಗಳ ಮಾಡಿಕೆ ಬೊತ್ತಾದರೂ ಸಾಂಕೇತಿಕಾಗಿ ಅಂವನ ಕೈ ಮುಟ್ಟ್‌ಸಿ ಬೇರೆವ್ ಆ ಕೆಲ್‌ಸನ ಮಾಡಿವೆ.ಒಳ್‌ದಂಗ ಸಾವುನ ಕಾಲಲಿ ಬಲ್ಸುವ ಬೆದ್‌ರ್ ಮತ್ತೆ ಬಾಳೆ ಸನು ಬಂದುತ್ವದ ಬಾಗವಹಿಸಿಕೆನ ಇನ್ನಸ್ಟ್ ಸರಿಗಟ್ಟ್‌ಲಿ ತೋರ್‌ಸಿದೆ..

ಹೆಣನ ಸುಡ್ಕುಳಿಗೆ ಹೊತ್ತ್ ಕಂಡ್ ಹೋಕೆ ಕಟ್ಟ್‌ವ "ಚಟ್ಟ ಸ' ಬೆದ್‌ರ್‌ಂದನೆ ಮಾಡೊಕುತೇಳ್‌ವ ನಂಬಿಕೆ ಉಟ್ಟು. ಹಂಗೆ ದೂಪೆನ ಎದ್‌ರ್ ಬಾಳೆನ ನೆಟ್ಟವೆ ಮತ್ತೆ ಬೊಜ್ಜದೂಟಲಿ ಬಾಳೆಕಾಯಿನ ಬಳ್‌ಸಿಯೆ ತೀರೊಕು. ಇಲ್ಲಿ ಬೆದ್‌ರ್ ಮತ್ತೆ ಬಾಳೆ ಎರ್‌ಡ್ ಸನು ಸಮಾನಾರ್‌ತಲಿ ಬಳ್‌ಕೆ ಆವುಟು. ಅದ್ ತೇಳಿರೆ ಕುಲದ ಮೇಲಿರ್‌ವ ಅತಿಯಾದ ಸ್ರದ್ದೆ. ಬೆದ್‌ರಿಗೆ ಒಂದ್ ದೊಡ್ಡ ಬುಡ ಇದ್ದ್, ಅದೇ ಬುಡಂದ ಬೇರೆ ಬೆದುರ್‌ಗ ಕವಲೊಡ್ದು ಹಿಂಡ್ಲ್ ಆಗಿ ಇದ್ದದೆ. ಬಾಳೆಗಾರ್ ಅಸ್ಟೆ. ಅದರ ಬುಡಂದನೆ ಸುಮಾರ್ 'ಒಳ್ಳೆ'(ಕುರ್‌ಲೆ)ಗ ಕವಲೊಡ್ದದೆ. 'ಒಂದೇ ಬುಡಂದ ಹೊರ್‌ಟ ಬೇರೆ ಬೇರೆ ಕವಲ್‌ಗ' ತೇಳ್‌ವ ಕಲ್ಪನೆನೆ ಮೊಯಿಂಸರ ಕುಲದ ಕಲ್ಪನೆನ ಲಾಯ್ಕಲಿ ಹೋಲ್‌ದೆ. ಹಿಂಗೆ ನೋಡಿಕನ ಬೆದ್‌ರ್ ಮತ್ತೆ ಬಾಳೆಗ ಕುಲದ ಬಗೆಗಿರ್‌ವ ಮೊಯಿಂಸನ ಸ್ರದ್ದೆಗೆ ಬಲಾದ ರೂಪಕ ಆಗಿರ್‌ದು ಕಂಡ್‌ಬಂದೆ. ಗೌಡರ ಬಂದುತ್ವದ ರೀತಿ – ನೀತಿಗ ಮತ್ತೆ ಅವೆಲ್ಲ ತಮ್ಮ ತಮ್ಮ ಮೂಲಮನೆಗಳ ಬಗೆಗೆ ಅವರ ಮನ್‌ಸ್‌ಲಿರ್‌ವ ಬಾವುಕ ಸಮ್ಮಂದಗ ಕಡೆಗೆ ಕುಲದ ಮೇಲೆನ ಅವರ ಸ್ರದ್ದೆನ ತೋರ್‌ಸಿಕೊಟ್ಟದೆ.. ಹಿಂಗಾಗಿ ಗೌಡರ್‌ಲಿ ಆವ ಒಂದ್ ಸಾವು ಅದರ ನಿಜದ ಮತ್ತೆ ಆಚರಣೆನ ಅರ್‌ತಲಿ ಸತ್ತವನ ಕುಟುಂಬಕ್ಕಾಗಿರ್‌ವ ನಸ್ಟನೇ ಹೊರತ್ ಸಮಾಜಕ್ಕೆ ಆದ ನಸ್ಟ ಅಲ್ಲ. (ಪಿ.ಬಿ.)

**ಗಾದೆಗ :** ಗಾದೆಗ ಜನಪದ ಸಾಹಿತ್ಯದ ಒಂದ್ ಮುಕ್ಯ ಅಂಗ. ಈ ಗಾದೆಗ ಆಕಾರಲಿ ಸಣ್ಣದಾದರೂ ಅದ್ ಕೊಡುವ ಅರ್‌ತ ಬಾರಿ ಮಹತ್ವದ್ದ್. ಮೊನ್‌ಸನ ಅನುಬೊವದ ಹಿನ್ನಲೆಲಿ ಈ ಗಾದೆಗ ಸೃಸ್ಟಿಯಾದವೆ. ಗಾದೆಗ ಸಹಜ ಆಗಿ ಮಾತ್‌ನ ಅನಿವಾರ್‌ಯ ತೇಳುವಂಗೆ ಹುಗ್ಗಿ ಬಂದವೆ. ಒಂದ್ ಜೆನಾಂಗದ ಅನುಬೊವ ಸಂಪತ್ತ್‌ಗೆ, ಒಂದ್ ಬಾಸೆನ ಗಟ್ಟಿತನಕೆ ಆ ಬಾಸೆಲಿ ಸಂಗ್ರಹೆ ಆದ ಗಾದೆಗಳೇ ಸಾಕ್ಸಿ ಆದೆ. ಅರ್‌ತ ಇರ್‌ವ ಮಾತ್‌ಗಳ್‌ಂದ ಕೂಡ್‌ದ ಸಣ್ಣ ಆದ, ಚೊಕ್ಕ ಆದ ವಾಕ್ಯನೇ ಗಾದೆ. ಗಾದೆಗಳ್‌ಲಿ ಮಾತ್ ಮಿತ ಆಗಿರೊಕು ಹಂಗೆನೆ ಹಿತನೂ ಆಗಿರೊಕು.

ಜನಪದ ವಿದ್ವಾಂಸ ರಾಮೇಗೌಡ ಅವ್ 'ನನ್ನ ಅಬಿಪ್ರಾಯಲಿ ಗಾದೆಗತೇಳ್‌ರೆ, ಜೆನ ಬಳಕೆಲಿದ್ದ್ ಈಗನೂ ಇರ್‌ವ, ಉಪದೇಸಾತ್ಮಕ ಇಲ್ಲೆ ಸಲ್‌ಹೆ ಕೊಡ್‌ವ, ನಿಜಾದ ಅರ್‌ತನ ಮರ್‌ಸಿ ಅಲಂಕಾರಿಕ ಆಗಿ, ಗಮನಕೆ ಬಾವ ರೂಪಕ ಇಲ್ಲೆ ಒಳಾರ್‌ತ ಇಸಿಕಂಡ್, ರೂಪ ಬದಲ್‌ಸಿ ಕಾಂಬಕೆ ಸಿಕ್ಕ್‌ವ ಜೆನಾಂಗವೊಂದರ ಸೂಕ್ತಿನೇ ಗಾದೆ'ತ ಹೇಳಿಯೊಳೊ.

ಅರೆಬಾಸೆವ್ ಮಾತ್‌ನ ನೊಡು ನೊಡುಲಿ ಗಾದೆಗಳ ಆಗಾಗ ಬಳ್‌ಸುವೆ. ತಾವ್ ಮಾತಾಡ್‌ದ್ ಮಾತ್‌ನ ಗಟ್ಟಿಗೊಳ್‌ಸಿಕೆ ಇಲ್ಲರೆ ಎದುರಾಳಿನ ಸೋಲ್‌ಸಿಕೆ ಗಾದೆನ ಬಳ್‌ಸುವೆ. ಗಾದೆಗಳ್‌ಲಿ ಮೆಚ್ಚುಗೆ,




ಸಿಟ್ಟ್, ಆಕ್ರೋಸದ ಬಾವನೆಗ ಎದ್ದ್ ಕಂಡದೆ. ಹೆಂಗೆತೇಳಿರೆ ಇದ್ದದರ ಇದ್ದಂಗೆ ಹೇಳ್‌ದಂಗೆ. ಕಣ್ಣ್‌ಗೆ ಕಾಂಬ ಸತ್ಯ ಮೊನ್‌ಸ್‌ಗೆ ಮುಟ್ಟುವಾಂಗೆ, ಅರ್‌ತ ಮಾಡಿಕಂಬ ಹಂಗೆ ನೀತಿ ರೂಪಲಿ ಇದ್ದದೆ.

ಅರೆಬಾಸೆನ ಗಾದೆಗಳ್‌ಲಿ ಸಂಕ್ಷಿಪ್ತತೆ, ಸೂತ್ರಪ್ರಾಯತೆ, ಸಮತೂಕತೆ, ಪ್ರಾಸ, ಅನುಪ್ರಾಸ, ಪುನರಾವರ್‌ತನೆ, ಅಲಂಕಾರಗ, ಉಪಮೆಗ, ರೂಪಕಗ ಸಾಮಾನ್ಯ ಲಕ್ಷಣಗ ಇದ್ದದೆ. ಇನ್ನ್ ಅರೆಬಾಸೆನ ಗಾದೆಗಳ ಈ ಕಾಗಡೆಂಗೆ ಗಮನಿಸಕ್.

**ಕ್ರಿಸಿಗೆ ಸಮ್ಮಂದ ಪಟ್ಟ ಗಾದೆಗ :** ಅರೆಬಾಸಿಗರ ಪ್ರದಾನ ಕಸುಬೇ ಕ್ರಿಸಿ. ಅರೆಬಾಸೆನ ಗಾದೆಗಳ್‌ಲಿ ಕ್ರಿಸಿಕರ ಸುಕದುಕ್ಕಗ ಎದ್ದ್ ಕಂಡದೆ. ಉದಾಃ 1. ಬರೆಕರೆ ಬೂಮಿ ನೆರೆಕರೆ ಹೆಣ್ಣ್ ಬ್ಯಾಡ, 2. ಗದ್ದೆ ಇದ್ದಂವ ಕುದ್ದ್ ತೀಂತ್

**ಕೆಲ್ಸ ಸಮ್ಮಂದಿ ಗಾದೆಗ :** ಉದಾಃ 1. ಕಳ್ಳನ ಹಜ್ಜೆ ಕಳ್ಳಂಗೆ ಗೊತ್ತ್, 2. ಅಂವನ ನಾಲಿಗೆ ಹಜಮನ ಕತ್ತಿ

**ದೈ–ಮರ ಸಮ್ಮಂದಿ ಗಾದೆಗ :** ಉದಾಃ 1. ಗಂಡ್ ಬಾಳೆ ಮರದಂಗೆ ಹೆಣ್ಣ್ ಬಾಳೆ ದೈನಾಂಗೆ, 2. ನುಗ್ಗೆ ಮರಲಿ ನೇಲಿಕೆ ಆಗದ್

**ತರಕಾರಿ ಸಮ್ಮಂದಿ ಗಾದೆಗ :** ಉದಾಃ 1. ಕೆಸದ ದಂಟ್‌ಗೆ ಕರ್ ಕಟ್ಟಿದಂಗೆ, 2. ನಿನ್ನೆ ಬಂದ ಮಳೆಗೆ ಹುಟ್ಟಿದ ಚಗ್‌ತೆನಂಗೆ

**ಬಿತ್ತ್‌ಗ :** ಉದಾಃ : 1. ರಾಗಿ ಮೊಣ್ಣಿನಂಗೆ (ಮೆತ್ತಂಗೆ), 2. ಕುಡು ಬೆಳ್‌ದ್ ಕಳೆ ಹಾಳ್ ಮಾಡ್

**ಪ್ರಾಣಿಗ :** ಉದಾಃ 1. ನಾಯಿಬೊಗಳ್‌ರೆ ದೇಸ್ತಾನ ಹಾಳದೆನ? 2. ಹಾಲ್‌ಗೆ ಬಂದವ್‌ಕೆ ಹಸ್‌ನ ಕ್ರಯ ಎಂತಕೆ?

**ಕೀಟಗ :** ಉದಾಃ 1. ನೆಳ ತಿಂದ್ ಕುಲಗೆಡಿಸಿಕಂಡಂಗೆ, 2. ನೊಕ್ಕುಳುಗು ವಿಸ ಬಂದಂಗೆ

**ಅಡ್‌ಗೆ ತೆನಸ್ ಸಮ್ಮಂದಿ ಗಾದೆಗ :** ಉದಾಃ 1. ಅಕ್ಕಿ ಮೇಲೆ ಆಸೆ ನೆಂಟ್‌ರ ಮೇಲೆ ಪ್ರೀತಿ, 2. ತಣೆನ ಗಂಜಿ ತಿಂಬವಂಗೆ ಪಾಯ್‌ಸದ ಗ್ಯಾನ

**ಕುಟುಂಬ ಸಮ್ಮಂದಿ ಗಾದೆಗ :** ಉದಾ : 1. ಅತ್ತೆಮೇಲೆನ ಸಿಟ್ಟ್ ಕೊತ್ತಿಮೇಲೆ, 2. ನೂಲ್ ನಂಗೆ ಸೀರೆ, ಅಯ್ಯೆ ನಂಗೆ ಮಗಳ್

**ಸರ್‌ರ ಸಮ್ಮಂದಿ ಗಾದೆಗ :** ಉದಾಃ 1. ಅಂಗಾಲ್‌ಗೆ ನಾಚಿಕೆ ಇಲ್ಲೆ, 2. ಅವರವರ ತಲೆಗೆ ಅವರವರದೆ ಕೈ

ಹಿಂಗೆ ಬೊದ್‌ಕ್‌ನ ಬೇರೆ ಬೇರೆ ಹೊತ್ತುಲಿ ಬಳಕೆ ಆವ ಗಾದೆಗ ಗೌಡರ ಸಂಸ್ಕೃತಿನ ಬೇರೆ ಬೆರೆ ಮಜಲ್‌ಗಳ ವಿವರ್‌ಸಿಕಂಡ್ ಹೋದೆ. ಯಾರ ಹಂಗೂ ಇಲ್ಲದೆ ಹೇಳೊಕಾದರೆ ನೇರ ಆಗಿ ಹೇಳ್‌ವ ಗಾದೆಗ ಗೌಡರ ಸಂಸ್ಕೃತಿನ ಒಳಪದರನ ಮುಟ್ಟಿದೆ. ಮುಕ್ತ ಮನ್‌ಸ್‌ನ ಸ್ತಿತಿಲಿ ಇವ್ ರಚನೆ ಆದರ್‌ಂದ ಗೌಡರ ಬೊದ್‌ಕ್‌ನ ವಿಸ್ಲೇಸಣೆ ಮುಕ್ಯ ಪಾತ್ರ ವಹಿಸಿದೆ. ಬೊದ್‌ಕ್‌ನ ಒಂದೊಳ್ಳ ಹೊತ್ತ್‌ಲಿ ತೆಕಂಡ ಒಳ್ಳ ನಿರ್‌ಣಯಗ ಗಾದೆಗಾಗಿ ಮಾರ್‌ಪಟ್ಟ್ ಬೊದ್‌ಕ್‌ಗೆ ದಾರಿ ತೋರ್‌ಸ್‌ವ ಹಂಗೆ ನಿತ್ತುಟು. ಗಾದೆಗ ಜ್ಞಾನದ ಆಗರ, ಅನುಬೊವದ ಸಾಗರನು ಆವುಟು, ಈ ಗಾದೆಗ ಪಾಮರಂದ ಹಿಡ್ದ್ ಪಂಡಿತರವೊರೆಗೆ ಬಡವ–ಬಲ್ಲಿದ, ಮೇಲ್–ಕೀಳ್ ತೇಳ್ವ ತಾರತಮ್ಯ ಇಲ್ಲದೆ ಎಲ್ಲರ್‌ನು ಸೆಳ್‌ದದೆ. ಎಲ್ಲೊವ್‌ಸ ಮಾತ್‌ಕತೆಲಿ, ಉಪದೇಸಗಳ್‌ಲಿ, ಬೋದನೆಲಿ, ಚರ್‌ಚೆಗಳ್‌ಲಿ, ಬರಹಲಿ, ಬಾಸಣಗಳ್‌ಲಿಸ ಗಾದೆನ ಬಳ್‌ಸುವೆ.

'ವೇದ ಸುಳ್ಳಾದುರೂ ಗಾದೆ ಸುಳ್ಳಾದುಲೆ' ತೇಳ್‌ವ ಮಾತುಟ್ಟು. ವೇದಗಳ ಹಂಗೆನೆ ಇದ್ ನೀತಿ ಪ್ರದಾನ ಆದ ಸತ್ಯ ನಿಸ್ಟೆನ ರಚನೆ, ಹಂಗೆನೇ ಸನಾತನನೂ, ಪ್ರಬಾವಯುತನೂ ಆದ ಎಲ್ಲಾ ಜೆನ ಒಪ್ಪಿದ ಮಾತ್. ವೇದ ಕೆಲವರ ಸೊತ್ತಾದರೆ ಗಾದೆ ಎಲ್ಲರ ಸೊತ್ತು. ದೇಶ ವಿದೇಸಲೂ ಸುದ್ದಿಲಿರ್‌ವ ಗಾದೆ ಬಗ್ಗೆನೇ ಗಾದೆಗ ಉಟ್ಟು. ಗಾದೆ ಯಾಗೊಳು ಸುಳ್ಳಾದುಲೆ (ಜರ್ಮನಿ), ಸಣ್ಣ ಸೂಕ್ತಿ ಬ್ರಹ್ಮಾಂಡದಸ್ಟ್ ವಿವೇಕನ ಹೊಂದಿದ್ದದೆ (ಗ್ರೀಸ್), ಮೊನ್‌ಸನ ಯೋಚನೆನೆ ಗಾದೆ ಆಗಿ ಹೊಮ್ಮಿದೆ (ಸ್ವೀಡನ್) ನಿಜ ಇಲ್ಲದ ಗಾದೆ ಇಲ್ಲೆ. (ಸ್ಪೆಯಿನ್) ಎಲ್ಲೊವೂ ಹೇಳ್‌ದ್ ನಿಜ ಇರೊಕು (ಇಂಗ್ಲೆಂಡ್), ದೈನಂದಿನ ಅನುಬೊವನೆ ಗಾದೆಗ (ಹಾಲೆಂಡು), ಗಾದೆ ಸುಳ್ಳಾರೆ ಹಾಲ್ ಹುಳಿಯಾದೆ (ಮಲಯಾಳಂ), ಗಾದೆ ಗೊತ್ತಿದ್ದಂವ ಜಗಳ ಬುಡ್ಸಿದೆ(ಆಫ್ರಿಕಾ), ಮಾತ್ ಬಲ್ಲವಂಗೆ ಜಗಳ ಇಲ್ಲೆ.

ಆಡ್‌ಮುಟ್ಟದ ಸೊಪ್ಪಿಲ್ಲೆ ತೇಳುವಂಗೆ ಗಾದೆ ಇಲ್ಲದ ಸೊತ್ತು ಇಲ್ಲೆ. ಜೆನರ್‌ಗೆ ಗೋಚರ್‌ಸದೆ ಇದ್ದ ಸುಮಾರ್ ಸೂಸ್ಮ ಸಂಗತಿಗ ಗ್ರಾಮೀಣ ಬೊದ್‌ಕ್‌ನ ಜಗತ್ತ್‌ಗೆ ಗೋಚರ್‌ಸಿದೆ. ಗ್ರಾಮೀಣ ಬೊದ್‌ಕ್‌ನ ಆಸೆ ಆದರ್‌ಸಗ, ಸುಕ ದುಕ್ಕಗ, ಗಾದೆಗಳ್‌ಲಿ ಮೂಡಿ ಬಂದದೆ. ಸರ್‌ವವ್ಯಾಪಿ ಆದ ಗಾದೆಗ ಸಕಲ ಜ್ಞಾನಗಳ ಹೊಂದಿದ್ದದೆ. ಲೋಕಾನುಬವದ ಗಾದೆಗಳ್‌ಲಿ ನೀತಿ, ನಯ, ಆಚಾರ ಅನಾಚಾರಗ ಹೊರ ಹೊಮ್ಮಿವೆ. ಉದಾರ್‌ಣೆಗೆ 'ಮಾಡುದು ಅನಾಚಾರ ಮನೆ ಮುಂದೆ ಬೃಂದಾವನ'ತೇಳುವ ಗಾದೆ ಮೂಲತ ಯಾರಿಗೋ ಒಬ್ಬಂಗೆ ಅನ್ವಯ ಆಕಿತ್. ಕಾಲಕ್ರಮೇಣ ಜನಸಾಮಾನ್ಯರ್‌ಗೆ ಸೇರುವಂತದ್. ಮೂರ್ ಹೊತ್ತ್ ಪಾಪದ ಕೆಲಸಗಳ ಮಾಡಿ ಮತ್ತೆ ಪೂಜೆ, ಪುನಸ್ಕಾರ, ಜಪತಪ ಯಾತ್ರೆಗಳ್‌ನ ಮಾಡ್‌ರೆ ಪ್ರೇಜೆನ ಇಲ್ಲೆ. ಸದಾಚಾರ ಸುರುಗೆ ತೇಳ್‌ವ ತತ್ವನ ಇದ್ ಹೇಳ್‌ದೆ.ಸಮಾಜದ ಸುಕ ಸಂಪತ್ತ್‌ಗೆ ನೀತಿನೆ ಅಡಿಗಲ್ಲ್. ಮೊಯಿಂಸನ ಮನ್ಸ್‌ನ ತಿದ್ದ್‌ವ, ದರ್ಮನ ಕಾಪಾಡ್‌ವ ಸಕ್ತಿ ಇದ್. ಗಾದೆಗ ಒಂದ್ ನಾಡ್‌ನ ಸಂಸ್ಕೃತಿಗೆ ಆದರ್‌ಸ. ಹಂಗೆ ಒಂದ್ ಜೆನಾಂಗದ ಸಂಸ್ಕೃತಿಗೂ ಆದರ್‌ಸ ಮತ್ತೆ ದೂರದರ್‌ಸಿನೂ ಹೌದು. ಇಡೀ ಜಗತ್ತೇ ಇಂದ್ ಗಾದೆಗಳ ಸೊತ್ತು. ಸಮಾಜನ ತಿದ್ದ್‌ವ ಮೊದ್ದುನ ಗುಣ ಗಾದೆಗಳ್‌ಲಿ ಉಟ್ಟು. **(ಕೆ.ಎಸ್.)**

**ಗಿರೀಶ್ ಭಾರದ್ವಾಜ್ :** ಗಿರೀಶ್ ಭಾರದ್ವಾಜ್ ಇವ್ ಮೇ 2, 1950ರ್‌ಲಿ ಸುಳ್ಯಲಿ ಹುಟ್ಟಿದೊ. ಅವು 1973ರ್‌ಲಿ ಮಂಡ್ಯದ P.E.S ಇಂಜಿನಿಯರಿಂಗ್ ಕಾಲೇಜ್‌ಂದ ಮೆಕ್ಯಾನಿಕಲ್ ಎಂಜಿನಿಯರಿಂಗ್ ಪದವಿ ಪಡ್‌ದೊ. ಭಾರತದ 127 ಹಳ್ಳಿಲಿ ಸೇತುವೆ ಕಟ್ಟಿ ಸೇತುಬಂಧು ಮತ್ತೆ ಬ್ರಿಡ್ಜ್‌ಮ್ಯಾನ್ ಆಫ್ ಇಂಡಿಯಾಂತ ಗುರ್‌ತ್‌ಸಿ ಕಂಡ ಭಾರತೀಯ ಸಮಾಜ ಸೇವಕ. ಅವುಕೆ 2017ರ್‌ಲಿ ಪದ್ಮಶ್ರೀ ಪ್ರಶಸ್ತಿ ಕೊಟ್ಟ್‌ಗೌರವಿಸಿದೊ. ಅವು ಸುರೂನ ತೂಗುಸೇತುವೆನ 1989ರ್‌ಲಿ ಕರ್ನಾಟಕ ರಾಜ್ಯದ ಸುಳ್ಯ ತಾಲೂಕ್‌ನ ಅರಂಬೂರ್‌ಲಿ ಪಯಸ್ವಿನಿ ಹಳ್ಳಕೆ ಅಡ್ಡಕೆ ಕಟ್ಟಿದೊ. ಅಂದ್‌ಂದ ಅವು ಕೇರಳಲಿ ಮೂವತ್ತ್, ಆಂಧ್ರಪ್ರದೇಸ ಮತ್ತೆ ಒಡಿಶಾ ಲಿ ತಲಾ ಎರಡ್ ಸೇತುವೆಗಳ ಕಟ್ಟಿದೊ. ಕರ್ನಾಟಕದ ಸುಮಾರ್ ಕಡೆಲಿ ಇವು ಕಟ್ಟ್‌ದ ಸೇತುವೆಗ ಒಳೊ.



ಇವ್‌ಕೆ ಕರ್ನಾಟಕದ ಅತ್ಯುತ್ತಮ ಯುವ ವ್ಯಕ್ತಿ (1988), ಗೃಹರಕ್ಷಕ ದಳಲಿ ಅವರ ಸೇವೆನ ಗುರ್‌ತಿಸಿ ಎರ್‌ಡ್ ಚಿನ್ನದ ಪದಕಗ, ಸರ್ ಎಂ. ವಿಶ್ವೇಶ್ವರಯ್ಯ ಪ್ರಶಸ್ತಿ, ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿ, ಸಿಎನ್‌ಎನ್ ಐಬಿಎನ್ ಚಾನೆಲ್‌ಂದ 'ಬಿ ದಿ ಚೇಂಜ್' ಸಿಜೆ ಪ್ರಶಸ್ತಿ, 'ರೋಟರಿ ಇಂಟರ್‌ನ್ಯಾಶನಲ್ ಡಿಸ್ಟ್‌ಂದ ಪೀಸ್ ಥ್ರೂ ಸರ್ವಿಸಸ್' ಪ್ರಶಸ್ತಿ. ಸುವರ್ಣ ಮೀಡಿಯಾ ನೆಟ್‌ವರ್ಕ್‌ನ 'ಅಸಾಮಾನ್ಯ ಕನ್ನಡಿಗ' ತೇಳ್‌ವ ಪ್ರಶಸ್ತಿಗ ಬಂದುಟು.

**ಗುಡ್ಡೆಮನೆ ಅಪ್ಪಯ್ಯ ಗೌಡ :** 1837 ಅಕ್ಟೋಬರ್ 31ರ ದಿನ ಕೊಡಗ್‌ನ ಕ್ರಾಂತಿ ದೀಪ ಒಂದ್ ಆರ್‌ದ ದಿನ. 19ನೇ ಶತಮಾನದ ಮೂಡಲಿ ಕೊಡಗ್ ನ ಮೇಲೆ ಬ್ರಿಟಿಸರ್ ಮಾಡ್ದ ದಬ್ಬಾಳಿಕನ ವಿರೋದ್‌ಸಿ ನಡ್ಸಿದ ದಂಗೆನ ಇತಿಯಾಸಕಾರರ್ ಸೂಕ್ಷ್ಮ ಲಿ ಸೋದನೆ ಮಾಡಿ ಕೊಟ್ಟಳೊ. ಇಸ್ಸರೊರೆಗೆ ಈ ದಂಗೆನ ಬಗ್ಗೆ, ಲೇಕನ, ಕತೆ, ಪುಸ್ತಕ ಬರವುಲಿ ಸ್ವಾಮಿ ಅಪರಂಪಾರ ಮತ್ತೆ ಕಲ್ಯಾಣ ಸ್ವಾಮಿಗೆ ಸುರುನ ಜಾಗೆ ಕೊಟ್ಟರುಸ ಗುಡ್ಡೆ ಮನೆ ಅಪ್ಪಯ್ಯ ಗೌಡ್ರ ಪಾತ್ರ ಮಾತ್ರ ಬಾರಿ ಮಹತ್ವದ್‌ಂತೇಳಿ ತಿಳ್ ಬಂದದೆ. ಈ ದಂಗೆನ ಮೂಲ ವೆವಸ್ತೆಗೆ ಅಪ್ಪಯ್ಯ ಗೌಡ್ರ್ ಮುಕ್ಯ ಕಾರಣಂತೇಳ್ದಕೆ ಯಾವ ಸಂಸಯನು ಇಲ್ಲೆ,

ಅಪ್ಪಯ್ಯ ಗೌಡ್ರು ಅವರ ಜೀವನ ಸೊತಂತ್ರಕಾಗಿ ಕಳ್ಕಂಡ ಒಬ್ಬ ತ್ಯಾಗಿ ಜೀವಿ. ಅಪ್ಪಯ್ಯ ಗೌಡ್ರ ಹಿರಿಯೊವು ಸುಳ್ಯದ ಮಾಗಣೆಂದ ಬಂದ್ ಕೊಡಗಲಿ ಜಮ್ಮ ಪಡ್ದವು (ಸುಳ್ಯದ ಮಾಗಣೆಂತೇಳಿರೆ ಕೆಳಗೆನ ಕೊಡಗ್). ಅಪ್ಪಯ್ಯ ಗೌಡ್ರು ಚಿಕ್ಕ ವೀರರಾಜೆನ ಕಾಲಲಿ ಜಮೆದಾರರಾಗಿದ್ದೊ, ಕೊಡಗ್ ಬ್ರಿಟಿಸರ ಕೈಗೆ ಸೇರ್‌ದ ಮೇಲೆ ಇವು ಸುಳ್ಯದ ಸುಬೇದಾರ ಆಗಿ ಬ್ರಿಟಿಸ್‌ನವರ ಆಡೆಳ್ತನ ಒಪ್ಪದೆ ತನ್ನ ಕೂಟದವರೊಟ್ಟಿಗೆ ಬ್ರಿಟಿಸ್‌ನವರ ದುರಾಡಲ್ತನ ವಿರೋದ್‌ಸಿ ಹೋರಾಟ ಮಾಡಿಕೆ ಸುರುಮಾಡ್ದೊ. ಈ ಹೋರಾಟಲಿ ಅಪ್ಪಯ್ಯ ಗೌಡ್ರು, ಕೆದಂಬಾಡಿ ರಾಮಗೌಡ್ರು, ಮತ್ತೆ ಹುಲಿಕುಂದ ನಂಜಯ್ಯನವು ಅಡಿಪಾಯದಂಗೆ ಇದ್ದೊಂತೇಳಿ ಚರಿತ್ರೆಕಾರರ್‌ಂದ, ಬ್ರಿಟಿಸ್ ವರದಿಗಳಂದ ನಾವ್‌ಗೆ ಗೊತ್ತಾದೆ.

1834 ಕೊಡಗಲಿ ಬ್ರಿಟಿಸರ ಆಡೆಲ್ತ ಸುರು ಆದೆ. ಆ ಹೊತ್ತುಲಿ ಕೊಡಗ್‌ನ ಆಳತಿದ್ದ ಚಿಕ್ಕ ವೀರರಾಜೆನ, ದಿವಾನ ಬೋಪಣ್ಣ ಮತ್ತೆ ಇನ್ನೂ ಕೆಲವರ ಕುತಂತ್ರಂದಾಗಿ ಬ್ರಿಟಿಸರ್ ಬಾಳ ಸುಲ್‌ಬಲಿ ಹಿಡ್ಸ್‌ವೆ. ಕ್ಯಾ ಟಿ. ಡಿ. ಕಾಂಟ್‌ನ ಮುಂದಾಳತ್ವಲಿ ರಾಜನ ಮಡಿಕೇರಿಂದ ಹೋಗಿ



ಗುಡ್ಡೆಮನೆ ಅಪ್ಪಯ್ಯ ಗೌಡ




ಅಲ್ಲಿ ರಾಜ ಬಂದನಲಿ ಇಸುವೆ. ಹಿಂಗೆ ತಾರೀಕ್ 11–4–1834 ರಂದ್ ನಮ್ಮ ಕೊಡಗ್ ಜಿಲ್ಲೆ ಬ್ರಿಟಿಸರ ಆಡೆಳ್ತ ಸುರು ಆದೆ, ಜೆನಗಳ ಮೇಲೆ ಅವರ ದಬ್ಬಾಳಿಕೆನು ಕೂಡಾ ಹೆಚ್ಚಿದೆ. ಬ್ರಿಟಿಷರ್ ಕೆಲ ದಿವಾನರ ಸ್ವಾರ್ತ, ಆಸೆನ ಕಂಡ್ ಅದರ ತಮ್ಮ ಸೊಂತ ಲಾಬಕಾಗಿ ಬಳ್ಸಿ ಕಂಡ್ ಜೆನಗಳ ಸಕ್ತಿ ಮತ್ತೆ ಒಗ್ಗಟ್ಟ್‌ನ ಕಮ್ಮಿ ಮಾಡಿಕ್ಕಾಗಿ ಕೊಡಗ್‌ನ ಬಾಗನೆ ಆಗಿದ್ದ ಸುಳ್ಯ, ಪುತ್ತೂರು ಮತ್ತೆ ಬೆಳ್ಳಾರೆ ಸೀಮೆಗಳ 1834ನೇ ಅಕ್ಟೋಬರ್ ತಿಂಗಲಿ, ದಕ್ಷಿಣಕನ್ನಡ ಜಿಲ್ಲೆಗೆ ವರ್‌ಗಾವಣೆ ಮಾಡ್‌ವೆ.

ಜೆನಕೆ ಬ್ರಿಟಿಸರ ಈ ಕೆಲಸ ಸರಿ ಕಾಂಬೊದ್ಲೆ, ಪ್ರಜೆಗ ತಮ್ಮ ಅರಸನ ಮೇಲೆ ಬಾರಿ ಪ್ರೀತಿ ಮತ್ತೆ ವಿಸ್ವಾಸ ಇಸಿ ಕಂಡಿದ್ದೊ, ದಂಗೆನ ಗಟನೆಗೆ ಮೂಲ ಕಾರಣ ಸಾ ಇದೆ ಆತ್ ತಮ್ಮ ರಾಜೆನ ಪಟ್ಟಕೆ ಬೇರೆ ಯಾರೋ ಬಂದ್ ಆಡಳ್ತ ನಡ್ಸುದು ಜೆನಕೆ ಸರಿಕಂಡತ್ಲೆ. (ಎಸ್.ಎಸ್.ಐ.)

**ಗೊರವಂಗೆ ಇಸುದು :** ಬೆಳೆ ಬೆಳ್ದರೆ ಸಾಲ್ದ್, ಅದರ ಕೂಡ್‌ಸಿ ಇಸಿರೆ ಸಾಲ್ದ್, ಅದರ ಕೂಡಿಸಿ ಇನ್ನೊಂದ್ ಬೆಳೆ ಬಾವವರೆಗೂ ಕಾಪಾಡಕೂಂತೇಳುವ ಮುಂದಾಲೋಚನೆ. ಆ ಮುಂದಾಲೋಚನೆನೊಟ್ಟಿಗೆ ದೇವ್‌ರ ನೆನೆಯದೆ ಕಾರ್ಯ ಇಲ್ಲೆ. ಹಾಂಗೆನೇ ಒಕ್ಕಲ್ ಹಾಕಿ ಬಂದ ಬತ್ತ ಏನೂ ಹಾಳಾಗದಂಗೆ ಯಾದೇ ಹುಳ ಸೇರಿಕಾಗದ್ ತೇಳುವ ನಂಬಿಕೆಂದ ಹುಳಗಳ ದೇವ್ರು ಗೊರವಂಗೆ ನೈವೇದ್ಯನ ಇಸಿ ಗೊರವಂವನ ಕರ್‌ದು ತಿನ್ಸಿ ಕಣಂದ ಓಡ್ಸುವೆ. ಇದ್ ಕುಟುಂಬದ ಕಡೆ ಒಕ್ಕಲ್‌ಲಿ, ಒಕ್ಕಲ್‌ಂದ ದನಗಳ್‌ನ ಬುಡುವ ಹೊತ್ತುಲಿ ಹೊರ್‌ದ ಅಕ್ಕಿ ಬೆಲ್ಲನ ಒಂದ್ ಕೊಡಿ ಬಾಳೆ ಎಲೆಲಿ ಇಸಿ ಕಾಯಿನ ಒಡ್ದ್ ಹಟ್ಟಿ ಹಕ್ಕಲೆ ಇರುವ ಬತ್ತ ಮತ್ತೆ ಹುಲ್ಲುನ ಒಟ್ಟು ಸೇರ್‌ಸಿ, ಹೊರ್‌ದ ಅಕ್ಕಿ ಬೆಲ್ಲ ಕಾಯಿ ಚೂರ್‌ನ ಸೇರ್‌ಸಿ ಗಂಟ್‌ಕಟ್ಟಿ ಒಂದ್ ಮರಕ್ಕೆ ಕಟ್ಟುವೆ. ಕಟ್ಟಿದ ಮೇಲೆ ಕಣದ ಸುತ್ತ ಗೊರಂವನ ಬೊಬ್ಬೆ ಹಾಕಿ ಓಡ್ಸುವಂಗೆ ಓಡಿ ಮತ್ತೆ ಗೊರಂವನ ಪ್ರಸಾದನ ಎಲ್ಲವ್ಕೂ ಹಂಚುವೆ. ಇದರ ಗೊರವಂಗೆ ಕೊಡುದು ತೇಳುವೆ. (ಎಂ.ಎಂ.ಎಸ್.)

**ಗೋಂದೊಲು ಪೂಜೆ–ಶಕ್ತಿ ಆರಾದನೆ :** ದಕ್ಷಿಣಕನ್ನಡ ಜಿಲ್ಲೆಲಿ ಮರಾಟಿ (ಮಾರಾಟ) ನಾಯ್ಕ ಜೆನಾಂಗದವು ಆಚರ್‌ಸುವ ಹಂಗೆನೆ ನಡ್ಸಿಕೊಡ್‌ವ ಆರಾದನೆ ಗೋಂದೋಲು ಪೂಜೆ. ಹಿನ್ನೆಲೆ ವಾದ್ಯದ ಸಮೇತ ದೊಡ್ಡ ದನಿಲಿ ಕತೆನ ಹೇಳಿಕಂಡ್ ಗೊಂದಲ ಮಾಡ್ದರ್‌ಂದ ಗೊಂದಲಿಗರ ಮೇಳತೇಳ್ವ ಹೆಸ್ರ್ ಬಂದಿರೊಕುತ ಗೊಂದಲಿಗರ ಮೇಳದ ಬಗ್ಗೆನ ಅಬಿಪ್ರಾಯ ಹೇಳ್ಕನ ಈ ಗೋಂದೋಲು ಪೂಜೆನ ಸ್ವರೂಪದ ಹಿನ್ನೆಲೆಗೂ ಅನ್ವಯ ಆದೆ.

ಈ ಪೂಜೆನ ಹೊತ್ತುಲಿ ನಡೆವ 'ಗೋಂದೋಲು ಕೊಣ್‌ತ' ಮಾಡಿಕನ ದರ್‌ಸನ ಬಾವ 'ಪರಶುರಾಮ'ತೇಳ್ವ ಜೆನ ಒಮ್ಮೆಗೆ ದೆವ್ವ(ದೆವ್ವ)ನ ಅವರ ಮೈಮೇಲೆ ಬರ್‌ಸಿಕಂಡಂಗೆ ಮಾಡಿ ಕೊಣ್ದದೆ. ಅಸ್ಟಲ್ಲದೆ ಪೊದ್ಯ, ಕೊಣ್‌ತ, ದೀಟಿಕೆ – ದೊಂದಿಗಳ ಬೆಳ್ಕ್, ತಾರಕಕ್ಕೇರುವ ವಾದನನು, ಹಿಮ್ಮೇಳ ಕತ್ತಲೆ ಹೊತ್ತುಲಿ ಒಟ್ಟು ಸೇರಿ ಗಲಿಬಿಲಿಯಾವಂಗೆ ಗೊಂದಲ ಮಾಡ್‌ವಂಗಿದ್ದದೆ. ಇದರ್‌ಂದಾಗಿ ಜೆನಪದರ್‌ಲಿ ಅನ್ವರ್ತ ಆಗಿ ಈ ಆಚರಣೆನ ಸನ್ನಿವೇಸ 'ಗೋಂದೋಲು'ತ ಹೆಸ್ರಾವ್ಕು.

ಇಂದ್ ದಕ್ಷಿಣಕನ್ನಡಲಿ ಗಿರಿಜೆನರ್‌ತ ಗುರ್‌ತಿಸಿಕಂಡ ಮರಾಟಿ ನಾಯ್ಕ ಜೆನಾಂಗದವು ಈ ಗೋಂದೋಲು ಪೂಜೆನ ಆಚರ್‌ಸುದು ಮಾತ್ರ ಅಲ್ಲದೆ ಇದರ್‌ಂದ ಪ್ರಬಾವಿತರಾದ ವೈದಿಕೇತರ ಜೆನಾಂಗದವು ಕೂಡ ಈ ಜೆನರ್‌ಂದ ಆಚರ್‌ಸಿಕಂಡವೆ. ಹೊರನಾಡ್‌ಂದ ಬಂದ ನಾಯ್ಕ ಜೆನಾಂಗದವರ ಈ ಗೋಂದೋಲು ಪೂಜೆ ತುಳು ಸಂಸ್ಕೃತಿನೊಟ್ಟಿಗೆ ಸ್ವಕೀಯ ಆಗಿ ತೆಕಂಟ್ ನಂಬಿಕೆಗೆ ಬಂದುಟು.

ಆದರೂ ಈ ಪೂಜೆನ ನಡ್ಸಿ ಕೊಡುವವು ಮಾತ್ರ ನಾಯ್ಕ ಜೆನಾಂಗದವೆ ಆಗ್ಯೊಳೊ. ಮೂಲಂದ ಶೈವ ತಾಂತ್ರಿಕಾ ಚರಣೆನೊಟ್ಟಿಗೆ ನಿಕಟ ಸಮ್ಮಂದ ಹೊಂದಿರ್‌ವ ಈ ಗೋಂದೋಲು ಪೂಜೆ ಸಕ್ತಿಯಾರಾದನೆಯಾಗಿದ್ದ್ ಐತಿಹಾಸಿಕ ಕಾಲಗಟ್ಟವೊಂದರ್‌ಲಿ ವೈದಿಕಾಚರಣೆನ ಪ್ರಬಾವಕ್ಕೊಳಗಾಗಿರ್‌ವ ಸಾದ್ಯತೆನ ಇಂದ್ ಅದರ ತಾಂತ್ರಿಕ ಕ್ರಿಯಾವಿದಿಲಿ ಕಾಣಕ್. ಪ್ರಾದೇಸಿಕ ಆಗಿ ಈ ಗೊಂದೋಲು ಆಚರಣೆನ ಸ್ವರೂಪ ರೀತಿಲಿ ವೆತ್ಯಾಸ ಕಂಡುಬಂದದೆತಾದರೂ ಕಡೇ ಉದ್ದೇಸ ಒಂದೇ ಆಗುಟು.


ಗೋಂದೊಲು ಪೂಜೆ

**ಆಚರಣೆನ ಉದ್ದೇಸ :** ಕುಟುಂಬದ ಜೆನ–ದನಗಳಿಗೆ ಬೆಳೆ–ಪಸಲ್‌ಗೆ ಬಾವ ರೋಗರುಜಿನಗಳ ನಿವಾರಣೆ ಮಾಡಿ ಕೊಡೊಕುತೇಳ್ವ ಪ್ರಾರ್ತನೆ ಈ ಆಚರಣೆನ ಉದ್ದೇಶ 'ಮಹಾಮಾಯಿ' (ಮಹಾಮಾಯಿ – ಅಮೂರು – ದುರ್‌ಗಾದೇವಿ – ಮಾರಿಯಮ್ಮ ಶಕ್ತಿನ ಪರ್ಯಾಯ ಹೆಸ್ರ್‌ಗ) ರೋಗರುಜಿನಗಳ ಅದಿದೇವತೆ ಹಂಗಾಗಿ ಅವಳ ಆರಾದನೆ ಮಾಡಿ ಸಂತೃಪ್ತಿಪಡ್ಸಿ ಅವು ತೃಪ್ತಿಯಾದು ಜೆನಪದರ ನಂಬಿಕೆ ಮತ್ತೆ ಉದ್ದೇಸ ಆಗುಟು.

**ಆಚರಣೆನ ಹಿನ್ನೆಲೆ ಮತ್ತೆ ಸ್ವರೂಪ :** ಕಸ್ಟಲಿ ಇರಿಕನ ಕುಟುಂಬದ ಯಜಮಾನ ಬಂದ ಕಸ್ಟನ ನಿವಾರ್‌ಸಿಕೊಟ್ಟರೆ ಮಹಾಮಾಯಿಗೆ ಗೋಂದೋಲು ಪೂಜೆ, ಕೆಲವೊಮ್ಮೆ ಜೋಡಿ ಪೂಜೆ ನಡ್ಸಿಕೊಟ್ನೆತ ಹರ್‌ಕೆ

ಹೊತ್ತದೆ. ಹಂಗಾಗಿ ಮಹಾಮಾಯಿನೊಟ್ಟಿಗೆ ಅಸುರ ಕ್ರಿಯೆಲಿ ಬಾವ ದೇವಿನ ಬಂಟ ಕಾಲಬೈರವಂಗೆ 'ಬಲಿ' ಯಾಗುವ ಹಂದಿ ಕೋಳಿಗಳ 'ಈಡ್' ಬುಟ್ಟದೆ. ಅವು ದೊಡ್ಡದಾವವರೆಗೆ ಬಾರೀ ಜಾಗ್ರತೆಲಿ ಬೆಳ್ಸುವೆ. ಯಾಕೆತೇಳ್ರೆ ಅವರ ಶರೀರಂದ ಯಾದೇ ಕಾರಣಕೂ ಒಂದ್ ತೊಟ್ಟು ರಕ್ತ ಕೂಡ ಹೊರಗೆ ಚೆಲ್ಲಿಕಾಗದ್, ಚೆಲ್ಲಿರೆ ಜೆನಗ 'ಅಶುದ್ದ' ನ್ಯೂನ್ಯತೆನ ಕಂಡವೆ.

ಈ 'ಗೋಂದೋಲು' ವರ್ಸದ ಮಳೆಗಾಲನ ಬುಟ್ಟು ಪುರ್ಸೊತ್ತುನ ಯಾವ ಹೊತ್ತುಲ್ಯಾರ್ ನಡ್ಸಕ್. ಪೂಜೆ ನಡ್ಸುವ ಯಜಮಾನನ ಬೇಡಿಕೆನಂಗೆ ಆ ಕಾಲಲಿ ಗೋಂದೋಲು ಪೂಜೆಗೆ ದಿನ ಗೊತ್ತುಮಾಡ್ದ ಜೆನ ಪೂಜೆ ನಡ್ಸಿಕೊಡುವ ನಾಯ್ಕು ಜೆನಾಂಗದ ದೇವರ ಮಾನಿ' ಆಗಿದ್ದದೆ. ಅಂವನ ಹೇಳಿಕೆನ ಪ್ರಕಾರ ಪೂಜೆಗೆ ಗೊನೆ ಕಡ್ಡವೆ.



ಆಚರಣೆನ ಹಿನ್ನೆಲೆ ಮತ್ತೆ ಸ್ವರೂಪ

ಸಾಮಾನ್ಯ ಆಗಿ ಜೆನಪದರ್ ನಂಬುವ ಕಡುವಾರಗಾದ ಆದಿತ್ಯ, ಮಂಗಳ, ಶುಕ್ರವಾರಗಳ್‌ಲಿ ಈ ಪೂಜೆನ ಆಚರ್ಸುವೆ. ಒಳ್ದ ವಾರಗ ಈ ಪೂಜೆಗೆ ಒಳ್ಳದಾಗಿರ್‌ದುಲೆ. ಈ ಪೂಜೆನ ಕ್ರಿಯಾವಿದಿ ಒಂದ್ ದಿನ ಇಡೀ ನಡ್ದದೆ. (ಬೊಳ್ಪುಂದ ಮಾರಂದಿನ ಬೆಳ್ಜಾರ್ ಮುಟ್ಟ)

ಊರೊಂದಕೆಸಮ್ಮಂದಪಟ್ಟಾಂಗೆಮರಾಟಿನಾಯ್ಕಜೆನಾಂಗದವರ್‌ಲಿ ವಂಸ ಪರಂಪರೆ ಆಗಿ ಹಿರಿಯವು ಕುಲ ದೇವ್ರಾದ ಮಹಾಮಾಯಿ 'ದೇವರ ಪಡಿ' ಹಿಡ್ದ್‌ದ್ 'ದೇವರ ಮಾನಿ'ತ ಕರ್ಸಿಕಂಡವೆ. ಈ ದೇವರ ಮಾನಿ ದಿನೋಳು ದೇವಿನ ಆರಾದಿಸುವವಾಗಿದ್ದ್ ನಿಯಮ ಸಂಯಮಲಿರೊಕುತ ಆ ಜೆನಾಂಗದ ಜೆನ ಬಾವಿಸುವೆ. ಅದ್ಕೆ ಹೊಂದಿಕಂಡಂಗೆ ಆ ವ್ಯಕ್ತಿ ಗೌರವ ಪಡ್ಕಂಡದೆ.

ಗೊತ್ತುಮಾಡ್ದ ದಿನ ಪೂಜೆಗೆ ಬೇಕಾದ ಪರಿಕರಗಳ್‌ಂದ ದೇವಿನ ಬೆತ್ತ, ಕಳಶ, ಆಬರಣ, ಗುಮ್ಮಟೆತೇಳ್ವ ವಾದ್ಯ ವಿಸೇಸ ಚೌಡಿಕೆತೇಳ್ವ ಕೃತಿ ವಾದ್ಯ ಹಂಗೆನೆ ಕೊಣ್‌ತ ಆಕನ ಹೊತ್ತುಸುವ ಕಬ್ಬಿಣದ ದೀಟಿಕೆಗ ಇರುವ ಪೆಟ್ಟಿಗೆನೊಟ್ಟಿಗೆ ಹಂಗೆನೆ ಜಾತಿ ಬಾಂದವರೊಟ್ಟಿಗೆ ಪೂಜೆ ನಡೆವ ಮನೆಗೆ 'ದೇವರ ಮಾನಿ' ಬಂದದೆ. ಈ ಪೂಜಾ ಸಾಮಾಗ್ರಿಗ ಕೂಡ ವಂಸಪಾರಂಪರ್ಯ ಆಗಿ ಅವಂಗೆ ಬಂದದೆ. ಪೂಜೆಲಿ ಹೆಣ್ಮಕ್ಕ ನೋಡಿಕೆ ಬಂದವೆ ಬುಟ್ರೆ ಬೇರೆಂತದ್ಕು ಇರ್‌ದುಲೆ.

ಪೂಜೆ ನಡೆವ ಮನೆಗೆ ಬಂದ 'ದೇವರ ಮಾನಿ' ಹಂಗೆನೆ ಪೂಜೆಲಿ ಕೂಡ್‌ವ ಗಂಡ್‌ಸರ್ ಮೀದ್ ಸುದ್ದ ಆದವೆ. ಮತ್ತೆ ಮುಂದೆ ಬೈರವಂಗೆ 'ಬಿಂದು ಕೊಡ್ವ, ಹಿಂದೆನೆ 'ಈಡ್ ಬುಟ್ಟ ಪ್ರಾಣಿಗಳಿಗೆ ತಿಂಬಕೆ ಕೊಟ್ಟವೆ.ಹೊಟ್ಟೆ ಇಸುದು ಕಮ್ಮಿ ಆಗಿ ಕುಸಿಲಿರ್‌ವ ಪ್ರಾಣಿ ಬಲಿಂದ ದೆವ್ವ ತೃಪ್ತಿಯಾದೆತೇಳಿ ನಂಬುವೆ. ಮತ್ತೆ ಗಂಡ್‌ಸರ್ ಮಾಡ್ದ ಅಡ್ಗೆನ ವ್ರತಾಚರಣೆಲಿರುವ 'ದೇವರ ಮಾನಿ' ಸಹಚರರೊಟ್ಟಿಗೆ ಉಂಡದೆ.

ಪೂಜೆಗೆ ಮೊಡ ತಯಾರಿ ನಡ್ಸುವ ಮೊಡಲಿ ಸಾಮಾನ್ಯ ಮೂಲ ಜಾಗೆ ದೆವ್ವಗಾಗಿರ್‌ವ ಗುಳಿಜ್ಜ, ಪಂಜುರ್‌ಲಿ, ರಕ್ತೇಶ್ವರಿ ದೆವ್ವಗಳಿಗೆ ಪ್ರಾಣಿ ಬಲಿ ಇಲ್ಲದೆ ಪನಿಯಾರ (ಪರ್‌ವ) ಇಸಿದ್ ಸಾತ್ವಿಕ ಕ್ರಿಯೆಲಿ ಆರಾದನೆ ನಡ್ದದೆ. ಇದ್ ಪೂಜೆನ ಹೊತ್ತುಲಿ ನಡ್ಸಿಕೊಡ್‌ವ ವಿಸೇಸಆರಾದನೆ ಆಗಿದ್ದದೆ. ಗೋಂದೋಲು ಪೂಜೆಲಿ ಆರಾದನೆ ಮಾಡ್ವ ದೆವ್ವ ಹೊರಗೆನವಾಗಿದ್ದ್ ಅವ್‌ಗಳ ಆರಾದನೆನ ಹೊತ್ತುಲಿ ಮೂಲ ದೆವ್ವಗಳ್‌ಂದ ವಿಗ್ನ ಆಕಾಗದ್‌ತ ಈ ವಿಸೇಸ ಆರಾದನೆನ ಅವ್ಕೆ ಸುರೂಗೆ ಒಪ್ಪುಸುವೆ. ಒಂದ್ ವೇಳೆ ಕಾಲ ಬೈರವ ಮೂಲ ಸ್ತಳ ದೆವ್ವ ಅಗಿದ್ದರೆ ಮಾತ್ರ ರೊಟ್ಟಿ, ಅನ್ನ, ಮೀನ್ ಅಡ್ಗೆ ಮಾಡಿ ಎಡೆ ಹಾಕೊಕೆತ ಹೇಳ್ವ ಕ್ರಮ ಇದ್ದದೆ.

ಜಾಗೆ ದೆವ್ವಗಳಿಗೆ ತಂಬಿಲ ಆದಾಂಗೆ 'ದೇವರ ಮಾನಿ'ಗೆ ಮನೆ ಯಜಮಾನ ಎಣ್ಣೆ ಕೊಡೊಕು. ದೇವರ ಮಾನಿ' ಎಣ್ಣೆ ಮೀದ್ ಮುಗ್ಸಿದ ಮೇಲೆ ಮನೆ ಇಜ್ಜಲ್‌ನ ಒಂದ್ ಜಾಗೆಲಿ ಹಾಕಿರುವ ಚಪ್ಪರದಡಿಲಿ ಮಹಾಮಾಯಿಯ 'ಗದ್ದುಗೆ ಏರಿಸುವ ಸಲುವಾಗಿ 'ಮಂಡಲ ಬರಿಯಕೆ ಕುದ್ದದೆ. ವಿಟ್ಲದ ಕಡೆ ಇದರ ಬಟ್ರ್‌ಗ ನಡ್ಸಿರೆ, ಬೆಳ್ತಂಗಡಿ ಸುಳ್ಯದ ಕಡೆ 'ದೇವರ ಮಾನಿ' ನೆ ಮಾಡ್ದೆ. ಈ 'ಮಂಡಲ ಬರೆ'ವಲ್ಲಿ ಐದು, ಏಳು, ಮತ್ತೆ ಒಂಬತ್ತು ತರದ ನಮೂನೆಗ ಇದ್ದವೆ. ಮನೆ ಯಜಮಾನನ ಬೇಡಿಕೆನಂಗೆ ಒಂದ್ ತರದ ಮಂಡಲನ ಬರ್‌ದವೆ. ಸಾಮಾನ್ಯ ಅಗಿ 'ದೇವರ ಮಾನಿ'ನ ಮಾತ್‌ನಾಂಗೆ ಏಳು ಸುತ್ತ್ ಇರ್‌ವ ಮಂಡಲನೆ ಬರ್‌ದವೆ. ಯಾವ ಅಂಕೆನ ಮಂಡಲ ಮಾಡ್‌ವೆನೊ ಅದೇ ಅಂಕೆಲಿ ಬೇರೆ ಸಾಮಾನ್‌ಗನು ಬಳ್ಸೊಕುತ ನಿಯಮ ಉಟ್ಟು. ಮಂಡಲದ ಹೊರ ವೃತ್ತದಿಂದ ವೃತ್ತದ ಕೇಂದ್ರಕೆ ತ್ರಿಜ್ಯದಂಗೆ ಮೂಡ – ಪೊಡ್‌ವ ದಕ್ಷಿಣ – ಉತ್ತರ ದಿಕ್ಕಿಗನುಗುಣ ಅಗಿದ್ ಅಂತರನ ಮಾಡ್‌ವೆ. ಆಗ ಮಂಡಲ ನಾಕ್‌ಮೂಲೆ ಆಗಿದ್ ಕಂಡದೆ. ಹೊರೆಗೆನ ವೃತ್ತದ ಹೊರೆಗೆನ ಪುಡೆಗೆ ಅಸ್ವತಸೊಪ್ಪುನಂಗೆ ತಳಬಾಗ ಮತ್ತೆ ಕರೆಗಳ್‌ಲಿ ಸೂರ್ಯ – ಚಂದ್ರ ನಾಗ – ನಕ್ಷತ್ರಗಳ ಚಿನ್ನೆನ ಮಾಡ್‌ವೆ. ಮಂಡಲ ರಚನೆಗೆ ಬಿಳಿಯಕ್ಕಿ ಕಾಳ್‌ನ ಬಳ್ಸುವೆ. ಮಂಡಲದ ಕೇಂದ್ರಲಿ ಕೊಡಿ ಬಾಳೆಲೆಲಿ ಬೆಳಿಗೆ ಅಕ್ಕಿನ ಮೇಲೆ ಹಿತ್ತಾಳೆ ಚೊಂಬು ಇಸಿ ಅದರ ಬಾಯಿಲಿ ಮಾಯಿಣ ಸೊಪ್ಪು ಪಿಂಗಾರದೊಟ್ಟಿಗೆ ಜೋಡ್ಸುವೆ. ಅದರ

ಮೇಲೆ ಮಹಾಮಾಯಿನ ಚತ್ರರೂಪಾದಿನ ಆಬರಣನ ಇಸಿ ಬಗೆಬಗೆ ಹೂನ ಪಿಂಗಾರಂದ ಸಿಂಗರ್‌ಸುವೆ. ಇದರ 'ಗದ್ದಿಗೆ ಏರ್‌ಸುದುತ ಹೇಳ್‌ವೆ. ಕರೆಗೆ ಎರಡು ಕಾಲ್ ದೀಪಗಳ ಇಸುವೆ. ಮಂಡಲದ ಹಕ್ಕಲೆ ಗಣಪತಿಗೂ ಸ್ವಸ್ತಿಕನ ಇಸುವೆ. ಒಟ್ಟಿಗೆ ಕಾಲಬೈರವಂಗು ಪ್ರತ್ಯೇಕ ಸ್ವಸ್ತಿಕನ ಇಸಕು. ಮಂಡಲದ ಪ್ರತಿ ವೃತ್ತಕ್ಕೂ ತ ಕಾಯಿ ಹಾಂಗೆ ಹಣ್ಣ್‌ಗಳ ಇಸುವೆ. ಇಲ್ಲಿ ಬಳ್ಸುವ ತೊಳ್‌ಸಿ – ಹೂ – ಪಿಂಗಾರಗಳ ಒಟ್ಟಿಗೆ ಕೇಪುಳು ಹೂ ಇದ್ದೆ ಇರಕು.

ಮಾಡಿದ ಪಂಚಕಜ್ಜಾಯನ ಗದ್ದುಗೆನ ಮೇಲ್ಬಾಗ ಹಾಂಗೆ ತಳ ಬಾಗಕೆ ಎರಡೆರಡು ಎಡೆಗಳ್‌ಲಿ ನೇವೇದ್ಯವಾಗಿ ಬಳ್ಸುವೆ. ಹಾಂಗೆನೆ ತೀರ್ತಪ್ರಸಾದ ಆಗಿದ್ ಸರಾಯನ ಸಣ್ಣ ಪಾತ್ರೆಗಳ್‌ಲಿ ಹೊಯ್ದ್ ಜೋಡ್ಸುವೆ. ವೈದಿಕ ಕ್ರಮಲಾದರೆ ಸರಾಯ ಇರ್‌ದುಲೆ. ಪಂಚ ಕಜ್ಜಾಯನ ಒಲೆಗೆ ಹೊಯ್ದ್ ಅಲ್ಲಿಂದಲೆ ಬಸ್ಮನ ತಂದ್ ಅದರನೆ ಪ್ರಸಾದ ಆಗಿದ್ ಕೊಟ್ಟುವೆ. ಪೂಜೆಗೆ ಬಾವ ಜೆನ ಎಣ್ಣೆನ ಕಾಣಿಕೆ ಆಗಿದ್ ತಾದು ಇಲ್ಲಿನ ವಿಸೇಸ. ಈ ಎಣ್ಣೆನ ದೀಪ ಹಾಂಗೆ ದೀಟಿಕೆಗಳಿಗೆ ಹಾಕಂಡವೆ. ಕಡೆಗೆ ಒಳ್ದ ಎಣ್ಣೆನ ಜೆನಕೆ ಪ್ರಸಾದ ಆಗಿದ್ ಕೊಟ್ಟುವೆ.

**ಗೋಂದೋಲು ಕೊಣ್‌ತ ಮತ್ತೆ ದರ್‌ಸನ :** ಮಂಡಲ ಬುಡ್ಸಿ ಗದ್ದುಗೆ ಏರ್‌ದ ಮೇಲೆ ಏಕಪ್ರಕಾರ ಅರ್‌ಚನೆ ಅರ್ಪಣೆ ನಡೆತಿದ್ದದೆ. ಈ ಕ್ರಮಲಿ 'ದೇವರ ಮಾನಿ' ಮಾಡತಿರಿಕನ ಕೊಣ್‌ತಲಿ ಸೇರ್‌ವ ಹಾಂಗೆ ದರ್‌ಸನಲಿರ್‌ವ 'ಪರಶುರಾಮ' ಅ ಕರ್‌ಸಿಕಂಡವೆ. ಈ ಜೆನ ಎಣ್ಣೆಲಿ ಮೀದ್ ಮುಗ್ಸಿಕಂಡ್ ಬಂದವೆ. ಕೊಣ್‌ತಲಿ ಸೇರವ್ಕೆ ವಿಸೇಸ ವೇಸಗ



ಗೋಂದೊಲು ಕೊಣ್‌ತ ಮತ್ತೆ ದರ್‌ಸನ

ಎಂತ ಇರ್‌ದುಲೆ. ಕಟ್ಟ ಬಿಳಿ ಬಟ್ಟೆನ ಸೊಂಟಕೆ ಬೈರಾಸ್‌ನ ದಟ್ಟಿನಾಂಗೆ ಬಿಗ್ದ್ ಕಟ್ಟಿದ್ದವೆ. 'ಗೋಂದೋಲು ಕೊಣ್‌ತದ ಕೆಲ ಕಡೆಗಳ್‌ಲಿ ಮಂಡಲಕೆ ವೃತ್ತಾಕಾರ ಆಗಿದ್ ನಡ್ದರೆ ಇನ್ನು ಕೆಲಕಡೆ ಅನುಕೂಲಕೆ ತಕ್ಕಂಗೆ ಮಂಡಲದ ಹಳ್ಳಾ ದೂರಲಿ ಕೊಣ್ದವೆ.ಸುರುಗೆ ಮಾಡಿಸಿದ ದೀಟಿಗೆಗಳ 'ದೇವರ ಮಾನಿ' ಹೊತ್ತುಸಿಕೊಟ್ಟ ಮೇಲೆ ದೀಟಿಕೆ ಹಿಡ್ದ ಗುಂಪು ಮಂಡಲಾಕಾರಲಿ ನಾಕ್ ಹೆಜ್ಜೆಗಳ ಸರಳ ರೂಪಲಿ ಪೊದ್ಯ ಹೇಳಿಕಂಡ್ ವೃತ್ತದ ನೊಡುಗೆ ಹಾರಿ ಕೊಣ್ದವೆ. ಕೊಣ್‌ತದ ನಡೆ ಉರುಂಟುಲಿದ್ದ್ ಎಡಕ್ಕೊಮ್ಮೆ ಬಲಕ್ಕೊಮ್ಮೆ ಬದಲಾದೆ. ಈ ಕೊಣ್‌ತ ಬೈರವಂಗೆ ರಕ್ತ ತರ್ಪಣ ಆವವೊರೆಗೆ ಮುಂದ್‌ವರ್‌ದದೆ.

ಕೊಣಿಯಕನ ಹೇಳ್‌ವ ಪೊದ್ಯ ಹಳೆತಲೆಮಾರ್‌ಲಿ ಈಗಲೂ ಮರಾಟಿಲಿದ್ದರೆ ಹೊಸ ತಲೆಮಾರ್ ಕನ್ನಡಲಿ ಹಾಂಗೆ ತುಳುಲಿ ಹೇಳ್‌ವೆ. ಈ ಪೊದ್ಯ ಕತೆನ ರೂಪಲ್ಲಿದ್ದ್, ಕೊಣ್‌ತಕೆ ತಕ್ಕಾಂಗೆ ಹೊಂದಿಕಂಡ್ ಮಹಾಮಾಯಿ ದೇವಿನ ಹುಟ್ಟು ಪ್ರಸಾರ ಮತ್ತೆ ಕಾರಣಿಕ (ಮಹಿಮೆ)ನ ವರ್ಣನೆ ಮಾಡ್‌ವೆ. ದೀಟಿಗೆ ಹಿಡ್ದ್ ಕೊಣಿಯವ ಗುಂಪ್‌ಲೊಬ್ಬ ಈ ಪೊದ್ಯನ ಹೇಳಿಕಂಡ್ ಹೋದಾಂಗೆ ಒಳ್ದವು ಅದರ ಕಡೆ ಸಾಲ್ ಮಾತ್ರ ಹೇಳಿಕಂಡ್ ಕೊಣ್ದವೆ. ಗುಂಪುಲೊಬ್ಬ ಒಂಟಿಯಾಗಿ ಲಾಗೇ ಪನಿ ಲಾಗೆ ಲಾಲ್ಲೋ" ತ ಹೇಳಿಕನ ಗುಂಪು 'ಲಾಗೇಲ್ಲೋ ಲಂಬ ಲಾಗೆಲಾಲ್ಲೋ'ತ ಹೇಳ್‌ವೆ. ಗುಂಪುನವು ಮುಂದೆಗೆ ಈ ಸಾಲ್‌ನ ಮಾತ್ರ ಹೇಳಿಕಂಡ್ ದೀಟಿಗೆ ಹಿಡ್ದ್ ಕೊಣ್ದವೆ. ಗುಂಪುಲಿ ಪೊದ್ಯ ಹೇಳ್‌ವ ಮಹಾಮಾಯಿನ ಬಗ್ಗೆ ಕತನ ರೂಪದ ಪೊದ್ಯದ ಕೆಲ ಸಾಲ್‌ಗಳ ಇಲ್ಲಿ ಗಮನ್ಸಕ್.

**ಹುಟ್ಟು :**

ಮಹಾಮಾಯಿ ಮಹಾದೇವಿ ಹುಟ್ಯಾಲೋ ಮಾಯ ರಾಜ್ಯದಲ್ಲಿ ಹುಟ್ಟಿದಲೋ ಸೊ ॥ ಲಾಗೆಲ್ಲೋ ಪನಿ ಲಾಗೆಲಾಲ್ಲೋ,

**ಜಪತಪ :**

ಸೂರನ ಜಪವ ಮಾಡ್ಯಾಲ್ಲೋ ತಾಯಿ । ಸೂರನ ಜಪವ । ಮಾಡ್ಯಾಲ್ಲೋ ॥ ಸೊ॥ ಚಂದ್ರನ ಜಪವ । ಮಾಡ್ಯಾಲ್ಲೋ ತಾಯಿ।

ಚಂದ್ರನ ಜಪವ ಮಾಡ್ಯಾಲ್ಲೋ ॥ ಸೊ॥

**ರೋಗ ಸ್ರಿಷ್ಟಿ**

ಒಂದೊಂದು ಜೆನಕೆ । ಒಂದೊಂದು ರೋಗವ । ಮಾಡ್ಯಾಲೋ ಖಖ ದೇವಿ ಒಂದೊಂದು ರೋಗವ । ಮಾಡ್ಯಾಲ್ಲೋ ॥ ಸೊ

**ಪ್ರಸರಣ :**

ಅಂಬರ ಮಾರ್‌ಗವನೋಡ್ಯಾಲ್ಲೊ। ದೇವಿ ।

ಅಂಬರ ಮಾರ್‌ಗವ । ನೋಡ್ಯಾಲ್ಲೋ ॥ಸೊ॥

ಒಂದೊಂದು ಮನೆಗೆ ಒಂದೊಂದು ರೋಗವ । ಹಾಕ್ಯಾಲೋಝ ದೇವಿ । ಒಂದೊಂದು ರೋಗವ ಹಾಕ್ಯಾಲ್ಲೋ ॥ ಸೊ ॥

**ನಿವಾರಣೆ :**

ರಾಶಿ ಪೂಜೆಯ ಮಾಡ್ಯಾರಂತೆ ದೇವಿಗೆ

ರಾಶಿ ಪೂಜೆಯ ಮಾಡ್ಯಾರಂತೆ ॥ ಸೊ ॥

ಸಾವಿರ ಮನೆಯ

। ಸಾವಿರ ರೋಗವ । ತೆಗೆದಾಲೋಖಖ ದೇವಿಗೆ

ಸಾವಿರ ರೋಗವ । ತೆಗೆದಾಲೋ ॥ ಸೋ ॥

ಪೊದ್ಯದ ಸಾಲ್‌ನೊಟ್ಟಿಗೆ ಕೊಣಿಯಕನ ಗುಮ್ಮಟೆ ತಾಳ ಜಾಗಟೆ

ಚೌಡಿಕೆ ವಾಲಗಗಳ ಹಿಮ್ಮೇಳ ಇರ್‌ದರ್‌ಂದ ಒಂದ್ ಪೂವೇರ್‌ದ ವಾತಾವರಣ ಅಲ್ಲಿ ಇದ್ದದೆ.ಆಗ ಒಮ್ಮೆಲೆ 'ಪರಶುರಾಮ" ಎದ್ದ್ ನಿತ್ತದೆ. ಅವಂಗೆ ಮೈಮೇಲೆ ದರ್‌ಸನ ಬಂದದೆ. ಹರ್‌ಕೆ ಹೊತ್ತ ಕಾರಣನ ಯಜಮಾನಂದ ಕೇಳಿಕಂಡದೆ. ಯಜಮಾನ ಹರ್‌ಕೆನ ಕಾರಣನ ಹೇಳಿಕಂಡ್ ನಾವ್ಗೆ ಇಂಬು ಕೊಡಕುತ ಬಂದುಬಾಂದವರೊಟ್ಟಿಗೆ ಕೂಡಿ ಬಿನ್ನೆ ಮಾಡಿಕಂಡವೆ. ಆಗ 'ಪರಸುರಾಮನ ದರ್‌ಸನ ಇನ್ನೂ ಹೆಚ್ಚಾಗಿ ದೇವರ ಮಾನಿಂದ ತೆಕಂಡ ಪಿಂಗಾರನ ಹಿಡ್ದ್ ಕೊಣ್ದದೆ. ಇದರ 'ಪಿಂಗಾರ ಸೇವೆ 'ತ ಕರ್‌ದವೆ. ಅದಾಗಿ 'ದೇವರ ಮಾನಿ' ಹೊತ್ತಿಸಿ ಕೊಟ್ಟ ದೊಂದಿನೊಟಿಗೆ ಹಾಂಗೆ ಕೊನ್ತದವರ ದೀಟಿಗೆಗಳ ಪಡ್ಕಂಡ್ ತನ್ನ ಎದೆ ಹಕ್ಕಲೆ ತಂದದೆ. ಇದರ 'ದೊಂದಿ' ಸೇವೆತ ಕರ್‌ದವೆ.ಅದಾಗಿ ದೊಂದಿ – ದೀಟಿಕೆಗಳ ಕೆಡ್ಸುವೆ. ದರ್‌ಸನದ ಜೆನ ನಿತ್ತಲ್ಲೆ ನಿತ್ತ್ ಬಕ್ತರ್‌ಗೆ ಅಬಯದಾನ ಕೊಟ್ಟದೆ. 'ದೇವರ ಮಾನಿ' 'ಮಹಾ ಮಾಯಿ'ಗೆ ಮಂಗಳಾರತಿನ ಬೆಳ್ಗುವೆ. ಇಲ್ಲಿಗೆ ಮಹಾಮಾಯಿಗೆ ನಡಿವ 'ದೇವ ಕ್ರಿಯೆ'ನ ಪೂಜೆ ಮುಗ್ದ್ ಬಕ್ತರ್‌ಗೆ ಪ್ರಸಾದ ಕೊಟ್ಟವೆ.

ಮಹಾಮಾಯಿ ದೇವಿಗೆ 'ಗದ್ದುಗೆ ಏರ್‌ಸಿರ್‌ವ ಬಲಬಾಗದ ಹಜ್ಜನೆ ದೂರಲಿ ಬೈರವಂಗೆ ರಕ್ತ ತರ್ಪಣ ಮಾಡಿಕೆ ಎಲೆಲಿ ಹೊದುರಿ, ಹಾಳೆ ಕಿಳ್ಳಿಲಿ ಕುರ್‌ದಿ ನೀರ್, ಕೋಲ್ತಿರಿ ಹಾಂಗೆನೆ ಅಕ್ಕಿ ಕಾಯಿ ವೀಳ್ಯದಿಂದ ಕೂಡ್ದ ಪನಿಯಾರ ಮಾಡ್‌ವೆ.ಪರಸುರಾಮ ಅಸುರ ಕ್ರಿಯೆಗೆ ಹೋನೆತೇಳಿದ್ 'ಅಮ್ಮ'ನೊಟಿಗೆ ಬೇಡಿಕಂಡ್ ಅಲ್ಲಿಗೆ ಹೋದೆ. ಈಗ ಗದ್ದುಗೆಗೆ ಬಿಳಿ ಬಟ್ಟೆನ ಅಡ್ಡ ಹಿಡ್ದವೆ.ದೆವ್ವಕೆ ಈಡ್ ಬುಟ್ಟ ಹಂದಿ – ಕೋಳಿಗಳ ಬೈರವಂಗೆ ತಲೆಕಡ್ದ ರಕ್ತತರ್ಪಣ ಮಾಡ್‌ವೆ. ಈ ಹೊತ್ತುಗೆ ಬಲಿಕೊಟ್ಟ ಪ್ರಾಣಿಗಳ ಮಾಸನ ಮಾರಾಟ ಮಾಡಿಕಾಗದ್‌ತ ನಂಬಿಕೆನ ಕಾರಣಂದ ಎಲ್ಲಾ ಮಾಸನ ಅಡ್ಗೆ ಮಾಡ್‌ವೆ. ಅಡ್ಗೆ ಆದ ಮೇಲೆ ಬೈರವಂಗೆ 'ರಾಸಿ' ಬಳ್ಸುವ ಕ್ರಮ ಉಟ್ಟು. ಹುಗ್ಗೆ, ಪುಂಡಿನ ಒಟ್ಟಿಗೆ ಅಡ್ಗೆ ಮಾಡ್ದ ಮಾಸನ ರಾಸಿಲಿ ಇಕ್ಕುವೆ ಅಲ್ಲದೆ ಹದ್ನಾರ್ ಎಡೆಗಳ ರಾಸಿನ ಸುತ್ತಕೆ ಇಸುವೆ.ಅದಾಗಿ ಎಲ್ಲವ್ ಸೇರಿ ಪ್ರಾರ್‌ತನೆ ಮಾಡ್‌ವೆ. ಬಳ್ಸಿದ 'ರಾಸಿ'ನ ತೆಗ್ದ್, ರಾಸಿಗೆ ಇಸಿದ ಅಗಲ್‌ಗಳ ಬಂದ್ ಸೇರ್‌ದ ಹಿರಿಯರ್‌ಗೆ ಕೊಟ್ಟವೆ. ಇಸ್ಟೆಲ್ಲ ಕ್ರಮಗ ಮುಗಿಯಕನ ಬೆಳ್ಗರಾದೆ. ಗೋಂದೋಳು ಪೂಜೆಗೆ ಸೇರ್‌ದ ಜೆನ ಉಂಡ್‌ದ್ ತಿರ್‌ಗಿ ಹೋದವೆ.

ಗೋಂದೋಲು ಪೂಜೆನ ಕ್ರಮಲಿ ಎರಡು ತರ. 1. ಮಹಾಮಾಯಿಯ ಪೂಜೆ. 2. ಬೈರವನ ಪೂಜೆ

ಮಹಾಮಾಯಿಗೆ ಮಾಡ್‌ವ ಪೂಜೆ ದೇವ ಕ್ರಿಯೆದಾಗಿದ್ದರೆ, ಬೈರವಂಗೆ 'ಅಸುರ ಕ್ರಿಯೆ'ನ ಪೂಜೆ ಮಾಡ್‌ವೆ. ನಾಯ್ಕ ಜೆನಾಂಗದವ್ ನಡ್ಸುವ ಗುಮ್ಮಟೆ ಪೂಜೆ, ಹಟ್ಟಿ ಪೂಜೆಲು ಇದೇ ತರದ ಆರಾದನಾ ಕ್ರಮನ ಕಾಣಕ್. ಅದೆಲ್ಲನು ಕೂಡ ಗೋಂದೋಳುನಾಂಗೆ ಇರ್‌ದರ್‌ಂದ ಕಾಂಬಕೆ ಒಂದೆ ತರ ಇದ್ದದೆ. ಅದರ್‌ಲು ಮಹಾಮಾಯಿ ಮತ್ತೆಒತೆ ಬೈರವನ ಶಕ್ತಿ ಮತೆ ಶಿವನ ಅಂಸಂತೇಳಿ ಪೂಜ್‌ಸುವೆ. ಈ ಮರಾಟಿ ನಾಯ್ಕ ಜೆನಾಂಗ ಮಹಾರಾಷ್ಟದಿಂದ ಶಿವಾಜಿನ ಕಾಲಲಿ ಬೇಹುಗಾರಿಕೆನ ಉದ್ದೇಸಂದ ಕರ್ನಾಟಕಕೆ ಬಂದವ್ ಹಾಂಗೆ ಇಲ್ಲಿನ ನೆಲೆ ನಿತ್ತವ್‌ತ ನೆನ್ಸಿಯೊಳೊ. ವೀರ ಶೈವ ಮತದ ಪುನರುತ್ತಾನಕೆ ಮುಂದೆ ಕರ್ನಾಟಕಲಿದ್ದ ಶೈವ ಮತ ಲಾಕುಲೀಶ – ಪಾಶುಪತ (ಕಾಳಮುಕ) ಆಗಿತ್ತ್. ಈ ಮತ ಕರ್ನಾಟಕಕೆ ಗುಜರಾತ್‌ಂದ ಬಂದಿರಕುಂತ ಈ ಕಾಳ ಮುಕರ್ ಸಾತ್ವಿಕಾಚರಣೆಗೆ ಹೆಚ್ಚು ಮಹತ್ವ ಕೊಟ್ಟೊಳೊಂತ ಡಾ. ಎಂ. ಚಿದಾನಂದಮೂರ್ತಿಯವು ಅಬಿಪ್ರಾಯಪಟ್ಟೊಳೊ. ಕಾಳಮುಕರ ಸಾತ್ವಿಕಾಚರಣೆಗೂ ವೈದಿಕ ದೇವಕ್ರಿಯೆಗೂ ದೊಡ್ಡ ವೆತ್ಯಾಸಗೊಳೊ.

ಈ ಗೋಂದೋಳುಲಿ ನಡಿವ ಆಚರಣೆನ ಕ್ರಮಲಿ ಶಿಸ್ಟ ಪರಿಶಿಷ್ಟಮತಂತೇಳಿ ಹೇಳಕ್. ಬೈರವನ ಆರಾದನೆ ಮತ್ತೆ ದುರ್‌ಗೆನ ಆರಾದನೆ ಮೂಲತಃ ತಾಂತ್ರಿಕರಲಿ ಕಂಡ್ ಬಾದರ್‌ಂದ ಆ ಕಡೆನು ನಮ್ಮ ಗಮನನ ಸೆಳ್ದದೆ.ಸೈವ ಮತ ಮೂಲತಃ ಅವ್ವೈದಿಕ ಆಗಿದ್ದರು ಕ್ರಮೇಣ ಅದರ್‌ಲಿ ಸುಮಾರ್ ವೈದಿಕಾಚರಣೆಗ ಸೇರಿಕೊಂಡೊಳೊ ತೇಳಿ ಮಹಾಮಾಯಿ ವೈದಿಕ ದೇವತೆನಾಂಗೆ ಹೂ ನೈವೇದ್ಯ ಇಂತೆಲ್ಲ ಪರಿಕರದೊಟ್ಟಿಗ ಸಿಂಗಾರ ಮಾಡ್ದು ರೀತಿ ವೈದಿಕಾಚರಣೆನ ಪ್ರಬಾವಂತೇಳಿ ಗೊತ್ತಾದೆ. ನಾಯ್ಕ ಜೆನಾಂಗದವ್ ತಮ್ಮ ಮನೆಲಿ ಗೋಂದೋಳು ಪೂಜೆ ಮಾಡಿಕನ ಬೈರವನ ಆರಾದನೆನ ಮನೆ ಒಳೆಗೆ ಮಹಾಮಾಯಿನ ಆರಾದನೆನ ಮನೆನ ಹೊರೆಗೆ ನಡ್ಸುದು, ಕೆಲವೆಡೆ ಬಟ್ರುಗಳ್‌ಂದ ಅರ್‌ಚನೆ ಮಾಡ್ಸುದು, ಬೈರವಂಗೆ ಬಲಿ ಕೊಡಿಕನ ಮಹಾಮಾಯಿನ ಗದ್ದುಗೆಗೆ ಬಿಳಿ ಬಟ್ಟೆಂದ ತೆರೆ ಹಿಡಿದು ಇಂತೆಲ್ಲ ವಿಚಾರಗ ವೈದಿಕಾಚರಣೆನ ಪ್ರಬಾವಂದ, ಮೂಲ ಆರಾದನ ಕ್ರಮಲಿ ಬದಲಾವಣೆ ಆಗಿರ್‌ದಕೆ ಕಾರಣಗಳ ಕೊಟ್ಟದೆ.ಅಂಸ ರೂಪಿಗ ಆದ ಗಣಗಳಿಗೆ ಹಾಡಿ ಕೊಣ್ದ್ ರಕ್ತತರ್ಪಣ ಕೊಟ್ಟು ಆರಾದ್‌ಸುದು ಜೆನಪದರ್‌ಲಿರ್‌ವ ನಂಬಿಕೆನ ಕ್ರಿಯಾ ರೂಪ. ಅಸ್ಪೃಶ್ಯತೆಗೆ ಇಲ್ಲಿ ಇರದೆ ಪರಸ್ಪರತೆಗೆ ಹೆಚ್ಚು ಮಹತ್ವ ಇದ್ದದೆ.

ಹಾಡು, ಕೊಣ್‌ತ, ದರ್‌ಸನ ರಕ್ತತರ್ಪಣ ಗೋಂದೋಳು ಪೂಜೆಲಿ ಗಮನ ಸೆಳಿವ ಮುಕ್ಯ ಅಂಸಗ ಆಗಿದ್ದವೆ.ಇದರ್‌ಂದಾಗಿ ನಂಬಿದ ಇಸ್ಟ ದೆವ್ವಗಳಿಗೆ ಕುಸಿ ಮಾಡಿಕೆ ಮನ್ಸ್ ಮೂಲತಃ ಪರಿಸಿಸ್ಟರ್‌ದ್ ಸ್ರಿಸ್ಟಿನ ಎಲ್ಲಾ ಕಾರಣಕೆ ಸಕ್ತಿನ ಮೂಲ ತೇಳ್‌ವ ಅರ್‌ತಲಿ ಇಲ್ಲಿ ಸಕ್ತಿನ ಆರಾದನೆ ಮಾಡ್‌ವೆ. (ಪಿ.ಕೆ.)

**ಚಂಗಾಳ್ವ ವಂಸ :** ದಕ್ಷಿಣ ಕರ್ನಾಟಕದ ಈಗನ ಪಿರಿಯಾಪಟ್ಟಣ, ಹುಣಸೂರ್, ಕೃಷ್ಣರಾಜೆನಗರ ತಾಲೂಕ್‌ಗ ಮತ್ತೆ ಕೊಡಗ್‌ನ ಸೋಮವಾರಪೇಟೆ ತಾಲೂಕ್‌ನ ಬಾಗಗಳ ಸೇರಿ ಚಂಗನಾಡ್‌ನ ಆಳ್ತಾ ಇದ್ದ ಒಂದ್ ಸಣ್ಣ ರಾಜಮನೆತನನೆ ಚಂಗಾಳ್ವ ವಂಸ. ಇವ್ ಇವರ ಯಾದವ ಕುಲದವ್ ಚಂದ್ರವಂಶದವ್‌ಂತ ಕರ್‌ಕಂಡೊಳೊ.

ಕೊಂಗಾಳ್ವರಂಗೆ ಚಂಗಾಳ್ವರ್ ಕೂಡ ಚೋಳರ್. ಇವು ಮಾಂಡಳಿಕರ್ ಆಗಿರೊಕುಂತ ಊಹೆಮಾಡಿಕೂ ಅವಕಾಸ ಉಟ್ಟು. ಚೋಳ ಪಂಚವ ಮಹಾರಾಯ ಹನಸೋಗೆಲಿ ಚಂಗಾಳ್ವರ ಸೋಲ್ಸಿಟ್ಟುಂತೇಳ್ವ ಹೇಳಿಕೆ ಉಟ್ಟು. ಶಾಸನಲಿ ಹೇಳ್ದಂಗೆ ಈ ವಂಶದ ಸುರುನ ರಾಜ ನನ್ನಿ ಚಂಗಾಳ್ವ (ಸು. 1034) ರಾಜೇಂದ್ರ ಚೋಳಂತೇಳ್ವ ಹೆಸ್ರ್‌ನು ಇತ್ತ್. ಇದ್ ಅಂವನ ಚೋಳ ಮಾಂಡಳಿಕತ್ವದ ಸೂಚಕ ಆಗಿತ್ತ್. ಜೈನ ಆದ ನನ್ನಿ ಚಂಗಾಳ್ವ ಹನಸೋಗೆನ ಬಸದಿನ ಜೀರ್ಣೋದ್ಧಾರ ಮಾಡ್ದಂಗೆ ತಿಳ್ದ್ ಬಂದದೆ. ಹನ್ನೊಂದರ್‌ಂದ ಹದಿಮೂರ್‌ನೆ ಶತಕದವರೆಗೆ ಹೊಯ್ಸಳರೊಟ್ಟಿಗೆ ಜಗಳಾಡಿಕಂಡಿದ್ದ ಈ ವಂಶದ ರಾಜರ್ ಮುಂದೆ ಹೊಯ್ಸಳರ ಮಾಂಡಳೀಕರ್ ಮಹಾದೇವ (1090), ಉದಯಾದಿತ್ಯ (1097), ಅನ್ನದಾನಿ (1106), ತ ಹೇಳ್ವ ರಾಜರ್‌ಗಳ ಹೆಸ್ರ್ ಶಾಸನಲಿ ಉಟ್ಟ್. ಇವ್ಕೆ ಚೋಳವಂಶದ ರಾಜರ ಹೆಸ್ರೂ ಉಟ್ಟು. ಹೊಯ್ಸಳ ನರಸಿಂಹ 1145ರ್‌ಲಿ ಒಬ್ಬ ಚಂಗಾಳ್ವನ ಕೊಂದ್ ಚಂಗನಾಡ್‌ನ ವಸಪಡ್ಸಿಕಂಡತ್. ಹನ್ನೆರಡ್‌ನೆ ಶತಮಾನದ ಅಕೇರಿಗೆ ಇವ್ ತಮ್ಮ ರಾಜಧಾನಿನ ಹುಣಸೂರ್ ಪ್ರದೇಶಂದ ಕೊಡಗ್‌ನ ಪಲ್ಬರೆಗೆ ಬದಲಾಯ್ಸಿದೊ ಈ ಸತಮಾನದ ಅಕೇರಿಗಿದ್ದ ಮಹಾದೇವಂತೇಳ್ವ ಚಂಗಾಳ್ವ ಹೊಯ್ಸಳರ್‌ಂದ ಸತ್ತರೂ ಪೆಮ್ಮವೀರಂತೇಳ್ವಂವ ಈ ಕಲಹನ ಮುಂದುವರ್‌ಸಿಟ್ಟು, ಆದರೆ ಮುಂದೆ ಅಂವ ಹೊಯ್ಸಳರ್‌ಗೆ ತಲೆಬಾಗಕಾತ್. ಹದಿಮೂರ್‌ನೆ ಶತಮಾನದ ನೆಡುಲಿ ಸೋಮದೇವ ಮತ್ತೆ ಬೊಪ್ಪದೇವಂತೇಳವು ಇಬ್ಬೊರು ಹೊಯ್ಸಳರ ಮಾಂಡಳಿಕರಾಗಿ ಜಂಟಿಯಾಗಿ ಆಳ್ತಾ ಇದ್ದ. ಆಗ ಅವ್ ಕೊಡಗ್ ನ ಸಿದ್ದಾಪುರ ಹಕ್ಕಲೆ ಇರ್‌ವ ಶ್ರೀರಂಗಪಟ್ಟಣಕೆ ರಾಜಧಾನಿನ ಬದಲಾಯಿಸ್ಯೋಳ. ಮುಂದೆ ಮಲ್ಲಿದೇವ ಹಂಗೆ ಅಂವನ ಮಜ್ಜ ಹರಿಹರದೇವ ಇವ್‌ರ ಆಳ್ವಿಕೆಯ ವಿಚಾರ ಶಾಸನಗಳ್‌ಲಿ ಬಂದರೂ 1300ರ ಆಮೇಲೆ ಎರ್‌ಡ್ ಸತಮಾನಗಳ ಕಾಲಲಿ ಇವರ ಶಾಸನಗ ಸಿಕ್ಕುದ್ಲೆ.

16ನೆ ಸತಮಾನಲಿ ಆಳ್‌ತ್ತಾ ಇದ್ದ ನಂಜರಾಜ (ಸು. 1502–33) ತನ್ನ ಹಿಂದೆ ಆಳ್ತಾ ಇದ್ದ ಪಿರಿಯಣ್ಣ ರಂಗ, ನಾಗ ಇವರ ವಿಚಾರಗಳ ಹೇಳಿಟು. ಚಂಗಾಳ್ವರ್ ವೀರಶೈವರ್. ಪಿರಿಯಾಪಟ್ಟಣ ತಾಲೂಕ್ ಬೆಟ್ಟದಪುರದ ಮಲ್ಲಿಕಾರ್ಜುನ ದೇವ್ರ್ ಇವ್ ಆರಾದ್‌ಸುವ ದೇವ್ರ್. ನಂಜರಾಜ ಕೊಡಗ್‌ಲಿ ನಂಜರಾಜಪಟ್ಟಣನ ಕಟ್ಟಿ ಆಳ್ವಿಕೆ ಮಾಡ್ತ್. ಇವಂದ ಹಿಂದೆನೊವ್ ನಂಜರಾಜ ಪಟ್ಟಣದ ಅದೀಶ್ವರರ್‌ಂತ ಕರ್‌ಸಿಕಂಡೊಳ. ನಂಜರಾಜೆನ ಮಜ್ಜ ನಂಜುಂಡ ಇಂವನ ಕಾಲಂದ ಮೇಲೆ ಬಂದ ಶ್ರೀಕಂಟರಾಜ (1540) ಚಕ್ರವರ್‌ತಿ ಬಿರುದುಗಳ ಪಡ್ದಿತ್ತ್. ಮುಂದೆ ವೀರರಾಜ ಒಡೆಯ (1559–80), ಪಿರಿಯ ರಾಜದೇವ ರುದ್ರಗಣ (1586–1607) ಇವರ ಹೆಸ್ರ್ ಸಾಸನಲಿ ಉಟ್ಟು, ಅಕೇರಿನಂವ ಪಿರಿಯಾಪಟ್ಟಣನ ಕಟ್ಟಿದ್. ವಿಜಯನಗರಕೆ ಮಾಂಡಳಿಕರಾಗಿದ್ದ ಇವರ ವಂಸಲಿ ನಂಜರಾಜಯ್ಯದೇವ (1612), ಕೃಷ್ಣಾರಾಜಯ್ಯದೇವ ಮತ್ತೆ ವೀರರಾಜಯ್ಯಂತೇಳೊವು ಆಳ್ವಿಕೆ ಮಾಡ್ಯೊಳ. (1619–44) ವೀರರಾಜಯ್ಯನ ಕಾಲಲಿ ಮೈಸೂರ್‌ನ ಕಂಟೀರವ ನರಸರಾಜ ಒಡೆಯರ್ ಪಿರಿಯಾಪಟ್ಟಣದ ಮೇಲೆ ಯುದ್ದ ಮಾಡಿದ್ದೊ. ನಂಜುಂಡ ಮೊದಲಿಯಾರ ತೇಳ್‌ವ ಪಾಳೆಗಾರ ವೀರರಾಜಯ್ಯನ ಬೆಂಬಲಕ್ಕೆ ನಿತ್ತ್ ನರಸರಾಜೆನನ್ ವಿರೋದ್‌ಸಿತ್. ಒಂದ್ ವರ್‌ಸ ಕಾಲ ಮೈಸೂರ್ ಸೇನೆ ಪಿರಿಯಾಪಟ್ಟಣದ ಕೋಟೆಗೆ ಮುತ್ತಿಗೆ ಹಾಕಿತ್ತ್. ಎರ್‌ಡ್ ಕಡೆನೂ ಬಾರೀ ಹೋರಾಟ ನಡ್ತ್. ಕೋಟೆ ನರಸರಾಜೆನ ಕೈಗೆ ಸೇರ್‌ದೆಂತೇಳ್‌ಕನ, ವೀರರಾಜ ಅಂವನ ಹೆಣ್ಣ್ ಮತ್ತೆ ಮಕ್ಕಳ ಕೊಂದ್ ಮೈಸೂರ್‌ನ ಸೈನ್ಯನ ವೀರಾವೇಸಂದ ಎದ್ರ್‌ಸಿ ಸತ್ತತ್. ಪಿರಿಯಾಪಟ್ಟಣ 1644ರ್‌ಲಿ ಮೈಸೂರ್‌ನ ರಾಜರ ವಸ ಆತ್. ಅಲ್ಲಿಗೆ, ಚಂಗಾಳ್ವ ವಂಶನೂ ಕೊನೆಕಂಡತ್. (ಈ ಕೊನೆಯ ಪಿರಿಯಾಪಟ್ಟಣದ ದುರಂತದ ಬಗ್ಗೆ ಕೆಲವ್ ಜೆನಪದ ಕತನಗ ಒಳ). ಅದರ್‌ಲಿ ಪಿರಿಯಾಪಟ್ಟಣದ ಕಾಳಗ ಹೆಚ್ಚ್ ಪ್ರಸಿದ್ದಿ ಪಡ್‌ದದ್.

ಜಯನೃಪಕಾವ್ಯ ಬರ್‌ದ ಮಂಗರಸ ಅಂವನ ಅಪ್ಪ ಚಂಗಾಳ್ವರ ಮಂತ್ರಿ ಆಗಿತ್ತ್‌ಂತ ಹೇಳಿಕಂಡುಟು. ಇದೇ ಸಚಿವ ಮನೆತನದ ನಂಜುಂಡ ಕುಮಾರರಾಮ ಚರಿತೆ ಬರ್‌ದುಟ್ಟು... ರಾಮವಿಜಯ ಕಾವ್ಯ ಬರ್‌ದ ಜೈನಕವಿ ದೇವಪ್ಪ ನಂಜುಂಡರಾಜೆನ ಸಚಿವ ಆಗಿತ್ತ್.

**ಚಾರ್ಮಾಡಿ ಗಟ್ಟ :** ದಕ್ಷಿಣಕನ್ನಡ ಜಿಲ್ಲೆ ಮತ್ತೆ ಚಿಕ್ಕಮಗಳೂರು ಜಿಲ್ಲೆಗಳ ಗಡಿಗಳ್‌ಲಿ ಹೊಂದಿಕಂಡ್, ಪೊಡ್‌ವ ಗಟ್ಟಗಳ ಸಾಲ್‌ಲಿ ಬಾದು 'ಚಾರ್ಮಾಡಿ ಗಾಟಿ'. ಚಾರ್ಮಾಡಿ ಗಟ್ಟದ ಕೆಳಗೆನ ಬಾಗಲಿ ದಕ್ಷಿಣಕನ್ನಡ ಜಿಲ್ಲೆನ ಬೆಳ್ತಂಗಡಿ ತಾಲೂಕುಗೆ ಸೇರ್‌ವ ಚಾರ್ಮಾಡಿ ತೇಳ್ವ ಒಂದ್ ಗ್ರಾಮ ಉಟ್ಟು. ಹಂಗಾಗಿ ಈ ಗಟ್ಟಕ್ಕೆ ಈ ಹೆಸ್ರ್ ಬಂದದ್. ದಕ್ಷಿಣಕನ್ನಡ ಜಿಲ್ಲೆ ಮತ್ತೆ ಚಿಕ್ಕಮಗಳೂರು ಜಿಲ್ಲೆಗಳ ಒಟ್ಟಿಗೆ ಸೇರ್‌ಸುವ ಮಾರ್‌ಗ ಕೂಡಾ ಈ ಚಾರ್ಮಾಡಿ ಗಟ್ಟದ ಒಳೆಗೆಂದಾಗಿ ಹೋದೆ. ಇಲ್ಲಿ ತಲೆನೇಚಿ ನೋಡ್ಕನ ಎತ್ತೆತ್ತರದ ಬೆಟ್ಟ–ಗುಡ್ಡೆಗ, ಏನೋ ಗುಂಡಿಗ ಇರುವ ಕಣಿವೆ–ಪ್ರಪಾತಗ, ಕತ್ತಲೆ ತುಂಬಿಕಂಡಿರುವ ದೊಡ್ಡ ದೊಡ್ಡ ಕಾಡ್‌ಗ, ಲೆಕ್ಕ ಇಲ್ಲದಷ್ಟ್ ಜಲಪಾತಗ, ಕಾಡ್ ಪ್ರಾಣಿಗ, ಹತ್ತಾರ್ ಸಣ್ಣ ಸಣ್ಣ ಹಳ್ಳ–ತೊರೆಗ, ಶೋಲ ಕಾಡ್, ಅದ್ರೊಟ್ಟಿಗೆ ಅಪರೂಪಲಿ ಕಾಂಬಕೆ ಸಿಕ್ಕುವ ಹುಲ್ಲುಗಾವಲುಗಳ ಕೂಡಾ ಕಾಣಕ್.

ಚಿಕ್ಕಮಗಳೂರು ಜಿಲ್ಲೆ, ಮೂಡಿಗೆರೆ ತಾಲೂಕುನ ಕೊಟ್ಟಿಗೆಹಾರ ತೇಳುವ ಗ್ರಾಮಂದ ಸುರಾದ ಈ ಗಟ್ಟಗ ಚಾರ್ಮಾಡಿ ಗ್ರಾಮದ ಹಕ್ಕಲೆ ಮುಟ್ಟ ಉಟ್ಟು. ಅದಂರ್‌ದ ಮೇಲೆ ಕಾಂಬಕೆ ಸಿಕ್ಕುದುಲೆ ಅಲ್ಲಿಗೇ ಮುಗ್ದದೆತ ಹೇಳಕ್.

ಈ ಗಟ್ಟಗಳ್‌ಲಿ ಬಾವ ಇನ್ನೂ ಕೆಲ ಮುಕ್ಯ ಬೆಟ್ಟಗ ಯಾವ್ದೆಲ್ಲ ತೇಳ್ರೆ... ಅಮೇದಿಕಲ್ಲ್ ಬೆಟ್ಟ, ಬಾಳೆಕಲ್ಲ್ ಬೆಟ್ಟ, ಕೊಡೆಕಲ್ಲ್ ಬೆಟ್ಟ, ಜೇನುಕಲ್ಲ್ ಬೆಟ್ಟ, ಎತ್ತಿನ ಬುಜ ಬೆಟ್ಟ, ದೀಪದಕಲ್ಲ್ ಬೆಟ್ಟ, ಶಿಸಿಲ ಬೆಟ್ಟ ಹಿಂಗೆ ಸುಮಾರ್ ಬೆಟ್ಟಗನೂ ಒಟ್ಟಿಗೆ ಬಂದವೆ. ಅದ್ರೊಟ್ಟಿಗೆ ಇಲ್ಲಿರ್‌ವ



ಚಾರ್ಮಾಡಿ ಗಟ್ಟ

ಜಲಪಾತಗ ಅಲೇಕಾನ್ ಜಲಪಾತ, ಜೇನ್ ಕಲ್ಲ್ ಜಲಪಾತ, ಕಲ್ಲರ್ಬಿ ಜಲಪಾತ, ಹಕ್ಕಿಕಲ್ಲ್ ಜಲಪಾತ, ಬಂಡಾಜೆ ಜಲಪಾತ, ಆನಡ್ಕ ಜಲಪಾತ ಹಿಂಗೆ ಜಲಪಾತಲೂ ಸುಮಾರ್ ಬಗೆನ ಹೆಸ್ರ್ ಕಾಣಕ್.

ಕೊಟ್ಟಿಗೆಹಾರಂದ ಹಿಞ್ಞ ದೂರಲಿ ಒಂದ್ ಸಣ್ಣ ಗುಡ್ಡೆನ ಮೇಲೆ 'ಮಲಯ ಮಾರುತ' ತೇಳ್ವ ಅತಿತಿ ಗೃಹನ ಅರಣ್ಯ ಇಲಾಕೆಯವ್ ಕಟ್ಟ್ಯೊಲೊ. ಇದರ ಕಾಡ್ಗಳ್ಳ ವೀರಪ್ಪನ್ ನ ಹುಡ್ಕಿಕಂಡ್ ಇರ್‌ಕನ, ತೀರಿ ಹೋದ ಅರಣ್ಯ ಇಲಾಕೆನ ಅದಿಕಾರಿ ದಿವಂಗತ ಶ್ರೀನಿವಾಸ ಅವರ ನೆನ್ಪುಗಾಗಿ ಕಟ್ಟಿಸಿದ್ ತೇಳಕ್. ಈ ಅತಿತಿ ಗೃಹಂದ ನೋಡ್ರೆ ಚಾರ್ಮಾಡಿ ಘಾಟಿನ ಪೊರ್‌ಲುನ ಕಾಣಕ್.

**ಚೌಟವಂಶ :** ಸು. 17–18ರ ಸತಮಾನದವರೆಗೆ ದಕ್ಷಿಣಕನ್ನಡ ಜಿಲ್ಲೆನ ಮಂಗಳೂರು ತೇಳುವ ಜಾಗೆ ನೋಡಿಕಂತಿದ್ದ ರಾಜಮನೆತನ. ಮೂಲತಃ ಉಲ್ಲಾಳದ ಹಕ್ಕಲೆ ಸೋಮೇಶ್ವರ ಇವರ ರಾಜಧಾನಿಯಾಗಿದ್ದ್ ಕಾಲ ಹೋಕನ ಅದು ಪುತ್ತಿಗೆಗೆ ಹಾಂಗೆನೇ ಅದಾಗಿ ಮೂಡಬಿದರೆಗೆ ಸೇರಿಕಂಡತ್. ಚುಟು, ಚತುರ್ತ ಅಲ್ಲರೆ ಚಾವುಡ (ರಜಪೂತ)ಚೌಟ ತೇಳ್ವ ಪದ ರೂಡಿ ಆತುಂತೇಳಿ ಅಬಿಪ್ರಾಯ ಉಟ್ಟು. ಸೋಮವಾರಪೇಟೆ ತಾಲ್ಲೂಕುನ ಉಲುಗುಲಿ ಗ್ರಾಮದ 1264 ಲಿ ಶಾಸನವೊಂದರ್‌ಲಿ 'ಚೌಟು' ತೇಳಿ ಸುರುನ ಉಲ್ಲೇಕ ಸಿಕ್ಕಿದೆ. ಹಕ್ಕಲೆನ ಸಂಪ್ರದಾಯದ ಪ್ರಕಾರ ಚೌಟರ ಕೂಟದವು ಸಿವಮೊಗ್ಗದ ಹೊಸನಗರತೇಳ್ವ ಜಾಗೆಂದ ಬಂದವು.

ಚೌಟವಂಶಕೆ ಸೇರ್‌ದವ್‌ತೇಳಿ ಕೆಲ ಹಿರಿಯರ್ ಊಹೆ ಮಾಡ್ವೆ. ತಿರುಮಲರಾಯ (1169–79), ಚೆನ್ನರಾಯ (1179–1219) ಮತ್ತೆ ದೇವರಾಯ (1219–45) ಇಂತ ಅರಸರ ಬಗ್ಗೆ ವಿವರ ದಾಕಲೆಗ ಏನ್ ಇಲ್ಲೆ. ಇವರ ಉಲ್ಲೇಕ ಇರುವ ಸಾಸನಗಸ ಸಿಕ್ಕಿತ್ಲೆ. 1390ರ ಸಾಸನವೊಂದರ್‌ಲಿ ವಿಕ್ರಂಚೌಟತೇಳ್ವ ಅರಸನ ಉಲ್ಲೇಕ ಉಟ್ಟು. 1398ರ ಉತ್ತರ ಕನ್ನಡ ಜಿಲ್ಲೆನ ಕೈಕಿಣಿ ಗ್ರಾಮದ ಸಾಸನಗಳ್ಳಿ ವಿಜಯನಗರದ ಅರಸ ಇಮ್ಮಡಿ ಹರಿಹರನ ಕಾಲಲಿ ಮಹಾಮಂಡಲೇಶ್ವರ ಮಂಗಪ್ಪ ದಣ್ಣಾಯಕ ಚೌಟರ ಸೋಲ್ಸಿದ ಸಂಗತಿ ತಿಳ್ದ್ ಬಂದದೆ. 1431ರ್‌ಲಿ ಪುತ್ತೂರ ಶಾಸನಲಿ ಉಲ್ಲೇಕ ಇರ್‌ವಾಂಗೆ ಚೌಟ ಸಾಂತೆನ ಸಾಸನಗಳಂದ ತಿಳ್‌ದದೆ.

ಮಂಗಳೂರು ತಾಲ್ಲೂಕುನ ಅದ್ದೂರು ಶಾಸನಲಿ (1434) ಜೋಗಿ ಒಡೆಯ, 1465ರ ಒಂದ್ ಶಾಸನಲಿ ಹೇಳಿರುವ 'ಪುತ್ತಿಗೆನ ಜೆನನದಲು ಬಾಳುವ' ಅಲ್ಲಪ್ಪಶೇಕ ಚೌಟ ಇವು ಬೇರೆ ಸಾಸನ ಮಾಡ್ದವು. 1507ರ್‌ಲಿ ತಿರುಮಲರಾಯಚೌಟ ಪೊಳಲಿ ದೇಸ್ತಾನಕೆ ದತ್ತಿಬುಟ್ಟತ್. ಬವುಸ ಇಂವ ಕೃಷ್ಣದೇವರಾಯನ ಆಸ್ತಾನಕೆ ಹೋಗಿರಕು. ಇಂವನ ಕಾಲ ಆದಮೇಲೆ ತುಳುವರಸ ಚೌಟ ಮತ್ತೆ ತರುವಾಯ ತಿರುಮಲರಸ ಚೌಟ ಪಟ್ಟಕೆ ಬಂದೊ. ಈ ತಿರುಮಲರಸ ಕಳಸ–ಕಾರ್ಕಳ ಒಡೆಯ ಪಾಂಡ್ಯಪ್ಪ ಒಡೆಯನೊಟ್ಟಿಗೆ ರಾಜಕೀಯ ಒಪ್ಪಂದನ ಮಾಡಿಕಂಡತ್. 1571ರ ಸಾಸನ ಒಂದ್ ಲೋಕ ದೇವಿನ ಬಗ್ಗೆ ಹೇಳ್ದೆ. ಇದ್ ಬವುಸ ಅಬ್ಬಕ್ಕದೇವಿನ ಅಕ್ಕ. ಅಬ್ಬಕ್ಕದೇವಿ ಉಲ್ಲಾಳಂದಲೂ ಲೋಕದೇವಿ ಪುತ್ತಿಗೆಂದಳು ಒಂದೇ ಕಾಲಲಿ ಆಳ್ವಿಕೆ ಮಾಡಿಕಂಡಿತ್ತುತ ಕಂಡದೆ. ಈ ಕಾಲ ಕಳ್ದಮೇಲೆ ಮುಂದೆ ಚೌಟರ ಎರಡೂ ಸಾಕೆಗಳ ಆಳ್ವಿಕೆ ನಡ್ಸಿರೊಕು ಉಲ್ಲಾಳ ಸಾಕೆನ ಇತಿಯಾಸಕೆ ಪೋರ್ಚುಗೀಸ್ ದಾಕಲೆಗಳೆ ಮೂಲಾದಾರ ಆಗುಟು. 1556ರ್‌ಲಿ ಪೋರ್ಚುಗೀಸ್ ಸೇನಾನಿ ಒಬ್ಬ ಯುದ್ದನೌಕೆನೊಟ್ಟಿಗೆ ಉಲ್ಲಾಳದ ಅರಸಂದ ಕಪ್ಪನ ವಸೂಲು ಮಾಡಿಕೆ ಬಂದ್ ಮಂಗಳೂರುನ ಲೂಟಿ ಮಾಡಿ ಹೋಗಿತ್. ರಾಣಿ ಸಾಂತಿ ಒಪ್ಪಂದ ಮಾಡಿಕಂಡತ್. ಇವುಳು ಅಬ್ಬಕ್ಕ ಲೋಕದೇವಿನ ಕಾಲ ಆದಮೇಲೆ ಚಿಕ್ಕರಾಜರಸ ಪುತ್ತಿಗೆ ಶಾಕೆನ ಉತ್ತರಾದಿಕಾರಿ ಆಗಿ 1600 ರವರೆಗೂ ರಾಜ್ಯ ಆಳಿರೊಕು. 1640ರ ಸಾಸನಲಿ ಹೆಸರ್



ಚೌಟವಂಶ





ಇರ್‌ವ ಚಿಕ್ಕರಾಜ ಒಡೆಯ ಈಗ ತಿಳ್ದಿರ್‌ವಾಂಗೆ ಚೌಟರ ಕಡೇ ಅರಸ. ಚೌಟರಸರುಗ ಜೈನಮತಾವಲಂಬಿಗ ಇವು ಕಾರ್ಕಳದ ಬೈರರಸರೊಟ್ಟಿಗೆ ಕೈಪೆಲಿ ಇದ್ದರೂ. ಕೆಲವೊಮ್ಮೆ ಒಪ್ಪಂದ ಮಾಡಿಕಂಡವೆ. ಹಾಂಗೆನೇ ಬಂಗವಾಡಿನ ಬಂಗರು ಮತ್ತೆ ಬೇರೆ ಹಕ್ಕಲೆ ರಾಜಮನೆತನಗಳೊಟ್ಟಿಗೆ ಒಪ್ಪಂದ ಮಾಡಿಕೊಂಡ. ಈ ಒಪ್ಪಂದಗ ಆಗಾಗ ಮುರ್‌ದು ಹೋದರ ನಾವು ನೋಡ್ವೆ. ಶಾಸನಗಳ ಆದಾರಂದ ರಚನೆ ಮಾಡ್ದ ಚೌಟವಂಶಾವಳಿನ ಹಿಂಗೆ ರಚನೆ ಮಾಡಕು. ವಿಕ್ರಂ ಚೌಟ (1375–1440), ಸಾಂತೆಯ (1440–35?), ಜೋಗಿ ಒಡೆಯ (1435), ಅಲ್ಲಪ್ಪಶೇಕ (1455), ದೇವರುಶೇಕ (1475–1500), ತಿರುಮಲರಾಯ (1500), ತುಳುವರಸ (1215–40), ತಿರುಮಲರಸ (1540–65)–(ಪುತ್ತಿಗೆ ಶಾಕೆ), (ಉಲ್ಲಾಳಶಾಕೆ), ಲೋಕದೇವಿ (1565–75), ಅಬ್ಬಕ್ಕದೇವಿ (1544–98), ಚಿಕ್ಕರಾಜರಸ (1575–1600), ಹೆಸರು ತಿಳಿಯದ ಉತ್ತರಾದಿಗ ಹೆಸರು ತಿಳಿಯದ ಅರಸ ಚಿಕ್ಕರಾಜ ಒಡೆಯ (1640) (ಎಚ್.ಎಂ.ಎಸ್.ಆರ್.)

**ಜೆನಪದ ಅಡುಗೆ–ಆಹಾರ : ಅರೆಬಾಸಿಗರ ತಿನ್ಸ್‌ಗ :** 19ನೇ ಸತಮಾನದ ಅಕೇರಿವರೆಗೆ, ಗೌಡರ್ ಬೊಳ್‌ಪುನ ತಿನ್ಸ್ ಆಗಿ ರಾಗಿ ಅಂಬಲಿನ ಉಣತಿದ್ದೊ. ಅಂಬಲಿನ ಮಾಡ್ದು ಸುಲಬ. ರಾಗಿನ ಸಣ್ಣಕೆ ಹೊಡಿ ಮಾಡಿ, ಅಕ್ಕಿನೊಟಿಗೆ ಬೇಸಿ, ರುಚಿಗೆ ತಕ್ಕಸ್ಟ್ ಉಪ್ಪು ಸೇರ್‌ಸಿರೆ ಅಂಬಲಿ ಆದೆ. 'ಅಂಬಲಿ ಉಂಬವಂಗೆ ಕುಂಡೆ ಒತ್ತುವ ಬೇಕಾ?' ತ ಕರಿವ ಅರೆಬಾಸೆನ ನುಡಿಗಟ್ಟ್‌ಲಿನು ಅದ್ ಪಾಪದವರ ತಿನ್ಸ್ ತೇಳಿ ದನಿ ಉಟ್ಟು. ರಾಗಿನ ಸಣ್ಣಕೆ ಅರ್‌ದ್ ಬೆಲ್ಲ ಸೇರ್‌ಸಿ ಕೊದ್‌ಸಿರೆ 'ರಾಗಿ ಬೋಳ' ಮಾಡಿಕಾದೆ. 'ರಾಗಿ ಬೋಳ' ದೇಹಕೆ ಬಾರೀ ತಂಪುಂತ ಗೌಡರ್ ನಂಬುವೆ. ಹಾಂಗಾಗಿ ಬೇಸಗೆಲಿ ಇದರ ಉಪಯೋಗ ಮಾಡ್ದು ಹೆಚ್ಚಿಗಿದ್ದದೆ.

ಇತ್ತೀಚೆಗೆ ರಾಗಿನ ಜಾಗೆನ ಅಕ್ಕಿ' ಪಡ್ಕಂಡುಟು. ಅಂಬಲಿನ ಜಾಗೆಲಿ 'ಗಂಜಿ' ಬಂದುಟು. ಜೆನಂಗ ಆರ್ತಿಕ ಆಗಿದ್ ಮುಂದುವರ್‌ದಂಗೆ ಗಂಜಿ ಉಂಬೊದು ಕಡ್‌ಮೆ ಆಗ್‌ತುಟ್ಟು. ಕಾಪಿ–ಚಾಯ ಮತ್ತೆ ಅಕ್ಕಿಂದ ಮಾಡ್ದ ಹಿಟ್ಟ್‌ಗಳ ರುಚಿ ಜೆನಂಗಳಿಗೆ ಹಿಡ್ಸಿಟು. ಕಾಪಿ ಮತ್ತೆ ಚಾಯಲಿ ಚಾಯನೆ ಜೆನಂಗಳಿಗೆ ಹೆಚ್ಚಿಗೆ ಹಿಡ್ಸಿಯಾಳ್ದ್. ಬೊಳ್ಪುನ ಚಾಯಕೆ ಅಕ್ಕಿಂದ ಮಾಡ್ದ ಸುಮಾರ್ ಬಗೆನ ತಿಂಡಿಗಳ ಅರೆಬಾಸೆ ಜೆನಂಗ ಮಾಡಿ ತಿಂಬೊತ್ತಿದ್ದೊ ಅದರ್‌ಲಿ ಮುಕ್ಯಂತ ಕಾಂಬ ಕೆಲವೊಂದರ ಬಗ್ಗೆ ಕೆಳೆಗೆ ಕೊಟ್ಟೊಳೊ.

**ಅಕ್ಕಿರೊಟ್ಟಿ :** ಅಕ್ಕಿಹೊಡಿನ ಹುಗ್ಗೆನೊಟ್ಟಿಗೆ ಕಲ್‌ಸಿ ಉಂಡೆ ಕಟ್ಟಿ ಕೈಲಿ ತಟ್ಟಿ ಓಡ್‌ಲಿ ಎರ್‌ಡ್ ಪುಡೆನು ಕಾಸ್‌ವೆ. ಮತ್ತೆ ಕೆಂಡಲಿ ಪೊಕ್ಕುಳ ಬಾವಸ್ಟ್ ಸುಡೊಕು. ಈಗ ಕೈಲಿ ತಟ್ಟ್‌ವ ಬದಲ್‌ಗೆ ಒತ್ತುವ ಮಣೆನ ಬಳ್ಸುವೆ. ಕೊಡಗ್‌ಲಿ ಸಾಮಾನ್ಯ ಬೊಳ್‌ಪುನ ತಿಂಡಿಗೆ ರೊಟ್ಟಿನೆ



ಅಕ್ಕಿರೊಟ್ಟಿ ಕಾವಲಿ

ಇದ್ದದೆ. ಇದ್‌ಕೆ ಹಲ್‌ಸ್‌ನೆಕ್ಕಿ ಪೊಜ್ಜಿ ಇಲ್ಲರೆ ಕುಡುಪೊಜ್ಜಿನೊಟ್ಟಿಗೆ ತಿಂಬದು ವಿಸೇಸ. ಸತ್ತ ಹಿರಿಯವ್‌ಕೆ ಎಡೆ ಇಸ್ ಕನ ಬರೆ ಅಕ್ಕಿಹೊಡಿ ಉಕ್ಕುರ್‌ಸಿ ರೊಟ್ಟಿ ಮಾಡಿ ಕೋಳಿಗೈಪುನೊಟ್ಟಿಗೆ ಇಸುದು ಕೊಡಗ್ ಗೌಡರ ಪೊದ್ದತಿ.

**ಅಪ್ಪದಿಟ್ಟ್ :** ಮನೆಲಿ ನೆಂಟ್ರ್ ಇದ್ದರೆ ಅಲ್ಲೊ ಹಬ್ಬಕೆ ಮಾಡ್‌ವ ತಿಂಡಿ ಇದ್. ನೆನೆ ಹಾಕಿದ ಅಕ್ಕಿ ಕಡ್‌ದ್, ಕಳ್ಳ್ ಸೇರ್‌ಸಿರೆ ಇರ್‌ಲ್ ಬೊಳ್‌ಪಾಕನ ಇದ್ ಒಳ್ಳ ಹುಳಿಬಂದಿದ್ದದೆ. ಈ ಬಂದನ ಅಪ್ಪದಿಟ್‌ಗೆ ತೇಳಿದೆ ಇರ್‌ವ ಕಣ್ಣ್ ಇರ್‌ವ ಕಾವಲಿಗೆ ಹೊಯ್‌ದ್ ಬೇಸುವೆ. ಅರ್‌ದ ಬೆಂದಾಂಗೆ ಹಿಟ್ಟ್‌ನ ಮೊಗ್‌ಚಿ ಹಾಕಕು. ಅದ್ ಇಡಿ ಬೆಂದಾಕನ ಕಾವಲಿಂದ ಹಿಟ್ಟ್‌ನ ಹೊರೆಗೆ ತೆಗ್‌ದರೆ ಅರ್‌ದ ಉರುಂಟುನ ರುಚಿನ ಅಪ್ಪದಿಟ್ಟ್ ಆದೆ. ಒಂದ್ ಸೇರ್ ಅಕ್ಕಿಲಿ ಸುಮಾರ್ 15–20 ಹಿಟ್ಟ್ ಮಾಡಿಕಾದೆ. ಹಜ್ಜಿ ತೆಳ್ಳಂಗೆನ ಸಾರ್, ಹುಳ್ಳಂಗೆನ ಮಾಸ ಗೈಪು ಇದ್ದರೆ ಎಂಟ್ ಹತ್ ಅಪ್ಪದಿಟ್ಟ್ ತಿಂಬಕಾದೆ. 'ಗಮ್ಮತೆಂತತ ಕೇಳಿಕನ ಜೆನಂಗ ತಮಾಸೆಗೆ 'ಅಪ್ಪದಿಟ್ಟ್‌ನು ಹಂದಿಗೈಪುನು' ತ ಹೇಳ್‌ವಸ್ಟ್ ಅಪ್ಪದಿಟ್ಟ್ ಹೆಸರ್ ಮಾಡಿಟು. ಗೌಡರ್‌ಗೆ ಬಾರಿ ಇಸ್ಟದ, ಗಮ್ಮತ್‌ನ ತಿನ್ಸ್‌ತ ಹೇಳಕ್. ಮನೆಗೆ ನೆಂಟ್ರ್ ಬಂದರೆ ಅಪ್ಪದಿಟ್ಟ್ ಮಾಡ್‌ರೆ ನೆಂಟ್ರ್‌ಗೆನೂ ಕುಸ್ಯಾದೆ.

**ಅಪ್ಪದಿಟ್ಟ್ ಕಾವಲಿ :** ಅಪ್ಪದಿಟ್ಟ್ ಕಾವಲಿ ಕಾಡ್‌ಲಿ ಮೆತ್ತಂಗೆ ಇರ್‌ವ ಒಂದ್ ಜಾತಿ ಕಲ್ಲ್ ಉಟ್ಟು. ಇದರ ಬಳದ ಕಲ್ಲ್ ತ ಹೇಳ್ವೆ. ಈ ಕಲ್ಲ್‌ನ ಹಲಗೆನ ಹಾಂಗೆ ಮೂರ್ ಅಲ್ಲರ್ ನಾಲ್ಕ್ ಅಂಗುಲದಸ್ಟ್ ದಪ್ಪಕೆ ಕೊಯ್ಯೊಕು. ಕಾವಲಿನ ಚಕ್ರದಾಂಗೆ ಉರುಟಾಗಿ ಕೆತ್ತೊಕು. ಇದರ್‌ಲಿ ಎಳ್ ಗುಂಡಿ ಉಟ್ಟು. ಕಾವಲಿ ದೊಡ್ಡದಾದರೆ ಗುಂಡಿ ದೊಡ್ಡದಿದ್ದದೆ. ಬಳದ ಕಾವಲಿನ ಮರದ ಆಚಾರಿಗ ಮತ್ತೆ ಕೆಲವು ಬೇರೆ ಜಾತಿಯವು ಸ ಮಾಡ್ವೆ. ಇಂತಾ ಕಾವಲಿನ ಮೊಣ್ಣ್‌ಲಿ, ಕಬ್ಬಿಣಲಿ ಸ ಮಾಡ್‌ವೆ. ಮೊಣ್ಣ್‌ನ ಕಾವಲಿನ ಮಡ್ಕೆ ಮಾಡ್ವ ಮೂಲ್ಯ ಸಮುದಾಯದವು

ಮಾಡ್ವೆ. ಅರೆಬಾಸೆ ಪ್ರದೇಸಲಿ ದೀಪಾವಳಿ, ಕಾವೇರಿ ಸಂಕ್ರಮಣ ಇಂತ ಹಬ್ಬ ಹರಿ ದಿನಗಳ್‌ಲಿ ಅಪುದಿಟ್ಟ್ ಮಾಡ್ವ ಕ್ರಮ ಉಟ್ಟು. ಮನೆಗೆ ನೆಂಟ್ರ್ ಬಾಕನ ಅವ್ಕೆ ಸಮ್ಮಾನ ಮಾಡೊಕಾರ್ ಅಪುದಿಟ್ಟ್ ಮಾಡ್ವೆ.

**ಇಡ್ಮಣೆ ಹಿಟ್ಟ್ :** ಅಕ್ಕಿತರಿನ ಕೊದಿವ ನೀರ್ ಲಿ ಉಕ್ಕರ್‌ಸಿಕಂಡ್ ದೊಡ್ಡ ಉಂಡೆ ಮಾಡಿ ಕಳ್ಸಿಗೆಗೆ ಹಾಕಿ ಹಬೆಲಿ ಬೇಸೊಕು. ಮತ್ತೆ ಇಡಮಣೆ ಹಿಟ್ಟ್ ಮಣೆಲಿ ಉಂಡೆನ ಹಾಕಿ ಒತ್ತೊಕು. ಇದ್ಕೆ ಸೇಮಿಗೆ ಹಿಟ್ಟ್ ತನು ಹೇಳ್ವೆ. ಇದರ ಕಾಯಿಹಾಲ್ (ಬೆಲ್ಲದ ನೀರ್) ಇಲ್ಲೆ ಕೋಳಿಸಾರ್ ಹಾಕಂಡ್ ತಿಂಬೊತ್ತಿದ್ದೊ. ಹೆಚ್ಚಾಗಿ ಮನೆಗೆ ನೆಂಟ್ರ್ ಗ ಬಾಕನ ಮಾಡ್ದು ವಿಸೇಸ. (ಎಂ.ಜಿ.ಕೆ.)

**ಇಡ್ಮಣೆ :** ಅಕ್ಕಿಹಿಟ್ಟ್‌ಂದ ಸೇಮಿಗೆ ಮಾಡ್ವ ಮರದ ಸೊತ್ತಿಗೆ ಇಡ್ಮಣೆ, ಸೇಮಿಗೆ ಮಣೆಂತ ಹೇಳ್ವೆ. ಎರಡ್ ಮಣೆಗಳ ಎಡೆಲಿ ಹಿಟ್ಟ್ ಬಾವ ಕಾರಣಂದ ಇಡ್ಮಣೆಂತ ಕರ್‌ದವೆ. ಇದ್ಕೆ ನೂಕುಮಣೆ, ಒತ್ತುಮಣೆ, ನೂಪಿಟ್ಟ್ ಮಣೆ ತಲೂ ಹೇಳ್ವೆ. ಇಡ್ಮಣೆನ ಮರಲಿ ಮಾಡ್ವೆ. ಎರಡ್ ಕಾಲ್, ಮೂರ್ ಕಾಲ್, ನಾಲ್ಕ್ ಕಾಲ್‌ನ ಮಣೆ ಸ ಉಟ್ಟು. ಅಂದಾಜ್ ಒಂದ್ ತೋಳ್‌ನಸ್ಟ್ ಎತ್ತರದ ಮಣೆಲಿ ನಡುಲಿ ಒರ್‌ಳ್ ಕಲ್ಲ್‌ನ ಗುಂಡಿನ ಹಾಂಗೆ ಇದ್ದ್ ಅಡಿಮೆಯ್ಯಿಗೆ ಕಾಲಿ ಉಟ್ಟು. ಈ ಒರ್‌ಳಿಗೆ ಸಣ್ಣ ಸೇರ್‌ನ ಆಕಾರದ ಪಾತ್ರೆಗೆ ಅಡಿಮೆಯ್ಯಿಲಿ ಸಣ್ಣ ಸಣ್ಣ ಒಟ್ಟೆ ಇರ್‌ವ ಹಿತ್ತಾಳೆ ಪಾತ್ರೆನ ಇಸ್‌ವೆ. ಆ ಪಾತ್ರೆ ಅಲ್ಲಿ ಕುದ್ರಿಕೆ ಬೇಕಾದಸ್ಟೆ ಜಾಗೆ ಇದ್ದ್ ಅದ್ ಕಾಗಡೆ ಬೀಳದ ಹಾಂಗೆ ಮಾಡ್‌ವೆ. ಈ ಪಾತ್ರೆನ ಒಳಗೆ ಅಡ್ವ ಕುದ್ರ್‌ವ ಹಾಂಗೆ ಮರನ ಕೆತ್ತಿದ್ ಅದರ ಮೇಲೆ ಎರಡ್ ಪುಡೆಗೂ ಅಡ್ಡಕ್ಕೆ ಅಂದಾಜ್ ಒಂದ್ ತೋಳ್‌ನಸ್ಟ್ ಉದ್ದದ ಹಿಡಿ ಉಟ್ಟು. ಇದರ ಕುದುರೆಂತಲೂ ಹೇಳ್ವೆ. ಕೆಲವ್ ಮಣೆಗೆ ನಾಲ್ಕ್ ಕಾಲ್ ಇದ್ದ್ ಸಣ್ಣ ಮರದ ದಡೆನ ಹಾಂಗೆ ಮಾಡಿ, ಒಂದ್ ಕರೆಗೆ ಇರ್‌ವ ಕಾಲ್ಗಳ ಎರಡ್ ಗೇಣ್‌ನಸ್ಟ್ ಇರ್‌ವ, ಎರಡ್ ಕಾಲ್ಗಳ ನಡುಲಿ ಅಡ್ಡಕ್ಕೆ ಕಾಗಡೆ ಮೇಗಡೆ ಮಾಡ್‌ವ ಹಾಂಗೆ ಮರದ ಕುದುರೆನ ಕೀಲ್ ಹಾಕಿ ಜೋಡ್ಸ್‌ವೆ. ಬೆಂಚ್‌ನ ನಡುಲಿ ಒರ್‌ಲ್ ಹಾಂಗೆ ಗುಂಡಿ ಮಾಡಿ ಹಿತ್ತಾಳೆದ್ ಒಟ್ಟೆ ಇರ್‌ವ ಪಾತ್ರೆ ಜೋಡ್ಸ್‌ವೆ. ಕುದುರೆನ ನಡುಲಿ



ಇಡ್ಮಣೆ

ಪಾತ್ರೆಗೆ ಅಡ್ವ ಆವ ಹಾಂಗೆ ಕೆತ್ತಿದ ಮರದ ತುಂಡ್‌ನ ಜೋಡ್ಸ್‌ವೆ. ಕುದುರೆನ ಮೇಲೆ ಮಾಡಿಕನ ಪಾತ್ರೆನ ಒಳಗೆ ಅಡ್ವ ಇರ್‌ವ ತುಂಡು ಮೇಲೆ ಬಂದದೆ. ಮೇಲೆಂದ ಒತ್ತ್‌ಕನ ಅದ್ ಪಾತ್ರೆ ಒಳಗೆ ಹೋದೆ. ಮಣೆ ಪೊರ್‌ಲು ಕಾಂಬಕೆ ಅದರ ಮೇಲೆ ತರತರದ ಚಿತ್ರ ಕೆತ್ತ್‌ವೆ. ಇದರ ಮರದ ಆಚಾರಿಗ ಮಾಡ್‌ವೆ. ಮನೆಲಿ ಏನಾರ್ ಗಮ್ಮತ್ ಮೊನಿ ಇದ್ದರೆ, ನೆಂಟ್ರ್ ಬಂದರೆ ಸೇಮಿಗೆ ಮಾಡ್‌ವೆ. ಕುಚ್ಚಿಲಕ್ಕಿಗೆ ಹಳ್ಳಿಬೆಂತೆಕ್ಕಿ ಸೆರ್‌ಸಿ ಒಳ್ಳೆದ್ ನೀರ್‌ಲಿ ನೆನ್ಸಿ ಕಡ್ದ್ ಬೇಕಾದಸ್ಟ್ ಉಪ್ಪು ಹಾಕಿ ಮಾಜ್‌ಸಿ ಪುಂಡಿ ಮಾಡಿ ಬೆಚ್ಚ ಬೆಚ್ಚ ಇರಿಕನ ಒರ್‌ಳಿಗೆ ಹಾಕಿ ಕುದುರೆಲಿ ಒತ್ತ್‌ವೆ ಆಗ ಹಿಟ್ಟ್ ಒಟ್ಟೆಲಿ ಕಾಗಡೆ ಬಂದದೆ. ಬಾಳೆ ಪಂಬೆನ ಅಗಲಕ್ಕೆ ಸೆಡೆನ ಹಾಂಗೆ ಮಾಡಿ ಅಡಿಗೆ ಹಿಡಿಯೊಕು. ದಪ್ಪದ ನೂಲುನ ಹಾಂಗೆ ಹಿಟ್ಟ್ ಪಂಬೆಲಿ ಕುದ್ದದೆ. ಇದ್ಕೆ ತೆಳ್ಳಂಗೆ ಮಾಡ್ದ ಪದ್‌ಂಜಿ ಪಾಯಸ, ಕಾಯಿ ಹಾಲಿಗೆ ಬೆಲ್ಲ ಹಾಕಿ ಮಾಡ್ದ ರಸಾಯನ, ಬಾಳೆ ಹಣ್ಣ್‌ನ ರಸಾಯನ, ಕೋಳಿ, ಕುರಿ ಮಾಸದ ಸಾರ್ ಒಳ್ಳೆದಾದೆ. 'ಹಾಕಿಕೊಬ್ಬ, ನೂಕಿಗೊಬ್ಬ, ದೀಟಿಗೆ ದೀಪ ಹಿಡಿಯಕೊಬ್ಬ ಏನ್‌ಂತ ಹೇಳಿಂತೇಳಿರೆ 'ಇಡ್ಮಣೆ ಹಿಟ್ಟ್' ತ ಒಡ್ಲೋ ಕತೆ ಉಟ್ಟು. (ಎಂ.ಜಿ.ಕೆ.)

**ಇಡ್ಲಿ :** ಹುಳಿ ಬರ್‌ಸಿದ 'ಬಂದ'ನ ಇಡ್ಲಿ ಮಿಳ್ಳಿಲಿ ಹೊಯ್‌ದ್ ಇಡ್ಲಿ ಮಡ್‌ಕೆಲಿ ಹಾಕಿ ಬೇಸುವೆ. ಇಡ್ಲಿ ಮಡ್‌ಕೆ ಹನಿ ಕ್ರಾಯದ ಪಾತ್ರ ಆದ್ದಂರ್‌ದ ಅದ್ ಎಲ್ಲರ ಇರ್‌ದುಲೆ. ಹಿಂದೆನ ಕಾಲಲಿ ಊರ್‌ಲಿ ಒಂದೆರ್‌ಡ್ ಮನೆಲಿ ಇಡ್ಲಿ ಮಡ್‌ಕೆ ಇದ್ದರೆ ಒಳ್‌ದವುನು ಒಂದೆ ಮಡ್‌ಕೆ ಕೇಳಿ ತಕಣತಿದ್ದೊ. ಈಗೆಲ್ಲ ಕುಕ್ಕರ್‌ಲಿನು ಇಡ್ಲಿ ಮಡ್‌ಕೆ ಬಂದ್ ಎಲ್ಲರ್‌ಲಿ ಸಾಮಾನ್ಯ ಆಗಿ ಕಾಣಕ್.

**ಇಡ್ಲಿ ಮಡ್ಕೆ ಮತ್ತೆ ಇಡ್ಲಿ ಮಿಲ್ಲಿ :** ಇಡ್ಲಿ ಬೇಸುವ ಮಡ್ಕೆಗೆ ಇಡ್ಲಿ ಮಡ್ಕೆತ ಹೇಳ್‌ವೆ. ತುಳುಲಿ ಇಡ್ಲಿತ ಕರ ತ, ಮಲಿಯಾಳಿಲಿ ಇಡ್ಲಿ ಪಾತ್ರಂ, ಬ್ಯಾರಿ ಬಾಸೆಲಿ ಇಡ್ಲಿ ಕಲ ತ ಕರ್‌ದವೆ. ಇದ್ ಸಪೂರ ಆಗಿ ಎತ್ತರ ಉಟ್ಟು, ಹಿಡೆಕೆ ಕೈ ಉಟ್ಟು, ಒಳೆಗೆನ ಪುಡೆನ ನಡುಲಿ ಸುತ್ತಲೂ ಹಳ್ಳಬಟ್ಟಿದ ಹಾಂಗೆ ಉಟ್ಟು. ಅದ್ ಇಡ್ಲಿ ತಟ್ಟೆ ಇಸಿಕೆ ಇರ್‌ವ ಹಿಕ್ಮತ್. ಇಡ್ಲಿ ತಟ್ಟೆಗೆ ಅಲ್ಲಲ್ಲಿ ಒಟ್ಟೆ ಉಟ್ಟು. ಇದ್ ಅಡಿಂದ ನೀರ್ ಕುದೆಕನ ಬಾವ ಗಾರ್ – ಸೆಕೆ ಮೇಲೆ ಬಾಕೆ ಇರ್‌ವಂತದ್ದ್. ಇಡ್ಲಿ ಬಂದ ಹೊಯ್ಯಕೆ ಇಡ್ಲಿ ಮಿಳ್ಳಿ ಬೇಕ್. ಅದ್ ಸ ಮೊಣ್ಣ್‌ದೆ. ಮುಚ್ಚಿಕೆ ಮುಚ್ಚಳ ಸ ಮೊಣ್ಣ್‌ದೆ ಉಟ್ಟು. ಪಾತ್ರೆಗೆ ಹಳ್ಳನೀರ್ ಹಾಕಿ ತಟ್ಟೆ ಇಸ್‌ವೆ. ಅದರ ಮೇಲೆ ಇಡ್ಲಿ ಬಂದನ ಮಿಳ್ಳಿಗೆ ಹೊಯ್ದ್ ಮುಚ್ಚಳ ಮುಚ್ಚೊಕು. ಒಲೆಲಿರ್‌ವ ಕಿಚ್ಚಿಗೆ ನೀರ್ ಕೊದ್ದ್ ಅದರ ಸೆಕೆ ತಟ್ಟೆನ ಒಟ್ಟೆಲಿ ಮೇಲೆ ಬಂದದೆ. ಅದರ ಗಾರ್‌ಗೆ ಇಡ್ಲಿ ಬೆಂದದೆ. ಮನೆಲಿ ಏನಾರ್ ಜಂಬರ ಮಿನಿ ಇದ್ದರೆ, ಮನೆಗೆ ನೆಂಟ್ರ್ ಬಂದರೆ ಮತ್ತೆ ಹಬ್ಬಕ್ಕೂ ಇಡ್ಲಿ ಮಾಡ್‌ವೆ. ಇಡ್ಲಿ ಮಾಡ್‌ವ ಕ್ರಮ ಬಾರಿ ಹಿಂದೆನೆ ಇದ್ದದ್. ಎಲ್ಲಾ ಊರ್‌ಲೂ ಇದ್ಕೆ ಇಡ್ಲಿಂತನೇ ಹೇಳ್‌ವೆ. ಇಡ್ಲಿ ಮಾಡ್‌ವ ಮಡ್ಕೆಗ ಬೇರೆ ಬೇರೆ ರೂಪಲಿ ಇರ್‌ದು, ಇಡ್ಲಿನೂ ಬೇರೆ ಬೇರೆ ರೂಪಲೂ

ಇರ್‌ದು. ಆದರೂ ಇಡ್ಲಿ ಮಾತ್ರ ಎಲ್ಲಾ ಕಡೆನೂ ಒಂದೇ ನಮೂನೆ ಉಟ್ಟು. ಇಡ್ಲಿ ಹೊಯ್ಯಕೆ ಮಿಳ್ಳೆನೇ ಬೇಕು ತ ಇಲ್ಲೆ. ಚಿಪ್ಪಿನ ಪೊರ್‌ಲು ಕೆರೆಸಿ ಅದರ್‌ಲೂ ಬಂದನ ಹೊಯ್ಯಕ್. ಇಡ್ಲಿ ಮಡ್ಕೆಲಿ ಸೆಕೆಲಿ ಬೇವ ಪುಂಡಿ, ಮೂಡೆ ಹಿಟ್ ತ ಅದೆಲ್ಲಾನೂ ಬೇಸಿಕೆ ಆದೆ. ಇಡ್ಲಿ ಮಡ್ಕೆನ ಮೂಲ್ಯ/ಕುಂಬಾರ ಸಮುದಾಯದವು ಮಾಡ್ವೆ. (ಎಂ.ಜಿ.ಕೆ.)

**ಉಪ್ಪನಕಾಯಿ :** ಹೆಚ್ಚಿಗೆ ಮಾಯಿಣಕಾಯಿ ಮತ್ತೆ ಬೊಡ್ಡು (ಉಂಡೆ ಹುಳಿ) ಹುಳಿಲಿ ಉಪ್ಪನಕಾಯಿನ ಮಾಡ್‌ವೆ. ನಿಂಬುಳಿಲಿ ಮಾಡ್‌ದು ಕಮ್ಮಿ.. ಸುಮಾರ್ 100 ಮಾಯಿಣ ಮಿಡಿಗೆ ಮೂರ್ ಸೇರ್ ಉಪ್ಪು ಸೇರ್‌ಸಿ, ಒಂದ್ ತಿಂಗ ಮಡ್ಕೆಲಿ ಮುಚ್ಚಿ ಇಸಕು. ಎರ್‌ಡ್ ಸೇರ್ ಮೆಣ್ಸ್‌ಗೆ ಅರ್ದ ಪಾವು ಸಾಸ್‌ವೆ ಸೇರ್‌ಸಿ ಲಾಯಿಕ್ ಕಡ್‌ದ್ ಈ ಉಪ್ಪುಲಿ ಹಾಕಿದ ಮಾಯಿಣ ಮಿಡಿಗೆ ಕೂಡ್‌ಸಕು. ಗಾಳಿ ತಾಂಗದಂಗೆ ಒಂದ್ ಆರ್‌ತಿಂಗ ನೋಡಿಕಂಡರೆ ಈ ಉಪ್ಪನಕಾಯಿ ನಾಕೈದ್ ವರ್‌ಸದವರೆಗೆ ಹಾಳಾಗದೆ ಒಳ್‌ದದೆ. ಆಕಸ್ಮಾತ್ ಹಣ್ಣು ನೀರ್ ತಾಂಗಿರೂ ಬರ್‌ಣಿಲಿ ಹುಳಗ ಆದೆ. ಗೌಡರ್ ಹೆಚ್ಚಿಗೆ ಗಂಜಿ ಉಂಬದರ್‌ಂದ ಪ್ರತೀ ಗೌಡರ ಮನೆಲೂ ಒಂದ್ ನಮುನೆನ ಉಪ್ಪನಕಾಯಿ ಇದ್ದದೆ. (ಎಂ.ಜಿ.ಕೆ.)


ಬರ್‌ಣಿ

**ಉಪ್ಪನಕಾಯಿ ಮರ್‌ಗಿಲ್ :** ಉಪ್ಪನೆಕಾಯಿ ಹಾಕಿ ಇಸುವ ಮರದ ಮರ್‌ಗಿಲ್ ಮತ್ತೆ ಮರದ ಚಂಚೆ. ಇದ್ ಮರಂದ ಮಾಡ್‌ವ ಸೊತ್ತ್. ಮರನ ಕೆತ್ತಿ ಪಾತ್ರೆನ ಹಾಂಗೆ ಮಾಡ್ವೆ. ಅದ್ಕೆ ಸಮಾ ಆವಾ ಹಾಂಗೆ ಮುಚ್ಚಳ ಸ ಉಟ್ಟು. ಉಪ್ಪನೆಕಾಯಿ ಇಕ್ಕಿಕೆ ಮರದ್ದೇ ಚಂಚೆ ಉಟ್ಟು. ಇದರ ಆಚಾರಿಗಳೇ ಮಾಡ್ದು. ಕೆಲವು ಕಡೆ ಉಪ್ಪನೆಕಾಯಿ ಹಾಕಿಕೆ ಕುಪ್ಪಿದ್ ಬರಣಿ, ಮತ್ತೆ ಮೊಣ್ಣ್‌ನ ಸಣ್ಣ ಪಾತ್ರೆ ಉಟ್ಟು. ಹಣ್ಣುದೊಡ್ಡದಿದ್ದರೆ ಅದರ್‌ಲಿ ಉಪ್ಪು ಹಾಕಿ ಇಸ್‌ವೆ. ಇದ್ ಬಾರೀ ಪಿರಾಕ್‌ಲೇ ಇದ್ದ ಸೊತ್ತು. 'ಉಂಬಕ್ಕೆ ಇಲ್ಲದ ಉಪ್ಪನೆಕಾಯಿ ಯಾಕೆ', 'ಉಪ್ಪನೆಕಾಯಿ ಇದ್ದರೆ ನೆಕ್ಕಿ ನೆಕ್ಕಿ ಉಣಕ್'ತ ಗಾದೆ ಮಾತುಟ್ಟು.

**ಉಪ್ಪು, ಉಪ್ಪನಕಾಯಿ ಹಾಕಿಸುವ ಕರಡಿಗೆ :** ಉಂಬಕನ ಬೇಕಾದ ಉಪ್ಪು, ಉಪ್ಪನಕಾಯಿ ಹಾಕಿಸಿಕಾಂಬ ಕರಡಿಗೆ. ಇದ್ ದಕ್ಷಿಣಕನ್ನಡದ ಕೆಲವು ಕಡೆ ಉಟ್ಟು. ಇದರ ಬಳನ ಕಲ್ಲ್‌ಲಿ ಕೆತ್ತಿ ಮಾಡ್ದು. ಕಾಡ್‌ಲಿ ಸಿಕ್ಕ್‌ವ ಒಂದ್ ಜಾತಿ ಮೆತ್ತಂಗೆ ಇರ್‌ವ ಕಲ್ಲ್‌ನ ಜಾಗ್ರತೆಲಿ ಕೆತ್ತಿ ಮಾಡೊಕು. ಇದರ ಮರದ ಆಚಾರಿಗ ಮಾಡ್‌ವೆ. ಹಣ್ಣುಚಾತುರ್‌ಪು ಇದ್ದೊವು ಯಾರೂ ಮಾಡಕ್. ಉಂಬಕನ ಕೆಲವು ಜನಕ್ಕೆ ಉಪ್ಪು ಅಲ್ಲರ್ ಉಪ್ಪನೆಕಾಯಿ ಬೇಕಾದೆ. ಹಾಂಗೆ ಬೇಕಾದವು ಅದರ ತಕಂಕೆ ಬೇಕಾಗಿ ಇದರ್‌ಲಿ ಹಾಕಿಸಿ ಎದ್ರ್ ಇಸ್‌ವೆ. ಉಪ್ಪ್‌ಂದ ಹೆಚ್ಚ್ ರುಚಿ ಇಲ್ಲೆ ಅವ್ವಂದ ದೊಡ್ಡ ಬಂದು ಇಲ್ಲೆ'ತ ಗಾದೆ ಮಾತುಟ್ಟು. (ಎಂ.ಜಿ.ಕೆ.)

**ಉಪ್ಪುನ ಗುತ್ತಿ–ಉಪ್ಪುನ ಮರ್‌ಗಿಲ್ :** ಉಪ್ಪುನ ಗುತ್ತಿ ತೇಳಿರೆ ಮರ ಅಲ್ಲರ್ ಬೆದ್ರ್‌ನ ಕಡ್ಡ ಮೇಲೆ ಉಳಿವ ಬುಡದ ತುಂಡು. ನೋಡಿಕೆ ಗುತ್ತಿನ ಹಾಂಗೆ ಕಾಂಬೊದರ್‌ಂದ ಇದರ ಗುತ್ತಿತ ಹೇಳ್‌ವೆ. ಇದರ್‌ಲಿ ಉಪ್ಪು ಹಾಕುದರ್‌ಂದಾಗಿ ಇದ್ ಉಪ್ಪುನ ಗುತ್ತಿ. ಇನ್ನೊಂದು ಉಪ್ಪು ಹಾಕಿಸುವ ಮರ್‌ಗಿಲ್. ಬೆದ್ರ್‌ನ ಗಂಟ್‌ಂದ ಕಾಗಡೆ ತುಂಡು ಮಾಡಿ ಮೇಲೆಗೆ ಎಸ್ಟ್ ದೊಡ್ಡದ್ ಬೇಕು ತ ನೋಡಿಕಂಡ್ ತುಂಡು ಮಾಡೊಕು. ಗಂಟ್‌ನ ಹದ ಸಪಾಯಿ ಮಾಡಿಕಂಡರೆ ಲಾಯ್ಕಾದೆ. ಒಳಗೆನ ಪುಡೆಲಿ ಇದ್ದ ಕೊಳಕ್‌ನ ಮನಾರ ಮಾಡಿಕಾಂಕು. ಗುತ್ತಿನ ಹಿಡೆಕೆ ಆವ ಹಾಂಗೆ ಕೈ ಸ ಮಾಡಿಕಾದೆ. ಉಪ್ಪು ಹಾಕಿಕೆ ಮರದ ಮರ್‌ಗಿಲ್‌ನೂ ಉಟ್ಟು. ಮರ ಕೆಲ್ಸದ ಆಚಾರಿಗ ಮರನ ಕೆತ್ತಿ ಮರ್‌ಗಿಲ್ ಮಾಡ್‌ವೆ. ಇದರ್‌ಲಿ ಉಪ್ಪು ಮಾತ್ರ ಅಲ್ಲ ಹುಳಿನೂ ಹಾಕಿಸಕ್. ಅದ್ಕೆ ಬೆದ್ರ್‌ದ್ ಅಲ್ಲರ್ ಮರದ್ದ್ ಮುಚ್ಚಳ ಮಾಡಿರೆ ಕೊತ್ತಂಬರಿ ಜೀರಿಗೆ ತ ಸಾಮಾನ್‌ನ ಹಾಕಿಸಿಕೆ ಆದೆ. ಅಡಿಗೆಲಿ ಉಪ್ಪು ಇಕ್ಕ್‌ವ ಕ್ರಮ ಸುರು ಆಕನವೇ ಗುತ್ತಿಲಿ ಉಪ್ಪು ಹಾಕಿಕೆ ಸುರು ಮಾಡಿರುವೊ. ಉಪ್ಪುನ ಮಡ್ಕೆಲಿ ಸ ಹಾಕಿಸ್‌ವೆ. (ಎಂ.ಜಿ.ಕೆ.)

**ಓಡಿಟ್ಟ್ :** ಅಕ್ಕಿನ ರಾತ್ರಿ ಪದನಿಕೆ ಹಾಕಿ, ಹಣ್ಣ್‌ಹುಗ್ಗೆ ಮತ್ತೆ ಉಪ್ಪು ಸೇರ್‌ಸಿ ಕಡಿಯೊಕು. ಮೊಣ್ಣ್ ನ ಓಡುಲಿ ಗಟ್ಟಿ ಬಂದನ ಹೊಯ್‌ದ್ ಬೇಸ್‌ವೆ. ಬಾರಿ ಮೆತ್ತಂಗೆ ಇರ್‌ವ ಇದ್ ಒಳ್ಳೆ ರುಚಿನು ಇದ್ದದೆ. ಓಡ್ ಹಿಟ್ಟ್‌ಗೆ ಸಾಮಾನ್ಯ ಆಗಿ ಕೆಂಬುಡೆಕಾಯಿ ಪಲ್ಯ, ಬೆಣ್ಣೆ/ತುಪ್ಪ ಹಾಕಂಡ್ ತಿಂಬೊತ್ತಿದ್ದೊ. ಮೀನ್ ಗೈಪುಲಿ ಓಡಿಟ್ಟ್ ತಿಂಬಕೆ ಬಾರಿ ಲಾಯ್‌ಕ್ಕಿದ್ದದೆ. (ಪಿ.ಬಿ.)

**ಕಡುಂಬು (ಕಡಂಬಿಟ್ಟು) :** ಬೆಳ್ತಕ್ಕಿನ ತೊಳ್ದ್ ಒಣ್‌ಗ್‌ಸಿ ತರಿತರಿಯಾಗಿ ಹೊಡಿಮಾಡಿಕಂಡ್ ಕೊದಿವ ನೀರ್‌ಗೆ ಉಪ್ಪ್ ಹಾಕಿ ಉಕ್ಕುರ್‌ಸಿಕಣೊಕು. ಅದರ ಸಣ್ಣ ಉಂಡೆ ಕಟ್ಟಿ, ಕಳ್ಸಿಗೆಗೆ ಹಾಕಿ ಹಬೆಲಿ ಬೇಸುದು. ಇದರ ಹಂದಿಗೈಪುನೊಟ್ಟಿಗೆ ತಿಂಬೊತ್ತಿದ್ದೊ. ಗದ್ದೆ ಕೆಲ್ಸದ ಹೊತ್ತುಲಿ (ಅಗೆ, ನಾಟಿ) ಇದರ ದೊಡ್ಡ ದೊಡ್ಡ ಉಂಡೆ ಕಟ್ಟಿ ಕೋಳಿಗೈಪುನೊಟ್ಟಿಗೆ ಕೆಲ್ಸಕೆ ಬಂದವ್‌ಕೆ ಕೊಟ್ಟವೆ. ಸತ್ತವರ ಹೆಸ್‌ರ್‌ಲಿ ಬೊಜ್ಜದೂಟ(ನೋಡಿ:ಬೊಜ್ಜದೂಟ) ಕೊಡ್‌ಕನ ಇದರ ಉಂಡೆ ಬದಲ್‌ಗೆ ಉದ್ದನೆ ಆಕಾರಲಿ ಮಾಡ್‌ವೆ. ಗಣಪತಿ ಹಬ್ಬದ ನೈವೇದ್ಯಕೆ ಕಾಯಿಕಡುಂಬು ಮುಕ್ಯ. ತಾವೂರು ಗ್ರಾಮ ಹಬ್ಬಲಿ ಪಟ್ನಿಗೆ ಅಕ್ಕಿ ಕಡುಂಬು, ಗೆಂಡೆ ಮತ್ತೆ ಇಲಾತ್ ಕಾಳ್ ಹಾಕಿ ಸಾರ್ ಮಾಡ್‌ದು ಕ್ರಮ. (ಪಿ.ಬಿ.)

**ಕಾಯಿಗಂಜಿ :** ಗದ್ದೆಲಿ ತಾವೇ ಬೆಳ್‌ದ ಹೊಸ ಅಕ್ಕಿನ ಸುರುನ ಸರ್‌ತಿ ಊಟ ಮಾಡ್‌ವಂದ್ ಮನೆಗಳ್‌ಲಿ ಗೌಜಿ ಇದ್ದದೆ. ಆ ದಿನ ಕಾಯಿಗಂಜಿ ಮಾಡಿ ಉಂಡವೆ. ಗಂದಸಾಲೆ ಇಲ್ಲರೆ ಬೇರೆ ಒಳ್ಳ ಜಾತಿನ ಅಕ್ಕಿನ ತಂದ್ ದಿನ ಉಂಬಕೆ ಬೇಸುದರ್‌ಂದ ಹೆಚ್ಚಿಗೆ ಬೇಸಿ, ಅದ್‌ಕೆ ಕಾಯಿ ಹೂ ಮತ್ತೆ ಬೇವುನ ಸೊಪ್ಪುನ ಸೇರ್‌ಸುವೆ ಕೆಲವ್‌ಕಡೆ ಅರ್‌ಸಿನ ಸೊಪ್ಪುನ ಹಾಕುವೆ. ರುಚಿಗೆ ತಕ್ಕಸ್ಟು ಉಪ್ಪು ಸೇರ್‌ಸಿ, ಶಾಸ್ತ್ರಕೆಂತ ಹಣ್ಣು ಹೊಸ ಅಕ್ಕಿನ ಸೇರ್‌ಸಿರೆ ಕಾಯಿಗಂಜಿ ಆದೆ. ಇದರ ಮನೆನ ಮೂಪ ಯಾರೊಳು ಅವ್ ಸುರುಗೆ ಉಣಕು. ಅವ್ ಇದರ ಉಂಬಕೆ ಮುಂದೆ ಮೀದ್ ಬಿಳಿ ಬಟ್ಟೆ ಉಡಕ. ಅದಾಗಿ ಮನೆವು ಎಲ್ಲ ಸೇರಿ ಕಾಯಿಗಂಜಿ ಇಕ್ಕಿಕಂಡ್ ಎಲ್ಲವ್ 'ಹೊಸ್ತು ಉಂಡನೆ' ತ ಮೂರ್ ಸರ್‌ತಿ ಹೇಳಿ ಉಂಡವೆ. ಇದರ 'ಹೊಸ್ತು ಉಂಬೊದು' ತೇಳುವೆ. ಹೊಸ್ತಾಗಿ ಮನೆಗೆ ಬಂದ ಅಕ್ಕಿ, ಅದರ ಕಾಯಿ ಹಾಕಿ ಬೇಸಿ, ಸುರುನ ಸರ್‌ತಿ ಉಂಬಕನ ಇರ್‌ವ ಗೌಜಿ ನೋಡಿರೆ ಗೌಡ್ರ ಕ್ರಿಸಿ ಸಂಸ್ಕೃತಿಗೆ ಒಗ್ಗಿಕಂಡಿರ್‌ದರ ಲಾಯ್‌ಕ್‌ಲಿ ತೋರ್‌ಸಿದೆ. (ಪಿ.ಬಿ.)

**ಕಲ್ತಪ್ಪ / ಕೆಂಡದಿಟ್ಟ್ :** ಕಲ್ತಪ್ಪ ಕೇರಳಲಿ 'ಕಲ್ಲಪ್ಪಂತ ಜೆನಪ್ರಿಯ ಆಗಿರ್‌ವ ತಿಂಡಿ. ಕೆಂಡಲೇ ಇದರ ಬೇಸುದರ್‌ಂದ ಕೆಂಡದ ಹಿಟ್ಟು- ಗೆಂಡದಿಟ್ಟ್‌ಂತನು ಕರ್‌ದವೆ. ಇದರ್‌ನೂ ಅಕ್ಕಿಂದಳೆ ಮಾಡ್‌ವೆ. ನೆನೆ ಹಾಕಿದ ಅಕ್ಕಿನ ಕಡ್‌ದ್ ಬಂದನ ಒಗ್ಗರಣೆ ಹಾಕಿದ ಬಾಣಲೆಗೆ ಹಾಕಿ, ಒಲೆನ ಮೇಲಿಸಕು. ಬಾಣಲೆನ ಇಲ್ಲರೆ ಉರ್ಳಿನ ಮೇಲೆ ಡಬ್ಬಿಂದ ಮುಚ್ಚಿ. ಅದರ ಮೇಲೆ ಕೆಂಡ ಹಾಕುವೆ. ಕಾಗಡೆಂದ ಮತ್ತೆ ಮೇಲೆಂದ ಕಿಚ್ಚಿನ ದಾವುಗೆ 'ಗೆಂಡದಿಟ್ಟು' ಕಾದದೆ. ಸುಮಾರ್ ಒಂದ್ ಇಂಚ್ ದಪ್ಪ ಮತ್ತೆ ಮೂರ್ ಇಂಚ್ ಉದ್ದ ಇರ್‌ವ ತುಂಡುನಂಗೆ ಕತ್ತರ್‌ಸಿ ತಿಂಬೊತ್ತಿದ್ದೊ. ಸರಾಸರಿ ನಾಕ್ ತುಂಡುನ ಒಬ್ಬ ತಿನಕ್. ರೊಟ್ಟಿನ ಹಾಂಗೆ ಇದುನು ಹೊಟ್ಟೆಗೆ ಗಟ್ಟಿ, ಬಾಯಿಗೆ ರುಚಿ, ಸೌದೆ ಹೆಚ್ಚಿ ಸಿಕ್ಕ್‌ವ ಕಡೆ ಈ ತಿಂಡಿನು ಹೆಚ್ಚಿ ಮಾಡ್‌ವೆ. ಈಗೀಗ ಸೌದೆಗೆ ಬರ ಇರ್‌ದಂರ್‌ದ ಈ ಹಿಟ್ಟ್ ಮಾಡ್‌ದು ಕಮ್ಮಿ ಆಗುಟು. (ಪಿ.ಬಿ.)

**ದೋಸೆ :** ಅಕ್ಕಿನ ಕಡ್‌ದ್ ಬಂದನ ಹಣ್ಣು ತೆಳ್ಳಂಗೆ ಮಾಡಿ ಕಬ್ಬಿಣದ ಕಾವಲಿಲಿ ಹೊಯ್‌ದ್ ದೋಸೆ ಮಾಡ್‌ವೆ. 'ಗಟ್ಟಿ ಆದರೆ ರೊಟ್ಟಿ ತೆಳ್ಳಂಗಾದರೆ ದೋಸೆ' ತೇಳ್‌ವ ಗಾದೆನು ಉಟ್ಟು. ಜೆನರ ಸಂಕೆ ಹೆಚ್ಚಿಗೆ ಇರಿಕನ ದೋಸೆ ಮಾಡಟಿಲ್ಲೆ. ಏಕೆಂತೇಳಿರೆ ರೊಟ್ಟಿಂದ ದೋಸೆ ಮಾಡಿಕೆ ಹೊತ್ತು ಜಾಸ್ತಿ ಹಿಡ್‌ದದೆ. ಹಿಂದೆನ ದಿನ ಅಕ್ಕಿ ಕಡ್‌ದ್ ಅದ್‌ಕೆ ಹಣ್ಣು ಕಳ್ಳ ಸೇರ್‌ಸಿ ಮಡ್ಕೆಲಿ ಹಾಕಿಸುವೆ. ಬೊಳ್ಪಾಕನ ಅದ್ ಹುಳಿಬಂದ್ ನೊರೆನೊರೆ ಆಗಿ ಉಬ್ಬಿದ್ದದೆ. ಅದರ ನೋಡಿ ಮನೆ ಹೆಂಗ್‌ಸ್‌ಗ 'ಬಂದ ಹುಳಿ ಬಂದುಟು'ತೇಳುವೆ. ಹುಳಿ ಜಾಸ್ತಿ ಬಂದಸ್ಟ್ ರುಚಿನು, ಒದ್ಗ್‌ನು ಜಾಸ್ತಿ. ಇದರ ಒಂದೊಂದ್ ಸೆಡೆನಸ್ಟ್ ಕಬ್ಬಿಣದ ಕಾವಲಿಲಿ ಹೊಯ್‌ದ್ ಕಾಸಿರೆ 'ಹುಳಿದೋಸೆ' ಆದೆ. ಮನೆಲಿ ಜೆನಗ ಸುಮಾರ್ ಇರಿಕನ 'ಹುಳಿದೋಸೆ' ಮಾಡ್‌ವೆ. ಒಂದ್ ಸೇರ್ ಅಕ್ಕಿಲಿ 30 ರ್‌ಂದ 40 ದೋಸೆಗ ಮಾಡಿಕಾದೆ. ಸಾಮಾನ್ಯ ಆಗಿ 7 ದೋಸೆನ ಒಬ್ಬ ಗೌಡ ತಿಂದದೆ. (ಪಿ.ಬಿ.)

**ನೀರ್‌ದೋಸೆ :** ಅಕ್ಕಿನ ನೆನೆ ಹಾಕಿದ್ ಕಡ್ದ ಬಂದನ ತೆಳ್ಳಂಗೆ ಮಾಡಿರೆ ನೀರ್ ದೋಸೆ ಮಾಡಿಕಾದೆ. ಇದರ ತಳ್ಳಾವುಂತನೂ ಕರ್‌ದವೆ. ತುಂಬಾ ರುಚಿನ ಈ ದೋಸೆ ಹಿಂಬೊತುನ ಚಾಯಕು ಮಾಡ್‌ದು ಉಟ್ಟು. ನೀರ್‌ದೋಸೆ ಮಾಡಿಕೆ ಕೈ ಲಾಯ್ಕ್ ಪಳ್‌ಗಿರಕು ಹಾಂಗೆ ಕಿಚ್ಚಿನು ಹದ ಇರಕು.ಇದರ್‌ಲಿ ಪಳ್ಗಿದವು ಸೇರ್ ಅಕ್ಕಿಗೆ 70 ದೋಸೆನ ಮಾಡ್‌ವೆ.ಇದೆ ದೋಸೆನ ಕೆಲವ್ ಕಡೆ ಗುರುಕಾರ್‌ನೂರ್‌ಗೆ ಅಗಲ್ ಹಾಕಿಕನು ಇಕ್ಕುವೆ.ಇದ್‌ಕೆ ದೋಸೆನ ಮೊಡ್‌ಚದೆ ಹರಿಯದಂದೆ ಜಾಕ್ರತೆಲಿ ಎಳ್ಕ್‌ಸಕಾದೆ. ಅಕ್ಕಿಗೆ ಹಸಿ ಬಾಳೆಕಾಯಿ, ಗೋದಿ, ಸೋಂತೆಕಾಯಿ ಸೇರ್‌ಸಿರೆ ಕ್ರಮಾಗಿ ಬಾಳೆಕಾಯಿ ದೋಸೆ, ಗೋದಿ ದೋಸೆ, ಸೊಂತೆಕಾಯಿ ದೋಸೆ ಮಾಡಿಕಾದೆ. ಇದುನು ಬಾರಿ ರುಚಿ ಇದ್ದದೆ. ರೊಟ್ಟಿನೊಟಿಗೆ ಜೊತೆ ಬಳಸುವ ಪೊಜ್ಜಿ, ತುಪ್ಪ, ಸಾರ್ ಇಂತದರ್‌ನೆ ದೋಸೆ ತಿಂಬಕೆ. ದೋಸೆ ರೊಟ್ಟಿಂದ ಹೆಚ್ಚಿ ರುಚಿ ಇದ್ದದೆ. ಸಾಮಾನ್ಯವಾಗಿ ಇದ್ ಶ್ರೀಮಂತರ ಆಹಾರ. (ಪಿ.ಬಿ.)

**ಪತ್ರೊಡೆ :** ಆಟಿ ತಿಂಗಳ್‌ಲಿ (ಜುಲೈ-ಅಗೋಸ್ತು) ಮಾತ್ರ ತಿಂಬ ಸಾಂದರ್‌ಬಿಕ ಹಿಟ್ಟ್ ಇದ್. ಆರೋಗ್ಯಕೆ ತುಂಬಾ ಒಳ್ಳೆದ್‌ಂತೇಳ್‌ವ ನಂಬಿಕೆ ಉಟ್ಟು. ಆಟಿ ತಿಂಗಳ್‌ಲಿ ಬಡತನ ಜಾಸ್ತಿ. ಆ ಕಾಲಲಿ ಮರಲಿ ಬೆಳೆವ ಮರ ಕೆಸದ ಸೊಪ್ಪುನ ತಂದ್, ತೊಳ್‌ದ್ ಸಣ್ಣಕೆ ಕೊಯ್‌ದ ಮೇಲೆ ಅಕ್ಕಿ ಕಡ್‌ದ್ ಆ ಬಂದದೊಟಿಗೆ ಕಳ್‌ಸಿ ಬಾಣಲೆಲಿ ಗಸಿಗಸಿ ಆವಂಗೆ ಬೇಸಕು. ಒಲೆಂದ ಇಳ್‌ಸಿ, ಹಿಟ್ಟ್‌ನ ಬಾಳೆ ಎಲೆಲಿ ಮೊಡ್‌ಚಿ ಪುಂಡಿ ಮಡ್‌ಕೆಲಿ ಲಾಯ್‌ಕ್ ಬೇಸಕು. ಅದಾಗಿ ಮತ್ತೊಮ್ಮೆ ಸಣ್ಣ ತುಂಡುನಂಗೆ ಮಾಡಿ ಬನನಲೆಲಿ ಒಗ್ಗರಣೆ ಹಾಕಿ, ಕಾರಿ ಹೂ ಸೇರ್‌ಸಕು. ಇದರ ಪತ್ರೋಡೆತ ಕರ್‌ದವೆ. ದೇಹಲಿರ್‌ವ ವಿಸದ ಅಂಸನ ಪೂರ ತೆಗಿವ ಗುಣ ಇದ್‌ಕುಟ್ಟುತ ಗೌಡ ಸಮುದಾಯದ



ಪತ್ರೊಡೆ

ಹಿರಿಯರ್ ಹೇಳ್‌ವೆ. 'ಆಟಿಲಿ ತಿಂದ ಪತ್ರೋಡೆಲಿ ಹೊಟ್ಟೆಗೆ ಬಿದ್ದ ಕೈವಿಸ ಮಾಸಿ ಹೋದು(ಆಟಿಯಲ್ಲಿ ತಿಂದ ಪತ್ರೊಡೆಯಿಂದ ಹೊಟ್ಟೆಗೆ ಬಿದ್ದ ಕೈ ವಿಷ ಕೂಡಾ ನಾಶವಾಗುತ್ತದೆ) ತೇಳ್‌ವ ಗಾದೆ ಅರೆಬಾಸೆಲಿ ಇಂದ್‌ಗೂ ಉಟ್ಟು. (ಪಿ.ಬಿ.)

**ಪಾಯ್ಸ :** ಗೌಡರ್‌ಗೆ ಪಾಯ್‌ಸಂತೇಳಿರೆ ತುಂಬಾ ಇಸ್ಟ. ಅದರ್‌ಲೂ ಕಡ್‌ಲೆ ಮತೆ ಪದೆಂಜಿ ಬೇಳೆಂದ ಮಾಡ್‌ದ ಪಾಯ್ಸನೆ ಹೆಚ್ಚಿಗೆ ಮಾಡ್‌ವೆ. ಬೇಳೆಗೆ ಹಣ್ಣಾ ಕಾಯಿ ಎಣ್ಣೆ ಸೇರ್‌ಸಿ, ಕೆಂಪಾವಸ್ಟ್ ಹೊರ್‌ದವೆ. ಮಡ್‌ಕೆಲಿ ಬೇಕಾದಸ್ಟ್ ಅಳ್‌ತೆನ ನೀರ್ ಹಾಕಿ, ಅದ್ ಕೊದಿಯಕನ ಅದ್‌ಕೆ ಬೇಳೆನ ಹಾಕುವೆ. ಸೆಡೆಲಿ ಆಗಾಗ ಅದರ ತಿರ್‌ಗ್‌ಸಿಕಂಡ್ ಲಾಯ್‌ಕ್ ಬೇಸ್‌ವೆ ಹಾಂಗೆ ತಿರ್‌ಗಸದ್ದರೆ ಬೇಳೆ ಅಡಿಗೆ ಒಂದಿ ಅಡಿ ಹಿಡ್‌ದ್ ಪಾಯಸ ಹಾಳಾದೆ.

ಇನ್ನೊಂದ್ ಕಡೆ ಅರ್‌ದಸೇರ್ ಬೇಳೆಗೆ ಒಂದ್ ಕಾಯಿನಂಗೆ ಲೆಕ್ಕ ಹಾಕಿ, ಎಸ್ಟ್ ಬೇಕೋ ಅಸ್ಟ್ ಕಾಯಿ ಹೂನ ಹಾಕ್‌ವೆ. ಅದರ ಲಾಯ್‌ಕ್ ಕಡ್‌ದ್ ಬಟ್ಟೆಲಿ ಹಿಂಡಿ ಹಾಲ್ ಅರ್‌ಪಿಕಣಕು. ಇದರ ದನಿ ಹಾಲ್‌ತನು ಕರ್‌ದವೆ. ಹಿಂಡಿದ ಕಾಯಿಂದ ಸಿಕ್ಕಿದ ಹಿಂಟೆಗೆ ಇನ್ನೊಮ್ಮೆ ನೀರ್ ಸೇರ್‌ಸಿ ಇನ್ನೊಮ್ಮೆ ಕಡ್‌ದ್ ಹಿಂಡುವೆ. ಆಗ ಸಿಕ್ಕ್‌ವ ತೆಳ್ಳಂಗೆನ ಹಾಲ್‌ನ ನೀರ್ ಹಾಲು'ತ ಕರ್‌ದವೆ. ಈ ಎರ್‌ಡೂ ವಿದದ ಹಾಲ್‌ನ ಪ್ರತ್ಯೇಕ ಆಗಿ ಇಸಿಕಂಡವೆ.ಒಲೆಲಿಸಿದ ಬೇಳೆ ಬೆಂದರೆ, ಆಗ ನೀರ್ ಹಾಲ್' ಸೇರ್‌ಸಿ, ರುಚಿಗೆ ತಕ್ಕಸ್ಟ್ ಬೆಲ್ಲ ಹಾಕ್‌ವೆ. ಅದ್ ಕೊದಿವವರೆಗೆ ಕಾದ್ ಮತ್ತೆ ದನಿ ಹಾಲ್ ಅಲ್ಲೊ ಮಂದ ಹಾಲ್ ಸೇರ್‌ಸುವೆ. ಮತ್ತೊಮ್ಮೆ ಕೊದ್ದ್‌ಸಿ ಇಳ್‌ಗ್‌ವೆ. ಅದ್‌ಕೆ ಏಲಕ್ಕಿ ಬಿತ್ತ್, ಬೀಜ ಬೆಂಡ್ ಒನ್‌ಗಿಲ್ ದ್ರಾಕ್ಷೆ ಸೇರ್‌ಸುವೆ. ಇದಂರ್‌ದ ಪಾಯ್‌ಸದ ಪೊರ್ಮಳ ಹೇಂಗೆನೊ ಹಾಂಗೆ ರುಚಿ ಬಂದದೆ. ಬೆಲ್ಲಂದ ಮಾಡ್‌ವ ಕಡ್‌ಲೆ ಮತ್ತೆ ಬೇಳೆ ಪಾಯ್‌ಸ ಅರೆಬಾಸೆ ಪರಿಸರದ ಗೌಡರ್‌ಲಿ ಹೆಚ್ಚಿಗೆ ಮಾಡ್‌ದರ ಕಾಣಕ್. ಸಕ್ಕರೆ ಹಾಕಿ ಮಾಡ್‌ವ ಅಕ್ಕಿ ಪಾಯ್ಸ ಸಾಬಕ್ಕಿ ಪಾಯಸ, ಸಜ್ಜಿಗೆ ಪಾಯ್‌ಸಗ ಅಲ್ಲಲ್ಲಿ ಕಾಣಕ್. ಹಲ್‌ಸ್‌ನ ಹಣ್ಣ್, ಮಾಯಿಣ ಹಣ್ಣ್ ಮತ್ತೆ ಬಾಳೆ ಹಣ್ಣ್‌ಂದಲೂ ಆಯಾ ಹೆಸರ್‌ನ ಪಾಯಸಗಳ ಮಾಡ್‌ವೆ ಪಾಯ್‌ಸಕೆ 'ಪರಮಾನ್ನ'ತ ಹೆಸರೂ ಉಟ್ಟು. ಒಂದ್ ಸೇರ್ ಬೇಳೆಗೆ ಎರ್‌ಡ್ ಕಾಯಿನ ಹಾಲ್ ಸೇರ್‌ಸಿ ಮಾಡ್‌ವ ಪಾಯ್‌ಸನ ಒಬ್ಬ ಗೌಡ ಉಂಡ್ ಮುಗ್‌ಸುದು ಉಟ್ಟು. ಮೊದ್‌ವೆಗಳ್‌ಲಿ ಪಾಯಸ ಉಂಬ ಸ್ಪರ್ದೆನನು ಕಾಣಕ್. ಗೌಡರ್‌ಲಿ ಅವ್‌ಕೆ ಬೇಕಾದ ಕೆಲ ತಿನ್‌ಸ್‌ಗಳ ಅವೆ ಸ್ವತಃ ಮಾಡಿದ್ ಇಸಿಕಂಬದರನು ಕಾಣಕ್. ಅದರ್‌ಲಿ ಮುಕ್ಯ ಆದ್ ಈ ಕೆಳಗೆ ಉಟ್ಟು.

**ಪುಂಡಿ :** ಬಾರಿ ಕಮ್ಮಿ ಹೊತ್ತುಲಿ, ಹೆಚ್ಚಿ ಜೆನಕೆ ಹಿಟ್ಟ್ ಮಾಡಕಾರೆ ಗೌಡ್ರ್‌ಗ 'ಪುಂಡಿ' ಮಾಡ್‌ವೆ. ಗದ್ದೆ ಕೊಯ್ಲ್, ಗದ್ದೆಗೋರಿ, ತೋಟಲಿ ಅಡ್ಕೆ ಕೊಯ್‌ವ ದಿನದಂದ್ ಮನೆಲಿ ಜೆನಗ ತುಂಬ ಸೇರ್‌ವೆ. ಆಗ ಒಮ್ಮೆಗೆ ಸುಮಾರ್ ಜೆನಕೆ ತಿಂಡಿ ಮಾಡಿಕೊಡಿಕಿದ್ದರೆ ಅಂದ್ ಪುಂಡಿ ಮಾಡ್‌ವೆ. ಅಕ್ಕಿ ಕಡ್‌ದ್ ಬನಲೆಲಿ ಮಾಜ್‌ಸಿ ಗಸಿಗಸಿ ಇರ್‌ವಂಗೆ ಇರ್‌ಕನ ಒಲೆಂದ ಇಳ್‌ಗುವೆ. ಮಾಜ್‌ಸುದುಂತೇಳಿರೆ ಬಂದನ ಬನಲೆ ಇಲ್ಲರೆ ಉರ್‌ಳಿಲಿ ಬೇಸಿಕಂಡೇ ಚಿಪ್ಪಿ ಸೆಡೆನ ಬೆದ್‌ರ್ ಹಿಡಿ ಇಲ್ಲರೆ ಮರದ ಕೋಲುಲಿ ಮೊಗ್‌ಚಿ ನೀರ್ ಆರ್‌ಸಿ ಗಟ್ಟಿ ಗಟ್ಟಿ ಆವಂಗೆ ಮಾಡ್‌ದು. ಅದರ ಒಲೆಂದ ಇಳ್‌ಗಿ ಸುಮಾರ್ ಮೂರು ಸೆಂಟಿಮೀಟರ್‌ನಸ್ಟ್ ವೃತ್ತಾಕಾರದ ಉಂಡೆಗಾಗಿ ಮಾಡ್‌ವೆ, ತೇಳಿರೆ ಇದ್ ಒಂದ್ ಪುಂಡಿನಸ್ಟ್ ಉರುಂಟುನ ಉಂಡೆ. ಈ ಪುಂಡಿಗಳ ಒಂದ್ ಮಡ್‌ಕೆಲಿ ಹಾಕಿ ಸೆಕೆಲಿ ಬೇಯ್‌ವಾಂಗೆ ಬೇಸುವೆ. ಹಿಂಗೆ ಬೇಸಿಕೆ ಬೇರೆನೆ ಮಡ್‌ಕೆಗ ಇದ್ದ್ ಇದ್ ಪುಂಡಿ ಮಡ್‌ಕೆಂತ ಜೆನಪ್ರಿಯ ಆಗುಟು. ಪುಂಡಿ ಮಡ್ಕೆಲಿ ಅಡಿ ಬಾಗಲಿ ನೀರ್ ಹೊಯ್‌ದವೆ, ಅದರ ಮೇಲೆಗ ಸಣ್ಣ ಮುಚ್ಚಳ ಇಲ್ಲರೆ ಸೆರೆ ಇರ್‌ವ ಸಲ್ಗೆನ ಬಟ್ಲ್ ಇದ್ದದೆ. ಇದರ ಮೇಲೆ ಪುಂಡಿ ಇಸಿ ಮೇಲೆಂದ ಮುಚ್ಚಿರೆ ಬಿಸಿ ಸೆಕೆಗೆ ಪುಂಡಿ ಬೆಂದದೆ. ಸುಮಾರ್ ಅರ್ದಗಂಟೆ ಪುಂಡಿ ಬೇಯಕೆ ಹೊತ್ತು ಹಿಡ್‌ದದೆ. ಸರಾಸರಿ ಎರಡ್ ಸೇರ್ ಅಕ್ಕಿಗೆ 40–50 ಪುಂಡಿ ಮಾಡಿಕಾದೆ. ಒಬ್ಬ ಗೌಡ ಆರ್ ಪುಂಡಿ ತಿಂಬಕಾದೆ. ಹಂದಿ ಗೈಪು ಮತೆ ಪುಂಡಿ ಅರೆಬಾಸೆ ಪರಿಸರದ ಜೆನಪ್ರಿಯ ತಿಂಡಿಗಳ್‌ಲಿ ಒಂದ್. (ಪಿ.ಬಿ.)

**ಬಟ್ಲಿಟ್ಟ್ :** ಅಕ್ಕಿ, ಉದ್ದು, ಮೆಂತೆನ ಎಂಟ್ ಗಂಟೆ ಪದನಿಕೆ ಹಾಕಿ ಬಂದ ಕಡಿಯೊಕು. ಇದರ ಹುಳಿಬರ್‌ಸಿ ಆದ ಮೇಲೆ ಬಂದನ ದೊಡ್ಡ ಬಟ್ಲ್ ಗಳಿಗೆ ಹೊಯ್ದ್ ಕಳ್ಳಿಗೆಲಿ ಬೇಸುವೆ. ಇದರ ಹುಳಿ ಬರ್‌ಸಿಕೆ ಬೈನೆ ಕಳ್ಳ್ ಹಾಕ್‌ವ ಕ್ರಮಸ ಉಟ್ಟ್. ಹಿಟ್ಟ್ ಮೆತ್ತಂಗೆ ಆಕೆ ಬಂದ ಕಡೆಯಕನ ಹುದ್ರಿ ಬೇರ್ ನ ಹಾಕಿ ಕಡ್ದವೆ. ತುಂಬಾ ಜೆನ ಸೇರ್‌ವ ಜಂಬರಗಳಿಗೆ ಇಡ್ಲಿ ಒಟ್ಟಿಗೆ ಬಟ್ಲಿಟ್ಟ್ ಮಾಡಿ ಹಂದಿಗೈಪು ಮಾಡ್ದು ವಾಡಿಕೆ. ಇದರ ಬಂದಲಿ ಹುಳಿದೋಸೆ, ಅಪ್ಪದಿಟ್ಟ್ ಕೂಡ ಮಾಡಕ್. (ಪಿ.ಬಿ.)

**ಬೊಡ್ರೊಟ್ಟಿ-ರೊಟ್ಟಿ-ಕಲ್ಲ್‌ಕಾವಲಿ ಹಿಟ್ಟ್-ಬೊಡ್ಡಿಟ್ಟ್ :** ಗೌಡಗೆ ತುಂಬಾ ಹೆಚ್ಚಿಗೆ ಇಷ್ಟದ ಹಿಟ್ಟ್‌ಂತೇಳಿರೆ ಅಕ್ಕಿಂದ ಮಾಡ್‌ವ ರೊಟ್ಟಿ. ನೆನೆ ಹಾಕಿದ ಕೊಯ್ಸಲಕ್ಕಿಗೆ ಹಣ್ಣಾ ಬೆಳ್ತೆಕಿ ಸೇರ್‌ಸಿ, ಲಾಯ್ಕ್ ಕಡ್‌ದ್ ಕಲ್ಲ್‌ನ ಕಾವಲಿಲಿ ಹೊಯ್‌ದ್ ಕಾಸಿರೆ ಬೊಡ್ಡಿಟ್ಟ್ /ರೊಟ್ಟಿ ಆದೆ. ಅಕ್ಕಿ ಕಡೆಕನ ಅದ್‌ಕೆ ಹಣ್ಣಾ ಹುಗ್ಗೆ ಸೇರ್‌ಸಿರೆ ಹಿಟ್ಟ್ ಮೆತ್ತಂಗಾದೆ. ಅದರ 'ದೊಡವ' ಅಂತನು ಕರ್‌ದವೆ. ಹಣ್ಣಾ ಕಾಯಿ ಹೆರ್‌ದ್ ಹಾಕಿರೆ ಹಿಟ್ಟ್‌ಗೆ ಒಳ್ಳ ರುಚಿ ಬಂದದೆ. ಅಕ್ಕಿನ ಬದಲ್‌ಗೆ ರಾಗಿ, ಜೋಳ, ಸಜ್ಜಿಗೆ, ಗೋದಿ ಸೇರ್‌ಸಿರೆ ರಾಗಿ ರೊಟ್ಟಿ, ಜೋಳದ ರೊಟ್ಟಿ, ಸಜ್ಜಿಗೆ ರೊಟ್ಟಿ, ಗೋದಿರೊಟ್ಟಿ ಆದೆ. ದೀಪಾವಳಿ, ಬಿಸು (ವಿಷು ಸಂಕ್ರಮಣ)ನಂತ ವಿಸೇಸ ಹಬ್ಬದ ಹೊತ್ತುಲಿ ಸಾಮಾನ್ಯವಾಗಿ ಈ ರೊಟ್ಟಿ ಮಾಡ್‌ದುಲೆ. ರೊಟ್ಟಿ/ಬೊಡ್ಡಿಟ್ಟ್‌ಗೆ ಕಾಯಿ ಪೊಜ್ಜಿ, ನಿನ್ನೆನ ಸಾರ್, ತುಪ್ಪ, ಬೆಣ್ಣೆ, ಜೇನುತುಪ್ಪಲಿನು ಕಂತ್‌ಸಿ ತಿಂಬೊತ್ತಿದ್ದೊ. ಈ ಹಿಟ್ಟ್‌ಲಿನು ಸುಮಾರ್ ನಮೂನೆಗ ಒಳೊ. ಅದರ್‌ಲಿ ಮುಕ್ಯ ಆಗಿ

ಮತೆ ಮಹತ್ವ ಇರ್‌ವಂತ ಪೊಕ್ಕರೊಟ್ಟಿ' ಮಾಡ್‌ವೆ. ನೆಂಟ್‌ರ್‌ಗ ಮನೆಗೆ ಬಂದರೆ ಇದರ ಮಾಡ್‌ವೆ. ಬೆಂತೆಕ್ಕಿನ ಹುಡಿ ಮಾಡಿ ಬಿಸಿನೀರ್‌ಲಿ ಕಲ್ಸಿ ಬಾಳೆಲೆ ಉಂಡೆ ಮಾಡಿ ತಟ್ಟಿ, ಕಾವಲಿನ ಬದಲ್ ಮಡ್‌ಕೆನ ಓಡುಲಿ ಇಲ್ಲರೆ ಮೊಣ್ಣುನ ಕಾವಲಿಲಿ ಹಿಟ್ಟ್‌ನ ಬೇಸಿ ಅರ್‌ದ ಕಾದಂಗೆ ಅರೆಬೆಂದ ಹಿಟ್ಟ್‌ನ ಕೆಂಡಕೆ ಹಾಕುವೆ. ಆಗ ಅದ್ ಎರ್‌ಡೂ ಕಡೆಗೆ ಉಬ್ಬಿದೆ, ಕೋಳಿಮೊಟ್ಟೆನಂಗೆ ಉಬ್ಬಿದೆ. ಹಿಂಗೆ ಉಬ್ಬಿರೆ 'ಪೊಕ್ಕ ಬಂದುಟುತ ಹೇಳ್‌ವೆ. ಇದೊ ಕಾವಲಿ ರೊಟ್ಟಿಂದಳೂ ಹೆಚ್ಚಿಗೆ ರುಚಿ ಇದ್ದದೆ.

ಅಕ್ಕಿನ ಕಡೆಕನ ಹುಗ್ಗೆ ಸೇರ್‌ಸಿ ಅದರ ಮಡ್‌ಕೆನ ಓಡುಲಿ ಬೇಸಿರೆ 'ಓಡಿಟ್ಟು' ಆದೆ. ಇದಾ ಬಾರಿ ಮೆತ್ತಂಗೆ ಇದ್ದದೆ. ಒಂದ್ ಸೇರ್ ಅಕ್ಕಿಂದ ಸುಮಾರ್ 15–20 ರೊಟ್ಟಿನ ಮಾಡಿಕಾದೆ. ನಮ್ಮೂರುನ ಒಬ್ಬೊಬ್ಬ ಸರಾಸರಿ ನಾಲ್ಕ್ ರೊಟ್ಟಿ ತಿಂದವೆ. ರೊಟ್ಟಿ ತಿಂದ ದಿನ ನೀರ್ ಕುಡೆಕಾದು ಹೆಚ್ಚಿಂತೇಳ್‌ವ ನಂಬಿಕೆಂದಾಗಿ ಬೇಸಿಗೆಲಿ ರೊಟ್ಟಿ ಮಾಡ್‌ದು ಕಮ್ಮಿ. ಮಳ್ಗಾಲ ಶ್ರಮಜೀವಿಗಾದ ಗೌಡ್ರ್ ರೊಟ್ಟಿ ಹೆಚ್ಚಾಗಿ ತಿಂಬೊತ್ತಿದ್ದೊ. (ಪಿ.ಬಿ.)

**ರೊಟ್ಟಿ ಕಾವಲಿ :** ರೊಟ್ಟಿ ಮಾಡ್‌ವ ಕಾವಲಿಗೆ ರೊಟ್ಟಿ ಕಾವಲಿ ತ ಹೇಳ್‌ವೆ. ರೊಟ್ಟಿನ ಬೇರೆ ಬೇರೆ ರೀತಿಲಿ ಮಾಡ್‌ವೆ. ಓಡ್ ರೊಟ್ಟಿ, ಪೊಕ್ಕುಳ ರೊಟ್ಟಿ ತ ನಮೂನೆ ನಮೂನೆ ರೊಟ್ಟಿ ಉಟ್ಟು. ಆದರೆ ಇದ್ ಕಾವಲಿ ರೊಟ್ಟಿ, ಬಡ್ಡ್ ರೊಟ್ಟಿಂತಲೂ ಹೇಳುವ ಒಂದ್ ಬಗೆ ರೊಟ್ಟಿ. ಇದರ ಮಾಡ್‌ವ ಕಾವಲಿ ಬಳನ ಕಾವಲಿ. ಬಳ ತೇಲ್ರೆ ಕಾಡ್ಲಿ ಸಿಕ್ಕ್‌ವ ಒಂದ್ ಜಾತಿ ಕಲ್ಲ್. ಇದ್ ಬಾರೀ ಮೆತ್ತನೆ. ಇದರ ಗರಗಸಲಿ ಕೊಯ್ಯಕೆ ಸುಲಾಬಲಿ ಆದೆ. ಬೇಕಾದಸ್ಟ್ ಅಗಲಕ್ಕೆ, ಅಂದಾಜ್ ಒಂದ್ ಒಂದೂವರೆ ಅಂಗುಲದಸ್ಟ್ ದಪ್ಪಕ್ಕೆ ಕೊಯ್ದ್ ತಂದ್ ಉರೂಂಟುಗೆ ಕೆತ್ತಿ ಕಾವಲಿ ಮಾಡ್‌ವೆ. ಈ ಕಾವಲಿನ ಯಾರೂ ಮಾಡಿಕಾದೆ. ಕೊಯ್ಯಕೆ ಕೆತ್ತಿಕೆ ಹತ್ಯಾರ್ ಬೇಕಸ್ಟೆ, ಮತ್ತೆ ಹನೀಸ್ ಚಾತುರ್‌ಪು ಬೇಕು. ಈ ಕಾವಲಿ ರೊಟ್ಟಿ ಮಾಡಿಕೆ ಮಾತ್ರ. ಮತ್ತೆ ಇದೇ ಕಲ್ಲ್‌ಲಿಅಪ್ಪುದಿಟ್ಟ್ ಕಾವಲಿ ದೋಸೆ ಕಾವಲಿ ಸ ಮಾಡಿಕಾದೆ. ಆದರೆ ಎಣ್ಣೆ ಹಾಕೊಕು ಅಸ್ಟೇ. ಬಳನ ಕಾವಲಿಲಿ ಮಾಡ್ದ ರೊಟ್ಟಿ ತಿಂಬಕೆ ಬಾರೀ ಒಳ್ಳದ್. ಮಾಡಿಕೆ ಎಣ್ಣೆ ಬೇಡ. ಹಾಂಗಾಗಿ ಜೀವಕ್ಕೆ ಒಳ್ಳದ್. ದೋಸೆ, ಅಪ್ಪುದಿಟ್ಟ್ ಮಾಡಕಾರ್ ಎಣ್ಣೆ ಬೇಕು. ರೊಟ್ಟಿ ಮಾಡಿಕೆ ಮೊಣ್ಣ್‌ನಕಾವಲಿ ಸ ಉಟ್ಟು. ಆದರೆ ಬಳನ ಕಾವಲಿಲಿ ಮಾಡ್ದ ರೊಟ್ಟಿದ್ ರುಚಿ ಅದರ್‌ಲಿ ಇಲ್ಲೆ. ಈ ರೊಟ್ಟಿ ಕೋಳಿ ಸಾರ್‌ಗೆ ಹೇಳಿ ಮಾಡ್ದ್. ಇದ್ ಹೆಚ್ಚಾಗಿ ಸುಳ್ಯದ ಕಡೆ ಉಟ್ಟು. ಹಿಂದೆಲ್ಲಾ ಮನೆಗೆ ನೆಂಟ್ರ್ ಬಾಕನ ಕೋಳಿ ಗೈಪು ರೊಟ್ಟಿ ಮಾತ್ರೆ ಅದ್ ದೊಡ್ಡ ಸಮ್ಮನಂತ ಲೆಕ್ಕ. (ಪಿ.ಬಿ.)

**ಬೊಜ್ಜದೂಟ** : ಇದರ 'ಸಾವುನ ಊಟ' ತೇಳಿದೂ ಕರ್‌ದವೆ. ಮೊನ್‌ಸ ಒಬ್ಬ ಸತ್ತ್ 11ನೇ ದಿನಕೆ ಬಂದು–ಮಿತ್ರರಿಗೆ ಸತ್ತವನ ಮನೆವ್ ಹಾಕುವ ಊಟ ಇದ್.ಅರೆಬಾಸೆ ಪರಿಸರಲಿ 'ಪಾಯಸದೂಟ' ಇದ್ದ್ ವಿಸೇಸಾಗಿ ಕುಡು ಬಾಳೆಕಾಯಿ ಪಲ್ಯ ಮಾಡ್‌ವೆ ಈಚೆಗೆ ಮಾಸದೂಟನೆ ಜಾಸ್ತಿ ಆಗುಟು. ಸತ್ತ 17ನೇ ದಿನಕೆ ನಡಿವ ಕ್ರಿಯೆಗ ಮುಗ್‌ದ ಮೇಲೆ ಮಾಡ್‌ದ ಊಟ ಸಾಮಾನ್ಯ ಆಗಿ ಮಾಂಸಾರನೆ ಆಗಿದ್ ಅದರ್‌ಲಿ ಹೆಚ್ಚಾಗಿ ಹಂದಿ ಇಲ್ಲರೆ ಕೋಳಿ ಮಾಸ ಇದ್ದದೆ. ಸತ್ತವನ ಕ್ರಮಕೆ ನಿತ್ತಂವ 17 ದಿನಗಳ ಕಾಲ ರಾಗಿಲಿ ಮಾಡ್‌ದ ಊಟನೆ ಉಂಡದೆ. ಮೊದ್‌ವೆ ಊಟದ ಹಾಂಗೆನೆ ಬೊಜ್ಜದೂಟದ ತಯ್ಯಾರಿನು ಸಾಮೂಹಿಕ ಆಗಿ ನಡ್ದದೆ. ಮೊದ್‌ವೆ ಊಟದ ತಯಾರಿನ ಗೌಜಿ ಇಲ್ಲಿ ಇರ್‌ದುಲೆ. ಅದರೊಟಿಗೆ ಎದ್ದ್ ಕಾಂಬ ಒಂದ್ ದೊಡ್ಡ ವ್ಯತ್ಯಾಸಂತೇಳಿರೆ ಮೊದ್‌ವೆ ಊಟದ ತಯ್ಯಾರಿಗೆ ಬೇಕಾದ ಸಾಮಾನ್‌ಗಳ ಮೊದ್‌ವೆ ಮನೆವೆ ತಂದಿದ್ದವೆ. ಆದರೆ ಬೊಜ್ಜದೂಟಕೆ ಬಾವೊವು ಊಟದ ತಯ್ಯಾರಿಗೆ ಬೇಕಾದ ಸಾಮಾನ್‌ಗಳ ಅವೆ ತಂದ್ ಅಕ್ಕಿ, ಮೆಣ್‌ಸ್, ಹೊತ್ತು ತಂದಿದ್ದವೆ. ಇದರ 'ಸರ್‌ಕ್ ತಾದು' ತೇಳುವೆ. ಸರ್‌ಕ್‌ಲಿ ಕಾಯಿ, ಅರ್‌ಸಿನ ಇಂತೆಲ್ಲ ಸಾಮಾನ್‌ಗ ಇದ್ದದೆ. ಕುಟುಂಬದವು ಕೂಡಿಕಂಬೊದುನು ಬೊಜ್ಜದೂಟಲಿ ಕಡಿಮೆ ಇದ್ದ್ ನೆಂಟ್ರ್‌ಗಳೆ ಎಲ್ಲದರ್‌ನು ಮಾಡ್‌ದು ಕಂಡ್ ಬಂದದೆ. ಮೊನ್‌ಸನ ಬಗ್ಗೆ ತಿಳ್‌ದವು ಇದರ ಬಾರಿ ಹಳೇ ಕ್ರಮಂತ ಗುರ್‌ತುಸಿಯೊಳೊ. (ಪಿ.ಬಿ.)

**ಬೆಳ್ಳುಳ್ಳಿ ಮತ್ತೆ ನೀರುಳ್ಳಿ ಗಂಜಿ :** ಇದ್ ಬಾಣಂತಿಗಳ ಆಹಾರನು ಹೌದು, ಮೊದ್ದ್‌ನು ಹೌದು. ಎಳೆ ಪ್ರಾಯದ ಮಕ್ಕಳಿಗೂ ಇದರ ಕೊಟ್ಟವೆ. ಅಕ್ಕಿನ ಗಂಜಿ ಮಾಡಿ, ಅದ್‌ಕೆ ಬೆಳ್ಳುಳ್ಳಿ ಒಗ್ಗರಣೆ ಹಾಕಿರೆ ಬೆಳ್ಳುಳ್ಳಿ ಆದೆ. ನೀರುಳ್ಳಿ ಒಗ್ಗರಣೆ ಹಾಕಿರೆ ನೀರುಳ್ಳಿ ಗಂಜಿ ಆದೆ. ಒಟ್ಟಿಗೆ ಹಣ್ಣಿ ಓಲೆ ಬೆಲ್ಲ ಇಲ್ಲರೆ ಕಳ್ಳ್ ಸೇರ್‌ಸುವೆ. ಬಾಣಂತಿಗ ಕೂಸು ಹೆತ್ತ ಮುಂದೆನ 40 ದಿನಗಳವರೆಗೆ ಇದರ ತಿಂಬೊತ್ತಿದ್ದೊ. ಬೆಳ್ಳುಳ್ಳಿ ಮತ್ತೆ ನೀರುಳ್ಳಿನ ಬದಲ್ ಕೊತ್ತಂಬರಿ, ಸಾಸಿವೆ ಹಾಕಿರೆ ಕ್ರಮಲಿ ಕೊತ್ತಂಬರಿ ಗಂಜಿ ಮತ್ತೆ ಸಾಸಿವೆ ಗಂಜಿ ಆದೆ. (ಪಿ.ಬಿ.)

**ಮಕ್ಕಳ ಗಂಜಿ :** ಐದ್ ವರ್‌ಸಂದ ಕಡಿಮೆ ಪ್ರಾಯದ ಮಕ್ಕಳಿಗೆ ಕೊಡ್‌ವ ಆಹಾರ ಇದ್. ಬೆಳ್ತಿಗೆ ಅಕ್ಕಿನ ಕೆಂಪಾವಂಗೆ ಹೊರ್‌ದ ಮೇಲೆ ಲಾಯಿಕ್ ಹೊಡಿ ಮಾಡಿಕಣಕು. ಸುಗಂದಿ ದೈನ ಬೇರ್‌ನ (Periploca Indica) ಸೇರ್‌ಸಿ ಬಂದನಾರ್ (Mangosteem) ಮರದ ಚಿಗುರ್‌ನ ಹೊಡಿ ಮಾಡಿ, ಮಿಸ್ರ ಮಾಡಿ ದನದ ಹಾಲ್‌ಲಿ ಕೊದ್‌ಸಕು. ಗಸಿಗಸಿ ಆವಸ್ಟ್ ಹೊತ್ತ್ ಒಲೆಲಿ ಇಸಿ, ಅದಾಗಿ ಇಳಿಸಿ,ಚೆಣ್‌ಸಿ, ಸಣ್ಣ ಮಕ್ಕಳಿಗೆ ತಿಂಬಕೆ ಕೊಟ್ಟವೆ. ಇದರ 'ಮೊಣ್ಣಿತನು ಕರ್‌ದವೆ. (ಪಿ.ಬಿ.)

**ಮೂಡೆಟ್ಟ್ :** ಅಕ್ಕಿಗೆ ಹಲ್‌ಸ್‌ನ ಹಣ್ಣ್ ಸೇರ್‌ಸಿ ಕಡ್ದ್ 'ಮೂಡೆಟ್ಟ್ ಮಾಡ್‌ವೆ. ಸುಳ್ಯಲಿ ಹಲ್‌ಸ್‌ನ ಹಣ್ಣ್ ಜಾಸ್ತಿ ಸಿಕ್ಕುದರ್‌ಂದ ಹೆಚ್ಚಿನ ಗೌಡರ ಮನೆಲಿ ಮೂಡೆಟ್ಟ್ ಮಾಡ್‌ವೆ. ಇದರ್‌ಂದ ಅಕ್ಕಿನು ಒಳ್ದದೆ. ಹಣ್ಣಿ ಅಕ್ಕಿಗೆ ಹಲ್ಸ್‌ನ ಹಣ್ಣ್‌ನ ತೊಳೆನ ಸೇರ್‌ಸಿ ಕಡಿಯಕು. ಕಡೆಕನ ಒಂದಣ್ಣಿ ಎಳ್ಳು ಮತ್ತೆ ಕಾಯಿ ಹೂನ ಹಾಕಿರೆ ರುಚಿ ಬಂದದೆ. ಹಿಂಗೆ ಕಡ್ದ ಮೇಲೆ ತೆಕ್ಕ್‌ನ ಸೊಪ್ಪುಲಿ ಅದರ ಹಾಕಿ, ಮೊಡ್‌ಚಿ, ಪುಂಡಿ ಮಡ್ಕೆಲಿ ಬೇಸಕು. ಲಾಯ್ಕ್ ಬೆಂದ ಮೇಲೆ ಇಳ್‌ಗಿರೆ ಒಳ್ಳ ರುಚಿನ ತಿಂಡಿ ಆದೆ.





ಹಲ್‌ಸ್‌ನ ಹಣ್ಣ್‌ನ ಸೇರ್‌ಸದೆ ಬರೇ ಅಕ್ಕಿನ ಕಡ್‌ದ್ ಬಾಳೆ ಸೊಪ್ಪುಲಿ ಹಾಕಿ ಬೇಸಿರೆ 'ಎಲೆಅಪ್ಪ' ಮಾಡಿಕಾದೆ. ಹಲ್ಸ್‌ನ ಸೊಪ್ಪುಲಿ ಮಾಡ್‌ದ ಕಿಳ್ಳಿಲಿ ಹಾಕಿ ಬೇಸಿರೆ ಕೊಟ್ಟಿಗೆ ತ ಕರ್‌ದವೆ. ಬಟ್ಟಲ್‌ಲಿ ಹಾಕಿರೆ 'ಬಟ್ಲಿಟ್ಟು' ಆದೆ. ಇಲ್ಲೆಲ್ಲಾ ತಿಂಡಿನ ಆಕಾರಲಿ ಹೆಚ್ಚಿಕಮ್ಮಿ ಉಟ್ಟು ಹೊರ್‌ತ್ ರುಚಿಲಿ ಅಲ್ಲ. (ಪಿ.ಬಿ.)

**ಮಂತುಳಿ ತುಪ್ಪ :** ಮಂತುಳಿ ಮರಲಿ ಸಿಕ್ಕ್‌ವ ಮಂತುಳಿ ಕಾಯಿಂದ ಸಿಕ್ಕ್‌ವ ತುಪ್ಪಕೆ ಮಂತುಳಿ ತುಪ್ಪತ ಹೇಳ್‌ವೆ. ಇದರ ಅಡ್‌ಗೆಲಿ ಬಳ್‌ಸ್‌ವೆ. ಸುಳ್ಯ ಕಾಡ್‌ಗಳ್‌ಲಿ ಮಂತುಳಿ ಮರ ಹೆಚ್ಚಿಗೆ ಕಾಣಕ್. ಮಂತುಳಿ ಕಾಯಿನ ತಂದ್ ಹಣ್ಣ್ ಮಾಡಿ, ಒಡ್‌ದ್ ಅದರೊಳೆಗೆಂದ ಬಿತ್ತ್‌ನ ತೆಕ್ಕಣಕು. ಈ ಬಿತ್ತ್‌ನ ಮಡ್‌ಕೆ ಓಡುಲಿ ಕೆಂಪಾವಂಗೆ ಕಾಸಕು. ಇದರ ಕಲ್ಲ್‌ಲಿ ಲಾಯ್ಕ್ ಕುಟ್ಟಿ ಹೊಡಿ ಹೊಡಿಮಾಡಿಕಣಕು. ಈ ಹೊಡಿನ ಬನಲೆಗೆ ಹಾಕಿ ಲಾಯ್ಕ್ ಕೊದ್‌ಸಕು. ಆಗ ಬನಲೆನ ಮೇಲೆಗೆ ಎಣ್ಣೆ ಒಂದಿದೆ. ಇದರ ಬೇರೆ ಮಡ್ಕೆಗೆ ಅರ್‌ಪಿರೆ ತುಪ್ಪ ಸಿಕ್ಕಿದೆ. ಮಾಸ ಬೇಸಿಕನ ಈ ತುಪ್ಪ ಹೊಯ್ಕಂಡರೆ ಒಳ್ಳ ರುಚಿ ಇದ್ದದೆ. ಮಾಯಿಣ ಹಣ್ಣ್‌ನ ರಸನ ಒಣ್‌ಗ್‌ಸದೆ ಹಾಂಗೇ ಕೊದ್‌ಸಿ, ಬರ್‌ಣಿಲಿ ತುಂಬ್‌ಸಿಸಿರೆ 'ಮಾಯ್ನ ಹಣ್ಣ್‌ನ ಗುಳ್ಳ' ಆದೆ ಇದರ್‌ಲೂ ಬಾರಿ ಬೇಗ ಹುಳು ಆದರ್‌ಂದ ಹೆಣ್ಮಕ ಬಾರಿ ಎಚ್ಚರಂದ ಇದ್ದವೆ. (ಪಿ.ಬಿ.)

**ಮಾಂಬಳ :** ಮಾಯಿಣ ಹಣ್ಣ್ ಜಾಸ್ತಿ ಸಿಕ್ಕಿರೆ 'ಮಾಂಬಳ' ಮಾಡ್‌ವೆ. ಮಾಯಿಣ ಹಣ್ಣ್‌ನ ರಸ ಹಿಂಡಿ ತೆಗ್‌ದ್,ಅದ್‌ಕೆ ಹಿಙ್ಞ ಮೆಣ್ಸ್‌ನ ಹೊಡಿ ಸೇರ್‌ಸಿ, ಮೊಂದ್‌ರಿಲಿ ಹೊಯ್‌ದ್ ಲಾಯಿಕ್ ಒಣ್‌ಗುಸೊಕು. ಅದಾಗಿ ಬಾಳೆಲೆಲಿ ಸುತ್ತಿ ಒಲೆನ ಬುಡಲಿ ಬೆಚ್ಚಂಗೆ ಇಸುವೆ. ಉಂಬಕನ ಮಾಂಬಳ ತುಂಡುನ ಕಚ್ಚಿಕಂಡ್ ಉಂಡವೆ. ಗೈಪುಗೆ ಹುಳಿನ ಬದಲ್ ಇದರನು ಹಾಕಂಡವೆ. ಹನಿ ಎಚ್ಚರ ತಪ್ಪಿರೂ ಮಾಂಬಳಲಿ ಹುಳಗ ಆದೆ. (ಪಿ.ಬಿ.)



ಮಾಂಬಳ

**ಮೊಜ್ಜಿಗೆ ಮೆಣ್ಸ್ :** ಕಾಯಿ ಮೆಣ್ಸ್‌ನ ಅರ್ದ ಸಿಗ್‌ಳಿ, ಉಪ್ಪುಲಿ ಕಲ್‌ಸಿ ಮೊಜ್ಜಿಗೆಲಿ ನಾಕಾರ್ ದಿನ ನೆನೆ ಹಾಕುವೆ. ಅದಾಗಿ ಬಿಸ್ಲ್‌ಲಿ ಲಾಯ್ಕ್‌ಲಿ ಒಣ್ಗ್‌ಸಿರೆ ಮೊಜ್ಜಿಗೆ ಮೆಣ್ಸ್ ಆದೆ. ಅಗತ್ಯಕೆ ಬೇಕಾದಸ್ಟರ ತೆಗ್‌ದ್ ಕಾಯಿ ಎಣ್ಣೆಲಿ ಹೊರ್‌ದ್ ತಿಂಬೊತ್ತಿದ್ದೊ. ಗಂಜಿ ಉಂಬಕನ ಮೊಜ್ಜಿಗೆ ಮೆಣ್ಸ್ ಇದ್ದರೆ ಬಾರಿ ಲಾಯ್‌ಕ್ ಇದ್ದದೆ. (ಪಿ.ಬಿ.)

**ಮೊದ್‌ವೆ ಊಟ :** ನೂರಾರ್ ಜೆನ ಸೇರ್‌ವ ಜಂಬರಲಿ ಊಟದ ತಯ್ಯಾರಿನ ಗಂಡಸ್‌ರೇ ಮಾಡ್‌ವೆ. ಇದ್‌ಕಾಗಿ ಸಾಮಾನ್ಯ ಮನೆನ ಹಿಂದೆ ಪ್ರತ್ಯೇಕ ಆಗಿ ಚಪ್ಪರ ಹಾಕಿ, ಅಲ್ಲೆಂಗೆನೆ ತಾತ್ಕಾಲಿಕ ಒಲೆನ ಮಾಡ್‌ವೆ. ಊರುನ ಹೈದಂಗ ಪೂರ ಒಟ್ಟ್ ಸೇರಿ, ಒಬ್ಬ ಇಲ್ಲರ್ ಇಬ್ಬರ್ ಅನುಬವಿ ಹಿರಿಯರ ಹೇಳಿಕೊಡ್‌ವಾಂಗೆ ಒಟ್ಟ್ ಸೇರಿಕಂಡ್ ಊಟದ ತಯ್ಯಾರಿ ಮಾಡ್‌ವೆ. ಯಾರಾರ್ ಏನೇ ಕೆಲ್‌ಸ ಮಾಡಕಾರೆನು ಈ ಹಿರಿಯರ್ ಹೇಳ್‌ದಾಂಗೆ ಮಾಡ್‌ವೆ. ದೊಡ್ಡೊವು ಹೇಳ್‌ದಾಂಗೆ, ತರ್‌ಕಾರಿ ಕೊಯ್‌ದು, ಸೌದೆ ತಂದ್ ಒಲೆಗೆ ಕಿಚ್ಚಿ ಮೊಡ್‌ದು ಪಾತ್ರೆ ತೊಳಿದು, ಅಡಿ ಕಟ್ಟುದು, ನೀರ್ ತಾವವ್, ಕಾಯಿ ಹೆರಿಯವ್, ಕಡಿಯವ್ ಹಿಂಗೆ ಬೇರೆ ಬೇರೆ ತಂಡಗಳ ಮಾಡಿಕಂಡ್ ಅಡ್‌ಗೆ ಮಾಡ್‌ವೆ. ಒಲೆ ಕರೆಲಿ ನಿತ್ತ್, ಕಿಚ್ಚಿಗೆ ಮೈ ಒಡ್ಡಿ, ಬೆಗರಿಳ್‌ಸಿಕಂಟ್ ಪಾಯ್ಸ ಅಡಿ ಹಿಡೆದಂಗೆ ಅಂಡೆನ ಸರಿ ಮೊಗ್‌ಚವಂಗೆ ಹಿಙ್ಞ ಹೆಚ್ಚಿ ಮೊರ್‌ಯಾದಿ ಇದ್ದದೆ. ಮೊದ್‌ವೆನ ಹಿಂದೆನ ದಿನದ ಇರ್‌ಲ್ ನಡಿವ ಈ ಊಟದ ತಯಾರಿ ಗೌಡರ್‌ಲಿ ಇನ್ನೂ ಗಟ್ಟಿಲಿ ಒಳ್‌ದ ಸಾಮುದಾಯಿಕ, ಒಗ್ಗಟ್ಟ್ ಮತ್ತೆ ಕೌಟುಂಬಿಕ ಜೀವನ ಕ್ರಮನ ತೋರ್‌ಸಿದೆ. ಕುಟುಂಬದೊಳಗೆ ಏನಾರ್ ಸಣ್ಣ ಪುಟ್ಟ ಬಿನ್ನಾಬಿಪ್ರಾಯಗ ಇದ್ದರೆ ಅಡ್‌ಗೆನಂದ್ ಅದರ ಪರಿಹಾರ ಮಾಡಿಕಂಡವೆ. ಅಡ್‌ಗೆಲಿ ಅವ್ ಒಮ್ಮೆ ಸೇರಿಕಂಡೊಂತೇಳಿರೆ, ಮತ್ತೆ ಅಲ್ಲಿ ಯಾದೆ ಬಿನ್ನಾಬಿಪ್ರಾಯಗ ಇಲ್ಲೆಂತ ಅರ್‌ತ. ಹಾಂಗೆಂತೇಳಿ ಅಡ್‌ಗೆನ ದಿನನೂ ಜಗಳ ಜಟ್ಟಿ ಆದೂ ಇದ್ದದೆ. ಹೆಚ್ಚಾಗಿ ಹೈದಂಗಳೆ ಒಟ್ಟ್ ಸೇರ್‌ವ ಅಡ್‌ಗೆನ ಕೂಟಲಿ ಬೇಕಾದ್ ಬೇಡಾದ್ದ್ ತೇಳ್‌ವ ಬೇದ ಇಲ್ಲದೆ ಹರ್‌ಟೆ ನಡ್‌ದದೆ. ಊರ್‌ನ ಆಗು ಹೋಗುಗ ನಡ್‌ದ್ ಹೋದ ಸಂಗತಿ, ಪುರಾಣ ಅದ್ ಇದ್‌ಂತ ಚರ್‌ಚೆಗೆ ಆದೆ. ಮೊದ್‌ವೆ ಆಗದ ಹುಡ್‌ಗರ ಮೊದ್‌ವೆ ಆಗ್‌ಂತ ಗಾಳಿ ಹಾಕುದು ಕೇಳಿಕೆ ಬಾರಿ ಗಮ್ಮತ್ ಇದ್ದದೆ. ಇಲ್ಲಿ ಊರ್‌ನ ಕೆಲ ಮನೆಗಳ ಒಳಗೆನ ಗುಟ್ಟುಗನು ಬಯಲಾದೆ. ಈ ಕೆಲವ್ ಕಾರಣಂದಾಗಿ ಇಂತ ಕಡೆಗಳ್‌ಲಿ ಹೆಣ್ಮಕ ಅಸ್ಟಾಗಿ ಬಾದುಲೆ. ಗೌಡ್‌ರ ಮೌಕಿಕ ರಸಿಕತೆನ ತಾಣ ಆಗಿದ್ ಈ ಮೊದ್‌ವೆ ಅಡ್‌ಗೆ ಕೂಡ ರಂಗೇರಿದ್ದದೆ.

ಸುಳ್ಯಕಡೆನ ಮೊದ್‌ವೆ ಊಟಲಿ ಎರ್‌ಡ್ ಬಗೆ– ಒಂದ್ ಸ್ವೀಂ ಊಟ ಇನ್ನೊಂದ್ ಕಾರ ಊಟ. ಪಾಯಸ, ಪಲ್ಯ, ಹುಗ್ಗೆ, ಸಾರ್, ಸಾಂಬಾರ್, ಹಪ್ಪಳ ಮತ್ತೆ ಉಪ್ಪನಕಾಯಿ ಸ್ವೀಂ ಊಟಲಿ ಸಾಮಾನ್ಯ ಆಗಿ ಕಂಡ್ ಬಂದದೆ. ಶ್ರೀಮಂತರ್‌ಲಿ ಎರಡ್–ಮೂರ್

ಬಗೆನ ಪಾಯ್ಸನು ಮಾಡ್‌ವೆ. ಲಾಡ್, ಹೋಳಿಗೆ, ಜಿಲೇಬಿ ಇಂತ ಸ್ವೀಂ ತಿಂಡಿಗ ಇತ್ತೀಚೆಗೆ ಎಲ್ಲಲ್ಲು ಇದ್ದದೆ. ವಿಸೇಸ ಆಗಿ ಕೊಡಗ್‌ನ ಭಾಗಮಂಡಲ ಪರಿಸರಲಿ ಗೌಡರ್ ಸೇರ್‌ದಂಗೆ ಒಳ್‌ದವೆಲ್ಲ 'ಕಾರ ಊಟ' ಮಾಡ್‌ವೆ. ಇದ್ ಮಾಸದೂಟಕೆ ಇನ್ನೊಂದ್ ಹೆಸರ್. ಹಂದಿ ಮಾಸ ಇಲ್ಲರೆ ಕೋಳಿ ಮಾಸ ಇದ್ದೇ ಇದ್ದದೆ. ಮೀನ್ ಬಾರಿ ಕಡಿಮೆ. ಈಚೆನ ದಿನಗಳ್‌ಲಿ ಮೊದ್‌ವೆ ಊಟಲಿ ಮಾಸದ ಬೇಕಾ ಬೇಡನಂತ ಚರ್‌ಚೆಗ ನಡೆತುಟ್ಟು. ಮೊದ್‌ವೆಗ ಬರಿ ಕುಟುಂಬದ ಜಂಬರ ಆಗಾ ಒಳಿಯದೆ, ಇದೊಂದ್ ಸಾಮಾಜಿಕ ಕಾರ್‌ಯಕ್ರಮ ಆಗಿ ಪರಿವರ್‌ತನೆ ಹೊಂದಿಕಂಡಿರಿಕನ ಈ ಬಗೆನ ಚರ್‌ಚೆಗ ಅನಿವಾರ್‌ಯನೋಂತ ಆದೆ. (ಪಿ.ಬಿ.)

**ಸಾಂತಣಿ :** ಹಲ್‌ಸ್‌ನ ಬಿತ್ತ್ ಉಪ್ಪು ನೀರ್‌ಲಿ ಬೇಸಿದ ಮೇಲೆ ಸುಮಾರ್ 15 ದಿನ ಬಿಸ್‌ಲ್‌ಲಿ ಒಣ್‌ಂಗ್‌ಸಿರೆ ಅದ್ ಗಟ್ಟಿ ಆದೆ. ಇದರ ವರ್‌ಸ ಇಡಿ ಇಸಿಕಂಬಕಾದೆ. ಹೆಚ್ಚಿ ಮಳೆ ಬೀಳ್‌ವ ದಿನಗಳ್‌ಲಿ ಬಾಯಿ ಗಟ್ಟಿ ಇರೊವು ಇದರ ತಿಂಬೊತ್ತಿದ್ದೊ. ಸಾಂತಾಣಿ ಬಾರಿ ಗಟ್ಟಿ ಇರ್‌ದರ್‌ಂದ 'ಸಾಂತಣಿ ತಿಂಬಕಾಗದವ ಮತ್ತೆಂತಾ ಗಂಡ್‌ಯಾ (ಸಾಂತಣಿಯನ್ನು ತಿನ್ನಲಾಗದವ ಅದೆಂತಾ ಗಂಡುಸು) ತೇಳ್‌ವ ಗಾದೆ ಮಾತ್‌ನು ಉಟ್ಟು. (ಪಿ.ಬಿ.)

**ಸೆಡೆಹಿಟ್ಟ್ :** ಅಕ್ಕಿಹಿಟ್ಟ್ ನ ಹುಗ್ಗೆನೊಟ್ಟಿಗೆ ಕಲ್ಸಿ, ಚಿಪ್ಪಿ ಸೆಡೆನ ಹೊಮೆತ್ತೊರೆಗೆನ ಪುಡೆಗೆ ಮೆತ್ತಿ ಕೊದಿವ ಗಂಜಿ ಒಳಗೆ ಸೆಡೆನ ಇಸೊಕು. ಅದ್ ಬೆಂದ ಮೇಲೆ ತೆಗ್ದ್ ತಿಂಬೊತ್ತಿದ್ದೊ.ಇದರ ಸೆಡೆಹಿಟ್ಟ್‌ತ ಹೇಳ್‌ವೆ. ಇದರ ಹೆಚ್ಚಾಗಿ ಸಣ್ಣಮಕ್ಕ ಇರ್‌ವ ಮನೆಲಿ ಮಾಡ್‌ವೆ ಇದ್ ಸರ್ರಕೆ ಒಳ್ಳೆದ್. ತಿಂಬಕೆನು ಸುಲಬ, ಜೀರ್ಣಕು ಒಳ್ಳೆದ್ ತ ಇದರ ಮಕ್ಕಳಿಗೆ ಕೊಟ್ಟವೆ. (ಪಿ.ಬಿ.)

**ಸೇಮಿಗೆ ಹಿಟ್ಸ್ :** ಇದರ 'ಇಡ್ಮಣೆ ಇಟ್ಸ್'ತ ಕರ್‌ದವೆ. ನೆನೆ ಹಾಕಿದ ಬೆಳ್ತಿಗೆ ಅಕ್ಕಿನ ಲಾಯ್ಕ್ ಕಡ್ದ್ ಬನಲೆಲಿ ಮಾಜ್‌ಸೊಕು. ಗಸಿಗಸಿಯಾಕಂಡ್ ಬಂದಾಂಗೆ ಇಳ್‌ಗಿ ಒಂದ್ ಹಿಡಿನಸ್ಟ್ ಹಿಟ್ಟ್‌ನ ಸೇಮಿಗೆ ಮಣೆನ ಒರ್‌ಲ್‌ಗೆ ಹಾಕಿ ಒತ್ತಿರೆ, ನೂಲುನಂಗೆ ಸೇಮಿಗೆ ಹಿಟ್ಟ್ ಸಿಕ್ಕಿದೆ. ಬಾಳೆಹಣ್ಣ್‌ಂದ ಮಾಡ್ದ ರಸಾಯನ ಇದರೊಟಿಗೆ ಲಾಯ್ಕ್. ನೆಂಟ್ರಗಳಿಗೆ ಮಾತ್ರ ಸೇಮಿಗೆ ಹಿಟ್ಟ್‌ನ ಸಮ್ಮಾನ ಮಾಡ್‌ವೆ. ಸೇಮಿಗೆಗೆ ಕೋಳಿ ಸಾರ್, ಕುರಿ ಸಾರ್ ಲಾಯ್ಕಾದೆ.

**ಹಪ್ಪಳ :** ಹಲ್‌ಸ್‌ನ ತೋಳೆ ಮತ್ತೆ ಗೆಣ್ಸ್‌ಲಿ ಪ್ರತ್ಯೇಕ ಆಗಿ ಹಪ್ಪಳನ ತಯಾರಿ ಮಾಡ್‌ವೆ. ಹೆಚ್ಚಿನ ಗೌಡರ ಮನೆಲಿ ಈ ಹಪ್ಪಳಗ ಇದ್ದವೆ. ಲಾಯಿಕ್ ಬೆಳ್‌ದ ಹಲ್‌ಸ್‌ನ ಕಾಯಿನ ಕೊಯ್‌ದ್ ಅದರ ತೋಳೆನ ತೆಕ್ಕಣಕು. ಪುಂಡಿ ಮಡ್‌ಕೆಲಿ ಅದರ ಲಾಯ್‌ಕ್ ಬೇಸಕು.. ಚಿಟ್ಕೆ ಉಪ್ಪ್ ಮತ್ತೆ ಹಚ್ಚು ಮೆಣ್‌ಸ್ ಸೇರ್‌ಸಿ, ಕಡ್ಕಲ್ಲ್ ಗೆ ಹಾಕಿ ಒನ್‌ಕೆಲಿ ಮಿದಿಯಕು. ಆಕನ ಅದ್ ಲಾಯಿಕ್‌ನ ಅಂಟ್ ಅಂಟ್ ಗಟ್ಟಿ ಬಂದನಂಗಾದೆ. ಅದಾಗಿ ಅದರ ಸಣ್ಣ ಸಣ್ಣ ಉಂಡೆ ಮಾಡಿ, ಎರ್‌ಡ್ ಮಣೆಗಳ ನೊಡುಲಿ ಇಸಿ ಒತ್ತಿಕನ ಮೂರಂರ್‌ದ ನಾಕ್ ಇಂಚ್ ಅಗಲದ ಉರುಂಟುನ ಹಪ್ಪಳ ಆದೆ. ಮೂರ್ ದಿನ ಇದರ ಬಿಸ್‌ಲ್‌ಲಿ ಒಣ್‌ಗ್‌ಸಿ ತೆಗೆಕು, ಅಟ್ಟಲಿ ಬೆಚ್ಚಂಗೆ ಇಸಿರೆ ವರ್‌ಸ ಇಡಿ ಬೇಕಾಕನ ತಿಂಬಕೆ ಆದೆ. ಇದರ ಕೆಂಡಕೆ ಇಲ್ಲರೆ ಕೊದಿವ ಎಣ್ಣೆಗೆ ಹಾಕಿರೆ ಕಾದ್ ಕೆಂಪಾಗಿ ರುಚಿ ರುಚಿ ತಿಂಡಿ ಆದೆ. ಇದರ ತಿಂಬಕನ ಒಟ್ಟಿಗೆ ಕಾಯಿಹೋಳು ಅಗಿಯಕೆ ಇದ್ದರೆ ಒಳ್ಳ ರುಚಿ ಇದ್ದದೆ. ಹಪ್ಪಳ ಮಳ್‌ಗಾಲ ತಿಂಬೊದೆ ಜಾಸ್ತಿ. ಹಲ್‌ಸ್‌ನ ತೋಳೆನ ಬದಲ್ ಗೆಣ್ಸ್, ಬಾಳೆಕಾಯಿ, ಅಕ್ಕಿನ ಹಪ್ಪಳನು ಮಾಡಿಕಾದೆ. ಅಂದರೂ ಹಲ್ಸ್‌ನ ಹಪ್ಪಳನೆ ಜಾಸ್ತಿ ಎಲ್ಲವ್‌ಕೆ ಇಸ್ಪ ಹಪ್ಪಳ. (ಕೆ.ಕೆ.; ಪಿ.ಬಿ.)

**ಹಪ್ಪಳದ ಮಣೆ :** ಹಪ್ಪಳ ಮಾಡ್‌ವ ಮಣೆನ ಒಂದ್ ಒಂದೂವರೆ ಅಂಗುಲದಸ್ಟ್ ದಪ್ಪ ಇರ್‌ವ ಒಳ್ಳೆ ಜಾತಿ ಹಲಗೆಲಿ ಮಾಡ್‌ವೆ. ಹಲಗೆನ ಉರುಂಟು ಕೆತ್ತಿ ಒಂದ್ ಕರೆಲಿ ಬಿಜಾಗ್ರಿ ಹಾಕಿ ಕಾಗಡೆ ಮೇಗಡೆ ಮಾಡಿಕೆ ಆವ ಹಾಂಗೆ ಮಾಡಿಕಾಂಕು. ಈ ಮಣೆನ ಮರದ ಆಚಾರಿಗ ಮಾಡ್‌ವೆ. ಹಪ್ಪಳ ಮಾಡಿಕೆ ಸೀ ಗೆಣ್ಸ್, ಮರ ಗೆಣ್ಸ್, ಅಲ್ಲರ್ ಹಲ್ಸ್‌ನ್‌ಕಾಯಿ ಬೇಕ್. ಅದರ ಬೇಸಿ ಒಸಿ ಇಂಗ್ ಉಪ್ಪು ಸೇರ್ಸಿಕಾಂಕು ಮತ್ತೆ ಅದರ ಕಡ್ಕಲ್ಲ್‌ಲಿ ಗುದ್ದಿ ಉಂಡೆ ಮಾಡಿಕಾಂಕು. ಮೇಲೆನ ಹಲಗೆನ ಎತ್ತಿ ಬಾಡ್ಸಿದ ಬಾಳೆಲೆ ಕೀಂತ್‌ಗೆ ಎಣ್ಣೆ ಉಜ್ಜಿ ಅಡಿಲಿರುವ ಮಣೆಲಿ ಇಸಿ ಅದರ ಮೇಲೆ ಉಂಡೆ ಇಸಿಕಾಂಕು. ಉಂಡೆ ಮೇಲೆ ಇನ್ನೊಂದು ಬಾಡ್ಸಿದ ಎಲೆ ಕೀಂತ್ ಇಸಿ ಅದರ ಮೇಲೆ ಮೇಲೆನ ಹಲಗೆನ ಒತ್ತೊಕು. ಆಗ ಅದರ ಬಾರಕ್ಕೆ ಉಂಡೆ ಉರುಟಾಗಿ ತೆಳ್ಳಂಗೆ ಆದೆ. ಅದರ ಮತ್ತೆ ಒಳುಂಗುಸೊಕು. ಹಪ್ಪಳ ಮಾಡಿಕೆ ಇದುವೇ ಆಕುಂತ ಇಲ್ಲೆ. ಕುದ್ರುವ ಎರ್‌ಡ್ ಮಣೆ ಇದ್ದರೆ ಸಾಕ್, ಹಪ್ಪಳ ಮಾಡಕ್. (ಎಂ.ಜಿ.ಕೆ.)



ಹಪ್ಪಳ ಒತ್ತುವ ಮಣೆ

**ಜೆನಪದ ಅಡ್‌ಗೆ ಸೊತ್ತ್‌ಗ : ಅಡಿಗೆರ :** ಗಂಜಿ ತೆಳಿ ಬಾಗ್ಸೊ ಪಾತ್ರೆ ಅಡಿಗೆರ. ಅನ್ನ ಮಾಡೊಕುಂತಾರೆ ಗಂಜಿ ತೆಳಿನ ಬಾಗ್ಸೊಕು. ಅಡಿಗೆರ ನೋಡಿಕೆ ಹಳ್ಳಿ ಉರುಟಾಗಿ ಗೆಯ್ಪುನ ಅಳೆಗೆನ ಹಾಂಗೇ ಉಟ್ಟು. ಅಡಿಗೆರನ ನೆಲಲಿ ಕುತ್ತ ಇಸಿಕೆ ಆವ ಹಾಂಗೆ ಮೊಣ್ಣಂದಲೇ ಸುತ್ತೊಳು ಮಾಡ್ದ ಒಂದ್ ಕಂಟ ಉಟ್ಟು. ಹಾಂಗಾಗಿ ನೆಲಲಿ ಇಸಿಕೆ ಸೂಂಪೆ ಬೇಕುಂತಿಲ್ಲೆ. ಅಡಿಗೆರ ಪದಲಿ ಅಡಿ+ಕರಂತ ಎರಡ್ ಪದಗ ಉಟ್ಟು. ಅದ್ ಅಡಿನ ಕರನೂ ಆಗಿರ್‌ದು. ಗಂಜಿ ಬಾಗ್ಸಿ ಇಸ್‌ವ ಅಡಿನ ಕರ. ಅಡಿನಕರ>ಅಡಿಗರ>ಅಡಿಗೆರ ಆಗಿರ್‌ವ ಸಾದ್ಯತೆ ಉಟ್ಟು. ಗಂಜಿ ಬೆಂದಾಕನ ಮಡ್ಕೆನ ಇಳ್ಗ್‌ಸ್‌ವೆ. ಇಳ್ಗ್‌ಸಿ ಗಂಜಿ ಮಡ್ಕೆ ಮೇಲೆ ಚಿಬುಳೆ ಮತ್ತೆ ಮರ್‌ಚಟೆನ ಮೇಲೆ ಮೇಲೆ ಇಸ್‌ವೆ. ಮಡ್ಕೆನ ಮೇಲೆನ ಕಂಟಲಿ ಕೈಂಕುತ್ತಲಿ ಹಾಂಗೇ ಹಿಡ್ಕಂಡ್ ಅಡಿಗೆರದ ಬಾಯಿಗೆ ಮಡ್ಕೆನ ಬಾಯಿ ಬಾವ ಹಾಂಗೇ ಮೆಲ್ಲಂಗೆ ಹಳ್ಳಿಹ್ಹೆರೆ ಮಾಡಿ ಇಸಿ ಬಾಗ್ಸ್‌ವೆ ಹಾಂಗೇ ಬಾಗ್ಸಿ ಮಡ್ಕೆನ ಬಾಯಿ ಅಡಿಗೆರಲಿ ಸರಿ ಕುದ್ರ್‌ಸೊಕು. ಅಡಿಗೆರನ ಮೇಲೆ ಸರಿ ಕುದ್ದಾಕನ ಮಡ್ಕೆನ ಬುಟ್ಟ್‌ಬುಡೊಕು. ತೆಳಿ ಚಿಬುಳೆನ ಒಟ್ಟೆಲಿ ಇಳ್ಕಂಡ್ ಅಡಿಗೆರಲಿ ತುಂಬಿಕೊಂಡದೆ. ಚಿಬುಳೆನ ತಾಂಗ್ಸಿಕಾಂಕೆ ಮರ್‌ಚಟೆ ಇರ್‌ದು. ತೆಳಿ ಪೂರಾ ಇಳ್ದ್ ಹೋದ ಮೇಲೆ ಮಡ್ಕೆನ ಸರ್‌ತ ಮಾಡಿ ಇಸ್‌ವೆ.

ಮನೆನ ಒಳಗೆ ಹಳ್ಳಿಜನ ಇದ್ದರೆ ಮಡ್ಕೆಲಿ ಗಂಜಿ ಮಾಡಿ ಅಡಿಗೆರಕೆ ಬಾಗ್ಸ್‌ವೆ. ದೊಡ್ಡ ಜಂಬರ ಇದ್ದರೆ ದೊಡ್ಡ ಕುಡ್ಪುಗೆ ಬೆತ್ತದ ಕುಕ್ಕೆಗೆನೂ ಸನಾ ಗಂಜಿ ತೋಂಡುವೆ. ಮೂಲ್ಯರ್ ಕುಲಕಸುಬ್ ಅಗಿ ಮೊಣ್ಣನ ಮಡ್ಕೆಗಳ ಮಾಡ್ವೆ. (ಎಂ.ಜಿ.ಕೆ)

**ಅಳೆಗೆ :** ಗೆಯ್ಪು ಮಾಡ್ವ ಮಣ್ಣಿನ ಮಡ್ಕೆಗೆ ಅಳೆಗೆಂತ ಹೇಳ್ವೆ. ಇದರ ಅವೆ ಮೊಣ್ಣಂದ ಮಾಡ್ವೆ. ಬಾಯಿ ಅಗಲ ಆಗಿ ಸುತ್ತ ದಪ್ಪದ ಕಂಟ ಉಟ್ಟು. ಹೆಚ್ಚ್ ಎತ್ತರ ಇರ್‌ದುಲೆ. ಇದರ್‌ಲೂ ಸಣ್ಣದ್ ದೊಡ್ಡದ್ ಅಳೆಗೆಗ ಒಳೊ. ಗೆಯ್ಪು ಮಾಡಿಕೆ ಇಂತಾ ಪಾತ್ರೆ ಆಕು. ಮನೆಗಳ್‌ಲಿ ನೆಟ್ಟಿಕಾಯಿ ಗೆಯ್ಪು, ಮೀನ್ ಮಾಸ ಗೆಯ್ಪು ಮಾಡಿಕೆಂತ ಬೇರೆ ಬೇರೆ ಅಳೆಗೆಗ ಬೇಕ್. ಮೂಲ್ಯರ್ ಅಳೆಗೆನ ಮಾಡ್ವೆ. ಅಳೆಗೆಗೆ ಒಮ್ಮೊಮ್ಮೆ ಅಡಿ ಹಿಡೆದು ಉಟ್ಟು. ಅದರ ಕೆರ್‌ಸಿ ತೊಳ್ದವೆ. ಹೀಂಗೆ ಕೆರ್‌ಸಿಕನ ನಾಯಿಗ ತಿಂಬಕೆ ಸಿಕ್ಕಿದೆ ತ ಹಕ್ಕಲೆ ಬಂದವೆ. ಅದ್ಕೆ 'ಕರೆಕನ ಬಾರದ ನಾಯಿ ಕೆರೆಕನ ಬಾತ್', 'ಸೆಲ್ಗೆ ಕೊಟ್ಟರೆ ನಾಯಿ ಅಳೆಗೆ ನೆಕ್ಕುದು', ಅಳೆಗೆ ಒಡ್ದರೆ ಕಕ್ಕೆಗೆ ಲಾಬ'ತ ಗಾದೆಗ ಉಟ್ಟು. (ಎಂ.ಜಿ.ಕೆ.)

**ಉರ್‌ಳಿ :** ಉರ್‌ಳಿಂತೇಳಿರೆ ಅಳೆಗೆನ ಆಕಾರಲಿ ಇರ್‌ವ ಹಿತ್ತಾಳೆ ಪಾತ್ರೆ. ಇದ್ ದಪ್ಪ ಇದ್ದ್ ಬಾರ ಉಟ್ಟು. ಇದರ ಮಿಸಾನ್‌ಲಿ ಹಿತ್ತಾಳೆ ಲೋಹಲಿ ಮಾಡ್‌ವೆ. ಇದರ್‌ಲಿ ಎಣ್ಣೆ ತಿಂಡಿ ಕಾಸಿಕೆ ಲಾಯ್ಕ್ ಆದೆ. ಹಪ್ಪಳ ಕಾಸಿಕೆನೂ ಆದೆ. ಸತ್ಯನಾರಾಯಣ ಪೂಜೆ ಮಾಡಿಕನ ಸಪಾದಬಕ್ಸಯ ಮಾಡಿಕೆ, ದೇವರ್‌ಗೆ ನೈವೇದ್ಯ ಮತ್ತೆ ಕಲ್ತಪ್ಪ ಮಾಡಿಕೆ ಬೇಕಾದೆ. ತುಪ್ಪ ಕಾಸಿಕೆನೂ ಬಳ್ಸುವೆ. ಎಣ್ಣೆ ಕಾಯಕೆ ಹಳ್ಳಿಹೊತ್ತಾದರೂ ಒಮ್ಮೆ ಕಾದ ಎಣ್ಣೆ ಪಕ್ಕ ತಣ್ಣಂಗೆ ಆದುಲೆ. (ಎಂ.ಜಿ.ಕೆ.)

**ಕಡ್ಕಲ್ :** ಹಿಟ್ಟ್ ಮಾಡಿಕೆ, ಅಕ್ಕಿ, ರಾಗಿ ಕಡೆಕೆ ಮತ್ತೆ ಗೆಯ್ಪುಗೆ ಮೆಣ್ಸ್ ಕಡೆಕೆ ಇರ್‌ವ ಕಲ್ಲ್. ಕಡೆವ ಕಲ್ಲ್ ಆಗಿರ್‌ದರ್‌ಂದ ಕಡ್ಕಲ್ ತ ಹೆಸ್ರ್ ಬಂದಿರ್‌ದು. ಒಳ್ಳೆ ಕಲ್ಲ್‌ನ ನೋಡಿಕನ್ ಇದರ ಮಾಡೊಕು. ತೇಳಿರೆ ಕಡ್ಕಲ್ಲ್‌ಲಿ ಸೆರೆ ಮೊನಿ ಇರಿಕೆ ಬೊತ್ತು. ಕಲ್ಲ್‌ನ ಅರ್‌ದ ಮೊಟ್ಟೆನ ಹಾಂಗೆ ಕೆತ್ತಿಕಾಂಕು. ಕಲ್ಲ್‌ನ ಅಡಿ ಪುಡೆ ನೆಲಲಿ ನಿಲ್ಲಿಕಾವ ಹಾಂಗೆ ಚಪ್ಪಟೆ ಮಾಡ್‌ವೆ. ಮೇಲ್ಪುಡೆಲಿ ನಡೂಗೆ ಗುಂಡಿ ಇರ್‌ವ ಹಾಂಗೆ ಕೆತ್ತಿ ತೆಗ್ದವೆ. ಗುಂಡಿ ಹಕ್ಕಲೆ ಹಕ್ಕಲೆ ಒಂದ್ ಗೇಣ್ ಉಟ್ಟು. ಕಲ್ಲ್‌ನ ಮೇಲ್ಪುಡೆಲಿ ಅಂದಾಜ್ ಮೂರ್ ಬೆರಳ್‌ನ ದಪ್ಪಕ್ಕೆ ಬುಟ್ಟು ಗುಂಡಿನ ಸುತ್ತಲೂ ಮೂರ್ ಬೆರಳ್‌ಸ್ಟ್ ಕೆತ್ತಿ ತೆಗ್ದವೆ. ಕಡೆವ ಸಾಮಾನ್ ಇಸಿಕೆ ಇದ್ ಬೇಕಾದೆ. ಹೀಂಗೆ ಕಡ್ಕಲ್ ತಯಾರ್ ಮಾಡ್‌ವೆ. ಕಡ್ಕಲ್ಲ್‌ಲಿ ಕಡೆಕಾರ್ ಗುಂಡು ಕಲ್ಲ್ ಬೇಕು. ಗುಂಡುಕಲ್ಲ್ ನೊಡುಲಿ ಹಳ್ಳಿದಪ್ಪ ಇದ್ದ್ ಕಡೆ ಕೊಡಿ ಸಪೂರ ಉಟ್ಟು. ಇದರ ಕೊಡಿಲಿ ಉರುಂಟು ಇದ್ದ್ ಅದ್ ಕಡ್ಕಲ್‌ನ ಗುಂಡಿಲಿ ಹಿಡೆವ ಹಾಂಗೇ ಇರೋಕು. ಅದರ ಇನ್ನೊಂದು ಕಡೆ ಅಂಗೈಲಿ ಹಿಡೆಕಾವಸ್ಟ್ ಅಗಲ ಜಾಗ ಉಟ್ಟು. ತುಂಬ ದೊಡ್ಡ ಗುಂಡುಕಲ್ಲ್ ಆದರೆ ಅದ್ಕೆ ಮೇಲೆಂದ ಒಟ್ಟೆ ಮಾಡಿ ಸಣ್ಣದೊಂದು ಗೂಟ ಹಾಕ್‌ವೆ. ತುಳುಬಾಸೆಲಿ ಇದರ 'ಕಡೆಪಿಕಲ್ಲ್ ಕಂಜಿ'ತ ಹೇಳ್‌ವೆ. ಕೆಲವರ್‌ಲಿ ಕಡ್ಕಲ್ಲ್‌ನ ಮುಚ್ಚಿಕೆ ಬೆತ್ತದ ಕುಕ್ಕೆ ಉಟ್ಟು. ಕಡ್ಕಲ್ಲ್‌ನ ಗುಂಡಿ ಒಳಗೆ ಸುತ್ತೋಳು ಸಪೂರದ ಉಳಿಲಿ ಕುಟ್ಟಿ ಕುಟ್ಟಿ ಸಣ್ಣ ಸಣ್ಣ ಒಟ್ಟೆ ಮಾಡ್‌ವೆ. ಹಾಂಗೇ ಗುಂಡು ಕಲ್ಲ್‌ನ ಕೊಡಿಲಿ ಸುತ್ತೋಳೂ ಒಟ್ಟೆ ಮಾಡ್‌ವೆ. ಹೀಂಗೆ ಮಾಡ್ರೆ ಕಡೆವ ಸಾಮಾನ್ ಬೇಗ ಸಣ್ಣ ಆದೆ. ಇದರ ಕಲ್ಲ್ ಕುಟ್ಟಿಗರ್ ಮಾಡ್‌ವೆ. ಕಡ್ಕಲ್ಲ್‌ಲಿ ನಾನಾ ನಮೂನೆಲಿ ಸಣ್ಣದ್ ದೊಡ್ಡದ್ ಉಟ್ಟು. ಕಡ್ಕಲ್ ತುಂಬ ಎತ್ತರ ಇದ್ದರೆ ಕುದ್ರಿಕೆ ಎತ್ತರದ ಮಣೆ ಇಸಿಕಾಂಕು. ಕಡ್ಕಲ್ಲ್‌ಲಿ ಕಡ್ದ್ ಕಡ್ದ್ ಗುಂಡುಕಲ್ಲ್‌ನ ಕೊಡಿ ಮತ್ತೆ ಕಡ್ಕಲ್ಲ್‌ನ ಗುಂಡಿ ಸಮ್ದದೆ. ಆಗ ಅದ್ಕೆ ಕಲ್ಲ್‌ಕುಟ್ಟಿಗರ್ ಉಳಿಹಾಕ್‌ವೆ. ಕಲ್ಲಪ್ಪ ಗುಂಡಪ್ಪ ಸೇರ್‌ರೆ ಮೆಣ್ಸಪ್ಪ ಚಟ್ನಿ ತ ಒಂದ್ ಗಾದೆ ಉಟ್ಟು. (ಎಂ.ಜಿ.ಕೆ.)


ಕಡ್ಕಲ್

**ಕಾವಂಗ :** ದೊಡ್ಡ ದೊಡ್ಡ ಜಂಬರಲಿ ಆರ್‌ಸಿದ ಗೆಯ್ಪು, ಸಾರ್, ಪಾಯಸ, ಎಲ್ಲ ಇಕ್ಕಿಕೆ ಬೇಕಾದ ಪಾತ್ರೆ ಕಾವಂಗ. ಸುಮಾರ್ ನೂರು ನೂರೈವತ್ತ್ ವರ್‌ಸಂದಲೂ ಕೆಲವು ಮನೆಲಿ ಇರ್‌ವಂತ ಸೊತ್ತು. ತಾಮ್ರಂದ ಮಾಡ್ದ ಪಾತ್ರೆ. ಇದರ ತಾಮ್ರದ ಕೆಲಸ ಮಾಡ್‌ವ ಸಮುದಾಯದವು ಮಾಡ್‌ವೆ. ಮೊದುವೆ, ಬೊಜ್ಜ ಮತ್ತೆ ತುಂಬ ಜನ ಸೆರುವ ಜಂಬರಲಿ ಗೆಯ್ಪು, ಪಾಯ್ಸ ಆರ್‌ಸಿದ ಗೆಯ್ಪು ಇಂತದರೆಲ್ಲ ಇಕ್ಕಿಕೆ ಕಾವಂಗ ಬೇಕಾದೆ. ತಾಮ್ರದ ಪಾತ್ರೆಗೆ ಕಿಲುಂಬು ಬಾದುಟ್ಟು. ಕಿಲುಂಬು ತೇಳಿರೆ ಅದರ ಒಳಗೆ ಹಚ್ಚ ಪಚ್ಚೆ ಬಣ್ಣಲಿ ಒಂದ್ ನಮೂನೆ ಪಾಂಬಾಜಿನ ಹಾಂಗೆ ಬಂದದೆ. ಅದ್ ಹೊಟ್ಟೆಗೆ ಹೋದರೆ ತಿಂದೊವುಕೆ ಕಕ್ಕಿಕೆ ಬಂದದೆ. ಹಾಂಗಾಗಿ ಇದರ್‌ಲಿ ಅಡಿಗೆನ ಹಾಕಿಕೆ ಮುಂದೆ ಸರಿ ತೊಳಿಯೊಂಕಾದೆ. ಕೆಲವೊಮ್ಮೆ ಎಸ್ಟ್ ತೊಳ್ದರೂ ಅದ್ ಹೋದುಲೆ. ಅದ್ಕೆ ಬೇಕಾಗಿ ಅದರ ಒಳಗೆ ಕಲಾಯಿ ಹಾಕುವ ಕ್ರಮ ಉಟ್ಟು. ಕಲಾಯಿಂತ ಹೇಳಿರೆ ತವರ ತ ಹೇಳುವ ಒಂದ್ ಸೊತ್ತುನ ಕರ್‌ಗಿಸಿ ಅದರ ಒಳಗೆ ಪೂಜುವೆ. ಆಗ ಅದರ್‌ಲಿ ಕಿಲುಂಬು ಬಾದುಲೆ. ಆದರೂ ಉಪಯೋಗಿಸಿದ ಮೇಲೆ ಪೊರ್‌ಲು ತೊಳ್ದ್ ನೀರ್ ಪಸೆ ತೆಗ್ದ್ ಕಂಕಣಿ ಹಾಕಿ ಇಸುವೆ. (ಎಂ.ಜಿ.ಕೆ.)

**ಕುದುಪೆ ಮತ್ತೆ ಮೊಂತ್ :** ಕುದುಪೆಂತ ಹೇಳಿರೆ ಮೋಣ್ಣ್‌ನ ಸಣ್ಣ ಮಡ್ಕೆ. ಹಾಲಿಗೆ ಹೆಪ್ಪು ಹಾಕಿ ಇಸ್‌ವ ಸಣ್ಣ ಮೋಣ್ಣ್‌ನ ಮಡ್ಕೆಗೆ ಕುದುಪೆ ತ ಹೇಳ್‌ವೆ. ಕನ್ನಡಲಿ ಕುದುಪೆಗೆ ಸಣ್ಣ ಮಡ್ಕೆ, ಮೊಂತ್‌ಗೆ ಕಡಗೋಲುಂತ ಹೇಳ್‌ವೆ. ಮೊಜ್ಜಿಗೆ ಕಡೆಕೆ ಒಂದ್ ಮರದ ಕೋಲುನ ಮೊಂತ್ ಉಟ್ಟು. ಮಡ್ಕೆ ಮಾಡ್‌ವ ಮೂಲ್ಯ ಸಮುದಾಯದವು ಕುದುಪೆ ಮಾಡ್‌ವೆ. ಮೊಂತ್‌ನ ಕಡೆ ದಪ್ಪ ಇದ್ದ್ ಅಡಿಲಿ ಚಪ್ಪಟೆ ಆಗಿದ್ದದೆ.

ಅದರ ಪುಡೆ ಸುತ್ತಲೂ ಮೊಂತ್ ಹುಳಿನ ಆಕಾರದಂಗೆ ಹಾಂಗೇ ಕೆತ್ತುದರಿಂದ ಇದ್ಕೆ ಮೊಂತ್ ತ ಹೆಸರ್ ಬಂದಿರುದು. ಮರದ ಆಚಾರಿಗ ಮೊಂತ್ ಮಾಡ್‌ವೆ. ಹಾಲ್ ಕಾಯ್ಸಿ ತಣ್ಣಂಗಾದ ಮೇಲೆ ಅದ್ಕೆ ಹನಿ ಹುಳಿ ಮೊಜ್ಜಿಗೆನ ಸೇರ್‌ಸ್‌ರೆ ಮಾರ್‌ನೆ ದಿನ ಅದ್ ಮೊಸ್ರ ಆದೆ. ಮೊಸ್ರ್‌ನ ಮೊಜ್ಜಿಗೆ ಮಾಡಕರ್ ಅದರ ಮೊಂತ್‌ಲಿ ಕಡೆಕು. ಎರಡ್ ಅಂಗೈಲಿ ಮೊಂತ್‌ನ ಹಿಡಿನ್ ಹಿಡ್ಕನ್ ಅದರ ಕಡೆನ ಮೊಸ್ರ್‌ಗೆ ಕಂತ್‌ಸಿ ಹಿಂದೆ ಮುಂದೆ ತಿರ್‌ಗಿಸೊಕು. ಆಗ ಮೊಂತ್ ಮೊಸ್ರ್‌ನ ಒಳಗೆ ತಿರ್‌ಗಿ ತಿರ್‌ಗಿ ಮೊಸ್ರ ನೀರಾಗಿ ಮೊಜ್ಜಿಗೆ ಆದೆ. ಇದ್ ಸ ಬಾರೀ ಪಿರಾಕ್‌ಂದಲೇ ಇದ್ದದ್. (ಎಂ.ಜಿ.ಕೆ.)

**ಕೈ ಮರ್‍ಗಿಲ್ :** ಕೈ ಮರ್‍ಗಿಲ್ ಮರಂದ ಮಾಡ್ದ ಪಾತ್ರೆ. ಇದ್‌ಕ್ಕೆ ನಾರ್ ಮರನ ಉಪಯೋಗ್ಸಿರೆ ಲಾಯ್ಕ್ ಆದೆ. ಗಟ್ಟಿ ಮರ ಆದರೆ ಬೇಗ ಒಡ್ದ್ ಹೋವ ಅಪಾಯ ಉಟ್ಟು. ಇದರ್‌ಲಿ ದೊಡ್ಡದ್ ಸಣ್ಣದ್‌ಂತ ಉಟ್ಟು. ಇದರ ಕೆತ್ತಿಕೆ ಬಾಜಿನ ಉಪಯೋಗ್‌ಸಿ ಹಿಂದೆನವು ಮಾಡ್ತಿದ್ದೊ. ಸಬೆಲಿ ಹುಗ್ಗೆ ಇಕ್ಕಿಕೆ ಇದ್ ಉಪಯೋಗ ಆಗ್ತಿತ್ತ್. ಕೋಳಿ ಕೊಂದ್ ಮಾಸ



ಕೈ ಮರ್‍ಗಿಲ್

ಮಾಡಿ ಇಸ್‌ಕೆ ಕೂಡಾ ಆದೆ. ದೊಡ್ಡ ಜಂಬರದ ದಿನ ನಟ್ಟಿಕಾಯಿ ಕೊಯ್ದ್ ಹಾಕಿಕೂ ಇದ್ ಬೇಕಾದ್ದೆ. ದೊಡ್ಡ ಕೂಡು ಕುಟುಂಬದ ಮನೆಲಿ ತುಂಬಾ ಕೈ ಮರ್‍ಗಿಲ್ ಇರ್‌ತಿತ್ತ್. ಆಗ ಮನೆಲಿ ತಾಮ್ರ, ಹಿತ್ತಾಳೆ ಪಾತ್ರೆಗ ಬಾರಿ ಕಮ್ಮಿ ಇತ್ತ್. ಸುಬಕಾರ್‌ಯ, ಅಸುಬಕಾರ್‌ಯ ಎಲ್ಲಾ ಕಡೆ ಉಪಯೋಗ ಆತಿತ್ತ್. (ಕು.ಶಿ.)

**ಗಂಜಿ ಅರ್‌ಪುವ ಮಡಕೆ :** ಗಂಜಿ ಬೇಸಿದ ಮೇಲೆ ಹುಗ್ಗೆ ಮಾಡಕರ್ ಗಂಜಿ ತೆಳಿನ ಅರ್‌ಪುವ ಮಡ್ಕೆ. ಅರ್‌ಪುದುಂತೇಳಿರೆ ತೆಳಿ ಬೇರೆ ಹುಗ್ಗೆ ಬೇರೆ ಮಾಡ್ದು. ಇದ್ ನೋಡಿಕೆ ಗಂಜಿ ಮಡ್ಕೆನ ಹಾಂಗೇ ಉಟ್ಟು. ಆದರೆ ಈ ಮಡ್ಕೆನ ಅಡಿಮೆಯ್ಯಿಲಿ ಒಟ್ಟೊಟ್ಟೆ ಉಟ್ಟು. ಗಂಜಿ ಬೆಂದ ಮೇಲೆ ಗಂಜಿ ಮಡ್ಕೆನ ಈ ಮಡ್ಕೆನ ಬಾಯಿಗೆ ಕಂಕಣಿ ಹಾಕೊಕು. ಆಗ ಗಂಜಿ ತೆಳಿ ಸಮೇತ ಅಡಿಲಿದ್ದ ಮಡ್ಕೆಗೆ ಬಿದ್ದದೆ. ಮಡ್ಕೆಲಿರುವ ಒಟ್ಟೆಲಿ ತೆಳಿ ಇಳ್ದ್ ಹೋದೆ. ಹುಗ್ಗೆ ಅಲ್ಲೇ ಒಳ್ದದೆ. ಇದ್ ಗಂಜಿ ತೋಂಡಿಕೆ ಆವ ಒಂದ್ ಪೊದ್ದತಿ. ಗಂಜಿಂದ ಹುಗ್ಗೆ ಮಾಡಿಕೆ ಚಿಬುಳೆ ಮತ್ತೆ ಮರ್‌ಚಟೆ ಇದ್ದರೆ ಅಡಿಗೆರಲಿ ಬಾಗ್ಸಿಕೆ ಆದೆ. ಕುಡ್ಪು ಇದ್ದರೆ ತೋಂಡಿಕೆನೂ ಆದೆಂ. ಇದ್ ಇದ್ದರೆ ಚಿಬುಳೆ ಬೇಡ, ಮರ್‌ಚಟೆ ಬೇಡ, ಕುಡ್ಪುನೂ ಬೇಡ. ಇದರ ಮಡ್ಕೆ ಮಾಡ್‌ವ ಮೂಲ್ಯ ಸಮುದಾಯದವು ಮಾಡ್‌ವೆ. (ಎಂ.ಜಿ.ಕೆ.)

**ಗಂಜಿ ಮಡ್ಕೆ :** ಗಂಜಿ ಬೇಸುವ ಮಡ್ಕೆಗೆ ಗಂಜಿ ಮಡ್ಕೆ ತ ಹೇಳ್‌ವೆ. ಗಂಜಿ ಮಡ್ಕೆ ಉರುಂಟಾಗಿದ್ದದೆ. (ನೋಡಿ : 1.ಅಡಿಗೆರ, 2.ಅಳೆಗೆ) ಇದರ್‌ಲಿ ಬೇರೆ ಬೇರೆ ಅಳ್ತೆನ ಮಡ್ಕೆಗ ಇದ್ದವೆ. ಅರ್‌ದ ಸೇರ್, ಒಂದ್ ಸೇರ್, ಎರ್ಡ್ ಸೇರ್, ನಾಲ್ಕ್ ಸೇರ್ ಅಕ್ಕಿ ಬೇಯುವ ಅಳತೆನ ಮಡ್ಕೆಗ ಉಟ್ಟು. ಅಕ್ಕಿಂದ ಗಂಜಿ ಮಾಡೊಕರ್ ಈ ಪಾತ್ರೆ ಬೇಕು. ಯಾವ ಪಾತ್ರೆಲೂ ಅಕ್ಕಿ ಬೆಂದದೆ. ಹಾಂಗೆಂತ ಅಳೆಗೆಲಿ, ಅಡಿಗೆರಲಿ ಗಂಜಿ ಬೇಸುದುಲೆ. ಗಂಜಿ ಬೇಸಿಕೆಂತಲೇ ಇಂತಾ ಮಡ್ಕೆ ಬೇಕು. ಇದರ ಮೂಲ್ಯ ಸಮುದಾಯದವು ಮಡ್ಕೆ ಮಾಡ್‌ವೆ. 'ಮನೆ ಎದ್ರ್ ಮಡ್ಕೆ ಕಂಕ್ಣಿ ಹಾಕಿಸಿಕೆ ಬೊತ್ತ್‌ಂತ ಹೇಳ್‌ವೆ, ಮಡ್ಕೆಗೆ ಕಲ್ಲ್ ತಾಂಗಿರೂ ಕಲ್ಲಿಗೆ ಮಡ್ಕೆ ತಾಂಗಿರೂ ಮಡ್ಕೆ ಒಡ್ದದೆ, 'ಕುಂಬಾರಂಗೆ ವರ್‌ಸ ದೊಣ್ಣೆಗೆ ನಿಮಿಸ' ತ ಗಾದೆ ಉಟ್ಟು. (ಎಂ.ಜಿ.ಕೆ.)





**ಗುಜಾಣಿಕೆ :** ಗುಜಾಣಿಕೆಂತ ಹೇಳಿರೆ ಎಣ್ಣೆ ಹಾಕಿಸುವ ಪಾತ್ರೆ. ಪಂಚಲೋಹಂದ ಮಾಡ್ದ ಒಂದ್ ಸೊತ್ತ್. ಹಿಂದೇನ ಕಾಲಲಿ ಎಣ್ಣೆ ಹಾಕಿಸ್ವ ಪಾತ್ರೆ. ಕಾಯೆಣ್ಣೆ ಅಲ್ಲರ್ ಎಳ್ಳೆಣ್ಣೆ ಇದರ್‌ಲಿ ಹಾಕಿಸಿರೆ ಎಸ್ಟ್ ಕಾಲಕ್ಕೂ ಹಾಳಾದುಲೆ. ಇದ್ಕೆ ಬೀಗ ಹಾಕಿಸಿಕೆನೂ ಆದೆ. ಎಣ್ಣೆ ತುಂಬುಸಿ ಎತ್ತರಲಿ ಕೋಸಿ ಇಸುಕೆನೂ ಆದೆ. ಹಿಂದೇನವು ಇದರ್‌ಲಿ ಎಣ್ಣೆ ತುಂಬುಸಿ ಇಸತಿದ್ದೊ. ಎಸ್ಟ್ ಕಾಲಕ್ಕೂ ಇದರ್‌ಲಿ ಇರ್‌ವ ಎಣ್ಣೆ ಹಾಳಾದುಲೆ. ಇದ್ ಸುಮಾರ್ ನೂರೈವತ್ತ್ ವರ್‌ಸ ಹಿಂದೇನ ಸೊತ್ತು. (ಎಂ.ಜಿ.ಕೆ.)


ಗುಜಾಣಿಕೆ

**ಚಿಪ್ಪಿ ಸೆಡೆ :** ಅನ್ನ, ಸಾರ್, ಗೈಪು, ಪಾಯ್ಸ ಹಿಂಗೆ ಉಂಬಕೆ ಇಕ್ಕಿಕೆ ಬೇಕಾದ ಸೊತ್ತು ಸೆಡೆ. ಚಿಪ್ಪಿ ಸೆಡೆ ಮಾಡಕರ್ ಕಾಯಿಚಿಪ್ಪಿ ಬೇಕು. ಕಾಯಿ ಚಿಪ್ಪಿನ ಪೊರ್‌ಲುಲಿ ಕರ್‌ಕಿ ಲಾಯ್ಕ್ ಮಾಡಿಕಾಂಕು. ಹೊರಮೆಯ್ಯಿ ಒಳಮೆಯ್ಯಿ ಕರ್‌ಕಿ ಸಪಾಯಿ ಮಾಡಿರೆ ನೈಸ್ ಆದೆ. ಅದರ ಬಾಯಿನ ಸ ಕಲ್ಲೆ ಉಜ್ಜಿ ಸಪಾಯಿ ಮಾಡಿಕಾಂಕು. ಸೆಡೆ ಯಾವ್ದರ ಇಕ್ಕಿಕೆ ಇರ್‌ದು ತ ನೋಡಿಕನ್ ಚಿಪ್ಪಿನ ತಕಾಂಕು. ಹಾಂಗೆಂತೇಳ್‌ರೆ ಹುಗ್ಗಿ ಇಕ್ಕಿಕಾರೆ ದೊಡ್ಡದ್ ಇರೊಕು. ಗೈಪುಗಾದರೆ ಹಚ್ಚಾ ಸಣ್ಣದಿರೊಕು. ಆರ್‌ಸಿದ ಗೈಪು ಇಕ್ಕಿಕೆ ಇನ್ನೂ ಸಣ್ಣದಿರೊಕು. ಸೆಡೆ ಯಾದೆ ಮಾಡಕಾರೆನು ಗಂಡ್ ಚಿಪ್ಪಿನೇ ಆಕು. ಸೆಡೆ ಹಿಡಿಯಕೆ ಕೈ(ಕಾವು) ಬೇಕು. ಅದ್ಕೆ ಬೆದ್ರ್ ಸಲ್ಕೆ ಬೇಕು. ಬೆಳ್ದ ಅಲ್ಲರ್ ಕಡೆಕಾಲ್ ಬೆದ್ರ್ ಆದರೆ ಒಳ್ಳೆದ್. ಚಿಪ್ಪಿ ನೋಡಿಕನ್ ಕಾವು ತಯಾರ್ ಮಾಡೊಕು. ತೇಳ್ರೆ ದೊಡ್ಡ ಸೆಡೆಗೆ ಹಚ್ಚದಪ್ಪದ ಕಾವು ಸಣ್ಣ ಸೆಡೆಗೆ ಸಣ್ಣ ಕಾವು. ಬೆದ್ರ್‌ನಬೇಕಾದ ಹಾಂಗೆ ಕೀಸಿ ಎರಡ್ ಗೇಣ್‌ನಸ್ಟ್ ಉದ್ದಕ್ಕೆ ತುಂಡ್ ಮಾಡಿಕಣಕು. ಕಾವುನ ಕೊಡಿ ಸಪೂರ ಮಾಡಿಕಂಡ್ ತೆಳ್ಳಂಗೆ ಮಾಡಿಕಾಂಕು. ಚಿಪ್ಪಿನ ನಡುಲಿ ಕಾವುನ ಕೊಡಿ ಹುಕ್ಕ್ ಹೋವ ಹಾಂಗೆ ಎರಡ್ ಒಟ್ಟೆ ಮಾಡಿಕಾಂಕು. ಒಟ್ಟೆ ಕಾವುನ ಕೊಡಿ ಹುಕ್ಕ್ ಹೋವಸ್ಟೇ ಇರೊಕು. ಕಾವುನ ಹುಗ್ಸಿ ಆದ ಮೇಲೆ ಅದರ ಕೊಡಿನ ಹಚ್ಚಸೀಳಿ ಅದರೊಳಗೆ ಅಸ್ಟೇ ತೆಳ್ಳಂಗೆ ಮಾಡ್ದ ಬೆದ್ರ್‌ನ ಹುಗ್ಗ್‌ಸಿ ಹೊಡ್ದರೆ ಕಾವು ಜಾರ್‌ದುಲೆ. ಕೊಡಿಲಿ ಹೊರಗೆ ಬಂದ ಬೆದ್ರ್‌ನತುಂಡು ಮಾಡಿ ಸಪಾಯಿ ಮಾಡಿಕಂಡ್ರೆ ಸೆಡೆ ತಯಾರ್ ಆದಂಗೇ. ಹುಗ್ಗಿ ಇಕ್ಕಿಕೆ, ಗೈಪು ಇಕ್ಕಿಕೆ, ಪೊಜ್ಜಿ ಇಕ್ಕಿಕೆ, ಪಾಯ್ಸ ಇಕ್ಕಿಕೆ ಸೆಡೆ ಬೇಕಾದೆ. ಸೆಡೆನ ಮಾಡ್ದು ದೊಡ್ಡ ಕೆಲಸ ಅಲ್ಲ. ಯಾರೂ ಮಾಡಕ್ ಆದರೂ ಊರ್‌ಲಿ ಕೆಲವು ಜನ ಬಾರೀ ಲಾಯ್ಕ್ ಸೆಡೆ ಮಾಡೊವು ಇದ್ದವೆ. ಹುಗ್ಗಿ ತೋಡಿಕೆಂತಲೇ ಕೆಲವು ಜನ ದೊಡ್ಡ ಚಿಪ್ಪಿ ತಕಂಡ್ ಅದರ್‌ಲಿ ಸಣ್ಣ ಸಣ್ಣ ಕಣ್ಣ್ ಮಾಡಿ ಸೆಡೆ ಮಾಡ್‌ವೆ. ಉಪ್ಪನೆ ಕಾಯಿ ಇಕ್ಕಿಕೆ ಸಣ್ಣ ಚಿಪ್ಪಿಲಿ ಸಣ್ಣಸೆಡೆ ಸ ಮಾಡ್‌ವೆ. ಹಿಂದೇನ ಕಾಲಲಿ ಸಣ್ಣ ಸಣ್ಣ ಮಕ್ಕಳಿಗೆ ಕಣೇರ್ ಮೊದ್ದು ಅರ್‌ದ್ ಕುಡಿಸಿಕೆ ಮಕ್ಕಳ ಬಾಯಿಗೆ ಸೆಡೆ ಕಾವುನ ಇಸಿ ಕುಡ್‌ಸತಿದ್ದೊ. (ಎಂ.ಜಿ.ಕೆ.)

**ಚಿಬುಳಿ :** ಗಂಜಿ ಬಾಗ್‌ಸಿಕೆ, ಪಾತ್ರೆಗೆ ಮುಚ್ಚಿಸಿಕೆ, ರೊಟ್ಟಿ, ದೋಸೆ ಹಾಕಿ ಇಸಿಕೆ ಉಪಯೋಗ ಆವ ಒಂದ್ ಸಾಮಾನ್ ಚಿಬುಳಿ. ಬೆತ್ತದ ಬೊಳ್ಳಿಲಿ ಇದರ ಮಾಡ್‌ವೆ. ಬೆತ್ತನ ಪೊರ್‌ಲು ಒಳ್‌ಂಗ್ಸೋಕ್. ಒಳ್‌ಂಗಿದ ಬೆತ್ತನ ಸಪೂರಕ್ಕೆ ಸೀಳಿ ಕಣಕು. ಕೀಸಿ ತೆಳ್ಳಂಗೆ ಮಾಡಿಕಣೊಕು. ಚಿಬುಳಿ ಮಾಡಿಕಾಕನ ನೀರ್‌ಲಿ ಪದ್‌ನಿಸಿಕಣಕು. ಆಗ ಮೆಡೆಕೆ ಲಾಯ್ಕಾದೆ. ಕಾಡ್‌ಲಿ ಇರ್‌ವ ಸಪೂರದ ಕಾಡ್ ಬೊಳ್ಳಿಲಿ – ಹಾಲ್‌ಬೊಳ್ಳಿ, ಹರ್‌ಕ್ಬೊಳ್ಳಿಲಿ ನೂ ಇದರ ಮಾಡ್‌ವೆ. ಅಜಲರ್, ಕೊರಗರ್, ಮಲೆ ಕುಡಿಯರ್ ಇದರ ಮಾಡ್ತಿದ್ದೊ. ಬೇರೆ ಸಮುದಾಯದವು ಸ ಮಾಡ್‌ವೆ. ಗಂಜಿ ಬಾಗ್‌ಸಿಕೆ ಇದರ ಬಳ್ಸುವೆ. ಮಡ್ಕೆಲಿ ಗಂಜಿ ಬೆಂದ ಮೇಲೆ ಹುಗ್ಗಿ ಮಾಡಕರ್ ಗಂಜಿ ತೆಳಿನ ಬಾಗ್ಸೊಕು. ಅದ್ಕೆ ಮಡ್ಕೆನ ಬಾಯಿಗೆ ಚಿಬುಳಿ ಇಸಿ ಅದರ ಮೇಲೆ ಮರ್‌ಚಟೆನ ಇಸಿ ಅಡಿಗೆರದ ಮೇಲೆ ಇಲ್ಲರೆ ಬೇರೆ ಮಡ್ಕೆನ ಮೇಲೆ ಬೊಗ್ಗಿಸಿ ಅದರ ಬಾಯಿಗೆ


ಚಿಬುಳಿ

ಬೀಳದ ಹಾಂಗೆ ಹಚ್ಚಟರೆ ಮಾಡಿ ಇಸುವೆ. ತೆಳಿ ಎಲ್ಲ ಇಳ್ದ್ ಹೋದ ಮೇಲೆ ಮಡ್ಕೆನ ಸರ್‌ತ ಮಾಡಿ ಇಸುವೆ. ಇದರ್‌ಲಿ ಸಣ್ಣದ್ ದೊಡ್ಡದ್ ಉಟ್ಟು. ಕೆಲವ್ ಚಿಬುಳಿಗಳ ಹಿಡ್ಕಂಬಕೆ ಕೈ ನೂ ಉಟ್ಟು. (ಎಂ.ಜಿ.ಕೆ.)

**ನೆಲು :** ತಿಂಬ ಸೊತ್ತುನ ಎತ್ತರಲಿ ನೇತಾಡಿಸಿಕೆ ಜಾಕ್ರತೆಲಿ ಇರ್‌ವ ಒಂದ್ ಸೊತ್ತ್. ನೇತಾಡಿಸಿ ಇಸುದಕ್ಕೆ ಈ ಹೆಸ್ರ್ ಬಂದಿರ್‌ದು. ಇದ್ ದಕ್ಷಿಣಕನ್ನಡ, ಉಡುಪಿ, ಕೊಡಗ್ ಜಿಲ್ಲೆಲೆ ಮತ್ತೆ ಸಕ್ಲೇಸ್‌ಪುರ ಕಡೆ ಕಾಂಬಕೆ ಸಿಕ್ಕಿದೆ. ಇದ್ ಬೊಳ್ಳಿಲಿ ಮಾಡ್‌ವ ಒಂದ್ ಸೊತ್ತ್. ಮಾದ್ರಿ



ನೆಲು

ಬೊಳ್ಳಿ, ಹಾಲ್ ಬೊಳ್ಳಿ, ಚೊಪ್ಪುನ ಬೊಳ್ಳಿ ಮತ್ತೆ ಹುರಿ ಮಾಡ್ದ ನಾರ್‌ಕಣೆ ಬೊಳ್ಳಿಲಿ ಮಾಡಿಕಾದೆ. ಪಾತ್ರೆ ಇಸುವಲ್ಲಿ ಹಣ್ಣಿಬೊಳ್ಳಿನ ನೇಯ್ದ್ ಪಾತ್ರೆ ನಿಲ್ಲುವ ಹಾಂಗೆ ಮಾಡೊಕು. ಇದ್ ಒಸಿ ಗೊತ್ತಿದ್ದೊವು ಮಾಡಿಕೆ ಆದೆ. ಮನೆಲಿ ಹಾಲ್, ಮೊಸ್ರು, ಬೆಣ್ಣೆ ಇದ್ದರೆ ಕೊತ್ತಿ ಬಾಯಿ ಹಾಕುದು ಕಂಡಿತ. ಅದ್ಕೆ ಎತ್ತರಲಿ ಇಸಕಾದೆ – ಅದೂ ಕೊತ್ತಿಗೆ ಹಾರಿಕೆ ಆಗದಸ್ಟ್ ಎತ್ತರಲಿ. ಮೀನ್ ಮಾಸನ ಗೆಯ್ಪು ಇದ್ದರೂ ಕೊತ್ತಿಗ ಬುಡ್ದುಲೆ. ಆಗ ಇದರೆಲ್ಲ ನೆಲುಲಿ ಇಸಿಕೆ ಆದೆ. (ಎಂ.ಜಿ.ಕೆ.)

ಇನ್ನೊಂದ್‌ಕಡೆ, ನೆಲುನ ನೊಜ ಹುಲ್ಲಿಂದ ಮೊಡ್ದ್ ಮಾಡ್‌ವೆ. ನೊಜಂದ ಮಾಡ್ದ ನೆಲು ಗಟ್ಟಿ ಜಾಸ್ತಿ, ನೋಡಿಕೂ ಲಾಯ್ಕ್. ನೊಜ ಹುಲ್ಲ್‌ನತಂದ್, ನೆರಲ್ಲಿ ಒಣಗಿಸೊಕು. ಅದ್ ಹದಾ ಒಣಂಗಿದ ಮೇಲೆ ದೊಡ್ಡ ಸಿಂಪೆ ಮಾಡ್ದಂಗೆ ಒಂದ್ ಸಿಂಪೆ ಮಾಡಿವೆ. ಮತ್ತೆ ಅದರ ಸಣ್ಣ ಸಣ್ಣ ಮೂರ್ ನಾಕ್ ಸಿಂಪೆ ಮಾಡಿವೆ. ನೊಜದ್ದೇ ಹಗ್ಗ ಮಾಡಿ ದೊಡ್ಡ ಸಿಂಪೆನ ಮೇಲೆ ಕಟ್ಟಿ ಅದರ ಕೆಳಗೆ ನಾಕ್ ಸಿಂಪೆಗಳ ಹಗ್ಗಲಿ ಕೋಸಿವೆ. ಅದರ ಕಾಲಿರುವ ನೆಲು ತ ಕೆರ್‌ದವೆ. ಕೆಲವ್ ಒಂಟಿ ಸಿಂಪೆದ್ ನೆಲುನೂ ಉಟ್ಟು. ನೊಜದ ನೆಲುಗಿಂತಲೂ ಬೂತಾಳೆ(ರಕ್ಕಸ ಪಟ್ಟೆ) ನಾರ್‌ಂದ ಮಾಡ್‌ದ ನೆಲುದ್ ಬಾಳಿಕೆ ಜಾಸ್ತಿ.

ಬೂತಾಳೆ ಪಟ್ಟೆದ್ ನಾರ್ ತೆಗ್ದ್ ಬೊಳ್ಳಿ ಮಾಡಿ ಮಾಡ್‌ವ ನೆಲುಗೆ ಕೆಲ್ಸ ಜಾಸ್ತಿ. ನೆಲುಲಿ ಮಾಸ ಗೈಪುದ್ ಚೆಟ್ಟಿ ಇಲ್ಲರೆ ಮೊಸ್ರ್, ಹಾಲ್, ತುಪ್ಪ, ಬೆಣ್ಣೆ ನೆಲ್ಲ ಇಸ್‌ವೆ. ಕೊತ್ತಿಗ, ತುಡುಗುವ ಮಕ್ಕಂದ ದೂರ ಇಸಿಕೆ ಸಾಯ ಆದೆ. (ಬಿ.ಜೆ.)

**ಪುಂಡಿ ಮಡಕೆ :** ಪುಂಡಿ ಬೇಸುವ ಮಡ್ಕೆನ ಪುಂಡಿ ಮಡ್ಕೆಂತ ಹೇಳ್‌ವೆ. ಕೈಲಿ ಒತ್ತಿ ಒತ್ತಿ ಪುಂಡಿ ಪುಂಡಿ ಮಾಡ ಹಿಟ್ಟ್‌ಗೆ ಪುಂಡಿಂತೇಳುವೆ. ಹಾಂಗಾಗಿ ಅದರ ಬೇಸುವ ಮಡ್ಕೆ ಪುಂಡಿ ಮಡ್ಕೆಂತಾತ್. ಇದರ ಹಿಟ್ಟ್ನ ಕಳ್ಸಿಗೆಂತಲೂ ಕರ್‌ದವೆ. ನೋಡಿಕೆ ಇಡ್ಲಿ ಪಾತ್ರೆನ ಹಾಂಗೇ ಉಟ್ಟು. ಆದರೆ ನಡೂಲಿ ತಟ್ಟೆ ಇಸುವ ಬದಲ್ ಮಡ್ಕೆಲೇ ತಟ್ಟೆನ ಹಾಂಗೇ ಉಟ್ಟು. ಅದರ್‌ಲಿ ದೊಡ್ಡ ದೊಡ್ಡ ಒಟ್ಟೆ ಉಟ್ಟು. ಇದ್ ಸ ಸೆಕೆಲಿ ಬೇಯಿಸುವ ಹಿಟ್ಟ್. ಇಡ್ಲಿ ಪಾತ್ರೆಲೂ ಪುಂಡಿ ಬೇಯ್ಸಿಕೆ ಆದೆ. ಇದ್ಕೂ ಮುಚ್ಚಳ ಉಟ್ಟು. ಈ ಮಡ್ಕೆನ ಮೂಲ್ಯ ಜನಂಗ ಮೊಣ್ಣ್‌ಂದಲೇ ಮಾಡ್‌ವೆ. ಪುಂಡಿ ಕೊಸ್ಲಕ್ಕಿ ಮತ್ತೆ ಬೆಂತೆಕ್ಕಿಂದ ಎಣ್ಣೆ ಇಲ್ಲದೇ ಮಾಡ್‌ವ ಹಿಟ್ಟ್. ಬೊಲ್ಪುನ ಪಲಾರಕ್ಕೆ ಪುಂಡಿ ಮಾಡ್‌ವೆ. ಪುಂಡಿ ತಿಂದರೆ ಹೊಟ್ಟೆ ಗಟ್ಟಿ. ಹಾಂಗಾಗಿ ಪುಂಡಿ ಮಾಡ್ವ ಕ್ರಮ ಬಾರೀ ಹಿಂದೆನೆ ಇತ್ತ್. ಹಂದಿ ಗೆಯ್ಪುಲಿ ಪುಂಡಿ ತಿಂಬಕೆ ಲಾಯ್‌ಕ್ ಆದೆ. ಸೆಕೆಲಿ ಬೇಯ್‌ವ ಇಡ್ಲಿ, ಮೂಡೆ ಹಿಟ್ಟ್‌ನನು ಬೇಸಿಕೆ ಆದೆ. (ಎಂ.ಜಿ.ಕೆ.)

**ಬರಣಿ :** ಬರಣಿ ಕೆಲವು ಸಾಮಾನ್‌ಗಳ ಹಾಕಿಸಿಕೆ ಆವ ಸೊತ್ತ್. ಮೊಣ್ಣ್‌ನ ಬರಣಿ ಮೊಣ್ಣ್‌ಂದ ಮಾಡ್ದು. ಇದರ್‌ಲಿ ಸಣ್ಣದ್ ದೊಡ್ಡದ್ ಉಟ್ಟು. ಬಾಯಿ ಹಣ್ಣಿ ಸಣ್ಣದಾಗಿದ್ದ್ ಮುಚ್ಚಳ ಸ ಉಟ್ಟು. ಇದರ ಮೂಲ್ಯ ಜನಂಗ ಮಾಡ್‌ವೆ. ಕುಪ್ಪಿ ಬರಣಿ ಪೊಯ್ಯೆ, ಜೇಡಿ ಮೊಣ್ಣ್, ರಂಜಕ ಎಲ್ಲ ಸೇರ್‌ಸಿ ಮಾಡ್ದು. ಕೆಲವು ಸೊತ್ತಗಳ ಹಾಳಾಗದ ಹಾಂಗೆ ಇಸಿಕೆ ಇಂತಾ ಸಾಮಾನ್ ಬೇಕು. ಮಾಯಿನಕಾಯಿ ಉಪ್ಪನೆಕಾಯಿ ಮಾಡಿಕೆ ಇಂತಾ ಬರಣಿಲಿ ಉಪ್ಪು ಹಾಕಿಸುವೆ. ಹಲ್ಸ ಕಾಯಿ ತೋಳೆನ ಸ ಇದರ್‌ಲಿ ಉಪ್ಪುಲಿ ಹಾಕಿಸುವೆ. ಅದ್ಕೆ ನೀರ್‌ತೋಳೆ ತ ಹೇಳ್‌ವೆ. ಬೇರೆ ಮಡ್ಕೆಲೂ ಉಪ್ಪನೆಕಾಯಿ, ನೀರ್‌ತೋಳೆ ಹಾಕಿಸಿಕೆ ಆದೆ. ಹಿಂದೆನವು ಬೇರೆ ಬೇರೆ ಸೊತ್ತುಗಳ ಹಾಕಿಸಿಕೆ ಮತ್ತೆ ಬೇರೆ ಬೇರೆ ಅಡಿಗೆಗೆ ನಮೂನೆ ನಮೂನೆದ್ ಪಾತ್ರೆಗಳ ಇಸಿಕಾಂತಿದ್ದೊ. ಹೆಚ್ಚಾಗಿ ಉಪ್ಪನೆಕಾಯಿ ಹಾಕಿಕೆ ಬರಣಿ ಬೇಕಾದೆ. ಮಾಯಿನಕಾಯಿ, ಒಡ್ಡುಹುಳಿ, ನಿಂಬುಳಿ ಉಪ್ಪುಲಿ ಹಾಕಿಸಿಕೆ ಇದರ್‌ಲಿ ಲಾಯ್ಕಾದೆ. ಮಡ್ಕೆಲಿ ಮಳೆಗಾಲಕ್ಕೆ ತಿಂಬಕೆಂತ ಅಡಿಕೆನೂ ನೀರ್‌ಲಿ ಹಾಕಿಸುವೆ– ನೀರಡಿಕೆ. (ಎಂ.ಜಿ.ಕೆ.)

**ಬಾವಡೆ :** ಗಂಜಿ ಮಡ್ಕೆ, ಗೆಯ್ಪುನ ಮಡ್ಕೆಗೆ ಮುಚ್ಚುವ ಪಾತ್ರೆಗೆ ಬಾವಡೆ ತ ಹೆಸ್ರ್. ಅಂದರೆ ಮೊಣ್ಣ್‌ನಪಾತ್ರೆ ಎಲ್ಲೆಲ್ಲಿ ಉಪಯೋಗ ಉಟ್ಟೋ ಅಲ್ಲೆಲ್ಲಾ ಬಾವಡೆ ಉಟ್ಟು. ಮಡ್ಕೆ ಮಾಡ್‌ವ ಜೆನಂಗ ಇದರ ಮಾಡ್ದು. ಬಿಸಿ ಇದ್ದ ತೆನಸ್ ತಣ್ಣಗಾಗದ ಹಾಂಗೆ ಅಲ್ಲರ್ ತಿಂಬ ಸೊತ್ತಿಗೆ ಏನಾರ್ ಬೀಳದ ಹಾಂಗೆ ಮುಚ್ಚಿ ಇಸಿಕೆ ಬಾವಡೆ ಬೇಕ್. ಮತ್ತೆ ದೋಸೆ ಕಾವಲಿ ರೊಟ್ಟಿ ಕಾವಲಿಗೂ ಮುಚ್ಚಿಕೆ ಬಾವಡೆ ಬೇಕ್.



ಬಾವಡೆ

ಬೇರೆ ಬೇರೆ ಪಾತ್ರೆಗೆ ಬೇರೆ ಬೇರೆ ಬಾವಡೆ ಬೇಕು. ಗಂಜಿ ಮಡ್ಕೆನ ಬಾವಡೆ ಗೆಯ್ಪುನ ಪಾತ್ರೆಗೆ ಆಕಿಲೆ. ಗೆಯ್ಪುನ ಮಡ್ಕೆದ್ ಬಾವಡೆ ಗಂಜಿ ಮಡ್ಕೆಗೆ ಆಕಿಲೆ. ಯಾಕೆಂತೇಳಿರೆ ಗೆಯ್ಪುನ ಅಳೆಗೆನ ಬಾಯಿ ಅಗಲ ಉಟ್ಟು ಗಂಜಿ ಮಡ್ಕೆದ್ ಅಗಲ ಕಮ್ಮಿ ಉಟ್ಟು. (ಎಂ.ಜಿ.ಕೆ.)

**ಬೀಸುವ ಕಲ್ಲ್ :** ಅಕ್ಕಿ, ರಾಗಿ, ಗೋದಿ ಹುಡಿ ಮಾಡಿಕೆ ಇರ್‌ವ ಕಲ್ಲ್‌ಗೆ ಬೀಸ್‌ವ ಕಲ್ಲ್ ತ ಹೇಳ್‌ವೆ. ಉರ್‌ಟಾಗಿ ಚಪ್ಪಟೆ ಇರ್‌ವ ಎರಡ್ ಕಲ್ಲ್ ಬೇಕು. ಅದ್ ಒಂದರ ಮೇಲೆ ಇನ್ನೊಂದು ಇರೊಕು. ಅಡಿಲಿರುವ ಕಲ್ಲಿಗೆ ನಡುಲಿ ಒಟ್ಟೆ ಮಾಡಿ ಅದ್ಕೆ ಅಡ್ಪ ಒಂದ್ ಗೂಟ ಹಾಕ್‌ವೆ. ಗೂಟ ಅಂದಾಜ್ ಒಂದ್ ಗೇಣ್‌ನಸ್ಟ್ ಇದ್ದ್ ಮೂರ್ ಬೆರಳ್‌ನಸ್ಟ್ ತೋರ ಇರೊಕು. ಇನ್ನೊಂದು ಕಲ್ಲ್ ನಡುಲಿ ಎರ್‌ಡ್ ಪುಡೆಗೂ ಕಾಂಬ ಹಾಂಗೆ ಒಟ್ಟೆ ಉಟ್ಟು. ಅದರ ಕರೇಲಿ ಇನ್ನೊಂದು ಒಟ್ಟೆ ಇದ್ದ್ ಅದ್ಕೆ ಸಾ ಒಂದ್ ಗೂಟ ಸಿಕ್ಕಿಸ್‌ವೆ. ಈ ಗೂಟ ಅಸ್ಟೇ ತೋರ ಇದ್ದ್ ಹಳ್ಳುದ್ದ ಜಾಸ್ತಿ ಇರೊಕು. ಆ ಕಲ್ಲ್‌ನ ನಡೂಲಿ ಗೂಟ ಇರ್‌ವ ಕಲ್ಲ್‌ನ ಮೇಲೆ ಇಸೊಕು. ಅದರ ಒಟ್ಟೆ ಒಳಗೆ ಗೂಟ ಕುದ್ರೊಕು. ಮೇಲೆನ ಕಲ್ಲ್‌ನ ನಡುಲಿ ಇರ್‌ವ ಹಳ್ದೊಡ್ಡ ಒಟ್ಟೆನ ಸುತ್ತಲೂ ಓರೆಗೆ ಗುಂಡಿ ಉಟ್ಟು. ಆ ಗುಂಡಿಗೆ ಅಕ್ಕಿನೊ ರಾಗಿನೋ ಹಾಕಿ ಕರೆಲಿರುವ ಗೂಟಲಿ ಸುತ್ತಲೂ ತರ್‌ಗಿಸುವೆ – ಬೀಸುವೆ. ಆಗ ಎರಡ್ ಕಲ್ಲ್‌ನ ನಡುಲಿ ಸಿಕ್ಕಿ ಹಾಕಿದ ಅಕ್ಕಿ, ರಾಗಿ ಹುಡ್ಯುಡಿ ಆದೆ. ಅಡಿಲಿರುವ ಕಲ್ಲ್‌ನ ಮೇಲ್ಪುಡೆಗೆ ಮತ್ತೆ ಮೇಲಿರುವ ಕಲ್ಲ್‌ನ ಅಡಿಪುಡೆಗೆ ಸಣ್ಣ ಸಣ್ಣ ಒಟ್ಟೆ ಮಾಡೊಕು. ಬೀಸಿಕನ ಎಡೆಗೆ ಸಿಕ್ಕಿದ ಅಕ್ಕಿ ರಾಗಿ ಕಲ್ಲ್‌ನ ಎಡೆಲಿ ಪುಡಿ ಪುಡಿ ಆದೆ. ಇದರ ಕಲ್ಲ್ ಕುಟ್ಟಿಗ ಜನಂಗ ಮಾಡ್‌ವೆ. (ಎಂ.ಜಿ.ಕೆ.)

**ಬೆಂಡುಕುಕ್ಕೆ :** ಹೂವು, ಹೊದ್ರಿ, ಅವುಲಕ್ಕಿ ಹೀಂಗೆ ಬೇರೆ ಬೇರೆ ಸಾಮಾನ್ ಹಾಕಿ ಇಸುವ ಸೊತ್ತು. ಬೊಳ್ಳಿ ಇಲ್ಲರ್ ಒಲಿಲಿ ಮೊಡ್ಡ ಸೊತ್ತ್ ಬೆಂಡ್ ಕುಕ್ಕೆ. ಕಂಬದ ಹಂಗೆ ಎತ್ತರ ಇದ್ದ್ ಹಿಡಿ ಇಲ್ಲದ ಕುಕ್ಕೆ. ಬೆಂಡ್ ಕುಕ್ಕೆನ ಚಾಳೆ ಒಲಿಲಿ, ತಾಳೆ/ತಾರಿ ಮರದ ಒಲಿಲಿ,



ಬೆಂಡುಕುಕ್ಕೆ

ಹಳ್ಳದ ಕರೆಲಿ ಇರ್‌ವ ಮೆಡೆಜನ ಒಲಿಲಿ ತೇಳ್ರೆ ಮೊಂದ್ರಿ ಮೆಡಿವ ದೆಯ್ಯಿನ ಸೋಗೆಲಿ, ಬೆತ್ತದ ಬಾಸ್‌ಲಿ ಅಲ್ಲರ್ ಬೆದ್ರ್‌ನಬಾಸ್‌ಲಿ ಸ ಬೆಂಡ್ ಕುಕ್ಕೆ ಹೆಣ್ದ್ ಮಾಡ್‌ವೆ. ಬೆತ್ತ ಮತ್ತೆ ಬೆದ್ರ್‌ನಸೀಳಿ ತೆಳ್ಳಂಗೆ ಅದರ ಬೆಂಡ್ ಒಳಗೆನ ಬಾಗ ತೆಗ್ದ್ ಕೀಸಿ ಲಾಯ್ಕ್ ಮಾಡಿಕಾಂಕು. ತೆಳ್ಳಂಗೆ ಆದಸ್ಟ್ ಮೆಡೆಕೆ ಸುಲಬ. ಒಲಿ ಆದರೆ ಸಪೂರಕ್ಕೆ ಸೀಳಿಕಾಂಕು. ಕೆಲವು ಜನ ಹಳ್ಳಗಲಕ್ಕೆ ಸಿಗ್ದ್ ಕುಕ್ಕೆ ಮೆಡ್ದವೆ. ಬೆತ್ತ, ಬೆದ್ರ್, ಒಲಿ ಯಾವುದೇ ಆಗಲಿ ಅದ್ ಪೊರ್‌ಲು ಒಳ್‌ಂಗೊಕು. ಒಳ್‌ಂಗಿದ ಮೇಲೆ ಮೆಡೆಕಾಕನ ಅದರ ನೀರಿಗೆ ಹಾಕಿ ಮೆತ್ತಂಗೆ ಮಾಡಿಕಾಂಕು. ಬೆಂಡ್ ಕುಕ್ಕೆ ಮೆಡೆಕೆ ಕೈಚಳಕ್‌ನ ಚಾತುರ್‌ಪು ಬೇಕ್. ಬೆಂಡ್ ಕುಕ್ಕೆನ ಬೇರೆ ಬೇರೆ ಉಪಯೋಗಕ್ಕೆ ಬರ್‌ವ ಹಾಂಗೆ ಆಕಾರಲಿ ಸಾ ಬದಲಾವಣೆ ಮಾಡ್‌ವೆ. ಅಕ್ಕಿ ತೊಳೆಕೆ ಒಸಿ ಎತ್ತರಕೆ ಸಪೂರಕೆ ಇರ್‌ವ ಕುಕ್ಕೆ ಬೇಕು. ದೆವ್ವ ದೇವ್‌ಗೆ ಬೇಕಾದ ಸಾಮಾನ್‌ನ ಜೋಡ್ಸಿ ಇಸಿಕೆ ಅಗಲ ಬಾಯಿದ್ ದೊಡ್ಡದ್ ಇರೋಕು. ಬಯಕೆ ಮೊದುವೆಗೆ ಹೊದ್ರಿ, ಅವುಲಕ್ಕಿ, ಬೆಲ್ಲ, ಬಾಳೆಹಣ್ಣ್ ಹಾಕಿಕೆ ಅಗಲ ಬಾಯಿದ್ ದೊಡ್ಡ ಬೆಂಡ್ ಕುಕ್ಕೆ ಬೇಕಾದೆ. ಹಗೂರದ ಸಾಮಾನ್ ಹಾಕಿಸಿಕೆ ತೇಳ್ರೆ ಹೂ, ಹೊದ್ರಿ, ಅವುಲಕ್ಕಿ ಇಂತ ಸಾಮಾನ್ ಹಾಕಿಸಿಕೆ ಒಲಿದ್ ಕುಕ್ಕೆ ಸಾಕ್. ಬೆತ್ತದ ಬೆಂಡ್ ಕುಕ್ಕೆ ಬಾಳ್ತರ ಜಾಸ್ತಿ ಬಂದದೆ. ಬೆದ್ರ್‌ನಕುಕ್ಕೆ ಮಾಡಿಕೆ ಹಳ್ಕೆಲ್ಸ ಜಾಸ್ತಿ. ವರ್‌ಸದ ಎಲ್ಲಾ ದಿನ ಉಪಯೋಗಕ್ಕೆ ಬಂದದೆ. ಹೆಚ್ಚಾಗಿ ಕೊರಗರ್, ಅಜಲರ್, ಮಲೆಕುಡಿಯರ್ ಇದರ ಮೆಡೆತಿದ್ದೊ. ಬೇರೆ ಜಾತಿ ಜನಂಗ ಸ ಕುಕ್ಕೆ ಮೆಡ್ದವೆ. (ಎಂ.ಜಿ.ಕೆ.)

**ಬೆತ್ತದ ಪೆಟ್ಟಿಗೆ :** ಬೆತ್ತದ ಪೆಟ್ಟಿಗೆ ಹೆಸರ್ ಹೇಳುವಾಂಗೆ ಬೆತ್ತಲೇ ಮಾಡ್ದ ಪೆಟ್ಟಿಗೆ. ಒಳ್ಳ ಜಾತಿದ್ ಬೆತ್ತನ ಸೀಳಿ ತೆಳ್ಳಂಗೆ ಸಪೂರಕ್ಕೆ ಕೀಸಿ ಮಾಡ್ದ ಬೊಳ್ಳಿಲಿ ಪೊರ್‌ಲುಲಿ ಬೇರೆ ಬೇರೆ ಅಲಂಕಾರಲಿ ಮಾಡ್ದ ಪೆಟ್ಟಿಗೆನ ಮಾಡ್‌ವೆ. ಅದ್ಕೆ ಆಗಾಗ – ಕೆಲವ್ ವರ್‌ಸಕ್ಕೆ ಒಮ್ಮೆ ಮರದ ಎಣ್ಣೆ ಕೊಟ್ಟಂಡ್ ಇದ್ದರೆ ಎಸ್ಟ್ ವರ್‌ಸ ಆದರೂ ಹಾಳಾಕಿಲ್ಲೆ. ಪೆಟ್ಟಿಗೆನ ಬೇರೆ ಬೇರೆ ಆಕಾರಲಿ ಮಾಡ್‌ವೆ. ಚೌಕ, ಆಯತ, ಉರುಂಟು, ಮೊಟ್ಟೆ ಆಕಾರಲಿ ಉಟ್ಟು. ಅದ್ಕೆ ಮುಚ್ಚಳ ಸಹ ಉಟ್ಟು. ಮುಚ್ಚಿಕೆ, ತೆಗೆಕೆ ಬಿಜಾಗ್ರಿ ಉಟ್ಟು. ಬೀಗ ಹಾಕಿಕೆ ಸಾ ಆದೆ. ಚರ್‌ಮದ ಬಿಜಾಗ್ರಿ, ಬೆತ್ತದ ಬಿಜಾಗ್ರಿ. ಮತ್ತೆ ಹಿತ್ತಾಳೆದ್ ಕೂಡ ಉಟ್ಟು. ಇದರ ಕೊರಗರ್, ಮಲೆಕುಡಿಯರ್, ಅಜಲ ಜೆನಂಗ ಮಾಡ್ತಿದ್ದೊ. ಅವು ಅಲ್ಲದೆ ಬೇರೆ ಜನಂಗ ಸ ಕಲ್ತ್ ಮಾಡ್ತಿದ್ದೊ. ಇಂತಹ ಪೆಟ್ಟಿಗೆಲಿ ಹಿಂದೆನವು ಬಟ್ಟೆಬರೆ, ನಗನಾಣ್ಯ, ಜಾಗೆಗೆ ಸಂಮ್ಮಂದಿಸಿದ ದಾಕಲೆಗಳ ಹಾಕಿ ಇಸ್‌ತಿದ್ದೊ. ಅದ್ ಅಲ್ಲದೇ ದೆವ್ವದ ಬಂಡಾರ – ದೆವ್ವಕ್ಕೆ ಸಂಮ್ಮಂದಪಟ್ಟ ವಡವೆನ ಹಾಕಿ ಇಸುತ್ತಿದ್ದೊ. ನೋಡಿಕೆ ಬಾರೀ ಪೊರ್‌ಲುಟ್ಟು. ಇದರ ಮಾಡಿಕೆ ಚಾತುರ್‌ಪು ಬೇಕ್. ಯಾಕೆಂತೇಳ್ರೆ ಇದರ್‌ಲಿ ಹನಿಸ್ ಕುಸುರಿ ಕೆಲಸ ಉಟ್ಟು. (ಎಂ.ಜಿ.ಕೆ.)

**ಮರ್‌ಚಟೆ :** ಮರ್‌ಚಟೆ ಮರಂದ ತೆಳುವಾಗಿ ಕೆತ್ತಿ ಮಾಡ್ದ ಸೊತ್ತ್. ಮನೆಲಿ ತಿಂಡಿ ಹಾಕಿಸಿಕೆ, ಗಂಜಿ ಬೊಗ್ಸಿಕೆ ಬಳಸ್‌ವ ಮರಂದ ಮಾಡ್ದ ಚಟ್ಟೆ, ಮರ್‌ಚಟೆಂತ ಹೆಸ್ರ್ ಬಾತ್. ಮರ್‌ಚಟೆ ಚಪ್ಪಟೆ ಆಗಿ ಉರುಂಟಾಗಿದ್ದದೆ. ಒಳಮೆಯ್ಯಿ ನಡುಲಿ ಹನಿ ಗುಂಡಿ



ಮರ್‌ಚಟೆ

ಮತ್ತೆ ಅಡಿಮೆಯ್ಯಿ ಹಳ್ಳ್ ಮಡ್ಕೆನ ಅಡಿಬಾಗದ ಆಕಾರಲಿ ಉಟ್ಟು. ಇದರ್‌ಲಿ ಸಣ್ಣದ್ ದೊಡ್ಡದ್ ಉಟ್ಟು. ಮನೆಲಿ ರೊಟ್ಟಿ, ದೋಸೆ ಮತ್ತೆ ಕೆಲವು ತಿನ್ಸ್ ಹಾಕಿಸಿಕೆ, ಗಂಜಿ ಗೆಯ್ಯುನ ಪಾತ್ರೆಗೆ ಮುಚ್ಚಿಸಿಕೆ ಮರ್‌ಚಟೆ ಬೇಕಾದೆ. ಹೆಚ್ಚಾಗಿ ಗಂಜಿ ಬಾಗಿಸಿಕೆ ಉಪಯೋಗಿಸುವೆ. ಮಡ್ಕೆಲಿ ಗಂಜಿ ಬೆಂದ ಮೇಲೆ ಹುಗ್ಗಿ ಮಾಡಕರ್ ಗಂಜಿ ತೆಳಿನ ಬಾಗ್ಸೊಕು. ಅದ್ಕೆ ಮಡ್ಕೆನ ಬಾಯಿಗೆ ಚೆಬುಲೆ ಇಸಿ ಅದರ ಮೇಲೆ ಮರ್‌ಚಟೆನ ಇಸಿ ಮತ್ತೆ ಅಡಿಗೆರದ ಮೇಲೆ ಮಡ್ಕೆನ ಬಗ್ಸುವೆ. ಅಡಿಗೆರದ ಒಳೆಗೆ ಹುಗ್ಗಿ ಬೀಳದಾಂಗೆ ಹಳ್ಳ್ ಓರೆ ಮಾಡಿ ಇಸುವೆ. ಹೀಂಗೆ ಮಾಡಿರೆ ತೆಳಿ ಎಲ್ಲ ಇಳ್ದ್ ಅಡಿಗೆರಕ್ಕೆ ಬಿದ್ದದೆ. ಕೈ ಮರ್‌ಚಟೆ : ಮರ್‌ಚಟೆನ ಹಾಂಗೇ ಇರ್‌ವ ಸೊತ್ತ್ ಕೈ ಮರ್‌ಚಟೆ. ಇದ್ಕೆ ಕೈ ಉಟ್ಟು, ಹಾಂಗಾಗಿ ಕೈ ಮರ್‌ಚಟೆ ತ ಹೇಳ್‌ವೆ. ಇದ್ ಮರಂದ ಮಾಡ್ದ ಸೊತ್ತ್. ಇದರ್‌ಲಿ ಹಳ್ಳ್ ದೊಡ್ಡದ್ ಸ ಉಟ್ಟು. ಕೆಲವು ದೊಡ್ಡದಾಗಿ ಹಳ್ಳ್‌ಗುಂಡಿ ಉಟ್ಟು. ಇದರ ಮರದ ಆಚಾರಿ ಜನಂಗ ಮಾಡ್ದು. ಇದರ್‌ಲಿ ಹಿಟ್ಟ್ ಹಾಕಿಸಿಕೆ ಆದೆ. ಗುಂಡಿ ಇದ್ದದರ್‌ಲಿ ಅಕ್ಕಿ, ರಾಗಿ, ಜೋಳದ, ಗೋದಿ ಹುಡಿ ಹಾಕಿ ಕಲ್‌ಸಿಕೆನೂ ಆದೆ. ಪುಂಡಿ ಮಾಜಿಸಿ ಇದರ್‌ಲಿ ಹಾಕಿ ಪುಂಡಿ ಮಾಡಿಕೂ ಬೇಕಾದೆ. (ಎಂ.ಜಿ.ಕೆ.)

**ಮುಕ್ಕಾಲ್ ಮಣೆ :** ಮೂರ್ ಕಾಲ್‌ನ ಮಣೆಗೆ ಮುಕ್ಕಾಲ್ ಮಣೆ ತ ಕರಿಯುವೆ. ಇದ್ ನಾವು ಕುದ್ರುವ ಮಣೆಂದ ಎತ್ತರ ಉಟ್ಟು. ಅಂದಾಜ್ ಒಂದೂವರೆ ಗೇಣ್‌ನಸ್ಟ್ ಎತ್ತರ ಉಟ್ಟು. ಇದರ ಆಕಾರ ಬೇರೆ ಮಣೆನ ಹಾಂಗೆ ಅಲ್ಲ. ಇದ್ಕೆ ಮೂರ್ ಕಾಲ್ ಉಟ್ಟು. ಒಂದ್ ಹಲಗೆನ ಎಂಟ್ ಆಕಾರಲಿ ಕತ್ರಿಸಿ ಮಾಡ್ದ ಸಣ್ಣ ಬೆಂಚ್. ಇದರ್‌ಲಿ ಒಂದ್ ಕಡೆ ಸಣ್ಣದ್ ಇನ್ನೊಂದು ಕಡೆ ದೊಡ್ಡದ್ ಇದ್ದ್ ನಡೂಲಿ ಸಪೂರ ಉಟ್ಟು. ಹಿಂದೆ ಮನೆ ಯಜಮಾನ ಉಂಬಕನ ನೆಲಲಿ ಕುದ್ದ್ ಇದರ ಮೇಲೆ ಬಟ್ಲ್ ಇಸಿಕನ್ ಉಂಬೊತಿದ್ದೋ. (ಎಂ.ಜಿ.ಕೆ.)

**ಮೊಣ್ಣನ್ ಚಟ್ಟೆ ಮತ್ತೆ ಕುರ್‌ಚಟೆ :** ಉಂಬಕ್ಕೆ ಬೇಕಾದ ಚಟ್ಟೆ ಮತ್ತೆ ಕುರ್‌ಚಟೆ. ಇದ್ ಮೊಣ್ಣ್‌ಂದಲೇ ಮಾಡ್ದ್. ಇದರ ಮೂಲ್ಯ ಜನಂಗಂ ಮಾಡ್ದು. ಚಟ್ಟೆ – ಗದ್ದಗ ಹುಗ್ಗಿ ಅಲ್ಲರ್ ಗಂಜಿ ಹಾಕಿಕೆ. ಕುರ್‌ಚಟೆ ಗೆಯ್ಯು ಹಾಕಿಕೆ. ಹಿಂದೆನವು ಇದರ್‌ಲೆ ಉಂಬೊತಿದ್ದೊ. ಚಟ್ಟೆಲಿ ಮಕ್ಕಳಿಗೆ ಮೊಣ್ಣಿ ಅರೆಕೂ ಆದೆ. (ಎಂ.ಜಿ.ಕೆ.)

**ಸಾಂಬಾರ್ ಹಾಕುವ ಮರ್‌ಗಿಲ್ :** ಮರಲೇ ಮಾಡ್ದ ಮೂರ್ ನಾಲ್ಕ್ ಅದೆ ಮತ್ತೆ ಮುಚ್ಚಳ ಇರ್‌ವ ಮರ್‌ಗಿಲ್. ಹಲಸ್‌ನ ಮರಲಿ ಮಾಡ್‌ವೆ. ಮನೆಲಿ ಜಂಬರ ಮಿನಿ ಇದ್ದರೆ ಬಗೆ ಬಗೆ ಗೆಯ್ಯು, ಉಪ್ಪುಕರಿ ಇದ್ದರೆ ಈ ಮರ್‌ಗಿಲ್‌ಲಿ ಹಾಕಿ ಇಕ್ಕಿಕೆ ಹೋದವೆ. ಇಂತದ್ ತಾಮ್ರ, ಹಿತ್ತಾಳೆ ಮತ್ತೆ ಸ್ಟೀಲ್ ಪಾತ್ರೆಗ ಸ ಉಟ್ಟು.

**ಹೊಸ ಗಂಜಿ ಇಕ್ಕುವ ಸೆಡೆ :** ಹೊಸ್ತ್ ದಿನ ಹೊಸ ಅಕ್ಕಿ ಬೇಯಿಸುವ ಮಡ್ಕೆಗೆ ಹಾಕುವ ಮತ್ತೆ ಹೊಸಕ್ಕಿ ಗಂಜಿನ ಇಕ್ಕ್‌ವಸೆಡೆ. ಇಡೀ ಸೆಡೆ ಒಂದೇ ಮರಂದಲೇ ಮಾಡ್‌ವೆ. ಬೇರೆ ಸೆಡೆನ ಹಾಂಗೆ ಇದ್ ಇಲ್ಲೆ. ಹನಿಸ್ ಅಗಲ ಸಟ್ಟಗನ ಹಾಂಗೇ ಉಟ್ಟು. ಪೊರ್‌ಲು ಕಾಂಬಕೆ ಬೇಕಾಗಿ ಇದರ್‌ಲಿ ಚಿತ್ರ ಸ ಕೆತ್ತುವೆ. ಒಳ್ಳೆ ಜಾತಿ ಮರಲಿ – ಹಲಸ್, ಹೆಬ್ಬಲಸ್, ಮರಲಿ ಇದರ ಮಾಡ್‌ವೆ. ಇದರ ಮರದ ಆಚಾರಿಗ ಮಾಡ್‌ವೆ. ಹೊಸಕ್ಕಿ ಮಡ್ಕೆಗೆ ಅಕ್ಕಿ ಹಾಕಿ ಅದ್ ಬೇಯಕಾಕನ ಕಾಯಿ ಹೆಂರ್‌ದ್ ಹಾಕುವೆ. ಮತ್ತೆ ಉಪ್ಪು ಹಾಕುವೆ. ಹೀಂಗೆ ಅದ್ಕೆ ಎಲ್ಲಾ ಹಾಕಿದ ಮೇಲೆ ಮೊಗ್ಚಿಕೆ ಈ ಸೆಡೆ ಹಾಕುವೆ. ಮತ್ತೆ ಹೊಸಕ್ಕಿ ಗಂಜಿ ಇಕ್ಕಿಕಾಕನ ಸ ಇದೇ ಸೆಡೆಲಿ ಇಕ್ಕುವೆ. (ಎಂ.ಜಿ.ಕೆ.)

**ಹೊಸ ಗಂಜಿ ಮಡ್ಕೆ :** ವರ್‌ಸಕೊಮ್ಮೆ ಹೊಸ ಬೆಳೆ ತೆಗ್ದ ಮೇಲೆ ಹೊಸಕ್ಕಿ ಗಂಜಿ ಮಾಡಿಕೆ ಬೇಕಾದ ಮಡ್ಕೆ. ಗದ್ದೆ ಬೇಸಾಯ ಇದ್ದೊವು ಪ್ರತೀ ವರ್‌ಸ ಹೊಸ್ತು – ಹೊಸ ಅಕ್ಕಿದ್ ಗಂಜಿ ಉಂಬ ಕ್ರಮ ಉಟ್ಟು. ಹೊಸ ಅಕ್ಕಿ ಗಂಜಿ ಬೇಯಿಸಿಕೆ ಮನೆಲಿ ಅದ್ಕೆಂತಲೇ ಒಂದ್ ದೊಡ್ಡ ಮೊಣ್ಣ್‌ನ ಮಡ್ಕೆ ಉಟ್ಟು. ಈ ಮಡ್ಕೆ ಬೇರೆ ಮಡ್ಕೆನ ಹಾಂಗೆ ಅಲ್ಲ ಒಸಿ ಆಕಾರಲಿ ಬದಲಾಗಿದ್ದದೆ. ಇದರ ಮಡ್ಕೆ ಮಾಡ್‌ವ ಮೂಲ್ಯ ಜೆನಂಗ ಮಾಡ್ದು. ಹೊಸಕ್ಕಿ ಗಂಜಿ ಮಾಡ್‌ವ ದಿನ ಮಡ್ಕೆನ ಒಲೆಗೆ ಇಸಿಕೆ ಮುಂದೆ ಅದರ್‌ಲಿ ಚಿತ್ರ ಬರ್‌ದಿದ್ದವೆ. ಒಲೆಗೆ ಇಸಿಕಾಕನ ಅಲಂಕಾರ ಮಾಡ್‌ವೆ. ಈ ಅಲಂಕಾರನ ಬೇರೆ ಯಾವ ಮಡ್ಕೆಗೂ ಮತ್ತೆ ಬೇರೆ ಯಾವ ದಿನನೂ ಮಾಡ್ದುಲೆ. ಒಲೆಗೆ ಇಸಿದ ಮೇಲೆ ಅದ್ಕೆ ಕೈ ಮುಗ್ದ್ ಅಕ್ಕಿ ಹಾಕುವ ಕ್ರಮ ಉಟ್ಟು. ಈ ಮಡ್ಕೆಲಿ ಹೊಸ್ತು ಅಲ್ಲದೇ ಬೇರೆ ಯಾವ ಕಾರಣಕ್ಕು ಅಡಿಗೆ ಮಾಡ್ದುಲೆ. (ಎಂ.ಜಿ.ಕೆ.)

**ಜೆನಪದ ಆಚರಣೆ : ಕಾಲೆ :** ಕಾಲೆ ತೇಳ್ದು ಕ್ಷುದ್ರ ಶಕ್ತಿ. ಅದ್ ವಿಕಾರರೂಪಲಿ ಕಾಣ್ಸಿಕಂಡದೆ. ಅವಕಾಶ ಸಿಕ್ಕಿರೆ ದುರ್‌ಬಲರ ಕೊಂದ್ ರಕ್ತ ಕುಡ್ದದೆತ ನಂಬಿವೆ. ಕಾಟಂದ ಹೆಣನ ಎಳ್ದ್ ತಿಂದದೆಗಡ. ಎಳೆ ಕೂಸು, ಹಸಿಬಾಣಂತಿ ತುಂಬಾ ದುರ್‌ಬಲ ಸ್ತಿತಿಲಿ ಇರ್‌ದರ್‌ಂದ ಅವರ ಮೇಲೆ ಕಾಲೆನ ಪ್ರಬಾವ ಹೆಚ್ಚಾಗಿದ್ದದೆ. ಹಂಗಾಗಿ ಅವರ ಯಾರರ್ ಹೆಣ್ಮಕ ಹಕ್ಕಲಿದ್ದ್ ಕಾಯಕಾದೆ. ಅಸುದ್ದ ಪ್ರದೇಶಲಿ ಕಾಲೆ



ಕಾಲೆ

ಇದ್ದದೆ. ಹೆರ್‌ಗೆನ ಮನೆ ಬಾಣಂತಿ ಮೀಯೊವ ಕೊಟೆಗೆ, ಸತ್ತ ಮನೆ, ಹೆಣ ಸುಟ್ಟ ಮತ್ತೆ ಹೂಳ್ದ ಜಾಗೆ ಹಿಂಗೆ ಸುಮಾರ್ ಕಡೆಗಳ್‌ಲಿ ಕಾಲೆ ಕಾಣ್ಸಿಕಂಡದೆ. ಅದ್ಕಾಗಿ ಹೆಣನ ಕಾಟಕಿಸಿದ ಮೇಲೆ ಕಾಟಕೆ ಪೂರಾ ಕಿಚ್ಚಿ ಹೊತ್ತುವ ಮುಟ್ಟ ಜೆನಗ ಅಲ್ಲೇ ನಿತ್ತವೆ. ಕಾಲೆನ ಸೊಂಕು ಬರದಂಗೆ ಹೆರ್‌ಗೆ ಆದ ಮನೆನ ಮಾಡ್‌ಗೆ ಕಾಯರ ಮರದ ಗೆಲ್ಲ್ ಇಸುವೆ. ಇದೆಲ್ಲ ಜೆನಪದರ ನಂಬಿಕೆಗ.

**ವೇಸಬೂಸಣ :** ಕಾಲೆವೇಸ ಮೋರೆಗೆ ಕಪ್ಪುಬಣ್ಣ ಹಾಕಂಡ್ ಹಣೆಗೆ ಸುಣ್ಣದ ನಾಮ ಹಾಕಿಕಂಡದೆ. ಹುಬ್ಬು ಮತ್ತೆ ರೆಪ್ಪೆಗಳ ಕಾಗಡೆ ಕಣ್ಣ್‌ಕಪ್ಪು ಉಜ್ಜಿಕಂಡ್ ಅದರ ಸುತ್ತ ಉರುಂಟು ಸುಣ್ಣದ ಗೆರೆ ಎಳ್ದ್‌ಕಂಡದೆ. ಮೂಕುನ ಕೊಡಿಗೆ,ಎದೆಗೆ, ಕೈಗೆ ಉಗುರುಗಳಿಗೆ ಸುಣ್ಣದ ನಾಮ ಹಾಕಿಕಂಡದೆ. ಒಂದ್ ಅಡ್ಕೆ ಹಾಳೆನ ಕೊಯ್ದ್ ಹಲ್ಲ್‌ಗಳ ಮಾಡ್ದೆ. ಹಾಳೆಂದಲೇ ಒಂದ್ ನಾಲಿಗೆನ ಮಾಡಿ ಅದ್ಕೆ ಕೆಂಪು ಬಣ್ಣ ಹಾಕಿ ಬಾಯಿಗೆ ಸೆಕ್ಕ್‌ಸಿಕಂಡದೆ. ದಡ್ಡಾಲು ಜೋಂಕ್‌ಂದ ಮಾಡ್ದ ತಲೆಚವ್ರಿಗೆ ಅಲ್ಲಲ್ಲಿ ಮೊಸಿ ಉಜ್ಜಿ ಅದರ ತಲೆನ ಹಿಂದೆಂದ ಇಳ್ಸಿಬುಟ್ಟದೆ. ಸೊಂಟಕ್ಕೊಂದ್ ತುಂಡ್ ಬಟ್ಟೆ ಸುತ್ತಿ ಅದರ ಮೇಲೆ ಚಾಳೆನ ಚಿರಿ ಸೀಳಿ ಮಾಡ್ದ ಚಿರಿ ಲಂಗನ ಸುತ್ತಿ ಕಟ್ಟಿಕಂಡದೆ. ಕಾಲೆವೇಸದಾರಿ ಕೈಲಿ ಒಂದ್ ಹೊತ್ತಿಕಂಡಿರುವ ಮಡ್ಲ್‌ನ ಸೂಟೆ ಹಿಡ್ಕಂಡಿದ್ದದೆ. ಅಂವನ ಸೊಂಟಕೆ ಬೊಳ್ಳಿ ಹಾಕಿ ಜಾಲ್‌ನ ಹಕ್ಕಲೆ ಇರ್‌ವ ಒಂದ್ ಮರಕ್ಕೆ ಕಟ್ಟಿದ್ದವೆ.

**ಕೊಣ್‌ತ :** ರೋಗಿ ಬಂದ್ ಬಲಿಕುಂಡದ ಎದ್ರಕೆ ಕುದ್ದಾಂಗೆ ಆಗಲೆ ನೆಲದ ಮೇಲೆ ಬರ್‌ದ ಕಾಲೆನ ಚಿತ್ರದ ಮೇಲೆ ಇದ್ದ ಬಟ್ಟೆನ ಮುಸುಕುನ ಒಮ್ಮೆಗೆ ತೆಗ್ದವೆ. ಮತ್ತೆ ಕೋಳಿನ ಬಲಿಗೆ ತಲೆಕೊಯ್ದ್ ಅದರ ಗಂಟ್ಲ್‌ನ ರಕ್ತನ ಹಣೆಗೆ ತಾಂಗ್‌ಸಿ ದೂರಕೆ ಇಟ್ಟವೆ. ಮಂತ್ರವಾದಿ ಮಂತ್ರ ಹೇಳಿಕಂಡಿದ್ದದೆ. ಅಂವನ ಮಂತ್ರ ಜೋರಾಕಂಡ್ ಹೋದಂಗೆ ಕಟ್ಟಿ ಹಾಕಿದ ಕಾಲೆನ ಬೊಳ್ಳಿನ ಬುಡ್ಸಿ ಒಬ್ಬ ಕೈಲಿ ಹಿಡ್ಕಂಡದೆ. ಕಾಲೆ ಓಡಿ ಹೋಕೆ ನೋಡ್ದೆ. ಆರ್‌ಬಟೆ ಕೊಟ್ಟ್‌ಕಂಡ್ ಕಾಲೆ ವೇಸದಾರಿ ರೋಗಿನ ಸುತ್ತ ದೊಡ್ಡ ಹೆಜ್ಜೆ ಇಸಿ ಅಬ್ಬರಿಸಿ ಕೊಣ್ದದೆ. ರೋಗಿನ ಹಿಡೆಕೆ ಓಡ್ದೆ. ಆಗ ಕಾಲೆನ ಬೊಳ್ಳಿಲಿ ಗಟ್ಟಿಲಿ ಹಿಡ್ಕಂಡವೆ. ಕೊಣ್‌ತಂದ ಬೊಚ್ಚಿದ್ ಕಾಲೆ ಅಕೇರಿಗೆ ಸಮಾದಾನ ಆದೆ. ಕಾಲೆ ವೇಸದಾರಿ ಒಂದ್ ಕೈಲಿ ಗಂಟೆಮಣಿ ಬೊಟ್ಟಿಕಂಡ್ ಇನ್ನೊಂದ್ ಕೈಲಿ ದೂಪಾರತಿ ಮಾಡ್ದೆ. ಮತ್ತೆ ರೋಗಿನ ಮೇಲೆ ಮಂತ್ರಿಸಿದ ನೀರ್ ಹಾಕಿದೆ. ನಾನ್ ನಿನ್ನ ಬುಟ್ಟು ಹೋನೆತ ಅಬಯ ಕೊಟ್ಟದೆ. ಮತ್ತೆ ಬಲಿನ ತೆಗ್ದ್ ರೋಗಿನ ತಲೆ ನಿವಾಳಿಸಿ ದೂರದ ಗುಡ್ಡೆಗೆ ಕರ್‌ಕಂಡ್ ಹೋದವೆ. ರೋಗಿನ ಮನೆ ಒಳಗೆ ಕರ್‌ಕಂಡೋದವೆ. ಬಲಿನ ತಕಂಡ್ ಹೋಗ್ವವರೊಟ್ಟಿಗೆ ಒಟ್ಟಿಗೆ ಸೂಟೆ (ಪಂಜು) ಹಿಡ್ಕಂಡ್ ಕಾಲೆ ವೇಸದಾರಿನು ಹೋದೆ. ಬಲಿನ ಹಳ್ಳದ ಕರೆಲಿಸುವೆ. ಮತ್ತೆ ಮಂತ್ರವಾದಿನು ಅಂವನ ಮಂತ್ರ ದಂಡಂದ ನೆಲದ ಮೇಲೆ ಗೆರೆ ಹಾಕಿ ನಿಂಗೆ ಯಾರೊಟ್ಟಿಗೆ ಹೋಕೆ ಮನ್ಸುಟ್ಟೋ ಅವರೊಟ್ಟಿಗೆ ಹೋಗು, ನಮ್ಮೊಟ್ಟಿಗೆ ಬರ್‌ಬೇಡತ ಹೇಳ್ದೆ. ವೇಷದಾರಿ ಅಂವನ ಅಲಂಕಾರ ಸಾದನಗಳ ಬಿಚ್ಚಿ ಬಲಿನ ಮೇಲೆ ಹಾಕಿದೆ. ಎಲ್ಲವೂ ಮನೆಗೆ ಹೋದವೆ. ಅಲ್ಲಿಂದ ಹೋಕನ ಯಾರೂ ತಿರ್‌ಗಿ ನೋಡಿಕಾಗದ್‌ತ ನಿಯಮ ಉಟ್ಟು. (ಪಿ.ಆರ್.)

**ಕಾವೇರಿ ಪುರ್‌ಸ :** ತುಲಾ ಸಂಕ್ರಮಣದ ದಿನ ಕೊಡಗ್‌ನ ತಲಕಾವೇರಿಲಿ ಕಾವೇರಿ ಜಾತ್ರೆ ನಡ್ದದೆ. ಸೂರ್‌ಯನ ತುಲಾ ರಾಶಿನ ಸೇರ್‌ವ ಪುಣ್ಯ ಕಾಲಲಿ ತಲಕಾವೇರಿನ ಕುಂಡಲಿ ಕಾವೇರಿ ಉದ್ಬವಿಸಿದೆ ತೇಳ್‌ವ ಪ್ರತೀತಿ ಉಟ್ಟು. ಅದರ್‌ಂದ ಈ ಸಂಕ್ರಮಣನ ಕಾವೇರಿ ಸಂಕ್ರಮಣ ತೇಳಿ ಕರ್‌ದವೆ. ಈ ಹಬ್ಬದ ಸುರುಂತೇಳಿ ಸಂಕ್ರಮಣಕ್ಕೆ ಹತ್ತ್‌ದಿನ ಮುಂದೆ ಅಂದರೆ ನಿರ್‌ನಾಳ್ (ಕನ್ಯಾ–ಅಕ್ಟೋಬರ್) ತಿಂಗಳ 20ನೇ ದಿನಂದ ನಲಿಕೆವು ಕಾವೇರಿ ಪುರುಸ ತೇಳ್‌ವ ಕೊಣ್‌ತನ ಮನೆ ಮನೆಗೆ ಹೋಗಿ ನಡ್ಸುವೆ ಈ ಕೊಣ್‌ತ ಹಗ್‌ಲ್ ಹೊತ್ತ್‌ಲಿ ನಡ್ದದೆ. ಇದ್ ಹೆಚ್ಚಾಗಿ ಸುಳ್ಯ ತಾಲೂಕ್‌ಲಿ ನಡ್ದದೆ. ಸುಳ್ಯ ತಲಕಾವೇರಿಗೆ ಬಾರಿ ಹಕ್ಕಲೆ ಇರ್‌ದಕೆ ಕಾರಣ ಜೋಗಿ ಪುರುಸರ್ ಸುಳ್ಯದ ತೊಡಿಕಾನಕೆ ಬಂದ್ ಮಲ್ಲಿಕಾರ್‌ಜುನ ದೇಸ್ತಾನಲಿ ನಿತ್ತ್ ಅಲ್ಲಿಂದ ಮಲೆ ಹತ್ತಿ ತಲಕಾವೇರಿಗೆ ಮುಟ್ಟಿದೊ ತೇಳುವ ವದಂತಿ ಉಟ್ಟು.

**ವೇಸಬೂಸಣಗ :** ಈ ಕೊಣ್‌ತಲಿ ಒಬ್ಬ ಕಲಾವಿದ ಇದ್ದದೆ. ಅಂವ ಕಾವೇರಿ ಪುರುಸನ ವೇಸ ತೊಟ್ಟಿದ್ದವೆ. ಸಂಬಾಷಣೆ ಮಾಡಿಕಂಡ್ ತೆಂಬರೆ ಬೊಟ್ಟಿಕೆ ಅವಂಗೆ ಇನ್ನೊಬ್ಬ ಜೆನ ಇದ್ದದೆ. ಕಾವೇರಿ ಪುರುಸ ವೇಸದಾರಿ ಮೂರ್‌ನಾಕ್ ಸೀರೆಗಳ ನೆರಿಗೆ ಹಿಡ್‌ದ್ ಒಂದ್ ಬೊಳ್ಳಿಲಿ

ಹಾಕಿ ಎರಡ್ ಅಂತರಲಿ ಸೊಂಟಕೆ ಕಟ್ಟಿಕಂಡದೆ. ಉದ್ದ ತೋಳುನ ಕೆಂಪು ಅಂಗಿ ಹಾಕಂಡಿದ್ದದೆ. ಹೆಗಲ್‌ಗೆ ಕೆಂಪು ಸಾಲ್ ಹೊದ್ದು ಅದರ ಎರಡ್ ಕೊಡಿಗಳ ಎದೆನ ಮೇಲೆಂದ ಇಳಿಬುಟ್ಟಿದ್ದದೆ, ಸೊಂಟಕ್ಕೆ ಕೆಂಪು ದಟ್ಟಿ ಕಟ್ಟಿಕಂಡಿದ್ದದೆ.

ಗಂಟ್ಲ್‌ಲೆ ಕೇಪುಳು ಹೂನ ದಂಡೆ ಹಾಕಂಡಿದ್ದದೆ. ತಲೆಗೆ ಬಟ್ಟೆಸುತ್ತಿ ಕಟ್ಟಿ ಅದರ ಎದುರಂದ ಚಕ್ರಾಕಾರದ ರಟ್ಟ್‌ನ ಕಟ್ಟಿಕಂಡಿದ್ದದೆ. ಇದ್ಕೆ ಎದುರು ಬಾಗಕೆ ಕೆಂಪು ಬಣ್ಣ ಬಳ್‌ದಿದ್ದದೆ. ಒಂದ್ ಚಿರಿ ಕಟ್ಟಿಕಂಡದೆ. ಇದರ ಹಾಳೆಲಿ ಇಲ್ಲರೆ ರಟ್ಟ್‌ಲಿ ಮಾಡಿದ್ದವೆ.ಕೆಬಿಗು ಹಾಳೆ ಇಲ್ಲರೆ ರಟ್ಟ್‌ಂದ ಮಾಡ್ದ ಎರಡ್ ಸಣ್ಣ ಚಕ್ರಾಕಾರದ ಕೆಬಿ ಅಣಿಗಳ ತೊಟ್ಟ್‌ಕಂಡದೆ. ಕಪ್ಪು ಬಿಳಿ ಬಣ್ಣದ ನಾರ್‌ಲಿ ಮಾಡ್ದ ತರೆ ಚವೆರಿನ ನೆತ್ತಿನ ಮುಂಡಾಸ್‌ನ ಗಂಟ್ಗೆ ಕಟ್ಟಿ ಬೆನ್ನ್ ಮೇಲೆಂದ ನೇತಾಡುವಂಗೆ ಮಾಡ್‌ವೆ.ಮೋರೆಗೆ ಅರ್ದಾಳದ ಮೆತ್ತಿ ಹಣೆಗೆ ಕೆಂಪು ಬೊಟ್ಟು ಇಸಿಕಂಡದೆ.ಕಣ್ಣ್‌ನ ಸುತ್ತ ಕಪ್ಪು ರೇಕೆಗಳ ಎಳ್‌ದ್ ಅದರ ಒಳೆಗೆಂದ ಕೆಂಪು ಬಣ್ಣ ಹಾಕಂಡಿದ್ದವೆ. ಹುಬ್ಬುಗೆ ಕಣ್ಣ್ ಕಪ್ಪು ಗಡ್ಡಕೆ ಬಿಳಿ, ಕೆಂಪು, ಕಪ್ಪುಬಣ್ಣದ ಚುಕ್ಕಿಗಳ ಇಸಿಕಂಡದೆ, ಕೈಲಿ ಒಂದ್ ದೊಣ್ಣೆ ಹಿಡ್‌ಕಂಡಿದ್ದದೆ.

**ಹಾಡು/ಸಂಬಾಷಣೆ :** ಈ ಕೊಣ್‌ತಕೆ ಪೊದ್ಯ ಇರ್‌ದುಲೆ. ವೇಸದಾರಿ ಹಿಮ್ಮೇಳದವನೊಟ್ಟಿಗೆ ಮಾತ್‌ಕತೆ ನಡ್‌ಸಿದೆ. ಮನೆನ ಇಜ್ಜಲ್‌ಗೆ ಮುಟ್ಟಿದಾಂಗೆ ಹಿಮ್ಮೇಳದಂವ ತೆಂಬರೆ ಬೊಟ್ಟಿ 'ಜೋಗಿ ಬಂದ ಜೋಗಿ ಬಂದ' ತೇಳ್‌ದೆ. ಅಸ್ಟರ್‌ಲಿ ಮನೆವು ಹೊರಗೆ ಬಂದವೆ. ಹಿಮ್ಮೇಳದಂವ ಮಾತ್ ಸುರು ಮಾಡ್‌ದೆ.

**ಹಿಮ್ಮೇಳ :** ಅಯ್ಯಾ, ಜೋಗಿ ಬಾತ್

**ಕೊಣ್‌ತ :** ಹೌದ

**ಹಿಮ್ಮೇಳ :** ಕಾಶಿ ಮಟಲಿ ಹುಟ್ಟಿಕೊಂಡನಯ್ಯ ಕದ್ರಿ ಮಟದಲ್ಲಿ ಬೆಳೆದು ಕೊಂಡನಯ್ಯ

**ಕೊಣ್‌ತ :** ಹೌದ

**ಹಿಮ್ಮೇಳ :** ಎಂಟ್ ಮಟ ತಿರುಗಾಡಿಕೊಂಡನಯ್ಯ ಶ್ರಿಂಗೇರಿ ಮಟಕ್ಕೆ ಹೋಗಿದ್ದನಯ್ಯಾ, ತುಂಬೆ ಮಟಕ್ಕೆ ಬಂದನಯ್ಯ, ಗೋಳಿಮಟ, ಅಂಬೆಮಟ, ಬೆದ್ರ ಮಟ, ಇಟ್ಟೇಲ ಮಟ, ಮರ್‌ಕಂಜ ಮಟಕೆ ಮುಟ್ಟಿದನಯ್ಯ

**ಕೊಣ್‌ತ :** ಹೌದ

**ಹಿಮ್ಮೇಳ :** ಕಾವೇರಿ ತೀರ್ತ ತಲಕಾವೇರಿಲ್ಲಿಟ್ಟು, ಕಾವೇರಿಯಮ್ಮವ ಸನ್ನಿದಿಗೆ ಹೋಗಬೇಕಯ್ಯ, ಕಾಶಿಯ ಗಂಗೆನ ಕಾವೇರಿಲಿ ನೋಡ ಬೇಕಯ್ಯ, ಹರಕೆ ಹೋಗಬೇಕಯ್ಯ,

**ಕೊಣ್‌ತ :** ಹೌದೆ

**ಹಿಮ್ಮೇಳ :** ಕಾವೇರಿಗೆ ಹೋಕಾರೆ ತೊಡಿಕಾನ ಮೇಲೇರಿ ನಡೆಯಬೇಕಯ್ಯ ಮೀನಾಂತ ಸರದಲ್ಲಿ ಮೀಯ ಬೇಕಯ್ಯ

**ಕೊಣ್ತ :** ಹೌದ

**ಹಿಮ್ಮೇಳ :** ತೊಡಿಕಾನ ಮೇಲಗಿ ನಡಿಬೇಕಯ್ಯ, ಅಲ್ಲಿ ದೇವ್ರುನ ಕಾಣಬೇಕಯ್ಯ ಮಲ್ಲಿಕಾರ್‌ಜುನನಿಗೆ ವಂದಿಸಿ ಬೇಗ ಪಯಣ ಬೆಳೆಸಬೇಕಯ್ಯ,

**ಕೊಣ್‌ತ :** ಹೌದ

**ಹಿಮ್ಮೇಳ :** ತೊಡಿಕಾನಲಿ ಮಿಂದರಯ್ಯ ದೇವರನ್ನು ಕಂಡರಯ್ಯ, ಗಂದಪ್ರಸಾದ ತೆಗೆದುಕೊಂಡರಯ್ಯ, ಗಟ್ಟ ಹತ್ತಿಕೊಂಡರಯ್ಯ, ಮೇಲಿನ ಗಟ್ಟ ಏರಿದರಯ್ಯ, ಗಟ್ಟ ಅಯ್ಯಪ್ಪ ದೇವರಿಗೆ ಕಾಣಿಕೆ ಮಾಡಿರಯ್ಯ, ಭಾಗಮಂಡಲ ದೇವರ ಸನ್ನಿದಾನಕ್ಕೆ ಹೋದರಯ್ಯ, ಸಂಗಮದಲ್ಲಿ ಸ್ನಾನ ಮಾಡಿಕೊಂಡರಯ್ಯ ಬಗಂಡೇಶ್ವರ ದೇವರಿಗೆ ಕಾಣಿಕೆ ಮಾಡಿದರಯ್ಯಾ, ತಲಕಾವೇರಿ ಗಟ್ಟ ಏರಿದರಯ್ಯಾ, ಕಾವೇರಿ ಗಟ್ಟ ಹತ್ತುವಾಗ ಬೀಮಕಲ್ಲ್ ಪರ್‌ವತ ನೋಡಿದರಯ್ಯಾ. ಕಾವೇರಿ ತಲದ ಗಿರಿ ಏರಿದರಯ್ಯಾ ಕಾವೇರಿ ತೀರ್ತ ಮಿಂದರಯ್ಯಾ ಕಾವೇರಿಯಮ್ಮನಿಗೆ ಕಾಣಿಕೆ ಮಾಡಿದರಯ್ಯಾ, ತೀರ್ತ ಪ್ರಸಾದ ಹಿಡಿದರಯ್ಯಾ ನೀವು ದೇವ್ರು, ನಾವು ಬರಿಯ ಜೋಗಿ ಪುರುಸರ್, ಕಾವೇರಿಯಮ್ಮವ ಜಾಗೆಲಿ ನೆಲೆಯಾಗಿ ನಿಲ್ಲುತ್ತೇವೆಯೆಂದರಯ್ಯಾ ಕಾವೇರಿ ಪಾದಕ್ಕೆ ಕಾಣಿಕೆ ಮಾಡಿದರಯ್ಯಾ, ಕಾವೇರಿ ತೀರ್ತಹಿಂದಕ್ಕೆ ಹಾಕಿ ಗಿರಿ ಏರಿದರಯ್ಯ, ಗುರುವನ್ನು ಕಾಣಬೇಕು ಎಂದರಯ್ಯಾ, ಪುಣ್ಯ ಕಟ್ಟಿಕೊಳ್ಳಬೇಕು ಎಂದರಯ್ಯ, ಗುರುವಿನ ಆಶೀರ್‌ವಾದ ಬೇಡಿದರೆಂದರಯ್ಯ, ಗುರುವಿನ ಅಪ್ಪಣೆ ಪ್ರಕಾರ ಮನೆಮನೆಗೆ ಹೋಗಿ ಬಿಕ್ಷೆ ಬೇಡಿಕೊಂಡು ಬರುತ್ತೇವೆ ಎಂದರಯ್ಯಾ. ಊರ್‌ಲಿ ಸಿಕ್ಕಿದ ಬೆಳೆ ಕಾಣಿಕೆಗಳನ್ನು ಕಾವೇರಿಯಮ್ಮನ ಪಾದಕ್ಕೆ ಮುಟ್ಟಿಸುತ್ತೇವೆ ಎಂದರಯ್ಯಾ, ನಾವು ಇಲ್ಲಿ ಗಣಗಳಾಗಿ ನಿಲ್ಲುತ್ತೇವೆ ಎಂದರಯ್ಯ ಊರಿಗೆ ಇಳಿಯುವಾಗ ಮರುಳು ಕೆಂಚಿರಾಯನಾಗಿ ಇಳಿಯುತ್ತೇವೆ ಎಂದರಯ್ಯಾ ಪೂಜೆ ನಡೆಸುತ್ತೇವೆ ಎಂದರಯ್ಯಾ

**ಕೊಣ್‌ತ :** ಹೌದ.

**ಹೆಜ್ಜೆಗಾರಿಕೆ :** ಈ ಕೊಣ್‌ತಲಿ ವಿಸೇಸ ಹೆಜ್ಜೆಗಾರಿಕೆ ಇಲ್ಲೆ. ಮಾತ್‌ಕತೆ ನಡಿವ ಹೊತ್ತುಗೆ ವೇಸದಾರಿ ದೊಣ್ಣೆ ಊರಿ ಅದರ ಮೇಲೆ ಕೈಂದ ತೂಕ ಹಾಕಿ ಎಡಕಾಲ್‌ನ ಮುಂದೆಗು ಹಿಂದೆಗು ಇಸುವೆ. ಹಿಮ್ಮೇಳದಂವ ಹೇಳ್ದಕ್ಕೆಲ್ಲ ಹೌದೆ ತೇಳಿ ತಲೆತೂಗ್‌ಸ್‌ವೆ. ಮಾತ್‌ಕತೆ ಮುಗ್ದ ಮೇಲೆ ಸಣ್ಣ ಸಣ್ಣ ಹೆಜ್ಜೆ ಇಸಿಕಂಡ್ ನೊಡುಲಿ ದೊಣ್ಣೆ ಊರಿ ಒಂದೆರಡ್ ಸುತ್ತು ತೆಗೆದದೆ. ಅಲ್ಲಿಗೆ ಕೊಣ್‌ತ ಮುಗ್ದದೆ. ಕೊಣ್‌ತದ ಸುರೂಲಿ ಕೋಣಿಯಂವ ಜೋರಾಗಿ ಶಂಕ ಉರ್‌ಗುವ ಕ್ರಮ ಉಟ್ಟು.

**ಆಚರಣೆ :** ಕೊಣ್‌ತ ಸುರು ಮಾಡಿಕೆ ಮುಂದೆ ಕೊಣ್‌ತದ ತಂಡದವು ತೊಡಿಕಾನ ಇಲ್ಲರೆ ಪೆರಾಜೆ ದೇಸ್ತಾನಕೆ ಹೋಗಿ ಪ್ರಾರ್ತನೆ ಮಾಡಿ ಕೊಣ್‌ತಕೆ ಮೂರ್‌ತ ಕೇಳುವೆ. ಕೊಣ್‌ತ ನಡ್‌ಸಿಕಂಡ್ ಮನೆ ಮನೆಗೆ ಹೋಕನ ಒಟ್ಟಿಗೆ ಒಬ್ಬ ಆದಿದ್ರಾವಿಡನ ಕರ್‌ದುಕೊಂಡು ಹೋದವೆ. ಪ್ರತಿ ಮನೆಲಿ ತಂಡದವ್‌ಕೆ ಬತ್ತ, ದುಡ್ಡುನ ಒಟ್ಟಿಗೆ




ಸೌತೆಕಾಯಿ, ಉಪ್ಪು, ಅಕ್ಕಿ, ಮೆಣ್‌ಸ್ ತೆಂಗಿನಕಾಯಿ ಇತ್ಯಾದಿಗಳ ಕೊಟ್ಟವೆ. ದಾರಿಲಿ ಹೋಕನ ಸಿಕ್ಕಿದ ಯಾದಾದರೊಂದು ನೆಟ್ಟಿಕಾಯಿ ಜೊತೆಗಾರ ಕಿತ್ತ್ ತಕಂಡದೆ. ಕೊಣ್‌ತಲಿ ಸಿಕ್ಕಿದ ತರಕಾರಿ ಹೊರೆನ ತಲಕಾವೇರಿಗೆ ಮುಟ್ಟಿಸೋಕು. ಅದ್ ಸಾದ್ಯ ಆಗದೆ ಹೋಕನ ಯಾದಾದರೊದು ದೇಸ್ತಾನಕಾರ್. ಮುಟ್ಟುಸಕು ದೇಸ್ತಾನಕೆ ಹೋಕನ ಅವರ ಒಟ್ಟಿಗೆ ಒಬ್ಬ ಬ್ರಾಹ್ಮಣನನ ಕರ್‌ಕಂಡ್ ಹೋಕು. ಊರುನ ದೊಡ್ಡವರ ಮನೆಲಿ ವರ್‌ಸಕೊಮ್ಮೆ ಕೆಂಚಿರಾಯ ಪೂಜೆ ನಡ್‌ದದೆ. ಈ ಪೂಜೆಲಿ ಅಜಲರ್ ಇದ್ದವೆ. ಒಂದ್ ಮುಡಿ ಅಕ್ಕಿ, ಹುಗ್ಗೆ, ರೊಟ್ಟಿ, ಒಂದ್ ಆಡ್‌ನ ಮಾಸದ ಅಡ್‌ಗೆ ಮಾಡಿ ಎಡೆ ಬಳ್ಸುವೆ. ಹಂದಿ ತಲೆ ಕಡ್ದ್ ಕೆಂಚಿರಾಯಂಗೆ ರಕ್ತದತರ್‌ಪಣ ಕೊಟ್ಟವೆ. ಪೂಜೆ ಆದ ಮೇಲೆ ಸೇರ್‌ದವೆಲ್ಲ ಊಟ ಮಾಡ್‌ವೆ. ಕೆಂಚಿರಾಯ ಪೂಜೆಲಿ ಜೋಗಿ ಪುರುಸ ಕೊಣ್‌ತದವು ಸೇರುವೆ. (ಪಿ.ಕೆ.)

**ಕಾವೇರಿ ಸಂಕ್ರಮಣ :** ಶ್ರೀ ಮೂಲ ಕಾವೇರಮ್ಮನ ಪವಿತ್ರ ತೀರ್‌ತೋತ್ಸವದ ದಿನ ನಡಿವ ಹಬ್ಬ. ಇದ್ ತುಲಾಸಂಕ್ರಮಣದ ದಿನ ನಡ್ದದೆ. ಒಂದ್ ಕುಟುಂಬಲಿ ಒಬ್ಬ ಆದರೂ ಶ್ರೀಕಾವೇರಿ ಉದ್ಬವ ಸ್ತಾನಕೆ ಹೋಗಿ ಪುಣ್ಯತೀರ್ತನ ತಂದವೆ. ಮನೆಲಿ ಹಿರಿಯರ್ ತೀರಿ ಹೋಗಿದ್ದರೆ ಕ್ರಮಕೆ ನಿತ್ತವು ಹೆಣ್ಣ್ ಸತ್ತರೆ ಗಂಡ, ಗಂಡ ಸತ್ತರೆ ವಿದವೆ ಹೆಣ್ಣ್ ಭಾಗಮಂಡಲಕೆ ಹೋಗಿ ತೀರ್‌ತ ಮೀದ್ ಸತ್ತವ್ಕೆ ಪಿಂಡ ಹಾಕಿ ತೀರ್ತನ ಮನೆಗೆ ತಂದವೆ. ಮನೆಗೆ ತೀರ್ತ ತಾವ ದಿನದ ಹಿಂದೆನ ದಿನ ಗದ್ದೆ ತೋಟಗಳ ಸಿಂಗಾರ ಮಾಡಿಕೆ 'ಬೆತ್ತು' ಮರದ ಕೋಲುನ ಎಲ್ಲಾ ಗದ್ದೆಗಳಿಗೆ ನೆಟ್ಟ್ ಬಿತ್ತು ಬೊಳ್ಳಿತೇಳ್ವ ಬೊಳ್ಳಿನ ಸೊಪ್ಪುನ ಅಲಂಕಾರ ಮಾಡ್ವೆ. ಕುಟುಂಬದ ಏಕಲಿಲಿ ಒಂದ್ ಬೆತ್ತು ಕೋಲ್‌ನ ಗುಂಪುನ ನೆಟ್ಟ್ ಅಲ್ಲಿ ಸುಮಾರ್ ಬೆತ್ತಿನ ಸೊಪ್ಪುಗಳ್‌ಂದ ಸಿಂಗಾರ ಮಾಡಿ ಮನೆನ ಯಜಮಾನ್ತಿ ತೀರ್ತೋದ್ಬವ ಆವ ದಿನ ಮಾಡ್‌ವ ತಿಂಡಿ ತಿನ್ಸ್‌ಗಳ ಬೆತ್ತ್‌ಂದ ಅಲಂಕಾರ ಆದ ಕೋಲುಗಳ ನೆಟ್ಟದರ ಮೇಲೆ ಬಾಳೆಲೆ ಇಸಿ ದೀಪ ಹೊತ್ತುಸಿ ಗಂದದ ಕಡ್ಡಿ ಹೊತ್ತುಸಿ ನೈವೇದ್ಯನ ಇಸಿ ಶ್ರೀ ಕಾವೇರಮ್ಮನ ನೆನ್ಸಿಕಂಡ್ ಜೋರುಲಿ ಹೇಳ್‌ವೆ. ಶ್ರೀ ಕಾವೇರಿ ತೀರ್ತನ ಮನೆಗೆ ತರುವ ದಿನ ಎಲ್ಲವೂ ಮೀದ್ ಸುದ್ದ ಆದ ಬಟ್ಟೆಲಿ ಹೋಗಿ ತಂದ ತೀರ್ತನ ಪೂಜೆ ಮಾಡಿ ಮನೆವೆಲ್ಲವೂ ತಕಂಡ್ ನೆರೆಹೊರೆನವ್ಕೆ ಕಳ್ಸಿಕೊಟ್ಟವೆ. ಆ ದಿನ ಅವು ಮಾಡ್ದ ಅಡ್ಗೆನ ಬಂದ ಜೆನಂಗಳಿಗೆ ದಾನ ಮಾಡ್‌ವೆ. (ಪಿ.ಬಿ.)


ಕಾವೇರಿ ಸಂಕ್ರಮಣ

**ಕೊಲೆ ಆರಾದನೆ :** ಸರ್‌ನ ಬುಟ್ಟ್ ಹೋದ ಆತ್ಮ ಮತ್ತೆಲ್ಲಿಗೆ ಹೋದೆ ತೇಳುವ ಬಗ್ಗೆ ಸಿಸ್ಟ ಸಂಪ್ರದಾಯಲಿ, ಬೇರೆ ಬೇರೆ ದರ್ಮಗಳ್‌ಲಿ ಮತ್ತೆ ಬೇರೆ ಬೇರೆ ಪಂತಗಳ್‌ಲಿ ವೈವಿದ್ಯಮಯ ಆದ ವಿವರಣೆಗ ಉಟ್ಟು. ಕೆಲೊವು ಪುನರ್‌ಜೆನ್ಮದ ಬಗ್ಗೆ ಹೇಳಿರೆ, ಆ ವಾದನ ವಿರೋದಿಸಿ ಆತ್ಮ ನೇರ ಆಗಿ ಪರಮಾತ್ಮನ ಕಡೆಗೆ ಸಾಗಿ ಮೋಕ್ಸನ ಪಡ್‌ದದೆ ತೇಳಿ ಕೆಲ ಮತಗ ಸಾರುವೆ. ನರಜನ್ಮಲಿ ಮಾಡ್‌ದ ಪುಣ್ಯ ಪಾಪಗಳಿಗನುಸಾರ ಆಗಿ ಆತ್ಮ ಸೊರ್‌ಗ ನರ್‌ಕ ಸುಕ ಕಸ್ಟಗಳ್‌ನ ಅನುಬೋವಿಸುವೆ ತೇಳಿ ಪುರಾಣಗ ಹೇಳಿರೆ 'ಆತ್ಮಕ್ಕೆ ಸಾವಿಲ್ಲೆ. ಅಂವ ಕತ್ತರಿಸಲಾಗದಂವ, ಸುಡಿಕೆ ಆಗದಂವ, ಸೆಂಡಿನೂ ಮತ್ತೆ ಒಣ್‌ಗಿಸಿಕೂ ಆಗದಂವ, ಅಂವ ನಿತ್ಯ ಸರ್‌ವಗತ, ಸ್ತಿರ, ಆಚಲ ಮತ್ತೆ ಸನಾತನ' ತ ಬಗವದ್ಗೀತೆಲುಟ್ಟು. ಹಿಂಗೆ ಆತ್ಮದ ಬಗ್ಗೆ ಕಲ್ಪನೆಗ ಪರಸ್ಪರ ವಿರೋದಾಬಾಸನ ಸೃಸ್ಟಿ ಮಾಡ್‌ದೆ.

ಪ್ರಾಚೀನ ಕಾಲಲಿ ಸೈವಾಲಯಗಳ ಹಕ್ಕಲೆ ಅಲ್ಲರೆ ಒಳೆಗೆ ಸತ್ತವರ ಸುಡ್‌ವ ಇಲ್ಲರೆ ಚಿತಾಬಸ್ಮನ ಹೂಳಿ ಹಾಕ್‌ವ ಸಂಪ್ರದಾಯ ಇದ್ದಿರಕು. ತಮಿಳ್‌ನಾಡ್‌ನ ನಾಟು ಕೋಟಿ ಚೆಟ್ಟಿಯಾರರ ಹಳೆ ಸಿವಾಲಯಗಳ್‌ನ ದುರಸ್ತಿ ಮಾಡಿಸಿಕಾಕನ ಗರ್‌ಬ ಗುಡಿಲಿ ಬೂದಿ, ಮೂಳೆಗ, ಮಡ್‌ಕೆ ಚೂರುಗ ಸಿಕ್ಕಿದ ನಿದರ್‌ಸನಗ ಒಳೊ. ತಮಿಳ್‌ಲಿ ಹೆಣನ ಸುಡುದು ಇಲ್ಲರೆ ಹೂಲ್ದು ಕಡೆಕಟ್ಟಿನ ಗುಡಿಗೆ ಹೆಣ್ಣ್ ಪಡೆ ತೇಳುವೆ. ಪಲ್ಪಿ ತೇಳಿರೆ ತಮಿಳ್‌ಲಿ ಸಾಸ್ವತ ನಿದ್ದೆ ತೇಳುವ ಅರ್‌ತ, ತಮಿಳ್ ಸಾಸನಗಳ್‌ಲಿ ಸುಮಾರ್ ಕಡೆ ಪೊಲ್ಲಿ ಪಡೆಗಳ ಉಲ್ಲೇಕಗ ಉಟ್ಟು. ಕ್ರೈಸ್ತ ಮತ್ತೆ ಇಸ್ಲಾಂ ದರ್ಮಗಳ್‌ಲಿ ಸತ್ತವರ ಆರಾದನಾ ಜಾಗೆನ ಹಕ್ಕಲೆನೇ ಹೂಳ್‌ವ ಪೊದ್ದತಿ ಇತ್ತೀಚೆಗಿನವರೆಗೂ ಇತ್ತ್. ಅದರ್‌ಂದನೇ ಈ ಆರಾದನಾ ಕೇಂದ್ರಗಳ ಪಟ್ಟಿ ತೇಳಿ ತುಳು, ಮಲಿಯಾಳಿ ಮತ್ತೆ ತಮಿಳ್‌ಲಿ ಕರ್‌ದವೆ. ಪುತ್ತೂರ್‌ನ ಶ್ರೀ ಮಹಾಲಿಂಗೇಸ್ವರ ದೇಸ್ತಾನದ ಮುಂದೆ ಈಗೊಳೂ ಸುರುಕುಳಿ ಉಟ್ಟು. ದಿನೋಳು ಸುರುಕುಳಿಂದ ಸುದ್ದ ಚಿತಾಬಸ್ಮನ ತಂದ್ ಈ ದೇಸ್ತಾನಲಿ ಸಿವನ ಪೂಜೆಮಾಡ್‌ತಿದ್ದೊ ತೇಳುವ ಹೇಳಿಕೆ ಉಟ್ಟು. ಮಾದ್ವ ಸಂಪ್ರದಾಯದವ್‌ಕೆ ಈ ದೇಸ್ತಾನದ ಅರ್‌ಚನೆನ ಹಕ್ಕ್ ಬಂದ ಮೇಲೆ ಬಕ್ತರ್‌ಗೆ ಬಸ್ಮ ವಿತರಣೆ ನಿತ್ತ್ ಹೋಗಿ, ಶ್ರೀಗಂದ ವಿತರಣೆದ್ ಪೊದ್ದತಿ ರೂಡಿಗೆ ಬಾತ್.

ತುಳುನಾಡ್‌ಲಿ ಹಿಂದುಗಳ್‌ಲಿ ಹೆಚ್ಚಿನೊವು ಹೆಣನ ಸುಟ್ಟವೆ. ಸುಡಿಕೆ ಮಾಯಿನ, ಹಲ್ಸ್, ಶ್ರೀಗಂದ ಮತ್ತಿತರ ಮರಗಳ ಬಳ್‌ಸುವೆ.

12 ವರ್ಸಕ್ಕಿಂತ ಕೆಳಗೆನ ಮಕ್ಕ ಸತ್ತರೆ ಮತ್ತೆ ಏನಾರ್ ಸಾಂಕ್ರಾಮಿಕ ರೋಗಂದ ಯಾರಾದರ್ ಸತ್ತರೆ ಅವರ ಹೆಣನ ಮಾತ್ರ ಹೂಳುವೆ. ಸುಟ್ಟ ಮೇಲೆ ಕಿಚ್ಚಿಂದ ಬೂದಿ ಗಾಳ್‌ಸಿ ಹೊಸ ಮಡ್‌ಕೆಲಿ ತುಂಬುಸಿ ಸುಟ್ಟ ಜಾಗೆನ ನೊಡುಲಿ ಹೊಂಡ ತೆಗ್‌ದ್ ಆ ಮಡ್‌ಕೆನ ಅಲ್ಲಿ ಹೂಳಿ ಅದರ ಮೇಲೆ ದೂಪೆ ಕಟ್ಟುದು ರೂಡಿ. ಈ ದೂಪೆ ಬ್ರಾಹ್ಮಣ್‌ರಲಿ ತ್ರಿಕೋನಾಕಾರ್‌ಲಿದ್ದರೆ ಉಳಿದವರ್‌ಲಿ ಕಂಬಾಕಾರಲಿ ಇದ್ದದೆ.. ಈ ಸ್ತೂಪದ ಮೇಲೆ ಕಲ್ಲ್ ಸಿಮೆಂಟ್‌ನ ಬಳ್‌ಸಿ ಸಾಸ್ವತ ಆದ ಗೋರಿ ಕಟ್ಟ್‌ವ ಕ್ರಮನೂ ಉಟ್ಟು. ಸ್ತೂಪನ ತುಳು ಬಾಸೆಲಿ ದೂಪೆ ತೇಳುವೆ. ದೂಪೆ ಮಾಡ್‌ದ ಜಾಗೆಲಿ ಬ್ರಾಹ್ಮಣೇತರರ್‌ಲಿ, ಮೃತರ ಗೌರವಾರ್ತ ಮನೆತನದ ಆರ್ತಿಕ ಮಟ್ಟಕೆ ಅನುಗುಣ ಆಗಿ ಮರಂದ ಗೂಡ್‌ಕಟ್ಟ್‌ವ ಪೊದ್ದತಿ ಉಟ್ಟು. ಈ ಗೂಡುಗೆ ಒಂದ್ ವಿಸೇಸ ಜೆನಪದ ಪರಂಪರೆನ ಕಲಾ ಸಂಪನ್ನತೆ ಉಟ್ಟು. ಗೂಡ್‌ಲಿ ನಿಲೆಗೂಡು ಮತ್ತೆ ಬೆಲಗೂಡು (ದೇಲಗೂಡು) ತೇಳ್‌ವ ಎರ್‌ಡ್ ನಮೂನೆಗ. ಗೂಡ್‌ಲಿ 11 ಅಲ್ಲರೆ 13 ಅಡೆಗೆ ಇದ್ದವೆ. ಕೀಸಿದ ನಾಕ್ ಕಮ್ಮಿನ ತಟ್ಟೆನ ದೂಪೆನ ಸುತ್ತ ನೆಟ್ಟವೆ. ಆ ಸಲಿಕೆಗಳಿಗೆ ಒಂದೂವರೆ ಅಡಿ ದೂರಂದ ದೂರಕೆ ಒಂದೊಂದ್ ಗುಂಡಿ ತೆಗ್‌ದವೆ. ಅಲ್ಲಿಗೆ ಸೀಳ್ ಮಾಡಿ ಇಸಿಕಂಡ ಎರಡೆರೆಡ್ ಅಡಿ ಉದ್ದದ ಸಪೂರ ತಟ್ಟೆಗಳ ಜೋಡ್‌ಸುವೆ. ಮತ್ತೆ ಹೊರಬಾಗಂದನೂ ತಟ್ಟೆ ಕಟ್ಟಿ, ಬದ್ರ ಮಾಡ್‌ವೆ. ಈಗ ಒಂದೊಂದ್ ಚೌಕಟ್ಟ್ ಕಟ್ಟಿದಂಗೆ ಆದೆ. ತುದಿಗೆ ಹೊಂಗಾರಕನ ಮರದ ತುಂಡ್‌ಂದ ಮಾಡ್ದ ಕಲ್ಸದ ಆಕೃತಿನ ಕಟ್ಟುವೆ. ಒಂದೊಂದ್ ಅಂತಸ್ತಿಗೂ ಒಂದೊಂದ್ ಬಣ್ಣದ ಬಟ್ಟೆನ ಹೋಸುವೆ. ಸುತ್ತ ಮಾಯಿನ ಸೊಪ್ಪು ಮತ್ತೆ ಪಿಂಗಾರಂದ ಸಿಂಗರ್‌ಸುವೆ.ಇದ್ ನಿಲೆಗೂಡು, ದೆಲಗೂಡು ತಯಾರಿ ಇದರ್‌ಂದ ಹಿಚ್ಚು ಬೇರೆ ಇದ್ದದೆ.ದೂಪೆ ಇರ್‌ವ ಜಾಗೆಲಿ ಸಾದಾರಣ ಎಂಟ್ ಅಡಿ ಚೌಕ ಆವರಣಲಿ ಸೀಮೆ ಕೋಲಿನ 7 ಅಡಿ ಎತ್ತರದ ಕಂಬಗಳ್‌ನ ನೆಟ್ಟವೆ, ಆ ಚೌಕದ ಒಳೆಗೆ ಸಮಾನ ಅಂತರಲಿ ಮತ್ತೊಂದ್ ಚೌಕನ ಕಟ್ಟುವೆ. ಹೊರಮೈ ಚೌಕದ ಮೇಲೆನ ಬಾಗನ ಸೀಮೆಕೋಲ್‌ನ ಸಲಿಕೆಂದ ಮಾಡ್‌ನಂಗೆ ರಚನೆ ಮಾಡ್‌ವೆ. ಈ ಇಡೀ ರಚನೆಗೆ ನೆಲದವರೆಗೆ ಬಣ್ಣ ಬಣ್ಣದ ಬಟ್ಟೆಗಳ್‌ನ ಮುಚ್ಚಿ ಅಲಂಕರಿಸುವೆ. ಸುತ್ತೊಳು ಹಿಂಗಾರ, ಹೂ, ಕೆಂಬಡೆ, ಕಾಯಿ, ಬಾಳೆಕಾಯಿಗಳ್‌ನ ಕಟ್ಟುವೆ. ಒಳೆಗೆನ ಚೌಕಲಿ ಇಕ್ಕಿಕೆ ವೆವಸ್ತೆ ಮಾಡ್‌ವೆ. ಮಾಡ್‌ನ ಮೇಲೆನ ಬಾಗಲಿ ಹೊಂಗಾರಕನ ಮರಂದ ಮಾಡ್‌ದ ಕಲಸ ಇಟ್ಟವೆ. ಇದ್ ದೆವ್ವದ ಗುಡಿನಂಗೆ ಕಂಡದೆ. ಇತ್ತೀಚೆಗೆ ಸಿಮೆಂಟ್, ಕಲ್ಲ್, ಮೊಣ್ಣು, ಸುಣ್ಣನ ಬಳ್ಸಿ ಗುರ್‌ಜಿ ಕಟ್ಟುವೆ. ಈ ಗುರ್‌ಜಿನ ರುಂದನ (ವೃದಾವನ) ತೇಳುವೆ.

ಮೊನ್‌ಸ ತಾನ್ ಸತ್ತ ಮೇಲೂ ಸನು ತನ್ನ ಮನೆ, ರೂಪ ಮತ್ತೆ ಪರಿಸರಲಿ ಕಾಣದ ರೂಪಲಿ ಅಸ್ತಿತ್ವದಲ್ಲಿದ್ದದೆ ತೇಳುದರ್‌ನ ಪ್ರಾಚೀನ ಕಾಲಂದನೂ ಜೆನಗ ನಂಬಿಕಂಡ್ ಬಂದೊಳೊ. ಈಜಿಪ್ಟ್, ಗ್ರೀಸ್, ರೋಮ್ ದೇಸಗಳ ಪುರಾತನ ನಾಗರಿಕ ಕೇಂದ್ರದ ಸಂಸೋದನೆಲು ಈ ಸಂಗತಿ ಹೇಳಿಯೊಳೊ. ಮೊನ್‌ಸ ಜಿವಲಿರಿಕನ ಯಾವ್ಯಾವ ಕೆಲ್ಸಗಳ ಮಾಡ್‌ತಿತ್ತೊ ಅದೇ ಕೆಲಸಗಳ ಸತ್ತ ಮೇಲೆನೂ ಮಾಡ್‌ತಿದ್ದದೆಂತೇಳುವ ಕಾರಣಂದನೆ ಹೊಂಡಗಳ್‌ಲಿ ಹೆಣಗಳ ಹೂಳಿಕಾಕನ ಒಟಟಿಗೆ ಅಂವ ದಿನೊಳು ಬಳ್ಸ್‌ವ ಸಾಮಾನ್‌ಗ,ತಿಂಡಿ ತಿನ್ಸ್‌ಗಳನು ಹೂಣ್‌ತಿದ್ದೊ. ಕೆಲೊವೊಂದ್ ಕಡೆಗಳ್‌ಲಿ ರಾಜ ಸತ್ತಾಕನ ಅಂವನೊಟ್ಟಿಗೆ ಅಂವನ ಸೇವಕರನು ಗೋರಿಲಿ ಹೂಳುವ ಕ್ರಮ ಇತ್. ಈಜಿಪ್ಟ್ ನ ಪೆರೋ (ರಾಜ) ಗಳ ಮಮ್ಮಿಗಳ ಹಕ್ಕಲೆ ಅಲಂಕಾರದ ಬಣ್ಣಗ, ಕನ್ನೆಡಿ, ಕೂದೊಲುನ ಪಿನ್ನ್, ಬಾಚಣಿ ಕ್ಷೌರದ ಕತ್ತಿಗಳ್‌ನ ಹೂಣ್‌ದ್ ಕಂಡ್ ಬಂದದೆ. ವಿದೇಸಗಳ್‌ಲಿ ಮಾತ್ರ ಅಲ್ಲದೆ ಸುಡ್‌ವ ಪೊದ್ದತಿ ರೂಡಿಲಿದ್ದ ಕರ್ನಾಟಕಲಿನು ರಾಜರ್ ಸತ್ತಾಕನ ಅಂತಪುರದ ಎಲ್ಲಾ ರಾಣಿಗ ಅವರೊಟ್ಟಿಗೆ ಕಿಚ್ಚಿಗೆ ಹಾರತಿದ್ದೊತ ಲಿಸ್ಬನ್‌ನ ಪ್ರವಾಸಿ ದುಆರ್ತೆ ಬಾರ್‌ಬೋಸಾ ವಿವರಿಸುವೆ. ಅಸ್ಟೇ ಅಲ್ಲದೆ ಅರಮನೆನ ದಾಸಿಗ, ರಾಜನ ಆಪ್ತ ಸೇವಕರ್, ದೋಸ್ತಿಗ ಸನ ಬೆಂಕಿಗೆ ಬೀಳ್‌ತಿದ್ದೊತೇಳುದು ಪೋರ್‌ಚುಗೀಸ್ ಪ್ರವಾಸಿ ಡೊಮಿಂಗೂ ವಾಯೇಸ್ ಬರ್‌ದುಟು. ಕ್ರಿ. ಸ. 1577 ವೆನಿಸ್‌ಂದ ಬಂದ ಸೀಜರ್ ಪೆಡ್ರಿಕ್ ಗಂಡ ಸತ್ತಾಕನ ಹೆಣ್ಣ್‌ನಸ ಕೊಲ್ಲುವ ಒಂದ್ ಅಮಾನುಸ ವಿದಾನನ ಹಿಂಗೆ ಹೇಳಿಟು.'ಗಂಡನ ಹೆಣನ ಕುದ್ರ್‌ಸಿ ಹೆಣ್ಣ್ ಅಂವನ ತಬ್ಬಿಕಂಡ್ ಕುದ್ದ್ ಕಂಬಂಗೆ ಹೇಳಿ, ಅವರ ಸುತ್ತೊಳು ಗೋಡೆನ ಕಟ್ಟಿಸಿದೊ. ಇನ್ನೇನ್ ಗೋಡೆನ ಮುಚ್ಚೊಕು ತೇಳ್‌ಕಾಕನ ಗಂಡ್‌ಸೊಬ್ಬ ಬಂದ್ ಅವಳ ಗಂಟ್ಲ್‌ನ ಪಿಳ್‌ಂಚಿ ಕೊಂದ್ ಬುಟ್ಟ ಮೇಲೆ ಗೋಡೆನ ಇಡಿ ಆಗಿ ಮುಚ್ಚಿಬುಟ್ಟೊ.

ಅರೆಬಾಸೆನ ಪ್ರದೇಸಲಿರುವ ಬ್ರಾಹ್ಮಣೇತರರ್‌ಲಿನೂ ತೀರಿಹೋದ ಮೇಲೆ ಸಮ್ಮಂದಗಳ ಬಗ್ಗೆ ಸುಮಾರ್ ನಂಬಿಕೆಗ ಒಳೊ. ಮನ್‌ಸ ಸತ್ತ ಮೇಲೂ ಅಂವನ ಜೀವ ಅಸ್ತಿತ್ವದಲ್ಲಿದ್ದದೆ. ಇದರ 'ಕೊಲೆ' ತೇಳುವೆ. ಕೊಲೆಗ ನಿರಾಕಾರದಲ್ಲಿದ್ದ್ ತಮ್ಮ ಕುಟುಂಬದವರ ಆಗು ಹೋಗುಗಳ ನೋಡ್‌ತ್ತಿದ್ದವೆ. ಅವರ ಇಸ್ಟಗಳ ಈಡೇರ್‌ಸುವೆ, ಅನಿಸ್ಟಗಳ್‌ನ ದೂರ ಮಾಡ್‌ವೆ. ಕೊಲೆಗಳಿಗೆ ಕಾಲಕಾಲಕ್ಕೆ ಗಂಜಿ ನೀರ್ ಕೊಡದೆ ಹೋದರೆ ತೊಂದರೆ ಕೊಟ್ಟವೆತೇಳುದು ಜೆನರ ನಂಬಿಕೆ. ಈ ನಂಬಿಕೆ ಪುನರ್‌ಜೆನ್ಮದ ಮತ್ತೆ ಸೊರ್‌ಗ–ನರಕಗಳ ಕಲ್ಪನೆನ ದೂರ ಮಾಡ್ದೆ. ಆದ್‌ರೆ ಜೈನ–ಬೌದ್ದ ಸಂಪ್ರದಾಯಗ ಮತ್ತೆ ಪುರಾಣಗ ತುಳುಜೆನಪದರ ಮೇಲೆ ಬಾರೀ ಪ್ರಬಾವ ಬೀರಿರುದರ್‌ಂದ ಅವು ತಮ್ಮ ಮಾತ್‌ಲಿ ಪುನರ್‌ಜೆನ್ಮ ಮತ್ತೆ ಸೊರ್‌ಗ– ನರಕಗಳ್‌ನ ಬಳ್ಸಿಕಂಡವೆ.ಚಟ್ಟಲಿರ್‌ವ ಹೆಣಕೆ ಕಡೆ ಸರ್‌ತಿ ಬಾಯಿಗೆ ನೀರ್ ಬುಡಿಕಾಕನ ಸೊರ್‌ಗಕ್ಕೆ ಹೋಗಿ' ತೇಳುವೆ. ಅನ್ಯಾಯ ಮಾಡ್‌ದವು ಹಂದಿ ಆಗಿ ಹುಟ್ಟಲಿ ತೇಳಿ ಬೊಯ್ದುವೆ. ಹದ್‌ನಾರ್ ತಲೆಮಾರ್‌ನವರೆಗೆ ಈ ಲೋಕಲಿ ಕೊಲೆಗಳಾಗಿದ್ದ್ ಮತ್ತೆ ಮೋಕ್ಸನ ಪಡ್ದವೆ ತೇಳುವ ಕಲ್ಪನೆ ಜೆನಪದರದ್ದಾದರೆ ತಲೆಮಾರ್‌ನವರೆಗೆ ಆತ್ಮಗ




ವರ್ಸಪ್ರತಿ ಕೊಡ್‌ವ ಗಂಜಿ ನೀರ್‌ನ ಉಂಬಕೆ ತಮ್ಮ ಹಿರಿಯರ ಹಕ್ಕಲೆ ಸೊರ್‌ಗಂದನೋ, ನರಕಂದನೋ, ಅಲ್ಲರೆ ವೈಕುಂಟ (ಮೋಕ್ಷ) ಂದನೋ ಬರ್‌ತ್ತಿದ್ದವೆ ತೇಳುವ ನಂಬಿಕೆ ವೈದಿಕ ಸಂಪ್ರದಾಯದಲಿ ಉಟ್ಟು. ಹಿಂದುಗಳ್‌ಲಿ ಸತ್ತ ಹನ್ನೊಂದನೇ ದಿನ ಸುದ್ದ, ಹನ್ನೆರಡನೆ ದಿನ ಬೊಜ್ಜ ಅಲ್ಲರೆ ಉತ್ತರ ಕ್ರಿಯೆ ನಡೆದದೆ. ಹನ್ನೆರಡನೇ ದಿನ ಸತ್ತಂವ ಕೊಲೆಯಾಗಿ ಪರಿವರ್‌ತನೆ ಆದೆ, ಸತ್ತ ಹದಿನಾರನೆನ ದಿನ ಬ್ರಾಹ್ಮಣೇತರ ತುಳುವರ್‌ಲಿ ಕೊಲೆನ ಮನೆಯೊಳಗೆ ಕರಿವ ಕ್ರಮ ಉಟ್ಟು, ಇದರ 'ಹದಿನಾರು ಕುಲೆಗಳೊಟ್ಟಿಗೆ ಸೇರಿಸುವ ಕ್ರಮ' ತೇಳಿವೆ. ಮನೆಯೊಳಗೆ ಅನ್ನ, ಕೋಳಿಗೈಪು ಮಾಡಿ ಹದ್‌ನಾರ್ ಕೊಡಿ ಎಲೆಗಳ್‌ಲಿ ಇಕ್ಕುವೆ. ಹದಿನೈದರ್‌ನ ಒಂದೇ ಸಾಲ್‌ಲಿಟ್ಟ್ ವ್ಯಕ್ತಿಯ ಹೆಸರ್‌ನ ಅತವಾ ಸತ್ತ ವ್ಯಕ್ತಿ ಅಂವನಿಗಿಂತನೂ ಹಿರಿಯಂವಾಗಿದ್ದರೆ ಸಮ್ಮಂದ ಸೂಚಕ ಪದಂದ ಸಂಬೋದಿಸಿ ಕರ್‌ಕಂಡ್ ಅಂಗಳಂದ ಮನೆಯೊಳೆಗೆ ಬಂದದೆ. ಬರೊ ದಾರಿನ ಏರ್ ತಗ್ಗ್ ಗಳ ಬಗ್ಗೆ ಸೂಚನೆ ಕೊಟ್ಟದೆ. ಒಳೆಗೆ ಬಂದ ಮೇಲೆ ಬಂದು, ಕುಟುಂಬದವರೊಟ್ಟಿಗೆ ಕೂಡಿ ಸತ್ತವ್ಯಕ್ತಿನ ಹಿರಿಯರೊಟ್ಟಿಗೆ ಸೇರಿಕಾ" ತೇಳಿ ಪ್ರಾರ್‌ತನೆ ಮಾಡಿ ಹದಿನಾರನೇ ಎಲೆನ ಎಳ್‌ದ್ ಹದಿನೈದರ ಸಾಲಿಗೆ ಸೇರ್‌ಸಿ ಕೈ ಮುಗ್ದ್ ಕೋಂಬರೆನ ಬಾಗ್‌ಲ್ ಹಾಕಿ ಹೊರೆಗೆ ಬಂದವೆ. ಸ್ವಲ್ಪ ಹೊತ್ತಾದ ಮೇಲೆ ಬಾಗ್‌ಲ್ ತೆರ್‌ದ್ ಇಸಿದ ಎಡೆಗೆ ನೀರ್ ಹನ್‌ಕಿಸಿ ಎಲ್ಲೊವೂ ಒಟ್ಟಿಗೆ ಕುದ್ದ್ ಉಂಡವೆ. ಇನ್ನ್ ಕೆಲೊವು ಜಾತಿಯವರ್‌ಲಿ 17 ಬಾಳೆ ಎಲೆಲಿ ಕೋಳಿ ಗೈಪು ರೊಟ್ಟಿ, ಇಲ್ಲರೆ ದೋಸೆನ ಅಡ್‌ಗೆ ಮನೆಲಿ ಮೂಡಾಬಿಮುಕಾಗಿ ಇಸುವೆ. ಎಲ್ಲೊವೂ ಕೈ ಮುಗ್ದ್ ಈಗಾಗಲೇ ಸತ್ತ್ ಹೋದ 17 ತಲೆಮಾರ್‌ನ ಹಿರಿಯರ್‌ನ ಪ್ರಾರ್‌ತಿಸಿ ಈಗ ಸತ್ತವನ ಒಳಗೊಳ್ಳಕೂತೇಳಿ ಕೇಳಿಕಂಡವೆ. ಮತ್ತೆ 17 ನೇ ಎಲೆನ ಸಾಲ್‌ಂದ ಹೊರೆಗೆ ಸರ್‌ಸಿ ಬುಟ್ಟವೆ. ಸತ್ತ ವ್ಯಕ್ತಿಗ 17 ತಲೆಮಾರಿನವರೆಗೆ ಕುಲೆನ ಅಸ್ತಿತ್ವದಲ್ಲಿದ್ದವೆ. 17ನೇ ತಲೆಮಾರಿಗೆ ಅತವಾ 17 ನೇ ಮರಣದ ಸಂದರ್‌ಬಲಿ ಸುರೂನ ಸಾಲ್‌ನ ವ್ಯಕ್ತಿ ಕುಲೆನ ರೂಪನ ಬುಟ್ಟ್ ಮೋಕ್ಷ ಅತವಾ ಸೊರ್‌ಗ ಸೇರುವೆ ತೇಳುವ ಕಲ್ಪನೆಗೆ ಈ ಕ್ರಿಯೆ ಬಲ ಕೊಟ್ಟದೆ.

ಪರಿಸಿಸ್ಟ ಜಾತಿಯವರ್‌ಲಿ ಹೆಣಸುಟ್ಟ್ ಬಾಕನನೇ ಕುಲೆಗೆ ದಾರಿ ತೋರ್‌ಸುವ ಒಂದ್ ಕ್ರಮ ಉಟ್ಟು. ಹೆಣಸುಡಿಕೆ ಹೋದವೆಲ್ಲನೂ ಸೂಟ್ಕಳದ ಹಕ್ಕಲೆ (ಸುಟ್ಟಸ್ತಳ) ಮೀದ್ ಕಂಡ್ ಮನೆಗೆ ಬಂದವೆ. ಅವರ್‌ಲಿ ಹಿರಿಯ ವ್ಯಕ್ತಿ ಸುಟ್ಟಲಿಂದ ಮೂರ್ ಕಲ್ಲ್‌ಗಳ್‌ನ ಹೆರ್‌ಕಿಕಂಡವೆ. ಮೀದ್ ಮನೆಗೆ ಬಾಕನ ಒಂದ್ ಕಲ್ಲ್‌ನ ಒಂದ್ ಕಡೆ ಬಿಸಾಕಿ ಇದ್ ನಿನ್ನ ಒಡೆಯನ ಮನೆಗೆ ದಾರಿ ತೇಳುವೆ. ಎರಡ್‌ನೆ ಕಲ್ಲ್ ನ ಇನ್ನೊಂದ್ ಕಡೆಗೆ ಬಿಸಾಡಿ ಇದ್ ನಿನ್ನ ಸಮ್ಮಂದಿಕರ್‌ಲಿಗೆ ದಾರಿ ತೇಳ್‌ದೆ. ಮೂರನೇ ಕಲ್ಲ್‌ನ ಮನೆ ಕಡೆ ಬಿಸಾಡಿ ಇದ್ ನಿನ್ನ ಮನೆನ ಕಡೆಗೆ ದಾರಿ ತೇಳಿ ತೋರ್ಸುವೆ..

ಕೆಲೊವು ಮನೆಗಳ್‌ಲಿ ಬೂತ ಕುಲೆಗಳ ವಾಸಕ್ಕಾಗಿನೆ ಒಂದ್ ಕೋಂಬರೆ ಇದ್ದದೆ. ಈ ಕೋಂಬರೆಗೆ ಹೆಚ್ಚಾಗಿ ಕಿಡ್‌ಕೆ ಇಲ್ಲದೆ ಕತ್ತಲೆಯಾಗಿದ್ದದೆ. ಈ ಕೋಂಬರೆಗೆ ಹೆಣ್ಣ್ ಜೆನಿಗೆ ಪ್ರವೇಶ ನಿಸಿದ್ದ. ಕೆಲೊವು ಕಡೆ ಹೊರೆಗೆ ಆದವ್‌ಕೆ ಮಾತ್ರ ಪ್ರವೇಸ ನಿಸಿದ್ದ. ಮನೆಲಿ ಏನಾರ್ ವಿಸೇಸ ಅಡ್‌ಗೆ ಮಾಡಿರೆ ಉಂಬಕ್ಕಿಂತ ಮೊದುಲು ಒಂದ್ ಎಲೆಲಿ ಇಕ್ಕಿಸಿ ಆ ಕೋಂಬರೆಲಿ ಇಸುದು ಪೊದ್ದತಿ, ಒಂದ್ ವೇಳೆ ಹಂಗೆ ಮಾಡಿಕೆ ಮರ್‌ತ ಹೋಗಿ ಉಂಡರೆ, ಉಂಡವ್‌ಕೆ, ಮಾಡಿದವ್ಕೆ ಹೊಟ್ಟೆ ಬೇನೆ ಸುರಾದೆ. ಇದ್ ಕುಲೆಗಳ ಕೊಡಿ (ಆಸೆ) ಬಿದ್ದುದರ ಪರಿಣಾಮ ತೇಳಿ ನಂಬುವೆ. ಕೋಟ (ಕೋರು) ಬಿದ್ದದರ್‌ನ ನಿವಾರಿಸಿಕೆ ಕೊದಿ ತೆಗೆವ ಕ್ರಮನೂ ಉಟ್ಟು. ಉತ್ತರಕ್ರಿಯೆ (ಬೊಜ್ಜ) ದಿನ ದೂಪೆನ ಹಕ್ಕಲೆ ಅನ್ನ, ಕೆಂಬಡೆ, ಬಾಳೆಕಾಯಿ ಇಕ್ಕೊ ಕ್ರಮ ಉಟ್ಟು. ಕೆಲೊವು ಜಾತಿಯವರ್‌ಲಿ ಅನ್ನಇಕ್ಕುದುಲೆ. ಅರ್‌ಸಣ ನೀರ್‌ಲಿ ಸೆಂಡಿ ಮಾಡ್‌ದ ಅಕ್ಕಿನ ಇಕ್ಕಿಸುವೆ. ಕಡ್‌ಂಬಿಟ್ಟ್, ಎಳೆ ನೀರ್‌ನ ತೂತ ಮಾಡಿ ಇಸೊ ಕ್ರಮನೂ ಉಟ್ಟು. ಅದಾದ ಮೇಲೆ 17ನೇ ದಿನ ಕೋಳಿಗೈಪು ಅನ್ನ ಇಲ್ಲರೆ ದೋಸೆ ಇದ್ ಬುಟ್ಟರೆ ಕುಲೆಗಳಿಗೆ ಇಕ್ಕೊ ನಿರ್‌ದಿಸ್ಟ ದಿನಂತೇನೂ ಇಲ್ಲೆ. ವರ್‌ಸಕ್ಕೊಂದೆರಡ್ ಸಲ ಇಸ್ಟ ಆದರೆ ಕೋಳಿಗೈಪು ಅನ್ನ ಮಾಡಿ ಬಡ್‌ಸಕ್. ಆದ್‌ರೆ ಬೂತಕ್ಕೆ ಅಗೆಲು ಹಾಕಿಕಾಕನ ಅಡ್ಡ ಪಂಕ್ತಿಲಿ ಎರ್‌ಡ್ ಇಲ್ಲೆ ಮೂರ್ ಎಲೆಲಿ ಕುಳೆಗಳಿಗೆ ಇಕ್ಕೊ ಕ್ರಮ ಉಟ್ಟು. ಬೂತಗಳಿಗೆ ಪ್ರಾರ್‌ತನೆ ಸಲ್ಲಿಸಿದ ಮೇಲೆ ಕುಲೆಗಳ್‌ನ ಗುರುಕಾರೋಣರ್ ತ ಗೌರವಂದ ಸಂಬೋದಿಸಿ ಊಟನ ಸ್ವೀಕಾರ ಮಾಡಿಕೊಳ್ಳುವಂಗೆ ಕೇಳುವ ಕ್ರಮ ಉಟ್ಟು.

ಕುಲೆಗಳಿಗೆ ಆಕಾರ ಇಲ್ಲದಿದ್ದರೂ ಬೇಕಾದ ಆಕಾರ ತಾಳುವೆ. ಹೆಚ್ಚಾಗಿ ಅವು ಕರಿ ನಾಯಿನಂಗೆ ಬೆಳಿ ಮುಸ್‌ಗ್ ಹಾಕಿದ ಮೊನ್‌ಸನಂಗೆ ಅತವಾ ಬೇರೆ ಪರಿಚಿತ ಮೊನ್‌ಸನಂಗೆ ಕಣ್ಣಿಗೆ ಕಂಡವೆ. ರಾತ್ರೆ ಹೊತ್ತು ಒಬ್ಬಂಟಿಗನಾಗಿ ಹೋವವಂಗೆ ಕಲ್ಲ್ ಬಿಸಾಕುವೆ. ಸದ್ದ್ ಮಾಡ್‌ವೆ. ಮರಗಳ್‌ನ ಕುಲ್‌ಕಿಸಿ, ಬೆದರಿಸುವೆ. ಬೇರೆ ಬೇರೆ ಪ್ರಾಣಿಗಳ ಆಕಾರಲಿ ಕಾಣ್‌ಸಿಕಂಡವೆ. ಕೆಲವೊಮ್ಮೆ ಸಿಳ್ಳ್ ಹಾಕಿವೆ. ಅದರ್‌ಂದ ನಮ್ಮೂರ್‌ಲಿ ಕತ್ತಲೆ ಹೊತ್ತು ಸಿಳ್ಳ್ ಹಾಕುದು ನಿಸಿದ್ದ. ನೊಡು ಮದ್ಯಾನದ ಬಿಸ್‌ಲ್‌ಗೆ ಅಲ್ಲರೆ ಹಿಂಬೊತ್ತ್ ನಿರ್‌ಜೆನ ಪ್ರದೇಸಲಿ ಏಕಾಂಗಿಯಾಗಿ ಹೋಕನ ಪೊಯ್ಯ ಇಟ್ಟವೆ. ಕೊಲೆಗಳ ಉಪದ್ರಕ್ಕೆ ಹೆದರ್‌ದ ಜೆನಕೆ ಜೊರ ಬಂದದೆ. ಕೆಲವೊಮ್ಮೆ ಬೇಟೆಗಾರರ್ ಪ್ರಾಣಿನ ಆಕಾರಲಿ ಬಂದ ಕೊಲೆಗಳಿಗೆ ಗುಂಡು ಹಾರ್‌ಸಿದ್ ಉಟ್ಟು. ಹಾಂಗೆ ಗುಂಡು ಹೊಡೆಕಾಕನ ಅಲ್ಲಿ ಯಾವ ಪ್ರಾಣಿನೂ ಇರ್‌ದುಲೆ. ಬದ್‌ಲ್‌ಗೆ ಪಾಮಜಿನ ರಾಸಿ ಬಿದ್ದಿದ್ದದೆ. ಇದೆಲ್ಲ ಜೆನಪದರ ನಂಬಿಕೆಗ, ವರ್‌ಸಂಪ್ರತಿ ಕೊಲೆಗಳಿಗೆ ದೀಪೋಳಿ ದಿನ ಅವುಲೆಕ್ಕಿ, ಬೆಲ್ಲ ಬೆಂಡ, ಬೆಲ್ಲ, ಇಕ್ಕವ ಕ್ರಮ ಉಟ್ಟು. ಆ ವರ್‌ಸನೆ ತೀರಿಹೋದವಾದರೆ ಅಗಲ್ ಇಕ್ಕಿಕೆ ಕುಟುಂಬದವೆಲ್ಲ ಸೇರಕು, ಬೇಸ (ಮೇಷ) ತಿಂಗಳ

ಹತ್ತ್‌ನೆ ದಿನ (ಪತ್ರನಾಜಿ) ಹಲ್‌ಸ್‌ನ ಗಟ್ಟಿ ಬಡ್‌ಸ್‌ವ ಕ್ರಮ ಉಟ್ಟು. ದೀಪೊಳಿ ಅಮಾಸೆನ ದಿನ ಅಕ್ಕಿ ಕಡ್‌ದ್ ತೆಗ್‌ದ ಮೇಲೆ ಒಂದ್ ಚೆಪ್ಪಿ ಹಿಟ್ಟ್‌ನ ಸನ ಮಕ್ಕಳ ಕೊಲೆಗಳಿಗಾಗಿ ಕಲ್ಲ್‌ಲೇ ಬುಟ್ಟವೆ. ಹಾಂಗೆ ಬುಡದೆ ಹೋದರೆ ಕನ್ಯಾವುಗಳ್‌ನ ದೇವ್‌ರು ಸುಡ್‌ವ ಕಾವ್‌ಲಿಲಿ ಕುದ್‌ರ್ಸಿ ಕಸ್ಟ ಕೊಟ್ಟವೆತೇಳುವ ನಂಬಿಕೆ ಉಟ್ಟು. ಕನ್ಯಾವುಗಳಿಗೆ ಸಣ್ಣ ಮಕ್ಕಳ ಅಮ್ಮಂದ್‌ರ್ ತಮ್ಮ ಮಕ್ಕಳ ರಕ್ಷಣೆಗಾಗಿ ಬಳ್ಸುವ ಕ್ರಮ ಉಟ್ಟು. ಕನ್ಯಾವುಗಳಿಗೆ ಇಕ್ಕಿಕಾಕನ ಕೋಳಿಗೈಪು ಬೇಕುತಿಲ್ಲೆ,ಬರಿ ಹುಗ್ಗೆ ಮತ್ತೆ ನುಗ್ಗೆ ಸೊಪ್ಪ್‌ನ ಪಲ್ಯ ಮಾತ್ರ ಸಾಕಾದೆ, ಕನ್ಯಾವುಗಳಿಗೆ ಇಕ್ಕಿ ಕುಡ್ಕೆ (ಅಳೆಯುವ ಮರದ ಸಾದನ)ಲಿ ಕಲ್ಲ್ ಹಾಕಿ ಕಟಕಟ ಮಾಡಿ ಎಡೆಗೆ ಸುತ್ತು ತಂದವೆ. ಮತ್ತೆ ಕೋಂಬರೆನ ಬಾಗ್‌ಲ್ ಹಾಕಿ ಹೊರೆಗೆ ಬಂದ್ ಹಳ್ಳ ಹೊತ್ತು ಕಳ್‌ದ ಮೇಲೆ ಇಕ್ಕಿಸಿದ ಹುಗ್ಗೆನ ಮಕ್ಕಳ್‌ಗೆ ಉಣ್‌ಸುವೆ..

ಅದೃಸ್ಯ ಸಕ್ತಿಗಳ್‌ಲಿ ಬಾರಿ ಸಣ್ಣದ್ ಕೊಲೆ, ಬಾಯಿಗೆ ನೀರಿಲ್ಲದೆ ಸತ್ತರೆ ಪ್ರೇತಗಳಾದವೆ. ಅಪಮೃತ್ಯುಂದ ಸತ್ತರೆ ಪೀಡೆ (ಪಿಶಾಚಿ) ಗಾದವೆ. ಯುದ್ದ ಲಡಾಯಿಲಿ ಸತ್ತರೆ ರಣಂಗಾದವೆ. ಬಟ್ಟ ಬಾಯಿಗೆ ನೀರಿಲ್ಲದೆ ಸತ್ತರೆ ಬ್ರಹ್ಮ ರಕ್ಕಸನಾದೆ. ಪ್ರಾಯಕ್ಕೆ ಬಂದ ಗೂಡೆಗ ಸತ್ತರೆ ಜಕ್ಕಣಿ ಯಕ್ಷಿಣಿ ಆದವೆ. ಕೆಲೊವೊಮ್ಮೆ ಕೊಲೆಗ ಸನ ದೆವ್ವಗಳ ಕೈಲಿ ಸಿಕ್ಕಾಕಂಡ್ ಕಸ್ಟ ಪಡುವ ಪ್ರಸಂಗನೂ ಬಂದದೆ. ದೆವ್ವಗಳಿಗೆ ಜೆನಗಳಿಗೆ ಉಪದ್ರ ಕೊಡಿಕೆ ಈ ಕೊಲೆಗಳ ಅನುಚರರಂಗೆ ಬಳ್‌ಸಿಕಂಡವೆ. ರಾಹು, ಗುಳಿಜ್ಜ, ಕಲ್ಲ್‌ರ್ಟಿ ಇಂತೆಲ್ಲ ದೆವ್ವಗಳ ಕೈಲಿ ಸುಮಾರ್ ಕೊಲೆಗ ಇದ್ದವೆ.. ಕುಲೆಗ ಉಪದ್ರ ಕೊಡಿಕೆ ಬಂದದ್ ಗೊತ್ತಾದಂಗೆ ಮನೆನ ಹಿರಿಯರ್ ಈಡ್ ಕಟ್ಟುವೆ.ದೆವ್ವದ ಕೋಣೆಲಿ ನಿತ್ತ್ 'ಯಾರ ಉಪದ್ರ, ಅದ್ಕೆ ಏನ್ ಪರಿಯಾರ ಆಕುಂತೇಳುವಂತದರ ಜೋಯಿಸರ್‌ಲಿ ಕೇಳಿ ಪರಿಯಾರ ಮಾಡ್‌ವೆ' ತ ಮಾತ್ ಕೊಟ್ಟ್ ಒಂದಿಸ್ಟ್ ದುಡ್ಡುನ ಮುಡಿಪು ಆಗಿ ಇಸುವ. ಮತ್ತೆ ಜೋಯಿಸರ್‌ಲಿ ಕೇಳಿ ಪರಿಯಾರ ಮಾಡ್‌ವೆ,ಕತ್ತಲೆಗೆ ನಿದ್ದೆಲಿರಿಕನ ಬಂದ್ ಪ್ರೀತಿಂದ ಮೈನ ಪೂಜಿ ಹೋದವೆ. ಹಂಗೆ ಪೂಜಿದ ಬಾಗಲಿ ಹೊತಾರೆ ಎದ್ದ್ ನೋಡಿಕಾಕನ ಮೈ ಮೇಲೆ ಮುಳ್ಳ್‌ಲಿ ಗೀರಿದಂಗೆ ಗೆರೆಗ ಇದ್ದವೆ. ಹರ್‌ಕೆ ಇಲ್ಲರೆ ಮಾಟ ಒಬ್ಬ ವ್ಯಕ್ತಿನ ಸಾವುಗೆ ಕಾರಣ ಆದ್‌ರೆ ಸತ್ತವನ ಕೊಲೆ ಮಾಟದ ದೆವ್ವಗಳ ಕೈಯೊಳೆಗೆ ಆದೆ.. ತುಳುನಾಡ್‌ನವು ಹೆಚ್ಚಾಗಿ ಕಾಸರಗೋಡ್‌ನ ಕಾನತ್ತೂರಿಗೆ ಹರ್‌ಕೆ ಹೇಳಿಕಂಡವೆ. ಹಾಂಗೆ ಹರ್‌ಕೆ ಹೇಳಿ ಈಡೇರ್‌ಸದೆ ಸತ್ತರೆ ಅವರ ಕೊಲೆ ಕಾನತ್ತೂರುಗೆ ಹೋಗಿ ನೆಲೆಗೊಂಡದೆ. ಕೊಲೆಗಳ್‌ಲಿ ಪರಿಸಿಸ್ಟ ಜಾತಿನ ಕೊಲೆಗ ಬಾರಿ ಪ್ರಬಾವಸಾಲಿ, ಇದರ್‌ಂದಾಗಿ 'ಹೋದಲ್ಲಿ ಬಿಡದು ಹೊಲೆಯರ ದೆವ್ವ' ತೇಳುವ ಗಾದೆನಂಗೆ ಆವುಟು. ಕೊಲೆ ಹಿಡಿದವರ ಅಲ್ಲರೆ ದೆವ್ವ ಕೈಲಿ ಸಿಕ್ಕಿದ ಕೊಲೆಗಳ ಮಂತ್ರವಾದಿಗ ದೇವಿ ದರ್‌ಸನದ ಪಾತ್ರಗ ಬುಡ್‌ಸುವೆ. ಕಟೀಲ್, ಪೊಳಲಿ, ಕೊಲ್ಲೂರು, ಧರ್ಮಸ್ಥಳಕೆ ಹೋಗಿ ದೇವ್‌ರ ದರ್‌ಸನ ಮಾಡಿರೂ ಸನ ಕೊಲೆಗ ಬುಟ್ಟು ಹೋದವೆ ತೇಳುವ ನಂಬಿಕೆ ಉಟ್ಟು.

ಸಣ್ಣ ಪ್ರಾಯಲಿ ಸತ್ತವರ ಕೊಲೆಗ ಮೊದ್‌ವೆ ಆವ ಪ್ರಾಯ ಬಾಕನ ಮನೆಯವ್‌ಕೆ ತೊಂದರೆ ಕೊಟ್ಟವೆ. ಮನೆವು ಆ ಬಗ್ಗೆ ಜೋಯಿಸರ್‌ಲಿ ಹೋಗಿ ರಾಸಿ ಇಸಿ ನೋಡಿಕನ ಸತ್ತವುಕೆ ಮೊದ್‌ವೆಯಾಕುತೇಳುವ ಬಯಕೆಂದಾಗಿ ಮನೆಯವ್‌ಕೆ ಉಪದ್ರ ಕೊಟ್ಟವೆ ತೇಳುವ ವಿಸಯ ಕಂಡ್ ಬಂದದೆ. ಉಪದ್ರ ಕೊಡ್‌ವ ಕುಲೆ ಗಂಡಾದರೆ ಅದಕ್ಕೊಪ್ಪುವ ಹೆಣ್ಣ್ ಕೊಲೆ ಯಾರ ಮನೆಲಿ ಉಟ್ಟು ತೇಳುದರ ಹುಡುಕಕಾದೆ. ಅದೇರೀತಿ ತೊಂದರೆ ಕೊಡ್‌ದು ಹೆಣ್ಣ್ ಆದರೆ ಪ್ರಾಯಲಿ ಅದಕ್ಕೊಪ್ಪುವ ಗಂಡ್ ಕೊಲೆ ಯಾರ ಮನೆಲಿ ಉಟ್ಟು ತೇಳುದರ ಹುಡುಕುವೆ. ಗಂಡ್ –ಹೆಣ್ಣ್‌ನ ಬಳಿ ಸಮ್ಮಂದಲಿ ಜೊತೆ ಸರಿಂತಾದರೆ ಕೊಲೆ ಮೊದ್‌ವೆಗೆ ದಿನ ನಿಸ್ಚಯಿಸುವೆ, ಹೆಣ್ಣ್ ಕೊಲೆನ ಮನೆಲಿ ಮೊದ್‌ವೆ ನಡ್‌ದದೆ. ಗಂಡ್‌ನ ಮನೆಂದ ದಿಬ್ಬಣ ಹೊರ್‌ಟದೆ. ಹೋಕನ ಪಿಂಗಾರ, ಅಡ್‌ಕೆ ಹಾಳೆಲಿ ಸೀರೆ, ಜಂಪರ್, ಕರಿಮೊಣಿ ತಾಳಿ, ಕಾಲುಂಗುರ, ಬಳೆ ಇದರೆಲ್ಲ ತಕಂಡ್ ಹೋಕೂಂತ ಹೆಣ್ಣ್ ನ ಕಡೆವು ದೋತಿ, ಸಾಲ್, ಅಂಗಿ ಸಿದ್ದಪಡಿಸುವೆ. ಸತ್ತವರ ಮೂರ್‌ತಗೊಳ್ಸಿಕೆ ಪಾಲೆ ಮರದ (ಸಪ್ತಪರ್‌ಣಿ) ಇಲ್ಲರೆ ಬೈ ಹುಲ್ಲ್‌ನ ಇಲ್ಲರೆ ಬಾಳೆದಿಂಡ್‌ನ ಮೊದುಮಕ್ಕಳ ಆಕೃತಿಗಳ ಮಾಡ್‌ವೆ. ಬೂತ ಸಂಪಿಗೆನ ಕೋಲ್‌ಗಳ ಬಳ್ಸವ ಕ್ರಮನೂ ಉಟ್ಟು. ಹಲಗೆನ ಮೇಲೆ ಮೊದುಮಕ್ಕಳ ಚಿತ್ರನ ಬುಡ್‌ಸುವ ಕ್ರಮನೂ ಉಟ್ಟು. ದಿಬ್ಬಣದವ್ ತಕಂಡ್ ಹೋದ ವಸ್ತ್ರಾಬರಣಗಳ ಮೊದುವಳ್ತಿನ ಆಕೃತಿಗೂ ಗೂಡೆನ ಮನೆವು ಕೊಡ್‌ವ ಬಟ್ಟೆಂದ ಹೈದನ ಆಕೃತಿನೂ ಅಲಂಕಾರಗೊಳ್ಸುವೆ, ಇಲ್ಲರೆ ಆಯಾಯ ಮನೆಗಳ ಎದ್‌ರನೆ ಇಸುವೆ. ಈ ಆಕೃತಿಗಳ ಮನೆನ ಸೂರಡಿಲಿ ಇಸಿ ದಾರೆ ಹೊಯ್ದುವೆ.

ಜೀವಂತ ಮೊಯಿಂಸರ್‌ಗೆ ಹೆಂಗೆ ಮೊದ್‌ವೆಯಾದೆನೋ ಹಾಂಗೇನೇ ಬೊಳಿ, ಸಮ್ಮಂದ ಪ್ರಾಯನ ನೋಡಿಕಂಡೆ ಸತ್ತವ್‌ಕೂ ಮೊದ್‌ವೆ ನಿಸ್ಚಯ ಆದೆ. ಅಸ್ಟ್ ಮಾತ್ರ ಅಲ್ಲ ಹೆಣ್ಣ್ ನೋಡಿಕೆ ಹೋವ ಕ್ರಮನೂ ನಿಸ್ಚಯ ಆದೆ. ಮತ್ತೆ ಮೊದ್‌ವೆನೂ ಸನ ನಡ್‌ದದೆ. ದಾರೆ



ಹದ್‌ನಾರ್ ಕೊಲೆಗೆ ಬಡ್‌ಸುದು




ಆದ ಮೇಲೆ ಹೆಣ್ಣ್ ನ ಮನೆವು ಅಲ್ಲಿ ಸೇರ್‌ದವುಕೆ ಉಂಬಕೆ ಹಾಕುವೆ. ಊಟಾದ ಮೇಲೆ ಹೆಣ್ಣ್ ಗಂಡ್ ಆಕೃತಿಗಳ್‌ನ ಗಂಡ್‌ನ ಮನೆಗೆ ತಂದವೆ, ಆಕೃತಿನ ವೇಸಬೂಸಣ ತೆಗ್‌ದ್ ಪೆಟಿಗೆಲಿಸುವೆ. ಆಕೃತಿಗಳ್‌ನ ಚಾಳೆ ಮರದ ಬುಡಲಿ ಇಸುವೆ. ಬರಿಯ ಕೋಲುಗಾದರೆ ಒಟ್ಟಿಗೆ ನೆಟ್ಟವೆ. ಇದರ ಕುಲೆ ಮೊದ್‌ವೆ ತೇಳುವೆ. ಗೌಡ ಸಮಾಜಲಿ ಹೆಚ್ಚಾಗಿ ಕುಲೆ ಮೊದ್‌ವೆಗ ನಡ್‌ದದೆ.

ಕುಲೆಗ ಇದ್ದಲ್ಲೆ ಇರೋಕುಂತೇನಿಲ್ಲೆ. ಅವು ಒಂದ್ ಮನೆಂದ ಇನ್ನೊಂದ್ ಮನೆಗೆ ಸಂಚಾರ ಮಾಡ್‌ವೆ. ಹೆಚ್ಚಾಗಿ ಹೆಣ್ಣ್ ಕೊಟ್ಟ ಮನೆಗೆ ಹೋದವೆ. ಮೊನ್‌ಸರ್‌ಗೆ ಕುಲೆ ಹಿಡಿಯೋದು ತೇಳಿರೆ ಮೈ ಮೇಲೆ ಬಾದುತ ಅರ್‌ತ. ಕುಲೆ ಹಿಡ್‌ದರೆ ಜೋರಾಗಿ ಆಕ್‌ಳಿಕೆ ಬಂದದೆ. ತಲೆ ಸುತ್ತಿದೆ. ಕಣ್ಣ್ ಕತ್ತಲೆ ಬಂದದೆ, ಸೊಯ ತಪ್ಪಿದಂಗಾದೆ. ಕೆಲೊವು ಕೊಲೆಗ ಮಾತಾಡುವೆ. ಇನ್ನ್ ಕೆಲೊವು ಮಾತಾಡುದೇಲೆ. ಬರೀ ಮರ್ಟವೆ ಇಲ್ಲರೆ ನೆಗಾಡುವೆ. ಕುಲೆ ಹೆಚ್ಚಾಗಿ ಹೆಂಗ್‌ಸರಿಗೆ ಅದರ್‌ಲ್ಲೂ ಪ್ರಾಯದವ್‌ಕೆ ಹಿಡ್‌ದದೆ. ಎಲ್ಲಾ ಕುಲೆಗ ನೀರ್ ಇಲ್ಲರೆ ಬೆಂಡನೀರ್ ಕುಡ್‌ದ್ ಹಿಡ್‌ದವನ ಬುಟ್ಟು ಹೋದವೆ.

ಕುಲೆ ಹಿಡ್‌ದವರ ಮಾತಾಡ್ಸವ ಅವ್‌ಕಾಸ ನಂಗೆ ಕೆಲೊವೊಮ್ಮೆ ಸಿಕ್ಕಿಟು, ಅದರ್‌ಲಿ ಸ್ವಾರಸ್ಯ ಆದ ಒಂದ್ ಸಂಬಾಸಣೆನ ಇಲ್ಲಿ ಕೊಡ್‌ತೊಳೆ. ಕುಲೆ ಹಿಡ್‌ದ ಮೊನ್‌ಸ 75 ವರ್‌ಸ ಪ್ರಾಯದ ವಿದ್‌ವೆ, ತಲೆ ತಿರ್‌ಗುತುಟ್ಟುತ ಹೇಳಿ ಮೊಲ್‌ಗಿದವು ಹಿಜ್ಞ ಹೊತ್ತ್ ಆಕನ ನರ್‌ಕಿಕೆ ಸುರು ಮಾಡ್‌ದೊ. ಮತ್ತೆ ಬಡಕ್ಕನೆ ಎದ್ದ್ ಕುದ್ದ್ ನನ್ನ ಮಾಲ್ಬಿ ಇಲ್ಲಿ ಬನ್ನಿ' ತೇಳಿ ಕರ್‌ದೊ. (ಅವು ಬಹುವಚನಂದ ನನ್ನ ಕರೆತಿತ್‌ಲೆ, ಏಕವಚನಲಿ ಹೆಸ್‌ರ್ ಹೇಳಿ ಕರೆತಿದ್ದೊ. 'ಏನ್?' ತೇಳಿ ನಾ ಕೇಳಿಕಾಕನ ನನ್ನ ದಿಟ್ಟಿಸಿ ನೋಡಿ 'ನಂಗೊಂದ್ ಸಿಗ್‌ರೇಟ್ ಬೇಕಿತ್ತ್'ತ ಹೇಳ್‌ದೊ. ಅಜ್ಜಿ ಸಿಗ್‌ರೇಟ್ ಕೇಳಿಕಾಕನ ನಂಗೆ ತಮಾಸೆಯಾಗಿ ಕಂಡತ್. ಸಿಗ್‌ರೇಟ್ ಇಲ್ಲೆ. ನೆಸೆ ಆದೋ?"ತ ಕೇಳ್‌ದೆ. ಅದಿಕೆ ತಲೆ ಅಲ್ಲಾಡಿಸಿದಕೆ ನಾ ನೆಸೆದ್ ಬುರುಡೆ ಕೊಟ್ಟೆ, ಒಂದ್ ದಮ್ ನೆಸೆತೇಳಿ ನಾನ್ ಯಾರ್‌ತೇಳಿ ನಿಮಗೆ ಗೊತ್ತಾತ್ಲೆ ನಾ. ?' ತೇಳಿ ಪ್ರಸ್ನೆ ಹಾಕಿದೊ. 'ನೀವು ನಮ್ಮ ಅಜ್ಜಿ' ತೇಳ್ದೆ. ಅಲ್ಲಲ್ಲ, ನಾನ್ ನಿಮ್ಮ ಅಜ್ಜಿದ್ ಮಜ್ಜ, ಬೆಂಗ್‌ಳೂರ್‌ಲಿ ಆಕ್ಸಿಡೆಂಟ್‌ಲಿ ತೀರಿಕಂಡ ಗೋಪಾಲತ ಹೇಳ್‌ದೊ. ಈಗ ಅಜ್ಜಿಗೆ ಕುಲೆ ಹಿಡ್‌ದುಟು ತೇಳುದು ಸ್ಪಸ್ಪ ಆತ್.

"ನೀ ಬೆಂಗ್‌ಳೂರ್‌ಂದ ಯಾಗ ಬಂದ?'

'ಬೆಂಗಳೂರ್‌ಂದ ನಾನ್ ಸತ್ತಂಗೆನೆ ಮನೆಗೆ ಬಂದೊಳೆ.

ಮನೆಂದ ನೀ ಇಲ್ಲಿಗೆ ಹೇಂಗೆ ಬಂದ?' (ಮಾತ್ ಕತೆ ನಡೆತ್ತಿದ್ದದ್ ಅಜ್ಜಿ ಮನೆಲಿ ಅಲ್ಲ, ಅವರ ಸಮ್ಮಂದಿಕರ ಮನೆಲಿ)

'ಮನೆಂದ ನಾನ್ ಗಾಳಿಲಿ ಬಂದೆ? 'ನಿಂಗೆ ದಾರಿ ಹೆಂಗೆ ಗೊತ್ತಾತ್?'

'ಅವ್ವನ ಹಿಂದೆನೆ ಬಂದೆ.

'ನೀನ್ ಬಂದದ್ದ್ ಯಾಕೆ?'

ನನ್ನ ಬಾಯಿಗೆ ನೀರಿಲ್ಲೆ. ನೀರ್ ಬೇಕುತ ಹೇಳ್‌ದೊ. ನಾನ್ ಒಂದ್ ತಂಬಿಗೆ ನೀರ್ ತಂದ್ ಕೊಟ್ಟೆ, ಅದ್‌ನ ಪೂರ ಕುಡ್‌ದ್ ಪುನ ಮೊದ್‌ಲ್‌ನಂಗೆ ಅಜ್ಜಿ ಮೊಲ್‌ಗಿದೊ. ಮತ್ತೆ ಒಂದರ್‌ದ ಗಂಟೆ ಆದ ಮೇಲೆ ಎಚ್ಚರಿಕೆ ಆತ್. ಎಚ್ಚರಿಕೆಯಾಕನ ನಡ್‌ದ ಸಂಗತಿ ಯಾವುದೂ ಅಜ್ಜಿಗೆ ಗೊತ್ತೇಲೆ. ಜೆನಪದರ ಸುಪ್ತ ಮನ್‌ಸ್‌ನ ಕುಲೆ ಬಗ್ಗೆ ನಂಬಿಕೆಗ ಹೆಂಗೆ ಮಡುಗಟ್ಟಿದೆ ತೇಳುವ ವಿಚಾರ ಈ ಪ್ರಸಂಗಂದ ಮನದಟ್ಟಾದೆ.

ಕುಲೆನ ಉಪದ್ರ ಕಂಡ್ ಬಂದಂಗೆ ಜೋಯಿಸರ್, ಮಂತ್ರವಾದಿಗ ಬಸ್ಮನ ಮಂತ್ರಿಸಿ ಕೊಟ್ಟವೆ, ಇಲ್ಲರೆ ನೂಲು, ತಾತಿ (ಉರ್‌ಕು) ಮಂತ್ರಿಸಿ ತಗ್‌ಡ್ ಬರ್‌ದ್ ಕೊಟ್ಟವೆ. ಅದರ ಹಾಕಿಕಂಡರೆ ಅವುಗಳ ತೊಂದರೆಂದ ಆಗದಂಗೆ ಇರಿಕೆ ಆದೆ., ಕೊಲೆ ಬಾರದಂಗೆ ಕೆಲೊವು ಮೊಂದ್ರಿ ಅಡಿಲಿ ಮಾಯ್ಪುನಸೂಡಿನ ಇಸಿಕಂಡ್ ಮೊಲ್‌ಗುವೆ. ಎರ್‌ಡ್ ಮೊಂದ್ರಿಗಳ ನೊಡುಲಿ ಜಾಗೆ ಬುಟ್ಟ್ ಮೊಲ್‌ಗಿರೆ ಕೊಲೆಗ ಬಂದ್ ಮೊಲ್‌ಗುವೆತ ನಂಬಿಕೆ ಉಟ್ಟು, ಕಾಯರ ಮರಕ್ಕೂ ಕೊಲೆಗಳಿಗೂ ಬಾರಿ ವಿರೋದ. ಕಾಸರಕನ ಕೋಲು ಕುತ್ತಿರೆ ಇಲ್ಲರೇ ಕಿಚ್ಚಿಗೆ ಕಾಯರದ ಸೊವ್‌ದೆನ ಹಾಕಿರೆ ಕುಲೆಗ ಅಸ್ತಿತ್ವನೇ ಕಳ್‌ಕಂಡದೆ. ಕುಲೆನ ಗ್ರಾಮದ ತಗ್‌ಡ್‌ಲಿ ಆವಾಹಿಸಿ ಕಾಸರಕನ ಮರಕ್ಕೆ ಆಣಿಲಿ ಬಡ್‌ದರೆ ಕುಲೆ ಬಂದನಕೆ ಒಳಗಾದೆ. ಕಾಯರ ಸೊವ್‌ದೆ ಒಲೆಲಿ ಹೊತ್ತಿಕಂಡಿದ್ದರೆ ಮನೆಲಿ ಕೊಲೆ ನಿಲ್ಲುದುಲೆ, ಕಾಯರ ಮರದ ತೊಟಿಗಿಲ್‌ಲಿ ಮೊಲ್ಗುವ ಮಕ್ಕಳಿಗೆ ಕುಲೆನ ಉಪದ್ರ ಇರ್‌ದುಲೆ. ಕುಲೆನ ಉಪದ್ರ ಆಗದಂಗೆ ತೊಟಿಗಿಲ್‌ಗೆ ಚೆನ್ನಾಯಿರ ಬೊಳ್ಳಿನ ಸನ ಕಟ್ಟುವೆ. ಹೆಂಗ್‌ಸರ್ ಹಗ್‌ಲ್‌ಲಿ ಹೊರೆಗೆ ಹೋಕನ ಕಾಸರಕನ ಚಿಗ್‌ರ್‌ನ ತಲೆಲಿ ಮುಡ್‌ಕಂಡವೆ. ಮಕ್ಕಳ ನೇವಳಕ್ಕೆ ಸಿಕ್ಕಿಸುವೆ, ಇದ್ ಕುಲೆನ ಬಾದೆಂದ ತೊಪ್ಪುಸಿಕಂಬ ಉಪಾಯ, ಏನೇ ಆದರೂ ಕೊಲೆ ಒಬ್ಬ ಮೊಯಿಂಸನ ಕೊಲ್ಲುವ ಸಕ್ತಿ ಅಲ್ಲ,ಕೊಲೆಗ ಪ್ರಪಂಚಲಿ ಬಾರಿ ಕರಿಯ ಸಕ್ತಿಗ, ಕೊಲೆಗಳಿಗೆ ದೆವ್ವಗಳಿಗೆ ಇರ್‌ವಂಗೆ ಸ್ತಾನ, ಗುಡಿ, ಮಾಡಗ ಇಲ್ಲೆ. ಕೊಲೆಗಳ ಬಗ್ಗೆ ಜೆನಪದಲಿ ಸಂದಿ ಪಾಡ್ದನಗ ಇಲ್ಲೆ. ಆದ್‌ರೂ ಕೆಲೊವರ ದೆವ್ವಗಳ ಒಟ್ಟಿಗೆ ಕೋಲ ಕೊಡ್‌ವ ಪೊದ್ದತಿ ಉಟ್ಟು. ಕೆಲೊವೊಮ್ಮೆ ಮೊಯಿಂಸರ್ ಸನ ತೀರ ಹಕ್ಕಲೆನ ಮೊಯಿಂಸನ ಅಲ್ಲರೆ ಇನ್ನೊಬ್ಬರ ಕೆಲಸನ ಆಗಾಗ ಇಣ್‌ಕಿ ನೋಡುವವರ ಕೊಲೆ ತೇಳಿ ಹೀಯಾಳ್‌ಸುದೂ ಉಟ್ಟು.

ದೆವ್ವಗಳ ಆರಾದನೆ ಅರೆಬಾಸೆ ಸಂಸ್ಕೃತಿನ ಒಂದ್ ಅವಿಬಾಜ್ಯ ಅಂಗ. ಕೊಲೆನ ಆರಾದನೆ ದೆವ್ವಗಲ ಆರಾದನೆನ ಒಂದ್ ಅಂಗ. ಸಾಮಾಜಿಕ ದ್ರಿಸ್ಟಿಂದ ಕೊಲೆಗಳ ಆರಾದನೆ ಬಾಳ ಪ್ರಯೋಜೆನಕಾರಿ, ತಮ್ಮ ಮೇಲೆ ಸಿಟ್ಟ್ ಮಾಡಿಕಂಡವೆ ತೇಳುವ ಕಾರಣಂದ ಸಮಾಜಲಿ ಎಸ್ಟೊ ಜೆನಗ ಸಮಾಜಕೆ ಅನಿಸ್ಟದ ಕೆಲಸಗಳ ಮಾಡಿಕೆ ಹಿಂಜರ್‌ದವೆಸ.

ಕುಟುಂಬದವೆಲ್ಲ ವೈಸಮ್ಯ ಮರ್‌ತ್ ಆರಾದನೆನ ದ್ರಿಷ್ಟಿಂದಾದರೂ ಒಂದಾದವೆ. ಇದರ್‌ಂದಾಗಿ ಮೊನ್‌ಸ-ಮೊನ್‌ಸರ ನೊಡುಲಿ ಇರ್‌ವ ಪಿರೀತಿ ಸೌಹಾರ್‌ದ ಬೆಳ್‌ದದೆ. (ಪಿ.ಆರ್.)

**ಕೊಲೆ ಹಿಡಿದು :** ಅರೆಬಾಸೆ ಜೆನಪದರ ಪ್ರಕಾರ ಸತ್ತವು ಕೊಲೆಗಾದವೆ. ದೈಹಿಕ ಅಸ್ತಿತ್ವ ಇಲ್ಲದೆ ಅವರ ಆತ್ಮಗ ನೆರೆಕರೆಲೆ ತಿರ್‌ಗಿಕಂಡ್ ಹೋದೆ. ಸತ್ತ 17ನೇ ದಿನ ತೀರ್‌ದವನ ಕೊಲೆನ ಮನೆ ಒಳಗೆ ಕರೆವ ಆಚರಣೆ ಉಟ್ಟು, ಹಕ್ಕಲೆನ ಸಮ್ಮಂದದವ್ಕೆ ಹೇಳ್‌ವೆ. ಆಗು ಹೋಗುಗಳ ಅವು ಗಮನಿಸುವೆ ತೇಳಿ ನಂಬುವೆ. ಬೂತಗಳಿಗೆ ಅಗೆಲು ಕೊಡುವ ಹೊತ್ತುಲಿ ಈ ಕೊಲೆಗಳಿಗೂ ಎಡೆ ಇಕ್ಕುವ ಕ್ರಮ ಉಟ್ಟು. ದುರ್ಮರಣಂದ ಸತ್ತವು ಕೊಲೆಗಳ್‌ಂದ ಕಟಿಣ ಆದಂತ ರಣಂಗ ಆದವೆ. ಕೊಲೆಗ ಕೆಲವೊಮ್ಮೆ ದುರ್‌ಬಲರಾದರೆ ದೆವ್ವಗಳ ಕೈಗೆ ಸಿಕ್ಕಿ ಸ್ವಾತಂತ್ರ್ಯನ ಕಳ್ಕಂಡವೆ. ಆಗ ಕೊಲೆಗ ಮನೆ ಜೆನರ ಮೈಮೇಲೆ ಬಂದ್ ತಮ್ಮ ಅನಿಸಿಕೆಗಳ್‌ನ ಹೇಳಿಕಂಡವೆ ತೇಳುದು ಜೆನಪದರ ನಂಬಿಕೆ. ಈ ಕೊಲೆಗಳ ಹದ್ದ್‌ಬಸ್ತ್‌ಲಿ ಇಸಿಕಂಬ ದೆವ್ವಂತೇಳಿರೆ ಅದ್ ರಾಹುಗುಳಿಜ್ಜ.

ಹಿಂಗೆ ಕೊಲೆನ ಬಾದೆಗಳಿಗೆ ಒಳಪಟ್ಟವು ಅರ್‌ಲೊ ಮೊರ್‌ಲೋಂತಾದವೆ. ನೆಂಪುನ ಸಕ್ತಿನ ಕಳ್ಕಂಡವೆ. ಕೊಲೆ ಹಿಡ್ಕಂಡಿರುವಸ್ಟ್ ಹೆಚ್ಚಿಗೆ ತಿನಿ ತಿಂಬೊತ್ತಿದ್ದೊ. ಕುಡಿಯಕಾದರೆ ನೀರ್ ಗಟಗಟಂತ ಕುಡ್ಡವೆ. ಕೊಲೆ ಹಿಡಿಯಕನ ಇವರ ದೇಹದ ಅಂಗಾಂಗಗ ಸೊರ್‌ತನು ಗಟ್ಟಿನು ಆದೆ. ಅವು ತ್ರಾಣ ಇಲ್ಲದಂತಾದವೆ. ಮಂತ್ರವಾದಿಗ ಇದ್ಕೆ ತಮ್ಮ ಮಾಂತ್ರಿಕ ತಾಂತ್ರಿಕ ವಿದಾನಗಳ್‌ಂದ ನಿಮೂರ್‌ತಿ ಮಾಡ್‌ವೆ. ಈ ಆಚರಣೆನ ಕೊಲೆ ಬುಡ್ಸುದುತ ಕರ್‌ದವೆ. ಕೊಲೆ ಬುಡ್ಸಿಕನ ನಡ್‌ಸುವ ಕೊಣ್‌ತನ ರಾಹುಗುಳಿಜ್ಜ ಕೋಲಂತೇಳಿ ಕರ್‌ದವೆ.

**ಆಚರಣೆ :** ಕೊಲೆ ಬುಡ್ಸುದು ಕ್ರಮ ಪ್ರಕಾರ ನಡ್ದದೆ. ಈ ಕ್ರಮನ ಮನೆಂದ ಹಳ್ಳಾ ದೂರದ ಗುಡ್ಡೆಲಿ ನಡ್ಸುವೆ. ಮನೆಂದ ಕ್ರಮ ನಡಿವಲ್ಲಿವರೆಗೆ ಒಂದ್ ನೂಲು ಕಟ್ಟುವೆ. ಕಳೆ ಕಳಿವ ಕ್ರಮಲಿ ನಡೆವ ಎಲ್ಲಾ ಕ್ರಮಂಗ ಈ ಆಚರಣೆಲೂ ನಡೆದದೆ. ಕೋಳಿ ಗೈಪು ಮತ್ತೆ ಹುಗ್ಗೆನ ಎಡೆಗಳ ಇಕ್ಕುವೆ. ಆ ಎಡೆಗಳಿಗೆ ಕೋಲ್ತಿರಿ ಮಡ್ಲ್‌ನ ಹೊತ್ತುಸಿ, ಇಸುವೆ. ದೊಡ್ಡದೊಂದ್ ಬೊಲಿಕಟ್ಟೆ ಎದುರ್‌ಲಿ ಇಸಿದ್ದವೆ. ದೀಪಗಳ ಹೊತ್ತುಸಿ ಇಸುವೆ. ಕೊಲೆ ಹಿಡ್ದವನ ಮೀಸಿ ಆಚರಣೆ ನಡಿವ ಜಾಗೆಗೆ ಕರ್‌ಕಂಡ್ ಬಂದ್ ಎಡೆನ ಮುಂದೆ ಕುದ್ರುಸುವೆ. ಮಂತ್ರವಾದಿ ಮಂತ್ರಗಳ ಹೇಳಿಕಂಡ್ ಬಲಿಗೆ ಹೊದುರಿ ಹಾಕಿದೆ. ಅಸ್ಟ್ ಹೊತ್ತ್‌ಗೆ ರಾಹು ಗುಳಿಜ್ಜನ ಕೋಲ ಸುರಾದೆ. (ಪಿ.ಆರ್.)

**ಕೊಲೆ ಮೊದ್‌ವೆ :** ಮೊಯಿಂಸ ಸತ್ತ್ ಕೊಲೆನ ರೂಪಲಿ ಮುಂದುವರ್‌ದದೆಂತ ಹೇಳ್ವ ನಂಬಿಕೆ ನಮ್ಮ ಜೆನರ್‌ಲಿ ಉಟ್ಟು. ತೀರಿ ಹೋದ 12 ದಿನದ ಮೇಲೆ ಕೊಲೆ ಅಸ್ತಿತ್ವಕೆ ಬಂದದೆಗಡ.



ಕೊಲೆ ಮೊದ್‌ವೆ

ಆಸೆಗಪೂರ ಈಡೇರಿ, ಒಬ್ಬ ಮೊಯಿಂಸ ತೃಪ್ತಿಂದ ಸತ್ತರೆ, ಅಂವನ ಕೊಲೆಂದ ಕುಟುಂಬದವ್ಕೆ ಯಾವ ತೊಂದರೆನೂ ಆದ್ಲೆಂತ ಹೇಳ್ದು ಸಾಮಾನ್ಯ ನಂಬಿಕೆ. ಸಾಯಕನ ಬಾಯಿಗೆ ನೀರ್ ಕೊಡದಿದ್ದರೆ, ಅಕಾಲ ಮೃತ್ಯುಮನಿ ಬಂದರೆ ಅಲ್ಲೊ ಸಹಜ ಮರಣ ಆಗದೆ, ಬೇರೆ ಆಸ್ತಿ ಆಸೆಗಳ ಇಸಿಕಂಡ್ ಅದರ ಈಡೇರ್‌ಸಿಕೆ ಮುಂದೆನೆ ಆಕಸ್ಮಾತಾಗಿ ಸತ್ತ್ ಹೋದರೆ, ಹಾಂಗೆ ಸತ್ತಂವ ಕೊಲೆ ಆಗಿದ್ ಕಾಣ್ಸಿಕಂಬದಲ್ಲದೆ ಕುಟುಂಬದವ್ಕೆ ತೊಂದರೆ ಕೊಟ್ಟದೆತೇಳ್ವ ನಂಬಿಕೆ ಈಗೊಳೂ ಉಟ್ಟು. ಒಬ್ಬ ಸಾಯಕನ ಮೊದ್‌ವೆ ಪ್ರಾಯಕೆಮನಿ ಬಂದಿದ್ದ್ ತೀರಿಹೋದರೆ. ಅವ್ಕೆ ಸತ್ತ ಮೇಲಾರ್ ಮೊದ್‌ವೆ ಮಾಡ್ಸಕಾದೆ. ಹೆಣ್ಣಾದರ್‌ನು ಅಸ್ಟೆ, ಗಂಡಾದರೂ ಅಸ್ಟೆ, ಎಳೆ ಕೂಸು ತೀರಿಕಂಡಿದ್ದರೆ, ಆ ಕೊಲೆಗೆ ಮೊದ್‌ವೆ ಆವ ಪ್ರಾಯ ಆಗಿದ್ದರೆ, ಅದೂ ಕುಟುಂಬದವ್ಕೆ ತೊಂದರೆ ಕೊಡಿಕೆ ಸುರು ಮಾಡ್ದೆ. ಹಾಂಗಾಗಿ ಕುಟುಂಬದವ್ ತೊಂದರೆಗಳಿಗೆ ಕಾರಣ ಹುಡ್ಕಿ ಅದರ ಪರಿಹಾರ ಮಾಡಿಕೆ ಹೊರ್ಟವೆ.

**ಗೊತ್ತು ಮಾಡ್ದು :** ಗೊತ್ತು ಮಾಡ್ದು ತೇಳಿರೆ, ತಿಳಿವಳ್ಕೆ ಹೇಳ್ದುಂತ ಅರ್‌ತ. ನಿರ್‌ದಿಸ್ಟ ಕೊಲೆಗೆ ಮೊದ್‌ವೆ ಆಕುಂತ ಬಯ್ಸಿರೆ ಅದ್ ಮನೆಯವ್ಕೆ ವಿವಿದ ರೀತಿಲಿ ಉಪದ್ರ ಕೊಡಿಕೆ ಸುರು ಮಾಡ್ದೆಂತ ಗೌಡ್ರ ನಂಬುವೆ. ಈ ಉಪಟಳನು ಬೇರೆ ಬೇರೆ ರೀತಿಲಿದ್ದದೆ. ಮನೆಲಿ ಯಾರಿಗಾರ್ ದಿನಾ ಅಸೌಕ್ಯ ಇರ್‌ದು ಅಲ್ಲರೆ ಮನೆಲಿ ಈಗಾಗಲೇ ಮೊದ್‌ವೆ ಪ್ರಾಯಕೆ ಬಂದವ್ಕೆ ಮೊದ್ವೆ ಆಗದಂಗೆ ತಡಿದು, ಗಂಡು ಹುಡ್ಗರ್‌ಗೆ ಮೊದ್‌ವೆಗೆ ಗೂಡೆ ಸಿಕ್ಕದಿರ್‌ದು, ಹೆಣ್ಣಕ್ಕಳಿಗೆ ಗಂಡ್ ಸಿಕ್ಕದಂಗೆ ಮಾಡ್ದು ಕಡೆ ಗಳ್ಗೆಲಿ ಮೊದ್ವೆ ನಿತ್ತೋದು, ಇಂತೆಲ್ಲ ಗಟನೆಗ ನಡ್ದವೆ. ಇಂತದರ ಗ್ರಹಿಸ್‌ವ ಮನೆ ಹಿರಿಯರ್ ಜೋಯ್ಸರಕ್ಕಲೆ ಹೋಗಿ ತಮ್ಮ ಕಸ್ಟಗಳ ಹೇಳಿಕಂಡವೆ. ಆಗ ಜೋಯ್ಸರ್ ಈಗಾಗಲೇ ಸತ್ತ್ ಹೋದವರ ಬಗ್ಗೆ ಹೇಳಿ, 'ಕೊಲೆಗೆ ಮೊದ್‌ವೆ' ಮಾಡಕುಂತ ಹೇಳ್‌ವೆ. ಹಾಂಗೆ 'ಕೊಲೆ ಮೊದ್ವೆ ನಡ್ದದೆ'





**ಕೊಲೆ ಮೊದ್‌ವೆ ಕ್ರಮಗ :** ಕೊಲೆ ಮೊದ್‌ವೆ ಕ್ರಮಬದ್ದ ಆಗಿದ್ ನಡ್ಡದೆ. ಸಮಾಜಲಿ ಜೀವಂತ ಮೊಯಿಂಸರ್‌ಗೆ ನಡೆವಂಗೆ ಎಲ್ಲ ತರದ ಆಚರಣೆಗ ಇಲ್ಲಿ ನಡ್ಡದೆ. ಸುರುಗೆ ಸರಿ ಆದ ಗಂಡ್‌ಗೆ ಹುಡ್ಕುವೆ. ಸತ್ತು ಹೋದವಂಗೆ ಮೊದ್‌ವೆ ಪ್ರಾಯ ಆಗಿರ್‌ದುಂತೇಳ್‌ವ ಪ್ರಾಯನ ಲೆಕ್ಕ ಹಾಕಿ, ಆ ಪ್ರಾಯಕ್ಕೆ ಸರಿ ಹೊಂದುವಂಗೆ ಗೂಡೆನ ಹುಡ್ಕ್‌ವೆ. ಸೋದರ ಸಮ್ಮಂದಲಿ ಹೆಣ್ಣ್ ಕೊಲೆನ ಹುಡ್ಕುದೆ ಹೆಚ್ಚಿ. ಬೊಳಿ, ಜಾತಕ, ಎಲ್ಲ ಕೂಡಿ ಬಂದರೆ ಮೊದ್‌ವೆ ದಿನ ನಿರ್‌ದಾರ ಮಾಡ್‌ವೆ. ವರದಕ್ಷಿಣೆನ ಸಮಸ್ಯೆ ಇಲ್ಲೆ. ವದೂವರರ ಪರ ಆಗಿ ಎರ್‌ಡೂ ಕಡೆನ ಹಿರಿಯರ್ ನಿಗಂಟ್ ಮಾಡ್ದ ಕಾರ್ಯಕ್ರಮಗಳ ನಡ್ಸಿಕಂಡ್ ಬಂದವೆ. ಹೈದ–ಗೂಡೆ ನೋಡಿ ಒಪ್ಪ ಪ್ರಸ್ನೆ ಇಲ್ಲಿ ಇಲ್ಲದಿರ್‌ದರ್‌ಂದ ಜಾತಕ ಮತ್ತೆ ಬೊಳಿ



ಕೊಲೆ ಮೊದ್‌ವೆ

ಕೂಡಿ ಬಂದ್, ಮನೆವು ಒಪ್ಪಿರಾತ್. ಹೆಣ್ಣ್ ನೋಡಿಕೆ ಹೋದು, ಮೊದ್‌ವೆ ಹೇಳಿಕೆ ನಡ್ಸುದು ಇಂತದ್ ನಡ್ದ ಮೇಲೆನೆ ಮೊದ್‌ವೆ ನಡ್ಡದೆ. ಮೊದ್‌ವೆನ ಹಿಂದೆನ ದಿನದಂದ್ ಹಾಲೆ ಮರ ಇಲ್ಲರೆ ಬಾಳೆ ದಂಡ್‌ಂದ ಮೊದುಮಕ್ಕಳ ಆಕೃತಿನ ಮಾಡಿ ಪ್ರತ್ಯೇಕ ಮಾಡ್‌ವೆ. ಸಣ್ಣ ಮಣೆಗೆ ಚಿತ್ರ ಬರ್‌ದ್, ಅದರ್‌ನೆ ಮೊದುಮಕ್ಕಂತೇಳಿದ್ ಗುರ್‌ತ್‌ಸ್‌ವ ಕ್ರಮನೂ ಉಟ್ಟು. ಮೊದುಮಜ್ಞನ ಆಕೃತಿಗೆ ಚಿನ್ನಾಬರಣ ಹಾಕಿ ಸಿಂಗರ್‌ಸಿದ ಹಾಂಗೆನೆ, ಮೊದೊಳಿಗೆಗೂ ಸೀರೆ ಉಡ್ಸಿ ಸೃಂಗಾರ ಮಾಡ್‌ವೆ. ಮೊದ್‌ರಂಗಿ ಸಾಸ್ತ್ರ, ಸೋಬಾನೆ ಪೊದ್ಯಗೆಲ್ಲ ಕ್ರಮದಂಗೆ ನಡ್ಡದೆ. ಊರ್‌ನ ಗೌಡ ಮುಕ್ಯಸ್ತ ಮೊದ್‌ವೆನ ಎಲ್ಲ ಜವಬ್ದಾರಿ ತಕಂಡ್ ನಡ್ಸಿಕೊಟ್ಟವೆ.

ದಿಬ್ಬಣ ಬಂದಾದ ಮೇಲೆ, ಗೂಡೆನ ಮನೆಲಿ ದಾರೆನ ಕಾರ್ಯಕ್ರಮ ನಡ್ಡದೆ. ದಾರೆ ಮಂಟಪನ ಮಾತ್ರ ಇಜ್ಜಲ್ ಮತ್ತೆ ಮನೆನ ಜಗಲಿನ ನಡು ಬಾಗ ಆದ 'ಸೂರಡಿ'ಲಿ ಮಾಡ್‌ವೆ. ಸಣ್ಣದಾದ ಒಂದ್ ಚಪ್ಪರನೆ ದಾರೆಮಂಟಪ ಆಗಿದ್ದದೆ. ಅದರಡಿಲಿ ಮೊದುಮಕ್ಕಳ ನೀಲ್ಸಿ ದಾರೆ ಹೊಯ್ದವೆ. ಸೋಬಾನೆಗ ಕ್ರಮದಂಗೆ ನಡ್ಡದೆ. ದಾರೆ ಹೊಯ್ಯಕನ ಮಾತ್ರ ಎಲೆ ಮತೆ ಮಾಯ್ನ ಸೊಪ್ಪುನ ತಿರ್‌ಗ ಮರ್‌ಗ ಆಗಿ ಹಿಡಿಯಕು. ಎಡ್ದ ಕೈಲಿ ದಾರೆ ಹೊಯ್ಯಕು. ನಾಲ್ಕಾಣೆ ಪಾವಲಿಂದ ಮಾಡ್ದ 'ತಾಳಿನ' ಗಂಡ್‌ನ ಪರ ಆಗಿ ಗೂಡೆನ ಗಂಟ್ಲ್‌ಗೆ ಕಟ್ಟುವೆ. ಪಚಾರ ಹೆಣ್ಣ್ ಒಪ್ಪ್‌ಸ್‌ವ ಕ್ರಮಗ ನಡ್ದಾದ ಮೇಲೆ ಮೊದೊಳಿಗೆನೊಟ್ಟಿಗೆ ಮೊದುಮಜ್ಞ ಅಂವನ ಮನೆಗೆ ಬಂದದೆ. ಮನೆನ ಹಿರಿಯರ್ ಮೊದುಮಕ್ಕಳ ರೂಪಗಳ ಅಟ್ಟಲಿ ಇಸುವೆ.

ಜೀವಂತ ಮೊಯಿಂಸಂಗೆ ಮೊದ್ವೆ ನಡೆವ ಹಾಂಗೆನೆ 'ಕೊಲೆ'ಗಳಿಗು ನಡ್ಡದೆ. ಕೆಲವ್ ಮುಕ್ಯ ಜಾಗೆಲಿ ತಿರ್‌ಗ ಮರ್‌ಗ ಮಾಡ್ದರ ಬುಟ್ಟರೆ ಒಳ್ದಂಗೆ ವೆತ್ಯಾಸ ಏನಿಲ್ಲೆ. ಈ ಮೊದ್‌ವೆ ನಡ್ಸುದರ್‌ಂದ ತಮ್ಮ ಕರ್‌ತವ್ಯ ಮುಕ್ತ್‌ಂತ ಮನೆವೆಲ್ಲ ನೆನ್ಸಿಕಂಡವೆ. (ಪಿ.ಬಿ.)

**ಕೆಂಚಮ್ಮನ ಆರಾದನೆ :** ಗೌಡ್ರ್‌ಗ ಮಾತ್ರ ಆಚರಿಸ್ವ ಸಬ್ಬಮ್ಮ/ಸುಬ್ಬಮ್ಮ/ಕೆಂಚಮ್ಮಾರಾದನೆ ಆದಿ ಮೂಲಲಿ ಕುಲ ಸತಿ ಆರಾದನೆ. ಇದರ ಬಗ್ಗೆ ಹಿಂದೆನ ಕಾಲದವು ಹೇಳ್ವ ಹಲವು ಪ್ರತೀತಿಕಗ ಒಳೊ. ಇವು ಬೆಂಗಳೂರ್‌ನ ಕಟ್ಟಿದ ಕೆಂಪೇಗೌಡ್ರ ಯಲಹಂಕ ವಂಶ ಮೂಲದೆಡೆಗೆ ಕೈ ತೋರ್‌ಸುವೆ. ಈ ವಂಶದ ಮೂಲ ಪುರುಷ ಬೈರೇಗೌಡನ ಕೂಸೆ ದೊಡ್ಡಮ್ಮ ಸತಿಯಾದ್‌ತ ಬಾಯಿಮಾತ್. ಇದೇ ಮುಂದೆ ಕೆಂಪಮ್ಮ ಆಗಿ ಒಕ್ಕಲಿಗ ಗೌಡ್ರ ಕುಲ ದೇವತೆ ಆಗಿ ಆರಾದನೆಯಾದ್ ತೇಳಿದ್ ಹೇಳ್‌ವೆ. ಈಗಲೂ ಒಕ್ಕಲಿಗ ಗೌಡ್ರುಗ ವಲಸಿಗ ಆಗಿ ನೆಲ್ಸಿರುವ ಹಳೆ ಮೈಸೂರ್‌ನ ಬಾಗಗ ಆದ ಮಂಡ್ಯ, ಮೈಸೂರು, ಹಾಸನ, ಮತ್ತೆ ಬೆಂಗಳೂರು ಬಾಗಲಿ ಈ ಸತಿ ದೊಡ್ಡಮ್ಮ ಗ್ರಾಮದೇವತೆಯಾಗಿ ಕೆಂಪಮ್ಮಂತಳೂ ಆರಾದಿಸಲಾದೆ. ಇನ್ನೊಂದು ಬಾಯಿ ಮಾತ್‌ನ ಪ್ರಕಾರಲಿ ಕಲ್ಯಾಣಲಿ ಹಿಂದೆ ಮುದ್ದೇಗೌಡ ತೇಳೊವು ಇದ್ದಾ. ಅವಂಗೆ ಏಳು ಜೆನ ಗಂಡು ಮತ್ತೆ ಒಂದ್ ಹೆಣ್ಣ್ ಮಕ್ಕ ಇದ್ದೊ ಗಡ. ಅತಿ ಸುಂದರಿಯಾದ ಕೂಸುನ ಕೆಳ ಜಾತಿ ಹಜಾಮಂಗೆ ಮೊದ್‌ವೆ ಮಾಡಿಕೊಡುಕುಂತ ಅಲ್ಲಿನ ಪ್ರದಾನಿ ಹೇಳ್ತ್ ಗಡ. ಒಪ್ಪದ ಗೌಡ ರಾತೋರಾತ್ರಿ ಸಂಸಾರದೊಟ್ಟಿಗೆ ಊರು ಬುಟ್ಟು ತೆಂಕಣದತ್ತ ಹೊರಟು ಬಂದೊ. ಸೈನಿಕರ ಕಳ್ಸಿ ಹಿಡ್ದು ತಾಕೆ ಮಂತ್ರಿ ಹೇಳ್ತ್ . ತುಂಬಿ ಹರಿತಿದ್ದ ತುಂಗಬದ್ರೆ ಹಳ್ಳ ದೊಡ್ಡಮ್ಮಳ ಪ್ರಾರ್ತನೆಗೆ ಓ ಕೊಟ್ಟ್ ದಾರಿ ಬುಟ್ಟತ್, ಸೈನಿಕರ್ ಬಾಕನ ಹಳ್ಳ ತುಂಬಿ ಹರ್‌ತ್ ಗಡ.. ಇರ್‌ಲ್ ಸಂಸಾರ ನಿದ್ದೆಲಿರಿಕನ ನನ್ನಂದಾಗಿದೇ ಹಿಂಗೆಲ್ಲಾತ್‌ಂತ ಚಿಂತೆಮಾಡ್ದ ದೊಡ್ಡಮ್ಮ ಅಲ್ಲಿಯೇ ರಾಶಿಯಾಗಿದ್ದ ಸೌದೆಗೆ ಕಿಚ್ಚಿ ಕೊಟ್ಟು ಅದ್ಕೆ ಹಾರಿ

ಜಿವ ಕಳ್ಕಂಡ್ ಮಹಾಸತಿಯಾತ್. ಅದರ ಏಳ್ ಜೆನ ಅಣ್ಣಂದರ್ ತರುವಾಯ ಬೇರೆ ಬೇರೆಯಾಗಿ ಒಕ್ಕಲಿಗ ಪಂಗಡಗ ಆದೊ. ಹಾಂಗೆ ಆದ ಪಂಗಡಗ ಮುಂದೆ ಇವಳ ಮನೆ ದೇವತೆ ತ ಆರಾದ್‌ಸಿಕಂಡ್ ಬಂದೊ. ಒಟ್ಟಾರೆ ಈ ಕತೆನ ಪ್ರಕಾರ ಕುಲದ ಸ್ತ್ರಿ ಒಂದ್ ಮನೆ/



ಕೆಂಚಮ್ಮ ದೇಸ್ತಾನ

ಗ್ರಾಮದೇವತೆಯಾಗಿ ಆರಾದನೆಗೆ ಬಂದ ಸಂಗತಿನ ತಿಳ್‌ಸಿದೆ.

ಒಕ್ಕಲಿಗ ಮೂಲದ ಗಂಗರಸುಗ ಏಳೂರು ಮುನಿಸ್ವಾಮಿ, ಕಾಲಬೈರವನ ಆರಾದಿಸುತ್ತಿದ್ದೊ. ಇದೇ ಗಂಗರ ಮೂಲದ ಕ್ರಿಸಿಕ ಗೌಡ್ರುಗ ತುಳುನಾಡ್‌ಗೆ ವಲಸೆ ಬಾಕೆ ಮುಂದೆ ಹಾಸನದ ಐಗೂರು ಸೀಮೆಲಿ ಇದ್ದ ಕಾಲಲಿ ಕೆಂಚಮ್ಮನ ಆರಾದಿಸುತ್ತಿದ್ದೊ ಸ್ತಾನಗ ಇಂದೂ ಆ ಪ್ರದೇಸಗಳ್‌ಲಿ ಕಂಡ್ ಬಂದವೆ. ಹಾಸನದ ಐಗೂರು ಸೀಮೆಲಿ ಊರ್‌ನ ಪಾಳೆಗಾರೊಬ್ಬ ಕಟ್ಟಿದ ಹೊಸ ಕೋಟೆ ಕೆಂಚಮ್ಮನ ದೇಸ್ತಾನ ಉಟ್ಟು. ಇದ್ 1604ರಲಿ ಮತ್ತೆ ಕೆಂಚಾಂಬಿಕೆ ತೇಳ್ವ ಹೆಸುರ್‌ಲಿ ದೊಡ್ಡ ದೇಸ್ತಾನ ಆಗಿ ಪರಿವರ್ತನೆ ಆತ್. ಇದ್ ಮೂಲತಃ ಜೆನಂಗ ಜೆನಪದೀಯ ನೆಲೆಲಿ ಆರಾದ್ಸತಿದ್ದ ಕೆಂಚಮ್ಮಂದಾಗಿತ್ತು. ಅರೆಬಾಷಿಕ ಗೌಡ್ರುಗ ಇಲ್ಲಿ ಹರಕೆಒಪ್ಪುಸುವೆ.ಹಾಂಗೆನೆ ಸಕಲೇಶ ಪುರ ತಾಲೂಕ್‌ನ ಕೂಡು ಮಾರ್‌ಗದ ಹಕ್ಕಲೆ ಇರುವ ಒಣಗೂರು ಸಬ್ಬಮ್ಮ ದೆವ್ವನು ನೇರ ಆಗಿ ಗೌಡ್ರೊಟಿಗೆ ಸಮ್ಮಂದ ಹೊಂದಿಟು. ಗೌಡ್ರುಗ ಈ ಸಬ್ಬಮ್ಮ ದೆವ್ವಕ್ಕೆ ಮೊದ್‌ವೆ ಇತ್ಯಾದಿ ಸುಬ ಕಾರ್‌ಯಗಳ ಹೊತ್ತ್‌ಲಿ ಒಳ್ಳೆ ಮೆಣ್ಸುನ ಹರ್‌ಕೆನ ತೆಗೆದಿಸ್ಸುವ ಕ್ರಮ ಉಟ್ಟು. ಈ ಪೊದ್ದತಿಗಳ ಮೂಲಕ ತಾವು ಆದಿ ಮೂಲಲಿ ಆರಾದಿಸುತ್ತಿದ್ದ ದೆವ್ವಂಗಳಿಗೆ ನಿಸ್ಟೆ ತೋರಿಸುತ್ತೊಳೊ. ಅಂದರೆ ತಮ್ಮ ಮೂಲ ಆರಾದನಾ ಪೊದ್ದತಿನೊಟ್ಟಿಗೆ ಸಮ್ಮಂದ ಕಲ್ಪಿಸುವೆ. ತುಳು ಗೌಡರ್ ನೆಲೆಯಾಗಿರುವ ಪ್ರದೇಶಲಿ ಕೆಂಚಮ್ಮನ ಆರಾದನೆ ಇಲ್ಲದರೂ, ಸುಳ್ಯ ಪರಿಸರದ ಅರೆಬಾಷಿಕ ಗೌಡ್ರುಗಳ ತರವಾಡು ಮನೆಗಳ್‌ಲಿ ಉದಾಹರ್‌ಣೆಗೆ ಪಣೆಮಜಲು, ಕಲ್ಲೆಂಬಿ, ಏಣಡ್ಕ, ಗೌಡ್ರ ಮೂಡು ಕಟ್ಟೆಮನೆ ಕೂಜುಗೋಡು, ಮರ್‌ಕಂಜ, ಕುಂಚಡ್ಕ ತರವಾಡು ಮನೆಗಳ್‌ಲಿ ಆರಾದನೆ ಉಟ್ಟು. ಒಟ್ಟಾರೆ ಕೆಂಚಮ್ಮನ ಆರಾದನೆ ಗೌಡ್ರದ್ದೇ ಕುಲ ಮೂಲದ ಮನೆದೇವತೆ ತೇಳಿದ್ ಗೊತ್ತಾದೆ. ಹಾಂಗೆ ತೇಳಿ ಗೌಡ್ರುಗೆಲ್ಲ ಕೆಂಚಮ್ಮನ ಆರಾದಿಸುದಿಲ್ಲೆ. ಆದರೆ ಎಲ್ಲೊವೂ ಸ್ತ್ರೀ ದೆವ್ವವೊಂದರ ಸರ್‌ವೇ ಸಾಮಾನ್ಯತೇಳಿ ಆರಾದಿಸ್ತಾ ಒಳದ್ ಕಂಡದೆ. ಕೆಲವ್ಕಡೆ ಕೆಂಚಮ್ಮನ, ಒಳ್ಳ ಗೌಡ್ರ್ ಮಾತ್ರ ಸ್ವರೂಪಿ ನೆಲೆನ ರುದ್ರಾಂಡಿ ದೆವ್ವನ ಸಾರ್‌ವತ್ರಿಕ ಆಗಿ ಕುಟುಂಬದ ದರ್ಮದೆವ್ವದ ನೆಲೆಲಿ ಆರಾದ್‌ಸುವೆ.

ಇಂದ್ ಗೌಡ್ರುಗ ಮಕ್ಕಳ ಕಟ್ಟ್ನ ಅನುಸರಿಸುತ್ತೊಳ. ಆದಿಮೂಲಲಿ ಅವ್ ಮಾತ್ರ ಮೂಲೀಯ ಕಟ್ಟ್ನ ಅನುಸರ್‌ಸತಿದ್ದೊ. ಪ್ರತೀತಿಗಳಳ್‌ಲಿ ದೊಡ್ಡೇಗೌಡ/ ರಣಬೈರೇಗೌಡನ ಮಗಳ್ ಮಹಾಸತಿಯಾಗಿ ಕುಲದೇವತೆಯಾಗಿ ಆರಾದನೆ ಆವ ಬಗೆಲಿ 'ಮಾಸ್ತಿ'ನ ಪರಿಕಲ್ಪನೆಗೆ ಅವಕಾಶ ಉಟ್ಟು, ಈ ಮೂರ್‌ತಿ ಶಿಲ್ಪಗ 'ಮಾಸ್ತಿ' ಶಿಲ್ಪಗಲ್ಲ. ಈ ವೆತ್ಯಾಸನ ಕೆಂಚಮ್ಮ/ಸಬ್ಬಮ್ಮ ಶಿಲ್ಪಗ ಸ್ಪಸ್ಟವಾಗಿ ಒಡಮೂಡಿಸ್ಸುವೆ. ಐಗೂರ್‌ನ ಕೆಂಚಮ್ಮ ಒಣಗೂರ್‌ನ ಸಬ್ಬಮ್ಮರ್ಗಿಗೆ ಹಿರಿಯರ ಕಾಲಲಿ ಕುರಿ, ಆಡು, ಕೋಣಗನ ಬಲಿ ಕೊಟ್ಟ್ ಆರಾದಿಸುವ ಪೊದ್ದತಿ ಇತ್ತ್. ಕಾಲದರ್ಮಕೆ ಸರಿಯಾಗಿ ಇಂದ್ ಬದಲಾಗಿದ್ದರ್ ಅದರ ಸಾಂಕೇತಿಕತೆಗ ಇಂದ್ ನಡ್ದದೆ. ವಾರ್ಷಿಕ ಒಂದಾವರ್‌ತಿ ಕೋಳಿನ ಕೊಯ್ದವೆ. ಉಳ್ದಂಗೆ ನಿತ್ಯ ದೀಪಾರಾದನೆ. ವಿಶಿಸ್ಟ ದಿನಗಳಳ್‌ಲಿ ಬ್ರಾಹ್ಮಣ ಪುರೋಹಿತರ್‌ಂದ 'ದೇವಕ್ರಿಯೆ'ಲಿ ಸಾತ್ವಿಕ ಆರಾದನೆ ನಡ್ದದೆ. ಈ ಆರಾದನೆ ವಾರ್ಷಿಕಾವರ್‌ತನದ ಬಿಸು, ಸೋಣ ಸಂಕ್ರಾಂತಿ, ಕಾವೇರಿ ಸಂಕ್ರಮಣ, ದೀಪೋಳಿ ಇಂತ ಹಬ್ಬದ ದಿನಲಿ ಮಾಡ್ವೆ. ಸಬ್ಬಮ್ಮ/ ಕೆಂಚಮ್ಮ ಗ್ರಾಮದೇವತೆ ಆಗಿ ಆರಾದನೆ ಅವ ಕಾಲಲಿ ಮಾರಿಯಮ್ಮ, ಬನದಮ್ಮ, ಪಟಲದಮ್ಮ, ದೊಡ್ಡಮ್ಮ ಆದೆ. ಇದ್ ಗ್ರಾಮ ದೆವ್ವ ಆಗಿ 'ರಕ್ತತರ್‌ಪಣ'ದೊಟ್ಟಿಗೆ ಆರಾದನೆಯಾದರೆ ಮನೆದೆವ್ವವಾಗಿ ಇರ್‌ಕನ ಅಯ್ಯೆನ ಹಂಗೆ ಕುಟುಂಬನ ರಕ್ಷಕಿಯಾಗಿ ಸಾತ್ವಿಕ ನೆಲೆಲಿ ಆರಾದನೆ ಪಡ್ದದೆ.

ಕೆಂಚಮ್ಮ/ಸಬ್ಬಮ್ಮನ ಆರಾದನೆ ಸುಳ್ಯ ಪರಿಸರಲಿ ಸುಬ್ರಹ್ಮಣ್ಯ, ಕಡಬ, ಮರ್‌ಕಂಜ, ಆಲೆಟ್ಟಿ ಈ ಪ್ರದೇಶದ ಗೌಡ್ರ ತರವಾಡ್ ಮನೆಗಳಳ್‌ಲಿ ನಡ್ದದೆ. ತುಳುವೇ ಮಾತ್ರ ಬಾಷೆನ ಆಡ್‌ವ ಗೌಡ್ರುಗ ಒಂದರ್ತಲಿ ಅವ್ ತುಳು ಸಂಸ್ಕೃತಿನ ಸಂಪೂರ್‌ಣ ಒಪ್ಪಿಕೊಂಡೊಳೊ. ಹಂಗಾಗಿ ಅವ್ ಆದಿ ಮೂಲನ ಆರಾದನಾ ಪರಂಪರೆ ಆಗಿರುವ ಕೆಂಚಮ್ಮನ ಆರಾದನೆ ಬುಟ್ಟೊಳೊ.

**ಕಡಬ ಪಣೆಮಜಲ್‌ನ ಸಬ್ಬಮ್ಮ ಮೂರ್‌ತಿ :** ಕೆಂಚಮ್ಮನ ಶಿಲ್ಪದ ಆಕಾರ ರೂಪಲಿ ಒಂದೆ ಆಗಿರ್‌ದುಲೆ. ಅದರ್‌ಲಿ ಕಾಂಬ ಗುಣಗ ಮತ್ತೆ ಸ್ವಬಾವ ವಿನ್ಯಾಸಗಳ್‌ಲಿ ಮಾತ್ರ ಸಮಾನತೆ ಕಂಡದೆ. ಈ ಶಿಲ್ಪಗ ಶ್ರೇಸ್ಟ ದೇವರ ಮೂರ್‌ತಿನಸ್ಟ್ ನಯನಾಜೂಕಿಂದ ಕೂಡಿರ್‌ದುಲೆ. ಜೆನಪದರ ದೆವ್ವಗ ಆದ ಮಾರಿ, ಅಮ್ನೂರು ಮೊದಲಾದ ಗ್ರಾಮ ದೆವ್ವಗಳ ಹಂಗೆ ಕಂಡವೆ. ದೊಡ್ಡ ಮೋರೆ, ಉಬ್ಬಿದ ಹಾಂಕರ್‌ವ ಕಣ್ಣ್‌ಗ




ಅಗಲದ ಕೆಬಿಗ, ಚಪ್ಪಟೆ ಮೂಂಕು, ದೊಡ್ಡ ಎದೆ ಕಟ್ಟ್, ಸೊಂಟಲಿ ವಿಸೇಸಲಿ ಇಳಿ ಬುಟ್ಟ ಉಡುಗೆ, ಹಿಂಗೆ ಇರ್‌ದು ಸಾಮಾನ್ಯ ಶಿಲ್ಪನ ಬಲ ಕೈಲಿ ತಾವರೆ ಮೊಗ್ಗು, ಎಡನ ಕೈಲಿ ಅರಳ್ದ ತಾವರೆ ಇದ್ದದೆ. ಕೆಲ ಮೂರ್‌ತಿಗಳ ಎಡ ಕೈ ಅಬಯ ಹಸ್ತ ಆಗಿರ್‌ದು ಉಟ್ಟು. ಪೀಟ ಸಹಿತ ಆಗಿರವ ಶಿಲ್ಪಗ ಗಾಂಬೀರ ಬಾವ ಹಿನ್ನೆಲೆನ ಪ್ರಬಾವಳಿ ಹೊಂದಿದ್ದದೆ. ಒಟ್ಟಾರೆ ಕೆಂಚಮ್ಮನ ಶಿಲ್ಪಗ ಗ್ರಾಮ್ಯ ಕಲ್ಪನೆಲಿ ರೂಪ ಪಡ್‌ಕಂಡಿವೆ. ಕುಟುಂಬಕ್ಕೆ ಸಕಲ ಸಂಪತ್ತುನ ಕೊಡುವ,, ಸಂತಾನ ಬಾಗ್ಯನ ಕೊಡ್ವ ಫಲಪ್ರದಾಯಿ ತೇಳ್ವ ಆಶಯಗಂದ ಈ ಶಿಲ್ಪಗ ಕಂಡವೆ. ದುಸ್ಟ ಶಕ್ತಿಗಳ ನಾಶಮಾಡಿ ಶಿಸ್ಟರ ಪೊರೆವ ಅವ್ವನಾಂಗೆ ಸಾಕಾರಗೊಂಡದರ ಕಾಂಬಕ್ಕೆ ಅವಕಾಸ ಉಟ್ಟು. (ಪಿ.ಕೆ.)

**ಸಬ್ಬಮ್ಮ/ಕೆಂಚಮ್ಮ ದೆವ್ವ ಸ್ವರೂಪ ಮತ್ತೆ ಪೂಜೆ ಮಾಡ್‌ವ ವಿದಾನ :** ಪಂಜದ ಏನಡ್ಕ, ಕಡಬದ ಪಣೆಮಜಲ್ ಮತ್ತೆ ಸುಬ್ರಹ್ಮಣ್ಯದ ಕೂಜುಗೋಡ್‌ಲಿ ಸಬ್ಬಮ್ಮನ ಪೂಜೆನ ಬೇರೆ ಬೇರೆ ಗುಡಿಲಿ ಮೂರ್‌ತಿಗೆ ಪೂಜೆ ನಡ್ದದೆ. ಸಬ್ಬಮ್ಮನ ಮೂರ್‌ತಿನ ಆಕಾರಲಿ ಬದಲಾವಣೆ ಇದ್ದರೂ ಅದರ ಗುಣ ಸೊಬಾವಲಿ ಮತ್ತೆ ಆಕಾರಲಿ ಒಂದೇ ತರ ಕಂಡದೆ. ಇದರ ಗಮನ್ಸಿರೆ ಬೇರೆ ದೇವರ ಮೂರ್‌ತಿಗಳ್‌ಲಿ ಇರ್‌ವ ನಯನಾಜೂಕ್‌ಂದ ಬೇರೆ ಆಗಿರ್‌ದು ಕಂಡ್ ಬಂದದೆ. ಜೆನಪದ ದೆವ್ವಗಳಾದ ಮಾರಿಯಮ್ಮ, ಅಮ್ನೂರು ಇಂತ ಗ್ರಾಮ ದೇವತೆಗಳ ಲಕ್ಷಣಗಳಿಗೆ ಹಕ್ಕಲೆ ಉಟ್ಟು. ದೊಡ್ಡ ಮೋರೆ, ಉಬ್ಬಿಕಂಡ್ ಇರ್‌ವ ಕಣ್ಣ್‌ಗುಡ್ಡೆಗ, ಅಗಲದ ಕೆಬಿ, ಚಪ್ಪಟೆ ಮೂಕ್, ದೊಡ್ಡ ಎದೆ ಕಟ್ಟ್, ಮತ್ತೆ ಸೊಂಟಕ್ಕೆ ಇಳ್ಸಿದ ಸೀರೆಗಳ್‌ಂದ ಕೂಡಿಟು. ಅದರ್‌ಲು ಮಣೆಮಜಲ್ ಗೌಡ ಮನೆತನದ ಇಜ್ಜೇಲ್‌ನ ಗುಡಿಲಿರುವ ಮೂರ್‌ತಿ ವಿಸೇಸ ಉಟ್ಟು. ಈ ಮೂರ್‌ತಿನ ಬಲಕೈಲಿ ತಾವರೆ ಮೊಗ್ಗು ಇದ್ದರೆ ಎಡಕೈಲಿ ಅರ್‌ಳಿದ ತಾವರೆ ಉಟ್ಟು. ಏನಡ್ಕಲಿ ಇರ್‌ವ ಮೂರ್‌ತಿಲಿ ಎಡಕೈ ಅಬಯ ಕೊಡುವಂಗೆ ಉಟ್ಟು. ಇದರ ಹಕ್ಕಲೆನ ನೆಂಟ್ರ್‌ಂತೇಳಿ ಕರ್‌ಸಿಕಂಬ ಸುಬ್ರಹ್ಮಣ್ಯದ ಕೂಜುಗೋಡ್‌ನ ಮೂರ್‌ತಿನೂ ಹಿಂಗೇ ಉಟ್ಟು. ಈ ಮೂರ್‌ತಿಗಳಿಗೆ ಪೀಟ ಮತ್ತೆ ಪ್ರಬಾವಳಿ ಉಟ್ಟು. ಒಟ್ಟಾರೆ ಆಗಿದ್ ಈ ಮೂರ್‌ತಿ ರೂಪ ಗ್ರಾಮಗಳ ಸಂಪ್ರದಾಯಗಳ ಕಲ್ಪನೆಗ ಇದ್ದ್ ಮಕ್ಕಳ ಬಾಗ್ಯ ಕೊಡುವ ದೇವ್ರ್‌ಂತೇಳ್ವ ನಂಬಿಕೆಗಳ್‌ಂದ ಕೂಡಿಟು. ಕೆಟ್ಟ ಸಕ್ತಿಗಳ ದೂರ ಮಾಡಿ ಒಳ್ಳವರ ರಕ್ಷಣೆ ಮಾಡ್‌ವ ಮನೆ ದೇವ್ರಾಗಿ ಸಬ್ಬಮ್ಮ ಮೂರ್‌ತಿ ರೂಪಲಿ ನೆಲೆನಿಂತುಟು. ಹೆದ್ರುಸುದರೊಟ್ಟಿಗೆ ಹೆದ್ರಿಕೆನ ಓಡ್ಸುದುಂತೇಳ್ದು ಗ್ರಾಮೀಣ ಜೆನರ ನಂಬಿಕೆ. ಹಂಗೆನೇ ಮೂರ್‌ತಿಗ ಕೂಡ ಇರ್‌ದು. ಪ್ರತೀತಿಗಳ್‌ಲಿ ದೊಡ್ಡೇಗೌಡ/ರಣಬೈರೇಗೌಡ ಮಗಳ್ ಮಹಾಸತಿ ಆಗಿದ್ ಮನೆದೇವ್ರಾಗಿ ಪೂಜೆ ಮಾಡ್ಸಿಕಂಬ ರೀತಿಲಿ 'ಮಾಸ್ತಿ' ಅವರ ಕಲ್ಪನೆಗೆ ಅವಕಾಸ ಇದ್ದರೂ ಈ ಮೂರ್‌ತಿಗ ಮಾಸ್ತಿ ಮೂರ್‌ತಿಗಾ. ಈ ವೆತ್ಯಾಸನ ಮೂರ್‌ತಿಗ ಸರಿಯಾಗಿ ತಿಳ್ಸಿಕೊಟ್ಟವೆ.

ಐಗೂರ್‌ನ ಕೆಂಚಮ್ಮ ಒಣಗೂರ್‌ನ ಸಬ್ಬಮ್ಮಂಗೆ ಹಿರಿಯರ ಕಾಲಲಿ ಕುರಿ, ಆಡು, ಕೋಣಗಳ ಬೊಲಿ ಕೊಟ್ಟ್ ಪೂಜೆ ಮಾಡ್ತಿದ್ದೊ. ಕಾಲ ಬದಲಾದಂಗೆ ಇದ್ ಬದಲಾದರೂ ಇದರ ಕೆಲವೊಂದ್ ರೂಪಗ ಇಂದ್‌ಗು ಕಂಡ್ ಬಂದದೆ. ಶೈವ ಕಾಪಾಲಿಕರ ಮತ್ತೆ ಕೌಳರ ಕಾಳಿನ ಆರಾದನೆಲಿ ಮೊಯಿಂಸರ ಬಲಿ ಕೊಡ್ತಿದ್ದೊ. ಈ ಪೊದ್ದತಿ ಒಕ್ಕಲಿಗರ್‌ಲು ಇತ್ತ್‌ಂತೇಳಿ ವಿಚಾರವಂತರ್ ಅಬಿಪ್ರಾಯ ಪಟ್ಟೊಳ. ಹಿರಿಯೊವ್ ಬಾರಿ ಹಿಂದೆನ ಕಾಲಲಿ ಮನೆ ಹಿರಿಮಗಳ ಬಲಿ ಕೊಡ್ತಿದ್ದ ಸಂಪ್ರದಾಯ ಇತ್ತ್. (ರಾಜೇ ಗೌಡ ಹ. ಕ. 2007;148) ಕೆಂಚಮ್ಮನ ಪೂಜೆನ ಹಿಂದೆ ಇರ್‌ವ ಸಂಗತಿ ಕೂಡ ಬಲಿ ಕೊಡುದರ್‌ನೇ ತಿಳ್ಸಿದೆ. ಏನಡ್ಕದ ಸಬ್ಬಮ್ಮಂಗೆ ಆಡ್, ಹಂದಿ ಕಡೆದು ಇತ್ತ್‌ಂತೇಳಿ ಹಿರಿಯೊವ್ ಹೇಳ್ವೆ. ಕೋಳಿ ಅಂತೂ ಕೊಯ್ದುವೆ. ಆದರೆ ಇದ್ ಕಾಲಾವದಿಲಿ ಮಾತ್ರ ನಡ್ದದೆ. ಒಳ್ದಾಂಗೆ ದೀನೋಳು ದೀಪ ಹೊತ್ತುಸುದು, ವಿಸೇಸ ದಿನಗಳ್‌ಲಿ ಬಟ್ರೊಟ್ಟಿಗೆ 'ದೇವಕ್ರಿಯೆಲಿ' ಮೂಜೆ ಮಾಡ್ತುವೆ. ಅದರ್‌ಲು ಈ ಪೂಜೆ ವರ್‌ಸಂಪ್ರತಿ ಬಾವ ಬಿಸು, ಸೋಣ ಸಂಕ್ರಮಣ, ಕಾವೇರಿ ಸಂಕ್ರಮಣ, ದೀಪಾವಳಿ ಇಂತ ಹಬ್ಬದ ದಿನಗಳ್‌ಲಿ ನಡ್ದದೆ. ಸಬ್ಬಮ್ಮ ಗ್ರಾಮ ದೇವತೆ ರೂಪೊಲಿ ಪೂಜಿಸಿಕಂಬಕನ ಅವ್ಳ್ ಮಾರಿಯಮ್ಮ, ಬನದಮ್ಮ, ಪಟಲದಮ್ಮ, ದೊಡ್ಡಮ್ಮಂತೇಳಿ ಕರ್‌ಸಿಕಂಡ್ ರಕ್ತದ ಅಬಿಸೇಕ ಮಾಡ್ಸಿಕಂಡಿದ್ದರೂ ಮನೆದೆವ್ವ ಆಗಿ ಅಮ್ಮನ ರೂಪಲಿ ಅಮ್ಮನ ತಾಳ್ಮೆಲಿ ಕಟುಂಬದವರ ರಕ್ಷಣೆ ಮಾಡ್‌ವ ದೇವಿಯಾಗಿ ಸಾತ್ವಿಕ ರೂಪಲಿ ಪೂಜೆ ಪಡ್‌ಕಂದೆ. ಸಬ್ಬಮ್ಮಂಗೆ ಪೂಜೆ ಸುಬ್ರಹ್ಮಣ್ಯ, ಕಡಬ, ಮರ್‌ಕಂಜ, ಆಲೆಟ್ಟಿಲಿ ಇರುವ ಗೌಡ್ರ್‌ಗಳ ಕುಟುಂಬಲಿ ನಡ್ದದೆ. ತುಳುನಾಡ್‌ನ ಬೇರೆ ಬಾಗಗ ಆದ ಪುತ್ತೂರು, ಬೆಳ್ತಂಗಡಿ, ವಿಟ್ಲಗಳ್‌ಲಿ ಇದ್ ಕಾಂಬಕೆ ಸಿಕ್ಕುದ್ಲೆ.ಇಲ್ಲಿನೊವ್ ಗೌಡ ಬಾಸೆನೂ ಮಾತಾಡುದ್ಲೆ. ಇಲ್ಲಿನೊವ್ ತುಳ್ ಮಾತಾಡ್ತು. ಒಂದರ್‌ತಲಿ ಹೇಳ್ದಾರ್ ಅವ್ ತುಳ್ ಸಂಸ್ಕೃತಿನ ಒಪ್ಪಿಕಂಡೊಳ. ಹಂಗಾಗಿ ಅವುಕೆ ಆದಿ ಮೂಲಲಿ ಪೂಜೆ ಮಾಡ್ತಿದ್ದ ಸಬ್ಬಮ್ಮನ ನೆಂಪು ಆಗದೇ ಇರ್‌ದು ಇದ್ದಾಗಿಯೇ. (ಪಿ.ಕೆ.)

**ಚೆ. ರಾಮಸ್ವಾಮಿ :** 1948ರ್‌ಲಿ ಚೆಲ್ಲಪ್ಪಗೌಂಡರ್ ಮತ್ತೆ ಚೆಲ್ಲಮ್ಮ ದಂಪತಿಗಳ್‌ಗೆ ರಾಮಸ್ವಾಮಿ ಮಙ್ಞ ಆಗಿ ತಮಿಳುನಾಡ್ ರಾಜ್ಯದ ವೆಳ್ಳಿಯಾಣೈಲಿ ಹುಟ್ಟಿದೊ. ಇವರ ಸುರುನ ಶಿಕ್ಷಣ ಅದಿವಾಲ ಮತ್ತೆ ಹಿರಿಯೂರ್‌ಲಿ ಆತ್. ತುಮಕೂರ್‌ನ ಸರ್ಕಾರಿ ಕಾಲೇಜಿಲಿ ಪಿಯುಸಿ ಮತ್ತೆ ಹುಬ್ಬಳ್ಳಿನ ಪಿ.ಸಿ ಜಾಬಿನ್ ಸೈನ್ಸ್ ಕಾಲೇಜಿಂದ ಬಿ.ಎಸ್ಸಿ, ಧಾರಾವಾಡ ಕರ್ನಾಟಕ ವಿಶ್ವವಿದ್ಯಾಲಂಯಂದ



ಎಂ.ಎ. ಕನ್ನಡ ಪದವಿನ ಪಡ್ದೊ. 10ರ್ಂದ 14ನೇ ಶತಮಾನದವರೆಗಿನ ಉತ್ತರ ಕರ್ನಾಟಕದ ಕನ್ನಡ ಶಾಸನಗಳ ಭಾಷಿಕ ವಿಶ್ಲೇ?ಣೆ ತೇಳುವ ವಿಸಯಲಿ ಅಣ್ಣಾಮಲೈ ವಿಶ್ವಾವಿದ್ಯಾಲಯಂದ ಕೆ ಕುಶಾಲಪ್ಪ ಗೌಡರ ಮಾರ್ಗದರ್ಶನಲಿ ಸಂಸೋದನೆ ಮಾಡ್‌ದೊ. ಮುಂದೆ ಅಲ್ಲೇ ಭಾಷಾವಿಜ್ಞಾನ ಅಧ್ಯಯನ ಕೇಂದ್ರಲಿ ಅಧ್ಯಾಪಕರಾಗಿ ನೇಮಕ ಆದೊ. ಅವು 1978ರ್‌ಲಿ ಮದರಾಸು ವಿಶ್ವವಿದ್ಯಾಯಲಿ ಕನ್ನಡ ವಿಬಾಗಲಿ ಪ್ರಾಧ್ಯಾಪಕರಾದೊ. 2005ರ್‌ಲಿ ವಿಬಾಗ ಮುಕ್ಯಸ್ತಾರೊ. .

ಇವು 25ರ್‌ಂದ ಹೆಚ್ಚ್ ಪುಸ್ತಕಗಳ ಬರ್ದೊಳೊ. ಕನ್ನಡ ಭಾಷಾನುಯೋಗ, ಅನಂದ ಇಂಗ್ಲಿಷ್ ಹಿಂದಿ ಕನ್ನಡ ನಿಘಂಟು, ಕನ್ನಡ ಮತ್ತೆ ತಮಿಳಿಗೆ ಅನುವಾದ ಆದ ಕನ್ನಡ ಇಲಕ್ಕುಯಮುಂ ಸಮುದಾಯ ಪುರಚ್ಚಿಯುಂ, ಮಹಾಕವಿ ಭಾರತಿ, ಮಹಾ ಬ್ರಾಹ್ಮಣ ಮುಕ್ಯ ಪುಸ್ತಕಗ.

ನಿವೃತ್ತಿ ಆದ ಮೇಲೆ ಕಲುಬುರ್ಗಿನ ಕೇಂದ್ರಿಯ ವಿಶ್ವವಿದ್ಯಾಲಯಲಿ ಅಳಿವಿನಂಚಿನ ಬಾಸೆಗಳ ಸಂಶೋದನ ವಿಬಾಗದ ಮುಕ್ಯಸ್ತರಾಗಿ ಸುಮಾರ್ 15ರ್‌ಂದ ಹೆಚ್ಚ್ ಪುಸ್ತಕ ಪ್ರಕಟಿಸ್‌ದೊ. ಇದರ್‌ಲಿ 'ಎ ಗ್ರಾಮರ್ ಅಫ್ ಅರೆಭಾಷೆ', 'ಎ ಗ್ರಾಮರ್ ಆಫ್ ಎರವ', 'ಎ ಗ್ರಾಮರ್ ಆಫ್ ಬೆಲಾರೆ' ಮುಕ್ಯ ಪುಸ್ತಕಗ. ಇವು ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ 2022ರ್‌ಲಿ ಪ್ರಕಟ ಮಾಡ್‌ದ ಸುರೂನ ಸಮಗ್ರಬೃಹತ್ ಪದಕೋಶಕೆ ತಾಂತ್ರಿಕ ಸಲಹೆಗಾರರಾಗಿ ಸಹಕರ್‌ಸಿದೊ.

ಇವರ ಕನ್ನಡ ಭಾಷಾನುಯೋಗ ಪುಸ್ತಕಕೆ ಅತ್ಯುತ್ತಮ ಸಂಶೋಧನಾ ಕೃತಿ ಪ್ರಶಸ್ತಿ, ಚೆನ್ನೈನ ಉರ್ದು ಅಕಾಡೆಮಿಂದ ಅತ್ಯುತ್ತಮ ಕನ್ನಡ ಪ್ರಾಧ್ಯಾಪಕ ಪ್ರಶಸ್ತಿ, ಹುಟ್ಟೂರಿನ ಸಾರ್ವಜನಿಕ ಸನ್ಮಾನ ದ್ರಾವಿಡ ಸಿರಿ ಅಭಿನಂದನ ಗ್ರಂಥ ಸಮರ್ಪಣೆ ಹೀಂಗೆ ಹಲವ್ ಪ್ರಶಸ್ತಿ ಪಡ್‌ದೊಳೊ.

**ಜೆನಪದ ಆಟಗ :** ಆಟ ಇಲ್ಲದ ಸಮುದಾಯನೇ ಇರಿಕಿಲೆ. ಮೊಯಿಂಸ ಸಾಮಾನ್ಯಾಗಿ ಕ್ರೀಡಾ ಪ್ರಿಯ ಆಗಿರ್‌ವ ಕಾರಣ ಅಂವನೊಟ್ಟಿಗೆ ಆಟನು ಸ ಬೇರೆ ಬೇರೆ ಹಂತಗಳ ದಾಟಿ ಬಂದುಟು. ಸಂಸ್ಕೃತಿಗೆ ಹೊಂದಿಕಂಡ್ ಆಟಗ ರೂಪ ಪಡ್‌ದುಟು. ಇದರೊಟ್ಟ್‌ಗೆ ಆಟಗ ಮೊನ್ಸನ ಬೌತಿಕ ಮತ್ತೆ ಮಾನಸಿಕ ಬೆಳವಣಿಗೆಗೆ ಕಾರಣ ಆಗಿ ಸಮಾಜಕ್ಕೆ ಹೊಸ ರೂಪನ ಒದ್‌ಗಿಸಿ ಕೊಟ್ಟುಟು. ಎಸ್ಟೋ ಆಟಗ ಪೌರಾಣಿಕ, ದಾರ್ಮಿಕ ಸಂಪ್ರದಾಯ ಇಂತ ಅನೇಕ ಆಚರಣೆಗಳೊಟ್ಟ್‌ಗೆ, ನಂಬಿಕೆ ಕ್ರಿಸಿ ಉದ್ಯಮದೊಟ್ಟಿಗೆನೂ ಸಮ್ಮಂದ ಬೆಸ್ಸಿದ್ದದೆ. ಹೀಂಗಾಗಿ ಸಂಸ್ಕೃತಿಲಿ ಆಟಗ ಬಹುಮುಕ್ಯ ಜಾಗೆನ ಗಳ್‌ಸಿಟು..

ಸುಳ್ಯ ಪರಿಸರದ ಅರೆಬಾಸಿಗರ್ ಆಡ್‌ವ ಆಟಗಳ್‌ಲಿ ಸುಮಾರ್ ತುಳುನಾಡ್‌ಲಿ ಇರ್‌ವಂತವೇ. ಪಾಡ್ದನಗಳ್‌ಲಿ ಸಿಕ್ಕ್‌ವ 'ತಾರಾಯಿದ ತಪ್ಪಂಗಾಯಿ, ಬಜ್ಜೆಯಿದ ದೂದು, ಅಂಬೊಡಿ, ಸೂಟೆಗಾರ, ಡೊಂಬರೆ ಆಟ, ಸೂಳೆಲೆ ಮೇಳ, ಚೆನ್ನಮಣೆ, ಚದ್ರಂಗ, ಚೆಂಡೆ, ಕಳೆಂಜಕಾಯಿ, ಯತ್ತೆ ಪಿಚ್ಚಿ, ಪಲ್ಲೆದ ಗೊಬ್ಬು' ಇಂತೆಲ್ಲ ಆಟಗ ಸುಮಾರ್ ಸುಳ್ಯ ಪರಿಸರಲಿ ಈಗಲೂ ಉಟ್ಟು. ಪ್ರಾದೇಶಿಕ ಅಗತ್ಯಕ್ಕೆ ಅದೆಲ್ಲ ಹಙ್ಙಙ್ಙ ಅದಲ್ ಬದಲಾದ್ ಕೂಡಾ ಉಟ್ಟು.

ಸುಳ್ಯ ಪರಿಸರಲಿ ಕಾಂಬಕೆ ಸಿಕ್ಕ್‌ವ ಜನಪದ ಆಟನ ಹೀಂಗೀಂಗೇ ತೇಳಿ ಪಾಲ್ ಮಾಡ್‌ದು ಕಸ್ಟ. ಆದರೆ ಅದರೆಲ್ಲ ಸಂದರ್‌ಬಕೆ ಹೊಂದ್‌ವಾಂಗೆ ಕೆಲವ್ ಆಟಗಳ್‌ನ ವಿವರ್‌ಸಕ್. 1. ದಾರ್ಮಿಕ ಕಾರ್‌ಯ ಕ್ರಮದ ಹೊತ್ತುನ ಆಟಗ : ಅಂಬುಗಾಯಿ ಮತ್ತೆ ಕಲ್ಲ್ ನೇಚುದು. 2. ಕಾಲಾನುಸಾರಿ ಕ್ರೀಡೆಗ : ಅಳುಗುಳಿ ಮಣೆಯಾಟ, ಚೆನ್ನಮಣೆ, ಸರಿ ಮುಗುಳಿ, ಬೀಜ ಕುಟ್ಟುದು, ಮೂಕು ಬೀಜ ಮತ್ತೆ ಮಾಯಿಣ ಕಾಯಿ ಗುದ್ದುದು. 3. ಪಂತದ ಆಟಗ : ಕೆಸರ್ ಗದ್ದೆ ಓಟ ಮತ್ತೆ ಮಜಲ್ ಗದ್ದೆ ಓಟ. 4. ಪ್ರಾಣಿ ಪಕ್ಷಿ ಸಮ್ಮಂದಪಟ್ಟ ಆಟಗ : ಕಕ್ಕೆ ಗಿಳಿ, ಮರಕುರೆ, ದನ ಕೂಡುದು, ಕಪ್ಪೆಲಾಗ, ಹುಲಿದನ, ಕೋಳಿ ಕಟ್ಟ ಮತ್ತೆ ಕಂಬಳ. 5. ಮಕ್ಕಳ ಆಟಗ : ಕಲ್ಲಾಟ, ಕಳ್ಳ ಪೋಲಿಸಾಟ, ಅಟ್ಟಾ ಮುಟ್ಟ, ಹಿಡಿವ ಆಟ, ಕಡ್ಡಿ ಆಟ, ನೆಂಟ್ರು ಬಾವಾಟ, ಪೊಲ್ಲಿ ಹಿಡೆದು, ಕಣ್ಣು ಮುಚ್ಚಾಲೆ, ಗುಂಡಿಕಲ್ಲ್, ಚಿಬಿಲೆ, ಉಪ್ಪುಗೋಣಿ, ನೋಂಡಿ, ಮತ್ತೆ ಕಬಡಿ. 7 ಹಿರಿಯರ ಆಟಗ : ಕಾಯಿ ಕುಟ್ಟುದು, ಕಾಯಿ ಗುದ್ದುದು, ಕಾಯಿಗೆ ಕಲ್ಲೊಡೆದು.

**ದಾರ್ಮಿಕ ಆಚರಣೆ ಹೊತ್ತುಲಿ ನಡಿವ ಆಟಗ :** ದಾರ್ಮಿಕ ಆಚರಣೆ ಲೆಕ್ಕಲಿ ನಡೆವ ಆಟಗ ದೇಸ್ತಾನಗಳ ಅಡ್‌ಕಲಿ ನಡ್‌ದದೆ. ಹಾಂಗಾಗಿ ಈ ಆಟಗಳಿಗೆ ದಾರ್ಮಿಕ ಮಹತ್ವ ಸಿಕ್ಕಿಟು. ಪಂಡ್‌ಲಿ ದೇಸ್ತಾನಗ ಸಾಂಸ್ಕೃತಿಕ ಕೇಂದ್ರಗಳಾಗಿತ್ತ್. ದೆವ್ವದ ಆರಾದನೆ ಮುಗ್‌ದ ಮೇಲೆ ಎಲ್ಲ ಜೆನರೆದುರ ಇದ್ ನಡ್‌ದದೆ. ಅರೆಬಾಸೆ ಪ್ರದೇಸಲಿ ದಾರ್ಮಿಕ ಕ್ರಿಯೆಗಳ ಲೆಕ್ಕಲಿ ನಡೆವ ಆಟತೇಳಿರೆ ಅಂಬುಗಾಯಿ. ಇದರ ಪತ್ತೆಂಗಾಯಿ, ತಪ್ಪಂಗಾಯಿ ತೇಳಿನೂ ಕರ್‌ದವೆ.

ಊರ್‌ನ ಜಾತ್ರೆ ಅಲ್ಲರೆ ನೇಮದ ಕಡೇ ದಿನದಂದ್ ಈ ಆಟ ನಡ್‌ದದೆ. ಇದರ್‌ಲಿ ಮಕ್ಕಳ ಅಂಬುಗಾಯಿ ಮತ್ತೆ ದೊಡ್ಡವರ ಅಂಬುಗಾಯಿ ತೇಳಿ ಎರಡ್ ತರ ಇದ್ದದೆ. 15 ವರ್ಷಕ್ಕಿಂತ ದೊಡ್ಡವು ದೊಡ್ಡವರ ಅಂಬುಗಾಯಿಲಿ ಬಾಗವಹಿಸಿರೆ, 15 ವರ್‌ಸಂದ ಸಣ್ಣೊವು 'ಮಕ್ಕಳ ಅಂಬುಗಾಯಿ'ಲಿ ಪಾಲ್ ತಕಂಡವೆ. ಆಟ ಆಡ್‌ವ ಕ್ರಮಲಿ ವೆತ್ಯಾಸ ಇಲ್ಲೆ.

ಊರ್‌ನ ಮುಕ್ಯಸ್ತ ಅಲ್ಲರೆ ದೇಸ್ತಾನದ ಮೊಕ್ತೇಸರ ಪಂತಲಿ ಪಾಲ್ ತಕಂಡವರ ದೇಸ್ತಾನದ ಹೊರಗೆನ ಇಜ್ಜಾಲ್‌ಗೆ ಕರೆದದೆ. ಸೊಂಟದ ಬಟ್ಟೆನ ಗಟ್ಟಿ ಕಟ್ಟಿ ಪಂತದವು ಒಂದ್ ಜಾಗಲಿ ಬಂದ್ ಸೇರುವೆ. ಪಂತಲಿ ಯಾರಾರ್ ಅಮಲ್ ತಕಂಡವು ಒಳನಾ ತೇಳಿ ಪರೀಕ್ಸೆ ಮಾಡ್‌ವೆ. ದೇಸ್ತಾನದ ಇಜ್ಜಾಲ್‌ಲಿ ಆವ ಪಂತ ಆದರ್‌ಂದ ಕುಡ್‌ದವು




ಯಾರೂ ಅಲ್ಲಿಗೆ ಬರದೇ ಇದ್ದರೂ ಈ ಪರೀಕ್‌ಸೆನ ಹೆಚ್ಚ್ ಕ್ರಮಪ್ರಕಾರ ಮಾಡ್‌ವೆ. ಮೊಕ್ತೇಸರರ್ ಅಲ್ಲೊ ಊರ್‌ನ ಮುಕ್ಯಸ್ತರ್ ಒಂದ್ ಕಾಯಿನ ಪಂತ ಕಟ್ಟಿದವರ ನಡೂಲಿ ಹಾರ್‌ಸಿ ಬುಟ್ಟವೆ. ಪಂತದವು ಆ ಕಾಯಿನ ಎಳ್‌ಕಂಬಕೆ ಉರ್‌ಡುವೆ. ಒಬ್ಬಂದೊಬ್ಬ ಎಳ್‌ದಾಡಿಕಂಬ ರಬಸಲಿ ದೇಸ್ತಾನದ ಇಜ್ಜಾಲ್‌ಂದ ಹೊರಗೆ ಹೋಕಾಗದ್ ತೇಳುವ ಎಚ್ಚರಿಕೆ ಕೊಟ್ಟವೆ. ಜೀವ ಬಲ ಮತ್ತೆ ಉಪಾಯಂದ ಕಾಯಿನ ಕೈವಸ ಮಾಡಿಕಂಡ್ ಅದರ ನೆಲಕ್ಕೆ ಒಡ್‌ದ್ ನೀರು ಅರಿವಂಗೆ ಮಾಡೋಕ್. ಹಾಂಗೆ ಮಾಡಿರೆ ಅಂವ ಗೆದ್ದತ್‌ತೇಳಿ ತಿಳ್‌ಕೋಣೊಕು.. ಹಿಂಗೆ 10 ಕಾಯಿಗಳ ಹಾರ್‌ಸಿ ಬುಟ್ಟವೆ. ಯಾರ್ ಜಾಸ್ತಿ ಕಾಯಿನ ಒಡ್‌ದದೆನೊ ಅಂವ ಗೆದ್ದತ್ ತೇಳಿ ಕರ್‌ದ್ ಹೇಳ್‌ವೆ. ಒಂದೊಂದು ಕಾಯಿನ ಕೈವಸ ಮಾಡಿಕಂಬಕೆ 30 ನಿಮ್‌ಸಂದ ಒಂದ್ ಗಂಟೆ ವರೆಗೂ ಎಳ್‌ದಾಟ ಉರ್‌ಡಾಟ ನಡ್ದದೆ.

ತುಳುನಾಡ್‌ನ ಬೇರೆ ಕಡೆಗಳ್‌ಲಿ ಈ ಆಟನ ತಪ್ಪಂಗಾಯಿ ತೇಳಿ ಕರ್‌ದವೆ. ಕೈಯಿಂದ ಕೈಯಿಗೆ ತೊಪ್ಪಿಸಿಕಂಡ್ ಹೋದರ್‌ಂದ ಈ ಹೆಸ್ರ್ ಬಂದಿರುದು. 'ಅಂಬುಗಾಯಿ' ತೇಳುವ ಹೆಸ್ರ್‌ಲಿ 'ಅಂಬು' ತೇಳಿರೆ 'ನೀರ್' ತೇಳಿ ಅರ್‌ತ. ಕಾಯಿನ ಒಡ್‌ದ್, ನೀರ್ ಹೊರಗೆ ಚೆಲ್ಲುದರ್‌ಂದ 'ಅಂಬುಗಾಯಿ' ತೇಳಿ ಹೆಸ್ರ್ ಬಂದುಟು. ಅಂಬು ಅಟ್ಟಲಿ ಬಿಲ್ಲು ಬೆಟ್ಟಲಿ' ತೇಳುವ ಗಾದೆ ಉಟ್ಟು. ಇಲ್ಲಿ 'ಅಂಬು' ತೇಳಿರೆ ಬಾಣ, ಅಂಬುಗಾಯಿಲಿ ಕಾಯಿನ ಬಾಣದಸ್ಟ್ ವೇಗಲಿ ಹಾರ್‌ಸಿಕಂಡ್ ಹೋದರ್‌ಂದ 'ಅಂಬುಗಾಯಿ' ತೇಳುವ ಹೆಸ್ರ್ ಬಾತ್.

ದೇಸ್ತಾನಲಿ ಅಲ್ಲರೆ ದೆವ್ವಸ್ತಾನದ ಇಜ್ಜಾಲ್‌ಲಿ ನಡೆವ ಇನ್ನೊಂದ್ ಪಂತ ತೇಳಿರೆ ಕಲ್ಲ್ ನೇಚುದು. ಸಪಾಯಾದ ಮತ್ತೆ ಒಳ್ಳ ತೂಕದ ಒಂದ್ ಕಲ್ಲ್‌ನ ಇಜ್ಜಾಲ್‌ಲಿ ಇಸಿದ್, ಅದರ ನೇಚಿ ಹೆಗ್‌ಲ್ ಮೇಲೆ ಹೊರಿಕೆ ಹೇಳ್‌ವೆ. ಗಟ್ಟಿ ಮುಟ್ಟ್‌ನ ಹೈದಂಗ ಮಾತ್ರ ಇದರ್‌ಲಿ ಉಮೇದ್‌ಂದ ಕೂಡ್ಯಾಡ್‌ವೆ. ಹೆಗ್‌ಲ್‌ನವರೆಗೆ ಕಲ್ಲ್‌ನ ನೇಚಿದವ್‌ಕೆ ಎಲೆ ಮತ್ತೆ ಅಡ್‌ಕೆನ ಸಂಬಾವನೆತ ಕೊಟ್ಟವೆ. ಇಲ್ಲಿ ಸಂಬಾವನೆಂದ ಮೊರ್‌ಯಾದಿ ಮುಕ್ಯ ಆದೆ. ಹಿಂದೆನ ಕಾಲಲಿ ಕಲ್ಲೆತ್ತ್‌ವ ಹೈದಂಗಳಿಗೆ ಹೆಣ್ಣ್ ಕೊಡಿಕೆ ಕನ್ಯಾಪಿತೃಗ ಮುಂದೆ ಬಾದು ಸಾಮಾನ್ಯ ಸಂಗತಿಯಾಗಿತ್ತ್. ಹಾಂಗಾಗಿ ದಾರ್ಮಿಕ ಆಚರಣಾ ಚೌಕಟ್ಟೊಳಗೆ ಈ ಕ್ರೀಡೆಲಿ ಸಾಮಾಜಿಕ ಸಮ್ಮಂದನೂ ಇಣ್‌ಕಿದೆ.

**ಕಾಲಾನುಸಾರಿ ಕ್ರೀಡೆಗ :** ಕಾಲಾನುಸಾರಿ ಕ್ರೀಡೆಗ ಹವಾಮಾನ ದೊಟ್ಟಿಗೆ ನೇರ ಸಮ್ಮಂದ ಉಟ್ಟು. ಮಳೆಗಾಲ, ಚೆಳಿಗಾಲ ಮತ್ತೆ ಬೇಸ್‌ಗೆ ಕಾಲದೊಟ್ಟಿಗೆ ಹೇಂಗೋ ಹಾಂಗೇ ಕ್ರಿಸಿ ಕೆಲ್‌ಸ ಬದಲಾವಣೆಗನೊಟ್ಟಿಗೂ ಸಮ್ಮಂದ ಇಸಿಕಂಡುಟು. ಒಂದ್ ಕಾಲಲಿ ಆಡ್‌ವ ಆಟನ ಇನ್ನೊಂದು ಕಾಲಲಿ ಆಡಿಕೆ ಆದುಲೆ. ಅರೆಬಾಸೆ ಪ್ರದೇಸಲಿ ಗಂಡ್‌ಸ್‌ಗ, ಹೆಣ್ಮಕ ಮತ್ತೆ ಮಕ್ಕ ಆಡ್‌ವ ಆಳುಳಿ ಮಣೆಯಾಟ, ಮೂಕು ಬೀಜದ ಆಟ, ಮಾವಿನ ಕಾಯಿ ಗುದ್ದುದು ಈ ವಿಬಾಗಕೆ ಸೇರುವಂತದ್ದ್.

ಅಳುಳಿ ಮಣೆಯಾಟನ (ಚೆನ್ನಮಣೆ) ಆಟಿ ತಿಂಗಳ್‌ಲಿ ಮಾತ್ರ ಆಡ್‌ವೆ. ತುಳುನಾಡ್‌ಲಿ ಆಟಿ ತಿಂಗ ಕ್ರಿಸಿಕರ್‌ಗೆ ಪುರುಸೊತ್ತ್‌ಲಿ ತಿಂಗ, ಹಾಂಗೆ ಕಾಚೇಲ್‌ನ ಕಾಲನೂ ಹೌದು, ಸಾಮಾನ್ಯ ಯಾವ ಬೆಳೆನೂ ಬೆಳೆಯದೆ, ಆಹಾರ ಸೊತ್ತ್‌ಗೆ ಬಜ್ಜ ಇರ್‌ವ ಕಾಲ ಅದ್. ಮೊದ್‌ವೆಯಾದ ಹೊಸ್‌ತರ್‌ಲಿ ಮೊದೋಳಿಗೆ ತೌವ್‌ರ್ ಮನೆನ ಸೇರ್‌ದೆ. ಇಂತ ಬುಡುನ ಕಾಲಲಿ 'ಅಳುಳಿ ಮಣೆ' ಆಡ್‌ವೆ. ಇದರ ಮಂಜೆಟಿ ಆಟ, ಚೆನ್ನೆಮಣೆ ಆಟ ತೇಳಿನೂ ಕರ್‌ದವೆ. ಈ ಆಟಕೆ ಕಡಿಮೆತೇಳಿರು ಇಬ್ಬೊರು ಆಟಗಾರರ್, ಆಟಕ್ಕೆ ಬೇಕಾದ ಅಳುಳಿ ಮಣೆ ಮತ್ತೆ ಒಟ್ಟು 57 ಮಂಜೆಟ್ಟಿ ಬಿತ್ತ್‌ಗ ಅಗತ್ಯ. ಎರಡ್ ಕಡೆಲು ಏಳ್ ಮನೆ (ಹೊಂಡ) ಇರ್‌ವ ಅಳ್ಳುಳಿ ಮಣೆಲಿ ಪ್ರತಿ ಒಂದ್ ಮನೆಗೆ ನಾಲ್ಕರಂಗೆ ಕಾಯಿ ತುಂಬ್‌ಸೊಕು. ಇಬ್ಬೊರಿದ್ದರೆ, ಒಂದೊಂದ್ ಕಡೆನು ಒಬ್ಬೊಬ್ಬಂಗೆ ಸಿಕ್ಕಿದೆ. ಒಬ್ಬ ಆಟ ಸುರುಮಾಡ್‌ದೆ. ಅಂವ ಒಂದ್ ಮನೆಂದ ಎಲ್ಲ ಅಂದರೆ ನಾಕ್ ಕಾಯಿಗಳ ತಕಂಡ್, ಎಡಂದ ಬಲಕ್ಕೆ ಪ್ರತಿ ಗುಂಡಿಗೆ ಒಂದೊಂದ್ ಕಾಯಿನ ಹಾಕಿಕಂಡ್ ಹೋದೆ. ಯಾದಾರ್ ಒಂದ್ ಕಡೆ ಕಾಯಿ ಮುಗ್ದಾಕನ ಮುಂದೆನ ಗುಂಡಿ ಕಾಲಿ ಇದ್ದರೆ, ಅದರ್‌ಂದ ಮುಂದೆನ ಮನೆಲಿರ್‌ವ ಎಲ್ಲ ಕಾಯಿನೂ ಅವಂಗೆ ಸಿಕ್ಕಿದೆ. ಆಗ ಎದುರಾಳಿ ಆಟ ಮುಂದುವರ್‌ಸಿದೆ. ಎದ್‌ರ್ ಮನೆ ಕಾಲಿಯಿದ್ದ್, ಅದರ ಮುಂದೆನ ಗುಂಡಿಲಿ ಐದಕ್ಕಿಂತ ಹೆಚ್ಚ್ ಕಾಯಿಗ ಇದ್ದರೆ, ಅದ್ ಆಟಗಾರಂಗೆ ಸಿಕ್ಕಿರೆ 'ಹೆರ್‌ಗೆ' ಸಿಕ್ಕಿತ್ ತ ಹೇಳ್‌ವೆ. 'ಪೆರ್‌ಗೆ' ತೇಳಿನೂ ಇದರ ಕರ್‌ದವೆ. ಒಮ್ಮೆ ಕಾಲಿಯಾದ ಗುಂಡಿಗೆ ಮತ್ತೆ ಕಾಯಿ ಬಿತ್ತಿ ಕಂಡ್ ಬಂದ್, ಆ ಗುಂಡಿಲಿ ನಾಲ್ಕ್ ಕಾಯಿ ಇನ್ನೊಮ್ಮೆ ತುಂಬಿರೆ ಆಗ 'ಕರ್ ಆತ್' ತೇಳುವೆ. ಆ ಗುಂಡಿ ಯಾರಿಗೆ ಸೇರಿದೆನೋ ಅವಂಗೇ ಕರ್ ಸೇರ್‌ದೆ. ಕರ್ ಆಕನ ಅದರ ಕೂಡ್‌ಲೆ ತೆಗೆಯದಿದ್ದರೆ 'ಹುಳ ಅತ್' ತೇಳುವೆ. ಕಾಯಿ ಹಾಕ್‌ತ್ತಿರ್‌ಕನ ಕಾಯಿ ಮುಗ್‌ದ ಗುಂಡಿಂದ ಮುಂದೆನೆರಡ್ ಮನೆಗ ಕಾಲಿ ಇದ್ದರೆ ಆಗ ಎದ್‌ರಾಳಿಗೆ ಆಟನ ಬುಟ್ಟ್ ಕೊಡಕಾದೆ. ಹಿಂಗೆ ಮಣೆಲಿ ಮೂರ್ ಕಾಯಿಗ ಒಳಿಯುವಲ್ಲಿವರೆಗೆ ಆಡ್‌ವೆ. ಅದಾಗಿ, ನಾವ್‌ಗೆ ಸಿಕ್ಕಿದ ಕಾಯಿಗಳ ಮತ್ತೆ ತಮ್ಮ ಮನೆಗೆ(ಕೋಣೆಗೆ) ತುಂಬ್‌ಸುವೆ. ಯಾದಾದರ್ ಮನೆಗೆ ಕಾಯಿ ಕಡಿಮೆ ಬಿದ್ದರೆ ಆಗ 'ಮನೆಗೆ ಕಿಚ್ಚ್ ಬಿದ್ದುಟ್' ತೇಳ್‌ವೆ. ಆಟ ಮುಂದುವರ್‌ದದೆ. ಆಟಗಾರನ ವಶಕ್ಕಿರುವ ಏಳ್ ಮನೆಗೂ ಕಿಚ್ಚಿ ಬೀಳ್‌ವ ಪ್ರಸಂಗ ಬಾಕನ, ಅಂವ ಸೋಲೊಪ್ಪಿಕಂಡದೆ. 'ಅವಂಗೆ ಮೊದ್‌ವೆಯಾತ್' ತೇಳುವೆ. ಈ ಆಟನ 'ಹೆರ್‌ಗೆ ಕರ್' ಆಟ ತೇಳುವೆ. ಒಂದೊಂದು ಗುಂಡಿಲಿ ನಾಕ್ ಕಾಯಿಗಳ ಬದ್‌ಲಿಗೆ ಒಂದೊಂದೇ ಕಾಯಿ ಹಾಕಿ ಆಡಿರೆ ಅದರ 'ಕುಡು ಬಿತ್ತುದು' ತೇಳ್‌ವೆ.

ಇದರ್‌ಲಿ 'ಆರು ಪ್ರದಾನಿ' ತೇಳ್‌ವ ಒಂದ್ ಬಗೆ ಉಟ್ಟು. ಇದ್‌ಕೆ ಒಟ್ಟು ಮೂರ್ ಜೆನ ಬೇಕು. ಒಬ್ಬ ಅರಸ, ಇನ್ನೊಬ್ಬ ಪ್ರದಾನಿ ಮತ್ತೆ ಕಡೇಂವ ಸೇನಾದಿಪತಿಯಾದೆ. ಅಳ್ಳುಳಿ ಮಣೆನ ಎಡಬಾಗಲಿ ನಾಲ್ಕ್ ಗುಂಡಿ ಸೇನಾದಿಪತಿಗೆ, ಬಲಬಾಗದ ನಾಲ್ಕ್ ಗುಂಡಿ ಪ್ರದಾನಿಗೆ,

ನೊಡುನ ಆರ್ ಗುಂಡಿಗ ಅರಸಂಗೆ ಸೇರ್‌ದೆ. ಆಟ ಅರಸಂದ ಸುರಾದೆ. ಪ್ರತಿ ಆಟ ಮುಗಿಯಕಾಕನ ಪ್ರದಾನಿ ಮತ್ತೆ ಸೇನಾಪತಿ ಒಂದೊಂದು ಕಾಯಿನ ಅರಸಂಗೆ ಕಪ್ಪ ತೇಳಿ ಕೊಡೋಕು, ಎಲ್ಲ ಮನೆಗಳಿಗೂ 'ಕಿಚ್ಚಿ' ಆದಂವ ಸೋತಂಗೆ.

ಇದೆರಡೇ ಆಟಗ ಜೆನಂಗ ಹೆಚ್ಚಿಗೆ ಆಡ್‌ದಾದರು ಆಳುಳಿ ಮನೆಲಿ ಇನ್ನಸ್ಟ್ ಆಟಗಳ ಆಡ್‌ವೆ. ಇಸ್ಪೀಟ್‌ನ ಎಲೆನ ಬಳ್ಸಿಕಂಡ್, ಎಕ್ಕಟಿಗಳ್‌ನ ಬಳ್ಸಿಕಂಡ್ ಕೂಡಾ ಇದರ ಆಡಿಕೆ ಆದೆ. ಮನರಂಜನೆನ ಈ ಆಟಕೆ ಬುದ್ದಿಶಕ್ತಿನೂ ಬೇಕಾದೆ. ಯಾವ ಕಾಯಿನ ತಕಂಡರೆ, ಎಲ್ಲಿ ಮುಗ್‌ದದೆ, ಅದರ್‌ಂದಾವ ಲಾಬನ ನೋಡಿದೆ ಆಟ ಮುಂದುವರ್‌ಸಕಾದೆ ಅತ್ಯಂತ ಜಾಣ ಆಟಗಾರರ್ ಬರಿ ಏಳ್ ಆಟಗಳ್‌ಲಿ ಎದುರಾಳಿನ ಸೋಲ್‌ಸುವೆ. ಒಂದ್ ನಂಬಿಕೆನ ಪ್ರಕಾರ ಇದರ್‌ಲಿ 32 ಆಟಗಳ್‌ನ ಆಡಕಡ. ಆದರೆ ಅದರ ಆಡಿ ತೋರ್‌ಸುವವ್ ಒಳದ್ ಕಮ್ಮಿ.

**ಗೇರು ಬೀಜದ ಆಟಗ :** ಪೆಬ್ರವರಿಂದ ಏಪ್ರಿಲ್ ತಿಂಗಳವರೆಗೆ ಗೇರ್‌ಬೀಜ ಇದ್ದದೆ. ಗೇರ್‌ಬೀಜಲಿ ಸಣ್ಣ ಮಕ್ಕ ಬೇರೆ ಬೇರೆ ಆಟಗಳ್‌ನ ಆಡ್‌ವೆ. ಅದರ್‌ಲಿ ಸರಿ ಮುಗುಳಿ, ಬೀಜ ಕುಟ್ಟುದು, ಮತ್ತೆ ಮೂಕು ಬೀಜ (ಮೂಗು ಬೀಜ) ಬಾರಿ ಮುಕ್ಯ ಆದ್ದ್. ಇವೆರಡೂ ಆಟಗ ಒಳಾಂಗಣ ಆಟಂಗ.

**ಸರಿ ಮುಗುಳಿ :** ಇದ್‌ಕೆ ಹತ್ತಂದ ಹೆಚ್ಚ್ ಬೀಜನು, ಕಡಿಮೆತೇಳಿರು ಇಬ್ಬೊರ್ ಆಡೊವು ಬೇಕ್. ಎದ್‌ರಾಳಿಗೆ ಗೊತ್ತಾಗದಂಗೆ ಒಂದಜ್ಜ ಬೀಜನ ಕೈಲಿ ಹಿಡ್‌ಕಂಡ್ ಸರಿಯೋ ಮುಗುಳಿಯೋ ತ ಕೇಳ್‌ವೆ. ವಿಷಮ ಸಂಕ್ಯೆಲಿ (1–3–5 7) ಬೀಜಗ ಇದ್ದರೆ ಮುಗುಳಿ ತೇಳಿ ಅರ್‌ತ. ಸಮ ಸಂಕೆಲಿದ್ದರೆ (2–4–7–7) 'ಸರಿ' ತೇಳಿ ಅರ್‌ತ, ಉತ್ತರ ಹೇಳ್‌ದಂವದ್ದ್ ನಿಜ ಆಗಿದ್ದರೆ, ಕೈಲಿರ್‌ವ ಬೀಜನ ಎದುರಾಳಿಗೆ ಒಪ್ಪ್‌ಸೊಕು. ತಪ್ಪಾಗಿದ್ದರೆ ಕೈಲಿದ್ದಸ್ಟ್ ಬೀಜ ಎದುರಾಳಿಂದ ಇವಂಗೆ ಸಿಕ್ಕಿದೆ. ಗೇರು ಬೀಜ ಸಿಕ್ಕಿದ್ದಸ್ಟೇ ಗೆದ್ದಂವಂಗೆ ಆವ ಲಾಬ.

**ಬೀಜ ಕುಟ್ಟುದು :** ಈ ಆಟಕೆ ಇಬ್ಬೊರ್ ಬೇಕು. ಎರಡರ್‌ಂದ ಹೆಚ್ಚ್ ಬೀಜನು ಬೇಕು. ಸುಮಾರ್ ಎರ್‌ಡು ಅಡಿ ದೂರಲಿ ಸಮಾನಾಂತರ ಆಗಿ ಎರಡ್ ಗೆರೆ ಎಳ್‌ದ್ ಅದರ ಹೊರೆಗೆ ಪುಡೆಗೆ ಆಡೊವು ಕುದ್ರೋಕು. ಬೀಜಗಳ್‌ನ ಸರಿ ಸೊರ್‌ತಕೆ ಇಸಕು. ಅದಾಗಿ ಒಬ್ಬ ಕೈ ಬೆರಳ್‌ಂದ ಬೀಜನ ಇನ್ನೊಂದಕೆ ತಾಂಗುವಂಗೆ ಹೊಡಿಯೋಕು. ಎದುರ್‌ನ ಬೀಜಕೆ ತಾಂಗಿರೆ ಅದ್ ಹೊಡ್‌ದವನ ಪಾಲಾದೆ. ತಾಂಗದಿದ್ದರೆ ಎದುರಾಳಿ ಆಟನ ಮುಂದುವರ್‌ಸಿದೆ.

**ಮೂಂಕು ಬೀಜ :** ಇದರ ಮೂಕು ಬೀಜ ತೇಳಿನೂ ಕರ್‌ದವೆ. ಇದ್‌ಕೆ ಕನಿಸ್ಪ ಇಬ್ಬೊರು ಮತ್ತೆ ಎರಡರ್‌ಂದ ಹೆಚ್ಚಿಗೆ ಬೀಜಗ ಬೇಕಾದೆ. ಒಬ್ಬ ಒಂದ್ ಬೀಜನ ಕೈಲಿ ಮೇಲೆಗೆ ಇಟ್ಟದೆ. ಅದ್ ನೆಲಕ್ಕೆ ಬಿದ್ದ್ ಬೇರೆ ಕಡೆ ಚಿಮ್ಮಿದೆ. ಬೀಜ ನೆಲಕ್ಕೆ ಬಿದ್ದ ಜಾಗೆಲಿ ಇನ್ನೊಬ್ಬ ನಿತ್ತ್ ಕಂಡ್ ತನ್ನ ಕೈಲಿರ್‌ವ ಬೀಜನ ಮೂಕುಗೆ ಮುಟ್ಟ್‌ಸಿ, ಅಲ್ಲಿಂದಲೇ ಸುರುಗೆ ಚಿಮ್ಮಿದ ಬೀಜಕೆ ಗುರಿ ಇಸಿ ಹೊಡಿಯೋಕು. ಆಗ ಅದ್ ಆ ಬೀಜಕೆ ತಾಂಗಿರೆ, ಬೀಜ ಹೊಡ್‌ದವಂಗೆ ಸಿಕ್ಕಿದೆ. ತಾಂಗದೆ ಮತ್ತೆ ಮುಂದೆ ರಟ್ಟಿರೆ ಸುರುನಂವ ಕ್ರಮದಂಗೆ ಆಟ ಮುಂದುವರ್‌ಸಿದೆ. ಬೀಜದ ಸೊನೆ ಮೂಕ್‌ಗೆ ತಾಂಗಿ, ಮೂಕ್‌ನ ಕೊಡಿ ಕಪ್ಪಾದರ್‌ಂದ ಈ ಆಟದ ಹೊತ್ತುಲಿ ಮಕ್ಕಳ ಮೂಗು ಕಪ್ಪಾಗಿದ್ದದೆ. ಗೇರ್ ಬೀಜ ಕಡಿಮೆ ಆಕಂಡ್ ಬಂದಂಗೆ ಈ ಆಟ ಕಾಣೆಯಾದೆ.

**ಮಾಯಿಣ ಕಾಯಿ ಗುದ್ದುದು :** ಮಾರ್ಚ್, ಏಪ್ರಿಲ್ ತಿಂಗಳ್‌ಲಿ ಬೆಳ್‌ದ ಮಾಯಿಣ ಕಾಯಿ ಸಿಕ್ಕಿದೆ. ಆಗ ಶಾಲೆ ಮಕ್ಕ ಈ ಆಟನ ಆಡ್‌ವೆ. ಎರಡ್ ಮಾಯಿಣ ಕಾಯಿನ ಎದ್‌ರ್ ಬದ್‌ರಾಗಿ ಹಿಡ್‌ದ್ ಜೋರಾಗಿ ಗುದ್ದುವೆ. ಯಾರ ಕೈಲಿರುವ ಮಾಯಿಣ ಕಾಯಿ ಒಡ್‌ದ್ ಹೋದೆನೋ ಅಂವ ಸೋತತ್ ತೇಳಿ ಲೆಕ್ಕ. ಸೋತಂವ ಅಂವನ ಕೈಲಿರ್‌ವ ಮಾಯಿಣ ಕಾಯಿನ ಎದುರಾಳಿಗೆ ಒಪ್ಪುಸಿದೆ. ದೊಡ್ಡವು ಕಾಯಿ ಕಟ್ಟುವದರ್‌ನ ನೋಡಿ, ಅದರ ಅನುಸರ್‌ಸುವ ಮಕ್ಕಳ ಆಟ ಇದ್. ಮುಕ್ಯವಾದ ಈ ಕ್ರೀಡೆಗಲ್ಲದೆ, ಗದ್ದೆ ಹೂಡುವ ಹೊತ್ತುಲಿ ಕೆಸರ್ ಗದ್ದೆನ ಓಟ, ಗದ್ದೆ ಕೊಯಿಲು ಆದ ಮೇಲೆ ನಡೆವ ಮಜಲ್ ಗದ್ದೆನ ಓಟಗನೂ ಉಟ್ಟು. ಇವು ಸ್ಪರ್‌ದಾತ್ಮಕ ಓಟಗ ಆಗಿಟು. ಇವುಗಳ್‌ಲಿ ಗೆದ್ದವ್‌ಕೆ ಇನಾಮು ಸಂದಾಯ ಆದೆ.

**ಕೆಸರುಗದ್ದೆ ಓಟ :** ನೇಜಿ ನೆಡ್‌ವ ದಿನ ಸಾಮಾನ್ಯಾಗಿ ಕೆಸರುಗದ್ದೆ ಓಟ ನಡ್‌ದದೆ. ಲಾಯಿಕ್ ಹೂಡಿ ಹದ ಆದ ಚೋಳ್ ಗದ್ದೆನ ಒಂದ್ ಕೊಡಿಲಿ ಓಡವು ನಿತ್ತವೆ. ಸೂಚನೆ ಸಿಕ್ಕಿದಾಂಗೆ ಓಡಿಕೆ ಸುರು ಮಾಡ್‌ವೆ. ಗದ್ದೆನ ಇನ್ನೊಂದ್ ಕೊಡಿನ ಯಾರ್ ಸುರುಗೆ ಓಡಿ ಮುಟ್ಟಿದೆನೊ ಅಂವ ಗೆದ್ದತ್ ತೇಳಿ ಹೇಳ್‌ವೆ. ಸಾಮಾನ್ಯ ಹೈದಂಗಳೆ ಹೆಚ್ಚಾಗಿ ಓಡ್‌ವೆ ಸ್ಪರ್‌ದೆ ಇದ್. ಗೆದ್ದವ್‌ಕೆ ಬೆಂಡದ ನೀರ್‌ನ ಕೀಲೆ ಇಲ್ಲರೆ ಬಾಳೆಗೊನೆನ ಇನಾಮಾಗಿ ಕೊಟ್ಟವೆ.



ಕೆಸರುಗದ್ದೆ ಓಟ

ಕೆಸರ್ ಗದ್ದೆ ಇಲ್ಲದಲ್ಲಿ ನೀರಿಲ್ಲದ ಮಜಲು ಗದ್ದೆಲಿನೂ ಸ್ಪರ್‌ದೆ ನಡ್‌ಸ್‌ವೆ.. ಇದರ ಮಜಲು ಗದ್ದೆ ಓಟ ತೇಳ್‌ವೆ. ಈ ಓಟಲಿ ಮಕ್ಕ ಸನಾ ಪಾತ್ರ ವಹಿಸುವೆ. ಹೆಣ್ಮಕ ಇದರ್‌ಲಿ ಸೇರ್‌ದುಲೆ..





**ಪ್ರಾಣಿ-ಪಕ್ಷಿ ಸಮ್ಮಂದಿ ಆಟಗ :** ತಮ್ಮ ಪರಿಸರಲಿ ಇರ್‌ವ ಜೀವಿಗಳ ಸೂಸ್ಮಲಿ ನೋಡಿ ಕೆಲವ್ ಆಟಗಳ ಅದ್‌ಕೆ ಅನ್ವಯ ಆವಂಗೆ ಆಡ್‌ವೆ. ಅಂತದರ್‌ಲಿ ಕಕ್ಕೆ ಗಿಳಿ (ಕಾಗೆ ಗಿಳಿ), ದನ ಕೂಡುದು, ಕಪ್ಪೆಲಾಗ, ಕೋಳಿಕಟ್ಟ, ಮರಕೋತಿ, ಕಂಬಳ ಇವು ಮುಕ್ಯವಾಗಿಟು. ಇದರ್‌ಲಿ ಹೆಚ್ಚಿನವು ಮಕ್ಕಳಾಟಗ ಆಗಿದ್ದದೆ.

**ಕಕ್ಕೆ ಗಿಳಿ :** ಕಕ್ಕೆ ಗಿಳಿ ಇಜ್ಜಲ್‌ಲಿ ಗೂಡೆಗ ಆಡ್‌ವ ಆಟ. ಇಲ್ಲಿ ಕಕ್ಕೆ ಮತ್ತೆ ಗಿಳಿ ತೇಳ್‌ವೆ ಎರಡ್ ಹಕ್ಕಿಗಳ ಹೆಸರುಗ ಒಳೊ. ಸಾದಾರಣಾಗಿ ಕಕ್ಕೆನ ಅಸ್ಪೃಶ್ಯತೆಗೂ ಗಿಳಿ ಮಡಿವಂತಿಕೆಗೂ ಇದರ ಕಂಡವೆ.. ಈ ಆಟಲಿನೂ ಇದೇ ಕ್ರಮ ಚಾಯೆ ಇರ್‌ದರ ನಾವು ಕಾಣಕ್. ಇರ್‌ವಸ್ಟ್ ಗೂಡೆಗೆಲ್ಲ ಸುತ್ತ ನಿತ್ತವೆ. ಬಲಗೈನ ಹೆಬ್ಬೆರಳ್ ಮತ್ತೆ ತೋರ್ ಬೆರಳ್‌ನ ಜೋಡ್‌ಸಿ ಉರೂಂಟು ಸುತ್ತ ಮಾಡಿ ಮೋರೆಂದ ಸುಮಾರ್ ಒಂದಡಿ ದೂರಲಿ ಹಿಡ್‌ದವೆ. ಬೆರ್‌ಲ್‌ನ ಮಾಡ್‌ದ ವೃತ್ತದ ಒಳೆಗೆಂದಾಗಿ ಎಲ್ಲವೂ ಮಡೆ ಉಗ್‌ದವೆ. ಬೆರಳ್‌ಗೆ ಮಡೆ ತಾಂಗಿದವು ಕಕ್ಕೆ ಆದವೆ. ಒಳ್‌ದವು ಗಿಳಿಗಾದವೆ. ಈಗ ಆಟ ಇನ್ನೊಂದ್ ರೂಪನ ಪಡ್‌ಕಂಡದೆ.. ಅದಂದರೆ ಕಕ್ಕೆಗೆಲ್ಲ ಸೇರಿ ಗಿಳಿಗಳ ಓಡ್‌ಸಿಕಂಡ್ ಹೋಗಿ ಮುಟ್ಟಿಕೆ ನೋಡ್‌ವೆ. ಕಕ್ಕೆ ಇನ್ನೇನ್ ಮುಟ್ಟಿತ್ ತೇಳ್‌ಕನ ಗಿಳಿಗ ಕೂಡ್‌ಲೆ ಕುದ್ದ್ 'ಡೊಂಪೆ' ತೇಳುವೆ. ಡೊಂಪೆ ತೇಳ್‌ದ ಮೇಲೆ ಕಕ್ಕೆಗ ಮುಟ್ಟು. ಅಂದರೆ ಕುದ್ದ ಗಿಳಿನ ತಮಾಸೆ ಮಾಡ್‌ವೆ. ತಮಾಸೆ ಸಹಿಸಿಕಾಗದೆ ಗಿಳಿಗ ಎದ್ದ್ ಓಡ್‌ರೆ ಕಕ್ಕೆಗ ಓಡ್‌ಸಿ ಮುಟ್ಟುವೆ. ಕಕ್ಕೆ ಮುಟ್ಟಿರೆ ಅಲ್ಲಿಗೆ ಒಂದ್ ಆಟ ಮುಗ್‌ದದೆ. ಮತ್ತೆ ಸುರೂಂದ ಆಟ ಸುರು ಆದೆ. ಹೆಚ್ಚ್ ಸರ್‌ತಿ ಕಕ್ಕೆ ಆದ ಗೂಡೆ ಸೋತತ್ ತೇಳಿ ಹೇಳ್‌ವೆ. ಗಿಳಿಯಾದು ಹೆಮ್ಮೆನ ವಿಸಯ ಆದರೆ ಕಕ್ಕೆ ಆದು ಅವಮಾನದ ಸಂಗತಿ ತೇಳಿ ಗ್ರೇಸುವೆ. (ಪಿ.ಬಿ.)

**ಮರಕೋತಿ :** ಈ ಆಟಕ್ಕೆ ಹೆಚ್ಚ್ ಮಕ್ಕ ಇದ್ದಸ್ಟ್ ಒಳ್ಳೆದ್. ಈ ಆಟ ಆಡಿಕೆ ಮಕ್ಕ ಸುಲಬಲಿ ಹತ್ತಿಳಿಯಕೆ ಹೆಚ್ಚ್ ಗೆಲ್ಲ್‌ಗಿರ್‌ವ ಮರ ಮತ್ತೆ ಸುಮಾರ್ ಒಂದಡಿ ಉದ್ದದ ಒಂದ್ ಮರದ ತುಂಡ್ ಬೇಕ್. ಮರದ ಬುಡದ ಸುತ್ತಲೂ ಒಂದ್ ಗೆರೆ ಬರ್‌ದವೆ. ಅಲ್ಲಿಯೇ 'ಕೋತಿ'ಯಾಗುವಂವನ ಆಯ್ಕೆ ಮಾಡ್‌ವೆ. ಒಬ್ಬ ಅಂವನ ಕಾಲ್‌ಗಳ ಮೇಲೆ ನೇಚಿ, ಮರದ ತುಂಡ್‌ನ ಕಾಲುಗಳೆಡೆಂದ ದೂರ ಇಟ್ಟದೆ. ಅಂವನ ಸಹಿತ ಎಲ್ಲವ್ ಮರ ಹತ್ತುವೆ. ಕೋತಿಯಾದಂವ ಓಡಿ ಹೋಗಿ ಇಟ್ಟ ಕೋಲುನ ಹಿಂದೆ ತಂದ್, ಅದರ ಗೆರೆಯೊಳಗೆ ಇಸಿದ್ ಮರಲಿ ಇರ್‌ವಂವನ ಮುಟ್ಟೋಕು. ಅದ್‌ಕಾಗಿ ಅಂವನೂ ಮರ ಹತ್ತಿದೆ. ಆದರೆ ಕೋತಿ ಮರ ಹತ್ತಿಕಾಕನ ಇನ್ನ್ಯಾರಾದರೊಬ್ಬ ರಪ್ಪ ಮರದಿಂದ ಇಳ್‌ದ್, ಗೆರೆ ಒಳಗೆ ಬಂದ್, ತೊಡೆ ಸಂದ್‌ನ ಎಡೆಲಿ ಕೋಲುನ ದೂರಕೆ ಇಟ್ಟರೆ ಆಗ 'ಕೋತಿ' ಮತ್ತೆ ಓಡಿ ಹೋಗಿ ಅದರ ತರಕಾದೆ. ಆದರೆ ಕೋಲುನ ಇಡಿಕೆ ಮುಂದೆನೆ 'ಕೋತಿ' ಅಂವನ ಮುಟ್ಟಿರೆ ಅಂವ ಮುಂದೆನ ಕೋತಿ ಆದೆ. ಕುರೆಚೇಸ್ಟೆನ ಎಲ್ಲ ವಿವರಗ ಇರ್‌ವ ಈ ಆಟ ಎಸ್ಟು ಲಾಯಿಕೊ ಅಸ್ಟೇ ಅಪಾಯಕಾರಿನೂ



ಮರಕೋತಿ

ಹೌದು. ಮರಂದ ಹಾರಿಕಾಕನ ಕೈಕಾಲ್‌ಗೆ ಬೇನೆ ಆದಲ್ಲದೆ ಸುಮಾರ್ ಸರ್‌ತಿ ಗೆಲ್ಲ್ ಮುರ್‌ದ್ ಹೋದುಟ್ಟು. ಇಸ್ಟಿದ್ದರೂ ಹಳ್ಳಿನ ಮಕ್ಕಳ ಜನಪ್ರಿಯವಾದ ಆಟ ಇದ್. ಕಾಡ್‌ನ ಮಂಗಗ ತಾವೇ ತ ಗ್ರೇಸಿಕಂಡ್ ಆಡ್‌ವ ಆಟ ಇದ್. (ಪಿ.ಬಿ.)

**ದನ ಕೂಡುದು :** ಈ ಆಟಕ್ಕೆ ಮಕ್ಕ ಹೆಚ್ಚಿರೋಕು. ಮಕ್ಕ ಎಲ್ಲಾ ಒಂದ್‌ಕಡೇ ಸೇರಿ 'ದನ ಮೇಯಿಸುವಂವ" ಯಾರ್ ತೇಳಿ ನಿರ್ಣಯ ಮಾಡ್‌ವೆ. ಅದಾಗಿ ದನಗ ಮಲ್‌ಗ್‌ವ ಹಟ್ಟಿನ ಜಾಗೆನ ಗೊತ್ತು ಮಾಡಿ, ಗುರ್‌ತು ಮಾಡಿಕಂಡವೆ. ಒಬ್ಬನ ಬುಟ್ಟು ಒಳ್‌ದವೆಲ್ಲ ದನಗಾದವೆ. ನಿರ್‌ದಿಸ್ಟ ಜಾಗಲಿ ಅಂದರೆ ಹಟ್ಟಿಲಿ ಎಲ್ಲವು ಮಲಗಿದ್ದವೆ. ದನ ಮೇಯಿಸುವಂವ ಎಲ್ಲ ದನಗಳ್‌ನ ಎದ್‌ರ್‌ಸಿ, ಬಾಗಿಲ್ ತೆಗ್‌ದ್ ದನಗಳ ಹೊರಗೆ ಬುಟ್ಟದೆ. ಜೋರಾಗಿ ಬೊಬ್ಬೆ ಹಾಕಂಡ್ ದನಗಳ ದೂರಕ್ಕೆ ಬೆರ್‌ಸಿದೆ. ಮೊಣಕಾಲ್‌ಲಿ ನಡೆವ 'ದನ'ಗ ಪರಸ್ಪರ ತಾಂಗ್‌ಸಿಕಂಡ್, ಮೊಣ್ಣ್‌ನ ಕೆದ್‌ರಿಕಂಡ್, ಗೊರ್‌ಸ್‌ಂದ ನೆಲನ ಗೀರಿಕಂಡ್, ಮೇಯಕೆ ಹೋದವೆ. ಸಣ್ಣ ಸಣ್ಣ ಕರ್‌ಗ ಹಾಲ್ ಕುಡಿಯಕೆ ಅಂಬೇರ್‌ಪು ಮಾಡ್‌ವೆ. ಹೋರಿಗ ಹಸ್‌ಗಳ ಬೆನ್ನ್ ಮೇಲೆ ಹತ್ತಿಕೆ ನೋಡ್‌ವೆ. 'ದನ ಮೇಯಿಸುವಂವ' ಇದೆಲ್ಲದರ ನೋಡಿಕಂಡೇ, ಹಿಂಬೋತಾಕನ ಆಕನ ಎಲ್ಲ 'ದನ'ಗಳ್‌ನ ಹಟ್ಟಿಗೆ ವಾಪಾಸ್ ಬುಟ್ಟದೆ. ಹಿಂದೆಗೆ ಬಾವ ದನಗ ಹಟ್ಟಿಲಿ ಮಲಗ್‌ತ್ತಿದ್ದಂಗೆ, ಬಾಗಿಲ್‌ನ ಮುಚ್ಚುವೆ. ಆಟ ಮುಗ್‌ದದೆ. ಹಸುಗಳ ಪ್ರೀತಿಂದ ನೋಡಿಕಂಬ ಅರೆಬಾಸಿಗ ಸಮುದಾಯಲಿ ಈ ಆಟ, ಅನುಕರಣೆಯಿಂದಲೇ ಹುಟ್ಟಿಕೊಂಡುಟು ತೇಳಿ ದಾರಾಳ ಹೇಳಕ್. (ಪಿ.ಬಿ.)

**ಕಪ್ಪೆ ಲಾಗ :** ಕಪ್ಪೆಲಾಗ ಆಟಲಿ ಒಬ್ಬ ಬಾಗಿ, ಬೆನ್ನ್‌ನ ಗಟ್ಟಿಯಾಗಿಸಿ, ತೊಡೆಗೆ ಕೈಯೂರಿ ಆದಾರ ಕೊಡೋಕು. ಇನ್ನೊಬ್ಬ ಹಿಂದೆಂದ ಓಡಿ ಬಂದ್ ಬಾಗಿದವನ ಬೆನ್ನಿಗೆ ಕೈಯೂರಿ ಮುಂದೆಗೆ ತೆಗ್‌ದ್ ಹಾರೊಕು.. ಕಪ್ಪೆ ಹಾರ್‌ವ ಹಾಂಗೆ ಇದೂನು ಇರುದರ್‌ಂದ ಕಪ್ಪೆಲಾಗ ತೇಳಿ ಇದ್‌ಕೆ ಹೆಸ್‌ರ್ ಬಂದುಟು. ಹಣ್ಣು ಮಟ್ಟ್‌ಗೆ ಅಪಾಯದ ಆಟ ಇದ್, ಬೆನ್ನ್ ಮೇಲೆಂದ ಹಾರಿಕನ ಹಣ್ಣಿಯ ತಪ್ಪಿರೂ ಸ ಸಾಕ್ ಹಾರ್‌ದಂವ ನೆಲಕ್ಕೆ ಬಿದ್ದ್ ತನ್ನ ಮೋರೆ ಗೆಬ್ಬು ಒಡ್‌ಸಿಕಂಡದೆ. ಸಣ್ಣ ಮಕ್ಕ ಇಜ್ಜಲ್‌ಲಿ ಈ ಆಟನ ಆಡ್‌ವೆ. ಈ ಆಟಕ್ಕೆ ಕಮ್ಮಿ ತೇಳಿರೂ ಇಬ್ಬೊರ್ ಬೇಕು. (ಪಿ.ಬಿ.)

**ಕೋಳಿ ಕಟ್ಟ :** ಸಾಂಕಿದ ಕೋಳಿಗಳ ನೊಡುಲಿ ಮೆಟ್ಟ್‌ಸಿಕಂಬ ಆಟನೆ ಕೋಳಿ ಕಟ್ಟ. ಪಂಡ್‌ಂದಳೆ ಹಿರಿಯರ್ ನಡ್‌ಸಿಕಂಡ್ ಬಂದ ಕೋಳಿ ಕಟ್ಟ ಅರೆಬಾಸೆ ಪ್ರದೇಸ ಮತ್ತೆ ತುಳುನಾಡ್‌ಲಿ ತುಂಬಾ ಹೆಸ್ರ್‌ವಾಸಿಯಾಗುಟು. ತುಳುನಾಡ್‌ನ ಬೇರೆ ಕಡೆಗಳ್‌ಲಿ ನಡೆವಂಗೆ ಅರೆಬಾಸೆ ಪರಿಸರಲಿನು ಜಾತ್ರೆನ ಹೊತ್ತುಲಿ, ಹಬ್ಬ ಹುಣ್ಣಮೆನ ದಿನಗಳ್‌ಲಿ ಕೋಳಿಕಟ್ಟ ನಡ್‌ಸ್‌ವೆ. ಬಂಟ ಸಮುದಾಯದವ್ ಇದರ ಕೇಂದ್ರದಲ್ಲಿರ್‌ದ್ ಹೌದಾದರೂ ಅರೆಬಾಸಿಗರೇ ದೊಡ್ಡ ಸಂಕೆಲಿ ಬಾಗವಹಿಸುವೆ. (ಪಿ.ಬಿ.)



ಕೋಳಿ ಕಟ್ಟ

ಅರೆಬಾಸಿಗರ ಮನೆಗಳ್‌ಲಿ ಕೋಳಿಗಳ ಕಟ್ಟಕೆ ತೇಳಿನೇ ಸಾಂಕ್‌ವೆ. ಮನೆನ ಎದುರ್ ಜಗಲಿನ ಮೂಲೆಲಿ ಗೂಟಕೆ ಬಿಗ್‌ದ್ ಹುಂಜನ ನೋಡ್‌ದೆ ಅದ್ ಕಟ್ಟದ ಕೋಳಿ ತೇಳಿ ತೀರ್ಮಾನಿಸಕ್. ಹುಗ್ಗೆ ತಿನ್ನ್‌ಸದೇ ಬತ್ತನ ಮಾತ್ರ ತಿನ್ನ್‌ಸಿ ಕೋಳಿಗಳ ಸಾಂಕಿರೆ, ಗರ್‌ವ' ಹೆಚ್ಚಾದೆ ತೇಳ್‌ವ ನಂಬಿಕೆನೂ ಉಟ್ಟು. ಓಲೆ ಬೆಲ್ಲ ಮತ್ತೆ ನೀರುಳ್ಳಿನ ಕೂಡಾ ಕೋಳಿಗೆ ತಿನ್ಸುವೆ. ಅವುಗಳ ಬಣ್ಣನ ನೋಡಿಕಂಡ್, ಹೆಸ್‌ರೂ ಇಸುದುಟ್ಟು. ಕೆಮ್ಮಯರ, ಬೆಳ್ಳೆ, ಶಾಸ್ತ್ರ ಬೆಳ್ಳೆ ಮತ್ತೆ ಗೆಂದ ಬೆಳ್ಳೆ, ಕಡ್ಲೆ, ಗಿಡಿಯ, ಮೈಪ, ಮಂಜಳ, ಕೆಂಪು ಕಾವ, ಕುಪ್ಪಳ, ಪರ್‌ಡಿ, ಪಂಚಣಿ, ಉರಿಯ ಇಂತದೆಲ್ಲ ಕೋಳಿಗಳಿಗೆ ಹೆಸರ್ ಉಟ್ಟು. ಇನ್ನು ಕೆಲವೆಡೆ ರಾಮ, ಅರ್‌ಜುನ, ಬಂಟ, ತೇಳ್‌ವ ಹೆಸರ್‌ಸುದೂ ಉಟ್ಟು. ನಾಲ್ಕಾರ್ ಕೋಳಿಗಳ ಕಾದ್ ಗೆದ್ದ ಹುಂಜದ ಹೊಟ್ಟೆಗೆ ಇಲ್ಲರೆ ಕಿಬಿಗೆ ಚಿನ್ನದ ಸಣ್ಣ ಬಳೆನ ಮಾಡ್‌ಸುವವೂ ಒಳೊ.

ಕೋಳಿ ಕಟ್ಟಲಿ ಹೆಣ್ಮಕ ಕೂಡಿಕಂಬೊದುಲೆ. ಮೊಣಕಾಲ್‌ವರೆಗೆ ಇಳಿಬುಟ್ಟ ಪಂಚೆ, ತಲೆಗೊಂದು ಮುಂಡಾಸ್, ಇದಿಸ್ಟ್ ಗಂಡಸರ ಉಡುಗೆಗ. ದಾರಿಲಿ ಕೊತ್ತಿ ಅಡ್ಡ ಬಂದರೆ, ಅಪಸಕುನತೇಳಿ ಗ್ರೇಸಿ ಮನೆಗೆ ವಾಪಾಸ್ ಹೋದವೆ. ಕೇರೆ ಹಾವು, ಎತ್ತ್ ಅಡ್ಡ ಬಂದರೆ ಒಳ್ಳದ್. ಸಾಮಾನ್ಯ ಆಗಿ ಹೆಂಡ ಇಲ್ಲರೆ ಸರಾಯಿ ಕುಡಿಯದೆ ಕೋಳಿಕಟ್ಟಕೆ ಹೋವ ಗಂಡಸರೇ ಕಡ್‌ಮೆ.

ಹರ್‌ತದ 'ಬಾಳ್'ನ ಕೋಳಿ ಕಾಲಿಗೆ ಕಟ್ಟಿ, ಸಮ ಹೋರಾಟದ ಜೊತೆನ ಆರ್‌ಸಿ, ಕೋಳಿಗಳ ಕಾದಾಟ ನಡ್‌ಸುವೆ. ಸಾವಿರ ರೂಪಾಯಿಂದ ಲಕ್ಷ ರೂಪಾಯಿವರೆಗೆ ಜೂಜು ಕಟ್ಟುವೆ. ಗೆದ್ದ ಕೋಳಿನ ಕೈಲಿ ಹಿಡ್‌ಕಂಡ್, ಸತ್ತು ಹೋದ ಕೋಳಿನ ಕೈಲಿ ನೇತಾಡಿಸಿಕಂಡ್ ಬಾವ ಅರೆಬಾಸಿಗನೊಟ್ಟಿಗೆ ನಾಲ್ಕಾರ್ ಜೆನಂಗನೂ ಇದ್ದವೆ. ಸುಮಾರ್ 25 ಕೋಳಿಗಳ್‌ನ ಕಾದಾಟಲಿ ಹೋರಾಡಿ ಕೊಂದ ಹುಂಜಗಳನು ಅರೆಬಾಸಿಗರ ಮನೆಗಳ್‌ಲಿ ಕಾಣಕ್. ಕೋಳಿ ಕಟ್ಟಲಿ ಎರಡ್ ನಮುನೆ ಉಟ್ಟು. ಸಣ್ಣವರ ಅಣಕ್ ರೂಪ ಮತ್ತೆ ದೊಡ್ಡವರ ನಿಜದ ಕೋಳಿಕಟ್ಟ ಸಣ್ಣ ಮಕ್ಕ ಚಗ್ತೆ ದೈನ ಎಳ್ತ್ ಕಾಯಿನ ತೆಕಂಡ್ ಎದ್‌ರೆದ್‌ರ ನಿತ್ತ್ ಅಡ್ಡಕೆ ಹಿಡ್‌ದ್ ಎಳ್‌ದವೆ. ಯಾರ ಕೈಲಿರ್‌ವ ಕಾಯಿ ತುಂಡಾದೆನೋ ಅವು ಸೋತೋ ತೇಳಿ ಅರ್‌ತ. ಇಲ್ಲಿ ಸೋಲ್ ಮತ್ತೆ ಗೆಲ್ಲುದು ಮಾತ್ರ ಮುಕ್ಯ ಆದೆ. ಚಗ್ತೆ ಅಲ್ಲರೆ ಚಗ್ತೆ ಕಾಯಿನೇ ಕೋಳಿತೇಳಿ ಗ್ರೇಸುದರ್‌ಂದ, ಇದರ ನಿಜದ ಕೋಳಿಕಟ್ಟದ ಅಣಕ್ ರೂಪ ತೇಳಿ ಹೇಳಕ್.

**ಕಂಬಳ :** ಕಂಬಳ ಕೋಣಗಳ ಓಡ್‌ಸ್‌ವ ಒಂದ್ ಓಟ. ಇದ್ ಈಗ ತುಳುನಾಡ್‌ನ ಬೇರೆ ಕಡೆಗಳ್‌ಲಿ ಕಾಂಬಸ್ಟ್ ವೈಬವದ ಕಂಬಳಗ ಅರೆಬಾಸೆ ಪರಿಸರಲಿ ಕಾಂಬೋದುಲೆ. ಆದರೆ ಸುಳ್ಯಲಿ ಪಂಡ್ ಬೇಸಾಯದ ದಿನಗಳ್‌ಲಿ ನಡೆತಿದ್ದ ಗೌಜಿನ ಕಂಬಳದ ಇತಿಯಾಸಗ ಉಟ್ಟು. ಪ್ರಾಕೃತಿಕ ಆಗಿ ಏರು ತಗ್ಗುಗಳ್‌ಂದ ಕೂಡಿರ್‌ವ ಅರೆಬಾಸೆ ಪರಿಸರಲಿ ದೊಡ್ಡದಾದ ಗದ್ದೆಗ ಇಲ್ಲದಿರ್‌ದು ಇದ್ಕೆ ಮುಕ್ಯ ಕಾರಣವಾಗಿರ್‌ದು. ನೇಜಿ ನೆಡ್‌ವ ಹಿಂದೆನ ದಿನದಂದ್ ತಮಾಸೆಗಾಗಿ ಎತ್ತುಗಳ್‌ನೋ, ಕೋಣಗಳ್‌ನೋ ಗದ್ದೆನ ಒಂದ್ ಕೊಡಿಂದ ಇನ್ನೊಂದ್ ಕೋಡಿಗೆ ಓಡ್‌ಸ್‌ದುಟ್ಟು ಅದ್ ಪಂತ ಆಗಿರದೆ ಮನೋರಂಜನೆನ ಉದ್ದ ಕೂಡಿರುವಂತದ್ದ್. (ಪಿ.ಬಿ.)

**ಒಳಾಂಗಣ ಕ್ರೀಡೆಗ :** ಮನೆನ ಅಲ್ಲೊ ಕೊಟೆಗೆನ ಒಳಗೆ ಆಡ್‌ವ ಆಟಗ ತುಂಬಾ ಉಟ್ಟು. ಇದರ್‌ಲಿ ಮಕ್ಕಳ ಆಟಗಳಿಗೆ ದೊಡ್ಡಪಾಲ್.

**ಮಕ್ಕಳ ಒಳಾಂಗಣ ಆಟಗ :** ಮಕ್ಕಳ ಆಟದ ಬಯಕೆ ಬೇರೇನೇ. ಹೊಸ ಹೊಸ ಆಟಗಳ್‌ನ ಕಲಿದರ್‌ಲಿ ಅವ್‌ಕೆ ಹೆಚ್ಚ್ ಉತ್ಸಾಹ ಇದ್ದದೆ. ಮಕ್ಕಳ ಆಟಗಳ್‌ನ ಕಂಡ್ ಹಿರಿಯರೂ ಕುಸಿ ಪಟ್ಟವೆ. 'ಅನುಕರಣೆ,





ಪಂತಂತೇಳುವ ಮನೋಬಾವ, ಮನರಂಜನೆನ ಆಸೆ, ದೈಹಿಕ ಚೇಸ್ಟೆಗಳ ತುಡಿತ–ಇಂತ ಬಾಲ್ಯ ಸಹಜವಾದ ಮನೋಬಾವಗಳ್ಂದ ಕೂಡ್ದ ಎಳೆ ಮಕ್ಕಳ ಮೊನ್ಸ್ ಆಟಗಳ ಕಡೆಗೆ ಎಳ್ದದೆ. ಆಟ ತೇಳಿರೆ ಕೂಸುನ ಬಾವಾತ್ಮಕ ಚಟುವಟಿಕೆನ ಜೀವಂತ ಚಿತ್ರ.

ಮಕ್ಕಳ ಆಟಗ ಸರಳ ಆಗಿರ್ವಾಂಗೆ ಸುಮಾರ್ ಸರ್ತಿ ತುಂಬ ಸಂಕೀರ್ಣನು ಆಗಿದ್ದದೆ. ಕೂಸುನ ಬೌತಿಕ, ಸಾಮಾಜಿಕ ಮತ್ತೆ ಮಾನಸಿಕ ಬೆಳವಣಿಗೆನ ಅದ್ ಸೂಚಿಸಿದೆ. ಹೀಂಗಾಗಿ ಆ ಕೂಸು ಬೊದ್ಕುವ ಸಾಂಸ್ಕೃತಿಕಪರಿಸರಕ್ಕೆ ಒಳ್ಳ ಉದಾಹರಣೆನೂ ಆದೆ. ಸುಮಾರ್ ಆಟಂಗ ಸಮಾಜದ ಎಲ್ಲಾ ವಿಸಯ ಗಳಿಗೂ ಸೂಸ್ಮ ಆಗಿ ಸಮ್ಮಂದಿಸಿರ್ದದರ ನಾವು ಗುರ್ತ್‌ಸಕ್. ಪುರಾತನ ದಾರ್ಮಿಕ ಸಂಪ್ರದಾಯಗಳೊಟ್ಟಿಗೆ, ಮೊದ್‌ವೆನ ಆಚರಣೆಗಳೊಟ್ಟಿಗೆ, ಅನೇಕ ನಂಬಿಕೆಗಳೊಟ್ಟಿಗೆ, ಕ್ರಿಸಿ, ಬೇಟೆ ಇಂತೆಲ್ಲ ಬೊದ್ಕ್‌ನ ಚಟುವಟಿಕೆಗಳೊಟ್ಟಿಗೆ ಆಟಗ ಸಮ್ಮಂದ ಇಸಿಕಂಡುಟು.

ತಮಾಸೆ ಸಂಗತಿ ಆದರ ಒಟ್ಟಿಗೆ ಸಂಸ್ಕೃತಿಗೆ ಸಮ್ಮಂದ ಪಟ್ಟ ಗಂಬೀರದ ವಿಸಯಗ ಸನಾ ಅದರ್‌ಲಿದ್ದದೆ ತೇಳುವ ಕಾರಣಕೆ ಈ ಆಟಗ ಅದ್ಯಯನಕೆ ಬೇಕಾದೆ. ಸಣ್ಣ ಮಕ್ಕಳ ಒಳಾಂಗಣ ಆಟಗಳ್‌ಲಿ ಗಂಡ್ ಹೆಣ್ಣು ಬೇದ ಇಲ್ಲೆ. ಕೆಲವ್ ಆಟಗಳ್‌ಲಿ ಗೂಡೆಗ ಸೇರಿಕಂಬಂತದ್ ಹೆಚ್ಚಿಗೆ ಉಟ್ಟು. ಆದರೆ ಹೈದಂಗಳಿಗೆ ಅದ್ ನಿಸೇದ ಏನು ಅಲ್ಲ.

ಅರೆಬಾಸಿಗರ ಮನೆಗ ಸಾಕಸ್ಟ್ ಸಣ್ಣದಾಗಿದ್ದವೆ. ಹಾಂಗಾಗಿ ಕುದ್ದಲ್ಲೇ ಆಡ್‌ವ ಆಟಗಳಿಗೆ ಇಲ್ಲಿ ಮಹತ್ವ ಹೆಚ್ಚಿಗೆ ಉಟ್ಟು. ಒಟ್ಟಿಗೆ ಮನೆಯೊಳೆಗೆನ ಬೇರೆ ಬೇರ ಸೊತ್ತ್‌ಗಳ್‌ನ ತಾಕೆ ಆಗದ್ ತೇಳ್‌ವ ನಿಯಮ ಉಟ್ಟು. ಹಾಂಗಾಗಿ ಕಾಡ್‌ಲಿ ಸಿಕ್ಕ್‌ವ ಗಜ್ಜಗನ ಕಾಯಿಂದ ಆಡ್‌ವ ಮನೆಯೊಳಗೆನ ಆಟಗ ಸನಾ ಹೊರೆಗೆ ನಡ್‌ದವೆ. ಹಂಗಿರುದರ್‌ಂದ ಮನೆ ಒಳೆಗೆ ತಾವಂತ ಗೇರ್ ಬೀಜ, ಕಲ್ಲ್ ಮತ್ತೆ ಚೆನ್ನಮಣೆ ಕಾಯಿಂದ (ಅತವಾ ಮಂಜೆಟ್ಟಿ ಕಾಯಿ) ಬೇರೆ ಬೇರೆ ನಮುನೆನ ಆಟಗಳ ಆಡ್‌ವೆ. ಕಾಲ ನಿರ್‌ಬಂದವಿಲ್ಲದೆ ಆಡ್‌ವ ಕಲ್ಲಾಟ, ಮಕ್ಕಳ ಆಟಗಳ್‌ಲಿ ಅತ್ಯಂತ ಜನಪ್ರಿಯವಾದದ್ದ್ ಮತ್ತೆ ಸಾರ್‌ವತ್ರಿಕವಾದದ್ದ್. (ಪಿ.ಬಿ.)

**ಕಲ್ಲಾಟ** : ಈ ಆಟಕೆ ಕಮ್ಮಿ ತೇಳಿರೆ ಇಬ್ಬೊರ್ ಬೇಕು. ಉರುಂಟಾಗಿದ್ದ್ ಪುಂಡಿಲಿ ಹಿಡಿವಂತ ಐದ್ ಕಲ್ಲ್‌ಗ ಇದ್ದ್, ಕುದ್ರ್‌ಕಿ ಜಾಗೆ ಇದ್ದರೆ ಸಾಕ್. ಸಾಮಾನ್ಯ ಆಗಿ ಮನೆನ ಜಗಲಿಲಿ ಆಡ್‌ವ ಆಟ ಇದ್. ಈ ಆಟಲಿ ಒಟ್ಟು 17 ಹಂತಗ ಒಳೊ.

**ಸುರೂನ ಹಂತಿ** : ಐದ್ ಕಲ್ಲ್‌ಗಳ ಅಂಗೈಂದ ಮೇಲೆ ಒಮ್ಮೆಗೆ ಹಾರ್‌ಸಿ ಮುಂಗೈಗೆ ವರ್‌ಗಾಯಿಸೋಕು. ಮುಂಗೈಂದ ಮತ್ತೆ ಅಂಗೈಗೆ ವರ್‌ಗಾಯಿಸೋಕು. ಹಾಂಗೆ ಮಾಡಿಕನ ಕಲ್ಲ್ ನೆಲಕ್ಕೆ ಬಿದ್ದರೆ, ಕೈಲಿರ್‌ವ ಕಲ್ಲ್‌ಗಳ್‌ಲಿ ಒಂದರ ಮೇಲಕ್ಕೆ ಹಾರ್‌ಸಿ ಅದ್ ಕೆಳೆಗೆ ಬಾವ ಹೊತ್ತುಗೆ ಕೈಲಿರುವ ಕಲ್ಲ್‌ಗಳ ನೆಲಕ್ಕೆ ಬುಟ್ಟು ಮೇಲೆಂದ ಬಾವ ಕಲ್ಲ್‌ನ ಹಿಡಿಯೋಕ್. ಎಲ್ಲನು ನೆಲಕ್ಕೆ ಬಿದ್ದರೆ, ಅಂವ ಅಲ್ಲೊ ಅದ್ ಎದುರಾಳಿಗೆ ಆಟ ಬುಟ್ಟು ಕೊಡೋಕು. ಹಿಂಗೆ ಐದ್ ಸರ್‌ತಿ ಆಡಿರೆ ಒಂದನೇ ಹಂತದ ಆಟ ಮುಕ್ತಾಯ ಆದೆ. ಇದರ 'ಹಾರಿಸಿ ಬುಡುದು' ತೇಳಿ ಹೇಳ್‌ವೆ. ಕೈಗ ಚುರುಕಾಗಿದ್ದವು ಇದರ ಕೂಡ್‌ಲೆ ಸಾದ್‌ಸಿ ಬುಟ್ಟವೆ. 5ನೇ ಆಟ ಆದ ಮೇಲೆ ಆರನೆಯದಾದ ಆಟನ 'ದೇವ' ತೇಳಿ ಕರ್‌ದವೆ. 'ದೇವ'ಲಿ ಆಟ ಸೋತರೂ ಅದ್ ಲೆಕ್ಕಕ್ಕೆ ಇಲ್ಲೆ. ಆಟನ ಮುಂದುವರಿಸಕ್.

**ಎರಡನೇ ಹಂತಿ** : ಕೈಲಿರುವ ಐದೂ ಕಲ್ಲ್‌ಗಳ ನೆಲಕ್ಕೆ ಬೀಳ್‌ಸಕು. ಒಂದ್ ಕಲ್ಲ್‌ನ ಕೈಗೆ ತೆಕಂಡ್, ಅದರ ಮೇಲೆ ಹಾರ್‌ಸೊಕು. ಅದ್ ಕಾಗಡೆ ಬಾವಸ್ಟ್‌ರ್‌ಲಿ ಕೆಳಗೆಂದ ಒಂದ್ ಕಲ್ಲ್‌ನ ನೇಚಿಕಣಕು ಹಿಂಗೆ ನೇಚಿಕಣ ಒಳ್‌ದ ಕಲ್ಲ್‌ಗೆ ಬೆರ್‌ಳ್ ತಾಂಗಿರೆ, ಕಲ್ಲ್ ಕೈಗೆ ಸಿಕ್ಕದಿದ್ದರೆ, ಆಟನ ಎದ್‌ರಾಳಿಗೆ ಬುಟ್ಟು ಬುಡೋಕು.

ಹಿಂಗೆ ಒಟ್ಟು ಐದು ಸರ್‌ತಿ ಕಲ್ಲ್‌ನ ತಕಂಡ್, ಆರನೆಯದಾದ 'ದೇವ' ಆಡಿರೆ ಎರಡನೇ ಹಂತ ಮುಗ್‌ದದೆ. ಇದರ ಸ ನೆಲಕ್ಕೆ ಹಾಕಿ ತೆಗ್ದ್' ತೇಳುವೆ.

**ಮೂರನೇ ಹಂತಿ** : ಎರಡನೇ ಹಂತತಿಲಿದ್ದಂಗೆ ಆಟ, ಅಲ್ಲಿ ಒಂದ್ ಕಲ್ಲ್ ನೇಚಿ, ಇನ್ನೊಮ್ಮೆ ನೆಲಂದ ಒಂದೊಂದರ್‌ನೆ ಎತ್ತಿರೆ ಇಲ್ಲಿ ಎರಡೆರಡ್ ಕಲ್ಲ್‌ನ ಒಂದೇ ಸರ್‌ತಿಗೆ ಎತ್ತೋಕು. ಒಟ್ಟು ತಪ್ಪಿಲ್ಲದೆ ಐದ್ ಆಟ ಆಡೊಕು. ಆರನೆಯದ್ 'ದೇವ', ತಪ್ಪಿರೂ ತೊಂದರೆ ಇಲ್ಲೆ. ಇದರ 'ಎರಡ್ ತೆಗೆದು' ತೇಳ್‌ವೆ.

**ನಾಕ್ ಹಂತಿ** : ಹಿಂದೆನಂಗೆ ಸುರು ಮಾಡಿ, ಮೂರ್ ಕಲ್ಲ್‌ನ ಒಮ್ಮೆಗೆ ತಕಂಡ್ ಮತ್ತೆ ಒಂದರ ಎತ್ತೊಕು. ಒಟ್ಟು ಐದ್ ಆಟ, ಆರನೆದ್ ದೇವ. ಇದರನು 'ಮೂರ್ ತೆಗೆದು' ತೇಳ್‌ವೆ.

**ಐದನೇ ಹಂತಿ** : ಹಿಂದೆನಂಗೆ ಸುರ್ ಮಾಡಿ, ನಾಕ್ ಕಲ್ಲ್‌ನ ಏಕಕಾಲಕ್ಕೆ ಕೈಗೆ ತೆಕಣೊಕು ಒಟ್ಟ್ ಐದ್ ಆಟ ಮತ್ತೆ ಒಂದ್ ದೇವ. ಇದರ 'ನಾಲ್ಕ್ ತೆಗೆದು' ತೇಲ್‌ವೆ.

**ಆರನೇ ಹಂತಿ** : ಇಲ್ಲಿ ಆಟ ಹೊಸ ತಿರ್‌ಗ್‌ನ ಪಡ್‌ಕಂಡದೆ. ಐದ್ ಕಲ್ಲ್‌ನ ನೆಲಕ್ಕೆ ಹಾಕಿ ಒಂದ್ ಕಲ್ಲ್‌ನ ಎತ್ತಿಕಣೋಕು. ತಕಂಡ ಎಲ್ಲ ಕಲ್ಲ್‌ನ ಮೇಲೆಗೆ ಹಾರ್‌ಸಿ ಅದ್ ನೆಲಕ್ಕೆ ಬೀಳಿಕಾಕನ ನೆಲಂದ ಒಂದ್ ಕಲ್ಲ್‌ನ ಕೈಗೆತ್ತಿಕಂಡ್, ಮೇಲಕ್ಕೆ ಚಿಮ್ಮಿದ ಕಲ್ಲ್‌ನೂ ಹಿಡಿಯೋಕು. ನೆಲಲಿ ಒಳ್ದ ಮೂರ್ ಕಲ್ಲ್‌ನ ಹಿಂಗೆ ಹಿಡಿಯೋಕು. ಹಿಂಗೆ ಐದ್ ಆಟ ಆಡಿ, ಅಕೇರಿಗೆ ದೇವ ಆಟನ ಆಡೋಕು. ಇದರ 'ಮೂರ್' ತೇಳುವೆ. ಹಿಂದೆ ಹೇಳದ ನಾಕ್‌ನೆ ಹಂತಕ್ಕೆ ವಿರುದ್ದದ ಆಟ ಇದ್.

**ಏಳನೇ ಹಂತಿ** : ಇದರ 'ತೊಪ್ಪೆ' ತೇಳಿ ಕರ್‌ದವೆ. ಅಂಗೈಲಿ ಐದ್ ಕಲ್ಲ್‌ನ ಒತ್ತಿ ಹಿಡ್‌ದ್, ಅದರ ನೆಲಕ್ಕೆ ರಾಸಿಯಾಗಿ ಹಾಕೋಕು. ಆ ರಾಸಿಂದ ಒಂದ್ ಕಲ್ಲ್‌ನ ಕಲ್ಲ್‌ಗ ಅಲುಗಾಡದಂಗೆ ಜಾಕ್ರತೆಲಿ

ತೆಗೆಯೋಕು. ಅದರ ಮೇಲೆಗೆ ಹಾರ್‌ಸಿ, ಕಾಗಡೆ ಇದ್ದ ನಾಕ್ ಕಲ್ಲ್‌ನ ತಕಂಡ್, ಹಾರ್‌ಸಿದ ಕಲ್ಲ್‌ನ ಹಿಡಿಯೋಕು. ಒಟ್ಟ್ ಐದು ಆಟ, ಆರನೆದ್ ದೇವ

**ಎಂಟನೇ ಹಂತಿ :** ಇದ್ ತುಂಬಾ ಕಸ್ಟದ ಗಟ್ಟ ತೇಳಿ ಹೇಳ್‌ವೆ. ಇದರ 'ಜುಮ್ಮಿ' ತೇಳಿ ಕರ್‌ದವೆ. ಐದ್ ಕಲ್ಲ್‌ಗಳ್ ಅಂಗೈಂದ ಮುಂಗೈಗೆ ತಕಣಕು. ಮುಂಗೈಯಿಂದ ಕಲ್ಲ್‌ಗಳ ಎತ್ತರಕೆ ಹಾರ್‌ಸಿ, ಕಲ್ಲ್‌ಗಳ ಒಮ್ಮೆಗೆ ಅಂಗೈಲಿ ಹಿಡಿಯೋಕು. ಹಳ್ಳಾ ಚಾತುರ್‌ಪು ಕಮ್ಮಿ ಆದರೂ ಕಲ್ಲ್ ನೆಲಕೆ ಬಿದ್ದದೆ. ಬಿದ್ದ ಕಲ್ಲ್‌ನೂ ಎತ್ತಿ ಅಂಗೈಲಿ ತುರ್‌ಕ್‌ಸಿ, ಹಿಡಿಯಕಾದೆ. ಇದ್ ಹಿಂಗೆನೆ ಐದ್ ಆಟ ಆಕು, ಆರನೆದ್ ದೇವ. ಇಲ್ಲಿ ಹೆಚ್ಚಿನವು ಸೋತ್ ಬುಟ್ಟವೆ. ಅಲ್ಲೊ ಈ ಹಂತ ದಾಟಿಕೆ ತುಂಬ ಹೊತ್ತು ಬೇಕಾದೆ

**ಒಂಬತ್ತನೇ ಹಂತಿ :** ಆಟಗಾರ ಕೈಲಿ ಕಲ್ಲ್‌ನ ಹಿಡ್‌ಕಂಡ್ ಎದುರಾಳಿನೊಟ್ಟಿಗೆ 'ಕಸ್ಟನೋ ಸುಲಬನೋ' ತೇಳಿ ಕೇಳೋಕು. ಎದುರಾಳಿ ಕಸ್ಟ ತೇಳಿ ಹೇಳಿರೆ, ಆಟಗಾರ ಅಂಗೈಂದ ಮುಂಗೈಗೆ ಕಲ್ಲ್‌ನ ವರ್‌ಗಾಯಿಸಿಕನ ಒಂದ್ ಕಲ್ಲ್‌ಸಾ ನೆಲಕೆ ಬೀಳಿಕಾಗದ್. ಮುಂಗೈಂದ ಅಂಗೈಗೆ ಅಸ್ಟೇ ಎಚ್ಚರಂದ ವರ್‌ಗಾಯಿಸೋಕು. ಒಟ್ಟು ಐದ್ ಆಟ ಆಡಿ ಒಂದ್ 'ದೇವ' ಆಡೊಕು. ಎದುರಾಳಿ 'ಸುಲಬ' ತೇಳಿ ಹೇಳಿರೆ, ಅಂಗೈ– ಮುಂಗೈ, ಮುಂಗೈ–ಅಂಗೈ, ಕಲ್ಲ್ ವರ್‌ಗಾವಣೆಲಿ ನೆಲಕ್ಕೆ ಒಂದ್ ಕಲ್ಲ್ ಮಾತ್ರ ಬೀಳ್‌ಸಿಕೆ. ಹಿಂಗೆ ಒಟ್ಟು ಐದ್ ಆಟ, ಕಡೇದ್ ದೇವ, ಈ ಒಂಬತ್ತನೇ ಹಂತದ ಆಟನ 'ಕಸ್ಟ–ಸುಲಬ' ತೇಳುವೆ. ಇದ್ ಕಸ್ಟದ ಹಂತ.

**ಹತ್ತನೇ ಹಂತಿ :** ಇದರ 'ಹಾಕ್ಸಿ ಒಂದೊಂದು' ತೇಳಿ ಹೇಳ್‌ವೆ. ಕೈಲಿರ್‌ವ ಐದ್ ಕಲ್ಲ್‌ಗಳ್‌ಲಿ ಒಂದರ ಎತ್ತರಕ್ಕೆ ಹಾರ್‌ಸಿ, ಒಳ್ದದರ್‌ನ ನೆಲಕ್ಕೆ ಬೀಳಿಕೆ ಮುಂದೆನೆ ಕೈಲಿ ಹಿಡ್‌ದ್, ಮತ್ತೆ ಎರಡನೇ ಹಂತದಲ್ಲಿರುವಂಗೆ ಒಂದೊಂದೇ ಕಲ್ಲ್‌ನ ಎತ್ತಿಕಣೋಕು. ಒಟ್ಟು ಐದ್ ಆಟ ಆದರೆ ಆರನೆಯದ್ ದೇವ,

**11ನೇ ಹಂತಿ :** ಹಿಂದೆನ ಹಂತದಲ್ಲಿದ್ದಂಗೆ ಹಾರ್‌ಸುದು, ಒಂದೊಂದರ ಬದಲ್‌ಗೆ ಇಲ್ಲಿ ಎರಡೆರಡ್ ಕಲ್ಲ್‌ನ ಎತ್ತಿಕಣೋಕು. ಒಟ್ಟು ಐದ್ ಆಟ ಮತ್ತೆ ಒಂದ್ ದೇವ. ಇದರ ಹಾರಿ ಹಿಡೆದು' ತೇಳುವೆ.

**12ನೇ ಹಂತಿ :** ಹಿಂದೆನಂಗೆ ಆಡುದು. ಎರಡರ ಬದಲ್ ಇಲ್ಲಿ ಮೂರು ಕಲ್ಲ್‌ನ ಒಮ್ಮೆಗೇ ತೆಗೆದು, ಮತ್ತೆ ಉಳ್‌ದ ಒಂದರ ತೆಗೆಯೋಕು. ಇದರ 'ಹಾರಿ ಮೂರ್‌ತೆಗ್ಸ್ ಒಂದ್' ತೇಳುವೆ.

**13ನೇ ಹಂತಿ :** ಹಿಂದೆನಂಗೆ ಈ ಸಲ ನಾಲ್ಕ್ ಕಲ್ಲ್‌ನ ಒಟ್ಟಿಗೇ ಎತ್ತಿಕಣೋಕು. ಇದರ 'ಹಾಕ್ಸಿ ನಾಲ್ಕು ನಾಲ್ಕು' ತೇಳುವೆ.

**14ನೇ ಹಂತಿ :** ಇದ್ ಹಿಂದಿನ ಆರನೇ ಹಂತಲಿ ನಡೆದಂಗೆ ನಡ್ದದೆ. ಒಂದ್ ಕಲ್ಲ್‌ನ ಎತ್ತರಕ್ಕೆ ಹಾರ್‌ಸಿ, ಸುರೂಗೆ ಮೂರು ಕಲ್ಲ್‌ನ ತೆಗ್‌ದ್ ಮತ್ತೆ ಒಂದರ ಎತ್ತಿಕಣೋಕು, ಒಟ್ಟು ಐದು ಸಲ–ಕಡೇದ್ ದೇವ,

**15ನೇ ಹಂತಿ :** ಇದು ಏಳನೇ ಹಂತದ್ದರ ಹಾಂಗೆನೇ ನಡ್‌ದದೆ. ಕಲ್ಲ್‌ನ ಹಾರ್‌ಸುದರ್‌ಲಿ ಮಾತ್ರ ವೆತ್ಯಾಸ ಉಟ್ಟು. ಈ ಆಟ ಆಡ್‌ವ ಮುಂದೆ ಎದುರಾಳಿನೊಟ್ಟಿಗೆ 'ಹಾಕ್ಸಿ ತೊಪ್ಪೆ ಐದೋ ಏಳೋ' ತೇಳಿ ಕೇಳೋಕು. ಎದುರಾಳೀ 'ಐದ್' ತೇಳಿರೆ ಐದ್ ಆಟ ಆಡೋಕು, ಏಳ್ ತೇಳಿರೆ ಏಳ್ ಆಟ ಆಡೋಕು. ಒಂದ್ ಕಲ್ಲ್‌ನ ಹಾರ್‌ಸಿ, ಉಳ್ದ ಕಲ್ಲ್‌ನ ನೆಲಕ್ಕಿಸಿ, ಮತ್ತೆ ಪುನಃ ಕಲ್ಲ್‌ನ ಹಾರ್‌ಸಿ ಈ ಎಲ್ಲನೂ ಎತ್ತೋಕು. ಇದ್ ಸುಲಬ ಆಗಿದ್ದದೆ. ಆದರೆ ಒಟ್ಟು ಏಳು ಆಟ ಆಡಿ, ಎಂಟನೆದಾಗಿ 'ದೇವ' ಆಡಕಾದೆ.

**16ನೇ ಹಂತಿ :** ಇದರ 'ಹಾಕ್ಸಿ ಜುಮ್ಮಿ ಕಸ್ಟನೋ ಸುಲಬನೋ' ತೇಳ್‌ವೆ. ಇದ್ ತುಂಬ ಕಸ್ಟದ ಆಟನೂ ಹೌದು. ಎದುರಾಳಿ ಕಸ್ಟ ತೇಳಿರೆ, ಒಂದ್ ಕಲ್ಲ್ ಸನಾ ನೆಲಕೆ ಬೀಳದಂಗೆ ಅಂಗೈಂದ ಮುಂಗೈಗೆ ಹಾರ್‌ಸಿ ಹಿಡ್‌ದ್ ಎಂಟನೇ ಹಂತಲಿರುವಂಗೆ ಜುಮ್ಮಿ ಆಡೋಕು. ಒಂದ್ ಕಲ್ಲ್ ಬಿದ್ದರೂ ಆಟನ ಎದುರಾಳಿಗೆ ಬುಟ್ಟುಕೊಡೋಕು. ಒಟ್ಟಿಗೆ ಈ ಆಟಲಿ ಒಮ್ಮೆಗೇ ಐದ್ ಆಟನೂ ಕೂಡಿ ಬರೋಕು. ನಾಲ್‌ಕ್ ಆಟ ಆಡಿಕೆ, ಎದುರಾಳಿಗೆ ಬುಟ್ಟು ಕೊಟ್ಟರೆ ಮತ್ತೆ ಸುರೂಂದ ಲೆಕ್ಕ ಹಿಡಿಯೋಕು. ಹೀಂಗೇ ಈ 17ನೇ ಹಂತ ಕಸ್ಟದ್ದ್. 'ಎದುರಾಳಿ' ಸುಲಬ ತೇಳಿರೆ ಜುಮ್ಮಿಲಿ ಒಂದ್ ಕಲ್ಲ್ ನೆಲಕ್ಕೆ ಬೀಳಕ್. ಆದರೆ ಸಾಮಾನ್ಯಾಗಿ ಎದುರಾಳಿ ಕಸ್ಟತೇ ಹೇಳುದೇ.

**17ನೇ ಹಂತಿ :** ಇದ್ ಕಡೇನ ಹಂತ. ಆಟಗಾರ 'ಹತ್ತೆ ಅಸ್ಟೆ' ತೇಳಿ ಹೇಳಿ, ಸುರುನ ಹಂತಲಿ ಆಡ್‌ದ ಆಟನೇ ಹತ್ತ್ ಸರ್‌ತಿ ಆಡ್‌ದೆ. ನೊಡುಲಿ ಎಲ್ಲಿನೂ ಆಟನ ಬುಟ್ಟು ಕೊಡಿಕಾಗದ್. ಬುಟ್ಟರೆ ಮತ್ತೆ ಸುರುಂದಲೇ ಆಟ ಸುರಾದೆ. ಹಾಂಗಾಗಿ ಇಲ್ಲಿ ತಾಳ್ಮೆ ಮುಕ್ಯ.

ಇದರೊಟ್ಟಿಗೆ ಕಲ್ಲಾಟ ಮುಗ್‌ದದೆ. ಇದರ್‌ಲಿ ಒಟ್ಟು 10 ಆಟಗ ಇದ್ದ್ ಅದರ್‌ಲಿ ಏಳ್ ದೇವ ಇದ್ದದೆ. ಇದರ ಬುಟ್ಟರೆ, ಒಟ್ಟು 92 ಆಟಗಳ ಒಂದ್ ಸರ್‌ತಿಗೆ ಆಟಗಾರ ಆಡಕಾದೆ. ಇಸ್ಟರ ಒಂದೇ ಸರ್‌ತಿ ಆಡಿಕಂಡ್, ಎದುರಾಳಿಗೆ ಆಟನ ಬುಟ್ಟುಕೊಡದೆ ಗೆಲ್ಲ್‌ವ ನಿಸ್ಸಿಮರ್ ಇದ್ದವೆ. ಇಂತ ಆಟಕೆ ಬವುಮಾನ ಎಂತ ಇರ್‌ದುಲೆ. ಗೆಲ್ಲುದೇ ಪ್ರತಿಸ್ಟೆನ ಸಂಕೇತ. ಅಲ್ಲದೆ ಗೆದ್ದವ್‌ಕೆ ಸೋತವರ ಆಗಾಗ ಹಂಗ್‌ಸಿಕೆ ಒಂದ್ ಅವಕಾಸನೂ ಆದೆ. ತಾಳ್ಮೆ ಮತ್ತೆ ಚಾಣಾಕ್ಷತನ ಎರಡೂ ಸೇರಿ ಆವ ಈ ಆಟ ಸುದ್ದ ಆಗಿ ಮಕ್ಕಳ್‌ದ್ ಅದರ್‌ಲು ಹೆಣ್ಣ್ ಮಕ್ಕಳ್‌ದ್. ಬೆರ್‌ಲ್ ಚುರ್‌ಕುನ ಚಲನೆ, ಚುರುಕುತನ, ಉದ್ದ, ಅಗಲ ಮತ್ತೆ ಎತ್ತರಗಳ ಅಂದಾಜ್ ಕಲ್ಲಾಟದ ವಿಸೇಸತೆ. (ಪಿ.ಬಿ.)

**ಕಳ್ಳ ಪೋಲೀಸಾಟ :** ಕಳ್ಳ ಪೋಲಿಸ್ ಮನೆ ಒಳೆಗೆ ಅಲ್ಲೊ ಕುದ್‌ದ್‌ಕಂಡ್ ಆಡ್‌ವ ಆಟ. ಈ ಆಟಕೆ ಒಟ್ಟು ಆರ್ ಜೆನಂಗ ಬೇಕ್. ಕಾಗದದ ಚೀಟಿಗಳ್‌ಲಿ ಅರಸು, ಪ್ರದಾನಿ, ವೈದ್ಯ, ಸೈನಿಕ, ಪೋಲೀಸ್ ಮತ್ತೆ ಕಳ್ಳ ತೇಳಿ ಬರ್‌ದ್ ಮೊಡ್‌ಚಿ ಅದರ ಬೆರ್‌ಕೆ ಮಾಡಿ ಮೇಲೆ ಎಲ್ಲವ್ ಒಂದೊಂದ್ ಚೀಟಿ ತಕೋಣಕು. ಪೋಲೀಸ್ ತೇಳಿ




ಬಂದಂವ 'ಕಳ್ಳ' ತೇಳಿ ಬಂದಂವನ ಮೋರೆ ಬಾವ ನೋಡಿದ್ ಕಂಡ್ ಹಿಡಿಯೋಕು. ತಪ್ಪಾಗಿ ಹೋಗಿ ಬೇರೆವರ ಹಿಡ್‌ದರೆ ಎಲ್ಲವೂ ಸೇರಿ ಪೋಲೀಸ್‌ಗೆ ಹೊಡ್‌ದವೆ. (ಪಿ.ಬಿ.)

**ಅಟ್ಟಿಮುಟ್ಟಿ :** ಇದ್ದಸ್ಟ್ ಜೆನ ಸುತ್ತಕೆ ಕುದ್ದ್ ಎಲ್ಲವ್ ತಮ್ಮ ಕೈನ ನೆಲದ ಮೇಲೆ ಕವಚಿ ಇಸೊಕು. ಒಬ್ಬ ಕಾಗಡೆ ಸಾಲುಗಳ್‌ನ ಹೇಳಿಕಂಡ್ ಹೋದೆ, ಒಂದೊಂದ್ ಪದಕೆ ಒಂದೊಂದ್ ಕೈನ ಮುಟ್ಟಿಕಂಡ್ ಹೋದೆ.

ಅಟ್ಟಾ ಮುಟ್ಟಾ ತಣ್ಣಾದೇವಿ
ನಿನ್ನ ಗಂಡ ಎಲ್ಲಿಗೆ ಹೋತ್
ಮಲ್ಲಪ್ಪ ನಾಯ್ಕನ ಕೇರಿಗೆ ಹೋತ್
ಏನ್ ತಾತ್
ಎರಡ್ ಗಿಣಿ ತಂದ ಚಂದ್ರ ಸಾಲೆಯೋ

'ಸಾಲೆಯೋ' ತೇಳಿಕನ ಯಾರ ಕೈನ ಮುಟ್ಟಿದೆನೋ ಅಂವ ತನ್ನ ಕೈನ ಅಂಗೈ ಮೇಲಾಗಿ ಇಸೊಕು. ಹಿಂಗೆ ಮುಂದುವರ್‌ದ್ ಒಂದ್ ಹಂತಲಿ ಎಲ್ಲರ ಅಂಗೈ ಮೇಲೆ ಆಗಿದ್ದದೆ. ಹಾಡ್ ಮತ್ತೂ ಮುಂದುವರಿಯಕನ, 'ಸಾಲೆಯೋ? ತೇಳ್‌ದಂವ ತನ್ನ ಕೈನ ಹಿಂದೆಗೆ ಎಳ್‌ಕಣಕಾದೆ. ಯಾರ್ ಕಡೆವರೆಗೆ ಒಳ್‌ದದೋ ಅಂವ ಗೆದ್ದಂಗೆ.

**ಹಿಡಿವ ಆಟ :** ಇದ್ ಬಾರಿ, ಸುಲಬದ ಆಟ. ಇರ್‌ವಸ್ಟ್ ಮಕ್ಕ ಎಲ್ಲ ಒಂದ್ ಕೋಣೆಲಿ ಸೇರಿಕಂಡ್ ಬಾಗ್‌ಲ್‌ನ ಹಾಕಂಡವೆ. ಒಬ್ಬ ಹೈದನ ಕಣ್ಣ್‌ಗೆ ಬಟ್ಟೆ ಕಟ್ಟುವೆ. ಒಳ್ದವು ಸದ್ದಿಲ್ಲದೆ ಕೋಣೆಲಿ ಅಚೀಚೆ ಓಡಾಡ್‌ವೆ. ಹಿಡಿಯವಂವ ಸೂಸ್ಮಲಿ ಒಳ್‌ದವ್ ಇರುದರ್‌ನ ನೋಡಿ, ಅವರ ಮುಟ್ಟೋಕು. ತುಂಬಾ ಹೊತ್ತು ಅಂವ ಪರದಾಡಿಕಂಡ್ ಇದ್ದದೆ. ಇದರ 'ಹಿಡೆವಾಟ' ತೇಳ್‌ವೆ. ಬಾಗಿಲ್ ಕಿಟ್‌ಕೆಗ ಎಲ್ಲ ಮುಚ್ಚಿ ಕೋಣೆನ ಇಡಿ ಕತ್ತಲೆ ಮಾಡಿದ್ 'ಹಿಡೆವಾಟ' ಆಡ್‌ವೆ. ಇಲ್ಲಿ ಹಿಡಿಯುವಂವನ ಕಣ್ಣ್‌ಗೆ ಬಟ್ಟೆ ಕಟ್ಟೋಕುತ ಇಲ್ಲೆ. ಇಂತ ಆಟಗಳಿಗೆ ಹಿರಿಯರ್ ಒಪ್ಪ್‌ಗೆ ಕೊಡದ ಕಾರಣ ಮಕ್ಕ ಕದ್ದ್‌ಮುಚ್ಚಿ ಆಡ್‌ವೆ. (ಪಿ.ಬಿ.)

**ಕಡ್ಡಿ ಆಟ :** ಇದ್ ಸಾಮಾನ್ಯ ಇಬ್ಬೊರ್ ಆಡ್‌ವ ಆಟ, ಮಾಯ್‌ಪುನ ಸೂಡಿನ ಕಡ್ಡಿಗಳ ತಂದ್ ಸುಮಾರ್ ಮೂರ್ ಅಂಗುಲದಸ್ಟ್ ಉದ್ದಕೆ ಅದರ ತುಂಡ್ ಮಾಡಿ, 20ರಸ್ಟ್ ಕಡ್ಡಿ ಮಾಡ್‌ವೆ. ಅವೆಲ್ಲನೂ ಒಟ್ಟಿಗೆ ಜೋಡ್‌ಸಿ, ಒಂದ್ ಕೊಡಿಲಿ ಹಿಡ್‌ದ್ ಇನ್ನೊಂದ್ ಕೊಡಿನ ನೆಲಕೆ ತಾಂಗ್‌ಸಿ ಬುಟ್ಟು ಬುಟ್ಟವೆ. ಕಡ್ಡಿಗೆಲ್ಲ ಒಂದರ ಮೇಲೊಂದರಂಗೆ ಬಿದ್ದವೆ. ಆ ಎಲ್ಲ ಕಡ್ಡಿಗಳ ತೆಗಿಯಕಾಕನ ಇನ್ನೊಂದ್ ಕಡ್ಡಿ ಅಲ್ಲಾಡದಂಗೆ ಎಚ್ಚರಿಕೆ ವಹಿಸಿಕಂಡ್ ತೆಗೆಕು. ಕಡ್ಡಿ ತೆಗೆಕಾಕನ ಅಲ್‌ಗಾಡಿದರೆ ಆಟ ಎದುರಾಳಿಗೆ ಹೋದೆ. ತಾಳ್ಮೆ ಮತ್ತೆ ಎಚ್ಚರ ಇಲ್ಲಿ ಅಗತ್ಯ. ಅದರೊಟ್ಟಿಗೆ ಕೈ ಅಲ್‌ಗದಾಂಗೆ ದೈರನೂ ಮುಕ್ಯ. (ಪಿ.ಬಿ.)

**ನೆಂಟ್ರ್ ಬಾವಾಟ :** ಮನೆಗೆ ನೆಂಟ್ರ್ ಬಾದರ ಸೂಸ್ಮಲಿ ಗಮನ್ಸ್‌ವ ಮಕ್ಕ ಇದರ ನೋಡಿಕಂಡ್ ಈ ಆಟನ ಆಡ್‌ವೆ. ಕೋಂಬರೆಲಿ ಸೇರ್‌ವ ಮಕ್ಕಳ್‌ಲಿ ಕೆಲವ್ ನೆಂಟ್ರ್‌ತೇಳಿನೂ, ಕೆಲವ್ ಮನೆಯವು ತೇಳಿನೂ ನಿತ್‌ಕಂಡವೆ. ಮನೆವಾಗಿರ್‌ವ ಮಕ್ಕಳ್‌ಲಿ ಗಂಡ–ಹೆಂಡತಿ ಮತ್ತೆ ಮಕ್ಕ ತೇಳಿ ಮತ್ತೂ ಬಾಗ ಆದವೆ. ಗಂಡ ಉಂಬಕೆ ಹಾಕಿದೆ. ಹೆಣ್ಣ್ ನೀರ್ ತಂದದೆ, ಮಕ್ಕ ಸೌದೆ ತಂದವೆ. ಕಾಯಿಚಿಪ್ಪಿಲಿ ಮೊಣ್ಣ್ ಹಾಕಿ ನೀರ್‌ಲಿ ಕಲ್‌ಸಿ, ಸೊಪ್ಪು ಮೇಲೆ ಇಸಿ, ಇಳ್‌ಸಿ,, ಬೆತರ್ ಚೀಂಟಿ ಕಣ್‌ವ ಹೊತ್ತ್‌ಲಿ ನೆಂಟ್‌ರ್ ಬಂದವೆ. ಅವರ ಮಣೆಲಿ ಕುದ್ರ್‌ಸಿ ಕೈಕಾಲ್ ತೊಳಿಯಕೆ ನೀರ್ ಕೊಟ್ಟು, ಕುಡಿಯಕೆ ಬೇಕಾಂತೇಳಿ ಕೇಳಿಕಂಡ್, 'ಉಂಬಕ್ಕೇಳಿ'ತ ಕೇಳಿ, ಎದ್ರ್‌ಸಿ, ಕುದ್ರ್‌ಸುವೆ.

ಸೊಪ್ಪುಗೆ ಮೊಣ್ಣ್‌ನೇ ರೊಟ್ಟಿ ತೇಳಿ ಬಳ್‌ಸುವೆ. ಇಂದ್ ನಿತ್ತ್ ನಾಳೆ ಹೋಕೆ ಒತ್ತಾಯ ಮಾಡ್‌ವೆ. ಒಪ್ಪದ ನೆಂಟ್ರ್ ವಾಪಾಸ್ ಹೋದವೆ. ಗಂಡ ಹೆಣ್ಣ್ ಮಕ್ಕ ನೆಂಟ್‌ರ್‌ನ ಕಳ್‌ಸಿ ನಿಟ್ಟುಸಿರು ಬುಟ್ಟವೆ. ಸಣ್ಣ ಮಕ್ಕ ತಮ್ಮ ಮನೆಲಿ ನಡೆವಂತಹ ಎಲ್ಲಾ ಕೆಲಸಲಿನು ಕೂಡಾ ಸೂಸ್ಮ ಆಗಿ ಗಮನ್‌ಸ್‌ವೆ ಮತ್ತೆ ಆಟಲಿ ಅದರ ಅನುಸರ್‌ಸ್‌ವೆ. ಮಕ್ಕಳ ಆಟಲಿ ಈ ತರದ ಅನುಕರಣೆ ಮಾಮೂಲಿ ಇದ್ದದೆ.. (ಪಿ.ಬಿ.)

ಗಂಡಸ್ ಮತ್ತೆ ಹೆಣ್ಮಕ್ಕಳ್‌ಲಿ ಹೇಳಿಕಂಬಂತ ಒಳಾಂಗಣ ಆಟಗ ಯಾದು ಇಲ್ಲೆ. ಚೆನ್ನೆಮಣೆಯಾಟ ಅಲ್ಲೊ ಆಳುಳಿ ಮಣೆಯಾಟನ ಆಡ್‌ವೆ. ಅದರ ಈಗಾಗಲೇ ವಿವರ್‌ಸಿ ಹೇಳಿಯೊಲೊ. ಇಸ್ಪೀಟು, ಕೇರಂ ಇಂತೆಲ್ಲ ನಾಗರಿಕ ಆಟಗ ನಿದಾನ ಆಗಿ ಜೆನಪ್ರಿಯ ಆಗತುಟ್ಟ್. ವಿದ್ಯಾಬ್ಯಾಸ ಹೆಚ್ಚಾದಂಗೆ ಒಳಾಂಗಣ ಆಟಗ ಹಿಂದೆಗೆ ಹೋಗ್‌ತ ಒಳೊ. ಅವುಗಳ ಬದಲ್‌ಗೆ ನಾಗರಿಕ ಆಟಗ ಜೆನಪ್ರಿಯ ಆಗತುಟ್ಟ್.

**ಹೊರಾಂಗಣ ಆಟಗ :** ಹೊರಾಂಗಣ ಆಟಗಳ್‌ಲಿ ಗಂಡ್‌ಸರ್‌ಗೂ, ಮಕ್ಕಳಿಗೂ ಸಮಾನ ಸ್ತಾನ ಉಟ್ಟು. ಹೆಣ್ಮಕ ಕೂಡ್‌ದು ಕಡಿಮೆ ತೇಳಿನೇ ಹೇಳಕ್.

**ಮಕ್ಕಳ ಹೊರಾಂಗಣ ಆಟಗ :** ಮಕ್ಕಳ ಹೊರಾಂಗಣ ಆಟಗಳ್‌ಲಿ ಪೊಲ್ಲಿ ಹಿಡಿದು, ಕಣ್ಣು ಮುಚ್ಚಾಲೆ, ಗುಂಡಿಕಲ್ಲ್, ಚಿಬಿಲೆ(ಕುಂಟಾಬಿಲ್ಲೆ), ಉಪ್ಪುಗೋಣಿ, ನೋಂಡಿ ಮತ್ತೆ ಕಬಡ್ಡಿ ಬಾರಿ ಮುಕ್ಯದ್ದ್.

**ಪೊಲ್ಲಿ ಹಿಡಿದು :** ಕಮ್ಮಿಲಿ ನಾಕ್ ಜೆನ ಮಕ್ಕ ಇಜ್ಜಲ್‌ಲಿ ಸೇರ್‌ವೆ. ಇಬ್ಬೊರ್ ಎದುರ್ ಬದ್‌ರಾಗಿ ನಿತ್ತ್ ಅವರವರ ಎಡ್ಡ್ ಕೈಗಳ್‌ಂದ ಗಟ್ಟಿ ಆಗಿ ಹಿಡ್‌ದ್ 'ಪೊಲ್ಲಿ ಬುಡ್‌ಸೊವ್ ಬನ್ನಿ' ತೇಳಿ ಸವಾಲ್ ಹಾಕುವೆ. ಹೊರಗಿದ್ದವು ಸವಾಲ್‌ನ ಸ್ವೀಕರ್‌ಸಿರೆ ಕೈಗಳ ಬುಡ್‌ಸೋಕು ಇಲ್ಲರೇ ಸೋಲೊಪ್ಪಿಕಣೋಕು.

ಕೈಗಳ ಮೇಲೆ ಬಿದ್ದ್ ಕೈಗಳ ಬುಡ್‌ಸಿಕೆ ಹೊರಟರೆ, ಪೊಲ್ಲಿ ಹಿಡ್‌ದವು ಅಂವನ ಬೆನ್ನ್‌ಗೆ ಲಾಯಿಕ್ ಗುದ್ದುವೆ. ಈ ಪೆಟ್ಟ್‌ನ ಸಯಿಸಿಕಂಡ್ ಕೈಗಳ ಬುಡ್‌ಸಿರೆ ಪೊಲ್ಲಿ ಹಿಡ್‌ದವ್ ಸೋತಂಗೆ. ಸರೀರ ಗಟ್ಟಿ ಮುಟ್ಟಾಗಿರುವ್‌ಕೆ ಮಾತ್ರ ಇದ್ ಸುಲಬದ ಆಟ, ಮೈಕೈ ಎಲ್ಲಾ ಬೇನೆ ಮಾಡಿಕಂಬೊದರ ಒಟ್ಟಿಗೆ ಕೈ ಮುರ್‌ದ್ ಹೋದೂ ಉಟ್ಟು, ಆದರೆ ಪೌರುಸ ತೋರ್‌ಸಿಕೆ ಇದ್ ಒಳ್ಳ ಅವಕಾಸ. ಮೊದ್‌ವೆ

ಮನೆಗಳ್‌ಲಿ ಹೈದಂಗ ಈ ಆಟನ ಆಡ್‌ವೆ. ಪೊಲ್ಲಿ ಗೋಡೆನ ಗಟ್ಟಿಯಾಗಿ ಹಿಡ್‌ದಂಗೆ, ಇಬ್ಬೊರ್ ಕೈಗಳ ಹಿಡಿದರ್‌ಂದ 'ಪೊಲ್ಲಿ ಹಿಡಿದು' ತೇಳ್‌ವ ಹೆಸರ್ ಬಂದುಟು. (ಪಿ.ಬಿ.)

**ಕಣ್ಣ್ ಮುಚ್ಚಾಲೆ :** ಕಣ್ಣ್ ಮುಚ್ಚಾಲೆ ಇದ್ ತುಂಬ ಜನಪ್ರಿಯ ಆಟ. ಈ ಆಟಲಿ ಮಕ್ಕ ಹೆಚ್ಚ್ ಕುಸಿ ಪಟ್ಟವೆ. ಸಾಮಾನ್ಯ ಆಗಿ ಮನೆಲಿರ್‌ವ ಅಜ್ಜಿಕ ಈ ಆಟದ ಕೇಂದ್ರ ಆಗಿದ್ದದೆ.

ಮಕ್ಕ ಎಲ್ಲ ಸೇರಿ ಹಿಡಿವ ಒಬ್ಬಳ ಅಲ್ಲರೆ ಒಬ್ಬನ ಆಯ್ಕೆ ಮಾಡ್‌ವೆ, ಅಜ್ಜಿ ಅಂವನ ಅಲ್ಲರೆ ಅವಳ ಕಣ್ಣ್‌ನ ಮುಚ್ಚಿ ಬುಟ್ಟು

'ಕಣ್ಣೇಮುಚ್ಚೇ
ಕಾಡೇಗೂಡ
ಮುದ್ದಿನ ಮೂಟೆ
ಉರುಳೇ ಹೋತ್
ನಮ್ಮಯ ಹಕ್ಕಿ
ಬುಟ್ಟೇ ಬುಟ್ಟೇ
ನಿಮ್ಮಯ ಹಕ್ಕಿ ಅಣ್‌ಗಿಸಿ ಕಣಿ

ಬುಟ್‌ನೆ ಹಕ್ಕಿನ. ಪುರ್‌ರ್‌ರ್‌ರಾ...ತ ಹೇಳಿ ಕಣ್ಣ್‌ಂದ ಕೈ ತೆಗ್‌ದದ್. ಅಷ್ಟ್ ಹೊತ್ತ್‌ಗೆ ಒಳ್‌ದ ಮಕ್ಕ ಎಲ್ಲ ಎಲ್ಲೆಲ್ಲೋ ಅಣ್‌ಂಗಿದ್ದವೆ. ಅವರ ಕಂಡ್‌ಡಿವ ಕೆಲ್‌ಸ. ಅಣ್‌ಂಗಿದವು ಬಂದ್ ಅಜ್ಜಿನ ಮುಟ್ಟಿರೆ ಅವು ಗೆದ್ದಂಗೆ. ಅಜ್ಜಿನ ಮುಟ್ಟಿಕೆ ಮುಂದೆ ಇವು ಮುಟ್ಟಿರೆ ಅಂವ ಸೋತಂಗೆ. ಯಾರ್‌ನೂ ಮುಟ್ಟಿಕಾಗದಿದ್ದರೆ ಅಜ್ಜಿಂದ ಕಣ್ಣ್ ಮುಚ್ಚಿಸಿಕಂಡ್ ಹಕ್ಕಿ ಆದಂವ ಮತ್ತೆ ಅಜ್ಜಿನೊಟ್ಟ್‌ಗೆ ಕುದ್ದ್ ಕಣ್ಣ್‌ಮುಚ್ಚಿಸಿಕಂಡ್ ಕಣ್ಣೇಮುಚ್ಚೇಗೆ ತಯಾರಾದೆ. ಹಕ್ಕಿ ಸೋಲ್‌ತನೇ ಇದ್ದರೆ ಅಜ್ಜಿ ಹಕ್ಕಿಗೆ ಕಿಬಿಲಿ ಉಪಾಯ ಹೇಳಿಕೊಟ್ಟದೆ. ಈ ಆಟಲಿ ಜಾಣತನ ಮತ್ತೆ ಓಟಗಾರಿಕೆ ಎರ್‌ಡೂ ಉಟ್ಟು.

**ಗುಂಡಿಕಲ್ಲ್ :** ಇದ್ ಹಳ್ಳಲಿ ಆಡ್‌ವ ಆಟ, ಸುಮಾರ್ 10 ಅಡಿ ಗುಂಡಿಗೆ ಲಾಯಿಕ್ ಗುರ್‌ತ ಹಿಡಿವಂತ ಒಂದ್ ಕಲ್ಲ್‌ನ ಇಟ್ಟವೆ. ಸಾಹಸಿಗ ಮುಳ್‌ಂಗಿ ಆ ಕಲ್ಲ್‌ನ ಎತ್ತಿ ತೋರ್‌ಸೋಕು.

ಹಳ್ಳಲಿ ಮುಳ್‌ಂಗಿ ನೆಲಂದ ಪೊಯ್ಯೆನ ನೇಚಿ ತಾವವ್ ಸನ ಸಾಹಸಿಗತೇಳಿದೆ ಗುರ್‌ತ್‌ಸುವೆ. ನಿರ್‌ದಿಷ್ಟ ಜಾಗೆನ ಈಜಿ ಮುಟ್ಟಿಕೆ ಪಂತ ಕಟ್ಟಿಕೊಟ್ಟ್ ಮೀಸಿ ಗೆಲ್ಲುದೂ ಒಂದ್ ತರದ ಆಟನೆ ಆಗುಟು.

**ಜಿಬ್‌ಲಿ (ಕುಂಟೊಬಿಲ್ಲೆ) :** ಇದರ ಹೆಚ್ಚಾಗಿ ಗೂಡೆಗಳೇ ಆಡ್‌ವೆ. ಚಪ್ಪಟೆನ ಕಲ್ಲ್ ಅಲ್ಲೊ ಮಡ್‌ಕೆ ಚೂರ್ ಇದ್‌ಕೆ ಅಗತ್ಯ ಆಗಿ ಬೇಕಾದ ಆಟದ ವಸ್ತು. ಇಜ್ಜಲ್‌ಲಿ ಸುಮಾರ್ ಆರ್ ಅಡಿ ಉದ್ದ ಮತ್ತೆ ನಾಕ್ ಅಡಿ ಆಯತ ಒಂದರ ಹಾಕಿ ಅದರ್‌ಲಿ ಆರ್ ಕೋಣೆಗಳ ಮಾಡೋಕು. ಆಯತಂದ ಹೊರಗೆ ನಿತ್ತ್. ಚಿಬಿಲೆ (ಚಪ್ಪಟೆಯಾದ ವಸ್ತು)ನ ಸುರೂನ ಕೋಣೆ ಒಳೆಗೆ ಇಡೊಕು. ಮತ್ತೆ ಒಂಟಿ ಕಾಲ್‌ಂದ ಕೋಣೆಗೆ ಹಾರಿ, ಜಿಬ್‌ಲಿ ತೆಕಂಡ್ 2, 3, 4, 5, 7ನೇ ಕೋಣೆಗಾಗಿ ಹಿಂದೆ ಬರೊಕು. ಒಂಟಿ ಕಾಲ್‌ನ ನೆಲಕೆ ಊರಿರೆ ಅಲ್ಲೊ ಚಿಬಿಲೆ ಒಂದ್ ಕೋಣೆಂದ ಇನ್ನೊಂದಕೆ ಹಾರ್‌ರೆ ಎದುರಾಳಿಗೆ ಆಟ ಬುಟ್ಟುಕೊಡೊಕು. ಎಲ್ಲಾ ಕೋಣೆಗು ಹೋಗಿ ಬಂದರೆ ಒಂದ್ ಆಟ ಆದೆ. ಐದ್ ಅಲ್ಲೊ ಹತ್ತ್ ಅಲ್ಲರೆ ಸುರುಗೆ ನಿಗದಿಪಡ್‌ಸಿದ ಸಂಕೆನ ಮುಟ್ಟಿರೆ ಆಟಲಿ ಗೆದ್ದವೆ, ಚಾತುರ್‌ಪು ಇಲ್ಲಿ ಅತೀ ಮುಕ್ಯ. ಈ ಆಟ ಹೆಣ್ಣ್ ಮಕ್ಕ ಮನೆ ಒಳೆಗೆ ಇದ್ದ್ ಮಾನಸಿಕ ಆಗಿ ತಯಾರಾದವೆ ತೇಳ್‌ದರ ಸಾಬೀತ್ ಪಡ್‌ಸಿದೆ. (ಪಿ.ಬಿ.)



ಜಿಬ್‌ಲಿ

**ಉಪ್ಪುಗೋಣಿಯಾಟ :** ಉಪ್ಪು ಗೋಣಿ ಒಬ್ಬೊನ ಬೆನ್ನ್ ಮೇಲೆ ಇನ್ನೊಬ್ಬ ಹತ್ತಿ ಕುದ್ರೋಕು. ನಿಗದಿಪಡ್‌ಸಿದ ಜಾಗೆವರೆಗೆ ಅಂವನ ಒಬ್ಬ ಹೊತ್ತದೆ. ಅದಾಗಿ ಪಾತ್ರಗಳ ಬದಲಾಯಿಸ್‌ವೆ. ಬೆನ್ನ್‌ಲಿ ಹೊತ್ತ್‌ಕಂಡ ಹೋವವ ಉಪ್ಪು ತುರ್‌ಕ್ ಉಪ್ಪು ತುರ್‌ಕ್ ತ ಹೇಳಿಕಂಡ್ ಹೋದೆ. ಉಪ್ಪು ಗೋಣಿನ ಹೊರ್‌ವ ಮಾದರಿಲಿ ಇವ್‌ನು ಹೊರ್‌ದರ್‌ಂದ ಉಪ್ಪುಗೋಣಿ ತೇಳುವ ಹೆಸರ್ ಬಂದುಟು. (ಪಿ.ಬಿ.)

**ನೋಂಡಿ :** ಇದ್ ಮಕ್ಕ ಆಡ್‌ವ ಆಟ. ಸಾಕಷ್ಟ್ ದೊಡ್ಡದರ್‌ಲಿ ಉರುಟು ಬರ್‌ದ್, ಅದರೊಳಗೆ ಮಕ್ಕ ಎಲ್ಲ ಸೇರ್‌ವೆ. ಒಬ್ಬಾತ ಒಂಟಿ ಕಾಲ್‌ಲಿ ಓಡಾಡಿಕಂಡ್ ಅವರ ಮುಟ್ಟೋಕು. ಕಾಲ್ ನೆಲಕ್ಕೆ ಮುಟ್ಟದಂಗೆ ಎಚ್ಚರಿಕೆಲಿ ಇರೊಕು. ಇಡೀ ದೇಹನ ಹಿಡ್‌ತಲಿ ಇಸಿಕಂಡ್ ಬೇಗ ಬೇಗ ಓಡಾಡಿಕಂಡ್ ಬೇರೆವರ ಮುಟ್ಟೊಕಾದೆ. ಬೇಗ ಯಾರ್ ಎಲ್ಲರ್‌ನೂ ಮುಟ್ಟಿಕೆ ಸಾದ್ಯ ಆದೆನೋ ಅಂವ/ಅವ್‌ಳ್ ಗೆದ್ದಂಗೆ.

**ಕಬಡ್ಡಿ ಆಟ :** ಹಳ್ಳಿ ಹೈದಂಗ ಏಳ್‌ಜೆನರ ಎರಡ್ ಗುಂಪು ಮಾಡಿಕಂಡ್, ಕಬಡ್ಡಿ ಆಡ್‌ವೆ. ಈಗ ಕಬಡ್ಡಿ ರಾಷ್ಟ್ರೀಯ ಆಟ ಆಗುಟು. ಆಡಿಕನ ಕಬಡ್ಡಿ, ಕಬಡ್ಡಿ ಕಬಡ್ಡಿಂತೇಳುವ ಬದಲ್ ಡುಡೂ ತೇಳಿ ಕೂಡಾ ಹೇಳ್‌ವೆ. ಈ ಆಟಗ ಅಲ್ಲದೆ ತುಳುನಾಡ್‌ನ ಬೇರೆ ಕಡೆಗಳ್‌ಲಿ ಇರ್‌ವಂಗೆ ಪುಣಚ್ಚೆಲ್, ದನಹುಲಿ, ನೇತಾಟ, ಕಪ್ಪೆಲಾಗ, ಕಣಹಲಗೆ, ಹೋಲಿಯಾಟ, ಕೊರಡೆ ಆಟ, ಬಡಿ ಆಟ ಇಂತೆಲ್ಲ ಹೊರಾಂಗಣ ಆಟಗ ಸನಾ ಅರೆಬಾಸೆ ಪರಿಸರಲಿ ಉಟ್ಟು. (ಪಿ.ಬಿ.)





**ಕಾಯಿ ಕುಟ್ಟುದು :** ನಿಗದಿಪಡ್‌ಸಿದ ದಿನದಂದ್ ಪಂತ ಆಡೊವ್ ಕಾಯಿನ ಹಿಡ್‌ಕಂಡ್ ನಿಗಂಟ್ ಮಾಡ್‌ದ ಜಾಗೆಗೆ ಬಂದವೆ. ಆಡೊವ್ ಒಬ್ಬಂದೊಬ್ಬ ಎದುರ ಬದುರ ನಿತ್ತ್ ಇಬ್ಬರ್‌ಲಿ ಒಬ್ಬ ಅಂವ ತಂದ ಕಾಯಿನ ನೆಲಲಿ ಒತ್ತಿ ಹಿಡ್‌ದದೆ. ಇನ್ನೊಬ್ಬ ಅಂವನ ಕಾಯಿಂದ ನೆಲಲಿ ಒತ್ತಿ ಹಿಡ್‌ದ ಕಾಯಿಗೆ ಬಲ ಮಾಡಿ ಕುಟ್ಟಿದೆ. ಈ ಕುಟ್ಟುವದರ್‌ಲಿ ಯಾರ ಕಾಯಿ ಒಡ್‌ದ್ ಹೋದೆನೋ, ಅಂವ ಸೋತಂಗೆ. ಮತ್ತೆ ಒಡ್‌ದ ಕಾಯಿನ ಅವು ಗೆದ್ದವ್‌ಕೆ ಕೊಡೊಕು. ಈ ಕಾಯಿ ಕಟ್ಟುವದರ್‌ಲಿ ಎರ್‌ಡ್ ಬೇದ ಉಟ್ಟು, ದಾರೆ ಹಿಡ್‌ದ್ ಮತ್ತೆ ಹೊಟ್ಟೆ ಹಿಡಿದು. ಕಾಯಿನ ಹೊರಬಾಗಲಿರ್‌ವ ಕಟ್ಟಕೆ ಕಟ್ಟಂದಳೆ ಕುಟ್ಟಿರೆ ಅದ್ 'ದಾರೆ ಹಿಡಿದು' ತೇಳಿ ಕರ್‌ಸಿಕಂಡದೆ. ಕಟ್ಟನ ಬುಟ್ಟು ಬೇರೆ ಬಾಗಕೆ ತಾಂಗ್‌ಸಿರೆ ಅದ್ 'ಹೊಟ್ಟೆಗೆ ಹಿಡಿದು ತಾದೆ'. ಈ ಪಂತನ ನೋಡಿಕೆ ನೂರಾರ್ ಜೆನ ಬಂದ್ ಸೇರ್‌ವೆ. (ಪಿ.ಬಿ.)

**ಕಾಯಿ ಗುದ್ದುದು :** ಚೊಲ್ಲಿದ ಕಾಯಿನ ಬರಿ ನೆಲಲಿ ಇಸಿ, ಬರಿ ಕೈಯಿಂದ ಅದ್‌ಕೆ ಗುದ್ದೊಕು. ಯಾರ ಪೆಟ್ಟಿಗೆ ಕಾಯಿ ಬಾಗ್ ಆದೆನೊ, ಅವಂಗೆ ಆ ಕಾಯಿ ಸಿಕ್ಕಿದೆ. ಸಣ್ಣ ಸಣ್ಣ ಅಂಗಡಿ ಅಲ್ಲರೆ ಹೋಟೇಲ್‌ಗಳ ಮಾಲೀಕರ್, ಕಾಯಿನ ಇಜ್ಜಲ್‌ಲಿ ಇಸಿ ಆಡೊವ್‌ಕೆ ಜಾಗೆ ಮಾಡಿಕೊಟ್ಟವೆ. ಪ್ರತಿ ಗುದ್ದುದಕು ನಿಗದಿಪಡ್‌ಸಿದ ಮೊತ್ತನ ವಸೂಲಿ ಮಾಡ್‌ವೆ. ಇದರ್‌ಂದಾಗಿ ಯಾರ್ ಕಾಯಿನ ಇಸಿದೆನೊ ಅವಂಗೆ ನಸ್ಟ ಆದುಲೆ. ಇದರ ಹಿರಿಯರ್ ಮತ್ತೆ ಹೈದಂಗ ಆಡ್‌ವೆ.

**ಕಾಯಿಗೆ ಕಲ್ಲ್‌ಲಿ ಗುರಿ ಹೊಡಿದು :** ಇದ್ ಇಜ್ಜಾಲ್‌ಲಿ ಆಡ್‌ವ ಆಟ. ಸುಮಾರ್ 15ರ್‌ಂದ 20 ಅಡಿ ದೂರಲಿ ಕಾಯಿನ ಇಸಿ ಅದ್‌ಕೆ ಕಲ್ಲ್ ಹೊಡೆಯಕೆ ಪಂತಲಿ ಸೇರ್‌ದವ್‌ಕೆ ಹೇಳ್‌ವೆ. ನಿಗದಿಪಡಿಸಿದ ದುಡ್ಡು ಕೊಟ್ಟು ಪಂತ ಕಟ್ಟಿದ್ ಆಡೊವು ಕಲ್ಲ್‌ಲಿ ಗುರಿ ಇಸಿ ಹೊಡ್‌ದವೆ. ಯಾರ ಕಲ್ಲ್‌ಗೆ ತಾಂಗಿ ಕಾಯಿ ಒಡ್ದದೆನೋ ಅವಂಗೆ ಅದ್ ಸಂದಾಯ ಆದೆ. ಇದ್ ಹೈದಂಗ ಮತ್ತೆ ಹಿರಿಯವು ಆಡ್‌ವ ಆಟ.

ಹಿಂಗೆ ಸುಳ್ಯ ಪರಿಸರದ ಅರೆಬಾಸಿಗರ್ ಸುಮಾರ್ ಬಗೆನ ಆಟಗಳ್‌ನ ಆಡ್‌ವೆ. ಇದರ್‌ಲಿ ಮಕ್ಕಳ ಆಟಗಳ ಸಂಕೆನೆ ಹೆಚ್ಚಿ ಉಟ್ಟು. ಹಾಂಗೆ ಹೆಣ್ಮಕ್ಕಳ್‌ಗೆ ತೇಳಿದೆ ಇರ್‌ವ ಆಟಗ ಯಾದೂ ಇಲ್ಲೆ. ಕಣ್ಣ್ ಮುಚ್ಚಾಲೆ ಆಟಲಿ ಅಜ್ಜಿನ ಪಾತ್ರ ಬುಟ್ಟರೆ, ಇತರ ಆಟಗಳ್‌ಲಿ ಯಾದೇ ಹೆಣ್ಮಕ್ಕಳ ಅಗತ್ಯನೂ ಇಲ್ಲೆ. ನೆರೆಕರೆಲಿ ಸಿಕ್ಕುವ ಸಾಮಾನ್‌ಗ ಸ ಇಲ್ಲಿ ಪ್ರದಾನ ಪಾತ್ರ ವಯ್‌ಸಿದೆ. ಅಂದರೆ ನೆರೆಕೆರೆಲೆ ಸಿಕ್ಕುವ ಕಲ್ಲ್, ಮಂಜಟಿ ಕಾಯಿ, ತೆಂಗಿನಕಾಯಿ, ಮೊಸಿ ಇಂತವೆಲ್ಲ ಆಟದ ವಸ್ತುಗ ಆಗೊಲೊ.

ಆದುನಿಕ ಶಿಕ್ಷಣದ ಸಂಪರ್‌ಕಂದ, ವೈಜ್ಞಾನಿಕತೆನ ಪ್ರಬಾವಂದ ಅರೆಬಾಸಿಗರ್‌ಲಿರುವ ಜನಪದ ಆಟಗ ತೀವ್ರಗತಿಲಿ ಮರೆ ಆಗ್‌ತುಟ್ಟ್. ತುಂಬ ದುಡ್ಡು ಕೊಟ್ಟ್ ತಂದ್ ಆಡ್‌ವ ಕಾಲ್ಚೆಂಡ್, ಕ್ರಿಕೆಟ್, ಬ್ಯಾಡ್ಮಿಂಟನ್ ಇಂತೆಲ್ಲ ಆಟಗ ಜನಪ್ರಿಯ ಆಗತುಟ್ಟು. ಅರೆಬಾಸಿಗ ಜನಪದ ಆಟಗಳ್‌ಲಿ ಹೆಚ್ಚಾಗಿ ಕಂಡ್ ಬಾವ ಬಿತ್ತ್‌ಗ, ಪ್ರಾಣಿಗ, ಮತ್ತೆ ಇತರ ಅಂಸಗಳ ಹಿಂಗೆ ಕೂಡ್‌ಸಕ್.

**ಬಿತ್ತ್‌ಗ :** ಮಂಜಟ್ಟಿ ಕಾಯಿ, ಕಾಯಿ(ತೆಂಗಿನ ಕಾಯಿ) ಗೇರ್ ಬೀಜಗ, ಮಾಯಿಣ ಕಾಯಿ, ಗಜ್ಜಗನ ಕಾಯಿ.

**ಜೀವಿಗ :** ಕಕ್ಕೆ, ಗಿಳಿ, ಕುರೆ, ದನ, ಕಪ್ಪೆ, ಕೋಳಿ, ಕೋಣ, ಎತ್ತ್, ಪೊಲ್ಲಿ

**ಇತರ :** ಗದ್ದೆಗ, ಕಲ್ಲ್‌ಗ, ಕಳ್ಳಪೋಲಿಸ್, ಮಾಯ್ಪುನ ಸೂಡಿ ಕಡ್ಡಿ, ನೆಂಟ್‌ರ್, ದೋಸೆ, ಮಡಿಕೆಚೂರು, ಉಪ್ಪು, ಅಂಗೈ–ಮುಂಗೈ ಹಿಂಗೆ ಅರೆಬಾಸಿಗ ಸಂಸ್ಕೃತಿನ ಒಂದ್ ಚಾತುರ್‌ಪುನ ಈ ಆಟಗ ತೋರ್‌ಸಿ ಕೊಟ್ಟವೆ. (ಪಿ.ಬಿ.)

**ಜೆನಪದ ದೆವ್ವಗ : ವೀರರ ಆರಾದನೆ :** ವೀರರ ಆರಾದನೆ ಬಾರಿ ಪಂಡ್‌ನ ಕಾಲಂದನೆ ನಡ್‌ದ್ ಬಂದುಟು. ದಕ್ಷಿಣ ಭಾರತನ ಗಮನ್‌ಸಿರೆ ಸಂಗಮಕಾಲದ ತಮಿಳ್‌ನ ಬಾರಿ ಪ್ರಾಚೀನ ಸಾಹಿತ್ಯಲಿ ವೀರರ ಆರಾದನೆಗಳ ಬಗ್ಗೆ ಉಲ್ಲೇಕ ಉಟ್ಟು. ಯುದ್ದಲಿ ಜೀವ ಕಳ್‌ಕಂಡ ವೀರರ ಹಾಡಿಹೊಗ್‌ಳೊ ಮತ್ತೆ ಅವರ ನೆಂಪುಗೆ ವೀರಗಲ್ಲ್‌ಗಳ ಕಟ್ಟ್‌ವ ಕ್ರಮ ಇತ್ತ್. (ಕುರುಪ್, ಕೆ. ಕೆ. ಎನ್ 1973, 18). ಕೇರಳದ ತೆಯ್ಯಮ್ ಆರಾದನೆ ಪ್ರಾಚೀನ ಯುದ್ದ ದೇವತೆ ಮುರುಗನ್ ಆರಾದನೆ, ವೀರರ ಆರಾದನೆ ಮತ್ತೆ ಆದಿಮ ಕಾಲದ ಜೆನಪದ ಕೊಣ್‌ತ ಇದೆಲ್ಲ ಒಂದ್ ಎರಕತೇಳಕ್. (ಅದೇ ಪು. 30), ತಮಿಳ್ ಮಹಾಕಾವ್ಯ ಸಿಲಪ್ಪದಿಕಾರಮ್‌ಲಿ ಹೇಳಿರ್‌ವ ಹಾಂಗೆ ಓರ್‌ವಾಕ ಕಾಳಿದ್ ದರ್‌ಸನದ ಪಾತ್ರಿ ಆವೇಸ ಬಂದ್ ದೇವತೆಗೆ ಕೆಲು ಸಮೆಗಂಟ ಬಲಿಕೊಡದ ಕಾರಣಕೆ ಅದ್ ಸಿಟ್ಟ್ ಮಾಡಿಕಂಡುಟುತ ಉಟ್ಟು. (ಕುರುಪ್, 1977, 21), ಯುದ್ದಲಿ ದುರಂತಕೆ ಒಳಗಾದವ್, ಕೊಲೆಯಾಗಿ, ಆತ್ಮಹತ್ಯೆ ಅಲ್ಲರೆ ಪ್ರಾಣತ್ಯಾಗ ಮಾಡಿ ದೆವ್ವತ್‌ವಕೆ ಏರ್‌ದ ಲೌಕಿಕ ವ್ಯಕ್ತಿಗಳ್‌ಲಿ ಕೋಟಿ ಚೆನ್ನಯ ವೀರ ಸೋದರರ್ ಮುಕ್ಯ ಆದವ್. 16ನೆ ಸತಮಾನಲಿ ಇದೇ ರೀತಿ ಪರಾಕ್ರಮನ ಮೆರೆದ ತಚ್ಚೋಳಿ ವದೆನಾನ್ ತೇಳ್‌ವ ನಾಯರ್ ವೀರರ್ ಇವರ ಸಾಲಿಗೆ ಸೇರ್‌ದವ್. ದೆವ್ವತ್ವಕ್ಕೇರ್‌ದ ವೀರರ್‌ಲಿ ಕೆಲೊವು ಇತ್ತೀಚೆನ ಇತಿಯಾಸ ಮೂಲ ಇರೊವ್. 18ನೆಯ ಸತಮಾನಲಿ ಟಿಪ್ಪು ಒಟ್ಟಿಗೆ ಹೋರಾಡ್‌ದ ಮುರಿಕಾಂಚೆರು ಕೇಳು ನಾಯರ್ (Murikkancheru Kelu Nayar) ತೇಳ್‌ವ ಒಬ್ಬ ಇಂತ ವೀರರ ಬಗ್ಗೆ ಐತಿಹ್ಯಗ ಅದಾಗಿ ಹುಟ್ಟಿಕಂಡಿರ್‌ದು. ಒಬ್ಬ ವೀರ ಹೋರಾಟಲಿ ಹುತಾತ್ಮ ಆದರೆ, ಆತ್ಮಹತ್ಯೆ ಮಾಡಿಕಂಡಿದ್ದರೆ ಇಲ್ಲೆ ಬೇರೆಯವರ್‌ಂದ ಕೊಲೆಯಾಗಿದ್ದರೆ ಅಂತವರ ವೀರರ್‌ತ ಕರ್‌ದವೆ. ಸುಳ್ಯ ಪರಿಸರಲಿ ಆರಾದನೆ ಮಾಡೊ ಜೋಡುಬೂತ' (ಅತವಾ ನಾಯರ್ ಬೂತ)ಗಳ ಹಿನ್ನೆಲೆಲಿ ಚಂದು ಚಾತುವೀರರಿಬ್ಬರ

ಇತಿಯಾಸ ಉಟ್ಟು. ಅವು ಕೇರಳಂದ ತುಳುನಾಡ್‌ಗೆ ವಲಸೆ ಬಂದವು. ಆದ್‌ರೆ ಅವರ ಮೂಲನ ಹೇಳಿಕನ ಬೇರೆ ಬೇರೆ ಜಾಗೆಗಳ್‌ಲಿ ಬೇರೆ ಬೇರೆ ಸಂದರ್ಬಗಳ್‌ಲಿ ಅವು ಮಾಯ ಆಗಿ ದೆವ್ವತ್ವಕೆ ಏರ್‌ದವ್‌ತ ಹೇಳ್‌ವೆ. ಹಂಗೆನೆ ಮೂಲ್ಕಿ ಪ್ರದೇಸದ ಉಳೆಪಾಡಿ – ಕೊಲ್ಲೂರುಲಿ ಆರಾದನೆ ಮಾಡ್‌ವ ಕಾಂತಾಬಾರೆ ಬೂದಾಬಾರೆ ಅವುಳಿ ಸೋದರ ವೀರರ್ ಮಾಯ ಆದವ್. ಬೂತಾರಾದನೆಲಿ ಇರ್‌ವಂಗೆ ಈ ವೀರರ ಆರಾದನೆ ಇಲ್ಲೆ. ಇವ್‌ಕೆ ದರ್‌ಸನ ಬೆಳ್ಚಪಾಡರ್ ಆಗಲಿ, ದೆವ್ವ ಕಟ್ಟೊವಾಗಲಿ ಇಲ್ಲೆ. ಹಂಗೆ ಆರಾದನೆ ಮಾಡ್‌ದಿರ್‌ದಕೆ ಅವ್ ಮಾಯ ಆದೇ ಕಾರಣತ ಹೇಳ್‌ವೆ. (ಕೂಕ್ರ ಬಂಗೇ 1992), ಮೊಯಿಂಸ ಒಬ್ಬ ಮಾಯಾಗಿ, ಇಲ್ಲೆ ಬೇರೆಯವರ್‌ಂದ ಮಾಯ ಆದರೆ ಮಾಯ ಲೋಕಕೆ ಸೇರಿ.

**ಆರಾದನೆ ಆವ ಸಂಗತಿ :** ಬೂತಾರಾದನೆನ ಪರಿಕಲ್ಪನೆಲಿ ಬಹು ಸಾಮಾನ್ಯ ಸಿರಿ ತಾನಾಗಿದೆ ಮಾಯ ಆದ್. ತನ್ನ ಮಜ್ಜ ಕುಮಾರನ, ಕೆಲ್‌ಸದ ಹೆಂಗ್‌ಸಾದ ದಾರುನ ಮಾಯಮಾಡಿ ಅವ್‌ಕೆ ಅಲೌಕಿಕ ಜಗತ್ತ್ ಲಿ ಜಾಗೆಕೊಟ್ಟಥ್‌ತ ಹೇಳಿವೆ. ಬಹುಸ ನಿಜಸಂಗತಿನ ಮರ್‌ಸಿಕೆ ಮಾಯ ಆವ ಕಲ್ಪನೆ ಹುಟ್ಟಿಕೊಂಡಿರ್‌ದುತ ಆಯಾ ಜೆನರ ಹಿರಿಮೆನ ಹಾಡಿ ಹೊಗ್‌ಳ್‌ವ ಕಾಲಕ್ಕೆ ಇದ್ ನಡ್‌ದ ಸಾದ್ಯತೆ ಉಟ್ಟು. ಆರಾದನೆನ ಚೌಕಟ್ಟ್ ಮತ್ತೆ ನಂಬಿಕೆನ ಹಿನ್ನೆಲೆಗೆ ಸಮ್ಮಂದ ಇರ್‌ವ ಸಂಗತಿ ಇದ್. ತ ವೀರರ್‌ಗೆ ಅತಿಮಾನವತೆನೂ ಉಟ್ಟ್‌ಂತ ಹೇಳ್‌ವೆ. ಕಾಸರಗೋಡುಲಿ ಜೆನಪ್ರಿಯ ಆಗಿರ್‌ವ ಬಾಚನಾಗಲೀ, ಮೂಲ್ಕಿ ಪರಿಸರ ಇರ್‌ವ ಆಗೋಳಿ ಮಞ್ಞಣನಾಗಲಿ ಇಂತದೇ ವೆಕ್ತಿತ್‌ವ ಇರ್‌ವ ದಂಬೆಕಲ್ಲ್‌ನ, ಅಕ್ಕಿಮುಡಿ ಸಂಗ್ರಹ, ಬಿಳ್ಗಿಲ್ ರಾಸಿನ (ತುಪ್ಪೆ) ಒಬ್ಬನೇ ಹೊತ್ತ್ ತಂದೊತೇಳ್‌ವ ಕತೆಗ ಆಗ ಮೊನ್‌ಸನ ಹೊಗಳಿಕೆ ಹುಟ್ಟಿಕಂಡಿರ್‌ದುತ ಹೇಳ್‌ದರ್‌ಲಿ ಸಂಸಯ ಇಲ್ಲೆ. ಪಾಡ್ದನಲಿ ಕಾಂಬ ವೀರರ ಕಲ್ಪನೆಲಿ ಒಂದ್ ಬಗೆನ ಕ್ರಿಯಾತ್ಮಕ ಗುಣ ದರ್‌ಮನ (ಪೀಟರ್ ಜೆ ಕ್ಲಾಸ್ 1987 160)ಗುರ್‌ತ್‌ಸ್‌ವ ಪ್ರಯತ್ನ ಮಾಡಿಯೊಳೊ. 'ತುಳು ಪಾಡ್ದನದ ವೀರ, ವೀರ ಆಗಿರಿಕೆ ಕಾರಣ ಅಂವನ ದೆವ್ವದ ಅವತಾರ ಆಗಿರ್‌ದು ಅಲ್ಲೊ ಹಳೆ ಜೆನ್ಮದ ಪುಣ್ಯ ವಿಸೇಸ ಅಲ್ಲ, ಬದಲಾಗಿ ಅಂವ ಈ ಜೆನ್ಮಲಿ ಮಾಡ್‌ದ ಮಹತ್ ಕಾರ್‌ಯಗಳೆ ಅವನ ವೀರ ಆಗಿ ಮಾಡಿಟು. ಬೊದ್‌ಕ್‌ಲಿ ಅಂವ ಎದ್‌ರ್ ಹಾಕಂಬ ಹೊತ್ತುಲಿ ತೋರ್‌ಸುದು ಅಂವನ ವೀರನಾಗಿ ಮಾಡ್‌ದೆ.

ಪಾಡ್ದನಗ ಸ ಇಂತ ಅಸಾಮಾನ್ಯ ಜೆನಂಗ ನಡ್‌ಸಿರ್‌ವ ಸಾದನೆಗಳ್‌ನೆ ಹೇಳ್‌ದೆ. ತುಳುನಾಡ್‌ನ ಆರಾದನ ರಂಗದ ವೀರರ ಗಮನ್‌ಸಿರೆ ತುಳುನಾಡ್‌ಗೆ ಬೇರೆ ಕಡೆಗಳ್‌ಂದ ಬಂದ್ ಇಲ್ಲಿ ಸಾಹಸ ಮಾಡಿ ಗೌರವ ಪಡ್‌ಕಂಡದುನು ಉಟ್ಟು. ಈ ವೀರರನೆ ದೆವ್ವಂಗತ ತೇಳಿ ಕರ್‌ದೊ. ಅತ್ತಾವರ ದೆಯ್ಯಂಗುಳಾಗಲೀ, ಅರಸು ಮಂಜಿಸ್ಟಾರ್ ದೆವ್ವಗಾಗಲಿ, ಪೂಮಾಣಿ ಕಿನ್ನಿ ಮಾಣಿಗಾಗಲಿ ಮೇಲ್ ಸೀಮೆಂದ ಬಂದ ಅಣ್ಣತಮ್ಮ ವೀರರ್ ದಿಗ್ವಿಜಯ ಮಾಡಿಕಂಡ್ ಬಂದಿರ್‌ವೊ. ಆಸ್ರಯ ಕೊಟ್ಟ ಅರಸರ್‌ಗೆ ಅವರ ಅರಸರ ಗೆದ್ದ್ ಜಯ ತಂದ್ ಕೊಟ್ಟಿರ್‌ದು, ಕುಂಬಳೆ ಸೀಮೆನ (12 ನೆಯ ಶತಮಾನ) ಜಯಸಿಂಹ ಅರಸಂಗೆ ಅವಮಾನ ಮಾಡ್‌ದ ಕೊರಮ ಬಲ್ಲಾಳನ ಆಸ್ತಾನನದ ಸೀಮೆನ ನಾಕ್ ಜಾಗೆ (ಪೈಕ, ಮಾಣಿ, ಬೆದ್ರಯ್ಯ, ಅಂಬೆಲಡ್ಕ)ಗಳ್‌ಲಿ ಮಾಡ ಕಟ್ಟ್‌ಸಿ ಕೊಡಕುತ ಹೇಳ್‌ವೆ (ಕೇಶವ ಆದೂರು, 1987). ತಲಕಾಡ್ ಗಂಗರ ಮೂಲಪುರುಸ ಆದ ದಡಿಗ – ಮಾದವ ತೇಳ್‌ವ ವೀರರೇ ಪೂಮಾಣಿ ಉಮಾಣಿ ದೆವ್ವಗ ಆಗಿರ್‌ವೊ ತೇಳ್‌ವ ಊಹೆಗೆ ಕೇಸವ ಆದೂರು (1987) ಕೆಲ ಸಮರ್‌ತನೆಗಳ್‌ನ ಹಿಂಗೆಕೊಟ್ಟವೆ. ಗಂಗ ಅರಸರ ದೊಜಲಿ ಆನೆ ಉಟ್ಟು, ಐರಾವತ ತೇಳ್‌ವ ಆನೆ ಹಿಂದೆ 'ಅಹಿಚ್ಚತ್ರಪುರ'ನ ಆಳ್‌ತಿತ್ತ್ ಗಡ. ವಿಸ್ಣು ವರ್‌ಮಂಗೆ ಐಂದ್ರ ಪೂಜೆಂದ ಸಿಕ್ಕಿದ ಸುಬ್ರಹ್ಮಣ್ಯ ಪರಿಸರಲಿ ಪೂಮಾಣಿ ದೆವ್ವದ ಆನೆಗೆ ಐರಾವತ ತನೆ ಹೆಸ್‌ರ್. ವಿಸ್ಣು ಸರ್‌ಮನ ವಂಸದ ಪ್ರಿಯ ಬಂದುವರ್ಮ ತೇಳ್‌ವ ಅರಸಂಗೆ ಇಂದ್ರಂದ ಸಿಕ್ಕಿದ ಐದ್ ದಿವ್ಯಾದ ರಾಜಯೋಗ್ಯಾದ ಆಬರಣಗಳ ಕಾಪಾಡಿಕಂಬಕೆ ದಕ್ಷಿಣ ಭಾರತಕೆ ತನ್ನ ಮಕ್ಕ ಆದ ರಾಮಲಕ್ಷ್ಮಣರ ಕಳ್‌ಸಿಕೊಟ್ಟದೆ. ಈ ರಾಜಪುತ್ರರ್ ತಮ್ಮ ಹೆಸರ್‌ನ ದಡಿಗ ಮಾದವತೇಳಿ ಮಾರ್‌ಸಿಕಂಡೋ. ಗಂಗವಾಡಿ ರಾಜ್ಯ (ಕ್ರಿ. ಶ. 1350) ಇವರ್‌ಂದ ಸ್ತಾಪನೆ ಆತ್. ಇವರ ಪರಾಕ್ರಮಕೆ ಮೆಚ್ಚಿ ಜೈನಗುರು ನಂದಿ ಕರ್ಣಿಕಾರಿ ಹೂವ್‌ನ ಕಿರೀಟನ ದಡಿಗ ಮಾದವರ ತಲೆಗೇರ್‌ಸಿದೊ ಈ ನೆಂಪುಗಾಗಿ ದಡಿಗಂಗೆ ಪೂಮಾಣಿ ತೇಳ್‌ವ ಹೆಸ್‌ರ್ ಬಾತ್. ಹೂನ (ಪೂ) ಕಿರೀಟ ಹಾಕಂಡ ಮಾಣಿ (ಮಹನೀಯ) ದಡಿಗಂಗೆ ಕೊಂಗುಣಿವರ್‌ಮತ ಬಿರುದು ಇತ್ತ್. ಕೊಂಕಣನ ಗೆದ್ದದರ್‌ಂದ ಈ ಬಿರುದು ಬಂದಿರ್‌ದು, ಬೂತಾರಾದನೆಲಿ ಪ್ರಾಣಿಬಲಿನ ಕೊಡ್‌ತಿದ್ದರೂ ದೆವ್ವಗಳ ಆರಾದನೆಲಿ ಸಾತ್ವಿಕ ಆಹಾರ ಮಾತ್ರ, ದಡಿಗ ಮಾದವ ಜೈನರ್ ಆಗಿರ್‌ವ ಕಾರಣಕೆ ಹಿಂಗಾಗಿರ್‌ದು. ತಲಕಾಡ್‌ನ ಗಂಗರ ಮೂಲಪುರುಸರಾದ ದಡಿಗ ಮಾದವ ಅವ್ ಕೊಂಕಣ ಪ್ರದೇಸಂದ ತುಳುನಾಡ್‌ಗೆ ಬಂದಿರೊಕು. (ವಿವರಗಳಿಗೆ ನೋಡಿ : ಕೇಶವ ಆದೂರು 1987).

ತಮಿಳ್‌ನಾಡ್‌ಲಿ ತ್ರಿವಳಿಗಳ ವಾರ್‌ಸಿಕ ಆರಾದನ ಪ್ರದರ್‌ಸನ ನಡೆತಿದ್ದ್ ಇದರ್‌ಲಿ ಮುಕ್ಯಾಗಿ ಯುದ್ದದ ದೃಸ್ಯಗ ಸೇರಿದ್ದದೆ. ಈ ವೀರರ್ ದುರಂತ ಕಂಡ್ ಮುಂದೆ ಆರಾದನ ಪ್ರದರ್‌ಸನಲಿ ದರ್‌ಸನ ದೊಟ್ಟಿಗೆ ಬಂದವೆ. ಸಪ್ತರ್‌ಸಿಗ ಮಳೆ ಬೆಳೆ ಸಮೃದ್ದಿಗಾಗಿ ಬೂಮಿಗೆ ಒಬ್ಬ ದೂತನ ಕಳ್‌ಸುವೆ. ಬೆಳೆಲಿ ಬಾವ ಪಸ್‌ಲ್ ಮಾಗಿ ನೆಲಕೆ ಉದುರಿಕೆ ಮುಂದೆನೆ ಸಮ್ಮಂದ ಪಟ್ಟ ದೈಗಳ ಕತ್ತರ್‌ಸಿ ತೆಗೆಕು. ಹೊಸ ಜೆನ್ಮ ಆಕೊರೆ ಹಿಂದೆನ ಬೊದ್‌ಕ್‌ಗೆ ಸಾವು ಬರೊಕು. ಅದ್‌ಕೆ ಹುಟ್ಟ್‌ಗೆ ಕಾರಣ ಆವ ಮೊಯಿಂಸ ಸಾಯಕುಂತೇಳ್‌ವ ಕಲ್ಪನೆ ಉಟ್ಟು. ಈ ದೂತನೇ ಜೋಕುಮಾರ.

(ವಿ.ಎನ್.)





**ಉಲ್ಲಾಕ್ಳು ದೆವ್ವ :** ಈ ಹೆಸರ್‌ಗಳ ಹಿನ್ನಲೆಲಿ ಸೋದರತ್ವ ಬೌತಿಕ ನೆಲೆ, ಪ್ರಸಾರ ಆದ ಹಿನ್ನೆಲೆ, ಕಾರಣಿಕತ್ವದ ಸಂಗತಿಗ ಮೈಗೂಡಿಟು. ಬೌತಿಕ ನೆಲೆನ ಹಿನ್ನೆಲೆಲಿ ಹೇಳ್ದಾದರೆ, ಬಲ್ಲಾಳರ್‌ಂದ ಮತ್ತೆ ಅವಾದ ಮೇಲೆ ಮಾಡ ಕಟ್ಟಿಸಿಕಂಡ್, ಗುತ್ತು ಮನೆಯವರ್‌ಂದ ದ್ವಜ ಏರ್‌ಸಿಕಂಡ್, ಜಾತಿಕಟ್ಟ್‌ಲಿ ಪರವ ಕಲಾವಿದರ್‌ಂದ ನೇಮ– ಬಂಡಿ ಉತ್ಸವ ಪಡೆದಕೆ "ಮಾಡದ" ಉಲ್ಲಾಗಂತ ಕರ್‌ದವೆ. ಊರುಕಟ್ಟ್‌ಲಿ ಚಾವಡಿಗಳ್‌ಲಿ ದ್ವಜ ಏರ್‌ಸದೆ, ಬಂಡಿ ಉತ್ಸವ ಇಲ್ಲದೆ, ಜೆನ ಸಾಮಾನ್ಯರ್‌ಂದ, ಜಾತಿಕಟ್ಟ್‌ನ 'ನಲಿಕೆ' ಕಲಾವಿದರ್‌ಂದ ಕೋಲ ಪಡೆವವಕೆ "ಚಾವಡಿ" ಉಲ್ಲಾಗತ ಕರ್‌ದವೆ.



ಉಲ್ಲಾಕುಳು

ಪಾಡ್ದನ ಪ್ರಕಾರ ಉಲ್ಲಾಗಂಗ ಅರಸು ವಂಸಮೂಲದವು. ಈ ದೆವ್ವಗ ಹುಟ್ಟುದು ಬೆಳವಣಿಗೆ ಪ್ರಸರಣ ಆದು ಕ್ಷತ್ರಿಯ ಕುಮಾರರ ನಿಜಜೀವನದ ಬಗೆಲಿ ಈ ದೆವ್ವಗಳ ಸೃಸ್ಟಿಮೂಲ ಇತರ ತುಳುವ ಆರಾದನಾ ಜಗತ್ತ್‌ನ ದೆವ್ವಗಳಹಾಂಗೆ ಇರ್‌ದುಲೆ. ಸ್ತಳೀಯತೆನ ಮೀರಿ ಲಿಕಿತ ಪುರಾಣದ ನಾಯಕರ ಜೆನನ ಮೂಲದಂಗುಟ್ಟು. ರಾಮ – ಲಕ್ಸಮಣರ್ ವಿಸ್ಣು ಅಂಸ ಮೂಲಂದ ಸೂರ್ಯವಂಸಲಿ ಹುಟ್ಟುವ ಬಗೆಲಿ ಇವು ಕೂಡ ನಿರೂಪುಸಿ ಕಂಡವೆ. ರಾಮ– ಲಕ್ಸಮಣರ್‌ತ ಕರ್‌ಸಿಕಂಡವೆ.

ಉಲ್ಲಾಕುಳು ತುಳುನಾಡ್‌ಗೆ ಬಯಲು ಸೀಮೆಂದ ಬಾವಂತದ್ ಸಾರ್‌ವಬೌಮ ಅರಸರ್ ರಾಜ್ಯ ವಿಸ್ತರಣೆ ಮಾಡ್‌ವ ಉದ್ದೇಸಲಿ ಬಾದರ ನಿರೂಪುಸಿಕಂಡವೆ. ಗಟ್ಟ ಇಳಿವ ಈ ಉಲ್ಲಾಗಂಗ, ಕುಕ್ಕೆನ ಕುಮಾರ ಪರ್‌ವತಕೆ ಬಂದ್ ಅಲ್ಲಿಂದ ಅಂಬು ಬುಟ್ಟು ಸುಬ್ರಾಯ ದೇವರ ಕೊಡಿಮರಕಡ್ದವೆ. ಸುಬ್ರಾಯನೊಟಿಗೆ ಕಾದಾಟ ಮಾಡ್‌ವೆ. ಸುಬ್ರಾಯದೇವರ್ ಸಾಪ ಕೊಟ್ಟಕಾರಣ 'ಸಾಪದ ಉಲ್ಲಾ'ಗಂಗ ಆದವೆ. ಸುಬ್ರಾಯ ನೆಲೆಲಿ ಕೊಡಿಮರದ ಬದಲ್, ಬಂಗಾರದ ಸೆಟ್ಟ್‌ಗ ಇದ್ದ ಹದ್‌ನಾರ್ ಕೈನ ಕೊಪ್ಪರಿಗೆ ಕೊಟ್ಟ್ ಇನ್ನ್ ಮುಂದೆ ನೀ 'ಅನ್ನದಾನ ಸುಬ್ರಾಯ' ತ ಹೆಸರ್ ದೆವ್ವಗ ವರಕೊಟ್ಟ್, ಕಡ್ದಕೊಡಿಮರನ ಹೊತ್ತ್‌ತಂದ್ ಅವು ನೆಲೆ ಊರ್ದಲ್ಲೆಲ್ಲಾ ನೆಟ್ಟ್ ದಿಗ್ವಿಜಯದ ಗುರ್‌ತಕೆ 'ನೇಮ' ಆರಾದನೆ ಪಡ್ದವೆ.

ತುಳುವ ದೆವ್ವಾರಾದಕರ ಗ್ರಹಿಕೆಲಿ ಉಲ್ಲಾಗ ಅಸಾಮಾನ್ಯ ದೆವ್ವಗ. ಉಲ್ಲಾಕುಳು ತುಳುನಾಡ್‌ಲ್ಲಿದ್ದ ಬಲ್ಲಾಳ ಸಂತತಿನ ನೀತಿ ಕಟ್ಟಳೆಗಳ ಮೀರಿ ಅವ್ವೆ ದುಸ್ಟರಾಗಿ ಪ್ರವರ್‌ತಿಸಿ ದರ್ಮರಕ್ಸಣೆಗಾಗಿ ನಿಯತಿನ ಪುನರ್ ವೆವಸ್ತೆ ಮಾಡಿಕೆ ಸೃಸ್ಟಿಯಾದ ದೆವ್ವಗ. ಕತೆಗಳ ಪ್ರಕಾರ ಇವು ವಿಸ್ಣು ಸಂಕಲ್ಪಲಿ ಅಂಸಿಬೂತಾಗಿ ಅರಸು ವಂಸಲಿ ಹುಟ್ಟಿದ ದೆವ್ವಗ. ತುಳುನಾಡ್‌ಲಿ ಅವಳಿ ವೀರರಾಗಿದ್ದ್, ಅಪಮೃತ್ಯುಗೆ ಈಡಾಗಿ ಸತ್ತ ಮೇಲೂ ದೆವ್ವಗ ಆಗಿ ಮುಗರ್ಲು, ಬೈದರ್ಲು, ಕಾನದ– ಕಟದರ್ ಹಿರಿಯರ ಆರಾದನೆನ ನೆಲೆಲಿ ಆರಾದನೆಗೊಂಡವೆ. ಉಲ್ಲಾಗ ಸ್ತೂಲಕೆ ಹಾಂಗೆನೆ, ಸೂಸ್ಮಕೆ ಬೇರೆನೆ. ಉಲ್ಲಾಕುಳು 'ಅವಳಿ' ಪರಿಕಲ್ಪನೆಂದ ದರ್ಮರಾಯ–ಬೀಮ, ರಾಮ–ಲಕ್ಷ್ಮಣ ಈ ಬಗೆನ ಸೋದರ ನೆಲೆನ ಯಮಳತ್ವದಲಿ ಗೋಚರ್‌ಸುವೆ. ಈ 'ಯಮಳ' ಅರಸುದೆವ್ವಗ ಸೃಸ್ಟಿ ಮೂಲ ಮತ್ತೆ ಸ್ವಬಾವಾಬಿವ್ಯಕ್ತಿಲಿ ಪುರಾಣದ ರಾಮ– ಲಕ್ಷ್ಮಣರ ನಾಯಕ ಲಕ್ಸಣ ಎದ್ದುಕಂಡದೆ.

ಉಲ್ಲಾಕುಳು ಬೌತಿಕ – ಸಾಂಸ್ಕೃತಿಕ ಸಂರಚನೆಗ ಇತರ ದೆವ್ವಗಳ್‌ಂದ ಬೇರೆನೆ ಅಗಿದ್ದದೆ. ಅರಸುದೆವ್ವಗ ನೆಲೆಲಿ ಇವು ಅದಿಕಾರ ಸ್ತಾನ ನಿರ್‌ದೇಸನದ ಪ್ರತೀಕ ಆಗಿ 'ಮಾಳ್ಯೆ– ಚಾವಡಿ– ಮಾಡ 'ತೇಳ್‌ವ ಪ್ರತ್ಯೇಕ ನೆಲೆಗಳ್‌ಲಿದ್ದವೆ. ಆನೆ ಕುದುರೆನ ಮೂರ್‌ತಿ ಸಿಲ್ಪಗ. ಸಿಲ್ಪಗಳ ಕೈಲಿ ಬಿಲ್ಲ್‌ಬಾಣ, ಸುರ್‌ಗೆತೇಳ್ವ ಆಯ್ದುದ ಇದ್ದವೆ. ಸಾರ್‌ವಬೌಮ ಅರಸರ ಕಿರೀಟದ ಸಂಕೇತ ಆಗಿ ತಲೆಬಾಗಲಿ ಸಿರಿಮುಡಿತೇಳ್ವ ಪ್ರಬಾವಳಿ ಇದ್ದದೆ, ರಾಜೆನ್'ಇತ್ಯಾದಿ ದೆವ್ವಗಳ ಬೆನ್ನ್‌ಗೆಅಣಿ, ಎದುರ್‌ಗೆ ಜಕ್ಕೆಲಣಿ ಕಟ್ಟುವ ವಿದಿಯಿಲ್ಲೆ. ಉಲ್ಲಾಗುಲು ನೇಮಗಳ್‌ಲಿ ಕೊಡಿ ಏರ್ಸುವ, ಪಯ್ಯೊಲಿಗೆ, ಅಡ್ಡಣ ಪೆಟ್ಟ್, ದೀಪದ ಕಂಬಸಾಲ್, ಪಾಪೆ – ಬಂಡಿ –ಸವಾರಿ ಬಂಡಿ ಇತ್ಯಾದಿಗ ಇರೋಕೆ. ಆರಾದನೆನ ಕಟ್ಟಳೆಗ ಊರು, ಗುತ್ತು ಸೀಮೆ ಕಟ್ಟಳೆನ ನಿರ್‌ದಿಸ್ಟ ಬಾಗಲಿ ನಿರ್‌ವಹಿಸುದು ಸಂಪ್ರದಾಯ. ಉಲ್ಲಾಯ/ ಉಲ್ಲಾಗಗಳ ನೇಮಲಿ ವರ್‌ಣ ಸಾಂಗತ್ಯ ಮತ್ತೆ ಅಲಂಕರಣಲಿ, ಪ್ರದರ್‌ಸನಲಿ ಕಾಂಬ ಬಾವಾಬಿವ್ಯಕ್ತಿ, ನರ್‌ತನ, ಅಬಿನಗ 'ರಾಜಸ' ಗುಣಕ್ಕೆ ಹೊಂದಿಕಂಡ್ ಇದ್ದದೆ. 'ದೇವರ್‌ಂದ ಕೆಳಸ್ತರ ದೆವ್ವಂದ ಮೇಲ್‌ಸ್ತರ' ತೇಳ್ವ ಸಮುದಾಯನ ಲೋಕ ದ್ರಿಸ್ಟಿಂದಾಗಿ ಈ ದೆವ್ವಗಳ್‌ಲಿ ದೇವರ ಸಾತ್ವಿಕತೆ, ಸಾಮಾನ್ಯ ದೆವ್ವದ ತಾಮಸ (ರೌದ್ರ– ಬಯಾನಕ ದೆವ್ವಆರಾದನೆನ ಸ್ತಾಯಿ ನೆಲೆಗಳ) ಇವೆರಡರ ಮಿಸ್ರರೂಪದ ಲಕ್ಸಣನ ಉಲ್ಲಾಗಳಲಿ ಆರಾದನೆಲಿ ಕಂಡವೆ. ಈ ದೆವ್ವಗಳ ಆರಾದನೆ ಇರ್‌ಲ್ ಹೊತ್ತುಲಿ ದೀಟಿಗೆನ ಮಂದ ಬೊಳ್ಪುಲಿ ನಡೆದ್ಲೆ, ಕಟ್ಟಳೆ ಪ್ರಕಾರ ಸೂರ್ಯೋದದಯದ ಬೊಳ್ಪುಲಿ ನಡೆಯೊಕು.

ದೆವ್ವಾರಾದಕರ ದ್ರಿಸ್ಟಿಲಿ ಸುಳ್ಯ, ತುಳುನಾಡ್ ಎಲ್ಲಾ ದೆವ್ವಗ ಇವುಗಳ ಆದೀನಲಿರೊಕು. ಉಲ್ಲಾಕುಳು ಪ್ರದಾನಿ ಸ್ತಾನದ ಒಂದ್ ಗಂಡ್ ದೆವ್ವ ಆಗುಟು. ಈ ವೆವಸ್ತೆ ಉಲ್ಲಾಗಗಳು ಮದ್ಯಕಾಲೀನ ಕರ್ನಾಟಕಲಿ ಇದ್ದ ಪ್ರಬುತ್ವದ ಆಡಳಿತಾತ್ಮಕ ಸಂರಚನೆನ ಬಿಂಬದಂಗೆ ಇರ್‌ದರ ಕಾಣಕ್. ಈ ದೆವ್ವಗಳ ನೇಮಲಿ 'ಬಾರಣೆ'/ ರಕ್ತ ಬಲಿ ಕೊಡುವ ಪೊದ್ದತಿ ಇರ್‌ದುಲೆ. ಸಾತ್ವಿಕಾರಾದನೆಗೆ ಆದ್ಯತೆ. ಬಟ್ರುಗಳ್‌ಂದ ದೀಪಾರತಿ, ನೈವೇದ್ಯಗಳ ನಿತ್ಯಾರಾದನೆನೂ ನಡ್ದದೆ. ಈ ಹಿನ್ನಲೆಲಿ ಉಲ್ಲಾಗ ಲೌಕಿಕ ಸಾರ್‌ವ ಬೌಮರಸರ ಮತ್ತೆ ವಿಸ್ವಾತ್ಮಕ ದೇವರ ಪ್ರಾತಿನಿದಿಕತೆಲಿ ಆರಾದನೆಯಾವ ದೆವ್ವಗ. (ಪಿ.ಕೆ.)

**ಉಲ್ಲಾಯ/ಉಲ್ಲಾಕುಳು :** ಉಲ್ಲಾಯ/ಉಲ್ಲಾಗುಲು ಪರಿಕಲ್ಪನೆಗ ದಿನ ಬಳಕೆಲಿ ಒಳೊದ್. ಇದ್ ದೆವ್ವಗಳ ಆರಾದನೆ– ಆಚರಣೆ ಬಾಗ ಆಗಿ ಬಳಕೆಯಾದವೆ. ತುಳು ಬಾಸೆಲಿ ದಿನಬಳ್ಕೆಲಿ 'ಉಲ್ಲಾಯೆ' ಪದ ಒಡೆಯ, ಶ್ರೀಮಂತ, ದನಿಕ ತೇಳ್ವ ಏಕವಚನ ವ್ಯಕ್ತಿ ಸಮ್ಮಂದ ಗೌರವ ಸೂಚಕ ಅರ್‌ತಲಿ ಬಳಕೆಯಾದೆ. 'ಉಲ್ಲಾಕುಲು' ಪದ ಬಹುವಚನಲಿ ಒಡೆಯರ್, ಶ್ರೀಮಂತರ್, ದನಿಕರ್ ಅರ್‌ತಕೊಟ್ಟದೆ. ಉಲ್ಲಾಯ/ ಉಲ್ಲಾಗುಲು ಪರಿಕಲ್ಪನೆಗ ತುಳು–ಅರೆಬಾಸೆನ ಹೊತ್ತುಲಿ ಕನ್ನಡ ಬಾಸೆನ ಉಳ್ಳವ / ಉಳ್ಳವರು ಅರ್‌ತ ಪರಿಪೋಸಣೆಲಿ ದೆವ್ವ ಆರಾದನಾ ಜಗತ್ತ್‌ಲಿ ಬಾರಿ ಕೊಡೀಲಿ ಇದ್ದ್ ಆರಾದನೆ ಪಡೆಂವ ಒಬ್ಬ / ಇಬ್ಬರ್ ದೆವ್ವಗ ತೇಳ್ದರ ಉಲ್ಲಾಯೆ/ ಉಲ್ಲಾಕುಳು ಪದಗ'ಸತ್ ಸ್ವರೂಪನು' ತೇಳ್ವ ಅರ್‌ತನನೂ ಕೊಟ್ಟದೆ. ತುಳ್‌ನಾಡ್‌ಲಿ ಜಾತಿಕಟ್ಲೆ, ಕೆಳ ಜಾತಿವರ್‌ಗದವ್ ಮೇಲ್ಜಾತಿ ವರ್‌ಗದ ಪುರುಸರ ಕರೆಕನ 'ಒಡೆಯ/ ಒಡೆಯರ್ ಎಂಬ ಅರ್‌ತಲಿ ಬಳಸುವೆ. ಹಿಂಗೆ ಸಂಬೋದನಾತ್ಮಕ ಹಿನ್ನೆಲೆಲಿ ಒಟ್ಟಾರೆ ಪದಕಲ್ಪನೆಗ ಪುರುಸವಾಚಕ ಮತ್ತೆ ಗೌರವಸೂಚಕ ಪದಗಾಗಿ ಬಳಕೆಯಾದವೆ.

ಈ ಗ್ರಹಿಕೆಲಿ ಹಂಗೆನೆ ಸ್ತಾನ ನಿರ್‌ದೇಸನಲಿ ಗುರುತಿಸಿಕಂಬಲ್ಲಿ ಚಾರಿತ್ರಿಕಾಗಿ ಈ ದೆವ್ವಗ ಗ್ರಾಮ ಮಟ್ಟಲಿ ಅದಿಕಾರ ಸ್ತಾನಿಗ ಆಗಿದ್ದ ಬೀಡ್ ಬಲ್ಲಾಳರ್‌ಂದ ಆರಾದಿಸಿಕಂಡ್ ಬಂದಕಾರಣನೂ ಉಟ್ಟು. ಈ ದೆವ್ವದ ಪಾಡ್ದನ ತ ಹೇಳ್‌ವ ಕತನಕಾವ್ಯಗ ದೆವ್ವಗಳ ಹುಟ್ಟು ಮೂಲನ ಅರಸು ವಂಸ ಮೂಲಂತ ನಿರೂಪ್‌ಸುವ ಹಿನ್ನೆಲೆನೂ ಇನ್ನೊಂದು ಕಾರಣ ಆಗಿದ್ ಉಟ್ಟು. ಪೂಮಾಣಿ – ಕಿನ್ನಿಮಾಣಿ ಸಹೋದರ ದೆವ್ವಗ ಉಲ್ಲಾಗ ಆಗಿ ಸಾರ್‌ವತ್ರಿಕವಾಗಿ ಸಾಂಕೇತಿಸಿ ಕರ್‌ಸಿಕಂಡವೆ. ಅಲೌಕಿಕ ನೆಲೆಲಿ 'ಸಮರ್‌ತರು' ಕಾರಣಿಕತೆ ಇರ್‌ವ ದೆವ್ವಗ ಹಿನ್ನೆಲೆಲಿ ಇತರ ದೆವ್ವಗ ಕೂಡ. ಉಲ್ಲಾಗುಲುತ ಕರ್‌ಸಿಕಂಡವೆ. ಹಾಂಗಿದ್ದರೂ ಉಲ್ಲಾಗುಲು ತೇಳಿಕನ ಸಾರ್‌ವತ್ರಿಕ ಗೊತ್ತಾದು ಪೂಮಾಣಿ –ಕಿನ್ನಿಮಾಣಿ ತೇಳ್‌ವ ಅರಸುದೆವ್ವಗ ಮಾತ್ರ. ಈ ಗೊತ್ತುಲಿ ದೆವ್ವಗರೂಪ್‌ಸುವ ಸಾಂಸ್ಕೃತಿಕ ಮತ್ತೆ ರಾಜಕೀಯ ಯಾಜಮಾನಿಕೆನ ಆಯಾಮಗ ಕಾರಣ ಆಗ್ಯೊಳೊ.

ಸುಳ್ಯ ತಾಲೂಕ್‌ನ ಆದಿಕುಕ್ಕೆಂದ, ಕಾಸರಗೋಡು ಜಿಲ್ಲೆನ ಕಡೇನ ಪುತ್ತಿಗೆನನು ಸೇರ್‌ಸಿ ಕುಂಬ್ಳೆನ ಬೌಗೋಳಿಕ ವ್ಯಾಪ್ತಿಲಿ ಅಂದರೆ ತುಳುನಾಡ್‌ನ ದಕ್ಸಿಣ ಬಾಗಲಿ ಆರಾದನೆ ಪಡೆಂವ ಪೂಮಾಣಿ– ಕಿನ್ನಿಮಾಣಿ ಉಲ್ಲಾಗ್ಲು.

ಹಿರಿಯರು–ಕಿರಿಯರು, ನೇಲ್ಯಾರ್–ಎಲ್ಯಾರ್, ದೊಡ್ಡವರ್– ಸಣ್ಣವರ್, ಅಣ್ಣ–ತಮ್ಮ, ಈರ್‌ವರ್, ಮಾಡದ ಉಲ್ಲಾಗ, ಗಂಗೆನ ಉಲ್ಲಾಗ, ಸಾಪದ ಉಲ್ಲಾಗ, ಜೋಡಿ ಉಲ್ಲಾಗ ರಾಮ– ಲಕ್ಷ್ಮಣ ಹಿಂಗೆ., ಬೇರೆ ಬೇರೆ ಹೆಸರ್‌ಂದನು ಸಹ ಕರೆದುಕೊಂಡವೆ. (ಪಿ.ಕೆ.)

**ಅವಳಿ ವೀರರ ಆರಾದನೆ : ಕೋಟಿ ಚೆನ್ನಯರ್ :** ಅರೆಬಾಸೆ ಮತ್ತೆ ತುಳು ಪ್ರದೇಸಲಿ ಅರಾಧನೆ ಮಾಡ್‌ವ ದೆವ್ವಗ. ಕೋಟಿ ಚೆನ್ನಯರ್, ಹೆಚ್ಚಿ ಕಡ್‌ಮೆ ನಾನೂರು ವರ್‌ಸಗಳ ಈಚೆಗೆ ಪಾಳೆಯಗಾರ ಅರಸರ ಕಾಲಲಿ ಬಿಲ್ಲವ ಜೆನಾಂಗದವು ಆದ ಈ ವೀರರ್ ತಮ್ಮ ಸಾಹಸಗಳ ಮೆರ್‌ದವು. ಅದರ್‌ಂದ ಮುಕ್ಯಾಗಿ ಸಮಾಜಲಿ ಮೇಲ್ ವರ್‌ಗದವರ ದಬ್ಬಾಳಿಕೆನ ವಿರುದ್ದ ಬಂಡಾಯ ಎದ್ದವು. ಕೋಟಿ ಚೆನ್ನಯರ್ ಅನ್ಯಾಯದ ವಿರುದ್ದ ಹೋರಾಡ್‌ದವು. ವೀರರ್ ಅತಿಮಾನುಸ ಮೊಯಿಂಸರಾಗಿದ್ದ್ ಅವರ ಬೊದ್ಕ್ ಅಸಹಜ ಅಲ್ಲೊ ಅಸಾಮಾನ್ಯ ರೀತಿಲಿ ನಡ್‌ದದೆ. ಕೋಟಿ ಚೆನ್ನಯರ್ ಇದ್‌ಕೆ ಹೊರತಾಗಿಲ್ಲೆ. ಕೇಂಜವ ಹಕ್ಕಿನ ಮೊಟ್ಟೆ ಒಬ್ಬ ಬಟ್ರ್‌ಗೆ ಸಿಕ್ಕಿದೆ. ಅಂವ ಅದರ ಮನೆಗೆ ತಕಂಡ್ ಹೋದೆ.

ಮಕ್ಕ ಇಲ್ಲದ ಅವು ಕೂಸುನ ಸಾಂಕುವೆ. ಮೊದ್‌ವೆ ಆಕೆ ಮುಂದೆ ಆ ಗೂಡೆ ಹೊಲೆ ಕಂಡದರಂದ ಸಂಪ್ರದಾಯದಂಗೆ ಗೂಡೆನ ಮೂರ್‌ತೆ ಮಾಡ್‌ವ ಜೆನ ಸಾಂಕಿವೆ. ಅಂವ ಬಿಲ್ಲವ(ಪೂಜಾರಿ) ಜಾತಿನ ಹೈದಂಗೆ ಮೊದ್‌ವೆ ಮಾಡಿ ಕೊಟ್ಟದೆ. ಅದರ ತಲೆಲಿ ಕಳ್ಳ್‌ನ ಹೊತ್ತ್‌ಕಂಡ್ ಹಳ್ಳ ದಾಟಿಕನ ಹಳ್ಳದ ನೀರ್ ಕುಡ್ದದೆ. ಹಳ್ಳದ ನೀರ್ ಕುಡ್‌ದರ್‌ಂದ ಬೊಸ್‌ರಿ ಆದೆ.

ಅದ್ ಮುಂದೆ ಅವುಳಿ ಮಕ್ಕಳ ಹೆತ್ತದೆ. ಮಕ್ಕ ಬೆಳ್‌ದ್ ಪ್ರತ್ಯೇಕ ವ್ಯಕ್ತಿತ್ವನ ಮೈಗೂಡಿಸಿಕಂಡ್ ಆ ಕಾಲಲಿ ಪ್ರಸಿದ್ದ ಅವುಳಿ ವೀರರಾದವೆ. ಅವರ ಯಜಮಾನಂಗಾಗಿ ಯುದ್ದ ಮಾಡಿ ಹೋರಾಡಿ ದುರಂತ ಅಂತ್ಯ ಕಂಡವೆ. ಈ ಅವುಳಿ ಅಣ್ಣ ತಮ್ಮಂದರ್ ಸತ್ತ ಮೇಲೆ ಆರಾದನ ಸಕ್ತಿಗಳಾದವೆ. ಅವರ ಪೂಜೆ ಮಾಡ್‌ವ ಕೇಂದ್ರಗಳೇ ಗರಡಿಗ. ಗರಡಿ ನೇಮಗಳ್‌ಲಿ ಗರಡಿ ವಿದಿ ಆಚರಣೆಗಳ್‌ಲಿ ಕೋಟಿ ಚೆನ್ನಯರ ಪಾಡ್‌ದನ ಹೇಳ್‌ವೆ.

**ಮುಗೇರರ್ :** ಗಂಡ್ ಸಂತಾನ ಇಲ್ಲದಾಕನ ಹರಕೆಂದ ಹುಟ್ಟಿದ ಎಣ್ಣೂರು ದೈಯ್ಯು ಮತ್ತೆ ತನ್ನಿಮಾನಿಗ (ಸನಿ) ಮುಂದೆ ತಬ್ಬಲಿಗ ಆದವೆ. ಊರವರ ಸಾಕಾರಂದ ಇವು ಬೆಳ್‌ದ್ ದೊಡ್ಡವಾದವೆ. ಹರ್‌ಕೆ

ತೀರಿಸ್‌ಕೆ ಬೆರ್ಮೆರೆ ಗುಡಿಗೆ ಬಂದಾಕನ ಅಲ್ಲಿ ಇವುಕೆ ಕೋಟಿ ಚೆನ್ನಯರ ದರ್‌ಸನ ಆದೆ. ಬೇರೆ ಪಾಡ್ದನಲಿ ಕೋಟಿ ಚೆನ್ನಯರ್ ಸಾಂಕಿದ್ದ ಸೊನ್ನೆಸೊಯಿ ಬೈದ್ಯೆದಿ ಮೊಗೇರರ ಸಾಂಕಿದವ್ವ ಆದೆ. ಈ ಹೊತ್ತ್‌ಲಿ ಕೆಲೆತ ಪೆರ್‌ನೆತೇಳ್‌ವ ಹೈದನ ಪರಿಚಯ ಆದೆ. ಅಂವನೊಟ್ಟಿಗೆ ತನ್ನಿ ಮಾನಿಗನ ಮೊದ್‌ವೆ ಆದೆ. ಹಂದಿ ಬೇಟೆಲಿ ಕೋಟಿ ಚೆನ್ನಯರ್‌ಗೆ ಮೊಗೇರರಿಗೆ ಚೊರೆ ಆದೆ. ಈ ಸಿಟ್ಟ್‌ಂದಾಗಿ ಅವು ಬೆಮ್ಮರೆ ಗುಂಡಿಗೆ ಮೀನ್ ಹಿಡೆಕೆ ಹೋಗಿ ಅಲ್ಲಿ ಮಾಯ ಆದವೆ. ಈ ಹಿಂದೆ ನಡ್‌ಸಿದ ಪವಾಡಂದಾಗಿ ಅವು ದೆವ್ವತ್ವಕ್ಕೆ ಏರ್‌ವೆ. ದೈಯ್ಯು ಬಾವನೊಟ್ಟಿಗೆ ಮೀನ್ ಹಿಡೆಕೆ ಹೋಕನ ತಂಗೆ ಎಚ್ಚರಿಕೆ ಕೊಟ್ಟರೂ ಈ ಮಾತ್‌ನ ಮೀರಿ ಮೀನ್ ಬೇಟೆಗೆ ಹೋದವೆ. ದುರಂತಕೆ ಸಿಕ್ಕುವೆ.

ಅವು ಬೆಮ್ಮರೆ ಗುಂಡಿಲಿ ಮುಳ್‌ಂಗಿ ಮಾಯ ಆದ ಸಂಗತಿ ತಿಳ್‌ದ್ ತನ್ನಿ ಮಾನಿಗ ಅದ್‌ನು ಅದೇ ಕೆರೆಗೆ ಹಾರಿ ಮಾಯ ಆದೆ. ಮೊಗೇರರ್‌ಲಿ ಬಾವ ಅವಳಿಗ ತೇಳಿರೆ ಅಣ್ಣ ತಂಗೆ, ತಂಗೆನ ಗಂಡ ಕೆಲೆತ ಪೆರ್‌ನ ಮತ್ತೆ ಎಣ್ಮೂರು ದೈಯ್ಯು ಒಟ್ಟಿಗೆ ಸಾಹಸ ಕಾರ್‌ಯಗಳ ಮಾಡ್‌ವೆ. ಆರಾದನೆಲಿ ಇವರ ಒಟ್ಟಿಗೆ ಬದ್ರ ಕಾಜವ (ಬದ್ರ ಕಡೆಂಜು) ತೇಳ್‌ವ ಪಾತ್ರ ಒಂದ್ ಬಂದದೆ. ಇಂವ ಮುಗೇರ ದೆವ್ವಗಳ ಬಂಟತೇಳಿ ಕರ್‌ಸಿಕಂಡದೆ. ಕೋಟಿ ಚೆನ್ನಯರ ಒಟ್ಟಿಗೆ ಕುಜುಂಬ ಕಾಂಜವನೂ ಆರಾದುಸುದರ ಇಲ್ಲಿ ಹೋಲ್‌ಸಕ್. ಹಾಂಗೇನೆ ಬೈದ್ಯೆರ್ ನೇಮಲಿ ಮೈಂದಾಲ್ (ಮಾಣಿಬಾಲೆ) ತೇಳ್‌ವ ಒಂದ್ ಹೆಣ್ಣ್ ದೆವ್ವಕು ಆರಾದನೆ ಮಾಡಿಕೆ ಮೊಗೇರ್‌ಲೆ ಕೋಲಲಿ ತನ್ನಿಮಾನಿಗನ ಆರಾದನೆ ಮಾಡಿವೆ. ಮೊಗೇರ್‌ಲೆ ಪಾಡ್ದನಲಿ ಅವರ ಮೇಲೆ ಮೇಲ್ ವರ್‌ಗದವರಂದಾದ ಸೋಸಣೆನ ವಿವರಗ ಸಿಕ್ಕಿದೆ. ಕೋಟಿ ಚೆನ್ನಯರಾಂಗೇ ಮೊಗೇರರ್ ಅಕಾಲ ಸಾವುಂದಾಗಿ ದುರಂತ ಅಂತ್ಯ ಕಂಡವೆ.

ಮುಗೇರ ವೀರರ ಹೆಸರ್‌ಗ ಪ್ರಾದೇಸಿಕಾಗಿ ಬೇರೆ ಬೇರೆ ಆಗಿರ್‌ದು ಉಟ್ಟು. ಕೆಲೊವ್ ಕಡೆ ಅವರ ಮುದ್ದ ಮತ್ತೆ ಕಳಲಂತ ಹೇಳ್‌ವೆ. ಕಾಸರಗೋಡು ಪ್ರದೇಸಲಿ ಇವರ ಮಾನ್ಯಲೆ ಮತ್ತೆ ಪೆರ್‌ನಲೆತೇಳಿ ಕರ್‌ದವೆ. ಮಾಣಿಗ ಇವರ ತಂಗೆ, ಅವಳ ನಾರಾಂಪಾಡ್ ಕಳಲಂಗೆ ಮೊದ್‌ವೆ ಮಾಡಿ ಕೊಟ್ಟೊ. ಎರಡ್‌ನೆದಾಗಿ ಮುಂಡಾಲ ಜಾತಿನ ಬುಟ್ಟ್ ಮೊದ್‌ವೆ ಮಾಡಿ ಕೊಟ್ಟೊ.

**ಕಾನದ–ಕಾಟದ :** ತುಳುನಾಡ್‌ನೆ ಮೂಲ ನಿವಾಸಿಗ ಆದ ಆದಿದ್ರಾವಿಡ/ಮನ್ಸ ಸಮುದಾಯದ ಸಾಂಸ್ಕೃತಿಕ ಅವಳಿ ವೀರರ ಕಾನದ–ಕಟದ ತೇಳಿ ಕರ್‌ದವೆ. ಇವರ ಹುಟ್ಟು, ಬೊಳಕ್ಕೆನ ಹಾಂಗೆ ಸಾಹಸ ಸಾದನೆ ಬಗೆನ ಬಾಯಿಲಿ ಹೇಳಿಕಂಡ್ ಇರ್‌ವ ಪಾಡ್ದನ ಕತೆಗ ಉಟ್ಟು, ಆ ಪ್ರಕಾರಲಿ ಇವು ಹುಟ್ಟು ಮೂಲಲಿ ಅವ್ಳಿಗ ಬೆಳವಣಿಗೆಲಿ ಹಾಂಗೆ ಮರಣಲಿಸ ಅಸಾದಾರಣ–ಪವಾಡ ಸದ್ರುಶ ಸಂಗತಿಗ ಒಳೊ. ಈ ಬಗೆನ ಸಂಗತಿಗನೇ ಅವು ಅಸಮಾನ್ಯತೆನ ಪಡ್ಕಂಬಕೆ, ದೆವ್ವತ್ವಕ್ಕೇರಿಕೆ ಕಾರಣ ಆಗುಟು. ಇವರ ಸಮುದಾಯದವು ಪೂರಾ ಇವರ ಆರಾದನೆ ಮಾಡಿಕೆ ಪ್ರೇರಣೆ ಆಗುಟು.

ಕಿಜಗನ ಗುತ್ತು ಮನೆನ ವೀರ ಬಲ್ಲಾಳನ ಮೂಲದ ಹೆಣ್ಣ್ ಬೊಮ್ಮಿ. ಇದ್ ಯಾಗೋಳುನಾಂಗೆ ಒಂದಿನ ಸುಬ್ಬಿ ಗುಡ್ಡೆಗೆ ಸೊಪ್ಪು ತಾಕೆ ಹೋತ್. ಹೋಕನ ಹೆಣ್ಣ್ ಕೂಸೊಂದು ಮರ್‌ಡುದು ಕೇಳ್ದೆ. ಒಡೆಯಂಗೆ ಸುದ್ದಿ ಮುಟ್ಟಿಸಿದೆ.ಆಕನ, ಅಂವ ಪರಿವಾರದೊಟ್ಟಿಗೆ ಬಂದದೆ. ಹುಡ್ಕಿಸಿದೆ. ಕೂಸುನ ಸೊರ ಕೇಳ್ದೆ. ಕೂಸು ಕಾಂಬೋದೇ ಇಲ್ಲೆ. ಎಲ್ಲವುಕೂ ಆಶ್ಚರ್‌ಯ ಆತ್. ದೆವ್ವನ ಪ್ರಾರ್ತಿಸಿದೊ ಆಗ ಕೂಸ್ ಕಂಡದೆ. ಬೊಮ್ಮಿನೆ ಈ ಕೂಸೆನ ಸಾಂಕುದುತ ತೀರ್ಮಾನ ಆತ್. ಹಾಲ್ ಕುಡ್ಸಿಕೆ ಹಸ್,ಕರ್‌ಚಿಗೆ ದುಡ್ಡು ಬೊಮ್ಮಿಗೆ ಕೊಟ್ಟೊ.. ಹೆಣ್ಣ್ ಕೂಸುಗೆ 'ಬೊಳ್ಳೆ' ತೇಳಿ ಹೆಸರಿಸಿದೊ. ಪಾಂಬಲಜ್ಜ–ಪೊಬಲ ಕರಿಯ ಅವಳಿಗ ಬೊಮ್ಮಿನ ಮಾವಂದರ್. ಇವರ ಬೆಂಬಲಲಿ ಮುಂದೆ ಬೊಳ್ಳೆ ಬೆಳ್ದದೆ.

ಕಂಗು ಹಿತ್ಲು ಕಾಂತ ಬೈದನ ಹೆಣ್ಣ್ ದೇಯಿ ಬೈದೆದಿಗೆ ಮಕ್ಕ ಇತ್ತ್ಲೆ. ದೇಯಿ ಬೊಳ್ಳೆನ ಮನೆಗೆ ಕರೆತಂದದೆ. ಬೊಳ್ಳೆ ದೊಡ್ಡವಳಾದೆ. ದೇಯಿ ಮತ್ತೆ ಬೊಳ್ಳೆ ಒಂದೇ ದಿನ ಮುಟ್ಟಾದೊ. ಮಡಿ ಮೀಯಕೆ ಕೋಳಿ ಕೂಂಗುವ ಹೊತ್ತ್‌ಲಿ ಕರಿಯಲ ಚೋಡಿಗೆ ಹೋದ. ಮೇಲೆ ಪಂಜುರ್‌ಲಿಗುಡಿ, ಕಾಗಡೆ ಸಿರಿಗಳ ಗುಂಡಿ ನೊಡುಲಿ ತೊಟ್ಟಿಲ್ ಗುಂಡಿ. ಈ ತೊಟ್ಟಿಲ್ ಗುಂಡಿಲಿ ಮಡಿ ಮಿಂದೊ. ಮೇಲೆ ಬಾಕನ ಹೆರ್‌ಗೆಲ್ ಮಿನುಗ ಆಡುತ್ತಿದ್ದೊ ಇದರ ಕಂಡ ದೇಯಿ ಬೆಳ್ತಿಗೆ ಅಕ್ಕಿ ಹಾಕಿತ್, ಈ ಅಕ್ಕಿ ನಿಮ್ಮ ಹೊಟ್ಟೆಲಿ ಹಿಟ್ಟು ಆದ ಹಾಂಗೆ ನಮ್ಮ ಹೊಟ್ಟೆಲಿ ಗರ್‌ಬ ನಿಲ್ಲಲಿತ ಹೇಳ್ತ್. ಗಂಡ ಇಲ್ಲದ ಬೊಳ್ಳೆಗೆ ಈ ಮಾತು ಕೇಳಿ ಹೆದ್ರಿಕೆ ಆತ್. ಇಬ್ಬರಿಗೂ ಗರ್‌ಬ ನಿತ್ತತ್. ಬೊಳ್ಳೆ ಗಂಡ ಇಲ್ಲದೆ ಬೊಸುರಿಯಾದ್ದ್ ಊರೆಲ್ಲ ಸುದ್ದಿ ಆತ್. ಕೀಜಗನ ಗುತ್ತು ಬಲ್ಲಾಳಂಗೆ ವಿಷಯ ಮುಟ್ಟಿತ್. ಬೊಳ್ಳೆನ ಅರಮನೆಗೆ ಕರ್‌ಸಿದ್ ಪ್ರಮಾಣ ಮಾಡ್ಸಿದ್.

ಬೊಳ್ಳೆ ಸತ್ಯಲಿ ಹುಟ್ಟಿದ ಮಗಳ್. ಬೂಮಿಗೆ ಬೆನ್ನ್ ಕೊಟ್ಟಗ್ರಾಕಿ ಅಲ್ಲ ಬಾಣಕ್ಕೆ ಮೋರೆ ತೋರ್‌ಸಿದವ್ಳಲ್ಲ. ಗಂಡ್‌ಗಳ ಮೋರೆ ನೋಡ್ದವಳಲ್ಲ. ಇದ್ ಸತ್ಯದಗರ್‌ಬ ತೇಳಿದ್ ಅರಸ ಓಡ್ಡಿದ ಹದ್‌ನಾರ್ ಕೈನ ಕಾದ ಎಣ್ಣೆ ಕೊಪ್ಪರಿಗೆನ, ನಾಗನ ಹಾಕಿದ ಬಾಯಿ ಮುಚ್ಚಿದ ಕೊಡ್ಪಾನಕ್ಕೆ ಕೈ ಹಾಕುವ ಸವಾಲನ ಎದುರ್‌ಸಿತ್. ಬೊಳ್ಳೆ ಇದರ್‌ಲಿ ನಾ ಗೆದ್ದರೆ ನಂಗೇನ್ ನೀವು ಕೊಡ್ವರಿ ತೇಳಿ ಪ್ರತಿ ಸವಾಲು ಹಾಕಿತ್. ಅರಸ ಹೇಳ್ತು ನೀ ಕೇಳ್ದರ ಕೊಡುವೆತ.. ಸುಬ್ಬಿಗುಡ್ಡದ ಗೋಳಿಮರದ ಜಂತಿಲಿ ಹುಟ್ಟಿದ ಸತ್ಯದ ಮಗಳ್ ಹೌದಾದರೆ ಗೆಲ್ಲುವೆಂತ್ಹೇಳಿ ಕೊಪ್ಪರಿಗೆನ ಇಳ್ದ್ ಮೇಲೆ ಬಾತ್. ಅರಸನ ಸವಾಲ್‌ನ ಸತ್ಯದ ಬಾಲೆ ಬೊಳ್ಳೆ ಗೆದ್ದತ್. ಬಲ್ಲಾಳ ಒಂಟಿ ಬೊಳ್ಳೆಗೆ ಅಂದ್ರ ತೇಳ್‌ವ ಗಂಡ್‌ನೊಟ್ಟಿಗೆ ಮೊದ್‌ವೆನ ಮಾಡ್ಸಿತ್.

ದೇಯಿ ತಿಂಗಳ್ ತುಂಬಿ ಹೆಣ್ಣು ಕೂಸುಗೆ ಜೆನ್ಮ ಕೊಟ್ಟತ್. ಕಿನ್ನಿದಾರು ತ ಹೆಸರ್ ಇಸಿದೊ. ಅದೇ ದಿನ ಬೊಳ್ಳೆನೂ ಸ ಅವಳಿ ಗಂಡು ಮಕ್ಕಳಿಗೆ ಜೆನ್ಮ ಕೊಟ್ಟತ್. ದಾರಿಲಿ ಹೋಕನ ಕಾನದ ಹಕ್ಕಲೆ

ಬಿದ್ದ ಮಜ್ಜ ಕಾನದ, ಕಟ್ಟದ ಬಳಿ ಬಿದ್ದ ಮಜ್ಜ ಕಟದ ಹೆಸರ್‌ಂದ ಕರ್‌ದೊ. ಕಾನದ – ಕಟದ ದೇಯಿನ ಆರೈಕೆಲಿ ಮೂಲದವರಂಗೆ ಬೆಳ್ದೊ. ನಾವುಗೆ ದರ್ಮದ ಊಟ ಬೇಡ ಮಾಡಿಕೆ ಕೆಲ್ಸ ಕೊಡಿತ ದೇಯಿನೊಟಿಗೆ ಅವು ಕೇಳ್ದೊ.ಆ ಪ್ರಕಾರ ಅವ್ಕೆ ದನ ಕಾಯುವ ಉದ್ಯೋಗ ಆತ್. ಒಂದಿನ 'ತಡಮೆ'ಂದ (ಬೇಲಿಗಿರುವ ಗೇಟ್) ಆಚೆ ಹೋಕಾಗದ್‌ತೇಳ್‌ವ ನಿಯಮನ ಮೀರಿ ಮಕ್ಕ ಹೋದೊ. ಅಲ್ಲಿದ್ದ ಮಕ್ಕಳೊಟ್ಟಿಗೆ ಆಟ ಆಡ್ಕನ ಆ ಮಕ್ಕ ಇವರ ಹೊಲೆಯರ ಮಕ್ಕ ತೇಳಿ ಅವ್‌ಮಾನ ಮಾಡ್ದೊ. ಕೋಪಂದ ಆಟಾಡತಿದ್ದೊ ಆ ಬಲ್ಲಾಳ ಮಕ್ಕಳ ಅಟನ ಸಮಾನ್‌ನ ಎಳ್ಕಂಡ್ ಅವರ ಓಡ್ಸಿದೊ. ಇದರ ಕೇಳಿ ಸಿಟ್ಟಾದ ಬಲ್ಲಾಳ ಇವರ ಬೀಡಿಗೆ ಕರ್‍ಸಿ, ಸುತ್ತು ಪಡ್ಪಿರೆ ಬಾಗಿಲು ಹಾಕ್ಸಿ. ಹುಣ್ಸೆ ಕೋಲುಲಿ ಹೊಡ್ಸಿತ್. ಕಾನದ– ಕಟದರಿಗೆ ಏನೂ ಆತ್‌ಲೆ. ಪಡ್ಪಿರೆನ ಬಾಗ್ಲ್ ಸತ್ಯದ ಕಾನದ–ಕಟದರ್‌ಗೆ ತನ್ನಂತಾನೆ ತೆಕ್ಕಂಡತ್.

ಮುಂದೆ ಇವು ಬೈದೆತಿನ ಮಾತಿನ ಮೇರೆಗೆ ಅಯ್ಯೆಗೆ ಮಾತ್ ಕೊಟ್ಟಿದ್ದ ಕಟಪಾಡಿ ಬಲ್ಲಾಳಲ್ಲಿಗೆ ಹೋದೊ. ಅಯ್ಯೆಗೆ ಕೊಟ್ಟ ಮಾತ್‌ನ ನೆಂಪುಸಿದೊ. ಬಲ್ಲಾಳ ಏನು ಬೇಕುತ ಕೇಳಕನ 'ನಿಮ್ಮ ಹೆಣ್ಣ್ ಸುತ್ತುಂವ ನಂದನವನ ಕೊಡಿ'ತ ಕೇಳ್ದೊ. ಕೊಡಿಕೆ ಒಪ್ಪದ ಬಲ್ಲಾಳ ಬೆಳ್ಳಿನ ಎರಡ್ ಮೊಡ್ಪಳೆ ಮಾಡ್ಸಿಕೊಟ್ಟತ್. ಒಟ್ಟಿಗೆ ಗದ್ದೆನ ಕೊಟ್ಟತ್. ಅಲ್ಲಿ ಇವು ನೀರಿಲ್ಲದ್ದಕೆ ಬಾವಿ ತೋಂಡಿದೊ, ಉಳುಮೆನ ಎತ್ತ್‌ಗೆ, ಬಿತ್ತುವ ಬೀಜಕೆ ಊರ್ ಸಂಚಾರ ಹೊರ್ಟೊ. ದಾರಿಲಿ ಮುದ್ದ– ಕಳಲ ಮುಗೇರರ ಎದುರಾದೊ. ಕುಕ್ಕೆನ ಕುಲ್ಕುಂದಕೆ ಬಂದೊ ಕಾರಿ–ಕಬಿಲ ಜೋಡಿ ಎತ್ತ್ ಪಡ್ದೊ. ಕೊಂಬಾರ್ ದಡ್ಡ್ ಪಲ್ಕೆಲಿ ಎತ್ತುಗಳ ಕಟ್ಟಿದೊ. ಅಲ್ಲಿಂದ ಗಟ್ಟಕೆ ಹೋದೊ. ಅಲ್ಲಿನ ಅರಸಂದ ಸತ್ಯದ ಬೆಳೆ ಅತಿಕಾರನ ಪಡ್ಕೊಂಡೊ. ಅರಸ ಬೆಳ್ತಿಗೆ ಕುಟ್ಟಕ್ಕಾಗದ್;ಇದ್ ಸುಗ್ಗಿನ ಬೆಳೆ ಮಾತ್ರ, ಅಲ್ಲದೆ ಇದ್ ಬೇರೆಲ್ಲಿನು ಬೆಳೆಯಕ್ಕಾಗದ್ ತೇಳ್ದೊ.. ಕಾನದ–ಕಟದ ಬತ್ತನ ಇಟ್ಟೆಜ್ಜ ಸೊಪ್ಪುಲಿ ಮುಚ್ಚಿ, ನೆಕ್ಕಿನಲ್ಲಿ ಸುತ್ತಿ, ಕುಲಾಯಿ ಬೊಳ್ಳಿಲಿ ಕಟ್ಟಿ ಹೊತ್ತುತಂದೊ. ಅತಿಕಾರ ಬೀಜೆನ ತಕಂಡ್ ಹೋವ ಇವರ ತಡಿಯಕೆ ಚಾಮುಂಡಿ ದೈವ ಎದುರಾಗಿ ಕಾದಾಟಕೆ ನಿತ್ತತ್. ನಾಗ ಬೆರ್ಮನ ನೆನ್ನಿಕಂಡ್ ಕಾದಾಡಿದ ಕಾನದ–ಕಟದ ಚಾಮುಂಡಿನ ಜಯಿಸುವೆ. ಕೈ ಸೋತ ಚಾಮುಂಡಿ ನೀವು ತಕಂಡ್ ಹೋಗತಿರ್‌ವ ಅತಿಕಾರ ಬಿತ್ತ್ ತುಳುನಾಡ್ಲಿ ಪ್ರಸಿದ್ದಿ ಆಗಲಿತ ಹರ್‌ಸಿದೆ.ಯಾರ್ ಈ ಬತ್ತನ ಮುಟ್ಟಿ ಪ್ರಮಾಣ ಮಾಡ್‌ವೆನೊ ಅವು ಸರ್‌ವನಾಶ ಆದವೆತ ಹೇಳಿ ಅವ್ಕೆ ಅಜೇಯ ಕತ್ತಿಗಳ ಸಾ ಕೊಟ್ಟವೆ.

ಕಾನದ–ಕಟದ ಕತ್ತಲೆ ಬೊಳ್ಪಾಕನ ಮುಂದೆ ಗದ್ದೆ ಉತ್ತ್ ಬೀಜ ಬಿತ್ತಿ ಬೆಳೆ ತೆಗ್ದವೆ.ತೀರಿ ಹೋಗಿದ್ದ ಅಯ್ಯೆಗೆ ಬೊಜ್ಜ ಮಾಡ್ದೊ.. ದೇಯಿನೊಟಿಗೆ ಹೇಳಿ ಕಾನದ– ಕಟದ ಊರ್ ಬುಟ್ಟವೆ.ಅವರ ಒಳ್ಳದ್ಕೆತೇಳಿ ದೇಯಿ ಅವರ ನಂಬುಕೆನ ಕುಲ ದೈವ ಪಂಜುರ್‌ಲಿಗೆ ಹರ್ಕೆ ಹೊತ್ತದೆ.

ಪಂಜಲಿ ಗಡಿಕಲ್ಲ್‌ಲಿ ಗಾಳ ಹಾಕತಿದ್ದ ಕೋಟಿ–ಚೆನ್ನಯರೊಟ್ಟಿಗೆ ಇವ್ಕೆ ಕಾಳಗ ನಡ್ದದೆ ಬೈದರ್ಲು ಕೈ ಸೋತವೆ. ಪರಸ್ಪರ ರಾಜಿ ಆದವೆ. ಅಲೆಲ್ಲ ಒಟ್ಟಾಗಿ ಬಾಕನ ಬಾಯಾರ್‌ಕೆಗೆ ನೀರ್ ಸಿಕ್ಕುದುಲೆ. ಕೋಟಿ–ಚೆನ್ನಯ ನೀರ್‌ಗಾಗಿ ಸುರ್‌ಗೆ ಹಾಕಿದೊ. ನೀರು ಬಾದುಲೆ. ಮುದ್ದ–ಕಳಲ ಬಾಣ ಬುಟ್ಟೊವೆ ನೀರ್ ಬಾದುಲೆ. ಕಾನದ–ಕಟದ ಬಿರ್ಮರ ದೇವುರ ನೆನ್ನಿಕಂಡ್ ಅಲಂಬುಡ ಕೋಲ್‌ಂದ ನೆಲ ಕೇರುವೆ. ಕಲ್ಲೆಡೆಂದ ನೀರ್ ಬಾತ್. ಮೈಲಿಗೆ ಮಾಡಕ್ಕಾಗದ್‌ತೇಳಿ ಬೈದರ್ಲು ಸುರ್‌ಗೆಂದ ನೀರುಕುಡ್ದೊ. ಮುಗರ್ಲು ತಮ್ಮ ಕಳಲ ಕೈಂದಲೇ ಕುಡ್ದ್ ಮೈಲಿಗೆ ಮಾಡ್ತ್. ಕಾನದ–ಕಟಂಗೆ ಕೋಪ ಬಂದ್ ಮುಗರ್ಲ್‌ನ ಓಡ್ಸಿಕನ ನಾಗ ಬಿರ್ಮೆರ್ ಪ್ರತ್ಯಕ್ಷ ಅಗಿ ಸಮಾದಾನ ಪಡ್ಸುವೆ. ಎಲ್ಲರೂ ಒಟ್ಟಾಗಿ ಮಲೆಂದ ಇಳ್ದೊ.

ಪಾಂಬಲ– ಪೊಂಬಲ ಕರಿಯರ್ ಬಂದ್ ಅವರ ಅಯ್ಯೆ ನಾಗ ಬಿರ್ಮೆರಿಗೆ ಹೊತ್ತ ಹರ್ಕೆನ ನೆಂಪುಸಿದೊ 'ಬಂಗಾರದ ಮಗು ತೊಟ್ಟಿಲು' ಅರ್‌ಪಿಸಿಕೆ ಅವು ಬಿರ್ಮೆರೆ ಗುಡಿಗೆ ಬಂದಾಕನ ಬ್ರಾಹ್ಮಣ ಬೀಗ ಹಾಕಿ ಹೋಗಿದ್ದದೆ. ನಾವು ಸತ್ಯದ ಮಕ್ಕ ಮುಚ್ಚಿದ ಬಾಕಿಲ್ ತರ್ದ್ ಬರೊಕು. ನಂದಾದೀಪ ಹೊತ್ತೊಕುತ ಅವು ಪ್ರಾರ್ತನೆ ಮಾಡ್‌ವೆ. ಹಾಂಗೆ ಆದೆ. ಬಿರ್ಮೆರೆ ಸೇವೆ ನಡ್ಸುವೆ.ಅಂದ್. ಕತ್ತಲೆಗೆ ಮಲ್ಗಿದವ್ಕೆ ಹೆಣ್ಣ್ ನ ರೂಪಲಿ 'ಮಕ್ಕಳೇ ನೀವು ಬೊದ್ಕಿದ್ ಸಾಕ್. ಇಲ್ಲಿ ಬನ್ನಿ. ನಾ ನಿಮ್ಮ ಅಯ್ಯೆ.. ನಿಮ್ಮದೊಂದು ಹರ್ಕೆ ಬಾಕಿ ಉಟ್ಟು, ಅದರ ಜೋಡಿ ಮೀನ್ ಗೈಪು, ನೀರ್ ದೋಸೆಂದ ಅಗೆಲು ಹಾಕಿ ಕಲ್ಲ್‌ರ್ಟಿಗೆ ಬಳ್ಸಿತ' ಮಾತ್ ಮುಗ್ಸಿ ಮಾಯ ಆತ್.

ಹರ್ಕೆ ಒಪ್ಪುಸಿಕೆತೇಳಿ ಕರಿಯಲ ಜೋಡಿಗೆ ಮೀನ್ ಹಿಡಿಯಕೆ ಅವು ಹೋದವೆ. ನೀರ್‌ಗೆ ಕಡು ಹಾಕಿ ಮೀನ್ ಹಿಡಿಕೆ ಬಲೆ ತಾಕೆ ಕಮ್ಮನ ಹಿಸ್ಳ್‌ಗೆ ತಮ್ಮ ಹೋದೆ, ಬೆಳ್ಳಿ ಮುಟ್ಪಾಳೆನ ಪೊಯ್ಯದ ಮೇಲೆ ಇಸಿ ತಮ್ಮನ ಮಾತ್ ಮೀರಿ ಮೀನು ಹಿಡಿಯಕೆ ಅಣ್ಣ ನೀರಿಗಿಳ್ದ್ ಮುಳುಂಗಿ ಸತ್ತದೆ. ತಮ್ಮ ಬೆಳ್ಳಿ ಮುಟ್ಪಾಳೆನ ಕಂಡ್ ಅಣ್ಣ ಇಲ್ಲದರ ನೋಡಿ,ಅಣ್ಣ ಸತ್ತತ್ ತೇಳಿ ಬೆರ್ಮರ ನೆನ್ಸಿ ತಾನು ನೀರ್‌ಗೆ ಹಾರಿ ಜಿವ ಬುಟ್ಟದೆ.. ನೀರೊಳಗಿಂದ ಪಂಜುರ್‌ಲಿ ದೈವ ಮೇಲೆ ಬಂದದೆ, ಮುಂದೆ ಈ ದೈವದೊಟ್ಟಿಗೆ ಮಾಯಲಿ ಸೇರಿಕಂಡ್ ಕಾನದ ಕಟದಗ ದೈವಗ ಅಗಿರುವಂತ್ಥೇಳಿ ಆರಾದನೆಗೆ ಬಂದೊ.

ಕಾನದ –ಕಟದ ಬೆರ್ಮರ್ ದೈವದ ಬಕ್ತರೆ. ಹಾಗಂತ್ಥೇಳಿ ಇವು ಬೆರ್ಮರ್‌ಲಿ ಐಕ್ಯ ಆದುಲೆ. ಕುಲ ಮೂಲದ (ಕುಲ ಲಾಂಚನ), ಪ್ರಾತಿನಿದಿಕ ದೈವ ಪಂಜುರ್‌ಲಿನೊಟ್ಟಿಗೆ ಸೇರಿ ದೈವಗ ಆದವೆ. ವಾಸ್ತವಿಕ ದ್ರಿಸ್ಟಿಲಿ ಇದ್ ಸಹಜತ ಕಂಡದೆ. ಕಾನದ–ಕಟದರ್‌ಗೆ ಆರಾದನೆ ಕೋಲ ರೂಪಲಿ ಆದುಲೆ. ತಡ್ಪೆ ಬೂಲ್ಯ ತೇಳುವ ಸರಳ ಆಚರಣೆಲಿ ನಡ್ದದೆ. ಈ ದೈವಗ ಬೆಳ್ಳಿ ಮುಟ್ಪಾಳೆಲಿ ಕಂಡ್‌ಬಂದವೆ.. ಇದ್ಕೆ ಆರ್ತಿಕ ಕಾರಣವೊಂದೇ ಅಲ್ಲದೆ ತುಳುನಾಡ್‌ನ ಜಾತಿ, ಮತ ಮೂಲ ವೆವಸ್ತೆನ




ಅನುಸರಣೆನೂ ಕಾರಣವಾಗುಟ್ಟು. ಆಶಯ ಮೂಲಲಿ ತುಳುನಾಡ್‌ನೆ ಸಾಂಸ್ಕೃತಿಕವೀರಂಗ ಎಲ್ಲವು ದೆವ್ವಗಳೊಟ್ಟಿಗೆ ಸೇರಿ ದೆವ್ವಗಾದು ಸಾಮಾನ್ಯ ಆಗಿ ಕಂಡ್ ಬಂದದೆ. ಹಾಂಗೆಂತ ಹೇಳಿ ಇವು ಸೇರಿಗೆ ಆವ ದೆವ್ವಗ ಎಲ್ಲನೂ ಆರಾದನೆನ ಸಾಂಸ್ಕೃತಿಕ ಜಗತ್ತ್‌ಲಿ ಬಿನ್ನಸ್ತರದವು. ಸಮಾನ ನೆಲೆನವು ಅಲ್ಲ. ಕಾನದ– ಕಟದರ್‌ಗೆ ಬೈದರ್ಲು, ಮುಗರ್ಲುಗಳಿಗೆ ನಡ್ಸುವ ರೀತಿನ ಗರಡಿ ನೇಮ, ಕೊಟ್ಯದ ಕೋಲಗಳ ಪೊದ್ದತಿನ ಹಾಂಗೇನು ಇಲ್ಲೆ. ಪಂಜುರ್ಲಿ–ಕಲ್ಲ್‌ರ್ಟಿ, ದೆವ್ವಗಳಿಗೆ ನೇಮ ಕೋಲ ನಡ್ಸುದರೊಟ್ಟಿಗೆ ಕಾನದ–ಕಟದರ್‌ಗೆ ತಡ್ಪೆ ಬೂಳ್ಯಕೊಡ್ದು ಸಂಪ್ರದಾಯ ಆಗುಟು. (ಪಿ.ಆರ್.)

**ಕಾಂತಾಬಾರೆ ಬೂದಾಬಾರೆ :** ಹಳ್ಳದ ನೀರ್ ಕುಡ್‌ದ್ ಬೊಸ್‌ರಿ ಆದ ದೇಯಿ ಬೈದೆದಿ ಕೋಟಿ ಚೆನ್ನಯ ಅವಳಿ ಮಕ್ಕಳ ಹೆತ್ತರೆ ಅರಮನೆನ ಬಾಮಿ ನೀರ್ ಕುಡ್‌ದ್ 'ಆಚೆ' ತೇಳ್‌ವ ಬಿಲ್ಲವರ ಗೂಡೆ ಬೊಸ್‌ರಿ ಆಗಿ ಕಾಂತಾಬಾರೆ ಬೂದಾಬಾರೆತ ಅವ್‌ಳಿ ಮಕ್ಕಳ ಹೆತ್ತದೆ. ಬವುಸ ಹಳ್ಳದ, ನೀರ್ ಬಾಮಿ ನೀರ್ ಇಲ್ಲಿ ಸಾಂಕೇತಿಕ ಸಂಗತಿಗ.

ಉಳ್ಳೂರು ಗುತ್ತುನ ಪೆರ್‌ಗಡೆ ರಾಣಿ ಉಳ್ಳು ಪೆರ್‌ಗಡಿತಿ ಸುರತ್ಕಲ್


ಕಾಂತಾಬಾರೆ–ಬೂದಾಬಾರೆ

ಕಟ್ಟೆನ ಹಕ್ಕಲೆದ್. ಉಳ್ಳೂರು ಗುತ್ತುನ ಪೆರ್‌ಗಡೆ ರಾಣಿ ಉಳ್ಳು ಪೆರ್‌ಗಡಿತಿ ಸುರತ್ಕಲ್ ಕಟ್ಟೆನ ಹಕ್ಕಲೆ ನಿತ್ತಿದ್ದ ತಬ್ಬುಲಿ ಗೂಡೆನ ವಿಚಾರ್‌ಸಿ ಅದರ ಅರಮನೆಗೆ ಕರ್‌ಕಂಡ್ ಬಂದ್ ಬೆಳ್‌ಸಿ ಮೊದ್‌ವೆ ಮಾಡಿಕೊಟ್ಟವೆ.

ಅದ್‌ಕೆ ಹುಟ್ಟಿದ ಮಕ್ಕಳೇ ಈ ಅವುಳಿ ವೀರರ್. ಇವ್ ತಮ್ಮ ಆಸ್ರಯದಾತ ಸಾಮಂತ ಅರಸರ್‌ಗಾಗಿ ಚೌಟ ಅರಸನ ವಿರುದ್ದ ಹೋರಾಟ ಮಾಡ್‌ವೆ. ಕೋಟಿ ಚೆನ್ನಯರ್‌ಗೂ ಕಾಂತಾಬಾರೆ ಬೂದಾಬಾರೆ ಯಮಳರ್‌ಗೆ ಹೋರಾಟ ನಡ್‌ದ ಉಲ್ಲೇಕಗೊಳೊ. ಅವರ ಹೋರಾಟಲಿ ಯಾರೂ ಸೋಲ್‌ವ ಸಂದರ್‌ಬ ಬರದಿರಿಕನ ಬಪ್ಪನಾಡ್‌ನ ದೇವಿಯೇ ಪ್ರತ್ಯಕ್ಷ ಆಗಿ ರಾಜಿಗಾಗಿ ಅವರ ಸಮಾದಾನ ಮಾಡ್‌ದೆ. ಒಟ್ಟಿಗೆ ಮೂಲ್ಕಿನ ಒಂಬೊತ್ತು ಮಾಗಣೆ ಒಳೆಗೆ ಕೋಟಿ ಚೆನ್ನಯರ ಗರ್‌ಡಿಲಿ ಇರಿಕಾಗದ್ ತೇಳ್‌ವ ಸರತ್‌ನ ಹಾಕಿದೊ. ಒಂದೇ ವರ್‌ಗಕೆ ಸೇರ್‌ದ ವೀರರ ನೊಡುಲಿ ನಡ್‌ದ ಗರ್‌ಸಣೆನ ಹಿನ್ನೆಲೆ ಬಗ್ಗೆ ಮೂಲ್ಕಿನ ಉಳಿಪಾಡಿಲಿ ಈ ವೀರರ ಆರಾದನ ಕೇಂದ್ರ ಉಟ್ಟು, ಅವರ ಬಟ್ಟೆ, ಬಿಲ್ಲ್ ಬಾಣ, ಅವಸೇಸಗ ಅವರ ಹುಟ್ಟ್‌ಗೆ ಕಾರಣ ಆದ ರಸಮಯಿ ಬಾಮಿ, ಅವರ ತೂಗಿದ ಅಮೂಡ ತಾಕಡೆ ಮರ ಹಂಗೆನೆ ಅವು ನಡ್‌ಸಿದ ಪವಾಡ ಕೃತ್ಯಗ ಇಂದೂ ಈ ಪರಿಸರದ ಕೊಲ್ಲೂರು ಮತ್ತೆ ಗುಡ್ಡೆ ಸಾನತೇಳ್‌ವಲ್ಲಿ ಇರ್‌ದರ ನಾವ್ ಕಾಣಕ್. ಬವುಸ ಇವು ಅದ್ಯಯನಕೆ ಬೇಕಾದಂತ ಅಮೂಡ ಅಂಸಗ. (ವಿ.ಎನ್.)

**ಪೆರಿಯಾಕುಳು (ವೀರ ವಿಕ್ರಮರ್) :** ಅರೆಬಾಸೆ ಮತ್ತೆ ತುಳು ಪ್ರದೇಸಲಿರುವ ದೆವ್ವಗ. ಬಟ್ಟೆನ ಹಕ್ಕಲೆ ಕೊಳ್‌ಂಬೆ ಪ್ರದೇಸದ ಬೈಲಬೀಡ್ ಸುಮಾರ್ 800 ವರ್‌ಸ ಹಿಂದೆ ವಿಜಯನಗರ ಸಾಮ್ರಾಜ್ಯದ ವೀರ ಪ್ರತಾಪಸಿಂಹನ ಅದೀನಲಿರಿಕನ ನಡ್‌ದ ಚರಿತ್ರೆ, ವೀರ ವಿಕ್ರಮರ್ ಜೈನ ವಂಸದ ಅವುಳಿ ಮಕ್ಕ, ಓದಿಕೆತ ಇವು ಅವ್ವನ ಬುಟ್ಟ್ ದೂರದೇಸಕೆ ಹೋದವೆ. ಅವ್ವ ಮಕ್ಕಳ ನೋಡ್‌ವ ಆಸೆಂದ ಅವರ ನೆಂಪ್‌ಗಾಗಿ ಗುಡಿಲಿ ಅವರ ಮೂರ್‌ತಿಗಳ್‌ನ ಕೆತ್ತಿಸಿ ಇಸ್‌ವೆ. ಓದು ಮುಗ್‌ಸಿ ಬಂದ ಮಕ್ಕಳಿಗೆ ವಿಸಯ ತಿಳ್‌ದದೆ. ಮುಂದೆ ಈ ವೀರರ್ ಸುಮಾರ್ ದೊಡ್ಡ ಕಾರ್‌ಯಗಳ್‌ನ ಮಾಡ್‌ವೆ. ಇವು ಅದ್ಯಪಾಡಿ ಆದಿನಾತೇಸ್ವರ ದೇಸ್ತಾನನ ಕಟ್ಟಿಸಿದೊ ತೇಳ್‌ವ ಉಲ್ಲೇಕ ಉಟ್ಟುತ ಅಲ್ಲಿನ ಸಾಸನಂದ ತಿಳ್‌ದದೆ.. ಅವ್ ಮಾಡ್‌ದ ಸಾದನೆಗ ಮುಗೆಕಾಕನ ಅವ್ವಂಗೆ ತಿಳ್ಸಿದ್. ಬೀಡ್‌ನ ಮುಂದೆನ ಹಾಲ್ ಬಾವ ಮರದ ಹಕ್ಕಲೆ ಈ ವೀರರ್ ಮಾಯ ಆದವೆ. ಹಿಂಗೆ ಮಾಯಾದವ್ ಅವ್ವಂದ ಮಾಡ್ದ ವಿಗ್ರಹಗಳ್‌ಲಿ ಸೇರಿಕಂಡೊ ತೇಳ್‌ವ ಪ್ರತೀತಿ ಉಟ್ಟು. ಸುಮಾರ್ ಎಂಟ್ ಅಡಿ ಎತ್ತರದ ಇವರ ಜೋಡಿ ಮೂರ್‌ತಿಗ ಬೈಲಬೀಡ್‌ಲಿ ಇಂದ್‌ಗೂ ನಾವ್‌ಗೆ ಕಾಂಬಕೆ ಸಿಕ್ಕಿದೆ. ಯಾವ್‌ದೇ ಹರ್‌ಕೆ ಕಾಣಿಕೆ ಡೊಬ್ಬಿಗ ಇಲ್ಲಿ ಇಲ್ಲದಿರ್‌ದೆ ಒಂದ್ ವಿಸೇಸ. ಇಲ್ಲಿ ಹೂ, ಬೆಂಡ ನೀರ್‌ನ ಒಪ್ಪುಸಕ್. ಮಂಗಳ ಕಾರ್‌ಯಕೆ ಮುಂದೆ ಇಲ್ಲಿ ಬಂದ್ ಪ್ರಾರ್‌ತನೆ ಮಾಡಿರೆ ಕಾರ್‌ಯ ಆದೆ, ಅಡೆತಡೆ ಬಾರದೆ ನಡ್‌ದದೆ ತೇಳ್‌ವ ನಂಬಿಕೆ. ಪ್ರತಿ ಸಂಕ್ರಮಣಕೆ, ಚೌತಿ, ದೀಪಾಳಿ ಹಬ್ಬದ ಕಾಲಕೆ, ಕೆಲೊವು ವಿದಿ, ಆರಾದನೆಗ ಜೈನ ಕುಟುಂಬದವರ ಲೆಕ್ಕಲಿ ನಡ್‌ದದೆ. ಈ ವೀರರ್‌ಗೆ ಪೆರಿಯಾಕುಳು (ಹಿರಿಯರ್) ಅಂತನೇ ಹೆಸ್‌ರ್, ಐತಿಹಾಸಿಕ ಅವಸೇಸಗ ಬೀಡ್‌ನ ಹಕ್ಕಲೆಲಿ ಸಾಕಸ್ಟ್ ಸಿಕ್ಕಿದೆ.

**ಪೂಮಾಣಿ – ಕಿನ್ನಿಮಾಣಿ :** ಇವು ಅರೆಬಾಸೆ ಮತ್ತೆ ತುಳು ಪ್ರದೇಸಲಿರುವ ದೆವ್ವಗ. ವಿಸ್ಣು ಸಂಕಲ್ಪದಂಗೆ ಕಮಲದ ಹೂನ ಎಸಳ್‌ಲಿ ಮೂರ್ ದೆವ್ವಗಳ ಸೃಸ್ಟಿ ಆಗಿ ತಲಕಾವೇರಿ ಬಟ್ರ್‌ಗೆ ಸಣ್ಣ ಮಕ್ಕಾಗಿ ಸಿಕ್ಕ್‌ವೆ. ಎರ್‌ಡ್ ಗಂಡ್ (ಪೂಮಾಣಿ – ಕಿನ್ನಿಮಾಣಿ) ಒಂದ್ ಹೆಣ್ಣ್ (ದೆಯ್ಯಾರೆ). ದೇವರ ನಿರೂಪದಂಗೆ ಈ ಮೂರ್ ಜೆನ ಸಿರಾಡಿಗಟ್ಟಂದ ತುಳುನಾಡ್‌ಗೆ ಇಳ್‌ದ್ ಬಂದವೆ. ಬಾಕನ ಕುಮಾರ ಪರ್‌ವತ ಎತ್ತಿಕನ ಪಡುದಿಕ್ಕ್‌ಗೆ ದ್ರಿಸ್ಟಿ ಹಾಕಿಕನ ಅಲ್ಲಿ ಸುಬ್ರಹ್ಮಣ್ಯ ಕ್ಷೇತ್ರ

ದೊಜ ಕಂಡದೆ. ಬಿಲ್ಲ್ ಹಿಡ್ಕಂಡ ಇವ್ ಅಂಬು ಬುಟ್ಟ್ ದೊಜನ ತುಂಡ್ ಮಾಡಿವೆ. ಹಿಂಗಾಗಿ ಕುಮಾರ ಸುಬ್ರಹ್ಮಣ್ಯಂಗೂ ಇವ್‌ಕೂ ಯುದ್ದ ಆದೆ. ಸಿವ ಪಾರ್‌ವತಿಯರ್ ಸಂತೈಸಿ ಸಮಾದಾನ ಪಡ್‌ಸುವೆ. ತುಂಡಾದ ದೊಜ ಏರಿಕಾಗದ್‌ತ ಇರ್‌ದರ್‌ಂದ ಸುಬ್ರಹ್ಮಣ್ಯಲಿ ದೊಜ ಏರ್‌ಸ್‌ವ ಪೊದ್ದತಿ ಇಲ್ಲೆ. ಏನಿದ್ದರೂ ಮಾಡ್‌ದ ತೊಪ್ಪುಗೆ ಹದ್‌ನಾರ್ ಕೈನ ಕೊಪ್ಪರಿಗೆನ ಅನ್ನದಾನಕಾಗಿ ಈ ವೀರರ್ ಒಪ್ಪಿಸುವಂಗಾತ್. ಅವರ ತಂಗೆ 'ದೆಯ್ಯಾರೆ'ಯಾಗಿ ಅಲ್ಲೇ ನೆಲೆನಿತ್ತತ್, ಕತ್ತರ್‌ಸಿದ ದೊಜ ಅಲ್ಲಿಂದ 25 ಕಿಮೀ ದೂರದ ಕುಕ್ಕಂದೂರ್ ತೇಳ್‌ವಲ್ಲಿ ಬಿದ್ದದೆ. ಅವು ಮುಂದೆ ಹೋಕನ ಉಬರಡ್ಕ ಮಿತ್ತೂರ್‌ನ ಮೆಟ್ಟ್‌ಗಲ್ಲ್ ಗುಡ್ಡೆ ಏರ್‌ದ ವೀರರ್ ಅಲ್ಲಿನ ಪರಿಸರ ನೋಡಿ ಕುಸಿಯಾಗಿ ಅಲ್ಲೆ ನೆಲೆ ನಿತ್ತವೆ.

ಅವು ಬುಟ್ಟ ಐದ್ ಅಂಬುಗಳ್‌ಲಿ ಸುರೂದ್ ದೀಟಿಗೆ ತೇಳ್‌ವಲ್ಲಿ ಬಿದ್ದದರ್‌ಂದ ಅದ್ ಮೂಲಸ್ತಾನ ಆತ್. ವೀರರ್ ಮುಗೇರು, ಮಂಟಮೆ, ಅಡೂರು, ಈಸ್ವರಮಂಗಲ (ಮಾಡದ ಗುಡ್ಡೆ), ಸೂಲಪದವು (ಅರೆಬಾಸೆ ಪದವು), ಅಂಬರಪದವು, ಪಡುಮಲೆ ಇಂತೆಲ್ಲ ಪ್ರದೇಸಗಳ್‌ಲಿ ತಮ್ಮ ಕಾರಣಿಕನ ಮೆರೆಸ್‌ವೆ. ಕುಂಬಳೆ ಸೀಮೆಲೂ ಈ ದೆವ್ವಗಳ ಪ್ರದಾನ ದೆವ್ವಂಗಾಗಿ ಆರಾದ್‌ಸ್‌ವೆ. ಒಟ್ಟ್‌ಲಿ ಆದಿ ಪರ್ಮಲೆಂದ ಅಂತ್ಯ ಪುತ್ತಿಗೆವರೆಗೆ ಉಳ್ಳಾಕುಲು ದೆವ್ವಗ ಆರಾದಿಸಲ್ಪಟ್ಟವೆ. ಗಟ್ಟಂದ ಕರಾವಳಿಗೆ ಹೋದ ಉಳ್ಳಾಕುಳು ದೆವ್ವಗಳ ಕತೆ – ಪಾಡ್‌ದನಗ ಸಿಕ್ಕಿದೆ. ಉಳ್ಳಾಕುಳು ದೆವ್ವಗ ಬ್ರಾಹ್ಮಣವಟುಗಳಾಗಿ ಪಡುಮಲೆ ಬಲ್ಲಾಳರ ಬೀಡ್‌ನ ಹುಕ್ಕ್ ಸತ್ರುಗಳ ಸೆರೆಮನೆಲಿದ್ದ ಪರ್ಮಳೆ ಬಲ್ಲಾಳರ ಬುಡುಗಡೆ ಮಾಡ್‌ದೊತ ಹೇಳ್‌ವೆ. ಈ ಕಾರಣಂದ ಆ ದೆವ್ವಗಳ ಸ್ತಾನನ ಕಟ್ಟಿ ಬಂಡಿ ನಿರ್ಮಿಸಿ ಕೊಟ್ಟೊಳೊ. ಕಾಲಕಾಲಕೆ ಉತ್ಸವಾದಿಗಳ್‌ಂದ ಉಳ್ಳಾಕುಳು ದೆವ್ವಂಗಳ ಆರಾದಿಸಿಕಂಡ್ ಬಂದೊಳ. ಬಲ್ಲಾಳರ್ (ಬಲ್ಲಾಕುಲು) ಆರಾದಿಸಿದ ದೆವ್ವಗ ಉಳ್ಳಾಕುಲು. ನಂಬಿದವರ ಇಸ್ಟಾರ್ತನ ಈಡೇರ್‌ಸ್‌ತಿದ್ದ ಪೂಮಾಣಿ–ಕಿನ್ನಮಾಣಿ' ದೆವ್ವಗ ಗೌರವಂದ 'ಉಳ್ಳಾಕುಲು' ತೇಳಿ ಕರೆವ ವಾಡಿಕೆ ಆತ್. ಉಳ್ಳಾಕುಲು ತೇಳಿರೆ 'ಒಡೆಯರ್' 'ಉಳ್ಳವರ್' 'ಸರ್‌ವಸಮರ್‌ತರ್ ತ ಅರ್‌ತೈಸಕ್.

ಎಣ್ಮೂರ್ ಆದಿ ಬೈದರ್‌ಕಳ ಗರಡಿಲಿ ನೇಮ ನಡೆಕಾಕನ ಬಲ್ಲಾಳರ ಬೀಡ್‌ನ ಉಳ್ಳಾಕುಳು ಮಾಡಂದ ಬಂಡಾರ ಹೋಕು. ಉಳ್ಳಾಕುಳು ದೆವ್ವಂಗಳ ಪ್ರದಾನಿ ಕಾಜುಕುಜುಂಬ ಮತ್ತೆ ಇಸ್ಟ ದೇವತೆಗಳ ನೇಮಗಳ ಸಂದಿಲಿ ಕೋಟಿ ಚೆನ್ನಯರ ಬೇಟಿಯಾದವೆ. (ವಿ.ಎಸ್.)

**ಮಿತ್ತೂರ್ ಜೋಡುಬೂತಗ :** ಅರೆಬಾಸೆ ಮತ್ತೆ ತುಳು ಪ್ರದೇಸಲಿರುವ ದೆವ್ವಗ. ತೆಂಕನಾಡ್‌ಂದ ನಲ್‌ವತ್ತ್ ತೊಟಿಗಿಲ್ ಕಟ್ಟಿದ ದೊಡ್ಡ ಸೊವುಂಸಾರಂದ ಚಾತು ಮತ್ತೆ ಚಂದು ತೇಳ್‌ವ ಅವುಳಿ ಸೋದರರ್ ಪರಿವಾರ ಸಮೇತ ಪ್ರಯಾಣ ಮಾಡ್‌ತಿರಿಕನ ದಾರಿಲಿ ಮಞ್ಜನಡ್ಕ ಶ್ರೀ ಬಗವತೀ ಕ್ಷೇತ್ರಕ್ಕೆ ಬಂದವೆ. ಇರ್‌ಲ್ ಪೂಜೆ ಆಗಿ ಬಾಗ್‌ಲ್ ಮುಚ್ಚಿರೂ ತಮ್ಮ ಕಾರಣಿಕಂದ ಬಾಗ್‌ಲ್ ತೆಗ್‌ಸಿ ಹರಿಕೆ ಕಾಣಿಕೆನ ಸಲ್‌ಸಿವೆ. ರಾತ್ರೆ ದೇಸ್ತಾನದ ವಟಾರಲಿ ಮೊಲ್‌ಗಿರಿಕನ ಅಣ್ಣ ಚಾತು ಅಲ್ಲೇ ಮಾಯಾಗಿ ಮುಂದೆ ದೆವ್ವ ಆಗಿ ಮಞ್ಜನಡ್ಕಲಿ ಸ್ತಾನ ಪಡ್‌ಕಣ್‌ತ್. ತಮ್ಮ ಚಂದು ಪರಿವಾರ ಸಹಿತ ಸುಳ್ಯದ ಕಡೆ ಹೋದೆ. ಸುಳ್ಯದ ಪನ್ನೆಬೀಡ್ ತೇಳ್‌ವಲ್ಲಿ ಬಲ್ಲಾಳ ಚಂದುಗೆ ಆಸ್ರಯ ಕೊಟ್ಟ್ ಅವರ ಗರಡಿಲಿ ತರಬೇತಿ ಕೊಡ್‌ಸಿ ಅಂವನ ಪ್ರಸಿದ್ದಿಗೆ ತಂದೊ.

ಮುಂದೆ ಸುಳ್ಯದ ಚೆನ್ನಿಗ ಚೆನ್ನರಾಯನೊಟಿಗೆ ಸಿಕ್ಕಿಕನ ಅಂವ ಚಂದುನ ಯೆವ್ವನ ಸರ್‌ರಕೆ ಮೊರ್‌ಲಾಗಿ ಅಂವನ ಸಾಯಕ ಆಗಿರಿಕೆ ಬೇಡಿಕಂಡದೆ. ಆದ್‌ರೆ ಚಂದು ಕುಡುಮಪುರನು ಸೇರ್‌ದಂಗೆ ಪೂರ ಕ್ಷೇತ್ರದ ಅದಿಕಾರ ಸಿಕ್ಕಿರೆ ಮಾತ್ರ ಒಟ್ಟಿಗೆ ನಿಲ್ಲದುತ ತಿಳ್‌ಸಿದೆ. ಇದ್‌ಕೆ ಒಪ್ಪಿಗೆ ಸಿಕ್ಕದಿರಿಕನ ಚಂದು ಮಿತ್ತೂರ್ ಗೆ ಹೊರ್‌ಟ್ ಹೋದೆ, ದಾರಿಲಿ ಮೆಟ್ಟ್‌ಗಲ್ಲ್ ಗುಡ್ಡೆನ ಮಂಚದ ಕಲ್ಲ್ ಹಕ್ಕಲೆ ಉಳ್ಳಾಕುಳು ಅಂವಂಗೆ ಬಾಣ ಪ್ರಯೋಗ ಮಾಡಿಕೆ ಹೊರ್‌ಡಿಕನ ಅಂವನ ಎದೆಗಾರಿಕೆನ ಕಂಡ್ 'ನಿನ್ನಂತವು ನಮ್ಮ ಬಲ ಬಂಟ ಆಗಿರ್‌ದು ಒಳ್ಳೆದ್' ತ ಹೇಳಿ ಅಂವಂಗೆ ಆಸ್ರಯ ಕೊಟ್ಟದೆ. ಒಮ್ಮೆ ಚಂದು ಉಬರಡ್ಕ ಮಿತ್ತೂರ್ ಗ್ರಾಮದ ನಾಯಗುಂಡಿ ಪ್ರದೇಸಲಿ ಸಂಚಾರ ಮಾಡಿಕನ ತಾನ್ ಮಾಯ ಆಗಿ 'ಉಳ್ಳಾಕುಳು'ಗಳ ಒಟ್ಟ್‌ಗೆ ಸೇರಿ ಹೋದೆ. ಇಂವಂಗೆ ಮುಂದೆ ನಾಯರ್ ದೆವ್ವ ತೇಳ್‌ವ ಹೆಸರಾತ್. ಕೇರಳದ ನಾಯರ್ ಮನೆತನಕೆ ಚಂದ್ ಸೇರಿಕಂಡಿದ್ದರ್‌ಂದ ಈ ಹೆಸ್‌ರ್ ಬಂದಿದ್ದರೆ ಅಣ್ಣ ತಮ್ಮ ಎರ್‌ಡೂ ದೆವ್ವಗಳಿಗೆ ಈ ಹೆಸ್‌ರ್ ಬರಕಾಗಿತ್ತ್. ಆದ್‌ರೆ ನಾಯರ್ ತೇಳ್‌ವ ಕ್ಯಾತಿ ತಮ್ಮಂಗೆ ಮಾತ್ರ ಸಿಕ್ಕಿತ್. ಒಟ್ಟ್‌ಲಿ ಚಾತು ಚಂದು ಜೋಡಿದೆವ್ವಗಾಗಿ ಸುಳ್ಯ ಪ್ರದೇಸಲಿ ಆರಾದನೆ ಪಡೆತೊಳೊ. ಈ ಜೋಡು ದೆವ್ವಂಗಳಿಗೆ ಹಿನ್ನೆಲೆ ಪ್ರೇರಣೆ ಉಳ್ಳಾಕುಳು ಇಲ್ಲೆ ಪೂಮಾಣಿ ಕಿನ್ನಿಮಾಣಿ ದೆವ್ವಗ, ಅಲ್ಲದೆ ಜೋಡು ದೆವ್ವಗಳ್‌ಂದ ಉಳ್ಳಾಕುಳು ದೆವ್ವಗ ಪಂಡ್‌ನ ದೆವ್ವಗ ತೇಳ್‌ವ ಇಚಾರ ತಿಳ್‌ದ್ ಬಂದದೆ.

ನೇಮದ ಹೊತ್ತುಲಿ ನಾಯರ್ ದೆವ್ವ ತೆಂಕಕೆ ಮೋರೆ ಮಾಡಿ 'ಚಾತೋ ಚಾತೋ' ತೇಳಿ ಕರ್‌ದರೆ ಮಞ್ಜಡ್ಕಲಿ ಚಾತುದೆವ್ವ ಉತ್ತರಕೆ ಮೋರೆಮಾಡಿ 'ಚಂದೂ, ಚಂದೂ' ತೇಳಿ ಕರಿದರ ಗಮನ್ಸಕ್. ಅಣ್ಣ ತಮ್ಮಂದರ್ ಪರಸ್ಪರ ಕೂಡಿಕನ ಹೀಂಗೆ ಈ ಜೋಡಿದೆವ್ವಗಳ ಹಿಂದೆನ ಚರಿತ್ರೆನೂ ನೆಂಪುಗೆ ಬಂದದೆ. ನಾಯರ್ ದೆವ್ವಕೆ ಕಟ್ಟ್‌ವ ಪರವ ಹಂಗೆ ದರ್‌ಸನ ಪಾತ್ರಿಗ ತುಳುವರ್, ಆದ್‌ರೆ ದೆವ್ವ ಆವೇಸಲಿ ನುಡಿಕೊಡ್‌ದು ಮಲಿಯಾಳ ಬಾಸೆಲಿ ತೇಳ್‌ದು ನಾವು ಗಮನ್‌ಸುವಂತ ಸಂಗತಿ.

**ಕಲ್ಕುಡ ಕಲ್ಲುರ್‌ಟಿ :** ತುಳುನಾಡ್ ಮತ್ತೆ ಅರೆಬಾಸೆ ಪ್ರದೇಸದ ಕಾರ್‌ನಿಕದ ಅಣ್ಣ ತಂಗೆ ದೆವ್ವಗ. ತುಳುನಾಡ್‌ನ ಕೆಲ್ಲತ್ತ ಮಾರ್‌ನಾಡ್‌ಲಿ ಇದ್ದ ಪ್ರಸಿದ್ದ ಸಿಲ್ಪಿ ಸಂಬು ಕಲ್ಕುಡ ಬೇಲೂರು ಬೆಳಗೊಳಲಿ ಸಿಲ್ಪ ಕೆಲ್‌ಸಕೆಂತ ಹೋಕನ ಅಂವನ ಹೆಣ್ಣ್ ಇರ್‌ವದಿ ಬೊಸ್‌ರಿಯಾಗಿದ್ದದೆ. ಅದ್‌ಕೆ ಬೀರು ಮತ್ತೆ ಕಾಳಮ್ಮತ ಇಬ್ಬೊರು ಅವುಳಿ ಮಕ್ಕ ಹುಟ್ಟ್‌ವೆ.






ಕಲ್ಕುಡ ಕಲ್ಲುರ್‌ಟಿ

ಸುಮಾರ್ ವರ್‌ಸ ಕಳ್‌ದರೂ ಬಾರದಿರಿಕನ ಅಪ್ಪನ ಹುಡ್‌ಕಿಕಂಡ್ ಬೀರು ಹೊರ್‌ಟದೆ. ಅಪ್ಪನ ಬೇಟಿ ಕಂಡದೆ. ಅಪ್ಪ ಮಜ್ಜಂಗೆ ತನ್ನ ಸಿಲ್ಪ ಆಕೃತಿಗಳ ತೋರ್‌ಸಿಕಾಕನ ಶ್ರವಣಬೆಳಗೊಳದ ಬಾಹುಬಲಿನ ವಿಗ್ರಹಲಿ ಅತಿ ಸೂಸ್ಮ ದೋಸನ ಬೀರು ಎತ್ತಿ ತೋರ್‌ಸಿದೆ, ಹಿಂಗೆ ಮಜ್ಜಂದ ಅವುಮಾನ ಆತ್‌ತ ಗ್ಯಾನ ಮಾಡಿ ಅಪ್ಪ ಆತ್ಮಹತ್ಯೆ ಮಾಡಿಕಂಡದೆ.

ಬೀರು ಮುಂದೆ ಅಪ್ಪನ ಮೀರ್‌ಸುವ ಸಿಲ್ಪಿಯಾದೆ. ಕಾರ್ಕಳದ ಅರಸ ಬೈರವ ಸೂಡಂದ ಅಂವಂಗೆ ಕರೆಬಂದ್ ಗೊಮ್ಮಟೇಸನ ಕೆಲ್‌ಸನ ಬಾರಿ ಕುಸಲತೆಂದ ಮಾಡಿಕೊಟ್ಟದೆ. ಆದ್‌ರೆ ಇಂತ ಕೆಲ್‌ಸನ ಬೇರೆಲ್ಲೂ ಈ ಸಿಲ್ಪಿ ಮಾಡಿಕೊಡಿಕಾಗದ್‌ತ ಗೇನ ಮಾಡಿ ಅಂವನ ಬಲಿದ ಕೈನೂ, ಎಡ್‌ದ ಕಾಲ್‌ನೂ ಬೈರವರಸ ತುಂಡುಮಾಡ್‌ಸಿದೆ. ಆದ್‌ರೂ ವೇಣೂರ್‌ನ ತಿಮ್ಮಣ್ಣಾಜಿಲ ಬೀರು ಕಲ್ಕುಡನ ಕರ್‌ಸಿ ಬಾಹುಬಲಿ ವಿಗ್ರಹನ ಕೆತ್ತ್‌ಸಿದೆ.

ಸುದ್ದಿ ತಿಳ್‌ದ ಕಾಳಮ್ಮ ಅಣ್ಣನ ಹುಡ್‌ಕಿಕಂಡ್ ವೇಣೂರ್‌ಗೆ ಬಂದದೆ. ಬೈರವ ಅರಸನ ಮೇಲೆನ ಪ್ರತೀಕಾರಂದ ಅಂವನ ಸಿಕ್ಸೆ ಆಕುತ ಅವಿಬ್ಬೊರು ದೆವ್ವಾಗಿ ಮಾಯ ಆದವೆ. ಈ ದೆವ್ವಗಳ ಪ್ರತಾಪಂದಾಗಿ ಅವುಗಳ ಗುಡಿಕಟ್ಟಿ ಕೋಲ ನಡ್‌ಸಿ ನಂಬ್‌ವ ಪರಿಸ್ತಿತಿ ಬಂದದೆ. ಕಲ್ಲ್‌ರ್ಟಿ ಕಲ್ಕುಡ ಇಂದಿಗೂ ಸನು ಕಾರಣಿಕದ ದೆವ್ವಗಾಗಿ ತುಳುನಾಡ್‌ಲಿ ಆರಾದನೆಗೊಂಡವೆ. (ವಿ.ಎನ್.)

**ಉತ್ತನಾಡಿ–ಜಗನ್ನಾಡಿ ಪುರುಸರ್ :** ತುಳುನಾಡಿಲಿ ಅರಾಧನೆ ಮಾಡ್ವ ದೆವ್ವಗ, ಅವ್ವ ಬೈಲಂಗಿ ಪುರುಸದಿ, ಅಪ್ಪ ಬೈಲಂಗ ಪುರುಸತೇಳವ್‌ಕೆ ಹುಟ್ಟಿದ ಉತ್ತನಾಡಿ ಜಗನ್ನಾಡಿ ಪುರ್‌ಸರ್, ಬೆಳ್‌ದ್ ದೊಡ್ಡದಾದ ಮೇಲೆ ಅವ್ ತಮ್ಮ ಕುಲಕಸ್‌ಬು ಯಾದ್‌ತ ತಿಳಿಕೆ ಪ್ರಯತ್ನ ಪಟ್ಟೊ. ಕಲ್ಲಕಳೆಂಬಿಯೊಳೆಗೆ ಬರ್‌ದ್ ಇಸಿದ ತಾಂಬ್ರದ ಪಟ್ಟಿಸಿಕ್ಕಿದೆ. ನಾಕ್ ಮನೆ ತಿರ್‌ಗಿ ಮೂರ್ ಮನೆ ಬೇಡ್‌ದೆ ಅವರ ಕುಲಕಸ್‌ಬು. ಹಂಗಾಗಿ ಜ್ಯೋತಿ ಕೋಲು ಜಂತಿ ಜೋಳಿಗೆ ಹಿಡ್‌ದ್ ಬೇಡಿಕಾಗಿ ಕಾಸಿಗೆ ಹೊರ್‌ಟವೆ. ದಾರಿಲಿ ಕಲ್ಲೆಂಬಿ ಪೆರ್‌ಗಡೆನ ಮನೆಗೆ ರಾತ್ರೆ ತಡೆಗಾಗಿ ಬಂದವೆ. ಆದ್‌ರೆ ಅಂವ ದಂಡ್‌ಗೆ ಹೋಗಿತ್ತ್. ಅಂವನ ಸೊಸೆ ದಾರಮ್ಮ ಆಸ್ರಯ ಕೇಲ್‌ದವ್‌ಕೆ ಒಳೆಗೆ ಜಾಗೆ ಇಲ್ಲೆತ ಸೊವ್‌ದೆನ ಕೊಟೆಗೆ, ಉಂಬಕೆ ಮೊಡ್ಡಿನ ಪಾತ್ರ, ಪಲ್ಯಕ್ಕೆ ಸುಣ್ಣದ ಪಾತ್ರ, ಮೊಲ್‌ಗಿಕೆ ಮೆಣ್‌ಸ್‌ನ ಮೊಂದ್ರಿನ ಕೊಟ್ಟದೆ. ಈ ನೊಡುಲಿ ಪೆರ್‌ಗಡೆ ಬಂದದೆ. ನೆಂಟ್ರ ಈ ರೀತಿ ಸತ್ಕರಿಸಿದ್ ಸರಿಯಲ್ಲಂತೇಳಿ ಅವರ ಒಳೆಗೆ ಬಾಕೆ ಹೇಳ್‌ದೆ. ಆದ್‌ರೆ ಬೊಳಿ ಬುಡಿಕೆ ಹೊತ್ತಾದರ್‌ಂದ ನಾವ್ ಬಂದವೆತ ಹೇಳಿ ಅವು ಹೊರ್‌ಟವೆ. ಹೊರಡಿಕನ ಅವು ಮೊಲ್‌ಗಿದ್ ಕೊಟಗೆನ ಬಾಗ್‌ಲ್‌ಲಿ ಎರ್‌ಡ್ ವಿಸ ಜಂತುಗಳ್ ಸೃಸ್ಟಿ ಮಾಡಿ ಹೋದವೆ. ಅವು ನಾಕ್ ಹೆಜ್ಜೆ ಹೋಕನ ದಾರಮ್ಮ ವಿಸ ತಾಗಿ ಬಿದ್ದ್ ಸತ್ತದೆ. ಸತ್ತವಳ ಪುರುಸರ್ ಬಂದ್ ಜಂತಿ ಜೋಳಿಗೆಂದ ಕಾಸಿನ ಕಾಳ ಬೈರವನ ಮೊದ್ದ್ ತೆಗ್‌ದ್ ಅವ್‌ಳಿಗೆ ಹಾಕಿ ಬೊದ್‌ಕಿಸುವೆ.

ಪುರುಸರ್ ಅಲ್ಲಿಂದ ಮುಂದೆ ಹೋಕನ ವಲಂಜಿ ಬೈದ್ಯನ ಬೇಟಿ ಆದವೆ. ಅಂವನ ಹೆಣ್ಣ್ ವಲಂಜೀರ್ ಬೈದ್ಯೆದಿ ಹಾಲ್ ಕೊಟ್ಟ್ ಅವರ ಹೊಟ್ಟೆಸುದರ ನೀಗಿಸಿದೆ. ಇದರ್‌ಂದ ಕುಸಿಯಾಗಿ ಪುರುಸರ್ ಸಂತಾನ ಇಲ್ಲದ ಇವ್ಕೆ ತಮ್ಮ ಜಂತಿ ಜೋಳಿಗೆಂದ ಹಿಡಿ ಅಕ್ಕಿ ಕೊಟ್ಟ್ ಹೋದವೆ. ಮುಂದೆ ಅವ್‌ಳಿಗೆ ಬೊದ್‌ಕ್ ಬಾಗ್ಯ ಹೆಚ್ಚಿ ಆಗಿ ಗಂಡ್ ಸಂತಾನ ಆದೆ. ಅವಳ ಮಜ್ಜ ಮೊದ್‌ವೆ ಪ್ರಾಯಕೆ ಬೆಳ್‌ದ್ ನಿತ್ತಿರಕನ ಪುರುಸರ್ ಕಾಸಿಂದ ವಾಪಸ್ ಬಂದವೆ. ಅವುಳು ತನ್ನ ಅಣ್ಣಂದರ್‌ಗೆ ಸಮನಾದ ಅವರ್‌ಂದ ಮಜ್ಜಂಗೆ ದಾರೆ ಹೊಯ್ದ್ ಕೊಡೊಕುತ ಕೇಳಿಕಂಡದೆ. ಅವು ದಾರೆ ಹೊಯ್ದ್ ಕೊಟ್ಟ್ ಹೊರಡಿಕನ 'ಇನ್ನ ನಿಮ್ಮ ಯಾಗ ಕಾಂಬದು?' ತೇಳಿ ಬೈದ್ಯೆದಿ ಚಿಂತೆ ಮಾಡ್ದೆ. ಆಗ ಅವಳ ಸ್ತಾನಮಾನ ಹೆಚ್ಚಿಸ್‌ಕೆ ಆರಾದಿಸಿಕೆ ಕಾಸಿ ದೇವ್‌ರ ಬೂತನ ಕೊಟ್ಟ್ ಹೋದವೆ. ದಾರಮ್ಮ ಮತ್ತೆ ವಲಂಜೀರ್ ಬೈದ್ಯೆದಿ ಹೆಣ್ಣ್‌ನ ಸೊಬಾವಗಳೊಟ್ಟಿಗೆ ಉತ್ತನಾಡಿ ಮತ್ತೆ ಜಗನ್ನಾಡಿ ಕಾರಣಿಕೆಗ ಮೆರೆಯೋದರ ಪುರುಸರ ಪಾಡ್ಡನ ವಿವರಿಸಿದೆ. (ವಿ.ಎನ್.)

**ಕರಿಯ ಕಾಸಿಂಗ – ಬೆಳಿಯ ದೇಸಿಂಗ :** ತುಳುನಾಡಿಲಿ ಅರಾಧನೆ ಮಾಡ್ವ ದೆವ್ವಗ, ಇವ್ ಮಾಯದ ಮಕ್ಕ. ಅಬ್ಬನಡ್ಕದ ಕಾಡ್‌ಲಿ ಬಿಳಿಕೆಪಳದ ಬುಡಲಿದ್ದ ಬಾಮಿನ ತಾವರೆ ಹೂವುಂದ ಹುಟ್ಟಿದ ಅವುಳಿ ಮಕ್ಕ. ಅಪ್ಪ ಅವ್ವಂಗೆ ಹುಟ್ಟಿದವಲ್ಲ. ನೆತ್ತರ್ ನೀರ್‌ಲಿ ಬೆಳ್ದೊವಲ್ಲ. ಹುಟ್ಟಿದ ಮಕ್ಕ ಎತ್ತರಲಿ ನಿತ್ತ್ ಸುತ್ತೊಳು ನೋಡಿಕನ ಕುಡೆಕೆ ನೀರಿತ್ತ್‌ಲೆ. ಅಲ್ಲಿದ್ದ ನೆಲ್ಲಿಮರಂದ ಐದ್ ನೆಲ್ಲಿ ಗೆಲ್ಲ್ ಕೊಯ್ದ್ ಮೂಡು ತಗ್ಗ್‌ನ ಜಾಗೆ ನೋಡಿ ಮೂರ್ ನೆಲ್ಲಿಕಾಯಿಗಳ್‌ನ ತೆಗ್‌ದ್ ಇಟ್ಟೊ. ಅರವತ್ತೆರಡ್ ಕೋಲು ಉದ್ದ, ನಲ್‌ವತ್ತನಾಕ್ ಕೋಲು ಅಗಲದ ಸುತ್ತ ಅರಮನೆನ ಕಟ್ಟಿದೊ. ಮನೆನ ಒಳಗೆನ ಇಜ್ಜಾಲ್‌ಲಿ ಒಂದ್ ಬಾಮಿ ಆಕುತ ಹೇಳಿ ಮತ್ತೊಂದ್ ನೆಲ್ಲಿ ತೆಗ್‌ದ್ ಇಟ್ಟೊ ಅದ್ ಬಾಮಿ ಆತ್. ಹಿಂಗೆ ಹೊಲ ನೆಲ, ಬಾಕಿಮಾರು ಗದ್ದೆ ಮಾಡಿಕಂಡೊ. ಅಲ್ಲೆ ಕಂಬಳ ಕಟ್ಟಿದೊ.

ಇವು ಕಾಡ್‌ಲಿ ಕಾಡ್‌ಕಟ್ಟಿ ಬೇಟೆಯಾಡಿಕನ ಅಲ್ಲಿನ ಮರದಡಿಲಿ ತೊಟಿಗಿಲ್ ಕಟ್ಟಿ ಕುಮಾರನ ಗೋಳಿ ಮರಲಿ ಮೊಲ್‌ಗಿಸಿಕೆ ರಾಮರಾಗ ಹಾಡ್‌ತಿದ್ದ ಸಿರಿನ ದರ್‌ಸನ ಆದೆ. ಸಿರಿನ ಕಂಡ ಕ್ಷತ್ರಿಯ ಅರಸ ಅದರ ತಮ್ಮ ತಂಗೆತ ಸ್ವೀಕರ್‌ಸಿ ಅರಮನೆಗೆ ಕರ್‌ಕಂಡ್ ಬಂದವೆ. ಮುಂದೆ ಅವಳ ಕೊಟ್ರಪಾಡಿ ಕೊಟ್ಟರ ಆಳ್ವಂಗೆ ಮೊದ್‌ವೆ ಮಾಡಿಕೊಟ್ಟವೆ. ಪಿಂಗಾರದ ಹಾಳೆಲಿ ಸಿರಿ ಹುಟ್ಟಿರೆ, ಇವು ತಾವರೆ ಹೂಲಿ ಹುಟ್ಟುವೆ. ಸಿರಿನ ಬೊದ್‌ಕ್‌ಲಿ ಆದ ತಿರುವು ಈ ಮಾಯಾಪುರುಸರ್‌ಂದ ಸಿಕ್ಕಿದೆ. (ವಿ.ಎನ್.)

**ಅಬ್ಬಗ – ದಾರಗ :** ಸಿರಿ ಎರ್‌ಡನೆ ಗಂಡ ಕೊಟ್ರಪಾಡಿ ಕೊಟ್ಟರ ಆಳ್ವಂಗೆ ಹುಟ್ಟಿದ ಹೆಣ್ಣ್ ಕೂಸ್ 'ಸೊನ್ನೆ', ಸೊನ್ನೆಗೆ ನಾಗಬೆರ್ಮೆರ್ ಹರಕೆಂದ ಹುಟ್ಟ್‌ವ ಮಕ್ಕ ಅಬ್ಬಗ–ದಾರಗಂತೇಳ್‌ವ ಅವುಳಿಗ. ಇವು ಪ್ರಾಯಕೆ ಬಾಕನ ಮೊದ್‌ವೆಗೆ ಕರೆಕೆ ಅವ್ವ ಅಪ್ಪ ಹೊರ್‌ಟವೆ. ಅಬ್ಬನಡ್ಕದ ಗೋಳಿಮರದಡಿಲಿ ಕುದ್ದಿರಕನ ಅವರ ಹಕ್ಕಲೆ ಬಂದ ಬಡ ಬ್ರಾಹ್ಮಣ ಇವರ ವಿಚಾರ್‌ಸಿದೆ. ಹರ್‌ಕೆ ಸುರುಗೆನ? ಮೊದ್‌ವೆ ಸುರುಗೆನ?' ತ ಪ್ರಸ್ನೆ ಮಾಡ್‌ದೆ. ನಾವು ಹರ್‌ಕ ಹೇಳ್‌ದರ ತಲೆಬುಡಲಿ ಕುದ್ದ್ ಕೇಳ್‌ದವೆ? ಕಾಲ್ ಬುಡಲಿ ಕುದ್ದ್ ಕೇಳ್‌ದವ್ ನೀವೆನಾ?' ತ ಅವ್ವ ಸೊನ್ನೆ ಕೇಳ್‌ದೆ. ಇದರ್‌ಂದ ಸಿಟ್ಟ್ ಬಂದ್ 'ಆಗಲಿ ಮೊದ್‌ವೆಗೆ ಹೇಳಿಕೆ ಕೊಟ್ಟ್, ಬನ್ನಿ'ತ ಹೇಳಿ ಹಜ್ಜಾದೂರ ಹೋಗಿ ಮಾಯ ಆದವೆ. ಗಂಡ್‌ಸ್‌ಗ ಮಾತಾಡಿಕನ ಹೆಣ್ಮಕ ನೊಡುಲಿ ಬಾಯಿ ಹಾಕಿಕಾಗದ್, ಹಾಕಿರೆ ಹಿಂಗೆ ಆದೆತೇಳ್‌ವ ನಂಬಿಕೆ ತುಳು ಜೆನಾಂಗದವರ್‌ಲಿ ಉಟ್ಟು. ಇತ್ತ ಮನೆಲಿ ಅಬ್ಬಗ ದಾರಗ ಇಬ್ರೊರೆ ಇರಿಕನ ಬ್ರಾಹ್ಮಣ ವೇಸಲಿ ಬಂದ ನಾಗಬೆರ್ಮೆರ್ ಅವುಕೆ ಚೆನ್ನೆ ಆಟ ಆಡಿಕೆ ಸೂಚನೆ ಕೊಟ್ಟವೆ. ಚೆನ್ನೆ ಆಟಲಿ ತಂಗೆ ಗೆದ್ದದೆ. ಸೋತ ಅಕ್ಕನ ತಂಗೆ ಹೀಯಾಳಿಸಿದೆ. ಇದರ್‌ಂದ ಸಿಟ್ಟುಮಾಡಿಕಂಡ ಅಕ್ಕ ಚೆನ್ನೆ ಮಣೆಂದ ತಂಗೆನ ಕೆಬಿಚೆಂಡೆಗೆ ಹೊಡ್‌ದದೆ. ಬಲಾದ ಹೊಡ್‌ತಂದ ಅದರ ಜೀವ ಹೋದೆ. ಸತ್ತ ಮೇಲೆ ಅವಳ್‌ನ ಬಾಮಿಗೆ ಹಾಕಿ ತಾನೂ ಅದೇ ಬಾಮಿಗೆ ಬಿದ್ದ್ ಜೀವ ತೆಕಂಡದೆ. ಹೇಳಿಕಂಡ ಹರ್‌ಕೆನ ಒಪ್ಪುಸದೆ ಮೊದ್‌ವೆ ನಿಸ್ಚಯ ಮಾಡ್‌ದಕೆ ನಾಗಬೆರ್‌ಮೆರ್ ಈ ಅವುಳಿ ಸೋದರಿಯರ ಹಿಂಗೆ ಬಲಿ ತಕಂಡೊ. ಈ ಅವುಳಿ ಅಕ್ಕತಂಗೆಕಳಿಗೆ ಅವುಳಿ ಸೋದರರನೆ ಗೊತ್ತ್ ಮಾಡಿದ್ದೊತೇಳ್‌ದು ಸಿರಿಗಳ ಪಾಡ್‌ದನದ ಕೆಲೊವು ಪಾಟಾಂತರಗಳ್‌ಲಿ ಕಂಡ್ ಬಂದದೆ. ತುಳುನಾಡ್‌ಲಿ ಅಬ್ಬಗ ದಾರಗ ಸೋದರಿಯರ್ ಇಂದ್ ಸಿರಿಗಳ ದರ್‌ಸನ ಅಲ್ಲರೆ ಸಿರಿ ಜಾತ್ರೆಗಳಿಗೆ ಕೇಂದ್ರಗಳಂಗೆ ಒಳೊ. ದುರಂತಕೆ ಒಳಗಾದ ಅಬ್ಬಗ ದಾರಗ ಸೋದರಿಯರ್ ಇಂದ್ ಸಿರಿಗಳ ರೂಪಲಿ ಆರಾದನೆ ಮಾಡ್‌ವೆ. ಸಿರಿಗಳ ಸಾಲ್‌ಲಿ, ಸಿರಿ, ಸೊನ್ನೆ, ಗಿಂಡಿ, ಅಬ್ಬಗದಾರಗ ಮತ್ತೆ ಕುಮಾರತ (ಸಿರಿನ ಮಜ್ಜ) ಇದ್ದ್ ಇದೆಲ್ಲ ಆಲಡೆ ಅಲ್ಲರೆ ಬೆರ್ಮೆರೆ ಸ್ತಾನಲಿ ಮಹಾಲಿಂಗೇಸ್ವರ ದೇವರ ಸನ್ನಿದಿಲಿ ಆರಾದನೆ ಆದವೆ. (ವಿ.ಎನ್.)



ಅಬ್ಬಗ–ದಾರಗ

**ಅಂಕೆ ಉಮ್ಮಯ :** ಬೆಳ್ತಂಗಡಿನ ಅಂಡಿಂಜೆ ಪರಿಸರಲಿ ಮೊಡಿವಾಳ ಜೆನಾಂಗದ ಕಾರಣಿಕ ಮೊಯಿಂಸರಾದ ಅಂಕೆ ಉಮ್ಮಯ ಅವ್‌ಳಿ ಹೆಣ್ಮಕ್ಕಳ ಒಂದ್ ಕುಟುಂಬ ಆರಾದನೆ ಮಡ್‌ತುಟ್ಟು. ವೇಣೂರುನ ಅಜಿಲರ ಕಾಲಲಿ, ರಾಣಿ ಅರಮನೆಂದ ದೇಸ್ತಾನಕೆ ಹರ್‌ಕೆ ಒಪ್ಪ್‌ಸಿಕೆ ಹೋಕನ ಅದರ ಗಂಟ್ಲ್‌ನ ಬಹುಮುಕ್ಯ ರತ್ನಾಬರಣ ಮಾಲೆ ಒಂದ್ ಬಿದ್ದ್ ಹೋದೆ. ಅದರ ಹುಡ್‌ಕಿಕಾಕನ ಸಿಕ್ಕಿಲ್ಲೆತ ಈ ಅವ್‌ಳಿ ಹೆಣ್ಣ್‌ಗ ತಮ್ಮ ಕಾರಣಿಕಂದ ಅದರ ಹುಡುಕಿಕೊಟ್ಟ್ ಅವರ ಕೃಪೆಗೆ ಪಾತ್ರರಾದವೆ. ಇದರ್‌ಂದಾಗಿ ಅಂಕೆ ಮತ್ತೆ ಉಮ್ಮಯ ಆ ಊರ್‌ಲಿ ಪ್ರಸಿದ್ದಿ ಪಡ್ದ್ ಜೆನಪ್ರಿಯರಾದವೆ. ಅಂಕೆ ಉಮ್ಮಯರ್‌ಗೆ ಸಮ್ಮಂದಪಟ್ಟ ಪಾಡ್ದನನ ನಲ್‌ಕೆ ಜೆನಾಂಗದವ್ ಹೇಳ್‌ವ.

ಇವ್ ಕೊಡಮಾಣಿತ್ತಾಯ ಮತ್ತೆ ರಕ್ತೇಸ್ವರಿ ದೆವ್ವನ ಬಜತ್ತ ಗದ್ದೆಲಿ ಆರಾದಿಸಿಕಂಡ್ ಬರತಿದ್ದೊ ಈಗ ನಾಗಂಗೆ, ಕೊಡಮಾಣಿತ್ತಾಯ, ರಕ್ತೇಶ್ವರಿ, ಅಂಕೆ ಉಮ್ಮಯ್ಯ ಅವ್‌ಕೆ ವಾರ್‌ಸಿಕ ಪರ್‌ವಗ ಅಂಕೆ ಉಮ್ಮಯರ ವಂಸದವುತೇಳ್‌ವ ಕುಟುಂಬವೊಂದರ್‌ಲಿ ನಡ್‌ದದೆ. ಬೆಳ್ತಂಗಡಿನ ಕೊಳ್ಳೂರು ಪರಿಸರಲಿ ಅಂಬೆರ್‌ಲು ಕೊಂಬೆರ್‌ಲು, ಅಕ್ಕೆರ್‌ಲು ಅಬ್ಬೆರ್‌ಲು ಅವ್‌ಳಿಗಳ ಆರಾದನೆ ಉಟ್ಟು.

ಸುರತ್ಕಲ್ ಪರಿಸರಲಿ ನಡಿವ ಕೋಡ್ದಬ್ಬು ಕೋಲಲಿ ಕೋಡ್ದಬ್ಬು ದೆವ್ವದ ಪರಿಚಾರಿಕೆಯರಾಗಿ, ಅಂಗಣದ ಕಾಡ್ ಗುಡ್‌ಸ್‌ವ ಕೆಲ್ಸದವ್‌ಕೆ ಇಬ್ಬೊರು ಅವುಳಿ ಹೆಣ್ಣ್‌ಗಳಿಗೆ ಅಣಕ ಕೋಲ ನಡ್‌ದದೆ. ಅವು ಬೈಲ ಬೀಡ್‌ಂದ ಪಡುಕರಾವಳಿಗೆ ದೇಸ ಸಂಚಾರ ಹೊರ್‌ಟ್ ದಾರಿಲಿ ಕೆಲೊವ್ ಪವಾಡಗಳ ನಡ್‌ಸ್‌ತಾ ಬಂದವೆ. ದೆವ್ವ ದೇಸ್ತಾನಗಳಿಗೆ ಹೋಗಿ ಹರ್‌ಕೆ ಒಪ್ಪುಸಿಕಂಡ್ ಬಂದವೆ. ಇದರ ಒಟ್ಟಿಗೆ ಹಳ್ಳ ಚೋಡಿಗಳ್‌ಲಿ, ಮೀನ್ ಹಿಡ್‌ಕಂಡ್ ಮೀನ್ ಮಾರಾಟ ಮಾಡಿಕಂಡ್ ಬಾವ ಅಣ್‌ಕ್ ಪ್ರದರ್‌ಸನ ನಡ್‌ಸುವೆ. ಇವ್ ಮಾತಾಡ್‌ವ ಅಸ್ಲೀಲ ಸಂಬಾಸಣೆಂದ ಮೊದ್‌ವೆ ಆಗದವ್‌ತ ತೇಳ್‌ದು ಸ್ಪಸ್ಟ ಆದೆ.

**ಸೀಟಿಗಾರ ಬೂತಗ ಮತ್ತೆ ಕಾರಿ ಕಬಿಲ :** ಇದ್ ದೆವ್ವಾರಾದನೆಲಿ ಬರ್‌ವ ಪ್ರದರ್‌ಸನದ ಒಂದ್ ಬಾಗ ಆಗಿ ಇದ್ದದೆ. ಇದರ್‌ಲಿ ಎರ್‌ಡ್ ಬೇಟೆಗಾರ ದೆವ್ವಗ ಆವೇಸಂದ ಕೊಣಿತಿದ್ದವೆ. ಅದೇ ಹೊತ್ತುಗೆ ಕಾರಿ





ಕಬಿಲ ತೇಳ್ವ ಇಬ್ಬೊರು, ಅವ್‌ರ 'ಕಾಜೋ'ತೇಳಿ ಕರ್‌ದವೆ. ಆಗ ಕತ್ತಲೆಲಿ ಅಣ್‌ಗಿಕಂಡಿದ್ದ ಕರಿ ಬಣ್ಣದ ಕಾರಿಕದಲ್ಲ ಮತಗ ಬೇಟೆಗಾರರ ಸ್ವರಕೇಳಿ ಓಡಿಬಂದ್ ಅಟ್ಟಹಾಸಲಿ ಕೋಣ್‌ದವೆ. ಯಕ್ಷಗಾನಲಿ ಕಂಡ್ ಬಾವ ತೆರೆಮೇಲೆನ ಪ್ರದರ್‌ಸನನಂಗೆ ಬೇಟೆ ಆಡ್‌ವ ದ್ರಿಸ್ಯ ಇಲ್ಲಿ ರಂಜನೀಯ ಆಗಿ ನಡ್‌ದದೆ. ಕಾರಿ ಕಬಿಲ ಬ್ಯಾಟೆ ನಾಯಿಗಳ್‌ನೆ ಪ್ರತಿನಿದಿಸಿದೆತ ಹೇಳಕ್. (ವಿ.ಎನ್.)

**ಜೆನಪದ ನಂಬಿಕೆಗ–ಅರೆಬಾಸೆ ಪ್ರದೇಶದ ನಂಬಿಕೆಗ:** ಮೊಯಿಂಸ ಮತ್ತೆ ಸಮಾಜ ಪರಂಪರೆಂದ ಒಪ್ಪಿಕಂಡ್, ಅನುಸರ್‌ಸಿಕಂಡ್ ಬಾವ ವರ್‌ತನೆಗಳ ನಾವ್ ನಂಬಿಕೆಗ ತೇಳಿ ಕರ್‌ದವೆ. ವೈಚಾರಿಕ ದ್ರಿಸ್ಟಿಂದ ಬಾವುಕ ದ್ರಿಸ್ಟಿನೆ ಹೆಚ್ಚ್ ಇರ್‌ವಲ್ಲಿ ನಂಬಿಕೆನೂ ಗಟ್ಟಿಯಾಗಿದ್ದದೆ. ವಿದ್ಯಾವಂತ ಅವಿದ್ಯಾವಂತ; ಮೇಲೆನ ವರ್‌ಗ ಕೆಳಗೆನ ವರ್‌ಗತೇಳ್ವ ವೆತ್ಯಾಸಗ ಇಲ್ಲಿ ಕಮ್ಮಿ. ನಂಬಿಕೆಗ ಮೊಯಿಂಸನ ಮನಸ್‌ನ ಪರಿಸ್ತಿತಿಗೆ ಸಮ್ಮಂದ ಪಟ್ಟದರ್‌ಂದ ಅದೆಲ್ಲ ಸಾಮಾನ್ಯ ಆಗುಟು.

ಅರೆಬಾಸೆ ಪ್ರದೇಸಲಿ ಗೌಡ್ರ್ ಅವರ್‌ದೇ ಆದ ಕೆಲೊವು ನಂಬಿಕೆಗಳ ಇಸಿಕಂಡೊಳೊ. ಗೌಡರ ಬೊದ್‌ಕ್ನ ಎಲ್ಲ ಹಂತಲಿ ಅದ್ ಕೂಡಿಕಂಡುಟು. ಗುಣಕೆ ಹೊಂದಿಕೊಂಬಂಗೆ ಪಸು, ಪಕ್ಸಿ, ಹವಾಮಾನ, ಸಂಪ್ರೊದಾಯ ಸೇರ್‌ದಂಗೆ ನಂಬಿಕೆಗ ಹುಟ್ಟಿಕಂಡುಟು. ಒಂದ್ ಸಮುದಾಯದ ಆಲೋಚನೆಗೆ ತಕ್ಕಂಗೆ ನಂಬಿಕೆಗ ಹುಟ್ಟಿಕಂಡ್, ಒಟ್ಟ್ ಸಂಸ್ಕ್ರುತಿಗೆ ಸಮ್ಮಂದ ಆವ ನಂಬಿಕೆನ ಎತ್ತಿ ತೋರ್‌ಸಿದೆ. ಎಲ್ಲ ನಂಬಿಕೆಗಳ ಕಾರ್‌ಯ ಕಾರಣನ ಊಹುಸುದು ಕಸ್ಟ ಆದರ್‌ನೂ ಅದೆಲ್ಲ ಗೌಡರ ದಿನೋಳುನ ಬೊದ್‌ಕ್‌ನೊಟ್ಟಿಗೆ ಸೇರಿ ಹೋಗುಟು.

ನಂಬಿಕೆಗಳ ವೈಜ್ಞಾನಿಕ ನಂಬಿಕೆಗ ಮತ್ತೆ ಮೂಡನಂಬಿಕೆಗ ತೇಳಿ ಎರ್‌ಡ್ ಬಾಗ್ ಮಾಡಕ್. ನಂಬಿಕೆಗ ಮೊನ್‌ಸನ ವಿಸ್ವಾಸ ಮತ್ತೆ ಅಬಿಪ್ರಾಯಕೆ ಸಮ್ಮಂದ ಪಟ್ಟಂತದ್ ಇಂತ ನಂಬಿಕೆನ ನಂಬಿದವಂಗೆ ಅದ್ ವಿಜ್ಞಾನನೆ ಹೌದು, ಆ ನಂಬಿಕೆ ಲೋಕಂದ ಹೊರಗಿರವಂಗೆ ಅದ್ ಮೂಡನಂಬಿಕೆ ಆಗಿ ಕಾಂಬೊದು. ಈ ತಿಳ್‌ವಳಿಕೆನ ಹಿನ್ನೆಲೆಲಿ ಅರೆಬಾಸೆ ಪ್ರದೇಸದ ಗೌಡ ಸಮುದಾಯಲಿ ಇರ್‌ವ ಕೆಲೊವು ನಂಬಿಕೆಗಳ ಮುಂದೆ ಕಾಣಕ್.

**ಮೊಯಿಂಸನ ಸರ್ರಕೆ ಸಮ್ಮಂದಪಟ್ಟ ನಂಬಿಕೆಗ :** ಹೆಣ್ಮಕ್ಕಳ್‌ಗೆ ಎಡಗಣ್ಣ್, ಗಂಡ್‌ಸರ್‌ಗೆ ಬಲಗಣ್ಣ್ ಹಾರ್‌ರೆ ಒಳ್ಳೆದ್. ಒಂಟಿ ಸೀನ್ ಸೀನ್‌ಕಾಗದ್, ಜೇನ್ ಒಕ್ಕಲ್ ಹೋಕನ ತಲೆ ತೊರ್‌ಸಿರೆ ತಲೆಲಿ ಹೇನ್ ಆದೆ, ಹಲ್ಲಿ ಮೈಮೇಲೆ ಬಿದ್ದರೆ ದೋಸ, ಎಡ್‌ದ ಕೈಲಿ ಯೆಂತನು ಕೊಡಿಕಾಗದ್, ಹಂಗೆನೆ ಎಡ್‌ದ ಕೈಲಿ ಎಂತರ ಸ ತಕಂಬಕೆ ಆಗದ್, ಬೆದಂಗ್(ಚಿದಂಗ) ಊಟ ಇಕ್ಕಿಕಾಗದ್, ಒಂಟಿ ಕಾಲ್‌ಲಿ ನಿಲ್ಲಿಕಾಗದ್, ಯಾರಾರ್ ಮೊಯಿಂಸ ಮತ್ತೆ ವಸ್ತುನ ಕಂಡ್ ಏನಾರ್ ಹೇಳಿರೆ ಆಗಲೆ ಅವರ ಕೈಂದ ಅದರ ಮುಟ್ಟಿಸಿಕಣಕು, ಎಡ್‌ದ ಕಾಲ್ ಎಡ್‌ಗಿರೆ ಹೆಣ್ಮಕ್ಕಳಿಗೆ, ಬಲ್‌ದ ಕಾಲ್ ಎಡ್‌ಗಿರೆ ಗಂಡ್‌ಸರ್‌ಗೆ ಒಳ್ಳೆದ್. ಅಂಗೈ ತೊರ್‌ಸಿರೆ ದುಡ್ಡು ಸಿಕ್ಕಿದೆ, ಮಡೆ ಕೈಲಿ ಇಕ್ಕಿಕಾಗದ್ ಕಾಲ್ ತೊಳಿಯಕನ ಮುಡು ಚೆಂಡಿ ಆಕು.

**ಮೊದ್ದ್‌ಗೆ ಸಮ್ಮಂದಪಟ್ಟ ನಂಬಿಕೆಗ :** ಹೊಟ್ಟೆ ಉಬ್ಬರ್‌ಸಿರೆ ಉಪ್ಪು ನೀರ್ ಕುಡಿಯೋಕು. ಅಡ್‌ಕೆ ತಿಂದರೆ, ಅಕ್ಕಿ ತಿಂದರೆ ಕಾಮಾಲೆ ಕಾಯಿಲೆ ಬಂದದೆ. ಗಾಳಿಸೊಪ್ಪು, ನರ್‌ವಿಸ ಸೊಪ್ಪು, ಬೆಳ್ಳುಳ್ಳಿ, ಉಪ್ಪು, ತೊಳ್‌ಸಿನ ಗುದ್ದಿ ಸಂದ್ ಸಂದ್‌ಗೆ ಉಜ್ಜಿರೆ ಜೊರ ಕಮ್ಮಿ ಆದೆ. ಸೋಂಕು ಇದ್ದರೆ ಹೋದೆ. ಮುಳ್ಳು ಹೆಟ್ಟಿದ್ದರೆ ಹಿಟ್ಟ್ ಕಟ್ಟೊಕು ಆಗ ಹೋದೆ. ದೊಂಡೆ ಬೇನೆಗೆ ಕಾಸುಳಿನೀರ್(ಕಾಚ್‌ಪುಳಿ) ಮತ್ತೆ ಸುಣ್ಣನ ಕಲ್‌ಸಿ ದೊಂಡೆನ ಹೊರೆಗೆನ ಪುಡೆ ಗಂಟ್‌ಲಡಿ ಮೆತ್ತೊಕು.

**ಬೊದ್‌ಕ್ಗೆ ಸಮ್ಮಂದಪಟ್ಟ ನಂಬಿಕೆಗ :** ಐತ್‌ವಾರ ಕೂಸು ಹುಟ್ಟಿರೆ ಒಳ್ಳೆದ್, ಉತ್ತರ ನಕ್ಷತ್ರಲಿ ಹುಟ್ಟಿದ ಮಕ್ಕ ಮನೆ ಒತ್ತರೆ ಮಾಡ್‌ವೆ. ಕೂಸು ಹುಟ್ಟಿಕಾಕನ ಕೂಸ್‌ನ ಗಂಟ್‌ಲ್‌ಲಿ ಮಾಲೆ ಇದ್ದರೆ ರಾಜ ಆವ ಯೋಗ. ಹೆಣ್ಣ್ ಹೊಲೆಕಂಡ ದಿನಂದ ಮಳೆ ಬಂದರೆ ಅದ್‌ಕೆ ಒಳ್ಳ ಗಂಡ ಸಿಕ್ಕಿದೆ. ಬೊಸ್‌ರಿ ಹೆಣ್ಣ್‌ನ ಹೊಟ್ಟೆ ದೊಡ್ಡದಿದ್ದರೆ ಅದ್ ಹೆಣ್ಣ್ ಕೂಸುನ ಹೆತ್ತದೆ, ಬೊಸ್‌ರಿ ಹೆಂಗ್‌ಸ್ ಸತ್ತರೆ ಸುಡದೆ ಹೂಳೊಕು, ಗಂಜಿಗೆ ಅಕ್ಕಿ ಹಾಕಿಕಾಕನ ಅಕ್ಕಿ ತಿಂದರೆ ಮೊದ್‌ವೆಲಿ ಮಳೆ ಬಂದದೆ, ಮೊದೊಳಿಗೆ ಪ್ರಾಯ ಮೊದುಮಜ್ಜಂದ ಹೆಚ್ಚ್ ಇದ್ದರೆ, ಮೊದ್‌ವೆಯಾಕನ ಹೆಣ್ಣ್‌ನ ತಲೆಗೆ ದುಡ್ಡ್‌ನ ಇಸೊಕು, ತಲೆಮಟ್ಟೆ ಮೇಲೆ ಕುದ್ದರೆ ಮುದಿ ಗಂಡ ಸಿಕ್ಕಿದೆ, ಹಸಿ ಬಾಣಂತಿನ ದಾಟಿ ಹೋಕಾಗದ್, ಸತ್ತ ಮನೆಲಿ ವೊರ್‌ಸದೊಳೆಗೆ ಮೊದ್‌ವೆ ಮಾಡೋಕು. ಕಾಯಿಲೆ ಇದ್ದವರ ಸುಡಿಕಾಗದ್, ಹೂಳೊಕುತ ನಂಬಿಕೆಗ ಉಟ್ಟು.

**ಸಾಮಾಜಿಕ ನಂಬಿಕೆಗ :** ಮನೆಂದ ಹೋಕನ ಎಲ್ಲಿಗೇ? ತ ಕೇಳಿಕಾಗದ್, ಎಲ್ಲಿಗಾರ್ ಹೊರ್‌ಡಿಕನ ಕೊತ್ತಿ ಅಡ್ಡಬಾಕಾಗದ್, ಕಕ್ಕೆ ಸುಮಾರ್ ಸರ್‌ತಿ ಕಾ...ಕಾ... ಮರ್‌ಟರೆ ಸಾದ್‌ನ ಸುದ್ದಿ ಬಂದದೆ, ಕುಪ್ಪುಳು ಕಂಡರೆ ಒಳ್ಳೆದ್, ಕುಂಬಾರ ಮಡಿಕೆನ ಹೊತ್ತ್ ಕಂಡ್ ಹೋದು ಕಂಡರೆ ಹಾಳ್, ಮನೆಲಿ ಕನ್ನೆಟಿ ಒಡಿಯಕಾಗದ್, ದಾರಿಲಿ ತುಂಬಿದ ಕೊಡ್ಪನ ಕಂಡರೆ ಒಳ್ಳೆದ್, ಎತ್ತ್ ಅಡ್ಡ ಬಂದರೆ ಒಳ್ಳೆದ್, ಒಂಟಿ ಸೀನ್ ಸೀನಿಕಾಗದ್, ಉಂಬಕೆ ಕುದ್ದಲ್ಲಿ ಸೀನ್ ಬಂದರೆ ತಲೆಗೆ ನೀರ್ ಹನ್‌ಕಿಸಿಕಂಡ್ ಬೇರೆ ಕಡೆ ಹೋಗಿ ಉಣಕು, ಮಂಗ್ಳಾರ(ಕಡುವಾರ) ಹೊಸ ಬಟ್ಟೆ ಹಾಕಿಕಾಗದ್, ಐತ್‌ವಾರ ಬುದವಾರ ಹೊಸ್ತ್ ಬಟ್ಟೆ ಹಾಕೊಕು, ಬಟ್ಟೆನ ಮೊಗ್‌ಚಿ ಹಾಕಿಕಂಬಕಾದ್, ಹರ್‌ದ ಬಟ್ಟೆನ ಹಾಕಿಕಾಗದ್, ಮೈಮೇಲೆ ಬಟ್ಟೆ ಹಾಕಿಕಂಡ್ ಹೊಲೆಕಾಗದ್. ಕತ್ತಲಾದ ಮೇಲೆ ಗುಡ್‌ಸಿಕಾಗದ್, ಸುದ್ದದ ದಿನ ಬುಟ್ಟ್ ಬೇರೆ ದಿನ ಬಾಳೆಕಾಯಿ ಮತ್ತೆ ಕುಡು ಹಾಕಿ ಗೈಪು ಮಾಡಿಕಾಗದ್. ಕತ್ತಲೆಗೆ ಹಗಲಕಾಯಿ ಗೈಪು ಮಾಡಿರೆ ಅದ್ಕೆ ಒಣಂಗೆಲ್ ಮೀನ್ ಹಾಕೋಕು.

ಸುಟ್ಟ ಬಟ್ಟೆ ಹಾಕಿಕಾಗದ್, ಬೆಳಿ ಬಟ್ಟೆನ ಹೊದ್ದ್‌ಕಂಬಕಾಗದ್. ಮನೆಗೆ ತೆಂಕ ದಿಕ್ಕ್ ಬಾಗಿಲ್ ಇರಿಕಾಗದ್, ಮನೆ ಒಳಗೆ ಉಡು ಹುಗ್ಗಿಕಾಗದ್. ಮನೆಂದ ಹೋಕನ ಹೋನೆತೇಳಿಕಾಗದ್, ಹೋಗಿ ಬನ್ನೆತ ಹೇಳೊಕು. ಆಸ್ಪತ್ರೆಂದ ಬಾಕನ ಹೋನೆತ ಹೇಳೋಕು, ನೆಂಟ್ರ್ ಬಾಕನ ಗುಡ್‌ಸಿಕಂಡ್ ಇರಿಕಾಗದ್, ಬೂದಿಕುಂಬಳಕಾಯಿನ ಅಡ್ಡ ಕೊಯಕಾಗದ್, ಊಟ ಮಾಡಿಕಾಕನ ಊಟ ಮಾಡ್‌ದ ಮೇಲೆ ಮೈಮುರಿಯಕಾಗದ್, ಹಿಂಬೊತ್ ಮಲ್‌ಗಿಕಾಗದ್. ಇರ್‌ಲ್ ಬಟ್ಟೆ ಒಗೆಕಾಗದ್, ಊಟದ ಬಟ್ಲ್‌ಂದ ಮುಂದೆ ಕಾಲ್‌ನೀಂಡಿಕಾಗದ್, ಹಿಂಬೊತು ಉಪ್ಪು ಕೊಡಿಕಾಗದ್, ಉಪ್ಪುನ ಕೈಂದ ಕೈಗೆ ಕೊಡಿಕಾಗದ್, ಮಕ್ಕಳಿಗೆ ಕನ್ನಡಿ ತೋರ್‌ಸಿಕಾಗದ್,, ನಾಗರಹಾವ್‌ನ ಕೊಲ್ಲಿಕಾಗದ್, ಒಂದೇ ಬಾಳೆಲೆನ ಮನೆ ಒಳಗೆ ತಾಕಾಗದ್, ಮಾತಾಡ್‌ಕಾಕನ ಹಲ್ಲಿ ಮರ್‌ಟರೆ ಮಾತಾಡ್‌ದ್ ನಿಜ ಆದೆ, ಕೋಳಿಗ ಮಾತಾಡಿ ಕಂಡ್‌ರೆ ನೆಂಟ್‌ರ್ ಬಂದವೆ, ಕತ್ತಲೆಗೆ ಹಗಲಕಾಯಿ ಗೈಪು ಮಾಡಿಕಾಗದ್.

**ಮಾಟ ಮಂತ್ರ ವಿದ್ಯೆಗೆ ಸಮ್ಮಂದಪಟ್ಟ ನಂಬಿಕೆಗ :** ಮಾಟಮಂತ್ರ ವಿದ್ಯೆತೇಲುದು ಅತಿಮಾನುಸ ನಂಬಿಕೆನೇ ಆವುಟು. ಉದಾ : ಮಾಟ ಮಾಡ್‌ಸಿದ್ ಹೆಚ್ಚ್ ಕಡ್‌ಮೆ ಆದರೆ ಮಾಡ್‌ದವಂಗೇ ತಾಂಗಿದೆ, ಮೂರ್ ದಾರಿ ಸೇರುವಲ್ಲಿ ದೆವ್ವಗಿದ್ದವೆ, ಮಾತಾಡಿಕಾಕನ ಹಲ್ಲಿ ಮರ್‌ಟರೆ ಹೇಳ್‌ದ್ ನಿಜ ಆದೆ, ಕೋಳಿಗ ಮಾತಾಡಿಕಂಡರೆ ನೆಂಟ್ರ್ ಬಂದವೆ, ಅಲೆಕ್ಕಿ ಕೂಂಗಿರೆ ಸಾವು ಆದೆ, ಮನೆಲಿ ಕನ್ನೆಟಿ ಒಡ್‌ದರೆ ಸೆನಿ ಹಿಡ್ದದೆ, ಹಸ್‌ನ ಹಾಲ್ ದೇವ್ರುಗೆ ಒಳ್ಳೆದ್, ಕದಳಿ ಬಾಳೆಲೆನೆ ದೇವ್ರಿಗೆ ಆಕು, ಹುಣ್ಸಿಳಿ ಮರಲಿ ಇರ್‌ಲ್ ದೆವ್ವಗಿದ್ದವೆ, ಎರ್‌ಡ್ ಮೊಂದ್ರಿನ ನೊಡುಲಿ ಮೊಲಿಗಿಕಾಕನ ಜಾಗೆ ಇದ್ದರೆ ದೆವ್ವ ಮೊಲ್‌ಗಿದೆ, ಕತ್ತಲೆಗೆ ನಡೆಕಾಕನ ಹಿಂದೆ ತಿರ್‌ಗಿರೆ ಪೀಡೆ ಹಿಡ್‌ದದೆ, ನಾಗ ದೋಸ ಇದ್ದರೆ ಮಕ್ಕಾದುಲೆ, ಬಟ್ಲ್‌ಗೆ ಒಂದೇ ಸರ್‌ತಿ ಹುಗ್ಗ್ ಇಕ್ಕಿಕಾಗದ್, ಎರ್‌ಡ್ ಸರ್‌ತಿ ಇಕ್ಕೊಕು, ಮೂರ್ ಜೆನ ಕತ್ತಲೆಗೆ ಒಟ್ಟೆಗೇ ನಡೆಕಾಗದ್, ನಕ್ಷತ್ರ ಬೀಳ್‌ದು ಕಂಡರೆ ಅನಿಸ್ಟ, ದೂಮಕೇತು ಕಂಡರೆ ಹಾಳ್, ಕನ್ಸ್‌ಲಿ ಸೂರ್‌ಯ ಕಂಡರೆ ಒಳ್ಳೆದ್ ಹಿಂಗೆ.

**ಕ್ರಿಸಿಗೆ ಸಮ್ಮಂದಪಟ್ಟಾಂಗೆ ಇರ್‌ವ ನಂಬಿಕೆಗ :** ಇದರ್‌ಲಿ ಹವಾಮಾನ, ಪ್ರಾಣಿ ಸಾಕಣೆ, ದೈ ಮರ ಬೆಳ್‌ಸುದು, ಬೇಟೆ, ಮೀನ್‌ಗಾರಿಕೆ ಎಲ್ಲನು ಸೇರಿಕಂಡುಟು. ಉದಾರ್‌ಣೆಗೆ : ಹಸ್‌ನ ಕಟ್ಟಿ ಗದ್ದೆ ಹೂಡಿಕೆ ಆಗದ್. ಬಂಜೆ ದನನ ಗದ್ದೆ ಹೂಡಿರೆ ಅದ್ ಕರ್ ಹಾಕಿದೆ, 'ಹೊಸ್ತ್' ಆಗದೆ 'ಹೊಸ' ಅಕ್ಕಿ ತಿಂಬಕಾಗದ್, ನೇಗ್‌ಲ್ ತುಂಡಾದರೆ ಒಲೆಗೆ ಹಾಕಿಕಾಗದ್. ಬತ್ತನ ಮೆಟ್ಟಿಕಾಗದ್. ಕಕ್ಕೆ ಮನೆ ಒಳಗೆ ಬಾಕಾಗದ್, ಕುದ್ಕ ಕೂಂಗಿರೆ ಅಡ್‌ಕೆಗೆ ಕ್ರಯ ಹೆಚ್ಚಾದೆ, ನಾಯಿನ ಮೆಟ್ಟಿಕಾಗದ್–ಅದ್ ನಾರಾಯಣ ದೇವ್‌ರು. ಬೊಪ್ಪಂಗಾಯಿ ಮರ ಮನೆ ಕುಬಾಲ್‌ಂದ ಕೊಡಿಗೆ ಹೋಕಾಗದ್, ಬಾಳೆಲೆನ ಚೀಂತ್ ಚೀಂತ್ ಮಾಡಿಕಾಗದ್. ಮನೆಲಿ ಮುಜೆಂಟಿ ಜೇನ್ (ಒಂದ್ ಬಗೆಯ ಜೇನು) ಇದ್ದರೆ ಒಳ್ಳೆದ್. ಹಿಂಗೆ ನಂಬಿಕೆಗ ಉಟ್ಟು.

ನಂಬಿಕೆಗ ಗೌಡ್ರ ಬೊದ್‌ಕ್‌ನ ನಿಯಂತ್ರ್‌ಸ್‌ವ ದೊಡ್ಡ ಸಕ್ತಿಯಾಗಿ ಬೆಳ್‌ದುಟು. ಹಾಂಗೆನೆ ಕೆಲೊವು ನಂಬಿಕೆಗ ಗೌಡ ಸಮುದಾಯದ ಕೆಲವರ ಕಸ್ಟಕೆ ಸೆಕ್ಕ್‌ಸಿರ್‌ದು ಉಟ್ಟು. ಉದಾರ್‌ಣೆಗೆ ಗುಂಡನ ಬೊಳಿನ ಗೂಡೆನ ಮೊದ್‌ವೆ ಆಕಾಗದ್, ಬಂಗಾರ ಬೊಳಿನ ಗೂಡೆ ಒಳ್ಳೆದ್, ಮೂಲಾ ನಕ್ಷತ್ರ ಹಾಳ್‌ತ ಹೇಳ್‌ದು. ಹಿಂಗೆ ಇಂತ ನಂಬಿಕೆಗೆ ಯಾದೇ ವೈಜ್ಞಾನಿಕ ಕಾರಣಗ ಇಲ್ಲದಿದ್ದರೂ ಗೌಡ್ರು ಅದರೆಲ್ಲ ಬಲಾಗಿ ನಂಬಿಕಂಡ್ ಬಂದೊಳೊ. ಇದರ್‌ಂದ ಸಮುದಾಯದ ಜೆನಗಳೆ ತೊಂದರೆಗೆ ಬಿದ್ದೊಳೊ. ದಾರ್ಮಿಕಾಗಿ, ಸಾಂಸ್ಕೃತಿಕಾಗಿ ಸಾಮಾಜಿಕಾಗಿ ಮತ್ತೆ ವಯಕ್ತಿಕಾಗಿ ಹುಟ್ಟಿಕಂಡ ನಂಬಿಕೆಗ ಬಾರಿ ಹಳ್‌ತ್ ಆಗಿರ್‌ದರ್‌ಂದ ಅವು ಒಂದ್ ಸಮುದಾಯದ ಮೂಲ ಸಂಸ್ಕೃತಿನೊಟಿಗೆ ಸಮ್ಮಂದ ಹೊಂದಿದ್ದವೆ.

ಹಾಂಗೆ ನೋಡಿರೆ, ನಮ್ಮ ಸಂಸ್ಕೃತಿನ ಕೆಲೊವು ನಿಯಮಗ ನಮ್ಮನೆ ಹೆಚ್ಚಿ ವಿಸ್ತಾರಾಗಿ ಬೆಳೆಯದಂಗೆ ಮಾಡಿರ್‌ದೂ ಉಟ್ಟು. ಉದಾರ್‌ಣೆಗೆ, ನಮ್ಮ ಇಡೀ ಸರ್ರನ ನೊಡು ಬಾಗಂದ ಕರ್ತ್‌ರಿಸಿ ನೋಡಿರೆ ಸರ್ರದ ಉತ್ತರಾರ್‌ದನ ನಾವು ಗೌರವಿಸಿದ ಹಾಂಗೆ ಅಲ್ಲೊ, ಅದ್‌ರ ಬಳ್‌ಸಿದ ಹಾಂಗೆ ಸರ್ರದ ಕೆಳಗೆನ ಬಾಗನ ಗೌರವಿಸುದುಲೆ. ಸರ್ರಲಿ ತಲೆ ಸ್ರೇಸ್ಟ ಆದ್‌ರೆ ಕಾಲ್ ಕನಿಸ್ಟತೇಳಿ ನೆನ್‌ಸಿಯೊಳೊ.

ಹಾಂಗಾಗಿ ಯಾರಾರ್ ಕಾಲ್ ಹಿಡ್‌ದ್ ಅವರ ಪಾದ ದೂಳ್‌ನ ತಲೆಗೆ ಅಂಟಿಸಿಕಂಬದು ತೇಳಿರೆ ನಿಮ್ಮ ಸರ್ರದ ಅತಿ ಕನಿಸ್ಟ ಬಾಗನೂ, ನನ್ನ ಸರ್ರದ ಅತಿ ಗರಿಸ್ಟ ಬಾಗಕೆ ಸಮಾನ ತೇಳಿ ಸಾರಿಕಂಬದು ತೇಳಿನೇ ಅರ್‌ತ. ಈ ಅರ್‌ತಲಿ ಸರ್ರದ ಕೆಳಗೆನ ಅರ್‌ದ ಬಹುಮಟ್ಟ್‌ಗೆ ಕೆಲ್‌ಸಕೆ ಬಾರದ್ದಾಗುಟು. ಇದರಾಂಗೆ ಸರ್ರನ ಎಡ್‌ದ ಮತ್ತೆ ಬಲ್‌ದ ತೇಳಿ ನೋಡಿರೆ, ನಮ್ಮಲ್ಲಿ ಸರ್‌ರದ ಎಡ್‌ದ ಬಾಗದ ಬಳ್‌ಕೆ ಕಮ್ಮಿತೇಳಿದೆ ಹೇಳಕ್.

ಸಣ್ಣ ಕೂಸು ಎಡ್‌ದ ಕೈಲಿ ಹಿಡ್‌ದ ತಿಂಡಿನ ಕೇಳ್‌ದವ್‌ಕೆ ಕೊಟ್ಟರೆ, ಕೂಡ್ಲೆ ಹಿರಿಯರ್ ಎಡ್‌ದ ಕೈಲಿ ಕೊಡಿಕಾಗದ್, ಬಲ್‌ದ ಕೈಲಿ ಕೊಡು ತೇಳಿ ಎಡ್‌ದ ಬಲ್‌ದ ಕೈಗಳ ವೆತ್ಯಾಸನ ತೋರ್‌ಸಿಕೊಟ್ಟವೆ. ಎಡ್‌ದ ಕೈಂದ ನಮಸ್ಕಾರ ಮಾಡಿಕಾಗದ್, ಊಟ ಮಾಡಿಕಾಗದ್, ಎಂತನೂ ಕೊಡಿಕಾಗದ್ ಹಿಂಗೆಲ್ಲ ನಿಸೇದಂದ ಸರ್ರದ ಎಡ್‌ದ ಬಾಗದ ಬಳ್‌ಕೆ ಕಡಿಮೆ ಮಾಡಿಯೊಳೊ. ಗಂಡ್‌ಂದ ಹೆಣ್ಣ್ ಕಮ್ಮಿತೇಳುವ ನಂಬಿಕೆಂದಾಗಿ ಹೆಣ್ಣ್‌ನ ಗಂಡ್‌ನ ಎಡ್‌ದ ಕಡೆನೆ ನಿಲ್‌ಸುವೆ. ನಮ್ಮ ದೇವ್‌ರುಗ ಸನ ಅವರ ದೇವಿಯರ ಎಡ್‌ದ ಬಾಗಕ್ಕೆ ತಳ್ಳಿವೆ. ಹಿಂಗೆ ನಮ್ಮ ಸಾಂಸ್ಕೃತಿಕ ತಿಳ್‌ವಳಿಕೆ ಸರ್ರದ ಅರ್‌ದ ಬಾಗನ ಕೆಲ್‌ಸಕೆ ಬಾರದಾಂಗೆ ಮಾಡಿಬುಟ್ಟೊಳೊ. ಸರ್ರನ ಹಿಂದೆ ಮತ್ತೆ ಮುಂದೆ ತೇಳಿ ಬಾಗ ಮಾಡಿಕಂಡರೆ, ಸರ್ರದ ಹಿಂದೆನ ಬಾಗ ಬಹುಮಟ್ಟ್‌ಗೆ ನಿರುಪಯುಕ್ತ. ದೇವ್‌ರ್‌ಗೆ ಬೆನ್ನ್ ಹಾಕಿಕಾಗದ್, ಸಬೆಗೆ ಬೆನ್ನ್ ಹಾಕಿಕಾಗದ್, ಹಿರಿಯವ್‌ಕೆ ಬೆನ್ನ್ ಹಾಕಿಕಾಗದ್ ತೇಳ್‌ವ ನಂಬಿಕೆನ




ನೆಲೆಲಿ ಸರ್ಗದ ಬಳ್‌ಕೆ ಸೀಮಿತ ಆಗುಟು. ಈ ವಿಸಯಲಿ ಗೌಡ್ರ ಸಕ್ತಿ ಮತ್ತೆ ದೌರ್‌ಬಲ್ಯಗ ಎಂತತೇಳ್‌ವಂತ ವಿಸಯಗಳ ಬಗ್ಗೆ ನಾವು ಇನ್ನಸ್ಟೆ ಗ್ಯಾನ ಮಾಡಕಾದೆ. (ಕೆ.ಎಸ್.)

## ಜೆನಪದ ವೈದ್ಯ–ಹಳ್ಳಿ ಮೊದ್ದು, ನಾಟಿಮೊದ್ದ್

ಯಾವ್ದರ ಜೆನಂಗ, ಮಾಮೂಲಾಗಿ ಮೊದ್ದ್‌ಕೊಡೊವ್, ಹಳ್ಳಿಮೊದ್ದ್ ಕೊಡೊವುಂತ ಕರೆತಿದ್ದನೋ ಅದರ್‌ನೇ ಜೆನಪದ ವೈದ್ಯಂತನೂ ಕರ್‌ದವೆ. ನಿತ್ಯಜೀವನಲಿ ಹಳ್ಳಿಯವು ನೂರೆಂಟ್ ಸಮಸ್ಯೆಗಳೆಲ್ಲ ಕಾಂಬೊತಿದ್ದೊ.

ಮನೆಲಿ ಹಸ್‌ಗೆ ಕಾಲ್ ಮುರ್‌ದರೆ, ಯಾರಿಗಾರ್ ಹಾವು ಕಚ್ಚಿರೆ, ಯಾರಾರ್ ಕತ್ತಿಲಿ ಕೈಗೆ ಕಡ್‌ಂಕಡರೆ, ಯಾರಿಗಾರ್ ಗಂಟ್ಲ್ ಉಳ್ಕಿರೆ, ಕಾಯಿಲೆ ಕಸ್ಲೆಗ ಬಂದರೆ ಅದ್ಕೆಲ್ಲ ದೊಡ್ಡ ದೊಡ್ಡ ಆಸ್ಪತ್ರೆನ ಸೌಕರ್ಯಗ ಪಂಡ್ ಸಿಕ್ಕದಿರ್‌ಕನ, ತ ಹೊತ್ತುಲಿ ನಮ್ಮ ಹಳ್ಳಿಯವೇ ಅದ್ಕೆ ಪರಿಹಾರಕಂಡ್‌ಕಣ್ತಿದ್ದೊ ಅವು ಕಾಡ್ ಗುಡ್ಡೆಲೇ ಸಿಕ್ಕ್‌ತಿದ್ದ ನಾರ್‌ಬೇರ್ ಸೊಪ್ಪುಕಾಯಿಗ, ದಿನಬಳ್ಕೆ ಸಾಮಾನ್‌ಗಳ ಸೇರ್‌ಸಿಕಂಡ್ ತಲೆಕರ್‌ಚಿ ಮಾಡಿ ಕಾಯಿಲೆಗಳ ಗುಣಮಾಡಿಕೆ ನೋಡ್ತಿದ್ದ. ನಮೂನೆ ನಮೂನೆ ಕಾಯಿಲೆಗೆ ನಮೂನೆ ನಮೂನೆ ಮೊದ್ದ್‌ಗಳ ಅವು ಮೊದ್ದ್‌ಕೊಟ್ಟ್ ಗುಣಮಾಡಿಕೆ ಕಲ್ತಿದ್ದ. ಹಿಂಗೇ ಮೊದ್ದ್‌ಕೊಡಿಕೆ ಸುರುಮಾಡ್ದವು ಕೈಗುಣ ಲಾಯ್ಕಿದ್ದವು ಅದರ್‌ನೆ ಒಂದ್ ಉದ್ಯೋಗ ಆಗಿ ಮಾಡಿಕಂಡೊ.

ಈ ವಿದ್ಯೆಗ ಅಪ್ಪಂದ ಮಜ್ಜಂಗೆ, ಹಿರ್ಯವರ್‌ಂದ ಮಕ್ಕಳಿಗೆ ಹಿಂಗೆ ತಲೆಮಾರ್‌ಂದ ತಲೆಮಾರಿಗೆ ಮುಂದುವರ್‌ಕಂಡೇ ಬಾತ್. ಈ ಮೊದ್ದ್ ಕೊಡ್ದರ್‌ಲಿ ಬಿರ್‌ಸತ್ತಿಕೆ ಪಡ್ದವು ಅವರ ಊರು ಬೊಯ್ಲ್ ಹತ್ತೂರ್‌ಲಿ ಹೆಸ್ರ್ ಮಾಡ್ದ ಊರ್‌ಗೆ ಉಪಕಾರನು ಮಾಡ್ದ ಹಿಂಗೆ ಈ ಹಳ್ಳಿಮೊದ್ದ್ ಕೊಡ್ದುಂತೇಳ್ವಂತದ್ ಅಂದ್ ಹುಟ್ಟಿ ಇಂದ್ ಮುಟ್ಟ ಹಾಂಗೆ ಒಬ್ಬೊಂದೊಬ್ಬಂಗೆ ಬೆಳ್ಕಂಡ್ ಬಂದ್ ಈಗ ಹೇಳ್ವ ಆಯುರ್‌ವೇದದ ಮೂಲಂತೇಳಿಯೇ ಹೇಳಕ್. ಹಳ್ಳಿಮೊದ್ದ್ ಕೊಡವು ಸುಮಾರ್‌ತರಲಿ ಒಳೊ.

ಮನೋವೈದ್ಯ, ಪಶುವೈದ್ಯ, ಮಕ್ಕಳವೈದ್ಯ, ಬಸುರಿ–ಬಾಣಂತಿ, ವೈದ್ಯ, ಸಾಮಾನ್ಯವೈದ್ಯ ತೇಳ್‌ವ ವಿಬಾಗಲಿ ಹಳ್ಳಿ ವೈದ್ಯರ ಸ್ವರೂಪನ ವಿವರ್‌ಸಿಯೊಳೊ. ಇವ್ ಮಾತ್ರ ಅಲ್ಲದೆ ಸಣ್ಣ ಪುಟ್ಟ ಆಪ್ರೇಸನ್ ಹಳ್ಳಿ ವೈದ್ಯರುಗ ಮಾಡ್ತಾ ಇದ್ದ. ಮನೋವೈದ್ಯ ಹಳ್ಳಿ ಮೊದ್ದ್ ಸುರುನ ಸ್ತಾನ ಪಡ್ದುಟು. ಮನ್ಸುನ ಮೇಲೆ ಆವ ಪರಿಣಾಮ ಎಸ್ಟ್‌ತ ಮನೋವಿಜ್ಞಾನ ಓದಿದ ಎಲ್ಲೊವುಕು ತಿಳಿವ ವಿಷಯ. ಹಳ್ಳಿಮೊದ್ದ್‌ನ ವಿವರಗಳ ನೋಡಿಕನ ಅಲ್ಲಿನ ರೋಗಗಳಿಗೆ ದೈರ್ಯ ಹೇಳ್ದು ಮೂಲ ಆಗಿದ್ದ್ ಮನ್ಸ್‌ನ ಪರಿಣಾಮ ದೇಹದ ಮೇಲೆ ಆಗಿರ್‌ದರ್‌ಂದ ಅದರ್‌ಂದಾವ ಮನ್ಸ್‌ನ ರೋಗಗ ತುಂಬಾ ಉಟ್ಟು ತೇಳ್ದು ಸ್ಪಸ್ಟ ಆದೆ. ಹೀಂಗೆ ರೋಗಗಳ ಲಕ್ಷಣಗಳ ವಿವರ, ಪತ್ಯ ಕ್ರಮ, ಇದರ ಜೋಡ್ಸುದು ಹಾಂಗೆನೇ, ಅದ್ಯಯನ ನಾಟಿ ವೈದ್ಯನ ಮುಕ್ಯ ಸಾಕೆ ಆಗುಟು. ಮಂತ್ರ, ಮಾಟ, ದ್ರಿಸ್ಟಿತೆಗೆದು, ದೆವ್ವ ಬುಡ್ಸುದು, ದೇವರ ಪೂಜೆ ಮಾಡಿ ತೀರ್ತ ಕೊಡ್ದು. ಇಂತ ಹೊತ್ತುಲಿ ನಾಟಿ ವೈದ್ಯರ್‌ಗ ರೋಗದವ್‌ಕೆ ಮೊದ್ದ್ ಕೊಡ್‌ದು ಮನೋಚಿಕಿತ್ಸೆ ತೇಳಿ ಹೇಳಕ್. ಉದಾಹರಣೆಗೆ ಕಣ್ಣು ಬೇನೆ ಆಕನ ದ್ರಿಸ್ಟಿದೋಸನ ಗುಣ ಮಾಡಿಕೆ ನಾಟಿ ವೈದ್ಯರ್ ಮಾಡ್‌ವ ಚಿಕಿತ್ಸೆಗಳ ಕಾಣಕ್. ಕೆಲವ್ ಜೆನ ಕೆಟ್ಟ ಕಣ್ಣು ಉಟ್ಟುತ ತ ಜೆನ ಮಕ್ಕಳ ನೋಡ್‌ಕನ ಅವ್‌ಕೆ ಹೊಟ್ಟೆಬೇನೆ ಬಂದದೇಂತ ನಂಬುವೆ. ಈ ನಂಬಿಕೆನೆ ಒಂದ್ 'ಪ್ರೇರಣೆ' ಆಗಿದ್ ದೇಹದ ಮೇಲೆ ಪರಿಣಾಮ ಬಿದ್ದದೆ .ಆಗ ಕೆಟ್ಟಕಣ್ಣ್‌ನ ದ್ರಿಸ್ಟಿದೋಸನ ತೆಗೆಕೆ ನೆಟ್ಟಿಗೆ ಮುರಿಯಕೆ, ಕೆಂಡದ ಬರೆ ಹಾಕುದು, ಹೊತ್ತಿ ಕಂಡ್ ಇರ್‌ವ ಹಂಚಿಕಡ್ಡಿಗಳ ಉಜ್ಜುದು, ನಾಕ್ ದಾರಿಗ ಕೂಡುವಲ್ಲಿ ಒಡು ಹಾಕುದು – ಈ ಬಗೆನ ಕೆಲಸಗಳ ಮಾಡ್‌ವೆ. ಈ ಕ್ರಮಗ, ಪ್ರೇರಣೆಗ. ಈ ಕ್ರಮಗಳ್‌ಂದ ನಾವುಗೆ ಹೊಟ್ಟೆಬೇನೆ ಹೋದೆಂತ ಜೆನಕೆ ನಂಬಿಕೆ. ಆದರ್‌ಂದ ಮನ್ಸ್ ಸಮಾದಾನ ಆದರ್‌ಂದ ಹೊಟ್ಟೆಬೇನೆ ಕಡಿಮೆ ಆದುಟ್ಟು. ಮಾಟಕೆ ಪಂತಿಮಾಟ ಮಾಡ್ದು ದೆವ್ವ ಹಿಡಿದಕೆ ದೆವ್ವ ಬುಡ್ಸುದು ಇದರ್‌ಲಿ ನಾವು ಕಾಂಬೊದು ಪ್ರೇರಣೆ ಮತ್ತೆ ಪ್ರತಿ ಪ್ರೇರಣೆಗಳ ಪರಿಣಾಮನೆ. ದನಗಳಿಗೆ ಸಾಮಾನ್ಯವಾಗಿ ಕೊರಡು ಸೆಲೆ, ಕುಂದು, ಹರುಪತಿ, ದೊಡ್ಡರೋಗ, ಚಪ್ಪೆ (ಕೆಪ್ಪೆ) ರೋಗ, ಅಳ್ಳೇರೋಗ, ಕಾಲುಜ್ವರ, ಬಾಯಿಜ್ವರ, ಪಿನಾಸಿ ಇಂತ ರೋಗಗ ಬಂದದೆ. ಇಸ್ಟ್ ಅಲ್ಲದೆ ಕಾಲ್, ಕೊಂಬು ಮುರ್‌ದು ಹೋದುಟ್ಟು. ಕೆಲವೊಮ್ಮೆ ಹೆಗ್‌ಲ್ ಬಾಪಿಕಂಡದೆ. ಮೈಗೆ ಉಳ್‌ಂಗ್ ಹತ್ತಿದೆ. ಕಣ್ಣು ಬಿಳಿ ಆದೆ. ಸರ್‌ಲಿ ಹುಣ್ಣ್ ಆಗಿ ಹುಳ ಆದೆ. ಕರ್‌ಗಳ್‌ಲಿ ಹುಳ ಆದೆ. ದನಂಗ ಮುಂಗಾರು ಜೋಳ ತಿಂದು ಸೊಕ್ಕುವೆ. ಇದ್ದಕಿದ್ದಾಂಗೆ ಹಸುಗಳ್‌ಲಿ ಹಾಲು ಕಮ್ಮಿಯಾದೆ. ಹಸು ಎಮ್ಮೆಗ ಕರು ಹಾಕ್‌ಕಣ ಕಸ ಬೀಳ್ದು ಕಸ್ಟ ಆದೆ. ಹಿಂಗೇ ಬೇರೆ ಬೇರೆ ತೊಂದರೆಗ ಆದೆ.

ಪಶುವೈದ್ಯರ್‌ಲಿ ತಿಳ್ದ ವ್ಯಕ್ತಿ, ರೋಗಗಳ ಲಕ್ಷಣಗಳ ಲಾಯಿಕ್ಕ್ ತಿಳ್ದರುಂದ ರೋಗ ಗುಣ ಮಾಡ್ದೆ. ಉದಾರಣೆಗೆ ಕಾಲುಜ್ವರ; ಇದರ್‌ಲಿ ದನಗಳ ಸೌಡ್ ಸಂದು ಬಾಪಿ ರೇಸಿ ಆದೆ. ನೀರ್‌ಲಿ ಓಡಾಡಿಕನ ಗಾಯ ಜಾಸ್ತಿ ಆಗಿ ರೇಸಿ ಅರಿದು. ಮಾತ್ರ ಅಲ್ಲದೆ ಹುಳು ಬೀಳಿಕೆ ಸುರಾದೆ. ಕಾಲನ್ ಮುಟ್ಟಿರೆ ಜಾಸ್ತಿ ಬಿಸಿ ಆದೆ. ಈ ಲಕ್ಷಣಗ ನೋಡುಕನ ಅದರ ಕಾಲುಜ್ವರ ತೇಳಿ ಗುರ್‌ತ್‌ಸ್‌ವೆ. ಆಗ ಮೀನ್ ತಂದ್ ಅದರ ನೀರಿನೊಟ್ಟುಗೆ ಒಂದ್ ಕಲ್ಲ್‌ನ ಮೇಲೆ ಅರ್‌ದ್ ಆ ನೀರ್‌ನ ದನಗಳ ಕಾಲ್ ಗೊರಸುನ ಮೇಲೆ ದಿನ ಹಾಕಂಡ್ ಬಂದರೆ ಕಾಲುಜ್ವರ ಕಡಿಮೆ ಆಗಿ ಬಂದು ಕ್ರಮೇಣ ಹೊರ್ಟ್ ಹೋದೆ. ದನಕರ್‌ಗಳಿಗೆ ಮಾತ್ರ ಅಲ್ಲದೆ, ಎಮ್ಮೆ, ಕೋಣ, ಆಡು, ಹಂದಿ, ಕುರಿ, ಕೋಳಿಗಳಿಗೆ ಪ್ರಾಣಿಗಳಿಗೂ ಬಾವ ಬಗೆಬಗೆನ ಕಾಯಿಲೆಗಳಿಗೆ ಹಳ್ಳಿ ವೈದ್ಯರ್‌ಲಿ ಪರಿಹಾರಗಳ ಕಾಣಕ್. ಮಕ್ಕಳಿಗೆ ಕೆಲವ್ ರೋಗಗ

ಹುಟ್ಟುಕನೇ ಬಂದರೆ ಮತ್ತೆ ಕೆಲವ್ ಹುಟ್ಟಿದ ಮೇಲೆ ಬಂದದೆ. ರೋಗಗ ಬಂದಮೇಲೆ ಅದರ ಹೋಗ್ಸಿಕೆ ಬದಲಾಗಿ ರೋಗಗ ಬರದಾಂಗೆ ಮುಂಜಾಕ್ರತೆ ವಯ್ಸಕಾದೆ.

ಈ ಕಾರಣಂದಾಗಿ ಬಸುರಿಯಾದವ್‌ಕೆ ಕೆಲ ವಿಸೇಸ ಆದ ಮೊದ್ದ್‌ಗಳ ಕೊಟ್ಟ್ ಕೂಸು ಆರೋಗ್ಯಂದ ಇರುವಂಗೆ ಮಾಡ್‌ವೆ. ಅಯ್ಯೆ ತಿಂಬ ಆಹಾರದ ಕಾರಣಂದಾಗಿದ್ ಕೂಸುಗೆ ರೋಗ ಬಾದುಟ್ಟು. ಈ ಕಾರಣಂದ ಕೂಸು ಆರೋಗ್ಯಲಿರಕಾರೆ ಬಾಣಂತಿ ತುಂಬಾ ಜಾಕ್ರತೆ ಇರಕಾದೆ. ಮಕ್ಕಳಿಗೆ ಬಾವ ರೋಗಗಳ್‌ಲಿ ಹಕ್ಕಿಕಡುಕನ ರೋಗ, ವಾಯು, ಹೊಟ್ಟೆ ಬೇನೆ, ಹೊಟ್ಟೆ ಉಬ್ಬರ, ಲಾಳಸಂಕಾಲೆ, ಬಾಲಗ್ರಹ, ಇಸಬು, ಕೆಮ್ಮು ಇಂತ ಕಾಯಿಲೆಗ ಉಟ್ಟು. ಬೊಸುರಿ – ಬಾಣಂತಿಗೆ ಇರುವಂತ, ವಿಸೇಸಾದ ಕಾಯಿಲೆಗ ಬಂದವೆ. ಈ ಕಾಯಿಲೆಗಳ ಸ್ವರೂಪನ ಮನೆಲಿರ್‌ವ ಹಿರಿಯ ಹೆಣ್ಮಕ ತಿಳ್ಕಂಡಿದ್ದವೆ. ಅವೆ ಸೂಲಗಿತ್ತಿನ ಕೆಲಸನನು ಮಾಡುದುಟ್ಟು. ಈಗನು ಸುಮಾರು ಸಂಸಾರಲಿ ಬಸುರಿ –ಬಾಣಂತಿಗಳಿಗೆ ಆಸ್ಪತ್ರೆ ಮೊದ್ದ್ ಕೊಡ್ದುಲೆ. ಮನೆಮೊದ್ದ್ ಮಾಡ್‌ವೆ.

ನಾರು ಬೇರ್‌ಗಳ ಕಸಾಯ, ಲೇಹ್ಯ ಅವಲೇಪ, ಊಟೋಪಚಾರಗಳ ಎಚ್ಚರ್‌ಕೆ ಪತ್ಯ ಚಿಕಿತ್ಸೆ–ಇಂತದರ್‌ಂದ ಆವಂತ ಸುಮಾರ್ ತೊಂದರೆಗಳ ಸುಲಬಲಿ ನಿವಾರ್‌ಸುವ ನಾಟಿ ಮೊದ್ದ್‌ಗ ಮನೆನ ಹಿರಿಯರ್‌ಗೆ ತಿಳ್ದಿದ್ದದೆ. ಸಾಮಾನ್ಯ ಆಗಿದ್ ಎಲ್ಲವ್ಕು ಬಾವ ನೆಗ್‌ಡಿ, ಕೆಮ್ಮು, ವಾಂತಿ, ಬೇದಿ ಇಂತ ದಿನೋಳುನ ಕಾಯಿಲೆಗೆ ಸುಮಾರ್ ಮೊದ್ದ್ ಉಟ್ಟು. ಹೀಂಗೆ ಬಳ್ಸುವ ನಾಟಿ ಮೊದ್ದ್‌ಗಳ ಸರಳ ಸ್ವರೂಪ ಆಗಿದ್ದದೆ. ಸಂಕೀರ್ಣ ಆದ ಮೊದ್ದ್‌ಗಳು ಕೆಲ ಸರ್‌ತಿ ಬಳ್ಕೆ ಆದೆ ಸುಲಬದ ಮೊದ್ದ್‌ಗಜಾಸ್ತಿ ಕರ್‌ಚಿಲ್ಲದೆ ಸಿಕ್ಕಿದೆ. ಉದಾ : ಉಗುರು ಸುತ್ತು ಆಕನ ಒಂದ್ ಕೋಳಿ ಮೊಟ್ಟೆಯನ್ನ ಒಟ್ಟೆ ಮಾಡಿ ಅದರ ಬೆರ್‌ಲ್‌ನ ಒಳಗೆ ಹುಗ್ಗುಸಿ ಇಸಿ ಬಟ್ಟೆ ಕಟ್ಟಿರೆ ಕೋಳಿಮೊಟ್ಟೆ ಉಗುರು ಸುತ್ತುಲಿರುವ ರೇಸಿನ ಹೀರಿಕಂಡದೆ. ಕೆಲವ್ ದಿನಗಳ್‌ಲಿ ಉಗುರು ಸುತ್ತು ಗುಣ ಆದೆ. ಮೊಟ್ಟೆನ ಬದಲ್‌ಗೆ ನಿಂಬುಳಿನು ಆದೆ.

ಎಳೆಕೂಸುಗೆ ಕೊಡುವ ಬಜೆ, ಅತಿಮದುರ ಇಂತ ಸುತ್ತುಕಾರ ಇನ್ನೊಂದ್ ಒಳ್ಳ ಮೊದ್ದ್. ಇಂತ ಸುಲಬದ ಮೊದ್ದ್‌ಗ ನಾಟಿವೈದ್ಯರಕ್ಕಲೆ ಸುಮಾರ್ ಇದ್ದದೆ. ಹಣ್ಣಿ ಕಸ್ಟದ ಮೊದ್ದ್‌ಂತಾದರೆ ಕಷಾಯಗ ಒಳ್ಳದು. ಉದಾಹರಣೆ, ಬಗೆಬಗೆನ ಸೊಪ್ಪುಗಳ ನಾರ್‌ಬೇರ್‌ಗಳ ಹಾಕಿ ಕಸಯನ ಮಾಡ್‌ವೆ. ಇದರ್‌ಲಿ ಬೇವುನ ಚಕ್ಕೆ ಮುಕ್ಯದ್ದ್. ಈ ಕಸಾಯಗಳ ಸುಮಾರ್ ಕಾಯಿಲೆಗಳಿಗೆ ಕೊಟ್ಟವೆ. ಹಳ್ಳಿ ಮೊದ್ದ್‌ಲಿ ಹಾಕ್‌ವ ಸಾಮಾನ್‌ಗ ಸುಲಬಲಿ ಸಿಕ್ಕಿರೂ ಅದರ್‌ಲಿ ಸುಮಾರ್ ನೆರೆಕರೆ ಸಿಕ್ಕುವಂತದ್. ಜೇನುತುಪ್ಪ, ನಿಂಬುಳಿ, ಸೊಪ್ಪುಗ, ತೊಳ್ಸಿ, ತಾಮ್ರಣಿ, ತಗಡ್, ಸೆಗ್‌ಣಿ, ತಿಂಬ ಎಲೆ ಬಾಳೆಯಕರೆ, ಶುಂಟಿ, ಹೊಗೆಸೊಪ್ಪು, ಹಾಲು, ಕೋಳಿಮೊಟ್ಟೆ, ಹರಳೆಣ್ಣೆ, ಉಪ್ಪು, ಮೆಣಸು, ಲೋಳಿಸರ, ಅರಿಸಿನದ ಕೊನೆ, ಬಜೆಕೊನೆ, ಮಜ್ಜಿಗೆ, ದೊಡ್ಡಪತ್ರೆ, ತುಂಬೆಸೊಪ್ಪು, ಎಕ್ಕದೆಲೆ, ಜೇಡನ ಬಲೆ, ನಂದಬಟ್ಟಲ ಹೂ ಇಂತ ಸುಮಾರ್ ಸಾಮಾನ್ ಪದಾರ್ತಗ ಹಳ್ಳಿ ಮೊದ್ದ್‌ಲಿ ಬಳ್ಕೆ ಆದೆ. ಕೆಲವ್ ಪ್ರಾಣಿಗಳ್‌ಂದ ತೆಗ್ದ ಕೊಬ್ಬುಗ, ತುಪ್ಪಗ(ಮೊಸಳೆ ಕೊಬ್ಬು, ಕೇರೆಹಾವುನ ತುಪ್ಪ, ಉಡದ ತುಪ್ಪ ಇತ್ಯಾದಿ)ಸ ಹಳ್ಳಿ ಮೊದ್ದ್‌ಲಿ ಸೇರಿಟು.

ಹಿಂಗಾಗಿ ದೇಸದ ಸುಮಾರ್ ಕಡೆಲಿ ಹಕ್ಕಲೇ ಸಿಕ್ಕ್‌ವ ಸಾಮಾನ್‌ಲಿ ಮಾಡಿಕಾವ, ಗೊತ್ತಿರ್‌ವ ನಾಟಿ ಮೊದ್ದ್‌ನ ಬಗ್ಗೆ ವೈಜ್ಞಾನಿಕ ದ್ರಿಸ್ಟಿಂದ ಅದ್ಯಯನ ನಡೆಸುವ ಅಗತ್ಯ ಉಟ್ಟು **(ಟಿ.ಎನ್.ಎಸ್)**

**ನಾಟಿ ಮೊದ್ದ್ :** ಸಾಸ್ತ್‌ರದ ಪ್ರಕಾರ ನಾಟಿ ಮೊದ್ದ್‌ನ 'ಜೆನಪದ ವೈದ್ಯ'ಕ್ಕೆ ಸೇರ್‌ಸಿಯೊಳೋ. ಇದರ್‌ಲಿ ಎರ್‌ಡ್ ಬಗೆನ ಮೊದ್ದ್‌ಗ ಒಳೋ. 1. ನೈಸರ್‌ಗಿಕ ಮೊದ್ದ್ ಅಲ್ಲೊ ಕಾಡ್ ಉತ್ಪತಿ ಮೊದ್ದ್. 2. ಮಾಟ–ಮಂತ್ರದ ಮೊದ್ದ್(ಮಂತ್ರ ವೈದ್ಯ) (ನೋಡಿ : ಮಾಂತ್ರಿಕ ವೈದ್ಯ) ಇದರ್‌ಲಿ ನೈಸರ್‌ಗಿಕ ಮೊದ್ದ್ ಬಾರೀ ಪಂಡ್‌ಂದಲೇ ಇದ್ದಂತದ್. ಮೊಂನ್ನಂಗೆ ಬಂದ ಸೀಕ್‌ಗಳಿಗೆ ಕಾಡ್–ಗುಡ್ಡೆಲಿ ಸಿಕ್ಕ್‌ವ ಚಿಗ್ರ್, ಬೇರ್, (ಕೆತ್ತೆ)ತೊಪ್ಪೆ, ಬೊಳ್ಳಿ, ಅದಲ್ಲಾರ್ ಕಾಡ್ ಮೃಗಂಗಳ ಎಣ್ಣೆ, ತುಪ್ಪ–ಎಲುನ ಬಳ್ಸಿಕಂಡ್ ಗುಣ ಮಾಡಿಕಂಡ ದಿನಂದ ಈ ಮೊದ್ದ್‌ನ ಕತೆ ಸುರು ಆದೆ. ಈ ಮೊದ್ದ್‌ನ ಹುಡ್ಕಿದ್ ಸುಮಾರ್ ಸರ್‌ತಿ ಆಕಸ್ಮಿಕ ಆಗಿ. ಕೆಲ ಸರ್‌ತಿ ಮಾತ್ರ ತಲೆ ಕರ್‌ಚಿ ಮಾಡಿ ಬುದ್ದಿ ಬಳ್ಸಿ ಹುಡ್ಕಿದ್. ಮರ ದೈ ಬೊಳ್ಳಿನ ಬೇರೆ ಬೇರೆ ಬಾಗನ ಬಳ್‌ಸಿಕಂಡ್ ಮಾಡ್‌ವ ಆಯುರ್‌ವೇದ ಮೊದ್ದ್‌ನ ಕ್ರಮ ಈಗೊಳು ಹೆಸ್ರ್ ವಾಸಿ. ಹಾಂಗೆ ವೈಜ್ಞಾನಿಕ ಆಗಿನೂ ಒಪ್ಪಿದ ಸಂಗತಿ.

ಎರಡ್‌ನೆದ್ ಮಾಟ–ಮಂತ್ರದ ಮೊದ್ದ್. ಇದ್ ಮಾಯದ ಸಕ್ತಿಗಳ ನೆನ್ನಿ ಸೀಕ್‌ನ ಗುಣ ಮಾಡ್‌ವ ಕ್ರಿಯೆ. ಇದರ್‌ಲಿ ಮಂತ್ರ ಮತ್ತೆ ತಂತ್ರ(ಮಂತ್ರದ ಸಬ್ದದ ಒಟ್ಟಿಗೆ ಸರ್‌ರದ ಬಾಗಗಳ ಬಳ್ಸಿಕಂಡ್) ದ ಮುಕಾಂತರ ಸೀಕ್ ಹಿಡ್ದವನ ಮನ್ಸ್‌ನ ಸಮಾದಾನ ಮಾಡಿ ಗುಣ ಮಾಡ್‌ವಂತದ್. ಮೇಲೆ ಹೇಳ್ದ ಎರ್‌ಡೂ ಬಗೆನ ಮೊದ್ದ್‌ನ ಕ್ರಮ ಅರೆಬಾಸೆ ಜೆನಂಗ/ ಅರೆಬಾಸಿಗರ್‌ಲಿ ಬಳಕೆಲಿ ಉಟ್ಟು. ಸರಿಯಾಗಿ ಇದರ ತಿಳ್ಕಣದೆ ಬಳಕೆ ಮಾಡ್ದು ಸರಿಯಲ್ಲ ತೇಳುವ ಎಚ್ಚರಿಕೆನೊಟ್ಟಿಗೆ ಕೆಲ ಮೊದ್ದ್‌ನ ಕ್ರಮಗಳ ಮುಂದೆ ಹೇಳ್ಯೋಳೊ. **(ಪಿ.ಬಿ.)**

**ಕಾಡ್ ಮೊದ್ದ್ :** ಕಾಡು–ಗುಡ್ಡೆಲಿ ಸಿಕ್ಕುವ ಸುಮಾರ್ ಬಗೆನ ಸೊಪ್ಪು–ತೊಪ್ಪೆ, ಬೇರ್–ಚಿರಿ–ಬೊಳ್ಳಿ ಮತ್ತೆ ಕಾಡ್ ಮೃಗಗಳ ತುಪ್ಪನ(ಕೊಬ್ಬು) ಈ ಮೊದ್ದ್‌ಗಳ್‌ಲಿ ಬಳ್‌ಸ್‌ವ ಕ್ರಮ ಲೋಕದ ಎಲ್ಲಾ ಕಡೆನೂ ಉಟ್ಟು. ಮಲೆವು/ಬುಡಕಟ್ಟು ಜೆನಂಗಳ್‌ಲಿ ತುಂಬಾ ದೊಡ್ಡ ಮಟ್ಟಲಿ ಹಾಂಗೆ ತುಂಬಾ ಸಕ್ತಿ ಇರುವ ಈ ವೈದ್ಯ ಕ್ರಮ ಮಾಮೂಲು ಜೆನಕೆ ಅಸ್ಟಾಗಿ ಗೊತ್ತಿಲ್ಲರೂ ಕೂಡ ಈ ಕ್ರಮ ಪೂರಾ ಅಳ್ದ್ ಹೋತ್‌ಲೆ. ಸಾಸ್ತ್‌ರ ಪ್ರಕಾರ ಕ್ರಮ ಇರ್‌ವ ಇಂತ ಮೊದ್ದ್ ಕ್ರಮಲಿ ಹಿರಿಯೊವು /ಪ್ರಾಯದವು, ತಿಳ್ದವು ಮಾತ್ರ ಮೊದ್ದ್ ಕೊಟ್ಟವೆ. ಅದರ್‌ಲೂ ಅಜ್ಜಿಕ ಮತ್ತೆ ಆಯ್ಯೆಕಳೇ ಇದ್‌ಕೆ ಹೆಚ್ಚಿಗೆ ಹಕ್ಕ್‌ದಾರರ್. ತಲೆಮಾರ್‌ಂದ




ತಲೆಮಾರ್‌ಗೆ ಬಾಯಿ ಮಾತ್‌ಲಿ ಬಳುವಳಿ ಆಗಿ ಬಂದ ಇಂತ 'ನೈಸರ್‌ಗಿಕ ಜೆನಪದ ವೈದ್ಯ' ಕ್ರಮನ ಬೇರೆವ್‌ಕೆ ಹೇಳಿಕೊಡಿಕಾಗದ್ ತೇಳ್‌ವ ನಂಬಿಕೆದಾಂಗಿ ಈ ಕ್ರಮನ ತಿಳ್‌ಕಂಬೊದು ಕೂಡ ಬಜ್ಜದ ಕೆಲ್ಸನೇ. ಅಜ್ಜಿಕ ಅವ್ರ ಪುಳ್ಳಿಕಳ್‌ಲಿ ನಂಬಿಕಸ್ತ ಒಬ್ಬಂಗೆ / ಒಬ್ಳಿಗೆ ಮಾತ್ರ ಈ ಮೊದ್ದ್‌ನ ಕ್ರಮಗಳ ಹೇಳಿ ಕೊಟ್ಟವೆ. ಎಲ್ಲವ್‌ಕೆ ಗೊತ್ತಾದರೆ ಮೊದ್ದ್ ಪೊಲ್ಸುದುಲೆಂತೇಳುವ ನಂಬಿಕೆನೂ ಇದರ್‌ಲ್‌ಟ್ಟು. (ಪಿ.ಬಿ.)

**ಮಕ್ಕಳ ಮೊದ್ದ್ :** ಸಣ್ಣ ಮಕ್ಕಳಿಗೆ ಮಾಡ್‌ವ ಉಪಚಾರಲಿ ಸುಮಾರ್ ಬಗೆನ ಕ್ರಮಗ ಒಳೋ. ಅರೆಬಾಸಿಗರ್ ಇದರ 'ಮೊದ್ದ್ ಕೊಡ್‌ದುಂತ' ಹೇಳ್‌ವೆ. ಮಕ್ಕಳಿಗೆ ಆಗಾಗ ಬಾವ ನೆಗ್‌ಡಿ, ಸೀತ, ಕೆಮ್ಮು, ಚಳಿಜ್ವರ, (ಹೊರ್‌ಕಟೆ), ಬೊಕ್ಕೆ ಮತ್ತೇ ಅಜೀರ್ಣಕೆ ಅವರ್‌ದೇ ಆದ ಮೊದ್ದ್‌ಗಳ ಕೊಟ್ಟವೆ. (ಪಿ.ಬಿ.)

ಮಕ್ಕಳ ಹೆಚ್ಚಿನ ಸೀಕ್‌ಗಳಿಗೆ ಅರೆಬಾಸಿಗರ್ ಎಲಾಡ್‌ಕೆ ತಿಂಬ ಎಲೆನ(ವೀಳ್ಯದೆಲೆ) ರಸನ ಒಂದ್ ರಜೆನಸ್ಟ್ ಕುಡ್ಸುವೆ. ಕಾಡ್‌ಲಿ ಬೇಕಾದಾಸ್ಟ್ ಇರ್‌ವ ದಡ್ಡಲ್ ಮರದ ಕೆತ್ತೆನ ಗುದ್ದಿ ತೆಗ್ದ ರಸ, ಅಡ್ಕೆ ಮತ್ತೇ ಚಾಳೆ ಪಡ್ಪುಲಿ ನೆಲಲಿ ಉದ್ದಕೆ ಹಬ್ಬಿರ್‌ವ ಪಾತಾಳ ಸೊಪ್ಪುನ ಹಿಂಡಿ ತೆಗ್‌ದ್ ರಸ, ತೊಳ್‌ಸಿ ಸೊಪ್ಪುನ ಗುದ್ದಿ ತೆಗ್ದ ರಸನ ಮಕ್ಕಳಿಗೆ ಹಜ್ಜ ಹಜ್ಜನೇ ಕುಡ್ಸಿರೆ ಮಳ್‌ಗಾಲಲಿ ಬಾವ ಸೀಕ್‌ಗ ಗುಣ ಆದವೆಂತ ಹೇಳ್ವೆ. ಸಣ್ಣ ಸಣ್ಣ ಗೆಡ್ಡೆಗಾದ, ಸುಂಟಿ, ಅರ್‌ಸಿನ, ಈಸ್ವರ ಬೇರ್‌ಗಳ ಎಳ್ಳಿ ತಂದ್, ತೊಳ್ದ್ ಗುದ್ದಿ ರಸ ತೆಗ್ದ್ ಕುಡ್‌ಸಿರೆ ಅಜೀರ್ಣ, ಕಟ್ರ್ ಆದರೆ ಹಾಂಗೆ ಜೀರ್ಣಕ್ಕೆ ಸಮ್ಮಂದಪಟ್ಟ ಸೀಕ್‌ಗ ಗುಣ ಆದೆಂತ ಕೂಡ ಹೇಳ್‌ವೆ. ಗೈಪುನ ಸೊತ್ತುಗಾದ ಒಳ್ಳೆಮೆನ್ಸ್, ನೀರುಳ್ಳಿ, ಬೆಳ್ಳುಳ್ಳಿ, ಅಲ್ಲದೆ ಅಪ್ರೂಪಕೆ ಬಳ್ಸುವ ಜೇನ್ ಕಲ್ಲ್ ಸಕ್ಕರೆ, ಕರ್ಜೂರ, ಏಲಕ್ಕಿನ ಕೂಡ ಮಕ್ಕಳ ಸೀಕ್ ನ ಗುಣಮಾಡಿಕೆ ಬಳ್ಸುವೆ. ಹುಟ್ಟಿದಾಂಗೆ ಅಲ್ಲರ್ ಕೂಸ್ ಹುಟ್ಟಿ ಒಂದೆರ್‌ಡ್ ತಿಂಗಳ್‌ಲಿ ಕೂಸುನ ನೆತ್ತಿಲಿ ಸಣ್ಣ ಬಿರ್‌ಕ್ ಬುಟ್ಟದೆ. ಇದರ 'ಕೂಸುನ ತಲೆ ಬುಟ್ಟುಟುತೇಳ್ವೆ. ಆಗ ಕಪ್ಪು ಬಣ್ಣದ ಕುಪ್ಪಿ ಬಳೆನ ಕೆಂಪಾಗುವಂಗೆ ಕಾಸಿ, ಬಿರ್‌ಕ್ ಬುಟ್ಟ ಜಾಗಲಿ ಒತ್ತುವೇ. ಇದ್ಕೆ 'ಕಾಸಿಸುದು'ತೇಳ್ವೆ. ಇದರ್‌ಂದಾಗಿ ಮುಂದೆ 'ನೆತ್ತಿ ಕೂಡಿಟು' ತೇಳ್‌ವೆ. ಹೆಚ್ಚಾಗಿ ಗೌಡೆತಿಗಳೆ ಈ ಕೆಲ್ಸನ ಮಾಡ್‌ವೆ. (ಪಿ.ಬಿ.)

**ಬೊಸುರಿ, ಬಾಣಂತಿಗಳ ಮೊದ್ದ್ :** ಬೊಸುರಿ ಹೆಣ್ಮಕ್ಕಳಿಗೆ ಸಾಮಾನ್ಯ ಆಗಿ ಬಾವ ಕಾಯಿಲೆಂತೇಳಿರೆ ಕಕ್ಕುದು. ಕಕ್ಕಿದ ಮೇಲೆ ಸೇರಿ ಉಂಬಕೆ ಆದುಲೆ. ಇದಂರ್‌ದಾಗಿ ಅವರ ಸರ್‌ರನೂ ಇಳ್‌ದದೆ. ಹೀಂಗಾಕನ ಹೊಟ್ಟೆಲಿರ್‌ವ ಕೂಸುನ ಬೆಳವಣ್‌ಗೆಗೂ ಕಸ್ಟ ಆದೆ. ಇದರ ತಡೆಕೆ ಬೊಸುರಿ ಹೆಣ್ಮಕ್ಕಳಿಗೆ ಬೀಜ ಸರಾಯ(ಗ್ಯಾರ್‌ದಣ್ಣನ ಸರಾಯ) ಕುಡ್‌ಸ್‌ವೆ ಇಲ್ಲರೆ ಮೊಜ್ಜಿಗೆ ಕುಡೆಕೆ ಹೇಳ್‌ವೆ. ಹಾಂಗೆ ಚೌಳಿಕಾಯಿನಂತ ಹುಳಿ ಹಣ್ಣ್‌ಗಳ ತಿಂಬಕೆ ಕೊಟ್ಟವೆ.

ಬಾಣಂತಿಗಳಿಗೆ ಹೆತ್ತ್ ಆದ ಮೇಲೆ ನಲ್ವತ್ತ್ ದಿನದವರೆಗೆ ಬೇರೆಬೇರೆ ತರದ ತಿನಿಗಳ ತಿಂಬಕೆ ಕೊಟ್ಟವೆ. ಅದ್ ಒಂದ್ ತರದ ಮೊದ್ದುನು ಹೌದು. ಬೇರ್‌ಗ, ದೈಮರಗಳ ತೊಪ್ಪೆನ ಮತೆ ಚಿಗ್‌ರ್‌ನ ಗುದ್ದಿ ರಸ ತೆಗ್ದ್ ಬೆಚ್ಚ ಮಾಡಿ ಕುಡಿದು ಬಾಣಂತಿಗಳಿಗೆ ಕೊಡ್‌ವ ಮೊದ್ದ್ ಇದ್. ಇದ್ ಕುಡ್ಯಕೆ ಬಯಂಕರ ಕೈಂಯಿ ಇರ್‌ದುದರ್‌ಂದ ಕೆಲವ್ ಕುಡಿಯಕೆ ಹಿಂದೆಮುಂದೆ ನೋಡುವೆ. (ಪಿ.ಬಿ.)

**ಇತರ ಸಾಮಾನ್ಯ ಮದ್ದುಗ :** ಮಕ್ಕಳಿಗೆ, ಹಿರಿಯರ್‌ಗೆ, ಗಂಡ್ಸು–ಹೆಣ್ಮಕ್ಕಳಿಗೆ ಹಿಂಗೆ ಎಲ್ಲವ್‌ಕೆ ಬಾವಂತ ಕೆಲ ಕಾಯಿಲೆಗೆ ಅರೆಬಾಸೆನವರೊಟ್ಟಿಗೆ ಮೊದ್ದುಟ್ಟು, ಇದ್ ಬಾರಿ ಹೆಸರ್‌ವಾಸಿ ಮೊದ್ದುನು ಹೌದು. ವಿಸ ಇಲ್ಲದಂತ ಕೆಲ ಹಾವುಗ ಮೊಯಿಂಸಂಗೆ ಮನಿ ಕಚ್ಚಿರೆ, ಕಚ್ಚಿದ ಜಾಗೆ ನಂಜಿಗೆ ಬಾಪಿದೆ. ಕೇರೆ ಹಾವು, ನೀರೊಳ್ಳೆನಂತ ಹಾವುಗ ಅಕಸ್ಮಾತ್ ಕಚ್ಚಿರೆ ಕಾಡ್‌ಲಿ ಸಿಕ್ಕ್‌ವ ಉಂಬಕನ ಕಾಯಿನ ತಂದ್ ಉಚ್ಚೆನೊಟ್ಟಿಗೆ ಸಣ್ಣಕೆ ಅರ್‌ದ್ ಅದರ ಹಾವು ಕಚ್ಚಿದ ಜಾಗೆಗೆ ಪೂಜೊಕು. ಉಂಬಕನ ಕಾಯಿ ಸಿಕ್ಕದಿದ್ದರೆ ರಕ್ತ ಚಂದನನ ಅರ್‌ದ್ ಹಾವು ಕಚ್ಚಿದವಂಗೆ ಕುಡ್ಸುವೆ. ಇದ್ ಬರಿ ವಿಸ ಇಲ್ಲದ ಹಾವುಗ ಕಚ್ಚಿರೆ ಮಾತ್ರ ಪೊಳ್‌ಕ್‌ವ ಮೊದ್ದ್.

ಕೆಲವ್‌ಕೆ ಇದ್ದಕಿದ್ದಂಗೆ ದೊಂಡೆಲಿ ಒಂದ್ ತರದ ತೊರ್‌ಸುದು ಸುರಾದೆ. ಒಂದೆರ್‌ಡ್ ದಿನಲಿ ದೊಂಡೆನ ಹೊರೆಗೆ ಬಾಪಿದೆ. ಅರೆಬಾಸೆವು ಇದರ ಒರಾಳಿತ ಕರ್‌ದವೆ. ಒರಾಳಿಗೆ ಮೊದ್ದ್ ಮಾಡದಿದ್ದರೆ ಕೆಲು ತಿಂಗಳಲ್ಲಿ ಸೀಕ್ ಬಂದ ಮೊಯಿಂಸ ಸತ್ತದೆ. ಇದ್ಕೇ ಅರೆಬಾಸಿಗರ್ ಮಾಡ್‌ವ ಮೊದ್ದ್‌ಂತೇಳ್ರೆ ಬಿಳಿ ಹಣ್ಣ್ ಬುಡುವ ಗ್ಯಾರ್‌ದನ್ನ್ ಮರದ ತೊಪ್ಪೆನ ಕೆತ್ತಿ ತಂದ್, ಅದಕ್ಕೆ ಕಡಲ್ ನಾಲಿಗೆ, ಗಟ್ಟ ನಾಗದಾಲಿಂತೇಳ್ವ ಎರ್‌ಡ್ ಬಗೆನ ಬೇರ್‌ನ ಸೇರ್‌ಸ್‌ವೆ. ಅದ್‌ಕೆ ಬೆಳ್ಳುಳ್ಳಿ, ಒಳ್ಳೆಮೆಣ್‌ಸ್ ಮತ್ತೆ ಏಕನಾಯ್ಕನ ಬೇರ್‌ನೂ ಸೇರಿಸಿ, ಸೀಕ್ ಇದ್ದವಂಗೆ ಕುಡ್‌ಸ್‌ವೆ ಒಂದ್ ವಾರಲಿ ಒರಾಳಿ ಪೂರಾ ಗುಣ ಆದಲ್ಲದೆ ಮತ್ತೇ ಯಾಗೋಳೂ ಆ ಮೊಯಿಂಸಂಗೆ ತ ಸೀಕ್ ಬಾದುಲೆತ ಅರೆಬಾಸಿಗರ್ ಹೇಳ್ವೆ.

ಸುಳ್ಯ ಪರಿಸರದ ಕಾಡ್‌ಲಿ ದೊಡ್ಡ ಚೋಳುಗ ಇದ್ದವೆ, ಇದರ ಚೇನ್, ಚೋನು, ಚೋಳ್ ತಾನೂ ಹೇಳ್ವೆ. ನೋಡಿಕೆ ದೊಡ್ಡದಾದ ಚೋಳ್‌ನ ಅರೆಬಾಸೆಲಿ ಕೊಂಬಚೋಳುತ ಹೇಳ್ವೆ. ಸಣ್ಣದಾಗಿ ಉದ್ದಕೆ ಇರ್‌ದರ ಕುಂದೋಳಿಜ್ಜ ತ ಕರ್‌ದವೆ, ಇದ್ ಕಚ್ಚಿರೆ, ಕಚ್ಚಿದ ಜಾಗೆಲಿ ತುಂಬಾ ಉರ್‌ದದೆ ಹಾಂಗೆ ಸಣ್ಣಕೆ ಬಾಪಿದೆ. ಸ್ಟೀ ಕುಂಬಳ ಇಲ್ಲರ್ ಕೆಂಬುಡೆ ತೊಟ್ಟ್‌ನ ಉಚ್ಚೆಲಿ ಅರ್‌ದ್, ಚೋಳ್ ಕಚ್ಚಿದ ಜಾಗೆಗೆ ಹಾಕಿರೆ ಉರಿ ರಪ್ಪ ಕಮ್ಮಿ ಆದೆ. ಕೆಲ ಸರ್‌ತಿ ಮಳ್ಗಾಲಲಿ ಜೊರ ಬಂದದೆ. ಜೊರ ಜಾಸ್ತಿ ಆದರೆ, ಮೊಯಿಂಸಂಗೆ ಅಂವನ ಸರ್ಸದ ಮೇಲೆ ಹಿಡ್ತ ತಪ್ಪಿ ಹೋದೆ. ಆಗ ಅಂವ ನಿಮ್‌ಸಕೊಮ್ಮೆ ಮಿನ್ಕಿ ಮಿನ್ಕಿ ಬಿದ್ದದೆ. ಇದ್ಕೆ ಸನ್ನಿಪಾತ ಕಾಯಿಲೆತ ಹೇಳ್ವೆ. ಈ ಸೀಕ್‌ಗೆ ಮೊದ್ದ್ ಆಗಿ ಇಜ್ಜಿನ್ ಮರದ ಕೆತ್ತೆ ಮತ್ತೆ ದನದ ಉಚ್ಚೆನ ಬಳ್ಸುವೆ. ಕಾಡ್‌ಲಿ ಸಿಕ್ಕುವ ಇಜ್ಜಿನ್ ಮರದ ಕೆತ್ತೆನ ಕೆತ್ತಿ ತಂದ್ ಅದರ ದನದ ಉಚ್ಚೆ ನೊಟಿಗೆ ಅರ್‌ದ್, ದಿನಕ್ಕೆ ಮೂರು ಸರ್‌ತಿ, ಮೈಗೆ ಪೂಜಿರೆ, ಈ ಸೀಕ್ ಗುಣ ಆದೆ.

ಅರ್‌ಗಾಲಲಿ ಬಿಸ್‌ಲ್ ಪೆಟ್ಟ್‌ಂದಾಗಿ ಕಣ್ಣ್ ಕೆಂಪಾದೆ. ಒಟ್ಟಿಗೆ ಕಣ್ಣುರಿನೂ ಜಾಸ್ತಿ ಆದೆ. ಈ ಉರಿನ ಕಮ್ಮಿ ಮಾಡಿ, ಕಣ್ಣ್ ತಂಪಾವಂಗೆ ಮಾಡಿಕೆ ತೋಟಲಿ ಸಿಕ್ಕ್‌ವ ಪಾತಾಳ ಸೊಪ್ಪುನ ಬಳ್ಸುವೆ. ಪಾತಾಳಸೊಪ್ಪುನ ತಂದ್, ಲಾಯಿಕ್ ತೊಳ್‌ದ್ ಕೈಲಿ ಹಿಂಡಿರೆ, ಅದರ್‌ಂದ ರಸ ಹೊರ್ಟದೆ. ಆ ರಸನ ಅರ್‌ಪಿ ಬಿಸ್‌ಲಿಲಿ ಒಣ್‌ಗಿಸಿರೆ, ಅದ್ ಅಂಟ್‌ನಂಗಾದೆ. ಅದರ ಕತ್ತರ್‌ಸಿ, ಕಣ್ಣ್‌ನ ಹೊರೆಗೆಪುಡೆಗೆ ಲೇಪದಂಗೆ ಹಾಕಿ ಒಂದ್ ಗಂಟೆ ಬುಟ್ಟರೆ, ಕಣ್ಣ್ ತಂಪಾದೆ. ಇದರ್‌ಂದ ದ್ರಿಸ್ಟಿನೂ ಸುದ್ದ ಆದೆ.

ತಿಂದ ತಿನ್ಸ್‌ಗಳ ಕಾರಣಂದ ಹೊಟ್ಟೆಲಿ ಕೆಲ ತೊಂದರೆಗ ಆದವೆ. ಹೊಟ್ಟೆ ಬೇನೆ, ಅಜೀರ್ಣ ಆಗಿ ಗಂಜಿ ಮೆಚ್ಚದೆ ಇರ್‌ದು, ಹೆಚ್ಚ್ ಹೂಂಸು ಹೋದು, ಇಂತದೆಲ್ಲ ಸಮಸ್ಯೆಗ ಮೊಯಿಂಸಂಗೆ ಬಂದದೆ. ಇದ್‌ಕೆಲ್ಲ ಒಂದ್ ತರದ ಮಾತ್ರೆಗಳ ಮಾಡ್‌ವೆ. ಅದರ ತಯ್ಯಾರಿ ಹೀಂಗುಟ್ಟು.

ಬಂದನಾರು ಮರದ ಚೆರಿ, ಮುಳ್ಳು ಇರ್‌ವ ಚೀಮುಳ್ಳು ದೈನ ಚೆರಿ, ದಡ್ಡಲ್ ಮರದ ಚೆರಿ, ಸಣ್ಣ ನೆಕ್ಕರೆ ದೈನ ಚೆರಿ, ಮಾದ್ರ್ ಬೊಳ್ಳಿನ ಚೆರಿ, ನಾಣೆಲ್ ದೈನ ಚೆರಿ, ಮತ್ತೆ ಚೂರಿಮುಳ್ಳು ದೈನ ಚೆರಿಗಳ ತಕಂಡ್ ಮಿಸ್ರ ಮಾಡಿ ಅದ್ಕೆ ಮೆಣ್ಸ್, ಜೀರಿಗೆ ಮತ್ತೆ ಬೆಳ್ಳುಳ್ಳಿ ಸೇರ್‌ಸಿ, ಬಾಳೆಲೆಲಿ ಮೊಡ್‌ಚಿ, ಲಾಯ್ಕ್ ಬೇಸೋಕು. ಅದಾದಮೇಲೆ ಕಡ್ಕಲ್‌ಗೆ ಹಾಕಿ, ಸಣ್ಣ ಆಗುವಂಗೆ ಕಡ್ದ್, ಸಣ್ಣ ಸಣ್ಣ ಮಾತ್ರೆಗಳಂಗೆ ಮಾಡೋಕು. ಇದರ ಕುಪ್ಪಿಲಿ ಹಾಕಿ ಇಸಿರೆ, ವರ್‌ಸಗಟ್ಟಲೆ ಬಾಳಿಕೆ ಬಂದದೆ. ಹೊಟ್ಟೆಗೆ ಸಮ್ಮಂದಪಟ್ಟ ಯಾದೇ ಸೀಕ್‌ಗೆ ಒಂದೆರ್‌ಡ್ ಮಾತ್ರೆ ನುಂಗಿರೆ ಸಾಕಾದೆ. ಹೆಚ್ಚಿನ ಅರೆಬಾಸಿಗರ ಮನೆಲಿ ಇಂತ ಮಾತ್ರೆಗ ಇದ್ದವೆ. ಕೆಲ ಸರ್‌ತಿ ಹೊರ್‌ಕಟೆ ಕುದ್ರುಕನ ಹೇಲ್‌ನ ಬಣ್ಣ ಅರ್‌ಸಿನ ಬಣ್ಣಲ್ಲಿದ್ದದೆ. ನಾಕೈದ್ ಸರ್‌ತಿ ಹಿಂಗೇ ಹೇತರೆ ಸರ್‌ರಲಿ ಬೊಚ್ಚೆಲ್ ಜಾಸ್ತಿಆದೆ. ಆಗ ಅವಂಗೆ ಪಿದಮಲೆ ಆಗುಟುಂತೇಳ್ವೆ. ಇದ್ಕೇ ಕಟುಕ ರೋಹಿಣಿಂತೇಳ್ವ ದೈನ ಬೇರ್‌ನ ತಂದ್, ಹಾಲ್‌ಲಿ ಅರ್‌ದ್ ಕುಡೆಕೆ ಕೊಟ್ಟವೆ. ಒಂದ್ ದಿನಲಿ ಹೇಲ್ ಮಾಮೂಲೀ ಬಣ್ಣಕೆ ಬಂದದೆ.

ಸಾಮಾನ್ಯ ಆಗಿ ತಿಂದ ತಿನಿಗಳಂದಾಗಿ ಮೈಮೇಲೆ ಕಜ್ಜಿ ಎದ್ದ್ ಇಡೀ ತೊರ್‌ಸಿಕೆ ಸುರು ಆದೆ. ಸೆರಿಯಾದ ಮೊದ್ದ್ ಹಾಕದಿದ್ದರೆ ಕಜ್ಜಿಲಿ ರೇಸಿ ತುಂಬಿ ಮೈಯಿಂದ ನಾತ ಹೊರ್ಟದೆ. ಹಾಂಗಾಗಿ ಕಜ್ಜಿ ಎದ್ರ್‌ವ ಲಕ್ಷಣ ಕಂಡರೆ, ಕಾಯರ ಮರದ ಗೆಲ್ಲ್‌ನ ಸುಟ್ಟವೆ. ಜೋರು ಹೊತ್ತಿಕಂಡ್ ಇರ್‌ಕನ ಆ ಗೆಲ್ಲ್‌ನ ಬೆಚ್ಚ ನೀರ್‌ಲಿ ಕಂತುಸುವೆ. ಮತ್ತೆ ಕಜ್ಜಿ ಎದ್ದವನ ಬೆಚ್ಚ ನೀರ್‌ಲಿ ಮೀಸುವೆ. ಒಂದ್ ವಾರ ಹಿಂಗೆನೆ ಬುಡಾದೆ ಮೀಸಿರೆ ಮೈಲಿ ಎದ್ದ ಕಜ್ಜಿ ಪೂರಾ ಗುಣ ಆದೆ.

ಹೇಲ್‌ಕನ ರಕ್ತನೂ ಹೋದು ತುಂಬ ಆಪತ್‌ನ ಸೀಕ್, ಎರ್‌ಡೇ ದಿನಲಿ ಮೊಯಿಂಸ ಸತ್ತ್ ಹೋದೆ. ಇದ್ಕೆ ಅರೆಬಾಸಿಗರ್ ಆಗಂದಾಗಳೆ ಮೊದ್ದ್ ಮಾಡಿ ಗುಣ ಮಾಡ್‌ವೆ. ಮೊಸ್ರ್‌ನ ಮೇಲೆ ಬಾಗಲಿ ನಿತ್ತ ತಿಳಿ ನೀರ್‌ನ ಬಾಗಿ, ಅದ್ಕೆ ನೆಲ್ಲಿಕಾಯಿನ ಬಿತ್ತ್‌ನ ಅರ್‌ದ್ ಮಿಸ್ರ ಮಾಡ್‌ವೆ. ಬೊಳ್ಗಲ್ ಒಂದರ ತಕಂಡ್ ಕೆಂಪಾಗುವಾಂಗೆ ಕಾಸಿ, ಅದ್ಕೆ ಹಾಕಿ, ಮತ್ತೆ ಆ ಕಲ್ಲ್‌ನ ತೆಗ್ಯೋಕು. ಒಳ್‌ದ ರಸನ ಸೀಕ್ ನವಂಗೆ ಕುಡೆಕೆ ಕೊಟ್ಟವೆ. ದಿನಕೆ ಮೂರು ಸರ್‌ತಿ ಹಿಂಗೆ ಕುಡ್ಸಿರೆ ರಕ್ತಬೇದಿ ನಿತ್ತದೆ.

ಅಕ್ಕಿ ತೊಳ್ದ್ ಒಳ್ದ ನೀರ್‌ನ 'ಕಚ್ಚಿಕಳ್ಳ್'ತ ಹೇಳ್ವೆ. ಈ ನೀರ್‌ಲಿ ಮಕ್ಕಳ ಮೀಸಿರೆ ಮಕ್ಕಳ ಆರೋಗ್ಯಕೆ ಒಳ್ಳದಾದೆ. ಅವರ ಸರ್‌ರ ಗಟ್ಟಿಯಾದೆ. ಪೇರಳೆ ಸೊಪ್ಪ್‌ನ ಚೆರಿನ ಮೊಜ್ಜಿಗೆಲಿ ಅರ್‌ದ್, ಕೂಸುಗೆ ಕುಡ್ಸಿರೆ ಅದರ ನಾಲಿಕೆ ಸುದ್ದ ಆದೆ. ದನದ ಎಲುನ ನಿಂಬುಳಿಲಿ ಅರ್‌ದ್ ಪೂಜಿರೆ ಕಿತ್‌ಲಡಿಲಿ ಎದ್ರ್‌ವ ಬೊಕ್ಕೆ ಗುಣಾದೆ. ಬೇವ್‌ನ ಮರದ ಎಣ್ಣೆ, ಲವಂಗದ ಎಣ್ಣೆ, ಪೊಂಗರೆ ಮರದ ಬಿತ್ತ್‌ಂದ ತೆಗ್‌ದ ಎಣ್ಣೆಗಳ ಅಂಗಾಂಗಕ್ಕೆ ತಿಕ್ಕಿರೆ ಮೈಕೈ ಬೇನೆ ಕಮ್ಮಿ ಆದೆ. ಕಾಡ್‌ಲಿ ಸಿಕ್ಕ್‌ವ ಸರ್‌ಳಿ ದೈನ ಎಲೆನ ಗುದ್ದಿ ಹಸಿ ಗಡಿಗೆ (ಹಸಿಗಾಯಕ್ಕೆ) ಹಾಕಿರೆ ರಕ್ತ ಕಟ್ಟಿದೆ ತೇಳ್ವ ನಂಬಿಕೆಗಳ ಹಿನ್ನೆಲೆಲಿ ಈ ಎಲ್ಲಾ ಮೊದ್ದ್‌ಗ ಬಳಕೆಲಿ ಉಟ್ಟು.

ಹಿಂಗೆ ಅರೆಬಾಸಿಗರ್ ಅವರ ಕಾಯಿಲೆ – ಕಸಾಲೆಗಳ ಪ್ರಕೃತಿಲಿ ಸಿಕ್ಕುವ ಸುಮಾರ್ ಬಗೆನ ಮೊದ್ದ್‌ನ ದೈಗಳ ಬಳ್ಸಿಕಂಡ್ ಗುಣ ಮಾಡಿಕಂಡವೆ. ಈ ದೈಗ ಅಳ್ದ್ ಹೋದರೊಟ್ಟಿಗೆ ಈ 'ನೈಸರ್‌ಗಿಕ ವೈದ್ಯ'(ಹಳ್ಳಿ ಮೊದ್ದ್) ಕ್ರಮನು ಕಡಿಮೆ ಆಗತುಟ್ಟ್. (ಪಿ.ಬಿ.)

**ಮೊದ್ದು ಅರೆವ ಹತ್ಯಾರ್ :** ಮೊದ್ದು ಅರೆಕಾವ ಹತ್ಯಾರ್. ಮರಂದ ಮಾಡ್ದ ಸೊತ್ತ್. ಮರನ ಹಲಗೆನ ಉರುಂಟು ಕೊಯ್ದ್ ಹಜ್ಜಿಗುಂಡಿ ಮಾಡಿಕಣಕು. ಅದರ ಹಿಡ್ಕಂಬಕೆ ಕೈ ಇದ್ದದೆ. ಸಣ್ಣ ಗುಂಡು ಕಲ್ಲ್‌ನ ಹಾಂಗೇ ಮರಂದಲೇ ಮಾಡ್ದ ಒಂದ್ ಹತ್ಯಾರ್ ಮೊದ್ದು ಅರೆಕೆ ಬೇಕಾದೆ. ಇದರ ಮರದ ಆಚಾರಿಗ ಮಾಡ್‌ವೆ. ಮೊದ್ದು ಅರೆಕೆ ಕಲ್ಲ್



ಮೊದ್ದು ಗುದ್ದುವ ಸೊತ್ತು





ಸ ಬೇಕು. ಅದರ ಕಲ್ಲ್ ಕುಟ್ಟಿ ಜೆನಂಗದವ್ ಮಾಡ್‌ವೆ. ಮಕ್ಕಳಿಗೆ ಮಾತ್ರ ಅಲ್ಲದೆ ದೊಡ್ಡೋವುಕು ಹುಸಾರಿಲ್ಲದ ಹಾಂಗೇ ಆದುಟ್ಟು. ಆಗ ಗೊತ್ತಿರುವವು ಯಾವುದಾರ್ ಸೊಪ್ಪು ಕಾಯಿ ಬೇರ್ ತಂದ್ ಇದರ್‌ಲಿ ಅರ್‌ದ್ ಮೊದ್ದು ಮಾಡ್‌ವೆ. ಅದರ ಅರ್‌ಪಿ ಕುಡೆಕೆ ಕೊಟ್ಟವೆ. ಮತ್ತೆ ಕೆಲವು ಹುಣ್ಣುಗಳಿಗೆ ಅಲ್ಲರ್ ಬಿದ್ದ್ ಪೆಟ್ಟಾಗಿ ಬಾಪಿದಲ್ಲಿಗೆ ಲೇಪ ಹಾಕುವೆ. ಮತ್ತೆ ಹುಗ್ಗೆಂದ ಮೊಣ್ಣಿ ಅರೆಕೂ ಆದೆ. ಸಣ್ಣ ಮಕ್ಕಳಿಗೆ ಹುಗ್ಗೆ ಮತ್ತೆ ಹಾಲ್ ಬೆರ್‌ಸಿ ಇದರ್‌ಲಿ ಅರ್‌ದವೆ. ಹಣ್ಣಬೆಲ್ಲ ಉಪ್ಪು ಸೇರ್‌ಸಿ ಮಕ್ಕಳಿಗೆ ತಿನ್ಸುವೆ. (ಎಂ.ಜಿ.ಕೆ.)

**ಮೊದ್ದುನ ಎಣ್ಣೆ ಹಾಕಿಸುವ ಕೊಂಬು :** ಮೊದ್ದುನ ಎಣ್ಣೆ ಹಾಕಿಸುವ ಕೊಂಬು – ದಕ್ಷಿಣಕನ್ನಡ ಜಿಲ್ಲೆನ ಕೆಲವು ಮನೆಲಿ ಉಟ್ಟು. ಇದ್ ಕಾಟಿದ್ ಕೊಂಬು. ಇದ್ಕೆ ಎರಡೂ ಕೊಡಿಲಿ ಹಿತ್ತಾಳೆಂದ ಮಾಡ್ದ ಪೊರ್‌ಲ್‌ನ ಕಟ್ಟ ಉಟ್ಟು. ಈ ಹಿತ್ತಾಳೆ ಕಟ್ಟಕ್ಕೆ ಸಂಕಲೆ ಸಿಕ್ಕಿಸಿ



ಮೊದ್ದುನ ಎಣ್ಣೆ ಹಾಕಿಸುವ ಕೊಂಬು

ನೇತಾಡುಸುವ ಹಾಂಗೆ ಉಟ್ಟು. ಇದರ ಒಂದ್ ಕೊಡಿಲಿ ಸಣ್ಣ ಒಟ್ಟೆ ಇದ್ದ್ ಅದರ್‌ಲಿ ಎಣ್ಣೆನ ಹೊಯ್ಯುದು ಮತ್ತೆ ಅದರ್‌ಲೇ ತೆಗೆದು. ಮೊದ್ದುನ ಎಣ್ಣೆ ಕಾಸಿದ್ ಇದರ್‌ಲಿ ತುಂಬಿಸಿ ಎತ್ತರಲಿ ನೇಲ್‌ಸಿ ಇಸುವೆ. ಬಿದ್ದ್ ಗುದ್ದಿದ ಹಾಂಗೆ ಆದಲ್ಲಿಗೆ, ಬೀಳಿಕನ ಅಲ್ಲರ್ ಕತ್ತಿದ್ ಗಡಿ ಆಕನ ಈ ಎಣ್ಣೆನ ಮುಟ್ಟಿಸಿರೆ ಬಾರಿ ಬೇಗ ಗುಣ ಆದೆಗಡ.

(ಎಂ.ಜಿ.ಕೆ)

**ಜೆನಪದವಾಸ್ತು :** ನಾಗರಿಕ ಸಮಾಜಲಿ ವಿಸೇಸಾಗಿ ಕಂಡ್ ಬಾವ ಸಾಮಾಜಿಕ, ರಾಜಕೀಯ, ಔದ್ಯಮಿಕ ಸಂಸ್ತೆಗ, ಸಂಪತ್ತ್ ಕೇಂದ್ರೀಕೃತ ಆಗಿರ್‌ವ ಕೆಲವ್ ವರ್‌ಗಗ ವ್ಯವಹಾರ ಕಟಣಂದ ಬೇರೆ ಬೇರೆ ಆವಶ್ಯಕತೆಗ ಇಂತೆಲ್ಲ ಕಾರಣಗಳ್‌ಂದಾಗಿ ಕಂಡ್‌ಕಂಡಿರುವ ವಾಸ್ತುನಿರ್ಮಾಣಗ ದೊಡ್ಡದಾಗಿದ್ ಬೇರೆ ಬೇರೆ ಆಗಿದ್, ಕಲಾತ್ಮಕ ಆಗಿದ್‌ನು ಇದ್ದದೆ. ಇದೆಲ್ಲದರ ಪರ್‌ಚಯ ಇರ್‌ವ ಈಗನ ಕಾಲಲಿ ವಾಸ್ತು ತೇಳ್ವ ಪದನ ಇಂತ ವಿಸೇಸ ರೀತಿನ ಕೃತಿಗಳಿಗೆ ಬಳ್ಸುದು ಅಬ್ಯಾಸ ಆವ್ಟು. ನಾಗರಿಕ ಸಮಾಜಂದ ವಿಸೇಸ ಆಗಿರ್‌ವ ಸರಳ ಆದ ಜೆನಪದ ಸಮಾಜಲಿ ವಿಸೇಸ ವಾಸ್ತುರಚನೆಗೆ ಬೇಕಾದ ಸಂಪನ್ಮೂಲಗ ಆಗಲೀ ಅಗತ್ಯ ಇಲ್ಲದರ್‌ಂದಾಗಿ ಇಲ್ಲಿನ ಸಾಮಾನ್ಯ ಕಟ್ಟಣಗಳ ಮೇಲೆನ ಅರ್‌ತಲಿ ವಾಸ್ತುಕೃತಿಗತ ಕರೆದು ಅಷ್ಟ್ ಲಾಯಿಕ್ ಕಾಂಬೊದುಲೆ. ಜೆನಪದ ಕಟ್ಟಣಂಗ ಒಂದ್ ಮಟ್ಟಿಗೆ ಬಿಸ್ಲ್ ಮಳೆಂದ ರಕ್ಷಣೆ ಕೊಡ್ವ ಆವರಣಗ ಅಷ್ಟೇ, ಜೋಪಡಿ, ಗುಡ್ಸಿಲ್ ಇಂತದರ ಕಟ್ಟಡಗತ ಹೆಸ್ರಿಸಿ ಆವುಟು.

ಸುರುದಾಗಿ ಜೆನಪದ ವಾಸ್ತುರಚನೆಲಿ ಮುಕ್ಯ ಆಗಿ ಕಂಡ್‌ಬಾವ ಒಂದ್ ಅಂಸತ ಹೇಳ್ರೆ – ಅವ್‌ಗಳ ಸರಳತೆ. ಎಲ್ಲ ಜೆನಪದ ವಾಸ್ತು ರಚನೆಗಳ ಲೌಕಿಕ ಮತ್ತೆ ದಾರ್ಮಿಕಂತ ಎರಡ್ ಗುಂಪಾಗಿ ಮಾಡಿ ಆವ್ಟು. ಲೌಕಿಕ ವಾಸ್ತು ದೊಡ್ಡಮಟ್ಟ್‌ಗೆ ಕುಟುಂಬಗಳ ವಾಸಕೆ ಅಸ್ತೆ ಇದ್ದದೆ. ಅಪ್ರೂಪಕೆ ವಿನೋದಗೃಹಗ, ಗರಡಿಗ, ತುಂಬಾ ಜೆನ ಸೇರ್‌ವ ಚಾವಡಿಗೂ ಕಂಡ್ ಬಂದದೆ. ದೇಸ್ತಾನಗ ದಾರ್ಮಿಕ ರೀತಿನ ವಾಸ್ತುಗ. ಇದ್ ತುಂಬಾ ಕಮ್ಮಿ. ಒಂದೋ ಎರಡೋ ಇದ್ದರೆ ಹೆಚ್ಚ್. ಸುಮಾರ್ ಕಡೆ ಮರ, ಹಳ್ಳದ ಕರೆ, ಬೊಯ್ಲ್‌ಗ ಪೂಜಾಸ್ತಾನಗ ಆಗಿದ್ದ್ ಕೆಲವ್ ಗ್ರಾಮಗಳ್‌ಲಿ ದೇಸ್ತಾನಗ ಇಲ್ಲದಿರ್‌ದು ಉಟ್ಟು. ಎಸ್ಟೊ ಸರ್‌ತಿ ಎರ್‌ಡ್ ಕಡೆಗಳ್‌ಲಿ ಎರ್‌ಡ್ ಕಲ್ಲ್ ಇಸಿ, ಅದರ ತಲೆನ ಮೇಲೆ ಒಂದ್ ಚಪ್ಪಟೆ ಕಲ್ಲ್ ಎಳ್ದ್ ಅದರನೆ ಗುಡಿಂತ ಕರೆದುಟ್ಟು. ಕಲ್ಲ್ ಗುಂಡು ಮಾರಿ ಆದುತಾದರೆ ಇದ್ ಅದರ ದೇಸ್ತಾನ ಆದರ್‌ಲಿ ಯಾವ ಆಸ್ಚರ್ಯ ಕಾಂಬೊಕಿಲೆ. ಒಂದೇ ದೇಸ್ತಾನ ಸುಮಾರ್ ಗ್ರಾಮಗಳ ದಾರ್ಮಿಕ ಅವಸ್ಯಕತೆನ ಪೂರೈಸುದು ಅಪ್ರೂಪ ಅಲ್ಲ. ಕೆಲೊಮ್ಮೆ ಈ ದೇಸ್ತಾನಗ ನ್ಯಾಯತೀರ್ಮಾನ, ಆಟೋಟ ಇಂತ ಲೌಕಿಕ ವ್ಯೆವಹಾರಕೂ ಉಪಯೋಗ ಆದೆ. ಒಟ್ಟುಲಿ ಹೇಳದಾದರೆ ಜೆನಪದ ವಾಸ್ತು ಕಟ್ಟಣಗ ಅವರ ಯಾಗೋಳುನ ಅವಸ್ಯಕತೆಗೆ ಬೇಕಾದಸ್ಟ್ ಮಾತ್ರ ಒಳದ್. ಶ್ರೀಮಂತಿಕೆ ಇಲ್ಲಿಲ್ಲೆ. ಹಂಗಾಗಿ ಸುಲಬಲಿ ಈ ನಿರ್ಮಾಣಗ ಸಣ್ಣದಾಗಿದುನು ಬೇರೆ ಬೇರೆ ಆಗಿರದೆ ಇರ್‌ದೆ ಹೆಚ್ಚ್.

ಪರಿಸರದ ಹೆಚ್ಚಿನ ಮೋಡಿ ಜೆನಪದ ವಾಸ್ತುರಚನೆಗಳ್‌ಲಿ ಎದ್ದ್ ಕಾಂಬ ಎರ್‌ಡ್‌ನೆ ಮುಕ್ಯ ಅಂಸ. ಇದರ ವಾಸ್ತು ರಚನೆಗೆ ಬಳ್ಸ್‌ವ ವಸ್ತುಲಿನೂ ಮತೆ ರಚನೆನ ಆಕಾರಲಿನೂ ಕಾಣಕ್. ನಿರ್ಮಾಣಕಾರರ್ ಆ ಜಾಗೆಲಿ ಸುಲಬ ಆಗಿ ಸಿಕ್ಕ್‌ವ ಕಡಿಮೆ ಕ್ರಾಯದ ಸಾಮಾನ್‌ಗಳ ಮಾತ್ರ ಆಯ್ಕೆ ಮಾಡಿಕಂಡವೆ. ಉದಾರಣೆಗೆ ಮೊಣ್ಣು ವಿಸೇಸ ಆಗಿ ಉಪಯೋಗ ಆಗಿರ್‌ವ ವಸ್ತ್. ಒಟ್ಟಿಗೆ ಕಲ್ಲ್ ನ ಸೀಮೆಲಿ ಕಲ್ಲ್, ಕಾಡ್ ಇರ್‌ವಲ್ಲಿ ಮರ, ಬೆದ್ರ್, ಸೊಪ್ಪು, ಗರಿ, ಬಯಲ್ ನಾಡ್‌ಲಿ ಹುಲ್ಲು ಇಂತವುಗಳ್‌ಲಿ ಕಟ್ಟಿದ ಕಟ್ಟಣಗ ಕಂಡ್ ಬಂದವೆ. ಚೂಪು ಇರ್‌ವ ಚಾವಣಿ, ಎರ್‌ಡ್ ಮಾಡ್, ಒರ್ಮಾಡ್, ಅರ್ದಗೋಲ, ಪೀಪಾಯಿ ಇದೆಲ್ಲ ಇಳಿಜಾರ್ ಇರ್‌ವ ಕಟ್ಟಣಗ. ಮಂಜು, ಮಳೆ ಇರ್‌ವ ಪ್ರದೇಸಲಾರೆ, ಮಳೆ ತುಂಬಾ ಕಡಿಮೆ ಇರ್‌ವ ಪ್ರದೇಸಲಿ ಮೊಣ್ಣ್ ನ ಮಾಳಿಗೆ ಮನೆಗ ಇದ್ದವೆ.

ತುಂಬಾ ಕಡಿಮೆ ಅಲಂಕರಣ ಜೆನಪದ ವಾಸ್ತುಕೃತಿಲಿ ಕಾಂಬ ನಮೂನೆನ ಅಂಸ. ಹೆಚ್ಚಿನವುಗಳ್‌ಲಿ ಅಲಂಕರಣದ ದ್ರಿಸ್ಟಿನೆ ಇರ್‌ದುಲೆ. ನಾಲ್ಕ್ ನೆದಾಗಿ ಈ ಕಟ್ಟಣಗ ಸುಮಾರ್ ಕಾಲ ಇದ್ದಾಂಗೆ ಉಳೆಕೆ ಕಟ್ಟಿದ್ ಅಲ್ಲ. ಇದರ ಆಗಂದಾಗ ಲಾಯಿಕ್ ಮಾಡ್ದು ಇಲ್ಲೆರ್ ಹೊಸ್ತೇ ಕಟ್ಟುದು ಸಾಮಾನ್ಯ. ಈ ಅಂಸಗಳ ವಿಸ್ವದ ಬೇರೆ ಬೇರೆಕಡೆಗಳ್‌ಲಿ ಕಂಡ್‌ಬಾವ ಕಟ್ಟಣಗಳ್‌ಲಿ ನೋಡಕ್. ಭಾರತದ ಜೆನಪದ ವಾಸ್ತುರಚನೆಲೂ ಸುಮಾರ್ ಪರಿಸರ ನಿರ್‌ದಾರದ ವಿಸೇಸಗಳ ಗಮನ್ಸಕ್.

ಕರ್ನಾಟಕದ ಹೆಚ್ಚ್ ಮಳೆ ಬೀಳ್ವ ಕರಾವಳಿ ಮತ್ತೆ ಮಲೆನಾಡ್ ಪ್ರದೇಸಲಿನೂ ಕೇರಳಲಿರ್‌ವಾಂಗೆ ಕುಳ್ಳ ಗೋಡೆಗ ಮತ್ತೆ ತುಂಬಾ



ಕುಟುಂಬದ ಮನೆ

ಇಳ್‌ಜಾರ್‌ನ ಎರ್‌ಡ್ ಇಲ್ಲರೆ ನಾಲ್ಕ್ ಹಾಸ್‌ನ ಮಾಡ್‌ನ ಮನೆಗಳ ಕಾಣಕ್. ಗೋಡೆಗ ಸಾಮಾನ್ಯ ಆಗಿ ಮೊಣ್ಣು ಇಲ್ಲರೆ ಜಂಬಿಟ್ಟಿಗೆಂದ ಮಾಡ್ದಂತದ್. ಮಾಡ್‌ಗ (ಮಂಗ್ಳೂರು ಹಂಚಿನ ಗಮನ್ಸದೆ ಹೋದರೆ) ವಿಸೇಸ ಆಗಿ ಬೆದ್ರ್ ಇಲ್ಲರೆ ಮರದ ಜಂತಿ ಹಂದರದ ಮೇಲೆ ಮುಚ್ಚಿದ, ಹುಲ್ಲ್ ಗರಿ ಇಂತದರ್‌ಂದ ಮಾಡ್‌ದಂತದ್.. ಇಲ್ಲಿನ ಮನೆಗಳ್‌ಲಿ ಮೊಸಿ ಇಂತದೆಲ್ಲ ಸಾಮಾನ್‌ಗಳ ಬೆರ್‌ಕೆ ಮಾಡಿ ಅರ್‌ದ್ ಮಾಡ್ದ ನಯಗಾರೆನ ನೆಲ ಮತೆ ಗೋಡೆನ ಕೆಳಮಟ್ಟಕೆ ಉಜ್ಜುವ ಅಬ್ಯಾಸ ಉಟ್ಟು. ಕೆಂಪು ಸಾರ್ಣೆನ ಸುಲಬದ ಅಲಂಕಾರನು ಉಟ್ಟು. ಮನೆಗಳ ಮುಂದೆ ಹೆಬ್ಬಾಗ್ಲ್ ನ ಎರ್‌ಡ್ ಕಡೆ ಜಗಲಿ, ಒಳಗೆ ಚಾವಡಿ ಮತ್ತೆ ಮನೆಗೆ ಬೇಕಾದಂಗೆ ಬಳ್ಸಿಕೆ ಬೇರೆ ಬೇರೆ ಕೋಣೆಗ ಇದ್ದವೆ. ತುಂಬಾ ಸಾಮಾನ್ಯ ಆದ ಬಿಡಾರದ ಆಕಾರಲಿ ಸುಮಾರ್ ಇದರಾಂಗೆ ಇದ್ದರೂ ಒಳ ಆವರಣಲಿ ಹೆಚ್ಚಿ ವಿಂಗಡಣೆಗ ಇರ್‌ದುಲೆ.

ಉತ್ತರ ಕರ್ನಾಟಕದ ಬಯಲ್ ಪ್ರದೇಸ ಹಂಗೆನೆ ದಕ್ಷಿಣ ಕರ್ನಾಟಕದ ಮಳೆ ಕಡಿಮೆ ಇರ್‌ವವ ಚಿತ್ರದುರ್‌ಗ, ಕೋಲಾರ, ತುಮಕೂರು, ಬೆಂಗ್ಳೂರು ಜಿಲ್ಲೆಗ ಮತ್ತೆ ಸುತ್ತ ಪ್ರದೇಸಗಳ್‌ಲಿ ಆಯಾತಾಕಾರದ ಮಾಳಿಗೆ ಮನೆಗ ವಿಸೇಸ. ಇದರ ಗೋಡೆಗ ಹೆಚ್ಚ್ ಮಟ್ಟಿಗೆ ಮೊಣ್ಣ್‌ಂದ ಮಾಡ್ದ್. ಕಲ್ಲ್ ವಿಸೇಸಾಗಿದ್ ಸಿಕ್ಕುವ ಕೆಲವ್ ಕಡೆಗಳ್‌ಲಿ ಕಲ್ಲ್ ಚೂರುಗಳ ಜೋಡ್‌ಸಿ ಮಾಡ್ದ ಗೋಡೆಗನು ಇದ್ದವೆ. ಹೆಬ್ಬಾಗ್ಲ್ ಸಣ್ಣದ್ ಮತ್ತೆ ಕುಳ್ಳ. ಒಳಗೆ ಸಾವ್ಕಾರಕೆ ಬೇಕಾದಂಗೆ ಕೋಣೆಗಳೂ ಹಜಾರನೂ ಇದ್ದದೆ. ಗೋಡೆಗಳ ಮೇಲೆ ಬಿಟ್ಟ ಮತ್ತೆ ಅಡ್ಡಗಳ ಇಸಿ ಹಂದರ ಮಾಡಿ, ಮೇಲೆ ಕಡ್ಡಿ, ಸೊಪ್ಪುಗಳ ಜೋಡ್ಸಿ, ಅದರ ಮೇಲೆ ಮೊಣ್ಣ್‌ನ ದಪ್ಪಕೆ ಹರ್‌ವಿ ಮಾಡ್ದ ಮಾಡ್ ಇದ್ದದೆ. ಗೋಡೆಗ ಮಳೆ ನೀರ್‌ಲಿ ಸೋರದಾಂಗೆ ಅದರ ಮೇಲೆಗೆ ಮುಂದೆಬಾಗಿದ ಲೋವೆಕಲ್ಲ್ ಗಳ ಅಲ್ಲೊ ಬೂತಾಳೆ ಪಟ್ಟಿಗಳನೋ ಜೋಡ್‌ಸುವೆ. ಮೇಲೆ ಹಾಕಿದ ಮೊಣ್ಣು ಮಳೆಂದ ಕೊಚ್ಚಿಹೋಗದಾಂಗೆ ಬಿದ್ದ ನೀರ್ ಕಟ್ಟಡಕೆ ತೊಂದರೆ ಆಗದಂಗೆ ಒಂದ್ ಕಡೆಂದ ಹರ್‌ದ್ ಹೋಕೆ ಸುತ್ತಕೆ ಮೊಣ್ಣು ದಿಡ್ಡ್‌ನ ಅಲ್ಲಲ್ಲಿ ಮೊಣ್ಣುನ ದೋಣಿಗಳನೂ ಮಾಡಿದ್ದವೆ. ಈ ಕಟ್ಟಡಗಳಿಗೆ ಕಿಡ್ಕೆ ಇಲ್ಲೆತಿದ್ದರೂ ಇದ್ಕೆ ಅಪವಾದಗ ಇಲ್ಲದಿಲ್ಲೆ. ಮನೆಗಳಿಗೆ ಮೊಣ್ಣುಗಾರೆ, ಸುಣ್ಣ, ಸಾರಣೆ ಉಟ್ಟು. ಕೋಲಾರ, ಬೆಂಗ್ಳೂರು ಮತ್ತೆ ಸುತ್ತನ ಪ್ರದೇಶಗಳ್‌ಲಿ ಗ್ರಾನೈಟ್ ಚಪ್ಪಡಿಗ ತುಂಬಾ ಸಿಕ್ಕುದರ್‌ಂದ ಇಲ್ಲಿನ ಮಾಳಿಗೆ ಮನೆಗಳ್‌ಲಿ ಮೊಣ್ಣ್‌ನ ಬದಲ್‌ಗೆ ಈ ಕಲ್ಲ್ ನ ಉಪಯೋಗನ್ ಹೆಚ್ಚ್. ಮುಂದೆ ಕಲ್ಲ್‌ನ ಕಂಬಗಳ ನೆಟ್ಟ್, ಅದೇ ಕಲ್ಲ್‌ನ ತೊಲೆಗಳ ಜೋಡ್‌ಸಿ, ಮೇಲೆ ಚಪ್ಪಡಿಗಳ ಹೊದ್ಸುವ ಪೊದ್ದತಿ ಇಲ್ಲಿ ವಿಸೇಸ ಆಗಿ ಕಂಡ್ ಬಂದದೆ. ಮಳೆ ಕಡಿಮೆ ಬೀಳುವ ಉತ್ತರ ಕರ್ನಾಟಕದ ಕೆಲವ್ ಬಾಗಗಳ್‌ಲಿ ಮಾಳಿಗೆ ಮನೆಗ ಅಲ್ಲದೆ ವೃತ್ತಾಕಾರದ ಅಡಿಪಾಯ ಇರ್‌ವ ಮನೆಗನು ಉಟ್ಟು. ಇವ್ ವಿಸೇಸಾಗಿ ಒಂದೇ ಕೋಣೆನ ಮನೆಗ. ಗೋಡೆ ಮೊಣ್ಣ್‌ದ್. ಮೇಲೆ ಬೆದ್ರ್‌ನ ಅತವಾ ಕಡ್ಡಿಗಳ ಚಪ್ಪರದ ಮೇಲೆ ಹುಲ್ಲು ಮುಚ್ಚಿದ ಸಂಕದಾಂಗೆ ಇರ್‌ವ ಮಾಡ್ ಇದ್ದದೆ.

ದಕ್ಷಿಣ ಕರ್ನಾಟಕದ ದಕ್ಷಿಣ ಜಿಲ್ಲೆಗಳ ಜೆನಪದ ಮನೆಗ ಮಾಮೂಲಾಗಿ ಆಯಾತಾಕಾರದ ಮೊಣ್ಣುನ ಗೋಡೆನ ಮನೆಗ. ಇದರ್‌ಲಿ ಮುಂದೆ ಬಾಗ್ಲ್‌ನ ಮೂಲೆಲಿ ಜೆಗ್ಲಿ, ಒಳಗೆ ಚಾವಡಿ ಮತ್ತೆ ಸುಮಾರ್ ಕೋಣೆಗ ಇದ್ದವೆ. ದೊಡ್ಡ ಮನೆಗಳ್‌ಲಿ ಪುಟದ ಗೋಡೆ (ಅಂದರೆ ಕಲ್ಸಿದ ಮೊಣ್ಣ್ ನ ದಪ್ಪ ಉಂಡೆಗಳ ಒಂದರ ಮೇಲೊಂದು ಇಸಿ ಎತ್ತಿದ ಗೋಡೆ) ಸಾಮಾನ್ಯ. ತುಂಬಾ ಎತ್ತರದ ಗೋಡೆಗಳ ಅವಸ್ಯಕತೆ ಇರ್‌ಕನ ಹಂಗೆ ಸಣ್ಣ ಮನೆಗಳ ಕಟ್ಟ್ ಕನ ತಡಿಕೆ ಗೋಡೆನ ಅಂದರೆ ಬೆದ್ರ್‌ನ ಕಂಬಗಳಿಗೆ ಕಟ್ಟಿದ ಬೆದ್ರ್ ಚೆದಲೆಗೆ ಕಲ್ಸಿದ ಮೊಣ್ಣ್ ನ ಮೆತ್ತಿ ಮಾಡ್‌ದ ತೆಳುಗೋಡೆನ, ಮಾಡುದುಟ್ಟು. ಮನೆಗಳ ಮಾಡ್ ಮಾಮೂಲಾಗಿ ಎರ್‌ಡ್ ಮಾಡ್‌ದಾಗಿದ್ದದೆ. ಹಕ್ಕಲೆನ ಗೋಡೆಗಳ ಎತ್ತರದ ಬಾಗಲಿ ಒಂದ್ ಮರನ ಇಸಿ ಇಸಿ, ಮಾಡ್ ಎರ್‌ಡು ಕಡೆ ಇಳ್‌ಜಾರಾಗಿರುವಾಂಗೆ ಮಾಡ್ಯಾಗಿದ್ದದೆ. ಈ ಕೊಡಿನ ಅಡ್ಡ ಮರಕೆ ಮೋಂದಾಯ ತೇಳುವೆ ಇದರ ಕುತ್ತಕೆ ನಿಲ್ಸಿಕೆ ಆದರ್‌ಸುವ ಕಂಬಗಳಿಗೆ ಕುತ್ತಂಗೋಲುತ ಹೇಳ್‌ವೆ. ಈ ಮಾಡ್‌ಗ ಬೆದ್ರ್, ಗಳುಗಳ್‌ಂದ ಆದ




ಚಪ್ಪರಗ. ಮೇಲೆ ಮಡ್ಲ್‌ಂದ ನೆಯ್ದು ಮೊಡ್ವಾಳೆನ ಅಲ್ಲರೆ ಮೊಣ್ಣ್‌ನ ಅರೆಕೊಳವೆ ಆಕೃತಿನ ನಾಡ ಹಂಚಿ ಗಳ ಮುಚ್ಚಿಕೆ ಬಳ್ಸ್‌ವೆ. ಕೆಲವ್ ಕಡೆ ಸೋಗೆ ಮತ್ತೆ ಹುಲ್ಲ್‌ನ ಕೂಡಾ ಬಳ್ಸುವೆ. ಮೊಣ್ಣ್ ಮಡ್ಕೆ ಇಲ್ಲರೆ ಪುಟದ ಗೋಡೆಗಳ ಆಯಾತಾಕಾರಲಿ ಕಟ್ಟಿ, ಒಂದ್ ಗೋಡೆನ ಎತ್ತರಕೆ ಮಾಡಿ, ಅದ್ಕೆ ಸಮಕೋನಲಿರ್‌ವ ಗೋಡೆಗಳ ಇಳ್‌ಜಾರಾಗಿರುವಾಂಗೆ ಕಟ್ಟಿ ಇದರ ಮೇಲೆನ ಮಾಡ್ ಒಂದೇ ಕಡೆಗೆ ಇಳಿಜಾರಾಗಿರುವಂಗೆ ಮಾಡ್ದ ಒರ್ಮಾಡ್ ಕಟ್ಟಣಗನು ಅಲ್ಲಲ್ಲಿ ಕಂಡ್ ಬಂದವೆ. ಆದರೆ ಇಂತಾ ಕಟ್ಟಣಗಳ ದನ, ಎಮ್ಮೆಗಳ ಕಟ್ಟ್‌ವ ಕೊಟೆಗೆಗೆ ಬಳ್ಸುದೆ ಹೆಚ್ಚ್. ವಿಸೇಸ ಆಗಿ ಚೂರು ಶ್ರೀಮಂತರ್‌ಗೆ ಸೇರ್‌ದ, ತೊಟ್ಟಿಮನೆಗ ಕರ್ನಾಟಕದ ಸುಮಾರ್ ಕಡೆಗಳ್‌ಲಿ ಉಟ್ಟು. ಇದರ ರಚನಾ ವಿದಾನಗ ಬೇರೆ ಮನೆಗಳ್‌ಂದ ಹನಿ ವೆತ್ಯಾಸ ಇರ್‌ದರ ಕಾಣಕ್. ಇವ್‌ಗಳ್‌ಲಿ ಆಯ ಅತವಾ ಚೌಕ ತಳಪಾಯ, ನಡುಗೆ ಒಂದ್ ಮುಚ್ಚಿದ ತೊಟ್ಟಿ ಇದ್ದದೆ. ತೊಟ್ಟಿನ ಸುತ್ತಕೆ ಜಗಲಿ, ಅದರ ಸುತ್ತಕೆ ಕೋಣೆಗಳ ವೆವಸ್ತೆ ಮಾಡಿದ್ದವೆ. ಮುಂದೆ ಮುಂಬಾಗ್ಲ್‌ನ ಮೂಲೆಗಳ್‌ಲಿ ಜೆಗ್‌ಲಿಗ ಇದ್ದವೆ. ಈ ತೊಟ್ಟಿಮನೆಗ ದೊಡ್ಡದಾಗಿದ್ದ್ ಒಂದ್, ಎರ್‌ಡ್ ಅಲ್ಲೊ ಮೂರ್ ಅಂಕಣಗಳ ತೊಟ್ಟಿ ಮನೆಗ ಹಿಂಗೆ ಸುಮಾರ್ ತರಲಿ ಇದ್ದವೆ.

ಕರ್ನಾಟಕದ ಜೆನಪದ ವಾಸ್ತುರಚನೆಲಿ ಮನೆಗಲ್ಲದೆ ದೇಸ್ತಾನಗ ಕೂಡಾ ಕಂಡ್ ಬಂದವೆ. ಇದ್ ಶ್ರೀಮಂತ ಸಮಾಜಗಳ್‌ಂದ ಪ್ರೋತ್ಸಾಹ ಸಿಕ್ಕಿದ ರಚನೆಗಳಂಗೆ ವಿಸೇಸ ಆಗಿರ್‌ವಂತದಲ್ಲ.ಮಾಮೂಲಾಗಿ ಸುಮಾರ್ ಸಣ್ಣ ಒಂಟಿ ಕೋಣೆನ ಕಟ್ಟಣಗ. ರಚನಾತಂತ್ರ ಮನೆನಾಂಗೆ ಇದ್ದದೆ. ಕೆಲವ್ ಗ್ರಾಮಗಳ್‌ಲಿ ತುಂಬಾ ಕುಳ್ಳ, ಕೇವಲ 3–4 ಅಡಿ ಎತ್ತರದ, ಮೂರ್ ಕಡೆ ಮಾತ್ರ ಗೋಡೆಗ ಇರ್‌ವ ಮಟ್ಟ ಮಾಡ್‌ನ ಮುಚ್ಚಿದ ಆಯತಾಕಾರದ ಸಣ್ಣ ದೇಸ್ತಾನಗ ಕಂಡ್ ಬಂದವೆ.

ಊರ್‌ನ ಜೆನ ಕೆಲವೊಂದ್ ಸಾಮಾಜಿಕ ವೆವಹಾರಕೆ ಸಬೆ ಸೇರಿಕೆ, ಒಮ್ಮೊಮ್ಮೆ ಹೊರಗೆಂದ ಬಂದವ್‌ಕೆ ಒಳ್ಕೆಕೆ, ಮತ್ತೆ ಸಾರ್‌ವಜೆನಿಕ ಕಾರ್ಯಕೆ ಉಪಯೋಗಕೆ ಹಳ್ಳಿಗೊಂದು ಚಾವಡಿ ಇದ್ದದೆ. ಸಾಮಾನ್ಯ ಆಗಿ ಇವ್ಕೆ ಮೂರ್ ಕಡೆ ಗೋಡೆ ಇದ್ದ್ ಮುಂದೆನ ಬಾಗ ತೆಗ್ದಾಂಗೆ ಇದ್ದದೆ. ಗ್ರಾಮದ ಅವಸ್ಯಕತೆ, ಆರ್‌ತಿಕ ಸ್ತಿತಿ ಇಂತದ್ಕೆ ಬೇಕಾದಂಗೆ ಇದ್ ಸುಮಾರ್ ಇಜ್ಜಲ್ ನಸ್ಟ್ ಅಗಲ ಇದ್ದದೆ.

ಗ್ರಾಮಗಳ್‌ಲಿ ಕಂಡ್ ಬಾವ ಇನ್ನೊಂದ್ ತರದ ಕಟ್ಟಣ ಗರಡಿ (ನೋಡಿ). ಗ್ರಾಮೀಣ ಜೆನಗಳ ಕಸರತ್ತ್‌ಗಾಗಿ ಕಟ್ಟಿರ್‌ವ ಈ ಗರಡಿಮನೆಗಳ್‌ಲಿ ಒಂದ್ ಜಗಲಿ ಮಾತ್ರ ಇದ್ದದೆ. ಆ ಪ್ರದೇಸದ ಅಬ್ಯಾಸದಂಗೆ ಮಾಳಿಗೆ ಮಾಡೋ, ಒರ್ಮಾಡ್, ಎರ್‌ಡ್ಮಾಡ್ ಇದ್ದದೆ. ಕಿಡ್ಕೆಗ ಇಲ್ಲದಿರ್‌ದು ತುಂಬಾ ಕುಳ್ಳ ಬಾಗ್ಲ್ ಇದರ ವಿಸೇಸ.

**ಗೌಡರ ಮೂಲ ಮನೆ –ಐನ್ ಮನೆ :** ಪಂಡ್‌ನ ಕಾಲಲಿ ಕುಟುಂಬದ ಎಲ್ಲವು ಒಂದೇ ಕಡೆ ವಾಸ ಆಗಿದ್ದ್ ಒಂದೇ ಅಡ್‌ಗೆ ಮನೆಲಿ ಊಟ ಮಾಡಿಕಂಡ್ ಬೊದ್ಕ್‌ತಿದ್ದೊ, ಹಾಂಗಾಗಿ ಐನ್‌ಮನೆಲಿರುವ ಅಡ್‌ಗೆ ಕೋಂಬರೆ ಕುಟುಂಬದ ಎಲ್ಲವ್‌ಕೆ ಹಕ್ಕ್ ಇರ್‌ವ ಅಡ್‌ಗೆ ಕೋಣೆ. ಇದರ ಉಂಬೊಳಗೆ ತೇಳಿ ಕರ್‌ದವೆ. (ಉಂಬ = ಊಟ ಮಾಡ್‌ವ, ಒಳಗೆ = ಕೋಣೆ) ಹಾಂಗೆನೆ ಐನ್‌ಮನೆಲಿ ಶ್ರೀ ವೆಂಕಟರಮಣ ಸ್ವಾಮಿನ ಮುಡಿಪು ಇದ್ದದೆ.ಇದರ ಮನೆನ ಅಟ್ಟಲಿ ಇಸಿದ್ದವೆ. ಅದಲ್ಲದೆ ದೆವ್ವದ ದೀಪನೂ ಕುಟುಂಬದವ್‌ಕೆ ಹಕ್ಕ್‌ನ ಇರ್‌ವಂತದ್. ಇದಲ್ಲದೆ ಬಾಡೆ ಅಲ್ಲೊ ಚಾವಡಿ ತೇಳಿ ಕರೆವ ಕುಟುಂಬದ ಸಬಾಂಗಣ ಉಟ್ಟು. ಅಲ್ಲದೆ 'ಕಯ್ಯಾಲೆ' ಪಡಸಾಲೆ ನೂ ಇದ್ದದೆ. 'ಬಾಡೆ' ಕಯ್ಯಾಲೆ ಐನ್ ಮನೆನ ಮತ್ತೆ ಉಂಬೊಳಗೆಗ ಕುಟುಂಬದ ಎಲ್ಲವ್‌ಕೆ ಸೇರ್ದಂತ ಕುಟುಂಬದ ಸಾರ್‌ವಜೆನಿಕ (Public Place)ಜಾಗೆಗ. ಅದಲ್ಲದೆ ಮನೆನ ಇಜ್ಜಲ್ ಮತ್ತೆ ಕಳನೂ ಎಲ್ಲವು ಸೇರ್‌ದ ಕುಟುಂಬದ ಸಾರ್‌ವಜೆನಿಕ ಜಾಗೆಗ, 'ಉಂಬೊಳಗೆ'ಲಿ ಹಬ್ಬ ಮೊದ್‌ವೆ ಮತ್ತೆ ಇತರ ಸುಬಕಾರ್‌ಯಗಳ್‌ಲಿ ಸುದ್ದ, ದೀಪಾವಳಿ ಹಬ್ಬಗಳ್‌ಲಿ ಇನ್ನಿತರ ಕುಟುಂಬದ ಸಾರ್‌ವ ಜೆನಿಕ ಕಾರ್‌ಯಗಳ 'ತೊಂಬಾರ' ಅಡ್‌ಗೆನ ಮಾಡ್‌ವೆ. ಉಂಬೊಳಗೆ' ಲಿ ಸುಬ ಮತ್ತೆ ಅಸುಬ ಕಾರ್‌ಯಗಳ್‌ಲಿ ಸತ್ತ ಹಿರಿಯರಿಗೆ ಕಾರಣಿಕ' 'ರಿಗೆ ಎಡೆ (ನೈವೇದ್ಯ) ನ ಇಟ್ಟವೆ. ಸತ್ತವನ ಹದ್ನಾರ್ ಕೂಡ್‌ಸುದೂ ಇಲ್ಲಿನೇ. 'ಬಾಡೆ'ಲಿರುವ ನೆಲ್ಲಕ್ಕಿ' (ದೀಪ) ದ ಅಡಿಲಿ ಮೊದ್‌ವೆ, ಹಬ್ಬಗಳ್‌ಲಿ ಕುಟುಂಬದವೆಲ್ಲ ಸೇರಿ ದೇವ್‌ರ ಗುರುನ ಮತ್ತೆ ಹಿರಿಯರ್‌ನ ನೆನ್ಸಿಕಂಡ್ ಕಾರ್‌ಯ ಸುರುಮಾಡ್‌ವೆ. ಮೊದುಮಕ್ಕಳ ಹಸೆನೂ 'ನೆಲ್ಲಕ್ಕಿ' (ದೀಪ)ನ ಹಕ್ಕಲೆನೇ ಬರ್‌ದವೆ.

'ಕಯ್ಯಾಲೆ' ತೇಳ್‌ವ ಪಡಸಾಲೆಲಿ 'ಐಮರ' ತೇಳುವ ಜಾಗೆ ಇದ್ದದೆ. ಮುಕ್ಯ ಚಿತ್ರಂದ ಕೆತ್ತಿದ ಪೊರ್‌ಲುನ, ದೊಡ್ಡ ಮರದ ಹಲಗೆನ ಹಜ್ಜಾ ಎತ್ತರಲಿ ಕುದ್ರಿಕೆ ಅನುಕೂಲ ಆವ ರೀತಿಲಿ ಕಟ್ಟಿದ್ದವೆ. ಈ 'ಕಯ್ಯಾಲೆ' (ಪಡಸಾಲೆ) ಲಿ ಕುಟುಂಬಕೆ ಸಮ್ಮಂದಪಟ್ಟ ಎಲ್ಲಾ ಸಬೆಗಳ ನಡ್‌ಸುವೆ. ಕೆಲವ್ ಕುಟುಂಬಗಳ್‌ಲಿ 'ಪಟ್ಟೆದಾರ/ಯಜಮಾನ ಕುದ್ರಿಕೆ ಪ್ರತ್ಯೇಕ ಆದ ಜಾಗೆನ ಏರ್‌ಪಾಟ್ ಮಾಡಿದ್ದವೆ. ಈ ಜಾಗೆಲಿ ಪಟ್ಟೆದಾರ' ಅಲ್ಲದೆ ಬೇರೆ ಗಂಡ್‌ಸ್‌ಗ ಆಗಲಿ ಹೆಣ್ಮಕ್ಕ, ಮಕ್ಕ ಕುದ್ರಿಕಾಗದ್, ಕುಟುಂಬದ ಜಗಳ ಇದ್ದರೆ ಯಜಮಾರ್ ಈ ಜಾಗೆಲಿ ಕುದ್ದು ಕುಟುಂಬದವರ ದೂರುನ ಮನಸಿಟ್ಟ್ ಕೇಳಿ ತನ್ನ ತೀರ್‌ಪುನ ಕೊಡ್‌ತ್ತಿತ್.

'ಐಮರ' ತೇಳ್‌ವ ಹಲಗೆನ ಮೇಲೆ ಹೆಣ್ಮಕ್ಕ ಕುದ್ರುದಕೆ ನಿಸೇದ ಉಟ್ಟು. ಕಯ್ಯಾಲೆ' ನೆಂಟ್‌ರ್‌ಗಳ್‌ನ ಸತ್ಕರ್‌ಸುವ ಜಾಗೆನೂ ಹೌದು. ಮೊದುಮಕ್ಕಳಿಗೆ ಮುಹೂರ್‌ತಕ್ಕೆ ಒಂದ್ ದಿನಕ್ಕೆ ಮುಂದೆ ಚಪ್ಪರದ ದಿನ ಸೋದರಮಾಂವ 'ಕಾಸ್ ತಾಳಿ'ನ ಇಲ್ಲಿಯೇ ಕಟ್ಟುದು. ಬಾಡೆಲಿರುವ 'ನೆಲ್ಲಕ್ಕಿ ಮತ್ತೆ ಕಯ್ಯಾಲೆಯಲಿರುವ ದೀಪಕ್ಕೆ ಪ್ರತೀಬಾಗದವು ತಮ್ಮ ಸರದಿನಂಗೆ ಎಣ್ಣೆ ಹೊಯ್ದ್ ದಿನೋಳು ಇರ್ಲ್ ದೀಪ ಹೊತ್ತ್‌ಸೋಕು. ಅದರ ಕರ್‌ಚಿನು ಅವೇ ವಯಿಸಿಕಣೋಕು. ಇದಲ್ಲದೆ ಪ್ರತೀ ಬಾಗದವು 'ಐನ್' ಮನೆನ ತಮ್ಮ ಸರದಿಯಂಗೆ ಬೊಳ್ಪುಗೆ ಮತ್ತೆ ಹಿಂಬೊತು ಗುಡ್‌ಸಿ ಮನಾರ ಮಾಡೊಕು.

**ಪಟ್ಟೆದಾರ :** ಕುಟುಂಬದ ಪಟ್ಟೆದಾರ ಪ್ರತಿ ಕುಟುಂಬದ ಹಿರಿಯ ಗಂಡ್‌ಸ್ ಆಗಿದ್ದದೆ. ಕುಟುಂಬಲಿ ಗಂಡ್‌ಗಳೇ ಇಲ್ಲದ ಪಕ್ಸಲಿ ಆ ಕುಟುಂಬಕೆ ಮೊದ್‌ವೆ ಆಗಿ ಬಂದ ಹಿರಿಯ ಹೆಂಗ್‌ಸೆ 'ಪಟ್ಟೆದಾರ್‌ತಿ' ಆದೆ. ಅದೂ ಇಲ್ಲದಿದ್ದ ಪಕ್ಸಲಿ ಆ ಕುಟುಂಬದ ಎಲ್ಲಾ ಹೆಣ್ಣ್ ಮಕ್ಕಳ ಹೆಸರ್‌ಲಿ ಜಂಟಿಯಾಗಿ ಪಟ್ಟೆ ವರ್‌ಗಾಯಿಸಲ್ಪಟ್ಟ್ ಆ ಹೆಣ್ಣು ಮಕ್ಕ ಜಂಟಿ ಪಟ್ಟೆದಾರ ಆವ ಪೊದ್ದತಿ ಹಿಂದೆ ಇತ್ತ್. ಕುಟುಂಬದ ಪ್ರಾಯದ ಗಂಡ್‌ಸ್ ಹೆಸರ್ ಕುಟುಂಬ ಆಸ್ತಿನ ಹಕ್ಕುದಾರಿಕೆನ ಪಟ್ಟೆಲಿ ಇದ್ದದೆ. ಕುಟುಂಬದ ಆಸ್ತಿನ ಪರಾದೀನ ಮಾಡಕಾರೆ ಕುಟುಂಬದ ಎಲ್ಲಾ ಸದಸ್ಯರ ಒಪ್ಪಿಗೆ ಪಡಿಯೊಕು. ಕುಟುಂಬದ ಸದಸ್ಯರ ಒಪ್ಪಿಗೆ ಇಲ್ಲದೆ ಕುಟುಂಬದ ಆಸ್ತಿನ ಮಾರ್‌ದಕೆ, ಜೀವನೋಪಾಯಕೆ ಕುಟುಂಬದ ಸದಸ್ಯರ ಅನುಮತಿ ಇಲ್ಲದೆ ತನ್ನ ಪಾಲ್‌ನ ಆಸ್ತಿನ ಮಾರಿಕು ಆದುಲೆ. (ಡಿ.ಸಿ.ಜೆ.)

**ಐನ್ಮನೆ :** ವಾಸದ ಮನೆ ಕಟ್ಟುದರ್‌ಲಿ ಜೆನ ಸಮುದಾಯಗ ಬೊದುಕುವ ಬೌಗೋಳಿಕ ಪರಿಸರ, ಸಸ್ಯವರ್‌ಗ, ಪ್ರಾಣಿವರ್‌ಗ, ಜೀವನಾವರ್‌ತನ – ವಾರ್‌ಸಿಕಾವರ್‌ತನಗಳ್‌ಲಿ ಬಾವ ಹುಟ್ಟು-ಮೊದ್‌ವೆ-ಸಾವು ನಂಬಿಕೆ, ಆಚರಣೆ, ನಡಾವಳಿ ಮತ್ತೆ ಉತ್ಪಾದನಾ ವಿದಾನನ ಹೊಂದಿಸಿಕಂಡ್ ಇದ್ದವೆ. ಈ ಮೂಲಕನೆ ಒಂದ್ ಬೌತಿಕ ಸಂಸ್ಕೃತಿನ ವಿನ್ಯಾಸ ರೂಪಿತ ಆದೆ. ವಾಸದ ಮನೆಲಿ ಅದರಲಿ ಜೀವನ ಕಳೆವವರ ಮನೋದರ್ಮ ಅಂಡ್ಗಿದ್ದದೆ. ಅದರ್‌ಲಿ ಸಾಮಾಜಿಕ-ರಾಜಕೀಯ- ಆಡಳಿತಾತ್ಮಕ, ಆರ್ತಿಕ, ದಾರ್ಮಿಕ, ಸ್ತರಮಾನಗ ಕೂಡ ಗೊತ್ತಾದೆ.

ಕರಾವಳಿ ಕರ್ನಾಟಕದ ದಕ್ಷಿಣಕನ್ನಡ, ಕೊಡಗ್ ಜಿಲ್ಲೆಲಿ ವಾಸದ ಮನೆಗಳ್‌ಲಿ ಒಂದ್ ಮಾಳಿಗೆನ ಎರಡ್ ಮಾಳಿಗೆನ ಮನೆಗ ಸಾಮಾನ್ಯ. ದಕ್ಷಿಣಕನ್ನಡ, ಕೊಡಗ್ ಪ್ರದೇಸಲಿ ಹಾಸನದ ಐಗೂರು ಸೀಮೆಂದ ವಲಸೆ ಬಂದ್, ಮತ್ತೆ ಬೂಮಾಲಿಕರಾಗಿ ಗುರ್‌ತ್‌ಸಿಕಂಡ ಒಕ್ಕಲಿಗ ಗೌಡರ ಆರ್ತಿಕ, ಅದಿಕಾರ ಸ್ತಾನದ ನೆಲೆ, ಸಂಪ್ರದಾಯ ಈ ಹಿನ್ನೆಲೆಲಿ ಗುರ್‌ತುಸಿಕಂಡವರ ಮನೆಗ ಮಾತ್ರ ಐನ್ಮನೆ' ತ ಕರ್‌ಸಿಕಂಡವೆ. ಹಿಂದೆ ತುಳುವ ನಾಡ್‌ಲಿ ಬೀಡು ಮನೆಗ ಇದ್ದೊ. ಗೇಣಿ ವಸೂಲಿನ ಗುತ್ತುನವನ 'ಗುತ್ತು ಮನೆಗ'ಇದ್ದೊ. ಇವೆಲ್ಲ ಗುತ್ತು/ಪಡ್ಡಿರೆ ಮನೆಗತ ಕರ್‍ಸಿಕಂಡಿದ್ದೊ. ಉಳುವವನೇ ಹೊಲದೊಡೆಯ-ಬೂಸುದಾರಣೆ ಕಾನೂನು ಅನುಸ್ಟಾನಕೆ ಬಂದ ಮೇಲೆ ಗುತ್ತು ಮನೆಗ ಬಹುತೇಕ ಇಲ್ಲದಾತ್. ಗೌಡರ ಐನ್ಮನೆಗ ಮಾತ್ರ ಸಾಂಸ್ಕೃತಿಕ ಎಚ್ಚರದ ಹಿನ್ನೆಲೆಲಿ ಯತಾ ಪ್ರಕಾರ ಕಾಪಾಡಿಕಂಡ್ ಬಂದದರ ನಾವು ಕಂಡವೆ.

ಗೌಡರ್‌ಗೆತ ಇರ್‌ವ ಐನ್ಮನೆಗ ಪರ್ಯಾಯವಾಗಿ ನಾಲ್ಕಂಕಣದ ಮನೆಗ, ಗುತ್ತು ಮನೆಗ ತರವಾಡ್ ಮನೆಗತ ಕರ್‌ಸಿಕಂಡವೆ. ಈ ಮನೆಗ ಎರಡ್ ಮೂರು ಊರುಗಳ ವ್ಯಾಪ್ತಿನ ಹೊಂದಿ ಕಂಡಂಗೆ ಇದ್ದವೆ. ಗೌಡರ ಎಲ್ಲಾ ಮನೆಗ ಐನ್‌ಮನೆತ ಕರ್‍ಸಿಕಂಬೊದುಲೆ.

ಐನ್ಮನೆನ ಸಾಮಾನ್ಯ ರೇಕಾವಿನ್ಯಾಸ : ಐನ್ಮನೆಗ ರಚನೆಲಿ ನೋಡಿಕೆ ವಿಸೇಸ ಆಗಿದ್ದದೆ. ಐನ್ಮನೆಗೆ ಸುಮಾರ್ ಮೂರು ಅಡಿ ಎತ್ತರದ ತಳಪಾಯ ಇದ್ದೆದೆ. ಮನೆಗೆ ಸಾಮಾನ್ಯ ದೊಡ್ಡ ಬಾಗ್ಲ್ ಮೂಡಕೆ ಇರ್‌ದು ಪೊದ್ದತಿ. ಜಗ್‌ಲಿ ಹಕ್ಕಲೆ ಮೂರ್ ಮೆಟ್ಲ್‌ಗ ಇದ್ದದೆ. ಕೆಲ ಮನೆಗಳ್‌ಲಿ ಮೆಟ್ಲ್ ಹತ್ತಿಕನ ಸುರೂಗೆ ಚಾವಡಿ ಇದ್ದದೆ. ಮೂರು ಅಡಿ ಅಗಲದ ಜಗ್‌ಲಿಂದ ಐನ್ಮನೆ ಸುರು ಆದೆ. ಜಗ್‌ಲಿ ಮತ್ತೆ ಚಾವಡಿನ ನೊಡುಲಿ ಒಂದ್ ಅಡಿನಸ್ಟು ಅಗಲದ ಎತ್ತರದ ಚಿಂಟ್ಟೆ ಇದ್ದದೆ. ಇದ್ ಮರದ ಹಲೆಗೆಂದ ಹಾಸಿ ಅದರ ಮೇಲೆ ಕೆತ್ತನೆ ಕೆಲಸದ (ಕಾಸ್ಟ ಸಿಲ್ಪ) 'ಬೋದಿಗೆ'ನ ದಪ್ಪನ ಕಂಬಗ ಇದ್ದ್ ಅಟ್ಟನ ಆದರ್‌ಸಿದೆ. ಒಟ್ಟಾಗಿ ಈ ಜಾಗೆನ ಅರೆಬಾಸಿಕ ಗೌಡ್ರುಗ 'ಐಮರ' ತ ಕರ್‌ದರೆ. ತುಳು ಬಾಸೆನ ಗೌಡ್ರುಗ 'ಬಾಜಿರ' ತೇಳುವೆ. ಇದರ ಕುದ್ರಿಕೆ ಬಳ್ಸುವೆ. ಜಗಲಿನ



ಐನ್ ಮನೆ

ಬಲಬಾಗಲಿ 'ನ್ಯಾಯಕಟ್ಟೆ' ಇದ್ದ್ ಇದರ ನ್ಯಾಯ ತೀರ್ಮಾನಲಿ ದೆವ್ವದ ಪ್ರತಿನಿದಿಯಾಗಿ ಮನೆನ 'ಮೂಪ' (ಯಜಮಾನ)ಕುದ್ದವೆ. ಈ ಕಟ್ಟೆನ ಮೂಪ ಮಾತ್ರ ಬಳ್ಸಿಕೆ. ಮನೆನ ಎಡಬಾಗದ ಮೂಡಾಗ್ನೇಯಲಿ ಮನೆನ ದರ್ಮದೆವ್ವದ ಮಾಡ ಇದ್ದದೆ.. (ತುಳು ದೆವ್ವಾರಾದಕರ್‌ಲಿ ಇಲ್ಲಿ ಮಾಡ ಇರ್‌ದು ಸಾಮಾನ್ಯ) ಇದರ ಬಾಗ್ಲ್ ಜಗ್‌ಲಿಗೆ ಮೋರೆ ಮಾಡಿ ಇದ್ದದೆ.

ಐಮರನ ದಾಟಿರೆ ಮನೆನ ಮುಕ್ಯ ಜಾಗೆ ಚಾವಡಿ ಸಿಕ್ಕಿದೆ. ಐನ್ಮನೆನ ಪ್ರದಾನಕಾರ್‌ಯ ಸ್ತಾನ ಚಾವಡಿ. ನ್ಯಾಯಕಟ್ಟೆಗ ಇಲ್ಲದ ಐನ್ಮನೆಗಳ್‌ಲಿ 'ಚಾವಡಿ' ನ್ಯಾಯ ತೀರ್ಮಾನದ ನೆಲೆ ಆಗಿದ್ದದೆ. ಚಾವಡಿಂದ ಒಳೆಮ್ಮೆ ಹುಗ್ಗಿಕೆ ಸಣ್ಣದಾದ ಅದರೆ ಬಾರಿ ಪೊರ್‌ಲುನ ಕಲಾತ್ಮಕ ಕೆತ್ತನೆನ ದಾರಂದ, ಬಾಗ್‌ಲ್ ಇದ್ದ್‌ದೆ. ಈ ಬಾಗ್ಲ್ ಸಾಮಾನ್ಯ ಚಾವಡಿನ ಬಲ್ದ ಕೊಡಿಲಿ ಇದ್ದೆದೆ. ಚಾವಡಿನ ಅಡಿಮಟ್ಟ ಮನೆನ ಬಾಕಿ ಒಳ್ದ ಎಲ್ಲ ಕೋಂಬರೆಗಳ ಅಡಿಮಟ್ಟಕೆ ಸಮ ಆಗಿ ಇದ್ದದೆ. ಚಾವಡಿಂದ ಅರ್ದ ಅಡಿನಸ್ಟ್ ಕೆಳೆಗೆ ಒಳಾಂಕಣ ಇದ್ದ್ ಇದ್ ಸುಮಾರ್ ಆರ್ ಅಡಿನಸ್ಟ್ ಅಗಲದ ಜಗಲಿಯಾಗಿದ್ದ್ ಇದರ ಒಳಾಂಕಣತ ಕರ್‌ದವೆ. ಇದ್ ಚೌಕಾಕಾರ ಆಗಿದ್ದ್ ಮನೆನ ಎಲ್ಲ ಕೋಣೆಗಳಿಗೆ ಹೊಂದಿಕಂಡಿದ್ದದೆ.





ಚಾವಡಿನ ಬಲ ಬಾಕಗೆ ತಿರ್‌ಗಿರೆ ಕುಲ ದೆವ್ವದ ಕೋಣೆ ಇದ್ದದೆ. ಇಲ್ಲಿ ಮುಡಿಪು ಇದ್ದದೆ. ಹರ್‌ಸಯ(ನೋಡಿ:ಹರ್‌ಸಯ) ಇಲ್ಲೇ ನಡೆದ್ದದೆ. ಹಕ್ಕಲೆಲಿ ದೆವ್ವದ ಬಂಡಾರ ಇದ್ದದೆ. ಈ ಕೋಣೆನ ಕರೆಗೆ ಪಡುವದ ಕಡೆ ಹೊರೆಗೆ ಹೋವ ಬಾಗ್‌ಲ್ ಇದ್ದದೆ. ಇದರ ಹೊಂದಿಕಂಡ್ ಕರೆಲಿ ಕತ್ತಲೆ ಕೋಣೆ ಇದ್ದದೆ, ಕಿಟ್ಗೆಗ ಇಲ್ಲದ ಈ ಕೋಣೆಲಿ ಮನೆನ ನಗ ನಾಣ್ಯಗ ದಾಕಲೆ ಪತ್ರಗ ಎಲ್ಲಾ ಇದ್ದವೆ. ಈ ಕತ್ತಲೆ ಕೋಣೆನ ಹೊಂದಿಕಂಡ್ ಪಾಸಾಣ ಮೂರ್‌ತಿ – ಹೆಣ್ಣ್ ದೆವ್ವದ ಕೋಣೆ ಇದ್ದದೆ. ಈ ದೆವ್ವಕೆ ಸಮ್ಮಂದಪಟ್ಟ ಆಯುದ ಬಂಡಾರಗ ಈ ಕೋಣೆಲೇ ಇದ್ದದೆ. ಸುತ್ತುಂದಲೂ ಕೋಣೆಗಳ್‌ಂದ ಕೂಡಿರ್‌ವ ಐನ್ಮನೆ ವಾಯುವ್ಯ ಬಾಗದ ಕೋಣೆ ಅಡ್ಗೆ ಮನೆನೆ ಆಗಿರೊಕು.

ಇದ್ ಆಗ್ನೇಯ ಬಾಗಕೆ ಕನ್ನಿಮೂಲೆಗೆ ಸರೀ ವಿರುದ್ದ ದಿಕ್ಕ್‌ಲಿದ್ದದೆ. ಮನೆ ತಳಪಾಯದ ಲೆಕ್ಕಾಚಾರ ಸುರಾದು ಈ ಕನ್ನಿಮೂಲೆಂದಳೆ. ವಾಸ್ತುನ ದ್ರಿಸ್ಟಿಂದ ಕನ್ನಿಮೂಲೆ ಮನೆನ ಮೂಲದ ಜಾಗೆ ಆಗಿದ್ದದೆ.

ಗೌಡರ ಐನ್ಮನೆಗಳ್‌ಲಿ ಹೆಚ್ಚಿಗೆ ಕ್ರಿಯಾತ್ಮಕ ಗಟಕ ತೇಳಿರೆ ಜಗಲಿ/ ಚಾವಡಿ ಮತ್ತೆ ಅಡ್ಗೆ ಒಳೆಗೆ. ಅಡ್ಗೆ ಒಳೆಗೆ ಮೂಡಕೆ ಮೋರೆ ಇರ್‌ವಂಗೆ, ಕೆತ್ತನೆ ಮರದ ಸಣ್ಣ ಕಂಬ ಒಂದರ ನೆಟ್ಟಿದ್ದವೆ. ಇದರ 'ಕನ್ನಿಕಂಬ'ತ ಕರ್‌ದವೆ. ಜೀವನಾವರ್‌ತನ ಮತ್ತೆ ವರ್‌ಸೋಳು ನಡೆವ ಎಲ್ಲಾ ಆಚರಣೆಗ ಈ ಕಂಬದ ಬುಡಲೇ ನಡ್ದದೆ. ಗುರುಕಾರ್‌ನೂರುಗೆಇ ಲೆ ಅಗಲ್ ಇಕ್ಕುದು. ಈ ಕನ್ನಿಕಂಬ(ನೋಡಿ: ಕನ್ನಿಕಂಬ) ಅರೆಬಾಸೆ ಗೌಡ ಕುಟುಂಬಗಳ ಐನ್‌ಮನೆಲಿ ಸರ್‌ವೇ ಸಾಮಾನ್ಯಂತಾದರೆ; ತುಳುಬಾಸಿಕ ಗೌಡ್ರ್‌ಲಿ ವಿರಳ ಆಗಿದ್ದದೆ. ಕನ್ನಿಕಂಬ ಇಲ್ಲದಲ್ಲೂ ಎಲ್ಲಾ ಕ್ರಿಯೆಗಳ ಕೇಂದ್ರ ಜಾಗೆ ಅಡ್ಗೆ ಮನೆನೆ ಆಗಿದ್ದದೆ. ಅಡ್ಗೆ ಕೋಣೆನ ಕರೆಲಿ ಉತ್ತರ ದಿಕ್ಕ್‌ಗೆ ಹೊರೆಗೆ ಹೋವ ಬಾಗ್‌ಲ್ ಇದ್ದದೆ. ಇದರ ಕರೆಲಿ ಮನೆವು ಕುದ್ದುಂಬ ಊಟದ ಕೋಣೆ ಇದ್ದದೆ. ಇದರ "ಉಂಬೊಳೆಗೆ"ತ ಕರ್‌ದವೆ. ಈ ಉಂಬೊಳೆಗೆನ ಹೊಂದಿಕಂಡ್ ಇನ್ನೊಂದು ಕೋಣೆ ಇದ್ದ್, ಇದರ ಸರ್‌ಕ್‌ನ ಕೋಣೆ ಅಲ್ಲರೆ ವೆವಹಾರದ ಕೋಣೆತ ಕರ್‌ದವೆ.

ಇಡೀ ಐನ್ಮನೆನ ಕಿಟ್ಕೆ, ಬಾಗ್‌ಲ್‌ಗ, ದಾರಂದಗ ಸಣ್ಣದಾಗಿದ್ದ್ ಒಳೆಗೆ ಹುಗ್ಗಕಾರೆ ಬೊಗ್ಗೊಕಾದೆ. ಈ ಮನೆನ ಮನೆವು ದೆವ್ವ ದೇವರ ಸ್ತಾನಕೆ ಸಮಂತ ನೆನ್ಸಿ ನಡ್ಕೊಂಡವೆ. ಒಳಮ್ಯೆಲಿ ಸುಮಾರ್ ಎರಡರ್‌ಂದ ನಾಲ್ಕ್ ಅಡಿಗಳಸ್ಟ್ ಗುಂಡಿಲಿ ಇರ್‌ವ ತೊಟ್ಟಿ ಚೌಕಾಕಾರದಲ್ಲಿದ್ದದೆ. ಕೆಲ ಮನೆಗಳ್‌ಲಿ ಆಯಾತಾಕಾರದಲೂ ಇದ್ದದೆ. ಈ ತೊಟ್ಟಿನ ಕರೆನ ನಾಕ್ ಮೂಲೆಲಿ ಚಿಂಟೆಗೆ ಕಂಬಗ ಇದ್ದ್ ಈ ಕಂಬಗಳ ಮೇಲೆಬಾಗಲೇ ಮನೆನ ಮಾಡ್ ಹೊಂದಿಕಂಡಿದ್ದದೆ. ನಾಕ್ ಮೂಲೆಂದಲೂ ಮನೆ ಮಾಡ್‌ನ ನೀರ್ ಈ ತೊಟ್ಟಿಗೆ ಅರ್‌ದ್ ಬಿದ್ದದೆ. ಬಿದ್ದ ನೀರ್ ಅಲ್ಲಿಂದ ಕೊಳವೆಲಿ ಈಸಾನ್ಯ ದಿಕ್ಕ್‌ಲಿ ಹೊರಗೆ ಹೋಕೆ ವೆವಸ್ತೆ ಇದ್ದದೆ.

ಈ ನಮೂನೆನ ಮನೆನ ಅರೆಬಾಸೆವು 'ನಾಲ್ಕ್ ಸೂತ್ರದ ಮನೆ' 'ನಾಲ್ಕಂಕಣದ ಮನೆ'ಂತಳೂ ಕರ್ದವೆ. ಇದೇ ಬಗೆನ ರಚನೆ ಒಂದಕ್ಕೊಂದು ಹೊಂದಿಕಂಡ್ ಇದ್ದರೆ ಎಂಟ್ ಸೂತ್ರದ ಮನೆತ ಕರ್‌ದವೆ. ಇದ್ ಸಾ ಮುಕ್ಯ ಮನೆನ ಹಾಂಗೆನೆ ಇರ್‌ವ ಕೋಣೆಗಳ್‌ಂದ ಕೂಡಿದ್ದದೆ. ದೆವ್ವ ದೇವರ ಸ್ತಾನಗ ಮಾತ್ರ ಇರ್‌ದುಲೆ. ಅದರ್‌ಲಿ ಮನೆವು ವಾಸ ಮಾಡ್‌ವೆ. ಈ ಎಂಟ್ ಸೂತ್ರದ ಮನೆಲಿ ಅಡ್ಗೆ ಕೋಣೆ ಒಂದೇ ಇದ್ದ್ ಹಿಂಗೆ ಕೂಡಿ ಉಂಬ ವೆವಸ್ತೆನ ಮನೆವು ಮುಂದುರ್ಸುವೆ.

ಬಯಲ್ ಸೀಮೆನ ತೊಟ್ಟಿ ಮನೆನ ರಚನೆ ಹೊರೆಗೆಂದ ನೋಡಿಕೆ ಅರಮನೆಗಳ ಸರಳ ರೂಪದಂಗೆ ಕಂಡದೆ. ಇದ್ ಮಾಡ್‌ವ ಕಸುಬುನ ಪ್ರದಾನ ಆಗಿದ್ ಬತ್ತದ ಬೆಳೆನ ಮತ್ತೆ ದನ ಸಾಕಣೆನ ಅಗತ್ಯನ ಮನಗಂಡ್ ಕಟ್ಟಿದ ಮನೆಗ. ಐನ್ಮನೆನ ಒಳಬಾಗಲಿರುವ ತೊಟ್ಟಿನ ನೋಡಿರೆ, ಅದ್ ಬಯಲು ಸೀಮೆನ ತೊಟ್ಟಿಮನೆನ ತೊಟ್ಟಿನೆ ಸಣ್ಣದಾದ ರಚನೆ ಆದ್ ಆಗಿರ್‌ದುತ ಆದೆ. ಹಾಂಗೆಂತ ತೊಟ್ಟಿಮನೆನೇ ಐನ್ಮನೆ ಅಲ್ಲ ಈ ಬಗೆನ ಹೋಲಿಕೆನ ತುಳುನಾಡ್‌ಗೆ ವಲಸಿಗರಾಗಿರುವ ಗೌಡರ ಮೂಲದ ಕಡೆಗೆ ತೋರ್‌ಸಿರೆ ಐನ್ಮನೆಗಳ ರಚನೆಲಿ ತೊಟ್ಟಿಮನೆಗಳ ಪ್ರಬಾವ ಇರ್‌ದರ ಕಡೆಗಣಿಸಿಕಾದ್‌ಲೆ. ಹಾಸನದ ಐಗೂರು ಸೀಮೆನ ಮೇಲಾಗಿ ಹಳೆ ಮ್ಯೆಸೂರು ಬಾಗಂದ ದಕ್ಷಿಣಕನ್ನಡಕ್ಕೆ ಇಳ್ದ್ ಬಂದ್ ಅಲ್ಲಿಂದ ಕೊಡಗ್‌ನ ಕಡೆ ಹಬ್ಬಿದ ಗೌಡರ್ ತೊಟ್ಟಿಮನೆನ ರಚನಾ ವಿನ್ಯಾಸನ ಪ್ರಾದೇಸಿಕತೆ ಮತ್ತೆ ಪರಿಸರದ ಅವಸ್ಯಕತೆಗೆ ಹೊಂದಿಸಿಕಂಡಿರ್‌ವ ಸಾದ್ಯತೆ ಇದ್ದದೆ.

ರಚನೆನ ದ್ರಿಸ್ಟಿಂದ ಗೌಡರ ಐನ್ಮನೆಗ ಬಹುಮುಕ್ಯ ಸಾಂಸ್ಕೃತಿಕನಲೆಲೇ ಕಟ್ಟಿದಾಂಗುಟ್ಟು. ನಾಲ್ಕಂಕಣನ ಐನ್ಮನೆ ಅಂದರೆ ಕುಲದೆವ್ವ, ಮನೆ ದೆವ್ವ, ದರ್ಮದೆವ್ವ, ಸತ್ತ ಕೊಲೆಗ ಆಗಿರುಂವ (ಗುರುಕಾರ್‌ನೂರುಗ) ಹಿರಿಯರ ಸ್ತಾನಗಳ ಕೂಡಿಕಂಡ್, ಕುಟುಂಬದ ಮೂಪನ (ಯಜಮಾನ) ನಿರ್‌ದೇಸನಲಿ ಕುಟುಂಬಸ್ತರ್ ವಾಸ ಮಾಡ್‌ವ ಮನೆ. ಈ ಐದಂಸಗಳ್‌ಂದ ಕೂಡ್ದ ಮನೆ ಮಾತ್ರ "ಐನ್ಮನೆ". ಇದೆಲ್ಲದ್ ಇರ್‌ವ ಮನೆ ಎಲ್ಲಾ ಸಂಗತಿಲಿನು ಬೇರೆ ಸಮುದಾಯದವರ ಮತ್ತೆ ಗೌಡರ ಬೇರೆ ಸಾಮಾನ್ಯ ಮನೆಗಂಳ್ದ ಬಿನ್ನನೂ, ವಿಸೇಸನೂ ಆಗಿದ್ದದೆ. ದೆವ್ವ–ದೇವರ, ಜೀವನ ಮತ್ತೆ ವಾರ್‌ಸಿಕಾವರ್‌ತನಲಿ ಬಾವ ಸಮಸ್ತ ಸಾಂಸ್ಕೃತಿಕಆಚರಣೆಗ ಕುಟುಂಬದ ಸಮಸ್ತರ್ ಒಗ್ಗೂಡ್ದು ಈ ಐನ್ಮನೆಗಳಳ್‌ಲಿ ನಡ್ದದೆ. ಕೂಡ್‌ಕುಟ್‌ಂಬ ವೆವಸ್ತೆಲಿ ಎಲ್ಲವೂ ಒಂದೇ ಸೂರಡಿಲಿ ಬೊದ್ಕೆಂಡಿದ್ದರೂ ಎಲ್ಲವ್ಕೂ ಒಂದೇ ಅಡ್ಗೆ ಮನೆ ಇದ್ದ್ ಕೂಡು ವೆವಸ್ತೆಲಿ ಉಣೊಕು. ಈ ಮನೆಗಳ್‌ಲಿ ಪ್ರತ್ಯೇಕ ಮಲ್ಗುವ ಕೋಣೆಗ ತೇಳಿ ಇಲ್ಲೆ. ಮನೆಯವರ್‌ಂದ ಹೆಚ್ಚಿಗೆ ಕ್ರಿಯಾಬಾಗ ಆಗಿ ಉಪಯೋಗಾವ ಐನ್ಮನೆನ ಗಟಕ ಅಂದರೆ ಒಳಮ್ಯೆ/ಒಳಾಂಕಣ ಮಾತ್ರ.

ಅನುಬವ ಮತ್ತೆ ಲೋಕ ದ್ರಿಸ್ಟಿಲಿ ರಚನೆ ಅಗಿರ್‌ವ ಈ ಐನ್ಮನೆನ ವಾಸ್ತು ಗೌಡರ್‌ಗೆ ಒಂದ್ ಸೊತ್ತ್. ಐನ್ಮನೆನ ಅಡಿಪಾಯದ ಹೊರ ಬಾಗ ಎತ್ತರ ಆಗಿ, ಒಳಬಾಗಕೆ ಸೇರ್ದಂಗೆ ಚಾವಡಿಂದ ಒಳಾಂಕಣ ಕೆಳೆಗೆನೂ ಒಳಾಂಕಣದ ಜಗಲಿ ಇನ್ನೂ ಕೆಳೆಗೆ ಇದ್ದದೆ. ಇದರ ಒಟ್ಟುನ ರಚನೆ ಕಾಂಬಕೆ ತಾವರೆ ಹೂನ ಎಸಳ್‌ಗ ಒಂದರ್‌ದೊಂದ್ ಒಳಗೊಳೆಗೆ ಸಣ್ಣದಾಕಂಡೋವ ಆಕ್ರುತಿನ ಹೋಲ್ದೆ. ಚೌಕಾಕಾರಲಿ ಸುತ್ತುವರ್‌ದ ನಾಲ್ಕಂಕಣ ಐನ್ಮನೆನ ಈ ವಿಸೇಸ ರಚನೆನ ಒಳಮರ್ಮಲಿ 'ಸಮ್ರುದ್ದಿ ಕೂಡಿ ಬಂದದೆ' ತ ನಂಬಿಕೆನೂ ಉಟ್ಟು. ಒಳ ಅಂಕಣಲಿ ಬಿಳ್‌ವ ನೀರ್ ಈಸಾನ ದಿಕ್ಕ್‌ಗೆ ಹರಿವಂಗೆ ಮಾಡ್ಯಾಳ್‌ದ್, ಈ ಬಾಗಕ್ಕೆ ಮನೆ ಬಾಮಿ ಇರ್ದು. ಮನೆನ ಎದ್ರ್‌ದ ಬಾಗ್ಲ್‌ನ ಮೂಡಕೆ ಇಸುದು, ಐನ್ಮನೆನ ವಾಸ್ತು ವಿಸೇಸತೆ. ಸಾಮಾನ್ಯ ಮನೆಗಳ್‌ಲಿ ಅಡ್ಗೆಮನೆ ಆಗ್ನೇಯಲಿ ಇಸಿರೆ;. ಈ ಮನೆಲಿ ಮೂಡಗ್ನೇಯನ ಸರಿ ವಿರುದ್ದ ದಿಕ್ಕ್‌ನ ಪೊಡ್‌ವನ ವಾಯುವ್ಯಲಿ ಇಸುವೆ.

ಈ ಮನೆನ ಆಗ್ನೇಯ ಬಾಗಲಿ ದರ್ಮದೆವ್ವದ ಸ್ತಾನ ಇದ್ದದೆ. ಇದರ್‌ಂದ ಅಗ್ನಿ ಮತೆ ವಾಯು ನೊಡುಲಿ ಇರ್‌ವ ಒಳ್ಳ ಸಮ್ಮಂದನ ನೋಡಿಕಂಡ್ ವಾಯುವ್ಯಲಿ ಅಡುಗೆ ಕೋಣೆನ ಕಟ್ಟಿಯೊಳೊ. ದಕ್ಷಿಣ ದಿಕ್ಕ್‌ನ ಬುಟ್ಟ್ ಒಳ್ದ ಮೂರ್ ಕಡೆನೂ ಬಾಗ್‌ಲಿಗ ಇದ್ದದೆ. ಈ ಎಲ್ಲಾ ದ್ರಿಸ್ಟಿಲಿ ಐನ್ಮನೆನ ವಿನ್ಯಾಸ ಲೋಕ ದ್ರಿಸ್ಟಿನ ಗಣನೆಲಿ ಇಸಿಕಂಡ್ ರಚನೆ ಆಗುಟುಂತ ಹೇಳಕ್. (ಪಿ.ಕೆ.)

**ಸುತ್ತು ಪಡ್ಡಿರೆ ಮನೆ :** ಸುತ್ತುಪಡ್ಡಿರೆ ಮನೆ ಐನ್ಮನೆನ ಹಾಂಗೆ ಇರ್‌ದುಲೆ. ಇದ್ ಬೀಡು/ಗುತ್ತು ಮನೆಂತೇಳಿ ಕರ್‌ಸಿಕಂಡದೆ. ತುಳುನಾಡ್‌ನ ಸುತ್ತು ಪಡ್ಡಿರೆ ಮನೆಗ ನಿರ್‌ದಿಸ್ಟ ಸಮುದಾಯಕೆ ಮಾತ್ರ ತ ಏನು ಇಲ್ಲೆ. ಬಲ್ಲಾಳರ ಕಾಲಲಿ ಜೈನ, ವರ್‌ಮ, ಬ್ರಾಹ್ಮಣ ಬಲ್ಲಾಳರ ಸಂತತಿಯವುಕೆ ಈ ಮನೆಗ ಮಾತ್ರ ಆಗಿತ್ತ್. ಅವರ ಕಾಲ ಆದಮೇಲೆ, ಅವರ ಬೂ ಆಸ್ತಿಗೆ ಒಡೆಯರ್ ಆದ ಮೇಲೆ ಬೇರೆ ಜಾತಿ ಸಮುದಾಯದವ್‌ಕೆ ಈ ಮನೆಲಿ ಇರಿಕೆ ಸಾದ್ಯ ಆಗುಟು. ಪಡ್ಡಿರೆ ಮನೆಗನೂ ಮೂಲಲಿ ಅರಸರ ಅರಮನೆನ ಸರಳ ರೂಪನೆ ಆಗುಟು. ನಾಕ್ ಕಡೆಂದಲೂ ಬೇರೆ ಬೇರೆ ಕೋಂಬರೆಗ ಇದ್ದ್ ನೊಡುಲಿ ದೊಡ್ಡ ಜಾಲ್‌ನ ಇರ್‌ದು ಸುತ್ತು ಪಡ್ಡಿರೆ ಮನೆನ ಸಾಮಾನ್ಯ ಲಕ್ಷಣ. ಒಳ್ದಾಂಗೆ ಸುತ್ತು ಪಡ್ಡಿರೆ ಮನೆಗಳ್‌ಲಿ ವೆತ್ಯಾಸ ಇರ್‌ದು ಉಟ್ಟು.

ಮನೆಗೆ ಇರುವ ಮುಕ್ಯ ಇಲ್ಲರ್ಲ್ ದೊಡ್ಡ ಬಾಗ್‌ಲ್‌ನ ಪಡ್ಡಿರೆ ಬಾಗಿಲ್‌ಂತ ಕರ್ದವೆ. ಇದ್ ಒಳೆಗೆ ಹೊರೆಗೆ ಹೋಗಿ ಬಾಕೆ ಇರ್‌ವ ಮುಕ್ಯ ದ್ವಾರ ಅಗಿದ್ದದೆ. ಇದರ್‌ಂದನೇ ಸೀದಾ ಒಳೆಗೆನ ಜಾಲ್‌ಗೆ ಹೋಕೆ ಆದು. ಎಡಪುಡೆಲಿ ಜಗಲಿನ ಹತ್ತಿಕಣನೆ ಉಂಬಕೋಣೆ, ಇದರ ಹೊಂದಿಕಂಡಂಗೆ ಅಡ್‌ಗೆ ಮನೆ ಕರೆಲಿ ಜಗಲಿಂದಳೆ ಮಾಳಿಗೆಗೆ ಹತ್ತುಂವ ದಾರಿ ಇದ್ದದೆ. ಅಲ್ಲಿಂದ ಬಲಕ್ಕೆ ತಿರ್‌ಗಿರೆ ಕೋಣೆನ ನಡುಲಿ ತೆಂಕಕೆ ಹೊರ ಹೋವ ಬಾಗ್‌ಲ್ ಇದ್ದದೆ. ಕೋಣೆಗೆನೆ ಹೊಂದಿಕಂಡ್ ಮೂಡಕೆ ಮೋರೆಮಾಡಿ ಮನೆನ ದೊಡ್ಡ ಚಾವಡಿ ಇದ್ದದೆ.. ಈ ಚಾವಡಿ ಕರೆಲಿ ದೆವ್ವಗಳ ಬಂಡಾರ ಸಹಿತ ತೂಗು ಮಂಚಗ ಇದ್ದವೆ. ಇಜ್ಜಲ್‌ನ ಜಗಲಿಗೆ ತಾಂಗಿಕಂಡ್ ಅರ್‌ದ ಗೋಡೆ–ಅದ್ಕೆ ಮರದ ದಳಿನ ಕಿಟ್‌ಕೆಗ, ಇಜ್ಜಲ್‌ನ ಸುಮಾರ್ ಮೂರು ಅಡಿನಸ್ಟ್ ಎತ್ತರಲಿ ಚಾವಡಿಂದಳೆ ಮನೆನ ಸುರಾದೆ.

ಚಾವಡಿನ ಜಗಲಿ ಹತ್ತಿಕನ ಸುರುಗೆ 'ಚಾವಡಿ ಮೋಂಟಮೆ' (ಮೊಗಸಾಲೆ) ಇದ್ದದೆ. ಜಗಲಿ –ಚಾವಡಿ ನಡುಲಿ ಸುಮಾರ್ ಅರ್‌ದಂದ ಒಂದಡಿನಸ್ಟ್ ಎತ್ತರದ ಚಿಂಟೆ (ದಿಣ್ಣೆ), ಅದರ ಮೇಲೆ ಮರದ ಹಲಗೆನ ಹಾಸಿ, ಇದರ ಮೇಲೆ ದಪ್ಪದ ಬೋದಿಗೆ ಕಂಬಗ, ಇದೆಲ್ಲ ಕೆತ್ತನೆ ಕೆಲ್‌ಸಂದ ಕೂಡಿ ಗಮನ ಸೆಳೆವಂಗೆ ಇದ್ದವೆ. ಈ ಚಾವಡಿ ಸುತ್ತುಪಡ್ಡಿರೆ ಮನೆನ ಮುಕ್ಯ ಕಾರ್‌ಯಸ್ತಾನ. ಜಾತಿ ಮತೆ ವೆವಸ್ತೆನ ಒಳ್‌ಕಡೆನಾಂಗಿರ್‌ವ ಈ ಚಾವಡಿನ ಎಲ್ಲವೂ ಹತ್ತುವಾಂಗಿಲ್ಲೆ. ನ್ಯಾಯ ತೀರ್‌ಮಾನ ಈ ಚಾವಡಿಲಿ ದೆವ್ವದ ಹೆಸರ್‌ಲಿ ನಡ್ದದೆ ಚಾವಡಿಂದಳೂ ಮಾಳಿಗೆನ ಹತ್ತಿಕೆ ಮೆಟ್ಲ್‌ಗ ಇದ್ದ್, ಚಾವಡಿ ಮಾಳಿಗೆ ದೆವ್ವದ ಸಾನಿದ್ಯ– ಬಂಡಾರಗಳ್‌ಂದ ಕೂಡಿದ್ದದೆ.

**ಸುತ್ತುಪಡ್ಡಿರೆ ಮನೆನ ಸಾಮಾನ್ಯ ಗೆರೆ ಚಿತ್ರ :** ಚಾವಡಿನ ಕರೆಲಿ ಪಡುವಕೆ ಹೊರ ಬಾಗ್‌ಲ್ ಇದ್ದದೆ. ಮನೆನ ಬಡ್ಗಕೆ ಕ್ರಿಸಿ ಸಮ್ಮಂದ ಕೆಲ್ಸ ಕಾರ್‌ಯಕೆ ಇಸಿದ ಕೋಂಬರೆ ಇದ್ದವೆ. ಪಡ್ಡಿರೆ ಬಾಗ್ಲ್‌ನ ಬಲ ಬಾಗಲಿ ಇರ್‌ವ ಕೋಣೆ ಉಗ್ರಾಣ ಆಗಿದ್ದವೆ. ಇವುಕ್ಕೆಲ್ಲಾ ಒಳಗೆಂದಳೆ ಹೋಕೆ ಬಾಗ್‌ಲ್‌ಗ ಇದ್ದದೆ. ಇದ್‌ಕೆ ಜಗಲಿ ಇರ್‌ದುಲೆ. ಒಳಾಂಗಣನ ಒಂದ್ ಬಾಗಲಿ (ಈಶಾನ್ಯ) ಬಾಮಿ ಇದ್ದದೆ. ಮೀವ ಕೊಟೆಗೆ ಎಲ್ಲ ಇದ್ದದೆ. ದನಗಳ ಹಟ್ಟಿಗ ಒಳಾಂಗಣದ ಹೊರಬಾಗಲಿ ಇರ್‌ದು ಸಾಮಾನ್ಯ.

ಅವಿಬಜಿತ ದಕ್ಷಿಣಕನ್ನಡ ಜಿಲ್ಲೆಲಿ ಮಾತ್ರ ಕಾಂಬ ಈ ಸುತ್ತು ಪಡ್ಡಿರೆ ಮನೆಗ ಹಾಂಗೆ ಬಯಲು ಸೀಮೆನ ತೊಟ್ಟಿಮನೆನ ರಚನೆನೊಟ್ಟಿಗೆ ಒಕ್ಕಲಿಗ ಗೌಡರ ಐನ್ಮನೆಗಳ ಸೊರೂಪನ ಹೋಲ್‌ಸಿರೆ ಕೆಲ ಹೋಲಿಕೆಗ ಹಾಂಗೆ ವೆತ್ಯಾಸಗ ಕಂಡವೆ. ಗುತ್ತು, ಬೀಡು/ಬೂಡುಗತ ಅಡ್ಡ ಹೆಸ್ರ್‌ಂದನೂ ಕರ್‌ಸಿಕಂಬ ಈ ಸುತ್ತು ಪಡ್ಡಿರೆ ಮನೆಗ ಚಾರಿತ್ರಿಕ ನೆಲೆನ ರಾಜಕೀಯ ಮಹತ್ವನ ಇಸಿಕಂಡ್ ಗಮನ ಸೆಳ್ದವೆ. ಜಾತಿ ಹಿನ್ನೆಲೆಲಿ ಸುತ್ತು ಪಡ್ಡಿರೆ ಮನೆಗ ಬವ್‌ತೇಕ ಜೈನ, ಬಂಟರ್‌ಗಳ್‌ಲಿ ಕಾಣಕ್. ಬೇರೆವ್‌ಕೆ ಇದ್ ಇರ್‌ದು ಉಟ್ಟಾದರೂ ಅದ್ ಆಸ್ತಿ ವರ್‌ಗಾವಣೆಂದ ಬಂದದ್. ತುಳುನಾಡ್‌ನ ಆಳಿಕೆ ಮಾಡ್ದ ಸಾಮಂತ ಜೈನ, ವರ್‌ಮ ಬಂಟ, ಬ್ರಾಹ್ಮಣ ಬಲ್ಲಾಳರ ಕಾಲಂದಲೇ ಈ ಮನೆಗಗೆ ಸಾಮಾಜಿಕ, ದಾರ್‌ಮಿಕ ವೆವಸ್ತೆನ ಮೇಲೆನ ಹಿಡ್ತ ಬಂದುಟು. ಈ ದ್ರಿಸ್ಟಿಂದ ಸಾಮಾಜಿಕ–ದಾರ್‌ಮಿಕ– ಆಡಳಿತಾತ್ಮಕ ಅದಿಕಾರನ ಸ್ತಾನಮಾನ ಹೊಂದಿಕಂಡಂಗೆ ಈ ಗುತ್ತುನ ಸುತ್ತು ಪಡ್ಡಿರೆ ಮನೆಗ ಸಾಮಾನ್ಯ ಮನೆಂದ ಬಿನ್ನ ಆಗಿರ್‌ದು ಸಹಜ. ಈ ಮನೆಗಳ ಕಟ್ಟಿದ್ ಶ್ರೇಣಿಕೃತ ಸಮಾಜ ವೆವಸ್ತೆನ ತೋರ್‌ಸ್‌ವಾಂಗುಟ್ಟು. ಸುತ್ತಂಕಣನ ಸುತ್ತು ಪಡ್ಡಿರೆ




ಮನೆನ ಅಗಾಲದ ಚಾವಡಿ, ದಪ್ಪದ ಕೆತ್ತನೆ ಕಂಬಗ, ಉಯ್ಯಾಲೆಲಿ ದೆವ್ವನ ಬಂಡಾರ, ಮೊಗ, ಕಡ್ಸಲೆ ಇದೆಲ್ಲನು ಮನೆಗೊಂದ್ ಬವ್ಯತೆನ ತೋರ್‌ಸಿದೆ. ಅದಿಕಾರ ಶಾಹಿ ಸಕ್ತಿಗ ಆಗಿ ಈ ಮನೆಯವು ಮುಂದುವರ್‌ಯಕೆ ಬೇಕಾದೆ.

ಸುತ್ತು ಪಡ್ಪಿರೆ ಚಾವಡಿಲಿ ತೀರ್‌ಮಾನಕೆ ಬಾವ ವಾದ ಪ್ರತಿವಾದಗಳ ಈ ಮನೆನ ಯಜಮಾರ್ ದೆವ್ವದ ಪ್ರತಿನಿದಿ ನೆಲೆಗಟ್ಟಿಲಿ ಬಗೆಹರ್‌ಸತಿದ್ದೊ. ಈ ಹಿನ್ನೆಲೆಲಿ ಪಡ್ಪಿರೆ ಮನೆನ ಚಾವಡಿ ವಿನ್ಯಾಸಲಿ ಹಾಂಗೆ ಕ್ರಿಯಾತ್ಮಕ ನೆಲೆಲಿ ಗೌಡರ ಐನ್ಮನೆನ ಚಾವಡಿಗ ಸಮಾನ ಆದವೆ. ಬೇರೆ ವಿಸಯಲಿ ಬೇರೆನೇ ಆಗಿ ಕಂಡವೆ. ಸುತ್ತು ಪಡ್ಪಿರೆ ಮನೆಗ ಹೊಂದಿದ್ದ ಬೂ ಒಡೆತನ, ಒಕ್ಕಲುಗಳ ಪ್ರಮಾಣ ಐನ್ಮನೆಗಳಿಗೆ ಇತ್ಲೆ. (ಪಿ.ಕೆ.)

**ಜೆಲಪಾತಗ : ಅಬ್ಬಿ ಜೆಲಪಾತ :** ಮಡಿಕೇರಿಂದ 9 ಕಿಮೀ. ದೂರಲಿ, ಕಾಸಗಿ ಕಾಫಿ ಹಂಗೆ ಒಳ್ಳೆಮೆಣ್ಸ್ ತೋಟದ ನೆಡುಲಿ ಅಬ್ಬಿ ಜೆಲಪಾತ ಉಟ್ಟು. ಅಬ್ಬಿ ಜೆಲಪಾತಂದ ನೀರ್‌ಬೀಳ್ವ ಪೊರ್‌ಲುನ ಅದರ ಎದುರಿರ್‌ವ ತೂಗುಸೇತ್‌ವೆ ಮೇಲೆ ನಿತ್ತ್ ನೋಡಿಕಾದೆ. ಇದ್ ಮುಂದೆ ಹರ್‌ದ್ ಕಾವೇರಿ ನದಿನ ಸೇರ್‌ದೆ. (ಎಸ್.ಕೆ.)


ಅಬ್ಬಿ ಜೆಲಪಾತ

**ಇರುಪ್ಪು ಜೆಲಪಾತ :** ಕೊಡಗ್ ಹಂಗೆ ಕೇರಳ ರಾಜ್ಯದ ಗಡಿಬಾಗದ ಕುಟ್ಟತ ಹೇಳ್ವ ಪ್ರದೇಸಲಿ ಇರುಪ್ಪು ಜೆಲಪಾತ ಕಾಂಬಕೆ ಸಿಕ್ಕಿದೆ. ಇರುಪ್ಪು ಜಲಪಾತ ಕೊಡಗ್ ಜಿಲ್ಲೆನ ವಿರಾಜಪೇಟೆಂದ 48 ಕಿಮೀ. ದೂರಲಿಟ್ಟು. ನಾಗರಹೊಳೆನ ರಾಜೀವ್ ಗಾಂದಿ ನ್ಯಾಷನಲ್ ಪಾರ್ಕ್ ಹಕ್ಕಲೆನೆ ದುಮುಕಿ ಹರೆವ ಈ ಜೆಲಪಾತ ಮಳ್ಗಾಲಲಿ ಬಾರೀ ಪೊರ್‌ಲು ಇದ್ದದೆ. ಬ್ರಹ್ಮಗಿರಿ ಪರ್‌ವತ ಶ್ರೇಣಿಲಿ ಹುಟ್ಟ್‌ವ ಈ ಜೆಲದಾರೆ ಎರಡ್ ತಟ್ಟ್‌ಲಿ ಸುಮಾರ್ 170 ಅಡಿ ಎತ್ತರಂದ ಕೆಳೆಗೆ ದುಮ್ಮಿದೆ. ನೆಲ ಮುಟ್ಟಿದ ಮೇಲೆ ಲಕ್ಷ್ಮಣ ತೀರ್ತ ಹಳ್ಳ ಆಗಿ ಹರೆವ ಈ ಜೆಲಪಾತನ ಲಕ್ಷ್ಮಣ ನದಿತ ಕೂಡಾ ಕರ್‌ದವೆ. ಅಕೇರಿಗೆ ಇದ್ ಕಾವೇರಿ ಹಳ್ಳನ ಸೇರ್‌ದೆ. ಈ ಜಲಪಾತದ ಹಕ್ಕಲೆಂದ ಸುರುಮಾಡಿ ಕಾಡ್‌ನ ನೆಡುನ


ಇರುಪ್ಪು ಜೆಲಪಾತ

ಮಾರ್‌ಗ ಟ್ರೆಕ್ಕಿಂಗ್ ಪ್ರಿಯರ ಬ್ರಹ್ಮಗಿರಿನತ್ತ ಕರ್‌ದದೆ. ದಕ್ಷಿಣ ಕೊಡಗ್ ಜಿಲ್ಲೆಂದ ವಿರಾಜಪೇಟೆಗೆ ಹೋವ ಮಾರ್‌ಗಲಿ ಇರ್‌ವ ಈ ಜೆಲಪಾತನ ದಾರಿಲಿರ್‌ವ ರಾಮೇಶ್ವರ ದೇಸ್ತಾನ ಸಿವರಾತ್ರಿಲಿ ಬಕ್ತಾದಿಗಳ ಅದರತ್ತಕೆ ಸೆಳ್ದದೆ (ಎಸ್.ಕೆ.)

**ಮಲ್ಲಳ್ಳಿ ಜೆಲಪಾತ :** ಮಲ್ಲಳ್ಳಿ ಜೆಲಪಾತ ಮಡಿಕೇರಿ ಹಂಗೆ ಸೋಮಾರಪೇಟೆ ನೆಡುಲಿ ಉಟ್ಟು. ಮಡಿಕೇರಿಂದ 60 ಕಿಮೀ. ಮತ್ತೆ ಸೋಮಾರಪೇಟೆಂದ 20 ಕಿಮೀ. ದೂರಲಿಟ್ಟು ಈ ಜಲಪಾತ ಬಾರೀ ಪೊರ್‌ಲುನ ಜಾಗೆ. ಇದ್ ಪುಷ್ಪಗಿರಿ ಮಲೆಲಿ ಹುಟ್ಟಿ ಇಳಿವ ಕುಮಾರದಾರ ಹಳ್ಳದ ನೀರ್‌ಂದ ಆದಂತದ್. ಸದ್ಯ ಕೊಡಗ್‌ಲಿ ಪರವೂರುನ ಜೆನಂಗ ನೋಡಿಕೆ ಮನ್ಸ್‌ಮಾಡ್‌ವ ಜಾಗೆಲಿ ಇದುನು ಒಂದ್. (ಎಸ್.ಕೆ.)

**ಲೈನ್ನಚೆ ಜೆಲಪಾತ :** ಮಡಿಕೇರಿ ತಾಲ್ಲೂಕ್‌ಲಿ 20ಕು ಹೆಚ್ಚಿನ ಜೆಲಪಾತಗೊಲೊ. ಅದರ್‌ಲಿ ಒಂದ್ ಮಡಿಕೇರಿ ಹಕ್ಕಲೆನ ಸಂಪಾಜೆನ ಲೈನ್ನಚೆ ಜೆಲಪಾತ. ಇದ್ಕೆ ಅರೆಕಲ್ಲ್ ಜೆಲಪಾತ ತನು ಹೆಸರ್ ಉಟ್ಟು. ಸುಮಾರ್ ನೂರು ಅಡಿ ಎತ್ತರಂದ ಹಾಲ್‌ನ ನೊರೆನಂಗೆ ಬೀಳ್ವ ಈ ಜಲಪಾತನ ನೋಡ್ದೆ ಕಣ್ಣ್‌ಗೆ ತಂಪು. ದೊಡ್ಡ ಜೆಲಪಾತದ ಎಲ್ಲ ಲಕ್ಷಣಗ ಇದ್ಕೆ ಉಟ್ಟು. ದೂರಂದ ನೋಡದೇ ಬುಡಂದ ನೋಡಿಕೆ ಇಲ್ಲಿ ಅವ್ಕಾಸ ಉಟ್ಟು. ಇದರ ಪೊರ್‌ಲುನ ನೋಡಿಕೆ ಮಳ್ಗಾಲನೇ ಲಾಯ್ಕ್. ಡಿಸೆಂಬರ್ ಮುಟ್ಟ ಇದ್ ಅದರ ಪೊರ್‌ಲುನ ಕಳ್ಕಂಬೊದುಲೆ. ಅರೆಗಾಲಲಿ ನೀರ್ ಹರೆದು ಕಡಿಮೆಯಾದೆ. ಎಲೆಮರೆನ ಕಾಯಿನಂಗೆ ಇರ್‌ವ ಈ ಜೆಲಪಾತ ಇನ್ನೂ ಯಾದೆ ಜೆನರ ಆದುನಿಕ ಬೊದ್ಕ್‌ನ ಕೊಳ್ಕ್‌ಂದ ಹಾಳ್ ಆತ್ಲೆ. ಈ ಆಸ್‌ಪಾಸ್‌ಲಿ ಆನೆಗಳೂ ಓಡಾಡ್ವೆ. ಹೋಕನ ಚೂರು ಜಾಗ್ರತೆ ವಹಿಸೊಕಾದೆ. ನಡಿವ ದಾರಿಲಿ ಉಂಬುಳುನ ಕಾಟನೂ ಉಟ್ಟು.

ಇಲ್ಲಿಗೆ ಬಂದರೆ ಇದೊಂದೇ ಅಲ್ಲ; 5–6 ಕಿಮೀ ದೂರಲಿರ್‌ವ ಉಂಬಳೆ, ಕಲ್ಯಾಳ, ಉರುಳಿಗುಂಡಿ, ದಬ್ಬಡ್ಕ, ಕಾಂತಬೈಲ್ ಜೆಲಪಾತಗಳ ಪೊರ್‌ಲುನ ನೋಡಕ್. ಪುಣ್ಯ ಕ್ಷೇತ್ರ ಕುಕ್ಕೆ ಸುಬ್ರಹ್ಮಣ್ಯ

ಹಂಗೆ ಬಾಗಮಂಡ್ಲಕೆ ಇಲ್ಲಿಂದ 40 ಕಿಮೀ. ದೂರ. ಲೈನ್ಕಜೆ ಜೆಲಪಾತ ಕೊಡಗ್ ಜಿಲ್ಲೆನ ಮುಕ್ಯ ಪೇಟೆ ಮಡಿಕೇರಿಂದ 35 ಕಿಮೀ. ದೂರಲಿಟ್ಟು. ಮಡಿಕೇರಿ – ಸುಳ್ಯ ರಾಜ್ಯ ಹೆದ್ದಾರಿಲಿ ಹೋಕನ ಮಾರ್‌ಗ ನೆಡುಲಿ ಸಂಪಾಜೆತ ಸಣ್ಣ ಊರ್ ಸಿಕ್ಕಿದೆ. ಅಲ್ಲಿಂದ ಬಲಕ್ಕೆ ಅರೆಕಲ್ಲ್ ಮಾರ್‌ಗಲಿ 5 ಕಿಮೀ. ಹೋದರೆ ಲೈನ್ಕಜೆ ಕೃಷ್ಣ ಬಟ್ರ ಮನೆ ಸಿಕ್ಕಿದೆ. ಅವರ ತೋಟದೊಳಗೆ 1 ಕಿಮೀ ನಡ್ದರೆ ಎದುರೇ ಸಿಕ್ಕುದೆ ಬಾರಿ ಲಾಯ್ಕ್‌ನ ಲೈನ್ಕಜೆ ಜೆಲಪಾತ. ಮಂಗಳೂರ್‌ಂದ ಪುತ್ತೂರು – ಸುಳ್ಯ – ಸಂಪಾಜೆ ಮಾರ್‌ಗ ಆಗಿನೂ ಇಲ್ಲಿಗೆ ಬರಕ್. ಬಸ್ ಸೌಲಬ್ಯ ಆಗಾಗ ಉಟ್ಟು. ಬೆಂಗ್ಳೂರ್‌ಂದ ಸಂಪಾಜೆಗೆ 283 ಕಿಮೀ. ಮಂಗ್ಳೂರ್‌ಂದ 100 ಕಿಮೀ. (ಎಸ್.ಕೆ.)

**ಕಲ್ಯಾಳ ಜೆಲಪಾತ :** ಇದ್ ಮಡಿಕೇರಿ ತಾಲೂಕ್‌ನ ಸಂಪಾಜೆ ಗ್ರಾಮಲಿಟ್ಟು. ಒಂದ್ ಹಳ್ಳ ದೊಡ್ಡ ಕಲ್ಲ್‌ನ ಮೇಲೆ ಬೀಳ್ದರ್‌ಂದ ಈ ಜೆಲಪಾತಕೆ ಕಲ್ಯಾಳ ತ ಹೆಸ್ರ್ ಬಂದಿರೊಕು. ಆಕಾಸಮುಟ್ಟುವ ಮರಗಳ ನೆಡುನೆಡುವಲಿ ದೊಡ್ಡ ದೊಡ್ಡ ಬಂಡೆಕಲ್ಲ್‌ಗ ಇರ್‌ದು ಈ ಜಾಗೆನ ವಿಸೇಸ.

ಮಡಿಕೇರಿಂದ ಮಂಗಳೂರ್‌ಗೆ ಹೋವ ಹೆದ್ದಾರಿಲಿ ಸುಮಾರ್ 25 ಕಿಮೀ. ಹೋದಾಂಗೆ ಕೊಯನಾಡ್ ತ ಸಣ್ಣ ಊರ್ ಸಿಕ್ಕಿದೆ. ಇಲ್ಲಿಂದ ಎಡಕೆ ಬೆಟ್ಟದ ಕಡೆ ಹೋವ ಮಾರ್‌ಗಲಿ 5 ಕಿಮೀ. ನಡ್ದರೆ ಕಲ್ಯಾಳ ಜೆಲಪಾತ ಸಿಕ್ಕಿದೆ. ಬಂಡೆನ ಮೇಲೆ ಸುಮಾರ್ 200 ಅಡಿಗಳಸ್ಟ್ ಎತ್ತರಂದ ಪದರ ಪದರ ಆಗಿ ಇಳ್ದ್ ಬಾವ ಜೆಲದಾರೆನ ನೋಡುವ್ಕೆ ಕುಸಿಕೊಟ್ಟದೆ. ಮಳ್ಗಾಲಲಿ ಜೆಲಪಾತನ ತುಂಬಾ ಹಕ್ಕಲೆಂದ ನೋಡ್ದು ಸಾದ್ಯ ಇಲ್ಲೆ. ಅರ್‌ಗಾಲ ನೀರ್ ಹರೆದು ಕಡಿಮೆ ಆದೆ. ಜೆಲಪಾತದ ನೆತ್ತಿಯೇರಿದ್ ನಿತ್ತ್ ಕೆಳಗೆ ನೋಡ್ರೆ ಬೂಮಿ ಪಚ್ಚೆನ ಸೀರೆ ಉಟ್ಟಂಗೆ ಕಂಡದೆ. (ಎಸ್.ಕೆ.)

**ಉರುಳಿಗುಂಡಿ ಜೆಲಪಾತ :** ಇದ್ ಪ್ರಾಕೃತಿಕ ವಿಸೇಸತೆನ ಇಸಿಕಂಡಿರ್‌ವ ಪೊರ್‌ಲುನ ಜೆಲಪಾತ. ಪಚ್ಚೆ ಕಾಡ್ ನೆಡುಲಿ ಬಂಡೆಕಲ್ಲ್‌ಂದ ಹಾಲ್ನೊರೆನ ಹಾಂಗೆ ಬೀಳ್ವ ಈ ಜೆಲಪಾತ ಅದರ ಪೊರ್‌ಲುಂದ ನೋಡವರ ಮನ್ಸ್‌ನ ಸೆಳ್ದದೆ. ಎಂತಾ ಬೇಸಿಗೆಲೂ ಇಲ್ಲಿ ನೀರಿರ್‌ದು ಇದರ ವಿಸೇಸ.

ಜೆಲಪಾತದ ನೀರ್ ಹರ್‌ದ್ ಹೋವ ಜಾಗೆಲಿ ಸಣ್ಣ ಕೆರೆನ ಹಾಂಗೆ ಕಾಂಬ ನೀರ್‌ನ ಸೆಳ್ತ ಇರ್‌ವ ಒಂದ್ ಗುಂಡಿ ಉಟ್ಟು. ಈ ಗುಂಡಿನ ಚಾಳನ ಅಳ್ದವಿಲ್ಲೆ. ಇದರ್‌ಂದಾಗಿ ಈ ಜೆಲಪಾತಕೆ 'ಉರುಳಿ ಗುಂಡಿ' ಹೆಸ್ರ್ ಬಂದುಟು. (ಎಸ್.ಕೆ.)

**ಉಂಬಳೆ ಜೆಲಪಾತ :** ಮಡಿಕೇರಿ ತಾಲೂಕ್‌ನ ಚೆಂಬು ಗ್ರಾಮದ ಉಂಬಳೆಲಿ ಈ ಜೆಲಪಾತ ಉಟ್ಟು. ಮಡಿಕೇರಿಂದ ಮಂಗಳೂರ್‌ಗೆ ಹೋವ ಹೆದ್ದಾರಿಲಿ 28ಕಿಮೀ. ಹೋದಾಂಗೆ ಕಲ್ಲುಗುಂಡಿ ತ ಸಣ್ಣ ಊರು ಸಿಕ್ಕಿದೆ. ಇಲ್ಲಿಂದ 11ಕಿಮೀ. ದೂರಲಿ ಉಂಬಳೆ ಜೆಲಪಾತ ಉಟ್ಟು. ಸುಮಾರ್ ನೂರಾ ಹತ್ತ್ ಅಡಿ ಎತ್ತರಂದ, ದೊಡ್ಡ ಬಂಡೆನ ಮೇಲೆಗೆ ಜೋರಾಗಿ ಎರಡ್ ಕವಲಾಗಿ ಹಾಲ್ನೊರೆನಂಗೆ ಬೀಳ್ವ ಈ ಜೆಲಪಾತ ಬಾರಿ ಲಾಯ್ಕ್ ಉಟ್ಟು. ಆನೆಗ ಈ ಪರಿಸರಲಿ ಸಾಕಸ್ಟ್ ಒಳೊ. 12 ವರ್‌ಸಕೊಮ್ಮೆ ಅರ್‌ಲ್‌ವ ಕೆಲವೇ ಪ್ರದೇಶಗಳ್‌ಲಿ ಕಾಂಬಕೆ ಸಿಕ್ಕುವ ಅಪರೂಪದ ಕುರುಂಜಿ ಹೂನ ದೈಗ ಈ ಜಾಗೆಲಿ ಉಟ್ಟು. ಈ ಊರುಗೆ ಕರೆಂಟ್ ವೆವಸ್ತೆ ಇಲ್ಲೆ. ಗ್ರಾಮದವು ಜೆಲಪಾತದ ನೀರ್‌ಂದ ಕರೆಂಟ್ ಉತ್ಪಾದನೆ ಮಾಡ್ವೆ. ಈ ಜೆಲಪಾತದ ವಿಸೇಸತ ಹೇಳ್ರೆ ಎಪ್ರಿಲ್, ಮೇ ಲಿನೂ ನೀರ್ ಇದ್ದದೆ. (ಎಸ್.ಕೆ.)

**ತೆಂಗಿನಡಿ ಜೆಲಪಾತ :** ತೆಂಗಿನಡಿ ಜೆಲಪಾತ ಕೊಡ್‌ಗ್ ಜಿಲ್ಲೆನ ಬಡಗ್ ದಿಕ್ಕ್‌ಗೆ ಪೆರಾಜೆ ಗ್ರಾಮಲಿ ಈ ಜೆಲಪಾತ ಕಾಂಬಕೆ ಸಿಕ್ಕಿದೆ. ಇದರ ನಿಡ್ಯಮಲೆ ಜೆಲಪಾತ ಅಂತನೂ ಜೆನ ಕರ್ದವೆ, ಇದ್ ಮಡ್ಕೇರಿ ತಾಲೋಕುನ ಪೆರಾಜೆ ಮತ್ತೆ ಕರಿಕೆ ಗ್ರಾಮಗಳ ನೆಡುಲಿ



ತೆಂಗಿನಡಿ ಜೆಲಪಾತ

ಬಂದದೆ. ಪೆರಾಜೆ ಪೇಟೆಂದ ನಿಡ್ಯಮಲೆಗೆ ಹೋಗಿ ಅಲ್ಲಿಂದ ಕಾನಲಿ ನಡ್ಕಂಡ್ ಹೋಕನ ಸುಮಾರು 300 ಅಡಿ ಎತ್ತರಂದ ಪಾರೆಕಲ್ಲ್‌ಗಳ ನೆಡುಲಿ ಬೀಳುವ ಈ ಜೆಲಪಾತನ ನೋಡಿಕೆ ನೂರಾರ್ ಜೆನ ಚಾರಣ ಬಂದವೆ. (ಕೆ.ಜಿ.ಕೆ.)

**ದೇವರಗುಂಡಿ ಜೆಲಪಾತ :** ಕರ್ನಾಟಕದ ದಕ್ಷಿಣಕನ್ನಡ ಜಿಲ್ಲೆನ ಸುಳ್ಯ ತಾಲೂಕ್‌ನ ತೊಡಿಕಾನಲಿ ದೇವರಗುಂಡಿ ಜೆಲಪಾತ ಉಟ್ಟು. ಇದ್ 50 ಅಡಿ ಎತ್ತರಂದ ಬಿದ್ದದೆ. ಸುಳ್ಯಂದ ತೆಂಕಕೆ ಅರಂತೋಡು–ತೊಡಿಕಾನ–ಭಾಗಮಂಡಲ ಮಾರ್‌ಗಲಿ 18ಕಿಮೀ. ದೂರಲಿ ಉಟ್ಟು ದೇವರಗುಂಡಿ ಜೆಲಪಾತ. ಆದರು ಇಲ್ಲಿಗೆ ಹೋಕೆ ಸರಿಯಾದ ರೋಡು ಇಲ್ಲೆ. ತೊಡಿಕಾನದ ಮಲ್ಲಿಕಾರ್ಜುನ ದೇಸ್ತಾನ ವರೆಗೆ ಬಸ್ಸ್ ಸೌಕರ್ಯ ಇದ್ದರೂ ಮುಂದೆ ಮೊಣ್ಣುನ ಮಾರ್‌ಗಲಿ ಕಾಡ್‌ನ ನೆಡುಲಿ ಒಂದೂವರೆ ಕಿಮೀ. ನಡ್ದೇ ಹೋಕು. ಆಗ ಜೆಲಪಾತದ






ದೇವರಗುಂಡಿ ಜೆಲಪಾತ

ಜೋರುನ ಶಬ್ದ ನೀವ್ಗೆ ಜಲಪಾತದ ಸುಳಿವು ಕೊಟ್ಟದೆ. ಮಾರ್ಗ ಬುಟ್ಟು ಅಡ್ಕೆ ತೋಟಲಿ ಹನಿಸ್ ದೂರ ಹೋಕನ ಜೆಲಪಾತ ಕಂಡದೆ. ಡಿಸೆಂಬರ್ ಮುಟ್ಟ ನೀರ್ ಇದ್ದದೆ. ಮತ್ತೆ ನೀರ್‌ನ ಹರಿವು ಕಡಿಮೆ ಆದೆ. ಇಲ್ಲಿ ಮೀಯೊಕೆ ಇಳೆದೂ, ಜಾರುವ ಬಂಡೆಗಳ ಮೇಲೆ ನಡೆದು ಅಪಾಯಕಾರಿ. ಪ್ರವಾಸಿಗರ್ ಫೋಟೊ ತೆಗೆಕೆ ಹೋಗಿ ನೀರ್ ಪಾಲಾದ ದುರ್ಗಟನೆಗ ಸಮೇತ ಇಲ್ಲಿ ನಡ್ದುಟು. (ಎಸ್.ಕೆ.)

**ತೂಗು ಸೇತುವೆ :** ನದಿ ದಂಡೆಗಳ, ಹಳ್ಳಕೊಳ್ಳಗಳ ನೆಡುಲಿ ಅಡ್ಡಕೆ ಮಾಡ್ದ ಸೇತುವೆನ ತೂಗುಸೇತುವೆತ ಹೇಳ್ವೆ. ತೂಗುಸೇತುವೆ ಹಳ್ಳದ ಎರ್‌ಡೂ ಕಡೆನ ಹಳ್ಳಿಗಳ ಜೆನಗ ಸೇರ್‌ವ ಕೊಂಡಿ. ಮಾಮೂಲಾಗಿ ಇದರ ಹಳ್ಳಿನವು ಬೆದ್ರ್‌ಂದ ಮಾಡ್ವೆ. ಬೆದ್ರ್‌ನ ಸಿಗ್ದ್ ಅದರ ಒಂದಕ್ಕೊಂದ್ ನೆಯ್‌ದ್‌ಕಂಡ್ ಹೋದವೆ. ಅದರ ಎರ್‌ಡು ಕೊಡಿಗಳ ಮರಕೆ ಕಟ್ಟಿರೆ ತೂಗುಸೇತುವೆ ಆದೆ. ಅದ್ ಒಂದ್ ಮಳ್ಗಾಲ ಅಸ್ಟೆ ಬಾಳ್ತರ ಬಂದದೆ. ಈಗ ಬೆದ್ರ್ ನ ಬದಲ್‌ಗೆ ಕಬ್ಬಿಣ, ಸಿಮೆಂಟ್ ಬಳ್ಸಿ ಹೊಸ ತಂತ್ರಜ್ಞಾನದ ತುಂಬಾಕಾಲ ಬಾಳ್ತರ ಬಾವ ತೂಗುಸೇತುವೆನ ಮಾಡ್ವೆ. ಇಂತ ತೂಗುಸೇತುವೆನ ತಯಾರ್‌ಸುದರ್‌ಲಿ ಕರ್ನಾಟಕದ ದಕ್ಷಿಣಕನ್ನಡ ಜಿಲ್ಲೆನ ಸುಳ್ಯದ ಗಿರೀಶ್ ಬಾರದ್ವಾಜರ್‌ದ್ ದೇಸಲೆ ದೊಡ್ಡ ಹೆಸ್ರ್ ಮಾಡಿಯೊಲೊ. ಸುಳ್ಯಲಿ ಪಯಸ್ವಿನಿ ಹಳ್ಳಕೆ ಸುಮಾರ್ ಕಡೆ ತೂಗು ಸೇತುವೆಗ ಕಟ್ಯೊಲೊ. ಅದರ್‌ಲಿ ಆಲೆಟ್ಟಿ ಗ್ರಾಮದ ಅರಂಬೂರು, ದೊಡ್ಡೇರಿ, ಪಂಜಿಕಲ್ಲ್, ಪರ್‌ಪೆ ತೂಗ್ ಸೇತುವೆಗ ಜೆನೋಪಕಾರ ಆಗುಟು ಹಾಂಗೆ ನೋಡಿಕೆ ಪೊರ್‌ಲುನ ಉಟ್ಟು. (ಎಸ್.ಕೆ.)

**ಚಾಮಡ್ಕ ಜೆಲಪಾತ :** ದಕ್ಷಿಣಕನ್ನಡ ಜಿಲ್ಲೆನ ಸುಳ್ಯ ತಾಲೂಕ್‌ನ ಅಮರಮೂಡ್‌ನೂರು ಗ್ರಾಮದ ಕುಕ್ಕುಜಡ್ಕದ ಹಕ್ಕಲೆ ಚಾಮಡ್ಕ ಜಲಪಾತ ಉಟ್ಟು. ಇದ್ ಸುಳ್ಯಂದ 14 ಕಿಮಿ, ಬೆಳ್ಳಾರೆಂದ 12ಕಿ. ಮಿ., ಸುಬ್ರಹ್ಮಣ್ಯಂದ 35ಕಿಮೀ. ದೂರಲುಟ್ಟು. ಬಂಟಮಲೆಲಿ ಹುಟ್ಟುವ ಇದ್ ನೆರೆಕರೆ ಚೋಡಿಗಳೊಟ್ಟಿಗೆ ಸೇರಿಕಂಡ್ ನೀರ್‌ನ ಹರಿವು ಹೆಚ್ಚಿ ಮಾಡಿಕಂಡ್ ಬಂದ್ 'ಚಾರ್'(ತೊರೆ) ಆಗಿ ಚಾಮಡ್ಕ ತೇಳ್‌ವಲ್ಲಿ ಜೆಲಪಾತ ಆದೆ. ಮುಂದೆ ಹರ್‌ದ್ ಕಂದಡ್ಕದ ಕೂಟೇಲ್‌ಲಿ ಪಯಸ್ವಿನಿ ಹಳ್ಳನ ಸೇರ್‌ದೆ.

ಚಾಮಡ್ಕಲಿ ಸುಮಾರ್ 50 ಅಡಿ ಮೇಲೆಂದನೆ ಸಣ್ಣ ಸಣ್ಣ ಅಬ್ಬಿಗಳಂಗೆ ಹರ್‌ದ್ ಕಡೆಗೆ ಬಂಡೆಗಳೆಡೆಂದ ಅಗಲಲಿ ದುಮ್‌ಕಿ ಹಾಲ್ನೊರೆನಾಂಗೆ ಬೆಳ್ಳಂಗೆನು, ಜೋರ್ ಸದ್ದ್ ಮಾಡಿಕಂಡ್ ಜೆಲಪಾತನ ಸೃಷ್ಟಿ ಮಾಡ್‌ದೆ. ವರ್‌ಸ ಇಡಿ ನೀರಿದ್ದರೂ ಮಳ್ಗಾಲಲಿ ಹರಿವು ಹೆಚ್ಚಿ ಇದ್ದದೆ. ಜೆಲಪಾತದ ಬುಡಕೆ ಹೋಕರೆ ಕಾಲ್ ದಾರಿ ಬಾರಿ ಕಟಿಣ ಉಟ್ಟು. ಚೂರ್ ಕಾಲ್ ಜಾರಿರೂ, ಕಾಲ್ ತಪ್ಪಿರೂ ಗುಂಡಿಗೆ ಬೀಳ್‌ವ ಅಪಾಯ ಉಟ್ಟು. ಅಲ್ಲಿಗೆ ಹೋಗೊವ್‌ಕೆ ಕುಕ್ಕುಜಡ್ಕದವರೆಗೆ ಬಸ್ಸ್‌ನ ಸೌಲಬ್ಯ ಉಟ್ಟು. ಅಲ್ಲಿಂದ 2 ಕಿಮೀ ದೂರ ಬೇರೆ ಗಾಡಿಲಿ ಹೋಕಾದೆ. (ಪಿ.ಬಿ.)

**ಚಿಕ್ಲಿಹೊಳೆ ಜಲಾಸಯ (ಅಣೆಕಟ್ಟ್) :** ಕರ್ನಾಟಕದ ಕಾವೇರಿ ಜಲಾನಯನ ಪ್ರದೇಸಕ್ಕಾಗಿ ಹರಿವ ಚಿಕ್ಲಿಹೊಳೆ ಹಳ್ಳಕೆ ಅಡ್ಡಕೆ ಕಟ್ಟಿದ ಜಲಾಸಯ ಇದ್. ಈ ಅಣೆಕಟ್ಟ್ ಕರ್ನಾಟಕದ ಕೊಡ್‌ಗ್ ಜಿಲ್ಲೆನ ಮಡಿಕೇರಿ ಮತ್ತೆ ಕುಸಾಲನಗರ ನಡುಲಿ ಇರ್‌ವ ನಂಜರಾಯಪಟ್ಟಣ ಪಟ್ಟಣದ ಹಕ್ಕಲೆ ಉಟ್ಟು. ಅಣೆಕಟ್ಟ್‌ನ ಜಾಗೆನ ಪೊರ್‌ಲುನ ಬಾಗಂತ ಹೇಳಿರೆ ಅದ್ ದುಬಾರೆ. ಈ ಅಣೆಕಟ್ಟ್ 1985 ರ್‌ಂದ ಜೀವಂತ ಉಟ್ಟು. ಜಲಾಸಯನ ಹಕ್ಕಲೆನ ಹಳ್ಳಿಗಳಿಗೆ ನೀರು ಉಣ್ಸ್‌ವ ಉದ್ದೇಸಂದ ಕಟ್ಟಿಯೊಳೊ. 865 ಹೆಕ್ಟೇರ್ ಬೂಮಿಗೆ ನೀರ್ ನ ಬೇಡಿಕೆಗಳ ಪೂರೈಸಿಕೆ ಜಲಾಸಯನ ಬಳ್ಸಿಕಳ್‌ತಾ ಒಳ. 464.8 ಮೀಟರ್ ಉದ್ದ ಮತ್ತೆ 25. 3 ಮೀಟರ್ ಎತ್ತರ ಇರ್‌ವ ಅಣೆಕಟ್ಟ್‌ನ ಒಟ್ಟ್ ನೀರ್ ತುಂಬಿಸಿಕಂಬ ತಾಕತ್ 5.097 ಎಂಸಿಎಂ.



ಚಿಕ್ಲಿಹೊಳೆ ಜಲಾಸಯ

ಇದೊಂದ್ ಬಾರಿ ಪೊರ್‌ಲುನ ಪ್ರವಾಸಿ ಜಾಗೆ. ಜಲಾಸಯದ ಒಂದ್ ಕಡೆ ಸುತ್ತುವರ್‌ದ್ ಹಸ್‌ರ್ ಹುಲ್ಲುಗಾವಲ್ ಮತ್ತೆ ಇನ್ನೊಂದ್ ಕಡೆನ ಪಚ್ಚೆನ ಕಾಡ್‌ಗಳ್‌ಂದ ಈ ಜಾಗೆನ ಪ್ರಸಾಂತತೆಗೆ ಯಾದೇ ತೊಂದರೆ ಇಲ್ಲೆ. ಅಣೆಕಟ್ಟ್‌ನ ವಿಸೇಸ ಆಕಾರನೆ ನೋಡೊವ್ಕೆ ಒಳ್ಳ ಆಕರ್‌ಸಣೆ. ಅಣೆಕಟ್ಟ್ ರಚನೆ ಉರ್‌ಟಾಗಿದ್ದ್, ಅದರ ಒಳಹರಿವುನ ಹೆಚ್ಚಳದೊಟ್ಟಿಗೆ, ನೀರ್ ಬಾಗಿದ ರಚನೆ ಮೇಲೆ ಲಾಯ್ಕಲಿ ಉಕ್ಕಿ ಹರ್‌ದದೆ ಮತ್ತೆ ಪ್ರವಾಸಿಗರ್‌ಗೆ ಮನ್ಸ್‌ಗೆ ಬಾರಿ ಕುಸಿ ಕೊಟ್ಟದೆ. ದಿನ ಇಡೀ ಪ್ರವಾಸಕಾಗಿ ಊರ್ ಪರಊರವು ಹೆಚ್ಚಿಗೆ ಬೇಟಿ ಕೊಟ್ಟವೆ. ಅಣೆಕಟ್ಟ್‌ಂದ ಸೂರ್ಯಾಸ್ತನ ನೋಡ್‌ದು ಒಂದ್ ಒಳ್ಳ ಅನ್‌ಬವ. ಈ ಜಾಗೆಲಿ ಹೋಗಿಬರೊವ್ಕೆ ಯಾದೇ ತರದ ಸೌಲಬ್ಯ ಕೊಡ್‌ವ ಅಂಗಡಿಗ ಇಲ್ಲೆ. ಪ್ರವಾಸಿಗರ್ ವಿಶ್ರಾಂತಿ ದಿನ ಇಲ್ಲೆ ಅಣೆಕಟ್ಟ್‌ನ ಸುತ್ತಮುತ್ತ ಕೆಲವ್ ಗಂಟೆಗಳ ಕಾಲ ಕಳೆಕೆ ಬಾವ ಹಂಗಿದ್ದರೆ ಊಟ, ನೀರ್ ಮತ್ತೆ ತಿಂಡಿ ತಕಂಡ್ ಬರೊಕು. ಮಳೆಗಾಲ ಮತ್ತೆ ಚಳಿಗಾಲಲಿ (ಜೂನ್‌ನಿಂದ ಮಾರ್ಚ್) ಅಣೆಕಟ್ಟ್‌ನೋಡಿಕೆ ಒಳ್ಳ ಕಾಲ. ಆಗ ಅಲ್ಲಿನ ಹವಾಮಾನ ಲಾಯಿಕ್ ಇದ್ದದೆ. ಅಣೆಕಟ್ಟ್‌ಲಿ ನೀರ್‌ನ ಮಟ್ಟ ಸನು ಹೆಚ್ಚಾಗಿದ್ದದೆ ಮತ್ತೆ ನೋಡಿಕೆ ಲಾಯ್ಕ್‌ಲಿ ಕಂಡದೆ. (ಪಿ.ಡಿ.)

**ಜೀವನ್ ರಾಂ ಸುಳ್ಯ :** ಜೀವನ್ ರಾಂ ಸುಳ್ಯ, ಕರ್ನಾಟಕದ ಸೃಜನಶೀಲ ರಂಗನಿರ್ದೇಶಕರ್. ಇವ್ ದಕ್ಷಿಣ ಕನ್ನಡ ಜಿಲ್ಲೆನ ಸುಳ್ಯಲಿ 21.12.1969ರ್‌ಲಿ ಹುಟ್ಟಿದೊ. ಇವ್ ಎಸ್.ಎನ್. ಜಯರಾಮ ಸುಳ್ಯ ಮತ್ತೆ ವನಜಾಕ್ಷಿಯವರ ಮಙ್ಞ. ನೀನಾಸಂ ರಂಗ ಶಿಕ್ಷಣ ಕೇಂದ್ರದ ಪದವೀಧರ ಆಗಿದ್, ನೀನಾಸಂ ತಿರುಗಾಟಲಿ ನಟ ಆಗಿ ,ತಂಡದ ಸಂಚಾಲಕ ಆಗಿ ಗೈಮೆ ಮಾಡ್‌ದವು. ಬಾಲ್ಯಲಿ ಅಪ್ಪನೊಟ್ಟಿಗೆ ಯಕ್ಷಗಾನ ಪ್ರಪಂಚಲೆ ಬೆಳ್‌ದ ಇವು, ಯಕ್ಷಗಾನದ ಸುಮಾರ್ ಪಾತ್ರಗಳಿಗೆ ಜೀವ ತುಂಬಿದವ್. ಜಾನಪದ ರಂಗಭೂಮಿಲು ವಿಸೇಸ ಕಾಳಜಿಂದ ಇವ್ ಯಕ್ಷಗಾನ ಮತ್ತೆ ಜಾನಪದನ ತನ್ನ ರಂಗಪ್ರಯೋಗಲಿ ಸರಿ ಆಗಿ ಬಳ್‌ಸಿಕಂಡ್ ನಾಡ್‌ಲೆಲ್ಲ ಪ್ರದರ್ಸನ ಕೊಟ್ಟೊಳೊ. ಕರಾವಳಿನ ದೈವಾರಾಧನೆ, ತುಳು ಜನಪದ ಕೊಣ್ತ ಆದಂತ ಚೆನ್ನು ನಲಿಕೆ, ಕಂಗೀಲು, ಸಂಧಿ – ಪಾಡ್ದನಗಳ ಅಬ್ಯಾಸ ಮಾಡಿ ಇವ್ ಅದರ ತನ್ನ ನಾಟಕಗಳ್‌ಲಿ ಸೇರ್‌ಸಿಕಂಡೊಳೊ. ರಂಗವಿನ್ಯಾಸ, ಬೊಳ್ಪು ಸಂಯೋಜನೆ, ವಸ್ತ್ರವಿನ್ಯಾಸ, ಅಬಿನಯ, ಮಾತುಗಾರಿಕೆ, ರಂಗ ಪರಿಕರ, ಮುಕವಾಡ, ಸಂಗೀತ ಸಂಯೋಜನೆ, ಪ್ರಸಾದನ, ರಂಗ ಸಂಗಟನೆ. ಹೀಂಗೆ ರಂಗಬೂಮಿನ ಎಲ್ಲಾ ಬಗೆಲು ಪರಿಣತಿ ಪಡ್ದೊಳೊ. ಇವು ನಿರ್‌ದೇಸನ ಮಾಡ್‌ದ ನಾಟಕಗ ಮಹಾಮಾಯಿ(107ಪ್ರದರ್‌ಶನ ಕಂಡಿವೆ), ಮೃಚ್ಛಕಟಿಕ, ಸೂರ್ಯ ಶಿಕಾರಿ, ದೂತವಾಕ್ಯ(48 ಪ್ರ.) ಊರುಭಂಗ, ಪಂಜರಶಾಲೆ (105 ಪ್ರ.), ಭಾಸ ಭಾರತ (20ಪ್ರ.), ಢಾಣಾಡಂಗುರ (64 ಪ್ರ.), ಝುಂ ಝುಾಂ ಆನೆ (38 ಪ್ರ.), ಸಾಹೇಬರು ಬರುತ್ತಾರೆ, ದೇವವೃದ್ಧರು ಕಿರುನಾಟಕ (125 ಪ್ರ.), ಅಭಿವೃದ್ಧಿ, ಅಸುದ್ದೋ(ತುಳು), ಮಕ್ಕಳ ಮಾಯಾಲೋಕ (270 ಕ್ಕೂ ಹೆಚ್ಚು), ಅಗ್ನಿ ಮತ್ತು ಮಳೆ, ಏಕಾದಶಾನನ (68 ಪ್ರ.), ಅಲಾದೀನ ಮಾಂತ್ರಿಕ ದೀಪ(16 ಪ್ರ.), ಪುಷ್ಪರಾಣಿ(12 ಪ್ರ.), ಮಧ್ಯಮ ವ್ಯಾಯೋಗ (53 ಪ್ರ.), ದೂತ ಘಟೋತ್ಕಚ (50 ಪ್ರ.), ಅಂಧಯುಗ, ನಾಯಿಮರಿ ನಾಟಕ (24 ಪ್ರ.), ತಲೆದಂಡ, ಪಿಲಿಪತ್ತಿ ಗಡಸ್ – ತುಳು(486 ಪ್ರದರ್ಶನ), ಬರ್ಬರೀಕ (22 ಪ್ರ.), ಧಾಂ ಧೂಂ ಸುಂಟರಗಾಳಿ (172 ಪ್ರದರ್ಶನ), ಸಾಹೇಬರ್ ಬಂದವೆ(17 ಪ್ರ), ಅಮರಸುಳ್ಯ ಸ್ವಾತಂತ್ರ್ಯ ಹೋರಾಟ ಹಿಂಗೆ ಸುಮಾರ್ ನಿರ್‌ದೇಶನ ಮಾಡಿಯೊಳೊ.



ಜನಜಾಗೃತಿಗಾಗಿ ಕತೆ ಕಟ್ಟಿ, ನಿರ್ದೇಸನ ಮಾಡಿ, ಮುಕ್ಯ ಪಾತ್ರಲಿ ಅಬಿನಯ್‌ಸಿದ ಬೀದಿನಾಟಕ ಪ್ರದರ್ಶನಗಳ ಲೆಕ್ಕ ಒಟ್ಟು 3000ಕ್ಕೂ ಹೆಚ್ಚಿಗೆ ಉಟ್ಟು. ಕೊಡಗು, ದಕ್ಷಿಣ ಕನ್ನಡ ಮತ್ತೆ ಉಡುಪಿ ಜಿಲ್ಲೆಲಿರ್‌ವ ಜೇನುಕುರ್‌ಬರ್, ಕೊರಗರ್ ಹೀಂಗೆ ಬೇರೆ ಬೇರೆ ಬುಡಕಟ್ಟು ಜನಾಂಗದ ಸುಮಾರ್ 700 ರ್‌ಂದ ಹೆಚ್ಚಿಗೆ ಮಕ್ಕಳಿಗೆ 'ಚಿಣ್ಣರಮೇಳ' ರಂಗ ಶಿಬಿರನ ನಿರ್ದೇಶಿಸಿಯೊಳೊ. ಸುಳ್ಯಲಿ ಪರಿವಾರ ರಂಗಂತೇಳ್‌ವ ಸಂಸ್ಥೆನ ಹುಟ್ಟು ಹಾಕಿ 10 ವರ್ಸ ಸುಮಾರ್ ರಂಗ ಶಿಬಿರಗ, ನಾಟಕೋತ್ಸವ, ಸಾಹಿತ್ಯಿಕ ಕಾರ್ಯಕ್ರಮಗಳ ಕಟ್ಟಿದ ಇವು ಅದಾಗಿ ರಂಗಮನೆ ಸಾಂಸ್ಕೃತಿಕಕಲಾ ಕೇಂದ್ರ ತೇಳ್‌ವ ಸಂಸ್ತೆನ 2002ಲ್ಲಿ ಕಟ್ಟಿ, ಅವರ ಬೊದ್ಕ್‌ವ ಮನೆನನೆ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರ ಆಗಿ ಮಾಡ್‌ದ ಹೆಮ್ಮೆ ಮತ್ತೆ ಸಾವಿರಾರ್ ಸಹೃದಯೀ ಪ್ರೇಕ್ಷಕರ ಹುಟ್ಟು ಹಾಕಿಯೊಳೊ 'ರಂಗಮನೆ ಸಾಂಸ್ಕೃತಿಕ ಕಲಾಕೇಂದ್ರ' ಅಲ್ಲದೆ ಸುಳ್ಯದ 'ರಂಗಮನೆ ನಾಟಕ ಶಾಲೆ' ಮತ್ತೆ ಅವರ ಅಪ್ಪನ ಹೆಸರ್‌ಲಿ ಸುರ್‌ಮಾಡ್‌ದ 'ಸುಜನಾ ಯಕ್ಷಗಾನ ಅಧ್ಯಯನ ಕೇಂದ್ರ'ದ ಸ್ತಾಪಕರೂ ಆಗೊಳೊ. ರಂಗದಶಾವತಾರಿ, ರಂಗಮಾಂತ್ರಿಕ, ರಂಗಮಾಣಿಕ್ಯ, ಕಲಾಶ್ರೀ, ಬಾಲ ಸೇವಾರತ್ನ ಪುರಸ್ಕಾರ, ಸರಸ್ವತಿ ಪುರಸ್ಕಾರ, ಕರ್ನಾಟಕ ನಾಟಕ ಅಕಾಡೆಮಿ ಸಿ.ಜಿ.ಕೆ.ಪುರಸ್ಕಾರ, ಸುವರ್ಣ ರಂಗ ಸಮ್ಮಾನ್, ಕಾರ್ಕಳ ಸಾಹಿತ್ಯ ಸಂಘ ಸಮ್ಮಾನ, ಸೌರಭ ಪ್ರಶಸ್ತಿ, ಉಪಾಧ್ಯಾಯ ಸಮ್ಮಾನ್,ಕಲಾ ಸಿಂಧು ಪುರಸ್ಕಾರ, ಆಳ್ವಾಸ್ ಮಕ್ಕಳ ಸಿರಿ ಪ್ರಶಸ್ತಿ, ದ.ಕ.ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿ, ಸಾಧನಶ್ರೀ ಪ್ರಶಸ್ತಿ, ಅರೆಹೊಳೆ ರಂಗಭೂಮಿ ಪ್ರಶಸ್ತಿ, ಆರ್ಯಭಟ ಅಂತರ್ ರಾಷ್ಟ್ರೀಯ ಪ್ರಶಸ್ತಿ




ಸೇರ್‌ದಾಂಗೆ ಅವರ ಅತ್ಯುತ್ತಮ ನಿರ್ದೇಶನದ ಏಕಾಂಕ ಹಾಂಗೆ ಕಿರು ನಾಟಕಕೆ ವಿಶ್ವವಿದ್ಯಾಲಯ ಮಟ್ಟಲಿ ಮೇಲೆಂದ ಮೇಲೆ 11 ಸರ್‌ತಿ ರಾಷ್ಟೀಯ ರಂಗ ಪ್ರಶಸ್ತಿ ಸಿಕ್ಕಿಟು.

ಇವರ ವಿನ್ಯಾಸ ಮತ್ತೆ ನಿರ್ದೇಶನಲಿ ಕಟ್ಟಿದ ಮಂಗಳೂರು ವಿಶ್ವವಿದ್ಯಾಲಯದ 'ಯಕ್ಷಮಂಗಳ' ಯಕ್ಷಗಾನ ಮ್ಯೂಸಿಯಂ ಮತ್ತೆ ರಾಷ್ಟಕವಿ ಮಂಜೇಶ್ವರ ಗೋವಿಂದ ಪೈ ಸ್ಮಾರಕ ಕೇಂದ್ರದ 'ಯಕ್ಷದೇಗುಲ' ಮ್ಯೂಸಿಯಂಗ ಯಕ್ಷಗಾನದ ಅಧ್ಯಯನಕೆ ಲಾಯ್‌ಕ್‌ಲಿ ಹೇಳಿಮಾಡ್‌ಸಿದಂತ ಅಪರೂಪದ ವಸ್ತು ಸಂಗ್ರಹಾಲಯಂಗ. 2009ರ ಉಜಿರೆಲಿ ನಡ್‌ದ, ಧರ್ಮಾಧಿಕಾರಿ ವೀರೇಂದ್ರ ಹೆಗ್ಗಡೆ ಮತ್ತು ಡಾ। ಹೇಮಾವತಿ ಹೆಗ್ಗಡೆಯವರ ಪರಿಕಲ್ಪನೆನ ವಿಶ್ವ ತುಳು ಸಮ್ಮೇಳನದ ಮುಕ್ಯ ಆಕರ್ಸಣೆ ಆಗಿದ್ದೊ. ತುಳು ಗ್ರಾಮ'ದ ರಂಗ ನಿರ್ದೇಶಕರಾಗಿ ಕೆಲಸ ಮಾಡಿದ್ದೊ. ಕರ್ನಾಟಕ ನಾಟಕ ಅಕಾಡೆಮಿ ಸದಸ್ಯ ಆಗಿದ್, ಕರ್ನಾಟಕ ಜಾನಪದ ಜಾತ್ರೆನ ಜಿಲ್ಲಾ ಸಂಚಾಲಕ ಆಗಿದುನು ಸೇವೆ ಮಾಡಿಯೊಳೊ. 2022ರ್‌ಂದ ಕರ್ನಾಟಕ ಸರಕಾರದ ಯಕ್ಷ ರಂಗಾಯಣ ಕಾರ್ಕಳ ಇದರ ಸುರೂನ ನಿರ್ದೇಶಕ ಆಗಿದ್ ಅದಿಕಾರ ವಯಿಸಿಕಂಡ್ ಕೆಲ್‌ಸ ಮಾಡ್‌ತೊಳೊ.

**ಜೀವನಾವರ್ತನ ಆಚರಣೆಗ:** ವರ್‌ಸಲಿ ಹೇಂಗೆ ಅಕ್ಕಿಗೆ ಮುಕ್ಯತೆ ಅಟ್ಟೊ ಹಾಂಗೆನೆ ಜೀವನಲಿ ಜೆನಪದ ಜಗತ್ 'ಮೊದ್‌ವೆ'ಗೆ ಮುಕ್ಯ ಜಾಗೆ ಕೊಟ್ಟೊಳೊ. ಗಂಡ್–ಹೆಣ್ಣ್‌ನ ಸಮ್ಮಂದನ ಕಾನೂನುಬದ್ದ ಮಾಡಿ ವಂಸ ಬೆಳೆಕೆ ಅನ್ಕೂಲ ಮಾಡಿ ಕೊಡ್‌ವ ಪ್ರಕ್ರಿಯೆ ಮೊದ್‌ವೆನ ಮುಕಾಂತರ ನಡ್ದದೆ. ಇಲ್ಲಿ ಮಕ್ಕಳಿಗೆ ಸುರುನ ಊಟ ಸಿಕ್ಕಿದೆ, ಮತ್ತೆ ಮಕ್ಕಳ ಹೆರಿಕಾಗದ ಬಂಜೆ ಅತ್ಯಂತ ನಿಕೃಷ್ಟ ದರ್ಜೆಗೆ ಇಳ್ದದೆ. ಜೆನಾಂಗದ ಕುಟುಂಬ ವೆವಸ್ತೆ ಕೂಡಾ ಮೊದ್‌ವೆಗೆ ಕಾರಣ ಆಗಿ ಅಸ್ತಿತ್ವಕೆ ಬಂದದೆ. ಅದ್ 'ಕೂಡಿ ಉಂಬು' ವೆವಸ್ತೆನ ಹೇಳ್ದೆ. ಇಲ್ಲಿ 'ಕೂಡಿ ಉಂಬ ಕ್ರಮಕೆ ಮೊದ್‌ವೆನೆ ಆದಾರ ಸ್ತಂಬ ಆಗುಟು. ಈ ಕಾರಣಂದಾಗಿ 'ಕುಟುಂಬ' ಪದ ಸಮ್ಮಂದದ ಬಗ್ಗೆ ಮಾತ್ರ ಬಳ್ಸಿಕಂಡ್ ಬೆಳ್ದ್ ಬಂದಂತದ್ ಅಲ್ಲ. ಕುಟುಂಬಲಿ ಇಲ್ಲರೆ ಅದ್ಕೆ ಕಾರಣ ಆದ ಮೊದ್‌ವೆಲಿ ಮುಕ್ಯ ಆಕೆ ಬೊತ್ತುಂತ ಇರ್‌ದು ಅಣ್ಣ ಮತ್ತೆ ತಂಗೆನ ಮೊದ್‌ವೆಗೆ. ಹಾಂಗೆ 'ಒಂದೇ ಬೊಳಿನ ಒಳೆಗೆ ಮೊದ್ವೆ ಆಕಾಗದ್‌ಂತ ಹೇಳ್ದು. ಇಲ್ಲಿ ಬೊಳಿ ಇಳ್ದ್ ಬಾದು ಅಪ್ಪಂದನೋ ಅಮ್ಮಂದನೋ ತೇಳ್ದು ಆಸ್ತಿನ ಒಡೆತನಕೆ ಸಮ್ಮಂದಪಟ್ಟದೆ. ಕರಾವಳಿಲಿ ಅಯ್ಯಂದ ಬೊಳಿ ಇಳ್ದ್ ಬಂದ್, ಅಳಿಯ ಸಂತಾನನ ರೂಡಿಮಾಡಿಕಂಡ ಜೆನಾಂಗ ಒಳೊ ಸೋದರ ಮಾವನ ಆಸ್ತಿಗೆ ಅಳಿಯ ವಾರಸ್ದಾರ ಆಗಿರ್‌ದು ಈ ನಿಯಮದ ದೊಡ್ಡ ಲಕ್ಷಣ. ಇದರ ಅನುಸರ್‌ಸಿಕಂಡ್ ಅಯ್ಯನ ತಮ್ಮಂದರನೋ, ಅಯ್ಯನ ತಮ್ಮನ ಮಕ್ಕಳ ಗೂಡೆ ಮೊದ್‌ವೆ ಆಕ್. ಸೋದರ ಮಾವಂಗೆ ಈಗಾಗಲೇ ಮೊದ್‌ವೆ ಆಗಿದ್ದರೆ, ಅಂವ ತನ್ನ ಹಕ್ಕ್‌ನ ಮುಂದೆನ ತಲೆಮಾರ್‌ಗೆ ದಾಟ್ಸಿ ಗೂಡೆನ ಅಂವನ ಮನೆಗೆ ತಂದ್‌ಕಂಡದೆ. ಇಲ್ಲಿ ಹೆಣ್ಣ್ ತಾವ' ಮತ್ತೆ 'ಹೆಣ್ಣು ಕೊಡುವ' ಎರ್‌ಡ್ ಗುಂಪುಗಳ ಅವಶ್ಯಕತೆ ಇದ್ದದೆ. ಇದರ 'ಹೆಣ್ಣಿನ ಕಡೆ' ಮತ್ತೆ 'ಗಂಡಿನ ಕಡೆ' ತೇಳಿ ಹೇಳ್‌ವೆ. ಈ ಎರಡೂ 'ಕಡೆ'ಗಳ ಬಗ್ಗೆ ಜೆನಪದ ಜಗತ್ತ್ ಸುಮಾರ್ ಪೊದ್ಯಗಳ ಕಟ್ಟಿಕಂಡೊಳೊ.

'ಗಂಡ್‌ನ ಕಡೆ'ವು ಮತ್ತೆ 'ಹೆಣ್ಣ್‌ನ ಕಡೆ'ವು ಒಟ್ಟು ಸೇರಿಕೆ 'ದಲಾಳಿ' ಒಬ್ಬನ ಅಗತ್ಯ ಉಟ್ಟು. ಅಂವ ಎರಡೂ ಕಡೆನ ಜೆನಕೆ ಗೊತ್ತಿರಂವ ಆಗಿದ್ದದೆ. ಅಂವನ ಮುಂದಾಳ್ತನಲಿ ಮೂರ್‌ತನ ನಿಸ್ಚಯ ಮಾಡ್‌ವೆ. ಈ ಮುಹೂರ್‌ತ ನಿರಾರ ಆದುಸ ಮನೆನ 'ಜಗಲಿ'ಲಿ. ಜಗಲಿ ಒಳೆಗೆನು ಅಲ್ಲದ ಹೊರೆಗೆನು ಅಲ್ಲದ ನಡೂನ ಜಾಗೆ, ಅಂದರೆ ಕ್ರಮಕೆ ಸಂಸ್ಕೃತಿನ ಅಂತರಂಗ ಮತ್ತೆ ಬಹಿ ರಂಗನ ಸೇರ್‌ಸ್‌ವ ಜಾಗೆ ಅದ್. ಅಲ್ಲಿ ಮೊದ್‌ವೆ ನಿರ್‌ದಾರ ಆಗ್‌ವಂತದ್ದ್. ಮಲೆನಾಡ್ ಮತ್ತೆ ಕರಾವಳಿಲಿ ಜಗ್‌ಲಿ ಇಲ್ಲದೆ ಮನೆ ಕಟ್ಟುಲೆ. ಈ 'ಜಗಲಿ' ಕೂಡಾ ಜೆನಪದ ಕಾವ್ಯಕೆ ಪ್ರೇರಣೆನ ಆಗುಟು.

ಮೊದ್‌ವೆ ನಿರ್‌ದಾರ ಆದ ಮೇಲೆ, ಮೊದ್‌ವೆಗೆ ಹಿಂದೆನ ದಿನ ಮೊದು ಮಕ್ಕಳ ಮನೆಲಿ ಪ್ರತ್ಯೇಕ ಆದ ಕೆಲವ್ ಆಚರಣೆಗ ನಡ್ದದೆ ಈ ಆಚರಣೆಗಳೆಲ್ಲ ಅಡ್‌ಗೆ ಮನೆಲಿ ಹಾಕಿದ 'ಕನ್ನಿ ಕಂಬದ' ಅಡಿಲಿ ನಡ್ದದೆ. ಜೆನಪದ ಜಗತ್ತ್‌ಲಿ 'ಹುಗ್ಗೆ ಬೇಸುವ ಕೋಣೆ' ಇಡೀ ಮನೆನ ತನ್ನ ಹಿಡ್ತಲಿ ಇಸಿಕಂಡಿದ್ದದೆ. ಮೊದ್‌ವೆನ ಆಚರಣೆಗ ಇಲ್ಲೆ ನಡಿದರ್‌ಂದ ಜೀವನ ವೃತ್ತಲಿ ಮುಕ್ಯ ಆದ ಮೊದ್‌ವೆಗೂ, ವಾರ್‌ಸಿಕ ವೃತ್ತಲಿ ಮುಕ್ಯ ಆದ ಅಕ್ಕಿಗೂ ಸಮ್ಮಂದ ಬೆಳ್ದದೆ. ವಾಸ್ತವ ಬೊದ್ಕ್‌ನ ಈ ಗಟನೆನ ಸುಮಾರ್ ಪೊದ್ಯಗ ಮತ್ತೆ ಕಾವ್ಯಗ ಹಾಂಗೇ ಹೇಳ್ದೆ ಇಲ್ಲರೆ ಸಮರ್‌ತ್‌ಸಿಕಂಡದೆ.

ಮೊದುಮಜ್ಜ ಮತ್ತೆ ಮೊದುಮಗಳ್ ಮೊದ್‌ವೆನ ಹಿಂದೆನ ದಿನದಿಂದಳೆ ಸಾಮಾನ್ಯ ಜೀವನ ಕ್ರಮಂದ ದೂರ ಮಾಡ್‌ವೆ. ಅಂದರೆ ಅವು 'ಅ–ಸಾಮಾನ್ಯ'ರಾದವೆ. ಮೈಗೆ ಅರ್‌ಸಿನ ಉಜ್ಜಿದ ಮೇಲೆ 'ಹಸಿ ಮೈ'ಗ ಆಗಿದ್ ಪಲವಂತಿಕೆ ಗುಣನ ಒಗ್ಗೂಡ್ಸಿಕಂಡರೆ, ಗಂಟ್ಲ್‌ಗೆ ಮೂರ್‌ತದ ಮಣಿನ ಕಟ್ಟಿಸಿಕಂಡ್ ವಿಸೇಸ ಜೆನಗಾದವೆ. ಮೊದ್‌ವೆನ ದಿನದಂದ್ ಚೌರ ಮಾಡ್‌ಸಿ, ಮೀಸಿ, ಮೊಡಿ ಉಡ್‌ಸಿ, ಆರತಿ ಎತ್ತಿ, ಮುಂಡಾಸ್ ಕಟ್ಟಿ, ಪಟ್ಟಿ ಬಾಸಿಂಗ ಕಟ್ಟಿ – ಅವರ ಸಾಮಾನ್ಯ ಜೀವನ ಕ್ರಮಂದ ಬೇರೆನೆ ಮಾಡ್‌ವೆ.

ಮೊದ್‌ವೆನ ದಿನದಂದ್ ಮೊದುಮಕ್ಕಳ ಬೇರೆ ಮಾಡ್ದಾಂಗೆ ಕಾಲನ ನೋಡಿಕಂಡ್, ಮುಹೂರ್‌ತನ ನಿಗದಿ ಮಾಡ್‌ವೆ. ಈ ಮುಹೂರ್‌ತದ ಬಗ್ಗೆನು ಜೆನಪದ ಕಾವ್ಯಗ ಹೇಳ್‌ವೆ. ಕಡೆಗೆ 'ಜಾಗೆ'ನ ಪ್ರತ್ಯೇಕ ಮಾಡಿ 'ದಾರಾಮಂಟಪ'ನ ಕಟ್ಟುವೆ. ಇದೂ ಕೂಡಾ ಸುಮಾರ್ ಕಾವ್ಯಗಳ್‌ಲಿ ಸುರೂನ ಜಾಗೆ ಪಡ್ಕಂಡುಟು. ಇದರ ಸೇರ್‌ಸಿ ನೋಡ್ರೆ – ಮೊದ್‌ವೆಲಿ ಸಾಮಾನ್ಯ ಜೀವನ ಕ್ರಮಂದ ಬೇರೆ ಮಾಡದ ಜೆನ, ಕಾಲ ಮತ್ತೆ

ಜಾಗೆಗ ವಂಸೋದ್ದಾರದ ಸುರುನ ಕ್ರಮತ ಹೇಳಕ್. ಜೆನಪದಕಾವ್ಯದ ಉದ್ದಕೆ ಹಿಂಗೆ ಕೂಡಿಕಂಡ ಕಾಲ ಮತ್ತೆ ಜಾಗೆ ಬಗ್ಗೆ ಉಲ್ಲೇಕಂಗ ಒಳೊ.

ದಾರೆ ಆದ ಮೇಲೆ ಮೊದುಮಕ್ಕ ಹಿರಿಯರ ಕಾಲ್ ಮುಟ್ಟಿ ಕೈಮುಗ್ದ ಮೇಲೆ ಪ್ರತ್ಯೇಕ ಮಾಡ್ದ ವಾತಾವರಣಂದ ಹೊರೆಗೆ ಬಂದ್ ಸಾಮಾನ್ಯ ಜೀವನ ಕ್ರಮಲಿ ಸೇರಿ ಹೋದವೆ. ಮೊದ್‌ವೆನ ಹಿಂದೆನ ದಿನ ಮೊದುಮಕ್ಕಳ ಹಿರಿಯರ್ ಈಗಾಗಲೇ ಸತ್ತು ಹೋಗಿರುವ 16 ತಲೆಮಾರ್‌ಗಳ ನೆಂಪುಸಿಕಂಡ್ ಅವಕೆ ಅಗಲ್ ಇಕ್ಕುವೆ ಇದ್ಕೆ ಗುರುಕಾರ್‌ನೂರ್‌ಗೆ ಇಸುದು ತೇಳ್‌ವೆ. ಅಂದರೆ ತಾವು ಅದೇ 16 ತಲೆಮಾರ್‌ಗಳ ಪರಂಪರೆನವುತ ನೆನ್ಸಿಕಂಡವೆ.. ಈಗ ಅದೇ ಹಿರಿಯರ ಕಾಲ್ ಮುಟ್ಟಿ 'ಮೊರ್ಯಾದೆ' ಕೊಡುದರ್‌ಂದ ಹಳೆ 17 ತಲೆಮಾರ್‌ಗೆ ಗೌರವ ಕೊಟ್ಟವೆ ಇದರ ಒಟ್ಟಿಗೆ ತಂಗೆನ ಮಗಳ ತಂದ್‌ಕಣೆ ತೇಳಿ ಮಾತ್ ಕೊಡುದರ ಒಟ್ಟಿಗೆ–ತಾನೂ ಸೇರ್‌ದಂಗೆ 18 ತಲೆಮಾರ್‌ಗಳ ಮೌಲ್ಯನ 19ನೇ ತಲೆಮಾರ್‌ಗು ಹೊರ್‌ಸಿ ಬುಟ್ಟವೆ. ಕರಾವಳಿನ ಎಲ್ಲ ಜೆನಾಂಗಗಳ ಇತಿಯಾಸನೂ ಇದೇ ಆಗುಟು ಮತ್ತೆ ಇದೆ ನಡಿತೊಳದುನು. ಜೆನ ಪದ ಕಾವ್ಯಗಳ ತಾತ್ವಿಕತೆ ಇದರ ಬುಟ್ಟು ಹೊರಗೆ ಬಾತ್‌ಲೆ. ಅದ್ ಸಾದ್ಯನೂ ಇಲ್ಲೆ.

ಈ ಹಿಂದೆ ಹೇಳ್ದಾಂಗೆ ಜೀವನದ ಈ ಅಂಸ ನಮ್ಮ ಕಸುಬಾದ ಬೇಸಾಯ ಮತೆ ಅಕ್ಕಿ ನೊಟ್ಟಿಗೆ ದೊಡ್ಡ ಸಮ್ಮಂದ ಇಸಿಕಂಡುಟು. ಇದರ ಪ್ರತೇಕ ಮಾಡಿಕಾದುಲೆ. ಆಚರಣೆಲೆನೂ ಅವೆರಡಕ್ಕೂ ಒಳ್ಳ ಸಮ್ಮಂದ ಉಟ್ಟು. ಮೊದುಮಜ್ಜ ಚಪ್ಪರದಡಿಗೆ ಬರ್‌ತಿದ್ದಂಗೆ ಎತ್ತುವ ಐದ್ ಆರತಿಗಳ್‌ನ 'ಅಕ್ಕಿ ಆರತಿ' ತೇಳಿ ಹೇಳ್‌ವೆ. ಆಗ ಹೇಳ್‌ವ ಸೋಬಾನೆಗ ಕೂಡಾ 'ಅಕ್ಕಿ ಆರತಿ ಸೋಬಾನೆ' ತೇಳಿದೆ ಜೆನಪ್ರಿಯ ಆಗುಟು. ತಾಯಿ ಅಕ್ಕಿ, ಕಟ್ಟಿಮನೆ ಅಕ್ಕಿ, ಗ್ರಾಮ ಗವುಡನ ಅಕ್ಕಿ, ಬೂಮಿ ಅಕ್ಕಿ ಮತ್ತೆ ನೀರ್‌ನ ಅಕ್ಕಿ ಇವೇ ಆ ಐದ್ ಆರತಿಗ. ಇಲ್ಲಿ ಈ ಆರತಿಂದ ಸ್ತಾವರ ಮತ್ತೆ ಜಂಗಮ ಎರ್‌ಡಕೆ ಮೊರ್ಯಾದೆ ಕೊಟ್ಟೋಳೊ. ಮತ್ತೆ ಮೊದು ಮಜ್ಜನ ಕೌಟುಂಬಿಕ ಜಾಗೆಗೆ ಮಾರ್ಪಾಟ್ ಮಾಡಿಕೆ ಇವರೆಲ್ಲರ ಒಪ್ಪಿಗೆನ ಅಗತ್ಯನ ಕೂಡ ತಿಳ್ಸಿದೆ. ದಾರೆಗಾಕನಸ ಮೊದುಮಕ್ಕಳ ಅಕ್ಕಿನ ಮೇಲೆನೆ ನಿಲ್ಸುವೆ. ದಾರೆ ಆದ ಮೇಲೆ ಅಕ್ಕಿನೇ ಸೇಸೆಯಾಗಿ ಕಂಡವೆ. ಮೊಣಕಾಲ್‌ನ ಗಂಟ್, ಮೊಣ ಕೈ ಸಂದ್, ಮತ್ತೆ ಬುಜದ ಸಂದ್‌ಗಳಿಗೆ ಅಕ್ಕಿನ ತಾಂಗ್‌ಸಿ ಕಡೆಗೆ ನೆತ್ತಿನ ಮೇಲೆ ಅದರ ಚೆಲ್ಲುವೆ. ಕೆಲವ್ ಅಕ್ಕಿನ ಬಾಯಿಗೆ ತಿನ್ಸ್‌ವೆ. ಇಲ್ಲಿ ಬೊಟ್ಟೆ ಇಸುದರ ನೀಗ್ಸ್‌ವ ಅಕ್ಕಿನ ಅನಂತ ಶಕ್ತಿನ ನವದಂಪತಿಗಳಿಗೆ ದಾಟ್ಸ್‌ವ ಸಾಂಕೇತಿಕ ಕ್ರಿಯೆನ ಕಾಣಕ್.

ಮೊದ್‌ವೆನ ಹಿಂದಿನ ದಿನ ಮೊದೊಳಿಗೆನ ಸಿಂಗರ್‌ಸಿಕಾಕನ ಅದ್ ಉಟ್ಟ ಸೀರೆನ ಒಂದ್ ಕೊಡಿಗೆ ಒಂದ್ ಪುಂಡಿ ಅಕ್ಕಿನ ಕಟ್ಟುವೆ. ಇದರ 'ಮಡಿಲಕ್ಕಿ' ತೇಳುವೆ. ಗಂಡನ ಮನೆಗೆ ಹೋದ ಮೇಲೆ ಇದರ ಬೇಸಿ ಅದ್ ಗಂಡಂಗೆ ಬಡ್ಸೋಕಾದೆ. ಈ ಹೊತ್ತುಗೆ ಹಾಡುವ ಪದಗ 'ಮಡಿಲಕ್ಕಿ ಪದ'ಗ ತೇಳಿನೇ ಜೆನಪ್ರಿಯವಾಗಿಟು. ದಾರಾಮಂಟಪಕೆ ಸುತ್ತು ಬಾಕನನೂ ಅಕ್ಕಿನ ಮಂಟಪದ ಮೇಲೆಗೆ ಹಾಕುವೆ.

ಅಂದರೆ ವಾಸ್ತವಕೆ ಒಂದ್ ಅರ್ತಕೊಡಿಕಾಗಿ ಪ್ರತೇಕ ಆದ ಜೆನಗ, ಜಾಗೆ ಮತ್ತೆ ಕಾಲದ ಹೊತ್ತುಲಿ ಜೀವನಕೆ ಬೇಕಾದ ಅಕ್ಕಿ ಪ್ರದಾನ ಜಾಗೆನ ಒಳ್ಸಿಕಂಡುಟು. ಈ ಅರ್‌ತಲಿ ಸೋಬಾನೆಗ ಪೂರ ಪುರಾಣದ ಕತೆಗಳೆ ಆದರು ಅದ್ ಕಡೆಗೆ ಒಳ್ಳ ಅರ್‌ತ ಇರ್‌ದರ ಕಾಣಕ್. ಲೆಕ್ಕಲಿ ಎರಡ್ ಆಚರಣೆಗ ಸಾಮಾನ್ಯವಾಗಿ ನಡ್‌ದವೆ.

(1) ಬೂಮಿಕ್ಕುವ ಶಾಸ್ತ (2) ನಾಗೋಲಿ ಶಾಸ್ತ.

1. ಸುರೂದು ಬೂಮಿಗೆ ಗೌರವ ಸೂಚಿಸುವ ಆಚರಣೆ, ಎರಡನೆದರ್‌ಲಿ ಅರಸಿನದ ನೀರ್‌ಂದ ಚಂಡಿಯಾದ ಗೊಬ್ಬರ ಹೊತ್ತು ಹಾಕೋಕು. ಸಂತಾನ ಮತ್ತೆ ಆಹಾರ ಪೂರೈಕೆನ ಎರಡೂ ಅಂಸಗ ಈ ಆಚರಣೆಲಿ ಕಂಡ್ ಬಂದದೆ. ಹೆಣ್ಣ್ ಗರ್ಬಿಣಿಯಾಕನ ಮಾಡ್‌ವ 'ಹೂ ಮುಡ್ಸುವ ಹಬ್ಬ'ದ ಗೌಜಿನು ಈ ಜಾನಪದ ಜಗತ್ತ್‌ಲಿ ವಿಸೇಸ ಜಾಗೆನ ಪಡ್ದದೆ.

2 ಮದ್ಯಕಾಲೀನ ಕರ್ನಾಟಕದ ರಹಸ್ಯ ತಾಂತ್ರಿಕ ಪಂತಗ 'ಅಕ್ಕಿ' ಮತ್ತೆ 'ವಂಸಾಬಿವೃದ್ದಿ'ಗೆ ವಿಸೇಸ ಮಹತ್ವ ಕೊಟ್ಟುಟು. ಕರಾವಳಿನ ಜೆನಪದ ಜಗತ್ತ್‌ನ ಆಸಯನು ಮದ್ಯ ಕಾಲೀನ ಕರ್ನಾಟಕದ ರಹಸ್ಯ ತಾಂತ್ರಿಕ ಪಂತಗಳ ಆಸಯದ ನೊಡುಲಿ ಅಸ್ಟೇನ್ ಬಿನ್ನತೆ ಇಲ್ಲದ ಕಾರಣ ಪರಸ್ಪರ ಪ್ರಬಾವಕ್ಕೆ ಒಳಗಾಗಿಟು. ಸಿದ್ದ ವೇಸದ ಪೊದ್ಯಲಿ ಇದ್ ಲಾಯ್ಕ ಗೊತ್ತಾದೆ. ಹಾಂಗೆ ಇನ್ನಿತರ ಕೆಲವ್ ಪಾಡ್ದನಲಿನು ಇದ್ ಕಂಡ್ ಬಂದದೆ. ಜೋಗಿಗಳ ಕಾವ್ಯ ಪರಂಪರೆ ಅಂತೂ ತಾಂತ್ರಿಕ ಪಂತಗಳ ತಾತ್ವಿಕತೆನೇ ಆದರ್‌ಸಿಟು.

**ಹುಟ್ಟ್ :** ಕುಟುಂಬಕೊಬ್ಬ ಹೊಸ ಸದಸ್ಯನ ಕೊಡ್‌ವ ಹುಟ್ಟ್‌ನ ಕ್ರಮ ಎಲ್ಲರ ಸಂಸ್ಕೃತಿಲಿನು ಸುರುನ ಜಾಗೆ ಪಡ್ಕಂಡುಟು. ಹೆದ್ರಿಕೆ, ಕುತೂಹಲ, ಮತ್ತೆ ಜಾಕ್ರತೆಗ ಹುಟ್ಟುನ ವಾತಾವರಣನ ನಿಯಂತ್ರಿಸುವ ಸುರುನ ಅಂಸಗ ಆಗುಟು.

ಬೊಸುರಿಗೆ ತಿಂಗ ತುಂಬಿ, ಬೇನೆ ಕಾಣ್ಸಿಕಂಡ ಕೂಡ್‌ಲೆ ಅದರ ಮನೆನ ಜೆನರ್‌ಂದ ಪ್ರತ್ಯೇಕ ಮಾಡ್‌ವೆ. ಕಂಬಳಿಗಳ ಕಟ್ಟಿ,ಮೊಂದ್ರಿ ಅಡ್ಡ ಹಿಡ್‌ದ್, ಹೆರಿಗೆಗೆ ಪ್ರತ್ಯೇಕ ಜಾಗನ ಮಾಡ್‌ವೆ. ಹೆರಿಗೆ ಕೆಲಸಲಿ ಪಳಗಿರುವವರ್‌ನ ಕೂಡ್ಲೆ ಕರ್‌ಸುವೆ. ಮಣೆನ ಮೇಲೆ ಕುದ್ರ್‌ಸಿ ಬೊಸುರಿಗೆ ಸುಲಬಲಿ ಹೆರಿಗೆಯಾವಂಗೆ ಸೇರ್‌ದ ಹೆಣ್ಮಕ್ಕೆಲ್ಲ ಉಪಕಾರ ಮಾಡ್‌ವೆ. ಅಯ್ಯೆನ ಗರ್ಬಂದ ಹೊರಬಂದ ಕೂಸುನ ಹೊಕ್ಕುಳ ಬೊಳ್ಳಿನ ಸೂಲಗಿತ್ತಿ ತುಂಡು ಮಾಡ್‌ದೆ. ಕಂಚಿನ ಬಟ್ಟ್‌ಲ್‌ನ ಜೋರಾಗಿ ಬೊಟ್ಟಿ ಮನೆವೆಲ್ಲವ್ಕು ಕೂಸು ಹುಟ್ಟಿದ್ದರ ತಿಳ್ಸ್‌ವೆ. ಬಾಣಂತಿ ಮತ್ತೆ ಕೂಸುನ ಮೋರೆಗೆ ನೀರ್‌ನ ಸಿಡ್ಕ್‌ವೆ. ಒಂದ್ ಚೂರು ಒಳ್ಳೆ ಮೆಣ್ಸ್‌ನ ಕೂಸುನ ಬಾಯಿಗೆ ಕೊಟ್ಟವೆ.ಮೊಂದ್ರಿಲಿ ಹುಲ್ಲುನ ಸುಟ್ಟ್ ಕರಿಮಾಡಿ,




'ಅದರ ಕೂಸುನ ಹೊಕ್ಕುಳು ಬೊಳ್ಳಿಗೆ ತೆಳುಲಿ ಉಜ್ಜುವೆ. ಒಂದರ್‌ಂದ ಮೂರು ದಿನಗಳವರೆಗೆ : ಕೂಸು ಹುಟ್ಟಿ ಮೂರು ದಿನಗಳವರೆಗೆ ಕೂಸುನ ಕೊಯ್ಸಲೆಕ್ಕಿನ ತೌಡ್‌ಲಿ ತೊಳ್ದ್, ಬಿಸಿನೀರ್‌ಲಿ ಮೀಸುವೆ. ಬಾಣಂತಿನ ದಿನಕ್ಕೆರ್‌ಡ್ ಸರ್‌ತಿ ಬೆಚ್ಚ ನೀರ್‌ಲಿ ಮೀಸುವೆ.

**ಮೂರ್‌ನೆ ದಿನ :** ಮೂರ್‌ನೆ ದಿನ ಮನೆವರ್‌ಲಿ ಒಬ್ಬ ಮೊಡ್ಯಾಳನಲ್ಲಿಗೆ ಹೋಗಿ ಎರಡ್ ತುಂಡು ಬಿಳಿ ಬಟ್ಟೆನ ತರೋಕು. ಇದರ 'ದಸ್ಯತಾದು'. ದಳಿ ತಾದು ತೇಳುವೆ. ಈ ದಳ್ಯನ ಕೂಸಿನ ಮೈಮೇಲೆ ಹಾಕುವೆ. ಇನ್ನೊಂದರ ಬಾಣಂತಿನ ತಲೆಗೆ ಕಟ್ಟುವೆ. ಮುಂದೆ 40 ದಿನಗಳವರೆಗೆ 'ದಳ' ಬಾಣಂತಿನ ಮೈಮೇಲೆ ಇದ್ದದೆ. ಅಯ್ಯೆನ ಮೊಲೆ ಹಾಲ್‌ಲಿ 'ಓಮ(Compositae)ನ ಅರ್‌ದ್, ಕಷಾಯ ಮಾಡಿ ಕೂಸುಗೆ ಚಿಟ್ಕೆನಸ್ಟ್ ಕುಡ್ಸುವೆ. ಹಿಂಗೆ ಮೂರನೇ ದಿನ ಕೆಲವ್ ಕ್ರಮಂಗ ಇದ್ದದೆ.

**ಐದನೇ ದಿನದ ಅಮೆ ತೆಗೆದು :** ಮೊಡ್ಯಾಳಂಗೆ ಸುರುಗೆ ಹೇಳಿರ್‌ದರ್‌ಂದ ಮೊಡ್ಯಾಳ್ತಿ ಆ ದಿನದಂದ್ ಬಂದದೆ. ಆದಿನ ಮೊಡ್ಯಾಳ್ತಿ ಎಲ್ಲ ಕ್ರಮಗಳ ನಡ್ಸಿಕೊಟ್ಟದೆ.

ಮೊಡ್ಯಾಳ್ತಿ ಸುರುಗೆ ಜಗಲಿಲಿ ಒಂದ್ ಮಣೆ ಇಸಿ, ಅದರ ಮೇಲೆ ಕಂಚಿನ ಹರಿವಾಣ ಇಸಿ, ಹರಿವಾಣಕ್ಕೆ ಬೆಳ್ತೆಕಿ ಅಕ್ಕಿ ಮೇಲೆ ಕಾಯಿನ ಇಸಿ, ಅದರ ಮೇಲೆ ಐದ್ ಇಲ್ಲರೆ ಆರ್ ಅಡಿ ಉದ್ದದ ಒಂದ್ ನೂಲ್‌ನ ಇಸಿದೆ.

ಕರೆಲಿ ಎಳ್ಳೆಣ್ಣೆ ದೀಪ ಹೊತ್ತುಸಿ, ಅಯ್ಯೆ ಮತ್ತೆ ಕೂಸುನ ಕರ್‌ಸಿ, ಇನ್ನೊಂದು ಕರೆಲಿ ಕುದ್ದುರ್‌ಸುವೆ. ಸೇರ್‌ದವೆಲ್ಲ ಅಯ್ಯೆ ಮತ್ತೆ ಕೂಸುನ ನೋಡಿ ದೀಪಕ್ಕೆ ಕೈಮುಗ್‌ದ್, ಅಕ್ಕಿನ ಸೇಸೆ ಹಾಕಿ, ಉಡಿಗಿರೆ ತಂದಿದ್ದರೆ ಅದರ ಕೂಸುನ ಕೈಗೆ ಕೊಟ್ಟವೆ. ಕಡೆಗೆ ಮೊಡ್ಯಾಳ್ತಿ ಎದ್ದ್ ಬಂದ್, ಕಾಯಿನ ಮೇಲೆ ಇರ್‌ವ ಬಿಳಿ ನೂಲ್‌ನ ತೆಗ್‌ದ್ ಕೂಸುನ ಸೊಂಟಕ್ಕೆ ಕಟ್ಟಿದೆ. ಕೂಸುನ ಹಣೆಗೆ ಗಂದದ ಬೊಟ್ಟು ಹಾಕಿ, ಅಯ್ಯೆ ಮತ್ತೆ ಕೂಸುನ ಅಲ್ಲಿಂದ ಎದ್ರ್‌ಸ್‌ವೆ. 'ಅಮೆ' ತೆಗೆವ ಕೆಲಸ ಇಲ್ಲಿಗೆ ಮುಗ್‌ದದೆ. ಬೊಳ್ಪುಗೆನೆ ಇದ್ ನಡೆಯೋಕು. ಸೇರ್‌ದವೆಲ್ಲ ಸ್ವೀಂ ಊಟ ಮಾಡಿ ವಾಪಾಸ್ ಆದವೆ. ಅಮೆ' ಊಟಕ್ಕೆ ಮಾಸ ಅಡಿಗೆ ಬಳ್‌ಸುವ ಕ್ರಮ ಚಾಲ್ತಿಲುಟ್ಟು.

ಅಮೆನ ದಿನ ಕೂಸುನ ತೊಟ್ಟಿಲಿಗೆ ಹಾಕುವ ಕ್ರಮ ಇದ್ದದೆ. ತೊಟ್ಟಿಲ್‌ನ ತೊಳ್ದ್ ಅದ್ಕೆ ದೂಪ ಕೊಟ್ಟ್ ಮೂಡ ಪಡ್ಡಕೆ ಅದರ ಕಟ್ಟ್‌ವೆ. ಹಿರಿಯ ಮುತ್ತೈದೆ ಒಬ್ಬ ಕೂಸುನ ತಲೆ ಮೂಡಪಡ್ಡ ಇರ್‌ವಂಗೆ ಹಿಡ್ದ್, ತೊಟ್ಲ್‌ಲಿ ಮಲ್ಗ್‌ಸಿದೆ. ಹೆಸರಿಸ್‌ವ ಕ್ರಮ ಇದ್ದರೆ ಅದೂ ಇದೇ ದಿನ ನಡ್ದದೆ. ಸಾದಾರಣ ಆಗಿ ಕೂಸುನ ಅಜ್ಜೆನ ಹೆಸರ್‌ನೇ ಇಸಿ ನಿನ್ನ ಹೆಸ್ರ್... ಹಂಗೆ ಬಲಾ... ತೇಳುವೆ. ಎಲ್ಲವೂ ತೊಟಿಗಿಲ್‌ಗೆ ಕೈಮುಗ್‌ದು ವಾಪಾಸ್ ಹೋದವೆ. ಕೆಲ ಕಡೆ ಕೂಸು ಹುಟ್ಟಿದ 16ನೇ ದಿನಕೆ ತೊಟಿಗಿಲ್‌ಗೆ ಹಾಕಿ, ಹೆಸರಿಡುವ ಕ್ರಮ ಉಟ್ಟು. ಆ ದಿನ ಆದರೆ ಗಂಜಿನ ತುಪ್ಪಲಿ ಕಲ್ಸಿ, ಕೂಸುನ ಬಾಯಿಗೆ ಹಞ್ಞ ಕೊಟ್ಟವೆ. ಇದರ ಗಂಜಿಕೊಡ್ದು' ತೇಳಿ ಹೇಳ್‌ವೆ. ಇಲ್ಲೆಲ್ಲ ಹೆಣ್ಮಕ್ಕಳ್‌ದೆ ಪ್ರದಾನ ಪಾತ್ರ.

**ಕೂಸುನ ಚಾಕ್‌ರಿ :** ಕೊಯ್ಸಲಕ್ಕಿ ತೌಡ್‌ಲಿ ಕೂಸುನ ಮೀಸುದು ಸಾಮಾನ್ಯ ಕ್ರಮ. ಕೂಸು ಹುಟ್ಟಿದ ಮೂರು ದಿನದ ಮೇಲೆ ಕೆಂದಾಳೆನ ಕರ್‌ಕ್ ತಂದ್, ಚಂದನದ ಒಟ್ಟಿಗೆ ಲಾಯ್ಕ ಅರ್‌ದ್ ತೆಳಿನೊಟಿಗೆ ಸೇರ್‌ಸಿ, ಕೂಸುನ ಮೈಗೆ ಉಜ್ಜುವೆ. ಗಂಟೆ ಬುಟ್ಟು ಮೀಸುವೆ. ಇದರ್‌ಂದ ಕೂಸುನ ಆರೋಗ್ಯ ಒಳ್ಳತಾದೆ ಹೇಳಿ ಹೆಣ್ಮಕ್ಕ ಗ್ರೇಸುವೆ. ಕೂಸುಗೆ 10 ದಿನ ಆವವರೆಗೆ ಇದ್ ನಡ್ದದೆ. ಅಯ್ಯೆನ ಮೊಲೆ ಹಾಲ್ ಮಾತ್ರ ಕೂಸುನ ಹೊಟ್ಟೆಗೆ ಹೋದೆ. 11ನೇ ದಿನ ಕೂಸುನ ಮೈಗೆ ಎಣ್ಣೆ ಉಜ್ಜಿ, ಹಞ್ಞ ಹೊತ್ತುಬುಟ್ಟು ಮೀಸುವೆ. 16ನೇ ದಿನಕ್ಕಾಕನ ಕೂಸುನ ಹೊಕ್ಕುಳ ಬೊಳ್ಳಿ ಒಣ್ಗಿದೆ. ಬಟ್ಟೆನ ವೃತ್ತಾಕಾರಲಿ ಸುತ್ತಿ ಸುಂಪೆ ಮಾಡಿ ಕೂಸುನ ತಲೆ ಅಡಿಗೆ ಇಸುವೆ. ಇದರ್‌ಂದ ಕೂಸುನ ತಲೆ ಅಡ್ಡ ಬೀಳದೆ, ಸೊರ್‌ತ ನಿತ್ತ್, ತಲೆ ಗುಂಡನೆ ಬೆಳ್ದದೆ ತೇಳುವ


ಕೂಸುನ ಮೀಸುದು

ನಂಬಿಕೆ ಅವರ್‌ಲಿಟ್ಟು. ಕೂಸುನ 40ನೇ ದಿನಲಿ ತಿಮರೆ ಸೊಪ್ಪುನ ಸಣ್ಣ ಅರ್‌ದ್, ಕೂಸುಗೆ ಕುಡ್ಸುವೆ. ಇದರ್‌ಂದ ಕೂಸುಗೆ ಹೇಲಿಕೆ ಸರಾಗ ಆದೆ ತೇಳುವ ನಂಬಿಕೆ ಎಲ್ಲರ್‌ಲಿ ಉಟ್ಟು. ಕೂಸುನ ಸಣ್ಣ ಮಟ್ಟದ ಆರೋಗ್ಯದ ತೊಂದರೆಗಳಿಗೆ ತಾವೇ ತಯಾರ್‌ಸಿದ ಮೊದ್ದ್‌ನ ಕೊಟ್ಟವೆ. ಕೂಸುಗೆ ನೆಗಡಿ ಆದರೆ, ಕಟುಕ ರೋಹಿಣಿ ಬೇರ್‌ನ ತಂದ್ ಅಯ್ಯೆನ ಮೊಲೆ ಹಾಲ್‌ಲಿ ಲಾಯ್ಕ ಅರ್‌ದ್, ಕೂಸುನ ನೆತ್ತಿಗೆ ಹಾಕಿ, ಪಂಚೋಳಿ ಎಲೆನ ನೆತ್ತಿನ ಮುಚ್ಚುವೆ. ಕೂಸಿಗೆ ಸುಮಾರ್ ಮೂರ್ ವರ್‌ಸ ಆಗುವವರೆಗೆ ಬಾಳೆ ಹಣ್ಣ್‌ನ ತಿಂಬಕೆ ಕೊಡ್ದುಲೆ. ಕೂಸುನ ನಾಲಗೆಲಿ 'ಅಕ್ರ' ತುಂಬಿರೆ, ಕೂಸಿಗೆ 'ಕೊಳ್ಳಿಕೋರ' ಆದರೆ, ಪಿದಮಲೆ ಆದರೆ, ಹೆಂಗಸರ್ ತಾವೇ ತಯಾರ್‌ಸಿದ ಮೊದ್ದ್‌ಗಳ ಕೊಟ್ಟವೆ.

ಬಿಸ್‌ನೀರ್ ಕೊಟಗೆಲಿ ಮೀಸಿಕಂಡ್ ಬಾಕನ ಕೂಸುನ ಸೊರ್‌ತ ಅಡುಗೆ ಮನೆಗೆ ಕರ್‌ಕಂಡ್ ಹೋದವೆ. ಅಲ್ಲಿ ಒಂದೆರಡ್ ಉಪ್ಪು ಕಲ್ಲ್‌ನ ಕೆಂಡಕ್ಕೆ ಹಾಕಿ ಅದ್ ಸಿಡಿಯುವಂಗೆ ಮಾಡಿ, ಒಲೆ ಪುಡೆನ ಕರಿನ ಬೆರ್‌ಲ್‌ಲಿ ತೆಗ್‌ದ್ ಕೂಸುನ ಹಣೆಗೆ ಅಂಟ್‌ಸುವೆ. 'ನೋಡ್ಡವರ ಕಣ್

ಹೊಟ್ಟಾಗಲಿ' (ನೋಡಿದವರ ಕಣ್ಣು ಇಂಗಿ ಹೋಗಲಿ) ತೇಳಿಕಂಡ್ ತೊಟ್ಟಿಲ್‌ಲಿ ಮಲ್‌ಗಿಸುವೆ. ಸಣ್ಣ ಕೂಸುನ ಮನೆಂದ ಹೊರಗೆ ಎಲ್ಲಿಗೆ ಕರ್‌ಕಂಡ್ ಹೋದರೂ ಮನೆಗೆ ಬಂದಂಗೆ ಇದರ ನೆರವೇರ್‌ಸುವೆ. ಯಾಗೋಳು ಕತ್ತಲೆಗೆ ಕೂಸಿಗೆ ಗಂದ ದೂಪ ಕೊಡೋಕು. ನೆಕ್ಕಿ ಸೊಪ್ಪು, ಕಾಸರ್‌ಕನ ಮರದ ಸೊಪ್ಪು, ಬೆಳ್ಳುಳ್ಳಿ ಚೋಲಿ, ಸಾಸಿವೆ, ಗಂದದ ಮರದ ಹೊಡಿ ಅಲ್ಲರೆ ಚೂರುಗ, ದೂಪನ ಹೊಡಿ, ಇದರೆಲ್ಲದರ ಲಾಯ್ಕ ಒಣ್‌ಗಿಸಿ, ಹೊಡಿ ಮಾಡಿಟ್ಟ್, ಹಳ್ಳಾ ಹುಲಿ ತುಪ್ಪನ ಹಾಕಿ, ಕೆಂಡಕ್ಕೆ ಹಾಕಿರೆ, ಹೊಗೆ ಬಂದದೆ. ಹಳ್ಳಾ ಎಣ್ಣೆ ಸಿಂಪಡಿಸಿರೆ ಇನ್ನಸ್ಟ್ ಜಾಸ್ತಿ ಹೊಗೆ ಬಂದದೆ. ಈ ಹೊಗೆಲಿ ಕೂಸುನ ಒಂದ್ ಗಳ್‌ಗೆ ಹಿಡ್ದ್, ತೊಟ್ಲ್‌ಲಿ ಮಲ್ಗ್‌ಸಿರೆ ಅದಕ್ಕಂಟಿದ ಕೊಲೆ ಪಿಸಾಚಿಗ ಬುಟ್ಟು ಹೋದೆತೇಳಿ ಗೌಡ್ರರು ಗ್ರೇಸುವೆ. ಕೂಸು ಲಾಯ್ಕ ಮಲ್ಗಿರೆ ಗಂದದೂಪ ಕೊಟ್ಟದರ ಪಲ ತೇಳಿ ಹೇಳ್‌ವೆ.

ಕಾಡ್‌ಲಿ ಕುತ್ರಿ ತೇಳ್‌ವ ಪ್ರಾಣಿ ಇದ್ದದೆ. ಹೆಣ್ಣ್ ಕುತ್ರಿನ ಜೆನನಾಂಗನ 'ಉಳ್ಳಿ ತೇಳಿ ಕರೆದವೆ. ಅದರ ಬುಡಂದ ಕತ್ತ್‌ರ್‌ಸಿ, ಕೂಸುನ ತೊಟ್ಟಿಲಿಗೆ ಕಟ್ಟುವೆ. ಇದರ್‌ಂದ ಕೂಸು ರಕ್ಸಣೆಲಿದ್ದದೆ, ಬೂತ ಪ್ರೇತಗ ಕೂಸುನ ಮುಟ್ಟಿಕ್ಕಿಲ್ಲೆ ತೇಳಿ ಹೆಣ್ಮಕ್ಕ ಹೇಳ್‌ವೆ. ಜಿಗುಟು ವಾಸನೆ ಇರ್‌ವ 'ಕುತ್ರಿ ಉಳ್ಳಿ'ನ ಕೂಸುನ ಸೊಂಟಕ್ಕೂ ಕಟ್ಟುದುಟ್ಟು.

**ಕೂಸುನ ಕೆಬಿ ಒಟ್ಟೆ ಮಾಡುದು :** ಕೂಸುಗೆ ಮೂರು ವರ್‌ಸ ತುಂಬಿಕಾಕನ ಆಚಾರಿ (ಅಕ್ಕಸಾಲಿಗ)ನ ಮನೆಗೆ ಕರ್‌ಸಿ ಕೂಸುನ ಕೆಬಿ ತೂತು ಮಾಡ್‌ವೆ. ಗಣೇಶ ಚೌತಿನಂತ ಸುಬ ದಿನಲಿ ಅಲ್ಲರೆ ಸುಕ್ರವಾರದ ದಿನದಂದ್ ಈ ಕೆಲಸ ಮಾಡ್‌ವೆ. ಕೆಬಿ ಒಟ್ಟೆ ಮಾಡಿ ಇಸಿಕೆ ಚಿನ್ನ ಇರದಿದ್ದರೆ ತೊಳ್ಸಿ ದೈನ ಸಣ್ಣ ಕಡ್ಡಿನ ಒಟ್ಟೆಗೆ ಇಸಿ ಬುಟ್ಟವೆ. ಹೆಣ್ಣ್ ಕೂಸಾದರೆ ಮೂಕ್ ಕೂಡಾ ಕುತ್ತುವೆ. ಇತ್ತೀಚೆಗೆ ದೇಸ್ತಾನಕೆ ಹೋಗಿದೆ ಕೆಬಿ ಮೂಕ್ ಕುತ್ತ್‌ಸಿಕಂಬ ಸಂಪ್ರದಾಯ ಉಟ್ಟು.

**ಜಾತಕ :** ಗೌಡ್ರ್‌ಗ ಹೆಚ್ಚಾಗಿ ಕೂಸುಗೆ ಜಾತಕ ಮಾಡ್‌ಸುವೆ. ಕೂಸು ಹುಟ್ಟಿದ ವಾರ,ಗಳ್ಗೆನ ನೆಂಪುಲಿಸಿಕಂಡ್, ಕೂಸುನ ಅಪ್ಪ ಊರ್‌ಲಿ ಹೆಸ್‌ರಾದ ಜೋಯಿಸರ ಕಂಡವೆ. ಹಾಂಗೆ ಹೋಕನ ಜೋಯಿಸರ್‌ಗೆ ಕೊಡಿಕೆತೇಳಿ ತರ್‌ಕಾರಿ ಮತ್ತೆ ಬೇರೆ ಹಣ್ಣ್ ಹಂಪಲುಗಳ ತಕಂಡ್ ಹೋದೆ. ಜೋಯಿಸ ಜಾತಕ ಮಾಡಿ, ಜಾತಕ ಪ್ರಕಾರ ಬಾವ ಹೆಸರ್‌ನ ನೋಡಿ ಬರ್‌ದ್ ಕೊಟ್ಟದೆ. ಜಾತಕಲಿರ್‌ವ ಹೆಸ್‌ರ್ ಬಳ್ಸುದೆ ಹೆಚ್ಚ್.

ಮಕ್ಕಳ ಸಾಂಕುವಲ್ಲಿ ಅಜ್ಜಿಯಂದ್‌ರ್ ಹೆಚ್ಚಿನ ಆಸಕ್ತಿ ವಯಿಸುವೆ. ಅದರ್‌ಲೂ ಅಯ್ಯೆನ ಅಯ್ಯೆದೇ ಹೆಚ್ಚಿನ ಪಾಲ್. ಕೂಸುನ ಮೀಸುದು, ತಿನ್‌ಸುದು. ಗಂದ ದೂಪ ಕೊಡುವ ಕೆಲ್‌ಸನ ಅಜ್ಜಿಯೇ ಮಾಡ್ದೆ. ಕೂಸು ಬೆಳ್ದಾಂಗೆ ಅಯ್ಯೆನ ಮೊಲೆ ಹಾಲ್‌ನ ಕುಡಿಯದಂಗೆ ಮೊಲೆ ಮರೆಸಿಕೆ ಕೂಸುನ ಅಜ್ಜಿನ ಮನೆಗೆ ಕಳಿಸಿಬುಟ್ಟವೆ. ಕೆಲವ್ ಸರ್‌ತಿ ಕೈಂ ಇರ್‌ವ ಕಾಂಟೆಕಾಯಿ ಅಲ್ಲರೆ ರಕ್ತಬಾಳ್‌ನ ಅಯ್ಯೆನ ಮೊಲೆಗಳಿಗೆ ಉಜ್ಜುವೆ ಸುರುನ ಸರ್‌ತಿ ಕೂಸುನ ತಲೆಕೂದಲ್ ತೆಗೆಕನ ದೇವ್‌ರಿಗೆ ಕೈಮುಗ್ದು ಕೂದಲಿಗೆ ಕತ್ತರಿ ಹಾಕುವೆ.

ಮಕ್ಕಳಿಗೆ ಸಮ್ಮಂದಪಟ್ಟಂಗೆ ಸುಮಾರ್ ನಂಬಿಕೆಗ ಚಾಲ್ತಿಲಿ ಉಟ್ಟು. ಅಯ್ಯೆ ಕೂಸುಗೆ ಮೊಲೆ ಹಾಲ್ ಕುಡ್‌ಸಾಕನ ಯಾರೂ ಅಡ್ಡದಾಟಿಕಾಗದ್, ಒಟ್ಟೆ ಚಿಪ್ಪಿಲಿ (ಗೆರಟೆ) ಕೂಸುನ ಮೀಸೋಕು, ಮೀಸಿ ಆಕನ ಕಡೇಲಿ ಚಿಪ್ಪಿ ನೀರ್‌ಗೆ ಉಗ್‌ದ್, ಚೆಲ್ಲೋಕು. ತವರ್‌ಂದ ಕೂಸುನ ತನ್ನ ಮನೆಗೆ ಕರ್‌ಕಂಡ್ ಬಾಕನ ದಾರಿಲಿ ಕಲ್ಲ್ ಮತ್ತೆ ಮುಳ್ಳ್‌ನ ಇಸಿಕಂಡ್ ಬರೋಕು, ಇಂತವೆಲ್ಲ...

ಹುಟ್ಟಿದ ಕೂಡ್ಲೆ ಕೂಸು ತೀರಿಕಂಡರೆ, ಮುಂದೆನ ಹೆರಿಗೆಯಾದ ಕೂಡ್ಲೆ ಕೂಸುನ ಮೂಕು ಕುತ್ತಿರೆ ಅದ್ ಸಾಯ್ದುಲೆ. ಹುಟ್ಟಿದಾಂಗೆ ಅದ್ ಗಂಡ್ ಕೂಸಾಗಿದ್ದರೆ, ಕೂಸಿನ ನಾಲಗೆಗೆ ಹುಲಿತುಪ್ಪ ಮುಟ್ಟಿಸೋಕು. ಆಗ ಆತ ಮಹಾ ಗರ್‌ವಿಷ್ಟ ಆದೆ ತೇಳುವ ನಂಬಿಕೆನೂ ಎಲ್ಲ ಕಡೆ ಉಟ್ಟು.

**ಹೆತ್ತವಳ ಆರೈಕೆ :** ಇದರ 'ಬಾಣಂತಿ ಸಾಕಣೆ' ತೇಳಿನೂ ಕರ್‌ದವೆ. ಕೂಸುನ ಎಷ್ಟು ಎಚ್ಚರಂದ ನೋಡಿಕಂಡವೆನೋ ಅಷ್ಟೇ ಎಚ್ಚರಂದ ಬಾಣಂತಿನೂ ನೋಡಿಕಣಕಾದೆ. ಹೆತ್ತು ನಲ್ವತ್ತು ದಿನಗಳವರೆಗೆ ಇದ್ ನಡ್‌ದದೆ. ಹೆತ್ತಲ್ಲಿಂದ ನಲ್ವತ್ತನೇ ದಿನದವರೆಗೆ ಬಾಣಂತಿ ಯಾದೆ ಕಾರಣಕ್ಕೂ ತಣ್ಣೀರ್ ಕುಡಿವಂಗಿಲ್ಲೆ. ನಲ್ವತ್ತನೇ ದಿನ ಒನಲೆಯೊಂದರ (ಮೊರ) ಬಾಣಂತಿನ ತಲೆ ಮೇಲೆ ಇಸಿ, ಒಂದ್ ಚೊಂಬು ಬಿಸಿನೀರ್ ಹೊಯ್ದು ಮೇಲೆಂದ ಅದ್ ಮಾಮೂಲಿ ಹೆಂಗಸರಂಗೆ ಇರಕ್. ಈ ನಲ್ವತ್ತನೇ ದಿನ ಅದ್ ತನ್ನ ಮನೆಲಿ ಊಟ ಮಾಡಕ್ ಮತ್ತೆ ಬೇಕಾರೆ ಮಾಸದ ಅಡ್ಗೆ ಕೂಡ ತಿನಕ್.

ಬಾಣಂತಿ 5ನೇ ದಿನದಂದ್ ಅಂದರೆ, ಅಮೆನ ದಿನದಂದ್ ಅದ್ಕೆ ವಿಸೇಸ ಆಗಿದ್ ಮೀಸ್‌ವೆ. ಇದರ ಅಮೆ ಸುದ್ದ ತೇಳುವೆ. ಅದಾಗಿ 16ನೇ ದಿನ ಇನ್ನೊಮ್ಮೆ ಮೀಸ್‌ವೆ. ಅದರ 'ಕುರ್‌ಕು ಇಳುದು' ತೇಳ್‌ವೆ. 16ರ ಬೊಳ್ಪುಗೆ ಮೀದ್ ಹಿಂಬೊತು ನೀರೊಡಿಗೆ ಒಂದಸ್ಟ್ ತುಂಬೆ ಹೂನ ತೆಕಂಡ್ ಹೋಕು. ಆ ಹೂನ ಒಂದ್ ಕರೆಲಿ ಇಸಿ ಬೆಳ್ಗೆಗೆ ಅಕ್ಕಿ ಹಸೆಹಾಕಿ ಕೈ ಮುಗಿಯೋಕು. ಮತ್ತೆ ತಿರ್‌ಗಿ ನೋಡದೆ ತನ್ನ ಮನೆಗೆ ಬರೋಕು. ಆ ದಿನ ಹಿಂಬೊತು ಮೀಯಕೆ ಇಲ್ಲೆ. ಹಿಂಗೆ ಮಾಡ್ದರ್‌ಂದ ಬಿಸ್‌ನೀರ್ ಕೊಟಗೆ ಸುದ್ದ ಆದೆ ತೇಳ್‌ವ ನಂಬಿಕೆ ಉಟ್ಟು. ಅಂದರೆ ಬಾಣಂತಿ ಮೀವಲ್ಲಿ ಬೂತ ಪ್ರೇತ, ಕಾಲೆ ಇಂತದ್ ಇದ್ದ್, 'ಕುರ್‌ಕೆ ಇಸಿದ' ಮೇಲೆ ಅವೆಲ್ಲ ಅಲ್ಲಿಂದ ಹೋಗಿ ಬುಟ್ಟವೆ ತೇಳುವ ನಂಬಿಕೆ. ಈ 16ನೇ ದಿನದ ಮೇಲೆ ಮೀವ ಕೊಟಗೆಲಿ ಮೀಯಕ್.

16ನೇ ದಿನದ ಮೇಲೆ 40ನೇ ದಿನದವರೆಗೆ ದಿನೋಳು ಮೈಗೆ ಎಣ್ಣೆ ಹಾಕಂಡ್, ದಿನಕ್ಕೆರಡ್ ಸರ್‌ತಿ ಬಿಸಿನೀರ್‌ಲಿ ಮೀಸುವೆ. ಕಾಯೆಣ್ಣೆ ಅಲ್ಲರೆ ಬೈಲಮಂಗಲದ ಎಣ್ಣೆನ ಬಾಣಂತಿನ ಮೈಗೆ ತಿಕ್ಕುವೆ. 40ನೇ ದಿನ ಅದೂ ಮುಗ್‌ದದೆ. ಹಿಂಗೆ ಬಾಣಂತಿಗೆ ಒಟ್ಟ್ ಮೂರು ಸರ್‌ತಿ ಸುದ್ದ ಮಾಡ್‌ವೆ. 5ನೇ ದಿನಕ್ಕೆ, 16ನೇ ದಿನಕ್ಕೆ ಮತ್ತೆ 40ನೇ ದಿನಕ್ಕೆ. ಮತ್ತೆ ಅದ್ ಎಲ್ಲಿ ಬೇಕಾರು ಹೋಕ್.




**ಬಾಣಂತಿಯ ತಿನ್ಸ್‌ಗ : ಸುರುನ ಮೂರು ದಿನ :** ಹೆತ್ತಾಂಗೆ ಬಾಣಂತಿಗೆ ಗೇರು ಹಣ್ಣಿನ ಸರಾಯಿನ ಕುಡಿಯಕೆ ಕೊಡುದು ರೂಡಿ. ಇಲ್ಲರೆ ಕಾಳಜೀರಿಗೆ ಕಸಾಯನ ಕುಡಿಯಕೆ ಕೊಟ್ಟವೆ. ಮತ್ತೆ ಮೂರು ದಿನನೂ ಬೆಳ್ತಿಗೆ ಅಕ್ಕಿ ಹುಗ್ಗನ ದಿನಕ್ಕೆರಡ್ ಸರ್‌ತಿ ಉಂಬಕೆ ಕೊಟ್ಟವೆ.

**ನಾಕ್‌ನೆ ದಿನ :** ಹಾಗಲ ಸೊಪ್ಪುನ(ಕಹಿ ಹಾಗಲ) ರಸತೆಗ್‌ದು ಮೆಣ್‌ಸ್, ಕಾಳಜೀರಿಗೆ, ಅರ್‌ಸಿನ, ಒಳ್ಳೆಮೆಣ್ಸ್ ಹಾಕಿ ಚೆನ್ನಾಗಿ ಅರ್‌ದ್ ಕೊದ್ಸಿ, ಓಲೆ ಬೆಲ್ಲ ಸೇರ್‌ಸಿ ಚಿಪ್ಪಿ (ತೆಂಗಿನಕಾಯಿಯ ಕರಟ)ಲಿ ಕುಡಿಯಕೆ ಕೊಟ್ಟವೆ.

**ಐದನೇ ದಿನ ಅಮೆ :** ಆ ದಿನ ಬಾಣಂತಿಗೆ ಬೆಳ್ಳುಳ್ಳಿ ಗಂಜಿನ ಉಂಬಕೆ ಕೊಟ್ಟವೆ. ಕುಡಿಯಕಾದರೆ ಸುಂಡೆ ಸೊಪ್ಪುನ ಕಸಾಯನ ಕೊಟ್ಟವೆ. ಅಲ್ಲರೆ ಅತ್ತಿ ಮರದ ಕೆತ್ತೆ ಮತ್ತೆ ಓಡೋಣಿ ಮರದ ಕೆತ್ತೆನ ಗುದ್ದಿ ರಸತೆಗ್‌ದ್ ಅದಕ್ಕೆ ಓಮ, ಮೆಣ್ಣಗ, ಒಳ್ಳ ಮೆಣ್‌ಸ್, ಅರ್‌ಸಿನ, ಓಲೆ ಬೆಲ್ಲ ಹಾಕಿ ಅರ್‌ದ್ ಕೊದ್‌ಸಿ ಕೊಟ್ಟವೆ. ಇದು ಬಾರೀ ಕಂಯಿ ಇದ್ದದೆ ತೇಳಿ ಬಾಣಂತಿಗ ಹೇಳ್‌ವೆ.

ಆರನೇ ದಿನ : ಗಜ್ಜಿಗೆ ಗಿಡದ ಚಿಗ್‌ರ್‌ನ ಅರ್‌ದ್ ಕಸಾಯ ಮಾಡಿ ಕುಡಿಯಕೆ ಕೊಟ್ಟವೆ. ನೆಲಪಾದೆ ತೇಳ್‌ವ ದೈನ ಸೊಪ್ಪುನ ತಂದ್ ಕಸಾಯ ಮಾಡಿ ಕುಡ್ಸಿರೆ ಅಮಲೇರಿ ಬಾಣಂತಿ ಆರಾಮಾಗಿ ನಿದ್ದೆ ಮಾಡ್‌ದೆ. ಬಾಣಂತಿನ ಆಯಾಸ ಪರಿಹಾರಕ್ಕೆ ಇದೇ ಒಳ್ಳೆದ್ ತೇಳಿ ಹಿರಿಯ ಗೌಡ್‌ತಿಗ ಹೇಳ್‌ವೆ.

**ಬಾಣಂತಿಯ ಒಂಬತ್ತನೇ ದಿನ :** ಹೊಲುವೆ ಮರದ ಕೆತ್ತೆನ ತಂದ್ ರಸ ತೆಗ್ದವೆ. ಅದರ ಲಾಯ್ಕು ಕೊದ್‌ಸಿರೆ, ಆಗ ಬೆಣ್ಣೆನಂಗೆ ನೀರ್ ಪಸೆ ಸಿಕ್ಕಿದೆ. ಅದ್ಕೆ ಓಮ ಸೇರ್‌ಸಿ ಬಿಸಿ ನೀರ್‌ಲಿ ಅರ್‌ದ್ ಕೊದ್‌ಸಿ ಕಸಾಯ ಮಾಡಿ ಕುಡ್‌ಸುವೆ. ಹತ್ತನೇ ದಿನದಂದ್ ಓಮ, ಜೇನು ಸೇರ್‌ಸಿ ಕಲ್‌ಸಿ ತಿಂಬಕೆ ಕೊಟ್ಟವೆ. ಮುಂದೆ ದಿನಂಪ್ರತಿ ಇದರ ತಿನ್ನಕ್. ಹಿಂಗೆ ಒಟ್ಟು 40 ದಿನಲಿ ನಾಕ್ ಸೇರ್ ಓಮನ ಬಾಣಂತಿ ತಿಂದ್ ಮುಗ್ಸೋಕು. ಸುಮಾರ್ ಕಾಡ್ ದೈ ಮರ ಬಳ್ಳಿಗಳ ರಸನೂ ಕುಡಿಯೋಕು. ಬಾರೀ ಕಂಯಿ ಇರುವ ಈ ಕಸಾಯನ ಕುಡಿದು ತೇಳಿರೆ, 'ಇನ್ನೊಂದು ಕೂಸುನ ಹೆತ್ತಷ್ಟೇ ಕಸ್ಟ' ತೇಳಿ ಅವು ಹೇಳ್‌ವೆ.

ನಲ್ವತ್ತನೇ ದಿನದಂದ್ ಬಾಣಂತಿ ಬಿಡುಗಡೆ ಪಡ್ಕಂಡರೆನು ಅದ್ ಇನ್ನೂ ಸರ್ಗಲಿ ಗಟ್ಟಿ ಆಗಿರದ ಕಾರಣ, ಕೊತ್ತಂಬರಿ ಗಂಜಿ, ಪದೆಂಜಿ ಗಂಜಿ ಮತ್ತೆ ಸಾಸಿವೆ ಗಂಜಿನ ಮೂರು ಮೂರು ದಿನ ಕ್ರಮ ಪ್ರಕಾರಲಿ ಕೊಟ್ಟವೆ. ಇದರ್‌ಂದ ಬಾಣಂತಿನ ಮೈ ಬೇನೆ ಇಲ್ಲದಾದೆ.

ಇದೆಲ್ಲದರ ಚಾಚು ತಪ್ಪದೆ ಮಾಡಿಕೆ ತಿಳುವಳಿಕೆ ಇರ್‌ವ ಒಬ್ಬಳ ಮನೆಗೆ ಕರ್‌ಸಿಕಂಡವೆ. ಆ 'ಪೆದ್ದೋಳಿ ಸಾಂಕೊವು' ಅಲ್ಲೊ 'ಪೆದ್ದೊಳ್ತಿ ನೋಡಿಕಂಬವ್' ತೇಳಿ ಕರ್‌ದವೆ. ಬಾಣಂತಿನ ಪೂರ ಜೊವಾಬ್ದಾರಿ ಅದ್ಕಿದ್ದದೆ. ನಲ್ವತ್ತು ದಿನ ಅದ್ ಬಾಣಂತಿನ ಒಟ್ಟಿಗೆ ಇದ್ದದೆ. ಇದ್ಕಾಗಿ ಅದ್ಕೆ ಒಂದ್ ಸೀರೆ ಕಾಣಿಕೆಯಾಗಿ ಸಿಕ್ಕಿದೆ.

ಬಾಣಂತಿಗೆ ಸಮ್ಮಂದಪಟ್ಟಾಂಗೆ ಸುಮಾರ್ ನಂಬಿಕೆಗ ಉಟ್ಟು, ಅದರ್‌ಲಿ ಅತಿ ಮುಕ್ಯದ್ ಕಾಯರ ಮರಕ್ಕೆ ಸಮ್ಮಂದಪಟ್ಟದ್. ಬಾಣಂತಿ ಮೀವಲ್ಲಿ ಮಲ್ಗ್‌ವಲ್ಲಿ, ಕೂಸುನ ಹೆತ್ತ ಜಾಗಲಿ, ಕಾಯರ ಮರದ ಗೆಲ್ಲ್ ಇದ್ದೇ ಇರೋಕು. ಬಾಣಂತಿನ ಒಟ್ಟಿಗೆ ಇರಕಾದ ಇನ್ನೆರಡು ವಸ್ತುಗ ತೇಳಿರೆ ಮಾಯ್ಪುನಸೂಡಿ ಮತ್ತೆ ಪೀಚೆಕತ್ತಿ (ಅಮೆಕತ್ತಿ). ಇದಿದ್ದಲ್ಲಿ ಕೊಲೆ ಪೀಡೆಗ ಸುಳ್ದಾಡ್ದುದ್ಲೆ ತೇಳ್‌ವ ನಂಬಿಕೆ ಉಟ್ಟು. ಕಾಯರ ಮರಲಿ ಮುಳ್ಳುಗ ಇದ್ದ್, ಅದರ ಕಾಯಿ ಕೂಡಾ ತುಂಬಾ ಕಂಯಿಯಾಗಿದ್ದದೆ. ದನಂಗ ಈ ಕಾಯಿಗಳ ತಿಂದರೆ ಅದರ ಹಾಲ್ ಸನು ಕಂಯಿ ಆದೆ. ಹೀಂಗಾಗಿ ಕಾಯರ ಮರದ ಹಕ್ಕಲೆ ಯಾರ್ ಅಡ್ಡಾಡುದುಲೆ. ಗದ್ದೆಲಿ ನೇಜಿ ನೆಟ್ಟಾದ ಮೇಲೆ ಅಲ್ಲೊಂದ್ ಕಾಯರ ಗೆಲ್ಲು ಊರುವೆ.ಕೆಟ್ಟ ಸಕ್ತಿಗಳೆಲ್ಲ ದೂರ ಹೋಗಲಿ ತೇಳುದೆ ಇಲ್ಲಿನ ಸಾಂಕೇತಿಕ ಅರ್ತ. ಹೊಲ್‌ಸುನ ಗುಡ್ಸಿ ಹಾಕಲಿ ತೇಳುವ ಅರ್‌ತಲಿ ಮಾಯ್ಪುನಸೂಡಿ ಮತ್ತೆ ರಕ್ಷಣೆ ಕೊಡುವ ದ್ರಿಸ್ಟಿಲಿ ಪೀಚೆಕತ್ತಿ ಬಾಣಂತಿಯರ ಹಕ್ಕಲೆ ಇದ್ದದೆ. ಕೂಸುನ ಹೆತ್ತ್ ಮಲ್ಗಿದ ಹಸಿಮೈ ಹೆಂಗಸ್‌ನ ಹಕ್ಕಲೆ ಕೆಟ್ಟದ್ ಏನೂ ಸುಳಿಯದಿರಲಿ ತೇಳುವ ಉದ್ದೇಸಂದ ಇವೆಲ್ಲ ಇದ್ದವೆ. ಬಾಣಂತಿನ ಕೋಣೆಲಿ ಸುರುನ 16 ದಿನ ಹಗಲೂ ಇರ್‌ಲು ದೀಪ ಹೊತ್ತಿಕಂಡೆ ಇರೋಕು. ಬಾಣಂತಿ ಮಿವ ನೀರ್‌ಗೆ, ಅಲ್ಲರೆ ಅದರ ಬಟ್ಟೆಗಳ ಒಗಿವ ನೀರ್‌ಗೆ, ಮಾಪ್‌ಳೇ ದೈನ ಸೊಪ್ಪುಗಳ ಹಾಕುವೆ. ಇದ್ ಒಂದ್ ವಿದದ ಪೊರಿಮಳ ಕೊಟ್ಟದೆ. ಮೀದಾಂಗೆ ಬಾಣಂತಿನ ಸೊಂಟಕೆ 12 ಮೊಳದ ಸೀರೆನ ಬಿಗಿಯಾಗಿ ಸುತ್ತುವೆ. ಇದರ್‌ಂದ ಅವಳ ಹೊಟ್ಟೆ ಬಿಗ್‌ದ್, ಆರೋಗ್ಯ ಸುದಾರಿಸಿದೆ ತೇಳುವ ನಂಬಿಕೆ ಉಟ್ಟು. ನಲ್ವತ್ತು ದಿನಗಳ ಮೇಲೆ ಕೊಯ್ಸಲಕ್ಕಿನ ತೌಡ್‌ನ ಅದ್ ತಿಂದರೆ ಒಳ್ಳೆದ್‌ಂತ ಹೆಣ್ಮಕ್ಕ ಅದರ ತಿಂಬೊತ್ತಿದ್ದೊ. ಬಾಣಂತಿನ ನೋಡಿಕೆ ಬಂದವು 'ನಾವು ಹೋದವೆ' (ನಾವು ಹೋಗುತ್ತೇವೆ) ತೇಳಿ ಅವಳೊಟ್ಟಿಗೆ ಹೇಳಿ ಹೋಕಾಗದ್ 'ನಾವು ಬಂದವೆ' (ನಾವು ಬರುತ್ತೇವೆ) ತೇಳಿ ಹೋಕು ತೇಳುವ ನಂಬಿಕೆ ಉಟ್ಟು. (ಪಿ.ಬಿ.)

**ಬಾಣಂತಿ ಆರೈಕೆ :** ಬಾಣಂತಿ ಆರೈಕೆ ಕೂಸುನ ಆರೈಕೆನಸ್ಟೇ ಪ್ರಾಮುಕ್ಯತೆನ ಪಡ್‌ಕಂಡುಟ್ಟು. ಬಾಣಂತಿ ಆರೈಕೆ ನಲ್‌ವತ್ತ್ ದಿನಗಳ ಮುಟ್ಟ ಬಾರಿ ಎಚ್ಚರಿಕೆಂದ ನಡ್‌ದದೆ. ಹದ್‌ನಾರ್‌ದಿನ ಸೂತಕ ಇದ್ದದೆ. ಹೆರಿಗೆ ಆದಂಗೆ ಒಂದ್ ಚಮ್‌ಚ ಬೇವ್‌ನ ಎಣ್ಣೆನ ಕುಡ್‌ಸಿವೆ. ನಲ್‌ವತ್ತ್ ದಿನ ಅವುಳು ತಣ್ಣೀರ್ ಕುಡೆಕಾಗದ್. ಅವ್‌ಳ ಹಾಸಿಗೆ ಅಡಿಲಿ ಚೀಪೆ (ಹಿಡಿಸೂಡಿ) ಮತ್ತೆ ಕಬ್ಬಣದ ಕತ್ತಿನ ಇಸಿವೆ. ಕೋಂಬರೆಂದ ಹೊರೆಗೆ ಹೋಕಾಕನೆಲ್ಲ ಕತ್ತಿನ ಹಿಡ್‌ಕಂಡಿರೊಕು. ಹೆತ್ತ ಸುರೂನ ದಿನ ಕಾಳ್‌ಜೀರಿಗೆ ಮತ್ತೆ ನಂಜಿನ ಬೀಜೆನ ಅರ್‌ದ್ ರಸ ತೆಗ್‌ದ್ ಕುದ್‌ಸಿ ಕಬ್ಬಣ ಕಾಸಿ ಹಾಕಿಕುಡೆಕೆ ಕೊಟ್ಟವೆ. ಎರ್‌ಡನೆ ದಿನ ದೊಡ್‌ಪತ್ರೆ, ಹಗಲೆಸೊಪ್ಪು ರಸನ ಅರ್‌ದ್ ಕುದ್‌ಸಿ ಕುಡ್‌ಸಿವೆ. ಮಾರ್‌ನೆ ದಿನ ಬೀಟಿಮರದ ಕೆತ್ತೆ, ಹೊನ್ನೆ ಮರದ ಕೆತ್ತೆ, ಒಡಿಯಾಳ ಬೊಳ್ಳಿನ ಜಜ್ಜಿ

ರಸ ಕೊಟ್ಟವೆ. ನಾಕನೆ ದಿನ ಗೆಜ್ಜೆಗದ ಕೊಡಿನ ಕುದ್‌ಸಿ ರಸ ಕೊಟ್ಟವೆ. ಈ ಎಲ್ಲಾ ರಸಕ್ಕೂ ಕಾಳ್‌ಮೆಣ್‌ಸ್, ಓಮಕ್ಕಿ ಮತ್ತೆ ಬೆಳ್ಳುಳ್ಳಿ ತಪ್ಪದೆ ಹಾಕುವೆ. ಐದನೇ ದಿನ ಗಾಳಿಸೊಪ್ಪು, ನಿರ್‌ವೀಸ ಸೊಪ್ಪುನ ರಸ ಕುಡ್‌ಸಿವೆ. ಆರನೇ ದಿನ ಪಲ್‌ಚೊಪ್ಪಿಗೆ (ಪಲ್ಲಿಸೊಪ್ಪುನ) ಹಸಿ ಅರ್‌ಸಿನ ಹಾಕಿ ಅರ್‌ದ್ ರಸ ತೆಗ್‌ದ್ ಕೊಟ್ಟವೆ. ಮತ್ತೆ ಪಲ್ಲಿಸೊಪ್ಪುನ ಮೀಸಿಕೆ ಮೊದ್‌ಲ್ ಬಾಣಂತಿನ ಮೈಗೆ ಉಜ್ಜುವೆ. ಬಾಣಂತಿನ ದಿನಕ್ಕೆರ್‌ಡ್ ಸರ್‌ತಿ ತಲೆಗೂ, ಸರ್ರಕ್ಕೂ ಬಿಸಿ ತೆಂಗ್‌ನ ಎಣ್ಣೆನ ಉಜ್ಜಿ ಬಿಸಿನೀರ್‌ಂದ ಮೀಸುವೆ. ಒಮ್ಮೆ ಬಾಣಂತಿನ ಮೀಸಿಕೆ ಸರಾಸರಿ ಇಪ್ಪತ್ತೆಟ್ ಬಿಂದಿಗೆ ನೀರ್ ಬೇಕ್. ಬಿಸಿ ಬಿಸಿ ನೀರ್‌ಂದ ಮೀಸಿದ ಮೇಲೆ ಗಂದ, ದೂಪದ ಹೊಗೆ ಹಾಕುವೆ. ದ್ರಿಸ್ಟಿ ತೆಗ್‌ದವೆ.

ಹೆತ್ತ ಐದನೇ ದಿನ 'ಅಮೆ' ತೆಗ್‌ದವೆ. ಅಂದ್ ಬೆಳ್ಳುಳ್ಳಿ ಗಂಜಿನ ತಿಂಬಕೆ ಕೊಟ್ಟವೆ. ನಲ್‌ವತ್ತ್ ದಿನಗಳವರೆಗೆ ಆರೈಕೆ ಮಾಡಿ ನಲವತ್ತನೆ ದಿನ ಹರಿವ ನದಿ ಇಲ್ಲೆ ಬಾಮಿ ಹಕ್ಕಲೆ ಗಂಗೆ ಪೂಜೆ ಮಾಡ್‌ಸ್‌ವೆ.

**ಕೂಸ್‌ಗೆ ಹೆಸರಿಸುದು :** ಕೂಸ್ ಹುಟ್ಟಿದ ಹದ್‌ನಾರ್ ದಿನ ಸೂತಕ ಇದ್ದದೆ. ಆ ಹೊತ್ತುಲಿ ದೇಸ್ತಾನ,ದೆವ್ವ ಸ್ತಾನಗಳ್‌ಗೆ ಹೋಕೆ ಬೊತ್ತುಂತ ಇದ್ದದೆ. ಕೂಸು ಹುಟ್ಟಿದ ಐದನೆ ದಿನ ಮೊಡ್ಯಾಳ್ತಿ ಕೂಸುನ ಮೀಸಿ 'ಅಮೆ'ತೇಳುವ ಸುದ್ದಿ ಕ್ರಿಯೆನ ಮಾಡ್‌ದೆ. ಹದ್‌ನಾರ್‌ನೆ ದಿನ ಕೂಸುಗೆ



ಕೂಸ್‌ಗೆ ಹೆಸರಿಸುದು

ಹುಗ್ಗೆ ಕೊಡುವ ಸಾಸ್ತ್‌ರ ಮಾಡ್‌ವೆ. ಅಂದ್ ದೂಪದ ಗಂದದ ಹೊಗೆನ ತೊಟಿಗಿಲ್‌ಗೆ ಹಾಕಿವೆ. ಬೊಳ್ಪುಗೆ ಗುರುಕಾರ್‌ನೂರ್‌ಗೆ ಎಡೆ ಹಾಕುವೆ, ತೊಟಿಗಿಲ್‌ನ ನೆಲಕ್ಕೆ ಅಡಿಲಿ ಇಸಿ ಹೂಮಾಲೆಗಳ್‌ಂದ ಅಲಂಕರ್‌ಸ್‌ವೆ. ಕೂಸುನ ತೊಟಿಗಿಲ್‌ಗೆ ಮೊಲ್‌ಗಿಸಿಕೆ ಮುಂದೆ ಕೂಸುನು, ಕೂಸುನ ಅವ್ವನೂ ಮೀದ್ ಸುದ್ದ ಆದವೆ. ಮನೆನ ಯಜಮಾನಿ ಅಜ್ಜಿ ಇಲ್ಲೆ ಹಿರಿಯ ಮುತ್ತೈದೆ ಹೆಂಗ್‌ಸ್ ಕೂಸುನ ಮಟ್ಟೆಲಿ ಮೊಲ್‌ಗಿಸಿಕಂಡ್ ನೆಲ್ಲಕ್ಕಿ ಅಡಿಲಿ ಕುದ್ದವೆ.ಹುಗ್ಗೆನ ಹಾಲ್‌ಲಿ ಅರ್‌ದ್ ಒಂದ್ ಮೊಣ್ಣ್ ನ ಚಟ್ಟೆಲಿ ಇಸಿದ್ದವೆ ಅಜ್ಜಿ ಕೂಸ್‌ನ ಬಾಯಿಗೆ ಹುಗ್ಗೆ ಕೊಟ್ಟ್ 'ಹುಗ್ಗೆ ಉಂಡ್, ಹುಗ್ಗೆ ಬೇರುಂಡು ನೂರ್‌ವರ್‌ಸ ಬಾಳ್‌ತ ಹರ್‌ಸ್‌ವೆ. ಇದಾದ ಮೇಲೆ ಎಲ್ಲೊವು ಹುಗ್ಗೆ ಕೊಡ್‌ವ ಸಾಸ್ತ್‌ರ ಮಾಡ್‌ವೆ. ಕೂಸುನ ತೊಟಿಗಿಲ್‌ಲಿ ಮೊಲ್‌ಗಿಸಿಕೆ ಮುಂದೆ ಗುಂಡು ಕಲ್ಲ್ ನ ಮತ್ತೆ ಪುಸ್ತಕನ ಇಸಿ ತೂಗಿ ಮತ್ತೆ ಅದರ ತೆಗ್ದ್ ಕೂಸುನ ತೊಟಿಗಿಲ್‌ನ ತೂಗಿ ಜೋಗುಳ ಹಾಡುವೆ. ಜೋಯಿಸರ್ ಕೂಸುನ ನಕ್ಷತ್ರ ಪ್ರಕಾರ ಹೇಳ್‌ದ ಹೆಸ್‌ರ್‌ನ ಕೂಸುನ ಕಿಬಿಲಿ ಮೂರ್ ಸರ್‌ತಿ ಮೆಲ್ಲಂಗೆ ಹೇಳ್‌ವೆ. ಕೂಸುನ ತೊಟಿಗಿಲ್‌ನ ಮೂಡ ದಿಕ್ಕ್‌ಗೆ ತಲೆ ಮಾಡಿ ಮಲ್‌ಗಿಸುವೆ. ಸೇರ್‌ದ ಹೆಣ್ಮಕ ಜೋಗುಳ ಹೇಳ್‌ವೆ.

ಸಾದಾರಣ ಆಗಿ ಮೂರ್ ತಿಂಗ ಅವ್ವ ಕೂಸು ಇಬ್ಬೊರು ತೊವುರು ಮನೆಲಿ ಇದ್ದವೆ. ಮತ್ತೆ ಜೋಯಿಸರ್‌ಂದ ಒಳ್ಳ ದಿನನ ಗೊತ್ತ್ ಮಾಡಿಸಿಕಂಡ್ ಗಂಡನ ಮನೆವು ಬಂದ್ ಅವ್ವ ಕೂಸುನ ಕರ್‌ಕಂಡ್ ಹೋದವೆ. ನೆಲ್ಲಕ್ಕಿ ಅಡಿಲಿ ಕೈಮುಗ್‌ದ್ ಪ್ರಾರ್‌ತನೆ ಮಾಡಿ ಹೊರ್ಟವೆ ಗಂಡನ ಮನೆಲಿ ಕೂಸುನ ಬಾಣಂತಿನ ಆರತಿ ಮಾಡಿ ಒಳಗೆ ಕರ್‌ಕಂಡವೆ. ಸಾಮಾನ್ಯ ಆಗಿ ಮೊದ್‌ವೆಲಿ ತೊವುರ್ ಮನೆಂದ ಒಂದ್ ಹಸ್‌ನ ಉಡ್‌ಗೊರೆ ಆಗಿ ಕೊಡ್‌ವ ಕ್ರಮ ಉಟ್ಟು. ಆ ಹಸ್ ಕರ್ ಹಾಕಿ ಯತೇಚ್ಚ ಹಾಲ್, ಬೆಣ್ಣೆ ಕೂಸಿಗೆ ಸಿಕ್ಕಲಿತೇಳ್‌ವ ಆಸಯ ಇದರ ಹಿಂದೆ ಉಟ್ಟು, ಹಂಗೇನೆ ಕೂಸುನ ಮೀಸಿಕೆ ತಾಂಬ್ರದ ಹಂಡೆನೂ, ಎಣ್ಣೆ ಕಾಸಿಕೆ ಎಣ್ಣೆ ಚೆರ್‌ಕ್‌ನ ಕೊಟ್ಟವೆ. (ಕೆ.ಎಸ್.)

**ಜೇನ್ ಸಾಕಣೆ :** ಜೇನ್ ಸಾಕಣೆ ಕರ್ನಾಟಕಲಿ ಪುರಾತನ ಕಾಲದಿಂದಳೂ ರೂಡಿಲಿರ್‌ವ ಒಂದ್ ಉದ್ಯಮ. ಹಳೆ ಕ್ರಮದ ಜೇನ್‌ಸಾಕಣೆಲಿ ಜೇನ್‌ನೆಳಗಳ ಅವಸ್ಯಕತೆಗಳ ಪೂರೈಕೆ ಮಾಡತಿತ್ಲೆ ಆದಂರ್‌ದ ಜೇನ್ ತುಪ್ಪದ ಉತ್ಪತ್ತಿ ಹೆಚ್ಚಿಗೆ ಆಗತಿತ್ಲೆ. ಅಲ್ಲದೆ ಕೈಯಿಂದ, ಬಟ್ಟೆಂದ ಹಿಂಡಿ ಜೇನ್ ತೆಗೆತಿದ್ದದರ್‌ಂದ ಅದ್ ಒಳ್ಳಮಟ್ಟಲಿ ಸಿಕ್ತಿತ್ಲೆ. ಆದುನಿಕ ಜೇನ್ ಕ್ರಿಸಿಪೊದ್ದತಿಲಿ ಒಳ್ಳ ಮರಂದ, ಸರ್ಯಾದ ಅಳ್ತೆಲಿ ತಯಾರ್ ಮಾಡ್ದ ಪೆಟ್ಟಿಗೆಗಳ್‌ಲಿ ಜೇನ್‌ನೆಳಗಳ ಕುಟುಂಬಗಳ ಸಾಂಕುವೆ. ಸಂಸಾರ ಬೆಳ್ಸುವ ಅನುಕೂಲತೆಗೂ ಹೆಚ್ಚಾಗಿ ಬಾವ ಜೇನ್‌ತುಪ್ಪ ಕೂಡಿಸಿದಕ್ಕು ಬೇರೆ ಬೇರೆ ಕೋಣೆಗಳ ಮಾಡಿಕೊಡ್ದಂರ್‌ದ ಮತ್ತೆ ಜೇನ್ತುಪ್ಪನ ಒಳ್ಳ ನಮೂನೆನ ಮಿಸನ್‌ಲಿ ತೆಗೆದಂರ್‌ದ ಒಳ್ಳ ಗುಣಮಟ್ಟದ ಜೇನ್‌ತುಪ್ಪ ಸಿಕ್ಕಿದೆ. ಈ ಪೊದ್ದತಿಲಿ ಜೇನ್‌ನೆಳಗಳ ಆವಸ್ಯಕತೆನ ಆಗಂದಾಗ್ಗೆ ಪೂರೈಸಿ ಕೊಡ್ದಂರ್‌ದಳೂ ಕುಟುಂಬಕೆ ಸಾಕಸ್ಟ್ ತಿನಿ ಕೊಡ್ದಂರ್‌ದ ಜೇನ್ ಕುಟುಂಬಗ ಹೆಚ್ಚ್ ಕಾಲದವರೆಗೆ ಗೂಡುಗಳ್‌ಲಿ ಒಳ್ಕಂಡ್ ಆರ್‌ತಿಕ ದ್ರಿಸ್ಟಿಂದ ಹೆಚ್ಚಿಗೆ ಲಾಬ ಸಿಕ್ಕುವಂಗಾದೆ.

ಜೇನ್‌ಕ್ರಿಸಿ ಲಾಬದಾಯಕ ಆಗಿರಕುಂತಾದರೆ ಕೆಳೆಗೆನ ಈ ಮೂರು ಅಂಶಗ ಅಗತ್ಯ. 1. ಜೇನ್ನೆಳಗಳಿಗೆ ದಾರಾಳ ಆಗಿ ಮಕರಂದ ಮತ್ತೆ ಪರಾಗ ಒದ್ಗುಸಿಕೊಡುವ ಮರಗ ಪೆಟಿಗೆನ ನೆರೆಕರೆಲಿ ಬೇಕು. 2.




ಜೇನ್‌ಕ್ರಿಸಿ ಸುರುಮಾಡಿಕೆಮುಂದೆ ಆ ಜಾಗೆಲಿ ಕಾಡ್‌ಜೇನ್‌ಗ ಬಂದ್‌ಹೋವಂತ ಜಾಗೆ ಆಗಿರಕು. 3. ಸಾಂಕವ್ಕೆ ಜೇನ್‌ಸಾಂಕುದರ್‌ಲಿ ಆಸಕ್ತಿ ಇರೊಕು.

ಕರ್ನಾಟಕಲಿ ಹೆಚ್ಚಾಗಿ ಮಲೆನಾಡ್ ಪ್ರದೇಶಗಳ್‌ಲಿ ಕೊಡಗ್, ಚಿಕ್ಕಮಗಳೂರು, ದಕ್ಷಿಣಕನ್ನಡ, ಉಡುಪಿ, ಉತ್ತರ ಕನ್ನಡ ಜಿಲ್ಲೆಗಳ್‌ಲಿ ಮತ್ತೆ ಹಾಸನ, ಶಿವಮೊಗ್ಗ, ದಾರವಾಡ, ಬೆಳಗಾಂವಿ ಜಿಲ್ಲೆಗಳ ಕೆಲವ್



ಜೇನ್ ಸಾಕಣೆ

ಬಾಗಲಿ ಜೇನ್‌ಸಾಂಕಣೆ ಹೆಚ್ಚ್ ಲಾಬ ಕೊಡ್‌ವ ಕುಶಲ ಕೈಗಾರಿಕೆ ಆಗುಟು. ರಾಜ್ಯದ ಒಳ್ದ ಜಿಲ್ಲೆಗಳ್‌ಲಿ, ಅಂದರೆ ಬೆಂಗಳೂರು, ಮೈಸೂರು, ಚಾಮರಾಜೆನಗರ, ಮಂಡ್ಯ, ತುಮಕೂರು ಮತ್ತೆ ಕೋಲಾರ ಜಿಲ್ಲೆಗಳ್‌ಲಿ ಕೆಲವ್ ನೈಸರ್‌ಗಿಕ ವನಸ್ಪತಿಗಳ ಮತ್ತೆ ವ್ಯವಸಾಯದ ಬೆಳೆಗಳ ಅವಲಂಬನೆಲಿ ಜೇನ್ಸಾಕಣೆ ನಡ್ದದೆ. ಜೇನ್‌ನೆಳಗ ವ್ಯವಸಾಯದ ಬೆಳೆಗಳ ಪರಾಗಸ್ಪರ್ಶ ಕಾರ್ಯನ ನಡ್ಸಿ ಬೆಳೆನ ಉತ್ಪತ್ತಿನ ಹೆಚ್ಚಿ ಮಾಡುದಂರ್‌ದ ಎಲ್ಲ ಕಡೆಗಳಲ್ಲೂ ಜೇನುಸಾಂಕಣೆಗೆ ಆದ್ಯತೆ ಕೊಟ್ಟೊಳೊ.

ಜೇನ್ ಸಾಂಕಣೆಗೆ ರಾಜ್ಯ ಸರ್ಕಾರದ ಪ್ರೋತ್ಸಾಹ ಒಂದೆ ಅಲ್ಲದೆ ಕೇಂದ್ರ ಮತ್ತೆ ರಾಜ್ಯ ಸರ್ಕಾರಗಳ ಕಾದಿ ಮತ್ತೆ ಗ್ರಾಮೋದ್ಯೋಗ ಮಂಡಳಿಗಳ ಮತ್ತೆ ಜೇನುಕ್ರಿಸಿಕರ ಸಹಕಾರ ಸಂಘಗಳ ನೆರವುನು ಉಟ್ಟು. ಜೇನ್‌ಕ್ರಿಸಿಗೆ ಅಗತ್ಯದ ಜೇನ್‌ಪೆಟ್ಟಿಗೆ ಮತ್ತೆ ಇತರ ಉಪಕರಣ ಗಳ ಈ ಸಂಗ ಸಂಸ್ತೆಗ ಒದ್ಗುಸಿ ಕೊಟ್ಟವೆ. ಈ ಕ್ರಿಸಿಲಿ ಪಳ್ಗಿದವರ ಅಲ್ಲಲ್ಲಿ ನಿಲ್ಸಿ ಅವರಂದ ಗ್ರಾಮಾಂತರ ಜೆನಕೆ ಜೇನ್‌ಕ್ರಿಸಿನ ಮಾಡಿಕೆ ಅನುಕೂಲ ಆದ ಮಾಹಿತಿನ, ತಾಂತ್ರಿಕ ಜ್ಞಾನನ ಕೊಟ್ಟೊವೆ. ಜೇನ್ತುಪ್ಪಕೆ ಯೋಗ್ಯಮಾರುಕಟ್ಟೆ ಸಿಕ್ಕುವಂಗೆ ತಕ್ಕ ಏರ್ಪಾಟೂ ಉಟ್ಟು. ಜೇನುಕ್ರಿಸಿಲಿ ಹೆಚ್ಚ್ ತಿಳ್‌ವಳ್ಕೆನ ಕೊಡುವ ಸಲ್‌ವಾಗಿ ರಾಜ್ಯಸರ್ಕಾರ ಎರ್‌ಡ್ ತಿಂಗಳ ಅವದಿನ ತರಬೇತಿ ನೀಡುವ ವೆವಸ್ತೆ ಮಾಡಿಟು. **(ಕೆ.ಎಂ.ಜಿ.)**

**ಜೋಗಿ ಪುರ್‌ಸ ಕೊಣ್‌ತ :** ಬಾದ್ರಪದ (ಕನ್ಯಾ) ಅಂದರೆ ಸೋಣ ತಿಂಗಳ್‌ಲಿ ಮನೆ ಮನೆಗೆ ಹೋಗಿ ನಡ್ಸುವ ಕೊಣ್‌ತ ಜೋಗಿ ಪುರ್‌ಸ. ಇದ್ ಬಂಟ್ವಾಳ ತಾಲೂಕ್‌ನ ವಿಟ್ಲ ಸೀಮೆಲಿ ನಡ್ದದೆ. ಇದ್ ಕಾಸ್ರಗೋಡ್‌ಲಿ ನಡ್ಸುವ ಸೋಣದ ಜೋಗಿ ಕೊಣ್‌ತದ ಒಂದ್ ಪ್ರಬೇದ.

**ವೇಷ ಬೂಷಣ :** ಜೋಗಿ ಪುರುಸ ವೇಸ ಹಾಕುವವು ಚಾಳೆ ಚಿರಿ ಸೀಳಿಮಾಡ್ದ ಚಿರಿ ಲಂಗನ ಸೊಂಟಕ್ಕೆ ಸುತ್ತಿ ಕಟ್ಟಿಕಂಡದೆ. ತಲೆಗೆ ಬಟ್ಟೆ ಚೆಂಡ್ ಹಾಕಿ ಕಟ್ಟಿ ಅದರ ಮೇಲೆ ತಿರಿಂದ ಮಾಡ್ದ ಶಂಕು ಆಕಾರದ ಮುಡಲೆತೇಳ್ವ ಅಲಂಕಾರ ಸಾದನನ ಇಸಿಕಂಡವೆ. ಹಣೆಗೆ ಲೋಹದ ತಲೆಪಟ್ಟಿ ಕಟ್ಟಿಕಂಡವೆ. ಇದರ ಹಿಂದೆಂದ ಕೇಪುಳು ಹೂನ ದಂಡೆ ಇಸಿಕಂಡವೆ. ತಲೆನ ಹಿಂದೆಂದಲೇ ಬೆನ್ನ್ ಮೇಲೆ ನೇಲುವಂಗೆ ಚಿರಿಂದಲೇ ಮಾಡ್ದ ಬೆರಿಚವರಿನ ಇಳ್ಸುವೆ, ಹಂಗೆನೆ ಚಿರಿನ ಅಲಂಕಾರ ತಿಗಲೆ ಚವರಿನ ಗಂಟ್ಲ್‌ಗೆ ಕಟ್ಟಿ ಎದೆ ಮೇಲೆ ಹರ್‌ಡಿರುವಂಗೆ ನೇಲ್ಸುವೆ. ಹಣೆಗೆ, ಕೈ, ಎದೆ, ರಟ್ಟೆಗೆ ಬಸ್ಮ ದಾರಣೆ ಮಾಡಿಕೊಂಡವೆ. ಕಣ್ಣ್‌ನ ಹುಬ್ಬು ಮತ್ತೆ ಕೆಳಬಾಗಕೆ ಕಪ್ಪು, ಕೆಪ್ಪೆಗೆ ನಸುಕೆಂಪು, ತುಟಿಗೆ ಕೆಂಪು, ಹಣೆಗೆ ಕೆಂಪು ಬಣ್ಣದ ಬೊಟ್ಟು ಇಸಿಕಂಡವೆ. ಕೆಬಿಗೆ ಕೇಪುಳ ಹೂನ ಗೊಂಚಲ್‌ನ ನೇಲ್ಸುವೆ. ಕೈ, ರಟ್ಟೆ ಮತೆ ಗಂಟ್ಲ್‌ಗೆ ಕೇಪುಳ ಹೂನ ದಂಡೆ ಕಟ್ಟಿಕೊಂಡವೆ, ಕಾಲಿಗೆ ಗೆಜ್ಜೆ ಕಟ್ಟಿಕೊಂಡವೆ. ಒಂದ್ ಕೈಲಿ ಗಂಟೆಮಣಿ ಇದ್ದದೆ. ಇನ್ನೊಂದು ಕೈಲಿ ಚಿರಿಂದ ಮಾಡ್ದ ಬೆತ್ತ /ದಂಡ ಇದ್ದದೆ.

**ಪೊದ್ಯ/ಮಾತ್‌ಕತೆ :** ಈ ಕೊಣ್‌ತಕೆ ಪದ ಉಟ್ಟು. ಪದ ಕನ್ನಡ ಬಾಸೆಲಿ ಉಟ್ಟು. ಹಿಮ್ಮೇಳದಂವ ತೆಂಬರೆ ಬೊಟ್ಟಿಕಂಡ್ ಪೊದ್ಯ ಹೇಳಿಕನ ವೇಸದಾರಿ ಕೋಣಿಯಕೆ ಸುರು ಮಾಡ್‌ದೆ.

ತಂದಾನ ತಾನನ ಜೋಗಿ ।
ತಂದಾನ ತಾನನ
ತಂದೆ ತೇಳಿರೆ ಯಾರ್ ।
ತಾಯಿತೇಳಿರೆ ಯಾರ್ ಜೋಗಿ
ತಂದೆ ತೇಳಿರೆ ಪಾಂಡುರಾಯ
ತಾಯಿತೇಳಿರೆ ಕುಂತಿಯಮ್ಮ ದೇವಿ
ತಂದಾನ ತಾನ ಜೋಗಿ ।
ತಂದಾನ ತಾನನ
ಹುಟ್ಟಿದ ಮಕ್ಕ ಐದ್ ಜೆನ ಜಗನಂದ ದೇವಿ
ಸುರೂದು ದರ್ಮ ರಾಯ ।
ಬೀಮ ಅರ್ಜುನ ನಕುಲ ಸಹದೇವ
ಐದುಜೆನ ಮಕ್ಕ ಜೋಗಿ ।
ಒಂದ್ ಮನೆಗೆ ಮುಟ್ಟಿದೊ.
ಒಂದ್ ಮನೆ ಮುಟ್ಟಿದೊ. ।

ಒಂದ್ ಕಾಸ್ ಸಿಕ್ಕಿತ್. ಎರಡ್ ಮನೆ ಮುಟ್ಟಿದೊ ।
ಎರಡ್ ಕಾಸ್ ಆತ್.
ತಂದಾನ ತಾನನ
ಮೂರ್ ಮನೆಗೆ ಮುಟ್ಟಿದೊ. ಮೂರ್ ಹಣ ಆತ್
ನಾಲ್ಕು ಮನೆಗೆ ಮುಟ್ಟಿದೊ ।
ನಾಕ್ ಕಾಸ್ ಆತ್.
ಐದ್ ಮನೆಗೆ ಮುಟ್ಟಿದೊ
ಐದ್ ಕಾಸ್ ಆತ್ ।
ತಂದಾನ ತಾನನ
ಅಟ್ಟಳಿಗೆ ಅಕ್ಕಿ ಆತ್ ।
ಬಿಡಾರಕ್ಕೆ ಮನೆ ಇಲ್ಲೆ
ಅಟ್ಟಿಲು ಮಾಡಿಕೆ ಜೋಗಿ ।
ಅಕ್ಕು ಬೈದೇತಿ ಮನೆ ಆತ್.
ಅಕ್ಕು ಬೈದೇತಿ ಮನೆಲಿ
ಅಟಿಲು ಮಾಡಿದೊ।
ತಂದಾನ ತಾನನ
ಪೂಂಬೆ ತೆಕೊಂಡು ಬಂದಿದ್ದೊ ।
ಬಜ್ಜಿಮ ಮಾಡಿದೊ
ಅಂಬಟೆ ತೆಕೊಂಡು ಬಂದಿದ್ದೊ ।
ಆಮ್ರ ಮಾಡಿದೊ
ಅಕ್ಕು ಬೈದೇತಿ ಮನೆಲಿ
ಅಟೀಲು ಮಾಡ್‌ದ ಜೋಗಿ
ದೇಯಿ ಬೈದೇತಿ ಮನೆಲಿ
ಬಿಡಾರ ಹೂಡಿದ ಜೋಗಿ ತಂದಾನ ತಾನನ
ಪದ ಮುಗ್ದ ಮೇಲೆ ಕೊಣ್‌ತ ನಿಲ್ಲ್‌ಸಿದೆ,
ಮತ್ತೆ ವೇಸದಾರಿಗು ಹಿಮ್ಮೇಳದವ್‌ಕೂ ಸಂಬಾಸಣೆ ನಡ್ದದೆ.
ಹಿಮ್ಮೇಳ : ಯಾವೂರ್‌ಂದ ಬಂದ ಜೋಗಿ?
ಜೋಗಿ : ಗಟ್ಟದ ಮೇಲೆಂದ ಬಂದೆ

ಹಿಮ್ಮೇಳ : ಕಾಸೀ ಮಟಲಿ ಹುಟ್ಟಿಕಂಡ್ ಕದ್ರಿ ಮಟ ಬೆಳ್‌ಗಿ ಕಂಡ್ ಕಾಂತಾರ ಕದ್ರ, ಬೆಂತಾರ ಬೆದ್ರ, ಪುದೊಟ್ಟು, ಬುಳೇರಿ, ಪರ್ಮಲೆ ಊರೆಲ್ಲ ತಿರ್‌ಗಾಡಿ ಇಟ್ಟೇಲ ಮಟ ತಿರ್‌ಗಿಕಂಡ್ ಬೇಡಿಕೊಂಡು ಒಂದಾಳು ಸರಕು ಕನ್ಯಾರ ಚೌತಿಗೆ ತಕಂಡ್ ಹೋಗು ಜೋಗಿ.

**ಕೊಣ್‌ತ :** ಜೋಗಿ ಪುರ್‌ಸ ಕೊಣ್‌ತದ ಹೆಜ್ಜೆಗಾರಿಕೆ ಸೋಣದ ಜೋಗಿ ಕೊಣ್‌ತದ ತರನೇ ಉಟ್ಟು. ಈ ಕೊಣ್‌ತಲಿ ಪೊದ್ಯ ಇರುದರ್‌ಂದ ಹಜ್ಜಾ ಹೆಚ್ಚ್ ಹೊತ್ತು ಸಣ್ಣಹೆಜ್ಜೆ ಹಾಕಿಕಂಡ್ ಕೈಲಿ ದಂಡ ತಿರ್‌ಗ್‌ಸಿಕಂಡ್ ಸುತ್ತು ಕೊಣ್‌ತ ಹಾಕಿದೆ. ಮಾತ್‌ಕತೆನ ಹೊತ್ತುಲಿ ಹಿಂದೆ ಮುಂದೆ ಹೆಜ್ಜೆ ಹಾಕಂಡ್ ಇದ್ದದೆ. ಕೈಲಿ ಗಂಟೆಮಣಿ ಹಿಡ್ಕಂಡಿದ್ದದೆ.

**ಆಚರಣೆ :** ಕೊಣ್‌ತ ಸುರು ಮಾಡಿಕೆ ಮುಂದೆ ಮನೆಲಿ ಒಂದ್ ಸ್ವಸ್ತಿಕ ಇಸಿ ಅದರ ಕರೆಗೆ ಗೆಜ್ಜೆ ಇಸುವೆ. ದೀಪ ಹೊತ್ತ್‌ಸ್‌ವೆ. 'ನಾವು ಹೋಗಿ ಪುರ್‌ಸ ಕೊಣ್‌ತ ನಡ್ಸಿಕಂಡ್, ಊರು ಸುತ್ತಾಡಿಕೊಂಡು ಬಂದವೆ, ನಾವ್‌ಗೆ ಯಾವ ವಿಗ್ನಗ ಬಾಕಾಗದ್' ತೇಳಿ ಪ್ರಾರ್‌ತನೆ ಮಾಡಿಕಂಡವೆ. ವೇಸದಾರಿಗೆ ಮನೆನ ಹಿರಿಯಂವ ಗೆಜ್ಜೆ ತೆಗ್‌ದ್ ಕೊಟ್ಟದೆ, ಅದರ ಅಂವ ಅಂವನ ಕಾಲ್‌ಗೆ ಕಟ್ಟಿಕಂಡದೆ. ಬಾದ್ರಪದ ಚೌತಿ ದಿನ ಕೊಣ್‌ತ ಮುಗ್‌ದದೆ. ಆ ದಿನನೂ ಸುರೂನ ದಿನದಂಗೆ ಸ್ವಸ್ತಿಕ, ದೀಪ ಇಸಿ ಗಣಪತಿನ ಸರ್‌ವ ವಿಘ್ನಗಳ್‌ಂದ ದೂರಮಾಡ್‌ವಂಗೆ ಬೇಡಿಕಂಡವೆ ಆ ದಿನ ಸ್ವಸ್ತಿಕದ ಮುಂದೆ ಪಂಚಕಜ್ಜಾಯ ಮಾಡಿದ್ದವೆ. ಪ್ರಾರ್‌ತನೆ ಮಾಡ್ದ ಮೇಲೆ ಹಜ್ಜಾ ಪಂಚಕಜ್ಜಾಯನ ತೆಗ್ದ್ ಹೊತ್ತುತ್ತಿರುವ ಒಲೆಗೆ ಹಾಕುವೆ. ಒಳ್ದದರ ಪಾಲ್‌ಮಾಡಿ ತಿಂಬೊತ್ತಿದ್ದೊ. ಮನೆ ಮನೆಗೆ ಹೋಗಿ ಕೊಣ್‌ತ ನಡೆಸಿಕಾಕನ ಸಿಕ್ಕಿದ ನೆಟ್ಟಿಕಾಯಿಗಳ ಕನಿಯಾಳ ಗಣಪತಿ ದೇಸ್ತಾನಕೆ ಚೌತಿನಂದ್ ಒಪ್ಪುಸುವೆ.

ಹಳೆ ಜೋಗಿಗಳ್‌ಲಿ ಬೇರೆ ಬೇರೆ ಪಂಗಡ ಇದ್ದದೆ. ಒಂದ್ ಪಂಗಡದವರ ಅರ್ಜುನ ಜೋಗಿಗ ತೇಳಿ ಕರ್‌ದವೆ. ಅರ್ಜುನ ವನವಾಸಲಿರ್‌ಕನ ಜೋಗಿ ವೇಸ ತೊಟ್ಟ್ ಕಂಡ್, ತೀರ್ತಯಾತ್ರೆ ಮಾಡಿಕೆ ಹೋದ ತಿರ್‌ಗಾಟ ಮುಗ್‌ಸಿ ಬಂದ್ ಅಯ್ಯೆ ಕುಂತಿನ ನೋಡ್ತ್. ಆಗ ಬಾಕನ ಅರ್ಜುನ ಜೋಗಿನ ವೇಸಲಿ ಇತ್ತ್ ಗಡ, ತನ್ನ ನಿಜರೂಪ ಬಯಲಾದ ಮೇಲೆ ಉಟ್ಟ ವೇಸನ ಬಿರ್‌ದುನ ತಟಟ್ಟಿಗಿದ್ದ ಶಿಷ್ಯ ಕಸುಬು ಮಾಡಿಕಂಡ್ ಬಂದವ್‌ಕೆ ಕೊಟ್ಟ್ ಲೋಕಲಿ ಪಾಂಡವರ ಕತೆ ಹೇಳಿಕಂಡ್ ತಿರ್‌ಗಿಕಂಡ್ ಜೀವನ ಕಳೆನೀತ ಹೇಳ್ತ್ ಗಡ.

ಹೀಂಗಾಗಿ ಜೋಗಿ ಪುರುಸ ಕೊಣ್‌ತ ನಡ್ಸುವ ಕಲಾವಿದರ್ ಅವರ ಅವೇ ಅರ್ಜುನ ಜೋಗಿಗತೇಳಿ ಹೇಳಿಕಂಡವೆ. ಅರ್ಜುನ



ಜೋಗಿ ಪುರ್‌ಸ





ತೀರ್ಥಯಾತ್ರೆ ಮಾಡಿಕಂಡ್ ಅಡೂರು, ಮದೂರು, ಕಾವು, ಕನ್ಯಾಳ ಇಂತ ಕುಂಬಳೆ ಸೀಮೆನ ಕ್ಷೇತ್ರಗಳ ಸುತ್ತಾಡಿ ಚೌತಿನ ಹೊತ್ತುಗೆ ಕನ್ಯಾಳಕೆ ಮುಟ್ಟಿದ ತೇಳಿ ಪ್ರತೀತಿ, ಅದರ ಸಂಕೇತವಾಗಿ ಈ ಕೊಣ್ತ ನಡೆದದೆ. ಕೊಣ್ತಲಿ ಪಾಂಡವರ ಹೆಸರ್ ಬಂದದೆ. (ಪಿ.ಆರ್.)

**ಡಿ. ವಿ. ಸದಾನಂದ ಗೌಡ :** (ಜನನ. 18, ಮಾರ್ಚ್ 1953) ಮಾಜಿ ಕೇಂದ್ರ ಸಚಿವ ಹಾಗೂ ಕರ್ನಾಟಕದ ಮಾಜಿ ಮುಖ್ಯಮಂತ್ರಿ. ಪ್ರಸಕ್ತ ಅವು 15ನೇ ಲೋಕಸಭೆಲಿ ಉಡುಪಿ ಮತೆ ಚಿಕ್ಕಮಗಳೂರು ಕ್ಷೇತ್ರದ ಸಂಸದ. ಸದಾನಂದ ಗೌಡ್ರ್, ಕೊಡಗು ದೇವರಗುಂಡ ಗೌಡ ಪರಿವಾರದ ಮಂಡೆಕೊಲು ಗ್ರಾಮ ಸುಳ್ಯ ತಾಲ್ಲೂಕಿನ ವೆಂಕಪ್ಪಗೌಡ ಮತ್ತು ಕಮಲಾ ದಂಪತಿಗಳ ಮಙ್ಞಆಗಿದ್ ಹುಟ್ಟಿದೊ. ಅವರ ಸುರುನ ವಿದ್ಯಾಭ್ಯಾಸ, ಪುತ್ತೂರು ತಾಲ್ಲೂಕ್‌ನ ಕೆಯ್ಯೂರು ಹಾಂಗೆ ಸುಳ್ಯಲಿ ನಡ್ತ್. ಫಿಲೋಮಿನಾ ಕಾಲೇಜಿಲಿ ವಿಜ್ಞಾನಲಿ ಪದವಿ ಪಡ್‌ದ್‌ದ್, ವೈಕುಂಠ ಬಾಳಿಗ ಲಾ ಕಾಲೇಜ್‌ಲಿ ಕಾನೂನು ಪದವಿ ಮುಗ್‌ಸಿದೊ. ಲಾ ಕಾಲೇಜಿನ ವಿದ್ಯಾರ್ಥಿ ಸಂಘದ ಮುಖ್ಯ ಕಾರ್ಯದರ್ಶಿನ ಜಾಗೆಗೆ ಚುನಾಯಿತರಾದೊ. ಮುಂದೆ ಜಿಲ್ಲಾ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ತಿನ ಮುಖ್ಯ ಕಾರ್ಯದರ್ಶಿ ಆದೊ. 1976ರ್‌ಲಿ, ಅವು



ಸುಳ್ಯ ಮತ್ತೆ ಪುತ್ತೂರುಲಿ ವಕೀಲಿ ಕೆಲ್‌ಸನ ಸುರ್ ಮಾಡ್‌ದೊ. ಉತ್ತರ ಕನ್ನಡ ಜಿಲ್ಲೆನ ಸಿರಸಿಲಿ ಪಬ್ಲಿಕ್ ಪ್ರಾಸಿಕ್ಯೂಟರ್ ಆಗಿ ಕೆಲಕಾಲ ಸೇವೆ ಮಾಡ್ದೊ. 1981ರ್‌ಲಿ ಡಾಟಿ ಸದಾನಂದ ಅವರ ಮದುವೆ ಆದೊ. ಈ ದಂಪತಿಗಳ ಮಙ್ಞ ಕಾರ್ತಿಕ್ ಗೌಡ. ಸದಾನಂದ ಗೌಡ ಅವ್ ಅಂದ್‌ನ ಜನ ಸಂಘದ ಸದಸ್ಯರಾಗಿ ತಮ್ಮ ರಾಜಕೀಯ ಜೀವನ ಸುರುಮಾಡ್‌ದೊ. ಅದಾಗಿ ಸುಳ್ಯ ವಿಧಾನಸಭಾ ಕ್ಷೇತ್ರದ ಪಕ್ಷಾಧ್ಯಕ್ಷ, ದಕ್ಷಿಣ ಕನ್ನಡ ಬಿಜೆಪಿ ಯುವ ಮೋರ್ಚಾದ ಅಧ್ಯಕ್ಷ, ದಕ್ಷಿಣ ಕನ್ನಡ ಬಿಜೆಪಿ ಉಪಾಧ್ಯಕ್ಷ, ರಾಜ್ಯ ಬಿಜೆಪಿ ಯುವ ಮೋರ್ಚಾದ ಕಾರ್ಯದರ್ಶಿ (1983–88), ರಾಜ್ಯ ಬಿಜೆಪಿ ಪಕ್ಷದ ಕಾರ್ಯದರ್ಶಿ (2003–04) ಮತ್ತು ಪಕ್ಷದ ರಾಷ್ಟ್ರೀಯ ಕಾರ್ಯದರ್ಶಿ (2004) ಆಗಿ ಕೆಲ್‌ಸ ಮಾಡಿಯೊಳೊ.. 1994 ಮತ್ತೆ 1999ರ್‌ಲಿ ದಕ್ಷಿಣ ಕನ್ನಡದ ಪುತ್ತೂರು ವಿಧಾನಸಭಾ ಕ್ಷೇತ್ರದಿಂದ ರಾಜ್ಯ ವಿಧಾನಸಭೆಗೆ ಆಯ್ಕೆ ಆದೊ. ತಮ್ಮ ಎರಡನೇ ಅವಧಿಲಿ ರಾಜ್ಯ ವಿರೋಧ ಪಕ್ಷದ ಉಪನಾಯಕ ಆದೊ. 2004ರ್‌ಲಿ ಮಂಗಳೂರು ಲೋಕಸಭಾ ಕ್ಷೇತ್ರದಿಂದ ಸ್ಪರ್ದೆ ಮಾಡಿ 14ನೇ ಲೋಕಸಭೆಗೆ ಆಯ್ಕೆ ಆದೊ. 2009ರ್‌ಲಿ ಪಕ್ಷ ಅವರ ಉಡುಪಿ–ಚಿಕ್ಕಮಗಳೂರು ಕ್ಷೇತ್ರಕೆ ವರ್ಗಾವಣೆ ಮಾಡ್‌ತ್. 2014–19ರ್‌ಲಿ ರೈಲ್ವೇ, ಕಾನೂನು, ಅಂಕಿ–ಅಂಶ ಖಾತೆ, 2019–21ರಲ್ಲಿ ರಸಗೊಬ್ಬರ ಖಾತೆನ ಸಚಿವರಾಗಿದ್ದೊ. ಜನಸಂಘದ ಸಕ್ರಿಯ ರಾಜಕಾರಣಲಿ ಇದ್ದೊವ್. ಭಾರತೀಯ ಮಜ್ದೂರ್ ಸಂಘ (ಬಿ.ಎಂ.ಎಸ್)ಲು ಕೆಲಸ ಮಾಡಿದ್ ಸದಾನಂದ ಗೌಡ್ರ್ 'ಸುಳ್ಯ ತಾಲ್ಲೂಕು ಆಟೋ ರಿಕ್ಷಾ ಚಾಲಕರ ಹಾಗೂ ಮಾಲಿಕರ ಸಂಘ'ಲಿನು ಸೇವೆ ಮಾಡಿಯೊಳೊ..

ಬಿ.ಜೆ.ಪಿ.ಪಕ್ಷದ ಮುಖ್ಯಮಂತ್ರಿಗ ಆಗಿದ್ದ ಯಡಿಯೂರಪ್ಪ 31ರ ಜುಲೈ 2011 ರಂದು ರಾಜೀನಾಮೆ ಕೊಟ್ಟೊ. 3 ಆಗಸ್ಟ್ 2011 ರಂದ್ ಇವ್ ರಾಜ್ಯದ 26ನೇ ಮುಖ್ಯಮಂತ್ರಿ ಆದೊ.

**ತಕ್ಕ ಮುಕ್ಯಸ್ತರ್, ದೇವರ ಸೇವೆಲಿ ತಕ್ಕ ಮುಕ್ಯಸ್ತರ್ :** ಕೊಡಗ್ ಮತ್ತೆ ದಕ್ಷಿಣಕನ್ನಡ ಜಿಲ್ಲೆಲಿ ನೆಲ್‌ಸಿರ್‌ವ ಹತ್ತ್ ಕುಟುಂಬ ಹದ್ನೆಂಟ್ ಗೋತ್ರದ ನುಡಿಕಟ್ಟ್‌ನ ಅರೆಬಾಸಿಕ ಗೌಡರ್ ಹುಟ್ಟುಂದಳೇ ಕ್ರಿಸಿಕರಾಗಿ ಬೊದ್‌ಕಿಬಂದ ಸ್ರಮಜೀವಿಗ. ಇವು ದಕ್ಷಿಣಕನ್ನಡಲಿ ಕೂಜುಗೋಡು ಮತ್ತೆ ಬಲ್ನಾಡ್ ಕಟ್ಟೆಮನೆತನಗಳ ಪರಂಪರೆಗೆ ಹೊಂದಿಕಂಡರೆ ಕೊಡಗ್‌ಲಿ ಐನ್‌ಮನೆ ಪೊದ್ದತಿ ಪರಂಪರೆನ ಅನುಸರಿಸ್‌ತಾ ಬಂದೊಳೊ. ಕ್ರಿಸಿನ ಕಸುಬಾಗಿಸಿಕಂಡ ಸಮುದಾಯ ಒಕ್ಕಲಿಗರಾದ್‌ರೂ ಬೇರೆ ಬೇರೆ ಕಡೆ ಬಾಸೆ, ಆಚಾರ, ವಿಚಾರ, ಸಂಪ್ರದಾಯ, ಪ್ರಾದೇಸಿಕ ಪ್ರಬಾವಂದ ಬೇರೆ ಬೇರೆ ಹೆಸ್‌ರ್‌ಗಳ್‌ಂದ ಕರ್‌ಸಿಕಂಡವೆ.

ಕ್ರಿಸಿ ಹಿನ್ನಲೆಲಿ ಪಳ್‌ಗಿದ ಗೌಡ್ರ್ ಕೊಡ್‌ಗುಲಿ ಅರಸರ ಆದೇಸದಂಗೆ ಅವರ ಜೀವನ ನಿರ್‌ವಹಿಸಿಕಂಡ್ ಒಳೊ ದರ್ಮ ಪರಿಪಾಲನೆಲಿ ಮೊದ್‌ವೆ ಸಂಸ್ಕೃತಿನ ಒಳ್ಸಿಕಂಡ್ ಕಾವೇರಿ ಮಾತೆನ ಪರಂಪರೆಂದ ಬಂದ ಹಬ್ಬ ಹರಿದಿನಗಳ್‌ಲಿ ಊರುನ ತಕ್ಕ ಮುಕ್ಯಸ್ತರಾಗಿ ಸೇವೆ ಸಲ್ಲಿಸ್ತಾ ಇರೊವು ಅರೆಬಾಸೆ ಗೌಡರ್. ಅದರ ಪ್ರಕಾರ ಭಾಗಮಂಡಲದ ಪವಿತ್ರ ತಲಕಾವೇರಿಲಿ ಕೋಡಿ ಮನೆವು ನಾಡ್ ತಕ್ಕರಾಗಿದ್ ಭಾಗಮಂಡಲದ ಬಗಂಡೇಸ್ವರ ದೇಸ್ತಾನಲಿ ಬಳ್ಳಡ್ಕ ಮನೆವು ತಕ್ಕರಾಗಿ, ಪಾಲೂರು ಮಹಾಲಿಂಗೇಸ್ವರನ ದೇಸ್ತಾನಲಿ ಎಡಿಕೇರಿ ಮನೆವು ಬಂಡಾರ ತಕ್ಕರಾಗಿ ಸೇವೆ ಸಲ್ಲಿಸ್ತಾ ಬರ್‌ತಾವಳೊ. ಎಲೆಮರೆನ ಕಾಯಿನಂಗೆ ಬೇರೆ ಊರ್‌ಗಳ್‌ಲ್ಲಿ ತಕ್ಕ ಮುಕ್ಯಸ್ತರಾಗಿ ಸೇವೆ ಮಾಡ್ತಾವಳೊ ಅರೆಬಾಸಿಗರ್.

ಕೊಡಗ್‌ನ ಊರುಗಳ್‌ಲಿ ಊರ್‌ಲಿರ್‌ವ ಎಲ್ಲಾ ಜೆನಾಂಗದವುಕೂ ಕೆಲವ್ ಅವರವರದೇ ಆದ ಕೆಲ್ಸಗ ಒಳೊ. ದೇಸ್ತಾನ ನಡ್ಸುವ ಪ್ರಮುಕರ್‌ಗೆ ದೇವ ತಕ್ಕ, ದೇಸ ತಕ್ಕ ತೇಳುವ ಬಿರ್‌ದು ಇಡೀ

ನಾಡ್‌ನ ಪ್ರಮುಕರಿಗೆ ಬಿರುದುವುಟ್ಟು. ನಾಡ್‌ತಕ್ಕ ಊರು ತಕ್ಕರಾಗಿ ಸುಮಾರ್ ಬಿರುದುಗಯಿದ್ದ್ ಅರೆಬಾಸಿಕರ್ ಸನ ಈ ಸೇವೆನ ಮುಂದುವರಿಸ್ತಾವಳೊ. ಕರ್‌ತವ್ಯ ದೇಸ್ತಾನದ ಪವಿತ್ರತೆ ಬಗ್ಗೆ ಅಲ್ಲಿನ ಮಹತ್ವನ ಕಾಪಾಡ್‌ವ ಬಗ್ಗೆ ಜವಾಬ್ದಾರಿ ಇಸಿಕಂಡ್ ಎಚ್ಚರಿಕೆಂದ ಇರಕಾದ ಕೆಲ್ಸದವ್‌ಕೆ ಕಾವುಕಾರಕತೇಳ್‌ವೆ. ದೇವ ತಕ್ಕ ದೇಸ ತಕ್ಕ ತೇಳೊವು ಕೊಡಗ್‌ನ ದೊಡ್ಡ ದೇಸ್ತಾನಗಳ ಮುಕ್ಯಸ್ತರಾಗಿವೊಳೊ.

ನಾಡ್ ತಕ್ಕ ತೇಳ್ರೆ ಕೊಡಗ್ ನಾಡ್‌ನ ನಾಡ್‌ಗ ನಡ್‌ಸುವ ಹಬ್ಬದ ಮುಕ್ಯಸ್ತರ್. ಊರು ತಕ್ಕ ಊರ್ ದೇಸ್ತಾನಗಳಿಗೆ ಸಮ್ಮಂದಪಟ್ಟ ಕಾರ್ಯಗಳ್‌ನ ನಡ್ಸೊವು. ಕೊಡಗ್‌ಲಿರುವ ಎಲ್ಲಾ ಊರುಗಳಿಗೆ ಅದರದೇ ಆದ ವಿಸೇಸತೆವುಟ್ಟು, ದೇವರ ಬಲಿ, ಐದರ್‌ಂದ ಏಳ್ ಸುತ್ತು ಪ್ರದಕ್ಷಿಣೆ ಇದೆಲ್ಲಾ ದೊಡ್ಡ ದೇಸ್ತಾನಗಳ್‌ಲಿ ಕೇರಳ ಸೈಲಿ ಚಂಡೆನೆ ಪ್ರಾದಾನ್ಯ ಇರ್‌ದರ ಕಾಣಕ್.

ಎಲ್ಲಾ ಊರುಗಳ್‌ಲಿ ಚೌಂಡಿ ಅಯ್ಯಪ್ಪ, ಸಾರ್‌ತಾವು ಅಜ್ಜಪ್ಪ ತೆರೆಗ ನಡ್ದವೆ. ತೆರೆಗ ತೇಳ್ರೆ ಹಬ್ಬಗ ಮುಗ್ದ ಮೇಲೆ. ಮೇಲೇರಿ ತೇಳ್ರೆ ಕೆಂಡದ ಮೇಲೆ ಹಾರ್‌ದು. ಇದ್ ಚೌಂಡಿನ ಹೆಸ್‌ರ್‌ಲಿ ನಡ್ದದೆ. ಉದ್ದ ತೆರೆಗ 20ಅಡಿ ಎತ್ತರದ ಬಡಿಗೆಗೆ ಅಡ್ಡ ಕೋಲು ಮಡ್ಗಿ ಕೂಗಲೆ ತೇಳುವ ಸೊಪ್ಪುನ ಅಲ್ಲೊ ಒಲಿಗಳ್‌ಂದ ನೈಯ್ದು ಪಟ್ಟಿಯಿರ್‌ದು ಅದರ ಲಕ್ಷಣ. ಅದ್ಕೆ ಕೆಂಪು ಬಟ್ಟೆ ಸುತ್ತಿ ಕೊಡಿಗೆ ತೆರೆ ಹಾರ್‌ಕನ ಬಟ್ಟೆ ಹಾರ್‌ದು ವಿಸೇಸತೆ. ಇದರ್‌ಲಿ ಚೌಂಡಿ ತೆರೆಗ ನಾಲಗೆ ಹೊರಹಾಕಿ ಹೆದ್‌ರಿಕೆ ಹುಟ್ಟ್‌ಸುವ ಕಂಚಿನ ಮೊಗ ಉದ್ದದೆ. ಅಂತಹ ತೆರೆಗ ಬಾಕನ ಎದ್‌ರ್ ನಿಲ್ಲಿಕ್ಕಾಗದ್ ದ್ರಿಸ್ಟಿ ಬಿದ್ದದೆ ತೇಳ್ದು ನಂಬಿಕೆ ಹಿಂಗಾಗಿ ಹಬ್ಬಲಿ ಆವೇಸ ಬಂದವು ಹಾರ್‌ಕನ ದ್ರಿಸ್ಟಿ ಬೀಳಿಕಾಗದ್ ತೇಳಿ ನಡೆಬುಡಿ – ನಡೆಬುಡಿತೇಳಿ ತಕ್ಕರ್ ಎಚ್ಚರಿಕೆ ಹೇಳ್‌ವೆ.

**ಬಂಡಾರ ತಕ್ಕರ್ :** ದುಡ್ಡು ಮತೆ ಆಬರಣ ದಾಕಲೆಗಳ ವಿಸ್ಮಯಗಳ್‌ನ ತಿಳ್‌ದಿರೊಕು. ಸಂಪ್ರದಾಯದ ಬೆಳಿ ಕುಪ್ಪಸ ದಟ್ಟಿನ ಗೌರವಯುತರಾಗಿ ಹಾಕಣೊಕು. ಬಂಡಾರ ಲೆಕ್ಕ ಮಾಡ್ದು ಅದರ ಜವಾಬ್ದಾರಿ ಹೊರತಕ್ಕವು. ಇವು ಸಂಬಳ ತೆಕಂಬಕಿಲ್ಲೆ . ನಡೆನಿಯಮಾವಳಿ ಪ್ರಕಾರ ನಡ್ಕೊಣಕು.

**ತಕ್ಕರ್ :** ಮಹಾಪೂಜೆ ಆದಮೇಲೆ ಸುರುಗೆ ತೀರ್‌ತಪ್ರಸಾದ ತಕಂಬ ನಡೆನ ಬಲಬಾಗಲಿ ಅತ್ಯಾವಸ್ಯಕ ಪ್ರಾರ್ತನೆ ಮಾಡ್‌ವ ಹಕ್ಕ್ ಸೂತಕಯಿದ್ದರು ದೇಸ್ತಾನಕು ಬಾವ ಹಕ್ಕ್ ದೇವ್ರ್ ಗೆಹಾಲ್ ತರೂವು ದೇವರ ಕೆಲ್‌ಸನ ಬಿಳಿ ಕುಪ್ಪಸ ದಟ್ಟಿಲಿ ನಿರ್‌ವಹಿಸೊಕು. ಅಯ್ಯಪ್ಪ ದೇವರ ಬೇಟೆ ತೆರೆ ಮೇಲೇರಿ ಕಳಕೆ ನೂರವೊಂದು ಕುಂಟೆ ಬಾಚ್‌ಲ್ ಪೊದ್ದತಿ ನಿರ್‌ವಹಣೆ–ಹಿಂಗೆ ದೇಸ್ತಾನಲಿ ಬಲಿಬಾಕನ ಒಂದೊಂದು ವಿದದ ದೇವರ ನೃತ್ಯ. ಕೋಲನೆ ತೆರೆ ಇದೆಲ್ಲಾ ಇವರ ಜವಾಬ್ದಾರಿ ತಕ್ಕ ಮುಕ್ಯಸ್ತಕ್ ಊರ್‌ಲಿ ಆಗುವ ದೇವರಕಾರ್ಯಗಳ್‌ನ ಜವಾಬ್ದಾರಿಂದ ನಡ್ಸೊಕು. ದೇವರ ಹಬ್ಬಕ್ಕೆ ಕಟ್ಟು ಬೀಳುವಲ್ಲಿಂದ ಗೊನೆ ಕಡಿವ ಕೆಲ್‌ಸ, ಬಂಡಾರ, ದೇವರ್‌ಗೆ ಸಮ್ಮಂದ ಪಡ್‌ವ ಆಯುದಗಳ ಜವಾಬ್ದಾರಿಸನ ನೋಡಿಕಣಕು. ಇದರೆಲ್ಲ ಬೇರೆವು ಮುಟ್ಟುವಂಗಿಲ್ಲೆ. ಕಾರ್ಣಕೆಯಿಸುದು. ಒಕ್ಕಣೆ ದೆವ್ವಕೆ ಎಡೆಯಿಸುದು ಚೌಂಡಿಗೆ ಬಾರಣೆ ಕೊಡ್ದು ಇದೆಲ್ಲಾ ಮುಕ್ಯಪಟ್ಟವು ನೋಡಿಕಣಕು ಇನ್ನ್ ಊರ್‌ಲಿ ನಡೆವ ಕೈಲ್‌ಪೊದು ಅಸ್ಟಮಿ ಹುತ್ತರಿ ದೀಪಾವಳಿ ಹೊಸ್ತ್ ಮಕರಸಂಕ್ರಾಂತಿ. ಕಿಡ್ಡಸ ಇದೆಲ್ಲಾ ರೈತ ಬೊದ್‌ಕ್‌ನ ಊರು ಪೂಜೆನೊಟ್ಟಿಗೆ ರೈತ ಬದ್‌ಕ್‌ನ ಅಂಗ ಆಗಿ ಒಳ್ದುಟ್ಟು. ಊರುದೇವರ್‌ಗೆ ಎಲ್ಲಾ ಕಡೆನು ಅರ್‌ಚಕರ್ ಪೂಜೆ ಮಾಡ್‌ವೆ. ಒಳ್ದ ಊರ್ ಹಬ್ಬಗ ಮಲೆಯರ್ ಪಣಿಕರ್ ಮಡಿವಾಳರ್ ಐರಿ ಜೆನಾಂಗವೂ ಸೇರಿ ಆಚರ್‌ಸುದುಟ್ಟು ಊರುತೆರಿಗೆ ಅವುಕೆ ಬಂದ ಆಸ್ತಿನ ಮೇಲೆ ಬಾಚ್‌ಲ್ ಹಂಚಿಕಂಡವೆ. ಬೂಮಿಯಿಲ್ಲದವ್‌ಕೆ ಅವರ ಸೇವೆಗೆ ಬತ್ತ ಅಳಿವ ಪೊದ್ದತಿನೂವುಟ್ಟು. (ಜಿ.ಬಿ.)

**ತಡಿಯಂಡಮೋಳ್ :** ಕೊಡಗ್ ಜಿಲ್ಲೆಲಿರುವ ಬಾರೀ ಎತ್ತರದ ಮಲೆ ತಡಿಯಂಡಮೋಳ್. ಇದ್ ಸಮುದ್ರಮಟ್ಟಂದ 1745, ಮೀ ಅಸ್ಟ್ ಎತ್ತರಲಿ ಉಟ್ಟು. ಹಾಂಗೆನೆ ಸಹ್ಯಾದ್ರಿ ಪರ್‌ವತದ ಮಲೆಗಳ ನಡುಲಿ ಹೋಕನ ಮಡಿಕೇರಿ ತಾಲ್ಲೂಕುನ ನಾಪೊಕ್ಲು ಪೇಟೆಂದ ಸು. 16 ಕಿಮೀ ನೈಋತ್ಯಲಿ ಈ ಮಲೆ ಉಟ್ಟು. ಇಲ್ಲಿಗೆ ಮಡಿಕೇರಿಂದ ಸು. 38 ಕಿಮೀ ದೂರ ಆದೆ. ವಿರಾಜಪೇಟೆಂದ 37ಕಿಮೀ ದೂರ ಆದೆ. ಈ ಬೆಟ್ಟದ ಕೆಳಗೆನ ಬಾಗ ಸು. 19ಕಿಮೀ ಉದ್ದ ಇದ್ದ್ 12–13ಕಿ. ಮಿನಷ್ಟು ಅಗಲ ಉಟ್ಟು. ಈ ಬೆಟ್ಟದ ಬುಡಲಿ ನಾಕ್ ನಾಡನ ಅರಮನೆ ಉಟ್ಟು.

ತಡಿಯಂಡಮೋಳ್ ಮಲೆ ಹತ್ತಿಕೆ ಕಾಲ್ದಾರಿ ಉಟ್ಟು ಈ ಕಾಲ್‌ದಾರಿ ಅರಮನೆಂದಳೆ ಸುರಾದೆ. ಇನ್ನ್ ಆ ಮಲೆನ ಬುಡಲಿ ದೊಡ್ಡ ಬೀಮಾನಂಗೆ ಇರ್‌ವ ಮರಗ ಪೂರಾ ತುಂಬಿದ ಕಾಡುಟ್ಟು. ಪರ್‌ವತಂದ ಮೇಲೆನ ಬಾಗ 5ರಂದ 10 ಅಡಿನಸ್ಟ್ ಎತ್ತರಕೆ ದರ್ಬೆನಂತ ಆನೆ ಹುಲ್ಲುಗಳ ಬಲ್ಲೆ ತುಂಬಿ. ಅಲ್ಲೊಂದು ಇಲ್ಲೊಂದು ದೊಡ್ಡ ದೊಡ್ಡ ಮರಗ ಬೆಳ್ದ್ ಯಾಗೋಳು ಪಚ್ಚೆ ಪಚ್ಚೆ ಹುಲ್ಲು ಬೆಳ್ಕಂಡ್ ದೂರಂದ ನೋಡ್ಕನ ಪಚ್ಚೆ ಸೀರೆ ಹೊದ್ದ್ ಕಂಡಿರ್‌ವಂಗೆ ಪೊರ್‌ಲು ಕಂಡದೆ. ಈ ಹುಲ್ಲುನ ನೆಡುಲಿ ಮುಂದೆ ಹೋಕನ ಸಣ್ಣ ದೊಡ್ಡ ಸುಮಾರ್ ಗುಡ್ಡೆಗ, ಬಂಡೆಕಲ್ಲ್‌ಗ ಪೂರಾ ನೋಡಿಕೆ ಸಿಕ್ಕಿದೆ. ಕೆಲವ್ ಕಡೆ ಎರಡೂ ಗುಡ್ಡೆಗ ಒಟ್ಟಾವಲ್ಲಿ ಸುಮಾರು ಅಡಿ ಆಳದ ಕಡಂಗ ಪೂರಾ ಉಟ್ಟು. ಈ ಕಡ್‌ಂಗದ ಅಡಿಬಾಗಲಿ ನೀರ್‌ನ ಸೆಲೆ ಹರ್‌ಕಂಡ್ ಹೋದೆ.





ತಡಿಯಂಡಮೋಳ್

ಮಲೆನ ಮೇಲೆ ಬಾಗಲಿ ಸುಮಾರ್ ಅಗಲ ಜಾಗೆ ಉಟ್ಟು ವರ್ಸದ ಎಲ್ಲಾ ಕಾಲಲಿ ಈ ಬಾಗಲಿ ಹಿಮ ಬಿದ್ದ್‌ಕೊಂಡಿದ್ದದೆ. ನೆಡುಲಿ ನಿತ್ತ್ ಸುತ್ತ ನೋಡುಕನ ಪಡುವದ ಕಡೆ ಅರಬ್ಬೀ ಸಮುದ್ರ ಮತ್ತೆ ಅದರ ಮೇಲೆ ತೇಲುವ ದೋಣಿಗ ಕಾಂಬಕೆ ಸಿಕ್ಕಿದೆ. ಕೊಡಗ್‌ನ ಎಲ್ಲಾ ಜಾಗೆಂದ ಹಾಂಗೆನೇ ಕೇರಳದ ಕೆಲಬಾಗಲಿ ಈ ಮಲೆನ ಕೊಡಿ ಕಂಡದೆ. ಮಲೆನ ಮೇಲೆಂದ ಮಡಿಕೇರಿನ ಕೋಟೆ, ಅರಮನೆಗ ಮಸ್ಕ್ ಮಸ್ಕ್ ಕಂಡದೆ. ಎಡಕ್ಕೆ ತಲಕಾವೇರಿ ಕಡೆನ ಬ್ರಹ್ಮಗಿರಿ ಮಲೆನು ಕಂಡದೆ... ಇಲ್ಲಿಂದ ಸೂರ್ಯ ಕಂತುದು ಸೂರ್ಯೋದಯಗಳ ನೋಡ್ದು ಬಾರೀ ಪೊರ್‌ಲು, ಮನಸ್ಸುಗೆ ಕುಸಿ ಕೊಟ್ಟದೆ... ಈ ಮಲೆನ ಬುಡಲಿ ಬತ್ತದ ಗದ್ದೆಗ, ಕಾಪಿತೋಟಗ ಪೂರಾ ಒಳ. ತಡಿಯಂಡಮೋಳ್ 'ಕೊಡಗ್‌ನ ಬೆಡಗುನ ಪೊರ್‌ಲುನ ಮುಡಿ' ತೇಳ್ವ ಉದ್ಗಾರಕ್ಕೆ ಸರಿಸಮಾನ ಆಗಿರುವ ಬಾರಿ ಲಾಯ್ಕನ ಜಾಗೆನು ಹೌದು. (ಕೆ.ಆರ್.ಯು.)

**ತಲಕಾವೇರಿ :** ಈ ಜಾಗೆ ಕಾವೇರಿ ಹಳ್ಳದ ಉಗಮಸ್ತಾನ. ಪವಿತ್ರ ಕ್ಷೇತ್ರ. ಕೊಡಗ್ ಜಿಲ್ಲೆನ ಮಡಿಕೇರಿ ತಾಲ್ಲೂಕ್‌ನ ಭಾಗಮಂಡಲ ಹೋಬಳಿಲಿ, ಭಾಗಮಂಡಲದ ತೆಂಕಲಿರ್‌ವ ಪೊಡ್‌ವಗಟ್ಟಗಳ ಮಲೆಗಳ್‌ಲಿ ಒಂದಾದ ಬ್ರಹ್ಮಗಿರಿನ ಇಳ್ಜಾರ್‌ಲುಟ್ಟು. ಭಾಗಮಂಡಲಂದ 8ಕಿಮೀ ವಾಹನಹೋವಂತ ಮಾರ್‌ಗ ಮುಕಾಂತರ, ಇಲ್ಲರೆ ಸು. 6ಕಿಮೀ ಕಾಲ್‌ದಾರಿಲಿ ತಲಕಾವೇರಿಗೆ ಹೋಗಿ ಮುಟ್ಟಕ್. ಮಡಿಕೇರಿಂದ 40ಕಿಮೀ ದೂರಲಿರ್‌ವ ಭಾಗಮಂಡಲಕೆ ಜಿಲ್ಲೆನ ಬೇರೆ ಬಾಗಗಂಳ್ದಲೂ ಬಸ್ಸ್‌ನ ಸೌಕರ್ಯ ಉಟ್ಟು.

**ಕಾವೇರಿ ಉಗಮ ಸ್ತಾನ (ಕುಂಡಿಗೆ) :** ತಲಕಾವೇರಿಲಿ ಅಗಸ್ತ್ಯೇಶ್ವರ ದೇಸ್ತಾನ ಮತ್ತೆ ಗಣಪತಿ ದೇಸ್ತಾನ ಉಟ್ಟು. ಅಗಸ್ತ್ಯೇಶ್ವರ ದೇಸ್ತಾನಲಿರುವ ಲಿಂಗನ ಅಗಸ್ತ್ಯ ಋಷಿ ಸ್ತಾಪಿಸಿದ್‌ಂತ ಪ್ರತೀತಿ. ಈ ದೇಸ್ತಾನದ ಕೆಳೆಗೆನ ತಟ್ಟ್‌ಲಿ ಕಾವೇರಿ ಹುಟ್ಟ್‌ವ ಒಂದ್ ಚಚ್ಚೌಕದ ಸಣ್ಣ ಗುಂಡಿನು ಅದರ ಮುಂದೆಗೆ ಯಾತ್ರೆಲಿ ಬಂದವ್ಕೆ ಮೀಯಕೆಂತ ಮಾಡ್ದ ಒಂದ್ ದೊಡ್ಡ ಕೆರೆನು ಉಟ್ಟು. ಕಾವೇರಿ ಹಳ್ಳ ಹುಟ್ಟುವ ಸಣ್ಣ ಗುಂಡಿಗೆ ಕುಂಡಿಗೆತ ಹೆಸರ್. ಈ ತೀರ್ತಕೆ ಒಂದ್ ಸಣ್ಣ ಮಂಟಪ ಕಟ್ಟಿಯೊಳೊ.

ತಲಕಾವೇರಿಲಿ ತುಲಾಮಾಸದ ಸಂಕ್ರಮಣಂದ ವೃಶ್ಚಿಕ ಮಾಸದ ಸಂಕ್ರಮಣದವರೆಗೆ ಜಾತ್ರೆ ನಡ್ದದೆ. ತುಲಾಸಂಕ್ರಮಣದ ದಿನ ಒಂದ್ ನಿಶ್ಚಿತ ಮುಹೂರ್‌ತಲಿ ಕಾವೇರಿ ನೀರ್ ತೀರ್‌ತ ಗುಂಡಿಂದ ಉಕ್ಕಿ ಹರ್‌ದದೆ. ಆ ದಿನ ತಲಕಾವೇರಿಗೆ ಕೊಡಗ್ ಜಿಲ್ಲೆನ ಎಲ್ಲ ಕಡೆಂದ ಮೈಸೂರು, ಹಾಸನ, ದಕ್ಷಿಣಕನ್ನಡ ಜಿಲ್ಲೆಗಂಳ್ದ, ತಮಿಳುನಾಡ್ ಮತ್ತೆ ಕೇರಳಂದನು ಸಾವಿರಾರ್ ಬಕ್ತರ್ ಬಂದ್ ಮೀವಗುಂಡಿಲಿ ಮೀದ್ ತೀರ್ತನ ಕುಡ್ದ್ ಅವರವರ ಮನೆಗಳಿಗೆ ತಕಂಡೋದವೆ. ಇಲ್ಲಿ ಯಾತ್ರಿಕರ್‌ಗೆ ಒಳ್ಕಂಬಕೆ ಮನೆನ ವೆವಸ್ತೆ ಉಟ್ಟು. ಇಲ್ಲಿಂದ ಸು. 300 ಅಡಿ ಎತ್ತರಲಿರ್‌ವ ಬ್ರಹ್ಮಗಿರಿನ ಹತ್ತಿ ಅಲ್ಲಿ ಸಪ್ತ ಋಷಿಗ ಹೋಮ ಮಾಡಿದ್ದೊ ತ ಹೇಳ್ವ ಏಳ್ ಸಣ್ಣ ಗುಂಡಿಗಳನೂ ನೋಡಕ್. ಬ್ರಹ್ಮಗಿರಿನ ಕೊಡಿಂದ ಬಾಣ ಬೊಳ್ಕೆರ್ ಇರಿಕನ ದೂರಲಿ ಪುರದ ಮಲೆಗ, ನೀಲಗಿರಿ ಹಾಂಗೆ ಬಡ್ಗದ ಕುದುರೆಮುಕ ಶಿಕರಗಳನೂ ಪಡ್ವಲಿ ಬೆಟ್ಟದ ಕೆಳೆಗೆನ ಕರಾವಳಿ ಪ್ರದೇಶನ ಅಲ್ಲಿ ಹಾವುನಾಂಕೆ ಡೊಂಕಾಗಿ ಹರಿವ ಹಳ್ಳಗಳನು ಮತ್ತೆ ಅದರ್ಂದ ಆಚೆ ಅರಬ್ಬೀ ಸಮುದ್ರನನೂ ಕಾಣಕ್.

ತಲಕಾವೇರಿಗೆ ಕಾಲ್ದಾರಿಲಿ ಗುಡ್ಡೆ ಹತ್ತಿ ಹೋಕನ ದಾರಿಲಿ ಬೀಮನಕಲ್ಲ್‌ತ ಕರಿವ ಒಂದ್ ದೊಡ್ಡ ಬಂಡೆಕಲ್ಲ್‌ಟ್ಟು. ಪಾಂಡವು ಹಿಂದೆ ವನವಾಸದ ಹೊತ್ತುಲಿ ಕೊಡಗ್‌ಗೆ ಬಂದಿದ್ದಂತಳೂ ಬೀಮ ಉಂಬಕನ ಹುಗ್ಗೆಲಿ ಸಿಕ್ಕಿದ ಕಲ್ಲ್‌ನ ಚೂರುನ ತೆಗ್ದ್ ಇಟ್ಟತ್‌ಗಡ. ಹಾಂಗೆ ತೆಗ್ದಿಟ್ಟ ಕಲ್ಲ್‌ನ ಚೂರೇ ಬೀಮನಕಲ್ಲ್‌ತ ಐತಿಹ್ಯ. ಅಲ್ಲಿಂದ ಮುಂದೆ ಬಂದರೆ ಯಾತ್ರಿಕರ್‌ಗೆ ಸಲಾಮ್ ಕಲ್ಲ್‌ತ ಹೆಸರಾಗಿರುವ ಒಂದ್ ಬಂಡೆ ಇರ್‌ವ ಜಾಗೆ ಸಿಕ್ಕಿದೆ. ಮೈಸೂರುನ ಟಿಪ್ಪುಸುಲ್ತಾನ ಕೊಡಗ್‌ನ ವಶಪಡಿಸಿಕಂಬಕನ ತಲಕಾವೇರಿನ ದೇಸ್ತಾನಗಳ ದೋಚಿಕೆ ಅಂವನ ಸೈನ್ಯಸಮೇತ ಈ ಕಲ್ಲ್‌ನವರೆಗೆ ಬಂದ್, ಈ ಕಲ್ಲ್‌ಲಿರ್‌ವ ಜಾಗೆಂದ ನಿತ್ತ್ ಕಾವೇರಿಗೆ ಕೈಮುಗ್ದ್ ಹಿಂದೆಗೆ ಹೋತ್‌ಂತೇಳ್ವೆ.


ಕಾವೇರಿ ಉಗಮ ಸ್ತಾನ (ಕುಂಡಿಗೆ)

**ತುಳು ಗೌಡ್ರ್‌ಗ :** ದಕ್ಷಿಣಕನ್ನಡ ಜಿಲ್ಲೆನ ಪುತ್ತೂರು, ಬೆಳ್ತಂಗಡಿ, ಮತ್ತೆ ಬಂಟ್ವಾಳ ತಾಲೂಕುಲಿ ಸುಮಾರ್ ಒಂದ್ ಲಕ್ಷದಸ್ಟ್ ತುಳು ಬಾಸೆ ಮಾತಾಡ್ವ ಗೌಡರ್ ಇರುವೊಂತ ಅಂದಾಜಿ ಮಾಡಿಯೊಳ ಇವರ 'ತುಳು ಗೌಡರ್'ತ ಗುರ್‌ತ ಹಿಡ್ದವೆ.

ತುಳು ಗೌಡರ್ ಐಗೂರುಂದ ಕರಾವಳಿಗೆ ವಲಸೆ ಬಂದವು. ಸಿರಾಡಿ ದೆವ್ವದ ಪಾಡ್ದನಲಿ ಇವರ ವಲಸೆ ಮತ್ತೆ ಹಬ್ಬಿದ ದಾರಿನ ವಿವರ ಸಿಕ್ಕಿದೆ.ಸಿರಾಡಿ ಗಟ್ಟ ಇಳ್ದ್, ಬಂಗಾಡಿ, ಉಪ್ಪಿನಂಗಡಿ, ಪುತ್ತೂರು, ವಿಟ್ಲ ಕಡೆಲಿ ನೆಲೆ ನಿತ್ತ ಇವು ಆ ಊರುಗಳ ಜಮೀನ್ದಾರರಾಗಿ ಜೈನರ್ ಮತ್ತೆ ಬಂಟರ ಕೈಕೆಳಗೆ ಕೆಲಸ ಮಾಡಿಕಂಡ್ ತುಳುಗೆ ಒಗ್ಗಿಕಂಡ. ಈ ತುಳು ಗೌಡರ್ ಉಂಬೊದು ತಿಂಬೊದು, ಕುಟುಂಬ ಪೊದ್ದತಿ, ನೆಲೆ, ಬಟ್ಟೆ ಬರೆಲಿ ಸುಳ್ಯದ ಗೌಡರ್‌ಂದ ವಿಸೇಸ ಆಗಿಯೇನ್ ಇಲ್ಲೆ. ಇವು ಪುತ್ತೂರು ಹಕ್ಕಲೆನ ಬಲ್ನಾಡ್ ಕಟ್ಟೆ ಮನೆನ ನಿಯಂತ್ರಣಕೆ ಒಳಪಟ್ಟ್ ಸೃಂಗೇರಿ ಮಟಕೆ ನಡ್ಕಂಡವೆ. ಒಳ್ದಂಗೆ ಮಾಗಣೆ ಗೌಡ, ಊರ್ ಗೌಡ ಮತ್ತೆ ಒತ್ತು ಗೌಡರ ನೇಮಕಾತಿ ಮತೆ ಕಾರ್ಯ ನಿರ್‌ವಣೆಲಿ ಯಾದೇ ವೆತ್ಯಾಸಗ ಇಲ್ಲ.

ಬೊಳಿ ಪದ್ದೊತಿಲಿ ವಿದಿ ನಿಸೇದಗ ಪೂರ ಸಮಾನ ಉಟ್ಟು. ತುಳು ಗೌಡ್ರ ಮೊದ್ವೆಗೆ ಬಟ್ರ್ ಬಾದು ಕಮ್ಮಿ. ಅಪ್ಪನೆ ಮಗಳ ದಾರೆ ಹೊಯ್ದ್ ಕೊಟ್ಟವೆ. ಒಳ್ದಂಗೆ ಹರ್‌ಸಯ, ಸಬ್ಬಮ್ಮ ದೇವ್ರ ಪೂಜೆ, ಸಿದ್ದ ವೇಸದ ಕೊಣ್‌ತಲಿ ತುಳು ಗೌಡ್ರು ಬುಡದೆ ನಡ್ಸಿಕಂಡ್ ಬರ್‌ತೊಳೋ. ಅದರ್‌ಲಿನು ಬಂಗಾಡಿ ಪರಿಸರಲಿ ನಡಿವ ಪುರ್‌ಸರ ಕೊಣ್‌ತಲಿ ಬಾರಿ ವಿಸೇಸ ಉಟ್ಟು. ಧರ್ಮಸ್ಥಳ ಮಂಜುನಾಥ, ಪುತ್ತೂರ್‌ನ ಮಾಲಿಂಗೇಶ್ವರ ಮತೆ ವಿಟ್ಲ ಪಂಚಲಿಂಗೇಶ್ವರ ದೇವ್ರ್‌ಗಳಿಗೆ ಇವು ಹೆಚ್ಚಾಗಿ ಹರ್‌ಕೆ ಒಪ್ಪುಸುವೆ.

ತುಳುನನೆ ವೆವಹಾರದ ಬಾಸೆ ಆಗಿದ್ ಬಳ್ಸುದರ್‌ಂದ ತುಳು ಗೌಡ್ರ ಜೆನಪದ ಸಾಹಿತ್ಯ ಎಲ್ಲ ತುಳುಲೆ ಉಟ್ಟು. ಈ ಸಾಹಿತ್ಯ ತುಳುನಾಡ್‌ನ ಬೇರೆ ಕಡೆಲಿರ್‌ವಂಗೆ ಉಟ್ಟು. ದುಡ್ಡು,ಸೌಕರ್ಯ ಮತ್ತೆ ಸಾಮಾಜಿಕ ಆಗಿದ್ ತುಳು ಗೌಡ್ರ್ ಸುಳ್ಯದ ಗೌಡರ್‌ಂದ ಬಾರಿ ಹಿಂದೆ ಒಳ್ದೊಳೊ. ತುಳು ಗೌಡರ್‌ಲಿ ವಿದ್ಯಾವಂತರ ಸಂಕೆ ಕಮ್ಮಿ, ದಿನಕೂಲಿ ಮಾಡಿಕಂಡ್ ಬೊದ್ಕ್ ಸಾಗ್‌ಸುವ ಇವರ್‌ಲಿ ಸ್ವಂತ ಆಸ್ತಿ ಇರವು ಬಾರಿ ಕಮ್ಮಿ. ಈ ಕಾರಣಂದ ಸುಳ್ಯದ ಅರೆಬಾಸೆ ಗೌಡ್ರ್ ತುಳು ಗೌಡರೊಟಿಗೆ ಅಸ್ಟಾಗಿ ಮೊದ್ವೆ ಸಮ್ಮಂದ ಬೆಳ್ಸುದುಲೆ. ಆದರೆ ಈಚೆಗೆ ಪರಿಸ್ತಿತಿ ಬದಲಾಗತುಟ್ಟ್. ತುಳು ಗೌಡರ ದುಡ್ಡುನ ವೈವಾಟ್‌ಲಿ ಆದ ಬದ್‌ಲಾವಣೆ, ಸಂಚಾರ ಮತೆ ಒಡನಾಟಲಿ ಆದ ಬೆಳವಣಿಗೆ ಎರ್‌ಡ್ ಕಡೆನ ಗೌಡರ ಹಕ್ಕಲೆ ತಂದುಟು. (ಪಿ.ಬಿ.)

ಗೌಡರ್ ಅಲ್ಲೊ ಒಕ್ಕಲಿಗರ್ ದಕ್ಷಿಣಕನ್ನಡ ಜಿಲ್ಲೆಗೆ ಬಂದ್ ಒಂದ್ ಕಾಲಲಿ ವಲಸೆ ಬಂದ ಜೆನಾಂಗದವಾದರ್‌ನು ಇಂದ್ ತುಳುನಾಡ್‌ಲಿ ಅವರ್‌ದೆ ಆದ ಸಂಸ್ಕೃತಿನ ಮೈಗೂಡ್ಸಿಕಂಡ್ ಬೊದ್ಕೆಂಡೊಳೊ. ದ.ಕ. ಜಿಲ್ಲೆನ ಪುತ್ತೂರ್, ಸುಳ್ಯ, ಬೆಳ್ತಂಗಡಿ ಹಾಂಗೆ ಬಂಟ್ವಾಳ ತಾಲೂಕುಲಿ ಗೌಡ್ರ್ ಹೆಚ್ಚಾಗಿ ಬೊದ್ಕೆಂಡೊಳೊ. ಇತ್ತೀಚೆಗೆ ಸುಮಾರ್ ದಸಕಂದ ಉದ್ಯೋಗದ ಮೇಲೆ ಮಂಗ್ಳೂರ್ ಮತೆ ಉಡುಪಿ ಜಿಲ್ಲೆಲಿ ನೆಲೆ ಆಗೊಳೊ.

ಕರ್ನಾಟಕಲಿ ಬೇರೆ ಬೇರೆ ಜೆನಾಂಗದವ್ 'ಗೌಡ' ಪದನ ಹೆಸರ್‌ನೊಟಿಗೆ ಸೇರ್‌ಸುದರ ಕಂಡವೆ.ಅದರ್‌ಲಿ ಮುಕ್ಯ ಆಗಿ ಮಲೆಕುಡಿಯಂಗ, ಕುಡುಬಿಗ, ಹಾಲಕ್ಕಿಗ, ಕುರ್ಬರ್, ಬೈರರ್, ಲಿಂಗಾಯಿತರ್ ಹಾಂಗೆ ಉತ್ತರಕನ್ನಡದಲಿ ಜೈನರ್ ಗೌಡ ಪದನ ಅವರ ಹೆಸರಿನೊಟಿಗೆ ಸೇರ್‌ಸಿಕಂಬೊದು ಕಂಡದೆ. ಆದರೆ ಜಾತಿ ಪ್ರಮಾಣ ಪತ್ರಲಿ ಗೌಡ ಅಲ್ಲೊ ಒಕ್ಕಲಿಗ ತೇಳ್ವ ಜಾತಿನ ಗೌಡ ಜೆನಾಂಗದವ್ಕೆ ಮಾತ್ರ ಕೊಟ್ಟವೆ.

ಗೌಡ ಜೆನಾಂಗದವ್ ಹಿಂದುಗ ಹಾಂಗೆ ತಿರುಪತಿ ವೆಂಕಟ್ರಮಣ ದೇವರ ಬೊಕ್ತರ್. ತಿರುಪತಿ ತಿಮ್ಮಪ್ಪ ಇವರ ಕುಲದೇವ್ರ್ ಅದ್ಕಾಗಿ 'ಮುಡಿಪು' ಕಟ್ಟಿ ಹರ್‌ಸಯ ಮಾಡ್‌ವೆ. ಗೌಡರ್ ವಿಜಯನಗರ ಸಾಮ್ರಾಜ್ಯದ ಕೃಷ್ಣದೇವರಾಯನ ಕಾಲಲಿ ಇದ್ದೊಂತ ಚರಿತ್ರೆಂದ ತಿಳ್ದ್ ಬಂದದೆ. ತಾಳಿಕೋಟೆನ ಯುದ್ದಂದಾಗಿ ವಿಜಯನಗರ ಬಿದ್ದ ಮೇಲೆ ಸಾಯ್ಬರ ಆಳ್ವಿಕೆಲಿ ಇರಿಕಾಗದ ಗೌಡರ್ ಅಲ್ಲಿಂದ ಇಕ್ಕೇರಿ ಸಂಸ್ತಾನಕೆ ಬಂದೊ. ಇಕ್ಕೇರಿನ ನಾಯಕಂಗ ದಕ್ಷಿಣಕನ್ನಡ ಜಿಲ್ಲೆನ ಹತೋಟಿಗೆ ತಕಂಬಕನ ಐಗೂರು ಸೀಮೆಂದ ಬಂದ ಗೌಡ ಜೆನಾಂಗದವ್ ದ.ಕ. ಜಿಲ್ಲೆಲಿ ನೆಲೆನಿತ್ತ್ ಬೇಸಾಯನ ಅವರ ಮೂಲಕಸುಬು ಆಗಿದ್ ಮಾಡಿಕಂಡ. ದ.ಕ. ಜಿಲ್ಲೆಲಿ ಇದ್ದ ಕೆಲವ್ ಗೌಡರ್ 18ನೇ ಸತಮಾನದ ಅಕೇರಿಗೆ ಹಾಂಗೆ 19ನೇ ಶತಮಾನದ ಸುರುಲಿ ಕೊಡಗ್‌ಗೆ ಹೋಗಿ ನೆಲ್ಸಿದೊ.

ದ.ಕ. ಜಿಲ್ಲೆಲಿ ಪುತ್ತೂರು, ಬೆಳ್ತಂಗಡಿ, ಬಂಟ್ವಾಳ ತಾಲೂಕುಲಿ ಇರ್‌ವ ಗೌಡ್ರ್ ತುಳು ಮಾತನಾಡ್‌ವೆ. ಸುಳ್ಯ ತಾಲೂಕ್‌ನ ಗೌಡ್ರ್ ಅಂದರೆ ಹಿಂದೆ ಕೊಡಗ್‌ನ ರಾಜೆನ ಆಳ್ವಿಕೆಗೆ ಒಳಪಟ್ಟ ಪ್ರದೇಸದ ಜೆನ ಅರೆಬಾಸೆ (ಗೌಡ ಕನ್ನಡ) ಮಾತಾಡ್‌ವೆ. ತುಳು ಗೌಡ್ರ್ ಕೂಡ ಹತ್ತ್ ಕುಟುಂಬ ಹದ್ನೆಂಟ್ ಗೋತ್ರ (ಬಳಿ) ಗಳಿಗೆ ಸೇರ್‌ದವು. ಆದ್ದರ್‌ಂದ ಮೊದ್‌ವೆನ ಹೊತ್ತುಲಿ ಹತ್ತು ಕುಟುಂಬ ಹದಿನೆಂಟು ಗೋತ್ರ (ಬಳಿ) ಜಾತಿ ಸಮಸ್ತರ ಒಪ್ಪಿಗೆ ತಕಂಡ್ ಎಲ್ಲಾ ಕಾರ್ಯಗಳ ಸುರುಮಾಡ್‌ವೆ.

ತುಳು ಗೌಡ್ರ್ ಪುತ್ತೂರು 'ಬಲ್ನಾಡು ಕಟ್ಟೆ' ಮನೆಗೆ ಸೇರ್‌ದವು, ಇವರ್‌ಲಿ ಊರ್‌ಗೌಡ, ಗ್ರಾಮಗೌಡ, ಮಾಗಣೆಗೌಡ್ರ್‌ತ ಆಡೆಳ್ತ ವೆವಸ್ತೆ ಇತ್ತ್. ಆದರೆ ಈಗ ಅದೆಲ್ಲ ಕಳ್ಕಂಡ್ ಬರ್‌ತುಟ್ಟು. ಹದ್ನೆಂಟ್ ಗೋತ್ರಗ ಕೂಡ ಸರ್ಯಾಗಿ ಸಿಕ್ಕುದು ಅಪ್ರೂಪ, ಊರುಂದ ಊರುಗೆ ಬೊಳಿಗಳ್‌ಲಿ ವೆತ್ಯಾಸಗ ಉಟ್ಟು, ತುಳುಗೌಡ್ರ ಹದ್ನೆಂಟ್ ಬೊಳಿಗ ಹೀಂಗುಟ್ಟು. (1) ನಂದರ್ (2) ಬಂಗೇರ್ (3) ಮೂಲೇರ್ (4)




ಗುಂಡೆರ್ (5) ಚಾಲ್ಯೆರ್ (6) ಚಿತ್ತೆರ್ (7) ಕೆಲ್ಲೆರ್ (8) ನಾಯೆರ್ (9) ಜತ್ತೆರ್ (10) ಕಬರ್ (11) ಗೌಡೆರ್ (12) ಕರ್ಂಬೆರ್ (13) ದೇವೆರ್ (14) ಬಳಸನ್ನ (15) ಪೆರ್ಬನ್ನೆ (16) ಪೆರ್ಗಡೆ (17)ಹೆಮ್ಮನ (18) ಲಿಂಗಾಯಿತ.

ಈ ಹದ್ನೆಂಟ್ ಬೊಳಿಗಳ ಹೆಸರ್‌ಲಿ ಊರುಂದ ಊರುಗೆ ವೈತ್ಯಾಸ ಉಟ್ಟು. ಆದರೆ ಸಂಕೆ ಹದ್ನೆಂಟೆ ಇದ್ದದೆ.

ತುಳುಗೌಡರ್‌ಗೆ ಗುರುಮಟ ಶೃಂಗೇರಿ ಆಗಿತ್ತ್. ಹಿಂದೆನ ಕಾಲಲಿ ಶೃಂಗೇರಿ ಮಟಕೆ ಗುರುಕಾಣಿಕೆ ಕೊಡುವ ಕ್ರಮ ಇತ್ತ್. ಮೊದ್‌ವೆಲಿ ಗಂಡ್‌ನ ಕಡೆವು ರುಪಾಯಿ 10. 50ನ 'ತೆರ' ರೂಪಲಿ ಕೊಡಿಕಿತ್ತ್. ಇದರ್‌ಲಿ ರುಪಾಯಿ 6. 25 ಪೈಸೆನ ಹೆಣ್ಣ್‌ನ ಮುತ್ಯೆದೆತನಕೆ ಸೃಗೇಂರಿ ಗುರುಮಟಕೆ ಕೊಡಿಕಿತ್ತ್. ಈ ದುಡ್ಡುನ ಹಿಂದೆ ಊರುಗೌಡ್ರ್ ಮಾಗಣೆ ಗೌಡರ್‌ಲಿ ಕೊಡ್ತಿದ್ದೊ ಮಾಗಣೆಗೌಡ್ರ್ ಕಟ್ಟೆಮನೆಗೆ ಕಳ್ಸಿಕೊಡ್ತಿದ್ದೊ. ಕಟ್ಟೆಮನೆವು ಸೃಗೇಂರಿ ಗುರುಮಟಕೆ ಕಳ್ಸುವ ವೆವಸ್ತೆ ಮಾಡ್ತಿದ್ದೊ ಹಿಂದೆ ಕಟ್ಟೆಮನೆನ ಅಡಿಲಿ ಮಾಗಣೆಗೌಡ್ರ್, ಮಾಗಣೆಗೌಡ್ರ ಅಡಿಲಿ ಊರುಗೌಡ್ರ್ ಮತ್ತೆ ಒತ್ತುಗೌಡ್ರ್ ಇರ್‌ತಿದ್ದೊ. ಆದರೆ ಇಂದ್ ಬರಿ ಊರುಗೌಡ್ರೆ ಎಲ್ಲಾ ಕಾರ್ಯಗಳ ನಡ್ಸಿಕಂಡ್ ಬರ್‌ತೊಳೊ.

ತುಳುಗೌಡ್ರ್ ಮೊದ್‌ವೆಲಿ ವಿಳೆಸಾಸ್ತ್ರಕೆ ಬಾರಿ ಮಹತ್ವ ಉಟ್ಟು. ಸಾಮಾನ್ಯ ಆಗಿ ಗೌಡ್ರ ಮೊದ್‌ವೆಲಿ ಹನ್ನೆರ್‌ಡ್ ವೀಳ್ಯನ ಕಟ್ಟುವೆ. 1. ಚೌಕದ ವೀಳ್ಯ, 2. ದೇವರ ವೀಳ್ಯ, 3. ಗುರು ವೀಳ್ಯ, 4. ದಶಮಾಗಣೆ ವೀಳ್ಯ, 5. ಗೌಡ ವೀಳ್ಯ, 6. ಮಾವನ ವೀಳ್ಯ, 7. ತಾಯಿತಂದೆ ವೀಳ್ಯ, 8. ತೆರವು ಮರವಿನ ವೀಳ್ಯ, 9. ಅಚ್ಚುಕಟ್ಟು ವೀಳ್ಯ, 10. ಬಣ್ಣ ಬಂಗಾರದ ವೀಳ್ಯ, 11. ನಿಶ್ಚಯದ ವೀಳ್ಯ, 12. ಲಗ್ನದ ವೀಳ್ಯ ಈ ಎಲ್ಲಾ ವೀಳ್ಯ ಕಟ್ಟಿಕನ ಹೀಂಗೆ ಕರ್‌ದ್ ಹೇಳ್‌ವೆ; ಅರಮನೆವು ಕಿರುಮನೆವು ಶೃಂಗೇರಿಗುರುಮಟತಕಲೆಡೆ ಪಡ್ಡಾಯಿ ಒರುಂಬೊ ಮಾಗಣೆ ಮೂಡಾಯಿ ಒರುಂಬೊ ಮಾಗಣೆ ಪತ್ತೆಪ್ಪೆ ಬಾಲೆಲು ಪದಿನೆಮ್ಮ ಬರಿ ಬಂದುಲೆಡಲ ಇತ್ತಿ ದಿಬ್ಬನೆರೆಡಲ ಬತ್ತಿದಿಬ್ಬನೆರಡಲ ಸಕಲ ಸಮಸ್ತರೆಡಲ ಆಣ್‌ಗ್‌ಲ– ಪೊಣ್ಣಾಗ್‌ಲ ವೀಳ್ಯಕಟ್ಟೆ ಪನ್ಪೆರ್ ಎಂದು ಹೇಳುತ್ತಾರೆ.

ಆಗ ಒಳ್ದವು 'ಎಡ್ಡೆ ಪನ್ಪೆರ' ತೇಳುವೆ. ಹೀಂಗಾಗಿ ಮೊದ್‌ವೆನ ಯಾದೇ ಕಾರ್ಯಕ್ರಮಗ ಎಲ್ಲರ ಕೇಳಿಯೇ ಆದು.

ತುಳುಗೌಡ್ರ್ ಅವರ ಜೀವನಲಿ ಹುಟ್ಟು, ನೆರ್‌ದ ಮೊದ್‌ವೆ, ಬಯಕೆ (ಸೀಮಂತ), ಸಾವು ಹಾಂಗೆ ಸಾವುನ ಮೇಲೆನ ಕ್ರಮಗಳ ಅವರ ಜಾತಿ ಕಟ್ಟುಪಾಡ್‌ನ ಒಳೆಗೆ ಬಾರಿ ಸ್ರದ್ದೆಂದ ನಡ್ಸಿಕಂಡ್ ಬಂದವೆ. ವರ್‌ಸದ ಹಬ್ಬಗಾದ ಆಟಿ ಅಮಾವಾಸ್ಯೆ, ಶ್ರಾವಣ ಶನಿವಾರ, ಯುಗಾದಿ, ದೀಪಾವಳಿ, ಹುತ್ತರಿಹಬ್ಬ, ಕೆಡ್ಡಸ, ಬಿಸು, ಕಾವೇರಿಸಂಕ್ರಮಣ ಇಂತ ವರ್‌ಸಂಪ್ರತಿ ನಡಿವ ಹಬ್ಬಗಳ ಆಚರ್‌ಸುವೆ. ಅಲ್ಲದೆ ತುಳುನಾಡ್‌ನೆ ಗೌಡ್ರ್ ದೆವ್ವ ಆರಾದಕರ್ ಇಲ್ಲಿ ದೆವ್ವಗಳ ಆರಾದನೆ ಕ್ರಿಸಿ ಸಂಸ್ಕೃತಿತ ಒಟ್ಟಿಗೆ ಬೆಳ್‌ದ್ ಬಂದಿರ್‌ದು ಗೌಡ್ರ ಕ್ರಿಸಿ ಸಂಸ್ಕೃತಿಗೆ ಕೂಡ್ದ ದೆವ್ವಗಳ ನಂಬುವೆ. ಮುಕ್ಯ ಆಗಿ ಪಂಜುರ್‌ಲಿ, ರಕ್ತೇಶ್ವರಿ, ಗುಳಿಜ್ಜ, ಜುಮಾದಿ, ಶಿರಾಡಿ ಮತ್ತೆ ಕಲ್ಕುಡ ಕಲ್ಲುರ್ಟಿ, ರುದ್ರಚಾಮುಂಡಿ ಇಂತ ದೆವ್ವಗಳ ಬಕ್ತಿಂದ ಆರಾದ್‌ಸುವೆ.

ಮೂಲತ ಗೌಡ್ರ್ ಕನ್ನಡ ಮಾತಾಡವಾದರು ತುಳುನಾಡ್‌ನ ಜೆನರೊಟಿಗೆ ಸೇರಿ ತುಳುಬಾಸೆನ ಮತೆ ಬೊಳಿ ಪೊದ್ದತಿನ ಅವರ ಬೊಡ್ಕ್‌ಲಿ ಸೇರ್‌ಸಿಕಂಡೊಳೊ. ಯಾಕೆಂತೇಳಿರೆ ಗೌಡ್ರ ಆಚರ್ಣೆಗಳ್‌ಲಿ ಬಾವ ಸಾಂಸ್ಕೃತಿಕಪದಂಗ ಇಂದ್ ಕೂಡ ಅದ್ ಕನ್ನಡಲೇ ಇದ್ದದೆ.

ತುಳುಗೌಡ್ರ್ ಹೆಚ್ಚಾಗಿ ಕ್ರಿಸಿ ಕೂಲಿ ಕಾರ್ಮಿಕರಾಗಿದ್ದೊ. ಕರ್ನಾಟಕದಲಿ ಬೂ ಮಸೂದೆ ಬಂದ ಮೇಲೆ ಉಳುವನೇ ಹೊಲದೊಡೆಯ ತೇಳ್ವ ಕಾನೂನ್‌ಂದ ಎಲ್ಲಾ ಕ್ರಿಸಿ ಕಾರ್ಮಿಕಂಗ, ಬೂ ಹಿಡುವಳಿ ದಾರರ್ ಹೊಸ ಕಾಲದ ಗಾಳಿ ಗೌಡ ಜೆನಾಂಗದ ಮೇಲೆ ಪ್ರಬಾವ ಬೀರ್‌ದ ಕಾರಣ ಗೌಡ ಸಮುದಾಯದ ಯುವ ಜೆನಂಗ ಇಂದ್ ಶಿಕ್ಷಣ ಪಡ್ಕಂಡ್ ಉದ್ಯೋಗ ಕ್ಷೇತ್ರ್‌ಲಿ ಅವರವು ತೊಡ್ಗ್‌ಸಿಕಂಡೊಳೊ. ಒಂದ್ ಕಾಲಲಿ ತುಳುಗೌಡ್ರ್ ಅರೆಬಾಸೆ ಗೌಡ್ರ ಒಟ್ಟಿಗೆ ಮಾತ್ರ ಮೊದ್‌ವೆ ಆಗತಿದ್ದೊ. ಇಂದ್ ಕರ್ನಾಟಕದ ಬೇರೆ ಬೇರೆ ಒಕ್ಕಲಿಗ ಪಂಗಡದ ಒಟ್ಟಿಗೆ ಸಮ್ಮಂದ ಬೆಳ್ಸಿಕಂಡ್ ಮುಂದುವರೆತೊಳೊ. ಸೃಂಗೇರಿ ಗುರುಮಟದ ಕೊಂಡಿ ಕಡಿಮೆ ಆಗಿ ಆದಿಚುಂಚನಗಿರಿ ಮಟದೊಟಿಗೆ ಕೂಡ್ತೊಳೊ.

ಹಂಗಾಗಿ ಇದರ್‌ಂದ ತುಳುಗೌಡ್ರುಗ ಕರ್ನಾಟಕದ ಒಕ್ಕಲಿಗ ಸಮುದಾಯದೊಟಿಗೆ ಅವರವು ಕೂಡ್ಸಿಕಂಬೊದರ ನಾವಿಂದ್ ಕಾಣಕ್. (ವೈ.ಜಿ.)

**ತುಳುನಾಡ್‌ನ ಇತಿಯಾಸ ರಚನೆಲಿ ಐತಿಹ್ಯ–ಪುರಾಣಗಳ ಪಾತ್ರ :** ಬಾರಿ ಪಂಡ್‌ನ ಕಾಲಲಿ, ನಡ್ದ ವಿಚಾರಗಳ, ಕತೆಗಳ ನಾವ್ ಇಂದ್ 'ಇತಿಯಾಸ' 'ಚರಿತ್ರೆ' ತೇಳಿ ಓದುವೆ. ನಾವ್ ಇಂದ್ ಇತಿಯಾಸ ತ ಓದ್‌ತಿರ್‌ದು ಎಲ್ಲಾನೂ ಹಿಂದೆ ನಡ್ದ ಸತ್ಯ ಗಟನೆಗ ಅಲ್ಲ. ನಡ್ದ ಗಟನೆಗಳ ಒಟ್ಟಿಗೆ ಜೆನ ಸೇರ್‌ಸಿಕಂಡ್ ಹೇಳ್‌ದ ವಿಚಾರಗನೂ ಇರ್‌ದು. ಸತ್ಯ ಬೇರೇನೆ ಇದ್ದ್ ನಾವು ಓದ್‌ವ ವಿಚಾರ ಬೇರೆನೆ ಇರ್‌ದು ಇದ್ ಸುಳ್ಳ್ ಅಲ್ಲ. ಆದರೆ ನಾವ್ ಇದರ ಇತಿಯಾಸಂತ ಒಪ್ಪಿಕಂಡ್ ಬಂದೊಳ. ಪಂಡ್ ಕಾಲಲಿ ನಡ್ದಂತ ವಿಚಾರಗ, ಅಲ್ಲರೆ ಈ ಪಂಡ್ ಕಾಲದ ವಿಚಾರಗ ಇಂದ್ ಕತೆ, ಇತಿಯಾಸ, ಪುರಾಣ, ಜೆನಪದ ಕತೆಗಳ್‌ಲಿ, ಜೆನಪದರ ಹಾಡ್‌ಗಳ್‌ಂದ ತಿಳ್ದ್ ಬಂದದೆ. ಪದಗ ಮತ್ತೆ ಅದರ ಅರ್‌ತಗಳ್‌ಂದ ನೋಡಿರೆ ಇತಿಯಾಸಕು ಐತಿಹ್ಯಕು ಸಮ್ಮಂದ ಉಟ್ಟ್. ಐತಿಹ್ಯಂತೇಳಿರೆ ಯಾದೋ ಒಂದ್ ಕಾಲಲಿ ಮೊಯಿಂಸರ್, ಜಾಗೆ, ಅಲ್ಲರೆ ಯಾದೇ ಸಾಮಾನ್‌ಗೆ ಸಮ್ಮಂದಪಟ್ಟಂಗೆ ನಡ್ದ ವಿಚಾರಗಳ ಬಾಯಿಲಿ ಹೇಳ್‌ದು. ಇದ್



ಬಾಯ್‌ಂದ ಬಾಯಿಗೆ ಹರ್‌ದ್ ಬಾಕನ ಮೂಲ ಕತೆ ಬದಲಾಗಿರುಕು ಸಾಕ್. ಊಹೆ ಮಾಡಿಕಂಡ್ ಹೇಳ್ದಂತದ್ ಆಗಿರುಕು ಸಾಕ್. ಇದ್ಕೆ ಯಾದೇ ಆದಾರ ಇರ್‌ದುಲೆ. ಆದರೆ ನಡ್‌ದ ವಿಚಾರಗ ಬರ್‌ದದ್ ಇದ್ದರೆ, ಪುಸ್ತಕ ರೂಪಲಿ ಇದ್ದರೆ ಅದ್‌ರ ಇತಿಯಾಸಂತ ಹೇಳಕ್. ಇದಿಕೆ ಆದಾರ ಉಟ್ಟು, ಇದ್ ನಂಬುವಂತದ್. ಮೊಯಿಂಸರ ಬಾಯಿಂದ ಬಾಯಿಗೆ ಹರ್‌ದ್ ಬಂದಂತ ವಿಚಾರಗ ಇಂದ್ ಬೆಳ್ದ್ ಜೆನಪದ ಪುರಾಣ ಆಗಿರುಕು ಸಾಕ್. ಹಿಂಗೆ ಪುರಾಣಗ ಹುಟ್ಟಿಕಂಕನ ಅದ್ಕೆ ಪವಾಡ ನಡ್‌ದಂತದ್, ನೆನ್ಸಿಕಂಬಕೆ ಆಗದ ವಿಚಾರಗ ನಡ್ದದ್, ದೆವ್ವ ದೇವ್‌ರ್‌ಗಳ ವಿಚಾರಗ, ಋಸಿಮುನಿಗಳ ತಪಸ್ಸ್‌ನ ಕತೆಗ ಎಲ್ಲಾ ಸೇರಿಕಂಡ್ ಮತ್ತಸ್ಟ್ ಉದ್ದ ಆವುಟು. ಇದರೊಟ್ಟಿಗೆ ಮೊಯಿಂಸರ ನೊಂಬಿಕೆನ ವಿಚಾರಗ ಸೇರಿಕಂಡದೆ. ಇದ್ ಹಿಂದೆ ವಿವರಣೆ ಆಗಿ ಹೇಳ್‌ವ ಕತೆನ ರೂಪಲಿದ್ದ್ ಕಾಲ ಬದಲಾದಂಗೆ ಪೊದ್ಯ ರೂಪಕೂ ಬದಲಾವುಟು. ಲಾವಣಿ, ತುಳ್‌ನಾಡ್‌ನ ಪಾಡ್ದನ, ಸಂದಿ ಇದ್ ಗದ್ಯ ರೂಪಲಿ ಇದ್ದದ್ ಪೊದ್ಯ ರೂಪಕೆ ಬದಲಾದ ವಿಚಾರಗಂತನೇ ಹೇಳಕ್. ಹಂಗೆನೆ ಈ ಐತಿಹ್ಯಗಳ ಎರ್‌ಡ್ ಬಾಗ್ ಮಾಡಕ್. ಒಂದ್ ಜಾಗೆಗೆಳಿಗೆ ಸಮ್ಮಂದಪಟ್ಟಾಂಗೆ ಇನ್ನೊಂದ್ ಮೊಯಿಂಸರ್‌ಗೆ ಸಮ್ಮಂದ ಪಟ್ಟದ್. ಸಾಮಾನ್ ಹಂಗೆನೆ ಪ್ರಾಣಿಗಳಿಗೆ ಸಮ್ಮಂದಪಟ್ಟ ಐತಿಹ್ಯಗ ಒಳ. ಅದರಾಂಗೆ ಜಾಗೆಗೆ ಸಮ್ಮಂದಪಟ್ಟಂಗೆ ಸ್ತಳ ಪುರಾಣ, ಮೊಯಿಂಸರ್‌ಗೆ ಸಮ್ಮಂದಪಟ್ಟಂಗೆ ಮೊಯಿಂಸರ ಪುರಾಣ ಹಂಗೆನೆ ದೇವ್‌ರ್‌ಗಳಿಗೆ ಸಮ್ಮಂದಪಟ್ಟ ದೆವ್ವೀ ಪುರಾಣಂತನೂ ವಿಂಗಡನೆ ಮಾಡಕ್. ಬಾಯಿಂದ ಬಾಯಿಗೆ ಬಂದ ಪಂಡ್‌ನ ಕಾಲದ ವಿಚಾರಗ ಹಂಗೆನೆ ಆದಾರ ಇರ್‌ವಂತ ಇತಿಯಾಸ ಪುರಾಣಗ ಜೆನಪದ ಪುರಾಣಲಿನು ಕಂಡ್ ಬಂದದೆ. ಐತಿಹ್ಯ–ಪುರಾಣಗ ನಿಜವಾಗಿ ನಡ್ದ ವಿಚಾರಗಳ, ನಡ್ದ ವಿಚಾರಗಳಿಗೆ ಒಂದ್ ಚೂರ್ ಬೇರೆನೂ ಸೇರ್‌ಸಿ ಹೇಳ್ದ ವಿಚಾರಗ ಹಂಗೆನೆ ನಡ್‌ದ ವಿಚಾರಗಳ ಸುತ್ತ ಹಬ್ಬಿಕಂಡ ಸುಳ್ಳು ವಿಚಾರಗ ಇದ್ ಎಲ್ಲದರೊಟ್ಟಿಗೆ ಒಂಚೂರ್ ಸತ್ಯಾಂಸನನೂ ತನ್ನ ಒಳೆಗೆ ಇಸಿಕಂಡದೆ. ಇದರ್‌ಂದಾಗಿನೇ ಇದರ ಅದ್ಯಯನ ಮಾಡ್ದರ್‌ಂದ ಹೊಸ ವಿಚಾರಗಳ ತಿಳ್ಕಂಬೊಕೆ ಆದೆ. ಇದ್ ಒಂದ್ ರೀತಿಲಿ ಹೊಸ ಬೆಳ್‌ಕ್‌ನೆ ಸೂಸಿದೆ ತನೇ ಹೇಳಕ್.

ಇಂದ್‌ನ ಇತಿಯಾಸಕಾರರ್ ರಾಜರ ಆಡಳ್ತೆದ ವಿಚಾರಗ ಮಾತ್ರ ಚರಿತ್ರೆಂತ ತಿಳ್‌ದ್ ಅದ್‌ಕೆ ಸಮ್ಮಂದಪಟ್ಟ ಸಾಸನಗಳ, ಸಾಹಿತ್ಯಗಳ ವಿದೇಸಿಯರ್ ಬರ್‌ದ ಬರಹಗಳ, ಚಿಲ್ಲರೆ ದುಡ್ಡು, ಮೊಣ್ಣ್ ಪಾಲಾಗಿ ಒಳ್ದ ಅವಸೇಸಗ, ಹಂಗೆನೆ ಅವರ ಸ್ಮಾರಕಗಳ ತಮ್ಮ ಅದ್ಯಯನಕೆ ಬಳ್ಸಿಕಂಡ್ ಚರಿತ್ರೆ ರಚನೆ ಮಾಡ್‌ವೆ. ಬ್ರಿಟಿಸರ್ ಆಳ್ವಿಕೆ ಮಾಡಿ ಕಲ್‌ಸಿ ಬುಟ್ಟು ಹೋದ ವಿಚಾರಗಳ ನಾವ್ ಇಂದ್ ಪಾಲಿಸ್‌ತ ಒಳ. ಸ್ವಾತಂತ್ರ್ಯ ಬಂದ್ ಇಸ್ಟ್ ವರ್‌ಸ ಆದರೂ ಅದರ ಬುಡಿಕೆ ನಮ್ಮಂದ ಆತ್‌ಲೆ. ಆದರೆ ತುಳ್‌ನಾಡ್‌ಲಿ ಇಂತ ವಸ್ತುಗ ಯಾದು ಸಿಕ್ಕಿಲ್ಲೆತ ಕಂಡದೆ ಅದ್ಕಾಗಿ ತುಳ್‌ನಾಡ್‌ನ ಚರಿತ್ರೆಕಾರರ್ ಜೆನಪದ ಸಾಹಿತ್ಯಗಳ ಬಳ್ಸಿಕಂಡ್ ಇಲ್ಲಿನ ಇತಿಯಾಸನ ಬರ್‌ದೊಳ. ಈ ಜೆನಪದನ ಬಳ್ಸಿಕಂಡ್ ಇತಿಯಾಸ ಬರೆದರ್‌ಲೂ ಎರ್‌ಡ್ ಬಗೆ ಉಟ್ಟು. ಒಂದ್ ಜೆನಪದನ ಬಳ್ಸಿಕಂಡ್ ಮೌಕಿಕ ಇತಿಯಾಸ ಕಟ್ಟುದು ಇನ್ನೊಂದು ಲಿಕಿತ ಇತಿಯಾಸ ಬರೆದು. ವಿದ್ವಾಂಸರ್‌ಗಾದ ಗಣಪತಿರಾವ್ ಐಗಳ, ಎನ್. ಎ. ಸೀನಪ್ಪ ಹೆಗಡೆ, ಎನ್. ಎಸ್. ಕಲೆ ಇವ್ ಮೌಕಿಕ ರೂಪನ ಆಯ್ಕೆ ಮಾಡಿಕಂಡ್ ಜೆನಪದ ದಾಟಿಲಿ ತುಳುನಾಡ್‌ನ ಸಾಂಸ್ಕೃತಿಕ, ಸಾಮಾಜಿಕ ಹಂಗೆನೆ ರಾಜಕೀಯ ಇತಿಯಾಸನ ಬರ್‌ದೊ. ಇತಿಯಾಸನ ಸಂಸೋದನೆ ಮಾಡ್‌ದಂತ ಗೋವಿಂದ ಪೈ, ಬಿ, ಎ. ಸಾಲೆತ್ತೂರು, ಪಿ. ಗುರುರಾಜ ಭಟ್ಟರ್ ಇತಿಯಾಸನ ಬರೆಕೆ ತುಳುನಾಡ್‌ನ ಆಚರಣೆ, ನಂಬಿಕೆ, ಇಲ್ಲಿ ಆಚರ್‌ಸುವಂತ ಸಂಪ್ರದಾಯಗ ಹಂಗೆನೆ, ಜೆನಪದರ ಬಾಯಿಂದ ಬಾಯಿಗೆ ಹರ್‌ದ್ ಬಂದ ವಿಚಾರಗ, ಪುರಾಣಗ ಇದರೆಲ್ಲದರ ಬಳ್‌ಸಿಕಂಡೊ. ಸುಮಾರ್ 1968 ವರ್‌ಸಗಳ ಹಿಂದೆ ಕಮಲಾಕ್ಷ ಅವು ಈ ಜೆನಪದದ ವಿಚಾರಗಳ ಬಳ್ಸಿಕಂಡ್ ದಕ್ಷಿಣಕನ್ನಡ ಜಿಲ್ಲೆನ ಹರಿಜೆನ ಮತ್ತೆ ಗಿರಿಜೆನರ ಸಾಮಾಜಿಕ ಇತಿಯಾಸ'ನ ಬರ್‌ದೊಳ. ಇದ್ ಇಂದ್‌ಗೂ ಸಮ್ಮಂದಪಟ್ಟ ಕೆಲವೊಂದ್ ವಿಚಾರಗಳ ತನ್ನೊಳೆಗೆ ಇಸಿಕಂಡುಟ್ಟು. ಅಸ್ಟೇ ಅಲ್ಲದೆ ಐತಿಹ್ಯ ಪುರಾಣ ಕತೆಗಳ ಬಾರಿ ಲಾಯ್ಕ್‌ಲಿ ಇರ್‌ವ ಕೃತಿಗ ನಮ್ಮಲ್ಲಿ ಒಳ. ಬೇಕಲ ರಾಮ ನಾಯ್ಕರ 'ತೆಂಕನಾಡ ಐತಿಹ್ಯಗಳು', 'ಬಾಳಿದ ಹೆಸರು' ಅದಿಕೆ ಉದಾರ್‌ಣೆ. ತುಳುನಾಡ್‌ನ ಬುಟ್ಟು ಹನಿಸ್ ಅತ್ತಕ್ಕೆ ಹೋದರೆ, ಕಲ್ಹಣನ ಸಂಸ್ಕೃತ ಕಾವ್ಯ' ರಾಜತರಂಗಿಣಿ' ದೇವಚಂದ್ರನ ಕನ್ನಡ ಕಾವ್ಯ'ರಾಜಾವಳಿ ಕತಾಸಾರ' ಇದೆಲ್ಲಾ ಐತಿಹ್ಯಗಳ ಆದಾರ ಆಗಿಸಿಕಂಡ್ ರಚನೆ ಆದಂತದ್. ಇವೆಲ್ಲನೂ ಒಂದಲ್ಲ ಒಂದ್ ತರಲಿ ಒಂದ್ ಜಾಗೆ, ಅಲ್ಲರೆ ಮೊಯಿಂಸರ ಚರಿತ್ರೆಗಳ ತಿಳ್ಸುವಂತದ್. ಇದೆಲ್ಲ ಬರವಣಿಗೆ ರೂಪಲಿ ಇಲ್ಲೆಂತ ತಿರಸ್ಕಾರ ಮಾಡಿಕೆ ಆದ್ಲೆ. ಆದರೆ ಇನ್ನೊಬ್ಬರ ಆಡೆಳ್ತದ ಕೈಕೆಳಗೆ ಬೆಳ್ದ್ ಬಂದ ಇತಿಯಾಸಕಾರರ್ ಇದರ ಎಲ್ಲಾ ಚರಿತ್ರೆ ತ ಒಪ್ಪಿಕಂಬದುಲೆ. ನಿಜಾಗಿ ನಡ್ದಂತ ವಿಚಾರಗಳ ಇತಿಯಾಸ ತ ನಾವ್ ಕರ್‌ದರು ಈ ಮೌಕಿಕ ರೂಪಲಿ ಇರ್‌ವಂತ ಇತಿಹ್ಯ ಪುರಾಣಗಳಿಗೂ ಅಲ್ಲಿ ಜಾಗೆ ಕೊಟ್ಟೇ ಕೊಡಕಾದೆ.

ಪ್ರತಿಯೊಂದರನು ವಿಚಾರ ಮಾಡಿನೋಡ್‌ವಂತ ಇಂದ್‌ನ ಕಾಲಲಿ ಜಾನಪದನ ಬಳ್‌ಸಿಕಂಡ್ ಸಮಾಜಸಾಸ್ತ್ರ ಮತ್ತೆ ಮಾನವಸಾಸ್ತ್ರದಂತ ಬೇರೆ ವಿಸಯಗಳ್‌ಲಿನ ಜ್ಞಾನ, ಸಿಸ್ತ್‌ನ ಬಳ್‌ಸಿಕಂಡ್ ಒಂದ್ ಊರ್‌ನ ಇಲ್ಲರೆ ಅಲ್ಲಿನ ಮೊಯಿಂಸರ ಬೊದ್ಕ್‌ನ ಸಂಗತಿನ ಇತಿಯಾಸನ ಬರೆವ ಮೊಯಿಂಸ್ ಇಂದ್‌ನ ಸಂಸೊದಕರ್‌ಲಿ ಕಂಡ್ ಬಂದದೆ. ಒಂದ್ ಊರ್ ಅಲ್ಲರೆ ಮೊಯಿಂಸರ ಬೊದ್ಕ್‌ನ ಇಡಿ ಸಂಸ್ಕೃತಿನ, ಅದರ ಒಳೆಗೆ ಅಣ್‌ಗಿಕಂಡ್ ಇರ್‌ವ ಇನ್ನಿತರ ಸಂಸ್ಕೃತಿಗ, ಅದರ ಸುತ್ತೊಳು ಇರ್‌ವ ಬೇರೆ ಸಂಸ್ಕೃತಿಗ ಎಲ್ಲದರ ಬಗ್ಗೆ ವಿವರಣೆ ಸಿಕ್ಕಿಕೆ ಕಾರಣ ಪ್ರತಿಯೊಂದರನು ಬಾರಿ ವಿಚಾರ ಮಾಡಿ ಅದ್ಯಯನ ಮಾಡ್‌ದು ತ ಹೇಳಕ್.




ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟ ಮಾಡ್ದಂತ ಕೆಲೊವ್ ಜೆನಾಂಗಿಕ ಅದ್ಯಯನ ಕೃತಿಗಳ ನಾವ್ ಈ ದ್ರಿಸ್ಟಿಲಿ ನೋಡಕ್. ಇತ್ತೀಚೆಗೆ ಎನ್ ಸಂಕರನಾರಾಯಣರಾವ್ ಅವು ಬರ್‌ದ 'ವಣಿಯರವರ ಸಮಾಜ ಮತ್ತೆ ಜಾನಪದ ಇತಿಯಾಸ' ತ ಹೇಳ್‌ವ ಕೃತಿಲಿ ಬುಡಕಟ್ಟ್ ಜೆನಾಂಗ ಒಂದರ ಬೊದ್ಕ್‌ನ ಚಿತ್ರಣನ ವಿವರ್‌ಸಿದರ ನೋಡಿರೆ ನಿಜಾಗಿದ್ ವಿಚಾರವಂತ ಮೊಯಿಂಸುನ ಸ್ತಿತಿ ಅರ್‌ತ ಆದೆ. ಕರ್ನಾಟಕದ ಮೈಲಾರಲಿಂಗ, ಮಂಟೇಸ್ವಾಮಿ, ಮಲೆಮಾದೇಸ್ವರದ ಸಂಪ್ರದಾಯ ಮತ್ತೆ ಕಾವ್ಯಗಳ್‌ಂದ ಅದರ ಒಟ್ಟಿಗೆ ಇದ್ದಂತ ಜೆನಾಂಗಗಳ ಪಂಡ್ ಕಾಲದ ಇತಿಯಾಸನ ತಿಳ್‌ಕಂಬ ಪ್ರಯತ್ನನೂ ನಡ್‌ದುಟು. ಹಿಂಗೆ ಒಂದ್ ಊರ್‌ನ ಅಲ್ಲೊ ಅಲ್ಲಿನ ಜೆನಾಂಗದೊವರ ಜಾನಪದ, ಅಲ್ಲೊ ಜೆನಗಳ ಸಾಂಸ್ಕೃತಿಕ ಹಂಗೆನೆ ಸಾಮಾಜಿಕ ಸ್ತಿತಿಗತಿಗಳ ಅಂದರೆ ಅಲ್ಲಿನ ಪಂಡ್ ಕಾಲದ ವಿಚಾರಗಳ ತಿಳ್ಕಂಬಕೆ ಸಾಯ ಮಾಡ್‌ದೆ. ತುಳುನಾಡ್‌ಗೆ ಸಮ್ಮಂದಪಟ್ಟಾಂಗೆ ಪರಸುರಾಮನ ಸೃಸ್ಟಿನ ಕತೆ (ಪುರಾಣ), ಬೂತಾಳ ಪಾಂಡ್ಯನ ಕತೆ, ಕಲ್ಕುಡ-ಕಲ್ಲುರ್ಟಿ ಪಾಡನ್ಯೆತಿ ಇದೆಲ್ಲನೂ ಈ ಹಿನ್ನಲೆಲಿ ಬಾರಿ ಚರ್‌ಚೆಗೆ ಒಳಪಟ್ಟದ್ದ್. ಸಿಸ್ಯ ಪುರಾಣಂತೇಳಿ ಪ್ರಚಾರ ಆದ ಪರಸುರಾಮನ ಕತೆ ಕೊಂಕಣ, ತುಳುನಾಡ್ ಹಂಗೆನೆ ಕೇರಳದ ಕತಾವಳಿಗಳ ಸೃಸ್ಟಿನ ಕತೆನ ಹೇಳ್‌ದೆ. ಪರಸುರಾಮ ತನ್ನ ಕೈಲಿದ್ದ ಮೊಚ್ಚಿನ ಇಸಿ, ವರುಣಂದ ಈ ಜಾಗೆನ ಪಡ್‌ಕಂತ್‌ಂತ ಕತೆಲಿ ಹೇಳಿವೆ. ಪರಸುರಾಮನ ಕಡಲಿಗ್ ಪುಟ್ಟಿನ ತುಳುನಾಡ್'ತ (ಪರಶುರಾಮನ ಕೊಡ್‌ಲಿಗೆ ಹುಟ್ಟಿದ್ ತುಳುನಾಡ್) ಕವಿಗನೂ ಹಾಡ್ಯೊಳ. ಈಗನ ವಿಜ್ಞಾನಿಗ ಇದರ ಎಲ್ಲಾ ಒಪ್ಪುದುಲೆ. ಆದರೆ ಪ್ರಕೃತಿಲಿ ಆವ ಬದಲಾವಣೆಗಳ್‌ಂದಾಗಿ ಸಂದ್ರ ಹಿಂದೆ ಮತ್ತೆ ಮುಂದೆ ಹೋದರ ವಿಜ್ಞಾನಿಗ ಒಪ್ಪಿಕಂಡವೆ. ಕರಾವಳಿಲೂ ಹಂಗಾದಕೆ ಪುರಾವೆಗಳ ತೋರ್‌ಸುವೆ. ಅದೇನೇ ಇದ್ದರುನೂ ಪರಸುರಾಮನ ಸಾಹಸದ ಕತೆ, ನಮ್ಮ ಆಸಕ್ತಿನ ಹೆಚ್ಚಿ ಮಾಡ್‌ವಂತದಂತೂ ಸತ್ಯ. ತುಳ್‌ನಾಡ್‌ಲಿ ಕೇಳಿಬಾವ ಬೊಲಿಯೇಂದ್ರನ ಕತೆ ಕೂಡ ಇದ್ಕೆ ಸಮ್ಮಂದಿಸಿದಂಗೆನೆ ಇರ್‌ದು. ತುಳ್‌ವರ್ ಬಲಿಂದ್ರನ ಬಲಿಯೇಂದ್ರ, ಬೊಳಿಯೇಂದ್ರತ ಕರ್‌ದ್ ದೀಪೊಳಿ ಹಬ್ಬೊಲಿ ಪೂಜೆ ಮಾಡ್‌ವೆಂತ ಹೇಳ್‌ವ ವಿಚಾರ ಸಿಷ್ಯ ಪುರಾಣಲಿ ಉಟ್ಟು, ತುಳ್‌ನಾಡ್‌ಲಿ ದೀಪೊಳಿ ಹಬ್ಬಲಿ ಬಾಳೆದಂಡ್‌ನ ಅಲ್ಲರೆ ಹಾಲೆ ಮರದ ದಂಡ್‌ನ ನೆಟ್ಟ್ ಪೂಜೆ ಮಾಡ್‌ವೆ. ಇಜ್ಜಲ್‌ನ ತೊಳ್ಸಿ ಕಟ್ಟೆನ ಹಿಂದೆ ನೆಟ್ಟವೆ. ಬಲಿಯೇಂದ್ರ ತೊಳ್ಸಿ ಕಟ್ಟೆ ದಾಟಿ ಬಾಕೆ ಬೊತ್ತು, ಕನ್ನಡಲಿ ಬಲೇಂದ್ರಂಗಾಗಿ ಬರ್‌ದ್ 'ಬಂದನು ಬಲಿಯೇಂದ್ರ, ನಿಂದನು ತುಳಸಿಗೆ ಹಿಂದೆ' ತ ಹೇಳ್‌ದು ಇದಿಕೆ ಸಮರ್‌ತನೆ ಕೊಟ್ಟದೆ. ತುಳುನಾಡ್‌ನ ಬಲೇಂದ್ರ ಗಟ್ಟದ ಬಾಗಂದ ಸಂದ್ರ ತೀರದ ಹಕ್ಕಲೆನವರೆಗೆನ ಬೂಮಿನ ಆಳ್‌ತಾ ಇದ್ದದೆ. ಒಮ್ಮೆ ಉತ್ತರದ ಊರ್‌ಂದ ಬಂದ ಮೂರ್ ಜೆನ ಬಟ್ರ ಮಾಣಿಗ" (ಬ್ರಾಹ್ಮಣ ವಟುಗ) ಅಂವನೊಟ್ಟಿಗೆ ಮೂರ್ ಹೆಜ್ಜೆ ಬೂಮಿನ ಕೇಳುವೆ. ಆದರೆ ಬಲೇಂದ್ರಂಗೆ ಅದರ ಕೊಡಿಕೆ ಆದುಲೆ. ಹಂಗಾಗಿ ಅವ್ ಬೊಲೇಂದ್ರನ 'ಒಟ್ಟೆ ಓಡ' (ಒಟ್ಟೆ ದೋಣಿ)ಲಿ ಕುದುರ್‌ಸಿ ಏಳ್ ಸಂದ್ರನ ದಾಟಿಸಿ ಬುಟ್ಟವೆ. ಹಿಂಗೆ ದಾಟ್‌ಸಿ ಬುಡಿಕನ ಅಂವ ಆಸೆಂದ ತನ್ನ ಊರ್‌ನ ತಿರ್‌ಗಿ ನೋಡ್ದೆ. ಅದರ ಅರ್‌ತ ಮಾಡಿಕಂಡ ಬೆರಣ ಮಾಣಿಗ 'ಬೋಂತೆಲ್' (ತುಲಾ)ತಿಂಗಳ ಪರ್ಬೊ' (ದೀಪಾವಳಿಹಬ್ಬ) ಹೊತ್ತುಲಿ ಮೂರ್ ದಿನಗಳ ಮಟ್ಟ್‌ಗೆ ಅಂವನ ಊರುಗೆ ಬಂದ್ ಹೋಕೆ ಅವಕಾಸ ಕೊಟ್ಟವೆ. ಮೊಜ್ಜಿಗೆಲಿ ಬೆಣ್ಣೆ ಮುಳ್‌ಗಿಕನ, ಗುಲ್‌ಗಂಜಿಲಿ ಇರ್‌ವ ಕಪ್ಪು ಮಾಜಿಕನ ಗದ್ದೆ ಪುಣಿಗೆ ಪಾಪು ಹಾಕಿಕನ, ಬಲೇಂದ್ರನ ಊರ್ ಅವಂಗೆ ವಾಪಾಸ್ ಸಿಕ್ಕಿದೆ ತ ಹೇಳ್‌ವೆ.

ಇಲ್ಲಿನ ಪುರಾಣಗಳ ಇತಿಯಾಸ ತ ಅರ್‌ತ ಮಾಡಿಕಂಡ್ ತಿಳ್‌ಕಂಡ್ ಹೋದರೆ ಅದರ ಒಳಗೆ ಅಣ್‌ಂಗಿರುವ ಕೆಲೊವ್ ಸೂಕ್‌ಸ್ಮ ವಿಚಾರಗ ಕಂಡದೆ. ಇಲ್ಲಿ ಮೋಸ ಮಾಡಿ ಬ್ರಾಹ್ಮಣ ಸನ್ಯಾಸಿಗ ಬಲಿನ ಬೂಮಿನ ಪಡ್‌ಕಂದರ ನಾವ್ ಇಲ್ಲಿ ಗಮನ್ಸೊಕು. ಬಲೇಂದ್ರ ತುಳುನವುಕೆ ಬೂಮಿನ ಮಜ್ಜ 'ತುಳುವಾಲ ಬಲೇಂದ್ರ 'ಕೇರಳದವುಕೆ ತಮ್ಮ ಊರ್ 'ಮಾವೇಲಿನಾಡ್' (ಮಹಾಬಲಿನ ನಾಡ್), ತಮಿಳ್‌ನಾಡ್‌ನ ಮಹಾಬಲಿಪುರಂ' ಇತಿಯಾಸಗಳ್‌ಂದ ಹೆಸ್‌ರ್ ಹೋದ ಈ ಜಾಗೆಗಳೆಲ್ಲಾ ಗಮನ್‌ಸಿರೆ ಇಂವ ದಕ್ಷಿಣ ಭಾರತದೊವು ಆರಾದ್‌ಸ್‌ವ ದೇವತೇನೇ ಆಗಿತ್. ಇದ್‌ರ ನೋಡ್‌ರೆ ಬಲೇಂದ್ರ ದಕ್ಷಿಣ ನಾಡ್‌ಗೆ ಅದಿಪತಿನೇ ಆಗಿದ್ದಿರೊಕು. ಉತ್ತರಂದ ಬಂದ ವಟುಗ ಇವಂಗೆ ಮೋಸ ಮಾಡಿ ಇಂವನ ಅಲ್ಲಿಂದ ಓಡ್‌ಸಿರೊಕು, ಅಂತನೂ ಊಹಿಸಿಕಣಕ್.

ಇಂದ್ ಬುಡಕಟ್ಟ್ ಜೆನಾಂಗಂತ ಕರ್‌ಸಿಕಂಬ ಕೊರ್‌ಗರ್, ತುಳ್ ನಾಡ್‌ನ ಆದಿ ನಿವಾಸಿಗ ಆಗಿದ್ದಂತೇಳ್‌ವ ವಿಚಾರಗ ಇದ್ದ್ ಇದ್ಕೆ ಬೇಕಾದಂತ ಐತಿಹ್ಯನೂ ಪ್ರಚಲಿತಲಿ ಉಟ್ಟು. ಹುಬಾಸಿಕಂತೇಳ್ವಂವ ಈ ನಾಡ್‌ನ ಆಳ್‌ದ ಕೊರ್‌ಗರ ಅರ್‌ಸ. ಅಂವ ಹೊರೆಗೆನ ಸತ್ರುಗಳ್‌ಂದ ಸತ್ತದೆ. ಸುರೂಲಿ ಹುಬಾಸಿಕ ಗಟ್ಟಂದ ಮೇಲೆಂದ (ಇನ್ನೊಂದ್ ಹೇಳಿಕೆನಂಗೆ 'ಅನಂತಶಯನದಿಂದ) ಸೇನೆ ತಂದ್ ಪ್ರಸಿದ್ದ ರಾಜ ಆಗಿದ್ದ ಮಯೂರಸರ್ಮನನೇ ಸೋಲ್ಸಿತ್ತ್ ಮಯೂರಸರ್ಮನ ಉತ್ತರಾದಿಕಾರಿಗ ಹುಬಾಸಿಕನ ಸೋಲ್‌ಸಿ ಅಂವನ ಜೊತೆಗಾರರ ಕಾಡ್‌ಮೇಡ್‌ಗಳಿಗೆ ಓಡ್‌ಸಿದೊಂತ ಐತಿಹ್ಯಗಳ್‌ಂದ ತಿಳ್ದದೆ. ಇಂವನ ಬಗ್ಗೆ ಇರ್‌ವ ಇನ್ನೊಂದ್ ಕತೆಂತ ಹೇಳಿರೆ ಹುಬಾಸಿಕ ಮಂಜೇಸ್ವರದ ಅರಸ್ ಅಂಗಾರವರ್ಮನ ಸೋಲಿಸಿತ್. ಸೋತ ಅಂಗಾರವರ್ಮ ನೆರೆ ಅರಸನ ಸಾಯ ಪಡ್‌ದ್ ತನ್ನ ಮಗಳ ಹುಬಾಸಿಕಂಗೆ ಮೊದ್‌ವೆ ಮಾಡಿ ಕೊಡಿಕೆ ಒಪ್ಪಿದಂಗೆ ನಟನೆ ಮಾಡಿ ಮೊದ್‌ವೆ ದಿಬ್ಬಣ ಬಾಕನ ಮೊದುಮಜ್ಜನ ಮತ್ತೆ ಒಟ್ಟಿಗೆ ಇದ್ದವರ ಕೊಲೆ ಮಾಡ್ಸಿತ್ ಅದರ್‌ಲಿ ಬೊದಿಕಿಕಂಡವ್ ಕಾಡ್‌ಮೇಡ್‌ಗಳ್‌ಲಿ ಓಡಿಹೋದ ಅಂತನೂ ಹೇಳ್‌ವೆ. (ವಸಂತ ಕುಮಾರ ತಾಳ್ತಜೆ 1988, 49-52). ಈ ಊರ್‌ಲಿ ಕಂಡ್ ಬಾವ 'ಮಾಯಿಲ ಕೋಟೆ' ನ ಅವಸೇಸ ಗಳ ತೋರ್‌ಸಿ

ಬುಡಕಟ್ಟ್ ಜೆನಾಂಗದ ರಾಜ ಒಬ್ಬ ಆಳ್ವಿಕೆ ಮಾಡಿಟ್ಟುಂತ ಜೆನಪದರ್ ವಿವರಿಸುವೆ. ತುಳ್‌ನಾಡ್‌ಲಿ ಇರ್‌ವ ಹೆಚ್ಚಿನ ಸಿವ ದೇಸ್ತಾನಗಳ್‌ಲಿ ಇರ್‌ವ ಸಿವಲಿಂಗಗ ಕಾಡ್-ಮೇಡ್‌ಗಳ ಮೊಣ್ಣುಗಳೆಡೆಂದ ಹೊಲೆಯ ಹೊಲತಿಯರ್‌ಗೆ ಸಿಕ್ಕಿದ್‌ಂತ ಹೇಳ್‌ವ ಸ್ತಳ ಪುರಾಣಗ ತುಂಬಾನೇ ಉಟ್ಟು. ಈ ಬೂ ಪ್ರದೇಸಲಿ ಹಿಂದೆ ವಾಸ ಮಾಡ್‌ತಿದ್ದ ಜೆನಗಳ ಬಗ್ಗೆ ಅವರೊಟ್ಟಿಗೆ ಸಮ್ಮಂದ ಹೊಂದಿದವ್‌ರ ಬಗ್ಗೆ ತಿಳ್‌ಕಂಬಕೆ ಇದ್ ಸಹಕಾರಿ ಆದೆ.

ಬೂತಾಳ ಪಾಂಡ್ಯನ ಐತಿಹ್ಯ ತುಳ್‌ನಾಡ್‌ನ ವಿಸಿಸ್ಟ ಪೊದ್ದತಿ. ಅಳಿಯ ಕಟ್ಟ್‌ನ ಗಟನೆಗಳಿಗೆ ಸಮ್ಮಂದಿಸಿದ್. ಒಟ್ಟಿಗೆ ಬಾರಕೂರ್ ಪಟ್ಟಣ ವ್ಯಾಪಾರದ ಕೇಂದ್ರ ಆಗಿದ್ದ್ ವಿದೇಸದೊಟ್ಟಿಗೆ ವ್ಯಾಪಾರ ವ್ಯವಾರ ನಡೆಸ್‌ತಾ ಇತ್ತ್ ತ ಹೇಳ್‌ದ್ ಐತಿಹ್ಯಗಳ್‌ಂದ ತಿಳ್‌ದ್ ಬಂದದೆ. ಮೊಯಿಂಸರ ಬಲಿ ಕೊಡ್‌ತಾ ಇದ್ದ ವಿಚಾರನು ಇದರ್‌ಂದಲೇ ತಿಳ್‌ದ್



ಭೂತಾಳ ಪಾಂಡ್ಯ

ಬಂದದೆ. ಬಂಟ ಸಮಾಜಲಿ ಈ ಹಿಂದೆಂದ ರೂಡಿಲಿದ್ದ ಕೆಲವೊಂದ್ ಕಟ್ಟ್‌ಪಾಡ್‌ಗಳಿಗೆ ಇದ್ ಕನ್ನೆಡಿ ಹಿಡ್ದದೆ. ತುಳ್‌ನಾಡ್‌ನ ಗಟ್ಟಿಗಿತ್ತಿ ಹೆಣ್ಣ್ ಮಗ್‌ಳ್ ಒಂದ್ ಏನೆಲ್ಲಾ ಮಾಡ್ದು ತ ಹೇಳ್‌ವ ವಿಚಾರಗಳ್‌ನನೂ ಇದ್ ಎತ್ತಿ ಹಿಡ್ದದೆ. ಕಲ್ಕುಡ ಕಲ್ಲುರ್ಟಿ ಐತಿಹ್ಯ ಬೂತಾರಾದನೆನ ಹಿನ್ನೆಲೆಲಿದ್ದ್ ತುಳ್‌ನಾಡ್‌ನ ಅರಸ್ ಒಬ್ಬ ಕೆಟ್ಟ ಉದ್ದೇಸಂದ ಕಲೆಲಿ ಬಾರಿ ನಿಪುಣ ಆಗಿದ್ದ ಸಿಲ್ಪಿನ ಕಾಲ್‌ನ ತುಂಡ್ ಮಾಡ್‌ದ ಕತೆನ ವಿವರ್‌ಸಿದೆ. 'ಪರತಿ ಮಂಜೆನ' ಪಾಡ್ದಾನಲಿ ಬಾಳನೊಬ್ಬ ಬೂತ ಕಟ್ಟ್‌ವ ಪರವನೊಬ್ಬನ ಮನೆ ಹೆಣ್ಣ್‌ನ ರೂಪಕ್ಕೆ ಮೊರ್‌ಳಾಗಿ ಅವ್‌ಳ ಪಡ್‌ಕಂಕಾಗಿ ಪರವನ ಕೊಲ್ಲ್‌ಸಿದ ವಿಚಾರ ಬಂದದೆ. ಸೋಸಣೆಗೆ ಒಳಗಾದವರ ನೈತಿಕತೆನ ಎತ್ತಿ ಹಿಡೆವ ಪಾಡ್ದಾನಗ ಬಾರಿ ಕುತೂಹಲ ಮೂಡ್ಸಿದೆ. ಬೈದೆರ್‌ಲು, ಮುಗೆರ್‌ಲು ಇಂತ ದೆವ್ವಗಳ ಪಾಡ್ದಾನಗಳ್‌ಲಿ ಆಯಾ ಜೆನಾಂಗಗಳ್‌ಲಿ ಆಳ್ದ ವೀರರ ಕತೆಗ ಕಂಡ್ ಬಂದದೆ.

ಅಸ್ಟೆ ಅಲ್ಲದೆ ತುಳ್‌ನಾಡ್‌ಲಿದ್ದ ಒಂದ್ ನಿರ್‌ದಿಸ್ಟ ಜೆನಾಂಗದೊವ್ ಮತ್ತೆ ಅವರೊಟ್ಟಿಗೆ ಸಮ್ಮಂದ ಹೊಂದಿದ್ದ ಬೇರೆ ವರ್‌ಗದೊವ್ ಅಂದಿದ್ದ ಸಾಮಾಜಿಕ, ಸಾಂಸ್ಕೃತಿಕ ಸ್ತಿತಿ ಗತಿಗ ಇದರ್‌ಲಿ ಉಟ್ಟು. ಬೈದೆರ್‌ಲು ಅಲ್ಲರೆ ಕೋಟಿ-ಚೆನ್ನಯರ ಪಾಡ್ದಾನಲಿ ಬಟ್ರ್, ಬಿಲ್ಲವು ಬಂಟ್ರ್, ಬಲ್ಲಾಳರ್-ವರ್‌ಗಡೆರ್-ಇಂತೆಲ್ಲ ಜಾತಿ ಹುದ್ದೆಗಳ ಹೇಳಿಯೊಳೊ. ಅವರವರ ಕೆಲ್‌ಸ, ಯಾಪಾರ, ಬೊದ್ಕ್‌ನ ರೀತಿ, ಸಾಮಾಜಿಕ ಸ್ರೇಣಿಕರಣದ ಬಗ್ಗೆನೂ ವಿವರ್‌ಸಿಯೊಳ. ಸಿಸ್ಟ ಇತಿಯಾಸ ಮೌನ ವಯಿಸಿದ ಎಸ್ಟೊ ವಿಚಾರಗಳ ಬಗ್ಗೆ ಐತಿಹ್ಯ ಮಾತಾಡ್‌ದೆ. ಕಲ್ಯಾಣಪ್ಪ, ಸಿಡಿಲುಮು ಕೆಂಗಣ್ಣ ನಾಯಕರಂತ ಸ್ವಾತಂತ್ರ್ಯ ಯೋದರ ತ್ಯಾಗಜೀವನ ಸಿಸ್ಟ ಇತಿಯಾಸಕಾರರ್‌ಗೆ ಕಂಡತ್ಲೆರೂ ಐತಿಹ್ಯ ಅದರ ಎತ್ತಿ ತೋರ್‌ಸಿಟು. ಅಸಾಮಾನ್ಯ ಬಲಸಾಲಿ ಆಗಿದ್ದ ಆಗೋಳಿ ಮಂಜಣ್ಣ, ಪುಟ್ಟೂರು ಬಾಳನಂತವು ಹೆಸ್‌ರ್ ವಾಸಿ ಆಗಿದ್ದ ಐತಿಹ್ಯ ಪುರ್‌ಸರ್ ಕರ್‌ಸಿಕಂಡೊನೆ ಹೊರತ್ ಇತಿಯಾಸ ಪುರ್‌ಸಂತ ಕರ್‌ಸಿಕಂತ್‌ಲೆ. ಅರ್‌ಸ ಕೆಟ್ಟ ಆಲೋಚನೆಂದ ಸಿಲ್ಪಿನ ಕಾಲ್ ತುಂಡ್ ಮಾಡ್‌ದರ ಆಗಲಿ ಪರವನ ಮೋಸಂದ ಕೊಲ್ಲ್‌ಸಿದಾಗ್‌ಲಿ ಸಿಸ್ಟ ಇತಿಯಾಸಲಿ ಹೇಳ್‌ದುಲೆ. ಅದ್‌ರ ಏನಿದ್ದರೂ ಹೇಳ್‌ದು ಐತಿಹ್ಯ ಇಲ್ಲೆ ಪಾಡ್ದಾನಗ. ಸೂರೆಗೋಳಿ ಅಂತುವಿನಂತ ಪ್ರಸಿದ್ದ ಕುಳ್ಳರ ಬಗ್ಗೆನೂ ಐತಿಹ್ಯ ಹುಟ್ಟಿಕಂಡದೆ. ಸ್ವಾಮಿನಿಸ್ಟೆ ಮೆರ್‌ದ, ಅವಂಗೆ ಊಟ ಹಾಕಿದಂವಂಗಾಗಿಯೇ ಪ್ರಾಣ ಕೊಟ್ಟ ನಿಯತ್ತ್ ನ ಮೂಕಪ್ರಾಣಿ ನಾಯಿನ ಬೊದ್ಕುನೂ ಐತಿಹ್ಯ ಕ್ಕೆ ಮುಕ್ಯತ ಅನ್‌ಸಿದೆ.

ಸಿಸ್ಟ ಇತಿಯಾಸಲಿ ಒಂದ್ ಒಳ್ಳೆ ಸ್ತಾನ ಪಡ್ದಿರ್‌ವ ಅರಸರ ಬಗ್ಗೆ ಐತಿಹ್ಯಗ ಕೆಲವೊಮ್ಮೆ ಬೇರೆನೇ ಆದ ವಿವರಣೆ ಕೊಟ್ಟದೆ. ಸಿವಪ್ಪನಾಯ್‌ಕ, ಟಿಪ್ಪು ಸುಲ್ತಾನರಂತ ರಾಜರ ಬಗ್ಗೆ ತುಳ್‌ನಾಡ್‌ಲಿ ಪ್ರಚಲಿತಲಿರ್‌ವ ವಿಚಾರಗಳ ಕೂಡ್ಸಿ ಅದ್ಯಯನ ಮಾಡಿರೆ ಕೆಲೊವ್ ಮಹತ್ವದ ವಿಚಾರಗ ಹೊರೆಗೆ ಬಂದದೆ. ಅರಸರ ಕಾಸಗಿ ಬೊದ್ಕ್‌ನ ಬಗ್ಗೆನೂ ಐತಿಹ್ಯಗ ಕೆಲೊವ್ ಕುತೂಹಲದ ವಿಚಾರಗಳ ತಿಳ್‌ಸಿ ಕೊಟ್ಟದೆ. ಐತಿಹ್ಯಲಿ ವಿಟ್ಲದ 'ಡೊಂಬಾ ಹೆಗ್ಗಡೆ' ಅರಸು ಮನೆತನಕ್ಕೆ ಆ ಹೆಸ್‌ರ್ ಬಾಕೆ ಏನ್ ಕಾರಣಂತ ಹೇಳ್‌ವ ವಿಚಾರ ಬಾರಿ ಲಾಯ್ಕ್ ಉಟ್ಟು.

ಹಿಂಗೆ ಈ ನಾಡ್‌ನ ಬೌಗೋಳಿಕ, ಸಾಮಾಜಿಕ, ಜೆನಾಂಗಿಕ, ಸಾಂಸ್ಕೃತಿಕ, ದಾರ್ಮಿಕ, ಆಡಳಿತಾತ್ಮಕ, ಆರ್‌ತಿಕ ಸ್ತಿತಿ-ಗತಿಗಳ ತಿಳ್‌ಕಂಬಕೆ ಈ ಐತಿಹ್ಯಗ ಪುರಾಣಗ ಸಹಕಾರಿ ಆದವೆ. ಇಲ್ಲಿನರೆಗೆ ನಾವ್ ಬರಿಯ ರಾಜಕೇಂದ್ರಿತ ಇಲ್ಲರೆ ಆಡಳಿತ ಕೇಂದ್ರಿತ ಸಂಗತಿಗಳ ವಿಚಾರಗಳ್‌ನೇ ಇತಿಯಾಸಂತೇಳಿ ನಂಬಿಕಂಡ್ ಬಂದಿದ್ದೊ. ಆದ್‌ರೆ ಇಂದ್ ಇತಿಯಾಸನ ನೋಡ್‌ವ ನಮ್ಮ ದ್ರಿಸ್ಟಿ ಬದ್‌ಲಾಕು. ಜೆನಕೇಂದ್ರಿತ ಇತಿಯಾಸದತ್ತ ಒಲೊವುನ ಹರಿಸೊಕು. ನಮ್ಮ ಚರಿತ್ರೆನ ಇನ್ನೊಂದ್ ಮೋರೆನ ತಿಳ್‌ಕಣೊಕು. ಅದ್‌ಕ್ಕಾಗಿ ಐತಿಹ್ಯ, ಪುರಾಣ ಪಾಡ್ದಾನಗಳಂತ ಜೆನಪದ ಕತನಗಳ ಸಾಹಿತ್ಯಕ ದ್ರಿಸ್ಟಿಕೋನಂದ ಮಾತ್ರ ನೋಡದೆ ಸಮಾಜಸಾಸ್ತ್ರೀಯ, ಮಾನವಸಾಸ್ತ್ರೀಯ ಹಂಗೆನೆ ಐತಿಹಾಸಿಕ ನೆಲೆಗಳ್‌ಂದನೂ ನೋಡೊಕು. ಸಿಸ್ಟರ, ಕೈಕಾಲ್ ಕಳ್ಕಂಡವರ,




ದುರಾಕ್ರಮಂದ ಒಕ್ಕಲೆದ್ದ ಈ ಪ್ರದೇಸದ ಮೂಲ ನಿವಾಸಿಗ, ಹಂಗೆನೆ ಕೊರಗ ಮಲೆಕುಡಿಯರಂತ ಬುಡಕಟ್ಟ್ ಜೆನಾಂಗಗ ಮತ್ತೆ ಮುಗೇರ, ಮನ್ಸ, ನಲಿಕೆ, ಪರವ, ಪಂಬದರಂತಹ ಇತರೆ ಪರಿಸಿಸ್ಟ ಜೆನರ ಮುಂದೆ ಕಾಲಕಾಲಕೆ ಪುರೋಹಿತಸಾಹಿ, ಸಾಮ್ರಾಜ್ಯಸಾಹಿ, ವಸಾಹತುಸಾಹಿ, ಬಂಡವಾಳಸಾಹಿ ಹಿಡಿತಗಳ್‌ಲಿ ಸಿಕ್ಕಿ, ಒದ್ದಾಡ್‌ದ ರೀತಿ ಇಂತ ಐತಿಹ್ಯಾದ್ಯಯನಂದ ತಿಳ್‌ಕಣಕ್. ಈ ನಿಟ್ಟ್‌ಲಿ ಮುಂದೆ ಇನ್ನೂ ಹೆಚ್ಚಿನ ಕೆಲ್‌ಸ ಮಾಡೊಕು. (ಎ.ಎಸ್.ಆರ್.)

**ತುಳುಬಾಸೆ :** ದಕ್ಷಿಣ ಭಾರತಲಿ ಹಿಂದೆಂದೆಲೇ ಮುಕ್ಯ ಬಾಸೆಗಳ್‌ಲಿ ತುಳುಬಾಸೆನೂ ಒಂದ್. ತುಳು ದ್ರಾವಿಡ ಬಾಸೆ ಕುಟುಂಬಕ್ಕೆ ಸೇರಿಟ್ಟು. ಪೊಡ್‌ವಣ ಕಡಲ್‌ಕರೆನ ದಕ್ಷಿಣಕನ್ನಡ ಜಿಲ್ಲೆನ ಹೆಚ್ಚ್‌ನ ಬಾಗ ತುಳುನಾಡ್. ಕಾರ್ಕಳ, ಉಡುಪಿ, ಮಂಗಳೂರ್, ಪುತ್ತೂರ್, ಬಂಟ್ವಾಳ, ಕುಂದಾಪುರ ಮತ್ತೆ ಸುಳ್ಯ ತಾಲ್ಲೂಕ್‌ನ ಹೆಚ್ಚ್‌ನ ಬಾಗಲಿ ತುಳುನೇ ಜೆನರ ಅವ್ವಬಾಸೆ. ಈಗ ಕೇರಳ ಸೇರ್‌ದ ಕಾಸರಗೋಡ್ ತಾಲ್ಲೂಕ್‌ನ ಸುಮಾರ್ ಗ್ರಾಮಗ ತುಳು ನೆಲನೆ ಆವುಟು. 1971ರ ಜನಸಂಕ್ಯಾ ಗಣಿತಿಲಿ ತುಳುವರ ಸಂಕ್ಯೆ 9 ಲಕ್ಷಂತ ಗುರ್‌ತಿಸಿಯೊಳೊ.

ತುಳು ಪದದ ಹುಟ್ಟ್‌ನ ಹೇಳುದು ಕಸ್ಟ. ತುಳು ಮೆತ್ತಂಗೆನ ಬಾಸೆತ ಹೇಳ್‌ವೆ ಹಂಗಾಗಿ ತುಂಬ ವಿನಯವಂತರ್ ಮೆತ್ತಂಗೆನವಾದ ತುಳುವರ ಮಾತ್‌ನ ತುಳುತ ಹೇಳುವೆ. ಹೆಚ್ಚಿನಂಸ ಇದ್ ಅಬಿಮಾನದ ವಿವರಣೆ. ಕ್ರಿಸ್ತಶಕದ ಆದಿಕಾಲದ ಕೃತಿತ ಹೇಳ್‌ವ ತಮಿಳು ಸಂಗಂ ಕಾವ್ಯಗಳ್‌ಲಿ ತುಳುವ ದೇಸದ ಆತಿತ್ಯನ ಪ್ರಸಂಸನೆ ಮಾಡ್‌ದರ್‌ಂದ ತುಳುನ ಪ್ರಾಚೀನತೆ ವಿಸಯ ಗೊತ್ತಾದೆ. ತುಳು ತುಂಬ ಬೆಳವಣಿಗೆ ಆದ ಬಾಸೆ. ತುಳುನ ಬಾಸಾ ಬಂಡಾರಲಿ ಶಬ್ದ ಸಂಪೊತ್ತ್ ತುಂಬಿಕೊಂಡುಟು. ತಮಿಳು, ಕನ್ನಡ, ತೆಲುಗು, ಮಲೆಯಾಳಂತ ಹೆಸ್‌ರ್ ಪಡ್‌ದ ದ್ರಾವಿಡ ಬಾಸೆನ ಎಲ್ಲ ಪದಕೆ ಸಮಾನ ಪದಗ ತುಳುಲಿ ಉಟ್ಟು. ಇದರ ನಡುವೆ ವಿಸೇಸ ದ್ವೊನಿ ಸಮಾನತೆ ನಿಯಮನೂ ಕಾಣಕ್. ಉದಾರಣೆಗೆ – ಬೇರೆ ದ್ರಾವಿಡ ಬಾಸೆನ ಲ–ಕಾರ ತುಳುಲಿ ರ–ಕಾರ ಆದೆ.

ಕನ್ನಡ ತಮಿಳು ತುಳುಲಿ ತಲೆ–ತಲೈ–ತರೆ;

ಕಾಲ್–ಕಾಲ್– ಕಾರ್; ಬಿಲ್– ವಿಲ್– ಬಿರು

ಅಕೇರಿನ ಉದಾರಣೆಲಿ ವ–ಕಾರ ಬ–ಕಾರ ಆಕಂಡದ್ ಕನ್ನಡ–ತುಳುಲಿ ಕಾಣಕ್. ಇಂತ ಕೆಲವು ವಿಸೇಸಂದ ತುಳು ಕನ್ನಡಕೆ ತುಂಬ ಹತ್ರದ ಬಾಸೆತ ಹೇಳ್‌ವೆ.

ತುಳು ಒಂದು ಕೋಮು ಬಾಸೆ ಅಲ್ಲ. ಅದ್ ನಾಡನುಡಿ. ಅದರ ಆಡುವವು ಬಂಟ, ಗೌಡ, ಪೂಜಾರಿ, ಗಟ್ಟಿ, ಆಚಾರಿ, ಬಂಡಾರಿ, ಮುಗೇರ, ಮೊಗವೀರ, ಆದಿದ್ರಾವಿಡ, ಜೈನ, ಕ್ರೈಸ್ತ, ಬ್ರಾಹ್ಮಣ, ಗಾಣಿಗ, ಮೂಲ್ಯ, ಹಿಂಗೆ ಎಲ್ಲ ಸಮುದಾಯದವು. ಐತಿಹಾಸಿಕ ರಾಜಕೀಯ ಕಾರಣಂದಾಗಿ, ತುಳುಲಿ ಹೆಚ್ಚ್ ಸಾಹಿತ್ಯ ನಿರ್ಮಾಣ ಕಾರ್ಯ ನಡ್‌ತ್ಲೆರೂ ತುಳುನಾಡ್ ಕನ್ನಡರಾಜ್ಯದ ಅದಿಕಾರ ವೆವಸ್ತೆಲಿ ಉಟ್ಟು. ತುಳುಲಿ ಲಾಯ್‌ಕ್‌ನ ಜನಪದ ಗೀತೆಗ ಒಳೊ. ಪಾಡ್ದನತೇಳ್‌ವ ಐತಿಹಾಸಿಕ ಕತನಕಾವ್ಯ ಉಟ್ಟು. ಸಿರಿ ಮಹಾಕಾವ್ಯ, ಕೋಟಿಚೆನ್ನಯ ವೀರರ ಕತೆ ಉಟ್ಟು. ದೆವ್ವ ಕೊಣ್‌ತ, ಕೋಲ–ನೇಮ–ತಂಬಿಲಗ ಪ್ರತಿನಿತ್ಯ ನಡೆತ ಉಟ್ಟು. ಜನಪದ ಕತೆ, ಗಾದೆ, ಒಗಟ್, ಉರಲ್ ಹಿಂಗೆ ಅನೇಕ ಪ್ರಕಾರನ ಸಾಹಿತ್ಯಗ ಒಳೊ. ತುಳುತಿಟ್ಟು ಯಕ್ಷಗಾನ ಉಟ್ಟು. ಜಾತ್ರೆ, ಬಂಡಿ ಉತ್ಸವಗ ವರ್‌ಸಂಪ್ರತಿ ನಡೆತ ಉಟ್ಟು. ತುಳುಲಿ ಇಲ್ಲ್ – ಮನೆ; ಒಕ್ಕೇಲ್ – ಬೇಸಾಯಗಾರ, ಒಕ್ಕು, ಗೆಯ್ಮೆಮಾಡ್; ಕಯ್ಯಂಜಿ –ಜಾನುವಾರು ಇಂತ ವೆವಸಾಯಕೆ ಸಮ್ಮಂದ ಆವ ಪದಗ ಒಳೊ. ತುಳುವರ್ ನೆಲನ ಉತ್ತ್ ಬೇಸಾಯ ಮಾಡ್‌ತಿದ್ದೊ. ದನಕರ್‌ಗ ಬೇಕಸ್ಟ್ ಇದ್ದವಾಗಿದ್ದೊತ ಈ ಪದಂದ ತಿಳ್‌ದದೆ. ಕರ್ಬೊ –ಕಬ್ಬಿಣ; ಬೊಳ್ಳಿ–ಬೆಳ್ಳಿ ಇಂತ ಲೋಹನ ಬಳಸ್‌ತಿದ್ದೊ. ಓದುನಿ, ಬರೆಪುನಿ, ಎಣ್ಣುನಿ– ಇತ್ಯಾದಿ ಪದಂದ ಹಿಂದೆನ ತುಳು ಜೆನ ಓದು ಬರಹ ಬಲ್ಲವರ್, ಲೆಕ್ಕ ಮಾಡಬಲ್ಲವರ್‌ತ ಹೇಳ್‌ದೆ. (ಎಂ.ಎಂ.ಬಿ.)

**ದಕ್ಷಿಣಕನ್ನಡ ಗೌಡರ್ ಮತ್ತೆ ಆರಾದನಾ ಪರಂಪರೆ : ದಕ್ಷಿಣಕನ್ನಡ ಗೌಡ್ರು ಮತ್ತೆ ಪೂಜಿಸುವ ಹಿನ್ನಲೆ :** ಒಂದ್ ಸಮಾಜ ವೆವಸ್ತೆಂತೇಳ್ರೆ ಅದ್ ಬೇರೆ ಬೇರೆ ಜಾತಿ, ಸಮುದಾಯದವರ ಒಟ್ಟ್‌ಗೂಡ್ದ ರೂಪಂತೇಳಕ್. ಭಾರತೀಯರ್‌ಲಿ ಈ ವೆವಸ್ತೆ ಯಾದೇ ಅಕ್ಷರದ ರೂಪಲಿ ಇಲ್ಲದೆ, ಆದರೆ ಜೀವನಲಿ ಬೇರೆ ಬೇರೆ ರೀತಿ ನೀತಿ ನಡವಳಿಕೆಗ ಜೀವನದ ಬಾಗ ಆಕಂಡ್ ಉಟ್ಟು. ಈ ವೆವಸ್ತೆಲಿ ಕೆಲವ್ ಜಾತಿ ಸಮುದಾಯಗ ಬೇರೆ ಜಾತಿ ಸಮುದಾಯಗಳಿಗೆ ಯಜಮಾನರ್ ಗಳಂಗೆ ಆಳ್ವಿಕೆ ಮಾಡ್ವೆ. ಈ ಪೊದ್ದತಿ ನಡ್ಕಂಡ್ ಇರ್‌ವಲ್ಲಿ ಸಿರಿವಂತಿಕೆ, ಮತ್ತೆ ಅದಿಕಾರದ ಅಹಂ ಇದ್ದದೆ. ಇದ್ ಪ್ರಾಚೀನ ಕಾಲಲಿ ಮಾತ್ರ ಅಲ್ಲ ಈಗನ ಕಾಲಲೂ ಈ ಜಾತಿವೆವಸ್ತೆ, ವರ್ಣ ವೆವಸ್ತೆಂದ ಸಮಾಜದ ಅಳೆದು ಕಂಡ್‌ಬಂದದೆ. ಆದರೆ ಈಗ ಪ್ರಜಾಪ್ರಬುತ್ವ ವೆವಸ್ತೆಂದಾಗಿ ಈ ಜಾತಿ ಪೊದ್ದತಿಂತೇಳ್ದು ಹಿಂದೆನಂಗೆ ಇಲ್ಲೆ. ಹಿಂದೆನಷ್ಟ್ ಕಟ್ಟ್‌ಪಾಡ್‌ಗನು ಇಲ್ಲೆ. ಯಾಕೆಂತೇಳ್ರೆ ಈಗ ಆರ್ತಿಕ ಆಗಿನೂ ಗಟ್ಟಿಯಾಗ್ತಾ ಒಳ. ಮತ್ತೆ ಎಲ್ಲವೂ ವಿದ್ಯೆ ಕಲ್ತವೆ. ಹಂಗಾಗಿ ಜಾತಿ ಬಣ್ಣದ ಹೆಸ್ರ್‌ಲಿ ಕೆಳವರ್‌ಗದವರ ಮೆಟ್ಟಿ ಸಮಾಜಲಿ ಎತ್ತರದ ಸ್ತಾನ ಪಡಿದು ಸುಲಬದ ಮಾತ್ ಅಲ್ಲ. ಸಮಾಜ ವೆವಸ್ತೆ ಮತ್ತೆ ಈ ಯಜಮಾನಿಕೆ ಪಟ್ಟ ಉಳೆಕಾಗಿ ಕೆಲವ್ ಮೇಲ್ ಜಾತಿ ಸಮುದಾಯದೊವ್ ಬಾರಿ ತಂತ್ರಗಾರಿಕೆನ ಬಳ್‌ಸ್‌ಯೋಳ. ನಮ್ಮೂರುಲಿ ಕಾಂಬಾಂಗೆ ದೆವ್ವಗಳ ಆರಾದನೆನಂತ ಸಾಂಸ್ಕೃತಿಕಮತ್ತೆ ದಾರ್ಮಿಕ ರಂಗಬೂಮಿಲಿ ಅದರ ಚಾರಿತ್ರಿಕ ಗತಿಶೀಲತೆನ ಸೂಕ್ಷ್ಮತೆಲಿ

ಈ ಬಗೆನ ರಾಜಕೀಯ ತಂತ್ರಗಾರಿಕೆ ಉಟ್ಟ್, ದೆವ್ವಗಳ ಆರಾದನೆ ಮಾಡ್ದು ಇಲ್ಲಿನ ರಾಜಕೀಯ, ಸಾಮಾಜಿಕ ಮತ್ತೆ ದಾರ್ಮಿಕತೆಗಳ ಮತ್ತೆ ಮತ್ತೆ ಪುನರುಜ್ಜೀವಗೊಳ್‌ಸುವ ದಾರಿ ಆಗಿ ಮುಂದುವರ್‌ದುಟು.

**ಗೌಡರ ಮೂಲ :** ವೈದಿಕರ್‌ಲಿ ಗೋತ್ರ ಪದ್ದೊತಿ ಜಾರಿಲುಟ್ಟು. ವೈದಿಕರ ಈ ಗೋತ್ರ ಪದ್ದೊತಿ ಜೆನಗಳ ಸಮ್ಮಂದದ ಮೂಲ ವೈದಿಕರ್‌ಲಿ ಕಶ್ಯಪ, ವಿಶ್ವಾಮಿತ್ರ, ವಸಿಷ್ಟ ಈ ಗುರು ಪರಂಪರೆ ಮತ್ತೆ ಅವರ ಸಿಸ್ಯರ್ ಸೇರಿ ತಿಳ್ದ ವಿಚಾರಗಳ ಗೋಸ್ಟಿಗಳ ನಡ್ಸತಿದ್ದಂತೇಳ್ದು ವೇದ–ಪುರಾಣಗಳ್‌ಂದ ತಿಳ್ದ್ ಬಾವ ಸಂಗತಿ. ಹಿಂಗೆ ಇದ್ದ ಒಂದೊಂದ್ ಪರಂಪರೆನ ಅನುಸರಣೆ ಮಾಡ್ದ ವೈದಿಕ ಸಮುದಾಯದೊವ್ ಆ ಮೂಲದ ಗೋಷ್ಟಿ ಪರಂಪರೆಲಿ ಗುರ್‌ತಿಸಿಕಂಡವೆ. ಈ ದ್ರಿಸ್ಟಿಲಿ ಗೋಸ್ಟಿಂದ ಗೋತ್ರ ಆತ್‌ಂತೇಳಿ ಶಂಬಾ ಜೋಷಿಯೊವ್ ಹೇಳ್ವೆ. ಬ್ರಾಹ್ಮಣರ ಗೋತ್ರ ಪದ್ದೊತಿಗೆನಾಂಗೆನೆ ಅರೆಬಾಸೆ ನಾಡ್‌ನ ಗೌಡ್ರ್‌ಗಳ್‌ಲಿ 'ಬೊಳಿಂತೇಳಿ ಕರ್‌ದವೆ. ಬಯ್ಲ್ ಸೀಮೆನ ಗೌಡ್ರ್‌ಗಳಲಿ 'ಬೊಳಿ' ಪೊದ್ದತಿ ಇಲ್ಲೆ. ಆದರೆ ವಂಸ ಮೂಲಂದ 'ಗಂಗಡಿಕಾರಂತೇಳಿ ಗುರುತಿಸಿಕಂಡವೆ. ದ. ಕ ಕೊಡಗ್ ಗೌಡ್ರ್‌ಲಿ 'ಬಂಗಾರ ಬೊಳಿ' ಹೆಚ್ಚ್ ಹೆಸ್‌ರ್‌ವಾಸಿಯಾದ ಬೊಳಿ. ಹೊರನಾಡ್‌ಂದ ಬಂದ ಗೌಡ್ರ್‌ಗಳಿಗೆ ಈ ಬೊಳಿ ಪೊದ್ದತಿ ಇಲ್ಲಿನ ಬಲ್ಲಾಳ್‌ರ್ ಕೊಟ್ಟ ಕೊಡುಗೆ. ಬಂಗಾಡಿಂದ ಆಳ್ದ ಬಂಗರಸರ ಬೂಮಿಲಿ ವಾಸ ಮಾಡ್ತ ಇರ್‌ವ ಗೌಡ್ರ್‌ಗಳಲ್ಲಿ ಬಂಗಾರ, ನಂದರ, ಮೂಲರ, ಪೆರ್ಬನ್ನಂತೇಳ್‌ವ ಬಳಿಗ ಮೂಲ 'ಬೊಳಿ'ಗ ಆಗಿ ಒಳ್ದ ಬೊಳಿಗ ಉಪ ಬಳಿಗ ಆಗಿ ಒಟ್ಟ್ ಹದ್ನೆಂಟ್ ಬೊಳಿಗ ಉಟ್ಟು. ನಿಜವಾಗಿ ಇರ್‌ದು 12 ಬಳಿ ಮಾತ್ರ. ಬಂಟ ಸಮುದಾಯಲೂ ಈ ಬಂಗರ/ಬಂಗರನ್ನಾಯ, ಪೆರ್ಬನ್ನಂತೇಳುವ ಬೊಳಿಗ ಒಳ. ಬಂಟರ್‌ಲಿ ಕಂಡ್ ಬಾವ ಈ ಬೊಳಿಗ ಬಂಗರ್ ಆಳ್ದ ಜಾಗೆಲಿರುವ ಬಂಟರ್‌ಲೂ ಹೆಚ್ಚಿಗೆ ಕಂಡ್ ಬಂದದೆ. ಸಮುದಾಯದ ಆಲೋಚನೆನಂಗೆ ವಂಸದ ಮುಂದುವರಿಕೆ ಈ ಬೊಳಿಗಳಂದಾಗಿ ಆದೆ.

**ತುಳುನಾಡ್‌ಗೆ ಗೌಡ್ರ ಪ್ರಸರಣ :** ತುಳುನಾಡ್‌ನ ಸುಬ್ರಹ್ಮಣ್ಯ, ಸುಳ್ಯ, ಬೆಳ್ತಂಗಡಿ, ಪುತ್ತೂರ್, ವಿಟ್ಲ, ಬಂಟ್ವಾಳಗಳ್‌ಲಿ ಗೌಡ್ರುಗಳ ಸಂಕೆ ಹೆಚ್ಚ್ ಉಟ್ಟು. ಕೊಡಗ್‌ನ ಭಾಗಮಂಡಲ, ಕಾಸರಗೋಡ್‌ನ ಬದಿಯಡ್ಕಗಳ್‌ಲಿ ಗೌಡ್ರ್‌ಗ ಕಮ್ಮಿ. ಗೌಡ್ರ್‌ಗ ತುಳುನಾಡ್‌ಗೆ ವಲಸೆ ಬಂದೊವ್. ಹಿಂದೆನಕಾಲಲಿ ಶಿರಾಡಿ, ಸುಬ್ರಹ್ಮಣ್ಯ, ಶಿಶಿಲ, ಬಂಗಾಡಿನ ಕಡ್ತಿಕಲ್ಲ್ ತುಳುನಾಡ್‌ಗೆ ಕೂಡ್‌ವ ಗಟ್ಟ ದಾರಿಗ ಆಗಿದ್ದ. ಈ ದಾರಿಗಳ್‌ಂದಾಗಿ ಗೌಡ್ರ್‌ಗ ತುಳುನಾಡಿಗೆ ಬಯಲ್ ಸೀಮೆಂದ ಹಾಸನದ ಐಗೂರ್ ಸೀಮೆಂದಾಗಿ ಬಂದೊವ್. ಮಲೆನಾಡ್‌ಲಿ ಅಲ್ಲಲ್ಲಿ ವಾಸ ಆಗಿದ್ದ ಗಂಗಡಿಕಾರ ಒಕ್ಕಲಿಗರ್ ತುಳುನಾಡ್‌ಲಿ ನೆಲೆನಿಂತ ಬೇರೆ ಬೇರೆ ಕಾರಣಗಳ ವಿದ್ವಾಂಸರ್ ಚರ್‌ಚಿಸ್ಯೊಳ. ಅದರ ಪ್ರಕಾರಲಿ ಐಗೂರ್ ಸೀಮೆಲಿ ಕೆಂಡದ ಮಳೆ ಬಂದ್ ಹೇಮಾವತಿ ಹಳ್ಳದ ನೀರ್ ಆರಿ ಹೋಗಿ, ರಂಗಪ್ಪ ನಾಯಕಂತೇಳವ್ ಐಗೂರ್ ಸೀಮೆಲಿ ಬಾರಿ ಕೆಟ್ಟದಾಗಿ ಆಡಳಿತ ಮಾಡ್ದರ್‌ಂದಾಗಿ ಕಾಗೆನೂರ್ ಮತ್ತೆ ಸುಬ್ರಹ್ಮಣ್ಯಕೆ ಇದ್ದ ವ್ಯಾಪಾರ ಸಮ್ಮಂದ ಗಟ್ಟ ದಾರಿಲಿ ಈ ಪ್ರದೇಸಕೆ ಇದ್ದ ಸಂಪರ್‌ಕ, ಸೊವ್‌ಲಬ್ಯಕೆ ಕಾರಣ ಆವು. ಗೌಡ್ರ್ ತುಳ್ ನಾಡ್‌ಗೆ ವಲಸೆ ಬಾಕೆ ಕೆಳದಿ ಅರಸರ ಜಾತಿ ಮುಕ್ಯ ಕಾರಣ ಆವುಟುಂತೇಳ್ದು ಡಿ. ಜಿ. ನಡ್ಕ ಅವರ ಅಬಿಪ್ರಾಯ. ಇದ್ ಅಲ್ಲದೆ ಸುಳ್ಯಲಿ ಬೇರೆ ಬೇರೆ ಕಾರಣಗ ಜೆನರ ಬಾಯಿಂದ ಕೇಳಿ ಬಂದದೆ. ಸುಳ್ಯಲಿ ಬಲ್ಲಾಳರ್‌ಂದ ಮೇಲೆ ಆಳ್ವಿಕೆ ಮಾಡ್ದ ಕೇರಳ ಮೂಲದ 'ಚಾತು ನಾಯರ್' ಒಕ್ಕಲಿಗರ ಶೃಂಗೇರಿ ಮಟಾದೀಸರ ಅಪ್ಪಣೆ ಪಡ್ದ್ ಶೀರಾಡಿ, ಬಿಸಿಲೆ, ಸುಬ್ರಹ್ಮಣ್ಯ, ದಾರಿಯಾಗಿ ಕರ್‌ಕಂಡ್ ಬಂದುಟ್ಟು. ಹಂಗೆ ಕರ್‌ಕಂಡ ಬಂದವರ ಮುನ್ನೂರೊಕ್ಲು, ಅರುವತ್ತೊಕ್ಲು, ಮೂವತ್ತೊಕ್ಲುಂತೇಳಿ ಮಾಡಿ ಊರು, ಗ್ರಾಮಗಳ್‌ಲಿ ಅವರ ಕುದ್ರಿಸಿತ್ತ್‌ಂತೇಳ್ದು ಇಲ್ಲಿನವ್ರ ನಂಬಿಕೆ. ಒಕ್ಕಲ್‌ಗಳ ಸಂಕ್ಯೆಲಿ ಕರ್‌ಸಿಕಂಬ ಊರುಗ ಈಗೊಳು ಉಟ್ಟು. ಈ ಪ್ರತೀತಿನ ಪಳೆಯುಳಿಕೆ ಸತ್ತ್ ದೆವ್ವತ್ವ ಪಡ್ದುಟ್ಟುಂತೇಳ್ವ 'ನಾಯರ್'ದೆವ್ವದ ಆರಾದನೆ ರೀತಿಲಿ ಕಂಡ್ ಬಂದದೆ. 'ನಾಯರ್ ನೇಮ'ಲಿ 'ಕುಂಟು ಪೂಜಾರಿ'ಗ ಒಟ್ಟ್ 40 ಜೆನ ಇದ್ದವೆ. ಇವ್ ನೇಮದ ಹೊತ್ತುಲಿ ದರ್ಶನಲಿ ಇರ್‌ಕನ ನಾಯರ್ ದೆವ್ವ ಕಟ್ಟಿದಂವ ನಾ ಕರ್‌ಕಂಡ್ ಬಂದ ಕುಟುಂಬಲಿ ಒಂದಾರ್ ಉಟ್ಟಾ...? ತ ಹೇಳ್ವ ಅರ್‌ತಲಿ ಇಣ್ಕಿ ನೋಡಿ ಅಬಿನಯ ಮಾಡ್ವ ಕ್ರಮ ಉಟ್ಟ್.

ಗೌಡ್ರ್ ಕೆಳದಿ ಅರಸರ ಕಾಲಲಿ ಹೆಚ್ಚಿನ ಸಂಕೆಲಿ ವಲಸಿಗರ್ ಆಗಿದ್ದಂತೇಳ್ದಕೆ ಕೊಡುವ ಕಾರಣಂತೇಳ್ರೆ ಇವ್ ಒಂದೇ ಜಾತಿ ಮೂಲದೊವ್ ಆಗಿದ್ದಂತೇಳ್ದು. ಕೆಳದಿ ಅರಸರ್ ಒಕ್ಕಲಿಗ ಮೂಲದ ಲಿಂಗಾಯಿತ ಮತಲಿ ಗುರ್‌ತಿಸಿಕೊಂಡವ್. ಲಿಂಗಾಯಿತ ಮತದವ್ ಗೌಡ್ರಾಗಿ ಪರಿವರ್‌ತನೆ ಆದ ದಾಕಲೆಗ ಸುಳ್ಯ ಪರಿಸರಲಿ ಕಂಡ್‌ಬಂದದೆ. ಸುಳ್ಯದ ಬಳ್ಪ ತ್ರಿಶೂಲಿನಿ ದೇಸ್ತಾನದ ಹಕ್ಕಲೆ ಸಿಕ್ಕಿದ ಕ್ರಿ. ಶ. 1562ರ ಶಾಸನ ಕೆಳದಿ ನಾಯಕ ವಂಶ ಕಟ್ಟಿದ ಚಾವುಡಪ್ಪ ಮತ್ತೆ ಬದ್ರಪ್ಪ ಅವರ ಹೆಸ್‌ರ್‌ನೊಟ್ಟಿಗೆ ಗೌಡ ಉತ್ತರ ಪದನ ಉಲ್ಲೇಕ ಮಾಡ್ದೆ. ಕೆಳದಿ ಸದಾಶಿವ ನಾಯಕನ (ಕ್ರಿ. ಶ. 1544–1565) ಕಾಲದ ಈ ಶಾಸನಲಿ ಚವುಡ ಗವುಡರ ಮಕ್ಕ, ಸದಾಶಿವ ನಾಯಕರ್ ಕುಕ್ಕೆ ಸುಬ್ರಾಯ ದೇವ್ರಿಗೆ ದತ್ತಿ ಬುಟ್ಟದರ ವಿವರ್‌ಸಿದೆ. (ಪುರಾತತ್ವ ಇಲಾಕೆ ಮೈಸೂರ್ 1931 ನಂ. 247–48). ಕೆಳದಿಯರಸರ್ 'ಗೌಡ' ಸಮುದಾಯಕ್ಕೆ ಸೇರಿದೊವ್. ವಿಜಯ ನಗರದ ಅರಸರ್‌ಂದಾಗಿ ತುಳ್‌ನಾಡ್‌ನ ಅದಿಕಾರ ಕೆಳದಿ ಅರಸರಿಗೆ ಬಂದದ್. ಇದರ್‌ಂದಾಗಿ ತುಳ್ನಾಡ್‌ನ ಕಮ್ಮಿ ಜೆನ ಇದ್ದ ಸುಳ್ಯಕು ಕೆಳದಿ ಅರಸರ್‌ಗು ಇದ್ದ ಸಮ್ಮಂದಂದಾಗಿ ಗೌಡ್ರ್‌ಗ ಇಲ್ಲಿ ಬಂದ್ ನೆಲೆಯೂರಿಕೆ ಕಾರಣ ಇರಿಕೂ ಸಾಕ್. ಹಿಂಗೆ ಬೇರೆ ಬೇರೆ ಕಾರಣಗಳ್‌ಂದ ಗೌಡ್ರ್ ತುಳ್‌ನಾಡ್‌ಗೆ ಬಂದ್ ನೆಲೆಯೂರ್‌ದ ಕಾಲನ ಕ್ರಿ. ಶ. 1400–1600 ತ ಹೇಳಕ್.




**ವೀರನಾಯಕರ ಕತೆ :** ಬೇರೆ ಬೇರೆ ಕಾರಣಗಳ್‌ಂದಾಗಿ ತುಳುನಾಡ್‌ಲಿ ನೆಲೆ ಊರ್‌ದ ಗೌಡ್ರ್‌ಗ ನೇತ್ರಾವತಿ ಕುಮಾರದಾರ, ಪಯಸ್ವಿನಿ ಹಳ್ಳಗಳ ಕರೆಲಿ ಅಲ್ಲಲ್ಲಿ ನೆಲೆವೂರ್‍ಯೊಳ. ಈ ಗೌಡ್ರ ಊರ್‌ಗಳ್‌ಲಿ ಶಿರಾಡಿ, ಪುರ್‌ಸ ಮತ್ತೆ ಬಚ್ಚನಾಯಕ ದೆವ್ವಗಳ ಆರಾದನೆ ನಡೆತಾ ಉಟ್ಟ್. ಈ ದೆವ್ವಗ ಕೂಡ ಗಟ್ಟಂದ ಇಳ್ದ್ ತುಳ್ ನಾಡ್‌ಗೆ ಬಂದ ಕತೆಗ ದೆವ್ವಗಳ ಪಾಡ್ದನಗಳ್‌ಲಿ ಉಟ್ಟು. ಇದ್ ಕೂಡ ಗೌಡ್ರ್ ತುಳುನಾಡ್‌ಗೆ ಬಂದ ದಾರಿನ ತಿಳ್ಸಿದೆ. ಈ ದ್ರಿಸ್ಟಿಂದ ಗೌಡ್ರ್ ವಲಸೆ ಬಂದ ಚರಿತ್ರೆನ ತಿಳ್ಕಂಬಕೆ ಇದ್ ದಾರಿ ಮಾಡಿ ಕೊಟ್ಟದೆ. ಆದರೂ ಬಚ್ಚನಾಯಕ ದೆವ್ವ ಸುಳ್ಯಕೆ ಬಂದ್ ನೆಲೆಯಾದಕೆ ಬೇರೆ ಕತೆನೂ ಉಟ್ಟು ಗೌಡ್ರ್‌ಗ ವಲಸೆ ಬಂದ ಕಾಲಕೂ ಮುಂದೆ ಈ ಬಚ್ಚನಾಯಕ ಯೇನೆಕಲ್ನ ಹುಗ್ಗುದಕು ಗೌಡ್ರ್‌ಗಳಿಗೆ ವಿರೋದ ಆಗಿತ್ತ್‌ಂತ ಪಾಡ್ದನಗಳ್‌ಂದ ತಿಳ್ದದೆ. ಪಂಜದ ಬಲ್ಲಾಳಂಗೆ ಕಂದಾಯ ಕಟ್ಟಿಕೆ ಯೇನೆಕಲ್ ಮಾಗಣೆ ನಾಲ್ಕೂರ್‌ಗುತ್ತು ಸುಬ್ಬ ಗೌಡ ಉದಾಸೀನ ಮಾಡ್ದೆ. ಅಂವನ ದಂಡ್‌ಸಿಕೆ ಬಚ್ಚನಾಯಕ ಬಂದದೆ. ಬಚ್ಚನಾಯಕ ಬಾದ್ ಗೊತ್ತಾದ ಸುಬ್ಬೇ ಗಾಡ ಮುಗೇರನೊವ್ಕೆ ಪಿಲಿಕಂದಡಿ ಹಾವ್‌ನ ವಿಷ ಪೂಜಿದ ಅಂಬು ಬುಡಿಕೆ ಹೇಳ್ದೆ. ಮೊಗೆರರ್ ಬುಟ್ಟ ಅಂಬು ತಾಂಗಿ ಬಚ್ಚನಾಯಕ ಹೊಂಡಲಿ ಬಿದ್ದ್ ನರ್‌ಳಾಡ್ದೆ. ಕಡೆಗೆ ಇಂವನ ಸಾವುಗೆ ಕಾರಣ ಆದು ಮಾತ್ರ ಸುಬ್ಬೇ ಗೌಡ್ರ ಇಬ್ಬೊರ್ ಹೆಣ್ಣ್‌ಗ. ಒಬ್ಳ್ ಇಂವನ ನರ್‌ಳಾಟ ನಿಲ್ಸಿಕೆ ಅಂವನ ಗಂಟ್ಲ್‌ಗೆ ಮೆಟ್ಟಿ ನಿತ್ತರೆ ಮತ್ತೊಬ್ಳ್ ಹೊರಗೆ ಹಾಕಿದ ಅಂವನ ನಾಲಿಗೆನ ಕಡ್ದದೆ. ಹಿಂಗೆ ಸತ್ತ ಮೇಲೆ ದೆವ್ವತ್ವ ಪಡ್ದ ಬಚ್ಚನಾಯಕ ಸಾಯಕನ ನನ್ನ ನಂಬಿ ನಾ ನಿಮ್ಮ ಕಾದನೆ. ನನ್ನ ಆರಾದಿಸಿಕಂಡ್ ಬನ್ನಿ ತ ಹೇಳ್ದೆ. ಮುಂದೆ ಅಂವ ಆರಾದನೆ ಪಡ್ದದೆ. ಆರಾದನೆಲಿ ಬಂಗಿ ಸೇದುದು, ಅಡ್ಡನಾಮ ಹಾಕುದು, ಅಲಂಕಾರ ಮಾಡ್ದು, ಇದರ್‌ಲೆಲ್ಲಾ ಪುರುಷ, ಬಚ್ಚನಾಯಕ ದೆವ್ವಗ ವೀರ ನಾಯಕರ್‌ಗಳಾಗಿ ಮತ್ತೆ ಗೌಡ್ರ್‌ಗಳೊಟ್ಟಿಗೆ ನೇರ ಸಮ್ಮಂದ ಇಸಿಕಂಡವೆ.

ಒಕ್ಕಲಿಗ ಗೌಡ್ರ್‌ಗ ತುಳ್‌ನಾಡ್‌ಗೆ ಬಂದ್ ನೆಲ್ಸಿ ಯಜಮಾನಿಕೆ ಪಡ್ದದ್ ಮಾತ್ರ ಸುಳ್ಯ ಮತ್ತೆ ಪುತ್ತೂರ್‌ಲಿ. ಬಂಗಾಡಿ, ಸಿರಾಡಿಂದಾಗಿ ತುಳ್‌ನಾಡ್‌ಗೆ ಬಂದ್ ಇಳ್ದ ಗೌಡ್ರ್‌ಗಳಿಗೆ ಈ ತರಲಿ ಯಜಮಾನಿಕೆ ಮಾಡಿಕೆ ಆತ್ಲೆ. ಇದ್ಕಾಗಿ ಅವ್ 20ನೇ ಶತಮಾನದ 70ರ ದಶಕಲಿ ಬೂಸುದಾರಣೆ ಕಾಯ್ದೆ ಬಾವೊಲ್ಲಿವರ್‌ಗೂ ಕಾಯಕಾತ್‌ಂತೇಳ್ದು ಸತ್ಯ.

**ಗೌಡ್ರ್‌ಗಳ ಆರಾದನೆ ರೀತಿನೀತಿ ನಡ್ದ್‌ಬಂದ ದಾರಿ :** ವಲಸಿಗರಾಗಿ ಬಂದ ಗೌಡ್ರ್‌ಗ ತುಳ್‌ನಾಡ್‌ನ ಮೂಲ ದೆವ್ವಾರಾದನೆನ ಒಪ್ಪಿಕಂಬಲ್ಲಿ ಆಗನ ಕಾಲಲಿ ಅನಿವಾರ್ಯತೆ ಇತ್ತ್. ಬವುಸ ಗೌಡ್ರ್‌ಗ ಹಿರಿಯರ ಆರಾದನೆ ನಡ್ಸಿಕಂಡ್ ಬಂದಿದ್ದರೂ ಅದ್ ಈ ತುಳ್‌ನಾಡ್‌ನ ದೆವ್ವಗಳ ಆರಾದನೆ ಹಾಂಗೆ ಇರಿಕಿತ್ಲೆ. ಯಲಹಂಕದ ಕೆಂಪೇಗೌಡನ ವಂಶೊದವರ ಮನೆದೇವ್ರ್ ಕೆಂಪಮ್ಮತ ಹ.ಕ. ರಾಜೇಗೌಡ್ರು ಬರ್‌ದೊಳ. ಹಂಗೆನೆ ಇವ್ ಬೈರವನ ಪೂಜೆ ಮಾಡ್ತಿದ್ದೊಂತ ಹೇಳ್ಯೊಳ. ನಾತಸಿದ್ದ ಗೊರವಮೂಲ ಮುನಿಸ್ವಾಮಿನ ಸುಳ್ಯ ಪರಿಸರಲಿ ಆರಾದನೆ ಮಾಡ್ಯೊಳ. ಗೌಡ್ರ ಮನೆಗಳ್‌ಲಿ ಬಾರಿ ಪ್ರಾಚೀನ ಮನೆತನಂತೇಳಿ ಗುರ್‌ತಿಕಂಡ್ ಇರ್‌ವ ಯೇನಡ್ಕ, ಕುಂಚಡ್ಕ, ಮರ್‌ಕಂಜಗಳ್‌ಲಿ ಕೆಂಚಮ್ಮ, ಹೊಸಕೋಟೆ ಸುಬ್ಬಮ್ಮಂತೇಳ್ವ ಹೆಣ್ಣ್ ದೆವ್ವಗಳ ಮನೆತನದ ದೆವ್ವತ ಈಗನ ಕಾಲಲಿನು ಆರಾದನೆ ಮಾಡ್ವೆ ಈ ಆರಾದನೆ ಗೌಡ್ರ್‌ಗ ಮೂಲಲಿ ಹಿರಿಯರ್ ಆರಾದನೆ ಮಾಡ್ತಿದ್ದದರ ಕಡೆಗೆ ನೋಡುವಂಗೆ ಮಾಡ್ದೆ. ತರವಾಡ್ ಮನೆಗಳ್‌ಲಿ ಇಂದ್‌ಗೂ ಬೈರವಂಗೆ ಅಗೆಲ್ ಕೊಡ್ದುರ ಮೂಲಕ ಆರಾದನೆ ಮಾಡ್ವೆ.

ಗೌಡ್ರ್‌ಗ ಈಗ ದೆವ್ವರಾದನೆಲಿ ಪಡೆವ ಜಾಗೆ ಅವ್ ವಲಸೆ ಬಂದ ಕಾಲಲಿ ಇದ್ದಿರಿಕಿಲೆ. ಇದನ್ನೆ ಮೀರ್‌ಸಿಕೆ ಮತ್ತೆ ತಮ್ಮ ಅಸ್ತಿತ್ವನ ಒಳ್ಸಿಕಂಬಕೆ ತುಳ್ ಬೊದ್ಕ್‌ನೊಟ್ಟಿಗೆ ಹೊಂದಾಣಿಕೆ ಮಾಡಿಕಂಬ ಅನಿವಾರ್ಯದೊಟ್ಟಿಗೆ ತಮ್ಮ ಒಳ್ಸಿಕಂಬ ಪ್ರಶ್ನೆ ಅವರ ಕಾಡಿತ್ತ್. ಇದರ್‌ಂದಾಗಿ ಮುಂದೆ ಗೌಡ್ರ ನಾಯಕನ ಹಾಂಗಿದ್ದ ಬಚ್ಚ ನಾಯಕ, ಪುರುಸನಂತವರ ಅವ್ ಸತ್ತ ಮೇಲೆ ದೆವ್ವದ ರೂಪೊಲಿ ಪೂಜೆ ಮಾಡ್‌ವಂಗೆ ಆತ್.

ಗೌಡ್ರ್‌ಗ ಇಂದ್ ತುಂಬಾ ದೆವ್ವಗಳ ಆರಾದನೆ ಮಾಡ್ವೆ, ಕೇರಳ ಮೂಲದ ಬೈನಾಟಿ, ವಿಷ್ಣುಮೂರ್‌ತಿ ಅದರೊಟ್ಟಿಗೆ ಕಲ್ಕುಡ-ಕಲ್ಲುರ್ಟಿ, ಪಂಜುರ್‌ಲಿ, ಗುಳಿಗ, ಮೈಸಂದಾಯ, ಕಡಂಬಳಿತ್ತಾಯ, ಹಳ್ಳತ್ತಾಯ, ಕುಟುಂಬದ ನೆಲೆಲಿ ಶಾಕ್ತ ಮೂಲದ ರುದ್ರಾಂಡಿನ 'ಜೆನನದ' ಅಲ್ಲರೆ ಕುಟುಂಬದ ದರ್ಮದೆವ್ವಂತೇಳಿ ಆರಾದನೆ ಮಾಡ್ವೆ. ಮುಕ್ಯ ಆಗಿದ್ ಯೋದರ ಲಕ್ಷಣದ ಚಾತು ನಾಯರ್ ದೆವ್ವನ ಆರಾದನೆ ಮಾಡ್ವೆ.

ತುಳ್‌ನಾಡ್‌ಲಿ ಗುತ್ತು ಮನೆತನದೊವ್‌ತ ಕರ್‌ಸಿಕಂಬ ಜೈನ, ಬಂಟ ಸಮುದಾಯದ ಕೆಲವ್ ಮನೆಗಳ 'ಸುತ್ತು ಪಡ್ವಿರೆ' ಮನೆಂತ ಕರ್‌ದೊವೆ. ನಾಕ್ ಕಡೆ ಕಟ್ಟಡಗಳ್‌ಂದ ಸುತ್ತ್‌ವರ್‌ದ ಮತ್ತೆ ನಡುಲಿ ದೊಡ್ಡ ಇಜ್ಜಲ್‌ಂದ ಕೂಡಿದ್ದ್ ಈ ಮನೆಗ ಗ್ರಾಮ, ಮಾಗಣೆ, ಮತ್ತೆ ಸೀಮೆ ವ್ಯಾಪ್ತಿಂದ ಅದಿಕಾರಂದ ಗುರ್‌ತಿಸಿಕಂಡವ್. ಅದಿಕಾರ ಸ್ತಾನಂದಾಗಿ ಕೇಂದ್ರದ ಅರಸರೊಟ್ಟಿಗೆ ಅವರ ಮಾಂಡಾಳೀಕರೊಟ್ಟಿಗೆ ಈ ಮನೆತನಗ ಸಮ್ಮಂದ ಇಸಿಕಂಡಿದ್ದವೆ. ಈ ಬಗೆನ ಅದಿಕಾರ ಪರಂಪರೆಂದಾಗಿ ಈ ಮನೆತನಗ ಬ್ರಿಟಿಷರ ಮತ್ತೆ ಸ್ವಾತಂತ್ರ್ಯದ ಮೇಲೆನ ಕಾಲಲಿ ಹೆಚ್ಚ್ ಆಸ್ತಿ ಹೊಂದಿದ್ದ ದನಿಕ ಜಮೀನ್‌ದಾರಿಗಳಿಗೆ ಸೇರಿದವ್‌ಂತ ಗುರ್‌ತಿಸಿಕಂಡುಟ್ಟ್. ಈ ಮನೆಗಳ್‌ಲಿ ದೆವ್ವ ಬಂಡಾರಗಳ್‌ಂದ ಕೂಡ್ದ ದೊಡ್ಡದಾದ ದರ್ಮ ಅಲ್ಲರೆ ನ್ಯಾಯ ಚಾವಡಿಗ ಇದ್ದದೆ. ಇಂತ ಚಾವಡಿಗ ಊರ್‌ನ ನ್ಯಾಯ ತೀರ್ಮಾನ ಮಾಡಿಕಾಗಿ ಇದ್ದ್ ಊರ್‌ನ ನಿಯಂತ್ರಣ ಮಾಡ್ತಿತ್ತ್. ಒಟ್ಟಾರೆ ಆಗಿದ್ ಹೇಳಾಕಾರೆ ಈ ಮನೆಗ ಅದಿಕಾರನ ಬಲ್ಲಾಳ್‌ರ ಅದಿರಾಜರ ಒಪ್ಪಿಗೆ ಪಡ್ದ್‌ದ್ ಎಲ್ಲಾ

ಕೆಲ್ಸಗಳ ಮಾಡ್ತಿದ್ದ. ಮನೆ ಯಜ್‌ಮಾನ ಹೀಂಗೆ ಗ್ರಾಮದ ಅಲ್ಲರೆ ತನ್ನ ಅದಿಕಾರ ಮಿತಿಲಿ ನಾಯಕ ಆಗಿದ್ದ ಪೊದ್ದತಿ ತುಳ್‌ನಾಡ್‌ಲಿ ಇತ್ತ್. ಗೌಡ್ರ್‌ಗ ವಲಸೆ ಬಂದೊವ್ ಆದರ್‌ಂದ ಅವ್ ಯಜ್‌ಮಾನಿಕೆ ಪಡಿದು ಸ್ವಂತದ ನಿರ್‌ದಾರ ಆಗಿಲ್ಲೆ ಅದರ ಸಂಪಾದನೆ ಮಾಡಕಿತ್ತ್.

ತುಳುನಾಡ್‌ಲಿ ಜೈನ ಮತ್ತೆ ಬಂಟರ್‌ಗೆ ಹಂಗೆನೆ ಆಸ್ತಿ ಕೊಡುದರೊಟ್ಟಿಗೆ ಬೇರೆ ಸಮುದಾಯಕ್ಕೂ 'ಸುತ್ತು ಪಡ್ಪಿರೆ' ಮನೆಗ ಇರ್‌ವಂಗೆ, ಸುಳ್ಯಲಿ ಗೌಡ್ರ್‌ಗಳಿಗೆ 'ಐನ್ ಮನೆಗ'ತ ಉಟ್ಟು. ಈ ಮನೆಗ ಕೂಡ 'ಗುತ್ತು ಮನೆಗ' ಆಗಿ/ ಸೀಮೆಕಳ ಮನೆಗ ಆಗಿ ಗೌರವ ಪಡ್ಕಂಡವೆ. ಐನ್ ಮನೆಂತೇಳ್ರೆ, ಕುಲದೆವ್ವ, ಮನೆದೆವ್ವ, ದರ್ಮದೆವ್ವ, ಸತ್ತ ಹಿರಿಯ ಕೊಲೆಗಳ (ಗುರುಕರ್‌ನೂರರು) ಸ್ತಾನಗಳ್‌ಂದ ಒಂದ್‌ಗೂಡಿ ಕುಟುಂಬದ 'ಕರ್‌ತನ' (ಯಜಮಾನ) ಹೇಳ್ದಾಂಗೆ ಕುಟುಂಬಸ್ತರ್ ವಾಸ ಮಾಡ್ವ ಮನೆ. ಹಿಂಗೆ ಐದ್ ಅಂಸಗಳ್‌ಂದ ಕೂಡ್ದ ಮನೆ ಐನ್‌ಮನೆ ಆದೆ. ಇಸ್ಟೆಲ್ಲ ಇರುವ ಮನೆ ಎಲ್ಲಾ ತರಲು ಗೌಡ್ರ ಸಾಮಾನ್ಯ ಮನೆಗಳ್‌ಂದ ಬೇರೆನೆ ಆಗುಟು.

ದೇವ್ರ್, ದೆವ್ವಗ, ಜೀವನಾವರ್‌ತನ ಮತೆ ವಾರ್ಷಿಕಾವರ್‌ತನಗ ಎಲ್ಲಾ ಆಚರಣೆಗ ಕುಟುಂಬದವೆಲ್ಲವೂ ಸೇರಿ ಈ ಮನೆಗಳ್‌ಲಿ ನಡ್ಸುವೆ. ಗೌಡ್ರ ಐನ್ ಮನೆ ಸಂಪ್ರದಾಯ ಆಚರಣೆಗಳ್‌ಲಿ ಬೇರೆನೆ ಆಗಿರುವಂಗೆ ದರ್ಮ ರಾಜಕೀಯ ಆಡಳಿತ ನಡ್ಸುದರ್‌ಲೂ ಮಹತ್ವ ಪಡ್ದುಟ್ಟು.

ತುಳುನಾಡ್‌ನ ಪಡ್ಪಿರೆ ಮನೆ, ಬಯಲ್ ಸೀಮೆನ ತೊಟ್ಟಿ ಮನೆಗಳಿಗೆ ಹೋಲ್ಸಿರೆ ಗೌಡ್ರ ಐನ್ ಮನೆಗ ಮತ್ತೆ ಆ ಮನೆಗಳಿಗೆ ಒಂದ್ ತರದ ಹೋಲಿಕೆ ಕಂಡ್ ಬಂದದೆ. ಗೌಡ್ರ್ ಬಯಲ್‌ಸೀಮೆಂದ ವಲಸೆ ಬಾಕನ ಬಯಲ್ ಸೀಮೆಲಿ ಹೆಚ್ಚಾಗಿ ಇದ್ದ ಈ ತೊಟ್ಟಿ ಮನೆ ಕಟ್ಟಿದ ಬಗೆನ ನೋಡಿಕಂಡಿರೊಕು. ಹಂಗೆ ಅಲ್ಲಿನ ವಾತಾವರಣಕ್ಕೆ ಸರಿ ಹೊಂದುವಂಗೆ ಮತ್ತೆ ಅಲ್ಲಿನ ಸಂಸ್ಕೃತಿಗೆ ಅಗತ್ಯ ಇರ್‌ವಂಗೆ ವಾಸ ಮಾಡಿಕೆ ಮನೆಗಳ ಕಟ್ಟುವೆ. ಈ ಹಿನ್ನಲೆಂದ ಯೋಚನೆ ಮಾಡ್ರೆ ಗೌಡ್ರ್‌ಗ ತುಳ್‌ನಾಡ್‌ಲಿ ಬಂದ್ ನೆಲೆ ಆಕನ ಇಲ್ಲಿ ಇದ್ದ 'ಗುತ್ತು ಬೂಡು'ನವರ 'ಸುತ್ತು ಪಡ್ಪಿರೆ' ಮನೆಗಳ ಹಂಗೆ ಗೌಡ್ರ್ ಕೂಡ 'ಐನ್ ಮನೆ' ತ ಹೇಳ್ವ ಮನೆಗಳ ಕಟ್ಟಿಕಂಡೊಳ.

ತುಳುನಾಡ್‌ಲಿ ಹೆಚ್ಚಾಗಿರ್‌ವ ಸುತ್ತ್ ಪಡ್ಪಿರೆ ಮನೆಗಳೊಟ್ಟಿಗೆ ವಲಸೆ ಬಂದ ಗೌಡ್ರ್‌ಗ ತಮ್ಮ ಮನೆಗಳ ಹೋಲ್ಸಿಕಂಬದರೊಟ್ಟಿಗೆ ಅವರ ಮೂಲನ ಒಳ್ಸಿಕಂಬ ಪ್ರಯತ್ನನೂ ಕಂಡದೆ. ಅದರೊಟ್ಟಿಗೆ ಜಾಗೆನ ಒಡೆತನ ಪಡ್ಕಂಬೊದರೊಟ್ಟಿಗೆ ದಾರ್ಮಿಕ ಆಗಿ ಮತ್ತೆ ಸಾಮಾಜಿಕ ನೆಲೆಗಟ್ಟ್‌ಲಿ ಹಿಡಿತ ಸಾದ್‌ಸ್‌ಯೊಳ. ಹೀಂಗೆ ಮನೆಗಳ ಒಟ್ಟಾರೆಯಾಗಿ ನೋಡ್ರೆ ಒಂದ್ ದೊಡ್ಡ ಸಮಾಜದ ಚಿತ್ರ ಮೂಡಿ ಬಂದದೆ. ಅಸ್ಟೆ ಅಲ್ಲದೆ ತಾನೇ ಮೇಲ್‌ತ ಹೇಳ್ವ ಆದಿಕಾರ ಕಂಡ್ ಬಂದದೆ. ಈ ವೆವಸ್ತೆನ ಮೇಲ್ಬಾಗಲಿ ಆಳ್ವಿಕೆ ನಡ್ಸೊವರ ದೊಡ್ಡ ಅರಮನೆಗ, ಸಾಮಂತ ಪಾಳೆಗಾರ್‌ರ ಅರಮನೆಗ, ಸೀಮೆ –ಮಾಗಣೆಗಳ ಅದಿಕಾರ ಮಾಡವರ ಸುತ್ತ್‌ಪಡ್ಪಿರೆ ಮನೆಗ, ಹಂಗೆ ಗೌಡ್ರ ಐನ್‌ಮನೆಗ ಇನ್ನೂ ಕೆಳಗೆನವರ ಸಾಮಾನ್ಯ ಮನೆಗ ಇದ್ದವೆ. ಈ ಎಲ್ಲಾ ಮನೆಗಳ ಒಳಗೆ ನೋಡ್ರೆ ಸಾಮಾನ್ಯ ಆಗಿ ಒಂದೇ ತರ ಸಮ್ಮಂದ ಇರ್‌ದು ಕಂಡ್ ಬಂದದೆ. ಆಯಾಯ ಮನೆಗಳಿಗೆ ಇರ್‌ವ ಅದಿಕಾರದ ನೆಲೆಗಟ್ಟ್‌ಲಿ ಒಳಗಿನ ರಚನೆ ಮೇಲೆಂದ ಕೆಳಗೆ ಸಣ್ಣದಾಕಂಡ್ ಬಂದದೆ. ಸಾಮಾನ್ಯರ ಮನೆಲಿ ಈ ಅಂಕಣಗ ಇರ್‌ದುಲೆ.

ಸುಳ್ಯ, ಪುತ್ತೂರ್, ಸುಬ್ರಹ್ಮಣ್ಯ ಪ್ರದೇಶಗಳ್‌ಲಿ ಉಲ್ಲಾಕುಳು ಆರಾದನೆ ಮತ್ತೆ ಅವುಗಳ ಆಡಳಿತಾತ್ಮಕ ಸಮುದಾಯ ಆಗಿ ಗೌಡ್ರ್ ಮುಕ್ಯವಾದೊವು. ಈ ಬಗೆನ ಸಮ್ಮಂದ ಹೊಂದುವಲ್ಲಿ ಗೌಡ್ರ್ ಮತ್ತೆ ಉಲ್ಲಾಕುಳ್‌ಗಳ ಪರಂಪರೆನ ವಿವರ್‌ಸುವ ದಾಕಲೆಗ ಸಿಕ್ಕುವೆ. ಈ ಐತಿಹ್ಯಗ ಏಕಕಾಲಲಿ ಉಲ್ಲಾಕುಳ್ ಮತ್ತೆ ಬಲ್ಲಾಳರೊಟ್ಟಿಗೆ ಸಮ್ಮಂದ ಕೂಡಿಕಂಬ ಬಗ್ಗೆನೂ ತಿಳ್ಸಿದೆ.

ಉಲ್ಲಾಕುಳುಗಳಂತ ಮತಮೂಲ ಪ್ರಬಾವಿ ದೆವ್ವಗ ಆದಿಕುಕ್ಕೆಂದ ಬಂದ್ ಊರ್‌ಲಿ ಪ್ರಬಾವ ಹೆಚ್ಚಿಗಿರ್‌ವ ಗೌಡರ ಮೂಲ ಮನೆತನಗಳ ಆಸ್ರಯ ಪಡ್ಕಂಡವೆ. ಚೊಕ್ಕಾಡಿ ಪೂಜಾರಿಮನೆ ಗೌಡ್ರ್‌ಲಿ, ಆರೆಂಬಿ ಗೌಡ್ರ್‌ಲಿ, ಉಲ್ಲಾಕುಳು ಬ್ರಾಹ್ಮಣ ಮಾಣಿಗಾಗಿ ಬಂದ್ ಮೂರ್‌ತಿ ರೂಪಲಿ ನಿಲ್ಲುವ ರೀತಿ ಮದ್ಯಯುಗದ ಮತೀಯ ಹಿನ್ನಲೆಲಿ ನೋಡಕಾದಂತದ್. ಕುಕ್ಕಂದೂರ್ ಉಲ್ಲಾಕುಳ್ ಗೌಡ ಕುದುರೆಕುಳ್ಳಾಂಗೆ ಸಂಕಪಳ ರೂಪಲಿ ಕಂಡು ಬಂದವೆ. ಹಿಂಗೆ ಗೌಡ್ರೊಟ್ಟಿಗೆ ಸಿಕ್ಕವಲ್ಲಿ, ಬಲ್ಲಾಳರ್‌ಂದ ಮಾಡ ಕಟ್ಸ್‌ಸಿ ಆರಾದನೆ ಪಡೆವಲ್ಲಿ, ಜಾತಿ ಮೂಲ ಮತ್ತೆ ಮತ ಮೂಲದ ಪ್ರಬಾವ ಇದ್ದಂಗೆ ಕಂಡದೆ.

ಜೈನರ್, ಬಂಟರ್, ಬಲ್ಲಾಳರ್ ನಾಸ ಆಕೆ ಅವ್ ಮಾಡ್ದ ಅನ್ಯಾಯಕೆ ಪ್ರತಿಕಾರ ಆಗಿ ಉಳ್ಳಾಕುಳ್ ಕಾರಣಂತೇಳಿ ಈ ಸಮುದಾಯಲಿ ಪ್ರಚಲಿತಲಿ ಉಟ್ಟು. ಇದರ ಮುಂದುವರಿಕೆ ಆಗಿ, ನಿಸ್ಸಂತತಿ ಆದ ಬಲ್ಲಾಳರ ಜಾಗೆ ನಾವುಗೆ ಉಂಬಳಿಯಾಗಿ ಬಂದುಟುಂತೇಳ್ವೆ. ಬಲ್ಲಾಳರ್ ನಿಸ್ಸಂತತಿ ಹೊಂದಿದ ಕತೆಗಳ ನೋಡ್ರೆ ಅದಿಕಾರಲಿದ್ದ ಕಡ್ಮೆ ಜೆನಸಂಕೆ ಹೊಂದಿದ್ದ ಬಲ್ಲಾಳರ್ ಹೆಚ್ಚಾಗಿದ್ದ ಬೇರೆ ಸಮುದಾಯಗಳ್‌ಂದ ಅವ್ ಅದಿಕಾರ ಕಳಕಂಡದ್ ಸ್ಪಷ್ಟ ಆದೆ. ವಲಸೆ ಬಂದ ಗೌಡ್ರ್ ಬಲ್ಲಾಳ್ರ್‌ಲಿ ಕೆಲ್ಸಕ್ಕೆ ಸೇರಿ ಅದಾದ ಅವರ ಸಂತತಿ ಗಟ್ಟಿಯಾಗಿ ಬೆಳ್ದದ್ ಕಾಲಾಂತರದ ಸಂಗತಿ.

ಬಲ್ಲಾಳ್‌ರ ಆಸ್ತಿನ ಪಡ್ಕಂಡ್ ಅದಾದ ಮೇಲೆ ಜಾಗೆಗೆ ಸಮ್ಮಂದಪಟ್ಟ್ ದೆವ್ವಗಳ ಆರಾದಿಸಿದ್ದ್, ದೆವ್ವಾರಾದನೆಂದಾಗಿ ಆದಿಕಾರ ಸಿಕ್ಕಿ ಯಜಮಾನಿಕೆ ಪಡ್ಕಂದ್ ಚರಿತ್ರೆಲಿ ಇರ್‌ವ ಸತ್ಯ.

**ಗೌಡರ ಆರಾದನಾ ಪರಂಪರೆನ ಪಳೆಯುಳಿಕೆ ಮತ್ತೆ ಪಲ್ಲಟ :** ಗೌಡ್ರ್ ಸೈವ ಸಂಪ್ರದಾಯದ ಬೇರೆ ಬೇರೆ ಬಗೆಲಿ ಗುರ್‌ತ್‌ಸಿಕಂಡೊಳ. ಜೋಗಿ ಪುರ್‌ಸ, ಸಿದ್ದವೇಸ, ಕೆಂಚಮ್ಮ, ಮುನಿಸ್ವಾಮಿ, ಗೊರವ ಇಂತೊವ್ ಗೌಡ್ರ್‌ಗ ಪೂಜೆ ಮಾಡಿಕಂಡ್ ಬಂದಂತದ್. ಇದ್ ಗೌಡ್ರ ಮೂಲದ ಗುರ್‌ತುನಂಗೆ ಕಂಡ್ ಬಂದದೆ. ಲಿಂಗಾಯಿತ ಮೂಲದ




'ಬಳ್ಳಡ್ಕ ಕಬರ್ ಬಳಿ ಗೌಡ್ರ ಇತಿಯಾಸನೂ ಇದ್ಕೆ ಸಮ್ಮಂದಪಟ್ಟಂಗೆ ಉಟ್ಟು. ಈಗನ ಗೌಡ್ರ್ ಗ ಈ ಮೂಲಂದ ಬಾರಿ ದೂರ ಸಾಗ್ಯೊಳ. ಅವ್ ಈಗ ತಿರ್‌ಪತಿ ತಿಮ್ಮಪ್ಪಂಗೆ ಮುಡ್ಪು ಕಟ್ಟುವೆ. ದಾಸಯ್ಯರ ಬಾಕೆ ಹೇಳಿ 'ಹರಿಸೇವೆ' ಮಾಡ್ತುವೆ. 'ಗೌಡ್ರ' ದಾರೆ ಬದಲ್ ಬಟ್ರ ದಾರೆ ಮಾಡ್ಸುವೆ. ಬೈರವಂಗೆ ಅಗ್‌ಲ್ ಕೊಟ್ಟ್ ಪೂಜೆ ಮಾಡ್ರು ಆದಿ ಚುಂಚನಗಿರಿಗೆ ಹರ್‌ಕೆ ಒಪ್ಪುಸುವ ಬದ್ಲ್ ಸೃಂಗೇರಿ ಗುರುಗ ಮತ್ತೆ ಗುರುಪೀಟಕೆ ನಿಯತ್ತ್ ತೋರ್‌ಸುವೆ. ಇದರ್‌ಂದಾಗಿನೂ ಸೃಂಗೇರಿ ಗುರುಪೀಟಕೆ ಒಪ್ಪುಸುವ ಹರ್‌ಕೆ ಕಿಗ್ಗದ ಬೈರವಂಗೆ ಒಪ್ಪಿಗೆ ಆದು ಗೌಡ್ರ್ ಮೂಲಲಿ ಸಿವಾಂಶ ಬೈರವನ ಆರಾದನೆ ಮಾಡ್ತಿದ್ದಂತೇಳ್ದಕ್ಕೆ ಸಾಕ್ಷಿ. ಬಲ್ಲಾಳ ಮತ್ತೆ ಪೂಜೆ ಮಾಡ್‌ವ ಬಟ್ರೊಟ್ಟಿಗೆ 'ದೇವಕ್ರಿಯೆ'ಲಿ ಆರಾದನೆ ಹೊಂದಿಕಂಡ್ ಬಂದಿರುವ ಉಳ್ಳಾಕುಳ್ ಆರಾದನೆ ಒಟ್ಟಿಗೆ ಗೌಡ ಜೆನಾಂಗ ಹೊಂದ್‌ವ ಸಮ್ಮಂದಲಿ ಜಾಗೆ ಸಮ್ಮಂದ, ಜಾತಿ ಸಮ್ಮಂದ ವಿಚಾರಗ ಒಳಗೊಂಡುಟ್ಟು. ಈ ಸಮ್ಮಂದ ಮುಕ್ಯ ಆಗಿ ಮತಕೆ ಸಮ್ಮಂದಪಟ್ಟಂಗೆ ಆದ ಜಗಳನ ಗೌಡ್ರ್ ಕುಣೆವ 'ಸಿದ್ದವೇಷ' ತೋರ್‌ಸಿಕೊಟ್ಟದೆ. ಪಂಡಿತ ಪರಂಪರೆಗೆ ಗೌಡ್ರ್ ಒಡ್ಡಿದ ಪ್ರತಿಬಟನೆ ಸಿದ್ದವೇಸಲಿ ನಿರಾಸೆ ಆದು ಮುಕ್ಯ ವಿಚಾರ. (ಪುರೂಷೋತ್ತಮ ಬಿಳಿಮಲೆ; 1990). ಹಂಗಿದ್ದರೂ ಗೌಡ್ರ್ ವೈದಿಕ ವೈಷ್ಣವ ದ ಪರವಾಗಿಯೇ ಇದ್ದ. ಅಷ್ಟರ ಮಟ್ಟಿಗೆ ವೈಷ್ಣವ–ವೈದಿಕದ ರಹಸ್ಯ ವಿಚಾರಗ ಜೆನಸಂಕೆ ಹೆಚ್ಚಿದ್ದ ಗೌಡ ಜೆನಾಂಗನ ಸೆಳಿವಂಗೆ ಯಶಸ್ಸ್ ಪಡ್ದುಟು.

ತುಳ್‌ನಾಡ್‌ನ ಬೂತಾರಾದನೆಲಿ ಜೆನಾಂಗಗಳ ಬಗ್ಗೆ ಕತೆಗ ಉಟ್ಟು. ಗಲಾಟೆಗಳ ಗುರ್‌ತ ಉಟ್ಟು. ಮುಕ್ಯವಾಗಿ ಮತೀಯ, ರಾಜಕೀಯ ಏರ್‌ಪೇರ್‌ಗ ಹಂಗೆನೆ 'ಯಜಮಾನಿಕೆ' ನೆಲೆ ಹೊಂದಿದ ವಿಚಾರಗಳೂ ಉಟ್ಟು. ಸುಳ್ಯ, ಪುತ್ತೂರು ಪ್ರದೇಸಲಿ ಗೌಡ ಜೆನಾಂಗ ಸ್ವಂತ ಬೂಮಿ ಹೊಂದಿದರ್‌ಂದ ಬೂತಾರಾದನೆಲಿ ಯಜಮಾನಿಕೆ ಪಟ್ಟಲಿ ಗುರ್‌ತಿಸಿಕಂಡೊಳ. ಬೆಳ್ತಂಗಡಿ, ಬಂಟ್ವಾಳಗಳ್‌ಲಿ ಬೂತಾರಾದನೆಲಿ ಗೌಡ್ರ್‌ಗ ಮೊಕ್ತೇಸರರ್‌ತ ಹೇಳಿ ಗುರ್‌ತಿಸಿಕಂಬ ಬದ್ಲ್ ಪೂಜಾರ್ಮೆಲಿ ಗುರ್‌ತಿಸಿಕಂಡೊಳ. ರುದ್ರಾಂಡಿ, ಪಂಜುರ್‌ಲಿ, ಕಲ್ಕುಡ–ಕಲ್ಲುರ್ಟಿ ಹಿಂಗೆ ಮನೆತನದ ದೆವ್ವಗಳ ಆರಾದನೆ ಮಾಡ್‌ವೆನೆ ಹೊರ್‌ತ್ ಊರ್, ಗ್ರಾಮ, ಸೀಮೆ ನೆಲೆಲಿ ಗುರುತಿಸಿಕಂಬ ಅರಸು, ದೈಯ್ಯೊಂಕುಳು, ರಾಜೆನ್ ದೆವ್ವಗಳ ನಡ್ಸಿ ಕೊಡ್ವ ಮುಕ್ಯ ಆದಿ ಮನೆಯವಾಗಿ ಬಲ್ಲಾಳ ಕಟ್ಟಳೆ ಆಗಿ ಹೆಚ್ಚಿನ ಲೆಕ್ಕಲಿ ಕಂಡ್ ಬಾದ್ಲೆ; ಬಂದರೂ ಕಡ್ಮೆ.

ವಲ್‌ಸೆ ಬಂದ ಗೌಡ್ರ್‌ಗ ತುಳ್‌ವರ ಆರಾದನೆ ಒಪ್ಪಿಕಂಬಲ್ಲಿ ಬದಲಾವ ಬೊದ್ಕುನೆದ್ರ್ ಕಾಂಬ ಬೇರೆ ಬೇರೆ ವಿಚಾರಗ ಕಾರಣ ಆವು. ಈ ಕಾರಣಂದಾಗಿ ತಮ್ಮ ಮೂಲದವ್ ಆಗಿರ್‌ವ ನಾಯಕ ನೆಲೆಗಟ್ಟ್‌ನ ಪುರುಸ, ಬಚ್ಚನಾಯಕ ದೆವ್ವಗಳ ತುಳ್‌ವ ದೆವ್ವಗಳ ರೂಪಲಿ ಆಚರಣೆಗೆ ತಂದೊಳ. ಮಾತ್ರ ಮೂಲೀಯ/ಶಾಕ್ತ ಮೂಲ ಶಿರಾಡಿ, ರುದ್ರಾಂಡಿ ನಂತ ಮಾತ್ರ ದೆವ್ವಗಳ ಆಚರಣೆ ಮಾಡ್ವೆ. ಮತೀಯ ಸಂಕ್ರಮಣ ಕಾಲದ ಅಗತ್ಯಕೆ ಸಮ್ಮಂದಪಟ್ಟ ಬರವಣಿಗೆ (ವೈದಿಕ) ಮತ್ತೆ ಬಾಯ್ಮಾತ್‌ಗಳ ಒಟ್ಟ್‌ಗೂಡ್ಸಿದ ರೂಪಲಿ ಅಸ್ತಿತ್ವ ಪಡ್ದಿರ್‌ವ ಉಲ್ಲಾಕು ಗಳಂತ ದೆವ್ವಗಳ ಜಾಗೆ ಹಂಚಿಕಂಬೊದರೊಟ್ಟಿಗೆ ಒಪ್ಪಿಕೊಂಡೊಳ. ಇದರ್‌ಂದಾಗಿ ತುಳುನ ಸಾಂಸ್ಕೃತಿಕತೆಲಿ ಗೌಡ್ರ್ ಹಕ್ಕಲೆನೊವಾಗಿ ಒಳ.

**ಸಬ್ಬಮ್ಮ ಪೂಜೆನ ಮೂಲ ಮತ್ತೆ ಬೌಗೋಳಿಕತೆ :** ಸಬ್ಬಮ್ಮನ ಪೂಜಿಸುದ್ ಕುಲಸತಿಗೆ ಸಮ್ಮಂದಪಟ್ಟದ್. ಇದರ ಬಗ್ಗೆ ಇರ್‌ವ ಮಾತ್‌ಗ ಬೇರೆತರಲಿ ಉಟ್ಟು ಮತ್ತೆ ಬಾರಿ ಹಳ್ತ್. ಯಲಹಂಕದ ರಾಜರಾಗಿದ್ದ ಬೆಂಗಳೂರ್ ಕೆಂಪೇಗೌಡನ ವಂಸದ ಮೂಲ ಪುರುಸಂತೇಳಿ ಕರ್‌ಸಿಕಂಬ ರಣಬೈರೇಗೌಡನ ಮಗಳ್ ದೊಡ್ಡಮ್ಮ ಸತಿಯಾತ್‌ಂತೇಳ್ದ್ ಪ್ರತೀತಿ. ಇದೆ ಮುಂದೆ ಕೆಂಪಮ್ಮ ಆಗಿ ಒಕ್ಕಲಿಗರಿಗೆ ಕುಲದೇವತೆ ಆಗಿ ಪೂಜೆ ಪಡ್ದಿರುವ ಸಾದ್ಯತೆ ಉಟ್ಟು. ಇಂದ್‌ಗೂ ಗೌಡ ಒಕ್ಕಲಿಗರ್ ಹಬ್ಬಿಕಂಡಿರುವ ಹಳೆ ಮೈಸೂರ್‌ನ ಊರ್‌ಗಾದ ಮಂಡ್ಯ, ಮೈಸೂರ್, ಹಾಸನ ಮತ್ತೆ ಬೆಂಗಳೂರ್ ಪ್ರದೇಸಲಿ ಗ್ರಾಮದೇವತೆ ಆಗಿ ದೊಡ್ಡಮ್ಮನ ಕೆಂಪಮ್ಮಂತೇಳಿ ಪೂಜೆ ಮಾಡಿರುವ ಕ್ರಮ ಉಟ್ಟು. ಇದ್ರಂಗೆ ಇನ್ನೊಂದ್ ಮಾತ್ ಉಟ್ಟು. ಅದರ ಪ್ರಕಾರ 'ಕಲ್ಯಾಣಲಿ ಹಿಂದೆ ಮುದ್ದೇಗೌಡಂತೇಳಂವ ಒಬ್ಬ ಇತ್ತ್. ಅವಂಗೆ ಏಳ್ ಜೆನ ಗಂಡ್ ಮಕ್ಕ ಒಂದ್ ಬಾರೀ ಪೊರ್‌ಲುನ ಹೆಣ್ಣ್ ಮಗ ಇತ್ತ್. ಇದರ ಹಜಾಮರವಂಗೆ ಮೊದ್ವೆ ಮಾಡಿ ಕೊಡೊಕುಂತ ಪ್ರದಾನಿ ಹೇಳ್ತ್. ಕೀಳ್ ಜಾತಿಯವಂಗೆ ಮೊದ್ವೆ ಮಾಡಿಕೆ ಒಪ್ಪದ ಅಪ್ಪ ನೊಡು ಇರ್‌ಲ್ ಸಂಸಾರ ಸಮೇತ ಊರ್ ಬುಟ್ಟ್ ದಕ್ಷಿಣಕೆ ಹೊರ್ಟ್ ಬಾತ್. ಆಗ ಪ್ರದಾನಿ ಸೇನೆ ಕಳ್ಸಿ ಅವರ ಹಿಡ್ದ್ ತಾಕೆ ಹೇಳ್ತ್. ತುಂಬಿ ಹರೆತಿದ್ದ ತುಂಗಬದ್ರೆ ಹಳ್ಳ ದೊಡ್ಡಮ್ಮನ ಬೇಡಿಕೆನಂಗೆ ದಾರಿ ಬುಟ್ಟತ್. ಸೈನಿಕರ್ ಬಾಕನ ಹಳ್ಳ ಉಕ್ಕಿ ಹರ್‌ತ್.ಕತ್ತಲೆಗೆ ಸಂಸಾರ ನಿದ್ದೆಲಿರ್‌ಕನ ತನ್ನಂದಾಗಿ ಊರ್ ಬುಟ್ಟು ಹೋವಂಗೆ ಆತ್ ಅಲಾತ ನೆನ್ಸಿ ಅಲ್ಲೇ ಇದ್ದ ಸೌದೆ ರಾಸಿಗೆ ಕಿಚ್ಚಿ ಕೊಟ್ಟ್ ಅದ್ಕೆ ಹಾರಿ ಸತಿಯಾತ್. ಅವ್ಳ ಏಳ್‌ಜೆನ ಅಣ್ಣಂದರ್ ಬೇರೆ ಬೇರೆ ಆಗಿ ಒಕ್ಕಲಿಗ ಪಂಗಡದವಾದೊ. ಹಂಗೆ ಆದ ಪಂಗಡಗಳಿಗೆ ಇವ್ಳ್ ಮನೆ ದೇವತೆ ಆತ್. ಒಟ್ಟಾರೆ ಆಗಿ ಈ ಮಾತ್‌ಗಳ್‌ಂದ ಮನೆ ಮಗ್ಳ್ ಒಂದ್ ಮನೆ/ಗ್ರಾಮದ ದೇವತೆ ಆಗಿ ಪೂಜಿಸಿಕಂಡ್ ಬಂದಿರುವ ವಿಚಾರ ತಿಳ್ದ್ ಬಂದದೆ.

ಏಲೂರ್ ಮುನಿಸ್ವಾಮಿ ಮತ್ತೆ ಕಾಳ ಬೈರವ ದೇವ್ರುಗಳ ಗಂಗರ್ ಮನೆದೇವ್ರಾಗಿ ಪೂಜೆ ಮಾಡ್ತಿದ್ದೊಂತೇಳ್ವ ವಿಚಾರನ ವಿದ್ವಾಂಸರ್ ಹೇಳ್ಯೊಳ. ಗಂಗರ ಮನೆತನದ ಕ್ರಿಸಿ ಮಾಡಿಕಂಡ್ ಇದ್ದ ಜೆನಗ ಹಳೆ ಮೈಸೂರ್‌ಲಿ ಅಲ್ಲಲ್ಲಿ ನೆಲೆ ಕಂಡ್‌ಕಂಡೊ. ತುಳ್‌ನಾಡ್‌ಗೆ ಬೇರೆ ಬೇರೆ ಕಾರಣಗಳ್‌ಂದಾಗಿ ವಲಸೆ ಬಂದ್ ಹಾಸನ ಜಿಲ್ಲೆನ ಐಗೂರ್ ಸೀಮೆಲಿರುವ ಒಕ್ಕಲಿಗ ಗೌಡ್ರ್‌ಗ ಸಬ್ಬಮ್ಮ/ಕೆಂಚಮ್ಮನ ಪೂಜೆ ಮಾಡ್ತಿದ್ದ ಜಾಗೆಗ ಈಗೊಳು ಆ ಊರ್‌ಲಿ ಕಂಡ್‌ಬಂದದೆ.

ಈಗನ ಹಾಸನ ಜಿಲ್ಲೆನ ಐಗೂರ್ ಸೀಮೆಲಿ ಪಾಳೆಗಾರ ಒಬ್ಬ ಕಟ್ಟಿದ 'ಹೊಸಕೋಟೆ ಕೆಂಚಮ್ಮನ ದೇಸ್ತಾನ ಉಟ್ಟು. ಇದ್ ಮೂಲಲಿ ಜೆನಪದರ್ ಪೂಜೆ ಮಾಡಿಕಂಡ್ ಬಂದಿದ್ದ ಕೆಂಚಮ್ಮನ ದೇಸ್ತಾನ ಆಗಿತ್ತ್. 1604 ರ್‌ಲಿ ಕೆಂಚಾಂಬಿಕೆಂತೇಳ್ವ ಹೇಸ್ರ್‌ಲಿ ದೊಡ್ಡ ದೇಸ್ತಾನ ಆಗಿ ಬದಲಾದ ಈ ದೇಸ್ತಾನಕೆ ಐಗೂರ್‌ನ ಗೌಡ ಜೆನಗ ಈಗೊಳೂ ಹರ್‌ಕೆ ಒಪ್ಪುಸುವ ಪೊದ್ದತಿ ಉಟ್ಟು. ಹಂಗೆನೆ ಸಕ್ಲೇಸ್‌ಪುರ ತಾಲೂಕ್‌ನ ಕೂಡ್‌ರಸ್ತೆ ಹಕ್ಕಲೆ ಇರ್‌ವ ಒಣಗೂರ್ ಸಬ್ಬಮ್ಮ ದೆವ್ವ ಸುಳ್ಯ ತಾಲೂಕ್‌ನ ಗೌಡರೊಟ್ಟಿಗೆ ಸಮ್ಮಂದ ಇಸಿಕಂಡುಟು. ಗೌಡರ್ ಈ ಸಬ್ಬಮ್ಮ ದೆವ್ವಕೆ ಮೊದ್ವೆ ಮತ್ತೆ ಬೇರೆ ಬೇರೆ ಸುಬ ಕಾರ್ಯಲಿ ಒಳ್ಳೆಮೆಣ್ಸ್‌ನ ಹರ್‌ಕೆ ತೆಗ್ದ್ ಇಸುವ ಕ್ರಮ ಉಟ್ಟು. ಈ ಪೊದ್ದತಿಗಳ ಆಚರ್‌ಸುದರೊಟ್ಟಿಗೆ ಮೂಲಲಿ ಪೂಜೆ ಮಾಡ್ತಿದ್ದ ದೆವ್ವಂಗಳಿಗೆ ನಿಸ್ಪೆ ತೊರ್‌ಸುವೆ. ಅಂದರೆ ತಮ್ಮ ಹಳೆ ಪೊದ್ದತಿನ ಮುಂದುವರ್‌ಸಿಕಂಡ್ ಬಂದವೆ. (ಬಿಳಿಮಲೆ 1985) ಸುಳ್ಯದ ಗೌಡ್ರ್‌ಗಳ್‌ಲಿ, ಅದರ್‌ಲು ಏನಡ್ಕ, ಪಣೆಮಜಲು, ಕೂಜುಗೋಡು, ಮರ್‌ಕಂಜ, ಕುಂಚಡ್ಕ ತರವಾಡ್ ಮನೆತನಗ ನೇರ ಆಗಿ ಸಬ್ಬಮ್ಮ/ಕೆಂಚಮ್ಮ ದೆವ್ವಗಳಮೂರ್‌ತಿ ಶಿಲ್ಪ ಅಲ್ಲರೆ ಸಾನ್ನಿದ್ಯ ಸಂಕಲ್ಪದೊಟ್ಟಿಗೆ ಪೂಜೆ ಮಾಡ್ವೆ. ಇದರ್‌ಂದಾಗಿ ಗೌಡ್ರ್‌ಗ ಐಗೂರು ಪ್ರದೇಸಂದ ಬಂಗಾಡಿನ ಕಡ್ತಿಕಲ್ಲ್, ಸಿರಾಡಿ ಮತ್ತೆ ಬಿಸಿಲೆ ಬೆಟ್ಟ ದಾರಿಗಳ್‌ಲಿ ಇಳ್ದ್ ಬಂದಿರಿಕೂ ಸಾಕ್ ತ ತಿಳ್ದ್ ಬಂದದೆ. ಸುಳ್ಯಲಿ ಅದರ್‌ಲೂ ಗೌಡ್ರ್‌ಗ ಮಾತ್ರ ಪೂಜಿಸುವ ಸಬ್ಬಮ್ಮ/ಕೆಂಚಮ್ಮ ದೆವ್ವಗಳ ಪೂಜೆ ಗೌಡ್ರ ಮೂಲ ಮನೆತನದ ದೇವತೆಂತೇಳ್ದಕೆ ಸಾಕ್ಷಿ ಆದೆ.

ಸುಳ್ಯದ ಎಲ್ಲಾ ಗೌಡ್ರ್‌ಗ, ಸಬ್ಬಮ್ಮನ ಮನೆ ದೇವ್ರ್‌ಂತ ಪೂಜೆ ಮಾಡ್ದುಲೆ. ಇಲ್ಲಿನ ಗೌಡ್ರ್‌ಗಳ ಪೂಜೆನ ಕ್ರಮಗಳ ನೋಡಿಕನ ಈ ಸಮ್ಮಂದ ವಂಸಪಾರಂಪರ್ಯ ಆಗಿ ಬಂದಂಗೆ ಕಂಡದೆ. ಆ ಮನೆತನದವೇ ಹೇಳಿಕಂಬಂಗೆ ಕುಂಚಡ್ಕದ 'ಗುಂಡನ ಬಳಿ'ಯೊವ್ ಕೆಂಚಮ್ಮನ ಪೂಜೆ ಮಾಡ್‌ವೆ ಈ ಮನೆತನದ 'ಐನ್ ಮನೆ' ಇರ್‌ವಲ್ಲಿಂದ ಸುಮಾರ್ ದೂರಲಿ 'ಕಾಂಚಡ್ಕಂತೇಳುವ ಜಾಗೆ ಇದ್ದ್, ಅಲ್ಲಿ ಕೆಂಚಮ್ಮಂಗೆ ನೇಮಲಿ ನೂರಾರ್ ಹಂದಿಗಳ ಬಲಿ ಕೊಟ್ಟವೆ. ಈ ಕಾಂಚಡ್ಕಂದಾಗಿನೇ ಕುಂಚಡ್ಕಂತೇಳ್ವ ಹೆಸ್ರ್ ಬಂದುಟ್‌ಂತೇಳ್ವೆ. ಅದೇ 'ಗುಂಡನ ಬಳಿ' ಸೋಣಂಗೇರಿ ಮನೆತನದೊವ್ ವೆಂಕಟ್ರಮಣ ದೇವರ ನಂಬುವೆ ಇವುಕೆ ಸಬ್ಬಮ್ಮ ದೇವ್ರ್ ಇಲ್ಲೆ. ಕಬರ್ ಬೊಳಿನ ಕುಡೆಕಲ್ಲ್ ಐನ್‌ಮನೆಯೊವ್ ಲಕ್ಷ್ಮಿಯಮ್ಮಂತೇಳಿ ದೀಪ ಇಸಿ ಪೂಜೆ ಮಾಡ್ವೆ. ಸುಳ್ಯಲಿರುವ ಒಳ್ದ ಗೌಡ್ರ್‌ಗ ಅಮ್ಮನ ರೂಪಲಿ ರುದ್ರಾಂಡಿ ದೆವ್ವನ ದರ್ಮದೆವ್ವ / ಕುಟುಂಬದ ದೆವ್ವ ಆಗಿ ನಂಬಿಕಂಡ್ ಬಂದೊವೆ.

ಮಾತೃಮೂಲದ ಹಿನ್ನಲೆ ಇರ್‌ವ ಹೆಣ್ಣ್ ಮೂಲದ ದೆವ್ವ ಒಂದ್ ಇದ್ದೆ ಇದ್ದದೆ. ಇಂದ್ ಗೌಡ್ರ 'ಮಕ್ಕಳ ಕಟ್ಟಳೆ ತ ಹೇಳ್ರೆ ಅಪ್ಪಂದ ಗಂಡ್ ಹೈದಂಗೆ ಆಸ್ತಿ ತ ಹೇಳ್ವ ಪೊದ್ದತಿನ ಅನುಸರಣೆ ಮಾಡ್ರೂ ಆದಿ ಮೂಲಲಿ ಅವ್ ಮಾತೃ ಮೂಲರ್ ತ ಹೇಳ್ದರ ಇದ್ ತಿಳ್ಸಿ ಕೊಟ್ಟದೆ.

ಗೌಡ್ರ್‌ಗಳ್‌ಲಿ ಸಬ್ಬಮ್ಮ, ಲಕ್ಷ್ಮಮ್ಮ, ವೆಂಕಟ್ರಮಣ ದೇವ್ರುಗ ಕುಟುಂಬದ ಬೇರೆ ಬೇರೆಕಡೆಲಿ ಪೂಜೆ ಪಡ್ಕಂಬದಕೆ ಬೇರೆ ಬೇರೆ ಕಾರಣಗ ಉಟ್ಟು. ಸುಳ್ಯಲಿ ಇರ್‌ವ ಗೌಡ್ರ್‌ಗ ಎಲ್ಲಾ ಒಮ್ಮೆಗೆ ಬಂದ್ ಬಿಡಾರ ಕಟ್ಟಿದೊವ್ ಅಲ್ಲ. ಬೇರೆ ಬೇರೆ ಕಾಲಲಿ ಬಂದ್ ಕುದ್ದೊವ್. ಗಂಗಡಿಕಾರ ಒಕ್ಕಲಿಗರ್ ಮಲೆನಾಡ್‌ಲಿ ಬಂದ್ ಕುದ್ರುಕನ ಹೊಯ್ಸಳರ ವೈಷ್ಣವದ ಪ್ರಬಾವಕೆ ಒಳಗಾಗೊಳ. ಮಲೆನಾಡ್‌ನ ನಾಮ ಹಾಕುವ ಗೌಡ್ರ್‌ಗ ಇದ್ಕೆ ಉದಾರ್‌ಣೆ. ವೈಷ್ಣವ ಸಮ್ಮಂದಂದಾಗಿ ವೆಂಕಟ್ರಮಣ ಮತ್ತೆ ಲಕ್ಷ್ಮಮ್ಮ ಕೂಡಿ ಇವ್ ಅಷ್ಕೆ ಒಟ್ಟಿಗೆ ಪೂಜೆ ಮಾಡಿರ್‌ವ ಸಾದ್ಯತೆ ಉಟ್ಟು. ಈ ಹಿನ್ನಲೆಂದಾಗಿ ಹಿಂದೆನ ಕಾಲಲಿ ಐಗೂರ್‌ಂದ ಬಂದ ಗೌಡ್ರ್‌ಗೆ ಸಬ್ಬಮ್ಮ ಹಂಗೆನೇ ವೈಷ್ಣವರ ಪ್ರಬಾವಕೆ ಒಳಗಾದವುಕೆ ಲಕ್ಷ್ಮೀ ವೆಂಕಟ್ರಮಣರ್ ದೇವ್ರ್‌ಗ ಆಗೊಳ. ತಿರ್‌ಪತಿಗೆ ಮುಡ್ಪು ಕಟ್ಟುವ ಸಂಪ್ರದಾಯನ ಒಳ್ಸಿಕಂಡ್ ತುಳ್‌ವರ ಬೂತಾರಾದನೆನ ಬೂಮಿಂದಾಗಿ ಜಾಗೆ ಸಮ್ಮಂದಿ ರುದ್ರಾಂಡಿನ ಗೌಡ್ರುಗ ನಂಬಿಕಂಡ್ ಬಾವಂಗೆ ಆವುಟು. (ಪಿ.ಕೆ.)

**ದಕ್ಷಿಣಕನ್ನಡ ಜಿಲ್ಲೆ :** ಕರ್ನಾಟಕ ರಾಜ್ಯದ ಪೊಡ್ವ ಕರಾವಳಿಲಿ ಒಂದ್ ಜಿಲ್ಲೆ. ಬಡಗಕೆ ಉಡುಪಿ ಮತ್ತೆ ಚಿಕ್ಕಮಗ್ಳೂರು ಜಿಲ್ಲೆಗ, ತೆಂಕಕೆ ಕೇರಳ ರಾಜ್ಯದ ಕಾಸರಗೋಡು ಜಿಲ್ಲೆ ಮತ್ತೆ ಕೊಡಗ್ ಜಿಲ್ಲೆ, ಮೂಡಕೆ ಚಿಕ್ಕಮಂಗ್ಳೂರ್, ಹಾಸನ ಹಾಂಗೆ ಕೊಡಗ್ ಜಿಲ್ಲೆಗ ಮತ್ತೆ ಪೊಡ್ವಕೆ ಅರಬ್ಬೀ ಸಮುದ್ರ ಉಟ್ಟು. ಈ ಜಿಲ್ಲೆನ ವಿಸ್ತೀರ್ಣ 14, 843ಚ. ಕಿಮೀ. ಜೆನಸಂಕೆ 18, 96, 403. 1997ರ್‌ಲಿ ನಡ್ದ ಜಿಲ್ಲೆಗಳ ಪುನರ್‌ವಿಂಗಡಣೆ ಆಕನ ಇದರ ಕೆಲವ್ ತಾಲೋಕುಗಳ ಸೇರ್‌ಸಿದ್ ಉಡುಪಿ ಜಿಲ್ಲೆನ ಮಾಡಿಯೊಳೊ. ಇಂದ್ ಈ ಜಿಲ್ಲೆಲಿ ಪುತ್ತೂರು, ಸುಳ್ಯ, ಬೆಳ್ತಂಗಡಿ, ಮಂಗಳೂರು ಮತ್ತೆ ಬಂಟ್ವಾಳ ತೇಳುವ 5 ತಾಲ್ಲೂಕುಗ 17 ಹೋಬಳಿಗ 371 ಗ್ರಾಮಗ 68 ಪಟ್ಟಣಗ ಒಳ.

ಈ ಜಿಲ್ಲೆನ ಮುಕ್ಯ ಆಗಿ ಮೂರ್ ಬೌಗೋಳಿಕ ವಿಬಾಗಕೆ ವಿಂಗಡ್ಸಕ್. ಅದ್ ಮೂಡದ ಗಟ್ಟಪ್ರದೇಸ ಮತ್ತೆ ಇದ್ಕೂ ಸಮುದ್ರಕು ನೆಡುಲಿ ಇರ್‌ವ ಸುಮಾರ್ ಅಡ್ಕ ಪ್ರದೇಸ ಹಾಂಗೆ ಕರಾವಳಿ ಪ್ರದೇಸ. ಈ ಬಾಗಗ ಸುಮಾರ್ ದಕ್ಷಿಣೋತ್ತರ ಆಗಿದ್ ಹಬ್ಬಿಟು. ಮೂಡದ ಕಡೆ ಪೊಡ್‌ವಗಟ್ಟ ಶ್ರೇಣಿನ ಪ್ರದೇಸ ಉಟ್ಟು. ಕೆಲವ್ಕಡೆ ಬೆಟ್ಟಗಳ ಎತ್ತರ 910ರಿಂದ 1, 830 ಮೀಟರುಗಳಸ್ಟ್ ಉಟ್ಟು. ಬೆಳ್ತಂಗಡಿಗೆ ಮೂಡದಿಕ್ಕ್‌ಲಿ ಹಬ್ಬಿದ ಕುದುರೆ ಮುಕ ಎತ್ತರ ಆಗಿದ್ದರೆ. ಚಾರ್ಮಾಡಿ ಗಾಟಿನ ತೆಂಕಕ್ಕಿರುವ ಕಟ್ಟೆಗುಡ್ಡ (1, 328ಮೀ), ಬಿಸಿಲೆಗಾಟ್‌ಗೆ ಎದುರಾಗಿರುವ ಸುಳ್ಯ ತಾಲೋಕುನ ಸುಬ್ರಹ್ಮಣ್ಯ (1, 727ಮೀ) ಮತ್ತೆ ಹಳೆ ಸಿಸಿಲ ಗಾಟಿ ಮೇಲಿರ್‌ವ ಸಿಸಲಕಲ್ ಶಿಕರ (1, 195ಮೀ) ಒಳ. ಜಿಲ್ಲೆನ ಬಾಗಲಿರುವ ಪೊಡ್‌ವ ಗಟ್ಟ ಶ್ರೇಣಿ ಬಡಗದ ಕಡೆ ಕುತ್ತದ ಗೋಡೆಗಾಗಿ ಮೇಲೆದ್ದುಟು. ತೆಂಕದ ಬಾಗಲಿ ಶ್ರೇಣಿ ಸಮುದ್ರಂದ





ತುಂಬ ದೂರಲಿದ್, ಸುಮಾರ್ ಸಮಾನಾಂತರ ಶ್ರೇಣಿಗ, ಇದರ್‌ಂದ ಪಡ್ವಕೆ ಹಬ್ಬಿದ್, ನೆಡು ನೆಡುಲಿ ಗುಂಡಿಗ ಮತ್ತೆ ಕಣಿವೆಗಳ ಮಾಡ್ದಂಗೆ ಉಟ್ಟು. ದಕ್ಷಿಣಕನ್ನಡ ಜಿಲ್ಲೆನ ಹೆಚ್ಚಿನ ಹಳ್ಳಂಗ ಹುಟ್ಟುದು ಹರಿದು ಇಲ್ಲಿನೇ. ಈ ಗಟ್ಟಗಳ ಸಾಲ್‌ನ ನೆಡುನೆಡುಲಿ ಕಣಿವೆಗಳ ಕೆಳಗೆ ಇರ್‌ವ ಸಣಸಣ್ಣ ಬೊಯ್ಲ್‌ಗ ಗಟ್ಟದ ಮೇಲೆಂದ ನೋಡೊವುಕೆ ಇಡೀ ಅಲ್ಲಲ್ಲಿ ಪಚ್ಚೆ ಬೊಟ್ಟು ಇಸಿದಂಗೆ ಕಂಡದೆ. ಈ ಮಲೆಗ ದಟ್ಟವಾದ ಕಾಡ್–ಕಾನಗಳ್‌ಂದ ಕೂಡಿದ್ ನೀರ್ ಮತ್ತೆ ಪ್ರಾಣಿ ಹಾಂಗೆ ಕಾಡ್‌ಸಂಪತ್ತ್ ದಾರಾಳ ಉಟ್ಟು. ಅಡ್ಡ ಶ್ರೇಣಿಗಳ್‌ಲಿ ಬಲ್ಲಾಳರಾಯನದುರ್‌ಗಂದ ಧರ್ಮಸ್ಥಳದವರೆಗೆ ಹಬ್ಬಿರುವ ಚಿಬ್ಬದ್ರಿ ಪರ್‌ವತ ಶ್ರೇಣಿ ಹೆಚ್ಚಿ ಉದ್ದ ಉಟ್ಟು. ಕುದುರೆಮುಕಂದ ಹೊರ್ಟ್ ಜಮಾಲಾಬಾದ್ – ಮೂಡಬಿದರೆ ಕಡೆಗೆ ಹೋವ ಮತ್ತೊಂದ್ ಸಾಲ್ ಸನು ದೊಡ್ಡದು.

ಈ ಗಟ್ಟ ಪ್ರದೇಸಂದ ಇಳ್ದ್ ಪಡ್ವಲಿ ಮುಂದೆ ಹೋದರೆ ಕಡ್ಮೆ



ದಕ್ಷಿಣಕನ್ನಡ ಜಿಲ್ಲೆ

ಎತ್ತರದ ಬೊಯ್ಲ್ ಪ್ರದೇಸಗ ಬಂದವೆ. ಹಾಂಗೆ ಮುಂದೆ ಹೋದಂಗೆಲ್ಲ ಕಮ್ಮಿ ಎತ್ತರದ ಗುಡ್ಡೆಗ ಅಲ್ಲಲ್ಲಿ ಕಂಡುಬಂದವೆ. ಅಲ್ಲಿ ಸಾಗುವಳಿಗೆ ಆವಂತ ಬೊಯ್ಲ್‌ಗ ಮತ್ತೆ ಎತ್ತರದ ಬರಡ್ ಪ್ರದೇಸಗೊಳ. ಈ ಜಿಲ್ಲೆನ ತೀರಪ್ರದೇಸ ಬಹುತೇಕ ಸೊರೂತ ಉಟ್ಟು. ಅಂದರೆ ಹಳ್ಳಂಗ ಸಮುದ್ರ ಸೇರುವ ಜಾಗೆಗಳ್‌ಲಿ ಮತ್ತೆ ಇನ್ನಿತರೆಡೆಗಳ್‌ಲಿ ಕೊರಿದರ್‌ಂದ ಕೊಲ್ಲಿ ಹಾಂಗೆ ಒಳೆಗೆ ಹಬ್ಬಿಟು.

ಕೋಟೆ ಕಟ್ಟಿದಂಗೆ ಇರ್‌ವ ಪಡುವದ ಮಲೆಗೊಳೊ. ಅದರ ಮೇಲೆ ಗೆರೆ ಎಳ್ದಂಗೆ ಕಾಂಬ ಮಾರ್‌ಗಗ, ಪಚ್ಚೆನ ಕಾನ ಕಾಡುಗ. ಕುತ್ತಾನ ಕುತ್ತದ ಗುಡ್ಡೆಗ ಇಳಿಜಾರ್‌ಂದ ಹರ್‌ಕಂಡ್ ಬಾವ ಚೋಡಿಗ, ರೋಮಕುತ್ತ ಮಾಡ್ಸುವ ಬೆಟ್ಟಗುಡ್ಡೆಗಳ ಇಳ್ಜಾರ್ ಸಾಲ್, ಮನೋಲ್ಲಾಸಕು ಸಾಹಸ ಮಾಡಿಕೆ ಆವಂತ ಕಡಲ್‌ಕರೆ – ಇವು ಅಲ್ಲಿನ ನೆಲ ಜೀವಂತಗೊಳ್ಸಿಟು.

ಜಿಲ್ಲೆನ ಬೂಶಿಲಾರಚನೆಗಳ ದಾರವಾಡ ಶಿಲಾವರ್‌ಗ, ಮದ್ಯಂತರ ಸೇರ್ಪಡೆಗ ಮತ್ತೆ ಈಚೆನ ರಚನೆಗ ತೇಳಿ ವಿಂಗಡಿಸಕ್. ಅಕೇರಿದರ ಬುಟ್ಟು ಒಳ್ದವು ಬಾರಿ ಪಂಡ್ ನ ಆರ್‌ಕೇಯಿಯನ್ ಯುಗಕೆ ಸೇರ್‌ದವು. ದಾರವಾಡ ಶಿಲಾವರ್‌ಗಲಿ ತುಂಬಾ ಸ್ವರೂಪಾಂತರಿಕ ಪ್ರಾಚೀನ ಶಿಲೆಗೊಳ. ಇದರ್‌ಲಿ ಮುಕ್ಯ ಆಗಿ ಪದರ ಇರ್‌ವ ಕಬ್ಬಿಣ ಮಿಶ್ರಿತ ಕ್ವಾರ್ಟ್ಸೈಟ್ ಮತ್ತೆ ಹಳ್ಳಿಮಟ್ಟ್‌ಗ ಟಾಲ್ಕ್ ಮತ್ತೆ ಹಾರ್ನ್‌ಬ್ಲಂಡ್ ಶಿಸ್ಟ್ ಕಂಡ್ ಬಂದದೆ. ಕ್ವಾರ್ಟ್ಸೈಟ್‌ಗ ಜಿಲ್ಲೆನ ಮೂಡನ ಬಾಗಲಿ ಐದು ಸಾಲ್‌ಲಿ ಹಬ್ಬಿಟು. ಬಯೋಟೈಟ್ ನೈಸ್‌ಗಳ ನೆಡುಲಿ

ಸಣ್ಣ ಪದರಗಳ್‌ಲಿ ಟಾಲ್ಕ್ ಕಂಡವೆ. ಅದರ್‌ಲಿ ಇತ್ತೀಚೆನ ಒಂದ್ ಹೊಡೆಪೊರೆ ಬೆಳ್ತಂಗಡಿ ಹಕ್ಕಲೆ ಉಟ್ಟು. ಹಾರ್‌ನಬ್ಲೆಂಡ್ ಹೊಡೆಪೊರೆಗ ಅಲ್ಲೆಲ್ಲಿ ಅಪರೂಪಕೆ ಕಾಂಬಕೆ ಸಿಕ್ಕುವೆ. ಬಯೋಟೈಟ್ ನೈಸ್ ಸಿಲೆ ಜಿಲ್ಲೆಲಿ ಅಗಾಲಲಿ ಹರ್‌ಂಡಿಟು. ಇದರ ಹರವು ಸುಮಾರು ಪೊಡ್‌ವ ಗಟ್ಟಗಳಿಗೆ ಸಮಾನಾಂತರಕೆ ಉಟ್ಟು ಇದರ ನೆಡುಲಿ ಅಲ್ಲೆಲ್ಲಿ ಸ್ಟೆರಾಕ್ಸೈನೈಟ್, ಆಂಫಿ ಬಯೋಟೈಟ್, ಡಾಲರೈಟ್ ಇಂತದರ ಹೊಡೆ ಶಿಲೆಗ ಇರ್‌ದುಟ್ಟು. ಜಂಬುಕಲ್ಲ್ ಕರಾವಳಿ ಪ್ರದೇಸಲಿ ಬಹುಮಟ್ಟ್‌ಗೂ ಒಳಬಾಗಲಿ ಹಳ್ಳಿಮಟ್ಟ್‌ಗೂ ಉಟ್ಟು. ಕರಾವಳಿ ಪ್ರದೇಸದ ಮೆಕ್ಕಲು, ಜೇಡಿ ಮತ್ತೆ ಸುಣ್ಣಕಲ್ಲ್ ಪದರಗ ಈಚೆನ ರಚನೆಗ.

ಇತ್ತ ನಡ್ದ ಸಂಸೋದನೆಂದ ಈ ಜಿಲ್ಲೆಲಿ ಬೇಕಾವಂತ ಕನಿಜಗ ಒಳಂತ ಗೊತ್ತಾಗುಟು. ಜೋಗಿಮಲ್ಯೆ ಬೆಟ್ಟ ಮತ್ತೆ ಉಪ್ಪಿನಂಗಡಿ ಹಕ್ಕಲೆ ಕುರಂಗದ ಕಲ್ಲ್‌ಗಳ ನಿಕ್ಷೇಪಗ ಒಳ. ಸುಬ್ರಹ್ಮಣ್ಯ ಮತ್ತೆ ಸುಳ್ಯ ತಾಲೋಕುನ ಗುಂಡ್ಯ ಇಂತಕಡೆಲಿ ಗ್ರಾನೈಟ್ ಸಿಕ್ಕಿದೆ. ಪುತ್ತೂರ್ ತಾಲೋಕುನ ಮುದನೂರು ಹಳ್ಳದ ಚೋಳು ಮೊಣ್ಣುಲಿ ಚಿನ್ನ ಕಂಡುಬಂದುಟು. ಪುತ್ತೂರು ಮತ್ತೆ ಬೆಳ್ತಂಗಡಿ ತಾಲ್ಲೂಕುಗಳ್‌ಲಿ ತುಂಬಾಕಡೆ ಕಬ್ಬಿಣ ನಿಕ್ಷೇಪಗೊಳ. ಇಲ್ಲಿ ಸಿಕ್ಕ್‌ವ ಅದಿರ್‌ಲಿ ಸೇ.54ರ್‌ಂದ 57ರವರೆಗೆ ಕಬ್ಬಿಣ ಇರ್‌ದು ಕಂಡ್ ಬಂದುಟು. ಪಣಂಬೂರು ಹಕ್ಕಲೆ ಮತ್ತೆ ಮಂಗಳೂರು ತಾಲ್ಲೂಕು ಸೇರ್‌ಂದಾಗೆ ಬೇರೆ ಕಡೆಲಿ ಗ್ರಾನೈಟಿಕ್ ರೂಪದ ಬೆಣಚುಕಲ್ಲ್‌ನ ಬಂದರು ಮತ್ತೆ ಕಟ್ಟಾಣಗಳ ಮಾಡಿಕೆ ತುಂಬಾ ಪ್ರಮಾಣಲಿ ತೆಗ್ದು ಉಪಯೋಗಮಾಡ್‌ವೆ. ಕ್ಯಾನೈಟ್, ಸುಣ್ಣದ ಚಿಪ್ಪು, ಸಿಲಿಕ ಪೊಯ್ಯ, ಸಿಲಿಮನೈಟ್ ಮತ್ತೆ ಸೋಪುಕಲ್ಲ್ ಹಾಂಗೆ ಹೆಂಚಿನ ಜೇಡಿಮೊಣ್ಣ್‌ಗ ಜಿಲ್ಲೆನ ಬೇರೆ ಬೇರ ಕಡೆಲಿ ಸಿಕ್ಕಿದೆ.

ಇಲ್ಲಿನ ಬೂಮಿನ ಸ್ವರೂಪಂದಾಗಿ ಈ ಜಿಲ್ಲೆ ಹೆಚ್ಚಿನ ಜಲಸಮೃದ್ಧಿ ಪಡ್ದುಟು. ಪೊಡ್‌ವ ಗಟ್ಟಗ ಮುಂಗಾರ್ ಮಾರುತಗಳ ತಡೆದರ್‌ಂದಾಗಿ ಇಲ್ಲಿ ಜೂನ್‌ಂದ ಸೆಪ್ಟೆಂಬರ್ ಮುಟ್ಟ ಬಾರಿ ಮಳೆ ಬಿದ್ದದೆ. ಗಟ್ಟದ ಪಡುವಕೆ ಬಿದ್ದ ನೀರೆಲ್ಲ ಈ ಜಿಲ್ಲೆಲೆ ಹರ್‌ದದ್ ಸಮುದ್ರ ಸೇರ್‌ದೆ. ಇಲ್ಲಿ ಹುಟ್ಟುವ ಹಳ್ಳಂಗ ಸಾಮಾನ್ಯ ಆಗಿ 150ರಿಂದ 160ಕಿಮೀ ಗಳ್‌ಂದ ಹೆಚ್ಚಿ ಉದ್ದ ಇಲ್ಲೆ. ಮಳೆನ ಒಟ್ಟಿಗೆ ಬೂಗರ್ಬಂದ ಬಾವ ನೀರ್ ಕೂಡ ಪಡುವದ ಇಳ್ಜಾರ್‌ನ ಕಡೆಗೇ ಹರಿದರ್‌ಂದ ಇಲ್ಲಿನ

ಹಳ್ಳಂಗ ಮಳ್ಗಾಲಲಿ ತುಂಬಿ ಹರ್‌ದವೆ. ಇದರ್‌ಂದ ಬಾರಿ ನೀರ್ ತುಂಬಿ ಹರ್‌ದದೆ. ಇಲ್ಲಿ ಹಳ್ಳಗಳ ಉದ್ದ ಕಡ್ಮೆ ಇರ್‌ದರ್‌ಂದ ಪ್ರವಾಹ ಬೇಗ ಇಳ್ದದೆ.

ನೇತ್ರಾವತಿ, ಗುರುಪುರ ಮತ್ತೆ ಕುಮಾರದಾರ– ಇವ್ ಈ ಜಿಲ್ಲೆಲಿ ಹರಿವ ದೊಡ್ಡ ಹಳ್ಳಂಗ. ಕುದುರೆಮುಕಲಿ ಹುಟ್ಟ್‌ವ ನೇತ್ರಾವತಿ ಹಳ್ಳ ಕುಮಾರದಾರ ಮತ್ತೆ ಗುರುಪುರ ಉಪನದಿಗಳ ಒಟ್ಟಿಗೆ ಸೇರಿಕಂಡ್ ಮಂಗ್ಳೂರುನ ಹಕ್ಕಲೆ ಸಮುದ್ರನ ಸೇರ್‌ದೆ. ಹಳ್ಳಂಗ ಸಮುದ್ರ ಸೇರುವ ಎಡೆಗಳ್‌ಲಿ ಪೊಯ್ಯಂದ ಕೂಡ್ದಾ ಅಗಲದ ಜಾಗೆಗೊಳ. ಈ ಜಾಗೆ ದೋಣಿಸಂಚಾರಕೆ ಅನುಕೂಲವಾಗಿದುಟ್ಟು. ಕೆಲವೊಮ್ಮೆ ಈ ಹಳ್ಳಂಗಳ ಪ್ರವಾಹಂದ ಬಾರಿ ಹಾನಿಗನು ಆದೆ. ಈ ಹಳ್ಳಂಗ ಅಲ್ಲದೆ ಸುಮಾರು ಕೆರೆಗಳೂ ಒಳ.

ಈ ಜಿಲ್ಲೆಲಿ ಒಟ್ಟು 1,28,478 (1988–89) ಹೆಕ್ಟೇರ್‌ಗಳ ಕಾಡ್ ಪ್ರದೇಸ ಇದ್ದ್ ಜಿಲ್ಲೆನ ಒಟ್ಟು ಉದ್ದಗಲ ಸೇ. 29 ರ್‌ಲಿ ಕಾಡೇ ಉಟ್ಟು. ಕಾಡ್‌ಗಳ್‌ಲಿ ನಿತ್ಯ ಹರಿದ್ವರ್ಣ ಮತ್ತೆ ಸೊಪ್ಪು ಉದ್‌ರುವ ಮರಂಗ. ಮರದ ಕೆಲ್ಸಕೆ ಉಪಯೋಗಕೆ ಬಾವ ಮೊತ್ತಿ, ನಂದಿ, ಹೊಲುವೆ, ಬೀಟಿಮರ, ಸಾಗುವಾನಿ, ಕೋಗಿಲೆ, ಕೀರಲ್‌ಬೋಗಿ, ಸಿರಿಹೊನ್ನೆ, ಹೊನ್ನೆ, ಹಲ್ಸು, ಇಸ್ಟ್ ಅಲ್ಲದೆ ಕೊಟ್ಟೆ ಗೋಳಿ, ಅತ್ತಿ,ಚಾಕಟೆ, ಮಾಯಿನ ಇಂತ ಮರಂಗ ಒಳೊ. ಕಾಡ್‌ಲಿ ಬೆದ್ರ್, ಬೆತ್ತ, ಓಟೆ, ಕೇದಿಗೆ, ಈಚಲು, ಬಗನಿ ನಮುನೆನಮುನೆನ ಮರಂಗ ಒಳ. ಏಲಕ್ಕಿ, ಮೆಣ್ಸು, ಸೀಗೆ, ವೀಳ್ಯದೆಲೆ, ಕಾಯಿ(ತೆಂಗು), ಶುಂಟಿ, ಗ್ಯಾರ್‌ದಣ್ ಇವ್ ಕಾಡುಲಿನೂ ತೋಟಲಿನು ಕಾಂಬಕೆ ಸಿಕ್ಕ್‌ವ ಮುಕ್ಯ ವಾಣಿಜ್ಯ ಬೆಳೆಗ. ನಿಂಬುಳಿ, ಕಾಚ್ಪುಳಿ(ಮಂತುಳಿ), ದೊಡ್ಡೆಳ್ಳಿಕಾಯಿ, ಸಿಯಾಲಿ ಹಣ್ಣು, ಕಾಡುಕಿತ್ತುಳಿ, ಚಕ್ಕೋತ, ನೆಲ್ಲಿಕಾಯಿ ಬೇರೆಬೇರೆ ಹುಳಿಪಲಗಳ ಕೊಡುವ ದೈಗಳೂ ಒಳೊ.

ದಕ್ಷಿಣ ಭಾರತದ ಕಾಡ್‌ಗಳ್‌ಲಿ ಕಂಡ್‌ಬಾವ ಬವ್‌ತೇಕ ಮೃಗಂಗಳೂ ಇಲ್ಲಿ ಒಳೊ. ಜಿಂಕೆ, ಕಾಟಿ, ಕಡ್ವೆ(ಕಡವೆ), ಹುಲಿ, ಚಿರತೆ, ಕಾಡುಹಂದಿ, ಕೆಂಪ(ಕುರಿ), ಕುದ್ಕ ಇಂತ ದೊಡ್ಡ ಮೃಗಗಳ್‌ಂದ ಹಿಡ್ದ್ ಉಡು, ಅಣ್ಕ್, ಕಬ್ಬೆಕ್ಕು, ಕೆಂಜೆರಿ(ಚೆಣಿಲು) ಸೇರ್‌ದಂಗೆ ಬೇರೆ ಬೇರೆ ಪ್ರಾಣಿಗ ಇಲ್ಲಿ ಕಂಡ್ ಬಂದವೆ. ಮಲೆನಾಡ್‌ಂದ ಬಾವ ಆನೆಗಳು ಕೆಲವೊಮ್ಮೆ ಇಲ್ಲಿನ ಕಾಡುಗಳ್‌ಲಿ ಕಾಂಬಕೆಸಿಕ್ಕಿದೆ. ಹೆಬ್ಬಾವುಂದ ಸುರಾಗಿ ಹಸುರು ಹಾವುನವರೆಗೆ ನಮುನೆ ನಮುನೆನ ಹಾವುನ ಜಾತಿಗೊಳ. ಕಾಡ್ಕೋಳಿ,ತೆಕ್ಕಟೆ, ಕೋಗಿಲೆ, ಗಿಡ್‌ಜ್ಜ, ಗೀಣ ಸೇರ್‌ದಾಂಗೆ ಬೇರೆ ಬೇರೆ ಹಕ್ಕಿಗಳ ಜಾತಿಗಳನು ಹಳ್ಳಂಗಳ್‌ಲಿ ಮೊಸಳೆಗಳ ಕಾಣಕ್.

ಈ ಜಿಲ್ಲೆನ ವಾಯುಗುಣದ ಸುರುನ ಲಕ್ಷಣತೇಳ್ರೆ ವಿಪರೀತ ಮಳೆ, ಹೆಚ್ಚ್ ತೇವಾಂಸ ಮತ್ತೆ ಬಾರಿ ಸೆಕೆ. ಜೂನ್‌ಂದ ಸೆಪ್ಟೆಂಬರ್ ಮುಟ್ಟ ಜಾಸ್ತಿ ಮಳೆ ಇದ್ದದೆ. ಮಾರ್ಚಿಂದ ಮೇ ಮುಟ್ಟ ಹೆಚ್ಚಿ ಸೆಕೆ. ಈ ಜಿಲ್ಲೆನ ಬಹುಬಾಗ ಸಮುದ್ರಮಟ್ಟಕೆ ಕಮ್ಮಿ ಎತ್ತರ ಇರ್‌ದರ್‌ಂದ ವರ್‌ಸದ ಹೆಚ್ಚಿನ ಕಾಲಲಿ ಸೆಕೆನ ಅನ್ಬವ ಇದ್ದದೆ. ಜಿಲ್ಲೆನ ವಾರ್‌ಸಿಕ ಸರಾಸರಿ ಮಳೆ 3,930ಮಿಮೀ. ಇಲ್ಲಿ ಬಿರುಗಾಳಿಂದ ಕೂಡ್ದ ಮಳೆ ಆಗಾಗ ಬಂದದೆ. ಕೆಲವ್ ಕಡೆಗಳ್‌ಲಿ ಒಂದೇ ದಿನಲಿ 20ರ್‌ಂತ ಹೆಚ್ಚಿ ಮಳೆ ಆದೂ ಇದ್ದದೆ. ಬೇಸಗೆಲಿ ಹೆಚ್ಚಿನ ಉಷ್ಣಾಂಸ 37.80ಸೆ., ಅತಿ ಕಮ್ಮಿ ಉಷ್ಣಾಂಸ 16.70ಸೆ.

ಜಿಲ್ಲೆನ ಒಟ್ಟು ವಿಸ್ತೀರ್ಣಲಿ ಸೇ.30 ರಸ್ಟ್ ಪ್ರದೇಸಲಿ ಮಾತ್ರ ಬೆಳೆ ಬೆಳ್ದವೆ. ಬತ್ತ, ಕಬ್ಬು, ಅಡ್ಕೆ, ಏಲಕ್ಕಿ, ಮೆಣ್ಸು, ರಾಗಿ, ರಬ್ಬರ್, ಬೀಜ ಇಂತ ಬೆಳೆಗಳ ಬೆಳ್ದವೆ. ಕಡಲ್ ಕರೆನ ಪ್ರದೇಸಲಿ ಇರ್‌ವ ಬೊಯ್ಲುಗಳ್‌ಲಿ ಮೊಣ್ಣು ಹೆಚ್ಚಿಗೆ ಈಟ್ ಇದ್ದ್ ಕ್ರಿಸಿಗೆ ಹೆಚ್ಚ್ ಪ್ರಯೋಜೆನ ಆದೆ. ಜಿಲ್ಲೆಲಿ ಸಣ್ಣ ಹಿಡುವಳಿಗಳೇ ಹೆಚ್ಚಿನ ಸಂಕೆಲಿ ಒಳ. ಬೆಳೆ ಬೆಳೆದರ ಅನುಸರ್‌ಸಿಕಂಡ್ ಗದ್ದೆಗಳ ಕೊಳಕೆಗದ್ದೆ, ಬೈಲ್‌ಗದ್ದೆ, ಮತ್ತೆ ಪಟ್ಲ್ ಗದ್ದೆ ತೇಳಿ ಕರ್‌ದವೆ.ಚಾಳೆ, ಅಡ್ಕೆ, ಏಲಕ್ಕಿ ಬೆಳ್ಸುವ ತೋಟಗಳಿಗೆ ಬಾಗಾಯ್ತು ತೇಳಿ ಕರ್‌ದವೆ. ಅಲ್ಲಲ್ಲಿ ರಬ್ಬರ್ ಕ್ರಿಸಿ ಕಂಡ್ ಬಂದದೆ. ಕುತ್ಪಾಜೆಲಿ ರಬ್ಬರ್ ಹದಮಾಡ್‌ವ ಕಾರ್‌ಕಾನೆ ಉಟ್ಟು.ಪಡುವದ ಗಟ್ಟದ ತೆಗ್ಗು ಪ್ರದೇಸಲಿ ಮೆಣ್ಸು, ಏಲಕ್ಕಿ ಬೆಳ್ದವೆ. ಈ ಬೆಳೆಗಲ್ಲದೆ ಕೆಲವ್ ವಿದೇಸಿ ಜಾತಿನ ದೈಗಳ ತಂದ್ ಇಲ್ಲಿ ಕ್ರಿಸಿ ಮಾಡಿಕಂಡ್ ಒಳೊ. ಅದರ್‌ಲಿ ಮುಕ್ಯ ಆಗಿ ಕೊಕ್ಕ, ಕೆಂಪು ಎಣ್ಣೆ ತಾಳೆ ಬೆಳೆಗ. ಇತ್ತೀಚೆಗೆ ವೆನಿಲ ಬೊಳ್ಳಿ ಬೆಳ್ಸುದರನು ಸುರು ಮಾಡ್ಯೊಳೊ. ಆಹಾರ ಬೆಳೆಗಳ್‌ಲಿ 67,754 ಹೆಕ್ಟೇರ್‌ಗಳ್‌ಲಿ ಬತ್ತದ ಬೆಳೆ, ನೂರಾರು ಹೆಕ್ಟೇರ್‌ಗಳ್‌ಲಿ ರಾಗಿ, ಉದ್ದುನ ಬೆಳ್ದವೆ.ಬೇರೆ ದ್ವಿದಳ ದಾನ್ಯ ಬೆಳೆವ ಕ್ಷೇತ್ರ 4,497 ಹೆಕ್ಟೇರುಗ. 565ಹೆಕ್ಟೇರ್‌ಗಳ್‌ಲಿ ಕಬ್ಬುನ ಬೆಳ್ದವೆ. (1998–99). ಕಬ್ಬುನ ಹೆಚ್ಚಾಗಿ ಕರಾವಳಿ ಮತ್ತೆ ಹಳ್ಳದ ಕರೆಲಿ ಬೆಳ್ದವೆ. ಬಟಾಟೆ, ನೆಲಕಡ್ಲೆ, ಮೆಣ್ಸು ಇಂತ ಬೆಳೆಗಳನು ಬೆಳ್ದವೆ. ವರ್‌ಸದ ಅಕ್ಕಿನ ಉತ್ಪಾದನೆ 1,41,211 ಟನ್‌ಗ. ಕಬ್ಬುನ ಉತ್ಪಾದನೆ 45,087 ಟನ್‌ಗ.

ಇಲ್ಲಿ ಒಂದ್ ಕ್ರಿಸಿಗೆ ಸಮ್ಮಂದ ಪಟ್ಟ ಪ್ರಯೋಗಾಲಯನ ಸ್ಥಾಪನೆ ಮಾಡೆಳೊ. ಮಂಗಳೂರ್‌ಗೆ ಸುಮಾರ್ 4ಕಿಮೀ ದೂರದ ಜಪ್ಪಿನಮೊಗರ್‌ಲಿ 1944ರ್‌ಲಿ ಕಟ್ಟಿದ ವೆವಸಾಯ ಸಂರಕ್ಷಣಾ ಕೇಂದ್ರ ಉಟ್ಟು. ತೋಟಗಾರಿಕೆ ಇಲಾಕೆ ಚಾಳೆ, ಅಡ್ಕೆ, ಚೌಳಿಕಾಯಿ, ಬಾಳೆಣ್ಣು, ಬೀಜ(ಗೋಡಂಬಿ), ದಾಲ್ಚಿನ್ನಿ ಮರ, ಮೆಣ್ಸು, ಬೆಳ್ಳುಳ್ಳಿ ಸೇರ್‌ದಂಗೆ ಬೇರೆಬೇರೆ ಗೈಪುನ ಬೆಳೆಗಳ ಅಬಿರುದ್ದಿ ಮಾಡ್ತಾ ಒಳ. ಈ ಜಿಲ್ಲೆಲಿ 4 ಬಿತ್ತನೆ ಬೀಜದ ಫಾರಂಗ ಒಳ. ಈ ಜಿಲ್ಲೆಲಿ ಬೊಯ್ಲುಗ ಇಕ್ಕಟ್ಟಾಗಿದ್ದ್ ಹೆಚ್ಚಿಗೆ ಎತ್ತರತಗ್ಗ್ ಕೂಡಿರ್‌ದದರ್‌ಂದ ದೊಡ್ಡ ಮಟ್ಟದ ನೀರಾವರಿ ಯೋಜೆನೆಗಳ ಮಾಡಿಕಾಗ್ತಾ ಇಲ್ಲೆ. ಸಣ್ಣ ಪ್ರಮಾಣದ ನೀರಾವರಿ ಯೋಜೆನೆಗ ಲಾಯ್ಕಲಿ ನಡ್ದೊಳ. ಅದರ್‌ಲಿ ಪುತ್ತೂರು ತಾಲ್ಲೊಕುನ ಗೌರಿಹೊಳೆ, ಬಂಟ್ವಾಳ ತಾಲ್ಲೊಕುನ ಹಂಚಿಕಟ್ಟೆ ಮತ್ತೆ ನೇತ್ರಾವತಿ




ಹಾಂಗೆ ಕಟ್ಟೆಹೊಳೆ ಜಲಾಶಯ ಯೋಜೆನೆ – ಇದ್ ಮುಕ್ಯಪಟ್ಟದ್. ಕೆರೆಗ, ಬಾಮಿಗ ಮತೆ ಬೇರೆ ಮೂಲಂದ ಒಟ್ಟು 66,015 ಹೆಕ್ಟೇರುಗಳಿಗೆ ನೀರಾವರಿ ಒದಗಿಸಲಾಗುಟು (1998–99).

ದನಂಗಳ ಸಾಂಕಿದ್ ಸಂಪಾದನೆ ಮಾಡ್ದರ್‌ಲಿ ಜಿಲ್ಲೆ ಲಾಯ್ಕ್‌ಲಿ ಆದಾಯಲಿ ಗಳ್ಸತುಟ್ಟ್. ಜಿಲ್ಲೆಲಿ ಈ ದನಕರುಗಳ ಆರೈಕೆಗಾಗಿ 9 ಪಶುವೈದ್ಯ ಆಸ್ಪತ್ರೆ, 20 ಚಿಕಿತ್ಸಾಲಯಗ, 54 ಪ್ರಾತಮಿಕ ಪಸುವೈದ್ಯ ಕೇಂದ್ರಗ ಒಳ (2000). 5 ಸಂಚಾರಿ ಚಿಕಿತ್ಸಾಲಯಗ, 5 ಕೃತಕ ಗರ್ಬದಾರಣಾ ಕೇಂದ್ರಗ ಜಿಲ್ಲೆಲಿ ಒಳ. ಮೀನ್‌ನ ಸಾಂಕುದರ್‌ಲು ಜಿಲ್ಲೆ ಹೆಸರಾಗುಟು. 2000–01ರ್‌ಲಿ ಮತ್ಸ್ಯೋತ್ಪನ್ನ 81, 410 ಮೆಟ್ರಿಕ್ ಟನ್‌ಗ ಇತ್ತ್.

ದಕ್ಷಿಣಕನ್ನಡ ಜಿಲ್ಲೆ ಕೈಗಾರಿಕೆಲೂ ಒಳ್ಳ ಅಬಿರುದ್ದಿ ಸಾದಿಸಿಟು. ಇಲ್ಲಿನ ಅರಣ್ಯೋತ್ಪನ್ನಗ, ವೆವಸಾಯ ಬೆಳೆಗ ಮತ್ತೆ ಇಲ್ಲಿನ ಬಂದರುಗಳ್‌ಂದಾಗಿ ಕೈಗಾರಿಕೆ ಬೆಳ್ದುಟು. ಈ ಜಿಲ್ಲೆಲಿ ನೋಂದಣಿ ಆದ ಕಾರ್‌ಕಾನೆಗಳ ಸಂಕೆ 4475. ಅದರ್‌ಲಿ 32, 202 ಉದ್ಯೋಗಿಗೊಳ (2001). 7 ಕೈಗಾರಿಕಾ ಎಸ್ಟೇಟುಗ, 306 ಕೈಗಾರಿಕಾ ಷೆಡ್ಡುಗೊಳ (1998–99).

ಈ ಜಿಲ್ಲೆಲಿ ಕೆಲವ್ ದೊಡ್ಡ ಉದ್ಯೋಗದ ಯೋಜೆನೆಗ ಅಸ್ತಿತ್ವಕ್ಕೆ ಬಂದೊಳ. ಪಣಂಬೂರ್‌ಲಿರುವ ಮಂಗಳೂರು ರಾಸಾಯನಿಕ ಮತ್ತೆ ಗೊಬ್ಬರ ಕಾರ್‌ಕಾನೆ, ಹಾಂಗೆ ಮಂಗಳೂರು ಬಂದರು ನಿರ್ಮಾಣ ಯೋಜೆನೆ ಉಟ್ಟು.

ಅಬಿರುದ್ದಿ ಯೋಜೆನೆಗ ಹೆಚ್ಚಿಗೆ ಉದ್ಯೋಗಾವಕಾಸಗಳ ಒದ್ಗುಸುವೆ. ರಾಷ್ಟ್ರೀಯ ಕನಿಜ ಅಭಿವೃದ್ಧಿ ಸಂಸ್ತೆ ತೆಕಂಡ ಕುದುರೆಮುಕ ಕಬ್ಬಿಣದ ಅದಿರು ತೆಗಿವ ಯೋಜೆನೆ ದೇಸಲೇ ಒಂದ್ ಬಾರಿ ಉದ್ಯಮವಾಗಿದ್ದ್ ಇದ್ಕೆ ಸಮ್ಮಂದಪಟ್ಟ ಇತರ ಕೈಗಾರಿಕೆಗಳ ಅಬಿರುದ್ದಿಗೆ ಜಿಲ್ಲೆಲಿ ಅವಕಾಸ ಸಿಕ್ಕಿಟು. ಇಲ್ಲಿನ ಸಣ್ಣ ಕೈಗಾರಿಕೆಗ ಆರ್‌ತಿಕ ಚಟುವಟಿಕೆಲಿ ಸುರುನ ಪಾತ್ರ ವಯಿಸುವೆ. 17 ಬಟ್ಟೆ ಗಿರಣಿಗ, 10 ರಾಸಾಯನಿಕ ಕಾರ್‌ಕಾನೆಗ, 51 ಎಂಜಿನಿಯರಿಂಗ್ ಗಟಕಂಗ, 397 ಇತರ ಸಣ್ಣ ಕೈಗಾರಿಕೆಗ ಒಳೊ. ಹಂಚಿನ ತಯಾರಿಕೆಲಿ ಈ ಜಿಲ್ಲೆ ದೇಸ ವಿದೇಸಲಿ ಪ್ರಸಿದ್ದಿ ಪಡ್ದುಟು. ಹಡಗ್ ಮತ್ತೆ ದೋಣಿಗಳ ದುರಸ್ತಿ ಕೇಂದ್ರಗಳ್‌ಲಿ ಸುಮಾರ್ ಜೆನಕೆ ಉದ್ಯೋಗ ಸಿಕ್ಕಿಟು. ಬೀಜ ಹದಮಾಡ್‌ವ ಕಾರ್‌ಕಾನೆಗ, ಬೀಡಿ ಉದ್ಯಮ ಘಟಕಗ, ಉಕ್ಕಿನ ತಂತಿ, ಯಂತ್ರ ತುಂಡುಗಳ ತಯಾರ್‌ಸುವ ಗಟಕಂಗ ಲಕ್ಷಾಂತರ ಜೆನಕೆ ಉಪಕಾರ ಆಗುಟು.ವೆವಸಾಯ ಉಪಕರಣಗ, ಮನೆಲಿ ಉಪಯೋಗ ಮಾಡ್ವ ಪಾತ್ರೆಗ, ಟಿನ್ ಡಬ್ಬಿಗ ಇಂತಹ ಬೇರೆಬೇರೆ ಸಾಮಾನ್‌ಗಳ ತಯಾರ್ ಮಾಡ್ವ ಜಾಗೆಗ ಇಲ್ಲಿ ಒಳ. ವಾಹನಗಳ ಹೊರಮೈ ರಚನೆ, ವಿದ್ಯುತ್ ಉಪಕರಣಗಳ ತಯಾರಿಕೆಗೆ ಸಂಸ್ಕರಿಸುವ ಕಾರ್ಯಾಗಾರಗ ಉಟ್ಟು. ಜಿಲ್ಲೆಲಿ ಸಾಬನು(ಸಾಬೂನು) ಕಾರ್‌ಕಾನೆಗ. ಮರದ ಸಾಮಾನ್‌ಗಳ ತಯಾರ್ ಮಾಡ್ವ ಮಿಲ್ಲ್‌ಗ ಒಳೊ.

ಇಲ್ಲಿ ಕಾಫಿ ಬಿತ್ತ್ ತಯಾರ್ ಮಾಡ್‌ವ ಗಿರಣಿಗ ಕೊಪ್ಪರಿ (ಕೊಬ್ಬರಿ) ಎಣ್ಣೆ ತಯಾರ್‌ಸುವ ಮಿಲ್ಲ್‌ಗ ಮೀನು ಸಂಸ್ಕರಣ ಕಾರ್‌ಕಾನೆಗ,ಶೈತ್ಯೀಕರಣ ಕಾರ್‌ಕಾನೆಗನು ಒಳ. ತಂತ್ರಾಂಶದ ಕಂಪೆನಿಗ ಇತ್ತಿಚೆಗೆ ಸುರಾಗುಟು.

ದಕ್ಷಿಣಕನ್ನಡ ಜಿಲ್ಲೆ ಪಂಡ್‌ನ ಕಾಲಂದಳೆ ದೇಶವಿದೇಸಗಳ ಒಟ್ಟಿಗೆ ಯಾಪಾರ ಸಮ್ಮಂದ ಇಸಿಕಂಡಿದ್ದ್‌ದ್ ಐತಿಹಾಸಿಕ ಆದಾರ್‌ಗಳ್‌ಂದ ತಿಳ್ದ್ ಬಂದದೆ. ಹಿಂದೆನ ಕಾಲಲಿನೂ ಈ ಜಿಲ್ಲೆ ತಕಂಡ ವಿಸೇಸ ಬಂದರ್ ಸೌಲಬ್ಯಂದಾಗಿ ಇಲ್ಲಿ ವಾಣಿಜ್ಯ ಪ್ರವರ್ದಮಾನವಾಗ್ತ ಉಟ್ಟು. ಮಂಗ್ಳೂರುಲಿ ಕರ್ನಾಟಕದ ದೊಡ್ಡ ಬಂದರ್ ಉಟ್ಟು. ಜಿಲ್ಲೆನ ದೊಡ್ಡ ಪೇಟೆ ಆದ ಮಂಗಳೂರ್‌ಗೆ ಮುಂಬಯಿ, ಕೊಚ್ಚಿನೊಟ್ಟಿಗೆ ಒಟ್ಟಿಗೆ ಸಮುದ್ರ ಸಂಪರ್‌ಕನೂ, ಬೆಂಗಳೂರು ಮತ್ತೆ ಮದರಾಸುಗಳ ಒಟ್ಟಿಗೆ ರೈಲು ಸಂಪರ್‌ಕನೂ ಇದ್ದ್‌ದ್ ಒಳ್ಳ ವಾಣಿಜ್ಯ ಕೇಂದ್ರತ ಹೆಸರ್ ಉಟ್ಟು. ಬೀಜ (ಗೋಡಂಬಿ), ಹದ ಮಾಡ್ದ ಕಾಪಿಬಿತ್ತ್, ಅಡ್ಕೆ, ಮರಮುಟ್ಟು, ಮರದ ದಿಮ್ಮಿಗ, ಮೀನಿನ ಉತ್ಪನ್ನಗ, ಹೆಂಚಿ,ಚಾಳೆ,, ಮೆಣ್ಸು, ಕಾಪಿ, ಏಲಕ್ಕಿ, ಕಬ್ಬಿಣದ ಅದಿರು, ಮ್ಯಾಂಗನೀಸ್ ಇಂತ ವಸ್ತುಗ ಮಂಗ್ಳೂರು ಬಂದರ್‌ಂದ ವಿದೇಸಕೆ ಕಳ್ಸುವೆ. ಹಂಗೆನೇ ಈ ಬಂದರ್‌ಂದಾಗಿ ಆಹಾರ ಬಿತ್ತ್‌ಗ ರಾಸಾಯನಿಕ ಗೊಬ್ಬರ, ಯಂತ್ರಗ, ಕಾಗದ ಇಂತದದರ ವಿದೇಸಗಳ್‌ಂದ ಆಮದಾದೆ. ಮುಲ್ಕಿ, ಹಂಗಾರಕಟ್ಟೆ, ಪಣಂಬೂರು, ಉಪ್ಪಿನಂಗಡಿ, ಬೆಳ್ತಂಗಡಿ, ಬಂಟವಾಳ, ಉಳ್ಳಾಲ, ಪುತ್ತೂರು ಜಿಲ್ಲೆನ ಬೇರೆ ಯಾಪಾರ ಕೇಂದ್ರಗ. ಅಲ್ಲಲ್ಲಿ ನಡಿವ ಸಂತೆಗ ಮತ್ತೆ ದಾರ್ಮಿಕ ಕ್ಷೇತ್ರಗಳ್‌ಲಿ ನಡಿವ ಜಾತ್ರೆಲೂ ವ್ಯಾಪಾರ ನಡ್ದದೆ.

ದಕ್ಷಿಣಕನ್ನಡ ಜಿಲ್ಲೆ ವ್ಯಾಪಾರ ಮತ್ತೆ ಬ್ಯಾಂಕಿಂಗ್ ಉದ್ಯಮಲಿ ಮುಂದೆ ಉಟ್ಟು. 1906ರ್‌ಲಿ ಇಲ್ಲಿ ಕೆನರಾ ಬ್ಯಾಂಕ್ ಅಸ್ತಿತ್ವಕ್ಕೆ ಬಾತ್. 1913ರ್‌ಲಿ ಜಿಲ್ಲಾ ಸಹಕಾರ ಬ್ಯಾಂಕ್ ಸ್ತಾಪನೆ ಆಗುಟು. ಸಿಂಡಿಕೇಟ್ ಮತ್ತೆ ಕೆನರಾ ಬ್ಯಾಂಕ್‌ನಂತ ರಾಷ್ಟ್ರೀಕರಣದ ಬ್ಯಾಂಕ್‌ಗ ಸುರಾದ್ ಈ ಹಿಂದೆನ ಇಡೀ ದಕ್ಷಿಣಕನ್ನಡ ಜಿಲ್ಲೆಲಿ. ಇಲ್ಲಿನ ಕರ್ನಾಟಕ ಮತ್ತೆ ವಿಜಯಾಬ್ಯಾಂಕ್‌ಗ ದೇಸ ಇಡಿ ಬೆಳ್ದೊಳ. ಈಗ 13 ಸಹಕಾರಿ ಬ್ಯಾಂಕ್‌ಗ, 299 ವಾಣಿಜ್ಯ ಬ್ಯಾಂಕ್‌ಗಳು ಒಳ(2001). ಇಸ್ಟೆ ಅಲ್ಲದೆ ಕೆಲವ್ ದುಡ್ಡುನ ಕಾರ್ಪೋರೇಷನ್‌ಗ ಕೈಗಾರಿಕಾ ಸಹಕಾರ ಬ್ಯಾಂಕುಗಳೂ ಒಳ. ಇಲ್ಲಿನ ಜೆನಸಂಕೆನ ದ್ರಿಸ್ಟಿಂದ ರಾಜ್ಯಗಳ ರಾಜಧಾನಿಗಳ ಬುಟ್ಟು ಭಾರತದ ಯಾದೇ ಜಿಲ್ಲೆಂದಲೂ ಇಲ್ಲಿ ಹೆಚ್ಚಿನ ಬ್ಯಾಂಕು ಸಾಕೆಗೊಳ. ಪ್ರಾತಮಿಕ ಬೂ ಅಬಿವೃದ್ದಿ ಬ್ಯಾಂಕ್‌ಗ, ಕ್ರಿಸಿ ಸಾಲ ನೀಡಿಕೆ ಸಂಘಗ, ರೆಗ್ಯುಲೇಟೆಡ್ ಮಾರುಕಟ್ಟೆಗೊಳ.

ಸಾರಿಗೆ–ಸಂಪರ್‌ಕಕೆ ಇಲ್ಲಿನ ಬೌಗೋಳಿಕ ಸನ್ನಿವೇಸ ಅನುಕೂಲಕರ ಅಲ್ಲರೂ ಹೆಚ್ಚಿನ ಸೌಲಬ್ಯಂಗಳ ಒದ್ಗುಸಿಯೊಳ. ಶಿರಾಡಿ ಗಾಟಿ ಮಾರ್‌ಗ, ಬಿಸಿಲೆ ಗಾಟಿ ಮಾರ್‌ಗ, ನಗೋಡಿ ಗಾಟಿ

ಮಾರ್ಗ ಮತ್ತೆ ಸಂಪಾಜೆ ಗಾಟಿ ಮಾರ್ಗ – ಇದ್ ಕೊಡಗ್, ಹಾಸನ, ಚಿಕ್ಕಮಗಳೂರು, ಶಿವಮೊಗ್ಗ ಜಿಲ್ಲೆಗಳೊಟ್ಟಿಗೆ ಒಳನಾಡ್‌ಗೂ ಸಂಪರ್ಕ ಕೊಟ್ಟದೆ. ಮಂಗಳೂರು–ಹಾಸನ ಮಾರ್ಗನ ರಾಷ್ಟೀಯ ಹೆದ್ದಾರಿಂತೇಳಿ ಪರಿಗಣ್ಸಿಯೊಳ. ಪೊಡ್ವ ಕರಾವಳಿಲಿ ಮುಂಬಯಿಂದ ಕನ್ಯಾಕುಮಾರಿಗೆ ಮುಟ್ಟ ಹೋವ ರಾಷ್ಟೀಯ ಹೆದ್ದಾರಿ ಉಟ್ಟು. ಇದು ಉಡುಪಿ ಮತ್ತೆ ಉತ್ತರ ಕನ್ನಡ ಜಿಲ್ಲೆನೊಟ್ಟಿಗೆ ಕೊಡಿಟು. ಈಗ ಜಿಲ್ಲೆಲಿರುವ ಒಟ್ಟು ರಾಷ್ಟೀಯ ಹೆದ್ದಾರಿನ ಉದ್ದ ಈ ಜಿಲ್ಲೆಲಿ ಲಾಯಿಕ್'ನ ಮಾರ್ಗಗ ಒಳೊ. ಜಿಲ್ಲೆಲಿ 849ಕಿಮೀ ಜಿಲ್ಲಾ ಮುಕ್ಯ ರಸ್ತೆ 1269ಕಿಮೀ ಗ್ರಾಮಾಂತರ ಮಾರ್ಗಗ ಒಳೊ. ತಾಲ್ಲೂಕು ಅಬಿವೃದ್ದಿಬಿ ಮಂಡಲಿ ರಸ್ತೆಗಳ ಉದ್ದ 368ಕಿಮೀ (1999). ಹಾಸನ – ಮಂಗಳೂರು ರೈಲ್ ಮಾರ್ಗದ ಒಟ್ಟು ಉದ್ದ 189ಕಿಮೀ ಇದರ್‌ಲಿ 112ಕಿಮೀ ಉದ್ದದ ಮಾರ್ಗ ಈ ಜಿಲ್ಲೆಲಾಗಿದೆ ಹೋದೆ. ಜಿಲ್ಲೆಲಿ ಒಟ್ಟು 155ಕಿಮೀ ರೈಲ್ ಮಾರ್ಗ ಉಟ್ಟು. ಕೊಂಕಣ ರೈಲು ಮಾರ್ಗಂದಾಗಿ ಜಿಲ್ಲೆ ಪೊಡ್ವ ದಿಕ್ಕ್‌ನ ಭಾರತದೊಟ್ಟಿಗೆ ನೇರ ಸಂಪರ್ಕ ಇಸಿಕಂಡುಟು. ಇತ್ತೀಚೆಗೆ ಮಂಗಳೂರ್‌ಲಿ ಕಟ್ಟಿದ ಹೊಸ ಬಂದರ್ ಕರ್ನಾಟಕದ ಹಾಂಗೇನೇ ಈ ಜಿಲ್ಲೆನ ಬಾರಿದೊಡ್ಡ ಬಂದರು.

ಇದಲ್ಲದೆ ಬೇರೆ ಸಣ್ಣ ಬಂದರುಗ ಸಣ್ಣ ಹಡ್ಗ್ ಮತ್ತೆ ದೋಣಿಗಳ ಸಂಚಾರಕೆ ಅನುಕೂಲಕರ ಆಗುಟು. ಹಳ್ಳಗಳ ಮುಕೇನ ಒಳನಾಡ ದೋಣಿ ಸಂಚಾರಕು ಅವ್ಕಾಸ ಉಟ್ಟು. ಮಂಗಳೂರ್‌ಂದ ಬೆಂಗಳೂರು, ಬೆಳಗಾಂವಿ, ಮುಂಬಯಿಗಳಿಗೆ ವಿಮಾನ ಸಂಚಾರ ಉಟ್ಟು.

ದಕ್ಷಿಣಕನ್ನಡ ಜಿಲ್ಲೆ ಓದುಬರಲಿ ಒಳ್ಳ ಬೆಳವಣ್ಗೆ ಉಟ್ಟು. ಈ ಜಿಲ್ಲೆಲಿ ಸೇ. 83. 47 ಸಾಕ್ಷರತೆ ಉಟ್ಟು (2001). ಕರ್ನಾಟಕ ರಾಜ್ಯಲಿ ಬೆಂಗಳೂರು ನಗರ ಜಿಲ್ಲೆನ ಬುಟ್ಟರೆ ಈ ಜಿಲ್ಲೆ ಹೆಚ್ಚಿನ ಪ್ರಮಾಣದ ಸಾಕ್ಷರತೆ ಇರುವ ಜಿಲ್ಲೆ ಆಗುಟು. ಇಲ್ಲಿ ಸರ್ಕಾರ, ಕಾಸಗಿ ಮತ್ತೆ ದಾರ್ಮಿಕ ಸಂಸ್ತೆಗಳಿಗೆ ಸೇರ್‌ದಾ ಶಿಕ್ಷಣ ಸಂಸ್ತೆಗೊಳ. ಜಿಲ್ಲೆ ಉನ್ನತ ಶಿಕ್ಷಣ ಮತ್ತೆ ಸಾಮಾನ್ಯ ಶಿಕ್ಷಣದ ತೌರಾಗುಟು. ಜಿಲ್ಲೆಲಿ 1284 ಪ್ರಾತಮಿಕ ಶಾಲೆಗ, 290 ಪ್ರೌಡ ಶಾಲೆಗ, 82 ಪದವಿಮೂಡ ಕಾಲೇಜುಗ ಒಳೊ. 44 ಸಾಮಾನ್ಯ ಶಿಕ್ಷಣ ಕಾಲೇಜುಗ, 5 ಪಾಲಿಟೆಕ್ನಿಕ್‌ಗ. ಎಂಜಿನಿಯರಿಂಗ್ ಕಾಲೇಜುಗಳ ಸಂಕೆ 3, ಒಂದ್ ವೈದ್ಯಕೀಯ ಕಾಲೇಜು, ಒಂದ್ ಹೋಮಿಯೊಪತಿ ಕಾಲೇಜು, 3 ಭಾರತೀಯ ಪೊದ್ದತಿ ವೈದ್ಯ ಕಾಲೇಜುಗೊಳ. ಎರಡು ದಂತ ವೈದ್ಯಕೀಯ ಕಾಲೇಜುಗಳೊ (2001). ಒಂದ್ ಸರ್ಕಾರಿ ತಾಂತ್ರಿಕ ಶಾಲೆನೂ ಉಟ್ಟು. 1969ರ್‌ಲಿ ಮಂಗಳೂರ್‌ಲಿ ಮತ್ಸೋದ್ಯಮ ಕಾಲೇಜು ಸ್ತಾಪನೆಯಾಗುಟು. ವಾಣಿಜ್ಯ ಶಿಕ್ಷಣ ಸಂಸ್ತೆಗ ಮತ್ತೆ ಸಂಸ್ಕೃತ ಪಾಟಶಾಲೆಗೊಳ.

1968ರ್‌ಲಿ ಮೈಸೂರು ವಿಶ್ವವಿದ್ಯಾನಿಲಯ ಮಂಗಳೂರ್‌ನ ಹಕ್ಕಲೆ ಕೊಣಾಜೆ ತೇಳ್ವಜಾಗೆಲಿ ಮಂಗಳಗಂಗೋತ್ರಿ ತೇಳ್ವ ಒಂದ್ ಸ್ನಾತಕೋತ್ತರ ಶಿಕ್ಷಣ ಕೇಂದ್ರನ ಸುರುಮಾಡಿಟು. ಅಲ್ಲಿ ಸುರುಗೇ ವಿಜ್ಞಾನ ಮತ್ತೆ ಮಾನವಿಕ ಶಿಕ್ಷಣಕ್ಕೆ ಸಮ್ಮಂದಪಟ್ಟಂಗೆ ಐದ್ ವಿಬಾಗಗ ಸುರಾಗುಟು. 1980ರ್‌ಲಿ ಈ ಕೇಂದ್ರ ಪ್ರತ್ಯೇಕ ವಿಶ್ವವಿದ್ಯಾನಿಲಯವಾಗಿ ರೂಪುಗೊಂಡತ್.

ಇಲ್ಲಿ 6 ಸರ್ಕಾರಿ ಆಸ್ಪತ್ರೆಗ, 64 ಪ್ರಾತಮಿಕ ಆರೋಗ್ಯ ಕೇಂದ್ರಗ, 40 ಪ್ರಾತಮಿಕ ಆರೋಗ್ಯ ಘಟಕಗ, 28 ಕುಟುಂಬ ಯೋಜೆನಾ ಕೇಂದ್ರಗ. ಬೇರೆ ಕಾಸಗಿ ಡಿಸ್ಪೆನ್ಸರಿಗೊಳ.

ಜಿಲ್ಲೆನ ಜೆನಸಂಕೆಲಿ ಸೇ.38. 41ರಸ್ಟ್ ಪಟ್ಟಣವಾಸಿಗ. ಪಟ್ಟಣಗಳ್‌ಲಿ ಜೆನಸಾಂದ್ರತೆ ಹೆಚ್ಚುತ್ತುಟ್ಟು. ಜಿಲ್ಲೆನ ಜೆನಸಾಂದ್ರತೆ ಚ. ಕಿಮೀಗೆ 371.8. ಈ ಜಿಲ್ಲೆನ ಜೆನಂಗ ಹೊರರಾಜ್ಯಗಳ್‌ಲಿ ಹಾಂಗೆ ಕರ್ನಾಟಕದ ಇತರೆಡೆಗಳ್‌ಲಿ ತುಂಬಾ ಸಂಕೆಲಿ ನೆಲ್ಸೊಳ, ಸರ್ಕಾರಿ ಚಾಕ್ರಿಲಿ, ಬ್ಯಾಂಕಿಂಗ್ ಉದ್ಯಮಲಿ, ತಂತ್ರಾಂಶ, ಪ್ಲಾಂಟೇಷನ್, ಕ್ರಿಸಿ, ವ್ಯಾಪಾರ ಮತ್ತೆ ಹೋಟೆಲು ಉದ್ಯಮಗಳ್‌ಲಿ ಒಳೊ.

ಇಲ್ಲಿ ಶೈವ, ಬಾಗವತ, ಮಾದ್ವ, ಬೌದ್ದ, ಜೈನ ಬೇರೆ ಬೇರೆ ಮತಾನುಯಾಯಿಗೊಳ. ಕ್ರೈಸ್ತ ಮತ್ತೆ ಇಸ್ಲಾಂ ಮತದವುನು ಸಾಕಸ್ಟ್ ಒಳ. ಜೆನಂಗ ಹೆಚ್ಚಾಗಿ ದ್ರಾವಿಡ ಸಂಸ್ಕೃತಿನ ಬೇರೆ ತರದ ಸಕ್ತಿಪೂಜೆಗಳ ನಡ್ಸಿಕಂಡು ಬಂದೊಳ. ಮಾರಿ ಮತ್ತೆ ದುರ್ಗಿ ಪೂಜೆಗ, ಬೂತಾರಾದನೆ, ಕೋಲಕಟ್ಟುದು ಬೇರೆಬೇರೆ ಜೆನಪದ ಆರಾದನಾ ಪೊದ್ದತಿಗ ಪ್ರಚಲಿತದಲಿ ಉಟ್ಟು. ಈ ಜಿಲ್ಲೆನ ದಾರ್ಮಿಕ ಕ್ಷೇತ್ರಗಳಾದ ಧರ್ಮಸ್ಥಳ, ಸುಬ್ರಹ್ಮಣ್ಯ, ಕದ್ರಿ ಸಹಸ್ರಾರು ಬಕ್ತರ ಸೆಳ್ದದೆ ಯಕ್ಷಗಾನ ಈ ಜಿಲ್ಲೆನ ವಿಸೇಸ ಜೆನಪದ ಕಲೆ. ಕೋಳಿ ಕಟ್ಟ ಮತ್ತೆ ಕಂಬಳ ಇಲ್ಲಿ ಜೆನಕೆ ಆಟ ಮತ್ತೆ ಪ್ರತಿಸ್ಟೆ ಆಗುಟು.

ಈ ಜಿಲ್ಲೆಲಿ ದಾರ್ಮಿಕ ಸಮನ್ವಯತೆ ಮತ್ತೆ ವಿದ್ಯಾದಾನಕೆ ಹೆಸರಾದ ಧರ್ಮಸ್ಥಳ, ವೀರಶೈವ ಮಟ ಪರಂಪರೆನ ನಡ್ಸಿಕಂಡ್ ಬರ್‌ತಾಯಿರುವ ಗುರುಪುರ, ದೇಸ್ತಾನಗಳಿಗೆ ಹೆಸರಾದ ನಂದಾವರ, ನಾರವಿ, ಪೊಳಲಿ ದುರ್ಗಾಪರಮೇಶ್ವರಿ ದೇವಾಲಯಗ ಇರ್‌ವ ಕಟೀಲು, ಆದಿಶಂಕರಾಚಾರ್ಯರು ಇದ್ದ ಸುಬ್ರಹ್ಮಣ್ಯ, ಕದ್ರಿ, ಕಡಬ, ಕರಿಮಂಜೇಶ್ವರ, ಪುಣ್ಯಕ್ಷೇತ್ರನು ಒಳ್ಳ ಜಾಗೆನು ಆದ ಉಪ್ಪಿನಂಗಡಿ, ಸಿಸಿಲ, ಬ್ಯಾರಿಗಳ ಪಳ್ಳಿಗ ಹಾಂಗೆ ಹಳೆ ಕಾಲದ ಚರ್ಚ್ ಇರ್‌ವ ಉಲ್ಲಾಳದಂತ ದಾರ್ಮಿಕ ಪರಂಪರೆನ ಪಡ್ದ ಜಾಗೆಗ ಒಳ. ಬೈಲಂಗಡಿ, ಬಂಗಾಡಿ, ಮಂಗಳೂರು, ಸಿಸಿಲ, ವೇಣೂರು, ವಿಟ್ಲ ನಂತ ಐತಿಹಾಸಿಕ ಜಾಗೆಗ ಒಳೊ. ಅಳಿಕೆ, ಸುರತ್ಕಲ್, ಉಜಿರ ಇಂತ ಜಾಗೆಗ ಶಿಕ್ಷಣಕೆ ಪ್ರಸಿದ್ದ.

ದಕ್ಷಿಣಕನ್ನಡ ಜಿಲ್ಲೆ ಪಂಡ್ ಕಾಲಂದಳೆ ವಿದೇಸದೊಟ್ಟಿಗೆ ಸಂಪರ್ಕ ಹೊಂದಿತ್. ರೋಮನ್ ಮತ್ತೆ ಗ್ರೀಕ್ ಹಾಂಗೆ ಅರಬ್ ವ್ಯಾಪರಿಗ ಇಲ್ಲಿನ ಬಂದರುಗಳಿಗೆ ಬಂದ್ ಹೋಗ್ತಾ ಇದ್ದೊ. ಐತಿಹಾಸಿಕ ಆಗಿ ಆಳುಪ ವಂಶದ ಅರಸರ್ ಈ ಪ್ರದೇಸನ 7ನೆಯ ಶತಮಾನದಂದ 14ನೆಯ ಶತಮಾನಕೆ ಮುಟ್ಟ ಆಳಿದ್ದೊ. ಅವು ಇಲ್ಲಿನ ಸಂಸ್ಕೃತಿಮತ್ತೆ




ನಾಗರಿಕತೆಗಳಿಗೆ ಒಳ್ಳ ಅಡಿಪಾಯ ಹಾಕಿದ್ದೊ. ಉದ್ಯಾವರ, ಮಂಗಳೂರು ಮತ್ತೆ ಬಾರಹ ಕನ್ಯಾಪುರ ಅವರ ರಾಜಧಾನಿಯಾಗಿದ್ದೊ. ಆಗ ಅವರ ರಾಜ್ಯ ಗಟ್ಟದ ಮೇಲೆನ ಮಲೆನಾಡ್‌ನೆ ಕಡೆಲು ಹಬ್ಬಿತ್ತು. ವಿಜಯನಗರ ಸಾಮ್ರಾಜ್ಯ ಕಾಲಲಿ ಮಂಗಳೂರು ಮತ್ತೆ ಬಾರಕೂರನ ಕೇಂದ್ರ ಆಗಿ ಇಸಿ ಅಲ್ಲಿಂದ ಪ್ರಾಂತ್ಯದಿಕಾರಿಗ ಆಳುತ್ತಿದ್ದ. ಅವರ ಸಾಮಂತರಾಗಿ ಕಾರ್ಕಳದ ಬೈರರಸರ್, ಮೂಡಬಿದರೆನ ಚೌಟರಸರ್, ವೇಂಬಾರಿನ ಅಜಲರು, ಬಂಗವಾಡಿನ ಬಂಗರು ಆಳತಿದ್ದೊ. ಇವೆಲ್ಲ ಹೆಚ್ಚಾಗಿ ಜೈನ ಪ್ರೋತ್ಸಾಹ ಕೊಟ್ಟೊ.

ಕೆಳದಿ ಅರಸರ ಕಾಲಲಿ ಇಲ್ಲಿ ಐರೋಪ್ಯ ವಸಾಹತುಕಾರರ ನಿಗ್ರಹಿಸುವ ಕೆಲ್ಸ ನಡ್ತು. ದಕ್ಷಿಣಕನ್ನಡ ಪ್ರದೇಸ 1763 ರ್‌ಲಿ ಬೀದರ್‌ನ ಹೈದರ್ ಅಲಿನ ವಸಕೆ ಸಿಕ್ಕಿ ಮುಂದೆ ಅಂವನ ಮಜ್ಜ ಟಿಪ್ಪುನ ಆಳಿಕೆಗೆ ಸೇರ್‌ತು. ಶ್ರೀರಂಗಪಟ್ಟಣದ ಸೋಲುಂದ 1799ರ್‌ಲಿ ಬ್ರಿಟಿಷರ ಆಡಳ್ತಕೆ ಬಾತ್. ಬ್ರಿಟಿಸರ್ ಆಳಿಕಂಡ್ ಇರ್‌ಕನ ಅವು ದಕ್ಷಿಣ ಮತ್ತೆ ಉತ್ತರ ಕನ್ನಡ ಪ್ರದೇಸಗಳ ಕೂಡ್ಸಿ ಮದ್ರಾಸು ಪ್ರಾಂತ್ಯದ ಆಡೆಳ್ತಿಗೆಗೆ ಸೇರ್‌ಸಿದೊ. 1860ರ್‌ಲಿ ಮತ್ತೆ ಇದರ ದಕ್ಷಿಣ, ಉತ್ತರ ಎರ್‌ಡ್ ಒಡ್ದುದ್ 1862ರ್‌ಲಿ ಉತ್ತರ ಕನ್ನಡ ಜಿಲ್ಲೆನ ಬೊಂಬಾಯಿ ಪ್ರಾಂತ್ಯಕೆ ಸೇರ್‌ಸಿದ್ ದಕ್ಷಿಣಕನ್ನಡ ಜಿಲ್ಲೆನ ಮದ್ರಾಸು ಪ್ರಾಂತ್ಯಲೇ ಒಳ್ಸಿದೊ.

1895ರ್‌ಲಿ ದಕ್ಷಿಣಕನ್ನಡ ಜಿಲ್ಲೆ ಅಂದ್ ಅಮೀನ್ ದೀವಿ ದ್ವೀಪಗಳ ಒಟ್ಟಿಗೆ ಇತ್. 1896ರ್‌ಲಿ ಈ ಜಿಲ್ಲೆಲಿ ಮಂಗ್ಳೂರು, ಕುಂದಾಪುರ, ಉಡುಪಿ, ಕಾಸರಗೋಡು ಮತ್ತೆ ಉಪ್ಪಿನಂಗಡಿ ತಾಲ್ಲೂಕುಗ ಮಾತ್ರ ಇದ್ದೊ. 1912ರ್‌ಲಿ ಕಾರ್ಕಳ ತಾಲ್ಲೂಕೂ ಸೇರ್‌ತು. 1954ರ್‌ಲಿ ಬೆಳ್ತಂಗಡಿ ತಾಲ್ಲೂಕುನ ಮಾಡ್ದೊ. 1956ರ ನವೆಂಬರ್ 1ರ ವರೆಗೂ ಈ ಜಿಲ್ಲೆ ಮದ್ರಾಸು ಪ್ರಾಂತ್ಯದ ಆಡಳ್ತಲೇ ಇದ್ದುದ್ ರಾಜ್ಯ ಪುನರ್‌ವಿಂಗಡಣೆನ ಪ್ರಕಾರ ವಿಶಾಲ ಕರ್ನಾಟಕ ಪ್ರಾಂತ್ಯಕೆ ಸೇರ್‌ತು. 1966ರ್‌ಲಿ ಪುತ್ತೂರುನ ಸುಳ್ಯ ಮತ್ತೆ ಪುತ್ತೂರು ತಾಲೋಕುತ ವಿಬಾಗಮಾಡ್ದೊ. 1997ರ್‌ಲಿ ಮತ್ತೆ ಜಿಲ್ಲೆ ಬೇರೆಬೇರೆ ಆತ್. ಅದರ ಒಂದ್ ಬಾಗಂದ ಉಡುಪಿ ಜಿಲ್ಲೆನ ರಚನೆ ಮಾಡ್ದೊ.

**ದೀಪಾವಳಿ :** ನರಕ ಚತುರ್‌ದಸಿ ದಿನದಂದ್ ಬೊಳ್ಪುಗೆ ಬೇಗ ಎದ್ದ್ ಮೀದ್ ಮೊಡಿ ಆದವೆ. ಬಗೆ ಬಗೆನ ವಿಸೇಸ ತಿಂಡಿಗಳ ಮಾಡಿ ತಿಂದ್ ಆರಾಮಲಿದ್ದವೆ. ಮಾರ್‌ನೇ ದಿನ ಹಾಲೆ ಮರದ ಎರಡ್ ಕಂಬಗಳ ತಂದ್ ಇಜ್ಜಲ್‌ಲಿ ನೆಟ್ಟ್ ಅದ್ಕೆ ಅಡ್ಡಕ್ಕೆ ನಾಕ್ ತಟ್ಟೆಗಳ್‌ನ ಕಟ್ಟಿ ಹೂವ್‌ಂದ ಸಿಂಗಾರ ಮಾಡ್‌ವೆ. ಗಂದಸಾಲೆ ಬತ್ತದ ಕದ್‌ರ್ ಅಲ್ಲರೆ ತೆನೆನ ಕಂಬದ ಮೇಲೆನ ಕಟ್ಟಿ ಕಂಬದ ಸುತ್ತ ಹೂಮಾಲೆ ನೇದವೆ. ವಿಸೇಸ ಆಗಿದ್ ಕಾಡ್‌ಲಿ ಸಿಕ್ಕುವ ಕೆಂಪು ಬಣ್ಣದ ಕಕ್ಕೆ ಮಂಡಲ ಕಾಯಿನ ತಂದ್ ಕಂಬಕೆ ಸೆಕ್ಕ್‌ಸುವೆ. ಇಸ್ಟ್ ಮಾಡಿರೆ ಮರ ಹಾಕೊಳೊ ತೇಳುವೆ. ಕಂಬದ ಸುತ್ತ ಸೆಗಣಿ ಕೆರ್‌ದ್ ಹಿಂಬೊತು ಬಲೀಂದ್ರ ಪೂಜೆ ಮಾಡ್‌ವೆ. ರಾತ್ರೆ ಆಗ್‌ತಿದ್ದಂಗೆ ಬಾಳೆ ಎಲೆನ ಮರದ ಎದ್‌ರಿಗೆ ಇಸಿ ಅದ್ಕೆ ಅರಳ್(ಹೊದುರಿ) ಮತ್ತೆ ಬೆಲ್ಲನ ಹಾಕುವೆ. ಕಾಯಿನ ಒಡ್ದ್ ಎರಡೂ ಬಾಗನ ಹೊದುರಿನ ಮೇಲೆ ಇಸುವೆ. ಮನೆವೆಲ್ಲ ಅರ್‌ದ ಚಂದ್ರಾಕೃತಿಲಿ ನಿಂತಾಕನ ಮನೆಯ ಯಜಮಾನ 'ಹರಿ ಹರಿಯೇ ಬಲೆಯಂದ್ರ ಆ ಊರ ಪೊಲಿ ತಕಂಡ್ ಬಾ.. ಈ ಊರ ಕರಿ ತೆಕೊಂಡೋಗೂ' ತೇಳುವೆ. ಆಗ ಎಲ್ಲವೂ 'ಕೂ' ತೇಳುವೆ. ಮರಕೆ ಕೈ ಮುಗ್‌ದ್ ತಿರ್‌ಗಿ ಬಂದ್ ಗಮ್ಮತ್ ಉಂಡವೆ. ಈ ಊಟನ



ದೀಪಾವಳಿ

ಹಬ್ಬದೂಟತೇಳಿ ಕರ್‌ದವೆ. ಮಕ್ಕ ಪಟಾಕಿ ಹೊಡ್ಸಿ ಕುಸಿ ಪಟ್ಟವೆ. ಹೊದುರಿ ಅವ್ಲಕ್ಕಿ ಮತ್ತೆ ಬಾಳೆ ಹಣ್ಣ್‌ನ ರಸಾಯನ ಆ ದಿನದ ವಿಸೇಸ ಆಗಿದ್ದದೆ.

ಮರ ಹಾಕಿದ ಮಾರ್‌ನೇ ದಿನ ಕಂಬದ ಎದ್‌ರ್ ಬೆಂಡ ಇಸಿ ಕೈ ಮಗ್ದ್ 'ಕೂ' ಹಾಕುವೆ. ಮೂರನೆ ದಿನ ಎಲೆ ಮತ್ತೆ ಅಡಿಕೆ ಇಸಿ ಕೈ ಮುಗ್‌ದವೆ. ಆ ದಿನ ಬೂಮಿಂದ ಬಲೀಂದ್ರ ಮಹರಾಜ ತನ್ನ ಸ್ವಂತ ರಾಜ್ಯಕೆ ವಾಪಾಸದೆ ತೇಳ್‌ವ ನಂಬಿಕೆ ಇರುದರ್‌ಂದ 'ಕೂ' ಹಾಕುದುಲೆ. ಸೋಂತೆಕಾಯಿನ ಮರದ ಎದುರ್ ಇಸಕು.

ಮರ ಹಾಕಿದ ಮಾರನೇ ದಿನ ಗೋಪೂಜೆ ನಡೆದದೆ. ದೀಪಾವಳಿಲಿ ಇದ್ ತುಂಬಾ ಮಹತ್ವದ್ದ್ ಮತ್ತೆ ಅರೆಬಾಸಿಗರ್ ಇದರ ಬಾರಿ ಬೊಕ್ತಿಂದ ನಡ್ಸುವೆ. ಅವ್ಲಕ್ಕಿ, ಬಾಳೆಹಣ್ಣ್, ಬೆಳ್ತಿಗೆ ಅಕ್ಕಿ, ಹುಳಿದೋಸೆ, ಪಿಂಗಾರ, ಕಾಯಿ, ಪೊಲಿ ಸೊಪ್ಪು, ಬೆದ್‌ರು ಸೊಪ್ಪು ಮತ್ತೆ ತುಂಬೆ ಹೂನ ಕುಕ್ಕೆಲಿ ಹಾಕಿಕಕಂಡ್ ದನಗಳ ಹಟ್ಟಿಗೆ ಹೋದವೆ. ಅಲ್ಲಿ ಒಂದ್ ದೀಪ ಹೊತ್ತುಸಿ ದನಗಳಿಗೆ ಆರತಿ ಎತ್ತುವೆ,ಹೂನ ಮಾಲೆ ಹಾಕುವೆ. ಕುಕ್ಕೆಲಿರ್‌ದರ ಎಲ್ಲಾ ದನಗಳಿಗೆ ಹಞ್ಞ ಹಞ್ಞ ತಿಂಬಕೆ ಕೊಟ್ಟವೆ. ಎಲ್ಲವೂ 'ಬಾಳು... ಬಾಳು' ತೇಳ್‌ತ್ತಿದ್ದವೆ. ಕಡೆಗೆ ನೀರ್ ಸಿಡ್‌ಕಿ ಮನೆಗೆ ವಾಪಾಸಾದವೆ. ಇದೇ ಹೊತ್ತುಲಿ ಅಂಗರನ ಪೂಜೆ ಮಾಡ್‌ವ ಕ್ರಮ ಕೆಲವ್ ಕಡೆ ಬಳಕೆಲಿ ಉಟ್ಟು. ಪ್ರತೀ ದಿನನು ಕರ್ ಬುಟ್ಟಾದ(ಹಾಲ್ ಕರೆದು) ಮೇಲೆ ಚಿಟಿಕೆ ಹಾಲ್‌ನ ಸೊಪ್ಪುಲಿ ಇಸಿ ಅದರ 'ಅಂಗಾರಂಗೆ' ತೇಳಿ ಇಸುವೆ. ಈ ಅಂಗಾರ ದನಗಳ ರಕ್ಷಕ ತೇಳ್ವ ನಂಬಿಕೆ ಉಟ್ಟು ಹಾಂಗಾಗಿ ದೀಪಾವಳಿನ ದಿನದಂದ ದನದ ಪೂಜೆ ಹೊತ್ತುಲಿ ಅಂಗಾರನ ಪೂಜೆನೂ ನಡ್‌ದದೆ. ಅಂಗಾರನ ಕಲ್ಲ್‌ನ ಹೂ ಇಸಿ ಅಲಂಕಾರ ಮಾಡಿ ಕಲ್ಲೆದ್‌ರ ಹಾಲೆ ಮರದ ಕಂಬ ಹಾಕಿ ಅದರ್‌ನು ಸಿಂಗರ್‌ಸಿ ದೀಪ ಹೊತ್ತ್‌ಸಿಸಿ ಮನೆವೆಲ್ಲ ಕೈ ಮುಗ್ದ್ ಕಾಯಿ ಒಡ್ದ್ ಬಯ ಬಕ್ತಿಂದ ವಾಪಾಸಾದವೆ.

ನರಕ ಚತುರ್ದಶಿನ ಮೂರನೇ ದಿನನ 'ಕರಿ' ತೇಳಿ ಕರ್‌ದವೆ. ಆ ದಿನ ದಲಿತರ್, ಮನೆ ಮನೆಗೆ ಬಂದವೆ. ಅವ್‌ಕೆ ತಿಂಬಕೆ ಹಿಟ್ಟ್‌ಗೈಪು ಕೊಟ್ಟ್ ಹಿಂದೆ ಕಳ್‌ಸುವೆ. ಆ ದಿನ ಬಲೀಂದ್ರನ ಮರನ ಕಿತ್ತ್ ನೀರ್‌ಕರೆಲಿ ಬುಟ್ಟವೆ. ಹಿಂಗೆ ಗೌಡರ ಮಟ್ಟ್‌ಗೆ ದೀಪಾವಳಿ ಆಚರಣೆ ಮೂರು ದಿನ ಇದ್ದದೆ. ನರಕ ಚತುರ್ದಶಿ ದಿನ ಮೀದು, ಬಜೆನೆ ಮಾರನೇ ದಿನ ಬಲೀಂದ್ರ ಪೂಜೆ ಮತ್ತೆ ಕಡೆನ ದಿನ ಗೋಪೂಜೆ ಮತ್ತೆ ಅಂಗರನ ಪೂಜೆ, ಈ ಆಚರಣೆ ಅರೆಬಾಸೆ ಮತ್ತೆ ತುಳುನಾಡ್‌ನ ಎಲ್ಲ ಕಡೆನೂ ಕಂಡ್ ಬಾವಂತದ್ದೇ ಆಗುಟು. ಹಿಂಗೆ ದನಸಾಂಕ್‌ವ ಮತ್ತೆ ಕ್ರಿಸಿಗೆ ಸಮ್ಮಂದಪಟ್ಟಂಗೆ ಬೊಳ್ಪುನ ಹಬ್ಬ ದೀಪಾವಳಿನ ಆಚರ್‌ಸುವೆ. (ಪಿ.ಬಿ.)

**ದೆವ್ವಾರಾದನೆ :** ದೆವ್ವಾರಾದನೆ ಅರೆಬಾಸೆ ಪ್ರದೇಸದ ಆರಾದನೆ ಪರಂಪರೆಗೆ ಸೇರಿಟು. ತುಳುನಾಡ್‌ಗೆ ವಲಸೆ ಬಂದ ಗೌಡ್ರುಗ ಮೆಲ್ಲಂಗೆ ದೆವ್ವಾರಾದನೆನ ತಮ್ಮ ಸಂಸ್ಕೃತಿನ ಪಾಲ್ ಆಗಿ ಮಾಡಿಕಂಡೊಳೊ. ಅರೆಬಾಸೆ ಪ್ರದೇಸಲಿ ಕಾಂಬಕೆ ಸಿಕ್ಕ್‌ವ ಕೆಲ ದೆವ್ವಂಗಳ ಬಗ್ಗೆ ಮಾತ್ರ ವಿವರಣೆ ಕೆಳೆಗೆ ಉಟ್ಟು. ಸುಳ್ಯ ಪರಿಸರದ ಗೌಡ್ರ್‌ಗ ಈ ಕೆಳೆಗೆನ ದೆವ್ವಂಗಳ ಆರಾದ್‌ಸುವೆ. 1. ಅಂಗಾರ, 2. ಅಜ್ಜಿ ದೆವ್ವ, 3. ಅಡಿಮಣ್ಣಾಯ, 4. ಉದ್ರಾಂಡಿ/ರುದ್ರಾಂಡಿ, 5. ಉಳ್ಳಾಗ, 6. ಕರಿಯಣ ನಾಯ್ಕ, 7. ಕಲ್ಕುಡ, 8. ಕಲ್ಲುರ್ಟಿ (ಪಾಸಾಣಮೂರ್‌ತಿ), 9. ಕಳ್ಳಬೂತ, 10. ಕಾಳರಾಹು, 11. ಕಿನ್ನಿಮಾಣಿ, 12. ಕುಜುಂಬ ಕಾಜವ, 13. ಕುಟ್ಟಿಚಾತ, 14. ಕೂಜಿ, 15. ಕೊರ್‌ತಿ, 16. ಕೋಟಿಚೆನ್ನಯ, 17. ಗಿಣಿರಾಮ, 18. ಗುಳಿಗ, 19. ಗೋವಿಂದ, 20. ಚಾವುಂಡಿ, 21. ಜಂಗ ಬಂಟ, 22. ಜಾರಂದಾಯ, 23. ಜುಮಾದಿ, 24. ಪಂಜುರ್‌ಲಿ, 25. ಪಿಲಿ ಬೂತ, 26. ಪಿಲಿಚಾಮುಂಡಿ, 27. ಪುರುಸ ಬೂತ, 28. ಪೂಮಾಣಿ, 29. ಪೊಟ್ಟೋಳು, 30. ಬಂಟೆತಿ, 31. ಬಚ್ಚ ನಾಯ್ಕ, 32. ಬಿರ್‌ಮೆರ್, 33. ಬೇಡವ, 34. ಬೈನಾಟಿ, 35. ಬೈಸು ನಾಯ್ಕ, 36. ಮದಿಮಾಳ್, 37. ಮರ್ ಬೂತ, 38. ಮಲರಾಯ, 39. ಮಲೆಬೂತ, 40. ಮೈಸಂದಾಯ, 41. ಲೆಕ್ಕೇಸಿರಿ, 42. ವಿಸ್ಣುಮೂರ್‌ತಿ, 43. ಶಿರಾಡಿ ಬೂತ, 44. ಸಬ್ಬಕ್ಕ, 45. ಸಾದಿಗ ಬಂಟ, 46. ಹೊಸೊಳಿಗಮ್ಮ, 47. ಹೊಸೊಳಿತ್ತಾಯ, 48.ಕೋರಚ್ಚನ್, 49.ಕಂಡನಾರ್ ಕೇಳನ್.

ಗೌಡರೇ ಹೆಚ್ಚಾಗಿ ಆರಾದ್‌ಸಿಕಂಡ್ ಬಾವ ಬಚ್ಚ ನಾಯ್ಕ, ಪುರ್‌ಸ ಬೂತ, ಶಿರಾಡಿ ಬೂತ ಮತ್ತೆ ಉಳ್ಳಾಗ್ಳ್ ದೆವ್ವದ ಪಾಡ್ದನಗಳ ಪ್ರಕಾರ ಅವು ನಡ್ಕಂಡ್ ಬಂದ ದಾರಿ ಮತ್ತೆ ಅವು ಹಬ್ಬಿ ಬಂದ ರೀತಿ ಗೌಡ್ರ ವಲಸೆ ಮತ್ತೆ ನೆಲೆ ನಿತ್ತದ್‌ಕೆ ಸರಿ ಆಗಿದೆ ಉಟ್ಟು. ಹಾಂಗಾಗಿ ಇವು ಗೌಡರೊಟ್ಟಿಗೆ ಹಿಂದೆಂದನೂ ಇದ್ದ ದೆವ್ವಗ ತೇಳಕ್. ಈಗ ಗೌಡ್‌ಗ ಇನ್ನ್ ಬೇರೆ ದೆವ್ವಗಳ ನಂಬತಿರ್‌ದು ಹೌದಾದರೂ ಅವರ ಒಟ್ಟು ಆರಾದನೆಲಿ ಮೇಲೆನ ನಾಕ್ ದೆವ್ವಗಳೆ ಪ್ರದಾನ ಆಗಿ ಮತ್ತೆ ಮತ್ತೆ ಕಾಂಬಕೆ ಸಿಕ್ಕುದರ್‌ನ ನಾವ್ ನೋಡಕ್. (ಪಿ.ಬಿ.)

ತುಳುನಾಡ್ ಮತ್ತೆ ಅರೆಬಾಸಿಗರ್ ಇರ್‌ವ ಪ್ರದೇಸಲಿ ಇರ್‌ವ ದೆವ್ವಗಳ ನಂಬಿ ನಡಿವ ದೆವ್ವಾರಾದನೆ ಸೊರೂಪದ ಆರಾದನೆನ ಈ ಜಗತ್ತ್‌ನ ಎಲ್ಲೂ ಕಾಂಬಕ್ಕೆ ಸಾದ್ಯ ಇಲ್ಲೆ. ಆ ಮಟ್ಟ್‌ನ ಸಾಂಸ್ಕೃತಿಕ ಅನನ್ಯತೆನ ಅದ್ ಇಸಿಕಂಡುಟು. ಪಾಶ್ಚಾತ್ಯ ಹಾಂಗೆ ವೈದಿಕರ ಪ್ರಬಾವಂದ ಇದರ ಬೂತಾರಾದನೆತ ಅಂತಳು ಕರ್‌ದವೆ. ವಾಸ್ತವ ಆಗಿ ಬರಹ ತಿಳ್ದವರ ಬರಹಗಳ್‌ಲಿ ದಾಕಲಾದಾಂಗೆ ಇದ್ 'ಬೂತ'ಗ ಅಲ್ಲ,ಕನ್ನಡದ 'ದೆವ್ವ'ನು ಅಲ್ಲ. ನಂಬೊವು ಇದರ 'ದೆವ್ವ ಸಕ್ತಿ' ತ ನಂಬಿ ಆರಾದುಸುವೆ. ಯಾರ್ ಏನೇ ಹೆಸರ್‌ಲಿ ಕರ್‌ದರೂ ಇದರ ದುಸ್ಟ ಸಕ್ತಿಗಳ, ಪಿಸಾಚಿಗಳ ವರ್‌ಗಕ್ಕೆ ಸೇರ್‌ದುಲೆ. ಈ ಅರ್‌ತಲಿ ಇದರ 'ಬೂತ' ತ ಕರೆಕೆ ಆದುಲೆ. ಕೆಟ್ಟವ್ಕೆ ಈ ಸಕ್ತಿಗ ಕೇಡ್‌ನ ಮಾಡ್ವೆ ತ ಮಾತ್ರ ಆರಾದಕರ್ ನಂಬ್ಯೊಳೊ. ಈ ದೆವ್ವಗಳ್‌ಲಿ ದುಸ್ಟತನನ ಕಾಂಬಕೆ ಸಾದ್ಯ ಆದುಲೆ.

ಅಲೌಕಿಕ ಸಕ್ತಿನ 'ದೆವ್ವ' ತೇಳ್‌ವ ಪ್ರತಿಮಾ ರೂಪಲಿ ದೆವ್ವ ಆರಾದಕರ್ ತೋರ್‌ಸಿಯೊಳೊ. ಈ ದೆವ್ವಗ ನಂಬಿದವರ ಕಾಪಾಡ್‌ವ ಹೊಣೆ ಹೊತ್ತಿರುವಂಗೆ, ಕೇಡ್ ಬಗೆವರ್‌ನ ಸಿಕ್ಸಿಸುವ ಸಕ್ತಿಗ ಇವುಂತ ನಂಬಿಕೆ. ಈ ನಂಬಿಕೆನ ಸೊಬಾವಲಿ ಹೆದ್ರಿಕೆನ ಮೂಲವುಟ್ಟು. ಈ ದೆವ್ವಗಳ ನಂಬಿ ಮೆಚ್ಚಿಸಿರೆ, ಅವು ಕಾಲಕಾಲಕೆ ಮಳೆ–ಬೆಳೆ ಬಾಕೆ ಸಹಕರ್‌ಸುವೆ. ಆರೋಗ್ಯನ ಕಾಪಾಡ್ವೆ, ಹೆತ್ತವರಾಂಗೆ, ನಂಬಿದವರ ಮಮತೆಲಿ ಸಲಹುವೆ, ನ್ಯಾಯನ ಎತ್ತಿ ಹಿಡ್ದವೆ ತೇಳ್‌ವ ನಂಬಿಕೆ ಇಲ್ಲಿ ವ್ಯಕ್ತವಾದೆ. ಈ ಅರ್‌ತಲಿ ದೆವ್ವಂಗ ದುಸ್ಟ ಸಕ್ತಿಗ ಅಲ್ಲ; ಕಾಪಾಡ್‌ವ

ಸತ್ಯಗ ಆಗೊಲೊ. ದೆವ್ವಗಳ ಈ ಅರ್‌ತಲಿ ಸತ್ಯೊಗ ತೇಳಿದೆ ಆರಾದಕರ್ ಬದಲ್‌ಗೆ ಕರ್‌ದವೆ. ಹೀಂಗಾಗಿ ಇವು ಪ್ರೇತಾತ್ಮಗ ಅಲ್ಲೊ ಅಡ್ಡಾಡ್‌ವ ಬೂತ ಪಿಸಾಚಿಗ ಅಲ್ಲ.ದೆವ್ವಗ ದೇವರ ಅತಿಮಾನುಸ ರೂಪ,ಅಲ್ಲೊ ಈ ಪ್ರದೇಸಲಿ ಬೊಡ್ಡಿ ಬಾಳಿ ದೆವ್ವತ್ವ ಪಡ್ಡ ಮೊಯಿಂಸರ್,ದೇವರ ಬೇರೆ ಬೇರೆ ರೂಪಗತ ಹೇಳಕ್.

ಈ ಜಗತ್ತ್‌ಲಿ ಸುಮಾರ್ ದೆವ್ವಗಳ ಬೇರೆ ಸೊರೂಪಲಿ ಆಚರಣೆ ನಡ್ಡದೆ. ಆರಾದ್‌ಸ್‌ವ ಸಮುದಾಯ ಈ ದೆವ್ವ ಸಮ್ಮಂದಲಿ ಬಾರಿ ನಂಬಿಕೆನ ಇಸಿಕೊಂಡೊಳೊ. ಇದ್ ಕಾರಣ ಆಗಿ ಇಲ್ಲಿ ಬಿನ್ನ ಸೊಬಾವನ–ಸೊರೂಪನ ದೆವ್ವಗ ಅಸ್ತಿತ್ವಲಿ ಇರಿಕೆ ಕಾರಣ ಆವುಟು. ಆಚರಣೆನ ವಿದಿ–ವಿದಾನಗಳ ಹಿನ್ನೆಲೆಲಿ ದೆವ್ವಗಳ ಬಗ್ಗೆ ಪಾಡ್ದನ ಕತೆಗ, ಸಂದಿ, ಕತೆ, ಐತಿಹ್ಯಗಳೊಳೊ. ದೆವ್ವಗಳ ಆರಾದನಾ ನೆಲೆಗ ಆಗಿ ಮಾಳ್ಯೆ, ಚಾವಡಿ, ಮಾಡ, ಪದೊಳಿ ತ ಹೇಳ್ವ ಬೌತಿಕ ನೆಲೆಗ ಒಳೊ. ಕೈಲಿ ಹಿಡಿವ ಆಯುದಂಗ, ಮುಕವಾಡಗ ಇದ್ದ್ ಅದರ ಜೆನ ಗೌರವಲಿ ಕಂಡವೆ.ಒಂದ್ ದೊಡ್ಡ ಆರಾದನಾ ವೆವಸ್ತೆ ಆಗಿರುವ ದೆವ್ವಾರಾದನೆಲಿ ಕಲಾಪೂರ್ಣ ಪೊರ್‌ಲುಗೆ ಅವಕಾಸವುಟ್ಟು. ಈ ದೆವ್ವಗಳ ಆರಾದನೆಗೊಂದು ಸುತ್ತಗೋಡೆನಂಗೆ ಅಲಂಕಾರ, ಮೋರೆಗೆ ಬಣ್ಣ, ವೇಸ–ಬೂಸಣ,ಪೊದ್ಯ–ಪದ, ಮಾತ್‌ನ ಸಂವಾದಗೆಲ್ಲ ಉಟ್ಟು. ಆಚರೆಣೆನ ತಾಂತ್ರಿಕ ಸೊರೂಪ ಇಲ್ಲಿ ಕಲಾತ್ಮಕ ಆಗಿ ವೆಕ್ತ ಆದೆ. ಸಾಮಾಜಿಕ ವೆವಸ್ತೆಲಿ ತಳ ಸಮುದಾಯಗ ಅಗಿರುಂವ ನಲಿಕೆ, ಪರವ, ಪಂಬದ ಜಾತಿ ಜೆನ ಸಾಂಸ್ಕೃತಿಕಸೊ ರೂಪದ ಈ ಆರಾದನೆಲಿ ಪಾತ್ರಿ ಕಲಾವಿದಗ ಆಗಿ ಮಹತ್ವದ ಪಾತ್ರನ ನಡ್ಸಿಕೊಟ್ಟವೆ.

ದೆವ್ವಾರಾದನೆ ಒಂದ್ 'ದಾರ್ಮಿಕ ರಂಗಬೂಮಿ'ಯಾಗುಟು, ಇದರ್‌ಲಿ ಕರಾವಳಿ ಮತೆ ಮಲೆನಾಡ್‌ನ ಕಾಲಾನುಗತ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ, ದಾರ್ಮಿಕ ವೆವಸ್ತೆ ಅಂಡ್ಗಿಟು. ಒಟ್ಟಿಗೆ ಸಂಗರ್‌ಸ ಹಾಂಗೆ ಸಾಮರಸ್ಯನ ಸಂಕತನಗ ಒಳೊ.ದೆವ್ವಾರಾದನೆನ ಒಟ್ಟಾರೆ ಹಿನ್ನೆಲೆನ ನೋಡಿರೆ, 'ಪಂಡ್‌ನ ಕಾಲದ ಕರಾವಳಿನ ಬೌಗೋಳಿಕ ಪರಿಸ್ತಿತಿ, ಪ್ರಾಕೃತಿಕ ವಿಕೋಪಗ, ಜೆನನ ಮತ್ತೆ ಸಾವ್‌ನ ಆಚೆ ಇರುವ ಜಗತ್ತ್‌ನ ಕುರ್‌ತಾದ ನಂಬಿಕೆ, ಸತ್ತವರ ಮತ್ತೆ ಬಾಕೆ ಹೇಳಿದ್ ನೋಡುವ ಆಸೆ, ಮಾತೃ ಪೂಜೆನ ಬಯಕೆ, ದುಸ್ಟ ಪ್ರಾಣಿಗಳ್‌ಂದಾಗುವ ಹೆದುರಿಕೆ, ಆ ಹೆದ್ರಿಕೆಂದ ಹುಟ್ಟಿಕಂಬ ಆರಾದನೆನ ಮನೋಬಾವ, ಅಸಾಮಾನ್ಯ ಆಗಿ ಬೊಡ್ಡಿದ ಮೊಯಿಂಸರ್‌ಗ, ಆಕಸ್ಮಿಕನೂ ಆಗಿ ತೀರ್‌ದ ಮೇಲೆ ಅಂತವರ ಮತ್ತೆ ಬಾಕೆಹೇಳಿ ನಡ್ಸುವ ಆರಾದನೆ ಹಿಂಗೆ ಜೆನರ ವಿಚಿತ್ರ ಚಿಂತನೆನ ದೆವ್ವಗಳ ಕಲ್ಪನೆಲಿ ಕಾಣಕ್ (ಕೆ ಚಿನ್ನಪ್ಪ ಗೌಡ; 1990; 11–12). ದೆವ್ವದ ಕಲ್ಪನೆಗಳ ಹಿನ್ನೆಲೆನ ಗ್ರೆಸಿಕೆ ಮೂಲ ಆಗಿ ದೆವ್ವಗಳ ಬಗ್ಗೆ ಬಾಯಿ ಮಾತ್‌ನ ಪಾಡ್ದನ ಕತೆಗಳ, ಆಚರಣೆನ,ಕ್ರಮ ಕಟ್ಟ್‌ಪಾಡ್‌ಗ ಆದಾರ ಆದೆ. ಹಿರಿಯರ ಆರಾದನೆ ಮತ್ತೆ ವೀರಾದನೆ ದೆವ್ವ ಜಗತ್ತ್‌ನ ಸುರುನ ಆಯಾಮಗ. ದೆವ್ವ ಜಗತ್ತ್‌ನ ದೆವ್ವಗಳ್‌ಲಿ ಸತ್ತವು, ಕುಲದೇವತೆಗ, ಕುಲಲಾಂಚನ, ಪುರಾಣ ಮೂಲ, ವಲಸೆ ಬಂದ ದೆವ್ವ ವರ್‌ಗಗ ಅಂತೆಲ್ಲಾ ಕಂಡ್ ಬಂದವೆ. ದೆವ್ವಗಳ ಅಚರಣೆನ ನೇಮ, ಕೋಲಗಳಳ್‌ಲಿನ ವಿದಿ–ವಿದಾನಗಳ್‌ಲಿ ಮಾತ್ರ ಆರಾದನೆ ಮಾಡ್ದಲ್ಲ ಬದ್ಲಾಗಿ ಅಗೆಲ್ ಬಳ್ಸಿದ್ ಅಚರಣೆ ಮಾಡ್‌ವೆ.

ದೆವ್ವಗಳ ಅದರ ಆರಾದನೆಗಿರ್‌ವ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಸಂರಚನೆಗಳ ಮತ್ತೆ ಪಾಡ್ದನ ಕತನಗಳ ಆದಾರ ಮೂಲಗಳ್‌ಂದ ಈ ಮುಂದೆನಾಂಗೆ ವಿಂಗಡ್‌ಣೆ ಮಾಡಕಾದೆ. 1. ಕುಲಲಾಂಚನ ಮತ್ತೆ ಪ್ರಾಣಿ ಸಮ್ಮಂದಿ ದೆವ್ವಗ– ಪಂಜುರ್‌ಲಿ, ಪಿಲಿಚ್ಚಾಂಡಿ, ಮೈಸಂದಾಯ. 2. ವೈದಿಕ ವೈಷ್ಣವ ಪುರಾಣ ಮೂಲ ಪ್ರಬಾವಿತ ದೆವ್ವಗ – ವಿಷ್ಣುಮೂರ್‌ತಿ, ಮಲರಾಯಿ, ವಾರಾಹಿ, ಪಿಲಿಬೂತ. 3. ವೈದಿಕ ಶೈವ ಮತ್ತೆ ಶಾಕ್ತ ಪುರಾಣ ಮೂಲದ ದೆವ್ವಂಗ – ಗುಳಿಜ, ಜಟಾದಾರಿ, ಜುಮಾದಿ, ರಕ್ತೇಶ್ವರಿ, ವೈದ್ಯನಾಥ. 4. ವೀರರಾಗಿದ್ದ್, ಪ್ರಬುತ್ವ ಮತ್ತೆ ಅಸಮಾನತೆನ ವಿರುದ್ದ ಹೋರಾಟಲಿ ಮರಣ ಆದ ನಂತರಲಿ ದೆವ್ವತ್ವಕ್ಕೆರ್‌ದ ದೆವ್ವಂಗ– ಕೋಡ್ದಬ್ಬು, ತನ್ನಿಮಾನಿಗ, ಕೋಟಿ ಚೆನ್ನಯ, ಕಲ್ಕುಡ–ಕಲ್ಲುರ್ಟಿ, ಸಾರಮಾನಿ ಕಾನದ– ಕಟದ. 5. ಸಾಮಾಜಿಕ ಅಸಮಾನತೆನ ಕಾರಣಂದ ದುರ್ಮರಣ ಆಗಿ ಮತ್ತೆನ ದಿನಗಳ್‌ಲಿ ದೆವ್ವ ಸಂಪರ್‌ಕಂದ, ದೆವ್ವಾದವು– ಕೊರಗ ತನಿಯ, ಚಂದು–ಚಾತು ನಾಯರ್, ಪುರುಸದೆವ್ವ. 6. ವಲಸೆ ಬಂದ ಅರಸು ದೆವ್ವಗ – ಪೂಮಾಣಿ–ಕಿನ್ನಿಮಣಿ/ಉಲ್ಲಾಗಳು, ಅಣ್ಣ–ತಮ್ಮ ಮಾಡದರಸುಗ ಉಲ್ಲಾಯ, ದೆಯ್ಯೊಂಕುಳು.

ಚಾರಿತ್ರಿಕ ಆಗಿ, ದೆವ್ವಾರಾದನೆ ಚಾಲ್ತಿಗೆ ಬಂದ ಕಾಲನ ಸರಿ ಆಗಿ ಹೇಳಿಕೆ ಸಾಕ್ಸಿಗ ಇಲ್ಲೆ. ಮದ್ಯಕಾಲೀನ ಕರ್ನಾಟಕದ 14ನೇ ಸತಮಾನಂದ ದೆವ್ವಾರಾದನೆ ಇತ್ತ್‌ತ ಆಕರ ಮೂಲಂದ ಹೇಳೊಕು. ದೆವ್ವಾರಾದನೆಲಿ ಮದ್ಯಕಾಲೀನ ಕರ್ನಾಟಕಲಿ ಇದ್ದ ರಾಜಕೀಯ ವೆವಸ್ತೆನ ನೆಳಲ್ ಆಗಿ ದೆವ್ವಾರಾದನೆಲಿ ಕಂಡದೆ. ಈ ವೆವಸ್ತೆ ವಿಜಯನಗರದರಸರ ಮತ್ತೆ ಕೆಳದಿ ಅರಸರ ಕಾಲಲಿ ಇದ್ದ ಆಡೆಳ್ತ ವೆವಸ್ತೆನ ಹಾಂಗೆ ಕಂಡದೆ. ದೆವ್ವಾರಾದನೆ ಸ ಒಂದ್ ರಾಜಕೀಯ ಆಡಳಿತಾತ್ಮಕದ ಬಾಗ್. ಇದ್ ದೆವ್ವಗ ಪಡಿವ ಅದಿಕಾರದ ನೆಲೆಲಿ ಸರಿ ಆಗಿ ಕಂಡದೆ : 1. ಸೀಮೆ ದೆವ್ವಗ, 2. ಮಾಗಣೆ ದೆವ್ವಗ, 3. ಗ್ರಾಮ ದೆವ್ವಗ, 4. ಗುತ್ತ್‌ನ ದೆವ್ವಗ, 5. ಕುಟುಂಬದ ದೆವ್ವ ತೇಳಿದ್ ಕರ್‌ಸಿಕೊಂಬ ಸ್ತಾನ ನಿರ್‌ದೇಸನಲಿ ಇದರ ಕಾಣಕ್ಕಾದೆ.

ಸೀಮೆ ದೆವ್ವನ ಅದಿಕಾರ ಕುಟುಂಬದವರೆಗೂ ಇದ್ದರೆ, ಕುಟುಂಬದ ದೆವ್ವದ ಅದಿಕಾರ ಕುಟುಂಬಕೆ ಮಾತ್ರ ಆಗಿದ್ದದೆ.

ದೆವ್ವಂಗ ಎಲ್ಲ ಕಾಣದ ವಿಚಿತ್ರ ಪ್ರಪಂಚಕ್ಕೆ ಸೇರ್‌ದವು ಆಗಿದ್ದವೆ. ದೆವ್ವಂಗಳ ಆರಾದನೆ ಒಂದ್ ಪ್ರತ್ಯೇಕ ಜಾಗೆ ಮತ್ತೆ ವಿಸೇಸ ಹೊತ್ತುಲಿ ನಡ್ದದೆ. ಕಾಲ – ಜಾಗೆ ಪರಿಸರ ಬದ್ದ ಆಗಿದ್ ಕಟ್ಟುವ ವಿಸೇಸ ಹೊತ್ತುನ 'ನೊಡುನ ಜಗತ್ತ್' ತ ಹೇಳಕ್. ಆ ಕಾಣದ 'ಮಾಯಾ'ಜಗತ್‌ಲಿ

ಇರ್‌ವ ದೆವ್ವಗ ಈ ನಾವಿರ್‌ವ ಮೊಯಿಂಸರ' ಜಗತ್ತ್‌ಗೆ ಬರೊಕು. ಆಗ ಮಾತ್ರ ಅವರ ಕಾಂಬಕ್ಕಾದ್‌; ಮಾತಾಡ್ಸಿಕ್ಕಾದೆ. ಈ 'ನೊಡುನ ಜಗತ್ತ್', ಬ್ರಾಮಕ ತೇಳಿರೆ ಕಾಲ್ಪನಿಕ,ನಾವೆ ಮನ್ಸ್‌ಲಿ ಕಟ್ಟಿಕಂಡ ಲೋಕ ಆಗಿದ್ದದೆ. ದೆವ್ವಗ ಈ ಮಾಯೆನ ಜಗತ್ತ್‌ಗೆ ದೆವ್ವಗ ಬರೊಕುಂತಾರೆ ಕೆಲ ನಿಯಮಗನ ಪಾಲ್ಸಕಾದೆ.ದೆವ್ವಗ ಸಾಕಾರ ರೂಪಲಿ ಕಾಂಬಕೆ ಒಬ್ಬ ನೊಡಲೊಬ್ಬ ಮೊಯಿಂಸನು ಬೇಕಾದೆ. ಅಂವನೇ ದೆವ್ವದ ಮಾನಿ/ಪಾತ್ರಿ ಅಲ್ಲೊ ಪೂಜಾರಿ. ಇವ ನೊಡುನ ಜಗತ್ತ್‌ನ ಕೊಂಡಿ ಆಗಿದ್ದದೆ. ಈ ಮೊಯಿಂಸ ಸುದ್ದಲಿ ಇರಂವ ಆಗಿರೋಕು. ಯಾಗೋಳುನ ಜೀವನಲೂ ಹತೋಟಿಲಿ ಇರೊಕು. ದೇವ್ವಾರಾದನೆ ಸಾರ್‌ವಜೆನಿಕ ಪ್ರದರ್‌ಸನ ಕತ್ತಲೆಲಿ ನಡ್ದದೆ. ಮಂದ ಬೊಳ್ಪು, ಕತ್ತಲೆನ ಜಾಗೆ, ಅಗಲ ಬೊಯ್ಲ್, ರಕ್ತ ಬಣ್ಣ, ಉಡುಗೆ–ತೊಡುಗೆ, ಕೈಲಿ ಸುರ್‌ಗೆ,ಕಡ್ಸಲೆ, ದೀಟಿಗೆ ಹಿಡ್ದ್ ಆರ್ಬಟೆ ಕೊಟ್ಟ್ ವಿಕಾರ ಸ್ಯೆಲಿನ ಕೊಣ್ತ ಮಾಡ್ವ ದೆವ್ವದ ಕೊಂಡಿ ಆದ ಕಟ್ಟ್ ಕಟ್ಟಿದಂವ ಚೆಂಡೆ ತಾಸೆನ ಹಿಮ್ಮೇಳ ಸೇರಿಕನ ಆ ಜಾಗೆಗೆ ಹೊತ್ತುನ ಪೂವೇರಿಟುತ ಹೇಳ್‌ವೆ. ಸೇರ್‌ದ ಊರ ಕಟ್ಟಳೆಯವೆಲ್ಲವೂ ಸೇರಿ ಪ್ರಾರ್ತನೆ ಮಾಡಿ ಅಲೌಕಿಕ ಜಗತ್ತ್‌ಂದ ದೆವ್ವನ ನೊಡುನ ಲೋಕಕೆ ಕರ್‌ದವೆ. ಆಗ ನೊಡುನ ಲೋಕದ ಮಾದ್ಯಮ ಆಗಿರ್‌ವ ವೇಸ–ಬೂಸಣಂದ ಕಟ್ಟ್‌ನವನ ಮೈಮೇಲೆ ದೆವ್ವ ಕಾಣ್ಸಿಕಂಡದೆ. ಮುಕ್ಕಾಲ್ ಮೂರು ಗಳಿಗೆ ದರ್‌ಸನಲಿದ್ದ್ ಅಬಯನ ನುಡಿಕೊಟ್ಟ್ ಮಾಡಿ ಆರಾದಕರ ಮಾರ್‌ನುಡಿನ,ಕೇಳಿ,ಹರ್‌ಕೆನ ತೆಕಂಡ್ ದೆವ್ವ ಮಾಯ ಸೇರ್‌ದೆ. ದೆವ್ವದ ಅಬಯದ ನುಡಿಗೆ ಬಕ್ತರ್ ಸಮಾದಾನ ಪಡ್ಕಂಡವೆ. ದೆವ್ವ ನಮ್ಮ ಕಾಪಾಡಿಕಂಡ್ ಇದ್ದದೆತ ನಂಬುವೆ. ಈ ನಂಬಿಕೆನೆ ಇಲ್ಲಿನ ಆಸಯ ಆಗುಟ್ಟು.

**ನೇಮ :** ದೆವ್ವ ಆರಾದನೆನ ಕ್ರಮಂಗಳ ಸೊರೂಪ–ಲಕ್ಷಣ ಹಿನ್ನೆಲೆ ಬೇರೆ ಬೇರೆ ಹೆಸ್ರ್‌ಲಿ ಕರ್‌ದವೆ. ಮನೆ ಒಳಗೆ ಪಾಸಾಣಮೂರ್‌ತಿ/ಕಲ್ಲುರ್ಟಿ ದೆವ್ವಕ್ಕೆ ಅಗೆಲ್ ಬಳ್ಸುವೆ. ಕಾಯರ ಮರದ ಬುಡಲಿ ಕಲ್ಲ್ ಹಾಕಿದ್ ಗುಳಿಗನಂತ ದೆವ್ವಗಳಿಗೆ ವರ್‌ಸೋಳ್ ಕೋಳಿ ಕೊಯ್ದ್ ಅಡುಗೆ ಮಾಡಿ ಬಳ್ಸುವ ಪದ್ದೊತಿನು ಉಟ್ಟು. ಪಂಜುರ್‌ಲಿನಂತಹ ದೆವ್ವಗಳ ಕಾಯರ್ ಮರ ಇರ್‌ವ ಬನಗಳ್ಳಿ ಕಲ್ಲ್ ಹಾಕಿ ಪರ್‌ವ ಮಾಡಿದ್ ಕೋಳಿ ಬಲಿ ಕೊಟ್ಟ್ ಅಗ್ಗೆ ಮಾಡಿ ಬಳ್ಸುವ ಪೊದ್ದತಿನೂ ಇದ್ದದೆ. ಇದ್ ಎಲ್ಲನೂ ಹೇಳಿಕಂಡ ಹರಕೆನ ಸಂದಾಯ ಮಾಡ್‌ವ ದೆವ್ವದ ಸೇವೆಗ ಆದರೆ : ಜೆನ ಸೇರ್‌ಸಿ, ಕುಟುಂಬ, ಊರು, ಗ್ರಾಮ, ಸೀಮೆ ನೆಲೆಲಿ ನಡ್ಸುವ ದೆವ್ವ ಆರಾದನ ಬೇರೆ ಬೇರೆ ಬಗೆಗಳ ಸೂಚಿಸುವ ಹೆಸರ್‌ಗಳ್‌ಲಿ 'ನೇಮ'ನೂ ಒಂದ್. ಸಂಸ್ಕೃತ ಬಾಸೆನ ಪದ 'ನಿಯಮಂದ'. 'ನೇಮ' ಪದ ಬಂದುಟ್ಟು, ಅರೆಬಾಸೆಲಿ ಸ ನೇಮಂತಳೆ ಹೇಳ್ದು. ನೇಮ ಸಬ್ದನ ತುಳು ಬ್ರಾಂಬಣರ್ ಸೃಸ್ಟಿಸಿ ಬಳಕೆಗೆ ತಂದೋ ತೇಳಿ ಎ. ಸಿ ಬರ್‌ನೆಲ್ ಹೇಳೀಳೊ. ದೇವ್ವಾರಾದನೆಲಿ ಕಟ್ಟಲೆಂದ ಅಂದರೆ ಪಂಡ್‌ನ ಕಾಲಂದಳೆ ನಡ್ಕಂಡ್ ಬಂದ ಕೆಲ ಸಂಪ್ರದಾಯಗ ಒಳೊ. ಇದರ ಜೆನ ಬುಡ್ದುಲೆ. ಈ ವೈದಿಕರ್ ದೇವ್ವಾರಾದನೆಗೆ ಒಗ್ಗಿ ಬಂದ ಮೇಲೆ ಅವು ಅವರ ಸಾಸ್ತ್ರಗಳ ಇಲ್ಲಿಗೆ ಸೇರ್‌ಸಿಯೊಳ. ಕಟ್ಟಳೆ ಹಾಂಗೆ ಸಾಸ್ತ್ರಗಳ ಒಟ್ಟ್ ಸೇರ್‌ಸಿಕಂಡ್ ನಿಯಮಲಿ ನಡೆವ ಆರಾದನೆನ ಈ ಬ್ರಾಹ್ಮಣರ್ 'ನೇಮ' ತೇಳಿ ಕರ್‌ದಿರೊಕು. ಈ ನೇಮಲಿನೂ ಹರ್‌ಕೆನ ನೇಮ ಅಂದರೆ ಹರಕೆ ಹೇಳಿಕೊಂಡ ಪ್ರಕಾರಲಿ ನಡ್ಸುವ ನೇಮ, ದೆವ್ವಂಗಳ ಹೆಸರ್‌ಲಿ ಪಂಜುರ್‌ಲಿ ನೇಮ, ಉಲ್ಲಾಕ್ಲು ನೇಮ, ಬಚ್ಚನಾಯಕ ನೇಮ, ಬೈದೆರ್‌ಲೆ ನೇಮ ಅಂತಲ್ಲಾ ಹೆಸರ್‌ಂದ ಕರ್‌ದವೆ. ಕೆಲವೊಮ್ಮೆ ಜಾಗೆ ಸಮ್ಮಂದಲಿ, ಕಟ್ಟೆ ನೇಮ, ಮಾಡದ ನೇಮ, ಮಿತ್ತೂರು ನೇಮ, ಬಜಪಿಲ ನೇಮ ಕಾನತಿಲ ನೇಮ, ಚಾಕಟೆ ಅಡಿ ನೇಮ ಹಿಂಗೆಲ್ಲಾ ಜಾಗೆನ ಹೆಸುರುಂದಳೂ ನೇಮನ ಪ್ರತ್ಯೇಕ ಮಾಡ್‌ವೆ (ಪಿ.ಕೆ.)

**ಮೆಚ್ಚಿ :** ದೇವ್ವಾರಾದನೆ ಉಳಾಳ್ತಿ ಪ್ರದರ್‌ಸನಕೆ ಕೊಟ್ಟ ಇನ್ನೊಂದು ಹೆಸ್ರ್ ಮೆಚ್ಚಿ. ಮೆಚ್ಚಿ ಪದ ಮೆಚ್ಚಿಸುವ ಅರ್‌ತನ ಕೊಟ್ಟದೆ (To please). ಮಾನಸಿಕ ಸಂತೃಪ್ತಿನ ಪಡೆವ ದಕ್ಷಿಣ ಕನ್ನಡ ಜಿಲ್ಲೆನ ಮಾಣಿ ಹಕ್ಕಲೆನ ಅನಂತಾಡಿ ಉಲ್ಲಾಳ್ತಿಗೆ ವರ್‌ಸಾವರ್‌ತಿ ನಡ್ಸುವ ನೇಮನ ಮಾತ್ರ 'ಮೆಚ್ಚಿ' ತ ಕರ್‌ದವೆ. ಇಲ್ಲಿ ಹನ್ನೆರಡ್ ವರ್‌ಸಕ್ಕೊಮ್ಮೆ ನಡ್ಸುವ ವಿಸೇಸ ಆಚರಣೆನ 'ದರ್‌ಮ ಮೆಚ್ಚಿ' ತನೇ ಕರ್‌ದವೆ.

ಗುತ್ತ್‌ನ ಮನೆಗಳ್‌ಲಿ ವರ್‌ಸಾವರ್‌ತಿ ನಡ್ಸುವ ಪುದ್ವಾರ್(ಹೊಸ್ತ್) ದಿನಲಿ ಮನೆನ 'ದರ್‌ಮ ದೆವ್ವ–ಸ್ತಳ ದೆವ್ವಕೆ 'ಪುದ್ವರ್‌ದಂ ಮೆಚ್ಚಿ' ತೇಳಿ ನೇಮಾರಾದನೆ ಕೊಡ್‌ವ ಪೊದ್ದತಿ ಉಟ್ಟು. ಉಲ್ಲಾಕ್ಲು–ಮಾಡದ ದೆವ್ವಂಗಳೂ ಮೆಚ್ಚುಗೆಂದ ಚಾವಾಡಿಲಿ ಪಡೆವ ನೇಮನ ಪರ್‌ಯಯರ್‌ತಲಿ 'ಸೋಣ ಚಾವಡಿ ನೇಮ'ತೇಳಿ ಕರ್‌ದವೆ. ಇದರ ಆಸಯ ಸಹ ಪಂಜುರ್‌ಲಿ/ರುದ್ರಾಡಿನಂತಹ ತೂಕದ ದೆವ್ವಗಳ ಮೆಚ್ಚಿಸಿ ಅದರ್‌ಲಿ ತಾವು ಕುಸಿ ಪಡ್‌ಸ್‌ವ ಉದ್ದೇಸನೇ ವ್ಯಕ್ತ ಆದ್. ಮನೆದೆವ್ವ/ ಜಾಗೆಗೆ ಸಮ್ಮಂದಪಟ್ಟಂತ ದೆವ್ವಂಗಳ ಬಗೆಲಿ ಮನೆಯವುಕೆ ವಿಸೇಸ ಆಪ್ತತೆ, ನಂಬಿಕೆ ಇದ್ದ್ ಆ ಕಾರಣಲಿ, ಹೊಸ ಅಕ್ಕಿನ ಉಂಬ, ಹೊಸ ಬೆಳೆನ ಮನೆಗೆ ತಾವ ಕುಸಿನ ಕಾಲಲಿ ದೆವ್ವಂಗಳನು ಸಾ ಮೆಚ್ಚ್‌ಸುವ ಉದ್ದೇಸಲಿ ಈ 'ಮೆಚ್ಚಿ' ನೇಮಗ ನಡ್ದದೆ. (ಪಿ.ಕೆ.)

**ದೇವ್ವಾರಾದನೆನ ಕಟ್ಟ್‌ಪಾಡ್‌ಗ :** ದೇವ್ವಾರಾದನೆತ ಹೇಳ್ದು ಅರೆಬಾಸೆ–ತುಳ್‌ನಾಡ್‌ನ ರಾಜಕೀಯ ಆಡೆಳ್ತದೊಟ್ಟಿಗೆ ಸಮ್ಮಂದ ಇಸಿಕಂಡ್ ಅದ್ ಅರೆಬಾಸೆ ಜೆನಪದರ ಸಾಂಸ್ಕೃತಿಕಬೊದ್ಕ್. ಜೆನಪದರ್‌ಲಿ ಆರಾದನೆ ಮಾಡೊವ್ ಮತ್ತೆ ದೆವ್ವಕಟ್ಟೊವ್‌ಂತೇಳ್ವ ಎರ್‌ಡ್ ಕೂಟನ ನೋಡಕ್. ದೆವ್ವ ನಡ್ಸೊವ್ ದೆವ್ವದ ಚಾವಡಿಗೆ ಮತೆ ಆ ಜಾಗೆಗೆ ಸಮ್ಮಂದ ಪಟ್ಟಾಂಗೆ ಅದಿಕಾರ ಇರೊವ್. ಅವ್ ಮನೆ/ಗುತ್ತುನ ಯೆಜಮಾನ, ಊರ್/ಗ್ರಾಮದ ಮೊಕ್ತೇಸರರ್, ಇಲ್ಲರ್ ಆ ಸೀಮೆನ ರಾಜರಾಗಿದ್ದವೆ. ನಮ್ಮ ಸಾಂಸ್ಕೃತಿಕ ಲೋಕಲಿ ಪರವ, ಪಂಬದ, ಪಾಣಾರ, ನಲಿಕೆ(ಅಜಲರ್), ಮಲೆಯ ತ ಕರ್‌ಸಿಕಂಬ ಅರೆಬಾಸೆ/ತುಳ್‌ನಾಡ್‌ನ ಕೂಡ್‌ಗಟ್ಟ್‌ಲಿ ಇರ್‌ವ ಕೆಳವರ್‌ಗದವೇ ದೆವ್ವ




ಕಟ್ಟೋವ್. ದೆವ್ವ ಮತ್ತೆ ಯಜಮಾನರ ನಡುಲಿ ಸಮ್ಮಂದ ಕೂಡ್ಸ್‌ವ ಕೊಂಡಿ ಕೂಡ ಈ ದೆವ್ವಕಟ್ಟೋವು. ಹಿಂಗೆ ನಡ್ಸೋವ್, ದೆವ್ವ, ದೆವ್ವ ಕಟ್ಟೋವ್ ಈ ಮೂರರ ಕೊಂಡಿಲಿ ನಡಿವ ಸಾಂಸ್ಕೃತಿಕಆಚರಣೆ ಮತ್ತೆ ಕಟ್ಟ್‌ಪಾಡೇ ದೆವ್ವಾರಾದನೆ. ದೆವ್ವಾರಾದನೆ ಜಾಗೆ, ಊರ್, ಮಾಗಣೆ ಹಿಂಗೆ ಬೇರೆ ಬೇರೆ ಹೊತ್ತುಲಿ ನಡೆವ ದೆವ್ವಗಳಿಗೆ ಹೋಲಿಕೆ ಮಾಡಿ ಬಾಗ ಮಾಡಕ್.

ದೆವ್ವ ನಡ್ಸೋವರ ಜಾತಿಗೆ ಸಮ್ಮಂದಪಟ್ಟಂಗೆ ದೆವ್ವಗಳ ಆರಾದನೆ ಆಚರಣೆ, ಕಾರ್ಣಿಕ, ಕೊಣೆವ ರೀತಿ ಬದಲಾವಣೆ ಆದರ ವಿದ್ವಾಂಸರಾದ ವಿವೇಕ ರೈ ಯೊವ್ ಅವರ ತುಳು ಜಾನಪದ ಸಾಹಿತ್ಯ, ಮತ್ತೆ ಚಿನ್ನಪ್ಪ ಗೌಡ್ರ ಬೂತಾರಾದನೆ ಜಾನಪದೀಯ ಅದ್ಯಯನ, ಸೋಮೇಶ್ವರರ ತುಳು ಜಾನಪದ ಕೆಲವ್ ನೋಟಗಳು, ಗಣೇಶ ಅಮೀನರ ಮಾಯ ಮತ್ತೆ ಜೋಗ ಇಂತ ಗ್ರಂತಗಳ್‌ಲಿ ಚರ್‌ಚೆ ಮಾಡಿ ಬರ್‌ದೊಳೊ.

**ನ್ಯಾಯ-ಸತ್ಯ-ದಾನ-ದರ್ಮ ವಿಚಾರಂಗ :** ಆಡೆಳ್ತ ವೆವಸ್ತೆಲಿ ಇರ್‌ವ ರಾಜಕೀಯ ಅಂಗ ನ್ಯಾಯ ಹೇಳ್‌ವ ಪೊದ್ದತಿ ಆಗಿ ದೆವ್ವಾರಾದನೆಲಿ ಕಾಣಕ್. ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರ-ಪಂಚಮರ್‌ತ ಕರ್‌ಸಿಕಂಬೊವ್ ಐದ್ ವರ್‌ಗಲಿ ಮುಟ್ಟುಸಿಕಣದ ಬಟ್ರ್‌ಗ ಆಳ್ವಿಕೆ ಮಾಡ್‌ವವರ ಹಿಂದೆ ಇದ್ದದೆ. ವಾಸ್ತವಲಿ ಮುಟ್ಟಿಕೆ ಆಗದ್‌ತ ಹೇಳ್‌ವ ಜಾಗೆಲಿ ಇರೊವು ನಡ್ಸಿಕೊಡ್‌ವ ದೆವ್ವ ಕಟ್ಟೋವ್, ದೆವ್ವಗಳ ಕಟ್ಟಂವ ನಾವೇ ದೆವ್ವಂಗತ ಹೇಳಿಕಂಡ್ ಬಂದೊಳ. ಅವ್ ಅವರ್‌ನೇ ದೇವ್ವಗಂತೇಳಿ ಹೇಳಿಕಂಬಕೆ ಹೆಮ್ಮೆ ಪಟ್ಟವೆ.

ಅವ್ ಸಿರಿಮುಡಿ ಕಟ್ಟಿಕಂಡ್, ಕಾಲ್‌ಗೆ ಜೋಡ್ ಹಾಕದೆ, ಸೂತಕ ಇರ್‌ವ ಮನೆ ಮತ್ತೆ ಕುಟುಂಬದವರ್‌ಂದ ದೂರ ಇದ್ದವೆ. ದೆವ್ವ ನಡ್ಸೋವ್ ಮತ್ತೆ ದೆವ್ವ ಕಟ್ಟೋವ್ ದೆವ್ವದ ಕೋಲದ ಹೊತ್ತುಲಿ ಸುದ್ದ ಆಚರಣೆಲಿ ಇದ್ದ್, ನಡಾವಳಿನ ನ್ಯಾಯ-ಸತ್ಯ-ದಾನ-ದರ್ಮದ ಸೂತ್ರದಾರರಾಗಿದ್ದವೆ.

ಒಂದಾನೊಂದ್ ಕಾಲಲಿ ದೆವ್ವದ ಕೋಲಲಿ ಚಾವ್‌ಡಿ ಅಲ್ಲರೆ ಇಜ್ಜಲ್ ನ್ಯಾಯಪಂಚಾತಿಗೆ ಹೇಳ್‌ವ ಜಾಗೆನೇ ಆಗಿತ್ತ್. ಇಂದ್‌ಗು ಕುಟುಂಬದ ಒಳಗೆನ ಜಗಳದ ರಾಜಿಪಂಚಾತಿಗೆ ದೆವ್ವದ ಎದ್‌ರೇ ನಡ್ದದೆ ಮತ್ತೆ ಅಲ್ಲೇ ಇತ್ಯರ್‌ತ ಆದೆ. ಈ ಹೊತ್ತುಲಿ ದೆವ್ವ ಕಟ್ಟಿದೊವ್ ಮಾಯಾ-ಜೋಗಂತೇಳ್ವ ಅಲೌಕಿಕ(ಮೈಗೆ ದರ್‌ಸನ ಬಾವ ಹೊತ್ತ್) ಲೋಕಲಿದ್ದವೆ. ಕೈಲಿ ಸುರ್‌ಗೆ-ಕಡ್ಸಲೆ ಹಿಡ್ದ್, ದೆವ್ವದ ವೇಸ ಹಾಕಿ, ಅಣಿ ಕಟ್ಟಿಕಂಡ್ ಅಲ್ಲಿ ಸೇರ್‌ದವರ ಮುಂದೆ ಹಿರಿ ಸ್ತಾನಲಿ ನಿತ್ತ್ ದೆವ್ವ ನ್ಯಾಯ ಕೊಟ್ಟದೆ.

ಮಾಯಾ ರೂಪದ ದೆವ್ವ ಈ ಹೊತ್ತುಲಿ ನ್ಯಾಯದ ದಾರಿ, ಸತ್ಯದ ಮಾತ್, ದಾನ ಮಾಡ್ವ ಮೊಯಿನ್ಸ್, ದರ್ಮಲಿ ನಡ್ಕಂಬದು ದೆವ್ವದ ಬಯ್ಕೆ ಆಗಿದ್ದದೆ. 'ನಂಬವಂಗೆ ಇಂಬು, ನಂಬದವಂಗೆ ಅಂಬು' ತ ಹೇಳ್ವ ಒಕ್ಕಣೆಲಿ ದೆವ್ವ ನಡ್ಕಂಡದೆ.

**ನ್ಯಾಯ ತೀರ್ಮಾನದ ನಿಯಮಗ :** 1. ರಾಜಿಪಂಚಾತಿಗೆನ ಎರ್‌ಡ್ ಕೂಟಗ ದೆವ್ವದ ಎದ್ರ್ ಬಂದ್ ನಿಲ್ಲೋಕು. 2. ಮನೆತನದ ಹಿರಿಯರ ಸಡುಲಿ ನ್ಯಾಯಪಂಚಾತಿಕೆ ನಡ್ದದೆ. 3. ತರವಾಡ್ ಮನೆಲಿ ನ್ಯಾಯ ತೀರ್ಮಾನ ಆದೆ. 4.ದಾರ್ಮಿಕ ಕ್ಷೇತ್ರಗಳ್‌ಲಿ ತೀರ್ಮಾನ ಆದೆ. ಉದಾ : ಕಾನತ್ತೂರು, ಧರ್ಮಸ್ಥಳಗಳ್‌ಲಿ ನ್ಯಾಯ ತೀರ್ಮಾನ ನಡ್ದದೆ. 5. ಎರ್‌ಡ್ ಕಡೆನೊವ್ ಅವರ ಅಬಿಪ್ರಾಯಗಳ, ಸಮರ್‌ತನೆಗಳ ಎಲ್ಲಾ ವಿಚಾರಗಳ ದೆವ್ವದ ಮುಂದೆ ಇಸೊಕು. 6. ವಾದ ಮಾಡೊವ್ ಅವರೊಟ್ಟಿಗೆ ಇರ್‌ವ ಸಾಕ್ಷಿಗಳ ಎದ್ರ್ ನಿಲ್ಸಿ ಅವ್ಕೆ ಬೇಕಾದವರ ಬಳ್ಸಿಕಣಕ್. 7. ತೊಪ್ಪು ಒಪ್ಪುಗಳ ದೆವ್ವ ಇತ್ಯರ್‌ತ ಮಾಡ್ದ ಮೇಲೆ ತೊಪ್ಪು ಮಾಡ್ದೊವ್ ಶಿಕ್ಷೆನ ರೂಪಲಿ ದಂಡ ಕಟ್ಟೋಕು. 8. ನ್ಯಾಯ ತೀರ್ಮಾನ ಮಾಡಿಕನ ಮನೆ/ಕುಟುಂಬದ/ ಗುತ್ತುನ/ಸೀಮೆನ ಹಿರಿಯೊವ್ ಅಲ್ಲಿ ಹಾಜರ್‌ರಿರೊಕು.

ಹಿಂಗೆ ಸಮಸ್ಯೆಗೆ ಸಮ್ಮಂದಪಟ್ಟ ಇಡೀ ವಿಚಾರಗಳ ದೆವ್ವ ತಿಳ್ಕಂಡ್ ನ್ಯಾಯ ತೀರ್ಪು ಕೊಟ್ಟದೆ. ಬೇಕಾದ ಸಾಕ್ಷಿ ಆದಾರಗ ಸಿಕ್ಕಿತ್ಲೆರ್ ಸತ್ಯ ಪರೀಕ್ಷೆ ನಡ್ದದೆ. ಸತ್ಯದ ಪರೀಕ್ಷೆನಂಗೆ ಅದರ ಸತ್ಯ ತಿಳ್ಸ್‌ವ ಬಗೆನೂ ಇದ್ದದೆ. ದೆವ್ವಗಳ ಎದ್ರ್‌ಲಿ ಕೊಲೆಗೆಳ ಬುಡ್ಸುವ ಕ್ರಮನೂ ಇದ್ದದೆ. ಆಣೆ ಪ್ರಮಾಣ ಮಾಡ್ದು, ಎಸ್ಟೋ ವಿಚಾರಗ ವಾದ ಜಗಳಗಳ್‌ಂದ ಸುರು ಆಗಿದ್ದದೆ. ಮೊದ್‌ವೆ ಮಂಟಪಲೂ ನ್ಯಾಯ ಪಂಚಾತಿಕೆ ನಡ್ದದೆ. ಆಸ್ತಿ ಪಾಲ್ ಮಾಡ್‌ವ ವಿಚಾರ ಬಾಕನ ಅಣ್ಣ ತಮ್ಮನ ನಡುಲಿ ಜಗಳ ನಡ್ದದೆ. ಇದೇ ವಿಚಾರಲಿ ಅಪ್ಪ ಮಕ್ಕಳ ನಡುಲಿನೂ ಜಗಳ ಬಂದದೆ. ನಾಯಿ, ಕೋಳಿ ದನ ಕರ್‌ಗಳ ನೆವನಲಿ ನೆರೆಕರೆಲಿ ಜಗಳ ಆದೆ. ನೆರೆ ಕರೆವರೊಟ್ಟಿಗೆ ಜಾಗೆ ಗಡಿ ವಿಚಾರಲಿನೂ ಜಗಳ ಎದ್ದದೆ. ಹಿಂಗೆ ಬೇರೆ ಬೇರೆ ವಿಚಾರಲಿ ಜಗಳ ಸಿಟ್ಟ್ ಆಕನ ಅದರ ಸತ್ಯದ ಎದ್ರ್ ಆಣೆ ಪ್ರಮಾಣ ಮಾಡ್ಸಿ, ದೆವ್ವದೆದ್ರ್ ನಿಲ್ಸಿ ಪ್ರಸಾದ ತಕಂಡ್ ಇತ್ಯರ್‌ತ ಮಾಡ್ತಿದ್ದೊ.

**ನ್ಯಾಯ ತೀರ್ಮಾನದ ಕತೆ :** ಒಂದ್ ಕ್ರಿಶ್ಚಿಯನ್ ಕುಟುಂಬದ ಒಬ್ಬ ಹೈದ ಬೊಂಬಾಯಿಗೆ ಹೋದಂವ ವಾಪಾಸ್ ಬಾತೇ ಇಲ್ಲೆ. ಸುಮಾರ್ ಹತ್ತ್ ವರ್‌ಸೊ ಕಳ್ದ ಮೇಲೆ ಅವಂಗೆ ಮೊದ್ವೆ ಆವ್ತುಂತೇಳ್ವ ವಿಸ್ಯ ತಿಳ್ತ್. ಇದರ ಕೇಳ್ದ ಆ ಹೈದನ ಅಪ್ಪ ಮತ್ತೆ ಅವ್ವ ಕೋರ್‌ದಬ್ಬು ದೆವ್ವಕ್ಕೆ ದೂರ್ ಕೊಟ್ಟವೆ. ಅಂವನ ಕರ್‌ಸಿರೆ ನಂಗೇನ್ ಕೊಟ್ಟರೆ ತ ದೆವ್ವ ಹೇಳಿಕನ ನಿನ್ನ ಬಂಡಾರಕ್ಕೆ ಇಪ್ಪತ್ತೈದ್ ರುಪಾಯಿ ಕಾಣಿಕೆ ಹಾಕುವೆ ತ ಹೇಳ್ವೆ. ಆಗ ದೆವ್ವದ ಮದಿಪು ಹಿಂಗುಟ್ಟು.

ಯಾನೆ ಮಲ್ಲ ಪರ್‌ವತ ಜರಿಪೊಡು, ಆಂಡ ಎಂಕ್ ತಿಕುನು ಬಜೀ ಕಿಚ್ಚೆಲಿ. ಉಂದು ಎಲ್ಯ ಬೇಲೆ ಅತ್ತ್. ಕರಿಯಣಿ ಕಡ್ಡ್ ಕನವೊಡಾಪುಂಡು. ಮಲ್ಲ ಪಾಪೊತ್ತುನು ಯಾನ್ ತುಂಬೊನೊಡು. ಆಣೆ ಪ್ರಮಾಣ ಮಾಡಿಕಂಡವ್ ತಪ್ಪೊಪ್ಪಿಗೆ ತೀರಿಕೆ ಮುಂದೆ ಮತ್ತೆ ಒಟ್ಟಿಗೆ ಸೇರಿಕೆ ಆಗದ್. ಒಬ್ಬ ಇನ್ನೊಬ್ಬರ್‌ಲಿ ಗಂಜಿ ನೀರ್ ಮುಟ್ಟಿಕೆ

ಆಗದ್. ಮೊದ್ವೆನೂ ಆಕೆ ಆಗದ್. ಉದಾಹರಣೆಗೆ : ಬಳಜೇಯಿ ಮಾಣಿಗನ ಸಂದಿಲಿ ಬಾವ ವಿಚಾರ : ಚೆನ್ನಮಣೆ/ಮಂಜೆಟಿಮಣೆ ಆಟಲಿ ಆಟ ಕೆಡ್ಸಿದಕ್ಕಾಗಿ ಹೆಣ್ಣ್ ಕೋಪ ಮಾಡಿಕಂಡ್ ತವ್ರು ಮನೆಗೆ ಹೋತ್. ಹೆಣ್ಣ್ ವಾಪಾಸ್ ಬಂದರೆ ಅವಳ ಮೈ ಮುಟ್ಟಿಕೆ ಮುಂದೆ ದೆವ್ವಕೆ ಕೋಲ ಕೊಟ್ಟನೆತ ಗಂಡ ಹರ್‌ಕೆ ಹೇಳಿಕಂಡತ್. ದೆವ್ವದ ಕಾರ್ಣಿಕಂದ ಹೆಣ್ಣ್ ವಾಪಾಸ್ ಬಾತ್. ಹೆಣ್ಣ್ ಬಂದ ಕುಸಿಗೆ ಹರ್‌ಕೆ ಮರ್‌ತ್ ಅವಳ ಸೇರ್‌ತ್. ಅಂವ ದೆವ್ವದ ಹರ್‌ಕೆ ತೀರ್‌ಸದೆ ಅವ್ಳ ಮುಟ್ಟಿದಕ್ಕಾಗಿ ಅಂವ ಹೆಣ್ಣ್‌ನ ಕಳ್ಕಂತೇಳ್ವ ವಿಚಾರ ಕೇಳಿ ಬಂದದೆ.

ನ್ಯಾಯ ತೀರ್ಮಾನ, ಸತ್ಯ ಪರೀಕ್ಷೆನ ಒಟ್ಟೊಟ್ಟಿಗೆ ದಾನ ದರ್ಮ ಕೊಡ್‌ವ ವಿಚಾರಗ ಕೂಡ ಬಂದದೆ. ಅರೆಬಾಸೆ/ತುಳ್‌ನಾಡ್‌ಲಿ ನಡೆವ ಹೆಚ್ಚಿನ ಜಾತ್ರೆ ಸಮಾರಂಬಗಳ್‌ಲಿ ಅನ್ನದಾನ ಇಂದ್‌ಗೂ ನಡ್ದದೆ. ಅನ್ನದಾನಂದ ದರ್ಮ ಲಾಯ್ಕ್‌ಲಿ ನಡ್ತಾ ? ತ ಹೇಳ್‌ವ ಮಾತ್ ಒಂದುಟ್ಟು. ಪ್ರತಿ ವರ್‌ಸ ನಡೆವ ಆಚರಣೆಗಳ್‌ಲಿ ಮತ್ತೆ ಹುಟ್ಟುಂದ ಸಾವ್‌ನ ವರೆಗೆ ನಡುಲಿ ಬಾವ ಎಲ್ಲಾ ಬೊದ್ಕ್‌ನ ಆಚರಣೆಗಳ್‌ಲಿ ಅನ್ನದಾನದ ಕಾರ್ಯ ನಡ್ದದೆ.

**ಸತ್ಯ ಪರೀಕ್ಷೆನ ಕ್ರಮಂಗ :** 1. ದೆವ್ವಕ್ಕೆ ತಂಬಿಲ ಕೊಡ್‌ಕನ – ಕೋಳಿ ಕೊಂದ್‌ದ್ ಅಗೆಲ್ ಬಳ್ಸ್‌ದು. ಆಗ ಕೊಂದ ಕೋಳಿ ಸರಿಯಾಗಿ ಬೀಳ್ವಂಗೆ ಬೇಡಿಕಂಡ್, ಅದ್ ಸರಿ ಬೀತ್ಲೆಂತೇಳಿರೆ ಕುಟುಂಬಕೆ ತೊಂದರೆ ಉಟ್ಟು ಕೋಲ ಕೊಡೊಕು ತ ನೆನ್ಸಿಕಂಡವೆ. 2. ಮನೆಒಕ್ಲ್, ದಿಬ್ಬಣ ಹೊರ್‌ಡ್ಕನ, ತೊಟಗಿಲ್ ತಕಂಡ್ ಹೋದ್, ಹಿಂಗೆ ಎಲ್ಲಾ ಸುಬ ಕಾರ್ಯಲಿ ಕಾಯಿ ಒಡೆದು. ಕಾಯಿ ಸರಿಯಾಗಿ ಬಿದ್ದರೆ ಒಳ್ಳೆದ್. ಇಲ್ಲರ್ ಕೆಟ್ಟದ್ ತ ತಿಳ್ಕಕಂಡವೆ. 3. ದೆವ್ವ ಎಲೆನ ಹಾರ್‌ಸಿ ಅಂಗಾತ ಬಿದ್ದರೆ ಒಳ್ಳೆದ್, ಎಲೆ ಕಂಕಣಿ ಬಿದ್ದರೆ ದೋಸ ಉಟ್ಟು ತ ತಿಳ್ಕಂಡವೆ. 4. ದೆವ ಕಾಯಿನ ಹಾರ್‌ಸಿ ಸರಿ ತೊಪ್ಪು ತಿಳ್ಸಿದೆ. 5. ಎಲ್ಲಾ ದೆವ್ವಕೆ ಸಮ್ಮಂದಿಸಿದ ಕೆಲ್ಸಗಳ್‌ಲಿ ದೀಪ ಹೊತ್ತುಸಿ ಇಸ್‌ವೆ. ಆದ್ ಕೆಡದಂಗೆ ನೋಡಿಕಂಡವೆ. ಹಿಂಗೆ ಬೇರೆ ಬೇರೆ ತರಲಿ ಸತ್ಯ ಪ್ರಮಾಣ ಪರೀಕ್ಷೆ ನಡ್ದದೆ. ಕಿಚ್ಚಿಗೆ ಕೈ ಹಿಡಿದು. ಕಾದ ಎಣ್ಣೆಗೆ ಕೈ ಹಾಕುದು ಕೂಡ ಹಿಂದೆನ ಕಾಲಲಿ ನಡೆತಿತ್ತ್.

ದೆವ್ವದಕೋಲಲಿ ನ್ಯಾಯ– ಸತ್ಯ –ದಾನ– ದರ್ಮಗಳ ವಿಚಾರ : ದೆವ್ವದ ಕೋಲಲಿ ಈ ನಾಕ್ ವಿಚಾರಗ ಬಾರಿ ಮುಕ್ಯ ಆದೆ. ಅದರ ಹಿಂಗೆ ಚರ್‌ಚೆ ಮಾಡಕ್. 1. ಜೆನಪದ ನ್ಯಾಯಾಂಗಂತೇಳ್ದು ಒಂದ್ ಸಾಮಾಜಿಕ ನ್ಯಾಯ ಪೊದ್ದತಿನೂ ಹೌದು. ದಾರ್ಮಿಕ ನ್ಯಾಯ ಪೊದ್ದತಿನೂ ಹೌದು. ನ್ಯಾಯಾಂಗ ಪೊದ್ದತಿನ ನಿರ್‌ವಹಣೆ ಮಾಡ್ವ ತಾಕತ್ ದೆವ್ವಗಳ ಹೆಚ್ಚಿನ ನುಡಿಕಟ್ಟ್‌ಗಳ್‌ಲಿ ಉಟ್ಟು. 'ಪತ್ತ್ ಕೂಡಿ ಕಳಟ್ಟ್ ಮುತ್ತು ಉಂಡು ಪನ್ಪೆರ್. ನಿನ್ನ ಸತ್ಯೊದ ಕಳಟ್ಟ್ ಇಂಚಿನಾಯೆ ಇಂಚ ಮಲ್ತೆ. ಈ ದಾದ ಶಿಕ್ಷೆ ಕೊರ್‌ಯ'. [ಹತ್ತ್ ಜೆನ ಸೇರ್‌ದಲ್ಲಿ ಮುತ್ತು(ಕಳೆ) ಉಟ್ಟುಂತೇಳ್‌ವೆ.. ನಿನ್ನ ಸತ್ಯದ ಕಳಲಿ ಇಂತ ತೊಪ್ಪುನ ಇಂತವ ಮಾಡಿಟ್ಟು, ನೀ ಎಂತ ಶಿಕ್ಷೆ ಕೊಟ್ಟೊಳ) ತ ಹೇಳ್ವೆ. ಇದ್ ನ್ಯಾಯ ತೀರ್ಮಾನಲಿ ನಡ್ಸವರ್‌ಂದ ಬಾವ ಮಾತ್. ನ್ಯಾಯ ಸಿಕ್ಕಕಾದ್ ದೆವ್ವ ಕಟ್ಟಿರ್‌ವ ಮಾಯ ಸ್ವರೂಪಿ ಸತ್ಯಂದ. ದೆವ್ವ ಆಗ 'ಬಾಸೆ ತಪ್ಪಿನಾಯಗ್ ಬಾಸೆ' ದೀಪೆ ತ ಹೇಳ್ದೆ. ಇದರರ್ತ ನನ್ನ ಮಾತ್ ತಪ್ಪಿದವಂಗೆ ನನ್ನಾಣೆ ತ ಹೇಳ್ವ ಶಾಪ. 'ಪತ್ತಿ ಪಗರಿನ್ ಬೂಮಿಗ್ ಬುಡೊಡಾ ಬಾನೊಗು ಬುಡೊಡಾ?'

ಬಿಲ್ಲ್‌ಲಿ ಹಿಡ್ದ ಅಂಬುನ ಬಾನಕೆ ಇಲ್ಲರೆ ಬೂಮಿಗೆ ಬುಡ್ದರ್‌ಂದ ಏನ್ ಪ್ರಯೋಜೆನ ಇಲ್ಲೆಂತೇಳಿ ದೆವ್ವ ಅಂಬುನ ನೆಲಕ್ಕೆ ಊರ್‌ದೆ. 'ಪಂಡಿ ನಾಲಾಯಿ ದೊಂಡೆಡಾವೊಡಾಂಡ ನೆತ್ತ ದೃಷ್ಟಾಂತ ತೋಜಾವೆ' ತ ಶಾಪ ಕೊಟ್ಟದೆ. ಇಂದಿಗೂ ಒಳ್ಳ ಹಾವುನ ಕೊಲ್ಲುವೊವು ಅದ್ ನೆಲ ಕಚ್ಚದಂಗೆ ಕೊಂದವೆಗಡ. 'ಮಣ್ಣ್ ಮೂರಿ ಲಕ್ಕಂಡ್', 'ನೆಲನೇ ತುಚ್ಚು' ಇಂತಹ ಮಾತ್‌ಗಳ್‌ಲಿ ದೆವ್ವನ ನಡ್ಸಿ ಕೊಡೊವ್ ಮತ್ತೆ ಕಟ್ಟುವವರ ಮಾತ್‌ಲಿ ಹೆದ್ರ್‌ಸ್‌ವ ಮಾತ್‌ಗ ಕೇಳಿ ಬಂದದೆ. 2. ಜೆನಪದ ನ್ಯಾಯಾಂಗ ತ ಹೇಳ್ದು ಒಂದ್ ಫ್ಯೂಡಲ್ ಪೊದ್ದತಿನೂ ಹೌದು. ತುಳುನಾಡ್‌ಲಿ ಹಿಂದೆ 'ಪತ್ತೇರಿ ಕೂಟ'ದಂತ ಗ್ರಾಮಮಟ್ಟದ ನ್ಯಾಯತೀರ್ಮಾನ ಸಬೆಗ ಇದ್ದದ್‌ಕೆ ಬೂತಾಳಪಾಂಡ್ಯನ ಕಟ್ಟುಕಟ್ಟಲೆಗಂತೇಳಿ ತಿಳ್ದ್ ಬಂದದೆ. ಆಳೊವ್, ಶ್ರೀಮಂತರ್ ಊರ್‌ನ ಯಜಮಾನಿಕೆ ಇರೊವು, ಮೇಲ್ಜಾತಿಲಿರೊವ್ ತಮ್ಮ ನೆಲೆ ಒಳ್ಸಿಕಂಬ ಪ್ರಯತ್ನ ಮಾಡ್ವೆ. ಪರತಿ ಮಂಗಣೆಂತೇಳ್‌ವೆ. ಆರಾದನೆಲಿ 'ಪರ್‌ತಿ ತೇಳಿರೆ ದೆವ್ವ ಕಟ್ಟ್‌ವ ಪರವನ ಹೆಣ್ಣ್. ಅದರ ಪೊರ್‌ಲುಗೆ ಮೊರ್‌ಲಾಗಿ ಪರವನ ಉಪಾಯಲಿ ಕೊಂದ್‌ದ್ ಅವಳ ಪಡ್ಡಂಬಕೆ ಆಗದೆ, ತನ್ನ ಸರ್‌ವಸ್ವನ ಪರವನ ಕಾಟಕೆ ಹಾರಿ ಜೀವ ಕಳ್ಕಂಬ ದುರ್‌ದೈವದ ಕತೆನ ವಿವರ ಬೊಟ್ಟುವಾದಿ ಬಲ್ಲಾಳನ ಸಂದಿಲಿ ಬಂದದೆ. ಆಳುವವಂಗೆ ಊರ್‌ನ ಸಂಪತ್ತ್, ಹೆಣ್ಣ್, ಎಲ್ಲನೂ ಬೇಕಿದ್ದ ಕಾಲ ಒಂದಿತ್ತ್‌ಂತೇಳ್ವಂತದ್ ಜೆನಪದ ಸಾಹಿತ್ಯಲಿ ತಿಳ್ದ್ ಬಂದದೆ. ಆ ಕಾಲಲಿ ತ ಜೆನಂಗ ಕಾಯ ಬುಟ್ಟು ಮಾಯ ಸೇರ್‌ತಿದ್ದೊ. 3. ಉಳುವವನೇ ಹೊಲದೊಡೆಯ ತ ಕಾನೂನ್ ಬಾಕನ ದನಿ ಒಕ್ಕಲ್ ಕಾನೂನ್ ಬಂದ ಹೊತ್ತುಗೆ ಬೂಮಿನ ಮಾಲೀಕ ಒಕ್ಕಲಿಗಂಗೆ ಜಾಗೆ ಬುಟ್ಟು ಕೊಡುವ ಪ್ರಸಂಗನೂ ಬಾತ್. ದೆವ್ವ ಯಾರಿಗೆ ನ್ಯಾಯ ಕೊಟ್ಟಿರ್‌ದುಂತೇಳ್ದರ ನಾವ್‌ಗೆ ನೆನ್ಸಿಕಂಬಕು ಕಸ್ಟ. ದೆವ್ವನ ನಡ್ಸಂವ ಮತ್ತೆ ಕಟ್ಟಂವ ಇಬ್ಬೊರೂ ಒಟ್ಟಿಗೆ ಸೇರಿ ಊರ್‌ನ ತಿಳ್ದವರ ಮಾತ್ ಸುರುಗೆ ಮತ್ತೆ ದೆವ್ವದ ನಡೆಂತೇಳಿ ತೀರ್ಮಾನ ಮಾಡ್ದೊ. ಎಸ್ಟೋ ಒಕ್ಕ್‌ಲ್‌ಗಳ ಮನೆಗೆ ರಾತ್ರೋರಾತ್ರೆ ಕಿಚ್ಚಿ ಬಿದ್ದತ್. ಅವ್ ಊರ್ ಬುಟ್ಟು ಓಡ್ದೊ. ದೆವ್ವದ ವಿರುದ್ದ ಮತ್ತೆ ಊರ್‌ನ ಯಜಮಾನನ ವಿರುದ್ದ ಮಾತಾಡ್ದು ಕಸ್ಟ ಆಗಿತ್ತ್. 4. ದೆವ್ವದ ಆರಾದನೆನ ಒಂದ್ ಮನೋವೈಜ್ಞಾನಿಕ ಆಟನೂ ಹೌದು. ಕೆಲವೊಮ್ಮೆ ದೆವ್ವದ ಮೇಲೆ ತುಂಬಾ ಬಕ್ತಿ ಇದ್ದಲ್ಲಿ ಮೈಮಣಿಕೆ(ಮೈಮೇಲೆ ದರ್‌ಸನ ಬಾದು)

ಬಂದದೆ. ನ್ಯಾಯಪೊದ್ದತಿಂತೇಳ್ವ ಈ ವೆವಸ್ತೆಲಿ ಆಳ್ವಿಕೆ ಮಾಡವರ ವಿರೋದ ಮಾಡ್‌ವ ದೈರ್ಯ ದೇವ್ವಕೂ ಇರ್‌ದುಲೆ. ಕೆಲವ್ ಕಟಿಣ ಸಮಸ್ಯೆಗಳ, ಜಗಳಗಳ ಬುಡ್ಸಿಕೆ ನ್ಯಾಯ ಪಂಚಾತಿಕೆ ನಡ್ಸಿಕೆ ದೇವ್ವಕೂ ಕಸ್ಪ ಆದೆ. ತ ಹೊತ್ತುಲಿ ಕೆಲವೊಂದ್ ಉಪಾಯಗಳ ಬಳ್ಸಿಕಂಡದ್ ಉಟ್ಟುಂತೇಳ್ವ ಒಂದ್ ಸನ್ನಿವೇಸ ಉಟ್ಟು. ಒಮ್ಮೆ ದೇವ್ವ ಬಾರಿ ತಾಕತ್ ಇರ್‌ವ ಒಬ್ಬನ ವಿರುದ್ದ ತೀರ್ಪು ಕೊಟ್ಟತ್. ಅಂವ ದೇವ್ವಕೆ ಎದ್ರ ನಿತ್ತತ್, ಬೊಯ್ತ್, ದೇವ್ವಕೆ ಹೊಡೆಕೂ ಬಾತ್. ಏನ್ ಮಾಡ್ರೂ, ಎಸ್ಟ್ ಬೇಡಿಕಂಡರೂ ದೇವ್ವ ಎದ್ದತ್ಲೆ, ಮತ್ತೆ ಬೊಯ್ದುವ ಕ್ಷಮೆ ಕೇಳಿ ತೊಪ್ಪ ಕಾಣಿಕೆ ಕೊಟ್ಟ ಮೇಲೆ ದೇವ್ವ ಮೈಮಣಿಕೆ ಬಂದ್ ಎದ್ದ್ ನಿಂತತ್. 5. ಅರೆಬಾಸೆ ತುಳುನಾಡ್‌ಲಿ ದೇವ್ವಗಳ ಸತ್ಯಗ, ಮಾಯಗಂತ ಕರ್‌ದವೆ. ನಂಗೆ ನಸ್ಪ ಆವ್ವು, ಕಸ್ಪ ಆವ್ವು, ಅನ್ಯಾಯ ಆವ್ವುಂತೇಳ್ಕನ 'ಇಂತ ದೇವ್ವ ನೋಡ್ದಂಗೆ ಇರ್‌ಲಿ 'ತ ಹೆಸ್ರೆತ್ತಿ ಸಾಪ ಇಸುದು ಇಂದ್‌ಗೂ ಉಟ್ಟು. ದೇವ್ವನೇ ಸತ್ಯ ತ ಹೇಳಿ ಜೆನಪದರ್ ನಂಬ್ಯೊಳ. ದೇವ್ವದ ಚಾಕರಿ ಮಾಡೊವುಕೆ, ದೇವ್ವ ಕಟ್ಟೊವುಕೆ ಜೋಡ್‌ಂದ ಹೊಡ್ದರೆ, ಅವಮಾನ ಮಾಡ್ರೆ ಹೊಡ್ಸಿಕೊಂಡವ್ ಮುಂದೆ ದೇವ್ವದ ಕೆಲ್ಸ ಮಾಡಿಕೆ ಆಗದ್. ಅದ್ಕೆ ಕಾರಣ ಇಸ್ಟೆ ದೇವ್ವರಾದನೆ ತ ಹೇಳ್ದ್ ಸುದ್ದಲಿ ನಡಿವ ಆಚರಣೆ. ದೇವ್ವ ಕಟ್ಟ್‌ವವುಕೆ, ದರ್ಮ ನಡಾವಳಿ ಮಾಡ್ಸುವವುಕೆ ಸಮಾಜಲಿ ದೊಡ್ಡ ಜಾಗೆ ಕೊಟ್ಟೊಳ. (ವಿ.ಬಿ.)

**ಕೋಲ :** ದೇವ್ವಗಳ ಪ್ರದರ್‌ಸನ ರೂಪನ ಕೋಲ ತನೂ ವಾಡಿಕೆಲಿ ಕರ್‌ದವೆ. ಇದ್ ನೇಮ ರೂಪದ ಆಚರಣೆಂದ ಕಾಂಬಕೆ, ನಡಿವ ಜಾಗೆ ಸಮ್ಮಂದಲಿ–ಕೆಳಸ್ತರಲಿ ಇದ್ದದೆ. ಉದಾರಣೆಗೆ ಮಾಡಲಿ ಕಲ್ಕುಡ ದೇವ್ವದ ಆಚರಣೆ ಪ್ರದರ್ಶನ ರೂಪಲಿ ನಡ್ದರೆ ಅದರ ನೇಮ ತೇಳಿದ್ ಕರ್‌ದವೆ. ಅದೇ ಕಲ್ಕುಡ ನೇಮ ಮನೆ ಜಾಲ್‌ಲಿ ಕಲ್ಲುರ್ಟಿನೊಟ್ಟಿಗೆ ನಡ್ದರೆ ಕಲ್ಕುಡ–ಕಲ್ಲುರ್ಟಿ ಕೋಲ ತೇಳಿದ್ ಕರ್‌ದವೆ. ಜೆನರ್‌ಲಿ ಈ ಕೋಲ ಕಲ್ಪನೆ,ದೇವ್ವಕೆ ಕೋಲ ಕೊಡ್ದುಕೆ ಕೋಲ ಕಟ್ಟುವೆ. ದೇವ್ವಕೆ ಹೇಳ್ದ ಕೋಲ್' 'ಕಾಲಕ್ಕೆ ತಕ್ಕ ಕೋಲ' ಎಂತೆಲ್ಲ ನುಡಿಕಟ್ಟ್‌ಗ ಪದ ಪರಿಕಲ್ಪನೆಗ ಬಳಕೆಯಾದವೆ. 'ಕೋಲ' ಪದ ದ್ರಾವಿಡ ಬಾಸಾ ವರ್ಗಲಿ ಸಮಾನ ಅರ್‌ತಲಿ ಬಳಕೆ ಆದೆ.ಮೊಯಿಂಸರ ನಡುಲಿ ಅಲೌಕಿಕ ದೇವ್ವನ ವಿಸೇಸ ಉಡುಗೆ–ತೊಡುಗೆ, ವಿಸೇಸ ಕಾಲ–ಪರಿಸರಲಿ ಕಣ್ಣ್‌ಗೆ ಕಾಂಬ ಹಾಂಗೆ ಕರ್‌ದ್‌ದ್ ಸಮಾದಾನ ಮಾಡ್‌ವ ಬಗೆನ 'ಕೋಲ' ಕಲ್ಪನೆ ತೋರ್‌ಸಿ ಕೊಟ್ಟದೆ. ಮೋರೆಗೆ ಬಣ್ಣ, ಸೊಂಟ, ಬೆನ್ನಿಗೆ ಅಣಿ, ತಿರಿ, ತಲೆಗೆ ತಲೆ ಪಟ್ಟೊ, ಕೈಗೆ ದಂಡೆಕಾಜಿ, ಮುಕವಾಡ, ಕೈಲಿ ಆಯುದನ ಹಿಡ್ಕಂಡ್ ಮಾಡ್‌ವ ಕೊಣ್‌ತ ಒಟ್ಟಾಗಿ ಕೋಲದ ಅರ್‌ತನ ಪಡ್ದದೆ. ಕೋಲಲಿ ಕೊಡಿ ಏರ್ಸುವ, ಕೋಳಿ ಗೂಂಟ ಹಾಕ್ವ, ಕೊಡ್ಯಡಿ ಹಾಕುವ, ಮುಂಡ್ಯೆ ಮಾಡ್‌ವ, ಓಲಸರಿ ಹೋವ, ಬಂಡಾರ ತರ್‌ವ–ಕರ್‌ಸುವ ಕ್ರಮಂಗ ಇರದೆ ಸರಳ ರೂಪಲಿ ಮಾಡ್‌ವ ದೇವ್ವನ ಪ್ರದರ್ಶನ ರೂಪನೆ ಕೋಲ. (ಪಿ.ಕೆ.)

**ಬಿರ್‌ಮೆರ್ ಮತ್ತೆ ಉರವ ದೇವ್ವಗ :** ಬಿರ್‌ಮೆರ್ ಮತ್ತೆ ಉರವ ತುಳುನಾಡ್‌ನ ದೇವ್ವಗ. ಈ ಕೋಲಲಿ ವಿಸೇಸ ಅಲಂಕಾರಗ ಇರ್‌ದುಲೆ. ಪೂಕರೆಲಿ ಬಂಗಾರದ ಅಜ್ಜಿನ (ಹೆಣ್ಣ್‌ದೇವ್ವ, ಸ್ತ್ರೀ ಬೂತ) ಕೋಲ ವಿಸೇಸ ಆಗಿ ಇದ್ದದೆ.. ಈ ಕೋಲಲಿ ಕುದುರೆ ಮೇಲೆ ಪೂಕರೆ, ಬಂಗಾರದ ಪೆಟ್ಟಿಗೆ ತಾವ ಹಾಂಗೆ ಅನುಕರಣೆನ ಮಾಡ್‌ವೆ. ಪೂಕರೆನ ಬಿರಣ, ಉರವ, ಎತ್ತ್, ಕುದುರೆ ಕೋಲಲಿ ಮೊಯಿಂಸ, ಪ್ರಾಣಿನ ನಡುಲಿ ಇರ್‌ವ ಸಮ್ಮಂದನ ನೆಂಪುಸಿಕಂಬಾಂಗೆ ಕಂಡದೆ.

ಸರಿಸುಮಾರು ಮದ್ಯಾನದ ಹೊತ್ತುಗೆ ದೇವ್ವಗಳ ಕೋಲ ನಡ್ದಾದ ಮೇಲೆ ಪೂಕರೆ ನೆಡುವ ಕಾರ್ಯ ಮಾಡ್‌ವೆ. ಸಿಂಗಾರ ಮಾಡ್ದ ಪೂಕರೆಗೆ ಗುತ್ತು ಮನೆನ ಯಜಮಾನ, ಊರು ಪ್ರಮುಕರ್. ಊರ್ ಬೋಂಟ್ರ, ಊರ ಮೊಡ್ಯಾಳ, ಕೆಲಸಿಗ, ಆಚಾರಿ, ಕಾಪಡ ಹಿಂಗೆ ಸಮಸ್ತರ್ ಅಕ್ಕಿ ಹಾಕಿ ಹಾಲೊಯ್ದ್ ದೇವ್ವನ ಪ್ರಾರ್‌ತ್‌ಸ್‌ವೆ. ಬಂಡಿ ಸಹಿತ ನಡಿವ ಪೂಕರೆ ಆದರೆ ಎಲ್ಲವು ಸೇರಿ ಗದ್ದೆನ ನಡುಲಿ ಎಳ್ದ್ ತಂದವೆ. ಕಂಬ ರೂಪಲಿ ಇದ್ದರೆ ಹೊತ್ತ್‌ಕಂಡೋದವೆ. ಪೂಕರೆನ ನಡುಗೆ ತಾಕನ ಎದುರಲಿ ಊರ್ ಮೊಡ್ಯಾಳ ಬೆದ್‌ರ್‌ನ ಗೊಟ್ಟೆಲಿ ಹಾಲ್ ಹೊಯ್ಕಂಡ್ ಹೋದೆ.ಇದ್ ನೋಡಿಕೆ ದಿಬ್ಬಣ ಮೆರವಣಿಗೆನ ಹಾಂಗಿದ್ದದೆ. ಪೂಕರೆ ಗದ್ದೆನ ನಡುಲಿ ನೆಟ್ಟ್ ಅದರ ಕೊಡಿ ಯಾವ ಕಡೆ ವಾಲಿಕಂಡುಟ್ಟುತ ನೋಡ್ವೆ ಅದ್ ವಾಲ್ದ ಪುಡೆಗೆ ದಿಕ್ಕ್‌ಲಿ ಗದ್ದೆಲಿ ಪಸಲ್ ಲಾಯ್ಕ್ ಬೆಳ್ದೆದೆಂತ ಮಾತಾಡಿಕಂಡವೆ.

ಪೂಕರೆ ಆಚರಣೆಲಿ ಬಂಗಾರದ ಪೆಟ್ಟಿಗೆ ಮೆರವಣಿಗೆನ ಅನುಕರಣೆ, ಪೂಕರೆನ ಸಿಂಗಾರನ ಅಣ್ಣಣ ಹೂಂದ ಮಾಡ್ದು, ಪೂಕರೆನ ಸುರುನ ಗೆಲ್ಲ್‌ನ ತೊಟ್ಟಿಲ್ ಅಂಕಣತ ಹೇಳ್ದು, ಆಚರಣೆನ 'ಗದ್ದೆನ ಮೊದ್‌ವೆ'ತ ಕರ್‌ಯೊದು, ಮೊದ್‌ವೆ ಆದೊವ್ ಗದ್ದೆಗಿಳ್ದ್ ಅಕ್ಕಿ ಹಂರ್‌ಡಿರೆ ಮಕ್ಕ ಆದವೆಂತೇಳ್ದು, ನಾಗರಹಾವು ಪೂಕರೆ ಗದ್ದೆಲಿ ವಾಸ ಇದ್ದ್ ಬೆಳೆ ಕಾಪಾಡ್‌ದೆತ ಹೇಳ್ದು, ಗದ್ದೆನ ಯಜಮಾನ ನಾಗ ತೇಳ್ದು, ನಾಗ ಪುರುಸ ಸಂಕೇತ ಆಗಿ, ನೆಲದ ಚಿನ್ನೆ ಆಗಿ ಕಂಡದೆ, ಹೆಣ್ಣ್–ಗಂಡ್ ಕೂಡ್ದು ಸೃಸ್ಟಿನಮೂಲಕೆ ಕಾರಣ ಆದೆ. ಮೊದ್‌ವೆ ಇದರ ಕಾನೂನು ಪ್ರಕಾರ ಮಾಡ್‌ವ ಸಾಮಾಜಿಕ ಕಾರ್‌ಯ. ಪೂಕರೆಲಿ ಇದೆಲ್ಲದರ ಸೇರ್‌ಸಿ ನಾಗಾರಾದನೆನೂ, ಪೂಕರೆ ನೆಡ್ದರ್‌ಂದಾಗಿ ಪಲವಂತಿಕೆನ ಬೇಡಿಕಂಬೊದು ಗೊತ್ತಾದೆ.

**ಸಿರಿ ಆರಾದನೆ :** ಸಿರಿಪಾಡ್ದನ ಕ್ರಿಸಿಕರಾದ ಒಂದ್ ಕುಟುಂಬ ಒಂದರ ನಾಕ್ ತಲೆಮಾರುಗಳ ಏಳುಬೀಳ್‌ನ ವಿವರ್‌ಸುವ ಉದ್ದದ ಜೆನಪದ ಮಹಾಕಾವ್ಯ ಸಿರಿ ಪಾಡ್ದನ ಮಾತೃವಂಸದ ಕುಟುಂಬ ವೆವಸ್ತೆನ ರಕ್ತ ಬಾಂದವ್ಯ ಹಾಂಗೆ ಆ ಹೆಣ್ಮಕ್ಕಳ ಸ್ತಾನಮಾನಗಳ ಬಗ್ಗೆ ಹೇಳ್‌ದೆ. ಮಾತೃವಂಶೀಯತೆನ ಸಮರ್‌ತನೆನ ಕಟ್ಟುದರೊಟ್ಟಿಗೆ ಗಂಡ್‌ನ ಪ್ರಯತ್ನನ ಇಲ್ಲೆಂತ ಮಾಡ್‌ದೆ. ಅಯ್ಯೆನ ಮೂಲದ ವಂಸದ ಸಂಸ್ಕೃತಿಯೊಂದರ ಮೇಲೆ ಪಿತೃವಂಸದ ವೆವಸ್ತೆನ 'ದಾಳಿ' ಹಾಂಗೆ

ಅವರ ನಡ್‌ದ ಬಂಡಾಯನ ದಾಕಲ್‌ಸಿದೆ. ಇಂತಹ ಬಂಡಾಯಲಿ ಹೆಬ್ಬಳ ಅಂತಸ್ಸತ್ವ ಹಾಂಗೆ ಸತ್ಯಂದ ಪುರುಸ ಪ್ರದಾನ ವೆವಸ್ತೆನ ಬಂಜೆನ ಹಾಂಗೆ ಹೊಸ ಮೌಲ್ಯನ ಕಟ್ಟುದರ್‌ಲಿ ತುಡಿತ ಇರ್‌ದರ ಹೇಳ್‌ದೆ.

ಸಿರಿನ ಸತ್ಯ ಮತ್ತೆ ಪರಿಶುದ್ದತೆಗೆ ಸಿಕ್ಕುವ ಗೆಲುವು ಹಂಗೆನೆ ಗಂಡ್‌ನ ಅನೈತಿಕ ನಡವಳ್‌ಕೆಗೆ ಸಿಕ್ಕುವ ಕೆಟ್ಟ ಪರಿಣಾಮಗಳ ಬಗ್ಗೆ ಸಿರಿ ಪಾಡ್ದನ ವಿವರ್‌ಸಿದೆ. ಇದ್ ತುಳ್‌ವರ ಬೊದ್ಕ್‌ನ ನೀತಿಸಂಹಿತೆನೂ ಹೌದ್. ಹಿಂಗಾಗಿ ಬಂಟರ ಮೂಲ ಹನ್ನೊಂದು ಗ್ರಹೀತಳಾದ ಸಿರಿ ಒಟ್ಟಿಗೆ ಬಟ್ರ್‌ಗಳ ಬುಟ್ಟು ಮತ್ತೆಲ್ಲಾ ಮಾತೃವಂಸದ ಕುಟುಂಬಗಳ ಹೆಣ್ಣ್ ಮಕ್ಕ ತಮ್ಮ ಸಮ್ಮಂದಗಳ ಕಂಡ್‌ಕಂಡವೆ. ಈ ದ್ರಿಸ್ಟಿಂದ ನೋಡ್‌ರೆ ಸಿರಿ ಹೆಂಗ್‌ಸರ ಸ್ವಾಬಿಮಾನದ ಪ್ರತೀಕ, ಹೆಣ್ಣ್ ಮಕ್ಕಳ ಹಕ್ಕ್‌ನ ಹುಡುಕಾಟದ ಕನ್ನಡಿ.

**ಸಿರಿ ಪಾಡ್ದನ ಮತ್ತೆ ಪ್ರದರ್‌ಸನ :** ಸಿರಿ ಪಾಡ್ದನ ಮತ್ತೆ ಅದರ ಪ್ರದರ್‌ಸನದ ಹೊತ್ತುನ ಒಂದ್ ದೊಡ್ಡ ಪಟ್ಯದ ರೂಪಲಿ ಇಡಿಯಾಗಿ ಗಣನೆಗೆ ತಕ್ಕಂಡ್ ಅರ್‌ತ ಮಾಡಿಕಣಕಾದೆ. ಏಕೆಂತೇಳ್ರೆ ಸಿರಿ ಪಾಡ್ದನದ ಪಟ್ಯ ರೂಪ ಸಿರಿ ಆಚರಣೆನ ಇಡೀ ಸ್ವರೂಪನ ನಿರ್‌ದರಿಸುವಲ್ಲಿ ಮುಕ್ಯ ಪಾತ್ರ ವಯ್‌ಸಿದೆ, ಹಂಗೆನೆ ಆಚರಣೆ ಮಾಡ್ವ ಹೊತ್ತುಲಿ ಪಾಡ್ದನದ ಕತೆ ರೂಪ ಹುಟ್ಟಿಕಂಡ್ ಸಿರಿಪಂತದ ಪರಂಪರೆನ ಒಳ್ಸಿಕಂಡ್ ಬಾವಂತ ಕೆಲ್ಸ ಮಾಡ್ದೆ.

ಸಿರಿಪಾಡ್ದನನ ಎರ್‌ಡ್ ಹೊತ್ತ್‌ಲಿ ಹೇಳ್‌ವೆ. ಒಂದ್ ಗದ್ದೆ ನಾಟಿ ಮಾಡಿಕನ ಇನ್ನೊಂದ್ ಸಿರಿ ಜಾತ್ರೆಲಿ ನಾಗಗದ್ದೆಲಿ ಸಿರಿ ಬಾವ ಹೆಣ್ಮಕ ಹೇಳ್‌ವೆ. ಪಾಡ್ದನದ ಸಾಲ್‌ನ ಒಂದ್ ಹಾಡ್‌ಗಾರ್‌ತಿ ಸುರುಗೆ ಹೇಳ್ದೆ ಮತ್ತೆ ಒಳ್ದವ್ ಅದರ ಹಂಗೆನೆ ಹೇಳ್‌ವೆ. ಮುಟ್ಟಾದ ಸೂತಕದ ಸಂದರ್ಬಗಳ ಕೆಟ್ಟದ್ ತ ಹೇಳ್ದರ್‌ಂದ ಇಂತ ಸಂದರ್ಬೊಲಿ ಪಾಡ್ದನ ಹೇಳಿಕೆ ನಿಸೇದವುಟ್ಟು. ಹಾಡ್‌ಗಾರರ್ ಪಾಡ್ದನಲಿ ಬಾವ ಕೆಟ್ಟ ಸಂದರ್ಬಗಳ ಗದ್ದೆಲಿ ನಾಟಿ ಮಾಡಿಕನ ಹಾಡ್ಡುಲೆ, ಇದರ ಹಾಡ್ರೆ ನಾವ್ ಆವೇಸಕೆ ಒಳಗಾದವೆ ತ ಹೇಳ್‌ವ ನಂಬಿಕೆ ಅವರ್‌ಲಿಟ್ಟು.



ಸಿರಿ

ಜಾತ್ರೆನ ಸಂದರ್ಬೊಲಿ ಸಿರಿನ ಬಕ್ತರ್ ಪಾಡ್ದಾನ ಹಾಡ್ವೆ. ಸಿರಿ ಬಳಗದ ಸದಸ್ಯರ್ ಹಾಡಿಕನ ಸೃಸ್ಟಿಯಾವ ಪಟ್ಯ ಸಂವಾದ ರೂಪಲ್ಲಿದ್ದದೆ. ಈ ಪಟ್ಯ ಒಂದ್ ನಿರ್‌ದಿಸ್ಟ ಕ್ರಮಲಿ ಇರದೆ ಕೆಲವ್ ನಿರ್‌ದಿಸ್ಟ ಸನ್ನಿವೇಸಕೆ ಸಮ್ಮಂದ ಪಟ್ಟಂಗೆ ಇದ್ದದೆ. ಸಿರಿ ಬಕ್ತರ್ ಆಯಾ ಪಾತ್ರದಾರಿಗಳಾಗಿ ಸಂವಾದ ಮಾಡ್ದರ್‌ಂದ ಅದ್ 'ನಾಟಕ' ರೂಪ ಪಡ್ಕಂದೆ. ಇಲ್ಲಿ ಯಾದ್ ಅದಿಕೃತ ಪಟ್ಯ ತ ಹೇಳ್‌ವ ಸಂದರ್ಬ ಬಾಕನ ಸಿರಿ ಜಾತ್ರೆ ಸಂದರ್ಬನೇ ಅದಿಕೃತ ತ ಹೇಳ್‌ವೆ. ಆದರೆ ಗದ್ದೆಲಿ ನಾಟಿ ಮಾಡ್‌ವ ಸಂದರ್ಬನೂ ಒಂದ್ ಪ್ರದರ್‌ಶನ ಆದ್ದರ್‌ಂದ ಇದನ್ನೂ ಅದಿಕೃತ ತ ತಿಳ್ಕಂಕಾದೆ. ಹಿಂಗಾಗಿ ಇದ್ ಎರ್‌ಡೂ ಕೂಡ ಬೇರೆ ಬೇರೆ ಸಂದರ್ಬದ ಬೇರೆಬೇರೆ ವಿಸಯಗ ತ ಬಾವಿಸುದ್ ಹೆಚ್ಚ್ ಸರಿ ಅನ್ನಿದೆ.

**ಸಿರಿ ಪಾಡ್ದನದ ಕತೆ ಬಾಗ :** ಲಂಕಲೋಕನಾಡ್‌ನ ಸತ್ಯನಾಪುರಲಿ ಬೆರ್‌ಮ ಆಳ್ವ ತ ಹೇಳವಂವ ಒಬ್ಬ ಇತ್ತ್. ಎಲ್ಲವೂ ಅಂವನ 'ಅಜ್ಜೆರ್' (ಅಜ್ಜ) ತ ಕರೆತಿದ್ದ. ಅಂವ ಸಿರಿವಂತ ಆಗಿದ್ದರೂ ಅವಂಗೆ ಮಕ್ಕ ಇಲ್ಲೆಂತೇಳ್‌ವ ಕೊರ್‌ಗ್ ಇತ್ತ್. ಒಂದ್ ದಿನ ಅಂವನ ಮನೆದೇವ್ರ್ ಬೆರ್‌ಮೆರ್ ಬ್ರಾಹ್ಮಣ ಬೇಡವನ ರೂಪಲಿ ಬಂದ್ ಬಿಕ್ಸೆ ಬೇಡ್ದೆ. ಬೆರ್‌ಮ ಆಳ್ವನ ಬೇಜಾರಿಗೆ ಕಾರಣ ಕೇಳ್ದೆ. ಆಲಡೆ ಗುಡಿ ಹಾಳ್ ಬಿದ್ದುಟ್ಟ್ ಅದರ ಜೀರ್ಣೋದ್ದಾರ ಮಾಡ್ರೆ ಬೆರ್‌ಮೆರ್ ಮಕ್ಕಳ ಬಾಗ್ಯ ಕೊಟ್ಟದೆ ತ ಹೇಳಿ ಮಾಯ ಆದೆ. ಅದ್ ಹೇಳ್ದಂಗೆ ಆಳ್ವ, ಆಲಡೆನ ಗುಡಿನ ಜೀರ್ಣ ಉದ್ದಾರ ಮಾಡ್ತ್ ಸುಗ್ಗಿ ಹುಣ್ಣಿಮೆ ದಿನ ಜಾತ್ರೆನೂ ಆತ್. ಅಲ್ಲಿನ ಪೂಜಾರಿ ಪ್ರಸಾದ ರೂಪಲಿ ಕೊಟ್ಟ ಸಿಂಗಾರದ ಹೂ ಗಂದದ ತುಂಡುನ ಅರಮನೆಗೆ ತಂದ್ ಅದರ ತನ್ನ ಕಲ್ಪ ಕಲೆಬಿಯೊಳಗೆ ಇಸಿದೆ. ಅಲ್ಲಿ ಒರದ ಹೂ ಬಿಚ್ಚಿಕಂಡ್ ಅದ್ರ್‌ಲಿ ಹೆಣ್ಣ್ ಕೂಸ್ ಕಾಣ್ಸಿಕಂಡದೆ. ಸತ್ಯದ ಕೂಸ್ ಆದರ್‌ಂದ ಆಳ್ವ ಆ ಕೂಸ್‌ಗೆ ಸತ್ಯಮಾಯಲೋಕದ ಸಿರಿ ತ ಹೆಸ್ರ್ ಇಸಿದೆ.

ಸಿರಿ ಬೆಳ್ದ್ ದೊಡ್ಡದಾದ ಮೇಲೆ ಬರಗುತ್ತುನ ಶಂಕರು ಅಬ್ಬರರ ಮಜ್ಜ ಕಾಂತಪೂಂಜೆನೊಟ್ಟಿಗೆ ಸಿರಿನ ಮೊದ್ವೆ ನಡ್ದದೆ. ಸಿರಿ ಬೊಸ್ರಾದೆ. ಸತ್ಯನಾಪುರದ ಅರಮನೆಲಿ' 'ಬೊಯ್ಕೆಮೊದ್ವೆ'ಗೆ ಏರ್ಪಾಡ್ ನಡ್ದದೆ. ಬೊಸ್ರುಗೆ ಕೊಡಕಾದ ಬೊಯ್ಕೆ ಸೀರೆನ ಕಾಂತುಪೂಂಜೆನ ಸೂಳೆ ಸಿದ್ದು ಉಟ್ಟು ಅದರ ಮೊಡಿನ ಕೆಡ್ಸಿದೆ. ಬೊಯ್ಕೆ ದಿನ ಆ ಸೀರೆನ ಸಿರಿ ಉಡ್ದುಲೆ ತ ಹೇಳ್ದೆ. ತಿಂಗಳ್ ತುಂಬಿ ಸಿರಿ ಗಂಡ್ ಕೂಸುನ ಹೆತ್ತದೆ. ಕೂಸುಗೆ ಕುಮಾರ ತ ಹೇಳಿ ಹೆಸ್ರ್ ಇಸಿದೆ. ಹುಟ್ಟಿದ ಕೂಸುನ ನೋಡಿಕೆ ಕಾಂತುಪೂಂಜ ಸತ್ಯನಾಪುರಕ್ಕೆ ಬಾದ್ಲೆ.

ಕೂಸು ಹುಟ್ಟಿದ ಗಳ್ಗೆ ನೋಡ್ದ ಜೋಯಿಸರ್ ಕೂಸುನಮೋರೆ ನೋಡ್ದವಂಗೆ ಸಾವು, ಅಮ್ಮಂಗೆ ದೇಶಾಂತರಯೋಗ, ಅಪ್ಪಂಗೆ ದಿನಕ್ಕೊಂದ್ ಬುದ್ದಿ ತ ಹೇಳ್ದೊ. ಒಂದ್ ದಿನ ಮನೆಲಿ ಯಾರ್ ಇಲ್ಲದಿರ್‌ಕನ ತೊಟ್ಟಿಲ್‌ಲಿ ಕೂಸು ಮರ್ಟದೆ. ಮೊಯಿಂಸ್ ತಡೆದೆ ಅಜ್ಜ ಕೂಸುನ ಎತ್ತಿಕಂಡವೆ. ಅಜ್ಜ ಅಲ್ಲೆ ಬಿದ್ದ್ ಸತ್ತವೆ. ಅಪ್ಪನ





ಸಂಸ್ಕಾರ ಮಾಡಿಕೆ ಬರೊಕುಂತೇಳಿ ಸಿರಿ ಕಾಂತುಪೂಂಜಂಗೆ ಕಾಗದ ಬರ್‌ದದೆ. ಅಂವ ಬಾಕೆ ಒಪ್ಪುದುಲೆ ಅಸ್ವರ್‌ಲಿ ಅಬ್ಬರ ಕುಟುಂಬದ ನೆಂಟ ಸೂಡದ ಶಂಕರಾಳ ಸತ್ಯನಾಪುರದ ಅರಮನೆನ ಅದಿಕಾರ ನಂದ್ ತ ಹೇಳಿ ಹಕ್ಕ್ ಸಾದ್‌ಸಿಕೆ ಬಂದದೆ.

ಆಗ ಸಿರಿ ಆಳ್ವನ ಮಗಳಾಗಿ ನಾ ಇರ್‌ಕನ ನಂಗಲ್ಲದೆ ಆಳ್ವರ ಮನೆ ಅದಿಕಾರ ಬೇರೆಯವುಕೆ ಬುಟ್ಟು ಕೊಡಿಕಿಲೆ ತ ಹೇಳ್ದೆ. ತಾನೇ ಸೊತ ಆಳ್ವರ ಹೆಣ ಹೊತ್ತು ಸಂಸ್ಕಾರ ಮಾಡ್ದೆ.

ಕಾಂತುಪೂಂಜ ಮತ್ತೆ ಶಂಕರ ಆಳ್ವ ಒಳಸಂಚ್ ಮಾಡಿ ಅರಮನೆನ ಅದಿಕಾರದ ಪ್ರಶ್ನೆ ಮುಂದೆ ಇಸಿ ಪಂಚಾತಿಕೆಗೆ ಸೇರ್‌ಸುವೆ. ಸಿರಿನ ಪಂಚಾತಿಕೆ ಕಟ್ಟೆಗೆ ಕರ್‌ಸುವೆ. ಗಂಡ್‌ಸರ್ ಆಳಿಕಂಡ್ ಬಂದ ಸಿಂಹಾಸನಲಿ ಹೆಂಗ್‌ಸರಿಗೆ ಅದಿಕಾರ ಇಲ್ಲೆಂತೇಳಿ ಪಂಚಾತಿಕೆಲಿ ಹೇಳ್ವೆ. ಸಿರಿಗೆ ಇದರ್‌ಂದ ಅವಮಾನ ಆಗಿ ಕಟ್ಟೆಂದ ಇಳ್ದ್ ಹೋದೆ. "ಸತ್ಯನಾಪುರದ ನೆಲ, ಬಂಜರ್ ಬೀಳಲಿ, ಅರಮನೆ ಸುಟ್ಟು ಹೋಗಲಿ' ತ ಶಾಪ ಹಾಕಿ ಕುಮಾರ ಮತ್ತೆ ಕೆಲಸದ ದಾರುನೊಟ್ಟಿಗೆ ಬಸರೂರ್ ಗುತ್ತುಗೆ ಬಂದದೆ. ಅರಮನೆನ ಇಜ್ಜಲ್‌ಲಿ ನಿತ್ತ್ ಗಂಡಂಗೆ ವಿಚ್ಛೇದನ ಹೇಳ್ದೆ. ಇನ್ನ್ ಮುಂದೆಗಾರ್ ದುಸ್ಪ ಗಂಡನೊಟ್ಟಿಗೆ ಬಾಳ್‌ವೆ ನಡ್ಸುವ ಹೆಣ್ಣ್‌ನ ಗೋಳ್ ತಪ್ಪೊಕು. ತ ಹೆಣ್ಣ್‌ಗೆ ಇನ್ನೊಂದ್ ಮೊದ್ವೆ ಆವ ನಿಯಮ ಇಂದ್‌ಂದಲೇ ಬರೊಕು, ಒಮ್ಮೆ ವಿದವೆ ಆದ್ ಮತ್ತೊಮ್ಮೆ ಮುತ್ತೈದೆ ಆಗ್‌ವ ಬಾಗ್ಯ ಬರೊಕು ತ ಹೇಳಿ ಹೊರಗೆ ಹೋದೆ. ಮುಂದೆ ಸಿರಿ ತೆಂಕನಾಡ್‌ನತ್ತ ಹೋಕನ ಇರ್‌ಕನ ಇಬ್ಬೊರ್ ಕ್ಷತ್ರಿಯ ಕರಿಯ ಕಾಳಿಂಗ ಜೋಳೆಯ ದೇಸಿಂಗ ಎದ್ರಾದವೆ. 'ನಿನ್ನ ತಂಗೆನಂಗೆ ನೋಡಿಕಂಡವೆ ನಮ್ಮ ಅರಮನೆಗೆ ಬಾ ತ ಕರ್‌ದವೆ. ಸಿರಿ ಅದ್ಕೆ ಒಪ್ಪಿದೆ. ಆಗ ಸಿರಿನ ಮಜ್ಜ ಕುಮಾರ ಎದ್ದ್ ಕುದ್ದ್ ಸಿರಿನ ಬೊದ್ಕ್‌ನ ಮುಂದೆನ ಗಟನೆನ ಎಲ್ಲಾ ಹೇಳ್ದೆ. 'ಒಬ್ಬ ಅಪ್ಪಂಗೆ ಹುಟ್ಟಿ ಇನ್ನೊಬ್ಬನ ಅಪ್ಪ ತ ಕರೆಕಿಲೆ' ತ ಹೇಳ್ದೆ. ಕುಮಾರ ಮತ್ತೆ ದಾರುನ ಇಚ್ಚೆನಂಗೆ ಸಿರಿ ಅವರಿಬ್ಬರ ಮಾಯ ಮಾಡ್ದೆ.

ಆ ಅಣ್ಣಂದರ್ ಪಲ್ಲಕ್ಕಿಲಿ ಸಿರಿನ ಅವರ ಅರಮನೆಗೆ ಕರ್‌ಕಂಡ್ ಹೋದವೆ. ಸಿರಿನ ಕೊಟ್ಟವಾಡಿ ಕೊಡರಾಳ್ವಂಗೆ ಕೊಟ್ಟ್ ಮೊದ್ವೆ ಮಾಡ್ವೆ. ಕೊಡರಾಳ್ವಂಗೆ ಈಗಾಗಲೇ ಮೊದ್ವೆ ಆಗಿತ್ತ್. ಅಂವನ ಹೆಣ್ಣ್ ಸಾಮು ಆಳ್ವದಿಗೆ ಗಂಡನ ಎರ್‌ಡ್‌ನೆ ಮೊದುವೆನ ವಿರೋದ ಮಾಡ್‌ದೆ. ಇಜ್ಜಲ್‌ಲಿ ದೀಪ ಹೊತ್ತಿಸಿಸಿ 'ಈ ದೀಪ ಕೆಡಿಕೆಬೊತ್ತು ಸಿರಿ ನೋಡ್ದಂಗೆ ಅದರ ಕಣ್ಣ್ ಕುರುಡಾಗಲಿ' ತ ಶಾಪ ಹಾಕಿ ತೊವ್ರ್ ಮನೆಗೆ ಹೊರ್ಟ್‌ಹೋದೆ. ಸಾಮು ಆಳ್ವಾದಿ ಬಂದ್ ತಂಗೆ ತ ಕೈ ಹಿಡ್ದ್ ಮನೆಒಳಗೆ ಕರ್‌ಕಂಡ್ ಹೋದೆ. 'ನಾ ಬಾದ್ಲೆ ತ ಸಿರಿ ಹೇಳ್ದೆ. ಹಂಗೆ ಸಾಮು ಆಳ್ವಾದಿ ಸಿರಿನ ಸೌತಿ ಆಗಿ ಸ್ವೀಕರ್‌ಸಿ ಮನೆಗೆ ಸ್ವಾಗತಿಸಿದೆ.

ಅಲ್ಲಿ ಸಿರಿ ಬೊಸ್‌ರಿ ಆದೆ, ಸಾಮು ಆದಿನ ತೊವ್‌ರ್ ಮನೆಲಿ ಬೊಸ್ರಿಗೆ ಬೊಯ್ಕೆ ನಡ್ದದೆ. ಬೊಯ್ಕೆ ಮುಗ್‌ಸಿ ಅಲ್ಲಿಂದ ಬಾಕನ ದಾರಿ ನಡುಲಿ ಸಿರಿಗೆ ಹೊಟ್ಟೆಬೇನೆ ಬಂದದೆ. ಹೆರ್‌ಗೆನೂ ಆದೆ. ಆಕನ ಕುಮಾರ ಬಡ ಬಟ್ಟನ ವೇಸಲಿ ಕಾಣ್‌ಸಿಕಂಡ್ ಪ್ರವಾಹನ ಸೃಷ್ಟಿ ಮಾಡ್‌ದೆ. ಹುಟ್ಟಿದ ಕೂಸುಗೆ ಆ ಪ್ರವಾಹಲಿ ತೇಲಿಕಂಡ್ ಕುಟುಂಬದ ಕರಾದ ಕಾನಬೆಟ್ಟು, ಅಜ್ಜಿರಿಲ್ಲಿಗೆ ಹೋಕೆ ಹೇಳ್ದೆ. ಸಿರಿನ ಮಾಯ ಮಾಡ್ದೆ. ಆ ಕೂಸು ಕಾನಬೆಟ್ಟ್ ಅಜ್ಜಿರ್‌ಲಿ ಬೆಳ್ದದೆ. ಅಜ್ಜಿರಿಗೆ ಕಾಡ್‌ಲಿ ಸಿಕ್ಕಿದ ಹೆಣ್ಣ್ ಕೂಸ್ ಗಿಂಡೆ, ಸೊನ್ನೆನ ಅವಳ ಮಕ್ಕಳ ಅಬ್ಬಗದಾರಗರ –ಹೀಂಗೆ ಇದ್ ನಾಕ್ ತಲೆಮಾರ್‌ಗಳ ಬೊದ್ಕ್‌ನೊಟ್ಟಿಗೆ ಈ ಕತೆ ಹಬ್ಬಿಕಂಡ್‌ಟ್ಟು. (ಜಿ.ಎನ್.)

**ಜಾಲಾಟ :** ತುಳುನಾಡ್‌ನ ಮತ್ತೆ ಅರೆಬಾಸೆ ಪ್ರದೇಸಲಿ ದೆವ್ವಗಳ ಆರಾದ್‌ಸ್‌ವ ಪರಂಪರೆಲಿ ಜಾಲಾಟದ ನಮೂನೆ ವಿಸೇಸದ್ದಾಗುಟು. ಸೀಮೆಕಳ, ಗ್ರಾಮ, ಗುತ್ತು ಮನೆಗಳ್‌ಲಿ ಮತ್ತೆ ಗ್ರಾಮ ದೆವ್ವಗಳ ಚಾವಡಿ ಆವರಣಲಿ ದೊಡ್ಡ ದೆವ್ವಗಳೊಟ್ಟಿಗೆ ಒಳ್ದ ದೆವ್ವಗಳಿಗೆ ಒಂದೊಂದಾಗಿ ಕೋಲ ನಡ್ದರೆ ಅದರ ಜಾಲಾಟಂತೇಳಿ ಕರ್‌ದವೆ. ಅರೆಬಾಸೆ ಮತ್ತೆ ತುಳುಲಿ ಮನೆ ಎದುರದ ಇಜ್ಜಲ್‌ನ 'ಜಾಲ್' ತೇಳಿದ್ ಕರ್‌ದವೆ (ಜಾಲ್+ಆಟ=ಜಾಲಾಟ). ಗ್ರಾಮ ಮಟ್ಟದ ದೆವ್ವಗ ಮನೆ ಜಾಲ್‌ಲಿ ನಡಿದುಲೆ. ಊರ ದೆವ್ವದ ಚಾವಡಿಲಿ ನಡಿದು. ಚಾವಡಿ ಜಾಲ್‌ಲಿ ನಡೆವ ಜಾಲಾಟಕಾಕನ ಚಾವಡಿ ಎದುರದ ಜಾಲ್‌ತ ಹೇಳಿರೆ ಅಗಾಲದ ಗದ್ದೆಗ ತೇಳ್‌ವ ಅರ್‌ತ ಆದೆ. ಅಗಲ ಗದ್ದೆನ 'ಕಳ'ಲಿ ನಡೆವ ದೆವ್ವಗಳ ಕೊಣ್‌ತದ ಆಟನ 'ಜಾಲಾಟ'ತ ಕರಿದು ಸೂಕ್ತ ಆದೆ. ಜಾಲಾಟಲಿ 'ಕಳ ಒಡ್ಡುದ್' ತೇಳ್ವ ಕ್ರಮ ಇದ್ದ್,ಇದ್ ಈ ಅಬಿಪ್ರಾಯಕೆ ಪೂರಕ ಆದೆ. ಒಟ್ಟಾರೆ ದಿನಾಂತರಲಿ ಕೂಟ ದೆವ್ವಗಳ ಆರಾದನೆ ಬಾಕಿತ್‌ಮಾರ್ ಗದ್ದೆಗಳ್‌ಲಿ ಹಾಕುವ ಕೊಡ್ಯಡಿ ಎದುರದ ಜಾಲ್‌ಲಿ ನಡಿದಾದರೆ ಅದರ 'ಜಾಲಾಟ' ತೇಳುವೆ. ಬೊಯ್ಲ್‌ಲಿ ಆಡ್‌ವ ಆಟ


ಜಾಲಾಟ

ಬಯಲಾಟ ಆದಂಗೆ ಜಾಲ್‌ಲಿ ಆಡ್‌ವ ಆಟ ಜಾಲಾಟ. ಜಾಲಾಟಲಿ ದೆವ್ವ ಬಕ್ತಿಗೆ ಇರುವಸ್ಟೆ ಮಹತ್ವ ಮನೋರಂಜನೆಗೂ ಉಟ್ಟು. ಜಾಲಾಟ ಒಂದ್ ಸಂಕೀರ್ಣ ಜೆನಪದ ರಂಗ ಬೂಮಿ ಆಗುಟು.

ಜಾಲಾಟಗ, ಪೊಡ್‌ವ ಗಟ್ಟ ಸಾಲ್‌ನ ಬುಡಲಿರುವ ಬೆಳ್ತಂಗಡಿ, ಪುತ್ತೂರು, ಸುಳ್ಯ ಪ್ರದೇಸಲಿ ಹೆಚ್ಚಿ ನಡ್ದದೆ. ಒಟ್ಟಾರೆ ಗ್ರಹಿಕೆಲಿ ಹೇಳ್ದಾದರೆ, ಜಾಲಾಟಲಿ ಆರಾದನೆ ಆವ ದೆವ್ವಂಗ ಮತ್ತೆ ಇದರ್‌ಲಿ ಸೇರಿಕಂಬ ಸಮುದಾಯಗ ಕಾಡ್ ಗುಡ್ಡೆ–ಕ್ರಿಸಿ ಸಂಸ್ಕೃತಿನ ಜಾಲಾಟಲಿ ಕಾಣಕ್. ಸಾಮಾಜಿಕತೆ ಮತ್ತೆ ದಾರ್ಮಿಕತೆ ಈ ಜಾಲಾಟಲಿ ಕೂಡಿದ್ದದೆ. ಕಾಡ್ ಮತ್ತೆ ನಾಡ್ ಎದುರೆದುರ ಆವ ಸನ್ನಿವೇಸಲಿ ಬೆಳ್ತಂಗಡಿ–ಸುಳ್ಯಲಿ ನಡೆವ ಜಾಲಾಟಗ ಒಂದೇ ಸ್ವರೂಪಂದ ಕೂಡಿರ್‌ದುಲೆ. ಹಾಂಗೆ ಕೆಲ ಅಂಸಗಳ್‌ಲಿ ಹಜ್ಜ್ ಸಮಾನತೆನೂ ಉಟ್ಟು.

ಜಾಲಾಟ 1. ಅತಿಮಾನುಷ 2.ಮಾನುಷ ಶಕ್ತಿ ಜಗತ್ತ್‌ನ ತೋರ್‌ಸಿದೆ. ಜಾಲಾಟ ಕಳನ ಕಾಲಿ ಬುಡಿಕ್ಕಾಗದ್‌ತ ಕಟ್ಟಳೆಲಿ ಇರ್‌ದರದ ಮೂರರ್‌ಂದ ಐದ್ ದಿನಗ ಎಡೆಬುಡದೆ ನಡ್ದದೆ. ಜಾಲಾಟಕೆ ಗೊನೆಕಡ್ದ ದಿನಮಾನ ನೋಡಿ ಕಳವೊಡ್ಡುವಲ್ಲಿಂದ ಸುರಾದೆ ಆದೆ. ಕೋಳಿಗೂಟ ಹಾಕುವ ಮತ್ತೆ ಚೆಂಡ್ ಹಾಕುವ ವಿಡಿಗ ಎರ್‌ಡನೇ ದಿನ ನಡ್ದದೆ. ಈ ದಿನನ ಎಡೆ ಕಡಪು ತೇಳುವೆ. ಇದೇ ದಿನ ಇರ್‌ಲ್‌ಂದ ದೆವ್ವಗಳ ಕೋಲ ಸುರಾದೆ. ಮೂರು ದಿನ ಜಾಲಾಟ ನಡಿವಲ್ಲಿ ಮೂರನೇ ದಿನ ಜಾಲಾಟ ಮುಗ್ದದೆ. ಐದ್ ದಿನ ನಡಿವಲ್ಲಿ ದೊಡ್ಡ ದೆವ್ವಗಳ ನೇಮಗ ಪುನಾರಾವರ್‌ತನೆಲಿ ನಡ್ದದೆ. ಪ್ರತೀ ಜಾಲಾಟಲಿ ಸುರುಗೆ ಅರಸು/ ರಾಜೆನ್ ದೆವ್ವಗಳ ಕೋಲ ನಡ್ದದೆ. ಅತಿಮಾನುಷ ದೆವ್ವಗಳ ನೆಲೆಲಿ ಜಾಲಾಟಲಿ ಸುರುಗೆ ಸಾಮಾನ್ಯ ಆದಿಮೂಲದ ನೆಲೆಲಿ ಬಿರ್ಮೆರ್, ಅರಸು ನೆಲೆಲಿ ಪೂಮಾಣಿ–ಕಿನ್ನಿಮಾಣಿ, ಉಲ್ಲಾಗ, ಬಂಗಾಡಿ ದೆವ್ವಗ, ಜಾಗೆಗೆ ಸಮ್ಮಂದಪಟ್ಟ ನೆಲೆಲಿ ವರ್ಣಾರ ಪಂಜುರ್‌ಲಿ, ರುದ್ರಾಂಡಿ, ಶಿರಾಡಿ, ಕಲ್ಕುಡ, ಅಡಿಮರಾಂಡಿ, ಜುಮಾದಿ ಇಂತ ದೆವ್ವಗಳ ಕೋಲಗ ನಡ್ದದೆ. ಎರಡನೇ ಸಾಲ್‌ಲಿ ಪ್ರದಾನಿ ಸ್ತಾನಿ ದೆವ್ವಗ ಆದ – ಪುರುಷ, ಬಚ್ಚನಾಯಕ ಇಂತ ದೆವ್ವಗ, ಅದಾಗಿ ಮೂರ್‌ನೆ ಸಾಲ್‌ಲಿ ಬೇಟೆಗಾರರ್, ಮಲೆದೆವ್ವ ಪೆರ್‌ದೊಳ್ಳು, ಜಂಗಮ ಬಂಟ, ಇಂತ ದೆವ್ವಗ ನೇಮ ಪಡ್ದವೆ. ಅಕೇರಿಗೆ ಅಂಗಾರ, ಕೂಜುಲು, ಬೊಳಯ ಕುಜ್ಞಮಾಣಿ, ಸೆಟ್ಟಿ, ಕೊರಗ, ಕುದುರೆ ದೆವ್ವಗ ಕೋಲ ಪಡ್ದವೆ. ಪ್ರಾದೇಸಿಕ ನೆಲೆಲಿ ಜಾಲಾಟಲಿ ನೇಮ ಪಡೆವ ಸ್ತಾನಲಿ ವೆತ್ಯಾಸ ಕಂಡ್ ಬಾದು ಸಹಜ. ಅದ್ಕೆ ಕಾರಣ– ಆಯಾಯ ಪ್ರದೇಶದ ಜೆನ ಯಾವ ದೆವ್ವಂಗಳಿಗೆ ಆದ್ಯತೆ ಕೊಟ್ಟವೆ ತೇಳ್ದರಮೇಲೆ ನಿರ್‌ದಾರ ಆದೆ. ಇದರ್‌ಂದ ದೆವ್ವಂಗಳ ಸ್ತಾನಲಿ ಹೆಚ್ಚಿಕಮ್ಮಿ ಆದೆ.

ಜಾಲಾಟ ಒಮ್ಮೆ ಸುರು ಆದರೆ ಅದ್ ನಿಲ್ಲದೇ ನಡೆಯೊಕು. ಈ ಕಾರಣಲಿ ಜಾಲಾಟ ಕಳಲಿ ಏನಾರ್ ನಡ್ಕೊಂಡ್ ಇದ್ದದೆ. ಜಾಲಾಟನ ದೆವ್ವಕಟ್ಟವು ನಡ್ಸಿ ಕೊಡ್ದು. ಹಾಂಗಾಗಿ ಜಾಲಾಟಲಿ ನೂರೊಂದು ದೆವ್ವಕಟ್ಟವು ಗಂಡು–ಹೆಣ್ಣ್ ಇರೊಕುಂತ ರೂಡಿ ಮಾತುಟ್ಟು. ಜಾಲಾಟಲಿ ನಿರಂತರ ಕ್ರಿಯೆ ನಡೆವ ಸಲ್‌ವಾಗಿ 'ಪೊಡಿ ನಲಿಕೆ' ಕುಣಿಯಕೆ ಇಸ್ಪೊಂದ್ ದೆವ್ವಕಟ್ಟವರ ಅಗತ್ಯನೂ ಉಟ್ಟು. ಜಾಲಾಟಲಿ ಮೇರ, ಮನ್ಸ, ಕೊರಗರ ಕುಣ್ತಗ ಹಿಂದೆ ನಡೆತಿತ್ತ್. ಒಂದ್ ನೇಮಂದ ಇನ್ನೊಂದರ ನಡುನ ಅಂತರನ ಬರ್‌ತಿ ಮಾಡಿಕೆ ಈ ಕೊಣ್‌ತಗ ನಡ್ದವೆ. ಬೆಳ್ತಂಗಡಿ ಪ್ರದೇಸಲಿ 'ಅರಕ್ ಕಟ್ಟುದು' ತೇಳ್‌ವ ವಿಸೇಸ ಪ್ರಹಸನನೂ ನಡ್ದದೆ.

ಬೆಳ್ತಂಗಡಿ ಪ್ರದೇಸಲಿ ನಿತ್ತೇ ಹೋಗುಟು ತೇಳ್ವಲ್ಲಿ ಜಾಲಾಟಗ ಕಡಿಮೆ ಆಗೊಲೊ. ಗುತ್ತು ಮನೆಗಳ ಬೂ ಆಸ್ತಿ ಬೂಸುದಾರಣೆ ಕಾನೂನು ಕಾರಣ ಆಗಿ ಒಕ್ಕಲ್‌ಗೆ ಹೋದ್ ಇದ್ಕೆ ಕಾರಣ ಆಗುಟು ಸುಳ್ಯ ಪ್ರದೇಸಲಿ ಎಲ್ಲೆಲ್ಲಿ ಮಲೆ ಉಲ್ಲಾಕುಳು ಚಾವಡಿ ಉಟ್ಟೋ ಅಲ್ಲೆಲ್ಲ ಜಾಲಾಟ ನಡ್ದದೆ. ಇಲ್ಲಿನ ಜಾಲಾಟಗಳ್‌ಲಿ, ಅಲೌಕಿಕ ಅತಿಮಾನುಷ ಉಲ್ಲಾಕ್ಲು ಪುರುಷ, ರುದ್ರಾಂಡಿ, ದೆವ್ವಗಳ್ಗೆ ಪ್ರದಾನ ನೆಲೆಲಿ ನೇಮ ನಡ್ದರೆ; ಮಾನುಷ ನೆಲೆಲಿ ಕುಜ್ಞಮಾಣಿ, ಬೊಳಯ, ಕೂಜುಲು, ಅಂಗಾರ, ಸಬ್ಬೆದ್ತೆರ್, ಅಜ್ಜಿ ಬೂತ, ಬಿರಣ ಕುಜ್ಞ ಮಾಣಿ, ಕುದುರೆ ಕೋಲ ಹಿಂಗೆ ಸಾಮಾನ್ಯ ಆಗಿ ನಡ್ದದೆ. ಬೆಳ್ತಂಗಡಿ ಪ್ರದೇಶಲಿ ಪರಾರಿ ಪುತ್ತಿ, ಕಣಿಯೂರು ಗುತ್ತ್, ಅರಸಿನಮಕ್ಕಿ ಕಕ್ಕಿಂಜೆ ಕಡೆಗಳ್‌ಲಿ ಹಿಂದೆ ಜಾಲಾಟಗ ನಡೆತಿದ್ದೊ. ಈಗ ಮುರುಗೋಳಿ ಪುತ್ತಿಲಲಿ ಗ್ರಾಮಸ್ತರ ಕೂಡುಗಟ್ಟ್‌ಲಿ ನಡ್ದದೆ. ಈ ಬಾಗಲಿ ಉಲ್ಲಾಳ್ತಿ, ಬೈರವ, ಲೆಕ್ಕೆಸಿರಿ, ಪುರುಷರಾಯ, ಅಜ್ಜೆರ್ ಬೂತ, ಪಂಜುರ್‌ಲಿ, ಬೇಟೆಗಾರರ್, ನೇಲ್ಯರಾಯ, ಕಾರಿ ಕಬಿಲ, ಬಿಲ್ಲರಾಯ – ಬಿಲ್ಲಾರ್‌ತಿ, ಮಂಗಳೆರ್ ಈ ಹೆಸರ್‌ನ ದೆವ್ವಗ ಜಾಲಾಟಲಿ ನೇಮ ಪಡ್ದವೆ. ಜಾಲಾಟಲಿ ದೆವ್ವಕಟ್ಟವು ಮಾತ್ರ ಕಲಾವಿದರಾಗಿದ್ದವೆ. ಲೌಕಿಕ ನೆಲೆನ ಕೊಣ್‌ತ ಪ್ರಕಾರಗ ಜಾಲಾಟಲಿ ಇರ್‌ದು ಸಾಮಾನ್ಯ ಸಂಗತಿ. ಜಾಲಾಟನ ದೆವ್ವ ಸಮ್ಮಂದಿ ಪಾಡ್ದನಗ ಚಾರಿತ್ರಿಕ ಸಂಗತಿನ ಹೊಂದಿಕಂಡ್ ಆಚರಣೆ ಬಾಗಲಿ ಅದರ ಅಬಿವ್ಯಕ್ತಿ ಆದು ವಿಸೇಸ. ಊರ್‌ನ ಮೂಲನಿವಾಸಿಗಳ ಮೂಲದ ಮತ್ತೆ ಸಾಮಾಜಿಕತೆನ ಕೆಲ ಸೂಕ್ಷ್ಮ ವಿಚಾರಗ ಗೊತ್ತಾದು ಜಾಲಾಟಲಿ ಕಾಂಬಕೆ ಸಿಕ್ಕುದು ಇದರ ವಿಸೇಸತೆ. (ಪಿ.ಕೆ.)

**ದರ್ಮ ದೆವ್ವ** : ದೆವ್ವ ಆರಾದನೆ ಜಗತ್ತ್‌ಲಿ ಸೇಕಡಾ ತೊಂಬತ್ತೊಂದರಸ್ಟ್ ದೆವ್ವಂಗ ಹೆಣ್ಣ್ ದೆವ್ವಗಳೆ ಆಗೊಲೊ. ಪುರ್‌ಸ ರೂಪದ ದೆವ್ವನ ದರ್ಮ ದೆವ್ವ ತ ಕರಿದು, ಆರಾದ್‌ಸುದು ಇಲ್ಲಂತಲೇ ಹೇಳೊಕು. ಬಸ್ತಿ ನಾಯ್ಕ, ಪುರುಸ, ನಾಯರ್, ಉಲ್ಲಾಕ್ಲು ಈ ಎಲ್ಲ ಗಂಡ್ ದೆವ್ವಗಳ ದರ್ಮ ದೆವ್ವ ತ ಕರೆವ ಕ್ರಮನೇ ಇಲ್ಲೆ. ಸ್ತ್ರೀ ಸೂಚಕ ತುಳ್‌ನ 'ಆಯಿ' ಪುರುಷ ಸೂಚಕ 'ಆಯೆ' ಆಗಿ ಸ್ತ್ರೀರೂಪಿ ದೆವ್ವಗ ಎಲ್ಲಾ ಪುರುಸ ರೂಪಂದ ಕಂಡವೆ. ಹಿಂಗಿದ್ದರೂ ಅವು ನೇಮಲಿ ಮಾಡ್ವ ಅಲಂಕಾರಲಿ ಸ್ತ್ರೀ ರೂಪಲೇ ವ್ಯಕ್ತ ಆದು ಈ ಮಾತ್‌ನ ಸಮರ್‌ತನೆ ಮಾಡ್‌ದೆ.




ಮಾತೃದೇವತೆನ ಆರಾದನೆ ಮೂಡನ ಕಾಲಂದಲೇ ನಡ್ದ್ ಬಂದುಟು. ಮಾತೃ ಆರಾದನೆ ಕ್ರಿಸ್ತ ಮೂಡನ ಗುಪ್ತರ ಕಾಲಲಿ ಇನ್ನೂ ಹೆಚ್ಚಾತ್. ಆದಿವಾಸಿ ಪಂಗಡಲಿ ಮಾತೃ ದೇವತೆ ಪಲ ಕೊಡ್‌ವ, ದನಕರ್‌ಗಳ ರಕ್ಷಣೆ ಮಾಡ್ವ ದೇವತೆ ತ ನಂಬತಿದ್ದೊ. ಮಾತೃದೇವತೆನ ಆರಾದನೆ ಸಿಂದು ನಾಗರಿಕತೆಲೇ ಇತ್ತ್.

ಜಗತ್ತ್‌ನ ಪ್ರತಿ ಸಮುದಾಯನೂ ಹೆಣ್ಣ್‌ಗೆ ಅರ್‌ತಾತ್ ಅವ್ವಂಗೆ ಸುರುನ ಜಾಗೆ ಕೊಟ್ಟುಟು. ಬೂಮಿಗೆ ಬೆಳೆ ಹುಟ್ಸ್‌ವ ಸಕ್ತಿ ಇದ್ದಾಂಗೆ ಪ್ರಜೆನನ–ದಾರಣೆ ಮಾಡ್ವ ಹೆಣ್ಣ್ ಶಕ್ತಿನ ಸಹ ಸಮುದಾಯಗ ಆರಾದನೆ ಮಾಡಿಕಂಡ್ ಬಂದೊಳೊ. ಸೈವ ಪಂತಂದ ಹುಟ್ಟಿಕಂಡ ಶಾಕ್ತ ಪಂತನ ಮೂಲನೇ ಇಲ್ಲಿ ಒಳದ್. ದೆವ್ವಾರಾದಕ ತುಳುನವು ಸಾ ಹೆಣ್ಣುನ ಮತ್ತೆ ಅದರ ಸಕ್ತಿ ರೂಪನ ಕಲ್ಲುರ್ಟಿ, ಜುಮಾದಿ, ರುದ್ರಾಂಡಿ, ಪಿಲ್ಚಾಮುಂಡಿ, ಮಲರಾಯಿ, ಕೊಡಮಣಿತ್ತಾಯ ಹಿಂಗೆ ಬೇರೆ ರೂಪಲಿ ಕಂಡ್ ಆರಾದ್‌ಸ್ತೊಳೊ.

ಕ್ರಿಸಿ ಮೂಲ ಆರ್‌ತಿಕ ವೆವಸ್ತೆನ ಇಸಿಕಂಡ ಜೆನ ಪರಿಕಲ್ಪನೆಲಿ ಸ್ರಿಸ್ಟಿಗೆ ಮೂಲ ಕಾರಣ ಬೂಮಿ ಆಗುಟು. ಈ ಬೂಮಿಗೆ ಇರ್‌ವ ಸಕ್ತಿನ ಜೆನ್ಮ ಕೊಡ್‌ವ ಸಕ್ತಿ ಇರ್‌ವ ಅಯ್ಯೆಲಿ ಕಂಡೊಳೊ. ದೆವ್ವರಾದನೆಲಿ ನಾವು ಇದೇ ನಂಬಿಕೆನ ಕಾಂಬೊದು. ದೆವ್ವಗ ಮಾಡ್‌ವ ನುಡಿಕಟ್ಟ್‌ಲಿ 'ಹೆತ್ತ ಅವ್ವಂಗೆ ಅಮನಾಗಿ ಬಲದ ಮೊಲೆಲಿ ಅಮೃತದ ಹಾಲುಣ್ಸಿ ತೊಟ್ಲ್‌ಲಿ ಹಾಕಿ ಮಾಣಿಸಿ ಕೊಡುವ ದೆವ್ವ ನಾ' ತೇಳಿ ಬಾದರ ನಾವ್ ಕಾಣಕ್. ಬಾಯಿ ಮಾತ್‌ನ ಪರಂಪರೆನ ಜೆನಪದರ ದ್ರಿಸ್ಟಿಲಿ, ಸಕ್ತಿ ರೂಪಿ ಅಯ್ಯೆ ಕಾಡ್‌ನ ಒಡತಿ–ಕಾಡೆತಿ, ದೇವಿ ದೆವ್ವ ಆದೆ. ಗುಡ್ಡೆ ಕಾಡ್‌ನ ಅಡಿಪುಡೆಲಿ ಚೌಂಡಿ/ಚಾಮುಂಡಿ ಅರೆಬಾಸೆನ ಪರಿಸರಲಿ ಉದ್ರಾಂಡಿ ಆದೆ. ತುಳುನಾಡ್‌ನ ದೆವ್ವಾರಾದನೆಲಿ ಸಕ್ತಿ ರೂಪಿ ಹೆಣ್ಣ್‌ನ ರುದ್ರಾಂಡಿ ಸ್ವರೂಪಲಿ ಕಂಡೊಳೊ. ಈ ದೆವ್ವದ ಬಗ್ಗೆ ಬಾಯ್ಮಾತ್‌ಲಿ ಕೇಳಿಕೆ ಸುಮಾರ್ ಸಂಕತನಗ ಸಿಕ್ಕಿದೆ. ರುದ್ರ ಚಾಮುಂಡಿ ಅಲ್ಲರೆ ಉದ್ರಾಂಡಿ ದೆವ್ವ ಸೂರ್ಯ ಮಂಡಲದ ನೂಲ ದಾರಲಿ ಶಿರಾಡಿ ತೇಳ್ವಲ್ಲಿ ಇಳ್ದದೆ. ಅಲ್ಲಿನ ಪರವರ ಮನೆಗೆ ಬಂದ್ ಕಾರ್ಣಿಕ ತೋರ್‌ಸುವೆ. ಅವರ್‌ಂದ ಆರಾದನೆ ಪಡ್ದದೆ. ಅಲ್ಲಿಂದ ಸುಬ್ರಹ್ಮಣ್ಯ, ನಿಂತಿಕಲ್ಲ್ ದಾಟಿ ಪಡುವದ ಕಡೆ ಬಂದದೆ. ಈ ದೆವ್ವದ ಪ್ರಸರಣ ಬಹುಪಾಲ್ ಕಾಡ್–ಕಾನಗಳ್‌ಂದ ಕೂಡ್ದ ಸುಳ್ಯ, ಸುಬ್ರಹ್ಮಣ್ಯ, ಬೆಳ್ತಂಗಡಿ, ಗಟ್ಟ ಸಾಲ್‌ಗಳ ಅಡಿಪುಡೆಲಿ ಈ ಜಾಗೆಗಳ್‌ಲಿ ಅಲ್ಲಲ್ಲಿ ಇದರ ಆರಾದನೆ ಆದೆ.

ಪ್ರತಿ ಸಮುದಾಯದ ತರವಾಡ್ ಮನೆಗಳ್‌ಲಿ 'ದರ್ಮನೇಮ' ಹೆಸರ್‌ಲಿ ಈ ದರ್ಮ ದೆವ್ವದ ಆರಾದನೆ ನಡ್ದದೆ. ಈ ರುದ್ರಾಂಡಿ ದೆವ್ವ ಕೊಡಗ್‌ನ ಭಾಗಮಂಡಲ, ಕರಿಕೆ ಕಡೆಲು ಆರಾದನೆ ಮಾಡ್‌ವೆ. ತುಳು ನಾಡ್‌ಲಿ ಈ ದೆವ್ವದ ಬಗೆಲಿ 'ಬಳಿ ಪೊದ್ದತಿ' ಪ್ರಕಾರಲಿ 'ಬರಿ ಪತ್ತ್ ಬೆರಿ ಪತ್ತುನ ದೆವ್ವೊ' ತ ನುಡಿ ಕಟ್ಟಿದೆ. ಈ ಅಬಿಪ್ರಾಯಲಿ ಈ ದೆವ್ವ ರಕ್ತ ಸಮ್ಮಂದದ ಹಿನ್ನೆಲೆಲಿ ಸಮ್ಮಂದ ಪಡ್ಕಂಡದೆ. 'ಅಳಿಯ ಕಟ್ಟ್'ನ ಮೂಲ ಕುಟುಂಬಗಳ್‌ಲಿ (ಬಂಟ, ಬಿಲ್ಲವರ್‌ಲಿ) 'ಬಳಿ' ಸಮ್ಮಂದಲಿ ಈ ರುದ್ರಾಂಡಿ ಪ್ರಸರಣ ಆದು ಹೌದಾದರೂ, ಮಕ್ಕಳ ಕಟ್ಟ್‌ನ ಪೊದ್ದತಿನ ಪ್ರಕಾರ ಗೌಡ್ರಗಳ್‌ಲಿ ಈ ಬಗೆಲಿ ಪ್ರಸರಣ ಆದೆತ ಹೇಳಿಕೆ ಹಳೆ ಗುರ್‌ತ್‌ಗ ಇಲ್ಲೆ. ಮಲೆನಾಡ್‌ಂದ ಕೂಡ್ದ ಸುಳ್ಯ ಪ್ರದೇಸಲಿ ಜೆನರ ಜೆನಸಂಕೆಲಿ ಗಟ್ಟಿ ಇರ್‌ವ ಕ್ರಿಸಿ ಮೂಲ ಗೌಡ್ರುಗ ಕಾಡ್‌ನೊಟ್ಟ್‌ಗೆ ಹಕ್ಕಲೆನ ಸಮ್ಮಂದ ಇಸಿಕಂಡೊಳೊ. ಈ ಗೌಡ್ರ ಕುಟುಂಬಲಿ ಈ ರುದ್ರಾಂಡಿನೆ ದರ್ಮ ದೆವ್ವ ಆಗಿರ್‌ದು. ಬೇರೆ ದೆವ್ವನ ಅವು ದರ್ಮ ದೆವ್ವಂತೇಳಿ ಕರಿದುಲೆ.

ದರ್ಮ ದೆವ್ವಂತ್ಯೇಳಿ ಕರ್‌ಸಿಕಂಬ ದೆವ್ವಂಗ ಬೇರೆ ದೆವ್ವಂಗಳ್‌ಂದ ಬೇರೆನೇ ತರಲಿ ನಂಬಿಕಂಡ್ ನೆಲೆಗೊಂಡವೆ. ಈ ದೆವ್ವ ಮನೆ ಚಾವಡಿಲಿ/ಆವರಣಲಿ ಪದೊಳಿ/ಮಾಡಲಿ ಠಾನ ಇದ್ದದೆ. 'ದರ್ಮ ದೆವ್ವ' ಪರಿಕಲ್ಪನೆ ಕುಟುಂಬದ ರಕ್ಷಣೆನ ಹೊಣೆ ಹೊತ್ತ ದೆವ್ವತೇಳ್‌ವ ಅರ್‌ತನ ಹೇಳ್ದೆ. ಒಂದ್ ಕುಟುಂಬದ ಒಳಗೆನ ರಕ್ಷಣೆನ ಹೊರೆ ಅಯ್ಯೆ ನೋಡಿಕಂಬಂಗೆ ಅಪ್ಪಂಗೆ ನೋಡಿಕಂಬಕೆ ಆದುಲೆ. ಅಯ್ಯೆ ಸಾಂಕುದರ ಸಂಕೇತ. ಈ ಅರ್‌ತಲಿ ರುದ್ರಾಂಡಿ ಹೆಣ್ಣ್ ದೆವ್ವ ಮನೆನ ಒಳಗೆಜಾಗೆ ಪಡ್ದ್ ಆರಾದನೆ ಪಡ್ಕಂಡುಟು. ಆದಿವಾಸಿ ಮೂಲಂದ ಈಗನವರೆಗೆ 'ಅಯ್ಯೆ'ನ ರಕ್ಷಕ ದೆವ್ವತ ನೆನ್ಸಿ ಆರಾದ್‌ಸ್ತೊಳೊ. ಮಾತ್ರ ಅಲ್ಲೊ ಪಿತೃ ಮೂಲ ಯಾದೇ ಆಗಿರಲಿ 'ಅಯ್ಯೆ'ನ ಅರ್ತಾತ್ ಸ್ತ್ರೀ ಶಕ್ತಿನ ದೆವ್ವಂತೇಳಿ ಆರಾದ್‌ಸುದರ್‌ಲಿ ಹೆಚ್ಚಿಕಮ್ಮಿ ಇರ್‌ದುಲೆ.

ದರ್ಮ ದೆವ್ವದ ನೇಮ ಮನೆ ಜಾಲ್‌ಲಿ ನಡ್ದದೆ. ಕುಟುಂಬದ ಎಲ್ಲಾ ಪೈಕಿನವು 'ಮನೆ ದೆವ್ವಕೆ ನಡೆವ ದರ್ಮ ನೇಮಲಿ ತಪ್ಪಿರೆ ದೋಸ' ತ ನೆನ್ಸಿಕಂಡವೆ. ದರ್ಮದೆವ್ವದ ನೇಮನ ಸಾಮಾಜಿಕ ಜಾತಿ ಕಟ್ಟ್‌ಲಿ 'ಒಳಮುಕ' ತ ಕರ್‌ಕಂಬ ಪರವವ ಕಲಾವಿದರೇ ಕಟ್ಟುವೆ. ಊರ್‌ನವು ಕೂಡ್‌ವ ಈ ದರ್ಮ ನೇಮಲಿ ಅನ್ನದಾನಕೆ ಜಾಗೆ ಉಟ್ಟು. ದರ್ಮ ನೇಮಲಿ ಉಂಬಕೆ ಕುಂದು ಬಾರದ ಹಾಂಗೆ ನೋಡಿಕಂಡವೆ. ದರ್ಮ ನೇಮಲಿ ಮನೆನ ಬೆರೆ ದೆವ್ವಗಳಿಗೂ ನೇಮಾರಾದನೆ ನಡ್ದದೆ. (ಪಿ.ಕೆ.)

**ಸಿರಾಡಿ ದೆವ್ವ :** ಸುಳ್ಯ ಪರಿಸರದ ಅರೆಬಾಸೆ ಸಂಸ್ಕೃತಿನ ಒಟ್ಟಿಗೆ ಶಿರಾಡಿ ದೆವ್ವಕೆ ಬಾರಿ ಗಟ್ಟಿನ ಸಮ್ಮಂದ ಉಟ್ಟು. ಈ ದೆವ್ವ ಐಗೂರ್ ಸೀಮೆಂದ ಸಕಲೇಸಪುರದ ಮುಕಾಂತರ ಸಿರಾಡಿ ಗಟ್ಟಂದಿಳ್ದ್ ಗುಂಡ್ಯ, ಉಪ್ಪಿನಂಗಡಿ ಆಗಿ ವಲಸೆ ಬಂದ್ ಅರೆಬಾಸೆ ಪ್ರದೇಸಲಿ ನೆಲೆನಿತ್ತ ದೆವ್ವ. ಪುರುಸ ದೆವ್ವ ಮತ್ತೆ ಬಚ್ಚ ನಾಯ್ಕ ದೆವ್ವಗ ಕೂಡ ಅದೇ ಐಗೂರ್ ಸೀಮೆಂದ ಒಣಗೂರು ಆಗಿದ್ ಸುಬ್ರಹ್ಮಣ್ಯಕೆ ವಲಸೆ ಬಂದದರ ಈಗಾಗಲೇ ಗುರ್‌ತಿಸಿ ಆವುಟು. ಈ ಮೂರೂ ದೆವ್ವಕೆ ಅರೆಬಾಸಿಕರ ವಲಸೆನೊಟ್ಟಿಗೆ ಸಮ್ಮಂದ ಇರ್‌ದರ್‌ಂದ ಅರೆಬಾಸೆನವ್‌ಕೆ ಇವ್ ಮುಕ್ಯ ದೆವ್ವಗಾಗೊಳೊ. ಸಿರಾಡಿ ದೆವ್ವದ ಪಾಡ್ದನದ ಲೆಕ್ಕಲಿ ಅದ್ ಬಂಗರ ಕಾಲಲಿ ಗಟ್ಟಂದ ಇಳ್ದುಟು. ಸಿರಾಡಿಲಿ ಪದುಮ್ ಸೆಟ್ಟಿಗೆ ಕಂಡ್, ಅವಂದ ಪೂಜೆ ಪಡ್ದ್, ನಾಗಯ್ಯ, ಮಲ್ಲಯ್ಯ, ಮತ್ತೆ ಚಿನ್ನಪ್ಪ

ಪೂಜಾರಿಗಳ ಪ್ರಾರ್ತನೆನಂಗೆ ಸಿರಾಡಿಲಿ ನೆಲೆ ಆಗುಟು. ಊರ್ ನೋಡಿಕೆಂತೇಳಿ 'ತಂಪಳ್ಳ ಸೀಮೆ' ಸುಳ್ಯಕೆ ಬಂದುಟು. ಕಡಬ, ಪಂಜ, ಬೆಳ್ಳಾರೆ, ನಿಡುಬೆ, ಬೇಂಗಮಲೆ, ಸೋಣಂಗೇರಿ, ಸುಳ್ಯ, ಕೇರ್ಪಳ, ಅಲಡ್ಕ, ಬಲ್ನಾಡು, ಅಡ್ತಲೆ, ಕಿರ್ಲಾಯ, ಉಳುವಾರು, ಪೆರಾಜೆ, ಕುಂಬಳಚೇರಿ, ಕಣಕಿಲಡ್ಕ, ತೊಡಿಕಾನ, ಮಂಜಪಿಲ, ಊರುಬೈಲು, ಕೊಯ್ನಾಡು, ಬೈಲೆ ಇಂತಲೆಲ್ಲಾ ಕಾರ್‌ನಿಕ ತೋರ್‌ಸಿ ಸೇವೆ ತಕಂಡುಟು. ಸುಳ್ಯ ಪರಿಸರಲಿ ಮಾತ್ರಲ್ಲದೆ ತುಳುನಾಡ್‌ನ ಬೇರೆ ಕಡೆಗಳ್‌ಲಿ ಕೂಡ ಸಿರಾಡಿ ದೆವ್ವಕೆ ವಿಸೇಸ ನೇಮ ಸಿಕ್ಕಿದೆ. (ಪಿ.ಬಿ.)


ಸಿರಾಡಿ ದೆವ್ವ

**ರಾವುಗುಳಿಜ್ಜ :** ರಾವುಗುಳಿಜ್ಜ ಒಂದ್ ದೆವ್ವ. ಇದರ ವೇಸ ಬೂಸಣಗಳ್‌ನ ವಿಸೇಸ ಆಗಿದ್ದದೆ.ಮೋರೆನ ಮುಕವರ್ಣಿಕೆ ಮಾಡಿ ಅರ್‌ದ ಬಾಗಕ್ಕೆ ಕೆಂಪು ಬಣ್ಣ ಹಾಕಂಡವೆ. ಒಳ್ದ ಅರ್‌ದಬಾಗಕೆ ಕರಿಬಣ್ಣ ಹಾಕಂಡವೆ. ಮೂಕುನ ಕೊಡಿಂದ ಹಣೆನ ಮೇಲೆನ ಬಾಗದವರೆಗೆ ಬಿಳಿಬಣ್ಣಂದ ಒಂದ್ ಉದ್ದಗೆರೆನ ಎಳ್‌ದ್ ಮೋರೆನ 2 ಬಾಗ ಮಾಡಿಕಂಡವೆ ಬಿಳಿಬಣ್ಣಂದ ಹಣೆಲಿ 3 ಅಡ್ಡ ಗೆರೆಗಳ ಎಳ್‌ದವೆ. ಹುಬ್ಬುಗೆ ಬಿಳಿ ಬಣ್ಣ ಮೆತ್ತಿ ಅದರ ಮೇಲೆ ಪುಡೆಗೆ ಬಿಳಿ ಚುಕ್ಕಿ ಇಸುವೆ. ಕಣ್ಣ್‌ನ ಕೆಳಗೆಗೆ ಬಿಳಿ ಬಣ್ಣಂದ ಅರ್‌ದ ಉರುಂಟುಗಳ ಹಾಕಂಡವೆ. ಕೆಪ್ಪೆಗೆ ಬಿಳಿ ಚುಕ್ಕಿ ಇಸಿಕಂಡವೆ. ಎದೆ ಮತ್ತೆ ಕೈಗೆ ಬಿಳಿ ಬಣ್ಣಂದ ಅಡ್ಡಗೆರೆಗಳ ಹಾಕಂಡವೆ.

ಚಾಳೆ ಚಿರಿನ ಸೀಳಿ ಮಾಡ್‌ದ ಚಿರಿಲಂಗನ ಸೊಂಟಕೆ ಸುತ್ತಿಕಂಡವೆ, ಕೈ ಮಣಿಗಂಟ್‌ಗಳಿಗೆ ಮತ್ತೆ ರಟ್ಟೆಗಳಿಗೆ,ಗಂಟ್ಲಂದ ಎದೆಗೆ ಇಳಿವಂಗೆ ಚಿರಿಲಿ ಮಾಡ್‌ದ ತಿಗಲೆ ಚವರಿನ ಇಳಿಬುಟ್ಟವೆ. ತಲೆಗೊಂದು ಬಿಳಿ ಬಟ್ಟೆ ಸುತ್ತಿ ಕಟ್ಟಿಕಂಡವೆ. ಚಿರಿಂದ ಮಾಡ್‌ದ 'ಕದ' ಮುಡಿತೇಳುವ ಕಿರೀಟನ ಹಣೆಗೆ ಕಟ್ಟಿಕಂಡವೆ. ಜೊಂಕ್‌ಂದ ಮಾಡ್‌ದ ಅಲಂಕಾರ ಸಾದನಗಳ ಕಟ್ಟಿಕಂಡವೆ. ತಲೆ ಚವರಿನ ತಲೆನ ಹಿಂದೆಂದ ಇಳಿಬುಟ್ಟವೆ. ವೇಸ ಹಾಕಿದಂವ ಕೈಲಿ ತ್ರಿಸೂಲ ಹಿಡ್‌ಕಂಡಿದ್ದದೆ. ಕಾಳ್‌ಗೆ ಗಗ್ಗರ ಕಟ್ಟಿಕಂಡಿದ್ದದೆ.

**ಪೊದ್ಯ ಮತ್ತೆ ಕೊಣ್‌ತ :** ಈ ಕೊಣ್‌ತಕೆ ತೆಂಬರೆನ ಹಿಮ್ಮೇಳಲಿ ಗುಳಿಜ್ಜನ ಪಾಡ್ದನ ಹೇಳ್‌ವೆ. ರಾಹುಗುಳಿಗ ವೇಸದಾರಿ ಕೋಣಿಯಕೆ ಸುರ್ ಮಾಡ್‌ದೆ. ದೆವ್ವದ ಕೊಣ್‌ತದ ಹಾಂಗೆ ಈ ಕೊಣ್‌ತ ನಡೆದದೆ. ಕೊಣ್‌ತ ನಡೆಕನ ಬಲಿಗೆ ಕೋಳಿ ತಲೆಕಡ್‌ದವೆ. ಮತ್ತೆ ರಾಹುಗುಳಿಗ ರೋಗಿನ ಬುಟ್ಟು ಹೋವಂಗೆ ಹೆದ್ರುಸುವೆ. ಸುರೂಗೆ ಕೊಲೆ ಬುಟ್ಟು ಹೋಕೆ ಒಪ್ಪುಲೆ. ಮಂತ್ರವಾದಿ ಮತ್ತೆ ಕೊಣ್‌ತಗಾರ ಒಟ್ಟಾಗಿ ಕೊಲೆ ಬುಡ್‌ಸುವ ಪ್ರಯತ್ನಲಿ ಮಾಡ್‌ವೆ. ಕೆಲವೊಮ್ಮೆ ರೋಗಿನ ಜುಟ್ಟು ಹಿಡ್‌ದ್ ಬಲತ್ಕಾರಂದ ಬುಟ್ಟು ಹೋವಂಗೆ ಕೊಲೆನ ಹೆದ್‌ರಿಸುವೆ. ಆಗನೂ ಬುಟ್ಟು ಹೋಗದ್ದರೆ ಹೊಡ್ದ್ ಬೊಡ್ದ್ ಸಿಕ್ಸೆ ಕೊಟ್ಟವೆ. ಕಡೆಗೆ ಕೊಲೆ ಬುಟ್ಟು ಹೋದೆ. ಆಗ ರೋಗಿ ನಿತ್ರಾಣ ಆಗಿ ಬಿದ್ದದೆ. ಮತ್ತೆ ರೋಗಿನ ಮೀಸಿ ಮನೆಗೆ ಕರ್‌ಕಂಡ್ ಬಂದವೆ. ಅಲ್ಲಿಗೆ ಕೋಲ ಮುಕ್ತಾಯ ಆದೆ. (ಪಿ.ಆರ್.)

**ಧರ್ಮಸ್ಥಳ :** ದಕ್ಷಿಣಕನ್ನಡ ಜಿಲ್ಲೆನ ಬೆಳ್ತಂಗಡಿ ತಾಲ್ಲೂಕ್‌ಲಿ ಇರ್‌ವ ಪುಣ್ಯಕ್ಷೇತ್ರ ಧರ್ಮಸ್ಥಳ. ಕೊಕ್ಕಡ ಕ್ಷೇತ್ರದ ವಿಸ್ತೀರ್ಣ 1, 073, ಚ. ಕಿಮೀ. ಉಟ್ಟು ಜೆನಸಂಕೆ 9, 258ರಷ್ಟು ಉಟ್ಟು ಪೊಡ್‌ವ ಗಟ್ಟದ ಪಡುವದ ಇಳ್ಜಾರ್‌ನ ಕೆಳಗೆನ ಬಾಗಲಿ ಇರುವ ಧರ್ಮಸ್ಥಳಕೆ ಮಂಗಳೂರುನ ಮೂಡಕೆ ಎಪ್ಪತ್ತೈದು ಕಿಮೀ ಉಟ್ಟು. ಬೆಳ್ತಂಗಡಿ ಕಡೆನ ಆಗ್ನೇಯಕೆ ಸುಮಾರು ಹದಿನೈದ್ ಕಿಮೀ ಮತ್ತೆ ಪುತ್ತೂರುಂದ ಐವತ್ತು ಕಿಮೀ ದೂರಲಿ ಹಾಂಗೆನೇ ಮಂಗಳೂರು ಚಾರ್ಮಾಡಿ ಮಾರ್‌ಗ ಆಗಿ ಹೋಕನ ಉಜಿರೆಂದ ಹತ್ತು ಕಿಮೀ ಆಗ್ನೇಯಕೆ ಈ ದೇಸ್ತಾನ ಉಟ್ಟು.

ನೇತ್ರಾವತಿ ಹಳ್ಳ, ಧರ್ಮಸ್ಥಳಂದ ಪೊಡ್ವದ ಕಡೆ ಮತ್ತೆ ತೆಂಕದ ಕಡೆ ಹರ್‌ಕಂಡ್ ಹೋದೆ. ಮೂಡಂದ ಪೊಡ್ವಕೆ ಹರೆವ ನೆರಿಯ ಹಳ್ಳನು ಧರ್ಮಸ್ಥಳಂದ ನೈಋತ್ಯಲ್ಲಿ ನೇತ್ರಾವತಿನ ಕೂಡಿಕಂಡದೆ.

ಇದ್ ಮಾತ್ರ ಅಲ್ಲ, ಇದರ ಸುತ್ತೊಳು ಕೆಲವ್ ಸಣ್ಣ ಸಣ್ಣ ಹಳ್ಳಗಳೂ ಒಳ. ಈ ಜಾಗೆನ ಸುತ್ತೊಳೂ ಜಯಕೀರ್‌ತಿ ಬೆಟ್ಟ, ಅಣ್ಣಪ್ಪನ ಬೆಟ್ಟ ಮತ್ತೆ ಶಾಲೆ ಬೆಟ್ಟಗ ಸುತ್ತುವರ್‌ದುಟು.

ಧರ್ಮಸ್ಥಳ ಕ್ಷೇತ್ರದ ಆಡೆಳ್ತಕೆ ಬದಿನೆಡೆ, ನೆಲ್ಯಾಡಿಬೀಡು, ಬಳ್ಳಾಳ್ತಿಗುಡಿ, ಚಂದ್ರನಾತ ಬಸದಿ, ಮಂಜುನಾಥ ದೇಸ್ತಾನ ಮತ್ತೆ ಹೆಗ್ಗಡೆಯವರ ಅರಮನೆ ಕೂಡ ಸೇರಿಟು. ಧರ್ಮಸ್ಥಳಲಿ ಕುಡುಮದ ದೆವ್ವಗಳ ಗುಡಿಗ ಚಂದ್ರನಾತ ಬಸದಿ ಮತ್ತೆ ಮಂಜುನಾಥ ದೇಸ್ತಾನಗ ಇದ್ದೊ, ಇದ್ ಗ್ರಾಮ್ಯ, ಜೈನ ಮತ್ತೆ ವೈದಿಕ ಮತೀಯರ ಶ್ರದ್ದೆ ಬಕ್ತಿನ ಸಂಗಮ ಕ್ಷೇತ್ರನೂ ಆಗುಟು. ಧರ್ಮಸ್ಥಳಲಿ 39 ಅಡಿ ಎತ್ತರದ ಸುಮಾರು 175 ಟನ್ನುಗಳ ತೂಕ ಇರುವ ಗೊಮ್ಮಟನ ಕಲ್ಲ್‌ನ ಮೂರ್‌ತಿನ 1970ರ ದಶಕಲಿ ನಿಲ್ಸಿಯೊಳೊ.




ಪ್ರತಿವರ್ಸ ಇಲ್ಲಿ ಸರ್ವದರ್ಮ ಸಮ್ಮೇಳನ ಕಾರ್ಯಕ್ರಮಗ ಬಾರಿ ಪೊರ್ಲುಲಿ ನಡ್ದದೆ ಧರ್ಮಸ್ಥಳಕ್ಕೆ ನಮ್ಮ ನಾಡ್‌ನ ಎಲ್ಲ ಕಡೆಂದಲೂ ಸಂಪರ್ಕ ಮಾರ್ಗ ಉಟ್ಟು. ಕರೆಂಟ್, ಪೋಸ್ಟ್, ತಂತಿ ಮತ್ತೆ ದೂರವಾಣಿ ಸೊವ್‌ಲಬ್ಯಗ ಕೂಡ ಉಟ್ಟು. ಸಣ್ಣ ಸಾಲೆ ದೊಡ್ಡ ಸಾಲೆ ಹೈಸ್ಕೂಲ್ ಹಾಂಗೆನೆ ಉಜಿರೆಲ್ಲಿ ಶ್ರೀ ಮಂಜುನಾಥೇಶ್ವರ ಕಲಾ ಮತ್ತೆ ವಿಜ್ಞಾನ ಕಾಲೇಜಗಳ ಕೂಡ ದೇಸ್ತಾನದ ಕಡೆಂದ ನಡ್ಸಿಕಂಡ್ ಬರ್ತಾ ಒಳ.

ಕಾಡ್‌ನ ಪೊರ್ಲುನ ನಡುಲಿ ಧರ್ಮಸ್ಥಳಕೆ ಹೋವಲ್ಲಿ ನೂರೈವತ್ತ್ ಅಡಿ ಎತ್ತರದ ಲಾಯ್ಕ್‌ನ ಪ್ರವೇಸ ದ್ವಾರ ಉಟ್ಟು. ಎರ್ಡೂ ಕಡೆಲಿ ನಾಕಾರು ಮಾಳಿಗೆ ಇರುವ ಕ್ಷೇತ್ರಗ ಒಳ. ಸುಮಾರು ಇಪ್ಪತ್ತು ಅಡಿ ಎತ್ತರದ ಕಟ್ಟೆನ ಮೇಲೆ ಮೊಣ್ಣು, ಇಟ್ಟಿಗೆ ಮತ್ತೆ ಮರಂದ ಮಂಜುನಾಥ ದೇಸ್ತಾನ ಕಟ್ಟ್ಯೋಳ. ಇಲ್ಲಿನ ಎರ್ಡ್ ಕಡೆಗಳ ಒಳೆಗೆ ಮಂಜುನಾಥಸ್ವಾಮಿನ ಮೂಲ ಆಲಯ ಉಟ್ಟು. ಇದರ ಎದುರಕೆ ಅಣ್ಣಪ್ಪ, ಹಿಂದೆ ಗಣಪತಿ ಮತ್ತೆ ಹಕ್ಕಲೆ ಅಮ್ಮನವರ ಗುಡಿ ಉಟ್ಟು ಗುಡಿಗಳ ಬಾಗ್ಲ್‌ಗಳಿಗೆ ಮತ್ತೆ ಚೌಕಟ್ಟ್‌ಗಳಿಗೆ ಬೆಳ್ಳಿ ತಗಡ್‌ನ ಹೊದಿಕೆ ಹೊದ್‌ಸಿಯೊಳೊ ಒಳಗೆ ಮರದ ಕಂಬಗಳ ಮೇಲೆ ಮತ್ತೆ ಮೇಲ್ಚಾವಣಿಗಳಿಗೆ ಲಾಯ್ಕ್‌ನ ಕೆತ್ತನೆ ಕೆಲಸ ಮಾಡ್ಯೋಳ. ಮೋರೆ ಮಂಟಪದ ಬಲಪುಡೆಗೆ ದ್ವಾರದ ಎರಡೂ ಕಡೆಲಿ ಮೊಯಿಂಸನ ಆಕೃತಿನಂಗೆ ಎತ್ತರ ಇರ್‌ವ ದ್ವಾರಪಾಲಕನ ವಿಗ್ರಹ ಉಟ್ಟು ಇಲ್ಲಿನ ಸುರುನ ಮಾಳಿಗೆಲಿ ಚಿತ್ರಂಗ ಉಟ್ಟು. ದೇಸ್ತಾನದ ನಾಕೂ ಮೂಲೆಲಿ ಕಲ್ಲ ಇರುವ ನಾಕ್ ಗೋಪುರ ಉಟ್ಟು.

ದೇಸ್ತಾನದ ಎದುರುಗೆ ಹೆಗ್ಗಡೆಯವರ ಮನೆಂದ ಮೂರ್‌ನೇ ಮಾಳಿಗೆಲಿ ಇರುವ ದರ್ಪಣಮಂದಿರ ಪ್ರವಾಸ ಬಂದವುಕೆ ನೋಡಿಕೆ ಲಾಯ್ಕ್ ಇದ್ದದೆ. ಈ ಮನೆಂದ ಹಿಂದೆ ಇರುವ ಪುಷ್ಪೋದ್ಯಾನ ಮತ್ತೆ ಮೀವಕೆರೆ ಎಲ್ಲರ ಮನಸ್ಸುನ ಸೆಳ್ದದೆ. ಇಲ್ಲಿ ಇರುವ ಲಲಿತೋದ್ಯಾನಲಿ ಸುಮಾರು ಹೂಗಳ ಒಟ್ಟಿಗೆ ಕಣ್ಣು ಸೆಳೆವ ಮೊಯಿಂಸನಂಗೆ ಇರುವ ಗೊಂಬೆಗಸ ನೋಡಿಕೆ ಕುಸಿ ಕೊಟ್ಟದೆ. ವಸಂತಮಹಲ್ ಒಂದ್ ಸಣ್ಣ ಕಲಾವಸ್ತು ಪ್ರದರ್ಶನ ಮಂದಿರ. ಹಾಂಗೆನೆ ಧರ್ಮಸ್ಥಳದ ಲಕ್ಷದೀಪೋತ್ಸವ ಬಾರೀ ಪ್ರಸಿದ್ದ. ಇಲ್ಲಿಗೆ ದೂರದೂರದ ಊರುಗಂಳ್ದ ಜೆನ ಬಂದವೆ. ನವರಾತ್ರಿ, ಶಿವರಾತ್ರಿಗಳಲ್ಲಿ ಉತ್ಸವಗ ಗೌಜಿಲಿ ನಡ್ದದೆ ಆ ಹೊತ್ತುಲಿ ಬಾರೀ ಜೆನಗದ್ದಲ ಇದ್ದದೆ. ಹನ್ನೆರಡ್ ವರ್ಸಕ್ಕೊಮ್ಮೆ ನಡಾವಳಿ ತೇಳ್ವ ಉತ್ಸವ ನಡ್ದದೆ.

ಧರ್ಮಸ್ಥಳಲಿ ಬಕ್ತರ ಯಾತ್ರೆ ಮಾಡವರ ಉಪಯೋಗಕೆ ನೇತ್ರಾವತಿ ಮತ್ತೆ ವೈಶಾಲಿ ತೇಳ್ವ ಎರ್ಡ್ ದೊಡ್ಡ ಬಾಡಿಗೆ ಮಾಳಿಗೆಗಳ ಕಟ್ಟಿಯೊಳೊ. ದೇಸ್ತಾನದ ಬಲಕೆ ಇರ್‌ವ ಅನ್ನಪೂರ್ಣ ಕಟ್ಟಡಲಿ ಯೆಲ್ಲವ್ಕೆ ಯೆಲ್ಲಾ ಕಾಲಲು ದರ್ಮಕೆ ಊಟದ ವೆವಸ್ತೆ ಉಟ್ಟು. ಧರ್ಮಸ್ಥಳನ ಇದ್ಕೂ ಮುಂದೆ 'ಮಲರ್ಮಾಡಿ 'ಅಂತಳೂ ಅದಾಗಿ 'ಕುಡುಮ' ಅಂತನೂ ಕರ್‌ದೊಳೊ. ದೇವರಾಜ ಹೆಗ್ಗಡೆಯವರ ಕಾಲಲಿ ಉಡುಪಿನ ಸೋದೆ ಮಟದ ವಾದಿರಾಜ ಸ್ವಾಮಿಗ ಧರ್ಮಸ್ಥಳಕೆ ಬಂದ ಮೇಲೆ ಧರ್ಮಸ್ಥಳಂತ ಕರೆಯಕೆ ಸುರು ಮಾಡ್ದ. ಇಲ್ಲಿನ ಇತಿಯಾಸದ ಪ್ರಕಾರ ಸು. 500 ವರ್ಸಗಳ ಹಿಂದೆ ಬಿರ್ಮಣ್ಣ ಪೆರ್ಗ್ಗಡೆ ಮತ್ತೆ ಅವರ ಹೆಣ್ಣ್ ಹೆಗ್ಗಡತಿ ಅಮ್ಮೂದೇವಿ ಬಲ್ಲಾಳತಿಯರ ನೆಲ್ಯಾಡಿ ಬೀಡುನ ಮನೆಗೆ ಕುಮಾರಸ್ವಾಮಿ ಮತ್ತೆ ಕಾಳರಾಹು ದರ್ಮದೇವತೆಗ ವೇಸ ಮರ್‌ಸಿಕಂಡ್ ದಾರಿಲಿ ಹೋಗ್ವವರಾಂಗೆ ಬಂದ್, ಅವರ ಮನೆಲಿ ಒಳ್ಕಂಡು ಅವರ ಪ್ರೀತಿ ಉಪಚಾರನ ಮೆಚ್ಚಿಕಂಡ್ ಹೆಗ್ಗಡೆಯವರ ಕನ್ಸ್‌ಲಿ ನಿಜರೂಪಲಿ ಕಂಡ್ ಈ ಬೀಡುನ ನಾವುಗೆ ಉಳಿಯಕೆ ಕೊಡಿತನು. ನೀವು ಬೇರೆ ಮನೆ ಮಾಡಿಕಣಿತ ಹೇಳಿ ನಾವುಗೆ ಪರ್‌ವನಡಾವಳಿ, ಬೇರೆ ಬೇರೆ ಗುಡಿ, ಒಬ್ಬ ಪಾತ್ರಿ, ಉಯ್ಯಾಲೆ ಎಲ್ಲಾ ವೆವಸ್ತೆ ಮಾಡಿ. ಈ ಎಲ್ಲಾ ಕಾರ್ಯಗಳ ನಮ್ಮ ದೆವ್ವ ಅಣ್ಣಪ್ಪ ಮಾಡ್ದೆ. ಈ ದೇಸ್ತಾನದ ಮಹಿಮೆನ ಎಲ್ಲ ಕಡೆ ಹರ್‌ಂಡ್‌ವಾಂಗೆ ಮಾಡ್ದೆ... ಇಲ್ಲಿ ಎಲ್ಲವ್ಕ ಯಾಗೋಳು ದಾನದರ್ಮ ನಡ್ಕಂಡು ಇರಲಿ' ತ ಹೇಳಿ



ಧರ್ಮಸ್ಥಳ

ಮಾಯಲೋಕ ಸೇರ್‌ದಗಡ... ಹೆಗ್ಗಡೆ ದಂಪತಿಗ ದೆವ್ವಗಳ ಅಪ್ಪಣೆನ ಹಾಂಗೆ ನಡ್ಕಂಡ... ಮತ್ತೆ ಹೊಸ ಬೀಡ್‌ಗೆ ಹೋದ ದೆವ್ವಗ ನೆಲೆ ಆದ ಬದಿನೆಡೆ, ನೆಲ್ಯಾಡಿ ಬೀಡು ಅವರ ನೆಲೆಯಾಗಿ ನಮ್ಮ ಹೆಣ್ಣು ದೆವ್ವಗಾದ ಕನ್ಯಾಕುಮಾರಿ ಕಾಳರ್‌ಕಾಯಿಗಳೊಟ್ಟಿಗೆ ಬಂದ್ ನೆಲ್ಸಿದೊ. ಕುಡುಮದ ದೆವ್ವಗ ಮತ್ತೆ ಅಣ್ಣಪ್ಪ ದೆವ್ವಂದ ಆಗಿ ಮಂಗಳೂರುನ ಹಕ್ಕಲೆ ಕದ್ರಿನ ಮಂಜುನಾಥ ದೇವಸ್ದಾನದ ಸ್ತಾಪನೆ ಆತ್.

ಚಂದಯ್ಯ ಹೆಗ್ಗಡೆನ ಕಾಲಲಿ (1830–49) ದೇವಸ್ದಾನದ ಒಳೆಗೆನ ಪುಡೆನ ಕೆಲ್ಸ ಆತ್. ಹಾಂಗೆನೆ ಮಂಜಯ್ಯ ಹೆಗ್ಗಡೆ (1849–95) ಚತ್ರ ಹೊರಸುತ್ತುನ ಬಾಗ, ಎತ್ತರದ ಗೋಪುರ, ಉಗ್ರಾಣ, ರತ, ಆಬರಣ, ಪಲ್ಲಕ್ಕಿ, ಬಸದಿನ ಜೀರ್ಣೋದ್ದಾರ ಮತ್ತೆ ಕ್ಷೇತ್ರಶುದ್ಧಿ ಮಾಡ್ಸಿದ. ದೆವ್ವಗಳಿಗೆ ಮೂರ್ ಮಹಾದರ್ಮ ನಡಾವಳಿ, ಪೂಜೆ ಹೆಚ್ಚಿಗೆ ಮಾಡಿ ನಲ್ವತ್ತೈದು ವರ್ಷ ಆಳಿದ್ದೊ. ಮುಂದೆ ಬಂದ ಚಂದಯ್ಯ ಹೆಗ್ಗಡೆನ ಕಾಲಲಿ ದೆವ್ವದ ಗುಡಿಗಳ ಪೂರಾ ಹೊಸ್ತ್ ಕಟ್ಟಿದ. ದೂರಂದ ಬಂದವುಕೆ ಬಸದಿಗೆ ಪಂಚಕಲ್ಯಾಣ, ನಳ್ಳಿ ನೀರ್‌ನ ವೆವಸ್ತೆಗ ಆತ್.

ಅದಾಗಿ ಮಂಜಯ್ಯ ಹೆಗ್ಗಡೆವರ (1918– 55) ಕಾಲಲಿ ಧರ್ಮಸ್ಥಳದ ಪ್ರಬಾವ ಮತ್ತೆ ದೇಸ್ತಾನದ ಆಡಳಿತ ಶಿಸ್ತುಲೆ ಬೆಳ್ಕಂಡು ಬಾತ್. ದರ್ಮಾರ್ತ ಆಸ್ಪತ್ರೆ, ಸಿದ್ದವನಲಿ ಗುರುಕುಲ (1940), ಕಾರ್ತಿಕ ಲಕ್ಷ ದೀಪೋತ್ಸವದ ಕಾಲಕೆ ಸರ್ವದರ್ಮಸಮ್ಮೇಳನ ಇಂತವೆಲ್ಲ ಸುರಾಕಂಡು ಬಾತು. ನೇತ್ರಾವತಿಗೆ ಸಂಕ ಆತ್. ಸುತ್ತ ಇದ್ದ ಹಡ್ಲು ನೆಲ ಪೂರಾ ಲಾಯಿಕ್ಕ್ ಆಗಿ ಉದ್ಯಾನವನಗ ಕಾರಂಜಿಗ ಪೂರಾ ಕಟ್ಟಿದ. ನೀರು, ವಿದ್ಯುದ್ದೀಪಗಳ ವೆವಸ್ತೆ ಆತ್. ಇವರ ಕಾಲ ಆದಮೇಲೆ ಬಂದವು ರತ್ನವರ್ಮ ಹೆಗ್ಗಡೆಯವು ಮತ್ತೆ ಇವರ ಹಿರಿಯ ಮಙ್ಙ ವೀರೇಂದ್ರ ಹೆಗ್ಗಡೆಯವು. ಸಾಮಾಜಿಕ ಕಾರ್ಯದ ಪರಂಪರೆನ ಮುಂದುವರ್‌ಸಿದ ವೀರೇಂದ್ರ ಹೆಗ್ಗಡೆವು ಕಾರ್ಕಳದ ಮಹಾಶಿಲ್ಪಿ ರಂಜಾಳ ಗೋಪಾಲ ಶೆಣೈ ಅವರ ಕೈಲಿ ಗೊಮ್ಮಟನ ಪ್ರತಿಮೆನ ಕೆತ್ತಿಸಿಯೊಳ...

ಧರ್ಮಸ್ಥಳ ಈಗ ವೀರೇಂದ್ರ ಹೆಗ್ಗಡೆವರ ದರ್ಮಾದಿಕಾರತ್ವಲಿ ಸುಮಾರ್ ಚಟುವಟಿಕೆಗಳ ಪೂರ ಇಸಿಕಂಡ ದೊಡ್ಡ ದಾರ್ಮಿಕ ಕೇಂದ್ರ ಆಗುಟು. ಇಲ್ಲಿ 1979ರ್‌ಲಿ 51ನೆ ಅಕಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಎಂ. ಗೋಪಾಲಕೃಷ್ಣ ಅಡಿಗರ ಅದ್ಯಕ್ಷತೆಲಿ ನಡ್ದಿತ್.

ಧರ್ಮಸ್ಥಳದ ಕ್ಷೇತ್ರದ ವತಿಂದ ಧರ್ಮಸ್ಥಳದ ಹೊರಗೆ ಕಾಲೇಜುಗಳ ಕಟ್ಟಿಕಂಡ್ ನಡ್ಸಿಕಂಡ್ ಒಳೊ. ಮೈಸೂರ್‌ಲಿ ಒಂದ್ ಮ್ಯಾನೇಜ್‌ಮೆಂಟ್ ಕಾಲೇಜು (ಸ್ವಾಯತ್ತ ಸಂಸ್ತೆ) ಮತ್ತೆ ಒಂದ್ ಹೆಣ್ಮಕ್ಕಳ ಕಾಲೇಜುನ ಕಟ್ಟಿಯೊಳೊ. ದಾರವಾಡಲಿ ದಂತವಿಜ್ಞಾನ ಕಾಲೇಜು, ಹಾಂಗೇನೆ ಹಾಸನಲಿ ಆಯುರ್‌ವೇದ ಕಾಲೇಜುಗಳ ಶ್ರೀಕ್ಷೇತ್ರದ ವತಿಂದ ಕಟ್ಟಿಯೊಳೊ. ಸುಮಾರ್ ಕಡೆಗಳ್ಳಿ ಕಲ್ಯಾಣ ಮಂಟಪಗಳ ಕಟ್ಟಿಸಿ ಕಡಿಮೆಲಿ ಮೊದ್‌ವೆಗೆ ಅವಕಾಸ ಕೊಡ್ತಾ ಒಳ. ಧರ್ಮಸ್ಥಳಲ್ಲಿ 'ಮಂಜೂಷ' ತೇಳ್ವ ಹೆಸರುನ ವಸ್ತುಸಂಗ್ರಹಾಲಯನ ಕಟ್ಟ್ಯೊಳ. ಹಳ್ಳಿನ ಕೆಲಸ ಕಸುಬುಗಳಿಗೆ ಬೆಲೆ ಕೊಟ್ಟು ಜೆನಕೆ ಉದ್ಯೋಗ ಕೊಡ್ಸುವ ಯೋಜೆನೆಗಳ ಕೂಡ ಇಸಿಕಂಡಳ. ಇದರ್‌ಂದಾಗಿ ಸಾವುರಾರು ಜೆನ ಬೊದ್ಕು ಕಟ್ಟಿಕೊಂಡಳ. ಹಿಂದೆನ ಸುಮಾರ್ ದೇವಸ್ದಾನಗಳ ಜೀರ್ಣೋದ್ದಾರ ಕೆಲ್ಸಗ ಪೂರಾ ಕ್ಷೇತ್ರದ ಕಡೆಂದನೇ ನಡ್ಸಿಕಂಡ್ ಬರ್‌ತಾ ಒಳ. ಮೈಸೂರು ತಾಲ್ಲೊಕುನ ಬೋಗನಂದೀಶ್ವರ ದೇಸ್ತಾನ, ಮೂಡಿಗೆರೆ ತಾಲ್ಲೂಕುನ ಬೈರಾಪುರದ ನಾಣ್ಯದ ಬೈರವೇಶ್ವರ ದೇಸ್ತಾನ ಇದ್ಕೆ ಒಂದ್ ಉದಾಹರಣೆ ಆಗುಟು. ಈ ದೇಸ್ತಾನಲಿ ದರ್ಮಕೆ ಮೊದ್ವೆ ಕಾರ್ಯಕ್ರಮಗ ಕೂಡಾ ಆಗಾಗ ನಡಿತಾ ಇದ್ದದೆ. (ಜಿ.ಕೆ.)

**ನರ್‌ಸಣ್ಣ :** ಅರೆಬಾಸೆ ಪ್ರದೇಸಲಿ ಬವಿಸ್ಯ ಹೇಳಿಕಂಡ್ ಮನೆಮನೆಗೆ ತಿರ್‌ಗಾಡಿಕಂಡ್ ಬಾವ ಜೆನಂಗಳ ನರ್‌ಸಣ್ಣ ತ ಕರ್‌ದವೆ. ಬೇರೆ ಬೇರೆ ಊರುಲಿ ಇವ್‌ಕೆ ಬೇರೆ ಬೇರೆ ಹೆಸರ್‌ಲಿ ಕರ್‌ದವೆ. ಅದ್ ಯಾದ್‌ಂತೇಳ್ರೆ ಹಾಲಕ್ಕಿಯೊವು, ಬುಡ್‌ಬುಡ್‌ಕೆಯೊವುಂತ. ಇವ್ ಮೂಲಲಿ ಅರೆಬಾಸೆನೊವ್ ಅಲ್ಲ. ಹೊಟ್ಟೆಪಾಡ್‌ಗಾಗಿ ಕೆಲ್ಸ ಮಾಡಿಕಂಡ್ ಜೀವನ ನಡ್ಸೋಕುಂತ ಹೇಳಿಕಂಡ್ ಈ ನಾಡ್‌ಗೆ ಬಂದ್ ನೆಲೆವೂರ್‌ದವು. ಇವರ ಕೆಲ್ಸ ಮನೆ ಮನೆಗೆ ಹೋಗಿ ಲಕ್ಷಣ ಹೇಳಿಕಂಡ್ ದುಡ್ಡ್ ಸಂಪಾದನೆ ಮಾಡ್ದು. ಇವ್ ತಲೆಗೆ ಒಂದ್ ದೊಡ್ಡ ಮುಂಡಾಸ್ ಹಣೆಗೆ ಕೆಂಪು ಬೊಟ್ಟು ಇಸಿ ಕಚ್ಚೆ ಕಟ್ಟಿ ಹೆಗ್‌ಲಿಗೆ ಒಂದ್ ಜೋಳಿಗೆ ಹಾಕಿ ಕೈಲಿ ಕುರ್ ಕುರ್ ಮಾಮ ಹಿಡ್ಕಂಡ್ ಬಂದವೆ. ಕೈಲಿ ಒಂದ್ ಕೋಲ್ ಹಿಡ್‌ಕಂಡ್ ಬಾವ ಇವ್ ಒಳ್ಳೆದಾದೆ, ಒಳ್ಳೆದಾದೆ, ನೆಗೆ ವಾಹನ ಬಂದದೆ, ರತಲಿ ಹೋವ ಯೋಗ ನೀವ್ಗೆ ಉಟ್ಟ್ ತ ಮನೆಗೆ ಮಾರ್‌ಗಂದಲೇ ಹೇಳಿಕಂಡ್ ಬಂದವೆ. ಮನೆಗೆ ಬಂದ್ ಮನೆ ಯಜಮಾನ ಮತ್ತೆ ಒಳ್ದವರ ಲಕ್ಷಣ ಹೇಳಿ ಮನೆವರ ಹಕ್ಕಲೆಂದ ಅಕ್ಕಿ ಬಟ್ಟೆ ಕಾಯಿ ಇಲ್ಲರೆ ದುಡ್ಡ್ ಪಡ್ಕಂಡ್ ಮುಂದೆ ಹೋದು ಇವರ ಸಂಪ್ರದಾಯ. ಹಿಂದೆನ ಕಾಲಲಿ ಇವ್ ಮನೆಗೆ ಬರತಿದ್ದ ಕಾಲಲಿ ಸಣ್ಣ ಮಕ್ಕ ಇದ್ದರೆ, ಮಕ್ಕ ಉರ್ಪ ಬಂದರೆ, ಉಂಡರ್ಲೆರ್ ತ ಮಕ್ಕಳ ಹೆದ್ರ್‌ಸಿಕೆ ನರ್‌ಸಣ್ಣ ಬಾತ್ ನಿನ್ನ ಜೋಳಿಗೆಲಿ ತುಂಬುಸಿಕಂಡ್ ಹೋದೆ ಹೇಳ್ದರ ಕೇಳೊಕು. ಹೇಳ್ದರ ಕೇಳದ ಮಕ್ಕಳ ಮೇಲೆ ಅಂವನ ಕಣ್ಣ್ ಇರ್‌ದು ತ ಹೇಳಿ ಹಿರಿಯೊವು ಮಕ್ಕಳ ಹೆದ್ರ್‌ಸಿ ಸುಮ್ಮನಿರ್‌ಸ್‌ತ್ತಿದ್ದೊ, ಊಟ ಮಾಡ್ಸತಿದ್.

ನರ್‌ಸಣ್ಣನವರ ಹುಟ್ಟ್‌ನ ಬಗ್ಗೆ ಇರ್‌ವ ಕತೆ, ಬಾರಿ ಲಾಯ್ಕ್‌ನ ಕತೆ. ಮೂಡ ಕಾಲಲಿ ತಾರಕಾಸುರ ಮಕರಾಸುರ ಮತ್ತೆ ಯುದ್ದಮಾರಿಂತೇಳುವ ಮೂರ್ ಜೆನ ರಕ್ಕಸ ಅಣ್ಣ ತಮ್ಮಂದರಿದ್ದ ಇವುಕೆ ಒಬ್ಬ್‌ಳೇ ತಂಗೆ. ಅವ್‌ಳ್ ಬೂಮಿ ಮತ್ತೆ ಆಕಾಶದ ನೆಡುಲಿ ಹೆಬ್ಬೆಟ್ಟ್ ಮೇಲೆ ಅವರ ಪೇಟನ ಇಸಿಕಂಡ್ ಇತ್. ತಾರಕಾಸುರ ಮತ್ತೆ ಮಕರಾಸುರಂತೇಳೊವುಕೆ ಮಾಲಿ ಮತ್ತೆ ಸುಮಾಲಿಂತೇಳುವ ಇಬ್ಬೊರು ಹೆಣ್ಣ್. ಸಣ್ಣವಂಗೆ ಮೊದ್‌ವೆ ಆತ್ಲೆ ಸೂರರಾದ ಇವ್ ದೇವ್ರ್‌ಗಳ ಮತ್ತೆ ದೇವತೆಗಳ ಬಂದ್‌ಸಿ ಮೆಟ್ಲ್ ಮಾಡಿಕಂಡಿದ್ದ. ದೇವ್ರ್‌ಗಳಲ್ಲಿ ತ್ರಿಮೂರ್‌ತಿಗ ಮಾತ್ರ ಇವ್‌ಕೆ ಸಿಕ್ಕಿತ್ಲೆ. ಇವ್‌ಕೆ ಇಸ್ಟ್ ಸಕ್ತಿ ಬಾಕೆ ಕಾರಣ ಅವರ ಪತಿವೃತೆ ಹೆಣ್ಣ್‌ಗಳ್‌ಂದಾಗಿ. ಒಮ್ಮೆ ನಾರದ ತ್ರಿಮೂರ್‌ತಿಗಳ ಹಕ್ಕಲೆ ಬಂದ್‌ದ್ ರಕ್ಕಸರ ಹಿಂಗೆ ಬೆಳೆಕೆ ಬುಟ್ಟರೆ ದೇವತೆಗಳಿಗೆ ಕಸ್ಟ ಆದೆ ತ ಹೇಳ್ವೆ. ಎಲ್ಲಿ ನೋಡ್ರೂ ಅವರ್‌ದೆ ಕಾಟ. ಏನಾರ್ ಮಾಡಿ ಅವರ ನಾಸ ಮಾಡೋಕುಂತೇಳಿ ತ್ರಿಮೂರ್‌ತಿಗಳೊಟ್ಟಿಗೆ ಬೇಡಿಕಂದವೆ. ಅದ್ಕೆ ತ್ರಿಮೂರ್‌ತಿಗ ನಾರದ ಮುನಿಗಳೊಟ್ಟಿಗೆ ಒಂದ್ ಪರಿಹಾರನ ಕಂಡ್ ಹಿಡೆಕೆ ಹೇಳ್ವೆ. ಅದ್ಕೆ ನಾರದರ್ ರಕ್ಕಸರ ಹೆಣ್ಣ್‌ಂದರ ಪತಿವೃತೆ ಬಂಗ ಬಾವಂಗೆ ಮಾಡ್ರೆ ಆ ರಕ್ಕಸರ ಸೊಕ್ಕು ಮುರ್‌ದದೆಂತೇಳ್ವೆ. ನಾರದರ್ ಕೃಷ್ಣನೊಟ್ಟಿಗೆ ಮಾರಮ್ಮನ ಕಾಸಿ ಬಂಡಾರನ ತಲೆಗೆ ಉಜ್ಜಿಕಂಡ್ ತಲೆಂದ ಗಡ್ಡದವರೆಗೆ ಅಡ್ಡ ಪಟ್ಟಿ ಕಟ್ಟಿ, ಕಚ್ಚೆವುಟ್ಟ್ ಕೋಟ್ ಹಾಕಿ ಹೆಗ್‌ಲ್ ಮೇಲೆ ಬೇರೆ ಬಣ್ಣ ಬಣ್ಣದ ಬಟ್ಟೆಗಳ ಹಾಕಿಕಂಡ್ ಸೊಂಟಕ್ಕೆ ಕೆಂಪ್ ಬಟ್ಟೆ ಕಟ್ಟಿಕಂಡ್ ಹಣೆಗೆ ಕುಂಕುಮ ಬಸ್ಮ ಹಾಕಂಡ್ ಬುಡ್‌ಬುಡಿಕೆ ಹಿಡ್ಕಂಡ್ ಮಾಯಾ ವೇಸಲಿ ರಕ್ಕಸರ ಪಟ್ಟಣಕ್ಕೆ




ಹೋಗಿ ಮಾಲಿ ಸುಮಾಲಿನ ಪತಿವ್ರತೆತನಕೆ ಅಪಚಾರ ಆವಂಗೆ ಮಾಡ್ ತ ಹೇಳ್ವೆ. ಕೃಷ್ಣ ನಾರದರ ಮಾತ್‌ನಂಗೆ ರಕ್ಕಸರ ಪಟ್ಟಣಕ್ಕೆ ಹೋಗಿ ಮಾಲಿ ಸುಮಾಲಿನ ಬೇಟಿ ಮಾಡ್ವೆ. ಮಾಲಿ ಸುಮಾಲಿ ಮಕ್ಕ ಇಲ್ಲದೆ ಕೊರ್‌ಗ್ತ್ತಿದ್ದವೆ. ಕೃಷ್ಣ ಅವರಕ್ಕಲೆ ಹೋಗಿ ಹೊತ್ತ್ ಹುಟ್ಟಿಕೆ ಮುಂದೆ ಇಲ್ಲೊಂದ್ ಅಶ್ವತ ಮರ ಹುಟ್ಟಿದೆ ಅದ್ಕೆ ಪೂಜೆ ಮಾಡಿ ಮೂರ್ ಪ್ರದಕ್ಷಿಣೆ ಹಾಕಿರೆ ಮಕ್ಕ ಆದವೆಂತೇಳಿ ಬವಿಸ್ಯ ನುಡ್ದವೆ. ಮಾಲಿ ಸುಮಾಲಿ ಮಾರ್ ವೇಸಲಿದ್ದ ಕೃಷ್ಣನ ಮಾತ್ ಕೇಳಿ ಪರೀಕ್ಷೆ ಮಾಡಿಕಾಗಿ ಪ್ರದಕ್ಷಿಣೆ ಮಾಡ್ವೆ ಇದರ್‌ಂದಾಗಿ ಅವರ ಪಾವಿತ್ರ್ಯತೆಗೆ ದಕ್ಕೆ ಬಂದದೆ. ಮತ್ತೆ ಕೃಷ್ಣ ರಕ್ಕಸರ ನಾಶ ಮಾಡ್ದೆ. ಹಿಂಗೆ ಕೃಷ್ಣ ರಕ್ಕಸರ ನಾಶ ಮಾಡಿ ಬುಡ್‌ಬುಡಿಕೆ ವೇಸಲಿ ಬಾತ ಇರ್‌ಕನ ಒಬ್ಬ ಅಂವನ ಎದ್ರ್‌ಗೆ ಸಿಕ್ಕಿ ಕೃಷ್ಣನ ಕೈಲಿದ್ದ ಕುಡಿಕೆನ ಕೊಡಿ ನಾ ನಿಮ್ಮ ಹೆಸರ್ ಹೇಳಿಕಂಡ್ ಜೀವನ ಮಾಡ್‌ನೆ ತ ಕೇಳಿಕಂಡದೆ. ಅದ್ಕೆ ಕೃಷ್ಣ ಒಪ್ಪಿ ವೇಷಬೂಷಣ ಎಲ್ಲನೂ ಕೊಟ್ಟ್ ಈ ಬೂಮಿಲಿ ಸೂರ್ಯ ಚಂದ್ರರ್ ಇರ್‌ವವರೆಗೆ ನಿನ್ನ ವಂಶದವ್‌ಕೆ ಬುಡ್‌ಬುಡ್‌ಕೆವು ತ ಹೆಸ್ರ್ ಬರ್‌ಲಿಂತ ಹೇಳ್ವೆ. ಹಿಂಗೆ ಆ ಕೃಷ್ಣನ ದಯೆಂದಾಗಿ ಈ ಬುಡ್‌ಬುಡ್‌ಕೆಯವರ ಸಂತತಿ ಬೆಳ್ದ್ ಬಾತ್‌ಂತೇಳ್ವ ಪ್ರತೀತಿ ಉಟ್ಟ್. (ಕೆ.ಕೆ.ಎಸ್.)

**ನಲಿಕೆ :** ಪ್ರಾದೇಶಿಕ ಬಿನ್ನತೆಲಿ ನಲಿಕೆವು ಅಜಲರ್, ಕೋಪಾಲ, ಪಾಣಾರ ಅಂತೆಲ್ಲ ಹೆಸರ್‌ಂದ ಕರ್‌ಸಿಕೊಂಡವೆ. ತುಳುನಾಡ್‌ನ ಆದಿವಾಸಿ ಪಂಗಡಲಿ ಇದ್ ಸಾ ಒಂದ್. ಇವ್ ತುಳು ಬಾಸೆನ ಮನೆಮಾತಾಗಿ ಮಾತಾಡ್ವೆ. ತುಳುಬಾಷಿಕ ಪದ 'ನಲಿಕೆ' ಕೊಣ್‌ತದ ಅರ್‌ತ ಕೊಟ್ಟದೆ. ನಲಿಕೆವು ತಮ್ಮ ಮೂಲದ ಐತಿಹ್ಯವೊಂದರ ಹಿಂಗೆ ಹೇಳಿಕೊಂಡವೆ. 'ವಿಶ್ವಕರ್ಮ ಚಂದನದ ಗೊಂಬೆನ ಮಾಡ್ತ್ ಗಡ. ಅದ್ಕೆ ಈಸ್ವರ ಜೀವಕಳೆನ ಕೊಟ್ಟ್ ನೀನು ಜೆನಂಗಳ ಕೊಣ್ಸಿಕಂಡ್ ಇರ್‌ತ ಅನುಗ್ರಹಿಸಿ ಕಳ್ಸಿತ್ ಗಡ' (ಸುಶೀಲಾ ಉಪಾದ್ಯಾಯ, 1987; ಪು.ಸಂ.19). ಈ ಪ್ರಕಾರಲಿ ಇಂದ್ ಸಾ ನಲಿಕೆಯವು ಕೊಣಿಯವಾಗಿ, ಸಾವಿರದೊಂದು ದೆವ್ವಗಳಿಗೆ ಕೋಲ ಕಟ್ಟುವ ಅದಿಕಾರ ನಾವು ಪಡ್ದೊಳಂತ ಹೇಳಿಕಂಡವೆ. ನಾವು ಮೂರು ಲೋಕ ಸಂಚಾರಿಗತ ಪಿರಾಕ್ಲಿ ಊರು ಸುತ್ತುವವಾಗಿದ್ದೊ. ಇವು ದೆವ್ವಾರಾದನಾ ಜಗತ್ತ್‌ಲಿ ಕಲಾವಿದಕರಾಗಿ ಜೊತೆಗೆ ಮೊಂದುರಿ ಮೊಟ್ಟಾಳೆಗಳ ತಯರ್‌ಸುವ ಕರಕುಶಲ ಕರ್ಮಿಗ ಸಾ ಆಗ್ಯೊಳ, ಈ ಕಸುಬು ಸಮ್ಮಂದಿ ಹಿನ್ನೆಲೆಲಿ ಊರೂರು ಸುತ್ತುದು ಇವ್ಕೆ ಅನಿವಾರ್ಯವಾದೆ. ರಾಮಕೃಷ್ಣ ಆಚಾರ್ (1995) ನಲಿಕೆಯವರ ಕುರ್‌ತು ಹೊಂದುವ ಅಬಿಪ್ರಾಯಗಳ ಹೇಳೊಕು. ನಂಬಿಕೆ ಮತ್ತೆ ಆಚರಣೆನ ವಿಕಾಸದೊಟ್ಟಿಗೆ ದೆವ್ವಾರಾದನೆಲಿ ಸಂಬಾಸಣೆ, ಹಾಡು, ಕುಣ್ತ ಅದ್ಕೆ ಬೇಕಾದ ವೇಸ ಅಲಂಕಾರಗಳ ದೇಶೀಯ ನೆಲೆಲಿ ಕಲ್ಸಿಕೊಟ್ಟ ಆದಿವಾಸಿಗಳ್‌ಲಿ ನಲಿಕೆಯವು ಪ್ರಮುಕರ್. ತುಳುನಾಡ್‌ನ ಬಹುತೇಕ ಸಮುದಾಯದವ್ ವಲಸಿಗರ್. ವಲಸಿಗರಾದವು ಇಲ್ಲಿನ ಮೂಲನಿವಾಸಿಗಳ ಆರಾದನಾ ಪೊದ್ದತಿಗಳ ಒಪ್ಪಿಕೊಂಡ. ಅದರ ಆಚರಣೆನ ನಡೆಸ್ಸಕಾದ ಅನಿವಾರ್ಯತೆಲಿ ಈ ಕ್ಷೇತ್ರಲಿ ನೈಪುಣ್ಯ ಇದ್ದ ಸಮುದಾಯಗಳ ಅವು ಬಳ್ಸಿಕಂಡೊ. ಪರವರ್ ದೆವ್ವಂಗಳ ಕತೆನ ರೂಪಲಿ ಪಾಡ್ದನ – ಪಳಮೆಗಳ ಕಟ್ಟಿ ಹಾಡುವೆ, ನಲಿಕೆಯವು ದೆವ್ವಂಗಳ ಕಟ್ಟಿ ಕೊಣ್‌ತ ನಡ್ಸ್‌ವಲ್ಲಿ ನಿಪುಣರಾಗಿದ್ದ ಕಾರಣಲಿ ಆ ಮೂಲಗಳ್‌ಲಿ ತಮ್ಮ ಪಂಗಡದ ಹೆಸರುಗಳ ಒಳ್ಸಿಕೊಂಡೊಳ.

ದೆವ್ವಾರದನೆಲಿ ಸಂವಾದಕೆ ಜಾಗೆ ಇರ್‌ವಂಗೆ ಕೊಣ್‌ತನೂ ಇಲ್ಲಿ ಪ್ರದಾನ ಆಗುಟು. ಅಬಿನಯ, ಕೊಣ್‌ತ ದೆವ್ವಾರಾದನೆಲಿ ನಲಿಕೆಯವು ಸಾ ಪರವ ಪಂಬದರಷ್ಟೇ ಸಮರ್ತರಾಗಿ ಒಳೊ. ನಲಿಕೆಯವು, ವರ್‌ಸೋಳ್ ಆಟಿಕಳೆಂಜ, ಸೋಣದ ಜೋಗಿ, ಕನ್ಯಾಪು, ಮಾಯಿದ ಪುರುಷ, ಈ ಎಲ್ಲಾ ಕೊಣ್‌ತಗ ಪೊದ್ಯದೊಟ್ಟಿಗೆ ಆಚರಣೆತೇಳುವ ಪರಿಕಲ್ಪನೆಲಿ ನಡೆಸಿಕೊಟ್ಟವೆ.

ಜಾತಿ ಕಟ್ಟ್‌ನ ಗ್ರಹಿಕೆಲಿ ನಲಿಕೆವು ತುಳುನಾಡ್‌ನೆ ದೆವ್ವಾರಾದನೆಲಿ **'ಹೊರಮುಕ'** ಆಗಿಯೊಳ ಅಂತನೇ ಹೇಳೊಕಾದೆ. ಇದರ್‌ಂದಾಗಿ ಉಲ್ಲಾಕ್ಲು ಆರಾದನೆಲಿ ಇವ್ ಚಾವಡಿ / ಮಲೆ ಉಲ್ಲಾಕ್ಲು ತೇಳ್‌ವ ಊರು ಕಟ್ಟಳೆನ ದೆವ್ವಗಳಿಗೆ ಕಲಾವಿದರಾಗಿ ಸೇರ್‌ವಂಗಾಗುಟು. ನಲಿಕೆಯವು ಮಾಡ ಸ್ತಾನಂದ ಹೊರಗೆನ ಕಳಲಿ ಕಲ್ಕುಡ– ಕಲ್ಲುರ್ಟಿ, ಪಂಜುರ್‌ಲಿ, ಪುರುಷ, ಬಚ್ಚನಾಯಕ, ಶಿರಾಡಿ, ರುದ್ರಾಂಡಿ, ಹಳ್ಳತ್ತಾಯ, ಕಡಂಬಳಿತ್ತಾಯ ಇಂತೆಲ್ಲಾ ದೆವ್ವಂಗಳ ಕಟ್ಟುವೆ.

ಪರವ, ನಲಿಕೆಯವ್ಕೆ ಸಮ್ಮಂದಪಟ್ಟ ಅನದಿಕೃತ ಸಾಸನದಂಗೆ ಪ್ರತ್ಯೇಕ ಕೆಲ ಊರು ಕಟ್ಟ್ ಕಟ್ಟಳೆಗ ಒಳೊ. ಆ ಪ್ರಕಾರಲಿ ಇವು ವರ್‌ಸೊಳ್ ನಿರ್‌ದಿಷ್ಟ ವಿಸೇಸ ದಿನಗ ಆದ ದೀಪೊಳಿ, ಕೆಡ್ಡಸ, ಸಗ್ಗಿಹುಣ್ಣಮೆ, ಬಿಷು ಸಂಕ್ರಮಣಲಿ ಊರ್‌ಲಿ ಹೋಗಿದ್ ಆಹಾರ ಸಾಮಗ್ರಿಗಳ ಸಂಗ್ರಹಿಸುವ ಪೊದ್ದತಿ ಇತ್ತ್. ನಲಿಕೆಯವ್ ಮಾಟ, ಮಂತ್ರ ಮಾಡ್‌ವ ಕುಶಲಿಗರ್‌ತ ಗುರ್‌ತಿಸಿಕೊಂಡೊಳೊ. ಇವ್ ಪಲ ಜೋತಿಷ್ಯ ಹೇಳ್ವೆ, ತಾಯ್ತ ಕಟ್ಟುವ, ಕೊಳೆ ಬುಡ್ಸುದು, ಮನೆ ಆವರಣಕ್ಕೆ ಕೃತ್ಯಮ ಆಗದಾಂಗೆ ಕಾಯಿನ (ತೆಂಗಿನ ಕಾಯಿ) ಮಂತ್ರಿಸಿ ಕಟ್ಟ್‌ವ ಕೆಲ್ಸಾನ ಮಾಡ್‌ವೆ. (ಪಿ.ಕೆ.)

**ನಾಕೂರು ಗಯ :** ದಕ್ಷಿಣಕನ್ನಡ ಪುಣ್ಯಕ್ಷೇತ್ರಗಳ ನೆಲೆಬೀಡ್. ಇಲ್ಲಿ ಸಾವಿರಾರ್ ದೆವ್ವ ದೇವ್ರುಗ ನಂಬಿದ ಬಕ್ತರ ಕಾಪಾಡ್‌ತೊಳೊ. ಪಚ್ಚೆಕಾಡ್‌ನ ನಡುಲಿ ಮೈಮನಸ್ಸ್‌ನ ತಂಪು ಮಾಡ್‌ವ ದೇಸ್ತಾನ ಒಂದ್ ಕಡೆಲಿ ಇದ್ದರೆ, ಮತ್ತೊಂದ್ ಕಡೆಲಿ ತಮ್ಮ ಕಾರ್ಣಿಕ ಸಕ್ತಿಂದ ಜೆನರ ಕಾಪಡ್‌ವ ದೆವ್ವಗ ಇಲ್ಲಿ ಒಳೊ. ನಮ್ಮ ಊರು ದೆವ್ವದೇವ್‌ರುಗಳ ನೆಲೆಬೀಡ್, ಸೀಮೆ, ಮಾಗಣೆ, ಗ್ರಾಮ, ಕರೆ, ಹಿಂಗೆ ಪ್ರತಿಯೊಂದ್ ವಿಬಾಗಕೆ ದೆವ್ವಗಳ ಮಾಯದ ಅದಿಕಾರಿಗಾಗಿ ನಿರ್ಣಯ ಮಾಡಿ ಅದರಂಗೆ ದೆವ್ವ ಪ್ರೇರಣೆನಂಗೆ ರಾಜ್ಯಬಾರ ಮಾಡ್ದವು ನಮ್ಮ ಮೂಡಜರ್.

ಸುತ್ತ ಕಾಡ್‌ಗುಡ್ಡೆಗಳ ನಡುಲಿ ಲಾಯ್ಕಲಿಕಾಂಬ ಊರೇ ಕೋಡಿಂಬಾಳ. ಕೋಡಿಂಬಾಳಲಿ ಜೆನರ ನಂಬಿಕೆನ ಒಳ್‌ಸಿಕಂಡ್ ತನ್ನ ಕಾರಣಿಕೆನ ತೋರ್‌ಸತ್ತಿದ್ದ ಸತ್ಯದ ಜಾಗೆಂತೇಳಿರೆ ಅದ್ ನಾಕೂರುಕಯ. ಇದ್ ಪ್ರಕೃತಿಂದನೇ ದೆವ್ವನಿರ್ಮಿತಾದ ಕ್ಷೇತ್ರ. ಈ ಕ್ಷೇತ್ರ ನಮ್ಮ ದಕ್ಷಿಣಕನ್ನಡ ಜಿಲ್ಲೆನ ಕಡಬ ತಾಲೂಕ್‌ನ ಕೋಡಿಂಬಾಳ ಮತ್ತೆ ಎಡಮಂಗಲ ಗ್ರಾಮದ ನಾಕೂರು ತೇಳ್‌ವಲ್ಲಿ ಕುಮಾರದಾರ ಹಳ್ಳಲಿರ್‌ವ ಒಂದ್ ಪವಿತ್ರ ಸುಳಿ ಇರ್‌ವ ಕಯ ಜಾಗೆ ಆಗುಟು. ಈ ಕಯ ಸಾದಾರಣ ಆಗಿ 60 ಮೀಟರ್ ಅಗಲ 150 ಮೀಟರ್ ಉದ್ದ ಉಟ್ಟು. ಆದರೆ ಇನ್ನೂ ಈ ಕಯದ ಚಾಳನ ಕಂಡ್‌ಹಿಡಿಯಕೆ ಸಾದ್ಯ ಆತ್‌ಲೆಗಡ. ಹಿಂದೆ ಇಲ್ಲಿ ರೈಲ್ ಮಾರ್‌ಗ ಮಾಡಿಕಂಡಿರಿಕನ ಸೇತ್‌ವೆ ಕಟ್ಟಿಕೆ ಸರ್‌ವೆ ಮಾಡ್‌ತಿದ್ದೊ. ಆಗ ಕಯಲಿ ಸೇತ್‌ವೆ ಆದಾರ ಸ್ತಂಬ ನಿರ್ಮಿಸಿಕೆ ಚಾಳ ನೋಡಿರೆ ಚಾಳ ಕಂಡ್‌ಹಿಡಿಯಕೆ ಆಗದೆ ಮತ್ತೆ ಕಯದ ಮೇಲೆನ ಬಾಗಲಿ ಸೇತ್‌ವೆನ ನಿರ್ಮಾಣ ಮಾಡಿಯೊಳತ ಇಲ್ಲಿನ ಹಕ್ಕಲೆನವು ಹೇಳ್‌ವೆ. ಈ ಜಾಗೆನ ಬಗ್ಗೆ ಇರ್‌ವ ಜೆನಪದ ಕತೆಗ :

**1. ಪಡೆಜ್ಜರ್ ಗೌಡರ ಕತೆ :** ಕಯದ ಹಕ್ಕಲೆ ಇರ್‌ವ ಪಡೆಜ್ಜರ್ ಗೌಡರ ಮನೆತನದ ಒಂದ್ ಕುಟುಂಬದವ್. ಗದ್ದೆ ಬೇಸಾಯನ ಮಾಡಿಕಂಡ್ ಅವರ ಬೊದ್‌ಕ್‌ನ ನಡ್‌ಸಿಕಂಡ್ ಬರತಿದ್ದೊ. ಹಿಂಗೆ ಇರಿಕನ ಒಂದ್ ದಿನ ಗದ್ದೆಲಿ ಬತ್ತದ ಅಗೆ ಬೆಳ್‌ಕಂಡ್ ಬಾಕನ ಕತ್ತಲೆಗೆ ಬಂದ್ ಈ ಅಗೆನ ಯಾದೋ ಪ್ರಾಣಿಗ ಮೇದ್ ಹಾಳ್ ಮಾಡ್‌ದೊ. ಇದ್ ಗೌಡ್ರುಗೆ ಗೊತ್ತಾತ್. ಅಂದ್‌ಂದ ಅವು ಕೆಲು ದಿನಗಳ ಮುಟ್ಟ ಪ್ರಯತ್ನ ಪಟ್ಟ್ ರಾತ್ರೆ ಪಾರ ಕುದ್ದ್ ನೋಡಿಕನ ಸಾದಾರಣ ಬೊಳ್ಪು ಬುಡಿಕನ ಕಪಿಲೆ ದನಗ ಬಂದ್ ಇವರ ಗದ್ದೆನ ಮೇದ್ ಹಾಳ್ ಮಾಡ್‌ದು ಇವ್‌ಕೆ ಕಂಡ್‌ಬಾತ್. ಆಗ ಗೌಡ್‌ರ್ ಅದರ ಹಿಂದೆಂದಳೆ ನಾಕೂರುಕಯಲಿರ್‌ವ ಪ್ರದೇಸಕ್ಕೆ ಬಂದೊ. ದನಗ ಗಯಾಪ್ರದೇಸದ ಹಳ್ಳಕೆ ಹಾರ್‌ದು ಕಂಡತ್. ಆಗ ಗೌಡ್‌ರ್ ಅದರ ಬೀಲನ ಹಿಡ್‌ಕಂಡ್ ಅದರೊಟ್ಟಿಗೆ ಹಳ್ಳಕೆ ಹಾರ್‌ದೊ. ಅಲ್ಲಿ ಹಳ್ಳದ ಅಡಿಲಿ ಅವ್‌ಕೆ ಗೋಪಾಲಕೃಷ್ಣ ದೇವ್‌ರ ಸಾನಿದ್ಯ ಇರ್‌ದು ಗೊತ್ತಾತ್. ಅಲ್ಲಿ ಗೊತ್ತಾದ ವಿಚಾರನ ಯಾರಿಗೂ ಹೇಳಿಕೆ ಬೊತ್, ಹೇಳ್‌ರೆ ಕುಟುಂಬ ಕಸ್ಟಕೆ ಗುರಿ ಆದೆ ಮತ್ತೆ ಅಂಗ ಊನ ಆದೆತ ಅವಂಗೆ ಅಲ್ಲಿ ಆಜ್ಞೆ ಆಗಿದ್ದದೆ. ಆದ್‌ರೆ ಮೇಲೆ ಬಂದ ಗೌಡ ಅಂವನ ಹೆಣ್ಣ್ ನ ಒತ್ತಾಯಕ್ಕಾಗಿ ಆ ವಿಸಯನ ಅಂವನ ಹೆಣ್ಣ್‌ಗೆ ಹೇಳ್‌ದೆ. ಮತ್ತೆ ಈ ವಿಸ್ಯ ಇಡೀ ಊರಿಗೆ ಗೊತ್ತಾದೆ. ನಾಕೂರು ಗಯಾ ಕ್ಷೇತ್ರದ ಹಕ್ಕಲೆ ಆ ಕುಟುಂಬ ಉಟ್ಟು. ಈ ಕುಟುಂಬದವ್‌ಕೆ ಈಗಳು ಕೆಬಿ ಕೇಳದ ಸಮಸ್ಯೆ ಉಟ್ಟು.

**2. ಹುತ್ತಕ್ಕೆ ಹಾಲ್ ಕೊಡ್‌ವ ಹಸ್ :** ಪುರುಷೋತ್ತಮ ಬಿಳಿಮಲೆ ಇವರ ಜೆನ ಸಂಸ್ಕೃತಿಜೆನಪದ ಲೇಕನ ಕೃತಿಲಿ ಇರುವ ಹಂಗೆ ಸುಮಾರ್ ಹಿಂದೆನೆ ನಾಕೂರ್‌ನ ಹಕ್ಕಲೆ ದನ ಮೇಸ್‌ವ ಒಬ್ಬ ಹೈದ ಇತ್. ದನಗಳ ಲಾಯಿಕ್ ಮೇಸಿ ಹಿಂಬೊತ್ತು ಹಟ್ಟಿಗೆ ಹೊಡ್‌ಕಂಡ್ ಬಾದು ಅಂವನ ಯಾಗೋಳ್‌ನ ಕೆಲ್‌ಸ ಆಗಿತ್. ಒಂದ್ ದಿನ ದನಗಳ ಯಜಮಾನ ಹೈದಂಗೆ ಜೋರ್ ಮಾಡ್ದೆ. ಕಪಿಲೆ ದನದ ಕೆಚ್ಚ್‌ಲ್ ಬರಿದಾಗುಟ್ಟು, ಕಾಡ್‌ಲಿ ದನಗಳ ಮೇಸುದು ಬುಟ್ಟ್ ಕೆಚ್ಚ್‌ಲ್‌ಂದ ಹಾಲ್ ಕುಡಿಯಕೆ ಕಲ್ತೊಳನಾ... ?ಆಗ ಹೈದ ನಾ ಹಂಗೆ ಮಾಡ್‌ಲೆತ ಪ್ರಮಾಣ ಮಾಡಿ ಹೇಳ್‌ದೆ. ಈ ಗಟನೆ ಮಾರ್‌ನೆ ದಿನನೂ ಹಿಂಗೆ ಮುಂದುವರ್‌ದದೆ. ಈ ಸರ್‌ತಿ ಹೈದ ಒಂದೆರಡ್ ಪೆಟ್ಟ್ ಸನ ತಿಂದದೆ. ಮಾರ್‌ನೆ ದಿನ ಹೈದ ಅದರ ಬೆನ್ನ್ ಬುಟ್ಟತ್‌ಲೆ. ಅಂವ ನೋಡಿಕಂಡ್ ಇದ್ದಂಗೆ ಕಪಿಲೆ ಕಾಡೊಳಗೆ ಬಲ್ಲೆಲಿ ಇದ್ದ ಹುತ್ತಕೆ ಹಾಲ್ ಕೊಟ್ಟತ್. ಒಂದೆ ಸರಿ ಹಾರ್‌ದ ಹೈದ ಕಪಿಲೆನ ಬೀಲ ಹಿಡ್ತ್, ಕಪಿಲೆ ಸೀದ ನಾಕೂರು ಹಳ್ಳಕೆ ಹಾರ್‌ತ್. ಒಟ್ಟಿಗೆ ಹೈದನ ಎಳ್‌ಕಂಡ್ ಹೋತ್. ಹಂಗೇ ಕಪಿಲೆ ದನ ಹೈದನೊಟ್ಟಿಗೆ ಕಾನೆ ಆದ ಜಾಗಲಿ ಲಿಂಗರೂಪೀ ದೆವ್ವವೊಂದಿತ್. ಆ ದೆವ್ವಕೆ ಒಂದ್ ಚಾವಡಿನೂ ಇತ್. ಈಗ ಅದ್ ಹಳ್ಳಲಿ ಮುಳ್‌ಂಗಿ ಹೋದರ್‌ಂದ ಬೇರೆಯವ್‌ಕೆ ಕಾಂಬೊದ್‌ಲೆ. ಆದ್‌ರೆ ಹಳ್ಳಲಿ ನೀರ್ ಕಮ್ಮಿ ಆಕನ ಮಡಿ ಆಗಿರೊವ್‌ಕೆ ಸ್ತಾನದ ಕಳ್‌ಸ ಕಂಡದೆತ ಹೇಳ್‌ವೆ.

**ಹಾರಂವ ಮತ್ತೆ ಅವಂನ ಹೆಣ್ಣ್ :** ಬಾಳ ಹಿಂದೆ ಈಗ ಕಯ ಇರ್‌ವ ಮೇಲೆನ ಬಾಗದ ಬಲ್‌ದ ಕಡೆನ ಕರೆಲಿ ಒಂದ್ ಗೋಪಾಲಕೃಸ್ಣ ದೇವ್‌ರ ದೇಸ್ತಾನ ಇತ್ ಗಡ. ಅಲ್ಲಿಗೆ ಪೂಜೆಮಾಡಿಕೆ ಎಡ್‌ದಕಡೆಂದ ಒಬ್ಬ ಪೂಜಾರಿ ಪೂಜೆಗೆ ಬಾಕನ ಅವ ಹಳ್ಳದ ಸುಳಿನ ದಾಟಿಕೆ ಬಾಳೆಎಲೆನ ನೀರ್ ಮೇಲೆ ಇಸಿ ಆ ಬಾಳೆಲೆ ಮೇಲೆ ಕುದ್ದ್ ಕಂಡ್ ಬಲ್‌ದ ಬಾಗಲಿ ಇದ್ದ ದೇಸ್ತಾನಕೆ ಪೂಜೆಗೆ ಬರ್‌ತಿದ್ದೊ. ಹಿಂಗೆ ಹಳ್ಳ, ದಿನ ಆದಂಗೆ ಹಾಂಗೆ ದೇಸ್ತಾನಕೆ ಪೂಜಾರಿ ಹೋಗಿ ಬಾದರ ನೋಡ್‌ದ ಅಂವನ ಹೆಣ್ಣ್ ಒಂದ್ ದಿನ ನಾನು ನಿಮ್ಮೊಟ್ಟಿಗೆ ದೇಸ್ತಾನಕೆ ಬಂದನೆ ತ ಮಳ್‌ಗಾಲಲಿ ಹಟ ಮಾಡ್ತ್‌ಗಡ ಹಂಗೆನೇ ಪೂಜಾರಿ ನೀ ಬಾದು ಬೇಡಂತ ಹೇಳಿರು ಕೇಳದೆ ಹಟಮಾರಿತನಂದ ಪೂಜಾರಿನೊಟ್ಟಿಗೆ ದೇಸ್ತಾನಕೆ ಹೊರ್ಟತ್. ಯಾಗೋಳ್‌ನಂಗೆ ಪೂಜಾರಿ ನೀರ್ ನ ಮೇಲೆ ಬಾಳೆ ಎಲೆನ ಹಾಕಿ ಅದರ ಮೇಲೆ ಇಬ್ಬೊರು ಕುದ್ದ್ ಕಂಡ್ ಹಳ್ಳ ದಾಟ್‌ಕನ ನೆರೆಗೆ ಸಿಕ್ಕಿ ಇಬ್ಬರೂ ನೀರು ಪಾಲಾದೊ ಮೇಲೆ ಇದ್ದ ದೇಸ್ತಾನದ ನೆರೆನೀರ್‌ಲಿ ಕೊಚ್ಚಿಹೋತ್ ಅದೇ ದೇಸ್ತಾನ ಕಯದ ಅಡಿಲಿ ಉಟ್ಟುತ ಜೆನಗ ಕತೆಯಾಗಿ ಹೇಳ್‌ವೆ. ಆದ್‌ರೆ ಜೆನ ಹೇಳ್‌ವ ಈ ಕತೆಗೆ ಸಮ್ಮಂದ ಪಟ್ಟಂಗೆ ಈ ಜಾಗೆಲಿ ಯಾದೇ ಕುರುಹುಗ ಸರಿಯಾಗಿ ಕಾಂಬಕೆ ಸಿಕ್ಕುದುಲೆ.

ನಾಕೂರು ಗಯಲಿ ಸುಮಾರ್ ವರ್ಷಂದ ಒಂದಲ್ಲಾ ಒಂದ್ ಕಾರಣಿಕಗ ನಡ್‌ದದೆ. ಊರ ಪರ ಊರ್‌ನ ಜೆನಗ ಇಲ್ಲಿ ಬಂದ್ ಹರ್‌ಕೆನ ಒಪ್ಪಿಸುತೊಳ. ದನ–ಕರ್‌ಗಳಿಗೆ ಕಸ್ಟ ಆಕನ ಅದರ ಸರಿ ಮಾಡಿಕೆ ಇಲ್ಲಿಗೆ ಹರ್‌ಕೆ ಹೇಳಿಕಂಡರೆ ಪಲಿಸಿದೆ. ದನ ಕರ್ ಹಾಕಿ




ಹದಿನ್ನೈದ್ ದಿನ ಕಳ್‌ದ್ ಹದಿನಾರನೆ ದಿನ ದನದ ಯಜಮಾನ ಕಯದ ನೀರ್‌ಲಿ ಮೀದ್ ದಂಡೆಗೆ ಬಂದ್ ಕದಳಿಬಾಳೆ ಎಲೆನ ಮೇಲೆ ಬೆಳ್ತಕ್ಕಿನ ಹಾಕಿ ಅದರ ಮೇಲೆ ಕಾಯಿಗಡಿನ ಒಡ್‌ದ್ ಎರ್‌ಡ್ ಬಾಗ ಮಾಡಿ ಹಾಲ್ ಹೊಯ್ದ್ ಇಸೊಕು. ಮತ್ತೆ ಸೆಂಡಿ ಆದ ಹತ್ತಿದ್ ಬತ್ತಿನ ಹೋಸಿ ಇಸೊಕು. ಮತ್ತೆ ಹಳ್ಳದ ಮೂಡನ ಬಾಗಕೆ ಮೋರೆಮಾಡಿ ಬಾಳೆಲೆನ ಅಡಿಂದ ಎರ್‌ಡ್ ಕೈಲಿ ಎತ್ತಿ ಹಿಡ್‌ದ್ ಗಯದ ನೀರ್‌ನ ಮೇಲೆ ಇಸಿ ಕೈ ಮುಗ್ದ್ ಮತ್ತೆ ಸುರೂಲೆ ಇಸಿದ ಎರ್‌ಡ್ ಕಾಯಿಗಡಿಲಿ ಒಂದ್ ಗಡಿನ ತಕಂಡ್ ಅದರ್‌ಲಿ ಇಸಿದ ಹಾಲ್‌ನ ಎಲೆಗೆ ಹಾಕಿ ಆ ಗಡಿನ ಮತ್ತೆ ಹಾಲ್ ತಂದ ಪಾತ್ರೆಲಿ ನದಿದ್ ನೀರ್‌ನ ತೀರ್‌ತರೂಪಲಿ ಮನೆಗೆ ತಕಂಡ್ ಹೋಗಿ ದನ ಮತ್ತೆ ಕರ್‌ಗೆ ಕೊಟ್ಟ್ ಮತ್ತೆ ಮನೆವು ಎಲ್ಲ ತಕಂಬದು ಕ್ರಮ. ಆದ್‌ರೆ ಈಗೀಗ ಇಲ್ಲಿ ಮೀನ್‌ಗ ಹೆಚ್ಚಿ ಇರುದರ್‌ಂದ ನೀರಿಗೆ ಕಾಯಿಗಡಿನ ಎಲೆ ಬುಡಿಕೆ ಅವಕಾಸ ಕೊಡ್ತುಲೆ. ಎಲ್ಲದರಸ ಮೀನ್‌ಗ ತಿಂದ್ ಮುಗ್‌ಸುವೆ. ಇನ್ನೂ ಇಲ್ಲಿ ಚೆರ್ಮದ ಕಾಯ್‌ಲ ಮತ್ತೆ ಕೈಲಿ ಕಿಡು ಆದರೆ ಅದ್ ಹೋಕೆ ಕಿಡುನ ಕೊಟ್ಟರೆ ಕಮ್ಮಿ ಆದೇಂತ ಇಲ್ಲಿನ ಜೆನರ ನಂಬಿಕೆ. ಅದಲ್ಲದೆ ಸಂತಾನಬಾಗ್ಯ ಮತ್ತೆ ಕೆಲು ಇಸ್ಟಾರ್‌ತ ನೆರವೇರಿಕಾಗಿ ಬಂಗಾರಕೂಸು, ಬೆಳ್ಳಿದ್‌ತೊಟಿಗಿಲ್‌ನ ಹರ್‌ಕೆ ರೂಪಲಿ ಕೊಟ್ಟನೆತ ಹೇಳಿಕಂಡ್ ಇಸ್ಟಾರ್‌ತ ಈಡೇರ್‌ದ ಮೇಲೆ ಕಯಕೆ ಬಂದ್ ಹರ್‌ಕೆ ಒಪ್ಪುಸುವ ಕ್ರಮನೂ ಉಟ್ಟು. ಇನ್ನೂ ಇಲ್ಲಿ ಇರ್‌ವ ಕಯಲಿ ನೂರಾರ್ ದೇವ್‌ರ ಮೀನ್‌ಗ ಇದ್ದ್ ಇಲ್ಲಿಗೆ ಬಾವ ಬಕ್ತಾದಿಗ ಮೀನ್‌ಗಳ ತಿಂಬಕೆ ಹೊರೆಯಕ್ಕಿನ (ಮಂಡಕ್ಕಿ) ಹಾಕಿ ಕುಸಿಪಟ್ಟವೆ. **(ಕೆ.ಎಂ.ಎಲ್.)**

**ನಾಗರಹೊಳೆ :** ಕೊಡಗ್ ಜಿಲ್ಲೆ ವಿರಾಜಪೇಟೆ ತಾಲೂಕ್ ಲಿ ವಿರಾಜಪೇಟೆನ ಆಗ್ನೇಯಕೆ 61 ಕಿಮೀ ದೂರಲಿರುವ ಒಂದ್ ಪ್ರಸಿದ್ದ ಅಬಯಾರಣ್ಯ. ಅಕ್ಸಾಂಸ 12°15'37. 69"ಓ ಮತ್ತೆ ರೇಕಾಂಸ 76°17'34. 4"ಇ ಬಂದದೆ. ಕೊಡ್‌ಗ್ ಜಿಲ್ಲೆನ ವಿರಾಜಪೇಟೆ ತಾಲ್ಲೂಕ್ ನ ಆಗ್ನೇಯಕ್ಕೆ 61 ಕಿಮೀ. ದೂರಲಿ ಉಟ್ಟು. ವಿರಾಜಪೇಟೆ ತಾಲ್ಲೂಕ್‌ನ ಆಗ್ನೇಯಲಿ ಹುಟ್ಟಿ ಮೂಡ ದಿಕ್ಕ್ ಗೆ ಹರ್‌ದ್, ಮೈಸೂರ್ ಜಿಲ್ಲೆಲಿ ಕಪಿಲಾನದಿನ ಸೇರ್‌ವ ನಾಗರಹೊಳೆಂದಾಗಿ ಇದಿಕೆ ಈ ಹೆಸ್‌ರ್ ಬಂದುಟು. ದಕ್ಷಿಣ ಕೊಡಗ್ ನ ಮೇರೆಲಿ ಹೆಗ್ಗಡದೇವನ ಕೋಟೆ ತಾಲೂಕ್‌ಗೆ ಹಕ್ಕಲೆ ಇರುವ ಈ ಪ್ರದೇಸ 288 ಚ. ಕಿಮೀ ವಿಸ್ತೀರ್ಣ ಇದ್ದ್, ಸಮುದ್ರ ಮಟ್ಟಂದ 2, 500 ಎತ್ತರಲಿ ಉಟ್ಟು. ಇದ್ ಕಲ್ಲಹಳ್ಳ, ನಾಗರಹೊಳೆ ಮತ್ತೆ ತಿತಿಮತಿ ಅರಣ್ಯಪ್ರದೇಶಗಳ ಒಳಗೊಂಡುಟು. ಯಾಗೊಳು ಹಚ್ಚಹಸ್ರಂದ ಇರ್‌ದರ್‌ಂದಾಗಿ ಪ್ರಾಣಿಗಳಿಗೆ ಎಲ್ಲಾ ಕಾಲಲಿನೂ ಇಲ್ಲಿ ತಿಂಬಕೆ ತಿನಿ ಸಿಕ್ಕಿದೆ. ಸುಲಬಲಿ ನೀರ್ ಸಿಕ್ಕುವ ಜಾಗೆಗ ಇಲ್ಲಿ ತುಂಬಾ ಇದ್ದ್, ಪ್ರಾಣಿಗಳಿಗೆ ತುಂಬಾ ಇಸ್ಟ ಆದ ಉಪ್ಪುನೆಕ್ಕುವ (ಚೋಳುಮೊಣ್ಣು) ಜಾಗೆಗ ಸುಮಾರ್ ಮೂವತ್ತು ಉಟ್ಟು. ಇಲ್ಲಿನ ಕಾಡ್ ಪ್ರಾಣಿಗಳ್‌ಲಿ ಹುಲಿ, ಚಿರತೆ, ಕರ್‌ಡಿ, ಕೆನ್ನಾಯಿ (ಕಾಡ್ ನಾಯಿ), ಆನೆ, ಕಾಡೆಮ್ಮೆ, ಸಾರೆಜ, ಕಬ್ಬೆಕ್ಕ್, ಚೆನಿಲ್, ಹಾರ್‌ವ ಕುಂಡತ, ಕುರೆ, ಕುದ್‌ಕ, ಮುಂಗುಲಿ ಮುಕ್ಯ ಆದ ಪ್ರಾಣಿಗ. ಕಾಕನಕೋಟೆನ ಕಡೆಗೆ ಬಂದರೆ, ಅಪ್‌ರೂಪದ ನಾಕ್ ಕೊಂಬುನ ಹುಲ್ಲೆ ಕಾಂಬಕೆ ಸಿಕ್ಕಿದೆ. ನಾಗರಹೊಳೆನ ಹಕ್ಕಿಗಳ ಸಂಪತ್ತ್ ನೂ ವೈವಿದ್ಯಮಯ. ನವಿಲ್, ಕಾಡ್ ಕೋಳಿ, ಗೌಜಲು, ಬೀಮರಾಜ, ಮರಕೊಡ್‌ಪ, ಪ್ಯಾರಡೈಸ್ ಫ್ಲೈ ಕ್ಯಾಚರ್, ಅರ್‌ಸಿಣ ಬಣ್ಣದ ಕೊಕ್ಕು ಇರ್‌ವ ಹೊಟ್ಟಂಗ (ಹಾರ್ನ್‌ಬಿಲ್), ಕಾಮಾಲೆಹಕ್ಕಿ (ಓರಿಯೋಲ್), ಬಾಬಾಬುಡನ್ ಗಿಳಿ, ಕಾಡ್‌ಕುರ್ಣಿ(ಹಿಲ್‌ಮೈನ), ಬುಲ್‌ಬುಲ್, ಸೂರಕ್ಕಿ (ಸನ್‌ಬರ್‌ಡ್) – ಇದೆಲ್ಲ ಇಲ್ಲಿನ ಮುಕ್ಯ ಹಕ್ಕಿಗ. ಹಿಂಗೆನೇ ಬೇರೆ ಬೇರೆ ಜಾತಿನ ಹಾವುಗ (ಹೆಬ್ಬಾವು, ನಾಗರಹಾವು ಕಾಳಿಂಗಸರ್ಪ ಇತ್ಯಾದಿ) ಇಲ್ಲಿ ಉಟ್ಟ್. 1999ರ್‌ಲಿ ಇದರ ಹುಲಿ ರಕ್ಷಣೆ ಮಾಡ್‌ವ



**ನಾಗರಹೊಳೆ**

ಉದ್ಯಾನತೇಳಿ ಗೋಸಣೆ ಮಾಡಿಯೊಳೊ. ಇದ್ UNESCO World Heritage Site ಪಟ್ಟಿಲೂ ಸ್ತಾನ ಪಡ್ದುಟ್ಟು.ಇವುಗಳ ಎಲ್ಲ ಹಕ್ಕಲೆಂದ ನೋಡಿಕೆ ಕಾಡ್ ನೊಳಗೆ ಎತ್ತರದ ನೋಡ್‌ಗೋಪುರಗಳ ಕಟ್ಟಿಯೊಳೊ. ಅಬಯಾರಣ್ಯನ ಸುತ್ತಿಕೆ ಗಾಡಿಗಳ ಸೌಕರ್ಯ ಉಟ್ಟು, ಅಲ್ಲದೆ ಆನೆಗಳ ಮೇಲೆ ಸಮೇತ ಪ್ರವಾಸಿಗರ ಆಬಯಾರಣ್ಯ ದೊಳಗೆ ಕರ್‌ಕಂಡ್ ಹೋಗಿ, ಪ್ರಾಣಿಗಳ ಹಿಂಡ್ ಗಳ ನೋಡಿಕೆ ಅನುಕೂಲ ಉಟ್ಟು, ಒಂದಲ್ಲ ಒಂದ್ ಜಾಗೆಲಿ ತುಂಬಾ ಹಕ್ಕಲೆಂದ ಪ್ರಾಣಿಗಳ ನೋಡಿಕೆ ಈ ಸೌಕರ್ಯ ಇದ್ದ್ ಪ್ರವಾಸಿಗರ ಈ ಕೇಂದ್ರ ಸೆಳ್ದದೆ. ಇಲ್ಲಿ ಪ್ರವಾಸಿಗರ್‌ಗೆ ಸುಮಾರ್ ಸೌಲಬ್ಯಗಳ ಒದ್ಗ್‌ಸಿಯೊಳೊ ವಿದ್ಯುಚ್ಛಕ್ತಿ, ನೀರ್, ಸುಸಜ್ಜಿತ ಪ್ರವಾಸಿಮಂದಿರ ಹಂಗೆನೆ ಪ್ರಾಣಿಗಳಿಗೆ ಸಮ್ಮಂದಪಟ್ಟ ಪುಸ್ತಕಗ ಇರ್‌ವ ಗ್ರಂತಾಲಯ ಉಟ್ಟು. ಅರಣ್ಯ ಪ್ರದೇಸನ ನೋಡಿಕೆ ಇಲ್ಲಿ ಪ್ರವಾಸಿಗಳಿಗೆ ಬೇಕಾದ ಉಪಕಾರ ಮಾಡಿಕೆ ಇಸಿದ ಅರಣ್ಯ ಇಲಾಕೆನ ಅದಿಕಾರಿಗ ಒಳೊ.

ಈ ಪ್ರದೇಸಲಿ ಬೇಟೆ ಆಡ್ವಾಂಗೆ ಇಲ್ಲೆ. ನಾಗರಹೊಳೆ ಇಂದ್ ಭಾರತಲೆ ಬಾರಿ ಲಾಯ್ಕನ ಹಂಗೆನೆ ನೋಡಿಕೆ ಪೊರ್‌ಲುನ ಪ್ರಾಣಿಸಂರಕ್ಷಣಾ ಕೇಂದ್ರತ ಹೆಸ್ರ್ ಪಡ್ದುಟು. **(ಬಿ.ಡಿ.ಎಸ್.)**

**ನಾಗಾರಾದನೆ :** ಸರ್ಪದ ಅರಾದನೆ ವಿಸ್ವಲೇ ನಡ್ದ್ ತುಳುನಾಡ್ ಮತ್ತೆ ಅರೆಬಾಸಿಗರ್ ಇರುವ ಕಡೆಗಳ್‌ಲಿ ಬ್ರಾಹ್ಮಣ ರೂಪಲಿ ಕಾಂಬ ಜಾಲಿ ಕಟ್ಟ ಇರ್‌ವ ನಾಗರ ಹಾವ್‌ನ ಮಾತ್ರ ದೇವರ ರೂಪಲಿ ಆರಾದ್ಸುವೆ. ಸಂತಾನ ಫಲ ದಾಯಿ ದೇವ್ರ್‌ತೇಳಿ ನಂಬಿಕೆಲಿ ಪೂಜ್‌ಸುವೆ. ಇಲ್ಲಿರುವ ಅರೆಬಾಸಿಗರ್ ಮತ್ತೆ ತುಳು ಜೆನ ನಾಗ ಸಮೃದ್ದ ಬೆಳೆಗೆ ಸೃಸ್ಟಿ ಕರ್‌ತತಂನೂ ದೆವ್ವಗ ಅದರ ರಕ್ಷಕರ್ ಅಂತನೂ ನಂಬಿ ಆರಾದಿಸ್‌ತ್ತೊಳೊ. ನಾಗನ ಪರ್ಯಾಯ ರೂಪಂತ ಗುರ್‌ತುಸಿಕಂಬ ಲೆಕ್ಕೆಸಿರಿ ದೆವ್ವನ ನುಡಿಗಟ್ಟ್‌ಲಿ "ಬಡೆಕಾಯಿ ಅಂಕೋಲೆ ಗಡೀಡ್ದ್ ತೆಂಕ್ಕಾಯಿ ರಾಮೇಸರ ಮುಟ್ಟ, ಮೂಡಾಯಿ ಕಾಯಿರಿ ಗಟ್ಟಡ್ದ್ ಪಡ್ಡಾಯಿ ಮುಗುರು ಪೊಯ್ಯೆ ಮುಟ್ಟ ಕಟ್ಟಿ ಯಿಲ್ಲ ಜತ್ತಿ ಬಾಕಿಲ್, ಗಡಿಪಾಡ್ ತಲೊಟ್ ನಾಗ ಜಡೆ, ಪಾಡಿಡ್ ಬಿರ್ಮೆರೆ ಗುಂಡ ಗದ್ದಿಗೆದೌಲು ಬಲಿನೇಮ ದೆತ್ತೊನು ಸತ್ಯೊಲು" (ಉತ್ತರದ ಅಂಕೋಲದಿಂದ ರಾಮೇಸ್ವರ್‌ಲಿಗೆ ಮೂಡದ ಗಟ್ಟಂದ ಪಡ್ವದ ಕಡಲವರೆಗೆ ಕಟ್ಟಿದ ಮನೆ, ಇಳ್ದ ಬಾಗ್‌ಲ್ ಗಡಿ ಹಾಕಿದ ಜಾಗೆಲಿ ನಾಗಜಡೆ, ಬನದ ಬೆರ್ಮೆರ ಗುಂಡ ಗದ್ದಿಗೆ ಇರುವಲ್ಲಿ ಬಲಿ ನೇಮ ಪಡಿವ ದೆವ್ವಂಗ) ಈ ಕಡೆನ ಪ್ರಾಚೀನ ತುಳುನಾಡು ಪ್ರದೇಸಲಿ ನಾಗ ಮತ್ತೆ ಬೆರ್ಮೆರ್ ಮಾತ್ರ ಆದಿ ಮೂಲಂದಲೇ ಆರಾದನೆ ಆದ ದೆವ್ವಗ ತ ಇದರ್‌ಲಿ ಉಲ್ಲೇಕ ಆದು ನೋಡಕಾದ ವಿಸಯ. ಮೊಣ್ಣು ಸಮ್ಮಂದಿ ದೆವ್ವಂಗಳ ನೆಲೆಲಿ ಸುರುನ ಆರಾದನೆ ನಾಗಂಗೆ ಬನಲಿ ನಡ್ದದೆ.

ಪಂಡ್ ಬನದ ಜಾಗೆಲಿ ಹುತ್ತ, ಕಲ್ಲ್‌ಗಳ ರೂಪಲಿ ನಾಗನ ಆರಾದಿಸ್ತಿದ್ದೊ. ಸಂಸ್ಕೃತಿಬೆಳ್ದಾಂಗೆ ಸಿಲ್ಪ ರೂಪಲಿ ಆರಾದಿಸಿಕಂಡ್ ಬಂದೊ. ತುಂಬಾ ಹಿಂದೆ ನಾಗನ ಆರಾದ್‌ಸಿದ ಜಾಗೆನ ಮೂಲ ತಾಣಂತೇಳಿ ಕರ್‌ದವೆ. ಮೂಲತಾಣ ತೇಳಿರೆ ಅದ್ ನಾಗ ನೆಲೆಂತಳೇ ಅರ್‌ತ.ಮರಿ/ನಾಗನ ನಾಗಬಿರ್ಮೆ'ತೇಳಿ ಆರಾದನೆಗೆ ಬಾವ ಸುರುಲಿ ಬನಲೆ ಆರಾದ್‌ಸ್‌ತ್ತಿದ್ದೊ. ನಾಗಂಗೆ ಅರ್‌ದ ಸರ್ಪನ ಮತ್ತೆ ಅರ್‌ದ ಮಾನವರೂಪನ ಕೊಟ್ಟ್ ಬೆರ್ಮೆ ಕಲ್ಪನೆ ಕೊಟ್ಟ ಮೇಲೆ ಬಿರ್ಮೆರೆ ನೆಲೆನ 'ಆಲಡೆ'ತೇಳ್ವ ಗುಡಿ– ಸ್ತಾನಲಿ ಆರಾದ್‌ಸುವ ಪೊದ್ದತಿ ರೂಡಿಗೆ ಬಾತ್. ನಾಗಂಗೆ ಇಂದುನೂ ನಾಗಬನ– ನಾಗಕಟ್ಟೆಗಳೆ ಹೆಚ್ಚ್ ಸಂಕ್ಯೆಲಿ ಒಳದ್. ಈ ಹಿನ್ನೆಲೆಲಿ 'ಆದಿ ಆಲಡೆ ನಾಗಬಿರ್ಮಂಗೆ; ಮೂಲತಾಣ ನಾಗಂಗೆ'ತೇಳ್ವ ಮಾತ್ ಚಾಲ್ತಿಲಿ ಬಂದುಟು.

ಮೊಯಿಂಸರ ಹೆಸರಲಿ, ವಸ್ತುಗಳ ಗುರ್‌ತ್‌ಸುವಲ್ಲಿ ಸಾಗುವಳಿ ಅನುಕೂಲನ ಸಲಕರಣೆಗಳಳ್‌ಲಿ ನಾಗನ ಚಾಯೆನ ಅವು ಇಸಿಕೊಂಡೊಳೊ. ನಾಗನ ಕುರುಹುಗ ಇರ್‌ವ ಬಗ್ಗೆ ಕೆಲವೊಂದು ಉದಾರಣೆಗ– ನಾಗಂದಿಗೆ (ಗೋಡೆಗೆ ಆಣಿಸಿಡುವ ಹಲಗೆ), ನಾಗದಾಳಿ, ನಾಗ ಬೆತ್ತ, ನಾಗದಂಡ್ (ನೀರಿನ ಒರತೆ), ನಾಗದರ್ಬೆ, ನಾಗಮಲ್ಲಿಗೆ, ನಾಗಕಂಡೊ (ಗದ್ದೆ), ನಾಗಕಟ್ಟಲೆ, ನಾಗಬಳ್ಳಿ ಇವು ವಸ್ತು ಸಮ್ಮಂದಿಯಾಗಿ ಒಳೊ. ವ್ಯಕ್ತಿ ಹೆಸರ್‌ನ ಸಮ್ಮಂದಲಿ ನಾಗಪ್ಪ, ನಾಗೇಶ, ನಾಗರಾಜ, ನಾಗವೇಣಿ, ನಾಗಮ್ಮ ಈ ವ್ಯಕ್ತಿ ಹೆಸರುಗ ಸಾಮಾನ್ಯ. ಕ್ರಿಸಿ ಸಲಕರಣೆಗಳಾದ ನೇಗಿಲು, ನೊಗಗಳ್‌ಲಿ ನಾಗನ ಶಿಲ್ಪ ವಿನ್ಯಾಸಗಳ ಮಾಡಿಯೊಳೊ..

ನಾಗನ ಬಗ್ಗೆ ಸುಮಾರ್ ನಂಬಿಕೆಗ ಒಳೊ. ಸರ್ಪಕಂಡರೆ ಒಂಟಿ ಬ್ರಾಹ್ಮಣನ ಕಂಡಸ್ವೇ ದೋಸ. ಸತ್ತ ಸರ್ಪನ ನೋಡಿ ಬುಟ್ಟು ಹೋಕೆ ಆಗದ್. ಸೂತಕಾಚರಣೆ ಮಾಡೊಕು. ಸರ್ಪ ಸಂಸ್ಕಾರ ನಡ್ಸೊಕು. ನಾಗದೋಸಂದ ಸಂತಾನಹೀನತೆ, ದ್ರಿಸ್ಟಿದೋಸ, ಚರ್ಮರೋಗ ಬಂದದೆ.

ನಾಯಿಮೊರಿಗ ವಾರದಸ್ಟ್ ಕಾಲ ಕಣ್ಣ್‌ಬುಡದ್ದರೆ ಅದ್ ನಾಗಕಲ್ಲಿಗೆ ಉಚ್ಚೆ ಹೊಯ್ದದರ ಫಲ. ನಾಗ ನಿದಿ ಕಾದದೆ, ನಾಗನ ಪೂಕರೆಗದ್ದೆಗೆ ನವದಂಪತಿಗ ಬಲಿ ಬಂದು ಅಕ್ಕಿ ಹರ್‌ಂಡಿರೆ ಸಂತಾನ ಪ್ರಾಪ್ತಿಯಾದೆ. ತುಲಾ ಕಾವೇರಿ ಸಂಕ್ರಮಣಲಿ ಬತ್ತನ ಗುಪ್ಪೆಗೆ ಹಾವು ಬಂದದೆ. ಸೃಸ್ಟಿ– ಕ್ರಿಸಿ–ಸಮೃದ್ದಿ ಮೂಲಲಿ ಆಚರಣೆಯಲ್ಲಿದ್ದ ನಾಗನು ಬೆರ್‌ಮೆರ್, ಆಗಿ ಅಯಾ ಕಾಲಲಿ ಪರಿವರ್‌ತನೆ ಆತ್‌ಂತ ಹೇಳ್ದು ಕಸ್ಟ.



**ನಾಗಾರಾದನೆ**

ನಾಗ ಬೆರ್‌ಮೆರ್ ಆದ ಮೇಲೆ ಕಾಲಕಾಲಲಿ ಜಾಗೆಂದ ಜಾಗೆಗೆ, ಬದ್‌ಲ್ಸಿಕಂಡ್ ಬ್ರಹ್ಮಲಿಂಗೇಸ್ವರ, ಅರ್‌ದನಾರೀಸ್ವರ, ಕಡ್ಗೇಸ್ವರ ಹಿಂಗೆ ಬೇರೆ ನಾಮ ರೂಪಗಳ್‌ಲಿ ಆರಾದನೆ ಪಡ್ದದೆ. 'ಕಲ್ಲ್ ನಾಗ, ಹುತ್ತದ ನಾಗ, ಗುಡಿ ಬೆರ್‌ಮೆರ್' (ಕಲ್ಲ್‌ಲಿ ನಾಗ, ಹುತ್ತ್‌ಲಿ ಸರ್ಪ, ಗುಡಿಲಿ ಬೆರ್‌ಮ) ಈ ಮಾತ್ ನಾಗಂಗೆ, ಸರ್‌ಪಂಗೆ, ಬೆರ್‌ಮಂಗೆ ಇರುವ ಅಬೇದ ಕಲ್ಪನೆನ ಹೇಳ್ದೆ, ಬಿನ್ನತೆನ ಪೋಸಿಸಿದೆ. ಒಟ್ಟಿಗೆ ನಾಗ ವಾಸ್ತವ ಆಗಿ ಹುತ್ತ್‌ಲಿ ಇರ್‌ಕನ ಸರ್ಪ, ಕಲ್ಲ್‌ಲಿ ಸಿಲ್ಪರೂಪ, ಆಲಡೆ ಆರಾದನೆಗೆ ಪರಿವರ್‌ತಿತಾಕನ ಬೆರ್ಮೆರನಾಗಿ ಬದಲಾದ ಸ್ತಿತಿನ ಈ ಮಾತ್‌ಲಿ ವ್ಯಕ್ತ ಆದೆ.

ಅರೆಬಾಸಿಗರ್ ಮತ್ತೆ ತುಳುನಾಡ್‌ಲಿ ನಾಗರಾದನೆನ ಮೂಲ ಆದಿ ಕುಕ್ಕೆಂತ ಕರ್‌ಸಿಕಂಡುಟ್ಟು. ಇಲ್ಲಿ ನಾಗ ನೆಲೆ ನೀರಿನಾಸ್ರಯಲಿರುವ ಸಣ್ಣ ದೈ–ಮರಗಳ್‌ಂದ ಕೂಡ್ದಾ ಹುತ್ತ ಮೂಲವಾಗಿ ಉಟ್ಟು. ಬತ್ತ ಬೆಳೆಂವ




ಬೈಲ್ ಗದ್ದೆನ ಕರೆನ ಹುತ್ತಂದ ಕೂಡ್ದ ಬನಗಗಳ್ಲಿ. ಪಂಡ್ ಈ ಹುತ್ತಕೆ ಹಾಲ್ಹೊಯ್ದ್ ನಾಗನ 'ತನುತಂಬಿಲ'ಲಿ ಆಚರಣೆ ಪೊದ್ದತಿಲಿ, ನಂತರಲಿ ನಾಗ ಸಿಲ್ಪದ 'ನಾಗಕಲ್ಲು'ಗಳಲಿ, ಮುಂದುವರಿದಕೆ ಒಂಟಿಕಲ್ಲು ಇದ್ದರೆ ಒಂಟಿ ನಾಗತೇಳಿದ್, ಒಂದಕ್ಕಿಂತ ಹೆಚ್ಚಿನ ನಾಗಕಲ್ಲ್‌ಗಳ ನಾಗಸಿಲ್ಪಗಳಳ್ಲಿ ಒಂದರ್‌ಂದ ಹೆಚ್ಚಿನ ಸಂಕ್ಯೆನ ಹೆಡೆಗಳ ಮಾಡಿ, 'ಕೂಟನಾಗ'ಗ ತೇಳಿ ಹಾಲ್ಹೊಯ್ದು 'ತನುತಂಬಿಲಗಳಲಿ ಆರಾದಿಸುವ ಪೊದ್ದತಿ ಆತ್. ಈ ದ್ರಿಸ್ಟಿಂದ ಹಿಂದೆ'ದೇವರಕಾಡು' ತೇಳಿ ಕರೆತಿದ್ದ ನಾಗಬನಗ ಇಂದು ಕಾಂಕ್ರೀಟ್ ನಾಗ ಕಟ್ಟೆಗ ಆಗಿ ಬದ್ಲಲಾಗೊಳ.

ನಾಗಾರಾದನೆ ಹಿನ್ನೆಲೆ ಸಮುದಾಯಗಳ ಗ್ರಹಿಕೆ ಮೊಣ್ಣುನೊಟ್ಟಿಗೆ ಉಟ್ಟು, ಆ ಗ್ರಹಿಕೆಲಿ 'ಫಲವಂತಿಕೆ' ಪ್ರದಾನ. ಮೊಣ್ಣು ಹೆಣ್ಣ್ ತೇಳಿರೆ ಕ್ಸೇತ್ರದ ಪ್ರತೀಕ ಆದರೆ; ನಾಗ ಪುರುಸತತ್ವದ ಸಂಕೇತ. ಈ ಕಲ್ಪನೆಲಿ ಕ್ರಿಸಿ, ಬತ್ತದ ಕ್ರಿಸಿನ ಹೊಂದ್‌ಸಿಕೊಂಡ್ ಪೂಕರೆ ಗದ್ದೆನ ಕರೆಲಿ ಅತವಾ ಹಕ್ಕಲೆ ನಾಗಬನ/ ದೇವರ ಕಾಡುಗ ಇದ್ದೇಇದ್ದವೆ. ಈ ಬನಗಳ ಹುತ್ತ ಸಮೇತ ನಾಗ ಸಿಲ್ಪಗಳ್‌ಂದ ಕೂಡಿದ್ದವೆ. ಪೂಕರೆ ಆಚರಣೆಲಿ ಈ ನಾಗಕಲ್ಲಿಗೆ 'ತನುಎರೆದು– ತಂಬಿಲ ಕೊಡ್ದು ಪೊದ್ದತಿ. ನಾಗರ ಪಂಚಮಿನ ಅತವ ಕುಟುಂಬಲಿ ನಡೆವ ವಿಸೇಸ ದಿನಗಳ್‌ಲಿ ಈ ನಾಗ ಬನನ ಹುತ್ತ/ ನಾಗಕಲ್ಲಿಗೆ ಹಾಲೊಯ್ದ್ 'ತನು' ಆಚರಿಸುವೆ. ನಾಗಂಗೆ ಅರ್ಪಿಸುವ ವಸ್ತುಗಳ್‌ಲಿ ಅರ್‌ಸಿನ ಹೊಡಿ, ಕೇದಗೆ, ಬಿಂಗಾರ ಹೂಗ ಮುಕ್ಯ ಆಗಿದ್ದವೆ. ಅಣ್ಣನ ಬಣ್ಣ ಸಮ್ರಿದ್ದಿಗೆ ಸಂಕೇತ, ಅರ್ಪಿಸ್‌ವ ಬಿಂಗಾರಲಿ ಇರ್‌ವ ಅಡ್ಕೆಮಿಡಿ (ಎಳೆದಾದ ಅಡಿಕೆ) ಸಂತಾನ ಪ್ರತೀಕ ತೇಳಿ ನೆನ್ಸಿಕಂಡವೆ.

ಸಂತಾನ ಪ್ರಾಪ್ತಿಗಾಗಿ, ಕುಕ್ಕೆ ಸುಬ್ರಾಯ ದೇವ್‌ರ್‌ಗೆ ಮಕ್ಕಳಾಗದ ದಂಪತಿಗ ಬೆಳ್ಳಿನ ತೊಟಗಿಲ್, ಚಿನ್ನದ ಕೂಸುನ ಗೊಂಬೆಗಳ ಸಂದಾಯ ಮಾಡ್‌ವೆ. ಕಣ್ಣ್, ಕೆಬಿ, ನರದೋಸ ಬೇರೆ ಬೇರೆ ಕಾಯಿಲೆಗಳಿಗೆ ನಾಗ ದೋಸದ ಕಾರಣಂತೇಳಿ ಗ್ರೇಸಿ ಆಯಾಯ ಸ್ವರೂಪದ ಹರ್‌ಕೆನ ಒಪ್ಪುಸುದು ಸಾಮಾನ್ಯ. ವ್ರತ ನಿಸ್ಟರಾಗಿ ನಾಗ ಸಿಲ್ಪನ ಆರಾದ್‌ಸಿ ಜಲಸ್ತಂಬನ ಮಾಡುವೆ.

ನಾಗನೇ ಪ್ರದಾನ ದೇವುರು ಆಗಿರ್‌ವ ಕ್ಸೇತ್ರಗಳ್‌ಲಿ ಮೊಣ್ಣ್‌ನ ಪ್ರಸಾದ ಅಂತ ಕೊಟ್ಟವೆ. ನಾಗನ ಸಾಮಾನ್ಯಲಿ ಕ್ಸೇತ್ರಪಾಲ ಅಲ್ಲರೆ ಕ್ಸೇತ್ರದ ಒಡೆಯ ತೇಳಿದ್ ಹೇಳಿಕಂಡವೆ. ಈ ದ್ರಿಸ್ಟಿಂದ ವೈದಿಕ ಸೈವ ವೈಸ್ಣವ, ಹಾಗೆನೇ ಅವೈದಿಕ ದೆವ್ವಸ್ತಾನಗಳ್‌ಲಿ ನಾಗನ ಕ್ಸೇತ್ರಪಾಲಂತ ಆರಾದಿಸ್ಸುದು ವಾಡಿಕೆ. ಇಂವ ಸಂಪತ್‌ನ ಒಡೆಯ ಮತ್ತೆ ನಿದಿ ಕಾಯುವ ದೆವ್ವ ಆಗಿದ್ ಸಮುದಾಯದ ಗ್ರಹಿಕೆಲಿ ಸ್ತಾನ ಪಡ್ದದೆ.

ನಾಗ ಪುರುಸತ್ವದ ಪ್ರತೀಕ ಆಗಿ ಸಂತಾನ ಪ್ರಾಪ್ತಿದೇವ. ಹುತ್ತ ಬೂಮಿನ ಸ್ರಿಜನೇಂದ್ರೀಯ/ ಯೋನಿಯ ಪ್ರತೀಕ. ಹುತ್ತ ನಾಗನ ಆವಾಸ ಸ್ತಾನನೂ ಹೌದು. ಹುತ್ತದ ಮೊಣ್ಣುಲಿ ನಾಗ/ ಪುರುಸನ ಬೀಜದ್ರವ್ಯ ಸೇರಿದ್ದದೆ. ಇದ್ ಸಂತಾನದಾಯಕತೇಳ್ದು ಗ್ರಹಿತ ನಂಬಿಕೆ. ಈ ನಂಬಿಕೆನ ಕಾರಣಲಿ ಪೂಜಾರಿ ರಕ್ಸಾ ಕವಚ ಹಾಕಿ ಕೈಲಿ ಹುತ್ತಂದ ಮೊಣ್ಣುನ ತೆಗ್ದ್ ಇದರ ಮೂಲ ಮ್ರುತ್ತಿಕೆಂತ ನೆನ್ಸಿದ್ ಪ್ರಸಾದ ಆಗಿ ಕೊಟ್ಟವೆ. ಹಿಂಗೆ ನಾಗ ಮತ್ತೆ ಹುತ್ತಗಳ ಪ್ರತಿಮಾತ್ಮಕತೆಲಿ ಬೂ ಹೆಣ್ಣ್‌ನ ಮತ್ತೆ ಪುರುಸತ್ವನ ಕಂಡವೆ. ನಾಗ ಸಂತಾನಕಾರಕ ತೇಳ್ವ ನಂಬಿಕೆಗೆ ಮೊಣ್ಣು ಪ್ರಸಾದ ದಾರಣೆ ಆದು ಇಲ್ಲಿ ಮುಕ್ಯ. ನಾಗನ ಅವಕ್ರಪೆಂದ ಕಾಯಿಲೆಗ ಬಾದುಂತ ಹೆದ್‌ರಿಕೆಂದ ನಿಮೂರ್‌ತಿ ಕೊಡ್ಸುವ ಮಾದ್ಯಮ ಈ ಮ್ರುತ್ತಿಕಾ ಪ್ರಸಾದ.

ತುಳುನಾಡ್‌ಲಿ ನಾಗಾರಾದನೆನ ಬಿನ್ನ ಸ್ವರೂಪಲಿ ನಡ್ಸುವೆ. ನಾಗಾರಾದನೆನ ಕೇಂದ್ರಗಳ ಗಮನ್‌ಸಿದಂಗೆ ನಾಗಬನ, ಕಾವುಗ, ಆದಿ ಆಲಡೆ ತೇಳ್‌ವ ನಾಗ ನೆಲೆಗಳ್‌ಲಿದ್ದದೆ. ಆಲಡೆಗಳ್‌ಲಿ ವಾರ್‌ಸಿಕಾಚರಣೆನ ಹಿನ್ನೆಲೆಲಿ 'ಪೂನೀರ್'(ಹೂನೀರ್) ಕೊಡ್‌ವ ಅಲ್ಲರೆ ಬಲಿ ಮುಕೇನ ಆರಾದ್‌ಸುದು ಪೊದ್ದತಿ. ಡಕ್ಕೆ ಬಲಿನೇ ವೈದೀಕರಣ ಆಗಿ ನಾಗಮಂಡಲ ರೂಪಲಿ ಆಲಡೆ ಇಲ್ಲದಲ್ಲಿನೂ ನಡ್ದದೆ. ದೇಸ್ತಾನಗಳ ಬ್ರಹ್ಮಕಲಸೋತ್ಸವದ ಒಂದ್ ವಿದಿ ಆಗಿನೂ ಇಂದ್ ಸೇರಿಕಂಡುಟು..

ನಾಗನ ಬಗ್ಗೆನ ನಂಬಿಕೆ ಹಿನ್ನೆಲೆಲಿ 'ಸರ್ಪ ಸಂಸ್ಕಾರ' ವಿದಿ ನಡ್ಸುವೆ. ನಾಗನ ತುಳುನಾಡವ್ ಮತ್ತೆ ಅರೆಬಾಸಿಗರ್ ಬರಿ ಜಂತು ತೇಳದೆ 'ಮಾನವರೂಪಿ'ತೇಳಿ ನಂಬುವೆ. ಇದೇ ಕಲ್ಪನೆಲಿ ಸರ್ಪನ ಇವು ಸುಬ್ರಾಯಂತ್ಹೇಳಿ ಕರ್‌ದವೆ. ಮಡಿ–ಮೈಲಿಗೆ–ಸೂದ್ರತ್ವದ ಬಾವನೂ ಇಲ್ಲಿಟ್ಟು. ಹಾವು ಸತ್ತದ್ದರ ಕಂಡರೆ ಸರ್ಪದ ಸವಸಂಸ್ಕಾರ ಮಾಡೊಕು. ಮಾಡದರೆ ಸರ್ಪದೋಸಕ್ಕೆ ಒಳಗಾಕು ತೇಳುವ ಕಟ್ಟಳೆ ಅನದಿಕ್ರುತ ಸಾಸನನ ಹಾಂಗೆ ಜೆನಗಳ ಮನ್ಸುಲುಟ್ಟು. ಮೊಯಿಂಸ ಒಬ್ಬ ಸಾಯಕನ ಮಾಡ್‌ವ ಬೊಜ್ಜದಂಗೆ ಸತ್ತ ಹಾವುಗೆನುಸ ಈ ಸಂಸ್ಕಾರ ಸಮಾರಾದನೆನ ಬಟ್ರ್‌ಗ ನೀರಾಸ್ರಯದ ಚೋಡಿ–ಹಳ್ಳದ ಕರೆಲಿ ನಡ್ಸುದು ಸಂಪ್ರದಾಯ. ಬಟ್ರ್‌ಗೆ ಅನ್ನದಾನ ಸರ್ಪ ಸಂಸ್ಕಾರದ ಪ್ರದಾನಾಂಗ.

'ಆಸ್ಲೇಸ ಬಲಿ' ನಾಗಾರಾದನೆಲಿ ಹೆಚ್ಚಿ ಪ್ರಸಿದ್ದಿ ಆಸ್ಲೇಸ ಬಲಿ ಮೂಲತಃ ಪುರಾಣ ಮೂಲದೆ ವೈದಿಕಾಚರಣೆ. ಪುರಾಣಲಿ ಜೆನಮೇಜಯ ಸರ್ಪಯಾಗಲಿ ಸರ್ಪಗಳ ಹತ್ಯೆ ಮಾಡ್ದಂವ. ಇದರ ದೋಸ ಪರಿಹಾರಾರ್‌ತಾಗಿ ನಡ್ಸಿದ ಕ್ರಿಯೆ ಆಸ್ಲೇಸ ಬಲಿ. ಇದರ ಆದಿ ಕುಕ್ಕೆಲಿ ಅಸ್ಟನಾಗನ ಬಲಿನೊಟ್ಟಿಗೆ ನಿರ್‌ದಿಸ್ಟ ದೋಸ ಮತ್ತೆ ಪಲಸಿದ್ದಿಗಾಗಿ ನಡೆಸಲಾದೆ. ಪುತ್ರ ಸಂತಾನ, ಅಪಾರ ಆಸ್ತಿ – ಸಂಪತ್ತು ಗಳಿಕೆ ಮತ್ತೆ ರಕ್ಸಣೆ ಒಟ್ಟಾರೆ ಇಸ್ಟ ಸಿದ್ದಿಗಳಿಗಾಗಿರ್‌ವ ನಂಬಿಕೆಗಳ ಹಿನ್ನೆಲೆಲಿ ಆಸ್ಲೇಸ ಬಲಿ ಸಮೇತ ನಾಗಾರನೆ ನಡ್ದದೆ. (ಪಿ.ಕೆ.)

ಮೊಯಿಂಸ ಹುಟ್ಟಿದ ಸುರುಂದ ಅಂದರೆ ಪಂಡ್‌ನ ಕಾಲಂದಲೇ ನಾಗಪೂಜೆ ನಡ್ಕೊಂಡ್ ಬರ್‌ತುಟ್ಟ್. ಇದರ ಋಗ್ವೇದದ ಮುಕ್ಯ ದೆವ್ವ ಸರ್ಪ ತ ಹೇಳ್ವೆ. ಸಿಂದೂ ಸಂಸ್ಕ್ರುತಿನ ಅವಶೇಸಲಿ ನಾಗಮಿತುನ ಉಟ್ಟು.

ಅಸ್ವತ್ತ ಮರದ ಕೆಳೆಗೆ ಎಡಬಲಗಳ್‌ಲಿ ಹೆಡೆಯೆತ್ತಿ ಕಂಡಿರ್‌ವ ನಾಗಗಳ ಹಕ್ಕಲೆ ಪೂಜೆ ಮಾಡ್‌ವ ವ್ಯಕ್ತಿಗಳ ಚಿತ್ರ ಉಟ್ಟ್. ಅಶ್ವತ್ಥೋ ದೇವಸದನಃ ತೇಳ್‌ದು ಅತರ್‌ವವೇದದ ಮಾತ್. ನಾಗನ ಕಲ್ಲ್ ಗಳ ಹೆಚ್ಚಾಗಿ ನೆಟ್ಟದ್ದ್ ಅಸ್ವತ್ತ ಮರದ ಕೆಳಗೆ. ನಮ್ಮವ್ಕೆ ಮಾತ್ರ ಅಲ್ಲ ಈಜಿಪ್ಟ್, ಗ್ರೀಸ್, ಅಸೀರಿಯ–ಇಂತೆಲ್ಲ ಪುರಾತನ ಸಂಸ್ಕೃತಿಗಳ ಜೆನತೆಗೂ ನಾಗನೇ ಆದಿ ದೆವ್ವತ. ಈಜಿಪ್ಟ್‌ನ ಆದಿದೇವ ಮಿಡಿನಾಗ. ಬರತಕಂಡಲಿ ಶೈವ ಶಾಕ್ತ ವೈಷ್ಣವ ಬೌದ್ದ ಜೈನ ಹಿಂಗೆ ಎಲ್ಲ ಮತಸಂಪ್ರದಾಯದವರ್‌ಲಿನು ನಾಗಪ್ರತಿಮೆನ ಪೂಜೆ ಪ್ರಚಲಿತಲಿ ಉಟ್ಟ್.

ನಾಗ ತೇಳುವಂತದ್ದ್ ಎಲ್ಲ ಜಾತಿನ ಹಾವುಗಳಿಗೂ ಸಮ್ಮಂದಪಟ್ಟ ಸಬ್ದ ಆದರೂ ಸರ್ಪ ತೇಳುದು ಅದರ ವಿಸೇಸಾರ್‌ತ. ಅದ್ ಫಣಿ (ಜೆಡೆಯಿರ್‌ದು), ಬಾರೀ ವಿಸ ಇರ್‌ವಂತದ್ದ್. ದ್ವೇಸಸಾದಕ, ನಿದಿನಿಕ್ಷೇಪಗಳ ಕಾವಲುಗಾರ, ಅಮೂಲ್ಯ ರತ್ನನ ಉತ್ಪತ್ತಿ ಮಾಡಿ ದೇಸದ ಸಂಪತ್ತ್ ನ ಹೆಚ್ಚ್ ಮಾಡ್ವಂತದ್. ಈ ಬೂಮಿ ನಿತ್ತಿರ್‌ದೇ ಸರ್ಪರಾಜನ ಹೆಡೆನ ಮೇಲೆ ತೇಳಿ ಪಂಡ್‌ನವರ ಹೇಳಿಕೆ. ಅದ್ ಶಿವನ ಆಬರಣ, ವಿಸ್ಣುನ ಹಾಸಿಗೆ. ಗಣಪನ ಸೊಂಟ ಪಟ್ಟಿ, ಸುಬ್ರಹ್ಮಣ್ಯನ ಅನನ್ಯಸ್ವರೂಪ. ಯೋಗಸಾದನೆಲಿ ಕುಂಡಲಿನೀ ಶಕ್ತಿ. ಸುಬ್ರಹ್ಮಣ್ಯ, ಲಕ್ಷ್ಮಣ, ಬಲರಾಮ–ಇವೆಲ್ಲ ನಾಗರಾಜನ ಅವತಾರ ರೂಪಂಗ. ಹೀಂಗಿರ್‌ದರ್‌ಂದ ಸರ್ಪನ ಕೊಲ್ಲಿಕೆ ಬೊತ್ತ್. ಅದ್ ಸತ್ತರೆ ಬಟ್ರ ಕ್ರಮಲಿ ಬೊಜ್ಜ ಮಾಡ್‌ವ ವಾಡಿಕೆ ಉಟ್ಟ್, ಇದರ್‌ಂದ ಸರ್ಪ ಬರೇ ಹಾವಲ್ಲ. ದೇವ್ರ್; ಪೂಜಾರ್ಹ ಬೇಕಾದರ ಸಿದ್ದಿಗಾಗಿ ಸರ್ಪನ ಕಲ್ಲಿಗೆ ಹಾಲ್ ಹೊಯ್ದ್ ಪೂಜಿಸುವೆ. ನಾಗನ ಹೊಡ್ದ್ ಕೊಲ್ಲವೂ ಒಳೊ. ಕಲ್ಲು ನಾಗರ ಕಂಡರೆ ಹಾಲನೆರೆ ಎಂಬರು, ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ–ತೇಳುವ ಬಸವಣ್ಣನವರ ವಚನಲಿ ನಾಗಪೂಜೆನ ಬಗ್ಗೆ ಟೀಕೆ ಉಟ್ಟ್.

ನಾಗಾರಾದನೆಂದ ಧನ, ಬೆಳೆ, ಆಯ್ಸು, ಸಂತಾನ ಹೆಚ್ಚಾದೆಂತೇಳ್ವ ನಂಬಿಕೆ ಉಟ್ಟ್. ಹುಟ್ಟಿದ ಕೂಸು ಬಾಳಿ ಬೊದ್ಕಲಿಂತೇಳಿ ಕೂಸುಗೆ ನಾಗರತ್ನ, ನಾಗಮಣಿ, ನಾಗರಾಜ, ಶೇಷ, ಬುಜಂಗ– ಹಿಂಗೆಲ್ಲ ಹೆಸರಿಸುವೆ. ಸಂತಾನಾಪೇಕ್ಷೆಂದ ನಾಗಪೂಜೆ, ನಾಗಬಲಿಗಳ ಆಚರ್‌ಸುವೆ. ವಡ್ಡಾರಾದನೆ ತೇಳ್ವ ಕನ್ನಡ ಗದ್ಯ ಗ್ರಂತದ ಸುಕುಮಾರಸ್ವಾಮಿನ ಕತೆಲಿ ಚಂಪಾನಗರದ ರಾಜಪುರೋಹಿತ ಸೋಮಶರ್ಮ ಮತ್ತೆ ಅಂವನ ಹೆಣ್ಣ್ ತ್ರಿವೇದಿ ತೇಳ್‌ವ ಗಂಡೆಣ್ಣ್ ಆ ನಗರದ ಉದ್ಯಾನದ ನಾಗನ ಪೂಜ್‌ಸಿ, ಹರ್‌ಕೆ ಹಾಕಿ, ಮಗಳ ಪಡ್ದದಾಗಿ ಆ ಮಗಳಿಗೆ ನಾಗಶ್ರೀತ ಹೆಸರಿಸಿದಕಾಗಿ, ಆ ಉದ್ಯಾನಲಿ ಕಂಬಳನಾಗ, ಶಂಬರನಾಗ, ಪಾಂಡುಕನಾಗ ತೇಳ್‌ವ ನಾಗಪ್ರತಿಮೆಗ ಇದ್ದದ್ದಾಗಿ ಹೇಳ್ದೆ. (ಟಿ.ಕೆ.ಬಿ.)

ಕಸ್ಯಪ ಪ್ರಜಾಪತಿಗೂ ಕದ್ರುಗೂ ಹುಟ್ಟಿದವು ನಾಗಂಗ. ಇವ್ ಅನಂತ, ವಾಸುಕಿ, ಶಂಕ, ಪದ್ಮ, ಕಂಬಳ, ಕಾರ್‌ಕೋಟಕ, ಕಾಳಿಯ, ದನಂಜಯ ತೇಳಿ ಎಂಟ್ ಬೇರೆ ಬೇರೆ ಪುರಾಣಗಳ್‌ಲಿ ಬೇರೆ ಬೇರೆ ತರದ ಹೆಸ್ರ್‌ಲಿ ಕೂಡ ಕಂಡ್ ಬಂದವೆ. ಈ ಎಂಟ್ ಜೆನಗ ದೇವತಾರೂಪಿಗ. ಇವರ ವಂಸಜರೇ ಪ್ರಪಂಚಲಿ ನಾಗರಹಾವುಗಳಾಗಿರ್‌ವವು ತೇಳುವಂತದ್ದ್ ಒಂದ್ ನಂಬಿಕೆ. ಆದ್ದರ್‌ಂದ ಈ ಸರ್ಪಗಳ ಕೊಂದರೆ ದೇವ್ರ ಸಾಪ ತಟ್ಟಿದೆಂತೇಳಿನು ಸಂತಾನ ನಾಸ ಆಗಿ ಹೋದೆಂತೇಳಿನು ನಮ್ಮಲ್ಲಿ ಹೆಚ್ಚಿನವು ಗ್ರೇಸುವೆ. ಹಂಗಾಗಿ ಮಕ್ಕ ಆಗದವು ಜೆನ್ಮಾಂತರಲಿ ಈ ತರದ ಸರ್ಪ ದೋಸಕೆ ಒಳಗಾಗಿ ಬುಟ್ಟವೇಂತೇಳಿ ಅದರ ಪರಿಹಾರಕ್ಕಾಗಿ ಈ ನಾಗನ ಪ್ರತಿಸ್ಟೆ ಮಾಡಿ ಪೂಜೆ ಮಾಡ್‌ವೆ.

ಕಲ್ಲ್‌ಲಿ ಜೆಡೆ ಮತ್ತೆ ಬೀಲ ಇರ್‌ವ ಮೊಯಿಂಸಾಕರಲಿ ನಾಗಂಗಳ ಕೆತ್ತ್‌ಸಿ, ಹಳ್ಳ ಕರೆ, ಅಸ್ವತ್ತಕಟ್ಟೆ ಹಿಂಗೆ ಬೇರೆ ಬೇರೆ ಕಡೆಗಳ್‌ಲಿ ಇದರ್‌ನ ಪ್ರತಿಸ್ಟೆ ಮಾಡ್ಸುವೆ. ಬರೇ ಸರ್ಪಾಕಾರಲಿ ಕೆತ್ತುದೂ ಉಟ್ಟ್. ಹಿಂಗೆ ಮಾಡಿರೆ ಸರ್ಪನಾಸ ನಿಮೂರ್‌ತಿ ಆಗಿ ಸಂತಾನ ಆದೇ ತೇಳುದು ಅನೇಕರ ಬಾವನೆ. ಇದರ್‌ನ ಪ್ರತಿಸ್ಟೆ ಮಾಡ್‌ವ ಕ್ರಮನ ನಾಗಪ್ರತಿಷ್ಠಾವಿದಿ ತೇಳ್‌ವೆ. (ಟಿ.ಕೆ.ಬಿ.)

ನಾಗಾರಾದನೆ ಸುಬ್ರಹ್ಮಣ್ಯದೇವರ ಆರಾದನೆ ಆಗಿರ್‌ದಕೆ ಒಂದ್ ಕತೆ ಉಟ್ಟು; ಹಿಂದೆ ಗರುಡನ ಹೆದ್ರಿಕೆಂದ ಗುಹೆಲಿ ಅಡ್‌ಂಗಿದ್ದ ವಾಸುಕಿ ಶಿವನ ನೆನ್ಸಿ ತಪಸ್ಸ್ ಮಾಡ್ದೆ. ಶಿವ ಮೆಚ್ಚಿ ಬಂದ್ ಮುಂದೆ ನನ್ನ ಮಜ್ಜ ಸುಬ್ರಹ್ಮಣ್ಯ ರಾಕ್ಷಸರ ಕೊಂದ್ ನಿನ್ನ ಹಕ್ಕಲೆ ಬಂದದೆ. ನಿನ್ನ ನಾ ಅಲ್ಲಿ ನೆಲೆ ನಿಲ್ಸಿ ಪೂಜೆಗೆ ಅರ್ಹ ಆವಂಗೆ ಮಾಡ್ದೆ, ನಿನ್ನ ನಂಬವ್‌ಕೆ ನಾ ಇಂಬುಕೊಡಂವ ಆನೆಂತೇಳಿ ವರ ಕೊಟ್ಟದಾಗಿ ಸ್ಕಂದಪುರಾಣದ ಸಹ್ಯಾದ್ರಿ ಕಂಡ ಹೇಳ್ದೆ. ಯಕ್ಷಗಾನ ಬಯಲಾಟದ ಸಬಾಲಕ್ಷಣದ ಪ್ರಕಾರ ಮಂಡಲನಾಯಕನಾದ ಸುಬ್ಬರಾಯಂಗೆ (ಸರ್ಪನಿಗೆ) ರಂಗಸ್ತಳಲಿ ಪೂಜೆ ಒಪ್ಪುಸುವೆ.

ಭಾರತದ ಪಡುವಣ ಸೀಮೆ ಆಗಿರ್‌ವ ಗೋಕರ್ಣಂದ ಕನ್ಯಾಕುಮಾರಿವರೆಗೆನ ಪರ್‌ಸುರಾಮ ಕ್ಷೇತ್ರಕೆ ಪಂಡ್‌ಲಿ ನಾಗ ಕಂಡಂತೇಳ್‌ವ ಹೆಸ್ರಿತ್ತ್ (ಶಿಕಾರಿಪುರ ಶಾಸನಾದಾರ). ಈ ಬಾಗಲಿ ಅಲ್ಲಲ್ಲಿ ನಾಗಬನಗ ಒಳೊ. ನಾಗಬನಲಿ ನಾಗಪ್ರತಿಮೆಗಳ ಕಲ್ಲ್‌ಗಸ ಇದ್ದವೆ. ಊರ್‌ನವು ವರ್‌ಸಕೊಮ್ಮೆ ಇಲ್ಲರೆ ಹರ್‌ಕೆ ಹೇಳಿಕಂಡಿದ್ದ ಹೊತ್ತುಲಿ, ನಾಗತಂಬಿಲ ಕೊಟ್ಟವೆ. ತಂಬಿಲ ದಿನ ಕುಲಕುಟುಂಬದವು ಸೇರಿ ನಾಗ ಬನನ ಸುದ್ದಮಾಡಿ, ಕುರ್‌ದಿ ನೀರ್ ಚೆಪ್ಪುಳ್ಳಿ ಹೊದ್‌ರಿ, ಬಿಂಗಾರ–ಬೆಂಡ ನೀರ್, ಕಾಯಿ–ಬೆಲ್ಲ, ಹೂಹಣ್ಣ್, ಎಲಡ್ಕೆ ಇಸುವೆ. ಸುತ್ತ್ ಬಂದ್ ಕೈಮುಗ್ದ್ ಮೊಯಿಂಸರ್‌ಗೂ ದನಕರ್‌ಗಳಿಗೂ ಹೋದಲ್ಲಿ ಬಂದಲ್ಲಿ ಮಾಡ್ದ ಕೆಲ್ಸಲಾಗಲಿ ಬೆಳೆಲಾಗಲಿ ಉತ್ತರೋತ್ತರ ಅಬಿವೃದ್ದಿ ಆಗಲಿಂತ ಪ್ರಾರ್ತನೆ ಮಾಡಿಕಂಡವೆ. ಬಟ್ರ್‌ಗ ಇಲ್ಲದೆ ಈ ಪೂಜೆ ಮಾಡ್‌ವ ನಾಗ ಬನಲಿ ಕೋಳಿನ ಬಲಿ ಕೊಡ್ಡೂ ಉಟ್ಟು.

ದಕ್ಷಿಣಕನ್ನಡ ಜಿಲ್ಲೆನ ಕುಂದಾಪುರ–ಉಡುಪಿ ತಾಲ್ಲೂಕ್ ಗಳ್‌ಲಿ 'ವೈದ್ಯರ್' ತೇಳ್‌ವ ಬ್ರಾಹ್ಮಣ ಕುಲದವು ನಾಗಮಂಡಲ ತೇಳ್‌ವ ಕೊಣ್‌ತದ ಪೂಜೆ ಕೊಡುವ ಕಟ್ಟ್‌ಪಾಡ್ ಉಟ್ಟು. ದುಡಿ ಬೊಟ್ಟಿಕಂಡ್




ಅದರ ತಾಳದ ಗತಿಗೆ ಸೆರಿಯಾಗಿ ಕೊಣ್ಕಂಡ್ ನಾಗಮಂಡಲದ ನಾಗಂಗೂ (ಸುಬ್ರಹ್ಮಣ್ಯ) ಇತರೆ ದೆವ್ವ ದೇವ್ರುಗಳಿಗೂ ಪೂಜೆ ಮಾಡ್‌ವೆ. ಪೂಜಾರಿ ಆದಂವ ವೈದ್ಯ ಅರ್ದಹೆಣ್ಣ್, ಅರ್ದಪುರ್‌ಸ ವೇಸ ಹಾಕಂಡಿದ್ದದೆ.

**ನಾಯರ್ ದೆವ್ವ :** ಸುಳ್ಯದ ಮೂರ್ ಸೀಮೆನ ಕ್ಷೇತ್ರಾದೀಸ ನಾಯರ್ ತೇಳುವ ನುಡಿಕಟ್ಟ್ ಪ್ರಕಾರಲಿ ಈ ಪ್ರದೇಸಲಿ ಚಾತು ನಾಯರ್ ದೆವ್ವ ಸುರುನ ಜಾಗೆನ ಪಡ್ಕಂಡದೆ. ಇಂದ್ ದೆವ್ವ ಮಾಯ ರೂಪಲಿ ಆರಾದನೆ ಪಡೆವ ಚಾತು ನಾಯರ್ ಒಬ್ಬ ಚಾರಿತ್ರಿಕ ವ್ಯಕ್ತಿ ತ ಹೇಳಿಕೆ ಬೇಕಾದಸ್ಟ್ ಸಾಕ್ಸಿ ಆದಾರಗ ಒಳೊ. ಮೌಕಿಕ ಸಂಕತನಗ ಹೇಳ್‌ವಂಗೆ ಇಂವ ಕೇರಳಂದ ಸುಳ್ಯ ಪನ್ನೆಬೀಡ್‌ನ ಉಪಕೇಂದ್ರ ಆಗಿದ್ದ ಉಬರಡ್ಕದ ಸುಳ್ಯಕೋಡಿ ಕೊಟ್ಟಾರದ ಬೀಡ್‌ಗೆ ಬಂದ್ ನೆಲೆನಿತ್ತದೆ. ಸಿವಾರಾದಕನಾಗಿದ್ದ ನಾಯರ್‌ನ ಉಪಾಸನೆಗೆ ಮೀಯಕನ ಮಿತ್ತೂರು ಉಲ್ಲಾಕ್ಲು ದೆವ್ವಗ ಅಂದ್ ಮಿತ್ತೂರ್‌ನ ಹಳ್ಳಲಿ ಮಾಯಕ ಮಾಡ್ವೆ. ಮಾಯ ಆದ ಆ ಜಾಗೆನ ಇಂದ್‌ಸ ನಾಯರ್ ಗುಂಡಿ ಅಂತನೇ ಕರ್‌ದ್ ಗುರ್‌ತುಸುವೆ. ಮಾಯ ಆದ ಚಾತು ನಾಯರ್ ಉಲ್ಲಾಗಳ ಪ್ರದಾನಿ ನೆಲೆನ ದೆವ್ವ ಆಗಿದ್, ಮಿತ್ತೂರ್ ನಾಯರ್' ತೇಳಿದೆ ಜೆನರ್‌ಂದ ಕರ್‌ಸಿಕಂಡದೆ. ಒಂದ್ ಕಾಲಲಿ ಸುಳ್ಯನ ಆಳ್ತಿದ್ದ ಬಲ್ಲಾಳರ್ ಆದಮೇಲೆ ಇಂವನೇ ಆಡಳಿತ ನಡ್ಸಿತ್. ಇದರ ಸಾಕ್ಸಿ ತೇಳುವಂಗೆ ಈ ದೆವ್ವದ ಆರಾದನೆ ಉಟ್ಟು. ಸುಳ್ಯ ಚೆನ್ನಕೇಸವ ಜಾತ್ರೆಲಿ, ತೊಡಿಕಾನ ಮಲ್ಲಿಕಾರ್ಜುನ ದೇವರ ಜಾತ್ರೆಲಿ, ಮಿತ್ತೂರ್‌ಂದ ಬಂಡಾರದೊಟ್ಟಿಗೆ ಚಾತು ನಾಯರ್ ದೆವ್ವದ ಪೂಜಾರಿ ಟೊಪ್ಪಿಗೆ ದಾರಣೆ ಮಾಡಿಕಂಡ್, ಅಡ್ಡಣ, ಕಡ್ಸಲೆ ಹಿಡ್ಕಂಡ್ ಹೋವ ಮತ್ತೆ ಬಲಿ ಉತ್ಸವಲಿ ಕೂಡ್‌ವ ಬಗ್ಗೆ ಈ ದೇಸ್ತಾನಗಳ ಉಸ್ತುವಾರಿ ಮಾಡ್ದ ಚಾರಿತ್ರಿಕ ಚಾತ್ ನಾಯರ್‌ನ ನೆಂಪುಸುವಂಗೆ ಕಂಡವೆ. ವೀರರಾಗಿ ಬಾಳ್ದವು ಸತ್ತಮೇಲೆ ದೆವ್ವಗಾಗಿದ್ ಆರಾದನೆ ಆವ ಬಗ್ಗೆ ಸುಮಾರ್ ಉದಾಹರಣೆಗ ಅರೆಬಾಸಿಗರ ಪ್ರದೇಸ ಹಂಗನೇ ತುಳು ನಾಡ್‌ಲಿ ಉಟ್ಟು. ಹಂಗೆ ಚಾತು ನಾಯರ್‌ಸ ದೆವ್ವ ಆಗಿದ್ ಆರಾದನೆ ಆಕಂಡ್ ಉಟ್ಟು. ಮೌಕಿಕ ಆಕರಗ ಹೇಳ್‌ವಂಗೆ ನಾಯರ್‌ನ ಕತೆನ ಮೂಲ ಹೀಂಗುಟ್ಟು;– ಸುಳ್ಯ ಪನ್ನೆ ಬೀಡ್‌ನ ಸೋದರ ಸಮ್ಮಂದದವ್ ಸೋಮು ಬಲ್ಲಾಳ್ತಿ ಹಕ್ಕಲೆನ ಇಡ್ಯಡ್ಕ ತೇಳ್ವಲ್ಲಿ ನೆಲೆಯಾಗಿತ್ತ್. ಈ ಬಲ್ಲಾಳ್ತಿಗೆ ಕೃಸ್ಣ ತೇಳ್ವ ಮಜ್ಜ ಇತ್ತ್. ಇವ ನಾಯರ್‌ನೊಬ್ಬಂದ ಹುಟ್ಟಿದವನಾಗಿತ್ತ್. ಕೇರಳದ ತೌಡಚ್ಚೇರಿನ ಮಾದ ಮಂಗಲನ ನಾಯರ್ ಬೀಡ್‌ಲಿದ್ದ್ 'ಕಳರಿ ಪಯಟ್' ಅಬ್ಯಾಸ ಮಾಡಿತ್ತ್.ಮುಂದೆ ಕೃಸ್ಣಂಗೆ ಚಂದು–ಚಾತು ನಾಯರ್ ಅವುಳಿ ಮಕ್ಕ ಆದೊ. ಇವು ತುಳುನವ್ ಬಗವತಿನ ಅಂಸಂದ ಹುಟ್ಟಿದವ್‌ತ ಪ್ರಾಯಕ್ಕೆ ಬಂದ ಈ ಮಕ್ಕ ಮಜ್ಜಿನಡ್ಕದ ಬಗವತಿನಲ್ಲಿಗೆ ಬಂದವೆ. ಹಂಗೆ ಬಂದವರ್‌ಲಿ ಚಂದು ಮಜ್ಜಿನಡ್ಕಲಿ ನೆಲೆಯಾದೆ. ಅಲ್ಲಿಂದ ಹಬಾವ ಚಾತು ನಾಯರ್ ಉಬರಡ್ಕ ಸುಳ್ಯ ಕೋಡಿ ಕೊಟ್ಟಾರಕೆ ಬಂದ್ ನೆಲೆ ನಿತ್ತದೆ. ಬಲ್ಲಾಳರ್ ಆದ ಮೇಲೆ ಕೊಟ್ಟಾರದ ಅದಿಕಾರ ನಡ್ಸಿದೆ. ಉಲ್ಲಾಕುಳುಂದ ಮಾಯಕ ಆಗಿ ಆ ದೆವ್ವಂಗ ಪ್ರದಾನಿ ಸ್ತಾನಲಿ ನಿತ್ತ್ ಸುಳ್ಯ ಕಾವ ದೆವ್ವ ಆಗಿದ್ ಗುರ್‌ತ್‌ಸಿಕಂಡದೆ. ಮಜ್ಜಿನಡ್ಕಲಿ ನಿತ್ತ ಚಂದು ಬಗವತಿಂದ ಮಾಯಕ ಆಗಿ 'ಮುನ್ನಾಯರ್' ಕರ್‌ಸಿಕಂಡ್ ನೇಮರಾದನೆ ಪಡ್ದದೆ.

ಚಾತು ನಾಯರ್ ಜೀವಿತ ಕಾಲಲಿ ಒಬ್ಬ ಮೊಯಿಂಸ ಆಗಿದ್ದ್ ಮಾಡ್ದ ಕೆಲ್ಸ ಕಾರ್ಯ ಸಾದನೆಗೆ ಇಂದ್ ಸಾ ಆ ದೆವ್ವದ ನೇಮಗ ನಡಿತುಟ್ಟ್.ನಾಯರ್ ನೇಮ ಉಲ್ಲಾಕುಳು ದೆವ್ವಗಳ ನೇಮ ಆದ ಮೇಲೆನೆ ನಡ್ದದೆ. ನೇಮಲಿ ಉಲ್ಲಾಕುಲು ಬಿಲ್ಲು–ಸುರ್‌ಗೆ ಆಯುದಗಳ



ನಾಯರ್ ದೆವ್ವ

ನಾಯರ್‌ನ ಕೈಗೆ ಕೊಡಿಕುಟ್ಟು. ಆಯುದ ತಕಂಡ ದೆವ್ವ ವೀರಾವೇಸನ ಪ್ರದರ್‌ಸನ ಮಾಡ್ದೆ. ಕೊಣಿವ ಕಳಲಿ ಉಗ್ರ ಆಗಿ ಕೊಣ್ದದೆ.ದೆವ್ವ ಕೊಣಿವ ಕಳನ ಕುಂಟು ಪೂಜಾರಿಗ ವೃತ್ತಾಕಾರಲಿ ಕೈ ಕೈ ಹಿಡ್ದ್ ದರ್‌ಸನಲಿದ್ದವೆ. ಸುತ್ತ್‌ನ ದಾಟಿಕೆ ದೆವ್ವ ನೋಡ್ದೆ. ಈ ಚಾತು ನಾಯರ್ ತೆಂಕಂದ ಬಾಕನ ಸಾವಿರದೊಂದು ಪರಿವಾಗ ಕರ್‌ಕಂಡ್ ಬಂದುಟು ತೇಳಿ ಪ್ರತೀತಿ. ಮೈಮಾನಿಕೆನ ಈ ಕುಂಟು ಪೂಜಾರಿಗ ನಾಯರನ ಒಕ್ಕಲುನವುತ ತಿಳ್ಕಂಡವೆ. ಕುಂಟು ಪೂಜಾರಿಗಳ ಇನ್ನಿ ನೋಡಿ ನಾಯರ್ ದೆವ್ವ ಮಾಡ್ವ ನುಡಿಕಟ್ಟ್ ಹೀಂಗುಟ್ಟು – undefinedನ್ ತೆಕ್ಕಿನ್ ವರಿಂಬೋ ಆಯಿರತೊನ್ನ್ ಕುಞ್ಞು ಕುಟ್ಟಿಯೊಳ ಕೂಡಿಟ್ ವನ್ನಿಟಿಂಡಾಯಿ... ಇಪ್ಪೋ ಸುಳ್ಯತ್ ನುಪ್ಪದೊಕ್ಕಲ್‌ಲಿ ಒನ್ನೋರಂಡೋ... ಇಂಡೋ ತೇಡಿ ನೋಕುನ್ನು... (ನಾನು ತೆಂಕಣಂ ಬಾಕನ ಸಾವಿರದೊಂದು ಮಕ್ಕ ಪಿಳ್ಳಿಕಳ ಕರ್‌ಕಂಡ್ ಬಂದೊಳೆ. ಈಗ ಈ ಸುಳ್ಯ ಮೂವತ್ತೊಕ್ಕುಲುಲಿ ಒಂದೋ ಎರ್‌ಡೋ ಒಳನೋ ತ ಹುಡ್ಕಿ ನೋಡ್‌ನೆ undefined). ಈ ನುಡಿಕಟ್ ಸುಳ್ಯ ಬೀಡ್‌ಗೆ ಬಾಕನ ಸೈನ್ಯ/ಪರಿವಾರ ಸಮೇತ ಬಂದದರ ಕೂಡ ನೆಂಪುಸಿದೆ.

ಸುಳ್ಯ ಪನ್ನೆ ಬೀಡ್‌ಲಿ ಬಗವತಿ ಚಾವಡಿ ಹಿಂದೆ 'ಕಳರಿ' ಪಯಟ್

ಕೇಂದ್ರ ಆಗಿತ್. ಚಾತು ನಾಯರ್‌ನ ಕಾರಣಂದ ಪನ್ನೆಬೀಡ್‌ಲಿ ಯುದ್ದ ವಿದ್ಯೆ ಕಲ್ಸುವ ಕೆಲಸ ನಡೆತಿತ್. ಇದರ ಕುರುಹು ಆಗಿ ಇಂದ್ ಸಹ ಪನ್ನೆಬೀಡ್‌ನೆ ಬಗವತಿನ ನಾಲ್ಕ್ ಸ್ತಾನ ಚಾವಡಿಲಿ ಇರ್‌ವ ಯಜ್ಞಕುಂಡ ಸಾಕ್ಸಿಯಾಗುಟ್ಟು. ಸುಳ್ಯ ಪರಿಸರಲಿ ಉಲ್ಲಾಗ್ಲ ನೇಮಲಿ ಕಾಂಬ ಅಡ್ಡಣ ಪೆಟ್ಟ್ ಕಳರಿ ಪಯಟ್‌ನ ಪಳೆಯುಳಿಕೆನೆ ಹಂಗೆ ಕಂಡದೆ.

ಮಂಡೆಕೋಲು ಉಲ್ಲಾಗಳ ಮಾಡ ಇನ್ನೊಂದ್ ಹೆಸರ್‌ಲಿ ಕಳರಿಮೂಲೆ ಅಂತಲೆ ಕರ್‌ಸಿಕಂಡದೆ. ಸುಳ್ಯ ಪ್ರದೇಸಲಿ ನಾಯರ್ ಬಲ್ಲಾಳರ ಪ್ರತಿನಿದಿ ಆಗಿದ್ ಅದಿಕಾರ ಮಾಡ್ದ ಮೇಲೆ ಗಟ್ಟದ ಮೇಲೆನ ಬಯಲ್‌ಸೀಮೆಗೆ ಹೋಗಿದ್ ಇಲ್ಲಿನ ಕ್ರಿಸಿ ಕೆಲ್ಸ ಕಾರ್ಯಕೆ ಜೆನರ ಹಿಂಡ್ ಹಿಂಡಾಗಿ ಕರ್‌ಕಂಡ್ ಬಂದ್ ತನ್ನ ಅದಿಕಾರ ಇದ್ದಲ್ಲೆಲ್ಲ ಮುನ್ನೂರೊಕ್ಕಲ್ ಚೊಕ್ಕಾಡಿ, ಹತ್ತೊಕ್ಕಲ್ ಕುಕ್ಕಂದೂರು, ಹದಿನಾರೊಕ್ಕಲ್ ಸೋಣಂಗೇರಿ, ಮೂವತ್ತೊಕ್ಕಲ್ ಉಬರಡ್ಕ ಪೇರಾಲ್ ಹದಿನಾರೊಕ್ಕಲ್ ಹಿಂಗೆ ಆಯಾ ಜಾಗೆಗಳ ಸುರುಲಿಲಿ ಒಕ್ಕಲ್ ಸೇರ್‌ಸಿ ಕುಟುಂಬದ ಲೆಕ್ಕಲಿ ಕರಿವಂಗೆ ನಾಯರ್ ಮಾಡಿಟು. ಈ ಒಕ್ಕಲ್‌ಗ ಪೂರ ಗೌಡ ಒಕ್ಕಲೆ ಆಗಿರ್‌ವ ಕಾರಣಲಿ ಸುಳ್ಯ ಪ್ರದೇಸಲಿ ಗೌಡ ಸಮುದಾಯ ವಲಸೆ ಆಗಿ ನೆಲೆ ಆಕೆ ನಾಯರ್ ಕೂಡ ಕಾರಣ ಆಗುಟು.

ನಾಯರ್ ತನ್ನ ಜೀತಾವದಿಲಿ ಆಡೆತ್ತ ನಡ್ಸಿದ ಜಾಗೆಲೆಲ್ಲ ಇಂದ್ ಆರಾದನೆ ಪಡ್ದದೆ. ಈಗ ನಾಯರ್ ದೆವ್ವದ ಮೂಲ ನೆಲೆ ಉಲ್ಲಾಗ್ಲ ಮೂರ್‌ತಿನೊಟ್ಟಿಗೆ ಮಿತ್ತೂರು ಉಬರಡ್ಕನ ದೀಟಿಕೆ ತೇಳುವಲ್ಲಿಟ್ಟು. ನಾಯರ್‌ನ ಮೂರ್‌ತಿ ವೀರಯೋದನ ರೂಪಲಿ ಉಟ್ಟು. ಉಲ್ಲಾಕ್ಲು ದೆವ್ವಗ ಅರಸನ ಪ್ರತಿನಿದಿನಾಂಗೆ ಇದ್ದರೆ, ನಾಯರ್ ಅವರ ಪ್ರದಾನಿನ ಹಾಂಗೆ ಕ್ಸೇತ್ರಾದೀಸನಾಗಿ ಗುರ್‌ತಿಸಿಕಂಡದೆ.

ನೇಮಲಿ ನಾಯರ್ ದೆವ್ವಕ್ಕೆ ಪ್ರತ್ಯೇಕ ಓಲಸರಿ (ಓಲಗ ಸವಾರಿ) ನಡ್ಯೊದು ಪೊದ್ದತಿ. ವೀರನಂಗೆ ಟೊಪ್ಪಿದಾರಣೆ, ತಲೆಗೆ ಉಕ್ಕುನ ಟೊಪ್ಪಿ, ಕೈಲಿ ಅಡ್ಡಣ–ದಂಡ, ಉಕ್ಕುನ ಕಡ್ಸಲೆ ಹಿಡ್ದ್ ನಾಯರ್ ಪೂಜಾರಿಗೆ ದರ್‌ಸನ ಬಾವ ಪ್ರತ್ಯೇಕ ವಿದಿ ನಡ್ಸುವ ಪೊದ್ದತಿ ಉಟ್ಟು ದೆವ್ವ ಕಲಾವಿದರ್‌ಂದ ಬೇರೆನೆ ಆದ ಬಗೆಲಿ ಈ ದರ್‌ಸನ ಬಾವ ಪೂಜಾರಿ, ನ್ಯಾಯ ತೀರ್ಮಾನ ಮಾಡ್ವ ಪ್ರೇತ ಹಿಡ್ದವರ ಕೊಲೆ ಬುಡ್ಸುವ ಕೆಲ್ಸಾಕಾರ್ಯ 'ನಾಯರ್ ಮುಂಡ್ಯೆ' ಹಾಕಿದ ಜಾಗೆಲಿ ನಡ್ಸಿ ಕೊಡ್ದು ಪೊದ್ದತಿ. ನಾಯರ್ ದೆವ್ವ ಕೈಲಿ ಹಿಡಿವ ಕಡ್ಸಲೆಲಿ ಒಟ್ಟೆ ಒಂದಿರ್‌ದರ ಕಂಡರೆ ಕೊಲೆ ಬುಟ್ಟು ಹೋದೆ ತ ನಂಬಿಕೆ. (ಪಿ.ಕೆ.)

**ನಾಲ್ಕ್‌ನಾಡ್ :** ಕೊಡಗ್ ಜಿಲ್ಲೆ ಮಡಿಕೇರಿ ತಾಲೂಕ್‌ಲಿ ನಾಪೊಕ್ಲು ನಾಡ್‌ಲಿರುವ ಒಂದ್ ಹಳೇ ಜಾಗೆ. ನಾಪೊಕ್ಲ್‌ಂದ 10ಕಿಮೀ ದೂರಲಿರುವ ಈ ಜಾಗೆನ ಕಕ್ಕಬೆಂದಾಗಿ ಮುಟ್ಟಕ್. ಕೊಡಗ್‌ನ ಪಡುವಲಿ ಎತ್ತರಕೆ ಎದ್ದ ಬೆಟ್ಟಸಾಲ್, ಕಾಡ್‌ಗಳ್‌ಂದ ಸ್ವಾಬಾವಿಕವಾದ ರಕ್ಷಣೆನ ಪಡ್ದ್ ಕೊಡಗ್‌ನ ರಾಜರ್‌ಗೆ ಇದ್ ಗಟ್ಟಿ ನೆಲೆಯಾಗಿತ್ತ್. ಸ್ವಾಬಾವಿಕ ಆದ ರಕ್ಷಣೆನೊಟ್ಟಿಗೆ ಈ ಕಾಡ್‌ಮಲೆಗೆ ಕೊಡಗ್‌ನ ಅರಸರ್ ತುಂಬಾ ಕಡಂಗ್‌ಗಳ ತೆಗ್ಸಿ ಮತ್ತಸ್ಟ್ ಗಟ್ಟಿಮಾಡ್ದರ್‌ಂದಾಗಿ ಸತ್ರುಗಳ ದಾಳಿಗೆ ಇದ್ ಸುಲಬ ಇತ್ತ್‌ಲೆ. ಇದ್ಕೆ ಸೇರ್‌ದಾಂಗೆ ಕೊಡಗ್‌ಲೆ ದೊಡ್ಡ ತಡಿಯಂಡಮೋಳ್‌ತ ಹೇಳ್ವ ಶಿಕರ ಇರ್‌ವ ಬೆಟ್ಟ ಉಟ್ಟು. ಹಾಲೇರಿ ಮಡಿಕೇರಿಗಳೊಟ್ಟಿಗೆ ಕೊಡಗ್‌ನ ಅರಸರ್‌ಗೆ ಇದ್ ಮೂರ್‌ನೆ ರಾಜಧಾನಿ. ಈಗ ಯವಕಪಾಡಿತ ಕರಿವ ಹಳ್ಳಿಲಿ ದೊಡ್ಡ ವೀರರಾಜೇಂದ್ರ 1792ರ್‌ಲಿ ಒಂದ್ ಅರಮನೆನ ಕಟ್ಟಿಸಿತ್. ಈ ಅರಮನೆಂದಾಗಿದ್ ಈ ಜಾಗೆ ಈಗಳೂ ಹೆಸ್ರಾವ್ನು. ಮಡಿಕೇರಿ ಅರಮನೆನಸ್ಟ್ ದೊಡ್ಡದಲ್ಲರೂ ಇದ್ ಬಾರಿ ಗಟ್ಟಿ ಮತ್ತೆ ಒಳ್ಳ ಕಟ್ಟಣ. ಎರ್‌ಡ್ ಮಾಳಿಗೆಲಿ ಕಟ್ಟಿರ್‌ವ ಈ ಅರಮನೆಗೆ ಇಟ್ಟಿಗೆ ಸಾರಣೆನ ದಪ್ಪ ಗೋಡೆಗ ಇದ್ದ್, ಒಳ್ದಂಗೆ ಮರದ ಸಾಮಾನ್‌ಗಳನೇ ಬಳ್ಸಿಯೊಳೊ. ಕೆಳಗೆನ ಅಂತಸ್ತ್‌ಲಿ ದಪ್ಪಮರದ ಕಂಬಗ ಇದ್ದ್ ಅವು ಬುಡದಪ್ಪ ಆಗಿದ್ದ್ ಮೇಲೆ ಹೋದಾಂಗೆ ಸಣ್ಣಕೆ ಉಟ್ಟು. ಮೇಲೆನ ಮಾಳಿಗೆಂದ ನೋಡಿರೆ ಹೊರೆಗೆಲ್ಲ ಲಾಯಿಕ್ ಕಂಡದೆ. ಮೇಲೆನ ದೊಡ್ಡ ಹಜಾರ ರಾಜೆನ ಒಡ್ಡೋಲಗ ಸಾಲೆಯಾಗಿತ್ತ್. ಅದರ ಕಂಬಗನು ಬುಡದಪ್ಪನು ಮೇಲೆ ಹೋದಾಂಗೆ ಸಣ್ಣದಾಗಿ ಪೊರ್‌ಲು ಉಟ್ಟು. ಮರದ ಅಡ್ಡ ಮತ್ತೆ ಹಲಗೆಗಳ್‌ಂದ ಮಾಡ್ದ ಮಾಡ್‌ನ ಒಳಗೆ ಕೆತ್ತನೆ ಕೆಲ್ಸ ಉಟ್ಟು. ಮತ್ತೆ ಮಾಡ್‌ಲಿ ಹೂ, ಬೆಳ್ಳಿ, ಸುರುಳಿ ಇಂತ ಅಲಂಕರಣಗಳ ಬಣ್ಣಗಳ್‌ಂದ ಚಿತ್ರಗ ಉಟ್ಟು. ಮಡಿಕೇರಿನ ಅರಮನೆನ ಕೆಲವ್ ಕಡೆಲಿ ಇರ್‌ವಂಗೆ ಇಲ್ಲಿನೂ ಗೋಡೆನ ಮೇಲೆ ಒಂದ್ ಕಾಲದ ವ್ಯಕ್ತಿಚಿತ್ರಗ, ದೇವ್ರ ಮೂರ್‌ತಿಗಳ ಚಿತ್ರಗ ತುಂಬಿದಂಗೆ ಕಂಡದೆ. ಆದರೆ ಈಗ ಅದ್ ಸುಮಾರ್ ಇತ್ತಕೆ ಸುಣ್ಣ ಹೊಡ್ದ್ ಮುಚ್ಚಿದ್ ಚಿತ್ರಗಳ ಗುರ್‌ತಗ ಮಾತ್ರ ಅಲ್ಲಲ್ಲಿ ಕಂಡದೆ. ಒಂದ್ ಕಡೆ ಜಗಲಿನಂಗೆ ಮೇಲೆ ತಟ್ಟ್ ಇದ್ದ್ ಅಲ್ಲಿ ರಾಜನ ಸಿಂಹಾಸನ ಇರ್‌ತಿತ್ತ್. ಒಟ್ಟುಲಿ ಕಟ್ಟಡದ ಒಳ್ದ ಕಡೆಗ ಸರಳ ಇದ್ದರು ಈ ಓಲಗಶಾಲೆನ ಪೊರ್‌ಲಾಗಿ ಅಲಂಕರ್‌ಸಿಯೊಳೊ.



ನಾಲ್ಕ್‌ನಾಡ್





ಇಲ್ಲಿನ ಮತ್ತೊಂದ್ ಬಾರಿ ಲಾಯ್ಕ್‌ನ ಕಟ್ಟಣತ ಹೇಳ್ರೆ ಅರಮನೆನ ಮುಂದೆ ಬಲಬಾಗದ ಮೂಲೆಲಿ ಇರ್‌ವ ಸಣ್ಣ ಒಂದ್ ಮಂಟಪ. ಇದರ ದಾರೆಯಮಂಟಪತ ಹೇಳ್ವೆ. ದೊಡ್ಡವೀರರಾಜೇಂದ್ರ 1796ರ್‌ಲಿ ಮಹದೇವಮ್ಮನ ಮೊದ್ವೆ ಆಕನ ಆ ಮೊದ್ವೆ ಜಂಬರಲಿ ಈ ಸಣ್ಣ ಮಂಟಪನ ಮಾಡ್ದೊ. ಚೌಕ ವಿನ್ಯಾಸದ ಒಂದಂಕಣದ ಈ ಮಂಟಪನ ನಾಕ್ ಕಡೆನೂ ಬ್ಯಾರಿಗಳ ಸ್ಯೆಲಿನ ವೃತ್ತದ ಕಮಾನುಗ ಇದ್ದ್ ನಾಲ್ಕ್ ಮೂಲೆಲಿ ಅರೆಗಂಬಗ, ಮೂರ್‌ತಿಗಳ್‌ಂದ ಸಿಂಗಾರ ಮಾಡ್ದ ಗೂಡುಗ, ಗೂಡುಗಳ ಹಕ್ಕಲೆ ಬಗೆಬಗೆನ ಅಲಂಕಾರಂದ ತುಂಬಿದ ಪಟ್ಟಿಕೆಗ ಒಳೊ. ಇವೆಲ್ಲ ಬಾರಿ ಪೊರ್‌ಲುಲಿಕಟ್ಟಿದಂತದ್. ಇಟ್ಟಿಗೆ ಸಾರಣೆಂದ ಕಟ್ಟಿದ್ ಗಚ್ಚಿಲಿ ಅಲಂಕರಣಗಳ, ಮೂರ್‌ತಿಗಳ ಬುಡ್ಸಿರ್‌ವ ಈ ಮಂಟಪ ಬವುಸ ಕೊಡಗ್‌ಲೇ ತುಂಬಾ ಪೊರ್‌ಲುನ ಮಂಟಪತ ಹೇಳಕ್.

ಅರಮನೆನ ಕೆಳಗೆ ಒಂದ್ ಕಾಲಕೆ ನಾಡ್‌ನ ಕಚೇರಿ ಇತ್ತ್. ಮೇಲೆನ ಮಾಳಿಗೆನ ದೊಡ್ಡ ಅದಿಕಾರಿಗ ಬಾಕನ ಅದರ್‌ಲಿ ಒಳ್ಕಣತಿದ್ದೊ. ಈಗ ಇಲ್ಲಿ ಜೇನ್‌ಸಾಕಣೆ ಕೇಂದ್ರ ಒಂದ್ ಉಟ್ಟು. ಈ ಊರ್‌ಲಿ ಪನ್ನಂಗಲತಮ್ಮೆನ ದೇಸ್ತಾನ ಉಟ್ಟು. ಇದ್ಕೆ ನಡ್ಕಂಬವು ಹೆಚ್ಚಾಗಿ ಹೊಲಿಯರ್. ಏಪ್ರಿಲ್ ತಿಂಗಲಿ ಇಲ್ಲಿ ನಡೆವ ಜಾತ್ರೆಗ್ ಸುಮಾರ್ ಜೆನ ಸೇರ್‌ವೆ.

(ಎಂ.ಎಚ್.)

**ನಿರಂಜನ :** ನಿರಂಜನ (1924–1995) ಒಬ್ಬ ಹೆಸರಾಂತ ಬರಹಗಾರ. ಒಬ್ಬ ಸೊತಂತ್ರ ಹೋರಾಟಗಾರ. ಇವರ ಹೆಸರ್ ಕುಳಕುಂದ ಶಿವರಾಯ. ಇವು 20ನೇ ಶತಮಾನದ ಪ್ರಮುಕ ಲೇಕಕ ಮತ್ತೆ ಪ್ರಗತಿಪರ ಚಳ್‌ವಳಿನ ನಾಯಕ. ಇವ್ 15ನೇ ಜೂನ್ 1924ರಂದ್ ದ.ಕ. ಜಿಲ್ಲೆನ ಕುಕ್ಕೆ ಸುಬ್ರಹ್ಮಣ್ಯದ ಹಕ್ಕಲೆನ ಕುಳಕುಂದಲಿ ಹುಟ್ಟಿದೊ. ಇವರ ಅಯ್ಯೆ ಚೆನ್ನಮ್ಮ. ಕೂಸು ಆರ್ ತಿಂಗ ಆಗಿರಿಕನ ಕಾವು ತೇಳ್‌ವಲ್ಲಿಗೆ ಬಂದ್ ನೆಲೆನಿತ್ತೊ. ಕಾವುಲಿ ಲೋಯರ್ ಎಲಿಮೆಂಟರಿ ಸಾಲೆಲಿ ಮೂರ್ ವರ್ಸ ಓದಿದ ಮೇಲೆ ಸುಳ್ಯದ ಹ್ಯೆಯರ್ ಎಲಿಮೆಂಟರಿ ಸಾಲೆ. ಅದಾಗಿ ನೀಲೇಶ್ವರದ ರಾಜಾಸ್ ಹ್ಯೆಸ್ಕೂಲ್ ವಿದ್ಯಾಬ್ಯಾಸ ಮಾಡ್‌ದೊ.. ಅಸ್ಪರ್‌ಲಿ ಶಿವರಾಮ ಕಾರಂತರ ಮಕ್ಕಳ ಕೂಟ, ವಿಟ್ಲ–ಕನ್ಯಾನದ ಮಕ್ಕಳ ಕೂಟ, ಪುತ್ತೂರು ನಾಡಹಬ್ಬ ಇಂತಕಡೆ ಸ್ವಯಂಸೇವಕ ಆಗಿದ್ ರಾಜರತ್ನಂ, ಗೊರೂರು, ವಿ.ಸೀ, ಅ.ನ.ಕೃ, ಇಂತ ಗಣ್ಯ ಸಾಹಿತಿಗಳ ಹಕ್ಕಲೆಂದ ಕಂಡೊ. ಹ್ಯೆಸ್ಕೂಲ್‌ಲಿ ಇರಿಕನನೆ ಕ್ಯೆ ಬರವುನ ಪತ್ರಿಕೆನ ಹೊರ್‌ಡ್‌ಸಿ ಅದ್‌ಕೆ ಸುಮಾರ್ ಸಣ್ಣ ಸಣ್ಣ ಕತೆ ಲೇಕನಗಳ ಬರ್‌ದೊ. ಈ ಹೊತ್ತುಲೆ ಕಮ್ಯೂನಿಸಂ ಪರ್‌ಚಯ ಮಾಡಿಕಂಡ್, ವರ್‌ಸದ ಸುರುಲಿ ಕಾಸರಗೋಡು ತಾಲ್ಲೂಕು ವಿದ್ಯಾರ್ತಿ ಸಮ್ಮೇಳನದ ಸಂಗಟನಾ ಕಾರ್ಯದರ್ಶಿನ ಜೊವಬ್ದಾರಿ ಹೊತ್ತ್‌ಕಂಡೊ.. ಶಿವರಾಯರ ಸುರುನ ಬರಹ ಫಣಿಯಾಡಿಯವರ ತುಳು ಬಾಸೆನ 'ತುಳುನಾಡು' ಪತ್ರಿಕೆಲಿ ಕಿಶೋರ ತೇಳ್‌ವ ಕಾವ್ಯನಾಮಲಿ ಪ್ರಕಟ ಆತ್.. ಎಸ್.ಎಸ್. ಎಲ್.ಸಿ. ಆಗಿ ಮಂಗಳೂರ್‌ಗೆ ಹೋಗಿ ಇವು ರಾಷ್ಟ ಬಂಧು ಪತ್ರಿಕೆನ ಉಪಸಂಪಾದಕರಾಗಿ ಕಾರ್ಯನಿರ್‌ವಹಣೆ ಮಾಡಿಯೊಳೊ. ಆದರೆ ಈ ಹಿಂದೆನೆ ರಾಷ್ಟಬಂಧು ಪತ್ರಿಕೆಗೆ ಕಿಶೋರ, ಕುಳಕುಂದ, ಕತೆಗಾರ ತೇಳ್‌ವ ಹೆಸರ್‌ಂದ ಸಣ್ಣ ಕತೆಗಳ ಬರ್‌ದ್ ಕಳ್‌ಸತಿದ್ದೊ., ಇವರ ವಿಳಾಸ ಕುಳಕುಂದ ಶಿವರಾಯ, ಟೋಲ್‌ಗೇಟ್, ಸುಳ್ಯಂತ ಇರ್‌ತಿತ್ತ್. ಅದಾಗಿ ನೀಲೇಶ್ವರದ ರಾಜಾಸ್ ಹ್ಯೆಸ್ಕೂಲು ವಿಳಾಸ ಕೊಟ್ಟಾಕನ, ಇವು ಯಾರೊ ಪ್ರಾಯದ ಶಾಲಾ ಪ್ರಾಧ್ಯಾಪಕರ್‌ತ ರಾಷ್ಟಬಂಧು ಪತ್ರಿಕೆನವುತ ಇರೊಕುಂತ ನೆನ್‌ಸಿದ್ದೊ. ಶಿವರಾಯರು ಎಸ್.ಎಸ್. ಎಲ್.ಸಿ. ಮುಗ್‌ದ ಮೇಲೆ ಪತ್ರಿಕಾ ಕಚೇರಿನ ಹುಕ್ಕೊ. ಆಗ ಇವ್ ಒಬ್ಬ ಓದ್‌ವ ಹ್ಯೆದಂತ ತಿಳ್‌ದ್ ಆಸ್ಚರ್‌ಯ ಆದೊ. ರಾಷ್ಟಬಂಧು ಪತ್ರಿಕೆಲಿ



ಇರಿಕನನೆ ಬಸವರಾಜ ಕಟ್ಟೀಮನಿಯವರ ಉಷಾ ಪತ್ರಿಕೆಗೂ ಕತೆಗಳ ಕಳ್‌ಸಿಕೆ ಸುರು ಮಾಡ್‌ದೊ. ಇವರ ಸುರುನ ಕತಾ ಸಂಕಲನ 'ಅಯ್ಯನ್ಯೆ' ಪ್ರಕಟ ಆಕನ ಇವ್‌ಕೆ 21 ಪ್ರಾಯ(1945). ಹುಬ್ಬಳ್ಳಿನ ಸಂಯುಕ್ತ ಕರ್ನಾಟಕ, ಬೆಂಗಳೂರ್‌ನ ತಾಯಿನಾಡು, DAILY NEWS, ಜನವಾಣಿ ದ್ಯೆನಿಕಕೆ ಮಂಗಳೂರು ಸುದ್ದಿಗಾರರಾಗಿ, ನವಭಾರತ ಮತ್ತೆ ರಾಷ್ಟಬಂಧು ಸಾಪ್ತಾಹಿಕಕೆ ನಗರ ಪ್ರತಿನಿಧಿ ಆಗಿದ್ ದುಡ್‌ದೊ.

ಗಾಂಧೀಜಿ, ಕಾರ್ಲ ಮಾರ್ಕ್ಸ, ವ್ಲಾಡಿಮಿರ್ ಲೆನಿನ್‌ರ ವಿಚಾರಗಳ್‌ಂದ ಪ್ರಬಾವಿತ ಆದೊ. ಶ್ರೀಯುತರ್ ಸುಮಾರು ಐದು ದಸಕಂದ ಒಳ್ಳೊ ಸಾಹಿತ್ಯ ಕ್ರಿಸಿಲಿ ತೊಡ್‌ಗಿದ್ದೊ. ಇವರ ಬರವಣಿಗೆ ಕೃತಿ, ಕಾದಂಬರಿ, ಸಣ್ಣ ಕತೆಗ, ನಾಟಕಗ, ಜೀವನ ಕತನಗ, ರಾಜಕೀಯ ವ್ಯಾಕ್ಯಾನಗ ಮತ್ತೆ ಭಾಷಾಂತರಗಳ ಇಸಿಕಂಡುಟು. ಕನ್ನಡದ ಸುರುನ ಅಂಕಣ ಬರಹಗಾರರಾದ ಇವ್ ಕನ್ನಡ ವಾರ್ತಾಪತ್ರಿಕೆ ಮತ್ತೆ ನಿಯತಕಾಲಿಕೆಗೆ ಅಂಕಣಕಾರರಾಗಿದ್ದೊ. ಅವರ ಸಾದನೆಲಿ ಹ್ಯೆದಂಗಳಿಗೆ ಏಳ್ ಸಂಪುಟಗಳ ಜ್ಞಾನ ಗಂಗೋತ್ರಿ ಅಂದರೆ ಮಕ್ಕಳ ವಿಶ್ವಕೋಶ ಹಾಂಗೆ ಪ್ರಪಂಚದ ಒಂದೊಳ್ಳ ವಿಶ್ವಕಥಾಕೋಶದ 25 ಸಂಪುಟಗ ಸೇರಿಟು.

1942 ರ್‌ಂದ ಮೂರ್ ವರ್‌ಸ ರಾಷ್ಟಬಂಧು ಪತ್ರಿಕೆಲಿ ಲೇಕನಗಳ ಬರೆತಿದ್ದೊ, ಬಸವರಾಜ ಕಟ್ಟೀಮನಿ ಅವ್ ಉಷಾ ಪತ್ರಿಕೆಲಿ ಸಂಪಾದಕರಾಗಿದ್ದೊ. ಅಲ್ಲೂ ನಿರಂಜನ ಅವರ ಲೇಕನಗಳ ಸುರಿಮಳೆ ಆತ್. ಚಿತ್ರಗುಪ್ತ, ತಾಯಿನಾಡ್‌ನ ಸಹೋದರ ಪತ್ರಿಕೆಗೆ ನಿಯಮಿತ ಆಗಿ

ಕತೆ ಮತ್ತೆ ಲೇಕನಗಳ ಬರೆತಿದ್ದೊ. ಜನಪ್ರಗತಿ ಪತ್ರಿಕೆಗೆ ಅವ್ 'ಕಾಲ್ಪನಿಕ' ಗೆಳತಿ 'ಸಾಧನಾ'ಗೆ ಬರೆತಿದ್ದೊ. ಸಾಹಿತ್ಯಿಕ ಪತ್ರಂಗ ಸಾದನ ಸಂಚಯ ಅಂಕಣ ಆಗಿತ್ತ್. ಮುಂದೆ ಪುಷ್ಪಹಾರ, ಸಾದನಾ ಪುಸ್ತಕಗಾದೊ. ಕರ್ಮವೀರ ವಾರಪತ್ರಿಕೆಗೆ ರಾಜದಾನಿಂದ ಅಂಕಣ ಬರೆತಿದ್ದೊ. ಹಾಂಗೆ ಕೆಲಕಾಲ ಪ್ರಜಾಮತ ಪತ್ರಿಕೆಲಿ ಸಹಾಯಕ ಸಂಪಾದಕರಾಗಿ, ಕಮ್ಯೂನಿಸ್ಟ್ ಪಕ್ಷದ ಜನಶಕ್ತಿನ ಸಂಪಾದಕರಾಗಿ ದುಡ್‌ದೊ.

ಹೆಸರಾಂತ ವೈದ್ಯೆ, ಬರಹಗಾರ್‌ತಿ ಅನುಪಮಾ ನಿರಂಜನ ಅವರೊಟಿಗೆ 05–02–1956ರ್‌ಲಿ ಮೊದುವೆ ಆದೊ. ಇವ್‌ಕೆ ಸೀಮಂತಿನಿ ಮತ್ತು ತೇಜಸ್ವಿನಿ ತ ಇಬ್ಬೊರ್ ಮಕ್ಕ.

ಇವು ವಿಮೋಚನೆ (1953), ಬನಶಂಕರಿ (1954), ಅಭಯ (1954), ದೂರದ ನಕ್ಷತ್ರ (1954), ರಂಗಮ್ಮನ ವಠಾರ (1954), ಜಸ್ಪಿನ ರೊಮಿತ್ (1954), ಪಾಲಿಗೆ ಬಂದ ಪಂಚಾಮೃತ (1955), ಚಿರಸ್ಮರಣೆ (1955), ಏಕಾಂಗಿನಿ (1955), ಕೊನೇ ನಮಸ್ಕಾರ (1955), ಮಿಣುಕುಹುಳ (1956), ವಿಲಾಸಿನಿ (1956), ಕಲ್ಯಾಣಸ್ವಾಮಿ (1956), ದೀಕ್ಷೆ (1956), ನವೋದಯ (1956), ಅಂಜನ (1957), ಟೀಪೂ (ಐದು ಭಾಗಗಳಲ್ಲಿ), ತೊಟ್ಟಿಲು ತೂಗದ ಕೈ, ಹೆಣ್ಣಾಗಿ ಕಾಡಿತ್ತು ಮಾಯೆ (1962), ಸ್ಮರಣೆಯೊಂದೇ ಸಾಲದೇ (1971), ಬಂಗಾರದ ಜಿಂಕೆ (1963), ಸ್ವಾಮಿ ಅಪರಾಂಪರ (1967), ಮೃತ್ಯುಂಜಯ (1976) ಕಾದಂಬರಿಗಳ ಬರ್‌ದೊಳೊ.

ಸಂಧಿಕಾಲ (1947), ರಕ್ತ ಸರೋವರ (1947), ಅನ್ನಪೂರ್ಣಾ (1952), ಕೊನೆಯ ಗಿರಾಕಿ (1953), ಕಾತ್ಯಾಯಿನಿ (1957), ನಾಸ್ತಿಕ ಕೊಟ್ಟ ದೇವರು (1965). ಪತ್ರಬರಹಗಳಾದ ಸಾಧನಾ (1953), ಪುಷ್ಪಹಾರ (1957) ಕತಾ ಸಂಕಲನಗಳ ಬರ್‌ದೊಳೊ. ಹೀಂಗೆ ಸಾಹಿತ್ಯ, ಪತ್ರಿಕೋದ್ಯಮಕೆ ವಿಸೇಸ ಕೊಡ್‌ಗೆ ಕೊಟ್ಟ ನಿರಂಜನ ಅವು ಪಾರ್ಶ್ವವಾಯು ಪೀಡಿತರಾದರೂ ವಿಶ್ವಕಥಾಕೋಶದ ಯೋಜನೆನ ಮುಗ್‌ಸಿ ಕರ್ನಾಟಕ ಸಹಕಾರಿ ಪ್ರಕಾಶನಕೆ ವಿದಾಯ ಹೇಳ್‌ದೊ. ಆದರೆ ಈ ಹಿಂದೆನೆ ಅನುಪಮಾ ನಿಂಜನ ಅವ್‌ಕೆ ಇದ್ದ ಕ್ಯಾನ್ಸರ್ ರೋಗ ಇವರನು ಹೆದ್‌ರ್‌ವಂಗೆ ಮಾಡಿತ್ತ್. 15.2.1991ರ್‌ಲಿ ಅನುಪಮಾ ಅವ್ ತೀರ್ದ ಮೇಲೆ ನಿರಂಜನ ಅವುನು ಮಾರ್ಚ್ 13 1992 ರ್‌ಲಿ ಸಾಹಿತ್ಯ ಲೋಕನ ಬುಟ್ಟೊ.

**ನೆರ್‌ದ ಮೊದ್ವೆ :** ಪ್ರಾಯ ಬಂದ ಗೂಡೆಗ ಸುರೂಗೆ ಮಾಡ್‌ವ ಮೊದುವೆ. ಇದ್ ಹಿಂದೆನ ಕಾಲಲಿ ಗೂಡೆ ನೆರ್‌ದಾಕನ ಮಾಡ್‌ವ ಕ್ರಮ. ಗೂಡೆ ದೊಡ್ಡಿತ್ ಆಕನ ಅದ್ ಒಂದ್ ಪಲವಸ್ತ್ ಮರದ ಅಡಿಲಿ ಕುದ್ದದೆ. ಇದ್ ಅದರ ಮನೆವ್ಕೆ ಗೊತ್ತಾದಂಗೆ ಅವು ನೆರೆಹೊರೆನ ಹೆಂಗ್‌ಸರಿಗೆ ತಿಳ್ಸುವೆ. ಅವೆಲ್ಲವು ಬಂದ್ ಅದರ ತಲೆಗೆ ನೀರ್ ಹೊಯ್ದುವೆ. ಮತ್ತೆ ಅದ್‌ಕೆ ಉಂಬಕೆ ಕೊಟ್ಟ್ ಮನೆಂದ ಹೊರಗೆನ ಕೊಟಗೆಲಿ ಕುದ್‌ರ್‌ಸುವೆ. ಮತ್ತೆ ಮೂರ್‌ನೆ ದಿನ ಮಡ್ಯೊಳ್ತಿನ ಬಾಕೆ ಹೇಳಿ ಪುಣ್ಯನೀರ್ ತರ್‌ಸಿ ಶಾಸ್ತ್ರದ ಕ್ರಮ ಮಾಡ್‌ವೆ. ಮತ್ತೆ ಮನೆನ ಪುಣ್ಯಾರ್‌ಚನೆಲಿ ಸುದ್ದ ಮಾಡಿ ಗೂಡೆನ ಮೀಸಿದ್ ಹೊಸ ಬಟ್ಟೆ ಉಡ್ಸಿ ಮನೆಗೆ ಹತ್ತುಸುವೆ. ಅದ್ ದೊಡ್ಡವರ ಕಾಲಿಗೆ ಬಿದ್ದ್ ಆಶೀರ್‌ವಾದ ತಕಂಬ ಕ್ರಮ ಇದ್ದದೆ..

ಗೂಡೆಗೆ ಲಗ್ನನ ನಿಗಂಟ್ ಮಾಡಿ ನೆಂಟ್ರ್‌ಗಳಿಗೆ, ನೆರೆಮನೆವ್ಕೆ ಬಾಕೆ ಹೇಳಿಕೆ ಮಾಡ್‌ವೆ. ಆ ದಿನ ಊರವು, ನೆಂಟ್ರ್, ಸಮ್ಮಂದಿಕರ್ ಬಂದವೆ. ಗೂಡೆನ ಮೀಸಿ ಲಾಯಿಕ್‌ನ ಸೀರೆ ಉಡ್ಸಿ ಆಬರಣಗಳ್‌ಂದ ಸಿಂಗರ್‌ಸಿ ಗಂಗೆಪೂಜೆ ಮಾಡ್ಸಿ ಮನೆಗೆ ಕರ್‌ಕಂಡ್ ಬಂದ್ ನೆಲ್ಲಕ್ಕಿ ಅಡಿಲಿ ಕುದುರ್‌ಸುವೆ. ಮತ್ತೆ ಗೂಡೆನ ಅಮ್ಮ ಅಪ್ಪ ಸುರೂಗೆ ದುಡ್ಡು ಕಟ್ಟಿ ಪಚಾರಕೆ ಕುದುರ್ಸುವೆ. ಮತ್ತೆ ಅಲ್ಲಿ ಸೇರ್‌ದ ಜೆನಂಗ ದೇಸೆ ಹಾಕಿ ದುಡ್ಡು ಕಟ್ಟಿ ಹರಸುವೆ. ಮತ್ತೆ ಉಂಬಕೆ ಏರ್‌ಪಾಡ್ ಆದೆ. (ಜಿ.ಪಿ.ಜಿ.)

**ನೆರ್‌ದ ಮೊದ್ವೆ ಪಿಲೆ ತೆಗೆಯುವುದು :** ಬಾಲಾವಸ್ತೆನ ದಾಟಿ ಪ್ರೌಢಾವಸ್ತೆಗೆ ಬಾಕನ(ಸಣ್ಣ ಮಕ್ಕ ಬೆಳ್ದ್ ದೊಡ್ಡದಾಕನ) ಗಂಡಸರ್‌ಲೂ, ಹೆಣ್ಮಕ್ಕಳ ಸರ್ರಲೂ ಮತೆ ಮನ್ಸೂಲು ಸುಮಾರ್ ನಮೂನೆನ ಬದಲಾವಣೆಗ ಆದವೆ. ಈ ಹೊತ್ತುಲಿ ಗಂಡ್‌ಸರ ಹಿಂಗೆ



ನೆರ್‌ದ ಮೊದ್ವೆ

ಸಂಪ್ರದಾಯದ ಮುಕೇನ ಗುರ್‌ತುಸುದುಲೆ. ಆದರೆ ಹೆಣ್ಮಕ್ಕಳ ಮಾತ್ರ ಲೋಕಕೆ ಪರ್‌ಚಯ ಮಾಡ್ಸುದರ್‌ಲಿ ಸುಮಾರ್ ಕ್ರಮಂಗ ಉಟ್ಟು. ಗೂಡೆ ಸುರುನ ಸರ್‌ತಿ ಮುಟ್ಟಾಕನ ನಡ್ಸುವ ಇಂತ ಕ್ರಮನ 'ಪಿಲೆ ತೆಗಿದು'(ಹೊಲೆ ತ ಹೇಳ್ವ ಅರ್‌ತಲಿ)ತ ಹೇಳ್‌ವೆ. ಈ ಕ್ರಮಕೆ ಹೆಣ್ಮಕ್ಕಳೆ ಪ್ರದಾನ ಆಗಿ ನಡ್ಸಿಕೊಟ್ಟವೆ.

ಗೂಡೆ ಸುರುಗೆ ಮುಟ್ಟು ಆದರ 'ಗೂಡೆ ನೆರ್‌ದುಟು'ತ ಹೇಳ್‌ವೆ. ಇನ್ನ್ ಕೆಲವ್ ಕಡೆ ಋತ್‌ಮತಿ ಆತುಂತಳೊ, (ರುತ ಆತ್‌ಂತ)ಗೂಡೆ ದೊಡ್ಡದಾತ್‌ಂತ ಹೇಳ್‌ವೆ. ಮೈನೆರ್‌ದ ಗೂಡೆ ಮನೆನ ಹಕ್ಕಲೆನ ಹಲ್ಸನ ಇಲ್ಲರೆ ಇನ್ಯಾದಾರ್ ಹಾಲ್ ಬಾವ ಮರದಡಿ ಕುದ್ದುಕಂಡದೆ. ಗೂಡೆನ ಅಯ್ಯೆ ಇಲ್ಲರೆ ಮನೆನ ಹೆಣ್ಮಕ ಇದರ ಗುರ್‌ತ ಮಾಡಿ





ನೆರೆಕರೆನ ಹೆಣ್ಮಕ್ಕಂಗಳಿಗೆ ಸುದ್ದಿ ಹೇಳ್‌ವೆ. ಮುತ್ತೈದೆಗ ಬಂದವೆ. ಅವೆಲ್ಲ ಒಟ್ಟ್ ಸೇರಿ ಮಾಯ್ನ ಸೊಪ್ಪು ಮತೆ ಅಡ್ಕೆ ಸೋಗೆನ ಉರುಂಟುಗೆ ಇಸಿ ಒಂದ್ ಗೋರಿ ಮಾಡ್‌ವೆ. ಅದರ ಮೇಲೆ ಒಂದ್ ಚೊಂಬು ನೀರಿಸಿ, ಚೊಂಬುನೊಳೆಗೆ ಐದೆಲೆ ಅಡ್ಕೆ ಇಸಿ, ಮಾಯ್ನ ಕೊಡಿನ ಹಾಕುವೆ. ಮುಟ್ಟಾದ ಗೂಡೆ ಕುದ್ದ ಮರದಡಿಗೆ ಇದರ ತಕಂಡೋಗಿ ಅದರ ಎದ್‌ರಕೆ ಇಸಿ ಸುತ್ತಕೆ ನಿತ್ತವೆ. ಅದಾಗಿ ಬಿಸ್ನೀರ್ ತಂದ್ ಗೂಡೆನ ತಲೆಗೆ ಹೊಯ್ದುವೆ. ಮೈನೆರ್‍ದ ಗೂಡೆ ಇಲ್ಲಿವರೆಗೆ ಎಂತಸ ತಿಂಬಕಿಲ್ಲೆ. ಮೀದಾಗಿ ಹೊಸಬಟ್ಟೆ ಉಟ್ಟಮೇಲೆ ಬೇರೆ ಕೋಣೆಗೆ ಇಲ್ಲರೆ ಕೊಟೆಗೆಗೆ ಕರ್‌ಕಂಡ್ ಹೋದವೆ. ಆ ಗೂಡೆನೊಟ್ಟಿಗೆ ಅಯ್ಯೆ ಇಲ್ಲರೆ ಯಾರಾರ್ ಹಿರಿಯ ಹೆಣ್ಮಕ ಇದ್ದವೆ.

ಎರ್‍ಡ್‌ನೆ ದಿನ ಊರ್ ಮೊಡ್ಯಾಳರ್‌ಗೆ ಗೂಡೆ ಮೈ ನೆರ್‍ದ ಸುದ್ದಿ ಕಳ್ಸುವೆ. ಮೂರ್‌ನೆ ದಿನ ಮೊಡ್ಯಾಳ್ತಿ ಬಂದ್ ಮೈನೆರ್‍ದ ಗೂಡೆ ಮೀಸಿದೆ.ಗೂಡೆ ಉಟ್ಟ ಬಟ್ಟೆನ ಅದ್ ತಕಂಡ್ ಹೋದೆ. ಎರ್‍ಡ್ ದಿನದ ಹಿಂದೆ ಮರದ ಬುಡಲಿಸಿದ ಎಲೆಡ್ಕೆನನೂ ಮೊಡ್ಯಾಳ್ತಿ ತಕಂಡೋದೆ. ಈ ದಿನ ಬುಟ್ಟು ಒಟ್ಟ್ ಕ್ರಮನ 'ಮೂರನೇ ದಳ್ಯ'ತೇಳಿ ಕರ್‍ದವೆ. ಈದಿನ ಒಂದ್ ಸೇರ್ ಅಕ್ಕಿ, ಒಂದ್ ಕಾಯಿ ಮತೆ ನಾಲ್ಕಾಣೆ ದುಡ್ಡು ಮೊಡ್ಯಾಳ್ತಿಗೆ ಕೊಡಕು. ಮುಂದೆ ಹತ್ತ್ ದಿನದ ವರೆಗೆ ಯಾವ ಕ್ರಮನೂ ಇಲ್ಲೆ. ಸೂತಕ ಉಟ್ಟುಂತ ಹೇಳ್‌ವೆ. ಅಸ್ಟ್ ದಿನನೂ ಆ ಮನೆಲಿ ಯಾವ ಸುಬಕಾರ್ಯ ಮಾಡಿಕಿಲ್ಲೆ. ಮೈನೆರ್‍ದ ಗೂಡೆ ಅಸ್ಟ್ ದಿನ ಯಾರ ಕಣ್ಣ್‌ಗೂ ಕಾಂಬಕೆ ಸಿಕ್ಕಟಿಲ್ಲೆ.

ಹನ್ನೊಂದನೇ ದಿನ : ಈ ದಿನ ಪಿಲೆ ತೆಗ್ದವೆ. ಪಿಲೆ ತೆಗೆಂದುಂತೇಳಿರೆ ಹೊಲೆ ತೆಗೆದು ತೇಳಿ ಅರ್‍ತ. ಮುಟ್ಟಾದ ಗೂಡೆನ ಸುದ್ದ ಮಾಡ್ವ ಕ್ರಿಯೆ ಇದ್. ಇದ್ ಹನ್ನೊಂದ್‌ನೆ ದಿನನೆ ಆಕುಂತ ಏನಿಲ್ಲೆ. ಆ ಗೂಡೆ ಎರಡ್‌ನೆ ಸರ್‍ತಿ ಮುಟ್ಟಾಕೆ ಮುಂದೆ ಪಿಲೆ ತೆಗಿಯಕು. ಹೆಚ್ಚಾಗಿ ಹನ್ನೊಂದರಂದ್ ನಡ್ಸುದೆ ಕ್ರಮ. ಇಸ್ಟ್ ದಿನ ಆ ಗೂಡೆಗೆ ಬಗೆಬಗೆನ ತಿಂಡಿ ತಿನ್ಸ್‌ಗಳ ಕೊಟ್ಟಿದ್ದವೆ.

ಪಿಲೆ ತೆಗಿವ ದಿನ ನಿಗಂಟ್ ಮಾಡಿ ನೆಂಟರಿಷ್ಟರ್‌ಗೆ ಹೇಳಿಕೆ ಕೊಟ್ಟಿದ್ದವೆ. ಆ ದಿನಕೆ ಮುಂದೆ ಮೊಡ್ಯಾಳ್ತಿ ಮನೆಗೆ ಬಂದ್ ಪಿಲೆ ತೆಗೆಕೆ ತಯ್ಯಾರ್ ಮಾಡಿಕಂಡಿದ್ದದೆ. ಊರವರ ಪೈಕಿ ಯಾರಾರ್ ಒಬ್ಬ ದೇಸ್ತಾನಕೆ ಹೋಗಿ ತೀರ್‍ತ ತಂದ್ ಇಜ್ಜಲ್‌ಲಿ ಇರ್‌ವ ತೊಳ್ಸಿ ಕಟ್ಟೆಲಿ ಇಸುವೆ. ಪಿಲೆ ತೆಗೆವಂದ್ ಮೊಡ್ಯಾಳ ಬೇಗ ಬಂದ್ ಮನೆ ಹೆಣ್ಮಕ್ಕಳ ಸುದ್ದ ಮಾಡ್ದೆ. ಮನೆವು ಸೆಗ್‌ಣಿ ಕೆರ್‍ದ್ ಮನೆನ ಒಳೆಗೆ ಹೊರೆಗೆ ಮನಾರ ಮಾಡ್‌ವೆ. ಮುತ್ತೈದೆಗ ನೆರ್‍ದ ಗೂಡೆನ ಒಳೆಗೆನ ಕೋಣೆಲಿ ಮೀಸಿ ಆದ ಮೇಲೆ ಕುದ್ರುಸುವೆ. ಅದ್ಕೆ ಹೂ ಮುಡ್ಸಿ, ಚಿನ್ನ ಹಾಕಿ, ಅವಳ ವಿಸೇಸ ರೀತಿಲಿ ಸಿಂಗರ್‌ಸುವೆ. ಮೊಡ್ಯಾಳ್ತಿ ಕೊಟ್ಟ ಬಿಳಿಬಟ್ಟೆನ ಗೂಡೆಗೆ ಉಡ್ಸುವೆ. ಹೊರೆಗೆ ಇಜ್ಜಲ್‌ಲಿ ಮೊಡ್ಯಾಳ್ತಿ ಜೇಡಿಮೊಣ್ಣು ಇಲ್ಲರೆ ಅಕ್ಕಿ ಹೊಡಿಲಿ ರಂಗೋಲಿ ಬರ್‍ದದೆ. ಚೊವ್ವಾಕಾರದ ನಾಕ್ ಗೆರೆ ಎಳ್ದ್ ನಡುಲಿ ಚಕ್ರ ಬರ್‍ದ್ ಅದರ ಮೇಲೆ ಬಾಳೆಲೆ ಇಸಿದೆ. ಚೊವ್ವದ ನಾಕ್ ಮೂಲೆಲಿ ಎಲೆ, ನೀರ್, ಅಡ್ಕೆ ಮತೆ ಮಾಯ್ನ ಸೊಪ್ಪು ಹಲ್ಸ್‌ನ ಸೊಪ್ಪು ಇಸಿದ್ದದೆ. ಪ್ರತಿ ಮೂಲೆಗೆನೂ ನಾಲ್ಕಾಣೆನ ಎಲೆನ ಮೇಲೆ ಇಸಕು. ರಂಗೋಲಿಗೆ ಹೊರೆಗೆ ಪುಡೆಂದ ಮೂಡದಿಕ್ಕ್‌ಗೆ 'ಕುಕ್ಕೆ' ನ ಇಸಿ, ಅದರ್‌ಲಿ ಒಂದ್ ಸೇರ್ ಕೊಯ್ಸಲಕ್ಕಿ, ಐದ್ ವೀಳ್ಯದೆಲೆ, ಒಂದಡ್ಕೆ ಮತ್ತೆ ಕಾಯಿ ಇಸಿ ದೀಪ ಹೊತ್ತುಸಿಸಿದೆ.

ಈಗ ಗೂಡೆನ ಕರ್‌ಕಂಡ್ ಬಂದ್ ಪಡು ದಿಕ್ಕ್‌ಂದ ಚೊವ್ವದೊಳಗೆ ಬಾಕೆ ಹೇಳ್‌ವೆ. ಆಗ ಅದ್ ಎಲೆ ಅಡ್ಕೆ ತಿಂದಿರಕು. ಬಾಯಿ ಕೆಂಪಾದ ಗೂಡೆ, ಚೊವ್ವದ ನಡುಲಿ ಇರ್‌ವ ಬಾಳೆಲೆಗೆ ಬಂದ್ ನಿತ್ತದೆ. ಆಗ ಅದರ ಕಾಲುಂಗುಸ್ಟಂದ ತಲೆವರೆಗೆ ನೂಲು ಹಿಡ್ದ್, ಮೊಡ್ಯಾಳ್ತಿ ಅದರ್‌ಲಿ ವೃತ್ತಾಕಾರದ ಕಡಗ (ಬಳೆ)ನ ಜಾರ್‌ಸಿದೆ. ಹೆಣ್ಣ್ ಅತಿರೂಪವತಿ ತ ಹೇಳಿಕೆ ಅರೆಬಾಸೆಲಿ ಉಂಗುರ ಹಾಕಿ ತೆಗಿದು ತ ಕರ್‍ದವೆ. ಇಲ್ಲಿ ಗೂಡೆ ಮೈನೆರ್‍ದಾಕನ ಅದರ ಸಮಕಟ್ಟಾದ ದೇಹ ಸ್ತಿತಿನ, ಸೌಂದರ್ಯನ ತೋರ್‌ಸುದಕೆ ಕಡಗ ದಾಟುಸುದಾಗಿರಕು. ಅದ್ ಪೊರ್‌ಲುಂತ ತೋರ್‌ಸುವ ಕ್ರಮ ಇದಾಗಿರ್‍ದು, ಇಲ್ಲರೆ ದ್ರಿಸ್ಟಿ ನಿವಾಳ್ಸುವ ಕ್ರಮನೂ ಇರ್‍ದು. ಹಿಂಗೆ ಐದ್ ಸರ್‍ತಿ ಕಡಗ ದಾಟ್‌ಸಿದ ಮೇಲೆ ಅದೇ ಕಡಗನ ಗೂಡೆಗೆ ಹಾಕುವೆ. ಇದರ 'ಹನ್ನೆರ್‍ಡ್ ವರ್ಷ ಪಿಲೆ ತೆಗೆದು' (ಹನ್ನೆರಡು ವರ್ಷದ ಹೊಲೆ ತೆಗೆಯುವುದು)ತೇಳುವೆ. ಅದಾಗಿ ಮೊಡ್ಯಾಳ್ತಿ ಗೂಡೆನ ತಲೆಮೇಲೆ ಬಿಳಿ ಬಟ್ಟೆ ಹಿಡ್ದದೆ. ಮುತ್ತೈದೆಗ ಅದರ ಮೇಲೆ ನೀರು ಚಿಪ್ಪುಳ್ಸುವೆ. ಈಗ ಒನಕೆನ ತಂದ್ ಮೂರ್ ಸರ್‍ತಿ ದಾಟ್ಸುವೆ. ಗೂಡೆ ಇನ್ನೊಮ್ಮೆ ಎಲೆ ಅಡಿಕೆ ತಿನೊಕು. ನೀರು ಚಿಪ್ಪುಳ್ಸಕು, ಒನಕೆ ದಾಟ್ಸಕು. ಮತ್ತೆ ಎಲೆ ಅಡಿಕೆ ತಿಂಬೊದು, ಒನ್ಕೆ ದಾಟ್ಸುದು, ನೀರ್ ಸಿಡ್ಕುದು ಇದೆಲ್ಲ ಒಟ್ಟಿಗೆ ನಡಿವ ಕ್ರಿಯೆಗ. ಇದ್ ಪೂರ ಲೈಂಗಿಕ ಸಂಕೇತನ ಹೇಳ್‌ವಂಗೆ ಕಂಡದೆ. ಹೀಗೆ ಮಾಡಿಕನ ಗೂಡೆನ ಸೋದರ ಮಾವಂದರ್ ಗೂಡೆನ ಹಾಸ್ಯ ಮಾಡ್ದುನು ಇದ್ಕೆ ಹೊಂದಿಕಂಬ ವಿಚಾರನು ಆದೆ. ಇದಾದ ಮೇಲೆ ಗೂಡೆನ ಹೊರೆಗೆ ಬಾಕೆಹೇಳಿ 'ಮುದ್ದೆ ಇಡಿಕೆ 'ಹೇಳ್‌ವೆ. ಹುಗ್ಗಂದ ಮಾಡ್ದ ಮೂರ್ ಮುದ್ದೆನ ಗೂಡೆ ದೂರಕ್ಕೆ ಇಟ್ಟದೆ. ಅದಾಗಿ ಗುಂಬ ಪೂಜೆ ನಡ್ದದೆ.

**ಗುಂಬ ಪೂಜೆ :** ಬೆತ್ತಂದ ಮಾಡ್ದ ಹೆಡೆಗೆಲಿ ಅಕ್ಕಿ ಹೊಡಿ, ಕಾಯಿ, ಬಾಳೆಹಣ್ಣು ಹಿಡ್ಕಂಡ್ ಹೆಂಗ್‌ಸ್‌ಗ ಗೂಡೆನ ತಲೆಗೆ ಒಂದ್ ಮಡ್ಕೆನ ಹೊರ್‌ಸುವೆ. ಆ ಮಡ್ಕೆಲಿ ಹಾಲ್ ಇದ್ದದೆ. ಎಲ್ಲವೂ ನೀರ್ ಇರುವ ಜಾಗೆಗೆ, ಹೆಚ್ಚಾಗಿ ಬಾಮಿ ಕಟ್ಟೆ ಹಕ್ಕಲೆ ಹೋದವೆ. ಕಟ್ಟೆಲಿ ಹಾಕಿದ ಹೊಸ ಮೊಂದ್ರಿಲಿ ಐದ್ ಬಾಳೆ ಎಲೆ ಹಾಕಿ, ಗೂಡೆನೆ ಅದರ ಮನಾರ ಮಾಡ್ದೆ. ಹಾಲಿರುವ ಮಡ್ಕೆನ (ಅದನ್ನು ಪೇರಸಾಲೆ ಎನ್ನುತ್ತಾರೆ) ಅದರ ಕರೆಗೆ ಇಸಿ, ಅದರ ಮೇಲೆ ಚೊಲ್ಲಿದ ಕಾಯಿಯೊಂದರ ಇಸಿದೆ, ಐದ್ ಬಾಳೆ ಎಲೆಗೆ ನೆನ್ನೆಕ್ಕಿ (ಹುರಿದ ಅಕ್ಕಿಗೆ ಬೆಲ್ಲದ ಹೊಡಿ ಸೇರ್‌ಸಿ ಮಾಡ್ದ ತಿಂಡಿ)ಹಾಕಿ, ಅದರೆದುರು ಬಾಳೆಹಣ್ಣ್‌ನ ಇಸಿದೆ. ದೀಪ ಒಂದರ

ಹೊತ್ತುಸಿ, ಪ್ರತೀ ಎಲೆಗೆ ಕೈಮುಗ್ದದೆ ಒಂದ್ ಸರ್‌ತಿ ಎಲ್ಲವು ಹಿಂದೆ ತಿರ್‌ಗಿ ನಿತ್ತವೆ. ಅದಾಗಿ ಗೂಡೆ ಬಾಮಿಗೆ ಮೂರ್ ಸುತ್ತ್ ಬಂದದೆ. ಮುತ್ತೈದೆಗ ಸಾಮಾನ್ಯ ಆಗಿ ಈ ಕಾಗಡೆ ಪೊದ್ಯನ ರಾಗಲಿ ಹೇಳ್‌ವೆ.

ಒಂದೆಲೆ ಒಂದಡ್ಕೆ ಒಂದ್ ಗಂದದ ಬೊಟ್ಟು
ಗಂಗೇಗೂ ಗೌರಿಗೂ ಶಿವಪೂಜೆ
ಶಿವಪೂಜೆ ಶಿವಗಿರಲಿ, ದೇವಪೂಜೆ ದೇವಗಿರಲಿ
ಕಾಗೆ ಕುಡಿಯದ ನೀರು,
ಜೋಗಿ ಸುಳಿಯದ ನೀರು ಪಚ್ಚೆ ಪಾತಾಳದ ಪನ್ನೀರು

ಹೀಗೆ ಎರಡೆಲೆ ಎರಡಡಿಕೆ, ಮೂರೆಲೆ ಮೂರಡಿಕೆ ತೇಳಿ ಒಳ್ದ ಸಾಲ್‌ಗಳ ಹಾಂಗೆ ಪುನರಾವರ್‌ತನೆ ಮಾಡಿ ಏಳ್ ಸರ್‌ತಿ ಹೇಳ್‌ವೆ. ಅದಾಗಿ ಹಾಲ್‌ನ ಗುಂಬನ ಇನ್ನೊಮ್ಮೆ ಗೂಡೆನ ತಲೆಗೆ ಹೊರ್‌ಸುವೆ. ಒಬ್ಬ ಕೊಡೆ ಹಿಡ್ದವೆ. ಅಲ್ಲಿಂದ ಮನೆ ಬಾಗ್ಲ್‌ಗೆ ಬಂದ್ ಅಲ್ಲಿ ನಿತ್ತ್ ಆರತಿ ಮಾಡ್ಸಿಕಂಡ್, ಮನೆ ಒಳೆಗೆ ಹೋದವೆ. ಒಳೆಗೆನ ಕೋಣೆಲಿ ಇಲ್ಲರೆ ಅಡ್ಗೆ ಕೋಣೆಲಿರ್‌ವ ಕನ್ನಿಕಂಬದ ಬುಡಲಿ ಗೂಡೆನ ಕುದ್ರುಸಿ ಗುಂಬನ ಇಳ್ಸುವೆ. ಸೇರ್‌ದ ಹೆಣ್ಮಕ್ಕೆಲ್ಲ ಆಸಿರ್‌ವಾದ ಮಾಡಿ ಉಡ್ಗೊರೆ ಕೊಟ್ಟವೆ, ಕಡೆಗೆ ಗೂಡೆನ ಕೈ ಹಿಡ್ಕಂಡ್ ಅದರೊಟ್ಟಿಗೆ ಮನೆನ ಎಲ್ಲ ಸಾಮಾನ್‌ಗಳ ಮುಟ್ಟಿಕೆ ಹೇಳ್‌ವೆ, ಹಿರಿಯರ ಕಾಲ್ ಹಿಡ್ದ್ ಆಸಿರ್‌ವಾದ ಪಡ್ಕಂಬಕೆ ಹೇಳ್‌ವೆ.

ಅದಾಗಿ ಎಲ್ಲವ್ ಕುಸಿಲಿ ಉಂಡವೆ. ಉಂಡಾಗಿ ಗೂಡೆನ ಅಯ್ಯೆನ ತವರ್‌ನವು ಗೂಡೆನ ಕರ್‌ಕಂಡ್ ಹೋದವೆ. ಆಗ ಅದರ ಕೈಲಿ ಒಂದ್ ಕುಡ್ತೆ ತುಪ್ಪ ಹಿಡ್ಕಂಡ್ ಹೋಕು. ಅಜ್ಜೆನ ಮನೆಲಿ ಗೂಡೆಗ, ಸೋದರ ಮಾವಂದರ್ ತಮಾಸೆ ಮಾಡ್‌ವೆನು, ಒಟ್ಟಿಗೆ ಸನ್ಮಾನ ಮಾಡಿ ಕಳ್ಸಿಕೊಟ್ಟವೆ. ಗೌಡರ್‌ಲಿ ಗೂಡೆನ ಅದರ ಸೋದರ ಮಾವನೇ ಮೊದ್‌ವೆ ಆವ ಸಂಪ್ರದಾಯ ಹಿಂದೆ ಇತ್ತ್. ಈಗ ಅದ್ ನಿತ್ತ್ ಹೋಗುಟು. ಮೈನೆರ್‌ದ ಗೂಡೆನ ಸೋದರ ಮಾವಂದರ್ ತಮಾಸೆ ಮಾಡ್ದರ ಮೂಲ ಅವರ ಸಲಿಗೆ ಸಮ್ಮಂದ ಇಲ್ಲಿ ಗೊತ್ತಾದೆ. ಮೈನೆರ್‌ದ



ನೆರ್‌ದ ಮೊದ್ವೆ ಶಾಸ್ತ್ರ

ದಿನಂದ ಗುಂಬ ಪೂಜೆನವರೆಗೆ ಹೆಣ್ಣ್‌ನ ಮುಟ್ಟಿ ಕಾಗದ್ ತ ಹೇಳ್‌ವೆ. ಅದ್ ಮೆಣ್ಸ್‌ನ ದೈನ ಮುಟ್ಟಿರೂ ಅದ್ ಬಾಡಿ ಹೋದೆತೇಳ್ವ ನಂಬಿಕೆ ಗೌಡರ್‌ಲುಟ್ಟು.

ಮುಂದೆ ಪ್ರತೀ ತಿಂಗನೂ ಗೂಡೆ ಮುಟ್ಟಾಕನ ಮೂರು ದಿನ ಮನೆ ಒಳೆಗೆ ಬಾವಂಗಿಲ್ಲೆ. ಮೀವ ಕೊಟೆಗೆ ಅದ್ ಮಲ್ಗಿದೆ. ಮಲ್ಗಿದ ಜಾಗೆಗೂ ಯಾರೂ ಸಾಮಾನ್ಯ ಆಗಿ ಹೋಕಿಲ್ಲೆ. ನಾಕ್‌ನೆ ದಿನ ಅದ್ ತಣ್ಣೀರ್‌ಲಿ ಮೀದ್, ಬಟ್ಟೆನ ಸುದ್ದಮಾಡಿ, ಮಲ್ಗಿದ ಜಾಗೆನ ಸೆಗಣಿ ಕೆರ್‌ದ್ ಮನೆ ಒಳೆಗೆ ಬಂದದೆ.

ಅಜ್ಜಾವರ ಗ್ರಾಮದ ಪೇರಾಲು, ಗುತ್ತಿಗಾರು ಗ್ರಾಮದ ಕೊರ್‌ಂಬಾಟ ಲಿರ್‌ವ ಊರ್ ದೆವ್ವಕೆ, ನೇಮ ನಡೆಕನ ಆ ಊರುಲಿ ಮುಟ್ಟಾದ ಹೆಂಗಸ್‌ಗ ಯಾರೂ ಬಾಕಾಗದ್‌ತ ಉಟ್ಟು. ಯಾರಾರ್ ಇದ್ದರೆ ಅವರ ಬೇರೆ ಊರುಗೆ ಕಳ್ಸುವೆ.

ಪಿಲೆ ತೆಗೆವ ಸಂಪ್ರದಾಯ ಈಚೆಗೆ ತುಂಬಾ ಕಡಿಮೆ ಆಗುಟು. ಅದ್ಕೆ ಸಮ್ಮಂದಪಟ್ಟ ನಂಬಿಕೆಗನು ಕಡಿಮೆ ಅಗುಟು. ಈ ಸಂಪ್ರದಾಯ ಹೆಣ್ಣ್‌ನ ಪಲವಂತಿಕೆಗೆ ಸಮ್ಮಂದ ಪಟ್ಟದಂರ್‌ದ ಒಟ್ಟು ಆಚರಣೆಲಿ ಬಾವ ವಸ್ತುಗ ಮತ್ತೆ ಕ್ರಮಂಗ ಪಲವಂತಿಕೆನ ಪ್ರಬಲವಾದ ಸಂಕೇತಂಗಳ್‌ಂದಲೆ ಗೊತ್ತಾದೆ. ಹಾಲ್ ಅರಿವ ಮರ, ತಿಂಬಕೆ ಕೊಡುವ ತಿಂಡಿಗ, ಹಾಲ್‌ನ ಗುಂಬ, ನೀರ್‌ನ ಪೂಜೆ ಎಲ್ಲನಕ ಪಲವಂತಿಕೆಗೆ ಸೇರ್‌ದ ಗುರ್‌ತುಗ. (ಪಿ.ಬಿ.)

**ನೇತ್ರಾವತಿ :** ದಕ್ಷಿಣಕನ್ನಡ ಜಿಲ್ಲೆನ ಒಂದ್ ಹಳ್ಳ. ಪೊಡ್‌ವ ಗಟ್ಟದ ಕುದುರೆಮುಕ ಪರ್‌ವತಲಿ ಹುಟ್ಟಿ, ಬಂಗಾಡಿ ಕಣಿವೆಲಾಗಿ ಹರ್‌ದ್ ಉಜಿರೆ, ಧರ್ಮಸ್ಥಳ, ಬೆಳ್ತಂಗಡಿಗಳ ದಾಟಿ ಬಂಟ್ವಾಳಲಾಗಿ ಮಂಗಳೂರ್ ಕಡೆ ಸಾಗಿ, ಕೋಡಿಯಾಲದ ಹಕ್ಕಲೆ ಅರಬ್ಬಿಸಮುದ್ರನ ಸೇರ್‌ದೆ. ಹಳ್ಳನ ಹರಿವುನ ಒಟ್ಟು ಉದ್ದ 96 ಕಿಮೀ.. ಮುಂಗಾರು ಮಳೆನ ದಿನಲಿ ನೇತ್ರಾವತಿಲಿ ನೀರ್‌ನ ಹರಿವ್ ಜೋರಿದ್ದದೆ.ಹಳ್ಳದ ನಡುಲಿ ಕಲ್ಲುಬಂಡೆಗಳೂ ಗೊಡಲ್‌ಗಳು ಒಳೊ. ಬಂಟ್ವಾಳಂದ ಮುಂದೆಗೆ ದೋಣಿಗಳ ಸಂಚಾರಕೆ ಅನುಕೂಲ ಉಟ್ಟು. ಮಂಗಳೂರ್‌ನ ಹಕ್ಕಲೆ ಹಳ್ಳದ ಕರೆ ಅಗಲ ಇದ್ದ್ ನಡುಲಿ ಸಣ್ಣ ದ್ವೀಪಗ ಒಳೊ. ಪಲವತ್ತಾಗಿರುವ ಈ ಬಾಗಂಗ ಬತ್ತ, ಕಬ್ಬು ಬೆಳೆಗೆ ಲಾಯ್ಕುಟ್ಟು. ಉಲ್ಲಾಳದ ಹಕ್ಕಲೆ ನೇತ್ರಾವತಿ ಹಳ್ಳಕೆ ಅಡ್ಡಕೆ ಕಟ್ಟಿದ ರೈಲು ಸೇತುವೆ ದಕ್ಷಿಣ ಭಾರತದ ಬಾರಿ ಉದ್ದದ ರೈಲ್ ಸೇತುವೆಲಿ ಒಂದ್. (ಕೆ.ಬಿ.ಪಿ.)

ನೈಸರ್ಗಿಕ ಪ್ರಕೋಪಗ–ನೈಸರ್ಗಿಕ ಪ್ರಕೋಪಗ ನೈಸರ್‌ಗಿಕ ಆವಾಂತರಗ, ಮೊಯಿಂಸರ್ ಮಾಡ್ದ ಕೆಲ್ಸಗ ಪೊಡ್‌ವನ ಗಟ್ಟಂಗಳ ಮೇಲೆ ಯಾವ ತರಲಿ ಪ್ರಬಾವ ಬೀರಿಟುತೇಳ್ದರ ಬಗ್ಗೆ ಒಂದ್ ಅದ್ಯಯನ.

**ಪೊಡ್‌ವನ ಗಟ್ಟ‌ನ ನೈಸರ್ಗಿಕ ಪ್ರಕೋಪ :** ಕಳ್ದ 2018, 2019 ಮತ್ತೆ 2020ರ ಆಗಸ್ಟ್ ತಿಂಗಳ್‌ಲಿ ನಡ್ದ ಗುಡ್ಡೆ ಜರ್‌ದ್ ಕೊಡಗ್, ದಕ್ಷಿಣಕನ್ನಡ, ಚಿಕ್ಕ ಮಗಳೂರು ಮತ್ತೆ ಹಾಸನ ಜಿಲ್ಲೆನ ಪೊಡ್‌ವನ ಗಟ್ಟ ಪ್ರದೇಸಲಿ ಬಾರಿ ವಿನಾಸ ಆಗ್ಯೊತ್. ಸರಿಯಾಗಿ 3 ವರ್‌ಸಲಿ ಪೊಡ್‌ವನ ಗಟ್ಟಗಳ ಈ ಪ್ರದೇಸಲಿ ಆಗಸ್ಟ್ ತಿಂಗಂಳ್‌ಲಿ ಬಾರೀ ಜಾಸ್ತಿ ಮಳೆಯಾಗಿತ್ತ್. 2018ರ ಆಗಸ್ಟ್ 4ನೇ ವಾರಲಿ ಕೊಡಗ್ ಜಿಲ್ಲೆಲಿ 2 ದಿನಲಿ ಸುಮಾರ್ 700mm ನಸ್ಟ್, 2019, ಆಗಸ್ಟ್ 2ನೆಯ ವಾರಲಿ ಬೆಳ್ತಂಗಡಿ ತಾಲೂಕುಲಿ 2 ದಿನಲಿ 500mm ನು ಹಂಗೇ 2020 ಆಗಸ್ಟ್ ಸುರುನ ವಾರಲಿ ಕೊಡುಗುನ ಭಾಗಮಂಡಲ – ತಲಕಾವೇರಿ


ನೇತ್ರಾವತಿ :

ಜಾಗೆಲಿ 2 ದಿನಲಿ ಸುಮಾರು 900mmಂದಳು ಹೆಚ್ಚಿಗೆ ಮಳೆಯಾಗಿತ್ತ್ ಈ ಜಿಲ್ಲೆಗಳಿಗೆ ಸೇರ್‌ದ ಪೊಡ್‌ವನ ಗಟ್ಟಗಳ್‌ಲಿ ಬಾರೀ ಬೂಮಿ ಜರ್‌ದಿತ್ತ್. ಜೂವ ಹೋದರ ಒಟ್ಟಿಗೆ ಸುಮಾರ್ ಮನೆಗ ಕುಸ್ದೊ ಜೆನಜೀವನನ ಅಸ್ತ ವ್ಯಸ್ತ ಮಾಡಿತ್ತ್.

ಕ ಸಮಯಲಿ ಬಾವ ಜಾಸ್ತಿ ಮಳೆ ಬೂಮಿ ಜರ್‌ದದಕೆ ಕಾರಣ ಆಗುಟು. ಹಿಂಗೆ ಬೂಮಿ ಜರ್‌ದದು ಈ ಜಾಗೆಲಿಗಳ್‌ಲಿ ಮುಂದೆನೂ ಹಿಂದೆನೂ ಆಗ್ತಾ ಇತ್ತಾ? ತೇಳುವ ಪ್ರಸ್ನೆಗೆ ಉತ್ತರ ಹುಡುಕಿಕೆ ಹೊರ್ಟಾಕನ ಕೆಲವ್ ಆಸಕ್ತಿದಾಯಕ ಸಂಸೋದನಾ ವಿಸಯಗ ಸಿಕ್ಕಿದೆ.

ನೇತ್ರಾವತಿ ಹಳ್ಳ ನೀರ್‌ನ ವರ್‌ತೆ ಜಾಗೆ ಪೊಡ್‌ವನ ಗಟ್ಟಗಳಂದ ಸುರಾಗಿ ಮಂಗಳೂರುನ ಉಳ್ಳಾಲ –ಬೆಂಗ್ರೆಲಿ ಅರಬ್ಬೀ ಸಮುದ್ರ ಸೇರುವ ವರೆಗೆನ ಜಾಗೆಲಿ ಹರ್‌ಂಡಿದೆ. ಕುಮಾರದಾರ ಹಳ್ಳ ನೇತ್ರಾವತಿ ಹಳ್ಳದ ಉಪನದಿ. ಗುರುಪುರ, ನೇತ್ರಾವತಿ, ಕುಮಾರದಾರ, ಪಯಸ್ವಿನಿ ಮತ್ತೆ ಕಾವೇರಿ ಹಳ್ಳಂಗ ದಕ್ಷಿಣಕನ್ನಡ ಮತ್ತೆ ಕೊಡಗ್ ಜಿಲ್ಲೆಗಳ ಪೊಡ್‌ವನ ಗಟ್ಟಗಳ್‌ಲಿ ಹುಟ್ಟಿದೆ. ನೇತ್ರಾವತಿ ಹಳ್ಳ ಕುದುರೆಮುಕ ಪರ್‌ವತ ಸ್ರೇಣಿನ ಸಂಸೆ ತೇಳ್‌ವಲ್ಲಿ ಹುಟ್ಟಿದೆ, ಕುಮಾರದಾರ ಸುಬ್ರಹ್ಮಣ್ಯದ ಹಕ್ಕಲೆ ಕುಮಾರ ಪರ್‌ವತಲಿ ಹುಟ್ಟಿದೆ. ಈ ಹಳ್ಳಕೆ ಸಕಲೇಸಪುರದ ಹಕ್ಕಲೆಂದನು ಬೇಕಾದಸ್ಟ್ ಸಣ್ಣ ಸಣ್ಣ ಹಳ್ಳಂಗ ಬಂದ್ ಸೇರುವೆ. ಎತ್ತಿನ ಹೊಳೆ ಸಕಲೇಸಪುರದ ಹಕ್ಕಲೆ ಹುಟ್ಟಿ, ಪಡ್ವಕೆ ಹೋದೆ ಕೆಂಪು ಹಳ್ಳ ಆಗಿ ಕುಮಾರದಾರ ಹಳ್ಳಕೆ ಸೇರಿದ್, ಕುಮಾರದಾರ ಹಳ್ಳ ನೇತ್ರಾವತಿನ ಉಪ್ಪಿನಂಗಡಿ ಹಕ್ಕಲೆ ಸೇರಿ ಕಡೆಗೆ ನೇತ್ರಾವತಿ ನದಿ ಮಂಗ್ಳೂರ್‌ನ ಹಕ್ಕಲೆ ಅರಬ್ಬಿ ಸಮುದ್ರನ ಸೇರ್‌ದೆ.

ನೇತ್ರಾವತಿ, ಕುಮಾರದಾರ, ಪಯಸ್ವಿನಿ ಮತ್ತೆ ಕಾವೇರಿ ಹಳ್ಳಗಳ ಜಲಾನಯನ ಪ್ರದೇಸಲಿ ಇರುವ ಪೊಡ್‌ವನ ಗಟ್ಟ ಪ್ರದೇಸಗ ಇತ್ತೀಚೆಗೆ ಬರೆ ಗುಡ್ಡೆ ಜರಿದರ ಕಾಣಕ್. ಜೋಡುಪಾಲ, ಮೊಣ್ಣಂಗೇರಿ, ಮಕ್ಕಂದೂರ್ (2018ರ್‌ಲಿ), ಬೆಳ್ತಂಗಡಿಲಿ 2019 ರ್‌ಲಿ ನಡ್ದುಟು.

Survey of India (ಭಾರತೀಯ ಸರ್‌ವೇಕ್ಷಣಾ ವಿಭಾಗ), ದವು ತಯಾರ್ ಮಾಡ್ದ ನಕ್ಸೆಗ, Indian Space Research Organisation (ಭಾರತೀಯ ಬಾಹ್ಯಾಕಾಸ ಸಂಸ್ತೆ), ನವು ಅಂತರಿಕ್ಸಕ್ಕೆ ಹಾರ್‌ಸಿ ಬುಟ್ಟ ದೂರ ಸಂವೇದಿ ಉಪಗ್ರಹಗಳ ಚಿತ್ರಗಳ ಅದ್ಯಯನ ಮಾಡಿಕನ ಗುಡ್ಡೆ ಜರ್‌ದದಕೆ ಕೆಲ ಕಾರಣ ಆದ ಕೆಲವ್ ಅಂಸಗಳ ಈ ಕೆಳಗೆನ ಹಾಂಗೆ ಪಟ್ಟಿ ಮಾಡಕು ಸುಮಾರು 60ಕಿಲೊಮೀಟ್ರ್‌ಂದ ಉದ್ದದ ಸ್ತರ ಬಂಗ (Faulting)ಕ್ಕೆ ಒಳಗಾದ ಪ್ರದೇಸಗಳ ನಾವು ಸುಬ್ರಹ್ಮಣ್ಯದ ತೆಂಕಂದ ಸಿರಾಡಿನ ಬಡಗ ದವರೆಗೆ ಕಾಣಕ್, ಇದರ ಒಟ್ಟಿಗೆ ಮೂಡ ಪಡ್‌ವ – ಆಗಿ ಹರ್‌ಡಿರ್‌ವ ಸುಮಾರು ಬಿರ್‌ಕ್‌ಗ (lineaments) ಈ ಜಾಗೆಲಿ ಉಟ್ಟು. (ಚಿತ್ರ 2) ಕೊಡಗ್‌ನ ಜೋಡುಪಾಲ, ಮೊಣ್ಣಂಗೇರಿ ಜಾಗೆಲಿ ಇರ್‌ವ ಪೊಡ್‌ವನ ಗಟ್ಟಗಳ ಸೂಕ್ಷ್ಮ ಆಗಿ ನೋಡಿಕನ ಅಲ್ಲಿ arcuate shape ಲಿರುವ ಬೂಮಿ ಜಾಗೆಗಳ ನೋಡಕು. ಅಂದರೆ, ಬಾಳ ಹಿಂದೆನು ಅಲ್ಲಿ ನೆಲ ಜರ್‌ದಿತ್ತ್ ತೇಳಿ ಹೇಳಕು. ಅಂದರೆ ಸುಮಾರ್ ವರ್‌ಸಗಳ ಹಿಂದೆ (ಕೆಲವ್ ಸತಮಾನಗಳ ಹಿಂದೆ) ಅಲ್ಲಿ ದೊಡ್ಡದಾಗಿ ಗುಡ್ಡೆ ಜರ್‌ದಿತ್ತ್ ತೇಳಿ ಹೇಳಕು. ಇನ್ನೂ ಒಂದ್ ವಿಸಯನ ನಾವು ನೋಡ್ದಾದದರೆ ದಕ್ಷಿಣಕನ್ನಡ ದ ನೇತ್ರಾವತಿ ಹಳ್ಳನ ಜಲಾನಯನ ಪ್ರದೇಸಗಳ್‌ಲಿ ಪೊಡ್‌ವನ ಗಟ್ಟಗ ಬಡಗದ ಉಡುಪಿ ಮತ್ತೆ ತೆಂಕದ ಕಾಸರಗೋಡು ಪ್ರದೇಸಕೆ ಹೋಲ್ಸಿರೆ ಜಾಸ್ತಿ ಹಿಂದೆ ಸರ್‌ದುಟು. ಹಿಂಗೆ ಹಿಂದೆ ಹೋಕನ ಸ್ತರ ಬಂಗ (Faulting) ಗಳ್‌ಂದ ಆದ ಎತ್ತರ ತೆಗ್ಗು ಪ್ರದೇಸಗಳ ಒಟ್ಟಿಗೆ ನೇತ್ರಾವತಿ ಹಳ್ಳ ಪೊಡ್‌ವನ ಗಟ್ಟಗಳ ತೆಂಕಾಬಿಮುಕ ಆಗಿದ್ ಹರೆವ ಹಳ್ಳಗಳ ನುಂಗಿಕಂಡ್ ಅಗಲ ಆಕಂಡ್ ಆಕಂಡ್ ಹೋದೆ. ಹೀಂಗೆ ಆಕಂಡ್ ಹೋದಾಂಗೆ ಮುಂದೆ ಒಂದ್ ದಿನ ನೇತ್ರಾವತಿ ಹಳ್ಳ ಮೂಡಕ್ಕೆ ಹರಿವ ಹೇಮಾವತಿ ಹಳ್ಳನ ಸುಮಾರ್ ಹಳ್ಳಗಳ ನುಂಗಿಕಂಡ್ ಹೋವ ಸಾದ್ಯತೆ ಉಟ್ಟು.

ಪೊಡ್‌ವನ ಗಟ್ಟಗಳ ತೆಂಕದ ಕಡೆಲಿ ಇಳಿಜಾರು (Slope), ಪಡ್‌ವದ ಇಳಿಜಾರ್‌ಂದ ಕಡ್ಮೆ ಉಟ್ಟು ಇದರ ಒಟ್ಟಿಗೆ ಪಡ್‌ವದ ಗಟ್ಟಗಳ ಪಡ್ವಲಿ ಬೀಳ್ವ ಮಳೆ ಪ್ರಮಾಣ ಪೊಡ್‌ವನ ಗಟ್ಟಗಳ ಮೂಡಲಿ ಬೀಳ್‌ವ

ಮಳೆಂದ ಜಾಸ್ತಿ ಆಗಿದ್ದದೆ ಇದರ್‌ಂದಾಗಿ ಪೊಡ್‌ವನಾಬಿಮುಕ ಆಗಿ ಹರಿವ ಹಳ್ಳಂಗ ತೆಂಕಕೆ ಮೋರೆಮಾಡಿ ಹರಿವ ಸಣ್ಣ ಸಣ್ಣ ಹಳ್ಳಗಳ ನುಂಗಿಕಂಡದೆ... ಒಂದ್ ಹಳ್ಳ ಇನ್ನೊಂದು ಹಳ್ಳನ ಕಬಳಿಸುವ ಪ್ರಕ್ರಿಯೆಗೆ river piracy ತೇಳ್ವೆ. ಬಹುಸ ಸಾವಿರಾರ್ ವರ್‌ಸಗಳ ಮೇಲೆ ಪೊಡ್‌ವನಾಬಿಮುಕ ಆಗಿದ್ ಹರಿವ ಹಳ್ಳಗಳ ಉದ್ದ ಮತ್ತೆ ನೀರುನ ಒಸರು ಜಾಸ್ತಿ ಆವ ಲಕ್ಸಣ ಹೆಚ್ಚುಟ್ಟು. ಕುಮಾರಾದಾರ ಹಳ್ಳದ ಒಟ್ಟುನ ಹೊಳೆಯಾದ ಎತ್ತಿನ ಹೊಳೆಗೆ ಅಲ್ಲಲ್ಲಿ ಅಣೆಕಟ್ಟುಗಳ ಕಟ್ಟಿಕಾದರುಂದ ಅಣೆಕಟ್ಟುಲಿ ನಿಲ್ಲುವ ನೀರುನ ತೂಕನು ಸೇರಿರೆ ಸಿರಾಡಿ ಗಾಟಿ ಜಾಗೆಲಿ ಮುಂದೆನ ದಿನಲಿ ಜಾಗೆ ಜರಿದು ಜಾಸ್ತಿ ಆದೆ.

ಪೊಡ್‌ವನ ಗಟ್ಟಗಳ್ಳಿ ನಡ್ಕಂಡಿರುವ ಸುಮಾರು ಅಬಿವೃದ್ದಿ ಕೆಲ್ಸಕೆ ಕಾಡುನ ಮರಗಳ ಕಡ್ಸಿಕಂತೋಳ. ಮಾರ್‌ಗ ಮಾಡಿಕಾಗಿ ಕಾಡ್‌ಗ ನಾಸ ಆಗುತುಟ್ಟು. ಜಲವಿದ್ಯುತ್ ಯೋಜೆನೆಗೆ ಕಾಡು ಕಡೆದರಂದ ಪೊಡ್‌ವನ ಗಟ್ಟಗಳ ಮೇಲೆ ಜಾಗೆ ಹಡ್ಲು ಆಗಿ ಮೊಣ್ಣುನ ತಳಿದು ಜಾಸ್ತಿಯಾಗುತುಟ್ಟು. ಹಳ್ಳಗಳ್ಳಿ ಚೋಲು ತುಂಬಿ ನೀರು ಹಿಡೆವ ತಾಕತ್ ಕಡಿಮೆಯಾಗುತುಟ್ಟು. ಹಿಂಗೆ ನೈಸರ್‌ಗಿಕ ಪ್ರಕ್ರಿಯೆಗಳ ಒಟ್ಟಿಗೆ ಮೊಯಿಂಸ ಮಾಡ್ವಂತ ಕಾರಣಗ ಸೇರಿ ಇಂದ್ ಪೊಡ್‌ವನ ಗಟ್ಟಗಳ ಕಾಡ್‌ಗಳ ಮೃಗಜ್ಜ ಪೂರಾ ಸತ್ತ್ ಹೋಗ್‌ತೋಳ. ಪೊಡ್‌ವನ ಗಟ್ಟಗಳ ಒಳ್ಸಿರೆ ನಾವೆಲ್ಲ ಒಳ್ಳ ಹಾಂಗೆ ಪೊಡ್‌ವನ ಗಟ್ಟಗಳ ಸಂರಕ್ಸಣೆ ಮಾಡಕಾದೆ. ಈ ದಿಸೆಲಿ ನಾವೆಲ್ಲ ಕೆಲಸ ಮಾಡೊಕು. **(ಹೆಚ್.ಜಿ.ಬಿ.)**

**ಪಯ್ಯೊಲಿಗೆ :** ಪಯ್ಯೊಲಿಗೆ ಕತ್ತಿ ಹಿಡ್ದ ಸೇನಾಪತಿ ಸಮೇತ ಸೈನ್ಯ ಪಡೆನ ಮೆರವಣಿಗೆ– ವ್ಯೆಹಾಳಿನ ತೋರ್‌ಸಿದೆ. ಪಯ್ಯೊಲಿಗೆನ ಅರ್‌ತನ 'ದೇವು ಪೂಂಜ' ಪಾಡ್ದನದ ತುಣುಕೊಂದರ್‌ಂದ ಸ್ಪಷ್ಟಿ ಕರ್‌ಸಕ್.

'ಆನೆದ ಒತ್ತು ಬತ್ತಿಯೆ ಪೂಂಜೆ, ಕುದ್ರೆದ ಪಯ್ಯೊಲಿ ಪತ್ತೊಂಡೆ, ಮುಯ್ಯೇರ್‌ಕರ್‌ನ ಮಗ್ರೊಂಡೆ" – ಆನೆನ ಒಟ್ಟಿಗೆ ಬಂದ ಹೂಂಜ, ಕುದುರೆನ ಹಾರಟ ಹಾರ್‌ತ್. ಮೊಲದ ಹಾಂಗೆ ಕರ್‌ನಕುತ್ತ ಹಾರ್‌ತ್). ಇಲ್ಲಿ 'ಪಯ್ಯೊಲಿ' ಹಾರ್‌ವ ಅರ್‌ತನ ಹೇಳದೆ ಕುದುರೆ ಸವಾರಿ, ಪ್ರಾಣಿನ ಮೇಲೆ ಕುದ್ದುಕಂಡು ಹಾರಿಕಂಡ್ ಓಡುದು, ಕತ್ತಿವರಸೆ ಇಂತ ಅರ್‌ತನ ಕೊಟ್ಟದೆ. 'ಪಯ್ಯೊಲಿ ಪತ್ತುನಿ'ತೇಳ್ವ ತುಳುಪದಕೆ 'ಬೊಬ್ಬೆ ಹಾಕು'ತೇಳುವ ಅರ್‌ತ ಸನ ಉಟ್ಟು. ಪಯ್ಯೊಲಿ ಸಾಂದರ್‌ಬಿಕ ಹಾಂಗೆ ಬಾಸಿಕ ರಚನಾ ವಿನ್ಯಾಸಲಿ ಯುದ್ದಕೆ ಸಮ್ಮಂದಪಟ್ಟ ಅರ್‌ತ ಪರಂಪರೆನ ಇಸಿಕಂಡುಟು.

ಗಗ್ಗರದೊಣ್ಣೆ, ಸುಡುಮದ್ದ್, ಜೆನರ ಬೊಬ್ಬೆನೊಟ್ಟಿಗೆ ದೆವ್ವಗ ಕಾಜೋಕಾಜ ಜೋ ಹೇಳಿಕಂಡ್ ಓಲೆಸಿರಿಲಿ ಮಾಡಕ್ಕೆ ಬಾದು ಸಾಮಾನ್ಯ. ಹಿಂಗೆ ಮಾಡಕ್ಕೆ ಬಾಕನ ಒಂದ್ ಜಾಗೆಲಿ 'ದರಿ' ಹಾಕಿರುವಲ್ಲಿ ದೆವ್ವದೊಟ್ಟಿಗೆ ಇರ್‌ವ ಅಡ್ಡಣ– ದೊಣ್ಣೆ/ಗುರಾಣಿ– ಕತ್ತಿ ಹಿಡ್‌ದ ಪಯ್ಯೊಲಿನವು, ಹಿಂದೆನವು ಮುಂದೆಗೆ, ಮುಂದೆನವು ಹಿಂದೆಗೆ ಹಾರಿ ಹೋದವೆ. ಆಗ ದೆವ್ವನೂ ಸ ಅವರ ಬೆರ್‌ಸಿಕಂಡ್ ಹೋವ ಹಾಂಗೆ ಅವರ ವೇಗನ ಗತಿನ ಅನುಸರ್‌ಸಿ ಕೊಣ್ಕಂಡ್ ಹಿಂದೆ ಮುಂದೋದವೆ. ಪಯ್ಯೊಲಿನೂ ಅಡ್ಡಣಕೆ ನಿಲ್ಲುವ ಹಾಂಗೆ ಗ್ರಾಮನ'ನಾಲ್ಕು ಗುತ್ತು' ಮನೆಯವು ನಿತ್ತವೆ. ಮೂಡಕಟ್ಟಳೆನ ಆಡೆಳ್ತ ವೆವಸ್ತೆನ ಪ್ರತಿನಿದಿಗಳಂಗಿರ್‌ವ ಇವು 'ಕಿರ್‌ವಾಳು'ತಾವ ಹೊತ್ತುಲಿ ರಕ್ಸಕ ಬಟರ ಹಾಂಗೆ ಇರ್‌ದುಟ್ಟು.

ಈ ಪಯ್ಯೊಲಿಗೆ ವಿದಿನ ತುಳು ಬಿಲ್ಲವು ನಡ್‌ಸಿಕೊಟ್ಟರೆ ಆಗ ಅದರ 'ಬೊಂಟ್ರ ಪಯ್ಯೊಲಿ' ತೇಳುವೆ. ಈ ಪಯ್ಯೊಲಿ ವಿದಿನ ಸಾಮಾನ್ಯ ದೆವ್ವ ಓಲಸರಿಲಿ ಮಾಡಕ್ಕೆ ಬಾಕನ ನಡ್ಸುವ ಬದಲು, ಹಿಂದೆನ ಇರ್‌ಲ್ ಮಾಳ್ಯೆ /ಚಾವಡಿ ಎದುರದ ದೊಡ್ಡ ಬಾಕಿಮಾರ್ ಗದ್ದೆಲಿ ನಡ್ದದೆ. 'ಪಯ್ಯೊಲಿ' ನಡ್ಸುವ ಈ ಗದ್ದೆನ' ಪಯ್ಯೊಲಿ ಮಜಲು'ತೇಳುವೆ. ಅರೆಬಾಸಿಕ ಸುಳ್ಯ



**ಪಯ್ಯೊಲಿಗೆ**

ಪ್ರದೇಸಲಿ ಉಲ್ಲಾಗ/ನಾಯರ್ ನೇಮಗಳ್‌ಲಿ ಪಯ್ಯೊಲಿ–ಅಡ್ಡಣಪೆಟ್ಟು ಇಂದ್ ಸನ 'ಮೂಡಕಟ್ಟಳೆ' ಪ್ರಕಾರಲಿ ನಡ್ದದೆ. ಇದ್ ಯುದ್ದ ಕಲೆ ರೂಪಲಿ ಇದ್ದ್ ಇದರ ಚಾತು ನಾಯರ್ ಕೇರಳದ ಕಳರಿ ಪಯಟ್ಟ್‌ನ ಸುಳ್ಯಲಿ ಕಲ್ಸಿದ್ ಸುರು ಮಾಡ್ದವಂತೇಳಿ ಪ್ರತೀತಿ. **(ಪಿ.ಕೆ.)**

**ಪರವ :** ಪರವೂರ್‌ಂದ ಬಂದವು ಪರವರ್ ತೇಳುವೆ. ಪರವ ಸಮುದಾಯ ತಮಿಳು, ಕೇರಳ ಪ್ರದೇಸಲಿನು ಒಳೊ. ಇವರ ಆದಿಮೂಲ ತಮಿಳು ನಾಡ್‌ತೇಳಿದ್ ದಾಕಲೆ ಉಟ್ಟು. ತುಳುನಾಡ್‌ಲಿ 'ತೆಂಬರೆ' ತೇಳ್ವ ಚರ್ಮವಾದ್ಯನ ದೆವ್ವ ಕಟ್ಟ್‌ವ ಕಲಾವಿದರ್ ಸಾಮಾನ್ಯ ಆಗಿ ಬಳ್ಸ್‌ವೆ. ತಮಿಳುನಾಡ್‌ಲಿ 'ಪರಯ್' ತೇಳ್‌ವ ಚರ್ಮವಾದ್ಯ ಇದ್ದ್, ಇದ್ ದೆವ್ವಾರಾದನೆಲಿ ಬಳ್ಸ್‌ವ ತೆಂಬರೆಗೆ ಸಮಾನವಾಗುಟ್ಟು. ಪರವಗ ಈ 'ಪರಯ್' ನ ಹಾಂಗೆ ಇರ್‌ವ ತೆಂಬರೆನ ಬಳ್ಸ್‌ವೆತೇಳ್‌ವ ಕಾರಣಲಿ ತಮಿಳ್‌ನಾಡ್ ಮೂಲಲಿ ಅವರ ಗುರ್‌ತುಸುವ ಪ್ರಯತ್ನ ನಡ್ದುಟು.





ಪರವ ತೇಳ್ದು 'ಹಳೆಯ', 'ಪ್ರಾಚೀನ' ಎಂಬ ಅರ್ತ ಮೂಲಲಿ ಕಂಡದೆ. 'ಪರಯ್' ವಾದ್ಯ ಮೂಲಂದ ಪರವರ ಮೂಲ ಇರ್‌ದ್ ಮತ್ತೆ ಪಿತೃಪ್ರದಾನ (ಮಕ್ಕಳ ಕಟ್ಟು) ಸಂಪ್ರದಾಯಂದಾಗಿ ಇವು ಪರವೂರ್‌ಂದ ಬಂದವು ತೇಳಿ ಸಮರ್ತನೆ ಮಾಡ್‌ವ ವಾಮನ ನಂದಾವರರ ಅಬಿಪ್ರಾಯಕೆ ಸರಿ ಆಗಿದ್ ಉಟ್ಟು. ಮುಗೇರ, ಮುಂಡಾಲವಕ್ಕಿಂತ ಪರವರ್ ಬೇರೆಂತೇಳಿ ವಾದ್‌ಸುವೆ. ಮುಗೇರ್‌ಗ ಇಡಿ ಆಗಿ ಅಳಿಯಕಟ್ಟ್ ಸಂಪ್ರದಾಯದವು ಅಲ್ಲ. ಅವು ಅಳಿಯ ಮತ್ತೆ ಮಕ್ಕಳ ಕಟ್ಟ್‌ಗಳ ಮಿಸ್ರ ಸಂಪ್ರದಾಯವು ಆಗೊಲೊ. ಪರವರಲಿ ಮಾವಂದ ಅಳಿಯಂಗೆ ದೆವ್ವದ ಕಲಾವಿದ ಆವ ಹಕ್ಕ್ ಬಂದದೆ. ಆದರೂ ಇವ್ಕೆ ಕೊಣ್‌ತ ಮತ್ತೆ ಕಲಾತ್ಮಕತೆನ ತಿಳುವಳಿಕೆ ಅಪ್ಪಂದಳೆ ಬಂದದೆ.

'ಪರವ' ತೇಳ್‌ವ ಪದಕೆ ಪರ ಊರ್‌ನವ ತೇಳ್‌ವ ಅರ್ತ ಇರುವಾಂಗೆ, 'ಹಳ್ತು'ತೇಳ್ವ ಅರ್ತನು ಉಟ್ಟು 'ಪರತ್ ಪನ್ಪುನಿ' ತೇಕ್ರೆ ತುಳು ಬಾಸೆಲಿ ಹಳೆದರ ಹೇಳ್ದುಂತ ಆದೆ. ದೆವ್ವಗಳ ಪಾಡ್ದನಗ ಹಳ್ತು ತೇಳ್‌ವ ಅರ್ತ. ಹಳೆ ಪಾಡ್ದನನ ಪರವ ಮತ್ತೆ ಅಂವನ ಹೆಣ್ಣ್ ಪರತಿಗ ಇಬ್ಬರ್ ಹೇಳ್‌ವೆ. ಪರವರ್ ಆದಿಮೂಲಂದಲೇ ಇಲ್ಲೆ ಬೊದ್ಕಿದವಾಗಿದ್ದ್, ದೆವ್ವಾರಾದನೆನ ಸಾಹಿತ್ಯ ಬಾಗ ಅಗಿರುವ 'ಪಳಮೆ'ಗ ತೇಳುವ ಪಾಡ್ದನಗಳ ಹೇಳ್‌ವ ಹಳಬರ ಸಂತಾನತೇಳಿ ಹೇಳೊಕಾದೆ. ದೆವ್ವಾರಾದನೆನ ಬಾಯಿಲಿ ಕೇಳಿಬಾವ ಸಾಹಿತ್ಯಗಳ ಆರಾದನೆನ ಸಂದರ್ಬಕೆ ಹೇಳಿ ಅದರ ಅಲಿಕಿತ ಪರಂಪರೆ ಬೆಳಿಯಕೆ ಕಾರಣ ಆದವರ್‌ಲಿ ಪರವರ್ ಮುಕ್ಯ ಆದವೆ. ವಾಸ್ತವಲಿ ಇವೆ ಪಾಡ್ದನಗಳ ವಾರಸುದಾರರ್. ಕರ್‌ನಾಟಲಿ ಕಸುಬುಗಾಯಕರ ದಾರ್ಮಿಕ ಮತ್ತೆ ಲೌಕಿಕ ಗಾಯಕರ್‌ತ ಗುರ್‌ತ್‌ಸಕಾದೆ. ಪಾಡ್ದನಗಳ ಕಸುಬುಗಾಯಕರಾಗಿ ಯಾರೂ ಹೇಳ್ದುಲೆ. ಪರವರ್ ಪಾಡ್ದನಗಳ ಆರಾದನೆನ ಹೊತ್ತುಲಿ ಮಾತ್ರ ಹಾಡುವೆ. ತುಳುನಾಡ್‌ಲಿ ಈ ಪರವರ್ ವರ್‌ಸೊಳು 'ಮದಿಮಾಯ ಮದಿಮಾಳ್' (ಮದುಮಜ್ಜ – ಮದೊಳಿಗೆ) ಕೊಣ್‌ತನ ಆ ಸಮ್ಮಂದಿ ಪೊದ್ಯದೊಟ್ಟಿಗೆ ಊರ್‌ನ ಮನೆಗಳ್‌ಲಿ ಕೊಣ್ದವೆ.

ದೆವ್ವ ಜಗತ್ತ್‌ನ ದೆವ್ವಗಳ್‌ಲಿ ಸಾ ಜಾತಿ ಶ್ರೇಣೀಕೃತ ಸಮಾಜ ವೆವಸ್ತೆನ ಎಲ್ಲಾ ಲಕ್ಷಣಗೊಳ. ಇಲ್ಲಿ ದೆವ್ವಂಗ ಅರಸು, ರಾಜೆನ್, ಗುತ್ತು, ಸೀಮೆ ದೆವ್ವಗ ತೇಳ್ವ ಸ್ತರಮಾನಲಿ ಗುರುತಿಸಿಕೊಂಬಕೆ ಇದರ್‌ಂದ ಸಾದ್ಯ ಆವುಟು. ಇಂತ ದೆವ್ವಕೆ ಪರವ ಕಲಾವಿದರೇ ಕಟ್ಟೊಕುಂತನೆ ಕಟ್ಟಳೆಗ ಇದ್ದವೆ. ಇದ್ಕೆ ದೆವ್ವ ಕಟ್ಟುವ ಇತರ ಸಮುದಾಯಗಳ್‌ಲಿ ಪರವ್ ಮೇಲೆನ ವರ್‌ಗ ತ ಪರಿಗಣಿಸಿಕಂಡೊಲೊ.

ಪರವಂಗ ಪ್ರದಾನ ಆಗಿ ಕೊಡಿಮರ ಏರ್‌ಸಿ, ಗರುಡ ಹಾರ್‌ಸಿ 'ಮಾಡ'ದ ಎದುರ್‌ನ ಓಲಸರಿ ಮಜಲ್‌ಲಿ ಓಲಗ ಸವಾರಿ ಪಡೆವ, ಪಾಪೆ – ಬಂಡಿಗದ ಮೂರ್‌ತ ರೂಪ ಹೊಂದುವ ದೆವ್ವಕೆ ಹೆಚ್ಚಾಗಿ ಕಲಾವಿದರಾದವೆ. ಉಲ್ಲಾಕ್ಲುಗಳ್‌ಲಿ ಒಳ ವಿಬಾಗ ಇದ್ದ್ ಅದರ್‌ಲಿ ಪರವರ್ ಮಾಡದ ಉಲ್ಲಾಳಗಳಿಗೆ ಮಾತ್ರ ಕಟ್ಟುವೆ. ಪರವರ ಈ ದೆವ್ವಕ್ಕೆ ಕಲಾವಿದರಾಗಿ ಸೇರಕಾರೆ, ಕೆಲವೊಂದು ದೆವ್ವ ಜಗತ್‌ನ ವಿದಿ – ವಿದಾನಗಳ್‌ಂದ ಮುಕ್ಯ ಆಗಿ ಸೀಮೆ ದೇಸ್ತಾನದ 'ಅವಬ್ರತ ಸ್ನಾನಂದ ಸುದ್ದ ಆಕು. ಹಿಂಗೆ ಸುದ್ದ ಆವ ಪರವ ಕಲಾವಿದರ 'ಆರೂಡ ಪರವ'ತೇಳಿ ಕರ್‌ದವೆ. ಆರೂಡನಾದವ ಮಾತ್ರ ಆ ಸೀಮೆಲಿ ಬಾವ 'ಮಾಡದ ಉಲ್ಲಾಗ'ಳ ಕಟ್ಟಿಕೆ ಒಪ್ಪಿಗೆ ಇದ್ದದೆ.

ಪರವರ ದೆವ್ವಾರಾದನೆನ ಒಟ್ಟು ದೆವ್ವಗಳ ಹೊತ್ತುನ 'ಒಳಮುಕ'ತೇಳಿದ್ ಕರೆಯೊಕ್ಕಾದೆ. ಉಲ್ಲಾಕ್ಲು, ದರ್ಮದೆವ್ವ, ಮತ್ತೆ ದೆವ್ವಸ್ತಾನದ ಚಪ್ಪರದೊಳಗೆನ ದೆವ್ವಗಳಿಗೆ ಪರವ ಕಲಾವಿದರ್ ಕಟ್ಟುವೆ. ದೇವ– ದೆವ್ವಂಗಳ ಮದ್ಯಸ್ತಾನಿ ದೆವ್ವಗಳಿಗೆ ಇವೇ ಕಟ್ಟೊಕುಂತ ಊರ್ ಕಟ್ಟಳೆ. ಪರವರ್ ಜೈನ, ಬಟ್ರ ಮನೆಗಳ ಬುಟ್ಟು, ಶೂದ್ರ ಮೇಲ್ಜಾತಿನ ಮನೆಗಳಿಗೆ ಒಂದ್ ಹಂತದ ಮಿತಿನೊಳೆಗೆ ಹೋವ ಒಪ್ಪಿಗ ಇವ್ಕೆ ಉಟ್ಟು. ಸತ್ತ್ ದೆವ್ವ ಆದ ಅವಳಿ ನಾಯಕರಾದ ಬೈದರ್‌ಗಳಿಗೆ ನೇಮಲಿ ಚಪ್ಪರೊಂಬು (ತಲೆಗೆ ಹಾಕಂಬ ಆಬರಣ) ಇಸುದು ಸಂಪ್ರದಾಯ. ಬೈದೆರ್ ಪ್ರೇತಾತ್ಮಗ ತೇಳ್‌ವ ಬಾವನೆ ಇದ್ದ್, ಉಲ್ಲಾಕ್ಲುಗಳಿಗೆ ಕಲಾವಿದರಾವ ಪರವರ್ ಬೈದೆರ್ ನೇಮ ಕಟ್ಟಿಕೆಬೊತ್ತು ತೇಳ್‌ವ ನಿಯಮ ಉಟ್ಟು. ಬೈದರ್‌ಗಳಿಗೆ ಚಪ್ಪರೊಂಬು ಇಟ್ಟಂವ ಉಲ್ಲಾಕುಳುಗಳ ಸಿರಿಮುಡಿ ಇಸಿಕಾಗದ್. ಇವು ಸರಾಯ ಕುಡೆಕಾಗದ್. ಸಿರಿ ಮುಡಿ ಇಸುವ ತಲೆಲಿ ಗೊಬ್ಬರ ಹೊರಿಕಾಗದ್. ತೂಕದ ಸಾಮಾನ್ ಇಸಿಕಾಗದ್. 'ಆರೂಡ'ರಾದವ್ ಕೈಲಿ ಆಡಳಿತ ಸಮುದಾಯ ಕೊಡುವ ಕೈಬಳೆ ಹಾಕಣೊಕು, ಜುಟ್ಟು ಬುಟ್ಟು ಸೂಡಿ ಕಟ್ಟೊಕು. ಈ ಬಗೆನ ಕಟ್ಟುಪಾಡ್‌ಗಳ ಕಲಾವಿದನ ಪ್ರತ್ಯೇಕಿಸಿ ನೋಡುವಂಗೆ ಮಾಡ್ವೆ.

ದೆವ್ವಾರಾದನೆ ಅರಸು ಬಲ್ಲಾಳ ಕಾಲಂದ ನಡ್ಕಂಡ್‌ಬಂದ ಆರೂಡ ಕಟ್ಟಳೆಲಿ ಪಡೆವ 'ಪಡಿಯರಿ' ದುಡ್ಡು ಬಾರಿ ಕಡ್ಮೆ ಇದ್ದದೆ. ಆದರೆ ವರ್‌ತಮಾನಲಿ ದುಡ್ಡುನ ರೂಪಲಿ ರೂಪಾಯಿ ಸಾವಿರಗಳ ಸಂಕೆಲಿ ಪರವ ಕಲಾವಿದಂಗ ಪಡ್ದವೆ. ಆರೂಡ ಪರವರ್‌ಗೆ 'ಪರವ ಪಾಲ್, ಉಂಬಳಿಗದ್ದೆ (ಪರವ ಕಂಡೊ')ತೇಳಿ ಬೂ ಆಸ್ತಿನ ಉಂಬಳಿ ಕೊಟ್ಟ ಉದಾರಣೆಗ ಕಂಡುಬಂದದೆ. (ಪಿ.ಕೆ.)

**ಪಾನೀಯಗ** : ಕುಡಿಯಕೆ ಬಳ್‌ಸುವ ಸೊತ್ತು. ಬೊಳ್ಪುನ ಹೊತ್ತು ಹೆಚ್ಚಾಗಿ ಎಲ್ಲವು ಚಾಯ ಕುಡ್ದವೆ. ಇದ್ಕೆ ಸ್ಥಿಂ ಕಮ್ಮಿ ಇದ್ದದೆ. ಕಾಪಿ, ರಾಗಿಬೋಳ ಮತ್ತೆ ಕೊತ್ತಂಬರಿ ಕಸಾಯನು ಕುಡ್ದವೆ. ಜೀರಿಗೆ ಕಸಾಯಂದ ಸರ್ರ ತೊಂಪು ಇದ್ದದೆಂತೇಳಿ ಬೇಸಿಗೆಲಿ ಅದರ ಕುಡ್ದವೆ. ಕಾಪಿ ಇತ್ಲಾರ್ ಚಾಯಕೆ ಹೆಚ್ಚಾಗಿ ಹಾಲ್ ಸೇರ್‌ಸುದುಲೆ. ಅದರ ಕಣ್ಣಕಾಪಿ, ಕಣ್ಣ ಚಾಯಂತಳೂ ಕರ್‌ದವೆ. ಸಕ್ಕರೆ ನೀರ್,

ನಿಂಬುಳಿ ಶರಬತ್ತು, ನೀರುಳ್ಳಿ ಸರ್ಬತ್ತುನು ಕುಡ್ದವೆ. ಮೊಜ್ಜಿಗೆ ನೀರ್‌ಗೆ ಒಂದೆರ್‌ಡ್ ಮೆಣ್ಸ್ ಚಿರ್‌ಂಬಿ ಕುಡ್ದವೆ. ನೆಂಟ್‌ರ್ ಬಾಕನ ಇದೆ ಆಗಂದಾಗಕೆ ಕುಡಿಯಕೆ ಕೊಡ್‌ವಂತದಾಗಿದ್ದದೆ. ಬೆಲ್ಲ ಮತ್ತೆ ನೀರ್ ಕೊಡುವ ಕ್ರಮನೂ ಉಟ್ಟು.

ಕಾಯಿ, ಬೊಯ್ನೆ ಮತ್ತೆ ಚಾಳಿ ಮರಂದ ತೆಗ್ದ ಕಳ್ಳ್‌ನ ಹೆಚ್ಚಿನ ಗೌಡರ್ ಕುಡ್ದವೆ. (ಗ್ಯಾರ್‌ದಣ್ಣ್)ಬೀಜ ಹಣ್ಣ್ ರಸಂದ ತೆಗ್ದ ಸರಯ ಗೌಡರ್‌ಲಿ ಹೆಚ್ಚಿ ಕುಡ್ದವೆ. ಸರ್ಬತ್ತ್‌ನ ಬಾಣಂತಿಗ ಮೊದ್ದ್‌ಂತಳೂ ಕುಡ್ದವೆ. ಮುಷ್ಟಿನಷ್ಟ್ ಓಮಕೆ 15 ಮೆಣ್ಸ್, ಹಿಙ್ಙ ಒಳ್ಳೆ ಮೆಣ್ಸ್, ಅರ್‌ಸಿನ ಸೇರ್‌ಸಿ ಕಡ್ದ್ ನೀರ್‌ಲಿ ಲಾಯ್ಕ್ ಕೊದ್‌ಸುವೆ. ರುಚಿಗೆ ಬೇಕಾದಷ್ಟ್ ಓಲೆ ಬೆಲ್ಲ ಸೇರ್‌ಸುವೆ. ಇದರ ಕಾಯಿಚಿಪ್ಪಿಲಿ ಕುಡಿಯಕೆ ಕೊಟ್ಟವೆ. ತುಂಬಾ ಕೈಂಯಿ ಇರ್‌ವ ಇದರ ಕುಡಿಯಕೆ ಹೆಣ್ಮಕ ಹಿಂದೆ ಮುಂದೆ ನೋಡ್‌ವೆ. ಅವರ ಮಾತ್‌ಲೆ ಹೇಳ್ದಾರೆ 'ಕಾಳಜೀರಿಗೆ ಕಸಯ ಕುಡಿದರ್‌ಂದ ಇನ್ನೊಂದ್ ಕೂಸು ಹೆರ್‌ದು ಸುಲಬಗಡ.

ಕಾಳಜೀರಿಗೆ ಬದಲ್ ಸುಂಡೆ ಸೊಪ್ಪ್‌ನ ಕಸಾಯನ ಬಾಣಂತಿಗೆ ಕುಡ್ಸುವೆ. ಕಾಡ್‌ಲಿ ಸಿಕ್ಕ್‌ವ ಸುಂಡೆ ಸೊಪ್ಪುನ ತಂದ್ ಅದರ ಅಡಿಬಾಗದ ಮುಳ್ಳುನ ಕಿತ್ತ್ ಹಾಕಿ ಓಮ, ಮೆಣ್ಸ್, ಕಾಳು ಮೆಣಸು(ಒಳ್ಳೆಮೆಣ್ಸ್), ಅರಸಿಣ ಸೇರ್‌ಸಿ, ಕಡ್ದ್ ನೀರ್ ಸೇರ್‌ಸಿ ಕೊದ್‌ಸುವೆ. ಹಿಙ್ಙ ಸ್ಹೀಂ ಸೇರ್‌ಸಿ ಕುಡ್ದವೆ. ತುಂಬಾ ಕೈಂಯಿ ಇರ್‌ವ ಇದ್ ಆರೋಗ್ಯಕೆ ಒಳ್ಳೆದ್‌ತ ನಂಬುವೆ. ಗದ್ದೆ, ತೋಟಲಿ ಕೆಲ್ಸ ಮಾಡೊವು ಗಂಜಿಗೆ ತೆಳಿ ಕೂಡ್ಸಿ ಕುಡ್ದವೆ.

**ಪಿಜಿನ್ :** ಬೂಮಿ ಮೇಲೆ ಬೊದ್ಕತಿರ್‌ವ ಮುಕ್ಯ ಕೀಟಂಗಳ್‌ಲಿ ಪಿಜಿನ್ ಕೂಡ ಒಂದ್. ಕಾಡ್, ಜೌಗು ಪ್ರದೇಸ, ಮರ್‌ಬೂಮಿ, ಸೊಂವುದ್ರ ಕರೆ, ಪರ್‌ವತದ ಕೊಡಿ ಹಿಂಗೆ ಬೂಮಿನ ಪ್ರತಿಯೊಂದ್ ಚದರ ಮೀಟರ್‌ಲೂ ಪಿಜಿನ್‌ಗ ಕಂಡ್ ಬಂದವೆ. ಪಿಜಿನ್‌ಗ ತಮ್ಮ ಕಟ್ಟ್ ನಿಟ್ಟ್ ಮತ್ತೆ ಸಿಸ್ತ್ ಬದ್ದ ಬೊದ್ಕ್‌ಗೆ ಹೆಸ್‌ರ್‌ವಾಸಿ. ಮೊಯಿಂಸನಾಂಗೆ ಗೈಮೆ ಮಾಡ್‌ವ ಜೀವಿಗಳ್‌ಲಿ ಪಿಜಿನ್ ಕೂಡ ಒಂದ್. ಸುಮಾರ್ 140–175 ಮಿಲಿಯನ್ ವರ್‌ಸಗಳ ಹಿಂದೆ ಕ್ರೆಟೇಸಿಯಸ್ ಸಮೆಲಿ ಇವುಗಳ ಹುಟ್ಟು ಬೂಮಿ ಮೇಲೆ ಆತ್‌ತ ಹೇಳ್ದು ವೈಜ್ಞಾನಿಕ ಲೆಕ್ಕಾಚಾರ. ಪಿಜಿನ್‌ಗ ನೋಡಿಕೆ ಬಾರಿ ಸಣ್ಣದಾಗಿದ್ದವೆ.. ಹೆಚ್ಚಿನ ಸಂಕೆನ ಪಿಜಿನ್‌ಗಳ ದಿನ ನಿತ್ಯದ ಬೊದ್ಕುನ ಕೆಲಸಕಾರ್‌ಯಗ ಮೊಣ್ಣ್‌ನ ಅಡಿಲೆ ನಡ್ದದೆ. ಹೊರೆಗೆ ನಮ್ಮ ಕಣ್ಣ್‌ಗೆ ಕಾಂಬ ಪಿಜಿನ್‌ಗಳ ಸಂಕೆ ತೀರಾ ಕಮ್ಮಿ. ಇಲ್ಲಿ ಸುಮಾರ್ 2 ಮಿಲಿಯನ್ ಪೌಂಡ್ ತೂಗ್‌ವ 10 ಮಿಲಿಯನ್, ಬಿಲಿಯನ್ ಪಿಜಿನ್‌ಗ ಒಳೊತ ಕ್ಯಾತ ಪಿಜಿನ್ ತಜ್ಞ ಇ. ಒ. ವಿಲ್ಸನ್ ಅವರ ಅಬಿಪ್ರಾಯ. ಒಂದ್ ಲೆಕ್ಕಾಚಾರದಂಗೆ ಈ ಬೂಮಿ ಮೇಲೆ ಇರ್‌ವ ಪಿಜಿನ್‌ಗಳ ಒಟ್ಟು ದ್ರವ್ಯರಾಸಿ ಮೊಯಿಂಸರ ಒಟ್ಟು ದ್ರವ್ಯರಾಸಿಗೆ ಸಮ ಆದೆತ ಹೇಳಿವೆ.. ವರ್‌ಗೀಕರಣ ಸಾಸ್ತ್ರಲಿ ಇವು ಹೈಮೆನೋಪ್ಟರಾ ಪಂಗಡದ ಪಾರ್ಮಿಸಿಡೇ ಕುಟುಂಬಕ್ಕೆ ಸೇರ್‌ದವ್. ಈ ಕುಟುಂಬಲಿ ಸುಮಾರ್ 12, 000–14, 000 ಬೇರೆ ಬೇರೆ ಪ್ರಬೇದದ ಪಿಜಿನ್‌ಗ ಒಳೊತ ಅಂದಾಜ್ ಮಾಡಿಯೊಳೊ. ಅದರ್‌ಲಿ 104 ಪ್ರಬೇದಗ ಸುಳ್ಯ ತಾಲೂಕ್‌ಲೇ ಸಿಕ್ಕಿಟು. ನೋಡಿಕೆ ಪಿಜಿನ್‌ಗ ಅರ್‌ದ ಮಿ. ಮೀ. ರ್‌ಂದ 40 ಮಿ. ಮೀ. ನಸ್ಟ್ ಒಳೊ. ಕಪ್ಪು, ಕಂದ್, ಬೂದಿ, ಕಡ್‌ಗೆಂಪ್, ಕಿತ್ತಳೆ ಕೆಂಪ್, ಅರ್‌ಸಣ, ಹಸುರು, ನೇರಳೆ ಬಣ್ಣಲಿ ಕಂಡವೆ.

ಪಿಜಿನ್‌ಗ ದವ್‌ಸದಾನ್ಯ, ಮಕ್‌ರಂದ, ಗೋಲಿಜ, ಒರ್‌ಲೆ, ಬೇರೆ ಕೀಟಗ, ಸತ್ತ ಪ್ರಾಣಿಗ ಹಿಂಗೆ ಎಲ್ಲಾ ರೀತಿ ಆಹಾರನು ತಿಂಬೊತ್ತಿದ್ದೊ. ಸೊಬಾವಲಿ ಕೆಲ ಪಿಜಿನ್‌ಗ ಪಾಪದವು ಒಳೊ ಮತ್ತೆ ಕೆಲವ್ ತುಂಬಾ ರೋಸ ಪ್ರದರ್‌ಸಿಸುವೆ. ಕೆಲವ್ ಪಿಜಿನ್‌ಗ ಕಚ್ಚುವೆ. ಇನ್ನು ಕೆಲು ಮೈಮೇಲೆಲ್ಲಾ ಓಡಾಡಿ ವೈರಿಗಳ್‌ಂದ ಕಾಪಾಡಿಕಂಡವೆ. ಪಿಜಿನ್ ಸಮಾಜಲಿ ಗಂಡ್, ರಾಣಿ ಮತ್ತೆ ಕೆಲ್‌ಸಗಾರತ ಹೇಳ್‌ವ ಮೂರ್



ಪಿಜಿನ್

ಜಾತಿಬೇದಗಳ್‌ಲಿ ಕಂಡ್ ಬಂದದೆ. ಅದರ್‌ಲಿ ಗಂಡ್‌ಗ ಪ್ರಣಯ ಕೊಣ್‌ತದ ಹಾರಾಟ ನಡ್‌ಸಿ ಮತ್ತೆ ಸತ್ತವೆ. ಆದರೆ ರಾಣಿ ಸುಮಾರ್ ಸಮೆ ಬೊದ್ಕಿ ಮಟ್ಟೆ ಇಸಿ ತನ್ನ ಸೊಂವುಸಾರನ ಬೆಳ್ಸಿದೆ. ಬಂಜೆ ಆದ ಹೆಣ್ಣ್ ಕೆಲ್‌ಸಗಾರ ಪಿಜಿನ್‌ಗ ರಾಣಿ ಇಸುವ ಮಟ್ಟೆಗಳ ಬೆಳ್‌ಸಿ ಹಾರ ಸಂಗ್ರಹಣೆ ಮಾಡ್‌ದು, ಗೂಡ್ ಕಟ್ಟುದು, ವೈರಿಗಳ್‌ಂದ ರಕ್ಷಣೆ ಮಾಡ್‌ದು, ರಾಣಿದ್ ಆರೈಕೆ ಮಾಡ್‌ವ ಕೆಲ್‌ಸ ಮಾಡ್‌ವೆ.

ಪಿಜಿನ್‌ಗ ಇರಿಕೆ ಗೂಡ್ ಕಟ್ಟಿಕಂಡವೆ. ಚೌಳಿಂತೇಳ್‌ವ ಪಿಜಿನ್ ಮರದ ಸೊಪ್ಪುಗಳ ಬೊಗ್ಗುಸಿ ಗೂಡ್ ಕಟ್ಟಿರೆ, ಕುಂಡಪಿಜಿನ್‌ಗ ಕಾರ್ಟನ್ ಗೂಡ್ ಮಾಡಿಕಂಡವೆ. ಪಿಜಿನ್‌ಗ ಬಾರಿ ಬುದ್ದಿ ಇರ್‌ವ ಕೀಟಗ. ಅವ್ ಅವರ ಗೂಡ್‌ನ ಸದಸ್ಯರ ಒಂದ್ ಗೂಡ್‌ಂದ ಇನ್ನೊಂದು ಗೂಡ್‌ಗೆ ಮೊಯಿಂಸರ್ ಮಕ್ಕಳ ಕರ್ಕಂಡ್ ಹೋದಂಗೆ ಹೋದವೆ. ನಾವು ಹಾಲ್‌ಗಾಗಿ ದನಗಳ ಸಾಂಕಿದಂಗೆ ಅವು ದೈ ಹೇನ್‌ಗಳ (ಬಂಬುಚ್ಚಿ) ಗಳ ಸಾಂಕುವೆ. ಅವು ನಾವು ಗದ್ದೆ ಬಿತ್ತಿ ಬೇಸಾಯ ಮಾಡ್‌ದಂಗೆ ಗೂಡ್‌ಲಿ ಸಿಲೀಂದ್ರ ಬಿತ್ತಿ ಬೆಳ್ದವೆ. ಕೆಲವ್ ಕಳ್ಳತನ ಮಾಡಿ ಬೇರೆ ಗೂಡ್‌ಗಳ್‌ಂದ ಪಿಜಿನ್‌ಗಳ ತಂದ್ ದುಡ್‌ಸಿಕಂಡವೆ.

ಪಿಜಿನ್‌ಗಳಿಗೂ ತಮ್ಮದೇ ಆದ ಕೆಲು ವೈರಿಗ ಸ ಒಳೊ. ಅದರ್‌ಲಿ ಮುಕ್ಯಾಗಿ ಕಂಡ್ ಬಾವ ಜೀವಿಗತೇಳ್ರೆ ಹಕ್ಕಿ, ಹಲ್ಲಿ, ಬಾವ್‌ಲಿ, ಗೋಲಿಜ, ಮರಕಪ್ಪೆ, ಚಿಪ್ಪ್ ಹಂದಿ, ಕೀಟಾರಿ ಸಸ್ಯಗ. ಪಿಜಿನ್‌ಗ ಸೃಂಗಾರ ಪ್ರಿಯ ಕೀಟಗ ಸ ಹೌದು. ಕೆಲು ಪಿಜಿನ್‌ಗ ತಮ್ಮ ಗೂಡ್‌ನ ಮುಂದೆ ಮೊಸಿತುಂಡು, ಸಣ್ಣ ಸಣ್ಣ ಕಲ್ಲ್, ಮರನ ಇಸಿಬುಟ್ಟ್ ಅಲಂಕಾರ ಮಾಡ್‌ವೆ. ನಮ್ಮ ಮನೆದ್ ಇಜ್ಜಲ್‌ಲಿ ಕಾಂಬ ಡಯಾಕಮ್ಮಾ (ಕುಯಿಂಪ) ಹಕ್ಕಿದ್ ತೊಪ್ಪ್ ಟನ ತಂದ್ ಗೂಡ್‌ನ ಮುಂದೆನೆ ಇಸಿಕಂಡವೆ. ಮಳೆ ಬಾದರ ಪ್ರಾಣಿ ಪಕ್ಷಿಗ ಹೇಂಗೆ ಗ್ರಹಿಸಿವೆನೊ ಹಾಂಗೆ ಪಿಜಿನ್‌ಗ ಸನ ಮಳೆ ಬಾದರ ಗ್ರಹಿಸಿವೆ. ಹಂಗಾಗಿ ಮಳೆ ಬಾಕೆ ಮುಂದೆನೆ ಪಿಜಿನ್‌ಗ ಅವರವರ ಗೂಡ್ ಸೇರಿಕಂಡವೆ. ಪಿಜಿನ್‌ಗಳ್‌ಲಿ ಕೆಲು ನಿಸಾಚರಿಗ





ಪಿಜಿನ್

ಮತ್ತೆ ಕೆಲು ಹಗ್‌ಲ್‌ಲಿ ಮಾತ್ರ ಕೆಲ್‌ಸ ಮಾಡ್‌ವ ಪಿಜಿನ್‌ಗ ಸ ಒಳೊ.. ಹಗ್‌ಲ್‌ಲಿ ಗೈಮೆ ಮಾಡೊ ಪಿಜಿನ್‌ಗ ರಾತ್ರೆ ವಿಸ್ರಾಂತಿ ಪಡ್ಡವೆ. ಇರ್‌ಲ್ ಓಡಾಡ್‌ವ ಪಿಜಿನ್‌ಗ ಹಗ್‌ಲ್‌ಲಿ ವಿಸ್ರಾಂತಿ ಪಡ್ಡವೆ. ಅವು ತಮ್ಮ ವಿಸ್ರಾಂತಿ ಸಮೆಲಿ ಸುಮ್ಮನೆ ಇದ್ದಲ್ಲೇ ಇದ್ದ್ ಕೈಕಾಲ್‌ಗಳ ಉಜ್ಜಿಕಂಡ್ ಪೂಜಿಕಂಡ್ ಇದ್ದವೆ. ಇನ್ನ್ ಕೆಲವ್ ಸುಮ್ಮನೆ ಆಚೀಚೆ ಓಡಾಡಿಕಂಡಿದ್ದವೆ, ಮತ್ತೆ ಕೆಲವ್ ನಿದ್ದೆ ಮಾಡ್‌ವಂಗೆ ದೂಂಗತಿದ್ದವೆ. ಪಿಜಿನ್‌ಗ ಪಳಿಯುಳಿಕೆಗಳ ಬಗ್ಗೆ ಕಲಿದಕೆ ಸಹಕಾರಿಯಾಗುಟು. ಅವು ತಮ್ಮ ಗೂಡ್‌ನ ಅಲಂಕಾರಕೆ ತಂದಿಸಿದ ಬೇರೆ ಬೇರೆ ವಸ್ತುಗಳ್‌ಲಿ ಸಣ್ಣ ಸಣ್ಣ ಸ್ತನಿಗಳ ಪಳಿಯುಳಿಕೆಗ ಸಿಕ್ಕಿದ ದಾಕಲೆ ಉಟ್ಟು. ಹಂಗಾಗಿ ಪಳಿಯುಳಿಕೆ ಸಾಸ್ತ್ರಜ್ಞ ಪಿಜಿನ್‌ಗಳ ಗೂಡ್‌ಗಳ ಬಗ್ಗೆ ಗಮನ ಕೊಡ್ದು ಸಾಮಾನ್ಯ ಆಗುಟ್ಟು.

ಕೆಲ ಪಿಜಿನ್‌ಗ ಒಂದಸ್ಟ್ ದಿನಗಳ ಕಾಲ ನೀರ್‌ನಡಿಲೂ ಬೊದ್ಕ್‌ವ ಬಗ್ಗೆ ಕೂಡಾ ದಾಕಲೆ ಉಟ್ಟು. ನೆರೆ ನೀರ್‌ಲಿ ಮುಂಳ್ಗಿದ ಪ್ರದೇಸಗಳ್‌ಲೂ ಪಿಜಿನ್‌ಗಳ ಗೂಡಿದ್ದರೆ ಅವು ಅಲ್ಲಿ ತಮ್ಮ ಗೂಡ್‌ಲಿ ಸುರಕ್ಷಿತಾಗಿ ಒಳ್ದವೆ. ಪಿಜಿನ್‌ಗಳ್‌ಂದ ಚಿನ್ನದ ಗಣಿ ಪತ್ತೆಯಾದ ದಾಕಲೆ ಸನು ಉಟ್ಟ್. ಆಫ್ಘಾನಿಸ್ತಾನದ ಕಾಬೂಲ್‌ಲಿ ಅಂತಹ ಮಣ್ಣ್‌ಲಿ ಚಿನ್ನದ ನಿಕ್ಷೇಪ ದೊರೆತ ದಾಖಲೆ ಉಟ್ಟ್.

ಮೊಣ್ಣ್‌ಲಿ ಗೂಡ್ ಕಟ್ಟ್‌ವ ಕೆಲವ್ ಜಾತಿ ಪಿಜಿನ್‌ಗ ಗೂಡ್ ಕಟ್ಟಿಕನ ಬಾರಿ ಪ್ರಮಾಣದ ಮೊಣ್ಣ್‌ನ ಹೊರೆಗೆ ತಂದ್ ಹಾಕುವೆ. ಜೇನ್‌ನಂತ ಆಹಾರ ವಸ್ತುನ ಸಣ್ಣ ಸಣ್ಣ ಕಡ್ಡಿ ಇಲ್ಲರೆ ಮೊಣ್ಣ್‌ನ ಕಣಗಳ್‌ಂದ ಕಂತ್‌ಸಿ ಗೂಡ್‌ಗೆ ಸಾಗ್‌ಸ್‌ವ ಜಾಣ್ಮೆ ಇರ್‌ವ ಪಿಜಿನ್ ಜಾತಿಗ ಸ ಒಳೊ.

ಪಿಜಿನ್‌ಗಳ ಸಮಾಜಲಿ ಕೆಲ್‌ಸಗಾರ ಪಿಜಿನ್‌ಗ ಕೆಲ ತಿಂಗ ಇಲ್ಲರೆ ಕೆಲು ವರ್‌ಸಗಳಸ್ಟ್ ಕಾಲ ಮಾತ್ರ ಬೊದ್‌ಕಿರೆ ರಾಣಿ ಪಿಜಿನ್ ಮಾತ್ರ 20 ವರ್‌ಸಂದಳೂ ಹೆಚ್ಚ್ ಕಾಲ ಬೊದ್‌ಕಿದೆ. ಪಿಜಿನ್‌ಗ ವಾಣಿಜ್ಯ ವಸ್ತುಗಳ ಒಟ್ಟಿಗೆ ಪ್ರಪಂಚದಾದ್ಯಂತ ಹರ್‌ಂಡಿಕಂಡುಟು.

**ಅ) ಸುರೂನ ಜಾತಿ ಬೇದ ಗಂಡ್ ಪಿಜಿನ್ :** ಹೆಚ್ಚಿನ ಪ್ರಬೇದದ ಪಿಜಿನ್‌ಗಳ ಬೊದ್ಕ್‌ನ ಚಕ್ರಲಿ ಗಂಡ್ ಪಿಜಿನ್‌ಗಳ ಪಾತ್ರ ಬಾರಿ ಕಮ್ಮಿ. ಅದ್ ಗೂಡ್‌ಲೇ ಇದ್ದ್ ಕಂಡ್ ಕೆಲ್‌ಸಗಾರ ಪಿಜಿನ್‌ಗಳ್‌ಂದ ತಿನ್ಸ್‌ಗಳ ತಕಂಡ್ ಪ್ರಣಯ ಕೊಣ್‌ತದ ಹಾರಾಟದವರೆಗೆ ಬೊದ್‌ಕಿ ಮತ್ತೆ ಸತ್ತ್ ಹೋದೆ. ಅವು ಗಾತ್ರಲಿ ಸಾಮಾನ್ಯಾಗಿ ಕೆಲ್‌ಸಗಾರರ್‌ಂದ ದೊಡ್ಡದಾಗಿ ರಾಣಿಗಿಂತ ಸಣ್ಣದಾಗಿ ಇದ್ದವೆ. ಸಣ್ಣ ತಲೆ, ದೊಡ್ಡ ಕಣ್ಣ್, ರೆಕ್ಕೆ ಮತ್ತೆ ಮೀಸೆಗಳಂದಾಗಿ ಇದರ ಗುಂಡ್‌ಲಿ ಸುಲಬಲಿ ಕಂಡ್ ಹಿಡಿಯಕ್.

**ಆ) ಎರಡನೆ ಜಾತಿ ಬೇದ ರಾಣಿ :** ಬಿದ್ದ್‌ಹೋವ ದೊಡ್ಡ ರೆಕ್ಕೆ ಮತ್ತೆ ದೊಡ್ಡ ಹೊಟ್ಟೆ ಇರ್‌ವ ರಾಣಿ ಸಾಮಾನ್ಯಾಗಿ ಗುಂಡ್‌ನ ಬಾರಿ ದೊಡ್ಡ ಪಿಜಿನ್ ಆಗಿದದ್ದೆ. ಕೆಲ ಪ್ರಬೇದಗಳ್‌ಲಿ ಒಂದ್ ಗುಂಪ್‌ಗೆ ಒಂದ್ ರಾಣಿಯಿದ್ದರೆ ಮತ್ತೆ ಬೇರೆ ಗುಂಪ್‌ಗಳ್‌ಲಿ ಸುಮಾರ್ ರಾಣಿಗಿದ್ದವೆ. ಪಿಜಿನ್ ಸಮಾಜಲಿ ರಾಣಿದ್ ಕೆಲ್‌ಸ ಬಾರಿ ಕಮ್ಮಿ. ಅದ್ ತನ್ನ ಸುರುನ ಪೀಳಿಗೆನ ಕೆಲಸಗಾರರ ಬೆಳ್ಸಿದ ಮೇಲೆ ತನ್ನ ಕೆಲಸನ ಮೊಟ್ಟೆಯಿಸುದಕ್ಕೆ ಮಾತ್ರ ಸೀಮಿತಗೊಳ್ಸಿ ಕೆಲ್‌ಸಗಾರರ್‌ಂದ ಪೋಸಿಸಿಕಂಡ್ ಬದ್ಕಿದೆ. ಆದರೆ ಆ ಗುಂಪ್‌ಲಿ ರಾಣಿ ಇರ್‌ದು ಬಾಳ ಮುಕ್ಯ ಆಗಿದ್ದದೆ. ಗುಂಪ್‌ನ ಸಂಗಾತಿಗಳೊಟ್ಟಿಗೆನ ಸಮ್ಮಂದ, ಗುಂಪ್‌ನ ಬೆಳ್‌ವಣಿಗೆನ ರೀತಿ, ಗೂಡ್ ಕಟ್ಟಿಕಂಬ ಜಾಗೆನ ಆಯ್ಕೆ, ಸಂಗಟನೆ, ಎಲ್ಲಾ ಕಾರ್‌ಯ ಚಟುವಟಿಕೆಗ ರಾಣಿನ ಮೇಲೆ ಆದಾರ್‌ಸಿದ್ದದೆ ಮತ್ತೆ ರಾಣಿ ಸೂಸ್‌ವ ಫೆರಮೋನ್‌ಗಳ್‌ಂದ ಅದೆಲ್ಲ ನಿಯಂತ್ರಿಸಲ್ಪಟ್ಟವೆ. ಇದೆಲ್ಲಕ್ಕಿಂತನು ಹೆಚ್ಚಾಗಿ ಗುಂಪ್‌ನ ಅಳಿವು, ಉಳಿವು ರಾಣಿನ ಅವಲಂಬಿಸಿದ್ದ್, ಒಂದ್ ಸಮೆ ರಾಣಿ ಸತ್ತರೆ ಆ ಗುಂಪ್ ಕ್ರಮೇಣ

ನಾಸ ಆದೆ. ಹಂಗಾಗಿ ರಾಣಿ ಯಾಗೋಳು ಗುಂಪ್‌ನ ಕೇಂದ್ರ ಬಿಂದ್ ಆಗಿದ್ದ್, ಇಂತ ರಾಣಿನ ಆಯಸ್ಸ್ ಆಯಾ ಪ್ರಬೇದಕ್ಕೆ ಸಮ್ಮಂದಿಸಿದಂಗೆ 10 ರಂದ 12 ವರ್ಸ ಆಗಿದ್ದದೆ.

**ಇ) ಮೂರನೆ ವರ್ಗ ಕೆಲಸಗಾರ ಪಿಜಿನ್ :** ಕೆಲ್‌ಸಗಾರ ಪಿಜಿನ್‌ಗ ಮೊಟ್ಟೆ ಇಸಿಕೆ ತೀರದ ಬಂಜೆ ಹೆಣ್ಣ್ ಪಿಜಿನ್‌ಗ. ಅವುಕೆ ರೆಕ್ಕೆ ಇರ್‌ದುಲೆ. ಬೇರೆ ಬೇರೆ ಜಾತಿಗಳಿಗನುಗುಣಾಗಿ ಅವ್‌ಗಳ ಸಂಖ್ಯೆ 30–40 ರಂದ ಸುರಾಗಿ ಲಕ್ಸಗಟ್ಟಲೆ ಇದ್ದದೆ. ನಮ್ಮ ಕಣ್ಣ್ ಗೆ ಸಾಮಾನ್ಯಾಗಿ ಕಾಂಬ ಎಲ್ಲಾ ಪಿಜಿನ್‌ಗ ಕೆಲ್‌ಸಗಾರ ಪಿಜಿನ್‌ಗಳೆ. ಕೆಲ್‌ಸಗಾರ ಪಿಜಿನ್‌ಗ ಗೂಡ್ ಕಟ್ಟುದು, ಆಹಾರ ಸಂಗ್ರಣೆ ಮಾಡ್‌ದು, ಮೊರಿಮಟ್ಟೆಗಳ ಸಾಕಣೆ ಮಾಡ್‌ದು, ಗೂಡ್‌ನ ಮನಾರ ಇಸಿಕಂಬದು, ಗೂಡ್‌ನ ರಕ್ಸಣೆ ಮಾಡ್‌ದು ಹಿಂಗೆ ಎಲ್ಲಾ ತರದ ಕೆಲ್‌ಸಗಳ ನಿರ್‌ವಯಿಸುವೆ. ಅವ್ ಗೂಡ್ಲಿರ್‌ವ ರಾಣಿನ ಬಾರಿ ಜಾಕ್ರತೆಂದ ಆರೈಕೆ ಮಾಡ್‌ವೆ. ಏಕೆತೇಳಿರೆ ಪಿಜಿನ್‌ಗಳ ಗುಂಪ್‌ಲಿ ರಾಣಿ ಮಾತ್ರ ಮೊಟ್ಟೆ ಇಸ್‌ವ ಏಕೈಕ ಪಿಜಿನ್. ಹಂಗಾಗಿ ಆ ಗುಂಪ್‌ನ ಅಳಿವು ಉಳಿವು ಎಲ್ಲ ರಾಣಿನೆ ಅವಲಂಬಿಸಿದ್ದದೆ. ಒಂದ್ ವೇಳೆ ರಾಣಿ ಸತ್ತರೆ ಕೆಲ್‌ಸಗಾರ ಪಿಜಿನ್‌ಗಳ ಸಂಕೆ ಕಮ್ಮಿ ಆಕಂಡ್ ಬಂದ್ ಕಡೆಗೆ ಆ ಗುಂಪ್‌ನ ಅಸ್ತಿತ್ವನೇ ಇಲ್ಲೆಂತೇಳುವಾಂಗೆ ಆದೆ. ಈ ಕೆಲ್‌ಸಗಾರ ಪಿಜಿನ್‌ಗ ರಾಣಿ ಇಸಿದ ಮೊಟ್ಟೆಗಳ, ಮೊಟ್ಟೆಂದ ಹೊರೆಗೆ ಬಾವ ಲಾರ್‌ವಾಗಳ ಸನ ಆರೈಕೆ ಮಾಡಿ ಕಾಪಾಡ್‌ವೆ. ಕೆಲ್‌ಸಗಾರ ಪಿಜಿನ್‌ಗ ಬೇರೆ ಬೇರೆ ಹಂತದ ಲಾರ್‌ವಾಗಳ ನೇವರ್‌ಸಿ, ಒಂದ್ ಕಡೆಂದ ಇನ್ನೊಂದ್ ಕಡೆಗೆ ಸಾಗ್ಸ್‌ವ, ಲಾರ್‌ವಾಗ ಪೊರೆ ಬುಡ್ದಕ್ಕಾಗಿ ಹೊಣ್ಕ್‌ಸುವ ಕೆಲ್‌ಸನೂ ನಡ್ಸುವೆ. ಲಾರ್‌ವಾಗ ಪೊರೆ ಬುಡ್ದಕ್ಕೆ ಸಾಕರಿಸಿ, ಬೆಳ್ದ ಲಾರ್‌ವಾಗ ಕೋಸಾವಸ್ತೆ ಪಡೆಕೆ ಪ್ರಚೋದಿಸಿ, ಹಾಂಗೇನೇ ಕೋಸಾವಸ್ತೆಂದ ಹೊರೆಗೆ ಬಂದ ಮೊರಿಗಳ ಮುದ್ದು ಮಾಡ್‌ವ ಕೆಲ್‌ಸನು ಮಾಡಿವೆ. ಕಾಲಿಯಾದ ಪೊರೆಗಳ ಹೊರೆಗೆ ತಂದ್ ಇಸಿ ಗೂಡುನ ಸುದ್ದ ಮಾಡಿವೆ.

ಕೆಲ್‌ಸಗಾರ ಪಿಜಿನ್‌ಗಳ ಆಯಸ್ಸ್ ಕೆಲ ತಿಂಗಳ್‌ದ್ ಆಗಿರುಕು ಸಾಕ್, ಇಲ್ಲೆ ಸುಮಾರ್ ವರ್‌ಸದ್ದ್ ಆಗಿರುಕು ಸಾಕ್. ತಿನಿ ಹುಡ್‌ಕಿಕಂಡ್ ಹೊರಡಿಕನ ಕೆಲ್‌ಸಗಾರ ಪಿಜಿನ್‌ಗಳಿಗೆ ಪ್ರಕೃತಿ ವಿಕೋಪ ಹಂಗೆ ಸತ್ರುಗಳ ಅಪಾಯ ಇರ್‌ವ ಕಾರಣಕೆ ಅವ್‌ಕೆ ಆಯಸ್ಸ್ ಇದ್ದರೂ ಯಾಗ ಬೇಕಾರು ಸಾಯಕು ಸಾಕ್. ಕೆಲ್‌ಸಗಾರ ನಿರ್‌ವಣೆ ಕೆಲ್‌ಸದ ರೀತಿ ಯಾಗೊಳು ಅದರ ಪ್ರಾಯಕ್ಕನುಗುಣಾಗಿ ಇದ್ದದೆ. ಎಳೆ ಪ್ರಾಯದ ಕೆಲ್‌ಸಗಾರ ಗೂಡ್‌ಲೆ ಇದ್ದ್ ರಾಣಿ ಮತ್ತೆ ಮೊರಿಗಳಿಗೆ ಹಾರ ಪೂರೈಕೆ ಮಾಡಿಕಂಡ್, ಗೂಡ್‌ನ ನಿರ್‌ವಣೆದ್ ಬಾರ ಹೊತ್ತರೆ, ಪ್ರಾಯಸ್ತ ಕೆಲ್‌ಸಗಾರರ್ ಹೊರೆಗೆ ಹೋಗಿ ತಿನಿ ಹುಡ್ಕುವ ಕಾರ್ಯನ ನಡ್ಸುವೆ. ಗೂಡ್‌ಂದ ಹೊರೆಗೆ ಹೋಗಿ ಆಹಾರ ಕೂಡ್ಸಿ ಪಿಜಿನ್‌ಗಳ ಜೀವಕೆ ಯಾಗೋಳು ಅಪಾಯ ಇರ್‌ವ ಕಾರಣಕ್ಕೆ ಕೆಲ್‌ಸಕ್ಕೆ ಪ್ರಾಯಸ್ತ ಪಿಜಿನ್‌ಗಳ ನಿಯೋಜೆನೆ ಮಾಡ್‌ದು ಪಿಜಿನ್‌ಗಳ ಒಂದ್ ವಿಸೇಸತೆ. ಹಾಂಗೇನೆ ಅವ್ ತಮ್ಮ ಅದೀನದ ಪ್ರಾಂತ್ಯದ ಗಡಿಲಿ ಸನ ಮುದಿ ಪಿಜಿನ್‌ಗಳ್‌ನೆ ಪಾರ ಕಾಯಕೆ ನಿಲ್‌ಸಿ ರಕ್ಸಣೆ ನೀಡಿವೆ. ಇದರ ಮೊಯಿಂಸರ ಸಾಮಾಜಿಕ ಬೊದ್ಕ್‌ಗೆ ಹೋಲ್‌ಸಿರೆ ತದ್ವಿರುದ್ದತ ಅನ್ನಿದೆ.

**ಸೈನಿಕ ಪಿಜಿನ್‌ಗ :** ಹೆಚ್ಚಿನ ಪ್ರಬೇದಗಳ್‌ಲಿ ಎಲ್ಲಾ ಕೆಲ್‌ಸಗಾರರ್ ಒಂದೇ ತರ ಇದ್ದವೆ. ಕೆಲ ಪ್ರಬೇದಗಳ್‌ಲಿ ಅದರ ಸಣ್ಣ ಬೇದಗಳ್‌ಲಿ ಆ ಪ್ರಮುಕ ಕೆಲ್‌ಸಗಾರ ಪಿಜಿನ್ ಮತ್ತೆ ದೊಡ್ಡದಾದ ಮುಕ್ಯ ಪಿಜಿನ್‌ಗ ಇದ್ದವೆ. ದೊಡ್ಡ ಮುಕ್ಯ ಪಿಜಿನ್‌ಗಳ್‌ಲಿ ಕೆಲೊಮ್ಮೆ ನೋಡಿಕೆ ದೊಡ್ಡ ಸೈನಿಕ ಪಿಜಿನ್‌ಗ ಇದ್ದವೆ. ಈ ಸೈನಿಕ ಪಿಜಿನ್‌ಗಳ ಒಮ್ಮೊಮ್ಮೆ ಅದರ ತಡಿನ ಆಕಾರಕೆ (ಗಾತ್ರಕೆ) ಹೋಲ್‌ಸಿರೆ ಬಾರಿ ತಲೆ ಇದ್ದ್ ಅವು ಆ ಗುಂಪ್‌ನ ಪಿಜಿನ್‌ಗತ ಊಯಿಸಿಕು ಅಸಾದ್ಯಾದ ರೀತಿಲಿದ್ದವೆ. ಸಾಮಾನ್ಯ ಕೆಲ್‌ಸಗಾರರ್ ಎರ್‌ಡ್ ಮಿ. ಮೀ. ದೊಡ್ಡದಾಗಿದ್ದರೆ ಸೈನಿಕ ಪಿಜಿನ್‌ಗ 10–15 ಮಿ. ಮೀ. ನಸ್ವಿದ್ದವೆ. ಬೇರೆ ಜಾತಿನ ಪಿಜಿನ್‌ಗ ಗೂಡ್‌ನ ಆಕ್ರಮಿಸಿದಂಗೆ ರಕ್ಸಣೆ ಮಾಡ್‌ದು ಮತ್ತೆ ಆಹಾರ ಸಂಗ್ರಣೆ ಮಾಡ್‌ದು ಇಂತ ಸೈನಿಕ ಪಿಜಿನ್‌ಗಳ ಸಾಮಾನ್ಯ ಕೆಲ್‌ಸ ಆಗಿದ್ದದೆ.

**ಪಿಜಿನ್‌ಗಳ ಬೊದ್ಕ್‌ನ ಚಕ್ರ :** ಪಿಜಿನ್‌ಗಳ ಬೊದ್ಕ್‌ನ ಚಕ್ರಲಿ ಮೂರ್ ಹಂತಗ ಉಟ್ಟು 1. ಸುರೂನ ಹಂತ. 2. ರ್‍ಯಾಗ್ನೋಮಿಕ್ ಹಂತ. 3. ವಂಸಾಬಿವೃದ್ದಿ ಹಂತತ ಮೂರ್ ಬಾಗಲಿ ವಿಂಗಡ್‌ಸಿಯೊಳೊ. ಪಿಜಿನ್‌ಗ ಮತ್ತೆ ಗಂಟ್ ಪಿಜಿನ್‌ಗ ಪ್ರಣಯ ಕೊಣ್‌ತ ನಡ್‌ಸುದು ಸುರೂನ ಹಂತಕೆ ನಾಂದಿಯಾದೆ. ಪ್ರಬುದ್ದಾಗಿ ನಿತ್ತ ಹೊಸ ರಾಣಿ ಪಿಜಿನ್ ಅವರ ಪ್ರಬೇದಕೆ ಮಾತ್ರ ಸೀಮಿತಾಗಿ, ಬೆದೆ ಹೊತ್ತುಲಿ ಅವ್ ಮಾಡ್‌ದ ಗೂಡ್‌ಂದ ಹೊರೆಗೆ ಬಂದ್ ಹಾರಿವೆ. ಅದೇ ಹೊತ್ತುಗೆ ತಮ್ಮದೇ ಪ್ರಬೇದದ ಗಂಡ್ ಪಿಜಿನ್‌ಗ ಬೇರೆ ಗೂಡ್‌ಗಳ್‌ಂದ ಹೊರೆಗೆ ಬಂದ್ ಹಾರುವೆ. ಈ ಗಂಡ್ ಪಿಜಿನ್‌ಗ ಮತ್ತೆ ಹೊಸ ರಾಣಿ ಪಿಜಿನ್‌ಗಳ ಕೂಡ್ದು ಸಾಮಾನ್ಯಾಗಿ ಬಾಣಲಿ ಪ್ರಣಯ ಕೊಣ್‌ತದ ಹಾರಾಟದೊಟ್ಟಿಗೆ ನಡೀತಿದ್ದದೆ. ಎಣೆಗೂಡ್‌ದ ಮೇಲೆ ಗಂಡ್ ಪಿಜಿನ್‌ಗ ಮತ್ತೆ ಹೊಸರಾಣಿ ಪಿಜಿನ್‌ಗ ಎಲ್ಲೊವ್ ನೆಲದ ಮೇಲೆ ಬಂದಿಳ್ದವೆ. ಹಿಂಗೆ ಬಂದಿಳ್ದ ಗುಂಪ್ ಪಿಜಿನ್‌ಗ ಮತ್ತೆ ಅವರ ಹಿಂದೆನ ಗೂಡುಗೆ ಹೋದುಲೆ. ಅವು ಸಾಯಕನ ಮುಟ್ಟ ಆಚೀಚೆ ಸುತ್ತಾಡಿ ಇಲ್ಲರೆ ಬೇರೆ ಪ್ರಾಣಿಗಳಿಗೆ ಆಹಾರಾಗಿ ಅಂತ್ಯ ಕಂಡವೆ. ಆದರೆ ಗಂಡ್ ಪಿಜಿನ್‌ಗಳ್‌ಂದ ಪಡ್‌ಕಂಡ ವೀರ್‌ಯಾಣುನ ಹೊಸ ರಾಣಿ ಪಿಜಿನ್‌ಗ ಪ್ರಣಯ ಕೊಣ್‌ತಲಿರಿಕಣನೆ ನೋಡ್‌ಕಂಡ್ ಬೇರೆ ಬೇರೆ ಸುರಕ್ಸಿತ, ಸೂಸ್ಮ ಜಾಗೆಗೆ ಹೋಗಿ ಎತ್ತುವೆ. ಅಲ್ಲಿ ಪಿಜಿನ್‌ಗ ಅದ್ಕಾಗಿ ಒಂದ್ ಕೋಂಬರೆನ ಮಾಡಿಕಂಡ್, ಅದ್‌ರ ಬಾಗ್‌ಲ್ ಮುಚ್ಚಿ ಅದರೊಳೆಗೆ ತಮ್ಮ ರೆಕ್ಕೆಗಳ ಕಾಲ್‌ಗಳ ಉಪಕಾರಂದ ಬೀಳ್ಸಿಕಂಡ್ ಮೊಟ್ಟೆಸಿಕೆ ಕುದ್ದವೆ. ಹಾಂಗೇ ಮುಂದೆ ಸುರೂನ ಹಂತದ ಮೊಟ್ಟೆಗಳ ಇಸಿ ಅದ್‌ರ್‌ಂದ ಹೊರೆಗೆ ಬಂದ ಮೊರಿಗಳ ಈ ರಾಣಿ ತಾನೇ ಸ್ವತ ಬೆಳ್ಸಿದೆ. ಮುಂದೆ




ಈ ಮೊರಿಗ ಬೆಳ್ದ್ ಗೂಡ್‌ನ ಬಾಗ್‌ಲ್ ತೆಗ್ದ್ ಹೊರೆಗೆ ಬಂದವೆ. ಮತ್ತೆ ರಾಣಿ ತನ್ನ ಕೆಲ್‌ಸನ ಮೊಟ್ಟೆ ಇಸಿಕೆ ಮಾತ್ರ ಸೀಮಿತಗೊಳ್‌ಸಿ ಮುಂದೆ ಕೆಲ್‌ಸಗಾರರ ಸಂಕ್ಯೆನ ಹೆಚ್ಚ್ ಮಾಡಿಕಂಡ್ ಗೂಡ್‌ನ ಎಲ್ಲಾ ಕೆಲ್‌ಸಗಳ ಅವವೆ ಪಾಲ್‌ಮಾಡಿಕಂಡ್ ನೋಡಿಕಂಡವೆ. ಹಿಂಗೆ ಪಿಜಿನ್‌ಗಳ ಸಾಮಾಜಿಕ ಬೊದ್ಕ್‌ಲಿ ಸುಮಾರ್ ಚಟುವಟಿಕೆಗ ನಡ್‌ದದೆ.

**ಸಂವಹನ :** ಪಿಜಿನ್‌ಗ ಅವರ ಗುಂಪ್‌ನ ಪಿಜಿನ್‌ಗಳಿಗೆ ಅಪಾಯದ ಸೂಚನೆನ ಕೊಟ್ಟ್ ಗುಂಪ್‌ನ ಪಿಜಿನ್‌ಗ ಎಲ್ಲಾ ಒಗ್ಗಟ್ಟಾಗಿ ಒಂದಾಗಿ ಇರ್‌ವಂಗೆ ನೋಡಿಕಂಡವೆ. ಅವು ಹೊಸ ತಿನಿನ ಮೂಲಕ್ಕೆ, ಹೊಸ ಗೂಡುಗೆ ತಮ್ಮ ಸಂಗಾತಿಗಳ ಕಳ್ಸುವ, ವೈರಿಗ ಗೂಡ್‌ನ ಹಕ್ಕಲೆ ಬಾಕನ ಹೋರಾಟಕ್ಕೆ ನಿಲ್ಲುವ, ದ್ರವರೂಪದ ಇಲ್ಲರೆ ಗಟ್ಟಿರೂಪದ ಆಹಾರದ ವಸ್ತುಗಳ ಕೊಡ್ದು ತಕಂಬ ಕೆಲಸ ಮಾಡ್ವೆ. ಗುಂಪ್‌ಲಿ ಬೇರೆ ಬೇರೆ ಜಾತಿಬೇದಗಳ ನಿರ್‌ದಿಸ್ಟ ಸಂಕೆ, ವಂಸಾಬಿವೃದ್ಧಿ ನಡ್‌ಸುವ ಪಿಜಿನ್‌ಗಳ ಸಂಕೆನ ನಿಯಂತ್ರಣ ಸ ಇವುಗಳ್‌ದ್ದೇ. ಒಟ್ಟಿಗೆ ತಮ್ಮ ಗೂಡಿನ


ಪಿಜಿನ್ ಗೂಡು

ನೆರೆಕರೆ ಪ್ರದೇಸನ ಸನ ರಕ್ಷಣೆ ಮಾಡಿವೆ. ಹಿಂಗೆ ಬೇರೆ ಪ್ರಬೇದದ ಪಿಜಿನ್‌ಗಳಕಂಡ್ ಹಿಡ್‌ದವೆ. ಇಂತ ಇನ್ನೂ ಸುಮಾರ್ ಕೆಲ್‌ಸಗಳ ನಿಯಮಬದ್ಧಾಗಿ ನಡ್‌ಸುವೆ. ಈ ಎಲ್ಲಾ ಕೆಲ್‌ಸಗ ಅದರ್‌ಲಿರ್‌ಲಿರ್‌ವ ವಿಸಿಸ್ಟ ಸಂವಹನ ವೆವಸ್ತೆಗಳ್‌ಂದ ಸಾದ್ಯ ಆಗುಟು

ಪಿಜಿನ್‌ಗಳ ಸಂವಹನ ವೆವಸ್ತೆಗಳ್‌ಲಿ ಫೆರಮೋನ್‌ಗಳ ಪಾತ್ರ ಬಾರಿ ದೊಡ್ಡದುಟ್ಟು. ಆಹಾರನ ಅವರೊಳೆಗೆ ಹಂಚಿಕಂಬದ್‌ರ್‌ಂದ, ಸಬ್ದ ಮಾಡ್ದರ್‌ಂದ ಮತ್ತೆ ಕುಡಿಮೀಸೆಗಳ ಮುಟ್ಟ್‌ದರ್‌ಂದ ಸಂವಹನ ಸಾದ್ಯ ಆದೆ. ಕಣ್ಣ್ ಇರ್‌ವ ಪಿಜಿನ್‌ಗಳ್‌ಲಿ ಅವೇ ಮುಕ್ಯಾದ ಸಂವಹನ ಸಾದನಗ.

**ಪಿಜಿನ್‌ಗ ತಮ್ಮ ವೈರಿಗಳ ಎದುರ್‌ಸ್‌ವ ರೀತಿ :** ಇದ್ ಬಾರಿ ವಿಸೇಸ ಸಂಗತಿ. ಪಿಜಿನ್‌ಗ ಎದ್ರಂದ ಬಾವ ವೈರಿನ ಹಿಂದೆ ಹೋವಂಗೆ ಮಾಡಿಕೆ ಎಚ್ಚರಿಕೆ ಕೊಡ್‌ವ ಫೆರಮೋನ್‌ನ ಸುರ್‌ಸುದು, ವೈರಿಗಳ ಮುಂದೆ ಸಿಟ್ಟ್‌ಲಿ ಆವೇಸನ ತೋರ್‌ಸುದು, ಸೈನಿಕ ಕೆಲ್‌ಸಗಾರ ಪಿಜಿನ್‌ಗ ಪಹರೆ ನಡ್‌ಸುದು, ಇನ್ನಸ್ಟ್ ಕೆಲ್‌ಸಗಾರರ ಅಪಾಯದ ಜಾಗೆನ ಸರ್ರಿ ಹೋರಾಟ ನಡ್ಸುದು ಮಾಡ್‌ವೆ. ಪಿಜಿನ್‌ಗ ತಮ್ಮ ಸಂಗಾತಿಗಳ ಒಂದ್ ಗೂಡ್‌ಂದ ಇನ್ನೊಂದು ಗೂಡುಗೆ ಕರ್‌ಕಂಡ್ ಹೋದವೆ. ಪಿಜಿನ್‌ಗಳ ಸಾಮಾಜಿಕ ಬೊದ್ಕ್‌ಲಿ ತಮ್ಮ ಸಂಗಾತಿಗಳ ಒಂದ್ ಗೂಡ್‌ಂದ ಇನ್ನೊಂದು ಗೂಡುಗೆ ಕರ್‌ಕಂಡ್ ಹೋದು ಬಾರಿ ಪೊರ್‌ಲುಟ್ಟು. ಪರಿಸರದ ಬೆಳ್‌ಕ್, ಆದ್ರತೆಲಿ ಹೆಚ್ಚ್ ಕಮ್ಮಿ ಆಕನ ಅವು ತಮ್ಮ ಗೂಡ್‌ಗಳ ಅತ್ತಂದಿತ್ತ ಬದ್‌ಲಾಯ್ಸುದು ಸಾಮಾನ್ಯಾಗಿದ್ದದೆ. ಹಂಗೆನೆ ಬದ್‌ಲಾಯ್ಸಿಕೆ ಆಸೆ ಪಡೊ ಗುಂಪ್‌ನ ಪಿಜಿನ್ ಸರಿಯಾದ ಜಾಗೆನ ಆಯ್ಕೆ ನಡ್‌ಸಿ ನಿಗಂಟ್ ಆದ ಜಾಗೆಲಿ ಎಲ್ಲಾ ರೀತಿಲಿ ಪರೀಕ್ಸೆ ಮಾಡಿ ಅದ್ ಸುರಕ್ಸಿತತ ಮನ್‌ದಟ್ಟ್ ಮಾಡಿಕಂಡ್ ಗೂಡುಗೆ ವಾಪಾಸ್ ಬಂದವೆ.

ಹಂಗೆ ವಾಪಾಸ್ ಬಾಕನ ದಾರಿ ಉದ್ದೋಕು ಪೊರ್‌ಮಳ ದ್ರವ್ಯ ಪೆರಮೋನ್‌ನ ಸರ್ರಿ ದಾರಿನ ಗುರ್‌ತುಸಿ ಕಂಡದೆ. ಗೂಡ್‌ಗೆ ಬಂದ್ ಅಲ್ಲಿ ತನ್ನ ಸಂಗಾತಿಯೊಂದಕೆ ತಾನ್ ಹೊಸ ಗೂಡೊಂದರ ಹುಡ್‌ಕಿದೆತೇಳ್‌ವ ಸಂಕೇತ ಕೊಟ್ಟ್ ಅದರನು ತನ್ನೊಟ್ಟಿಗೆ ಬಾಕೆ ಪ್ರಚೋದಿಸಿದೆ. ಕೆಲೊಮ್ಮೆ ಸಂಕೇತ ಪಡ್‌ದ ಪಿಜಿನ್ ಒಪ್ಪದೇ ಇದ್ದರೆ ಒಂದಸ್ಟ್ ದೂರ ಎಳ್ಕಂಡ್ ಹೋದೂ ಉಟ್ಟು. ಆದ್‌ರೆ ಮತ್ತೆ ಆ ಪಿಜಿನ್ ಬಾಕೆ ಒಪ್ಪಿ ಗೂಡ್‌ನ ಜಾಗೆನ ಆಯ್ಕೆ ಮಾಡ್ದ ಪಿಜಿನ್‌ನ ಹಿಂಬಾಲಕನಾಗಿ ಅದ್‌ರ ಹೊಟ್ಟೆ ಮತ್ತೆ ಕಾಲ್‌ಗಳ ಕುಡಿಮೀಸೆಗಳ್‌ಂದ ಮುಟ್ಟಿಕಂಡ್ ನಡ್ದದೆ. ಇದರ 'ಟ್ಯಾಂಡಮ್ ಚಲನೆ'ತ ಹೇಳಿವೆ.

**ಪಿಜಿನ್‌ಗ ಸತ್ರುಗಳ್‌ಂದ ರಕ್ಷಣೆ ಮಾಡಿಕಂಬ ರೀತಿ :** ಪಿಜಿನ್‌ಗಳ್‌ಲಿ ಸತ್ರುಗಳ್‌ಂದ ಬಾರಿ ಲಾಯ್ಕಲಿ ಸಮರ್‌ತ ರೀತಿಲಿ ಅವರವರ ಕಾಪಾಡಿಕಂಬ ಕಲೆ ಉಟ್ಟು. ಹಂಗಾಗಿ ಅವ್‌ಗಳ ಸಕ್ತಿಸಾಲಿಯಾದ ಕುಟ್‌ಕ್, ಉದ್ದ ದವ್‌ಡೆ, ತಡಿ ಮೇಲೆಲ್ಲ ಇರ್‌ವ ಮುಳ್ಳ್ ನ ರಚನೆಗ ಅವ್‌ಗಳ ಕಾಪಾಡ್ದೆ. ಒಮ್ಮೊಮ್ಮೆ ಕೆಲೊಂದ್ ರೀತಿದ್ ವಾಸನೆ ಇರ್‌ವ ರಾಸಾಯನಿಕ ವಸ್ತುನ ಚೋಂಪಿ ಇಲ್ಲರೆ ಚಲನೆ ರಹಿತಾಗಿ ಮೋಸ ಮಾಡಿ, ಮರಗಳ್‌ಂದ ಅಡಿಗೆ ಹಾರಿ, ದರ್‌ಗ್, ಮೊಣ್ಣ್ ಇಂತದರ ಅಡಿಲಿ ಅಂಡ್ಗಿ ತೊಪ್ಪಿಸಿಕಂಡವೆ.

**ಪಿಪ್‌ನ ಕಾಪಾಡಿಕಂಬ ರೀತಿ :** ಕೆಲು ಪಿಜಿನ್‌ಗಳಿಗೆ ಕಲ್ಲ್ ಬಂಡೆ ತರದ ತಲೆ ಇದ್ದ್, ವೈರಿ ಗೂಡುನ ಹಕ್ಕಲೆ ಬಾದು ಗೊತ್ತಾಕನ ತಮ್ಮ ತಲೆನ ಮುಚ್ಚಳದ ಹಾಂಗೆ ಗೂಡ್‌ನ ಬಾಗ್‌ಲ್‌ಗೆ ಇಸಿ ವೈರಿ ಒಳೆಗೆ ಹುಗ್ಗದ ಹಾಂಗೆ ತಡ್ದವೆ. ಇನ್ನ್ ಕೆಲವ್ ಪಿಜಿನ್‌ಗ ಅದರಾಂಗೆ ತಮ್ಮ ಹೊಟ್ಟೆನ ಬಾಗ್‌ಲ್‌ಗೆ ಇಸಿ ರಕ್ಸಿಸಿಕಂಡವೆ. ಮತ್ತೆ ಕೆಲವ್ ತಕ್ಷಣ ತಮ್ಮ ಗೂಡ್‌ನ ಬಾಗ್‌ಲ್‌ನನೆ ಮುಚ್ಚಿಸುವೆ. ಮತ್ತೆ ಕೆಲೊವು ತಮ್ಮ ಹಾದಿನ ಸುರಂಗ ಮಾರ್‌ಗಗಳ ಹಂಗೆ ಮೊಣ್ಣ್ ನ ಕಣಗಳ್‌ಂದ ಮುಚ್ಚಿಬುಟ್ಟವೆ.

**ಪಿಜಿನ್‌ಗಳ ಸಮಾಜಲಿ ನಡಿವ ಯುದ್ದ :** ಒಂದ್ ಗುಂಪ್‌ನ ಪಿಜಿನ್‌ಗ ಇನ್ನೊಂದ್ ಗುಂಪ್‌ನ ಪಿಜಿನ್‌ಗಳಿಗೆ ಸೇರ್‌ದ ಜಾಗೆ ಒಳೆಗೆ ಹುಗ್ಗಿರೆ ಸಾಕ್ ಅಲ್ಲಿ ಎರಡೂ ಗುಂಪ್‌ನ ಪಿಜಿನ್‌ಗಳ ನೊಡುಲಿ ಯುದ್ದನೇ ನಡ್ದದೆ. ಯುದ್ದ ಬೂಮಿಲಿ ಒಂದ್ ಪಿಜಿನ್ ಇನ್ನೊಂದ್ ಪಿಜಿನ್‌ನ ಮೇಲೆ ರೋಸಂದ ನೆಟ್ಟಂಗೆ ನಿತ್ತ್ ಪರಸ್ಪರ ಎಳಿಯಕೆ ಪ್ರಯತ್ನಿಸಿದೆ. ಹಿಂಗೇ ಎಳೆಕನ ದವಡೆ ಕುಡಿಮೀಸೆ, ಕಾಲ್ ಎಲ್ಲ ಮುರ್‌ದೇ ಹೋದೆ. ಅಲ್ಲಿ ಒಂದ್ ದೊಡ್ಡ ರಣರಂಗನೇ ನಡ್ದ್ ನೂರಾರ್ ಪಿಜಿನ್‌ಗ ಸತ್ತವೆ. ಈ ಯುದ್ದ ಒಂದ್ ಗುಂಪು ಇನ್ನೊಂದರಂದ ಸೋಲೊವರೆಗೆ ನಡ್ದದೆ. ಕಡೆಗೆ ಸತ್ತ ಪಿಜಿನ್‌ಗಳ ಗೆದ್ದ ಪಿಜಿನ್‌ಗ ತನ್ನ ಗೂಡುಗೆ ಹೊತ್ತ್ ಕಂಡ್ ಹೋಗಿ ತಿಂಬೊತ್ತಿದ್ದೊ. ಹಿಂಗೆ ಪಿಜಿನ್‌ಗಳ ಸಮಾಜಲಿ ನಡೆವ ಯುದ್ದ ಬಾರಿ ರಸವತ್ತಾಗಿದ್ದದೆ. ಹಂಗೆನೆ ಈ ಎಲ್ಲ ವಿಸಯಗ ಬಾರಿ ವಿಸೇಸ ಕಂಡದೆ.

**ಪಿಜಿನ್‌ಗ ಆಟ ಆಡ್‌ವ ರೀತಿ :** ಜಗತ್ತ್‌ಲಿರ್‌ವ ಎಲ್ಲಾ ಪ್ರಾಣಿ ಪಕ್ಸಿಗಳಂಗೆ ಇವು ಸನ ಆಟ ಆಡಿವೆ. ಆಟ ಆಡಿಕೆ ನಿತ್ತ ಎರ್‌ಡ್ ಪಿಜಿನ್‌ಗ ತಮ್ಮ ಹಿಂಗಾಲ್‌ಗಳ ಮೇಲೆ ನಿತ್ತ್ ಮುಂಗಾಲ್ ಮತ್ತೆ ಕುಡಿಮೀಸೆಗಳ್‌ಂದ ಒಂದರ್‌ಂದೊಂದ್ ಬೊಡ್ಕಂಡ್, ಒಂದರೊಂದ್ ಹಿಂದೆ ಮುಂದೆ ನೋಡಿಕಂಡ್ ಮಲ್ಲ ಯುದ್ದ ಮಾಡ್‌ವವರಂಗೆ ಮಾಡ್‌ವೆ ರೀತಿನ ಆಟ ಒಂದ್ ಪಿಜಿನ್ ಸೋತ್ ಇನ್ನೊಂದು ಪಿಜಿನ್ ಗೆಲ್ಲ್‌ವವರೆಗೆ ನಡ್ದದೆ. ಕಡೆಗೆ ಸೋತ ಪಿಜಿನ್ ಗೆದ್ದ ಪಿಜಿನ್‌ನ ಮುಂದೆ ತಲೆ ತಗ್ಗಿಸಿ ನಿತ್ತವೆ.

**ಪಿಜಿನ್‌ಗ ತಮ್ಮ ಸಂಗಾತಿಗಳ್‌ನ ನೆರೆ ನೀರ್‌ಂದ ಕಾಪಾಡ್‌ವ ರೀತಿ :** ನೆರೆನೀರ್ ಬಂದ್ ಗೂಡ್ ಮುಂಳ್ಗಿದೆತಾಕನ ಪಿಜಿನ್‌ಗ ಕೂಡ್ಲೆ ಇನ್ನೊಂದ್ ಬಾಗ್‌ಲ್ ತೆಗ್‌ದ್ ಅಲ್ಲಿಂದ ಸುರಕ್ಸಿತ ಜಾಗೆಗೆ ಹೋದವೆ. ಪಿಜಿನ್‌ಗಳ ಸಮಾಜಲಿ ಗಾಯ ಆದ ಪಿಜಿನ್‌ಗೆ ಸುಸ್ರೂಸೆ (ಆರೈಕೆ) ನಡೆದುಲೆ. ಪಿಜಿನ್‌ಗಳ ಸಮಾಜಲಿ ಯಾದ್ಯಾದೊ ಕಾರಣಂದ ಪಿಜಿನ್‌ಗ ಕಾಲ್, ಕುಡಿಮೀಸೆ, ಹೊಟ್ಟೆ ಕಳ್ಕಂಬದು ಸಾಮಾನ್ಯ ಆಗಿದ್ದದೆ. ಹಾಂಗೆ ತೊಂದರೆಗೊಳಗಾದ, ಸೀಕ್ ಹಿಡ್ದ ಪಿಜಿನ್‌ಗಳ ಒಳ್ದವು ಗೂಡ್‌ನೊಳೆಗೆ ಕರ್‌ಕಂಬದುಲೆ. ಹಾಂಗೆ ರೋಗ ಬಂದ ಪಿಜಿನ್‌ಗಳ ಸನ ಅವು ಸೇರಿಸಿಕಣದೆ ಹೊರೆಗೆ ಹಾಕಿವೆ.

**ಪಿಜಿನ್‌ಗಳ ಸಮಾಜಲಿ ಗೂಡ್‌ನ ಸುಚಿತ್ವಕ್ಕೆ ಬಾಳ ಮಹತ್ವ ಉಟ್ಟು :** ಪಿಜಿನ್‌ಗ ಅವರವರ ಗೂಡ್‌ನೊಳೆಗೆ ಸತ್ತ ಪಿಜಿನ್‌ಗಳ, ಬೇರೆ ಅನುಪಯುಕ್ತ ವಸ್ತುಗಳ ಆಗದ್ದಾಂಗ್ಗೆ ಹೊರ ತಂದ್ ಒಂದಸ್ಟ್ ದೂರಕೆ ಹೊತ್ತ್ ಕಂಡ್ ಹೋಗಿ ಇಸಿ ಬಂದವೆ. ಅವು ಯಾಗೊಳು ಗೂಡ್‌ನ ಮನಾರ ಇಸಿ ಕಂಡವೆ. ಒಂದ್ ವೇಳೆ ಗೂಡ್‌ನ ಹಕ್ಕಲೆ ಸಾಗ್ಸಿದ ಯಾದಾದರ್ ಕರ್‌ಗಿದ ವಸ್ತು ಇದ್ದರೆ ಅದರ ಮೊಣ್ಣ್‌ನ ಹೊಡಿಂದ ಮುಚ್ಚಿಬುಟ್ಟವೆ.

**ಪಿಜಿನ್‌ಗ ಆಹಾರನ ಹಂಚಿ ತಿಂಬೊತ್ತಿದ್ದೊ :** ಕೆಲ ಪಿಜಿನ್‌ಗ ತಮ್ಮ ಆಹಾರ ಚೀಲಗಳ್‌ಲಿ ತಕಂಡ್‌ಬಂದಂತ ತಿನಿನ ಬಾಯಿಂದ ಹೊರೆಗೆ ಹಾಕಿ ಬೇರೆ ಪಿಜಿನ್‌ಗಳಿಗೆ ಉಣ್ಸುವೆ. ಮತ್ತೆ ಕೆಲವ್ ದವ್‌ಡೆಗಳ ನೊಡುಲಿ ಕೂಡಾ ಇಸಿಕಂಡ್ ತಂದ್ ತಮ್ಮ ಸಂಗಾತಿಗಳಿಗೆ ಕೊಟ್ಟವೆ.

**ಪಿಜಿನ್‌ಗ ಬೇರೆ ಜೀವಿಗಳ ಒಟ್ಟಿಗೆಸ ಜೀವನ ನಡ್ಸುವೆ :** ಕೆಲೊವು ಜಾತಿನ ಕೀಟಗ, ಜೀರುಂಡೆ, ಮೂಟೆ, ನೆಳ, ಕಣಜ, ಕಪ್ಪೆ, ಹಲ್ಲಿ, ಹಾವ್, ಹಕ್ಕಿ ಹಿಂಗೆ ಕೆಲು ಪ್ರಾಣಿಗ ಪಿಜಿನ್‌ಗಳ ಗೂಡ್‌ಲಿ ಆಸ್ರಯ ಪಡ್‌ಕಂಡ್ ಬೊದ್ಕುವೆ.

**ಪಿಜಿನ್‌ಗ ಗುಲಾಮಗಿರಿ ನಡ್‌ಸುವ ರೀತಿ :** ಕೆಲ ಪ್ರಬೇದದ ಪಿಜಿನ್‌ಗ ಬೇರೆ ಕೆಲೊವು ಪ್ರಬೇದದ ಪಿಜಿನ್‌ಗಳ ತಮ್ಮ ಗೂಡುಗೆ ತಂದ್ ಅವು ಕೆಲ್‌ಸ ಮಾಡದೆ ತಂದಾಕಿದ ಪಿಜಿನ್‌ಗಳೊಟ್ಟಿಗೆ ಕೆಲ್‌ಸ ಮಾಡ್‌ಸಿಕಂಡವೆ.

**ಪಿಜಿನ್‌ಗಳ ಮನೆಗ :** ಕೆಲ ಪಿಜಿನ್‌ಗ ಮಣ್ಣ್ ಲಿ ಗೂಡ್ ಕಟ್ಟಿಕಂಡವೆ. ಇನ್ನ್ ಕೆಲೊವು ಕಲ್ಲ್ ಗಳಡಿಲಿ, ಮತ್ತೆ ಕೆಲೊವು ಕಾರ್ಟನ್ ಗೂಡ್‌ಗಳ ಕಟ್ಟಿಕಂಡವೆ. ಚೌಳಿ ಮರದ ಎಲೆಗಳಲ್ಲಿ ಗೂಡು ಕಟ್ಟಿದೆ.

**ಪಿಜಿನ್ ಸರ್‌ವ ಬಕ್ಸಕ :** ಪಿಜಿನ್‌ಗಳ್‌ಲಿ ಕೊಲು ಪಿಜಿನ್‌ಗತ ಒಳೊ. ಅವು ಮುಕ್ಯಾಗಿ ಬಿತ್ತ್‌ಗಳ ಮಾತ್ರ ತಿಂಬೊತ್ತಿದ್ದೊ. ಬತ್ತ, ಹುಲ್ಲ್‌ನ ಬೀಜ, ಗೋದಿ, ರಾಗಿ ಹಿಂಗೆ ಬೀಜಗಳ ಸಂಗ್ರಣೆ ಮಾಡಿ ಗೂಡ್‌ಗೆ ತಂದ್ ಕೂಡಿಸಿಕಂಡವೆ.. ಹಿಂಗೆ ತೆಗ್‌ದ್ ಇಸಿದ್ ಮುಂದೆ ಅದರ


ಪಿಜಿನ್ ಆಹಾರ

ಹೊರಕವಚನ ತೆಗ್ದ್ ಸುದ್ದ ಮಾಡಿ, ಮತ್ತೆ ಅದ್ ಹುಟ್ಟದಾಂಗೆ ಅವ್‌ಗಳ ಮೇಲೆ ವಿಸಿಸ್ಟ ರೀತಿನ ರಾಸಾಯನಿಕ ವಸ್ತುಗಳ ಹರಂಡುವೆ.

ಸಿಲೀಂದ್ರ ಬೆಳೆವ ಪಿಜಿನ್‌ಗ ಸನ ಒಳೊ. ಅವು ನಾವ್ ಗದ್ದೆ ಬಿತ್ತಿ ಬೆಳ್ದಂಗೆ ಸಿಲೀಂದ್ರನ ಬೆಳ್ಸುವೆ. ಸಿಲೀಂದ್ರನ ಬೆಳ್‌ಸಿಕೆ ಸೊಪ್ಪುಗಳ ಕತ್ತರ್‌ಸಿ ಗೂಡ್‌ಗೆ ತಂದ್ ಅದರ ಅಗ್ದ್ ಮೆತ್ತಂಗೆ ಮಾಡಿ ಗೊಬ್ಬರ ತಯಾರ್ಸುವೆ. ಆ ಗೊಬ್ಬರದ ಮೇಲೆ ಸಿಲೀಂದ್ರದ ಬಿತ್ತ್‌ಗಳ ತಂದ್ ಇಸುವೆ. ಸಿಲೀಂದ್ರ ಬೆಳ್ದ ಮೇಲೆ ಮತ್ತೆ ಅದರ ತಿಂಬೊತ್ತಿದ್ದೊ.




ಪಿಜಿನ್‌ಗಳ್‌ಲಿ 'ಜೇನ್ ಕೊಡ ಪಿಜಿನ್'ತ ಒಳೊ. ಈ ಪಿಜಿನ್‌ಗಳ ಒಂದ್ ಗುಂಡ್‌ಲಿ ವಿಸೇಸ ರೀತಿನ ಹೊಟ್ಟೆಬಾಕ ಪಿಜಿನ್‌ಗ ಇದ್ದವೆ. ಇವ್‌ಕೆ ಬೇರೆ ಪಿಜಿನ್‌ಗ ತಾವ್ ತಂದ ಜೇನ್, ಮಕರಂದಗಳ ಉಣ್‌ಸುವೆ. ಆ ಪಿಜಿನ್‌ಗ ತಿಂದ್ ತಿಂದ್ ಆಕನ ಹೊಟ್ಟೆ ಸಣ್ಣ ಸಣ್ಣ ಬುಗ್ಗೆಗಳಂಗೆ ಆದೆ. ಹಾಂಗೇ ಅವು ಗೂಡ್‌ನ ಮೇಲೆ ಬಾಗಲಿ ಕಚ್ಚಿ ಹಿಡ್ಕಂಡ್ ನೇಲಾಡಿಕಂಡ್ ಇದ್ದವೆ. ಪಿಜಿನ್‌ಗಳ್‌ಲಿ ರೈತ ಪಿಜಿನ್‌ಗತ ಒಳೊ. ಅವು ರೈತರ್ ಬೀಜ ಬಿತ್ತಿ ಬೆಳ್ದಂಗೆ ದೈಗಳ ಹಣ್ಣ್ ಗಳ ತಿಂದ್ ಬೀಜಗಳ ತಮ್ಮ ಕಾರ್ಟನ್ ಗೂಡ್‌ಗಳಿಗೆ ಅಂಟುಸುವೆ. ಆ ಬಿತ್ತ್‌ಗ ಕಾರ್ಟನ್ ಗೂಡ್‌ಗಳ ಸಾರನ ಹೀರಿ ದೈಗಾಗಿ ಬೆಳ್ದ್ ಪಲ ಕೊಟ್ಟದೆ.

ಇನ್ನ್ ಕೆಲವ್ ದೈ ಹೇನ್‌ಗಳ ಸಾಂಕುವ ಪಿಜಿನ್‌ಗ ಒಳೊ. ಅದ್ ದೈ ಹೇನ್‌ಗ ಹೊರೆಗೆ ಹಾಕ್‌ವ ಇಬ್ಬುನಿ ಜೇನ್‌ನ ತಿಂಬೊತ್ತಿದ್ದೊ. ಈ ದೈ ಹೇನ್‌ಗ ದೈನ ರಸ ಹೀರಿ ಬೊದ್ಕುವ ಜೀವಿಗ. ಇವ್ ತಾವ್ ಹೀರ್‌ದ ಬಹುಪಾಲ್ ರಸನ ಇಬ್ಬುನಿ ಜೇನ್‌ನ ರೂಪಲಿ ಹೊರೆಗೆ ಹಾಕುವೆ. ಇದ್ ಪಿಜಿನ್‌ಗಳಿಗೆ ಬಾರಿ ಇಸ್ಟದ ತಿನಿ. ಹಂಗಾಗಿ ಅದರ ಪಡ್ಕಂಬಕೆ ಪಿಜಿನ್‌ಗ ದೈ ಹೇನ್‌ಗಳ ನಾವು ದನಗಳ ಸಾಂಕುವಂಗೆ ತಮ್ಮ ಗೂಡ್‌ಲಿ ಇಸಿಕಂಡ್ ಸಾಂಕುವೆ. ಇನ್ನ್ ಕೆಲವ್ ಮಾಸ ತಿಂಬ ಪಿಜಿನ್‌ಗ ಒಳೊ. ಅವ್ ಇಡಿ ಆಗಿ ಮಾಂಸಹಾರಿಗ. ಚೋಳು, ಜೀರುಂಡೆ, ಉಚ್ಚು, ಹಾವ್, ಹಲ್ಲಿ, ಹಕ್ಕಿನ ಮೊರಿಗ, ಸಣ್ಣ ಸಣ್ಣ ಪ್ರಾಣಿಗಳ ತಿಂಬೊತ್ತಿದ್ದೊ. ಮತ್ತೆ ಕೆಲೊವು ಪಿಜಿನ್‌ಗ ಒರ್‌ಲೆನ ತಿಂಬೊತ್ತಿದ್ದೊ.

ಪಿಜಿನ್‌ಗ ಪ್ರಕೃತಿನ ಅಮೂಲ್ಯದ ಸಂಪತ್ತ್. ಅವು ಮತ್ತೆ ದೈಮರಗಳ ನೊಡುನ ಸಮ್ಮಂದ ಒಂದ್ ವಿಸಿಸ್ಟನೆ ಸೆರಿ. ಪಿಜಿನ್‌ಗ ದೈಮರಲಿ ಆಸ್ರಯ ಪಡ್ಡವೆ. ಇದರಂದ ದೈಮರಗಳಿಗೆ ರಕ್ಸಣೆ ಸಿಕ್ಕಿದೆ. ಕೆಲ ಪಿಜಿನ್‌ಗ ಕಾರ್ಟನ್ ಗೂಡ್‌ಗಳ ಕಟ್ಟುವೆ. ಇನ್ನ್ ಕೆಲೊವು ಬಿತ್ತ್ ತಕಂಡ್ ಹೋಗಿ ದೈಮರಗಳಿಗೆ ಸಹಕರ್‌ಸುವೆ. ಪಿಜಿನ್‌ಗ ದೈಗಳ ಸಂತತಿನ ಕೂಡಾ ಒಳ್ಸುವೆ. ಅವ್ ತಮ್ಮ ಗೂಡ್‌ಗಳ್‌ಲಿ ಸಾಕಸ್ಟ್ ಪ್ರಮಾಣಲಿ ತುಂಬುಸಿದ ಬಿತ್ತಗಳ್‌ಲಿ ಬೇಕಾದಸ್ಟರ ಬಳ್ಸಿಕಂಡ್ ಒಳ್ದದರ ಹೊರೆಗೆ ಇಸಿ ದೈಗಳ ಸಂತತಿನ ಉಳ್ಸುವೆ. ಪಿಜಿನ್‌ಗ ಪರಾಗಸ್ಪರ್‌ಸಲಿ ಕೂಡಾ ಸಹಕರಿಸುವೆ. ಇದ್ ಅವ್‌ಗಳ ಬೆಳ್‌ವಣಿಗೆಗೆ ಸಹಕಾರಿಯಾದವೆ. ಪಿಜಿನ್‌ಗ ಕೊರ್‌ದ್ ಹಾಕಿದ ಮೊಣ್ಣ್, ತಿಂದ್ ಇಟ್ಟ ದೈಮರಗಳ ಮತ್ತೆ ಪ್ರಾಣಿಗಳ ಅವಸೇಸಗಳೊಟ್ಟಿಗೆ ಸೇರಿ ಅವುಗಳ್‌ಲ್ಲಿರ್‌ವ ಕಾರ್‌ಬನ್, ನೈಟ್ರೋಜೆನ್ ಮತ್ತೆ ಪಾಸ್ಪರಸ್‌ನ ಪಡ್ಕಂಡ್ ಪಲವತ್ತಾದೆ.

ಪಿಜಿನ್‌ಗ ತ್ಯಜಿಸಿದ ಗೂಡ್ ಹಕ್ಕಿಗಳಿಗೆ ಆಸ್ರಯ ಆದೆ. ಪಿಜಿನ್‌ಗ ಕಳೆ ಕಿತ್ತವೆ. ಅಂತರ್‌ಜಲ ಹೆಚ್ಚಿ ಮಾಡ್‌ವೆ., ಪರಿಸರನ ಸುಚಿಗೊಳ್‌ಸಿ, ಪಾರ್ಮಿಕ್ ಆಮ್ಲನ ವಾತಾವರಣಕ್ಕೆ ಸೇರ್‌ಸುವೆ, ಒರ್‌ಲೆನ ನಿಯಂತ್ರಣ ಮಾಡ್‌ವೆ. ಪಿಜಿನ್‌ಗ ಜೈವಿಕ ಕೀಟನಾಸಕಗಳೂ ಹೌದು. ಅವು ಬಂಬುಚ್ಚಿನಂತ ದೈಗಳ ಹೇನ್ ತಿಂದ್ ಸುಮಾರ್ ಮರದೈಗಳ ಪ್ರಕೃತಿ ಸಹಜವಾಗಿ ರಕ್ಸಣೆ ಮಾಡಿವೆ.

**ದಕ್ಷಿಣಕನ್ನಡ ಜಿಲ್ಲೆನ ಜೆನರೊಟ್ಟಿಗೆನ ಪಿಜಿನ್‌ಗಳ ನಂಟ್ :** ದಕ್ಷಿಣಕನ್ನಡ ಜಿಲ್ಲೆನ ಜೆನ ಮತ್ತೆ ಪಿಜಿನ್‌ಗಳ ನಂಟ್ ಬಾರಿ ಪಂಡ್ ಕಾಲದ್ದ್. ಆ ನಂಟ್ ಎಸ್ಟ್ ತೇಳಿರೆ ಅಲ್ಲಿ ಕೆಲೊವರ ಹೆಸ್‌ರ್ ಪಿಜಿನ್‌ತೇಳುವಂಗೆ. ತುಳುಲಿ 'ಪಿಜಿನ್' ತೇಳಿರೆ ಇರ್‌ವೆತ ಅರ್‌ತ. ಅದೇ ಪಿಜೆನತೇಳ್‌ವ ಹೆಸರಿರೊವು ಇಲ್ಲಿ ಒಳೊ.

ಇಲ್ಲಿ ಪಿಜಿನ್‌ಗಳ ತಿಂಬಕೆನು ಬಳ್ಸುವೆ. ಬುಡಕಟ್ಟ್ ಜೆನಾಂಗದವ್ ಚೌಳಿ ಪಿಜಿನ್‌ನ ಅವ್‌ಗಳ ಮೊರಿಮಟ್ಟೆಗಳೊಟ್ಟಿಗೆ ಅರ್ದ್ ಪೊಜ್ಜಿ ಮಾಡ್ದು ಇಂದ್‌ಗೂ ರೂಡಿಲುಟ್ಟು. ಪಿಜಿನ್‌ಗಳ ತಿಂದರೆ ದ್ರಿಸ್ಟಿದೋಸ ಕಮ್ಮಿ ಆದೆತೇಳ್‌ವ ಆಡ್ ಮಾತ್‌ಸನು ಪ್ರಚಲಿತಲಿ ಉಟ್ಟು. ಬೊಸ್‌ರಿ ಹೆಣ್ಮಕ್ಕಳಿಗೆ ಪಿಜಿನ್‌ದ್ ಪೊಜ್ಜಿನ ಮೊದ್ದ್ ರೂಪಲಿ ಕೊಡ್‌ವ ಪೊದ್ದೆತಿನು ಉಟ್ಟು. ಅಲ್ಲದೆ ಪಿಜಿನ್‌ಗ ಸುಬಸೂಚಕ ಚಿಹ್ನೆತ ಕೆಲೊವರ ನಂಬಿಕೆ. ಮೊರ್‌ಲ್ ಪಿಜಿನ್‌ಗ ಸಾಪ್‌ರ ಗಟ್ಟಲೆ ಮರಿಮಟ್ಟೆಗಳ ಹೊತ್ತ್ ಹೋದರ ಕಂಡರೆ ಯಾದಾದರ್ ಕೆಲ್‌ಸಕೆ ಹೋಕನ ಕಂಡರೆ ಆ ಕೆಲ್‌ಸಕೆ ಯಾದೆ ವಿಗ್ನ ಬರದೆ ಒಳ್ಳೆದಾದೆತ ನೆನ್ಸುವೆ. ಪಿಜಿನ್‌ಗಳ ಬಗ್ಗೆ ಪೂಜನೀಯ ಬಾವನೆ ಕೂಡಾ ಉಟ್ಟು. ಕೊಲೆ ಪಿಜಿನ್‌ತೇಳಿ ಕೇಸರಿ ಪಿಜಿನ್‌ಗಳಿಗೆ ಹೆಸರುಟ್ಟು. ಅವ್ ಮನೆಯೊಳೆಗೆ ಕಂಡರೆ ಮನೆ ಸೂತಕ(ಮೈಲಿಗೆ) ಆಗುಟ್ಟುತ ನೆನ್ಸಿ ಗಂದ ದೂಪನ ಹಾಕಿ ಸುದ್ದ ಮಾಡ್‌ವೆ. ಮದುರಂಗಿಗೆ ಕೆಂಪ್ ಪಿಜಿನ್‌ಗಳ ಸೇರ್‌ಸಿ ಅಂಗೈಗೆ ಚುಕ್ಕಿ ಇಸ್‌ವ ಸಂಪ್ರದಾಯ ಉಟ್ಟು. ಒಂದ್ ಕಾಲಲಿ ಹಣೆಗೆ ಬೊಟ್ಟ್ ಇಸೊ ಜಾಗೆಲಿ ಕೆಂಪ್ ಪಿಜಿನ್‌ಗಳ ಹೊಟ್ಟೆನ ಇಸಿ ಹಚ್ಚೆ ಹಾಕಿಸಿಕಂಬದು ಹೆಣ್ಮಕ್ಕಳಿಗೆ ಒಂದ್ ಗೌಜಿ ಆಗಿತ್ತ್. ಅಸ್ಟೆ ಅಲ್ಲದೆ ಪಿಜಿನ್‌ಗಳ ಜೈವಿಕ ಕೀಟನಾಸಕಗತ ಜೆನ ಹಿಂದೆನೇ ಕಂಡ್‌ಕೊಂಡಿದ್ದೊ. ಬಂಬುಚ್ಚಿನ ಓಡ್‌ಸಿಕೆ ಚೌಳಿ ಪಿಜಿನ್‌ಗಳ ಬಳಸ್ತಿದ್ದದ್ದ್ ಇದಕ್ಕೊಂದು ಪುರಾವೆ. ಇದಲ್ಲದೆ ಪಿಜಿನ್‌ಗಳ ಜೆನ ಎಸ್ಟೊಂದ್ ಹಕ್ಕಲೆಂದ ತಿಳ್ಕಂಡೊಳೊ ತಮ್ಮ ಜೀವನಲಿ ಅವ್‌ಕೆ ಎಸ್ಟ್ ಮಹತ್ವ ಕೊಟ್ಟೊಳೊತೇಳ್ದುಕೆ ಇನ್ನ್ ಸುಮಾರ್ ಉದಾಹರಣೆಗ ಒಳೊ. ಮೈಗೆ ಏನಾರ್ ಚುಚ್ಚಿದೆ (ಪಿಜಿನ್ ಕಚ್ಚಿದಂಗಾತ್ತೇಳ್ದು), ಕಾಲ್‌ನ ಮಡ್ಚಿ ಕುದ್ದಾಕನ ಪಾದಕೆ ರಕ್ತ ಸಂಚಾರ ಕಮ್ಮಿ ಆಗಿ ಆವ ಬೇನೆನ ಅನುಬವಕೆ ಕಾಲ್‌ಗೆ ಪಿಜಿನ್ ಬಾತ್ ತೇಳ್ದು, ಸಾಲ್ ಸಾಲಾಗಿ ಜೆನ ಹೋದರೆ ಕಂಡರೆ ಪಿಜಿನ್‌ಗಳ ಸಾಲಿಗೆ ಹೋಲ್ಸುದು, ಪಿಜಿನ್‌ಗಳ ಆನೆನ ಗಾತ್ರಕ್ಕೆ ಹೋಲ್ಸುದು, ನಿದಾನ ನಡಿಗೆನ ಪಿಜಿನ್‌ನ ನಡಿಯಟಕೆ ಹೋಲ್ಸುದು, ಒಬ್ಬ ಮೆತ್ತಂಗೆ ನಡಿದರ ಕಂಡರೆ 'ನೀ ನಡೆಕನ ಪಿಜಿನ್ ಸಾಯದು' ತೇಳ್ದು ಕೆಲೊವು ನಿದರ್‌ಸನಗ. ಮನೆ ಒಳೆಗೆ ಅಲ್ಲರೆ ಬಿತ್ತಿದ ಬೀಜಗಳಿಗೆ ಪಿಜಿನ್ ಬಾರದಂಗೆ ಬೂದಿ ಹರ್‌ಂಡುದು, ಕಾಯೆಣ್ಣೆ ಮೈಗೆ ಪೂಜಿ ಮರಹತ್ತುದು, ಜೇನ್‌ಪೆಟ್ಟಿಗೆಗೆ ಪಿಜಿನ್ ಮುತ್ತದಂಗೆ ಅದರ ಇಸಿದ ಆದಾರ ಸ್ತಂಬದ ಸುತ್ತ ನೀರ್ ತುಂಬುಸುದು, ಪಿಜಿನ್‌ಗಳ್‌ಂದ ರಕ್ಸಣೆ ಪಡೆಕೆ ಜೆನ ಕಂಡ್‌ಕಂಡ ವಿಚಾರಂಗ ಇದ್. ಹಿಂಗೆ ಇಲ್ಲಿ ಜೆನರ

ಒಟ್ಟೊಟ್ಟಿಗೆ ಅಂದ್‌ಂದ ಇಂದ್‌ನವರೆಗೆ ಬೊದ್‌ಕಿಕಂಡ್ ಬಂದಗುಬ್ಬಿ, ಹಲ್ಲಿ, ನೆಳ, ಗೋಲಿಜ ಇಂತೆಲ್ಲದರೊಟ್ಟಿಗೆ ಬೊದ್‌ಕಿ ಬಂದ ಜೀವಿಗ ಈ ಪಿಜಿನ್‌ಗ. (ಆರ್.ಎನ್.)

**ಪುತ್ತೂರು :** ಭಾರತದ ಕರ್ನಾಟಕ ರಾಜ್ಯದ ದಕ್ಷಿಣಕನ್ನಡ ಜಿಲ್ಲೆನ ಮಲೆನಾಡ್ ಬಾಗ ಇರ್‌ವ ಐದ್ ಒಳನಾಡ್ ತಾಲೂಕುಗಳ ಪೈಕಿಲಿ ಒಂದ್; ಈ ತಾಲೂಕ್ ಒಂದ್ ಆಡಳಿತ ಕೇಂದ್ರ. ಐದ್ ದಸಕಗಳ ಹಿಂದೆಗೆ ಈ ತಾಲೂಕುಗೆ ಉಪ್ಪಿನಂಗಡಿ ತಾಲ್ಲೂಕುತ ಹೆಸ್ರ್ ಇತ್ತ್. ಪುತ್ತೂರು ಪೇಟೆ ಬೆಳೆತಾ ಬಂದರ್‌ಂದ 1927ರ್‌ಲಿ ಅದರ ತಾಲೂಕ್ ನ ಮುಕ್ಯ ಕೇಂದ್ರ ಆಗಿ ಮಾಡಿ ಅದರ ಹೆಸ್ರ್ ನ ತಾಲೂಕುಗೆ ಕೊಟ್ಟೊ. 1954 ಜುಲೈ 1 ಕೆ ಬೆಳ್ತಂಗಡಿ, 1959 ರ ಅಕ್ಟೋಬರ್ 1 ಕೆ ಬಂಟ್ವಾಳ ಹಂಗೆನೆ 1966 ರ ಏಪ್ರಿಲ್ 1 ಕೆ ಸುಳ್ಯ ತಾಲೂಕು ಹುಟ್ಟಿಕಂಡತ್. ಪುತ್ತೂರು ತಾಲೂಕ್‌ಂದ ಕೆಲವ್ ಬಾಗಗಳ ಹೊಸ ತಾಲ್ಲೂಕುಗಳಿಗೆ ವರ್‌ಗಾಯಿಸಿದೊ. ಹಿಂಗಾಗಿ, ಹಿಂದೆ 184 ಗ್ರಾಮಗ ಮತ್ತೆ 3, 172 ಚ. ಕಿಮೀ. ವಿಸ್ತೀರ್ಣ ಇದ್ದ್ ಜಿಲ್ಲೆನ ಅತೀ ದೊಡ್ಡ ತಾಲ್ಲೂಕಾಗಿದ್ದ ಪುತ್ತೂರು ಈಗ 67 ಗ್ರಾಮಗಳ್‌ಂದ ಕೂಡಿ 1, 004 ಚ. ಕಿಮೀ. ವಿಸ್ತೀರ್ಣ ಉಟ್ಟು. ಈ ತಾಲೂಕ್ ನ ಜೆನಸಂಕೆ 2, 66, 027 (2001).

ತಾಲೂಕ್‌ನ ಹೆಚ್ಚಿನ ಬಾಗ ಬೆಟ್ಟಗುಡ್ಡೆಗಳ್‌ಂದ ಕೂಡಿಟು. ಮೂಡಲಿ ಇರ್‌ವ ಪಡುವದ ಗಟ್ಟಗಳ ಇಳ್ಜಾರ್‌ಲಿ ಇರ್‌ವ ಮಲೆಗಳ ಪೈಕಿಲಿ ಅಮ್ಮೆಡಿಕಲ್ ತುಂಬಾ ಎತ್ತರವಾದ್ದ್. (1, 293 ಮೀ.). ಪಡುವಕೆ ಹೋದಾಂಗೆ ಗುಡ್ಡೆಗ ಕಂಡ್ ಬಂದವೆ. ನೆಲ ಏರುತಗ್ಗ್ ಆಗಿದ್ ಉಟ್ಟ್ ಜಿಲ್ಲೆನ ದೊಡ್ಡ ಹಳ್ಳಗಾದ ನೇತ್ರಾವತಿ. ಕುಮಾರದಾರಾ ನದಿ ಇದ್ ಉಪ್ಪಿನಂಗಡಿಲಿ ಕೂಡ್ದೆ. ತಾಲೂಕ್ ನ ಇನ್ನೊಂದು ಹಳ್ಳ ಗೌರಿ ಹಳ್ಳ. ಇದ್ ಕಡಬಕೆ ಪೊಡ್‌ವಲಿ ಕುಮಾರದಾರಾ ಹಳ್ಳಕೆ ಸೇರ್‌ದೆ. ಪುತ್ತೂರು ತಾಲೂಕ್‌ಲಿ ಮಳೆ ಹೆಚ್ಚಾಗಿದ್ದದೆ. ಪುತ್ತೂರು ಪೇಟೆಲಿ ವರ್‌ಸಲಿ ಸರಾಸರಿ ಮಳೆ 4, 439 ಮಿ. ಮೀ. ಇದ್ದದೆ.

ತಾಲೂಕ್‌ಲಿ ಜಂಬುಮಣ್ಣ್‌ನ ನೆಲನೇ ಹೆಚ್ಚಾಗುಟ್ಟು. ಸಿರಾಡಿ ಗಾಟ್ ಪ್ರದೇಸಲಿ ಹಾರ್‌ನ್‌ಬ್ಲೆಂಡ್ ಶಿಲೆ ಉಟ್ಟು. ತಾಲೂಕ್ನ ಸುಂಕದಕಟ್ಟೆನ ಸುತ್ತಲಿ ಇರುವ ಪ್ರದೇಸಲಿ ಅರಬಗುಡ್ಡ, ಬೊರ್ಯಗುಡ್ಡ, ಬೂತಾಲಗುಡ್ಡ, ಒಡತ್ತುಕಲಿ ಲಾಯಿಕ್ ನ ದರ್ಜೆನ (54%–57%) ಕಬ್ಬಿಣದ ಅದಿರ್ ನಿಕ್ಷೇಪಗೊಳೊ. ಉಪ್ಪಿನಂಗಡಿ–ಸುಬ್ರಹ್ಮಣ್ಯ ಮಾರ್‌ಗಲಿ ಸಂಪ್ಯಾಡಿನ ಹಕ್ಕಲೆ ಕುರಂದ ಕಲ್ಲ್ ಮತ್ತೆ ಕ್ಯಾನೈಟ್ ಸಿಕ್ಕಿದೆ. ಮೂಡ್‌ಜರು ಹಳ್ಳ ಹರೆವ ಕಾವುಲಿ ರೇವೆ ಚಿನ್ನದ ರೇಕುಗ ಒಳೊ. ನೈಋತ್ಯ ಬಾಗಲಿ ಹರೆವ ಸೀರ್‌ಹೊಳೆಲಿ ಬೆಟ್ಟಂಪಾಡಿ ಉಟ್ಟು. ಅಲ್ಲಿ ಇರ್‌ವ ಬೆಂದ್ರ್ ತೀರ್ತ ದ ಬಿಸಿನೀರ್ ನ ಕೊಳಲಿ ಗಂದಕಾಂಶ ಉಟ್ಟು. ಪುತ್ತೂರ್‌ಂದ 19 ಕಿಮೀ. ದೂರಲಿ (ಉಪ್ಪಿನಂಗಡಿ–ಬಿಸಲೆಘಾಟ್ ಮಾರ್ಗ) ಹಿರೆಬಂಡಾಡಿ ಗ್ರಾಮಲಿ ಇರ್‌ವ ಕೆಮ್ಮಾರ್ ಸರೋವರ ಬಾರೀ ಲಾಯಿಕುಟ್ಟು. ಅದ್ ಒಂದ್ ವಿಶ್ರಾಂತಿದಾಮ ಆಗುಟು.

ತಾಲೂಕ್‌ನ ಮುಕ್ಯ ಉದ್ದಿಮೆ ಬೀಡಿ ಕಟ್ಟುದು. ಮೈಸೂರು–ಮಂಗ್ಳೂರು ಹೆದ್ದಾರಿ ಪುತ್ತೂರುಗೆ ಆಗಿ ಹಾದು ಹೋದೆ. ಪುತ್ತೂರ್‌ಂದ ಕಾಸರಗೋಡು, ವಿಟ್ಲ, ಸವಣೂರು, ಸುಬ್ರಹ್ಮಣ್ಯ, ಉಪ್ಪಿನಂಗಡಿಗೆ ಮಾರ್‌ಗಗ ಒಳೊ. ಹಾಸನ–ಮಂಗ್ಳೂರು ಮಾರ್‌ಗ ಹಂಗೆ ರೈಲು ಮಾರ್‌ಗಗ ಕೂಡಾ ಪುತ್ತೂರು ತಾಲೂಕ್ ನ ಶಿರಾಡಿ ಗಾಟಿಂದಾಗಿ ಹೋದೆ. ಪುತ್ತೂರು ತಾಲೂಕ್ ನ ಕಡಬ ಗ್ರಾಮ, ವಿಜಯನಗರ ಕಾಲಲಿ ಸುತ್ತ ಪ್ರದೇಸದ ಆಡೆಳ್ತ ಕೇಂದ್ರ ಆಗಿತ್ತ್. ಇಲ್ಲಿ ಗಣೇಸ ಮತ್ತೆ ನೀಲಕಂಟ ದೇಸ್ತಾನಗ ಒಳೊ. ಸವಣೂರು ಹಿಂದೆ ಜೈನರ ಒಂದ್ ಕೇಂದ್ರ ಆಗಿತ್ತ್. ಪುತ್ತೂರ್ ನ ಈಶಾನ್ಯಕೆ 13 ಕಿಮೀ. ದೂರಲಿ ಇರ್‌ವ ಇಲ್ಲಿ ಹಳೇ ಪುಡೊತ್ತು ಚಂದ್ರನಾತ ಬಸದಿ ಉಟ್ಟು. ಉಪ್ಪಿನಂಗಡಿ ಹಿಂದೆ ತಾಲೂಕ್ ನ ಮುಕ್ಯ ಜಾಗೆ ಆಗಿತ್ತ್. ಆಗ ಈ ತಾಲೂಕ್ ಗೆ ಈ ಊರುನ ಹೆಸ್ರೇ ಇತ್ತ್. ಇಲ್ಲಿ ನೇತ್ರಾವತಿ ಮತ್ತೆ ಕುಮಾರದಾರ ಹಳ್ಳಗ ಕೂಡ್‌ವೆ. ಉಪ್ಪಿನಂಗಡಿಲಿ ಇರ್‌ವ ದೇಸ್ತಾನಗ ಲಕ್ಷ್ಮಿರಮಣ ಮತ್ತೆ ಸಹಸ್ರ ಲಿಂಗೇಶ್ವರ. ಕೊಯ್ಲ ಒಂದ್ ಮುಕ್ಯ ಹೈನು ಕೇಂದ್ರ ಆಗಿಟ್ಟು. ಮಂಗ್ಳೂರ್‌ಂದ ಆಗ್ನೇಯಕೆ 52 ಕಿಮೀ. ದೂರಲಿ ಉಟ್ಟು. ವಿಸ್ತೀರ್ಣ 9.84 ಚ ಕಿಮೀ. ಜೆನಸಂಕೆ 48,063 (2001). ಸಮುದ್ರ ಮಟ್ಟಂದ ಸು. 111ಮೀ. ಎತ್ತರಲಿರುವ ಈ ಜಾಗೆನ ಸುತ್ತಕೆ ಏರುಗುಡ್ಡೆಗ ಒಳೊ. ಇದ್ ಜಿಲ್ಲೆನ ಒಳನಾಡ್ ನ ದೊಡ್ಡ ವ್ಯಾಪಾರ ಮತ್ತೆ ಶಿಕ್ಷಣ ಕೇಂದ್ರ ಆಗಿಟ್ಟು. ಮಂಗ್ಳೂರು–ಹಾಸನ ರೈಲ್ ಮಾರ್‌ಗಲಿ ಪುತ್ತೂರು ಒಂದ್ ಮುಕ್ಯ ನಿಲ್ದಾಣ. ತಾಲೂಕು ಕೇಂದ್ರ ಆದ ಪುತ್ತೂರುಗೆ ಇದರ್‌ಂದ ಮಂಗ್ಳೂರು ಮತ್ತೆ ಕರ್ನಾಟಕದ ಒಳ್ದ ಕಡೆಗೆ ರೈಲ್ವೇ ಸಂಪರ್‌ಕ ಸಿಕ್ಕಿದೆ. ಪುತ್ತೂರ್ ನ ವಿಚಾರಲಿ ಹಲವು ಐತಿಹ್ಯಗ ಚಾರಿತ್ರಿಕವಾಗಿ ವಿಜಯನಗರ ಮತ್ತೆ ಬಂಗರಸರ ಕಾಲದ ಕೆಲವ್ ಶಾಸನಗ ಇತರ ದಾಕಲೆಗ ಕೂಡಾ ಉಟ್ಟು. ಇಲ್ಲಿನ ಶ್ರೀ ಮಹಾಲಿಂಗೇಶ್ವರ ದೇಸ್ತಾನ ಈ ಪ್ರದೇಸದ ಪುರಾತನ ದೇಸ್ತಾನಲಿ ಒಂದ್. ಸುತ್ತಕೆ ದಿಬ್ಬದ ಹಂಗೆ ಇರುವ ಈ ದೇಸ್ತಾನ ಗಜಪೃಷ್ಠಾಕಾರಲಿ, ಹಿಂದೆ ಪುತ್ತೂರು ಬಲ್ಲಾಳರ ಹೆಗ್ಗಡೆ ಆಡಳಿತಲಿದ್ದ ಏಳ್ನಾಡು ಗುತ್ತುನ ಸೀಮೆ ದೇಸ್ತಾನತ ಇತಿಯಾಸ ಉಟ್ಟು. ಹಿಂದೆ ಒಮ್ಮೆ ಕಾಸಿಂದ ಬಂದ ಸನ್ಯಾಸಿ ಒಬ್ಬ ಇಲ್ಲಿ ಬಂಡಾರಿ ಹಿತ್ಲ್ ಕೆರೆತಿದ್ದ ಜಾಗೆಲಿ ಅಂವ ಹೊತ್ತ್ ತಂದ ಶಿವಲಿಂಗನ ಇಸಿ ಪೂಜೆ ಮಾಡ್ತಾ ಅಂವಂಗೆ ಹಂಗೆನೇ ನಿದ್ದೆ ಆಗಿ ಎದ್ದ್ ಮುಂದೆ ಪ್ರಯಾಣಕೆ ತಯಾರಾಗಿ ಆ ಲಿಂಗನ ನೇಚಿಕೆ ನೋಡ್ಕನ ಅದ್ ಅಲ್ಲಿಂದ ಮೆದ್ಕಿತ್ತೆತ ಪ್ರತೀತಿ ಉಟ್ಟು. ಆಗ ಅಂವ ಇಲ್ಲಿನ ಬಂಗರಾಜಂಗೆ ಅಂವನ ಕಸ್ಟನ ಹೇಳಿಕಂಡತ್. ಅಂವನ ಸೇವಕರ್‌ಂದ ಆಗಲೀ, ಅಂವ ಕಳ್ಸಿದ ಪಟ್ಟದ ಆನೆಂದಾಗಲೀ ಆ ಶಿವಲಿಂಗನ ಮೆದ್ಕ್ ಸಿಕೆ ಆಗದೆ ಆನೆನೇ ಸತ್ತ್ ಹೋತ್




ಅದರ ಅಂಗಾಂಗಗ ಚೆಲ್ಲಾಪಿಲ್ಲಿ ಆಗಿ ಸೀಮೆಲಿ ಎಲ್ಲಾ ಚೆಲ್ಲಿ ಬೀತ್ ತ ನಂಬಿಕೆ ಉಟ್ಟು. ಪುತ್ತೂರು ಪೇಟೆನ ಸುತ್ತಲಿ ಕೊಂಬೆಟ್ಟು, ಕರಿಯಾಲ, ತಾರ್ಜಾಲು, ಕೈಪಳ, ಬೀದಿಮಜಲು, ತಾಳೆಪಾಡಿ, ಕಾರಿಯಲಕಾಡು, ಬೆರಿಪದವು ಇಂತೆಲ್ಲ ಜಾಗೆಗಳ ಹೆಸ್ರ್ ಗ ಈ ಕತೆನ ಸಾಕ್ಷಿಗ ಆಗ್ಯೊಳ. ಹಿಂಗೆ ಶಿವಲಿಂಗ ಹುಕ್ಕ್ ಹೋದ ಊರೇ ಹೂತೂರು, ಪುತ್ತೂರು ಆಗಿರ್‌ದುತ ಒಂದ್ ನಂಬಿಕೆ ಉಟ್ಟು. ಮಹಲಿಂಗೇಶ್ವರ ದೇಸ್ತಾನದ ಮೂಡ ದಿಕ್ಕ್ ಲಿ ತುಂಬಾ ದೊಡ್ಡ ತೇರುಗದ್ದೆ, ಪಡುವಕೆ ದೊಡ್ಡ ಕೆರೆ. ದೇಸ್ತಾನದ ಪ್ರದಕ್ಷಿಣ ಪತಲಿ ಪರಿವಾರ ದೇವತೆಗಳ ಗುಡಿಗ, ಕಾರ್ಯನಿರ್‌ವಾಹಕ ದೆವ್ವಗಳ ಗುಡಿಗಳೂ ಉಟ್ಟು. ಕೆರೆಲಿ ಮುತ್ತು ಬೆಳ್ದದೆ ತ ನಂಬಿಕೆ ಉಟ್ಟು. ಸುರೂಗೆ ಈ ಊರ್‌ಗೆ ಮುತ್ತೂರು ಹೆಸ್ರಿತ್ತ್ ತ ಅದೇ ಬದಲಾಗಿ ಪುತ್ತೂರು ತ ಆತ್ ತ ಹೇಳ್ದುಟ್ಟು. ದೇಸ್ತಾನದ ಬಸವ ಕೆರೆಕಟ್ಟೆನ ಅಶ್ವತ್ತ ಮರಲಿ ಗರುಡ–ಸರ್ಪಗಳ ವೈರವರ್ಜಿತವಾಸ, ಚಿನ್ನದ ತೆನೆ, ಪಚ್ಚೆ ಕಡಗ, ಹಿಂಗೆ ಸಿಕ್ಕಿದ ಬಗೆ ಅಂಕದಗದ್ದೆನ ಬಂಗಾರತಾಯ ಜಾಗೆನ ವಿಸೇಸ. ಶ್ರೀದಂಡನಾಯಕ ಮತೆ ಉಳ್ಳಿ ದೆವ್ವಗ ನಿತ್ಯಾರ್‌ಚನೆ ಮತೆ ಉತ್ಸವ ಕಾಲಲಿ ವಿದಿವಿದಾನಗ ಇಂತದರ ಬಗ್ಗೆ ತುಂಬಾ ಐತಿಹ್ಯಗ ಒಳೊ. ಎಲ್ಲಾ ವೊರ್‌ಸಲಿ ಮೀನ ಮಾಸ 18 ಕೆ ಗೊನೆ ಕಡೆದು, 27 ಕೆ ದ್ವಜಾರೋಹಣ ಆಗಿ ಒಂಬತ್ತ್ ದಿನಗಳ ಜಾತ್ರೆ ಇಲ್ಲಿ ನಡ್ದದೆ. ದೇಸ್ತಾನಲಿ ಮೂರ್ ಶಿಲಾಶಾಸನಗ ಒಳೊ. 13 ನೆ ಸತಮಾನದ್ದ್‌ತ ಹೇಳ್ವ ಒಂದ್ ಸಾಸನಲಿ ಮುತ್ತು ಬೆಳೆವ ಕೆರೆಲಿ ಮೀನ್ ಹಿಡೆದು ನಿಸೇಸದತ ಹೇಳ್ಯಾಗುಟು. ಹಿಂದೆ ಒಮ್ಮೆ, ಕೊಡಗ್ ನ ರಾಜರ ಆಡೆಳ್ತಕೆ ಒಳಗಾದ್ದ ಈ ಪ್ರದೇಸನ ನಾವುಗೆ ಬುಟ್ಟುಕೊಡ್ದುತ ಆದರೆ ಅದರ ಬದಲ್‌ಗೆ ನಾಕ್ ಪಾಲ್ ನಸ್ಟ್ ಜಾಗೆನ ಕೊಟ್ಟವೆತ ಬ್ರಿಟಿಷರ್ ಹೇಳಿದ್ದೊತ ರಾಜರ್ ಗ ಹತ್ತೂರ್ ಕೊಟ್ಟರೂ ಪುತ್ತೂರ್ ನ ಕೊಡ್ದುಲೆ ತ ನಿರಾಕರ್‌ಸಿದ ಪ್ರತೀತಿ ಉಟ್ಟು. ಆದರೆ ಮುಂದೆಗೆ ಕೊಡಗ್ ಬ್ರಿಟಿಷರ ವಸ ಆಕನ ಅವು ಪುತ್ತೂರುನ ಸರ್‌ಕಾರದ ನೆಲೆ ಆಗಿ ಮಾಡಿಕೊಂಡೊ. ಮುಂದೆಗೆ ಕೋರ್ಟ್, ಕಚೇರಿ, ಪೇಟೆ, ಜೆನಸಮೂಹ ಎಲ್ಲನು ಹೆಚ್ಚಿಗೆ ಆಗಿ ಪುತ್ತೂರು ಮುಂದೆ ನಡ್ತ್. ಪುರಸಬಾ ಆಡಳಿತನ ಪಡ್ದ ಪುತ್ತೂರ್ ಲಿ ಈಗ ತಾಲೂಕು ಮಟ್ಟದ ಎಲ್ಲಾ ಸರ್‌ಕಾರಿ ಕಚೇರಿಗ ಒಳೊ, ವಿವೇಕಾನಂದ ಮತ್ತೆ ಸೇಂಟ್ ಫಿಲೊಮಿನ ಕಾಲೇಜುಗ ಒಳೊ. ಅದಲ್ಲದೆ, ಒಂದ್ ಸಂಮ್ಮಿಶ್ರ ಕಿರಿಯ ಕಾಲೇಜ್ ಎರ್‌ಡ್ ಪ್ರೌಡಸಾಲೆಗ ಮತೆ ಸುಮಾರ್ ಹಿರಿಯ ಪ್ರಾತಮಿಕ ಸಾಲೆಗ ಒಳೊ. ಇಡೀ ಜಿಲ್ಲೆಲಿ ಸುರೂನ ಸಹಕಾರ ಸಂಘ 1909 ರ್‌ಲಿ ಸ್ತಾಪನೆ ಆದ್ದ್ ಪುತ್ತೂರ್ ಲಿ. ಸಹಕಾರ ರಂಗಲಿ ಕೂಡಾ ತಾಲೂಕ್ ಬೋರ್‌ಡ್ ಅದ್ಯಕ್ಷರಾಗಿ ಸಾಲೆಗಳ ಏಳ್ಗೆಲಿನೂ ಸುಮಾರ್ ಕಾಲ ಸೇವೆ ಸಲ್ಸಿದ ಮೊಳಹಳ್ಳಿ ಶಿವರಾಯರ್ ಪುತ್ತೂರ್ ನವು. ಮೂರು–ನಾಲ್ಕ್ ದಸಕದ ಹಿಂದೆ ವಿಸೇಸ ಗೌಜಿನ ದಸರ ಉತ್ಸವ (ನಾಡಹಬ್ಬ) ಮತ್ತೆ ಬಾಲವನಗಳ್‌ಂದ ಪುತ್ತೂರ್ ನ ಬೆಳ್ಗ್‌ಸಿದವ್ ಕ್ಯಾತ ಕನ್ನಡ ಸಾಹಿತಿಗ ಆದ ಕೋಟ ಶಿವರಾಮ ಕಾರಂತರ್. ಇನ್ನೂ ಹಲವು ಗಣ್ಯ ಮಹನೀಯರ್ ಗಳ ಮೆಚ್ಚುವಂತ ಸೇವಾ ಕಾರ್ಯಗಳ್‌ಂದ ಪುತ್ತೂರು ಹೆಸರ್ ಗಳ್ಸಿಕಂಡುಟು. ಎಲ್ಲಾ ಜಾತಿ ಮತದವರ ಪೂಜಾ ಮಂದಿರಗ, ಮೂರು ಅಂತರ್ ರಾಷ್ಟ್ರೀಯ ನೆಲೆನ ಸೇವಾ ಸಂಸ್ತೆಗ ಪುತ್ತೂರ್‌ಲಿ ಉಟ್ಟು. ತಾಮ್ರದ ಪಾತ್ರೆ ತಯಾರ್‌ಸುದು, ಜೇನ್ ವ್ಯವಸಾಯ, ಮರ ಕೊಯ್ಯೊವ ಕೈಗಾರಿಕೆ, ಗೇರ್ ಬೀಜದ ವ್ಯವಸಾಯ ಮತ್ತೆ ಕೆಲವ್ ಗುಡಿಗಾರಿಕೆಗಳಿಗೆ ಪುತ್ತೂರು ಹೆಸರಾಗಿಟ್ಟು. (ಎಂ.ವಿ.)

**ಪುರುಸ ದೆವ್ವ :** ಪುರುಸ ಪದ ವ್ಯಕ್ತಿ ತೇಳ್‌ವ ಹೆಸರ್‌ನ ಸೂಚ್‌ಸಿದೆ. ಈ ದೆವ್ವಕೆ ಸಮ್ಮಂದ ಪಟ್ಟಂಗೆ ಒಂದ್ ಇತಿಯಾಸನೇ ಉಟ್ಟು. ಇದ್ ಬಾಯಿ ಮಾತ್‌ಲಿದ್ದ್, ಏಕಕಾಲಲಿ ಇದ್ ಮಾಯ ರೂಪಲಿರ್‌ವ ದೆವ್ವದ ಮತ್ತೆ ಇಂವ ಒಂದ್ ಕಾಲಲಿ ವೀರ ಆಗಿ ಬದುಕಿದಂವ ತೇಳ್ದರ ಗೊತ್ತು ಮಾಡ್ದೆ. ಅರೆಬಾಸಿಕ ಗೌಡ್ರು ಇರುವ ಪ್ರದೇಸಲಿ ಅಂದರೆ ಸುಳ್ಯಲಿ ಈ ದೆವ್ವದ ಆರಾದನೆನ ನಡ್ಸುವೆ. ದೆವ್ವದ ಮಾಯ ಲೋಕದ ನೆಲೆ ರಾಜದೆವ್ವ, ಪ್ರದಾನಿ ದೆವ್ವಂತೇಳಿ ಊರ್ ಗ್ರಾಮ, ಕುಟುಂಬ ನೆಲೆಲಿ ಪುರ್‌ಸ ದೆವ್ವದ ಆಚರಣೆ ಆದೆ.

ಈ ಪುರ್‌ಸ ದೆವ್ವದ ಸುರುನ ಉಲ್ಲೇಕ, ಎ. ಮ್ಯಾನರ್‌ನ ಸಂಗ್ರಹ (1885) 'ಮೂಡದೇರ್ ಕಾಲಬೈರವ' ಪಾಡ್ದನಲೇ ಉಟ್ಟು. ಸುಳ್ಯ ನಾಡ್‌ಲಿ ಈ ಪುರ್‌ಸನ ಬಗ್ಗೆ ಸಿಕ್ಕುವ ಪಾಡ್ದನಗಳ್‌ಲಿ ಇಬ್ಬರ್ ಜೋಗಿಗಳ ಉಲ್ಲೇಕ ಆದೆ. ಮೇಲೆ ರಾಜ್ಯಂದ ತುಳು ನಾಡ್‌ಗೆ ಇಳ್ದ ಇವು ಜೋಗಿ ಮಟಗಳಿಗೆ ಹೋಕಂಡ್ ಸುಳ್ಯ ಸೀಮೆಗೆ ಬಂದವೆ. ಅಲ್ಲಲ್ಲಿ ಕಾರಣಿಕ ತೋರ್‌ಸುವೆ, ಅವು ಆರಾದನೆ ಹೊಂದುವೆ. ಕನ್ನಡ ಬಾಸೆಲಿ ನುಡಿಕಟ್ಟ್ ಮಾಡ್ವೆ. 'ಕಾಶಿಮಟ, ಕದ್ರಿ ಮಟ, ಕಲ್ಯಾಣಪುರಿ ಮಟ, ಇಟ್ಟೆಲ್ ಮಟ – ಮೂರು ಸೀಮೆಲಿ ಸುತ್ತುವ ಬಡ ಜೋಗಿ ತಾನಲ್ವೆ ಸೀಮೆ ಬುದ್ದಿವಂತ್ರೆ'. ಹೀಗೆ ಅದರ್‌ಲಿ ವಿವರ ಸಿಕ್ಕಿದೆ. ಗುತ್ತಿಗಾರ್ ಹಕ್ಕಲೆನ ಕಂದ್ರಪ್ಪಾಡಿ ಈ ಪುರ್‌ಸ ದೆವ್ವದ ಕೇಂದ್ರ ಸ್ತಾನಂತೇಳಿದ್ ಕರ್‌ಸಿಕಂಡದೆ.

ಪುರ್‌ಸ ಊರು ಸುತ್ತಿಕಂಡ್ ಪ್ರಸರಣ ಆವ ದಾರಿ ಮತ್ತೆ ಬಯಲ್ ಸೀಮೆಂದ ತುಳು ನಾಡ್‌ಗೆ ಗೌಡ್ರು ವಲ್‌ಸೆ ಬಂದ ದಾರಿ ಒಂದೆ ಆಗಿ ಕಂಡದೆ. ವಲ್‌ಸೆ ಬಂದ ಗೌಡರ ಪಂಗಡಲಿ ಕಂದ್ರಪ್ಪಾಡಿಲಿ ನೆಲೆಯಾದ ಗೌಡರ ನಾಯಕಂತೇಳಿ ಈ ಪುರ್‌ಸನ ಗುರ್‌ತ್‌ಸಿಕೆ ಅದರ ಪಾಡ್ದನದ ಕತನಲಿ ಗ್ರೆಸಿಕೆ ಆದೆ. ಆ ಪ್ರಕಾರ ಕಂದ್ರಪ್ಪಾಡಿಗೆ ಬಾವ ಪುರುಸ ಅಲ್ಲಿದ್ದ ಜೈನ ಸೆಟ್ಟಿ ಬಳ್ಳಾಳ್ತಿಯರ್‌ಲಿ ಆಸ್ರಯ ಪಡ್ದ್‌ದ್ ನಿತ್ತದೆ. ಬಾವ ಇಬ್ಬರ್ ಜೋಗಿಗಳ್‌ಲಿ ಅಣ್ಣ ಜೋಗಿನ ಕುಕ್ಕೆಗೆ ಕಳ್ಸಿ ತಮ್ಮ ಜೋಗಿ ಕಂದ್ರಪ್ಪಾಡಿಲಿ ಅಕ್ಕಮ್ಮ–ದುಗ್ಗಮ್ಮ ಬಲ್ಲಾಳ್ತಿಯವರ ಹಕ್ಕಲೆ ಪಾರುಪತ್ಯಗಾರ ಆಗಿ ನೆಲೆ ನಿತ್ತದೆ. ಕಳ್ದ ಕಾಲಲಿ ಪುರುಸ ಅಲ್ಲಿನ ಜೈನರ್‌ಲಿ ಕಾದಾಟ ನಡ್ಸಿ ಅಂವನೇ ಕಾರ್ಯಸ್ತನಾದೆ.

ಮುಂದೆನ ದಿನಗಳ್‌ಲಿ, ಒಂದ್ ಸಂದರ್ಬಲಿ, ಉಲ್ಲಾಕ್ಲು ದೆವ್ವಗ ಈ ಪುರುಸನ ಮಾಯಕ ಮಾಡಿ ಮಾಯಲಿ ಪ್ರದಾನಿ ನೆಲೆಲಿ ನೆಲೆಕೊಟ್ಟ್ ಆರಾದನೆ ಪಡಿವಂಗೆ ಮಾಡ್ವೆ. ಈ ಬಗೆಲಿ ಮೊಯಿಂಸ ಅಗಿದ್ದ ಪುರುಸ, ದೆವ್ವ ಆಗಿ ಆರಾದನೆಗೆ ಬಂದವಂತೇಳಿ ಪ್ರತೀತಿ. ಈ ಕತನದ ಒಳ ಮರ್ಮಲಿ ಜೋಗಿ ಪುರ್‌ಸ ಒಬ್ಬ ಸಮುದಾಯದ ನಾಯಕನಾಗಿದ್ದ್ ತೀರಿ ಹೋದ ಮೇಲೆ ಅಂವ ದೆವ್ವತ್ವ ಪಡ್‌ತ್ತ ಗೊತ್ತಾದೆ. ಇನ್ನೊಂದು ನೆಲೆಲಿ ಜೋಗಿ ಪರಂಪರೆ ಪ್ರಕಾರ ಮತ್ತೆ ಗೌಡ್ರ ಮತ ಸಮ್ಮಂದದ



ಪುರುಸ ದೆವ್ವ

ನೆಲೆಲಿ ನೋಡ್ರೆನೂ ಈ ಪುರುಸ ದೆವ್ವದ ಪ್ರದಾನ ಆರಾದಕರ್ ಗೌಡ್ರೇ ಆಗ್ಯೊಳ. ಗೌಡ್ರುಗನೇ ಈ ದೆವ್ವದ ಪೂಜಾರಿಗ ಆಗಿದ್ದವೆ. ಈ ಸಮ್ಮಂದದ ಹಿನ್ನೆಲೆಲಿ ನೋಡ್ರೆ, ಗೌಡ್ರ ಮೂಲ ಪುರುಸನೊಬ್ಬನೇ ಪುರುಸ ದೆವ್ವ ರೂಪಲಿ ಕಂಡ್ ಆರಾದ್‌ಸುವೆ ತ ಹೇಳಿಕೆ ಸಾದ್ಯ ಆದೆ. ಮತಮೂಲಂದಳು ಪುರುಸಂಗೆ ಗೌಡ್ರಗಳೊಟ್ಟಿಗೆ ಸಮ್ಮಂದ ಕಂಡದೆ. ಗೌಡ್ರುಗ ಗೊರವನ/ಮುನಿಸ್ವಾಮಿನ ಪೂಜೆ ಮಾಡ್ವೆ. ಸುಳ್ಯದ ಉಳುವಾರ್, ಮಾವುಜಿ ಮನೆಗಳ್‌ಲಿ ಮುನಿಸ್ವಾಮಿ ಮಟಗ ಇದ್ದ್ ಇದರ ಪುಸ್ಟೀಕರ್‌ಸಿದೆ. ಗೊರವನ ಗುಂಡಿ ಇಂತ ಹೆಸರ್‌ಲಿ ಜಾಗೆನ ಹೆಸರ್, ಸಿದ್ದ ವೇಸಲಿರ್‌ವ ಸನ್ಯಾಸಿ, ಪುರುಸ ಕೊಣ್‌ತ ನಡ್ಸುವ ಗೌಡ್ರುಗ ನಾತ ಕೇಂದ್ರ ಕದ್ರಿಗೆ ಹೋಗಿ ಪ್ರಸಾದ ತಾದು, ಇವು ಆದಿಚುಂಚನ ಗಿರಿನ ನಾತ ಬೈರವನ ಆರಾದ್ಸುದು ಇದೆಲ್ಲ ಪುರುಸಂಗೆ ಮತ್ತೆ ಗೌಡ್ರುಗೆ ಇರ್‌ವ ಒಳ್ಳ ಸಮ್ಮಂದನ ತೋರ್‌ಸಿದೆ.

ಕಂದ್ರಪ್ಪಾಡಿಲಿ ಪುರುಸ ನಡ್ಸುವ ಲಡಾಯಿಗ, ಮಾಯಕ ಆಗಿ ದೆವ್ವತ್ವಕ್ಕೇರ್‌ವ ಹೊತ್ತುಲಿ ಹೋರಾಟ–ಪ್ರತಿ ಹೋರಾಟ, ಒಟ್ಟಿಗೆ ಸಾಮಾಜಿಕ–ಮತೀಯ–ಆರ್‌ತಿಕ ನೆಲೆಲಿ ಗೌಡ್ರುಗ ಊರವಾಗಿರ್‌ವ ಚರಿತ್ರೆ ಕಂಡದೆ. ಪುರುಸನ ಮೌಕಿಕ ಕತನಗ ಏಕಕಾಲಲಿ ಪುರುಸ ಒಬ್ಬ ಸಮುದಾಯದ ನಾಯಕನ ಹಾಂಗೆ ಮಾಯಕಲಿ (ತೀರ್‌ದ ಮೇಲೆ) ಅಂವ ದೆವ್ವ ಆಗಿ ಆರಾದನೆಯಾವ ನೆಲೆನ ವ್ಯಕ್ತ ಮಾಡ್ದೆ. (ಪಿ.ಕೆ.)

ಪುರುಸ ದೆವ್ವ ಗೌಡ ಸಂಸ್ಕೃತಿಲಿ ವಿಸೇಸ. ಅದ್ ಗೌಡ್ರ ವಲ್‌ಸೆನ ಇತಿಯಾಸದ ಕಡೆ ಬೊಳ್ಪು ಮೂಡ್ಸುವ ಹಾಂಗೆ, ಗೌಡರ ದಾರ್ಮಿಕ ನಂಬಿಕೆನ ಬಗ್ಗೆನು ಕೆಲವ್ ಒಳನೋಟಗಳ ಕೊಟ್ಟದೆ. 1982ರ್‌ಲಿ ಕುಕ್ಕೆ ಸುಬ್ರಹ್ಮಣ್ಯದ ಹಕ್ಕಲೆ ಕಂದ್ರಪಾಡಿಲಿ ಸಿಕ್ಕಿದ ಪಾಡ್ದನದ ಪ್ರಕಾರ, ಪುರ್‌ಸನ ಅಪ್ಪನ ಹೆಸರ್ ಶಂಕರ ಪುರ್‌ಸ ಅಯ್ಯೆ ದೇವಾಂಗ ಪುರ್‌ಸತಿ. ಏಳ್ ವರ್‌ಸಕೆ ದೇವಾಂಗ ಪುರ್‌ಸತಿ ನಾಕ್ ಮಕ್ಕಳ ಹೆತ್ತದೆ. ಕಡೇದ್ ಹೆಣ್ಣ್. ಅದ್ಕೆ ಜವುಳಿ ಜಂಗಮತ ಹೆಸರಿಸಿ ಸಾಂಕಿದೊ. ಗಂಡು ಮಕ್ಕ ಬೆಳ್ದೊ. ಅವು ದೊಡ್ಡವಾದಂಗೆ ಹಿರಿಯರ್ ಅಟ್ಟಲಿಸಿದ ಓಲೆ ಗರಿಗಳ ಕೆಳೆಗಿಳ್ಸಿದೊ, ಓದಿದೊ, ಬುದ್ದಿವಂತರಾದೊ. ಅಸ್ಗರ್‌ಲಿ ಅಯ್ಯೆ ಕಾಸಿಗೆ ಹರಕೆ ಒಪ್ಪಿಸಿನೆತ ಮಾತ್ ಕೊಟ್ಟದ್ದು ಗೊತ್ತಾದೆ.ಅಯ್ಯೆ ಹೇಳ್ದ ಹರ್‌ಕೆನ ಅವು ಒಪ್ಪುಸುವೆಂತ ಹೇಳ್‌ವೆ. ಅಯ್ಯೆ ಅಪ್ಪನು ಇದ್ಕೆ ಒಪ್ಪಿ ಶಿವಪೂಜೆ ಮಾಡಿ ಹೋಗಿ ತೇಳ್‌ವೆ. ಸರಿತೇಳಿ ನಾಕ್ ಜೆನ ಪುರ್‌ಸರ್ ಬೆರಣಿ(ಒಣಗಿಸಿದ ಸೆಗಣಿ) ಸುಟ್ಟವೆ. ಬಸ್ಮ ಮಾಡಿದ್. ಹಣೆಗೆ ಹಾಕಂಡವೆ. ಜೋಳಿಗೆ ಏರ್‌ಸುವೆ. ಕರಿ ಕಬ್ಬು ಹುಡುಕಿ ತಂದೊ. ಹುಲಿಚರ್ಮ ಹೊದ್ದ್, ಒಂದ್ ಕೈಲಿ ಜಾಗಟೆ ಕೋಲ್, ಕಿನ್ನರಿ ತಕಂಡ್ ಬಾಯಿಲಿ ಬಂದ ಪದನ ಕಿನ್ನರಿಗಿಳ್ಸುವೆ. ಕಿನ್ನರಿ ಪದನ ಬಾಯಿಗೆ ಹೇಳ್‌ವೆ, ರುದ್ರಾಕ್ಷಿ ಹಾಕಂಡ್. ಪೂಜೆ ಮುಗ್ಸಿ ಊರು ಬುಟ್ಟವೆ. ಜೆನ ಇವರ 'ಜೋಗಿ ಅರಸು ಮಕ್ಕಳು ಕರ್‌ದವೆ. ನಾಕೆ ಮಟ ಸುತ್ತ್‌ವೆ. ಶಿವಪೂಜೆ ಮಾಡ್‌ವೆ. ಕಾಶೀಮಟಕು ಹೋದವೆ.ಕಾಲ ಬೈರವನ ಕಂಡ್ ಹರ್‌ಕೆ ಸಂದಾಯ ಮಾಡ್ದೊ. 'ಕಾಶಿ ಬಿಟ್ಟು ಕಾವೇರಿ ನೋತ್ತೇವೆ' ತೇಳ್‌ವೆ, ಅಲ್ಲಿಂದ ಕಾವೇರಿ ತೀರಕೆ ಬಂದವೆ. ಪಂಜ ಸೀಮೆ, ಸುಳ್ಯ ಸೀಮೆ ದಾಟಿ ತೋಡಿಕಾನಕ್ಕೆ ಬಂದೊ. ಅಲ್ಲಿಂದ ಗಟ್ಟ ಏರಿ ಭಾಗಮಂಡಲಕ್ಕೆ ಬಂದ್. ಸಂಗಮಲಿ ಮಿಂದವೆ. ಬಸವ ಕಪ್ಪ್‌ಲಿ ಕುದ್ದವೆ. ಕಾವೇರಮ್ಮಂಗೆ ಬೆಳ್ಳಿನ ತೊಟ್ಟಿಲ್‌ಲಿ ಬಂಗಾರದ ಕೂಸುನ ಒಪ್ಪುಸುವೆ. ಊರು ಊರು ಸುತ್ತ್‌ವೆ ಸೂಳೆಯರ ಮೇಲೆ ಮಾಡ್‌ವೆ. ಮೆರವಣಿಗೆ ತೆಗ್ದವೆ. ಹೋದಲ್ಲೆಲ್ಲಾ ಹೆಸರು ಪಡ್ಕಂಡವೆ. ಅಲ್ಲಿಂದ 'ತಂಪುಳ್ಳ ರಾಜ್ಯ ಗುಂಪುಳ್ಳ ಸೀಮೆಯಾದ ಕನ್ನರ್ಪ್ಪಾಡಿಗೆ' ಬಂದವೆ.

ಇತ್ತ ಕಾಸಿಗೆ ಹೋದ ಅಣ್ಣಂದರ್ ಹಿಂದೆ ಬಾತ್‌ಲೆತೇಳಿ ಅವರ ಹುಡ್ಕೆಂಡ್ ಹೊರ್ಟದೆ ತಂಗಿ ಜವುಳಿ ಜಂಗಮ. ಜವುಳಿ ಮಾರುವ ನೆಪ ಹೇಳಿಕಂಟ್ ಸೀಮೆ ಸೀಮೆ ದಾಟಿದೆ. ಕಂದ್ರಪ್ಪಾಡಿಗೆ ಬಾಕನ ಅಣ್ಣ ತಂಗೆ ಕೂಡುವೆ. ಕಿರ್‌ಲಾಯಕೆ ಬಾಕನ ಅಲ್ಲಿ ತಂಗೆ ನೆಲೆ ನಿತ್ತದೆ. ಕಂದರ್ಪಾಡಿ ಸೀಮೆನ ಅಕ್ಕಮ್ಮ ದುಗ್ಗಮ್ಮ ಬಲ್ಲಾಳ್ತಿನ ಕೋರಿಕೆನಂಗೆ ಪುರ್‌ಸ ಮತ್ತೆ ಅಂವನ ಅಣ್ಣತಮ್ಮಂದರ್ ಕಂದರ್ಪಾಡಿಲಿ ನೆಲೆನಿತ್ತವೆ. ದೆವ್ವ ಆಗಿ ಒಳ್ದವೆ, ಊರ್ ರಕ್ಷಣೆ ಮಾಡ್‌ವೆ. ನಡುಕತ್ತಲೆಗೆ ಬಕ್ತರ ಬಾಗ್‌ಲ್ ಮುಚ್ಚಿಕೆ ಹೇಳ್‌ವೆ. ಜೆನ ಬಾಗ್‌ಲ್ ಮುಚ್ಚಿದೊ ಬೀದಿ ಮೆರವಣಿಗೆ ಮಾಡ್‌ವ ಪುಂಡರ ತಲೆ ತುಂಡು ಮಾಡಿ ರಕ್ತದ ಹಳ್ಳ




ಹರ್‌ಸುವೆ. ಜೆನ ಮೆಚ್ಚಿ ಅವರ ಒಳ್ಸಿಕಂಡವೆ. ಕಂದ್ರಪ್ಪಾಡಿನ ಆರಾದನಾ ಪರಂಪರೆ ಮತ್ತೆ ಕತೆಗಳ ಮೇಲೆ ಚಾಳಕೆ ಇಳ್ದ್ ಅದ್ಯಯನ ನಡ್ಸಿದ ಡಾ. ಪೂವಪ್ಪ ಕಣಿಯೂರ್ ಅವು ಪುರ್‌ಸ ಬೂತದ ಇನ್ನೆರಡ್ ಪಾಡ್ದನಗಳ ಕೂಡಿಸಿಯೊಳೊ.

ಈ ಪಾಡ್ದನದ ವಿವರಂಗ ಹಾಂಗೆ ಪುರ್‌ಸ ಬೂತದೊಟ್ಟಿಗೆ ಗೌಡರ್‌ಗಿರ್‌ವ ಸಮ್ಮಂದದ ಮೋರೆಗ ಸುಮಾರುಟ್ಟು. ಅದರ್‌ಲಿ ಮುಕ್ಯ ಆದ್ದ್‌ಂತೇಳಿರೆ, ಗೌಡರ ವಲ್ಸೆನೊಟಿಗೆ ಪುರ್‌ಸ ದೆವ್ವ ಇಸಿಕಂಡ ಸಮ್ಮಂದ ನೋಡಿರೆ, ಗೌಡ್ರ್ ಐಗೂರು ಪರಿಸರದಿಂದ ಸುಬ್ರಹ್ಮಣ್ಯದ ಕಡೆಗೆ ವಲ್‌ಸೆ ಬಂದ್, ಮುಂದೆ, ಕೂಜುಗೋಡು ಕಟ್ಟೆಮನೆ ದಾಟಿ, ಗುತ್ತಿಗಾರ್‌ನ ಕಡೆ ಹಬ್ಬಿಕಂಡ್ ಬಂದ ದಾರಿಲೇ ಕಂದ್ರಪ್ಪಾಡಿ ಒಳದ್. ಬಾರಿ ಲಾಯಿಕ್ ಇದ್ದ ಕಂದ್ರಪ್ಪಾಡಿ ಜೈನ ಬಲ್ಲಾಳರ ಆಳ್ವಿಕೆಗೆ ಒಳಪಟ್ಟಿತ್ತ್. ಈಗನು ಕಂದ್ರಪ್ಪಾಡಿ ಪರಿಸರಲಿ ಕಾಂಬ ಬಸ್ತಿ ಕಾಡ್, ಸೆಟ್ಟಿಕೇರಿ ತೇಳ್‌ವ ಹೆಸರ್‌ಗ ಇದ್ಕೆ ಸಾಕ್ಷಿ. ಪುರ್‌ಸರ ಕಂದ್ರಪ್ಪಾಡಿಗೆ ಬಾಕನ ಅಲ್ಲಿನ ಒಡೆತನ ಅಕ್ಕಮ್ಮ ಮತ್ತೆ ದುಗ್ಗಮ್ಮ ಬಳ್ಳಾಲ್ತಿಯರ್‌ಗೆ ಸೇರಿತ್ತ್ ಡಾ. ಪೂವಪ್ಪ ಕಣಿಯೂರು ಅವರ ಪ್ರಕಾರ ಅಕ್ಕಮ್ಮ ಮತ್ತೆ ದುಗ್ಗಮ್ಮ ಅವು ಬಂಟ ಸಮುದಾಯಕೆ ಸೇರ್‌ದವು ಮತ್ತೆ ಪುರ್‌ಸಂಗೆ 'ದನಕರು, ನೀರಿನಾಶ್ರಯ' ಕೊಟ್ಟೊವ್. ಅದೇನೇ ಇರಲಿ, ಪಾಡ್ದನದ ಕಡೆಗೆ ಬಾವ ರಕ್ತದ ಹಳ್ಳದ ಹರಿದರ ವಿವರ, ವಲಸೆಗಾರ ಗೌಡ್ರ್ ಊರೊವರೊಟ್ಟಿಗೆ ನಡ್ಸಿದ ಲಡಾಯಿನನೆ ಹೇಳ್ದೆ. ಇದರ್‌ಲಿ ಗೆದ್ದೊಳೊ ತೇಳ್ದು ಸದ್ಯಕ್ಕೆ ದೊಡ್ಡ ಸಂಗತಿ ಆದೆ. ಈ ಗೆಲ್ವುನ ಪುರ್‌ಸ ಬೂತ ಜಾತ್ರೆಲಿ ಗೌಡ್ರ್‌ಗ ಈಗೊಳು ನೆನ್ಸಿದ್ ಗೌಜಿ ಮಾಡ್‌ವೆ.

ಎರ್‌ಡ್‌ನೆ ದಾಗಿ ಪುರುಸ ದೆವ್ವದ ಪಾಡ್ದನಲಿ ಕಂಡ್ ಬಾವ ಕೆಲವ್ ವಿಸೇಸ ಸಂಗತಿಗಳ ವಿವರಗ ತೇಳಿರೆ, ಪಾಡ್ದನದ ಸುರುಲಿ ಜೋಗಿಗಳ ಬಗ್ಗೆ ಬಂದದೆ. ಪುರ್‌ಸ ಬೂತ ಅಂವನ ಅಂವ ಜೋಗಿ ಅರಸು ಮಞ್ಜತೇಳಿ ಕರ್‌ಕಂಡದೆ. ಕರ್ನಾಟಕಲಿ ಜೋಗಿ ತೇಳ್‌ವ ಸಮುದಾಯ ಒಂದುಟ್ಟು. ಇವ್ ಕಿನ್ನರಿ ಹಿಡ್ದ್ ಹಾಡುವ ಸಿದ್ದ ಮತದವ್‌ತ ಡಾ. ಹಿರಿಯಣ್ಣನವರು ಹೇಳುವೆ, ಸುಳ್ಯ ಹಕ್ಕಲೆನ ಮರ್‌ಕಂಜಲಿರ್‌ವ ಜೋಗಿಗ ತಮ್ಮ ಪುರ್‌ಸರ ಮಕ್ಕಂತ ಕರ್‌ಕಂಡವೆ. ಈ ಜೋಗಿ ಸಮುದಾಯದೊವ್ ಮಂಗಳೂರ್‌ನ ಕದಿರೆ ಮಟಕೆ ನಡ್ಕಂಡವೆ. ಬೈರವನ ಕುಲದೇವ್‌ರ್‌ತ ಪೂಜೆ ಮಾಡ್‌ವೆ ಪುರ್‌ಸ ಬೂತದ ಪಾಡ್ದನಲಿ ಕಿನ್ನರಿ, ಕದರಿ ಮಟ, ವಿಟ್ಲ ಮಟ ಮತ್ತೆ ಕಾಲಬೈರವನ ಬಗ್ಗೆ ಬಂದದೆ. ಹೀಂಗಿರ್ದರ್‌ಂದ ಪುರ್‌ಸ ದೆವ್ವದ ಪಾಡ್ದನಕು ಜೋಗಿಗಳಿಗೂ ಸಮ್ಮಂದ ಉಟ್ಟುಂತೇಳ್ದು ಸ್ಪಸ್ಟ ಆದರೆ, ಇದ್ ಕ್ರಿಸಿಕರಾದ ಗೌಡರೊಟಿಗೆ ಹೆಂಗೆ ಸಮ್ಮಂದ ಇಸಿಕಂಡುಟುತ ಹೇಳ್ದು ಚರ್‌ಚೆ ಮಾಡಕಾದ ಸಂಗತಿ.

ಜೋಗಿ ಪದಕೆ ಅನಂತಕೃಷ್ಣ ಅಯ್ಯರ್ ಹೀಂಗೆ ಹೇಳಿಯೊಳೊ. 'ಜೋಗಿ ತೇಳ್ದು ಸಂಸ್ಕೃತ ಪದ. ಯೋಗಾಬ್ಯಾಸಲಿ ಇರೊವ್ ಅಲ್ಲರೆ ಈ ಜಗತ್ತ್‌ನ ಆಸೆಪಾಸೆಗಳ ಬುಟ್ಟೊವ್‌ತ ಇದರ ಅರ್ತ. ಕಿಟೆಲ್ ಕೂಡಾ ಇದೇ ಅರ್ತನ ಕೊಟ್ಟೊಳೊ.ಒಟ್ಟಿಗೆ 'ಜೋಗಿ ಜೋಗಿ ತಬ್ಬಿಕೊಂಡರೆ ಮೈಯೆಲ್ಲಾ ಬೂದಿ' ತೇಳ್‌ವ ಗಾದೆನನು ಕೊಟ್ಟೊಳೊ. ಅಂದರೆ ಜೋಗಿಗ ಮೈಗೆ ಬಸ್ಮ ಹಾಕತಿದ್ದದ್ ಹೌದು. ಪಾಡ್ದನಲಿ ಬೆರಣಿನ ಸುಟ್ಟು ಬಸ್ಮ ಹಾಕಂಡದರ ಬಗ್ಗೆ ಬಂದದೆ. ಇದ್ಕೆ ಪೂರಕ ಆಗಿ ಜೋಳಿಗೆ, ರುದ್ರಾಕ್ಷಿಗಳ ಬಗ್ಗೆನೂ ಬಂದದೆ. ಮ್ಯಾನರ್ ಕೂಡ್ಯಾಕಿದ ಮುಡದೇರ್ ಕಾಳಬೈರವ ಪಾಡ್ದನಲಿ 'ನಾಲುವೆರ್ ಪುರುಸೆರ್ ಜೋಳಿಗೆ ಪಾಡೊಂದು' (ನಾಲ್ಕು ಜೆನ ಪುರುಷರು ಜೋಳಿಗೆ ಹಾಕಿಕೊಂಡು) ತೇಳ್ದರ ಬಗ್ಗೆ ಉಟ್ಟು, ಜೋಗಿಗ ಕಿನ್ನರಿ ಹಿಡೆತಿದ್ದೊ ತೇಳ್ದು ಪಾಡ್ದನಲಿ ಬಂದದೆ. ಕದಿರೆ ಮಟಲಿರ್‌ವ ಜೋಗಿಗ ಈಗ ಕಿನ್ನರಿ ಹಿಡಿಯದಿದ್ದರೂ ಪಂಡ್ ಹಿಡೆತ್ತಿದ್ದೊಂತ ಒಪ್ಪಿಕಂಡವೆ ಮಲೆನಾಡ್‌ಲಿರ್‌ವ ಜೋಗಿಗ ಕೈಲಿ ಕಿನ್ನರಿನ ಈಗಲೂ ಹಿಡ್ದವೆ. 'ಜೋಗಿ ಮಟದ ಸಿದ್ದರು' ಇದರ ತಮ್ಮ ವಂಸಕೆ ಕೊಟ್ಟೊಂತ ಐತಿಹ್ಯ ಮಲೆನಾಡ್‌ನ ಜೋಗಿಗಳ್‌ಲಿ ಉಟ್ಟು.


ಪುರುಸ ದೆವ್ವ

ಜೋಗಿ ಮಟದ ಸಿದ್ದರ ಬಗ್ಗೆನು ಇಲ್ಲಿ ಚರ್‌ಚೆ ಮಾಡ್‌ದು ಅನಿವಾರ್ಯ ಕಂಡದೆ. ಮೋನಿಯರ್ ನಿಗಂಟ್‌ಲಿ ಸಿದ್ದ' ತೇಳ್ದಕೆ 'Prooved Substantial' ತ ಅರ್ತ ಉಟ್ಟು. ಈ ಸಿದ್ದ' ಪದ 'ಸಿದ್ದಿ ನೊಟ್ಟಿಗೆ ಸಮ್ಮಂದ ಇಸಿಕಂಡದೆ.ಸಿದ್ದಾಂತ ತೇಳ್‌ವ ಸಂಸ್ಕೃತ ಪದಕೆ established end ತೇಳ್‌ವ ಅರ್ತ ಉಟ್ಟು. ಇದರ ಗಮನ್ಸಿರೆ ಸಿದ್ದಿ ಒಂದ್ ಪರಿಪೂರ್ಣ ಆದ,ಬೆಂದ ಸಾದನೆನ ಗುರಿ ಮುಟ್ಟಿಟು ತೇಳ್ವ ಅರ್ತ ಬಂದದೆ. ಹಾಂಗಾಗಿ ತನ್ನ ತೀವ್ರವಾದ ಸಾದನೆಂದ 'ಸಿದ್ದಿ' ಸಿಕ್ಕಿದ ಮೇಲೆ ಸಾದಕ 'ಸಿದ್ದಿ' ತ ಕರ್ಸಿಕಂಡದೆ ತಮಿಳು ನಾಡಿನ ಸಿದ್ದರ ಬಗ್ಗೆ ಬರೆದ ಸುಬ್ರಹ್ಮಣ್ಯ ಅಯ್ಯರ್ ಕೂಡಾ ಇದೇ ಅರ್ತಲಿ ben – 'He points out that those who live in 'Yoga' see the divine powers and light through such yoga are Siddhars' (Aiyar Subramanya 1956 : 7–8)ತ ಇದರ ಹೇಳಿಯೊಳೊ.

ಹಂಗಾಗಿ ಜೋಗಿಗಳೇ ಸಿದ್ದರು ಕೂಡಾ ಹೌದುತ ಹೇಳಕ್. ಪಾಡ್ದನದ ಇನ್ನೊಂದ್ ಮುಕ್ಯ ಅಂಸತೇಳಿರೆ 'ಪುರುಷನು ಕಾಸಿಗೆ ಹೋಗಿ ಕಾಲಬೈರವನ' ಕಂಡದ್. ಸುಳ್ಯ ಹಕ್ಕಲೆನ ಕಿರ್‌ಲಾಯಲಿ ನಡಿವ ದೆವ್ವದ ಕೋಲಲಿ ಈ ಮಾತ್ ಕತೆ ಬಂದದೆ.

**ಪೊದ್ಯ ಹೇಳಂವ :** ಹೇ ಯಾವೂರು ಕಂಡೇ?

**ದೆವ್ವ :** ಹೇ ಕಾಶೀಯ ಕಂಡೇ

**ಪೊದ್ಯ ಹೇಳಂವ :** ಹೇ ಕಾಶೀಲಿ ಏನೇನು ಕಂಡೇ

**ದೆವ್ವ :** ಹೇ ಕಾಶೀರಲಿ ಕಾಲಬೈರವನ ಕಂಡೇ ತೇಳಿ ಕೂಡ್ಲೆ ದೆವ್ವ ಅಲ್ಲಿಂದ ಎದ್ದು ಓಡ್ದೆ. ಜೆನಬೆರ್ಸಿ ಹಿಡ್ದವೆ ಕಾಲಬೈರವನ.ದೆವ್ವ ಓಡ್ದ್ ಕಾಲಬೈರವನತ ಜೆನಗ ಹೇಳ್ವೆ. ಇದರ ಗಮನ್ಸಿರೆ ಪುರ್‌ಸ ಬುತಕು ಕಾಲ ಬೈರವಂಗು ಗಟ್ಟಿನ ಸಮ್ಮಂದ ಉಟ್ಟುಂತಾದೆ. ಮುಡದೇರ ಕಾಳಬೈರವ ಪಾಡ್ದನಲಿ 'ಕಾಳಬೈರವೆನ್ನಿ ಬೂತ ಅಕುಳೆ ಬೆರಿಯೆ ಬೈದೆ' ತ (ಕಾಳ ಬೈರವವೆನ್ನುವ ಬೂತ ಅವರೊಂದಿಗೆ ಬಂತು) ಮಾತುಟ್ಟು ಕದಿರೆ ಮಟಲಿ ಕಾಲಬೈರವನ ಆರಾದನೆ ನಡೆದ ಹಾಂಗೆ ಆದಿಚುಂಚನ ಗಿರಿಲು ಕಾಲಬೈರವನ ಆರಾದನೆ ನಡ್ದದೆ. ಈ ಎರಡೂ ಮಡಗಳ ಗುರುಮಟಂತ ಒಪ್ಪಿಕಂಡ್ ಜೋಗಿಗ ಕಾಲಬೈರವನ ಆರಾದ್‌ಸ್‌ವೆ. ಸುಳ್ಯ ಪರಿಸರಲಿ ಕಾಲ ಬೈರವನ ವಿಗ್ರಹನ ಹೊತ್ತ್‌ಕಂಡ್ ಮನೆ ಮನೆಗೆ ಹೋವ ಜೋಗಿಗಳ ನಾವ್ ಇಂದ್‌ಗೂ ಕಾಣಕ್ ಅವು 'ಬೈರರು' ತ ಕರ್ದವೆ. 'ಬೈರವು ಬವುಸ ಬೈರಾಗಿ ಪದದ ಬುಡ್ಸಿದ ರೂಪನೆ ಆಗಿರೊಕು. ಗೌಡರು ಕಾಲಬೈರವಂಗೆ ವಿಸೇಸ ಅದ ಪೂಜೆ ಮಾಡ್‌ವೆ. 'ಕಾಸಿಗೆ ಹೋಗಿ ವಿಶ್ವನಾತನ ನೋಡದಿದ್ದರೂ ಕಾಲಬೈರವನ ನೋಡಕುತ' ಗೌಡರ್‌ಲಿ ನುಡುಕಟ್ಟ್ ಒಂದ್‌ಟ್ಟು ಕಾಲಬೈರವನ ಆರಾದನೆ ಮೂಲತಃ ಕಾಪಾಲಿಕರದ್ದಾಗಿತ್ತ್, ಪುರುಸ ಬೂತದ ಪಾಡ್ದನಲಿ 'ಜವುಳಿ ಜಂಗಮ' ಹೆಣ್ಮಕ್ಕಳ ಬಗ್ಗೆ ಉಟ್ಟು. ನಾತ ಪರಂಪರೆಲಿ ಸುಮಾರ್ 'ಜೋಗಿಣಿಯರ್ ಇದ್ದೊತ ಗೊತ್ತಾದೆ. ಈ ಜವುಳಿ ಜಂಗಮಳ್ ಕೂಡಾ ಅದೇ ಪರಂಪರೆ ಹೆಣ್ಣಾಗಿರಕು.

ಈ ವಿವರಗಳ್‌ಂದ ಪುರ್‌ಸ ಬೂತ, ಜೋಗಿಗ, ಸಿದ್ದರು, ಕದರಿಮಟ, ಕಾಲಬೈರವ ಮತ್ತೆ ಕಾಪಾಲಿಕರೊಟಿಗೆ ಗೌಡರ್‌ಗೆ ಸಮ್ಮಂದ ಇರ್ದು ಗೊತ್ತಾದೆ. ಇದ್ಕೆ ಸರಿ ಆಗಿದ್ ಸಿದ್ದವೇಸ ಇರ್ದರ ನಾವಿಲ್ಲಿ ಕಾಣಕ್.

ಸುಗ್ಗಿ ಹುಣ್ಣಿಮೆನ ಹೊತ್ತುಲಿ ಗೌಡರ್ ಒಟ್ಟು ಸೇರಿ ಕೋಣಿವ 'ಸಿದ್ದ ವೇಸಲಿ ಸುರುನ ಪದ ಆದ ಸಿದ್ದವು ಜೋಗಿಗಳೊಟಿಗೆ ಸಮ್ಮಂದ ಇಸಿಕಂಡುಟು ಸಿದ್ದವೇಸ ಕೋಣಿವವರ ಪುರುಸರ ಮಕ್ಕತ' ಕರ್ದವೆ ಸಿದ್ದವೇಸಲಿ ಬಾವ 'ಸನ್ಯಾಸಿ ಕೈಲಿ ಲಾಕುಳನ ಹಿಡ್ದ್ ಉರ್ಬುಳಿ ಇರ್ದು ನೇರ ಆಗಿದ್ ಲಾಕುಳ ಪಾಶುಪತರ್‌ಗೆ ಸಮ್ಮಂದ ಪಟ್ಟದೆ ತೇಳ್ದರ ಹಿಂದೆನೆ ಗುರ್ತ್‌ಸಿಯೊಳೊ.ಈ ಹೊತ್ತುಲಿ ಮೇಲೆ ಹೇಳ್ದ ಎಲ್ಲ ಇವರಗಳೊಟ್ಟಿಗೆ ಮಂಗಳೂರುನ ಕದಿರೆ ಮಟ ಸಮ್ಮಂದ ಇಸಿಕಂಡದರ ಕಾಣಕ್. ಅದರ ಹೀಂಗೆ ಕೂಡಿಸಿಯೊಳೊ. 1. ಜೋಗಿಗಳಿಗೆ ಕದಿರೆ ಗುರು ಮಟ ಆಗುಟು, 2. ಪುರುಸ ದೆವ್ವದ ಪಾಡ್ದನಲಿ ಕದಿರೆನ ಬಗ್ಗೆ ಬಂದದೆ, 3 ಸಿದ್ದವೇಸಲಿ 'ಕದಿರೆ ಮಟಕ್ಕೆ ಬಂದೆವು' ತೇಳ್ವ ಸಾಲುಟ್ಟು, 4. ಕಾಲಬೈರವಂಗೆ ಕದಿರೆಲಿ ಆರಾದನೆ ಇರ್ದು ಮತ್ತೆ ಕಾಲಬೈರವನೊಟ್ಟಿಗೆ ಗೌಡರ ಸಮ್ಮಂದ ಇರ್‌ದು. 5. ಕಾಲಬೈರವಂಗೆ ಆರಾದನೆ ಆವ ಆದಿಚುಂಚನ ಗಿರಿ ಕಾಪಾಲಿಕರ ಕೈ ಕೆಳಗಿದ್ದ್ ಮತ್ತೆ ಆದಿಚುಂಚನಗಿರಿ, ಕದಿರೆ ಮಟ ಒಂದೇ ಸಂಪ್ರದಾಯದ್ ತೇಳ್ದು ವಿದ್ವಾಂಸರ ತೀರ್ಮಾನ. ಇದೆಲ್ಲನು ಹೀಂಗೆ ಕೇಂದ್ರೀಕೃತ ಆಕೆ ಕದಿರೆ ಮಟ ಕಾಳಾಮುಕರ ಮತ್ತೆ ನಾತ ಪಂತದ ಕೇಂದ್ರ ಬಿಂದು ಆಗಿದ್ ಬೆಳ್ದದೆ ಕಾರಣ ಆಗುಟು. ನಾತ ಸಂಪ್ರದಾಯನ 'ಸಿದ್ದಮಟ, ಸಿದ್ದಮಾರ್‌ಗ' ತಳು ಕರ್ದವೆ . ಸಿದ್ದರ್ ತೇಳ್ದು ಜೋಗಿಗಳ ಇನ್ನೊಂದ್ ಹೆಸರ್. ಚುಂಚನಗಿರಿನ ಸುತ್ತ ಮುತ್ತ ಇರ್‌ವ ಜೋಗಿಯರ್ ಅಲ್ಲರೆ ಸಿದ್ದರ್ ಕಾಲ ಬೈರವನ ಆರಾದಕರ್. 'ಜೋಗಿ ಮಟದ ಸಿದ್ದರು' ತೇಳ್ವ ಪ್ರಯೋಗ ಕದಿರೆಲು ಉಟ್ಟು. ಸಿದ್ದವೇಸಲಿ ಇರುವ ಸನ್ಯಾಸಿನ ಲಕುಲೀಶ ಪಾಶಪತಕ್ಕೆ ಸೇರಿದ್ದರೂ, ಕಡೆಗೆ ಲಕುಲೀಶ ಪಾಶುಪತರೂ ನಾತ ಪರಂಪರೆಗೆ ಸೇರಿರ್ದರ ನೋಡಿರೆ, ಗೌಡರ ಸಿದ್ದವೇಸದ ಕೋಣ್‌ತನು ನಾತ ಪರಂಪರೆನೊಟ್ಟಿಗೆ ಕಡೆಗೆ ಸಮ್ಮಂದ ಇಸಿಕಂಡುಟುತ ಹೇಳಕಾದೆ.ನಾತ ಪಂತಕು ಲಕುಲೀಶ ಪಾಶುಪತರ್‌ಗು ಕಾಳಮುಕರ್‌ಗು ಇರುವ ವೆತ್ಯಾಸನ ಮಾತ್ರ ಇಲ್ಲಿ ಗುರ್ತ್‌ಸುದು ಕಸ್ಟ.

ಲಕುಲೀಶರ ಒಂದ್ ಪಂಗಡ ಕಾಳಮುಕರಾಗಿ ಪರಿವರ್ತನೆ ಹೊಂದುವೆ. ಕಾಳಾಮುಕರ್‌ಗೆ ಸಮ್ಮಂದ ಪಟ್ಟ ಸಿದ್ದವೇಸದ ಸನ್ಯಾಸಿ ಮತ್ತೆ ನಾತ ಸಂಪ್ರದಾಯದ 'ಪುರುಷ ಬೂತ' ಕಡೆಗೆ ಗೌಡರ್‌ಂದ ಆರಾದನೆಗೆ ಒಳಪಟ್ಟುಟು. ಈ ಆರಾದನೆಲಿ ಬಾವ ಸನ್ಯಾಸಿ ಮತ್ತೆ 'ಪುರುಸರ್‌ಗೆ ಈ ಕಾಗಡೆನ ವೆತ್ಯಾಸ ಉಟ್ಟು. 1. ಸಿದ್ದವೇಸದ ಸನ್ಯಾಸಿ 'ಉರ್ಬುಳಿ ಆಗಿದ್ದರೆ, ಪುರುಷ ಬೂತ ಕೋಮಣ (ಲಂಗೋಟ) ಉಟ್ಟದೆ. 2. ಸಿದ್ದವೇಸದ ಸನ್ಯಾಸಿ ಮಾಂಸಹಾರಿ ಆದರೆ ಪುರುಸ ಬೂತ ಸಸ್ಯಾಹಾರಿ. 3. ಪುರುಸಂಗೆ 'ತಂಗೆ' ಉಟ್ಟು, ಹಾಂಗಾಗಿ ಹೆಣ್ಮಕ್ಕಳಿಗೆ ಮೊರ್ಯಾದಿ ಕೊಟ್ಟೊಳೊ. ಈ ಮೂರ್ ವೆತ್ಯಾಸಂಗ ಎರಡೂ ಸಂಪ್ರದಾಯದ ಮೂಲ ಲಕ್ಷಣಂತ ಕಂಡದೆ. ಕಾಳಾಮುಕ ಸನ್ಯಾಸಿಗಳ ಅತಿಮಾರ್‌ಗಿಗತನು ಕರ್ದೊಳೊ. ಅವು ಲಾಯ್ಕ್‌ನ ಹೆಣ್ಮಕ್ಕಳ ಮುಂದೆ ಕಾಮ ಚೇಸ್ಟೆಗಳ ಮಾಡ್ದಲ್ಲದೆ, ಬಟ್ರ್‌ಗಳ ತಮಾಸೆ ಮಾಡತಿದ್ದಂತ ವಿದ್ವಾಂಸರ್ ಗುರ್ತ್‌ಸಿಯೊಳೊ, ಪುರ್ಸ ಬೂತದ ಪಾಡ್ದನಲಿ 'ಪುರುಷನು ಭಾಗಮಂಡಲದಲ್ಲಿ ಸೂಳೆಯರ ಮೇಳ ಮಾಡಿಸಿದತ ಎಂಬ ವರ್ಣನೆ ಬಂದದೆ. ಇದ್ ಕಾಳಾಮುಕರ ಪ್ರಬಾವಂದಲೆ ಬಂದಿರೊಕು. ಈ ಕಾಳಾಮುಕರ್ ಕರಾವಳಿಲು ಪ್ರಬಾವಶಾಲಿಗಳಾಗಿದ್ದೊತ, ಸಿದ್ದವೇಸಲಿ ಬಾವ ಸನ್ಯಾಸಿನು ಎದ್ದ್ ನಿತ್ತಾಂಗೆ ಕಾಂಬ ತುಣ್ಣೆನಂಗೆ ಕಾಂಬ ಕೋಲುನ ಕೈಲಿ ಹಿಡ್ಕಂಡ್, ಬೇಡದ್ದ್ ಮಾತಾಡಿಕಂಡ್ ಒಟ್ಟಿಗಿದ್ದ




ಬಟ್ಟನ ತಮಾಸೆ ಮಾಡ್ದೆ.ಈ ಅಂಸನು ಬಟ್ರ್‌ಗು ಕಾಳಾಮುಕರ್‌ಗು ಇದ್ದ ಅಂತರನ ತೋರ್ಸಿದೆ. ತಾತ್ವಿಕವಾದ ಇಂತ ಬಿನ್ನಾಬಿಪ್ರಾಯ ಗಳ ಬ್ರಿಗ್ಸ್ ಗುರ್ತ್‌ಸಿಟು, ಕಾಳಾಮುಕರ್ ಮಾಸ ತಿಂಬವಾಗಿದ್ದೊ ಮುಂದೆ ನಾತ ಪರಂಪರೆಗೆ ಸೇರಿಕನ ಅವ್ ಸಸ್ಯಾಹಾರಿಗ ಆಗಿರಕು. ಬ್ರಿಗ್ಸನು 'Some Yogis would not eat fish' ತೇಳ್ದ್ ಇಲ್ಲಿ ನೆನ್ಸಿಕಣಕಾದೆ. (ಪಿ.ಬಿ.)

**ಪುರುಸ/ಸಿದ್ದವೇಸ : ಸಿದ್ದವೇಸ–ಸುಳ್ಯ:** ದಕ್ಷಿಣಕನ್ನಡ ಜಿಲ್ಲೆನ ಸುಳ್ಯ, ಪುತ್ತೂರು ಮತ್ತೆ ಬೆಳ್ತಂಗಡಿ ತಾಲೂಕುಗಳ್‌ಲಿ ಇರ್‌ವ ಗೌಡ ಜೆನಾಂಗದೊವು ಸುಗ್ಗಿ ಹುಣ್ಣಿಮೆನ ಹೊತ್ತುಲಿ 'ಸಿದ್ದ ವೇಸ' ಕೊಣ್ದವೆ. ನಿಗಂಟ್ ಮಾಡ್ದ ದಿನ ಊರ್‌ನ ಹಿರಿಯ ಗೌಡರೊಬ್ಬರ ಮುಂದಾಳ್‌ಕೆಲಿ ಹುರ್‌ಪುನ ಗೌಡ ಹೈದಂಗ ಊರ್‌ನ ದೆವ್ವದ ಚಾವ್‌ಡಿಲೊ, ಗಟ್ಟಿ ಕುಳದ ಗೌಡರೊಬ್ಬರ ಮನೆ ಇಜ್ಜೆಲ್‌ಲೊ ಒಟ್ಟು ಸೇರ್‌ವೆ; ಸಿದ್ದವೇಸ ಕೋಣಿವ ದಿನಂಗಳ ನಿಗಂಟ್ ಮಾಡ್‌ವೆ. ಹುಮ್ಮಸ್ ಇರ್‌ವ ಆರ್ ಇಲ್ಲರ್ ಏಳ್ ಗೌಡ ಹುಡ್ಗರ್ ಕೊಣ್‌ತಕ್ಕೆ ನಿತ್ತವೆ. ತುಂಬಾ ತಮಾಸೆ ಮಾಡ್‌ವಂತವ ಒಬ್ಬ 'ಬಟ್ರ' ವೇಸ ಹಾಕಿಕೆ ತಯ್ಯಾರಾದೆ. ಪ್ರಾಯದವರ್‌ಲಿ ಒಬ್ಬ 'ದಾಸಯ್ಯ'ನ ವೇಸನ, ತುಂಬಾ ಹುಮ್ಮಸ್‌ನ ಚುರ್‌ಕು ಇರ್‌ಂವವ ಒಬ್ಬ 'ಸನ್ಯಾಸಿ'ನ ವೇಸ ಹಾಕಿಕೆ ತಯ್ಯರಾದೆ. ಇದಿಸ್ಟ್ ಪಾತ್ರಗ ಸಿದ್ದವೇಸಕೆ ಅಗತ್ಯವಾದಂತದ್.

ಸಿದ್ದವೇಸ ಕೋಣಿವ ಹೈದಂಗ, ಕೊಣ್‌ತದ ದಿನ ಬಾಕನ ತಲೆಗೆ ಕೆಂಪು ಬಣ್ಣದ ಮುಂಡಾಸ್ ಕಟ್ಟಿ, ಅದರ ಒಂದ್ ಕೊಡಿನ ಬಲಕೆಬಿನ ಮೇಲೆಂದ ಹೆಗ್ಲ್‌ಗೆ ಇಳಿವಂಗೆ ಬುಟ್ಟವೆ. ತುಂಬಾ ದೊಗಳೆ ಆಗಿರುವ ಅಂಗಿನ ಹಾಕಿ ಸೊಂಟಕ್ಕೆ ಕಚ್ಚೆಹಾಕುವೆ. ಅಂಗಿನ ಮೇಲೆಂದ ಸೊಂಟಕ್ಕೆ ಗಟ್ಟಿ ಆಗಿದ್ 'ದಟ್ಟಿ' ಒಂದರ ಕಟ್ಟುವೆ. ಈ ''ದಟ್ಟಿ' ಸರ್‌ರಕೆ ಗಟ್ಟಿನ ಆದಾರ ಕೊಟ್ಟರೆ, ಬಲ ಪುಡೆಗೆ ಇಳ್‌ಸಿದ ಮುಂಡಾಸ್ ಕೊಣ್‌ತಕ್ಕೆ ಪೊರ್‌ಲುನ ಲಯನ ಕೊಟ್ಟದೆ. ದಾಸಯ್ಯ ಕೆಂಪು ಬೈರಾಸ್ ಹೊದ್ದ್, ಕೈಲಿ ಶಂಕ ಮತ್ತೆ ಜಾಗಟೆನ ಹಿಡ್‌ಕಂಡದೆ; ಬಿಳಿ ವೇಸ್ಟಿನ ಕಚ್ಚೆ ಹಾಕಂಡದೆ. ಬಟ್ಟನ ವೇಸ ಹಾಕಿದಂವ ಕೂಡಾ ಬಿಳಿ ವೇಸ್ಟಿಲಿ ಕಚ್ಚೆಹಾಕಿ, ತಲೆಗೆ ಜುಟ್ಟು ಕಟ್ಟಿ, ಗೋಣಿ ನಾರ್‌ನ(ಬೊಕ್ಕುಬೊಳ್ಳಿ) ಬೊಳ್ಳಿನ ದೊಡ್ಡ ಜೆನಿವಾರ ಮಾಡಿ ಹಾಕಂಡದೆ. ಆ ಜೆನಿವಾರಕ್ಕೆ ಒಂದ್ ಗಂಟ್ ಹಾಕಿದ್ದದೆ. ಮೈಗೆ ಗಂದ, ಹಣೆಗೆ ನಾಮ ಹಾಕಿ 'ಬಟ್ಟ'ನ ವೇಸದಂವ ತಯ್ಯಾರಾದೆ. ಇದರ್‌ಲಿ ಮುಕ್ಯ ವೇಸ ಒಳದ್ ಸನ್ಯಾಸಿದ್. ಒಣ್‌ಗಿದ್ ಬಾಳೆ ಚಾಂಬರೆ ತಂದ್ ಇಡೀ ಸರ್‌ರಕ್ಕೆ ಕಟ್ಟಿ, ಸರ್‌ರ ಮುಚ್ಚುವಂಗೆ ಮಾಡ್ವೆ. ಕಮ್ಮುನ ಹಾಳೆನ ಶಂಕುನಾಕಾರಲಿ ಮೊಡ್ಚಿ, ತಲೆಗೆ ಕಂತಮಾಡಿ ಇಸಿಕಂಡ್, ತಲೆಕಾಣದಂಗೆ ಮಾಡ್‌ವೆ. ಹಸಿ ಬಾಳೆಲೆನ ತಂದ್ ಗರ್‌ಗಸದಂಗೆ ಕತ್ತರ್‌ಸಿ ಮೋರೆಗೆ ಅಡ್ಡ ಕಟ್ಟಿ, ಇಡೀ ಮೋರೆ ಮುಚ್ಚುವಂಗೆ ಮಾಡ್‌ವೆ. ಸಪೂರದ ನಾಲ್ಕಾರ್ ಬೆತ್ತಗಳ ಜೋಡ್‌ಸಿ ಬೊಳ್ಳಿಂದ ಸುತ್ತಿ ಸೊಂಟದ ಮುಂದೆ ಕಟ್ಟಿ ನಿಗ್‌ರಿ ನಿತ್ತ



ಸಿದ್ದವೇಸ

ತುಣ್ಣೆನಾಂಗೆ ಮಾಡ್‌ವೆ. ಊರೊಳಗೆ ಓಡಾಡ್ಕನ ಪುಂಡುಪೋಕರಿಗ ತುಣ್ಣೆಗೆ ಕೈ ಹಾಕುವೆಂತೇಳ್ವ ಕಾರಣಕ್ಕೆ ತುಣ್ಣೆನ ಕೊಡಿಗೆ ಮುಳ್ಳ್‌ನ ಕಟ್ಟುವೆ. ಸನ್ಯಾಸಿನ ಕೈಗೆ ಒಂದ್ ದೊಣ್ಣೆ ಕೊಟ್ಟವೆ. ಕೆಲ ಸರ್‌ತಿ ಬಸ್ಮದ ಪಾತ್ರೆನ ಕೂಡ ಸನ್ಯಾಸಿ ಹಿಡ್‌ಕಂಡದೆ.

ಎಲ್ಲ ತಯ್ಯಾರಾದ ಮೇಲೆ ಈ ಸನ್ಯಾಸಿನ ಸಾಲ್‌ನ ನೊಡುಲಿ ನಿಲ್ಸಿಕಂಡ್, ಕತ್ತಲೆ ಆದಾಂಗೆ, ಊರ್ ಸುತ್ತಿಕೆ ಹೊರ್‌ಟವೆ. ಎಲ್ಲೊವು 'ಡಿಂಬಿಸಾಲೆ' ತೇಳ್ವ ಸೊಲ್ಲ್‌ನ ಹೇಳಿಕಂಡ್ ನಡ್‌ದವೆ. ಅವು ಕೊಣ್‌ತ ಸುರುಮಾಡಿಕೆ ಇರ್‌ವ ಮನೆ ಹಕ್ಕಲೆ ಬಾಕನ, ಸನ್ಯಾಸಿನ ಆ ಮನೆ ಹಕ್ಕಲೆ ಅಡ್‌ಂಗಿಕೆ ಹೇಳ್ವೆ. ಒಳ್ದೊವೆಲ್ಲಾ ಇಜ್ಜಲ್‌ಗೆ ಹೋಗಿ, ಸಬ್ದ ಮಾಡಿ, ಮನೆಯವರ ಎದ್ದ್‌ರ್‌ಸ್‌ವೆ. ಬೊಳ್‌ಪ್ ಕಾಂಬಕೆ ದೀಪನ ಇಜ್ಜಲ್ ನೊಡುಲಿ ಇಸಿದ್ ಕೋಣಿವವ್ ಅದರ ಸುತ್ತ ನಿತ್ತವೆ. ಒಬ್ಬ ಪೊದ್ಯದ ಸೊಲ್ಲ್‌ನ ಹೇಳಿಕೆ ಸುರು ಮಾಡ್ದೆ.

ಸಿದ್ದುಲಿಂಗ ಮುದ್ದುಲಿಂಗ । ಸಿದ್ದವೇಸೋ ॥
ನಾವ್ ಯಾವೂರು ಯಾವ ತಳ । ಸಿದ್ದವೇಸೋ ॥
ನಾವ್ ಕಾಶೀಯ ತಳದವು । ಸಿದ್ದವೇಸೋ ।

ಹಿಂಗೆ ಪೊದ್ಯ ಹೇಳ್ಕನ, ಕೊಣೆವ ಗುಂಪು, 'ಸಿದ್ದವೇಸೊ' ತೇಳ್ವ ಸೊಲ್ಲ್‌ನ ಮತ್ತೆ ಮತ್ತೆ ಹೇಳಿಕಂಡ್ 4 ಹೆಜ್ಜೆಗಳ್‌ಲಿ ಉರ್‌ಂಟಾಗಿ

ಸುತ್ತುವೆ. ಪ್ರತಿ ನಾಕ್‌ನೆ ಹೆಜ್ಜೆಗೆ ಕೊನ್‌ತದವ್ ಉರ್‌ಂಟಾಕಾರದ ನೊಡುಗೆ ಬಾಗಿ ಒಟ್ಟಾದವೆ. ಅದೇ ಹೊತ್ತುಲಿ ಎರ್‌ಡೂ ಕೈಗಳ ಬಲಲಿ ತಟ್ಟಿ ಚಪ್ಪಾಳೆ ಸ್ವರ ಹಾಕ್‌ವೆ. ಹಿಂಗೆ ಪೊದ್ಯ ಕೊಣ್‌ತ ಮುಂದುವರೆಕನ, 22ನೇ ಸೊಲ್ಲ್‌ಲಿ ನಾವ್ 'ಶೃಂಗೇರಿ ಮಟದಿಂದ'ತೇಳ್ವ ಸಾಲ್ ಬಂದದೆ. ಇದ್ಕೆ ಗುಂಪು 'ಸಿದ್ದವೇಸೋ'ತೇಳ್ವ ಸೊಲ್ಲ್‌ನ ಸೇರ್‌ಸ್‌ತ್ತಿದ್ದಂಗೆ ಅಸ್ಪೊತ್ತು ಅಡ್‌ಂಗಿ ಕುದ್ದಿದ್ದ ಸನ್ಯಾಸಿ ರಪ್ಪ ಇಜ್ಜಲ್‌ಗೆ ಬಂದದೆ. ದೊಣ್ಣೆನ ನೆಲಕ್ಕೆ ಊರಿಕಂಡ್ ಚೊಟ್ಟನಂಗೆ ಹೆಜ್ಜೆಹಾಕಿದ್ ಕೊಣ್‌ತದವರ ಉರ್‌ಂಟ್‌ನ ಸಾಲ್‌ನ ಬಗ್ದ್, ನೊಡುಗೆ ಹುಕ್ಕದೆ. ಅದೇ ಹೊತ್ತುಗೆ ಬಟ್ಟ ಇಜ್ಜಲ್‌ನ ಬಲಬಾಗಕು ದಾಸಯ್ಯ ಇಜ್ಜಲ್‌ನ ಎಡಬಾಗಕು ಬಂದ್ ಕುದ್ದವೆ. ಆಕನ ಇಜ್ಜಲ್ ಪೂರ ಇವೆ ತುಂಬುವೆ. ಹಾಂಗೆ ತುಂಬುಕನ ಕೂಡ ತುಂಬ ಸಿಸ್ತ್‌ಲಿ ಕೊಣ್‌ತ ಮುಂದುವರ್‌ದದೆ.

ಸನ್ಯಾಸಿ ಉರ್‌ಂಟ್ ಸಾಲ್‌ನ ಹುಕ್ಕಂಗೆ ಕೊಣ್‌ತದವು ಸಾಲ್‌ನ ಸಣ್ಣದ್ ಮಾಡಿ, ಹಕ್ಕಕ್ಕಲೆ ಬಂದ್, ಸರ್‌ರನ ಬೊಗ್ಗ್‌ಸಿ, ಕೊಣ್‌ತದ ರಬಸನ ಜಾಸ್ತಿ ಮಾಡ್ವೆ. ಅದರಾಂಗೆ ಅಂವನ ರಬಸ ಜಾಸ್ತಿ ಮಾಡಿಕಂಡ ಸನ್ಯಾಸಿ ಉರ್‌ಂಟು ಸಾಲ್‌ನೊಳಗೆ ಚೊಟ್ಟ ಹಾಕಂಡ್ ಅಹಹಾ ಕುಹೂ ತ ಕಿರ್‌ಚಿಕಂಡ್ ಕೂಕುಳು ಹಾಕಂಡ್ ಅಡ್ಡಾದಿಡ್ಡಿ ಸುತ್ತಿದೆ. ಕೊಣ್‌ತದವರ ಪೊದ್ಯದ 43ನೇ ಸೊಲ್ಲ್‌ಲಿ ಬಾವ 'ನಮ್ಮ ಕೈಯನ್ನಾದ್ರೂ ತುಂಬಿಕಳುಹಿಸಿ' ತೇಳ್‌ವಲ್ಲಿಗೆ ಪೊದ್ಯಮುಗ್ದದೆ. ಕೊಣ್‌ತನು ನಿತ್ತದೆ. ಕೊಣೆವ ಜೆನಂಗ ಗುಂಪಾಗಿ ನಿತ್ತ್ ಕಡೆಗೆ ಇಜ್ಜಲ್‌ನ ಕರೆಗೆ ಹೋಗಿ ನಡುನ ಜಾಗೆನ ಸನ್ಯಾಸಿಗೆ ಬುಟ್ಟು ಕೊಟ್ಟವೆ

ಇಸ್ಟ್ ಹೊತ್ತುಗೆ ದಾಸಯ್ಯ ಸಂಕ ಉರ್‌ಗೆಂಡ್ ಜಾಗಟೆ ಬೊಟ್ಟಿಕಂಡ್ ಸವ್ವ ಮಾಡಿಕಂಡಿದ್ದದೆ. ಬಟ್ಟ ಜೆನಿವಾರದ ಗಂಟ್‌ನ ಹಿಡ್‌ಕಂಡ್ ಅದರ ಪೂಜಿಕಂಡ್, ಪೂಜೆ ಮಾಡ್‌ವವರಂಗೆ ನಾಟಕ ಮಾಡ್ದೆ. ಬಾಯಿಲಿ ಮಂತ್ರ ಹೇಳ್‌ವವನಂಗೆ ಬಾಯಿಮೆರ್‌ಕಿಸಿದೆ. ಇವರಿಬ್ಬರ ನೊಡುಲಿ ನಿಲ್ಲುವ ಸನ್ಯಾಸಿ ಬಟ್ಟ ಮತ್ತೆ ದಾಸಯ್ಯನ ಕಡೆ ತಿರ್‌ಗಿ ಅವರಿಬ್ಬರ ಡೋಂಗಿ ಮಾಡಿಕೆ ಸುರುಮಾಡ್ದೆ. ಬಟ್ಟನ ಮಂತ್ರನ ಅಂವನೂ ಹೇಳ್ವಂಗೆ, ದಾಸಯ್ಯನ ಸಂಕದ ಸೊರನ ಅಂವನ ದೊಂಡೆಂದ ಹೊರ್‌ಡುಸುವ ಸನ್ಯಾಸಿ ಅವರ ಡೋಂಗಿ ಮಾಡ್ಡು ತಾಪು ಮಾಡ್‌ದು ಮಾತ್ರ ಸ್ಪಸ್ಟ. ಅಕೇರಿಗೆ ಬಟ್ಟ ಮತ್ತೆ ದಾಸಯ್ಯನ ಅಂಗಳದ ಸುತ್ತ ಬೆರ್‌ಸಿದೆ. ನಿಗ್‌ರಿ ನಿಂತಂಗೆ ಇದ್ದ ಅಂವನ ತುಣ್ಣೆನ ಅವ್‌ಕೆ ಮುಟ್ಟ್‌ಸಿಕೆ ನೋಡಿಕಂಡ್, ಅವ್ಕೆ ಅವ್ಮಾನ ಮಾಡ್ದೆ. ಒಸಿ ಹೊತ್ತು ಹಿಂಗೆ ನಡ್ದ ಮೇಲೆ ಬಟ್ಟ ಮತ್ತೆ ದಾಸಯ್ಯ ಇಜ್ಜಲ್ ಕರೆಗೆ ಹೋಗಿ ಕಳಂದ ಮರೆ ಆದೆ.

ಈಗ ಇಜ್ಜಲ್‌ಲಿ ಸನ್ಯಾಸಿ ಮಾತ್ರ ಇದ್ದದೆ. ಅಂವ ಅಂವನ ಹಿಂದೆನ ಚೇಸ್ಟೆಗಳ ಮತ್ತೆ ಮಾಡ್ದೆ. ಅಹಹಾ.. ಊಹೂಹೂ ತ ಕೂಕುಳು ಹಾಕುದು, ಚೊಟ್ಟ ಹಾಕುದು, ಬಾಯಿ ಬುಟ್ಟು ಆರ್ಬಟೆ ಇಸುದು, ಮಟರ್ಂಗೆ ಮಾಡ್ದು, ಬಿಕ್ಸೆ ಬೇಡ್ಡು ಇಂತೆಲ್ಲಾ ಕೋಲಗಳ ಮಾಡ್‌ದೆ. ತುಣ್ಣಡನ ಕೈಲಿ ಹಿಡ್ಕಂಡ್ ಎದ್ದು ನಿಂತಿದೆ... ಸಾಟಿ ಇಲ್ಲ... ಒಂದೇ ಕುತ್ತಿಗೆ ಒಂಬತ್ತು ಮಕ್ಕಳಾಗ ಬೇಕು' ತ ಹೇಳ್‌ದೆ. ಮತ್ತೆ ಹಙ್ಙ ಕೊಣ್ದು 'ಹಳ್ಳದ ಕರೆಗೆ ಹೋಕು, ಲಕ್‌ಡಿ (ಶಿಶ್ನ) ಪೂಜೆ ಮಾಡಕು ತ ಹೇಳ್ದೆ. ಇದರೆಲ್ಲ ನೋಡಿಕಂಡ್ ಇರುವ ಮನೆ ಹೆಣ್‌ಮಕ್ಕಳಿಗೆ ನಾಚಿಗೆ ಆವಂಗೆ ತುಣ್ಣೆನ ಆಡ್‌ಸಿದೆ. ಅಸ್ಪೊತ್ತಿಗೆ ಇಜ್ಜಲ್‌ಂದ ಕಾಣೆಯಾಗಿದ್ದ ಬಟ್ಟ, ದಾಸಯ್ಯ ಮತ್ತೆ ಕೊಣ್‌ತದವು ಮತ್ತೆ ಇಜ್ಜಲ್‌ಗೆ ಬಂದವೆ. ಇವರ ಕಾರ್‌ಯಂದ ಕುಸಿಯಾದ ಮನೆವು ಏನಾರ್ (ಹೆಚ್ಚಾಗಿ ಬತ್ತ) ಕೊಟ್ಟರೆ ಅದರ ಹೆಗ್‌ಲಿಗಾಕಿಕಂಡ್ ಮುಂದೆನ ಮನೆಗೆ ನಡ್ಡವೆ. ಹಿಂಗೆ ದಾರಿಲಿ ನಡೆಕಾಕನ ಸಿದ್ದವೇಸದ ಇನ್ನೊಂದು ತಂಡ ಎದುರಾಕೆ ಬೊತ್ತು. ಎದುರಾದರೆ ಸಿದ್ದರ ಬಗ್ಗೆ, ಮಟಗಳ ಬಗ್ಗೆ ಪ್ರಸ್ನೆ–ಉತ್ತರಗಾದವೆ. ಸರಿಯಾದ ಉತ್ತರಗ ಬಾರದಿದ್ದರೆ ಪೆಟ್ಟ್–ಗುಟ್ಟ್‌ಗಾದವೆ. ಹಾಂಗಾಗಿ ಎರ್‌ಡೂ ತಂಡಗ ಎದುರುಬದುರಾದರ ತಪ್ಪ್‌ಸಿಕಂಡವೆ ಸುಗ್ಗಿ ಹುಣ್ಣಿಮೆನ ದಿನದಂದ್ ಈ ಕೊಣ್‌ತ ನಿತ್ತದೆ. ಆ ದಿನ ತಂಡದವೆಲ್ಲ ಒಟ್ಟ್ ಸೇರಿ. ಸುರುಗೆ ಸೇರ್‌ದ ಜಾಗೆಲಿ 'ಪುರುಸರ ಪೂಜೆ' ಮಾಡ್‌ವೆ. ಕೋಳಿ ಕೊಯ್ದು, ರೊಟ್ಟಿ, ಹೆಂಡ ಕೊಟ್ಟು, ಅವೂ ಉಂಡೂ ಆ ದಿನನ ಗೌಜಿಲಿ ಕಳ್ದವೆ

**ಸಿದ್ದವೇಸದ ಪೊದ್ಯ :** (ಈ ಪೊದ್ಯಕ್ಕೆ ಸುಮಾರ್ ಪಾಟಾಂತರಗ ಒಳೊ. ಇಲ್ಲಿ ಮಾಮೂಲು ಹೇಳ್‌ವ ಪೊದ್ಯನ ಮಾತ್ರ ಸಂಗ್ರಹ ಮಾಡಿ ಕೊಟ್ಟೊಳೊ.)

ದುಂಬಿಸಾಲೆ ದುಂಬಿಸಾಲೆ –ಸುದ್ದ ಬೇಸೋ
ಸಿದ್ದುಲಿಂಗ ಮುದ್ದುಲಿಂಗ –ಸುದ್ದ ಬೇಸೋ
ನಾವ್ ಯಾವ ಊರು ಯಾವ ತಳ –ಸುದ್ದ ಬೇಸೋ
ನಾವ್ ಕಾಶೀಯ ತಳದವರು –ಸುದ್ದ ಬೇಸೋ
ನಾವ್ ಕಾಶಿಯ ತಳದಿಂದ –ಸುದ್ದ ಬೇಸೋ
ನಾವ್ ಕದಿರೆಯ ಮಟಕ್ಕಾಗಿ –ಸುದ್ದ ಬೇಸೋ
ನಾವ್ ಕದಿರೆಯ ಮಟದಿಂದ –ಸುದ್ದ ಬೇಸೋ
ನಾವ್ ಬಿದಿರೆಯ ಮಟಕ್ಕಾಗಿ –ಸುದ್ದ ಬೇಸೋ
ನಾವ್ ಬಿದಿರೆಯ ಮಟದಿಂದ –ಸುದ್ದ ಬೇಸೋ
ನಾವ್ ಗಾಳಿಯ ಮಟಕ್ಕಾಗಿ –ಸುದ್ದ ಬೇಸೋ
ನಾವ್ ಗಾಳಿಯ ಮಟದಿಂದ –ಸುದ್ದ ಬೇಸೋ
ನಾವ್ ಗೋಳಿಯ ಮಟಕ್ಕಾಗಿ –ಸುದ್ದ ಬೇಸೋ
ನಾವ್ ಗೋಳಿಯ ಮಟದಿಂದ –ಸುದ್ದ ಬೇಸೋ
ನಾವ್ ಪಟ್ಟೇಲ ಮಟಕ್ಕಾಗಿ –ಸುದ್ದ ಬೇಸೋ
ನಾವ್ ಪಟ್ಟೇಲ ಮಟದಿಂದ ನಾವ್ –ಸುದ್ದ ಬೇಸೋ
ಐಗೂರ ಮಟಕ್ಕಾಗಿ –ಸುದ್ದ ಬೇಸೋ
ನಾವ್ ಐಗೂರ ಮಟದಿಂದ ನಾವ್ –ಸುದ್ದ ಬೇಸೋ
ಅಂಬೆಯ ಮಟಕ್ಕಾಗಿ –ಸುದ್ದ ಬೇಸೋ




ನಾವ್ ಅಂಬೆಯ ಮಟದಿಂದ –ಸುದ್ದ ಬೇಸೋ
ನಾವ್ ತುಂಬೆಯ ಮಟಕ್ಕಾಗಿ –ಸುದ್ದ ಬೇಸೋ
ನಾವ್ ತುಂಬೆಯ ಮಟದಿಂದ –ಸುದ್ದ ಬೇಸೋ
ನಾವ್ ನೆಕ್ಕಿಯ ಮಟಕ್ಕಾಗಿ –ಸುದ್ದ ಬೇಸೋ
ನಾವ್ ನೆಕ್ಕಿಯ ಮಟದಿಂದ –ಸುದ್ದ ಬೇಸೋ
ನಾವ್ ನೇರಳೆ ಮಟಕ್ಕಾಗಿ –ಸುದ್ದ ಬೇಸೋ
ನಾವ್ ನೇರಳೆ ಮಟದಿಂದ –ಸುದ್ದ ಬೇಸೋ
ನಾವ್ ಶೃಂಗೇರಿ ಮಟಕ್ಕಾಗಿ –ಸುದ್ದ ಬೇಸೋ
ನಾವ್ ಶೃಂಗೇರಿ ಮಟದಿಂದ (ಸನ್ಯಾಸಿ ಪ್ರವೇಶ) –ಸುದ್ದ ಬೇಸೋ
ನಾವ್ ಹೂವೆಂಗಿ ಮಟಕ್ಕಾಗಿ –ಸುದ್ದ ಬೇಸೋ
ನಾವ್ ಹೂವೆಂಗಿ ಮಟದಿಂದ –ಸುದ್ದ ಬೇಸೋ
ನಾವ್ ಗುರುಪುರ ಮಟಕ್ಕಾಗಿ –ಸುದ್ದ ಬೇಸೋ
ನಾವ್ ಗುರುಪುರ ಮಟದಿಂದ –ಸುದ್ದ ಬೇಸೋ
ನಾವ್ ಹಳ್ಳಿಗೆ ಬಿದ್ದೆವಮ್ಮ –ಸುದ್ದ ಬೇಸೋ
ನಾವ್ ಪುಸ್ಪರಾಯರ ಹೆಸರು ಹೇಳಿ –ಸುದ್ದ ಬೇಸೋ
ನಾವ್ ಹತ್ತು ತಾಯಿ ಮಕ್ಕಳಯ್ಯ –ಸುದ್ದ ಬೇಸೋ
ನಾವ್ ಒಂದೇ ತಾಯಿ ಮಕ್ಕಳಂತೆ –ಸುದ್ದ ಬೇಸೋ
ನಾವ್ ದೇವ್ರ ಮುಂದೆ ಆಡಿಕೊಂಡು –ಸುದ್ದ ಬೇಸೋ
ನಮ್ಮ ಹುಲ್ಲು ಕತ್ತಿ ಹನುಮಪ್ಪಯ್ಯ –ಸುದ್ದ ಬೇಸೋ
ನಮ್ಮ ಗುಂಡುಕಲ್ಲು ಗುರುವಪ್ಪಯ್ಯ –ಸುದ್ದ ಬೇಸೋ
ನಾವ್ ಬಚ್ಚಬಳಲಿ ಬಂದವಮ್ಮ –ಸುದ್ದ ಬೇಸೋ
ನಮ್ಮ ಚಟ್ಟೆ ಬತ್ತ ಪಿಟ್ಟೆ ಸಂಕರ –ಸುದ್ದ ಬೇಸೋ
ನಮ್ಮ ಕೈಯ್ಯನ್ನಾದ್ರೂ ತುಂಬಿ ಕಳಿಸಿ –ಸುದ್ದ ಬೇಸೋ
ನಮ್ಮ ಬಾರುಕೋಲು ಬಸವಯ್ಯ –ಸುದ್ದ ಬೇಸೋ
ನಾವ್ ಇನ್ನೊಂದೆಡೆ ಹೋಗಬೇಕು –ಸುದ್ದ ಬೇಸೋ
ನಾವ್ ವರುಸಕೊಮ್ಮೆ ಬಾವರಯ್ಯ –ಸುದ್ದ ಬೇಸೋ
ನಾವ್ ತಾರಾವು ಮಾರಾವಲ್ಲ –ಸುದ್ದ ಬೇಸೋ
ನಾವ್ ಹತ್ತಕ್ಕೊಂದು ತಾರಪೂರ –ಸುದ್ದ ಬೇಸೋ
ನಮ್ಮ ಸೊಂಟಕ್ಕೊಂದು ಘಂಟೆಸರ –ಸುದ್ದ ಬೇಸೋ (ಪಿ.ಬಿ.)

**ಸಿದ್ದವೇಸ–ಬೆಳ್ತಂಗಡಿ:** ದ. ಕ ಜಿಲ್ಲೆಯ ಗೌಡ ಜೆನಾಂಗದವರು ಸುಗ್ಗಿ ತಿಂಗಲಿ ಕೊಣಿವ ಕೊಣ್‌ತನೆ ಸಿದ್ದವೇಸ ಅಲ್ಲರೆ ಪುರುಸರ ಕೊಣ್‌ತ, ಸುಮಾರ್ 10ನೇ ಸತಮಾನಲಿ ನಾತಪಂತ ತುಳುನಾಡ್‌ಲಿ ಹೆಚ್ಚಿಗೆ ಪ್ರಚಾರಕೆ ಬಾತ್. ಕದ್ರಿನ ಈ ಪಂತದ ಪ್ರಚಾರಕರ್ ತಮ್ಮ ಕೇಂದ್ರ ಮಾಡಿಕಂಡ್ ಸುಮಾರ್ ಕಡೆ ತಮ್ಮ ಮಟಗಳ ಮಾಡ್‌ದೊ. ಈ ಪಂತದ ಅನುಯಾಯಿಗಳ ಜೋಗಿಗ ಅಲ್ಲರೆ ಪುರುಸರ್‌ತ ಕರ್‌ದವೆ. ಸಮಾಜದ ಕೆಳವರ್‌ಗದ ಜೆನಕೆ ಒಪ್ಪುವ ವಿಚಾರಗಳೇ ಅದರ ದಾರ್‌ಮಿಕತೆ ಆದ್ದರ್‌ಂದ ವೈದಿಕ ಸಂಸ್ಕೃತಿಮತ್ತೆ ನಾತ ಪಂತದ ನಡುಲಿ ಒಂದ್ ನಮೂನೆನ ಚೊರೆ ಬೆಳ್ತ್. ಇದರ ಪರಿಣಾಮಂದಾಗಿ ಸೃಸ್ಟಿ ಆದ ಕೊಣ್‌ತನೆ ಸಿದ್ದವೇಸ ಅಲ್ಲರೆ ಪುರುಸರ ಕೊಣ್‌ತ.

**ಕೊಣ್‌ತ :** ಕೊಣ್‌ತ ಮೊನ್‌ಸನ ಸಹಜ ಕ್ರಿಯೆ,ಅವನ ಕೆಲವೊಂದ್ ಬಾವನೆಗಳ ತಡ್ದ್ ಇಸಿಕಂಬಕೆ ಆಗದಿರಿಕನ ಅದರ ಕೊಣ್ದ್ ಸಡ್‌ಲ ಮಾಡಿಕಂಡದೆ.ಕೊಣ್‌ತ ಕುಸಿಗಾಗಿದ್ ಮಾತ್ರ ಅಲ್ಲ. ಬೇನೆ ಬೇಜರಗಳ ತೋರ್‌ಸಿಕಂಬ, ಕೋಪ ತಾಪನ ಕಮ್ಮಿ ಮಾಡಿಕಂಬಂತದು ಹೊವ್‌ದು. ಒಟ್ಟ್‌ಲಿ ಹೇಳಕಾರೆ ಒಂದ್ ಸಮೂಹಕ್ಕೆ ಆಗಿರುವ ಬೇಜಾರ್, ಸೋಸಣೆ, ಆಗಿರುವ ಅನ್ಯಾಯ ದೋಸಗಳ ಲೋಕಕೆ ಹೇಳಿಕಂಬಕೆ ಜೆನಪದರ್ ಕಂಡ್‌ಕಂಡ ಮಾದ್ಯಮವೇ ಕೊಣ್‌ತ.

ಪುರುಸರರ ಕೊಣ್‌ತನ ದ. ಕ ಜಿಲ್ಲೆ ಬೆಳ್ತಂಗಡಿ ತಾಲೂಕ್‌ನ ತುಳು ಮಾತಾಡ್‌ವ ಗೌಡ್ರ್‌ಗ 'ಪುರುಸರೆ ಕಟ್ಟುನ'ತ ಕರ್‌ದವೆ. ಇದ್ ಪೊದ್ಯ ಕೊಣ್‌ತ ಪ್ರದಾನ ಆಗಿರ್‌ವ ಜೆನಪದ ಕಲೆ, ಸುಳ್ಯ ತಾಲೂಕುಲಿ ಗೌಡರ್‌ಗ ಇದರ 'ಸಿದ್ದವೇಸ" ತ ಕರ್‌ದವೆ. ಸಿದ್ದವೇಸಲಿ ಗೌಡ್ರ್‌ಗ ಮಾತ್ರ ಕೂಡ್‌ವೆ. ಬೆಳ್ತಂಗಡಿ ತಾಲೂಕುಲಿ ನಡೆವ ಪುರುಸ ಕೊಣ್‌ತಲಿ ಬ್ರಾಹ್ಮಣ, ಪರಿಶಿಸ್ಟ ಜಾತಿನವರ ಬುಟ್ಟ್ ಊರ್‌ನ ಬೇರೆ ಎಲ್ಲಾ ಜಾತಿ ಜೆನಾಂಗದವ್ ಕೂಡಿಕಂಡವೆ. ಆದರೆ ಮುಕ್ಯ ಪಾತ್ರಗಳ ಗೌಡರೇ ಹಾಕ್‌ವೆ.. ಈ ಕೊಣ್‌ತನ ಸುಗ್ಗಿ ತಿಂಗಳ ಹುಣ್ಣಿಮೆನ ಹೊತ್ತುಲಿ ಕೊಣ್‌ದವೆ. ಊರ್‌ನ ಮುಕ್ಯಸ್ತರೊಬ್ಬರ ಮುಂದಾಳುತನಲಿ ನಿಗಂಟ್ ಮಾಡ್‌ದ ಜಾಗೆಲಿ ಕೊಣಿಯವೆಲ್ಲ ಸೇರ್‌ವೆ. ಕೊಣ್‌ತಕೆ ಬೇಕಾದ ಸಿದ್ದತೆಗಳ ಅಲ್ಲೇ ನಡ್‌ಸ್‌ವೆ. ಮುಂದೆ ದೇವರ ಮೂರ್‌ತಿನ ಸಿದ್ದ ಮಾಡ್‌ವೆ. ಮೆದು ಮರದ ಹಲಗೆನ ಬಳ್‌ಸಿ ಅರ್‌ದ ಗೋಲಾಕಾರಲಿ ಅದರ ಮಾಡಿ ಅದರ ಕರೆನ ಕೆಂಪು ಬಟ್ಟೆಲಿ ಸುತ್ತಿ ದಂಡೆನ ಮಾಡ್‌ವೆ. ಮಲ್ಲಿಗೆ, ಪಿಂಗಾರಂದ ಸಿಂಗರ್‌ಸಿ ಅಲಂಕಾರ ಮಾಡುವೆ.ನಡುಲಿ ಒಂದ್ ಕನ್ನೆಟಿನ ಜೋಡ್‌ಸ್‌ವೆ. ಇದ್ ಒಟ್ಟು ಆಕಾರಲಿ ಜಾತ್ರೆನ ಹೊತ್ತುಲಿ ದರ್‌ಸಿನದವ ಹೊರ್‌ವ ಬಲಮೂರ್‌ತಿನ ಪ್ರಬಾವಳಿ ನಾಂಗಿದ್ದದೆ. ಇದರ ಕದ್ರಿ ಮಂಜುನಾಥನ ಮೂರ್‌ತಿಂತ ಕರ್‌ದವೆ.ಪುರುಸರ ಕೊಣ್‌ತಲಿರ್‌ವ ಮುಕ್ಯಪಾತ್ರಂಗ – ದೇವರ ಮೂರ್‌ತಿನ ಹೊರ್‌ವ ಒಬ್ಬ ಬಟ್ಟನ ವೇಸ ಹಾಕಿದಂವ, ಒಬ್ಬ ಪೂಜೆ ಮಾಡಂವ, ಒಬ್ಬ ಕೊಡಮಂತಾಯ, ಸನ್ಯಾಸಿ, ದಾಸಯ್ಯ, ಕೊರ್‌ಗ ವೇಸ ಹಾಗೂ ಇನ್ನು ಸುಮಾರ್ ಸಣ್ಣ ಪುಟ್ಟ ವೇಸಂಗ ಇದ್ದದೆ.

ಬಿಳಿ ಪಂಚೆನ ಕಚ್ಚೆ, ತಲೆಗೆ ಜುಟ್ಟು, ಹಣೆಗೆ ಮೈಗೆ ಗಂದನಾಮ, ಹಾಂಗೆ ಜೆನಿವಾರ ಹಾಕಂಡ್ ದೇವರ ಪೂಜೆ ಮಾಡ್‌ವ ಬಟ್ಟ, ತಲೆಗೆ ಮುಂಡಾಸು ಬಿಳಿ ಪಂಚೆನ ಕಚ್ಚೆ ಹಾಕಂಡ್ ದೇವರ ಹೊರ್‌ವ ಪಾತ್ರಿ. ಈ ದೇವ್‌ರ್‌ಗೆ ರಕ್ಸಕ ಆಗಿ ಕೈಲಿ ಮಣಿ (ಗಂಟೆ) ಕಡ್ತಲೆ (ಕಡ್ಗ) ಹಿಡ್‌ಕಂಡ್ ತಲೆಗೆ ಮುಂಡಾಸ್ ಹಾಂಗೆ ಬಿಳಿ ಪಂಚೆನ ಕಚ್ಚೆ ಕಟ್ಟಿಕಂಡಿರ್‌ವ ಕೊಡಮಂತಾಯ, ಹಾಮಗೆ ಮೈಗೆ ಒಣ್‌ಗಿಲ್ ಬಾಳೆ ಚಾಂಬರೆನ ಮುಚ್ಚಿಕಂಡ್ ಕಾಯಿಚೊಪ್ಪುನ ನಾರ್‌ಂದ ಮಾಡ್‌ದ ಗಡ್ಡ,

ಸೊಂಟದ ಎದುರಕೆ ಉದ್ದಕೆ ಹೊರೆಗೆ ಕಾಂಬಂಗೆ ಬಿಳ್‌ಗ್‌ಲ್‌ಗೆ ಬಾಳೆ ನಾರ್‌ಂದ ಸುತ್ತಿ ಉದ್ದದ ತುಣ್ಣೆನ ಕಟ್ಟಿಕಂಡ್,ಸಿಗ್ಳ್‌ದ ಬುಡಬಾಗನ ನೆಲಕೆ ಬೊಡಿಯಕನ ಸದ್ದ್ ಬಾವಂತಬೆದ್‌ರ್‌ಂದ ಮಾಡ್‌ದ ದೊಡ್ಡ ದೊಣ್ಣೆನ ಹಿಡ್‌ಕಂಡಿರ್‌ವ ಸನ್ಯಾಸಿನ ವೇಸ, ಸನ್ಯಾಸಿನ ವೇಸನ ಎರಡ್ ಅಲ್ಲರೆ ಮೂರು ಜೆನ ಹಾಕ್‌ವೆ. ಮತ್ತೊಬ್ಬ ದಾಸಯ್ಯನ ವೇಸ ಹಾಕಂಡದೆ ಅಂವ ಸಂಕ ಮತ್ತೆ ಗಂಟೆ ಹಿಡ್‌ಕಂಡಿದ್ದದೆ. ಒಳ್‌ದಾಂಗೆ ಕೊರಗರ ವೇಸ, ಮುಸ್ಲಿಂ ವೇಸ, ಸ್ತ್ರೀ ವೇಸ, ಹಾಂಗೆ ಇನ್ನು ಕೆಲವ್ ವೇಸಗ ಇದ್ದದೆ. ಒಳ್‌ದ ಜೆನ ಬಿಳಿ ಅಂಗಿ ತಲೆಗೆ ಬೈರಾಸ್ ಕಟ್ಟಿಕಂಡಿರ್‌ವ ಪುರುಸರ ಮಕ್ಕ. ಒಟ್ಟಿಗೆ ಹಿಮ್ಮೇಳಲಿ ವಾದ್ಯ ಇದ್ದದೆ.

**ಪ್ರದರ್‌ಶನ :** ಪುರುಸ ಕೊಣ್‌ತಕೆ ವೇಸ ಕಟ್ಟಿದ ಮೇಲೆ ಎಲ್ಲವ್ ಸೇರಿ ಕದ್ರಿ ಮಂಜುನಾಥೇಸ್ವರನ ಮತ್ತೆ ಗ್ರಾಮದೆವ್ವನ ನೆನ್‌ಸಿ ನಾವ್ ಹಾಕಿದ ವೇಸಲಾಗಲಿ,ಕೊಣ್‌ತಲಾಗಲಿ ಹಾಂಗೆ ಕತ್ತಲೆನ ತಿರುಗಾಟಲಿ ಯಾದೇ ತರದ ತೊಂದರೆಗಳು, ಬಾರದಂತೆ ಕಾಪಾಡಕುತ ಪ್ರಾರ್‌ತನೆ ಮಾಡಿ ಊರ್‌ನ ಮನೆಗಳಿಗೆ ಕೊಣಿಯಕೆ ಹೊರ್‌ಟವೆ. ದಾರಿ ಉದ್ದಕೆ **'ಡಿಂಬಾಲೆ'** ತ ಸೊಲ್ಲ್‌ನ ಕರ್‌ದ್ ಹೇಳಿಕಂಡ್ ಹೋದವೆ. ಮನೆನ ಇಜ್ಜಲ್‌ಲಿ ಎಲ್ಲವ್ ಸೇರ್‌ದ ಮೇಲೆ ಇಜ್ಜಲ್‌ನ ಸುತ್ತ ಹೊಯ್ಯ ಹೊಯ್ಕ ತ ಸೊಲ್ಲ್‌ನ ಹೇಳಿ ಕೊಣ್‌ದವೆ. ನಡುಲಿ ಸೊಲ್ಲ್‌ನ ನಿಲ್ಲ್‌ಸಿ – ಈ ಪುರುಸರ ಮಕ್ಕಳ ಯಾರ್,, ಯಾವ ತಳದವ್, ಯಾವ ಮಟದವ್, ಎಲ್ಲೆಲ್ಲಿಂದ ಬಂದವ್‌ತ ಹೇಳಿ ಮನೆನ ಯಜಮಾನನ ಹೊಗಳಿ, ಈಗ ಆಡ್‌ದಂತ ಆಟ, ಕೊಣ್‌ದಂತ ಕೊಣ್‌ತ ಲಾಯ್ಕಾತ್‌ಲೆ. ಇನ್ನೊಂದ್ ಆಟ ಸಾಲಾಗಿ ಕೋಣಿನಿ ಪುರುಸರೆತ ಹೇಳಿ ಎಲ್ಲವ್ ಸಾಲಾಗಿ ಕೊಣ್‌ದವೆ.ಕೊಣ್‌ತ ಮುಗ್‌ದ ಕೂಡ್‌ಲೆ ದೇವರ ಹೊರ್‌ವ ಅರ್‌ಚಕ ಮತ್ತೆ ಕೊಡಮಂತಾಯ ಮನೆನ ಎದುರ ನಿತ್ತದೆ. ಎಡಕೆ ಬಲಬಾಗಲಿ ಪುರ್‌ಸರ ಮಕ್ಕ ನಿತ್ತವೆ.ಪೂಜೆ ಬಟ್ಟ ನೀರ್ ಹಾಕಿ ಪೂಜೆ ಮಾಡ್‌ದೆ.. ಆಗ ಸನ್ಯಾಸಿಗ, ಕೊರಗರ್ ಅವಂಗೆ ಬೇಡದ ಪದಗಳ ಹೇಳಿಕಂಡ್ ದಾರಿಗೆ ಅಡ್ಡ ಬಂದವೆ ಸನ್ಯಾಸಿಗ ಸುರುಗೆ ನಮ್ಮ 'ಲಕ್‌ಡಿ' (ಶಿಶ್ನ) ಪೂಜೆ ಆಕುತ ಹೇಳ್‌ವೆ..ಅದಾಗಿ ಪೂಜೆ ಬಟ್ಟ ಮತ್ತೊಮ್ಮೆ ನೆಲ ಸುದ್ದ ಮಾಡಿದ್ ಪೂಜೆ ಮಾಡ್‌ದೆ.. ಮತ್ತೆ ಕೊಡಮಂತಾಯ ದರ್‌ಸಿನ ಬಂದಂಗೆ ಮಾಡ್‌ದೆ. ಇಲ್ಲಿಗೆ ಕೊಣ್‌ತದ ಮುಕ್ಕಾಲ್ ವಾಸಿ ಮುಗ್‌ದಾಂಗೆ.ಪುರುಸ ಕೊಣ್‌ತದ ಪ್ರದಾನ ಅಂಸಗ ಮುಗ್‌ದ ಕೂಡಲೆ ಬೇರೆ ಬೇರೆ ವೇಸದಾರಿಗ ಒಬ್ಬೊಬ್ಬ ಆಗಿದ್ ಮನೆನ ಬಾಗ್‌ಲ್‌ಗೆ ಬಂದ್ ತಮ್ಮ ಪ್ರದರ್‌ಸಿನ ಕೊಟ್ಟವೆ. ಕೊರ್‌ಗ, ಸ್ತ್ರೀವೇಸ, ಪೊರ್ಬು, ನರಸನ್ನ,ಬ್ಯಾರಿ ವೇಸ, ಮಂಗ ಕೊಣ್‌ತ, ದಾಸಯ್ಯ ಇವೆಲ್ಲ ಪ್ರತ್ಯೇಕ ಆಗಿ ದುಡ್ಡ್ ಮತೆ ಕಾಯಿ ತಕಂಡ್ ಹೋದವೆ. ಈ ವೇಸಗ ಜಾತಿ ಕಸುಬು, ಮತ ದರ್‌ಮನ ಹಾಸ್ಯ ಮಾಡಿ ಎಲ್ಲವ್‌ಕೆ ಕುಸಿ ಕೊಟ್ಟದೆ. ಹೀಂಗೆ ಇರ್‌ಲ್‌ಂದ ಬೊಳ್ಪೊರೆಗೆ ಮನೆಂದ ಮನೆಗೆ ಕೊಣ್‌ತ್‌ದವ್ ಮುಂದ್‌ವರ್‌ದವೆ. ಈ ಪುರುಸರ್‌ಗೆ ಮನೆವು ದುಡ್ಡ್,ಅಕ್ಕಿ, ಕಾಯೊನ ಕೊಟ್ಟವೆ. ಇವ್ ಬೊಳ್ಪಾಕನ ಒಂದ್ ಕಾಯರ ಮರದ ಬುಡಲಿ ತಮ್ಮ ವೇಸನೆಲ್ಲ ಬಿಚ್ಚಿಸಿ ಮತ್ತೆ ಹಿಂಬೊತು ಎಲ್ಲಿ ಸೇರ್‌ದುತ ನಿಗಂಟ್ ಮಾಡ್‌ವೆ.. ಹೀಂಗೆ ಕೊಣ್‌ತ ಸುಗ್ಗಿ ತಿಂಗಳ ಹುಣ್ಣಿಮೆನ ಹೊತ್ತುಲಿ ಮೂರ್ ಅಲ್ಲರೆ ಐದ್ ದಿನಗಳ ವರೆಗೆ ನಡ್‌ದದೆ.. ಪುರ್‌ಸರ ಕೊಣ್‌ತದ ಹೊತ್ತುಲಿ ಒಂದ್ ಗ್ರಾಮದ ಪುರುಸರ್ ಮತ್ತೊಂದ್ ಗ್ರಾಮದ ಪುರ್‌ಸರ್ ಎದ್‌ಬದ್‌ರ್ ಸಿಕ್ಕಿಕಾಗದ್‌ತ ನಿಯಮ ಉಟ್ಟು.

**ಪುರುಸ ಪೂಜೆ :** ಒಂದ್ ನಿಗಂಟ್ ಮಾಡ್‌ದ ದಿನ ಊರ್‌ನ ಮುಕ್ಯಸ್ತನ ಮನೆಲೊ ಅಲ್ಲರೆ ಯಾದಾರ್ ಅಡ್ಕಲಿ ಪುರುಸರ ಪೂಜೆ ಮಾಡ್‌ವೆ. ಅಂದ್ ಪುರುಸ ಕೊಣ್‌ತಲಿ ಕೂಡ್ದ ಎಲ್ಲಾ ಜೆನಂಗ ಈ ಪೂಜೆಲಿ ಸೇರಿಕಂಡವೆ ಮತ್ತೆ ಪ್ರತಿ ಒಬ್ಬಂಗೆ ಒಂದ್ ಸೇರ್ ಅವಲಕ್ಕಿನ ಮಜೂರಿನ ರೂಪಲಿ ಕೊಟ್ಟವೆ.. ಕದ್ರಿ ಮಂಜುನಾಥ ದೇವ್‌ರ್‌ಗೆ ಪುರುಸರ ಲೆಕ್ಕಲಿ ಕಾಣಿಕೆ ಕೊಟ್ಟವೆ. ಮತ್ತೆ ಅಲ್ಲಿಂದ ಪ್ರಸಾದನ ತಂದವೆ. ಕೂಡ್‌ದ ಜೆನರ ಅಂದಾಜಿಲಿ ಅವ್‌ಲೆಕ್ಕಿನ ತಂದ್ ಬೆಲ್ಲ ಕಾಯಿ ಹಾಕಿ ಇಜ್ಜಲ್‌ನ ನಡುಲಿ ದೊಡ್ಡ ರಾಸಿ ಹಾಕ್‌ವೆ. ಕೆಲವ್ ಕಡೆ ಕೋಳಿಗೈಪು ಅಗಲ್ ಹಾಕಿ ಬಳ್‌ಸ್‌ವ ಕ್ರಮ ಉಟ್ಟು. ಅವ್‌ಲೆಕ್ಕಿನ ರಾಸಿನ ಎದ್‌ರ ದೇವರ ಮೂರ್‌ತಿನ ಸಿಂಗರ್‌ಸಿ ಪೂಜೆ ಮಾಡ್‌ವೆ. ಅಂದ್ ಕೋಣಿವ ಹೊತ್ತುಲಿ ವೇಸಗಳ ಹಾಕಿದವೆಲ್ಲ ರಾಸಿನ ಎದ್‌ರಕೆ ತಮ್ಮ ಪ್ರದರ್‌ಸಿನನ ಕೊಟ್ಟವೆ. ಹಾಂಗೆ ತಮ್ಮ ಕೊಣ್‌ತದ ಹೊತ್ತುಲಿ ಯಾದೆ ತರದ ತೊಪ್ಪುಗ ಇದ್ದರು ಅದ್‌ಕೆ ಕದ್ರಿ ಮಂಜುನಾಥ ದೇವರ್‌ಲಿ ಪ್ರಾರ್‌ತನೆ ಮಾಡ್‌ವೆ. ಸೇರ್‌ದವೆಲ್ಲ ಪ್ರಸಾದ ರೂಪಲಿ ಅವಲಕ್ಕಿನ ಬಳ್‌ಸ್‌ವೆ. ಅದಾಗಿ ಪ್ರತಿ ಮನೆವ್‌ಕೂ ಲೆಕ್ಕಾಚಾರದಂಗೆ ಅವ್‌ಲೆಕ್ಕಿನ ಕೊಟ್ಟವೆ. ಒಳ್ದ ದುಡ್ಡುಲಿ ಮುಂದೆನ ವರ್‌ಸದ ವೇಸಕೆ ಬೇಕಾದ ಸಾಮಾನ್‌ಗಳ ತೆಕಂಡವೆ. ಹೀಂಗೆ ಪುರ್‌ಸರ ಕೊಣ್‌ತ ಬೆಳ್ತಂಗಡಿಲಿ ನಡ್‌ದದೆ.

ಪುರುಸರ ಕೊಣ್‌ತನನೆ ಸುಳ್ಯಲಿ ಗೌಡ ಜೆನಾಂಗದವ್ ಮಾತ್ರ ಮಾಡ್‌ದರ ಸಿದ್ದವೇಸ ತೇಳ್‌ವೆ. ಸುಗ್ಗಿ ಹುಣ್ಣಿಮೆನ ಹೊತ್ತುಲಿ ಹಿರಿಯ ಗೌಡನೊಬ್ಬನ ಮುಂದಾಳತ್ವಲಿ ಆಸಕ್ತ ಗೌಡ ಹುಡ್‌ಗರ್



ಪುರುಸ/ಸಿದ್ದವೇಸ

ಊರ್‌ನ ದೆವ್ವದ ಚಾವಡಿಲೊ ಅಲ್ಲರೆ ಊರ್ ಮುಕಂಡನ ಮನೆ ಇಜ್ಜಲ್‌ಲಿ ಒಟ್ಟು ಸೇರಿ ಸಿದ್ದವೇಸ ನಡ್ಸುದಕೆ ನಿಗಂಟ್ ಮಾಡ್‌ವೆ. ಉತ್ಸಾಹಿಗಳಾದ ಆರು ಅತವಾ ಏಳು ಜೆನ ಯುವಕರು ಕೊಣ್‌ತಕ್ಕೆ ನಿಲ್ಲುತ್ತಾರೆ. ಅತ್ಯಂತ ಹಾಸ್ಯಪ್ರಜ್ಞೆ ಇರುವ ಒಬ್ಬ ಬ್ರಾಹ್ಮಣ ವೇಸವನ್ನು ಹಾಕುತ್ತಾನೆ. ಕ್ರಿಯಾಶೀಲವಾಗಿರುವ ಮತ್ತೊಬ್ಬ ಸನ್ಯಾಸಿಯ ವೇಸ ಹಾಕುತ್ತಾನೆ. ವಯಸ್ಸಿನಲ್ಲಿ ಹಿರಿಯರಾದವರ್‌ಲಿ ಒಬ್ಬ ದಾಸಯ್ಯನ ವೇಸವನ್ನು ಹಾಕುತ್ತಾನೆ. ಇದಿಸ್ಟು ಸಿದ್ದವೇಶದ ಪಾತ್ರಗಳು, ವೇಸ ಹಾಕಿದ ಮೇಲೆ ಸನ್ಯಾಸಿಯನ್ನು ಸಾಲಿನ ಮದ್ಯದಲ್ಲಿ ನಿಲ್ಲಿಸಿಕೊಂಡು ಊರು ಸುತ್ತಲು ಹೋಗುತ್ತಾರೆ. ಹೋವಾಗ 'ಡಿಂಬಸಾಲೆ' ಎಂಬ ಸೊಲ್ಲನ್ನು ಹಾಕಿಕೊಂಡು ಹೋಗುತ್ತಾರೆ. ದೀಪವೊಂದನ್ನು ಅಂಗಳದ ಮದ್ಯೆ ಇಟ್ಟು ವೃತ್ತಾಕಾರದಲ್ಲಿ ಅದರ ಸುತ್ತ ನಿಲ್ಲುವರು. ಒಬ್ಬಾತ ಸೊಲ್ಲನ್ನು ಆರಂಬಿಸುತ್ತಾನೆ.

ಸಿದ್ದುಲಿಂಗ ಮುದ್ದು ಲುಂಗ ಸಿದ್ದವೇಸೋ
ನಾವ್ ಯಾವೂರು ಯಾವ ತಳ ಸಿದ್ದವೇಸೂ
ನಾವ್ ಕಾಶಿಯ ತಳದವರು ಸಿದ್ದವೇಸೂ ॥

ಎಂದು ಹಾಡುವಾಗ ಕುಣಿಯುವ ಗುಂಪು 'ಸಿದ್ದವೇಸೊ' ಎಂಬ ಸೊಲ್ಲನ್ನು ಪುನರಾವರ್‌ತಿಸುತ್ತ ವೃತ್ತಾಕಾರರಾಗಿ ಸುತ್ತಿ ಕುಣಿಯುತ್ತಾರೆ. *ಇಲ್ಲಿ ಕೂಡ ದಾಸಯ್ಯ ಮತ್ತೆ ಬ್ರಾಹ್ಮಣನನ್ನು ಸನ್ಯಾಸಿ ಲೇವಡಿ ಮಾಡುತ್ತಾನೆ. ಬ್ರಾಹ್ಮಣ ಮತ್ತೆ ದಾಸಯ್ಯನನ್ನು ಅಂಗಳ ಸುತ್ತ ಓಡಿಸುತ್ತಾನೆ. ಹೀಗೆ ಪುರುಸರು ಕೊಣ್‌ತ ಮತ್ತೆ ಸಿದ್ದವೇಶಗಳನ್ನು ಗಮನಿಸುವಾಗ ನಮಗೆ ಮೂಲ ಆಶಯ ಒಂದೇ ಕಂಡರೂ ಪ್ರದರ್‌ಶನದ ಸ್ವರೂಪದಲ್ಲಿ ಕೆಲವ್ ವೆತ್ಯಾಸಗಳು ಕಂಡುಬಂದವೆ. ಮುಕ್ಯವಾಗಿ 1. ಸಿದ್ದವೇಶದಲ್ಲಿ ನಿಗತ ಜೆನರು ಮಾತ್ರ ಬಾಗವಹಿಸಿದರೆ ಪುರುಸರ ಕೊಣ್‌ತದಲ್ಲಿ ಸಂಕೆಯ ಮಿತಿ ಇಲ್ಲ. ಹಾಗೂ ವೇಸಗಳಿಗೂ ಮಿತಿ ಇಲ್ಲ. 2. ಸಿದ್ದವೇಶದಲ್ಲಿ ಗೌಡರು ಮಾತ್ರ ಬಾಗವಹಿಸಿದರೆ ಪುರುಸರ ಕೊಣ್‌ತದಲ್ಲಿ ಪ್ರದಾನ ಪಾತ್ರಗಳಲ್ಲಿ ಮಾತ್ರ ಗೌಡರು ನಿರ್‌ವಹಿಸುತ್ತಾರೆ. ಉಳಿದಂತೆ ಇತರ ಜೆನಾಂಗದವರು ಸಮಾನಬಾಗಿಗಳು, 3. ಪುರುಸ ಕೊಣ್‌ತದಲ್ಲಿ ದೇವರ ಮೂರ್‌ತಿಯನ್ನು ಹೊರುವವ ಮತ್ತೆ ಉತ್ಸವ ಮೂರ್‌ತಿ ಇರುತ್ತದೆ. ಆದರೆ ಸಿದ್ದವೇಶದಲ್ಲಿ ಉತ್ಸವ ಮೂರ್‌ತಿ ಇಲ್ಲ. 4. ಪುರುಸರ ಕೊಣ್‌ತದಲ್ಲಿ ಊರಿಗೆ ಬಾವ ಮಾರಿಯನ್ನು ಕಳೆಯುವ ಉದ್ದೇಶವಿದೆ. ಸಿದ್ದವೇಶದಲ್ಲಿ ಈ ಅಂಶಗಳು ಕಂಡುಬಾವುದಿಲ್ಲ. 5. ಸುಳ್ಯ ತಾಲೂಕಿನಲ್ಲಿ ಪುರುಸರಿಗೆ ಸಮ್ಮಂದಿಸಿದಂತೆ ಪುರುಸ ಬೂತದ ಆರಾದನೆ ಇದೆ. ಬೆಳ್ತಂಗಡಿ ತಾಲೂಕಿನಲ್ಲಿ ಪುರುಸ ಬೂತದ ಆರಾದನೆ ಕಂಡುಬಾವುದಿಲ್ಲ. ಒಟ್ಟು, ಸಿದ್ದವೇಸ ಮತ್ತೆ ಪುರುಸರ ಕೊಣ್‌ತದಲ್ಲಿ ಬ್ರಾಹ್ಮಣ್ಯದ ನಿರಾಕರಣೆ ಇದೆ. ಇದು ಪುರೋಹಿತಶಾಹಿ ಪರಂಪರೆಯ ನಿರಾಕರಣೆಯೂ ಹೌದು. ಮೇಲುವರ್‌ಗದ ವಿಚಾರ ಪರಂಪರೆಗೆ ವಿರುದ್ದವಾಗಿ ವೈದಿಕೇತರ ಸಂಪ್ರದಾಯದ ಪಳೆಯುಳಿಕೆಗಳಾಗಿ ಇಂದು ಸಿದ್ದವೇಸ ಮತ್ತೆ ಪುರುಸರ ಕೊಣ್‌ತಗಳು ಉಳಿದುಕೊಂಡಿವೆ.

ಇಂದು ಸಿದ್ದವೇಶ ಮತ್ತೆ ಪುರುಸರ ಕೊಣ್‌ತಗಳ ಪ್ರದರ್‌ಶನ ಕಡಿಮೆಯಾಗುತ್ತಾ ಬಂದಿದೆ. ಆದುನಿಕ ಯಾಂತ್ರಿಕ ಜೀವನ ವಿದಾನದ ಪರಿಣಾಮದಿಂದ ಸಾಂಘಕವಾಗಿ ನಡೆಯುವ ಕೊಣ್‌ತಗಳಂತ ಕಲಾಪ್ರಕಾರಗಳು ಇಂದು ಕಡಿಮೆಯಾಗುವುದಕ್ಕೆ ಕಾರಣಗಳು ಇರಬಹುದು. ಆದರೆ ಗೌಡ ಜೆನಾಂಗ ತಮ್ಮದೇ ಆದ ಅನನ್ಯತೆಯನ್ನು ಉಳಿಸಿಕೊಳ್ಳಬೇಕಾದರೆ ಸಿದ್ದವೇಶ ಮತ್ತೆ ಪುರುಸರ ಕೊಣ್‌ತವನ್ನು ಉಳಿಸಿಬೆಳೆಸಬೇಕಾದ ಅನಿವಾರ್‌ಯತೆ ಇದೆ. (ವೈ.ಜಿ.)

**ಪುರುಸ ವೇಸ(ಸಿದ್ದವೇಸ) :** ಅರೆಬಾಸಿಕ ಸುಳ್ಯ ಪ್ರದೇಸಲಿ ಕೋಣಿವ ಸಿದ್ದವೇಸನ ಸಂವಾದಿ ನೆಲೆಲಿ ದ.ಕ. ಜಿಲ್ಲೆನ ಬೆಳ್ತಂಗಡಿ ಬಾಗದ ತುಳು ಮಾತಾಡುವ, ಬ್ರಾಹ್ಮಣರ ಬುಟ್ಟು ಗೌಡರು ಸೇರ್‌ಕಂಡಾಂಗೆ ಊರ್‌ನ ಎಲ್ಲಾ ಜಾತಿ ಸಮುದಾಯದವು ಸೇರಿಕಂಡ್ ನಡ್ಸುವೆ. ಇದರ ಪುರುಸೆರ್‌ಕಟ್ಟುನೆ ಅತವಾ ಪುರುಸೆರೆ ನಲ್ಕೆಂತ ತುಳುಲಿ ಹೇಳ್‌ವೆ. ಪ್ರತೀ ವರ್‌ಸಾವರ್‌ತಿಲಿ ಸುಗ್ಗಿ ಹುಣ್ಣಿಮೆನ ಸುರುನ ಮೂರು ದಿನಗಳ್‌ಲಿ ಈ ಕೊಣ್‌ತನ ಕೊಣ್ದವೆ. ಇದ್ ಪೊದ್ಯ ಕೊಣ್‌ತ ಸಹಿತ ಜೆನಪದ ಪ್ರದರ್‌ಶನ ಕಲೆ. 'ಸುಳ್ಯದಲ್ಲಿ ಈ ಕೊಣ್‌ತನ ಗೌಡ, ಮಲೆಕುಡಿಯ ಸಮುದಾಯದವು ಮಾತ್ರ ನಡ್ಸುವೆ'.

ಕೊಣ್‌ತನ ನಡ್ಸುವ ಊರ್‌ನ ಉತ್ಸಾಹಿಗ ಮಾತ್‌ಕತೆ ನಡ್ಸಿ, ಎಲ್ಲವುಕ್ಕೂ ಒಪ್ಪಿಗೆಯಾಗಿ ಒಬ್ಬರ ಮುಂದಾಳತ್ವಲಿ ಗೊತ್ತುಮಾಡ್ದಾ ದಿನದ ಹಿಂಬೊತ್ತು ಒಂದ್ ಬೊಯ್ಲ್‌ಲಿ ಇಲ್ಲರೆ ಯಜಮಾರ್ಣ ಮನೆಲಿ ಜೆನ ಸರ್‌ವೆ. ಕೊಣ್‌ತಕೆ ಬೇಕಾದ ಎಲ್ಲಾ ಸಿದ್ದತೆನ ಮಾಡಿಕಂಡವೆ.

ಅಡ್ಕೆ ಹಾಳೆ ಅಲ್ಲರೆ ಮೆದು ಮರದ ಹಲಗೆಂದ ಅರ್‌ದಗೋಳಾಕಾರಲಿ ಪ್ರಬಾವಳಿನ ಮಾಡಿ, ಅದರ ಕಡೆನ ಕೆಂಪು ಬಟ್ಟೆಂದ ಸುತ್ತಿ ದಂಡೆನ ಮಾಡಿ ಅದರ ಮಲ್ಲಿಗೆ ಪಿಂಗಾರಲಿ ಅಲಂಕಾರ ಮಾಡ್ವೆ. ನೊಡುಲಿ ಕನ್ನೆಟಿ ಒಂದರ ಜೋಡ್ಸುವೆ. ಒಟ್ಟು ಆಕಾರದಲಿ ಜಾತ್ರೆನ ದರ್‌ಶನ ಪಾತ್ರಿ ಹೊರುವ ಬಲಿ ಮೂರ್‌ತಿನ ಪ್ರಬಾವಳಿನ ಹಾಂಗೆ ಇದ್ದದೆ. ಇದ್ ಕೊಣೆವ್ಕೆ ದೇವರ ಮೂರ್‌ತಿನ ಸಂಕೇತ ಆಗಿದ್ದದೆ.

ಬಿಳಿ ಪಂಚೆನ ಕಚ್ಚೆ, ತಲೆಗೆ ಜುಟ್ಟು, ಹಣೆಗೆ, ಮೈಗೆ ಗಂದದ ನಾಮ, ಬಾಳೆನಾರ್‌ನ ಜೆನಿವಾರ ಹಾಕಿರುವ ಬ್ರಾಹ್ಮಣ ವೇಸದಾರಿ ಒಬ್ಬನ ಮಾಡ್‌ವೆ. ದೇವರ ಮೂರ್‌ತಿನ ಹೊರುವ ಕಾರ್ಯನ ಇಂವ ಮಾಡ್ದೆ. ಸಾಮಾನ್ಯ ಎಲ್ಲಾ ದೇವ್ರುಗೆ ರಕ್ಸಕ ಬಂಟ ದೆವ್ವ ಇರುವ ಹಾಂಗೆ ಕೊಡಮಂತಾಯಿ ಹೆಸರ್‌ನ ದೆವ್ವದ ಪ್ರತಿನಿದಿಯಾಗಿ ಬಿಳಿ ಬಟ್ಟೆಂದ ಕಚ್ಚೆ, ತಲೆಗೆ ಕೆಂಪು ಮುಂಡಾಸ್, ಕೈಲಿ ಚವಲ, ಮಣಿ ಕಡ್ತಲೆ ಹಿಂಗೆ ದೆವ್ವದ ಮಾಣಿನ ಪಾತ್ರನ ಉತ್ಸಾಹಿ ಹಿರಿಯರೊಬ್ಬ ಮಾಡ್ವೆ. ದಾಸಯ್ಯನ ಪಾತ್ರನೂ ಇದ್ದದೆ. ಹರ್‌ಸಯ(ಹರಿಸೇವೆ) ಮಾಡ್ದು ಇಂವನ ಮುಕ್ಯಕಾರ್‌ಯ. ಹಳೆ ಕೋಟು, ಗಂಟ್ಲ್‌ಗೆ ಉದ್ದನೆ ಕೆಂಪು ಶಾಲು ಕೈಲಿ ಶಂಕ ಜಾಗಟೆ ಇಂವನೊಟ್ಟಿಗೆ ಇರೊಕು ಈ ವೇಸನ ಕೂಟಲೊಬ್ಬ

ಹಾಕುವೆ. ಸಿದ್ದ/ ಪುರುಸರ ಕೊಣ್‌ತಲಿ ಪ್ರದಾನ ಪಾತ್ರ ಸನ್ಯಾಸಿದ್. ಸನ್ಯಾಸಿ ವೇಸ ಹಾಕುವಂವ ಅಂವನ ಮೈನ ಬಾಳೆ ಚಂಬೆಲ್‌ಲಿ (ಒಣ್ಗಿದ ಬಾಳೆಲೆ) ಇಡಿ ಮುಚ್ಚಿ ಕಟ್ಟೊಕು. ಅಡ್ಕೆ ಹಾಳೆನ ಶಂಕಾಕಾರಲಿ ಜೋಡ್ಸಿ ತಲೆಗೆ ಕರ್‌ನಕುತ್ತ ಮುಚ್ಚೊಕು. ಹಸಿ ಬಾಳೆಲೆನ/ ಕಾಯಿ ಚೊಪ್ಪುನ ಕತ್ತರ್‌ಸಿ ಕರಿ/ಬಿಳಿ ಬಣ್ಣಲಿ ಮೋರೆಗೆ ಗಡ್ಡದಾಂಗೆ ಕಟ್ಟಿರೊಕು. ಸೊಂಟದ ಬಾಗಕೆ ಉದ್ದಕ್ಕೆ ಹೊರೆಗೆ ಕಾಂಬಂಗೆ, ಕೋಲೊಂದರ ಕಟ್ಟುವೆ. ಇದ್ ನಿಗ್‌ರಿ ನಿತ್ತ ಶಿಶ್ನನ ಹೋಲುವಂತಿರೊಕು. ಬುಡ ಬಾಗ ಸೀಳಿರಕು, ನೆಲಕ್ಕೆ ಬೊಡಿಯಕನ ಶಬ್ದ ಬಾವಂತ ಬೆದ್‌ರ್‌ನ ದೊಣ್ಣೆ ಸನ್ಯಾಸಿ ವೇಸದ ಕೈಯಲ್ಲಿದ್ದದೆ.. ಪುರಸರ ಕೊಣ್‌ತಕೆ ಪುರುಸ ಮಕ್ಕ ತಲೆಗೆ ಕೆಂಪು ಬೈರಾಸ್ ಸುತ್ತಿ ಅದರ ಒಂದ್ ಕೊಡಿನ ಕೆಬಿ ಬಾಗಂದ ಇಳಿ ಬುಟ್ಟು, ದೊಗಲೆ ಅಂಗಿ ಹಾಕಂಡ್ ಕೈಯಲ್ಲಿ ತಾಳ ಹಿಡ್ಕಂಡ್ ಸಿದ್ದರಾದವೆ.


ಪುರುಸ/ಸಿದ್ದವೇಸ ದೆವ್ವ

ಪುರುಸರ ಕೊಣ್‌ತದ ಸಂದರ್ಬದಲಿ ಇಂತಿಸ್ಟೇ ಜೆನ ಬಾಗವಹಿಸೊಕುಂತೇಳಿ ನಿಯಮ ಏನಿಲ್ಲೆ.. ಜೆನ ಹೆಚ್ಚಿನ ಸಂಕೆಲಿದ್ದವೆ. ಮುಕ್ಯ ಕೊಣ್‌ತದವರ ಪ್ರತ್ಯೇಕಿಸಿಕೆ ಗುಂಪುನ ಬೇರೆ ಮಕ್ಕ, ಹುಡ್ಗರ್ ಎಲ್ಲಾ ಅಡ್ಕೆ ಹಾಳೆನ ಕತ್ತರ್‌ಸಿ, ಬೂತ ಸಂಪಗೆಂದ (ಗೋವುಸಂಪಗೆ) ಅಲಂಕಾರ ಮಾಡ್ದ ಕಿರೀಟನ ತಲೆಲಿ ಹಾಕಂಡವೆ. ಸಿದ್ದವೇಸಲಿ ಪ್ರದಾನ ಪಾತ್ರಗ ಆದ ಬ್ರಾಹ್ಮಣ, ದಾಸಯ, ಸನ್ಯಾಸಿಗ ಕೊಣ್‌ತಕ್ಕೆ ಪುರುಸ ಮಕ್ಕ ಇದ್ದರೆ ಸಾಕಾದೆ. ಪುರುಸರ ಕೊಣ್‌ತಲಿ ಹೆಚ್ಚುವರಿ ಪಾತ್ರಗ ಇದ್ದವೆ. ಮದಿಮಾಳ್ ವೇಸ, ಮೀನು ಮಾರುವ ಮರಕಾಲ ವೇಸ, ಹೀಗೆ ಜಾತಿ ಕಸುಬುನ ಹೊಂದ್ಸಿ ಹಾಂಗೆ ಕರಡಿ, ಕುರೆ(ಮಂಗ) ಹುಲಿ, ಬಸವ ಹಿಂಗೆ ಪ್ರಾಣಿಗಳನು ಅನುಕರಣೆ ಮಾಡ್ವ ಪಾರ್ಟ್‌ಗ (ಪಾತ್ರ) ಸಾ ಇದ್ದವೆ. ಪುರುಸರ ಕೊಣ್‌ತದ ಪಾತ್ರಗ ಹಾಸ್ಯ ವಿಡಂಬನೆ, ಅಣಕಕ್ಕಾಗಿತೇಳಿದೆ ಸಿದ್ದ ಆದಂತದ್. ಇದ್ ಪುರುಸರಕೊಣ್‌ತದ ವಿಸೇಸ. ಸಿದ್ದವೇಸಲಿ ಈ ಪಾತ್ರಗ ಎಲ್ಲ ಇರ್‌ದುಲ್ಲೆ.

**ಪ್ರದರ್‌ಶನ :** ಕೊಣ್‌ತಕೆ ಹೊರ್‌ಡಿಕನ ಮನೆ/ಬೊಯ್ಲ್‌ಲಿ ದೇವರ ಪ್ರಾರ್‌ತಿಸುವೆ. ಕೊಣ್‌ತಲಿ ಪ್ರದರ್‌ಶಿಸುವ ಹಾಸ್ಯನೋ ವಿಡಂಬನನೋ ಅದರ ಬುಟ್ಟುಹಿಡ್ದು(ಮನ್ನ್‌ಸಿ) ರಾತ್ರೆ ತಿರ್‌ಗಾಟಕೆ ಅಡ್ಡಿ ಆತಂಕಗ ಬಾರದ ಹಾಂಗೆ ರಕ್ಸಿಸಿಕೊಡೊಕುಂತೇಳಿ ಬೇಡಿಕಂಡವೆ. ಪುರುಸರ ಪೂಜೆ ಮುಂದೆ ನೆರವೇರ್‌ಸುವೆತೇಳಿ ಹರ್‌ಕೆ ಹೊತ್ತವೆ. ಸನ್ಯಾಸಿನ ನಡುಲಿಸಿಕಂಡ್ ಊರ್‌ನ ಮನೆಗಳಿಗೆ ಹೊರ್ಟವೆ ದಾರಿಲಿ ಹೋಕನ 'ಡಿಂಬಿಸಾಲೆ' ತೇಳಿ ಕರ್‌ದ್ ಹೇಳಿಕಂಡ್ ಹೋದವೆ. ಮನೆ ಹಕ್ಕಲೆ ಬಾಕನ ಸನ್ಯಾಸಿ ಅಂಡ್ಗಿದೆ. ವೇಸದೊವು ಮನೆ ಇಜ್ಜಲ್ ನಡೂಲಿ ಹರಿವಾಣದೊಟ್ಟಿಗೆ ದೀಪನ ಹೊತ್ತುಸಿಸುವೆ. ದೀಪದ ಸುತ್ತಕೆ ವೃತ್ತಾಕಾರಲಿ ಕೊಣ್‌ತದ ಮಕ್ಕ ನಿತ್‌ಕಂಡವೆ. ಗುಂಪಿನಲ್ಲೊಬ್ಬ ಪುರುಸರ ಪೊದ್ಯ ಹೇಳ್ದೆ.

ಸಿದ್ದುಲಿಂಗ ಮುದ್ದುಲಿಂಗ। ಪುರುಸವೇಸ॥
ನಾವ್ ಯಾವೂರು ಯಾವತಳ। ಪುರುಸವೇಸ॥
ನಾವ್ ಕಾಶಿಯ ತಳದವ್ರು । ಪುರುಸವೇಸ॥

ಒಬ್ಬ ಹಿಂಗೆ ಹೇಳಿಕಂಡಿರಿಕನ ಕೊಣಿವ ಪುರುಸ ಮಕ್ಕಳ ಗುಂಪು 'ಪುರುಸವೇಸ' ಸೊಲ್ಲುನ ಮಾತ್ರ ಹೇಳಿಕಂಡ್ ಕೊಣ್ದವೆ. ಪೊದ್ಯ ಮುಗಿಯಕನ ವೃತ್ತಾಕಾರಲಿ ಕೊಣ್‌ತ ಮಾಡ್‌ವ ಗುಂಪು ಕರೆಗೆ ಸರ್‌ದವೆ. ದೇವರ ಮೂರ್‌ತಿ ಹೊತ್ತ ಬ್ರಾಹ್ಮಣ ದರ್‌ಸನ ಬಂದವರ ಹಾಂಗೆ ಅಬಿನಯ್ಸಿಕಂಡ್ ಇಜ್ಜಲ್‌ಲಿ ಮೂರು ಸುತ್ತು / ಐದು ಸುತ್ತು ಮಾಡಿ ಹರಿವಾಣ ಇಸಿದಲ್ಲಿ ದೇವರ ಮೂರ್‌ತಿನ ಕೆಳಗೆ ಇಸಿದೆ. ಪೂಜೆ ಸುರು ಮಾಡ್ದೆ. ಮಂತ್ರಗ ಅಶ್ಲೀಲ ಅಸಂಬದ್ದ, ವಿಡಂಬನಾತ್ಮಕವಾಗಿದ್ದದೆ. ಇನ್ನೊಂದ್ ಕಡೆಲಿ ದಾಸಯ್ಯ ಶಂಕ ಉರ್‌ಗಿ ಜಾಗಟೆ ಬಾರಿಸಿ ಹರ್‌ಸಯಲಿ ಇರಿಕಾನ. ದೆವ್ವದ ಮಾಣಿ ನುಡಿಕಟ್ಟ್ ಹೇಳಿಕಂಡ್ ದರ್‌ಸನಲಿ ಕುಣ್ದದೆ. ಈ ಸನ್ನಿವೇಶಕ್ಕಾಗಿ ಮರೆಲಿ ಅಂಡ್ಗಿ ಕಾದ್‌ಕಂಡಿದ್ದ ಸನ್ಯಾಸಿ ಒಮ್ಮೆಂದೊಮ್ಮೆಗೆ ನೊಡುಗೆ ಹಾರ್‍ದೆ. ಬ್ರಾಹ್ಮಣ, ದಾಸಯ್ಯ, ದೆವ್ವದ ಮಾನಿಗಳ ಇಂವ ಉದ್ದದ ಶಿಶ್ನದಿಂದ ಸ್ಪರ್‌ಶಿಸಿ ಅಸುದ್ದ (ಮೈಲಿಗೆ) ಮಾಡ್ದೆ. ಬ್ರಾಹ್ಮಣನ ಮಂತ್ರನ, ದೆವ್ವದ ನುಡಿಕಟ್ಟ್‌ಗಳ ಅಂವನ ಬಾಯಿ ಶಬ್ದಂದ ಅಣ್ಕ್‌ಸಿ ಇಜ್ಜಲ್ ಪೂರ ಕುಂಟಿಕಂಡ್ ಸುತ್ತ್ ಹಾಕಿದೆ. ಅಸುದ್ದೊ ಆತ್‌ತ ಹೇಳಿಕಂಡ್ ಬ್ರಾಹ್ಮಣ, ದಾಸಯ್ಯ ಪಾತ್ರದಾರಿಗ ಕರೆಗೆ ನಡ್ದ್ ಹೋದವೆ. ಕಾಲಿ ಇಜ್ಜಲ್‌ನ ನೊಡುಬಾಗಲಿ ಕೂಕುಳು ಹಾಕ್ಕಂಡ್ ಸನ್ಯಾಸಿ ನಡ್ದಾಡ್ದೆ. ಬಿಕ್ಸೆ ಬೇಡುವ ಹಾಂಗೆ ನಟನೆ ಮಾಡ್ದೆ. ಕಡೆಲಿ 'ನೀರ ಬರಿಕ್ ಪೋವೊಡು ಕುನ್ನೆ ಪೂಜೆ ಮಲ್ಪೊಡು'/ನೀರ್ ಹಕ್ಕಲೆ ಹೋಕು, ತುಣ್ಣೆ ಪೂಜೆ ಮಾಡೊಕು) ತ ಹೇಳಿಕಂಡ್ ತುಣ್ಣೆ ಆಡ್ಸಿ ತೊರ್‌ಸಿಕಂಡ್ ಮರೆಯಾದೆ.. ಮತ್ತೆ ಬ್ರಾಹ್ಮಣ, ದಾಸಯ್ಯ ದೆವ್ವದ ಮಾನಿ ಪಾತ್ರದಾರಿಗ ಇಜ್ಜಲ್‌ನ ನೊಡುಗೆ ಬಂದ್ ಅರ್‌ದಲಿ ಒಳ್ದಿದ್ದ ಪೂಜೆನ ಮುಗ್ಸಿಕಂಡವೆ. ಇಸ್ಟ್ ಈ ಕೊಣ್‌ತದ ಮುಕ್ಯ ಪ್ರದರ್‌ಶನ ಸಂಗತಿಗ.




ಪುರುಸರ ಕೊಣ್‌ತದ ಮನೋರಂಜೆನೆ, ದನ ಸಂಗ್ರಹ ಮಾಡ್‌ವ ಹಿನ್ನೆಲೆನ ಇತರೆ ಮೊದುಮಗಳ ವೇಸ, ಮಾಯ್ಸಮಿಡಿ ಮರ್‍ವ ಸಾಯ್ಬ, ಪುರ್ಬುವೇಸ(ಕ್ರೈಸ್ತ ವ್ಯಕ್ತಿ)ಕರಡಿ, ಬಸವ, ಮಂಗ, ಹುಲಿ ವೇಸಗ ಬಂದ್ ಕುಣ್ದವೆ. ಪ್ರತ್ಯೇಕವಾಗಿ ದುಡ್ಡು, ಕಾಯಿನ ತಕಂಡ್ ಹೋದವೆ.

ಪುರುಸ ಮಕ್ಕ ಮನೆ ಬಾಗ್‌ಲಿಗೆ ಬಂದಾಕನ ಬರಿ ಕೈಲಿ ಕಳ್ಸಿಕ್ಕಾಗದ್‌ತ ನಂಬಿಕೆ ಇರ್‌ದರ್‌ಂದ ಮನೆವು ಪುರುಸ ಮಕ್ಕಳ ಕೈ ತುಂಬುಸಿ ಕಳ್ಸಿಕೊಟ್ಟವೆ. ರಾತ್ರಿ ಇಡೀ ಊರುನ ಮನೆಮನೆಗೆ ಹೋಗಿ ಮೂರು ದಿನಗಳ್‌ಲಿ ದುಡ್ಡು ಕೂಡ್ಸುವೆ. ಸೂರ್ಯೋದಯದ ಮುಂದೆ ವೇಸಗಳ ಬಿಚ್ಚಿ ಬುಟ್ಟವೆ ಮತ್ತೆ ಹಿಂಬೊತು ನಿಗದಿಯಾದ ಬೊಯ್ಲ್‌ಲಿ ಅತವಾ ಮನೆಲಿ ತಿರ್‌ಗಾಟಕೆ ತಯಾರಿ ನಡ್ಸುವೆ.

**ಪುರುಸ ಪೂಜೆ :** ದೇವರ ಹೆಸರು ಹೇಳಿ ಬಂದವ್ರು ನಾವ್" ಕೊಣ್‌ತದ ಈ ಪೊದ್ಯದ ಸೊಲ್ಲುನಾಂಗೆ ಪುರುಸರ ಪೂಜೆ ನಡ್ದದೆ. ಈ ಕೊಣ್‌ತಲಿ ದೇವರ ಲೇವಡಿ ಮಾಡ್‌ವ ಪ್ರಸಂಗ ಇದ್ದದೆ ಹಂಗಾಗಿ ಈ ಕೊಣ್‌ತಲಿ ಕೂಡ್ದು 'ಸೂತಕ' ತ ಬಾವನೆ ಉಟ್ಟು. ಕೊಣ್‌ತದ ಸುರುಲಿ ದೇವ್ರೊಟಿಗೆ ಪ್ರಾರ್‌ತಿಸಿ ಹರ್‌ಕೆ ಮಾಡಿಕಂಡ ಪ್ರಕಾರನೇ ಪುರುಸರ ಪೂಜೆ ನಡ್ಸುವೆ. ಪೂಜೆನ ದಿನ ಮಂಗಳೂರಿನ ಕದ್ರಿ ದೇಸ್ತಾನಕ್ಕೆ ಹರ್‌ಕೆ ಒಪ್ಪುಸಿ ತೀರ್‌ತ ತಂದವೆ.

ಪುರುಸರ ಪೂಜೆ ಊರುನ ದೊಡ್ಡ ಬೊಯ್ಲ್‌ಲಿ /ನೀರ್ ಕರೆಲಿ ನಡ್ಸುದು ಪೊದ್ದತಿ. ತಂದ ಎಲ್ಲಾ ಅವ್ಲೆಕಿ ಬೆಲ್ಲ ಕಾಯಿನ ಪಾಕ ಮಾಡಿ 'ರಾಶಿ' ಹಾಕಿ ಬಳ್ಸುವೆ. ಕೋಳಿನೊ ಹಂದಿನೋ ಕಡ್ದ್ ಅಡ್ಗೆ ಮಾಡಿ ಎಡೆ ಬಡ್ಸುವೆ. ಕೊಣ್‌ತ ಮಾಡ್ದವೆಲ್ಲವುನೂ ಈ ದಿನಲಿ ವೇಸ ಹಾಕಿ ಕುಣಿಯೋಕೆ. ಅಕೇರಿಗೆ ಎಲ್ಲವು ಒಟ್ಟಾಗಿ ದೇವರ್‌ಲಿ ಪ್ರಾರ್‌ತಿಸಿಕಂಡವೆ.

ಆಶಯದ ದ್ರಿಸ್ಟಿಯಿಂದ ಸಿದ್ದ/ಪುರುಸ ವೇಸ ಸಮುದಾಯಕೆ ಮನೋರಂಜೆನೆನ ನಿಡುವಾಂಗೆ, ಊರುನ ಮಾರಿ ಕಳೆವ ಉದ್ದೇಶನ ಹೊಂದಿಕಂಡಂಗೆ ಕಂಡದೆ. ಆದರೆ ಪುರುಸ/ಸಿದ್ದವೇಸಕ್ಕೆ ಇದ್ಕಿಂತ ಬಿನ್ನ ಉದ್ದೇಶ ಇರ್‌ದರ ವಿದ್ವಾಂಸರ್‌ಗ ಕಂಡ್‌ಕಂಡೊಳೊ. ಸಿದ್ದವೇಶದಲಿ ದಾಸಯ್ಯ ಮತ್ತೆ ಬ್ರಾಹ್ಮಣ್ಯದ ನಿರಾಕರಣೆ ಉಟ್ಟು. ಇದ್ ವೈಸ್ನವ ಮತ್ತೆ ಪುರೋಹಿತ ಶಾಹಿ ಪರಂಪರೆ ನಿರಾಕರಣೆನೂ ಹೌದು. ಉಚ್ಚವರ್‌ಗದ ಪಾಂಡಿತ್ಯ ಪೂರ್ಣ ವಿಚಾರ ಪರಂಪರೆಗೆ ವಿರುದ್ದ ಆಗಿ ವಿಜೃಂಬಿಸಿದ ವೈದಿಕೇತರ ಸಂಪ್ರದಾಯದ ಪಳೆಯುಳಿಕೆ ಆಗಿದ್ ಒಳ್ದುಟು'. ನಾತ ಸಿದ್ದ ಪರಂಪರೆನ ಸಾಂಕೇತಿಕ ನೆಲೆಲಿ ಇಲ್ಲಿನ ಸನ್ಯಾಸಿ ಕಂಡದೆ. ಇಂದೂ ಜೆನಪದರ್‌ಲಿ ಚಾಲ್ತಿಲಿ ಇರ್‌ವ ಸಿದ್ದವೇಸ / ಪುರುಸ ಕೊಣ್‌ತ ಮದ್ಯಕಾಲೀನ ಶೈವ ಅವೈದಿಕ ರಹಸ್ಯ ತಾಂತ್ರಿಕ ಪಂತವೊಂದ್ ವೈಸ್ಣವ ವೈದಿಕ ಪರಂಪರೆಗೆ ತೋರ್‍ಸಿದ ಪ್ರತಿಬಟನೆನೂ ವ್ಯಕ್ತ ಮಾಡ್ದೆ. (ಪಿ.ಕೆ.)

**ಪುರುಷೋತ್ತಮ ಬಿಳಿಮಲೆ :** ಬಿಳಿಮಲೆಯವು ಶೇಷಪ್ಪ ಗೌಡ ಮತ್ತೆ ಗೌರಮ್ಮ ದಂಪತಿಗಳಿಗೆ ಮೂರನೇ ಗಂಡ್ ಮಜ್ಜನಾಗಿ ಅಗೋಸ್ಟು 21, 1955 ರಂದ್ ಹುಟ್ಟಿದೊ. ಇವರ ಹಿರಿಯಣ್ಣ ಪದ್ಮನಾಭ ಮತ್ತೆ ಕಿರಿಯ ಅಣ್ಣ ಪರಮೇಶ್ವರ. ತಂಗೆನ ಹೆಸ್ರ್ ಗುಲಾಬಿ. ದಕ್ಷಿಣ ಕನ್ನಡ ಜಿಲ್ಲೆನ ಸುಳ್ಯ ತಾಲೂಕ್‌ನ ಪಂಜದ ಹಕ್ಕಲೆನ ಕೂತ್ಕುಂಜದ ಬಿಳಿಮಲೆಯವು. ಈಗ ದೆಹಲಿನ ವಸಂತಕುಂಜಲಿ ನೆಲ್ಸಿಯೊಳೊ. ಇವು ಹುಟ್ಟಿದ್ ಗುತ್ತಿಗಾರ್‌ನ ಹಕ್ಕಲೆ ಕಮಿಲದ ತುಪ್ಪದ ಮನೆ ತೇಳುವಲ್ಲಿ. ಬಾಲ್ಯದ ಶಿಕ್ಷಣ ಕೂತ್ಕುಂಜ, ಗುತ್ತಿಗಾರು, ಪಂಜ ಮತ್ತೆ ಸುಬ್ರಹ್ಮಣ್ಯಲಿ ಆತ್. ಉನ್ನತ ಶಿಕ್ಷಣ ಪುತ್ತೂರು, ಮತ್ತೆ ಮದ್ರಾಸ್‌ಲಿ ಆತ್. ಇವರ ವೃತ್ತಿ ಜೀವನ ಸುಳ್ಯದ ನೆಹರೂ ಮೆಮೋರಿಯಲ್ ಕಾಲೇಜಿಲಿ 1979ರಲ್ಲಿ ಸುರು ಆತ್. ಮತ್ತೆ ಮಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗ, ಹಂಪಿನ ಕನ್ನಡ ವಿಶ್ವವಿದ್ಯಾನಿಲಯ, ದೆಹಲಿಯ ಅಮೇರಿಕನ್ ಇನ್ಸಿಟ್ಯೂಟ್ ಆಫ್ ಇಂಡಿಯನ್ ಸ್ಟಡೀಸ್‌ಲಿ ಮುಂದುವರ್‌ದ್, 2020ರ್‌ಲಿ ಜವಾಹರಲಾಲ್ ನೆಹರೂ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಪೀಠದ ಪ್ರಾಧ್ಯಾಪಕರಾಗಿದ್ದೊ. 1979ರ್‌ಲಿ ಮಂಗಳೂರು ವಿಶ್ವವಿದ್ಯಾನಿಲಯದ ಕನ್ನಡ ವಿಭಾಗಲಿ ಅಧ್ಯಾಪನ ವೃತ್ತಿನ ಸುರು ಮಾಡ್ದೊ. ಮಾರ್ಚ್ 1985ರ್‌ಲಿ ಬಿ. ಎ. ವಿವೇಕ ರೈ ಮಾರ್ಗದರ್ಶನಲಿ 'ಸುಳ್ಯ ಪರಿಸರದ ಗೌಡರು–ಒಂದು ಸಾಂಸ್ಕೃತಿಕ ಅಧ್ಯಯನ' ವಿಸಯಲಿ ಪಿಎಚ್.ಡಿ. ಅದ್ಯಯನ ಮಾಡ್ದೊ.



ಸಾಹಿತ್ಯ ಸಂಘ, ಅಭಿನಯ ನಾಟಕ ತಂಡ, ಸ್ವಂತಿಕಾ ಸಾಹಿತ್ಯ ಪ್ರಕಾಶನದಂತ ಸಂಸ್ಥೆಗಳ್‌ನ ಹುಟ್ಟು ಹಾಕುವಲ್ಲಿ ಅವು ಶ್ರಮಿಸಿಯೊಳೊ. ಮಂಗಳೂರ್‌ಲಿ ಕನ್ನಡ ವಿಭಾಗದ ಬೆಳವಣಿಗೆಗೆ ಶ್ರಮಿಸಿದವು. 20ನೇ ಶತಮಾನದ 70–80ರ ದಶಕಗಳ್‌ಲಿ ಸಾಮಾನ್ಯವಾಗಿದ್ದ ದಲಿತ – ಬಂಡಾಯ ಸಂಘಟನೆಲಿ ಸಕ್ರಿಯರಾಗಿದ್ದವು. ಸರ್ಕಾರ ದಕ್ಷಿಣ ಕನ್ನಡ ಜಿಲ್ಲೆಲಿ ಅನುಷ್ಠಾನಕ್ಕೆ ತಂದಿದ್ದ ಸಾಕ್ಷರತಾ ಆಂದೋಲನಲಿ ತೊಡಗಿಸಿಕೊಂಡಿದ್ದವು. ಯಕ್ಷಗಾನ ಕಲೆಯ ಏಳಿಗೆಗಾಗಿ ತೊಡಗಿಸಿ ಕೊಂಡಿದ್ದವು.

ಪ್ರಕಟಿತ ಕೃತಿಗ ಮೆಕೆಂಜಿಯ ಕೈಫಿಯತ್ತುಗಳು 1985, ಲಿಂಗರಾಜನ ಹುಕುಂ ನಾಮೆ 1986, ಕಂಬುಲ 1987, ದಲಿತ ಜಗತ್ತು 1988, ಬಂಡಾಯ–ದಲಿತ ಸಾಹಿತ್ಯ 1989, ಕರಾವಳಿ ಜಾನಪದ 1990,

ಶಿಷ್ಟ–ಪರಿಶಿಷ್ಟ 1992, ಕೊರಗರು 1993, ಜಾನಪದ ಕ್ಷೇತ್ರ ಕಾರ್ಯ 1993, ಕೋಮುವಾದ ಮತ್ತು ಜನಸಂಸ್ಕೃತಿ 1993, ಹಂಪಿ ಜಾನಪದ 1996, ಕೂಡು ಕಟ್ಟು 1997, ಹುಲಿಗೆಮ್ಮ 1999, ಕುಮಾರ ರಾಮ 1999, ಜನ ಸಂಸ್ಕೃತಿ 2008, Kagura, Bhuta and Yakshagana 2009, ಬಹುರೂಪ 2013, ಮೆಲುದನಿ 2014, ಕನ್ನಡ ಕಥನಗಳು 2019, ವಲಸೆ, ಸಂಘರ್ಷ ಮತ್ತು ಸಮನ್ವಯ 2019, ಕಾಗೆ ಮುಟ್ಟಿದ ನೀರು –ಚದುರಿ ಬಿದ್ದ ಆತ್ಮದ ತುಣುಕುಗಳು 2020, ಅಮರ ಸುಳ್ಯದ ರೈತ ಹೋರಾಟ (1834–1837) 2021,

ಸಂಪಾದಿತ ಪುಸ್ತಕಗ ಕನ್ನಡ ಭಾಷಾ ಪಠ್ಯ ಪುಸ್ತಕಗಳು 1985, ಲೋಹಿಯಾವಾದ: ಕೆಲವು ಟಿಪ್ಪಣಿಗಳು 1986, ದೇವರು, ದೆವ್ವ, ವಿಜ್ಞಾನ (ಮೂಲ: ಅಬ್ರಾಹಂ ಕೊವೂರು) 1988, ಆರು ಯಕ್ಷಗಾನ ಪ್ರಸಂಗಗಳು 1989, ಜಾನಪದ ಗಂಗೋತ್ರಿ 1989, ಅಕ್ಷರ ವಿಮೋಚನೆ 1990, ಪ್ರಬಂಧ ಸಾಹಿತ್ಯ 1990, ವಿಚಾರ ಸಾಹಿತ್ಯ 1992, Perspectives on Dakshina Kannada and Kodagu (with Dr. CN Ramachandran and others) 1992, ಸಿರಿ(ಅಮೃತ ಸೋಮೇಶ್ವರ ಅಭಿನಂದನ ಸಂಪುಟ, ಎ. ವಿ ನಾವುಡ ಮತ್ತು ರಾಮಚಂದ್ರ ಉಚ್ಚಿಲ ಇವರ ಸಹಭಾಗಿತ್ವದಲ್ಲಿ) 1995, STQ special issue on Yakshagana (With Dr. Shubha Chaudhuri) 2000, ರಾಜಧಾನಿಯಲ್ಲಿ ಕರ್ನಾಟಕ 2006, ಬೆಳ್ಳಿ ಚುಕ್ಕೆ 2008, ಕಡಲ ತಡಿಯ ತಲ್ಲಣ 2009, The way of the King of the Poets (Kavirajamarga) 2017, The Rain Boy (Tulu folktales) 2018, The duel of Maces (Sahasa Bhima Vijayam of Ranna) 2018, Amirbai Karnataki 2018, Golden Days of a colourful life (Biography of Enagi Ballapa) 2018, Beyond life: (Novel by Dr. Shivarama Karnth) 2019, Veneration to the Elders (Vaddaradhane of Sivakotyacharya 2020.

ಗುಂಡ್ಮಿ ಚಂದ್ರಶೇಖರ ಐತಾಳ ಪ್ರಶಸ್ತಿ, ಮಂಗಳೂರು 1992, ಬಿ ಎಚ್ ಶ್ರೀಧರ ಪ್ರಶಸ್ತಿ, ಶಿರಸಿ 1993, ಮಲ್ಲಿಕಾರ್ಜುನ ಮನ್ಸೂರ್ ಪ್ರಶಸ್ತಿ, ರಾಯಚೂರು 1994, ಆರ್ಯಭಟ ಪ್ರಶಸ್ತಿ, ಬೆಂಗಳೂರು 1994, ಸಾರಂಗಮಠ ಪ್ರಶಸ್ತಿ, ಕೊಪ್ಪಳ 1998, ಕು ಶಿ ಹರಿದಾಸ ಭಟ್ಟ ಪ್ರಶಸ್ತಿ, ಉಡುಪಿ 1998, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ, ಬೆಂಗಳೂರು 2006, ಡಾ. ಸುನೀತಾ ಶೆಟ್ಟಿ ಪ್ರಶಸ್ತಿ, ಮುಂಬಯಿ 2010, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಬೆಂಗಳೂರು 2011, ಎಂ ಪಿ ಪ್ರಕಾಶ್ ಪ್ರಶಸ್ತಿ, ಬೆಂಗಳೂರು 2014, ಅಕ್ಷರ ಸಿರಿ ಪ್ರಶಸ್ತಿ, ಬಂಟ್ವಾಳ 2014, ಯಕ್ಷರಂಗ ಪ್ರಶಸ್ತಿ, ಉಡುಪಿ 2017, ಕರ್ನಾಟಕ ಅರೆಭಾಷಾ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ, 2017, ಕರ್ನಾಟಕ ಸಾಹಿತ್ಯ ಅಕಾಡೆಮಿ ಸಾಹಿತ್ಯ ಶ್ರೀ ಪ್ರಶಸ್ತಿ, 2018, ಡಾ. ಸರೋಜಿನಿ ಮಹಿಷಿ ಪ್ರಶಸ್ತಿ, ನವದೆಹಲಿ 2021, ಕಾಗೆ ಮುಟ್ಟಿದ ನೀರು ಪುಸ್ತಕಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ದತ್ತಿ ಪ್ರಶಸ್ತಿ 2022 ಹೀಂಗೆ ಹಲವ್ ಪ್ರಶಸ್ತಿಗ ಬಂದುಟ್ಟು.

**ಪೂಕಳೆ (ಪೂಕರೆ) :** ಕರಾವಳಿ ಜಿಲ್ಲೆಗ ಆದ ಕಾಸರಗೋಡು, ದಕ್ಷಿಣಕನ್ನಡ ಮತ್ತೆ ಉಡುಪಿ ಬೌಗೋಳಿಕ ವ್ಯಾಪ್ತಿಲಿ ಬತ್ತ ಬೇಸಾಯನ ಹೊಂದ್‌ಸಿ ನಡ್ಸುವ ಆಚರಣಾ ವಿದಿ ಪೂಕಳೆ. ಗದ್ದೆಗ ವಿಸ್ತಾರಲಿ ಸುಮಾರು ಏಳೂವರೆ ಎಕರೆನಸ್ಟು ಉದ್ದಗಲಕೆ ಇರ್‌ದುಟ್ಟು. ಕೆಲವೊಂದು ದೆವ್ವಗಳ ದೊಡ್ಡ ಗದ್ದೆಗೆ ಮಾತ್ರ ಪೂಕಳೆ(ಪೂಕರೆ) ಕ್ರಮನ ನಡ್ಸುದು ಪೊದ್ದತಿ ಪೂಕರೆ ಗದ್ದೆನ 'ದೆವ್ವದಗದ್ದೆ' (ಕನ್ನಡ : ದೆವ್ವದಗದ್ದೆ) 'ಕಂಬಳ ಗದ್ದೆತ ಕರೆವ ರೂಡಿ ಉಟ್ಟು. ಆ ಗದ್ದೆಗೆ ಮಾಡ್ವ ಕ್ರಮ ಕಟ್ಟ್‌ಪಾಡ್‌ಗ ನೆಲೆನ ಹೇಳ್ದೆ. ಈ ಗದ್ದೆಂದ ಬಾವ ಆದಾಯಂದ ಆ ದೆವ್ವದ ಆರಾದನೆನ ಕರ್‌ಚಿಗೆ ಸಂದಾಯ ಆಕು. ಈ ಗದ್ದೆ ದೆವ್ವದ ಗದ್ದೆ ಆದ್ದರ್‌ಂದ ಮುಟ್ಟಾದ, ಗರ್ಬಿಣಿ ಹೆಣ್ಮಕ ಸೂತಕಲಿರವು ಈ ಗದ್ದೆನ ಪುಣಿಗೂ ಇಳಿಯಕ್ಕಾಗದ್. ಮೊದ್‌ವೆ ಆಗಿ ಮಕ್ಕ ಆಗದವು ಈ ಗದ್ದೆಲಿ ಬಲಿ ಬಂದ್ ಸುತ್ತ ಅಕ್ಕಿನ ಇಟ್ಟರೆ ಸಂತಾನ ಪ್ರಾಪ್ತಿಯಾದೆತ ನಂಬಿಕೆ ಉಟ್ಟು. ಜೆನಗಳಿಗೆ ಸೌಕ್ಯಮೆನಿ ಇಲ್ಲರೆ ಈ ಗದ್ದೆಲಿ ಹೂಡಿಕೆ ಇಳಿಸುವೆತ ಹರ್‌ಕೆ ಹೊರ್‌ದುಟ್ಟು. ಪೂಕಳೆ ಗದ್ದೆನ ಈ ಬಗೆಲಿ ಜೆನ ನಂಬಿನಡ್ಡವೆ.

ಪೂಕಳೆ ಆಚರಣೆ ತರವಾಡ್ ಮನೆನ ಯಜಮಾನನ ಮೇಲುಸ್ತುವಾರಿಲಿ ನಡ್ದದೆ. ದಾರ್ಮಿಕ ನೆಲೆಂದಾಗಿ ಎಲ್ಲವು ಕೂಡ್ಯಾಡ್ದಕೆ ಮಹತ್ವ ಉಟ್ಟು. ಪೂಕರೆ ಹಾಕುವ ದಿನ ನಿಗದಿ ಮಾಡ್ದರ 'ಕೊದಿ' ನೋಡ್ದು ತೇಳುವೆ. ಬಿತ್ತನೆ ಮಾಡ್ದಕ್ಕೆ ಗದ್ದೆನ ಕಡೇ ಸರ್‌ತಿ ಹೂಟೆ ಮಾಡಿದ್ ಹಲೆಗೆ ಹಾಕಿ ಸಮತಟ್ಟ್ ಮಾಡ್‌ವ ದಿನ ಆದ್ದರ್‌ಂದ 'ಗದ್ದೆ ಗೋರಿ'ತೇಳುವೆ, ಪೂಕರೆ ಆಚರಣೆನ ಗೌಜಿಲಿ 'ಕೋಳಿ ಕಟ್ಟ' ನಡಿದರ್‌ಂದ 'ಕಟ್ಟದ ಕೋಳಿ' ಕೋಣಗಳ ಓಡ್ಸುವ ಆಟನೂ ನಡ್ಸುದರ್‌ಂದ 'ಕಂಬಳ ದಿನ'ತ ಈ ದಿನನ ಕರ್‌ದವೆ. ಈ ದಿನ ಪೂಕರೆ ಹಾಕುದೇ ಪ್ರದಾನ ಆಚರಣೆ ಆದ್ದರ್‌ಂದ 'ಪೂಕರೆ ದಿನ' ತ ಕರೆದು ವಾಡಿಕೆ. ಪೂಕರೆಲಿ ಮೊದ್‌ವೆಗೆ ಸಮ್ಮಂದಪಟ್ಟ ಆಚರಣೆಗ ಸಾ ಇರ್‌ದರ್‌ಂದ 'ಗದ್ದೆನ ಮೊದ್ವೆಂತನೂ ಈ ಆಚರಣೆನ ಕರ್‌ದವೆ.

**ತಯ್ಯಾರ್ :** ಪುಣಿಗೆ ಜೇಡಿ ಮೊಣ್ಣಿನ ಮೆತ್ತುವೆ. ಪುಣಿನ ಮೂಲೆಗಳ್‌ಲಿ, ನೊಡುಲಿ, ತ್ರಿಸೂಲಾಕಾರಲಿ ನಾಗನ ಚಿತ್ರ ಬರ್‌ದವೆ. ಈ ಕಾರ್ಯನ ಕಟ್ಟಳೆನ ಅಜಲರ ಮುಕ್ಯಸ್ತ 'ಕಾಪಡ' ಮಾಡ್ದೆ. ಗದ್ದೆಗೋರಿನ ಹಿಂದೆನ ದಿನ ಗುತ್ತುಮನೆನ ಅಲ್ಲೊ ಊರ ದೆವ್ವದ ಚಾವಡಿಂದ ದೆವ್ವದ ಬಂಡಾರ ಬಂದದೆ. ತಂದ ಬಂಡಾರನ ಗದ್ದೆನ ಕರೆಲಿ ಹಾಕುವ 'ಕೊಡಿಯಡಿ'ಲಿ ಇಸುವೆ. ಪೂಕರೆಗದ್ದೆ ಪುಣಿನ ನಾಗಬನಲಿ ನಾಗಂಗೆ ತಂಬಿಲ ಮಾಡ್‌ವೆ, ಇದರ 'ನಾಗರ್ಪುನೆ /ನಾಗಾರ್ಪಣೆ' (ತುಳು




: 'ನಾಗ ಕಳೆಪುನೆ) ತೇಳುವೆ. ಈ ಹೊತ್ತುಲಿ ದಿಂವ/ಬಿಲ್ಲವ ಊರ ಬೋಂಟ್ರ, ಊರು ಮೊಡ್ಯಾಳ, ಊರ ಕೆಲಸದವ ಒಟ್ಟಿಗಿದ್ದ್ ನಡ್ಸಿಕೊಡಿಕೆ ಒಟ್ಟಿಗಿದ್ದವೆ. ನಾಗನ ಬಿನ್ನೆನ ಕಡೇಲಿ 'ಆಳ್ ಏ ಕೂ...'ತ ಕರ್‌ದವೆ... ಸೇರ್‌ದ ಜೆನಗ 'ಕೊಲ್ತುರಿ'(ಸಣ್ಣದೊಂದಿ)ಹೊತ್ತುಸಿ 'ಆಳ್ ಏ ಕೂ ತೇಳ್ಕಂಡ್ ಗದ್ದೆಗೆ ಸುತ್ತ ಬಂದವೆ. ಕೈಯಲ್ಲಿರುಂವ ಕೋಲ್ತರಿನ ಅಲ್ಲಲ್ಲಿ ಗದ್ದೆ ಪುಣಿಗೆ ಕುತ್ತುವೆ... ಈ ದಿನ ಬೆಳ್ಗರ್‌ಂದಳೇ ಊರ್ ಅಜಲ'ಮನೆ ಮನೆಗೆ ಹೋಗಿ 'ತೆಂಬರೆ' (ಸಣ್ಣಡೋಲು) ಬೊಟ್ಟಿ ಪೂಕರೆನ ಹೇಳಿಕೆನ ಕೊಟ್ಟದೆ. ನಾಗಂಗೆ ತಂಬಿಲ ಆದಮೇಲೆ ಮೊಯಿಂಸರು/ಕೊರಗರು ಡೋಲು, ಹಲಗೆ ಬೊಟ್ಟಿಕಂಡ್ ಕೊಣ್ದವೆ. ಉರಲ್‌ಗನ ಹೇಳ್ವೆ. ಈ ದಿನ ಇರ್‌ಲ್ ಗದ್ದೆ ಪುಣಿಲಿ 'ಕಾಪಡ' ಜಾಗರಣೆ ಕುದ್ರೊಕು. ಇದರ'ಹನಿಗೆಕುದ್ದುರ್‌ದು' (ತುಳು : ಪನಿಕ್ಕುಲ್ಲುನೆ)' (ಕನ್ನಡ : ಇಬ್ಬನಿಗೆ ಕುಳಿತಿರು) ತೇಳುವೆ. 'ಕಾಪಡಂಗೆ ಯಜಮಾನ 'ಕಳ್ಳ ಕರ್‌ಚಿ'ನ (ಕನ್ನಡ : ಹೆಂಡದ ಕರ್‌ಚಿಗೆ) ಬಾಬ್ತಿಗಾಗಿ ಮೂರು ಸೇರ್ ಬತ್ತ ಕೊಟ್ಟವೆ.

ಪೂಕರೆ ದಿನ ಬೊಳ್ಪುಗೆ ಗುತ್ತುನ ಮನೆನ "ಕುದಿ ಎತ್ತ್‌ಗ' ಗದ್ದೆಗೆ ಕೊಂಬು ವಾಲಗದೊಟ್ಟಿಗೆ ಇಳ್ದವೆ. (ಸುರುಗೆ ಇಳಿವ ಜೋಡೆತ್ತ್‌ಗ). ಇವು ವರ್‌ಸಕ್ಕೊಮ್ಮೆ ಪೂಕರೆ ಗದ್ದೆಗೆ ಮಾತ್ರ ಉಳುಮೆಗೆ ಇಳಿವ ದೆವ್ವದ ಎತ್ತ್‌ಗ ಆಗಿದ್ದವೆ. ಗದ್ದೆಗೆ ಇಳಿಂವ ಈ ಜೋಡೆತ್ತ್‌ಗ ಮೂರ್ ಸುತ್ತು ಬಂದ್ ಈ ದಿನದ ಉಳುಮೆಗೆ ಸುರು ಕೊಟ್ಟವೆ. ಈ ಎತ್ತ್‌ಗ ಪೂಕರೆ ಹಾಕುವ ಕಾರ್ಯ ಮುಗಿವವರೆಗೆ ಗದ್ದೆಲಿ ಇರೊಕು; ಇದ್ದವೆ. ಪೂಕರೆ ದಿನ ಮಾಡ್‌ವ ಉಳ್ಮೆಗೆ ಪ್ರತಿ ಮನೆನ ಜೋಡಿ ಎತ್ತ್‌ಗ ಕೋಣಗ ಉಳ್ಮೆಗೆ ಇಳ್ದವೆ.

**ಪೂಕಳೆ ತಯ್ಯಾರಿ :** ಪೂಕರೆನ ಆಕಾರ ಮತ್ತೆ ರಚನೆಲಿ ಪ್ರಾದೇಸಿಕ ವೆತ್ಯಾಸಗ ಇದ್ದದೆ. ಬೆಳ್ತಂಗಡಿ ಕಡೆಲಿ ಪೂಕರೆ ಕಂಬನ ಬಂಡಿನ ಮೇಲೆ ನೆಡುವ ಕ್ರಮ ಇದ್ದರೆ; ಪುತ್ತೂರು ಸುಳ್ಯ ಪ್ರದೇಸಲಿ ಪೂಕರೆ ಕಂಬನ ಮಾತ್ರ ಗದ್ದೆ ನಡುಲಿ ನೆಟ್ಟವೆ. ಬೆಳ್ತಂಗಡಿ ಪ್ರದೇಸಲಿ ಪೂಕರೆ ಆಕಾರ ರಚನೆ ದ್ರಿಸ್ಟಿಂದ ಸುಮಾರಾಗಿ ಜಾತ್ರೆನ ರತನ ಹೋಲುವಂತಿದ್ದದೆ. ಇದ್ ಕಲ್ಲಿನ ನಾಲ್ಕು ಚಕ್ರದ್, ಆರ್ ಅಡಿ ಅಗಲ, ನಾಲ್ಕು ಅಡಿನಸ್ಟು ಎತ್ತರದ ಬಂಡಿಯಾಗಿದ್ದದೆ. ಹಲೆಗೆ ಮತ್ತೆ ಆದಾರಕ್ಕೆ ಮರದ ಕಂಬಂದ ಮಾಡ್ದ ಪೂಕರೆನ ಕಲ್ಲ್‌ನ ಚಕ್ರಗ ಚೋಳುಂದ ಕೆಡದಂಗೆ ಆರ್ಸುವೆ. ಬಂಡಿನ ನಾಲ್ಕಡಿ ಎತ್ತರದ ಪೀಟ ಬಾಗದ ನೊಡುಲಿ ಏಳ್ ಕೋಲ್‌ನಸ್ಟು ಎತ್ತರದ ಕಂಬನ ಹೊಂದ್‌ಸುವೆ. ಕೊಡಿ ಮರದಾಂಗಿರ್‌ವ ಈ ಕುತ್ತದ ಕಂಬನ ಒಟ್ಟೆಮಾಡಿ ಬೆದ್ರ್‌ನ ಅಲೋ ಕಮ್ಮುನ ದಂಡ್‌ಲಿ ತ್ರಿಕೋನಾಕಾರಲಿ ನಿರ್‌ದಿಸ್ಟ ಅಂತರಲಿ ಅಂಕಣನ ಮಾಡ್‌ವೆ. ಕಂಬದ ಕೊಡಿ ಬಾಗನ ಹತ್ತಿ ಇಲ್ಲರೆ ಪೊಂಗಾರೆ ಮರಂದ ಮಾಡ್‌ವ ಮುಗುಳಿಂದ ಜೋಡ್ಸುವೆ. ಈ ಮುಗುಳಿನ ಬಿಳಿ ಬಟ್ಟೆಂದ ಮುಚ್ಚಿಕಟ್ಟುವೆ.

ಸುಳ್ಯ, ಪುತ್ತೂರು ಬಾಗಲಿ ತ್ರಿಕೋನ ಅಂಕಣಗಂಳ್ದ ಮಾಡ್ದ ಲಂಬಾಕಾರದ ಕಂಬನ ಕಮ್ಮುನ ದಂಡ್‌ಲಿ ಮಾಡ್ವೆ. ಇದರ ಗದ್ದೆನ ನೊಡುಲಿ ಆದರ್‌ಸಿ ಇಸುದಕ್ಕೆ ದಂಬೆ ಕಲ್ಲ್ ಇದ್ದದೆ. ಇದರ ಆದಾರಂದ ಪೂಕರೆ ಆದರ್‌ಸಿ ನಿಂತದೆ. ಪೂಕರೆಲಿ ಇಂತಿಸ್ಟೆ ತ್ರಿಕೋನಾಕಾರದ ಕಂಬಗ ಇರಕುತುಟ್ಟು. ಈ ನಂಬಿಕೆಲಿ ಪೂಕರೆಗ ಏಳ್, ಒಂಬತ್ತು, ಹನ್ನೆರಡ್ ಹಿಂಗೆ ಬೆಸ ಸಂಕೆನ ಅಂಕಣ ಗೆಣೆಗನ ಹೊಂದಿದ್ದು, ಎತ್ತರಲಿ ಸಾ ವೆತ್ಯಾಸ ಇದ್ದದೆ. ಪೂಕಳೆನ ಮೊದಲ ಗೆಣೆನ ತೊಟ್ಟಿಲ ಗೆಣೆ'ತ ಪ್ರತ್ಯೇಕ ಆಗಿ ಗುರ್‌ತುಸುವೆ. ಊರ್‌ನ ಆಚಾರಿ ಪೂಕರೆನ ಮಾಡ್‌ದು ಸಂಪ್ರದಾಯ. ಪೂಕರೆನ ಅಂಕಣನ ಅಣ್‌ಸನ, ಬಿಳಿ, ಕೆಂಪು ಬಣ್ಣನ



ಪೂಕಳೆ (ಪೂಕರೆ)

ಹೂಗ ಆಗಿರುವ ಪಿಂಗಾರ, ಚೆಂಡು ಹೂ, ಪಾದೆ ಹೂ, ಕೇಪುಳು ಹೂವುಗಂಳ್ದ ಅಲಂಕರ್‌ಸುವೆ. ಪಿಂಗಾರನ ಕಟ್ಟಿ ಬೇರೆ ಹೂಗಳ ದಂಡೆ ಮಾಡಿ ಇಡೀ ಕಂಬಕ್ಕೆ ಸುತ್ತುವೆ. ಈ ಅಲಂಕರಣದ ಕಂಬಕ್ಕೆ ಒಂದ್ ಬಗೆನ ಕಳೆ ಬಂದದೆ.

ಪೂಕಳೆಲಿ ಗದ್ದೆ ಸಮ್ಮಂದಪಟ್ಟ ದೆವ್ವಗಳಿಗೆ ಪೂಕರೆ ನೆಡಿಕೆ ಮುಂದೆ ಕೋಲ ಕೊಡೊಕು. ಪ್ರಾದೇಸಿಕ ವೆತ್ಯಾಸಲಿ ಈ ಕೋಲಗ ನಡ್ದವೆ. ಪುತ್ತೂರು ತಾಲೂಕ್‌ನ ಇರಂತಜೆಲಿ ಹನುಮಂತನ ಕೋಲ ನಡ್ದದೆ. ಇದೇತಾಲೂಕುನ ಕೆದಂಬಾಡಿ, ಸವಣೂರುಲಿ ಬಿರಣ, ಉರವ, ನಾಗ ಚಾಮುಂಡಿ ಎರುಕೋಲಗಳು ನಡ್ದದೆ. ಬೆಳ್ತಂಗಡಿ ಕಡೆಲಿ ಕೊರಗ

ತನಿಯ ದೆವ್ವಕೆ ಕೋಲ ನಡ್ದರೆ ; ಕೆಲವು ಕಡೆ ಮಲೆ ದೆವ್ವಗ ಕೆಲವೂರುಲಿ ಬಿರಣ ಕೋಲ, ಉರವ ಕೋಲದೊಟಿಗೆ, ಬಂಗರ್‍ದ ಅಜ್ಜಿಗೆ ಕೋಲ ಕೊಟ್ಟವೆ. (ಪಿ.ಕೆ.)

**ಪೂಮಲೆ :** ದಕ್ಷಿಣಕನ್ನಡ ಜಿಲ್ಲೆನ ದಕ್ಷಿಣ ಬಾಗದ ಕಟ್ಟ ಕಡೆನ ತಾಲ್ಲೂಕ್ ಸುಳ್ಯ. ಸುಳ್ಯ ನಗರಂದ ರಾಷ್ಟ್ರೀಯ ಹೆದ್ದಾರಿ 275 ರ್‌ಲಿ ಮೂಡಾಬಿಮುಕಾಗಿ ಸುಮಾರ್ 1 ಕಿಲೋ ಮೀಟರ್ ದೂರ ಸಾಗಿ ಎಡಕೆ ತಿರ್‌ಗಿ ಉಬರಡ್ಕ–ಮಿತ್ತೂರು ಮಾರ್‌ಗಲಿ ಹಜ್ಜ್ ದೂರ ಹೋತಿದ್ದಂಗೆ ಮಾರ್‌ಗನ ಬಲ ಬಾಗಲಿ ಕುತ್ತಕೆ ನಿತ್ತ್‌ದ್ದ್ ಪೂಮಲೆ. ದೊಡ್ಡಾ ಕಾಡ್ ಆಗಿ ಯಾಗೊಳು ಪಚ್ಚೆಲಿ ಕಂಗೊಳ್ಸುವ ಈ ಮಲೆ ಪ್ರವಾಸೋದ್ಯಮ ಇಲಾಕೆಂದ ಗುರ್‌ತ್‌ಸಿಕಂಡ್, ರಾಜ್ಯದ ಪ್ರವಾಸಿ ತಾಣಗಳ ಪೈಕಿ ಒಂದಾಗುಟು. ಇದ್ ಸಂರಕ್ಷಿತಾರಣ್ಯನೂ ಹೌದು.

ಈ ಮಲೆ ಸುಮಾರ್ ವಿಸೇಸ ಮತ್ತೆ ಐತಿಹ್ಯಗಳ್‌ಂದ ಕೂಡಿಟು. ಇದ್ ಸುಮಾರ್ 1971.54 ಹೆಕ್ಟೇರ್ (4871.78 ಎಕರೆ) ಪ್ರದೇಸಲಿ ಹರ್‌ಂಡಿಕಂಡುಟು. ಹಂಗೆನೆ ಒಂದ್ ಮೂಲದ ಪ್ರಕಾರ ಇದರ ಎತ್ತರ ಸುಮಾರ್ 1388 ಅಡಿಗಳಸ್ಟ್. ಸುಳ್ಯ ತಾಲ್ಲೂಕ್‌ನ ಸುಮಾರ್ ಊರುಗ ಈ ಮಲೆನ ಮೇಲೆ ನಿತ್ತರೆ ಲಾಯ್ಕಲಿ ಕಂಡದೆ. ಪೂಮಲೆನ ಸುತ್ತುವರ್‌ದ ಪ್ರದೇಸಗಂತೇಳಿರೆ ಆಲೆಟ್ಟಿ ಅರಂಬೂರು, ಪೆರಾಜೆ, ಅರಂತೋಡು, ದೇರಾಜೆ, ಗುಡ್ಡ, ಅಡ್ತಲೆ, ಕುತ್ತಮೊಟ್ಟೆ, ಉಬರಡ್ಕ ಮಿತ್ತೂರು. ಚುಬ್ಬಕಲ್ಲ್‌ಲಿ ನಿತ್ತರೆ ಪಡುವಕ್ಕೆ ಅರಂಬೂರು, ಮೂಡಕ್ಕೆ ಪಿಂಡಿಮನೆ, ಪೊಡುವಕ್ಕೆ ಪೆರಾಜೆ (ಆಗ್ನೇಯ ಬಾಗಲಿ ಅರಂತೋಡು), ಉತ್ತರಕ್ಕೆ ಉಬರಡ್ಕ ಮಿತ್ತೂರು ಪ್ರದೇಸಗ ಒಟೊ. ಪೂಮಲೆನ ಬಹುಪಾಲ್ ಪ್ರದೇಸ ಉಬರಡ್ಕ ಮಿತ್ತೂರು ಗ್ರಾಮದ ವ್ಯಾಪ್ತಿಗೆ ಬಂದದೆ.

ಇದ್ಕೆ ಪೂಮಲೆತೇಳ್‌ವ ಹೆಸ್‌ರ್ ಹೆಂಗೆ ಬಾತ್‌ತೇಳ್ದಕೆ ಪೌರಾಣಿಕ ಮತ್ತೆ ದಾರ್ಮಿಕ ಕತೆಗಳ ಹಿನ್ನೆಲೆ ಉಟ್ಟು. ಪೂಮಾಣಿ ಮತ್ತೆ ಕಿನ್ನಿಮಾಣಿತೇಳ್‌ವ ದೆವ್ವಗ ಉಬರಡ್ಕ ಮಿತ್ತೂರ್‌ನ ಮುಕ್ಯ ಆರಾದನಾ ದೆವ್ವಗಾಗಿದ್ದ್ ಆ ಪೈಕಿ ಪೂಮಾಣಿತೇಳ್ದು ಹಿರಿಯ ದೆವ್ವ. ಈ ಪೂಮಾಣಿ ದೆವ್ವದ ಹೆಸ್‌ರ್‌ಂದಾಗಿ ಈ ಮಲೆಗೆ ಪೂಮಲೆತ ಕರ್‌ದವೆಗಡ. ಇನ್ನೊಂದ್ ಹಿನ್ನೆಲೆ ಪ್ರಕಾರ, ಆದರ್‌ಸ ಪುರುಷ ಸ್ರೀರಾಮಚಂದ್ರ, ಲಕ್ಷ್ಮಣ ಮತ್ತೆ ಸೀತೆ ಒಟ್ಟಿಗೆ ವನವಾಸಕೆ ಹೋದ ಕಾಲಲಿ ಸೀತೆ ಚಿನ್ನದ ಜಿಂಕೆನ ಕಂಡತ್. ಆ ಜಿಂಕೆನ ಇಸ್ಟಪಟ್ಟ್ ಸೀತೆ ಅದರ ಹಿಡ್‌ದ್ ತಂದ್ ಕೊಡೊಕುತ ಹಟ ಹಿಡೆಕನ, ಸೀತೆನ ಆಸೆನಂಗೆ ಆ ಜಿಂಕೆನ ಹಿಡ್‌ದ್ ತಾಕೆ ಪ್ರಬು ಸ್ರೀರಾಮಚಂದ್ರ ಹೋದೆ. ಜಿಂಕೆನ ಹಿಡೆಕೆ ಹೋದ ಸ್ರೀರಾಮಚಂದ್ರ ಎಸ್ಟೊತ್ತಾದ್‌ರೂ ತಿರ್‌ಗಿ ಬಾರದಿರಿಕನ ಗಾಬರಿಲಿ ಲಕ್ಷ್ಮಣ ಸ್ರೀರಾಮಚಂದ್ರನ ಹುಡ್‌ಕಿಕಂಡ್ ಹೋದೆ. ರಾಮ ಮತ್ತೆ ಲಕ್ಷ್ಮಣ ಇಬ್ಬರೂ ಸೀತೆ ಹತ್ತ್ ರ ಇಲ್ಲೆತೇಳ್ದು ಈ ಹೊತ್ತುಗೆ ರಾವಣಂಗೆ ಗೊತ್ತಾಗಿ ಕಪಟ ಮುನಿ ವೇಸಲಿ ಬಂದ್ ಸೀತಾದೇವಿನ ಅಪಹರಿಸಿಕಂಡ್ ಪುಸ್ಪಕ ಇಮಾನಲಿ ಕರ್‌ಕಂಡ್ ಹೋದೆ. ರಾವಣ ತನ್ನ ಅಪಹರಿಸಿಕಂಡ್ ಹೋತುತೇಳ್‌ವ ವಿಸಯ ಸ್ರೀರಾಮಚಂದ್ರಂಗೆ ಗೊತ್ತು ಮಾಡಿಕಾಗಿ ಸೀತಾದೇವಿ ಒಂದ್ ಉಪಾಯ ಮಾಡಿ ತನ್ನ ತಲೆಲಿದ್ದ ಹೂಮಾಲೆನ ತೆಗ್ದ್ ಇಮಾನಂದ ಅಡಿಗೆ ಇಟ್ಟತ್‌ಗಡ. ಹಿಂಗೆ ಸೀತಾದೇವಿ ಇಟ್ಟ ಹೂಮಾಲೆ ಬಿದ್ದ ಜಾಗೆನೆ ಪೂಮಲೆತ ಕರ್‌ದೋಗಡ. ಪೂಮಲೆತೇಳ್‌ವ ಹೆಸರ್‌ಗೆ ಸಮ್ಮಂದಪಟ್ಟಂಗೆ ಈ ಮಲೆನ ಬೌಗೋಳಿಕ ರಚನೆಗೆ ಅನುಗುಣಾಗಿ ಹೇಳ್ದಾದರೆ. ಈ ಮಲೆನ ಮೂಲೆಗ ಕಲ್ಲುಗುಂಡಿನ ಚಟ್ಟೆಕಲ್ಲ್‌ಂದ ಮರ್‌ಕಂಜದ ರೆಂಜಾಳದವರೆಗೆ ಹರಂಡಿಕೊಂಡುಟು. ಪೂಮಲೆನ ಕೊಡಿಬಾಗ (ಮೇಲ್ಕೈ) ಸಮತಟ್ಟಾಗಿದ್ದ್, ಅದರ ಎರ್‌ಡ್ ಕಡೆನ ಕೊಡಿಗ (ಪಾಸ್ರ್ವಗ) ಎತ್ತರ ಆಗುಟು. ದೂರಂದ ನೋಡಿಕನ ಈ ಮಲೆ ಹೂನ ಮಾಲೆನಂಗೆ ಕಂಡ್ ಬಂದದೆ. 'ಹೂ' ತೇಳ್ದು ತುಳುಲಿ 'ಪೂ ತ ಆದೆ. ಹಂಗಾಗಿ ಈ ಮಲೆಗೆ ಪೂಮಲೆ ತೇಳ್‌ವ ಹೆಸರಾಗುಟ್ಟು. ಈ ಮಲೆನ ಪ್ರಾಕೃತಿಕ ವಿಸೇಸತೆಗೆ ಪೂರಕಾಗಿ ಇನ್ನೊಂದ್ ಹಿನ್ನೆಲೆ ಉಟ್ಟು. ಈ ಮಲೆ ಯಾಗೊಳು ಹೂಗಳ್‌ಂದ ಕೂಡಿತ್ತ್ ಗಡ. 'ಹೂ' ಜಾನಪದ ಬಾಸೆಲಿ 'ಪೂ' ತ ಆಗಿ ಈ ಬೆಟ್ಟ ಪೂಮಲೆತೇಳ್‌ವ ಹೆಸರ್‌ಂದ ಕರ್‌ಸಿಕಂಡತ್‌ಗಡ.

ಪೂಮಲೆ ಬೆಟ್ಟ ಎರ್‌ಡ್ ಕಾರಣಿಕ ದೆವ್ವಗಾದ ಮಿತ್ತೂರು ಇರ್‌ವೆರ್ ಉಲ್ಲಾಕುಳು ಮತ್ತೆ ನಾಯರ್ ದೆವ್ವಗಳೊಟ್ಟಿಗೆ ದಾರ್ಮಿಕ ಹಿನ್ನೆಲೆನ ಕೊಂಡಿಯೊಂದರ ಇಸಿಕಂಡುಟು. ಒಂದ್ ಇತಿಯಾಸದ ಪ್ರಕಾರ ಅರಸು ಉಪಾಸನಾ ಪೊದ್ದತಿಂದ ಹುಟ್ಟಿಕಂಡ ಉಳ್ಳಾಕುಲು ಕುಕ್ಕೆಂದ ಹೊರ್ಟ್ ಆ ದೆವ್ವದ ಉಪಾಸನಾ ಪ್ರದೇಸಾದ ತುಳುನಾಡ್‌ನ ಬೇರೆ ಬೇರೆ ಕಡೆ ನೆಲೆನಿತ್ತ್ ಕಡೆಗೆ ಈ ಪೂಮಲೆ ಬೆಟ್ಟಕ್ಕೆ ಬಂದ್ ಎತ್ತುವೆ. ಇದೇ ಹೊತ್ತುಗೆ ಸೊವ್ದೆ ತಾಕೆತ ಕಾಡ್‌ಗೆ ಬಂದಿದ್ದ ಅಲ್ಲಿನ ಮಲೆಕುಡಿಯ ಜೆನಾಂಗದ ಪ್ರಾಯದ ಗಂಡಹೆಣ್ಣ್‌ನ ಎದ್‌ರ ಉಳ್ಳಾಕುಲು ದೆವ್ವಗ ಕಂಡ್‌ಬಂದೊಗಡ. ಅವು ಈ ಗುಡ್ಡೆಗೆ ಬಂದದರ, ನೋಡ್ದ ವಿಸಯನ ಈ ಪ್ರಾಯದ ದಂಪತಿಗ ಊರ್‌ನ ಜೆನಕೆ ಹೇಳಿಬುಡುವೊತ ನೆನ್ಸಿ ಉಳ್ಳಾಕುಲುಗ ಆ ಪ್ರಾಯದ ಗಂಡೆಣ್ಣ್‌ನ ಎರ್‌ಡ್ ಕಲ್ಲಾಗಿ ಪರಿವರ್‌ತನೆ ಮಾಡಿದ್ದೊ ಗಡ. ಆ ಎರ್‌ಡ್ ಕಲ್ಲ್‌ಗಳ ಸುಬ್ಬ–ಸುಬ್ಬಿತೇಳ್‌ವ ಹೆಸರ್‌ಂದ ಕರ್‌ದೊಗಡ. ಈ ಎರ್‌ಡ್ ಕಲ್ಲ್‌ಗಳ ಇಂದ್‌ಗು ಪೂಮಲೆಲಿ ನೋಡಿಕೆ ಸಿಕ್ಕಿದೆಗಡ.

ಪೂಮಲೆನ ಕೊಡಿಲಿ ಚುಬ್ಬಕಲ್ಲ್ ಮತ್ತೆ ಕರಂಡೆಕಲ್ಲ್ ತೇಳ್‌ವ ಜಾಗೆ ಉಟ್ಟು. ಪೂಮಲೆಗೆ ಬಂದ ಈ ದೆವ್ವಗ ಸುರೂಲೆ ಚುಬ್ಬಕಲ್ಲ್ ಮತ್ತೆ ಕರಂಡೆಕಲ್ಲ್‌ಲಿ ನೆಲೆನಿತ್ತ್‌ಗಡ. ಉಳ್ಳಾಕುಲು ಸುರೂನ ಹೆಜ್ಜೆ ಇಸಿದ ಜಾಗೆ ಚುಬ್ಬಕಲ್ಲ್ ಮತ್ತೆ ಅಲ್ಲಿಂದ ಎರ್‌ಡನೆ ಹೆಜ್ಜೆಯಿಸಿದ ಜಾಗೆ ಕರಂಡೆಕಲ್ಲ್. ಈಗಾಗಲೇ ತಿಳ್ಸಿದಂಗೆ ಪೂಮಲೆನ ಕೊಡಿಬಾಗ (ಮೇಲ್ಕೈ) ಸಮತಟ್ಟಾಗಿದ್ದ್, ಅದರ ಎರ್‌ಡ್ ಕಡೆನ (ಪಾಸ್ರ್ವಗ) ಕುತ್ತಕೆ ಇದ್ದದರ್‌ಂದ ಪೂಮಲೆನ ಈ ಎರ್‌ಡ್ ಎತ್ತರದ ಪ್ರದೇಸಗಳ್‌ಲಿ




ಉಳ್ಳಾಕುಲು ದೆವ್ವಗ ನಿತ್ತ್ ದ್ರಿಷ್ಟಿ ಹಾಯ್ಸಿಕನ ಈ ಮಲೆನ ಅಡಿಲಿ ಎಲ್ಲಾ ಊರುಗ ದೆವ್ವಗಳಿಗೆ ಕಂಡತ್ತ್‌ಗಡ. ಈ ಊರ್‌ಗಳ ಪೈಕಿ ಅವ್‌ಕೆ ನೆಲೆ ನಿಲ್ಲಿಕೆ ಸೂಕ್ತ ಜಾಗೆ ಯಾದ್‌ತ ತಿಳ್‌ಕಂಬಕೆ ದೆವ್ವಗ ಆಸೆಪಟ್ಟವೆ. ಹಂಗಾಗಿ ದೆವ್ವಗ ಏಳ್ ಬಾಣಗಳ ಬೇರೆ ಬೇರೆ ಕಡೆ ಬುಟ್ಟವೆ. ಇಂದ್ ಮಿತ್ತೂರು ಉಲ್ಲಾಕುಳುಗ ನೆಲೆ ಊರ್‌ದ ಕೊಟ್ಟಾರದ ದರ್ಮ ಚಾವಡಿ (ಸುಳ್ಯಕೋಡಿ), ದೀಟಿಕೆ (ಮಿತ್ತೂರು) ಚಾವಡಿ, ಅಡಿಗಾರ ಮಾಳ್ಯ, ಅಡ್ತಲೆ ಕೊಟ್ಯ (ಮಡಿಯಾರ್) ಚಾವಡಿ, ಚಾಕಟೆಡಿ, ಒಲಸಿರಿ ಮಂಟಮೆ, ಪಡಂಪಾಡಿ ಮಾಡರಮನೆ ಇದೆಲ್ಲ ಉಳ್ಳಾಕುಲು ಬಾಣ ಬುಟ್ಟ ಪ್ರದೇಸಗತ ಗುರ್‌ತ್‌ಸಿಕೊಂಡುಟು. ಮಿತ್ತೂರು ಇರ್‌ವೆರ್ ಉಲ್ಲಾಕುಳು ಮತ್ತೆ ನಾಯರ್ ದೆವ್ವಗಳ ಆರಾದನೆನ ಇಂದ್ 'ಮೂವತ್ತೊಕ್ಲು' ಕುಟುಂಬದವರ ನೇತೃತ್ವಲಿ ನಡ್ಸಿಕಂಡ್ ಹೋಗ್‌ತಾ ಒಳೊ. ಪೂಮಲೆ ಮೇಲೆ ಸುಳ್ಯ ಸೀಮೆನ ಎಲ್ಲಾ ದೆವ್ವಗ ನೆಲೆಯಾಗಿದ್ದೊಂತೇಳ್‌ವ ಪ್ರತೀತಿ ಉಟ್ಟು. ಈ ಹಿನ್ನೆಲೆಲಿ ಪೂಮಲೆನ ಕೊಡಿಲಿರ್‌ವ ಚುಬ್ಬಕಲ್ಲ್ ಮತ್ತೆ ಕರಂಡೆಕಲ್ಲ್‌ಗಳ ನಡುಲಿ ಇರ್‌ವ ಜಾಗೆನ 'ದೆವ್ವದ' ತ ಕರ್‌ದವೆ.

ಜಾನಪದ ಪ್ರತೀತಿನ ಪ್ರಕಾರ ಪೂಮಲೆ ಹೆಣ್ಣ್, ಮತ್ತೆ ಇದರ ಹಕ್ಕಲೆನ ಕಾಡ್ ಬಂಟಮಲೆ ಗಂಡ್. ಬಂಟಮಲೆನ ನೋಡಿ ನಾಚಿಕೆಲಿ ಪೂಮಲೆ ವಿರುದ್ದ ದಿಕ್ಕ್‌ಗೆ ಮೋರೆ ಮಾಡಿಟು. ಹಂಗಾಗಿ ಪೂಮಲೆನ ನೀರ್‌ನಾಂಸದ ಬಾಗ ಎಲ್ಲನೂ ಗುಡ್ಡ, ದೇರಾಜೆ, ಪೆರಾಜೆ ಬಾಗಕಿದ್ದ್ ಆ ಬಾಗಲಿ ನೀರ್‌ನ ಹರಿವು ಹೆಚ್ಚಿಟುಗಡ. ಹಂಗೆನೆ ಈ ಮಲೆಲಿ ಹುಟ್ಟಿದ ಒಂದ್ ಹಳ್ಳ ಹರ್‌ದದೆ. ಕುಲ್ಚಾರ್ ತೇಳ್‌ವ ಹೆಸರ್‌ನ ಈ ಹಳ್ಳ ಗುಡ್ಡ, ದೇರಾಜೆ, ಅರಂತೋಡುಲಿ ಬಂದ್ ಪಯಸ್ವಿನಿ ನದಿಗೆ ಸೇರ್‌ದೆ. ಪೂಮಲೆನ ಕೊಡಿಬಾಗಲಿರ್‌ವ ಚುಬ್ಬಕಲ್ಲ್ ಮತ್ತೆ ಕರಂಡೆಕಲ್ಲ್ ತೇಳ್ದು ಅಗಸ್ತ್ಯ ಮುನಿಗ ತಪಸ್ಸ್ ಮಾಡ್ದ ಜಾಗೆತ ಹೇಳಿವೆ. ಈ ಕಲ್ಲ್ ಗಳ ನಡುಲಿ ಇರ್‌ವ ದೆವ್ವದ ಜಾಲ್ ತೇಳ್‌ವ ಜಾಗೆನ ಪಾದೆಲಿ ಚೊಲ್ಲಿದ ಕಾಯಿ ಗಾತ್ರದ ಎರ್‌ಡ್ ಬಾಮಿಗೊಳೊ. ಇದೆರ್‌ಡ್ ಬಾಮಿಗ ಸಂಕಾಕಾರಲಿದ್ದ್. ಅದರ್‌ಲಿ ಒಂದ್ ಬಾಮಿ ಹಚ್ಚ ದೊಡ್ಡದ್. ಅಗಸ್ತ್ಯ ತಮ್ಮ ತಪಸ್ಸ್ ನ ಅಗತ್ಯಕ್ಕಾಗಿ ಈ ಎರ್‌ಡ್ ಬಾಮಿಗಳ ತೆಗ್ದದ್ ತೇಳ್‌ವ ಹಿನ್ನೆಲೆ ಉಟ್ಟು. ದೆವ್ವ ಲೀಲೆನೊ ಅಲ್ಲೊ ಪ್ರಕೃತಿ ವಿಸೇಸನೋತೇಳ್ದು ಗೊತ್ತ್‌ಲೆ. ಆದ್‌ರೆ ಈ ಎರ್‌ಡೂ ಬಾಮಿಗಳ್‌ಲಿ ಸರ್‌ವಋತುಗಳ್‌ಲೂ ನೀರ್ ಇದ್ದೆ ಇದ್ದದೆ.

ಈ ಚುಬ್ಬಕಲ್ಲ್ ಮತ್ತೆ ಕರಂಡೆಕಲ್ಲ್‌ಗಳ ನಡುಲಿ ಇರ್‌ವ ಸಂಕಾಕಾರದ ಎರ್‌ಡ್ ಬಾಮಿಗಳ ಬಗ್ಗೆ ಹೇಳ್ಬಾದರೆ ಇದ್ ಯಾಗೊಳು ನೀರ್‌ಂದ ತುಂಬಿದ್ದದೆ. ಇದ್ ಪವಿತ್ರ ಜಲತ ನಂಬಿದ ಕಾರಣಕೆ ಉಬರಡ್ಕ ಮಿತ್ತೂರು ದೆವ್ವಗಳ ಆರಾದನಾ ಕಾಲಲಿ ಈ ಬಾಮಿಂದನೇ ನೀರ್ ತಕಂಡ್ ಬಾವ ಸಂಪ್ರದಾಯ ಇತ್ತ್‌ಗಡ. ಹಂಗೆನೆ ಸುಳ್ಯದ ಕಾಯರ್‌ತೊಡಿ ದೇಸ್ತಾನಲಿ ನಡೆವ ಪೂಜೆ ಮತ್ತೆ ದೆವ್ವಾರಾದನೆಗೆ ಈ ಬಾಮಿಂದನೇ ನೀರ್ ತಕಂಡ್ ಬಾವ ವಾಡಿಕೆ ಮತ್ತೆ ಸಂಪ್ರದಾಯ ಉಟ್ಟು. ಈ ಬಾಮಿಗಳ ಚಾಳನ ಸರ್ಯಾಗಿದ್ ಗೊತ್ತಿದ್ದವು ಯಾರೂ ಇಲ್ಲೆತ ಸನು ಹೇಳ್‌ವೆ. ಅಡ್ಕೆ ಕೊಯ್ವ ದೊಡ್ಡ ಎರ್‌ಡ್ ಕೊಕ್ಕೆಗಳ ಒಂದಕ್ಕೊಂದು ಜೋಡ್ಸಿ ಈ ಬಾಮಿ ಒಳೆಗೆ ಇಳ್‌ಸಿ ಪರೀಕ್ಷೆ ಮಾಡಿರೂಸ ಇದ್‌ರ ಚಾಳನ ಕಂಡ್ ಹಿಡಿಕೆ ಆತ್ಲೆಗಡ. ಆದರೆ ಈ ಜಾಗೆಗೆ ಹೋವ ಚಾರಣಿಗರ್ ಈ ಬಾಮಿಗಳ ಮಹತ್ವ ಮತ್ತೆ ಹಿನ್ನೆಲೆನ ಸರಿ ತಿಳ್ಕಣದೆ ಅದರೊಳೆಗೆ ಕಲ್ಲ್ ಹಾಕಿ ಅದರ ನಿಜವಾದ ಆಳಕ್ಕೆ ಬಂಗ ಆಗುಟುಗಡ. ಕಾವೇರಿ ತೀರ್ತ ಉದ್ಭವದ ಹೊತ್ತುಲಿ ಸರಿಯಾಗಿ ಈ ಬಾಮಿಲೂ ತೀರ್ತ ಉದ್ಭವ ಆದರ ಕಂಡೊವ್ ಒಳೊಗಡ. ಈ ಮಲೆನ ಬಡಗ ಬಾಗಕಿರ್‌ವ ಉಬರಡ್ಕ ಮಿತ್ತೂರು ಪ್ರದೇಸಲಿ ಒಂದ್ ಜಲಪಾತ ಉಟ್ಟು. ಅದೇ ಬಡ್ಡೆಕಲ್ಲ್ ಜಲಪಾತ. ಬಂಡೆಕಲ್ಲ್ ಗಳ ನಡುಲಿ ರಬಸಲಿ ಮತ್ತೆ ಹಾಲ್ ನೊರೆನಂಗೆ ಹರಿವ ಈ ಜಲಪಾತದ ಸುಂದರ ದೃಸ್ಯ ಚಾರಣ ಪ್ರಿಯರ ಕೈಬೀಸಿ ಕರ್‌ದದೆ.

ಈ ಪೂಮಲೆನ ಕೊಡಿಲಿ ಬೇಡವನ ಕಲ್ಲ್ ತೇಳ್‌ವ ಪುರಾಣ ಪ್ರಸಿದ್ದ ಕಲ್ಲ್ ಉಟ್ಟು. ಈ ಕಲ್ಲ್ ಇರ್‌ವ ಜಾಗೆಗೆ ದೊರೆಕುಮೇರಿತ ಕರ್‌ದವೆ. ಅದ್ ಬೇಡವ ಕತ್ತಿ ಮಸೆದ ಜಾಗೆತೇಳ್‌ವ ಐತಿಹ್ಯ ಉಟ್ಟು. ಕಲ್ಲ್‌ಲಿ ಕತ್ತಿನ ಮಸೆಕನ ಹೇಂಗೆ ಹೊಳ್‌ಪ್ ಕಂಡದೆನೊ ಅದರಾಂಗೆ ಹೊಳ್‌ಪ್‌ನ ಆ ಕಲ್ಲ್‌ಲಿ ಈಗ ಸನ ಕಾಣಕ್. ಆ ಜಾಗೆಲಿರ್‌ವ ಕಲ್ಲ್‌ನ ಕಂಡರೆ ಈಗಸ್ಟೆ ಕತ್ತಿ ಮಸೆದಂಗೆ ನೋಡವ್‌ಕೆ ಅನ್‌ಸಿದೆ. ಚುಬ್ಬಕಲ್ಲ್ ಮತ್ತೆ ಕರಂಡೆಕಲ್ಲ್ ಗಳ ನಡುಲಿ ಇರ್‌ವ ಸೆರೆಲಿ ಹುಲಿಗ ಮೊಲ್‌ಗ್‌ತಿದ್ದೊಗಡ. ಆ ಜಾಗೆನ


ಪೂಮಲೆ

ಪಿಲಿಪಂಜರ ತೇಳ್‌ವ ಹೆಸ್‌ರಂದ ಕರ್‌ದವೆ. ಆದರೆ ಈಗಳೂ ಅಲ್ಲಿ ಹುಲಿಗ ವಾಸಮಾಡಿವೆನ ಇಲ್ಲೆನತೇಳಿಕೆ ಸರಿಯಾದ ಯಾವ ಪುರಾವೆಗ ಇಲ್ಲೆ.

ಪೂಮಲೆಲಿ ದಾರ್ಮಿಕ ಹಿನ್ನೆಲೆ ಇರ್‌ವ ಅಜ್ಜಿಕಲ್ಲ್ ತೇಳ್‌ವ ಕಾರಣಿಕದ ಜಾಗೆ ಉಟ್ಟು. ಇದ್ ಮಲೆಬೂತಗಳ ಸಾನಿದ್ಯ ತೇಳ್‌ವ ಪ್ರತೀತಿ ಉಟ್ಟು. ಪೂಮಲೆನ ರಕ್ಷಣೆ ಮಾಡ್‌ದು ಮಲೆಬೂತಗತ ಎಲ್ಲೊರ ನಂಬಿಕೆ. ಗುಡ್ಡ, ದೇರಾಜೆ, ತೊಡಿಕಾನಕ್ಕೆ ಹೋಕೊರೆ ಇದೇ

ಜಾಗೆನ ಬಳ್‌ಸಿಕಂಡ್ ಹೋಕಾದೆ. ಈ ಜಾಗೆಲಿ ಜಾತ್ರೆ ಸಮೆಲಿ ದೆವ್ವಗಳ ಬಂಡಾರ ಹೋದು. ಅಡ್‌ಕೆ ಮತ್ತೆ ಎಲೆನ ಈ ಅಜ್ಜಿಕಲ್ಲ್‌ಗೆ ಇಸಿ ಪ್ರಾರ್ತನೆ ಮಾಡಿಕಂಡರೆ ಮನ್‌ಸ್‌ಲಿ ಗ್ಯಾನ ಮಾಡಿಕಂಡ ಕೆಲ್‌ಸ ಕಾರ್ಯಗ ಯಾವ ವಿಗ್ನಗಳಿಲ್ಲದೆ ಸುಸೂತ್ರಾಗಿ ನಡ್ದದೆತೇಳ್ವ ನಂಬಿಕೆ ಉಟ್ಟು.ಈ ಅಜ್ಜಿಕಲ್ಲಿಗಾಗಿ ಹೋವ ಜೆನ ಅವರ ಹಕ್ಕಲೆ ಇರ್‌ವ ಎಲೆ–ಅಡ್‌ಕೆನೋ ಇಲ್ಲೆ ಕೈಲಿರ್‌ವ ತಿನಿಸ್‌ಗಳ ಇಸಿ ಮುಂದೆ ಹೋವ ಅಬ್ಬೆಸ ಉಟ್ಟು. ಬೀಡಿ ಎಳಿಯಂವ ಅಲ್ಲಿ ಬೀಡಿನ ಇಸಿಬುಟ್ಟು ಮುಂದೆ ಹೋದವೆ. ಕಳ್ಳ್ ಕುಡೆವರೊಟಿಗೆ ಕಳ್ಳ್ ಇದ್ದರೆ ಅದುನೂ ಆ ಕಲ್ಲ್‌ಗೆ ಇಸುವೆ. ನೆಸೆನೂ ಇಸುವೆ.ಯಾದೋ ಒಳ್ಳ ಕೆಲ್‌ಸಕ್ಕಾಗಿ ಪೂಮಲೆ ಪ್ರದೇಸಕೆ ಬಂದವ್ ದಾರಿ ತಪ್ಪಿರೆ ಈ ಅಜ್ಜಿಕಲ್ಲ್ ತೇಳ್‌ವ ಸಕ್ತಿನ ಪ್ರಾರ್ತನೆ ಮಾಡಿಕಂಡರೆ ಸಾಕ್ ಅವ್‌ಕೆ ಆದಾರಿ ಗೋಚರಾಗ್‌ತಿತ್ತ್ ಗಡ. ಕಾಲ್‌ನಡಿಗೆಲಿ ಹೋಕನ ಸುಸ್ತಾಗಿ ನಡೆಕೆ ಬೊತ್ತ್ ತಾಕನ ಈ ಸಕ್ತಿನ ಗ್ಯಾನ ಮಾಡಿಕಂಡರೆ ಸರೀರಕ್ಕೆ ಉತ್ಸಾಹ ಸಿಕ್ಕಿ ಮುಟ್ಟಕಾದ ಜಾಗೆನ ನಿರಾಯಾಸಾಗಿ ಹೋಗಿ ಮುಟ್ಟಿಕಾದೆ. ಸುದ್ದ ಮನ್‌ಸ್‌ನ ಪ್ರತಿಯೊಬ್ಬಂಗೂ ಒಳ್ಳೆದಾದೆ ತೇಳ್ದು ಪೂಮಲೆ ಅಡಿನ ಜೆನರ ನಮಬಿಕೆ. ಆದರೆ ಅನಾಚಾರ ಇಲ್ಲೆ ಅದರ್ಮದ ಕೆಲ್‌ಸ ಮಾಡಿಕೆ ಈ ಪ್ರದೇಸಕೆ ಬಂದರೆ ಅವ್‌ಕೆ ತಕ್ಕ ಸಾಸ್ತಿಯಾದ ಪ್ರಸಂಗಗ ನಡ್ದುಟುಗಡ. ಈ ಹಿಂದೆ ಕದ್ದ್ ಮರ ಕಡೆಕೆ ಈ ಮಲೆಗೆ ಬಂದ ಇಬ್ಬೊರು ಒಬ್ಬರಿಗೊಬ್ಬ ತಲೆ ತಲೆ ಹೆಟ್ಟಿಕಂಡದರ ಕಂಡ್ ಸ್ತಳೀಯರ್ ಮಿತ್ತೂರು ದೆವ್ವಗಳಿಗೆ ಸಂಕ್ರಾಂತಿ ತಂಬಿಲ ಹರಕೆ ಹೇಳಿಕಂಡ ಮೇಲೆ ಆ ಇಬ್ಬೊರು ಮುಂದೆನಾಂಗೆ ಆದೊಂತ ಹೇಳ್ವ ನಿದರ್ಸನಗ ಉಟ್ಟುಗಡ. ಎತ್ತ್‌ಗಳಿಗೆ ಗೆಜ್ಜೆ ಕಟ್ಟಿ ಪೂಮಲೆ ಬೆಟ್ಟಕೆ ಮೇಯಕೆ ಬುಡ್‌ತಿತ್‌ಲೆಗಡ. ಕೆಂಪ್ ಹೂ ಮುಡ್‌ದ್ ಇಲ್ಲೆ ಕೆಂಪ್ ಸೀರೆ, ಉಟ್ಟ್ ಈ ಜಾಗೆಲಿ ಓಡಾಡಿರೆ ಕಸ್ಟ ಕಟ್ಟಿಟ್ಟ ಬುತ್ತಿತ ನಂಬುವೆ

ಪೂಮಲೆ ಪ್ರದೇಸದ ಬದನೆಕಜೆಲಿ ಮಲೆಕುಡಿಯ ಜೆನಾಂಗದ ಎಂಟತ್ತ್ ಕುಟುಂಬಗ ಈಗಳೂ ವಾಸ ಒಳೊ ಮುಂಡೋವು ಕಜೆಯ ತೇಳ್‌ವ ಪ್ರದೇಸಲಿ ಗೌಡ ಜೆನಾಂಗದವ್ ವಾಸ ಒಳೊ. ಹಂಗೆನೆ ಪೂಮಲೆ ಬೆಟ್ಟದ ಮದ್ಯಬಾಗಲಿ ಅಚ್ಚಿಪಳ್ಳ ತೇಳ್‌ವಲ್ಲಿ ಗೌಡ ಜೆನಾಂಗದ ಕುಟುಂಬಗ ವಾಸ ಒಳೊ. ಸುಳ್ಯಂದ ಉಬರಡ್ಕಕ್ಕೆ ಹೋವ ಹಾದಿ ನಡುಲಿ ಕುತ್ತಮೊಟ್ಟೆ (ಹೂಪಾರೆ ಎಂತಲೂ ಹೆಸರಿದೆ) ತೇಳ್‌ವಲ್ಲಿ ಬಲಕ್ಕೆ ತಿರ್‌ಗಿ ಸುಮಾರ್ 3 ಕಿಲೋ ಮೀಟರ್ ಮುಂದೆ ಹೋಕನ ಯಾವಟೆ ತೇಳ್‌ವ ಪ್ರದೇಸ ಸಿಕ್ಕಿದೆ. ಇದ್ ಪೂಮಲೆಯ ಬುಡ ಪ್ರದೇಸ. ಯಾವಟೆ ತೇಳುವಲ್ಲಿ ಸುಮಾರ್ ಕುಟುಂಬಗ ವಾಸ ಆಗೊಳೊ. ಇಲ್ಲಿ ಒಂದ್ ಸಣ್ಣ ಹಳ್ಳ ಇದ್ದ್, ಅದ್ ಮಳ್ಗಾಲಲಿ ತುಂಬಿ ಹರ್‌ದದೆ. ಈ ಹಳ್ಳದ ಕೆಳೆಗೆನ ಬಾಗಲಿ ತೊಟಗಿಲ್‌ನಂಗಿರ್‌ವ ಆಕಾರದ ಒಂದ್ ನೀರ್‌ನ ಗುಂಡಿ ಉಟ್ಟು. ಇದರ ತೊಟಗಿಲ್ ಗುಂಡಿತ ಕರ್‌ದವೆ. ಹಿಂದೆನ ಕಾಲಲಿ ಕಾಯರ್‌ತೊಡಿಗೆ ಮಲೆಬೂತಗಳ ಬಂಡಾರ ಹೋಕನ ಇಲ್ಲಿ ಮಲೆಬೂತಗ ಮೀದ್ ಮುಂದೆಗೆ ಹೋಗ್‌ತಿದ್ದೊತ ಹೇಳ್‌ವ ನಂಬಿಕೆ ಉಟ್ಟು. ಈ ಹಳ್ಳನ ದಾಟಿ ಸುಮಾರ್ 2 ಕಿಲೋಮೀಟರ್ ಮೊಣ್ಣ್‌ನ ಮಾರ್‌ಗಲಿ ಹೋದರೆ ಅಚ್ಚಿಪಳ್ಳತೇಳ್‌ವಲ್ಲಿಗೆ ಮುಟ್ಟಕ್. ಈ ಮಾರ್‌ಗ ಬಾರಿ ಇಳಿಜಾರ್ ಮತ್ತೆ ಅಪಾಯಕಾರಿ ತಿರ್‌ಗಾಸ್‌ಗಳ್‌ಂದ ಕೂಡಿಟು. ಯಾವಟೆಂದ ಮಲೆನ ಕಡೆಗೆ ಹೋವ ಈ ಮಾರ್‌ಗ ಸಣ್ಣ ವಾಹನಗ ಹೋವಸ್ಟೆ ಅಗಲ ಆಗಿರ್‌ದು. ಹೊಡಿಕಲ್ಲ್‌ಗ ಉಬ್ಬು ತಗ್ಗ್‌ಗ ಮತ್ತೆ ಮಾರ್‌ಗದ ನಡುಲಿ ಅಲ್ಲಲ್ಲಿ ಉಬ್ಬಿಕಂಡಿರ್‌ವ ಬಂಡೆಗಳ್‌ಂದಾಗಿ ವಾಹನಗ ಮುಂದೆ ಹೋಕೆಬಂಗ ಆದೆ. ಬಾರಿ ಹೆಚ್ಚಿನ ಇಂಜಿನ್ ಸಾಮರ್‌ತ್ಯ ಇರ್‌ವ ಜೀಪ್‌ನಂಗೆ ಕಾಂಬ ವಾಹನಗ ಮಾತ್ರ ಈ ದಾರಿಲಿ ಹೋಕೆ ಸಾದ್ಯ. ಹಇ ಮೈಮರ್ತರೆನು ಇಲ್ಲೆ ಯಾಮಾರಿರೂ ಅಪಾಯ ತಪ್ಪಿದಲ್ಲ. ಮಳ್ಗಾಲಲಿ ಯಾದೇ ವಾಹನಗ ಇಲ್ಲಿ ಓಡಾಡುದುಲೆ. ಇದ್ ಯಾವಟೆಂದ ಅಚ್ಚಿಪಳ್ಳ ತೇಳುವಲ್ಲಿಗೆ ಹೋವ ದಾರಿ. ಈ ದಾರಿಲೂ ಅಜ್ಜಿಕಲ್ಲ್ ತೇಳ್‌ವ ಸ್ರದ್ದಾಬಕ್ತಿನ ಕಲ್ಲ್ ಸಿಕ್ಕಿದೆ. ಈ ಕಲ್ಲ್‌ಗೆ ಅಚ್ಚಿಪಳ್ಳ ಮನೆವ್ ಒಂದ್ ಕಟ್ಟೆನ ಕಟ್ಟಿಸಿಯೊಳ. ಅದರ ಮೇಲೊಂದ್ ಕಾಣಿಕೆ ಡಬ್ಬಿನ ಇಸಿಯೊಳೊ. ಅಚ್ಚಿಪಳ್ಳ ಕುಟುಂಬಸ್ತರ್, ಅವರ ಸಮ್ಮಂದಿಕರ್, ಯಾವಟೆ ಬಾಗದ ಜೆನಗ ಇಲ್ಲಿ ಹಾದ್ ಹೋಕನ ಸಮರ್ಪಿಸಿದ ಕಾಣಿಕೆ ದುಡ್ಡುನ ಸುಳ್ಯದ ಕಾಯರ್‌ತೊಡಿ ದೇಸ್ತಾನಕೆ ಒಪ್ಪುಸುವೆಗಡ. ಪೂಮಲೆ ಕೆಲವರ ಬೊದ್ಕುಗೆ ಆದಾರ ಆಗುಟು. ಜೀವನಾದಾರಕೆ ಪಚ್ಚೆ, ಕುಕ್ಕೆ ನೇಯ್ಗೆ ಕಸುಬು ಮಾಡೊ ಇವು ಅವ್‌ಕೆ ಬೇಕಾದ ಕಚ್ಚಾ ವಸ್ತುಗೆ ಈ ಮಲೆನನೆ ನಂಬಿಯೊಳೊ. ಜೇನ್, ಕಾನಕಜೆ, ಉಂಡೆಪುಳಿ ಹಿಂಗೆ ಕಾಡುತ್ಪತ್ತಿಗ ಈ ಬೆಟ್ಟಲಿ ಸಿಕ್ಕಿದೆ. ಇದ್ ಆನೆ, ಹುಲಿ, ಚಿರತೆ, ಕಾಡ್‌ಕೋಣ, ಕಾಡಂದಿ, ಕಡ್‌ವೆ, ಕುರೆ, ಕಾಡ್‌ಕೋಳಿ, ನವಿಲ್‌ಗ, ಹಾವ್ ಮತ್ತೆ ಬೇರೆ ಪ್ರಾಣಿಗಳ ಇರ್‌ವ ತಾಣನು ಆಗುಟು. ಆನೆಗ ಪೂಮಲೆ ಬೆಟ್ಟಲಿ ವಾಸಮಾಡ್ತುದುಲೆತ ಪ್ರತೀತಿ ಉಟ್ಟು. ಆದರೆ ಇತ್ತೀಚಿಗೆನ ದಿನಗಳ್‌ಲಿ ಆನೆಗ ಕಾಂಬಕೆ ಸಿಕ್ಕುದು ಸಾಮಾನ್ಯಾಗುಟು. ಈ ಬೆಟ್ಟಲಿ ಹುಲಿಗ ಕಾಂಬಕೆ ಸಿಕ್ಕಿರೂ ಅಲ್ಲಿನ ಜೆನಕ್ಕೆ ತೊಂದರೆ ಕೊಟ್ಟದ್ದಾಗಲೀ ಇಲ್ಲೆ ಉಬರಡ್ಕ–ಮಿತ್ತೂರು ಬಾಗಲಿ ಯಾವುದೇ ಹಸ್‌ಗಳ ಹಿಡ್ದ್ ತಿಂದ ಉದಾರ್‌ಣೆಯಾಗಲೀ ಇಲ್ಲೆಗಡ. ಆದರೆ ಸಾಕ್ ನಾಯಿಗಳ ಮನೆನ ಇಜ್ವಲ್‌ಂದ ಹಿಡ್ಕಂಡ್ ಹೋಗಿ ತಿಂದದ್ ಉಟ್ಟುಗಡ. ಮಳ್ಗಾಲಲಿ ಉಂಬುಳುಗ ಇಲ್ಲಿ ಇದ್ದದೆ. ಹೆಜ್ಜೆ ಇಸಿದಲೆಲ್ಲ ಉಂಬುಳುಗಳೇ ಕಾಂಬಸ್ಟ್ ತುಂಬಿ ಹೋಗಿದ್ದದೆ. ಮೊಯಿಂಸರ್ ಇಲ್ಲೆ ಪ್ರಾಣಿಗಳ ಸರೀರನ ಉಂಬುಳುಗ ಕಚ್ಚಿಕಂಡರೆ ಅದರ್‌ಂದ ಬುಡ್ಸಿಕಂಬಕೆ ಹರಸಾಹಸನೇ ಪಡೊಕು. ಕಚ್ಚಿಕಂಡಸ್ಟ್ ಹೊತ್ತು ರಕ್ತನ ಹೀರಿಕಂಡೆ ಇದ್ದದೆ.

ಕೂಜಿಗ ತೇಳ್‌ವ ಮಲೆಬೂತಗ ಪೂಮಲೆ ಬೆಟ್ಟಲಿ ಈಗಳೂ ತಮ್ಮ ಅಸ್ತಿತ್ವನ ಆಗಾಗ ತೋರ್ಸುವೆಗಡ. ಇದ್ ಉಳ್ಳಾಕುಲು ದೆವ್ವಗಳ ವೆವಸ್ತೆನ ಕಾಯ್‌ವ ದೆವ್ವತ ನಂಬಿಕೆ ಇಸಿಕಂಡೊಳೊ. ಅಚ್ಚಿಪಳ್ಳ




ಕುಟುಂಬದ ಸದಸ್ಯರ ಪ್ರಕಾರ ಈ ಮಲೆಬೂತಗ ಕೆಲೊಂದು ದಿನಲಿ ಕತ್ತಲೆ ಹೊತ್ತುಲಿ ದೊಡ್ಡ ಸ್ವರಲಿ ಕೂಂಗಿವೆಗಡ. ಅದ್ ಕೂಂಗಿಕಂಡ್ ಮನೆ ಇರ್‌ವ ಪ್ರದೇಸಂದ ದೂರ ದೂರ ಹೋದಂಗೆ ಯಾದೇ ಸಂಕಟ, ಆಪತ್ತ್ ಇಲ್ಲೆತ ಹೇಳ್‌ವ ಸೂಚನೆಗಡ. ಹಂಗೆನೆ ಅದ್ ಕೂಂಗಿಕಂಡ್ ದೂರಂದ ಮನದ್ ಹತ್ತ್ ರಕೆ ಬಂದರೆ ತೊಂದರೆ ಎದುರಾವ ಸೂಚನೆ ತೇಳ್‌ವ ನಂಬಿಕೆ. ಹಂಗೆ ಅದ್ ಮನೆನ ಹಕ್ಕಲೆ ಬಂದ್ ಕೂಂಗಿ ಹೋದ ಎರಡ್ ಮೂರ್ ದಿನಗಳ್‌ಲಿ ಆನೆ, ಹುಲಿ, ಚಿರತೆ ಇವುಗಳ ಪೈಕಿ ಯಾದಾರ್ ಒಂದ್ ಪ್ರಾಣಿ ಇವರ ಮನೆನ ಹಕ್ಕಲೆ ಕಂಡ್ ಬಂದ ನಿದರ್ಶನಗ ಉಟ್ಟುತ ಹೇಳಿವೆ. ಮಲೆಬೂತಗ ಮನೆದ್ ಹಕ್ಕಲೆ ಬಂದ್ ಕೂಂಗಿದ ಮೇಲೆ ಇವು ಹಳ್ಳಾ ಎಚ್ಚರಿಕೆಂದ ಇದ್ದವೆ. ಹಂಗಾಗಿ ಮಲೆಬೂತಗ ಇವರ ರಕ್ಷಣೆ ಮಾಡೊವ್‌ತ ನಂಬಿ ಇವುಗಳ್‌ನ ಬಾರಿ ಸ್ರದ್ದೆ ಬಕ್ತಿಂದ ನಂಬಿವೆ.

ಹಿಂಗೆ ಸುಮಾರ್ ವಿಸೇಸತೆಂದ ವೈವಿದ್ಯತೆಗಳ್‌ಂದ ಕೂಡ್ದ ಈ ಪೂಮಲೆ ಬೆಟ್ಟ ಒಂದ್ ಸುಂದರ ಪ್ರಕೃತಿಯ ತಾಣ. ಅರ್‌ಗಾಲಲಿ ಸುಮಾರ್ ಚಾರಣ ತಂಡಗ ಈ ಬೆಟ್ಟಕ್ಕೆ ಇದರ ಸೊಬಗ್‌ನ ಸವಿಯಕೆ ಬಂದವೆ. ಇಲ್ಲಿನ ಪ್ರಕೃತಿ ವಿಸ್ಮಯನ ಕಂಡ್ ಎಲ್ಲ ಮರ್ತವೆ.ಇಲ್ಲಿರ್‌ವ ವಿಸೇಸತೆಗಳೆಲ್ಲ ಮೊಯಿಂಸನ ಊಹೆಗೂ ಸಿಕ್ಕದೇ ಇರುವಂತದ್ದ್.ದೆವ್ವ ಸೃಸ್ಟಿಂದಲ್ಲದೆ ಬೇರಾವ ಸಕ್ತಿಂದನೂ ಸಾದ್ಯಾಗದ ವಿಸೇಸಗಳೆ ಇಲ್ಲಿನ ವಿಸೇಸ. ಒಟ್ಟುಲಿ ಈ ಪೂಮಲೆ ಹಲವಾರ್ ಅದ್ಬುತಗಳ ಪೊರ್‌ಲುನ ಜಾಗೆ ಆಗುಟು. (ಪಿ.ಬಿ.)

**ಪ್ರಾಣಿ ಆರಾದನೆ :** ಪ್ರಾಣಿಗಳ ಆರಾದನೆ ತೇಳ್‌ದು ಅರೆಬಾಸೆ ಪ್ರದೇಸಕೆ ಸಮ್ಮಂದಪಟ್ಟಂಗೆ ಹೇಳ್ದಾರೆ ಕ್ರಿಸಿ ಸಂಸ್ಕೃತಿಇರ್‌ವ ತಾತ್ವಿಕತೆನ ಒಂದ್ ರೂಪತ ಹೇಳಕ್. ತಮ್ಮ ಬತ್ತದ ಕ್ರಿಸಿನ ಹಾಳ್ ಮಾಡ್‌ವ ಕಾಡಂದಿಗಳ ಆರಾದನಾ ರೂಪಾದ 'ಪಂಜುರ್‌ಲಿ' ಕ್ರಿಸಿ ಸಂಸ್ಕೃತಿಗೆ ಬೇಕಾದ ಪ್ರಾಣಿಗಾದ ದನ, ಎತ್ತ್‌ಗಳ್‌ನ ಕೊಲ್ಲ್‌ವ ಹುಲಿಗಳ ಆರಾದನಾ ರೂಪಾದ 'ಪಿಲಿಚಾಮುಂಡಿ' ಇಲ್ಲೆ 'ಪಿಲಿ ಬೂತ', ಕ್ರಿಸಿ ಕೆಲ್ಸಕೆ ಬೇಕಾದ ಎತ್ತ್ ಇಲ್ಲೆ ಕೋಣಗಳ ಆರಾದನಾ ರೂಪಾದ 'ಮೈಸಂದಾಯ' ಇಂತ ಮೂರ್ ಮುಕ್ಯ ದೆವ್ವಗ ಒಳ, ಈ ದೆವ್ವಗಳ ಪಾಡ್ದನಗಳ ಅದ್ಯಯನ, ಪಾಕ್ಸನಗಳ ಪಟ್ಯ ಮತ್ತೆ ಪ್ರದರ್‌ಸನಗಳ ಅದ್ಯಯನಂದ ಇದ್ ತಿಳ್‌ದ್ ಬಂದದೆ. ಪಂಜುರ್‌ಲಿ ದೆವ್ವದ ಹುಟ್ಟ್‌ನ ನೋಡಿಕನ ಅಣ್ಣತಂಗೆಗಾಗಿದ್ದ ಹಂದಿಮೊರಿಗ ದೇವ್‌ರು ಕೊಟ್ಟ ವರಂದ ಗಂಡಹೆಣ್ಣಾದವೆ. ಹಿಂಗಿರಕನ ಒಂದ್ ದಿನ ಹೆಣ್ಣ್ ಹಂದಿ ಮೊರಿ ಹಾಕಿದೆ. ಈ ಮೊರಿಗಳ ಪಾಡ್ದನಲಿ 'ಅನಿಮೊದ ಬಿದೆ' (ಅನಿಷ್ಟದ ಬೀಜ) ತ ಕರ್‌ದವೆ. ಒಂದ್ ದಿನ ಸಿವ (ಈಶ್ವರ) ಬ್ಯಾಟೆಗೆತ ಹೋಕನ ಈ ಹಂದಿಮೊರಿಗ ಕಣ್ಣಿಗೆ ಕಂಡದೆ. ಸಿವಂಗೆ ಮಕ್ಕ ಇಲ್ಲದ ಕಾರಣಕೆ ಹಂದಿ ಮೊರಿಗಳ ಮನೆಗೆ ತಂದ್ ಸಾಂಕುವೆ. ಬೆಳ್‌ದ್ ದೊಡ್ಡದಾದ ಹಂದಿಮೊರಿಗ ಸಿವನ ನಂದನವನನ ಹಾಳ್ ಮಾಡಿವೆ. ಇದರ್‌ಂದ ಸಿಟ್ಟಾದ ಸಿವ ಹಂದಿಗಳ ಬೇಟೆಯಾಡ್‌ದೆ. ಆ ಹಂದಿ ಸತ್ತ್ 'ಪಂಜುರ್‌ಲಿ' ದೆವ್ವ ಆದೆ.

ಪಿಲಿಚಾಮುಂಡಿ ದೆವ್ವದ ಹುಟ್ಟುನ ಬಗ್ಗೆ ಪಾಡ್ದನಲಿನು ಇದೇ ಆಸಯ ಇರ್‌ದು ಕಂಡ್ ಬಂದದೆ. ಅಣ್ಣತಂಗೆಗಾಗಿದ್ದ ಕೇಂಜವ ಹಕ್ಕಿಗ ದೇವ್‌ರ ವರಂದ ಒಂದ್ ದಿನ ಹೆಣ್ಣ್ ಹಕ್ಕಿಯಾಗಿ ಕೇಂಜವೆದಿ ಗಬ್ಬ ಆಗಿದ್ ಮೊಟ್ಟೆನ ಇಸಿದೆ. ಹೇಳಿಕಂಡ ಹರ್‌ಕೆನಂಗೆ ಉಟ್ಟ ಸುರೂನ ಮೊಟ್ಟೆನ ಈಸ್ವರನ ಪಾದಕೆ ಕಾಣಿಕೆರೂಪಲಿ ಅರ್ಪಿಸಿದೆ. ಈಸ್ವರ ಈ ಮೊಟ್ಟೆನ ಬಾರಿ ಬದ್ರಲಿ ಕಾಪಾಡಿಕಂಡದೆ. ಒಂದ್ ದಿನ ಈ ಮೊಟ್ಟೆಲಿ ಕೇಡಾಗಿ ಮೊಟ್ಟೆ ಒಡ್‌ದ್ ಕುಮಾರ ಹುಟ್ಟಿದೆ. ಇಂವನ 'ದೂರುದುರ್ಬಲ ಕುಮಾರ' ತ. ಪಾಡ್ದನಲಿ ಕರ್‌ದೊಳೊ. ಹುಟ್ಟಿಕಾಕನೆ ಇಂವ ಹುಲಿನ ರೂಪಲಿದ್ದದೆ. ಈಸ್ವರನ ಹಸ್‌ಗಳ್‌ನ ಮೇಸಿಕೆತ ಹೋದಂವ, ಹಸ್‌ಗಳ್‌ನ ಬೆರ್‌ಸಿಕಂಡ್ ಹೋಗಿ ದಿನಕ್ಕೊಂದೊಂದೇ ಹಿಡ್‌ದ್ ತಿಂದದೆ. ಕಡೆಗೊಂದ್ ದಿನ ಈಸ್ವರಂಗೆ ಹಾಲ್ ಕೊಡ್‌ತಿದ್ದ ಕಪಿಲೆತೇಳ್‌ವ ಹಸ್‌ನ ಹಿಡ್ದದೆ. ಇದ್ ಈಸ್ವರಂಗೆ ಗೊತ್ತಾಗಿ ಸಿಟ್ಟ್ ಬಂದ್ ಕುಮಾರನ ಬೇಟೆ ಆಡ್‌ದೆ. ಹುಲಿ ಸತ್ತ್ 'ಪಿಲಿ ಚಾಮುಂಡಿ' ದೆವ್ವ ಆದೆ ಹಿಂಗೆ ಅಣ್ಣತಂಗೆ ಆಗಿದ್ದ ಹಂದಿ ಮತ್ತೆ ಕೇಂಜವ ಹಕ್ಕಿಗ ವರಂದ ಗಂಡ ಹೆಣ್ಣಾದು, ಹಂದಿ ಮತ್ತೆ ಹುಲಿನ ಹುಟ್ಟು ಆದು ವಿಸೇಸ ರೀತಿಲಿ ಕಂಡ್ ಬಂದದೆ. ಈ ತರದ ಲೈಂಗಿಕ ಸಮ್ಮಂದಗ ಮೊಯಿಂಸರ ಲೋಕಲಿ ಕಂಡ್ ಬಾಕೆ ಸಾದ್ಯ ಇಲ್ಲೆ. ಬದ್‌ಲಾಗಿ ವಾಸ್ತವಲಿ ಪ್ರಾಣಿಲೋಕಲಿ ಮಾತ್ರ ಕಂಡ್‌ಬಂದದೆ. ಹೀಂಗೆ ಸಮ್ಮಂದಗಳ ಒಪ್ಪದ ಜೆನಪದ ಸಮಾಜಕೆ ಇವ್‌ಕೆ ಹುಟ್ಟಿದ ಮೊರಿಗ ಸನ ಅನಿಸ್ಟಗ ಆಗಿ ಕಂಡ್ ಬಾತ್. ಅದ್ಕೆ ಪಾಡ್ದನಲಿ ಇದರ 'ಅನಿಜ್ಯೋದ ಬಿದೆ ಮತ್ತೆ 'ದೂರುದುರ್ಬಲ' ಕುಮಾರ ತ ಕರ್‌ದೊಳ. ಕೈಯಾರೆ ಸಾಂಕಿದ ಹಂದಿಮೊರಿಗ ಬೆಳ್‌ದ್ ದೊಡ್ಡದಾದ ಮೇಲೆ ಈಸ್ವರನ ನಂದನವನನ ಹಾಳ್ ಮಾಡಿವೆ. ಹುಲಿ ಅವರದೆ ಹಸ್‌ಗಳ ಹಿಡ್ದದೆ. ಇದರ್‌ಂದ ಸಿಟ್ಟ್ ಬಂದ್ ಈಸ್ವರ ಅದರ ಬ್ಯಾಟೆ ಆಡಿ ಕೊಂದದೆ.

ಇಲ್ಲಿ ಕೊಲ್ಲುದು ಮತೆ ಆರಾದ್‌ಸುದು ಎರ್‌ಡ್ ಕ್ರಿಯೆಗ ಒಟ್ಟಿಗೆ ನಡ್ದದೆ. ಕೊಂದ ಮೇಲೆ ಹೆದ್‌ರಿಕೆಂದ ಈಸ್ವರನ ಅಲೌಕಿಕ ನೆಲೆಲಿ ಆರಾದ್‌ಸುವೆ. ತನ್ನ ಕ್ರಿಸಿಗೆ ಮಾರಕ ಆವ ಕಾಡ್‌ಹಂದಿ ಮತ್ತೆ ಹುಲಿಗಳ ಬೇಟೆ ಆಡಿ ಕೊಂದ್ ಪಂಜುರ್‌ಲಿ ಮತ್ತೆ ಪಿಲಿಚಾಮುಂಡಿಗ ಆಗಿದ್ ಅಲೌಕಿಕ ನೆಲೆಲಿ ಆರಾದನೆ ಮಾಡ್‌ದು ಮೊಯಿಂಸ ಮತ್ತೆ ಈ ಪ್ರಾಣಿಗಳ ಮೇಲೆನ ಹಿಡ್‌ತದ ಒಂದ್ ರೂಪಂತ ಹೇಳಕ್. ಆರಾದನೆಂದ ಪ್ರಾಣಿಗಳ ಕುಸಿ ಮಾಡ್ಸುದು ತೇಳಿರೆ ಇದರ ನಡ್‌ಸಂವ ಮೊಯಿಂಸ ಆದ ಕಾರಣಕೆ ಅಂವ ಪ್ರಾಣಿಂದ ಸ್ರೇಸ್ಟ ಆಗಿ ಕಂಡ್‌ಬಂದದೆ. ಹಂಗಾಗಿ ಪ್ರಾಣಿಗಳ ಆರಾದನೆ ತೇಳ್‌ದು ಕ್ರಿಸಿ ಸಂಸ್ಕೃತಿ, ಸಾಸ್ತ್ರಿಕತೆನ ಒಂದ್

ಬಾಗ ಆಗಿದ್ ಕಂಡ್‌ಬಂದದೆ. ಆರಾದನೆಂದ ತನ್ನ ಕ್ರಿಸಿಗೆ ಮಾರಕ ಆವ ಈತರದ ದುಸ್ಪ ಸಕ್ತಿಗಳಿಗೆ ಕಡಿವಾಣ ಹಾಕುದು ಮಾತ್ರಲ್ಲದೆ ಅದರ್‌ಂದಾಗಿ ಕ್ರಿಸಿಲಿ ತನ್ನ ಉತ್ಪಾದನೆನ ಹೆಚ್ಚಿ ಮಾಟ್‌ವ ಉದ್ದೇಸಂದ ಮಾಡ್‌ದ ತಂತ್ರ ಇದ್‌ತ ಹೇಳಕ್. (ಎ.ಎ)

**ಪ್ರಾಣಿ ಜೆನಪದ :** ಬೂಮಿನ ಒಂದ್ ಬಾಗ ಆಗಿ ಬೆಳ್ದ ಮೊನ್‌ಸ ಕಾಡ್‌ನ ಬೇರೆ ಪ್ರಾಣಿಗಳೊಟ್ಟಿಗೆ ಸಹಜ ರೀತಿಲೆ ಬಿನ್ನ ನೆಲೆಲಿ ಸಮ್ಮಂದನ ಬೆಳ್‌ಸಿಕಂಡುಟು. ದೋಸ್ತಿ ಮತ್ತೆ ವಿರೋದದ ನೆಡುನ ಸಮ್ಮಂದನ ಪ್ರಾಣಿಗಳೊಟ್ಟಿಗೆ ಬೆಳ್‌ಸಿಕಂಡ ಮೊನ್‌ಸ ಅದ್ಕೆ ಅನುಗುಣಾಗಿದ್ ತನ್ನ ಜೆನಪದಲಿ ಅದರೆಲ್ಲ ಕಟ್ಟಿಕಂಡುಟು. ಬೇಟೆಂದ ಕ್ರಿಸಿನಂತ ಸರಳ ಆರ್‌ತಿಕ ವೆವಸ್ತೆಗೆ ಬಾವ ಹೊತ್ತುಗೆ ಮೊಯಿಂಸ ಸುಮಾರ್ ಪ್ರಾಣಿಗಳೊಟ್ಟಿಗೆ ಸಮ್ಮಂದನ ಸುರು ಮಾಡಿಕಂಡುಟು. ಆಹಾರ ಮತ್ತೆ ಆರಾಮ ತೇಳ್‌ವ ಎರ್‌ಡ್ ನೆಲೆಲಿ ಪ್ರಾಣಿ ಮತ್ತೆ ಮೊನ್‌ಸನ ಸಮ್ಮಂದ ಅಂವನ ಸಾಮಾಜಿಕ ಮತ್ತೆ ದಾರ್ಮಿಕ ಬೊದ್‌ಕ್‌ಲಿ ಆಗಾಗ ಕಾಂಬಕೆ ಸಿಕ್ಕಿದೆ. ಇಂತ ಪ್ರಾಣಿಗಳ ಬಗ್ಗೆ ಅಂವನ ನಂಬಿಕೆಗ ವಿಸೇಸ ಆಚರಣೆ ಮತ್ತೆ ಆರಾದನೆಗಳ ರೂಪಗಳ್‌ಲಿ ಕಾಂಬೊದರ ನೋಡಕ್. ನಮ್ಮ ಸಂಸ್ಕೃತಿ ಎಸ್ಟೆಲ್ಲ ಬೊದ್‌ಕ್‌ನ ಕಡೆಲಿ ನಾವ್‌ಗೆ ಕಲ್ಪಿಸಿಕೊಟ್ಟುಟೊ ಅಸ್ಟೆಲ್ಲ ಕಡೆಲಿ ಪ್ರಾಣಿಗಳ ಬೊದ್ಕುನು ಸೇರಿಕಂಡುಟು. ಇದರ್‌ಂದ ಒಂದ್ ಅರ್‌ತಲಿ ಮಾನವ ಜೆನಪದ ತೇಳಿರೆ ಪ್ರಾಣಿಗಳ ಬೊದ್‌ಕ್‌ನ ತನ್ನೊಳೆಗೆ ಸೇರ್‌ಸಿಕಂಡದೇ ಆಗುಟು. ಹಿಂಗೆ ಮೊನ್‌ಸನ ಸಾಂಸ್ಕೃತಿಕ ಬೊದ್‌ಕ್‌ನ ಒಟ್ಟಿಗೆ ಕೂಡಿಕಂಡ ಪ್ರಾಣಿ ಬೊದ್‌ಕ್‌ನ ನಾವು 'ಪ್ರಾಣಿ ಜೆನಪದ' ತೇಳಿವೆ.

ಇಂತ ಪರಿಕಲ್ಪನೆ ಜೆನಪದರ್ ಮತ್ತೆ ಪ್ರಾಣಿಗಳ ಸಮ್ಮಂದ ಇರ್‌ವಂತದ್. ಜೆನಪದ ಪ್ರಾಣಿಗಳ ತಿನಿ, ಕ್ರೀಡೆ, ಬೇಟೆ, ಆರೋಗ್ಯ, ಆಚರಣೆ, ಆರಾದನೆ, ಬಲಿ ಹಿಂಗೆ ಬೇರೆ ಬೇರೆ ಉದ್ದೇಸಕೆ ಬಳ್ಸಿಕಂಡ್ ಬಂದ ಕಾರಣ ಮತ್ತೆ ಉದ್ದೇಸಗಳ ಇಂತ ಪರಿಕಲ್ಪನಾತ್ಮಕ ಅದ್ಯಯನಲಿ ನಡ್‌ಸಿಕೆ ಸಾದ್ಯ ಆದೆ. ಜೆನಪದರ್ ಮತ್ತೆ ಪ್ರಾಣಿಗಳ ಸಮ್ಮಂದನ ವಿವರ್‌ಸುವ ಮಟ್ಟಲಿ ಇಂತ ಅದ್ಯಯನ ನಿಲ್ಲದೆ ಜೆನಪದರ್ ಮತ್ತೆ ಪ್ರಾಣಿಗಳ ಸಮ್ಮಂದಗ ಬೇರೆ ಬೇರೆ ಕಡೆಲಿ ಇದರ ತಿಳಿವಂಗೆ ಇದ್ದ್ ಮುಂದುವರ್‌ದದೆ. ಕಾಡ್‌ಲಿ ಬೇಟೆ ಆದ್‌ತಿದ್ದ ಮೊನ್‌ಸ ಕಾಡ್‌ಂದ ಹೊರೆಗಿರ್‌ವ ನಾಡಿಗೆ ಬಂದ್ ಕಾಡ್‌ಲಿ ಮೊಯಿಂಸನ ರೂಪಲಿದ್ದ ಬೇಟೆನ ಊರ್‌ಲಿ ಆಚರಣೆ ಆಗಿದೊ ಹವ್ಯಾಸ ಆಗಿನೊ ಮಾಡಿಕಂಡ ಹೊತ್ತುಲಿ ಇತಿಯಾಸಲಿ ಇದ್ ಒಂದ್ ಪ್ರಮುಕ ಗಟ್ಟ ಆಗುಟು. ಈ ಹಿನ್ನೆಲೆಲಿ ನೋಡಿರೆ ಪ್ರಾಣಿಜೆನಪದ ಪರಿಕಲ್ಪನೆ ಜೆನಪದರ್ ಮತ್ತೆ ಪ್ರಾಣಿಗಳ ಸಮ್ಮಂದನ ಅದರ ಮೇಲ್ತಟ್ಟ್‌ಲಿ ನೋಡದೆ ಜೆನಪದ ಸಂಸ್ಕೃತಿಯೊಂದರ ಚಾಳಕೆ ಇಳ್‌ದ್ ನೋಡಿಕೆ ಉಪಕಾರ ಆವಂತ ಒಂದ್ ಕಲ್ಪನೆ ಆವುಟು. (ಎ.ಎ.)

**ಪ್ರಾಣಿ ಬೇಟೆ :** ಮೊನ್‌ಸನ ವಿಕಾಸ ಪ್ರಾಚೀನ ಸಿಲಾಯುಗಂದ ಬೇರೆ ಬೇರೆ ಕಾಲಲಿ ಕಟ್ಟಿಕಂಡ್ ಬದ್‌ಲಾಗ್‌ತಾ ಬಂದುಟು. ಮೊನ್‌ಸ ತನ್ನ ತಾಂತ್ರಿಕ ತಾಕತ್‌ನ ಹೆಚ್ಚ್‌ಸಿಕಂಡ್ ತನ್ನ ಸಾಂಸ್ಕೃತಿಕಬೊದ್ಕುನ ವಿಸ್ತಾರದೊಟ್ಟಿಗೆ ನಿರಂತರ ಮುಂದೆ ಹೋಗತುಟ್ಟು. ಇದರೊಟ್ಟಿಗೆ ಅಂವನ ಸರ್ವದ ಹಂಗೆ ಬುದ್ದಿ ಬೆಳ್ಕಂಡ್ ಹೋಪ್‌ತುಟ್ಟು. ಇದ್‌ಕೆ ಅಂವ ಬೊದ್ಕ್‌ವ ಪರಿಸರ, ಹವಾಗುಣ ಸನ ಕಾರಣ ಆವುಟು. ಬೇಟೆ ಸಂಸ್ಕೃತಿನ ಮೊನ್‌ಸ ಒಂದ್ ಕಡೆ ನೆಲೆ ಊರಿ ಪ್ರಾದೇಸಿಕ ನೆಲೆನ ಗುರ್‌ತ್‌ಸಿಕಂಡ್ ಬೊದ್ಕ್‌ಗೆ ಬೇಕಾದ ಅಗತ್ಯಗಳ ಪೂರೈಸಿಕಂಬಕೆ ನೋಡ್ದೆ ಆಹಾರಕ್ಕಾಗಿ ಬೇಟೆ ಆಡ್‌ತಿದ್ದ ಮೊನ್‌ಸ ಪ್ರಾಣಿಗಳ ಕಾಲಕ್ರಮೇಣ ಪಳ್‌ಗಿಸಿಕಂಡ್ ಅವ್‌ಗಳ ತನ್ನ ಕ್ರಿಸಿ ಉಪಯೋಗಕೆ ಬಳ್‌ಸಿಕಂಡತ್. ಹಿಂಗೆ ಪ್ರಾಣಿ ಮತ್ತೆ ಮೊನ್‌ಸರ ನಡುಲಿ ಇರ್‌ವ ಸಮ್ಮಂದಕೆ ಜಾಗೆನ ಅವಸ್ಯಕತೆ ಕಾರಣ ಆತ್. ಬೇಟೆ ಸಂಸ್ಕೃತಿಮತ್ತೆ ಕಸಿ ಸಂಸ್ಕೃತಿಗಳ ಸಮ್ಮಂದಲಿ ಮೊನ್‌ಸ ಮತ್ತೆ ಪ್ರಾಣಿಗಳ ಸಮ್ಮಂದ ರೂಪ ಬದಲಾಕಂಡ್ ಬಂದುಟು. ಜೆನಪದ ಸಮಾಜದ ರಚನೆ ಬದಲಾವಣೆ ಆದಂಗೆಲ್ಲ, ಮೊನ್‌ಸ ಮತ್ತೆ ಪ್ರಾಣಿಗಳ ಸಮ್ಮಂದಲಿ ಸನು ವೆತ್ಯಸ ಕಂಡ್ ಬಂದದೆ. ಪ್ರಸ್ತುತ ಪ್ರಬಂದಲಿ ಅರೆಬಾಸೆನ ಪರಿಸರಲಿ ಸಾಂಕೇತಿಕ ಆಗಿ ಒಳ್ದ್ ಬಂದ ಬೇಟೆನ ಬಗ್ಗೆ ವಿವರ್‌ಸಿಯೊಳೊ. ಇಲ್ಲಿನ ಜೆನ ಪ್ರದಾನ ಆಗಿ ಕ್ರಿಸಿನ ನಂಬಿಕಂಡ್ ಬೊದ್‌ಕ್‌ನ ನಡ್‌ಸೊವು ಕ್ರಿಸಿಂದಾಗಿ ಬೂ ಒಡೆತನ ಕಾಂಬಕೆ ಸುರು ಆಗಿ ಅಲ್ಲಿ ಒಬ್ಬ ಜಮೀನ್‌ದಾರನು ಹುಟ್ಟಿಕಂಡದೆ. ಹಿಂಗಾಗಿ ಕ್ರಿಸಿಪ್ರದಾನ ಆದ ಊರುಲಿ ಬೂ ಮಾಲಿಕರ್ 'ಕ್ಷೇತ್ರ'ದ ತೇಳಿರೆ ಬೂಮಿನ ಒಡೆಯರಾಗಿ ಕಂಡವೆ. ಇವ್‌ಕೆ ತಮ್ಮ ಕ್ಷೇತ್ರ ರಕ್ಷಣೆನ ಒಟ್ಟಿಗೆ ತಮ್ಮ ಸಾಕ್ ಪ್ರಾಣಿಗಳ ಸಂರಕ್ಷಣೆನೂ ಒಂದ್ ಕಾಲಲಿ ಬಾಳ ಅನಿವಾರ್ಯ ಆಗಿತ್ತ್. ಏಕೆ ತೇಳಿರೆ 'ಕಾಡ್' ಪ್ರಾಣಿಗ ಬಂದ್ ಬೂಮಾಲಿಕರ ಜಾಗೆಗೆ ಹುಕ್ಕ್ ಮಾಡಿ ಅಲ್ಲಿ ತಮ್ಮ ಪ್ರಾಬಲ್ಯನ (Hegemony) ಇಸಿಕಣತಿದ್ದೊ. ಹಿಂಗಾಗಿ ಅವ್‌ಗಳ ಮೇಲೆ ನಿಯಂತ್ರಣನ ಅಂವ ಸಾದಿಸಕಾಗಿತ್ತ್. ಹಿಂಗೆ 'ಕಾಡ್ ಪ್ರಾಣಿಗಳ ಮೇಲೆ ಜಾಗೆನ ಒಡೆಯರ್ ಯಜಮಾನಿಕೆನ ಮಾಡಿಕೆನಡ್ ಸಿದ ಪ್ರಯತ್ನನೇ ಬೇಟೆತ ಹೇಳಕ್. ಈಗನ ಕಾಲಲಿ ಬ್ಯಾಟೆನ ಸಂಸ್ಕೃತಿನೆ ನಾವ್‌ಗೆ ಪ್ರಸ್ನೆಯಾದೆ. ಆದ್‌ರೆ ಒಂದ್ ಕಾಲಲಿ ಬ್ಯಾಟೆನ ಬಗ್ಗೆ ಇದ್ದ ಅನಿವಾರ್ಯತೆನ ಅಲ್ಲಿನ ದಾರ್ಮಿಕ ಆಚರಣೆಗ, ಸಾಮಾಜಿಕ ಆಚರಣೆಗ, ಬ್ಯಾಟೆಗೆ ಸಮ್ಮಂದ ಪಟ್ಟ ಕೊಣ್‌ತಗ ಮತ್ತೆ ನಂಬಿಕೆಗ, ಬೇಟೆನ ಬಗೆಗೆ ಜೆನಪದರ್. ಕಟ್ಟಿಕಂಡ ನಿರ್‌ದಿಸ್ಟ ಕಾಲಕೆ ಮತ್ತೆ ಉದ್ದೇಸದೊಟ್ಟಿಗೆ ಅದ್ಯಯನ ಮಾಡಕ್.

ಕ್ರಿಸಿ ಸಂಸ್ಕೃತಿಗೆ ಸಮ್ಮಂದ ಪಟ್ಟಂಗೆ ಸುಮಾರ್ ಕ್ರಿಯಾಚರಣೆಗ ಅರೆಬಾಸೆ ನಾಡ್‌ಲಿ ಇಂದಿಗೂ ಒಳ್‌ದುಟು.ಇಂತದರ್‌ಲಿ 'ಕಡ್ದಾಸ' ಆಚರ್‌ಣೆ ಸನು ಒಂದ್. ಬೂಮಿ ಅವ್ವ ಮುಟ್ಟ್ ಆವ ಕಾಲಂತೇಳಿ ತಿಳ್‌ದ್ ಅರೆಬಾಸೆ ಪ್ರದೇಸದ ಎಲ್ಲ ಕಡೆ ಬ್ರಾಹ್ಮಣೇತರರ್ ಎಲ್ಲೊವು




ಇದರ ಆಚರ್‌ಸುವೆ. 'ಬೂಮಿತಾಯಿ ಋತು ಆಗಿ ಬೀಜೋತ್ಪತ್ತಿನ ಕಾಯತಿರ್‌ವ ಸಂದಿಕಾಲದ ಈ ಹಬ್ಬ ಋತುಮಾನಕೆ ಸಮ್ಮಂದ ಪಟ್ಟದಾಗುಟು. ಸಾಮಾನ್ಯ ಆಗಿ ಮೂರ್ ಇಲ್ಲರೆ ನಾಕ್ ದಿನಗಳ ಕಾಲ ಈ ಆಚರಣೆನ ನಡ್‌ಸುವೆ. ಮಕರಮಾಸದ (ತುಳುವಿನ ಪೊನ್ನಿ) ಇಪ್ಪತ್ತೇಳ್‌ನೆ ದಿನ ಹಿಂಬೋತುಂದ ಕುಂಬ ಸಂಕ್ರಮಣದವರೆಗೆ ನಡೆವ ಈ ಹಬ್ಬದ ಹಿನ್ನೆಲೆಲಿ ಇರ್‌ವ ಪ್ರಾಚೀನ ಸಾಂಸ್ಕೃತಿಕಆಸಯ ಪಲೀಕರಣಾಕಾಂಕ್ಷೆ ತೇಳ್‌ದು ಸುವ್ಯತ್ತ'. ಜೆನಪದರ್ ತಾವ್ ಪೂಜೆ ಮಾಡ್ವ ದೇವತೆಗಳಿಗೆ ನಮ್ಮಂಗೆನೆ ಕಾಯವಿಕಾರಗಳ,ತಿನಿ, ನಿದ್ದೆ, ಹೆದ್‌ರಿಕೆ, ಮೈತುನ ಇಂತ ಪ್ರಕಸುಬುನ ಅವು ಆಚರ್‌ಸುವ ಹಬ್ಬಹರಿದಿನ, ನಂಬಿಕೆಗಳ್‌ಂದ ತಿಳ್‌ಕಣಕ್. ಹೆಣ್ಣ್ ದೇವತೆಗೆ ಸಾಮಾನ್ಯ ಹೆಣ್ಣ್ ನಂಗೆ ರಜೋದರ್‌ಸನ ಆದೆತೇಳ್‌ವ ಕಲ್ಪನೆನ ಹಿನ್ನೆಲೆಲಿ ಈ ನಮ್ನೆನ ಆಚರಣೆಗಳ್‌ನ ನಡ್‌ಸುವೆ. ಸಾಂಸ್ಕೃತಿಕ

ವರ್‌ಸೊಳು ನಡ್ಸುವ ಈ ಆಚರಣೆಲಿ ಬೂಮಿ ಅವ್ವಂಗೆ ಬೇನೆ ಮಾಡ್‌ವ ಯಾದೇ ಕೆಲ್‌ಸನ ಜೆನಪದರ್ ಈ ದಿನಗಳ್‌ಲಿ ಮಾಡ್‌ದುಲೆ. ಅದರಂದನೆ ಕೆಡ್ಡಸದ ಬೇಟೆಗೆ ಹೇಳಿಕೆ ಕೊಡ್‌ವ ಅಜಿಲಾಯ 'ಪಜಿ ಕಡ್‌ಪಿಯರ ಬಲ್ಲಿ, ಉಳಂಗೆಲ್ ಪೊಲಿಪೈರೆ ಬಲ್ಲಿ' ಹಸಿ ಕಡಿಯಕಾದ್. ಒಣ್‌ಗಿಲ್ ಮುರೆಕಾದ್ ತೇಳ್‌ವ ಕರೆ ಕೊಟ್ಟದೆ, ಮುಟ್ಟ್ ನ ಕಾಲಲಿ ಬೂಮಿ ಅವ್ವಂಗೆ ಬೇನೆ ಆದ್‌ರೆ ತಾಯಿ ಬರ್‌ಡಾದೆಂತೇಳ್‌ವ ನಂಬಿಕೆನ ಹಿನ್ನೆಲೆಲಿ ಈ ಮೂರ್ ದಿನಗಳ್‌ಲಿ ಬೂಮಿನ ಹೂಡುದಾಗಲಿ, ಅಗೆದಾಗಲಿ, ಕಡಿಯದಾಗಲಿ ಮಾಡ್‌ವ ಕೆಲ್‌ಸಗಳ ನಿಸೇದ್‌ಸುವೆ. ಹಂಗಾಗಿ ಈ ದಿನಗಳ್‌ಲಿ ಜೆನ ಕಾಡಿಗೆ ಬೇಟೆಗೆ ಹೋದವೆ. ಇದ್ 'ಕಡ್ಡಾಸದ ಬೇಟೆ' ತನೆ ಹೆಸ್‌ರಾಗುಟು. 'ಬೊಟ' ಬೆಡ್ಡ', 'ಕಸ್ಪ' ತೇಳ್‌ದಕೆ 'ಬೇಟೆ'ತೇಳ್‌ವ ಅರ್‌ತ ಇದ್ದ್, ಕಡ್ಡಾಸಕೆ ಸಮ್ಮಂದಪಟ್ಟಂಗೆ ಬೇಟೆನೂ ಒಂದಾಗಿರುದರ್‌ಂದ ಈ ಹೆಸ್‌ರ್ ಬಂದಿರೊಕು. ಬೇಟೆಗೆ ಒಂದ್ ದಿನ ಮುಂದೆನೆ ಅಜಲಾಯ ಡೋಲ್ ಬೊಟ್ಟಿಕಂಡ್ ಮನೆಮನೆಗೆ ಹೋಗಿ ಕರೆಕೊಡ್‌ವ ಪೊದ್ದತಿ ಉಟ್ಟು. ಮತ್ತೆ ಬೇಟೆನ ದಿನ ಇಂವ ಸುರೂಲೆ ಡೋಲ್ ಬಡ್‌ಕಂಡ್ ಬೇಟೆಗಾರರ ಪುಸಲಾಯ ಬೊಬ್ಬೆ ಹಾಕಂಡ್ ಕಾಡ್‌ಲಿ ಹಜ್ಞದೂರ ಹೋಗಿ ಒಂದ್ ಪುಂಡಿ ಪೊಯ್ಯನ ಇಟ್ಟವೆ. ಇದೊಂದ್ ತರದ ಮೃಗಂಗಳ ಕಣ್ಣ್‌ಕಟ್ಟ್‌ಸ್‌ವ ಒಂದ್ ನಂಬಿಕೆ ಇರೊಕುತ ಅಬಿಪ್ರಾಯ ಪಟ್ಟವೆ. ಕೆಡ್ಡಾಸ ನಡ್ಸುದಕೆ ಸಮ್ಮಂದ ಪಟ್ಟಂಗೆ ಕೆಲೊವು ನಿಯಮಗ ಉಟ್ಟು. ಇದರ್‌ಲಿ ಕೆಡ್ಡಾಸಲೊಂದ್ ಎಲ್ಲೊವು ಬ್ಯಾಟೆ ಆಡಕುತೇಳ್‌ವ ಒಂದ್ ನಿಯಮ ಉಟ್ಟು. ಈ ದಿನಗಳ್‌ಲಿ, ಕಾಡ್ ಪ್ರಾಣಿಗಳಿಗೆ ' ಕಾರಗುಂಟ' (ಕಾಲಿನ ಗೊರಸು ಒಡೆವ ಒಂದ್ ರೋಗ ಇರ್‌ದರ್‌ಂದ ಬೇಟೆಗೆ ಸುಲಬ ಆದೆತ ನಂಬುವೆ. ಕಡ್ಡಾಸಕೆ ಸಮ್ಮಂದ ಪಟ್ಟಂಗೆ ಇರ್‌ವ ಇನ್ನೊಂದ್ ನಂಬಿಕೆಂತೇಳಿರೆ ' ಕಡ್ಡಾಸ್'ದ ದಿನ ಮಾಸ ತಿಂಬೊವು ಮಾಸದೂಟನ ಮಾಡಿಯೇ ತೀರೊಕು. ಒಂದ್ ಪಕ್ಸ ಮಾಸ ಸಿಕ್ಕದಿದ್ದರೆ ನುಗ್ಗೆ, ಬದ್‌ನೆಕಾಯಿನ ಸೇರ್‌ಸಿ ಮಾಡ್ದ ಗೈಪು ಮಾಡಕು, ಇಲ್ಲರೆ ಎಲು ಕುಟ್ಟೆಚುರ್‌ದದೆ ತೇಳ್‌ವ ನಂಬಿಕೆ ಉಟ್ಟು. ಕೆಡ್ಡಾಸ ಆಚರಣೆಂದ ಬೂಮಿದೇವಿನ ಪಲವಂತಿಕೆನ ನಿರೀಕ್ಷಿಸ್‌ವ ಜೆನಪದರ್ ಇದ್ಕೆ ಪೂರಕ ಆದ ಆಚರಣೆಗಳ ನೆರವೇರ್‌ಸುವೆ. ಬೂಮಿದೇವಿನ ಹೆಣ್ಣ್‌ತ ನೆನ್ಸಿಕಂಡ್ ಜೆನಪದರ್ ಅಯ್ಯೆನನು ಬೇರೆ ಹೆಣ್ಣ್ ಮಕ್ಕಳಂಗೆ ಹೊರೆಗೆ ಆದೆತ ನಂಬಿದೊ. ಹೆಣ್ಣೊಂದ್ ತನ್ನ ಮುಟ್ಟ್ ಕಳ್ದ ಮೇಲೆ ಹೆಂಗೆ ಸಂತಾನನ ಪಡೆಕೆ ತಯಾರಾದೆನೊ ಹಂಗೆನೆ ಬೂಮಿತಾಯಿನು ತನ್ನ ಮುಟ್ಟ್ ನ ಆಚರಣೆ ಕಳ್ದ ಮೆಲೆ ಬೂಮಿಲಿ ಪಲನ ಕೊಡಿಕೆ ತಯಾರಾದೆ. ಹಿಂಗಾಗಿ ಬೂಮಿದೇವಿನ ಮುಟ್ಟ್ ನ ಆಚರಣೆ ಕಳ್ದ್ ಬೂಮಿಲಿ ಬೆಳೆಕಾದ ಬೆಳೆಗಳಿಗೆ ಕಾಡ್ ಪ್ರಾಣಿಗಳ್‌ಂದ ಬಾವ ತೊಂದರೆನ ಮುಂದೆನೆ ತಡಿಯಕೆ ಕೆಡ್ಡಾಸದ ದಿನ ಬೇಟೆ ಆಡೊಕುತೇಳ್‌ವ ಕ್ರಮ ಇರ್‌ದರ ನಾವು ನೋಡಕ್. ಬೇಟೆ ಸಾಹಸದ, ಅಪಾಯದ ಕೆಲ್‌ಸ, ಪರ್ಮತಿ ಬಾಳರ್ ನಡ್‌ಸಿದ ಬೇಟೆ ಮತ್ತೆ ಅದರ್‌ಂದ ಆವ ಅಪಾಯನ ಕೋಟಿ ಚೆನ್ನಯ ಪಾಡ್ದನಂದ ತಿಳ್ಕಣಕ್. ಹಂಗಾಗಿ ಅಪಾಯಕರ ಆದ ಬ್ಯಾಟೆಲಿ ತಾವು ಗೆದ್ದ್ ಸಾದ್‌ಸಿಕೆ ಮೊನ್‌ಸ ಬೇಟೆ ದೇವುರ್‌ಗಳ ಸೃಸ್ಟಿಸಿಕಂಡತ್, ಏಕೆಂತೇಳಿರೆ ದೆವ್ವಗ ಎಂದೂ ಸೋಲ್‌ದುಲೆ. ಈ ತರದ ಬೇಟೆನ ದೇವುರ್‌ಗ ಸನು ಬೇಟೆಲಿ ಬಿರ್‌ಸರಾಗಿದ್ದ ಸತ್ತ ಮೊನ್‌ಸರೆ. ಉದಾರ್‌ಣೆಗೆ : ಬೇಟೆಗೆ ಹೊರಡಿಕನ ಮುಗೆರ್‌ಲು ದೆವ್ವಗಳ ಪ್ರಾರ್‌ತನೆ ಮಾಡಿ ಹೋದರ ನೋಡುವೆ. ಮುಗೇರರ್ ಮೂಲತ ಉಸಾರ್‌ನ ಬೇಟೆಗಾರರಾಗಿದ್ದೊ. ಹಂಗೆನೆ ಬಿಲ್ಲ್‌ಲಿ ಸನು ಬೇಟೆ ಆಡ್ದರ್‌ಲಿ ಇವು ಬಾರಿ ಬಿರ್‌ಸರ್ ಆಗಿದ್ದೊಂತೇಳ್‌ದ್ ಪಾಡ್ದನಂದ ಮತ್ತೆ ಮುಬ್ಯೆರ್‌ಲು ದೆವ್ವಗಳ ಆರಾದನೆಂದ ತಿಳ್ದ್ ಬಂದದೆ. ಅಲ್ಲದೆ ಬೇಟೆಗೆ ಹೊರ್‌ಡಿಕನ ಬೆರ್ಮೆರ ದೆವ್ವಕೆ ಕೈ ಮುಗ್ದ್ ಹೋವ ಕ್ರಮನೂ ಉಟ್ಟು. ಪಾಡ್ದಲಿ ಇಂವನ ಒಬ್ಬ ಯೋದನಂಗೆ ಉಟ್ಟು. ಈ ಕಾಡ್‌ನ ದೆವ್ವ (Forest God) ಕೂಡಾ ಹೌದು, ಚರ್ಮರ ದೆವ್ವನ ಬಿಳಿಕುದ್‌ರೆನ ಮೇಲೆ ಬೆಳ್ಳಿ ಕೊಡೆನ ಹಿಡ್‌ಕಂಡ್ ಕುದ್ದಂಗೆ, ತಲೆಗೆ ಲೋಹದ ಟೊಪ್ಪಿನ ಹಂಗೆ ಎದೆಗೆ ಗುರಾಣಿ ಮುಚ್ಚಿಕಂಡಂಗೆ ತೋರ್‌ಸಿಯೊಳೊ. ಕೆಮ್ಮಲೆ ಕಾಡ್‌ಲಿ ಚರ್ಮ ಬಲ್ಲಾಳರ್‌ಗೆ ಬೇಟೆ ಸೇರಿ ಬರದಾಕನ ಬೆರ್ಮೆರ ದೆವ್ವಕೆ ಸಾಸ್ವತ ಹರಿಕೆ ಹೇಳಿಕಣಿಕನ ಬೇಟೆ ಸಿಕ್ಕಿದ ಸನ್ನಿವೇಸ ಕೋಟಿ ಚೆನ್ನಯ ಪಾಡ್ದನಲಿ ಉಟ್ಟು. ಹಿಂಗೆ ಸಾಹಸ ಮತ್ತೆ ಅಪಾಯದ ಕೆಲ್‌ಸ ಆದ ಬ್ಯಾಟೆನ ಅಲೌಕಿಕತೆತ ನೆನ್ಸಿ ಬೇಟೆಗೊಂದ್ ದೆವ್ವನ ನೆನ್ಸಿಕಂಡ್ ಆದರಂದ ಸಿಕ್ಕಿದ ಬೇಟೆನ ಮಾಸದ ಒಂದ್ ಪಾಲ್‌ನ ಆ ಸಕ್ತಿಗೆ ಕೊಟ್ಟ್ ಒಳ್ದ ಪಾಲ್‌ನ ದೆವ್ವದ ಪ್ರಸಾದತ ತೆಕಂಬ ಮೊನ್‌ಸನ ಮನೋಬಾವನ ನೋಡಕ್. ಅಲ್ಲದೆ ಸಾಹಸ ಮತ್ತೆ ಅಪಾಯಕಾರಿಯಾದ ಬ್ಯಾಟೆಲಿ ಸಿಕ್ಕಿದರ ಮಾಸದೂಟ ಮಾಡಿ ಹಬ್ಬದಂಗೆ ಆಚರಿಸಿಕಂಡ್ ಬಂದಂಗೆ ಕಡ್ಡಾಸೊದಂದ್ ಬ್ಯಾಟೆ ಮಾಡೊಕು ಮತ್ತೆ ಮಾಸದೂಟ ಮಾಡೋಕುಂತೇಳ್‌ವ ನಿಯಮ

ಆಗಿರೊಕು. ಒಂದ್ ಪಕ್ಸ ಮಾಸ ಸಿಕ್ಕದಿದ್ದರೆ ಮಾಸದ ಹಂಗೆ ಕಾಂಬ ನುಗ್ಗೆ ಮತ್ತೆ ಬದ್‌ನೆಕಾಯಿನ ಸೇರ್‌ಸಿ ಮಾಡ್‌ದ ಗೈಪುನ ತಿನಕು ತೇಳ್‌ವ ಕ್ರಮ ಬಂದಿರಕು. ಬ್ರಾಹ್ಮಣರ್ ಮಾಸ ಮತ್ತೆ ಮಾಸದಂಗೆ ಕಾಂಬ ಗೈಪುಗಳ ನಿಸೇದಿಸಿದ್‌ರೆ ಬ್ರಾಹ್ಮಣೇತರರ್ ಮಾಸ ಮತ್ತೆ ಮಾಸ ಸಿಕ್ಕದ ಹೊತ್ತುಗೆ ಮಾಸದಂಗೆ ಕಾಂಬ ನೆಟ್ಟಿಕಾಯಿ ತಿನಕುತೇಳ್‌ವ ನಿಯಮ. ಇದ್ ಮಾಸದ ಬಗ್ಗೆ ಜೆನಪದರ ಎರ್‌ಡ್ ಬೇರೆ ಬೇರೆ ನೋಟನ ತಿಳ್‌ಸಿದೆ. ಮಾಸ ತಿಂಬದರ ಬಗ್ಗೆ ನಿರ್‌ದಿಸ್ಟ ಜೆನಾಂಗಗ ತಮ್ಮ ತಮ್ಮ ನಂಬಿಕೆಗಳ ಸಮರ್‌ತಿಸಿಕಂಬದರ ಇಂತ ಆಚರಣೆಗಳೊಟ್ಟಿಗೆ ನೋಡಕ್. ಬೇಟೆ ಆಹಾರದ ಸೋದನೆನ ಒಂದ್ ಬಾಗ ಆಗಿ ಹುಟ್ಟಿಕಂಡ ಆಚರಣೆಗಳ ನೋಡಕ್. ಮೊನ್‌ಸನ ಸಂಸ್ಕೃತಿನ ಮುಕ್ಯ ಆಚರಣೆಗಳ್‌ಲಿ ತಿನಿನ ಸೋದನೆನ ಗುರಿ ಇರ್‌ದರ ನಾವು ಕಂಡವೆ. ಪ್ರಾಣಿಗಳ ಮತ್ತೆ ಮೀನ್‌ಗಳ ಬೇಟೆಗೆ ಸಮ್ಮಂದ ಪಟ್ಟಂಗೆ ಅದ್ದೊಂದ್ ಆಚರಣೆನ ರೂಪನ ಜೆನಪದರ್ ಕೊಟ್ಟಿದರ ನಾವು ನೋಡಕ್.ಹೀಂಗೆ ಆಚರಣೆಗಳ್‌ಲಿ ಮಂಗ್‌ಳೂರು ತಾಲೂಕ್‌ನ ಕಂಡೇವು ತೇಳುವಲ್ಲಿ 'ಉಳ್ಳಾಯ' ದೆವ್ವದ ವರ್‌ಸದ ಕೋಲದ ಲೆಕ್ಕಲಿ ನಡಿವ ಮೀನ್ ಬೇಟೆ ಮುಕ್ಯ ಆದ್ದ್. ಉಳ್ಳಾಯ ಸ್ತಾನದ ಹಕ್ಕಲೆ ಹಳ್ಳದ ಹಕ್ಕಲೆ ಒಂದ್ ಜಾಗೆನ 'ಮೀನ್ ಬೇಟೆ'ಗಾಗಿದ್ ಬುಟ್ಟಿದ್ದವೆ. ಈ ಜಾಗೆಗೆ ಕಂಡವು ಕರಿಯ'ತೇಳ್‌ವ ಹೆಸರ್‌ಂದ ಕರ್‌ದವೆ. ಈ ಬಾಗದ ಮೀನ್ ಗ್ರಾಮದ ಉಳ್ಳಾಯ ದೆವ್ವಕೆ ಸೇರ್‌ದ್, ಇಲ್ಲಿ ಉಳ್ಳಾಯ ದೆವ್ವ ಮೀನ್‌ನ ಬೇಟೆ ಮಾಡ್ದರ್‌ಂದದ ಇಲ್ಲಿ ಯಾರ್ ಸನು ಮೀನ್ ಹಿಡೆಕಾಗದ್‌ತೇಳ್‌ವ ನಂಬಿಕೆನ ಹಿನ್ನೆಲೆಲಿ ಸಂಪ್ರದಾಯನ ಮೀರಿ ಇಲ್ಲಿ ಯಾರ್ ಸನು ಮೀನ್ ಹಿಡೆದುಲೆ. ಜಾತ್ರೆನ ಹಿಂದೆನ ದಿನ ಇಲ್ಲಿಂದ ಚೂರ್ ಮೀನ್‌ಗಳ್‌ನ ಹಿಡ್‌ದ್ ಅಡ್ಗೆ ಮಾಡಿ ಅದರ ದೆವ್ವಕೆ ಎಡೆ ಹಾಕುವ ಆಚರಣೆನೂ ಉಟ್ಟು.

ಜಾತ್ರೆ ದಿನ ಬೊಳ್ಪುಗೆ ಈ ಮೀನ್ ಬೇಟೆ ನಡ್‌ದದೆ. ಈ ಆಚರಣೆಲಿ ಗ್ರಾಮದ ಮತ್ತೆ ನೆರೆಗ್ರಾಮದ ಜೆನ ಎಲ್ಲ ಸೇರ್‌ವೆ. ಸಂಪ್ರದಾಯದಂಗೆ ನಿಗಂಟ್ ಮಾಡ್ದ ಮುಹೂರ್‌ತಲಿ ದೆವ್ವನ ಪ್ರಸಾದನ ತಂದ್ ಹಳ್ಳಕೆ ಹಾಕಿ ಗರ್‌ನಾಲ್ ಹೊಡ್ಸಿ ಹಳ್ಳದ ಕರೆಲಿ ಸೇರ್‌ದ ಸಾವಿರಾರ್ ಜೆನಕೆ ಮೀನ್ ಹಿಡೆಕೆ ಅನುಮತಿನ ಕೊಟ್ಟವೆ. ಎಲ್ಲೊವ್ ಒಮ್ಮೆಗೆ ನೀರ್‌ಗೆ ಹಾರಿ ಮೀನ್‌ನ ಹಿಡ್‌ದವೆ. ಅಂದ್ ಹಳ್ಳದ ಕರೆಲಿ ಮೀನ್ ಮಾರ್‌ವ ದೊಡ್ಡ ಸಂತೆ ನಡ್‌ದದೆ. ಹೆಚ್ಚಿಗೆ ದುಡ್ಡ್ ಕೊಟ್ಟಾರ್ ಜೆನ ದೇವರಪ್ರಸಾದ ತೇಳ್‌ವ ನೆಲೆಲಿ ಮೀನ್‌ಗಳ್‌ನ ತಕಂಡವೆ. ತುಳುಲಿ 'ಉಳ್ಳಾಯ' ತೇಳಿರೆ 'ಒಡೆಯಂತೇಳ್‌ವ ಅರ್‌ತ ಉಟ್ಟು. ಇಲ್ಲಿ ಉಳ್ಳಾಯ ದೆವ್ವನು ನಿರ್‌ದಿಸ್ಟ ಜಾಗೆನ ಒಡೆಯ ಆಗಿದ್ ಕಂಡ್ ಬಂದದೆ. ಅದರ್‌ಂದನೆ ಕಂಡೇವುಕರಿಯದ ಮೀನ್‌ಗ 'ಉಳ್ಳಾಯ'ನ ಅದೀನಕ್ಕೊಳಪಟ್ಟಿದ್ದದೆ. ಹಂಗಾಗಿ ಉಳ್ಳಾಯನ ಅನುಮತಿ ಇಲ್ಲದೆ ಇಲ್ಲಿ ಮೀನ್ ಹಿಡೆದು ನಿಸಿದ್ದ. ಉಳ್ಳಾಯನೇ ವರ್‌ಸಕೆ ಒಂದ್ ಸರ್‌ತಿ ಆಚರಣೆನ ಹಿನ್ನೆಲೆಲಿ ತನ್ನ ಅದೀನದಲ್ಲಿದ್ದ ಮೀನ್‌ಗಳ ಸಮುದಾಯಕೆ ಒಪ್ಪುಸಿದೆ... ಹಂಗಾಗಿದೆ ನಿರ್‌ದಿಸ್ಟ ದಿನದಂದ್ ಮಾತ್ರ ಜೆನಗ ಇಲ್ಲಿ ಮೀನ್‌ಗಳ ಹಿಡ್ದವೆ. ಉಳ್ಳಾಯನ ಅದೀನಲಿ ಮೀನ್ ಪಾಲ್‌ನ ಜೆನ ಸುರೂಲಿ ಅದರ ಅಂವಂಗೆ ಒಪ್ಪುಸಿ ಒಳ್ದ ಬಾಗನ ದೆವ್ವದ ಪ್ರಸಾದ ತೇಳ್‌ವ ನೆಲೆಲಿ ಸ್ವೀಕರ್‌ಸುವೆ.ಹೀಂಗೆ ಕಂಡೇವು ಮತ್ತೆ ಬೇಟೆ ಆಹಾರ ಸಂಗ್ರಹಣೆನ ಒಂದ್ ಬಾಗ ಆಗಿ ಸುಮಾರ್ ರೂಪಾಂತರಗಳೊಟ್ಟಿಗೆ ಒಳ್‌ಕಂಡ್ ಬಂದ ಆಚರಣೆ ಆಗಿದ್ ಕಂಡದೆ.

ತುಳುನಾಡ್‌ಲಿ ಕಂಡ್‌ಬಾವ ಬೇಟೆ ಸಮ್ಮಂದದ ಕೊಣ್‌ತಗಳ್‌ಲಿ 'ಪಿಲಿ ಪಂಜಿ ನಲಿಕೆ' (ಹುಲಿ ಹಂದಿ ಕೊಣ್‌ತ) ಮುಕ್ಯ ಆದ್. ತುಳುಲಿ 'ಪಿಲಿ' ತೇಳಿರೆ 'ಹುಲಿ', 'ಪಂಜಿ' ತೇಳಿರೆ 'ಹಂದಿ'ತ ಅರ್‌ತ. ಈ ಕೊಣ್‌ತಲಿ ಹುಲಿ ಮತ್ತೆ ಹಂದಿಗಳೇ ಪ್ರದಾನ ವೇಸಗ ಆಗಿರ್‌ದರ್‌ಂದ ಆ ಹೆಸ್‌ರ್ ಬಂದುಟು. ತಂಡಲಿ ಒಂದ್ ಹುಲಿ, ಒಂದ್ ಹಂದಿ, ಎರ್‌ಡ್ ಜಿಂಕೆ ವೇಸಗಳಲ್ಲದೆ ಒಬ್ಬ ಬೆಡಿ ಹಿಡ್‌ದ ಬೇಟೆಗಾರ ಇದ್ದದೆ. ಇಂವನ 'ದೊರೆ' ತ ಕರ್‌ದವೆ. ಹಿಮ್ಮೇಳಲಿ ಒಬ್ಬ ದುಡಿ ಬೊಟ್ಟಿಕಂಡ್ ಪಿಲಿ ಪಂಜಿ ಕೊಣ್‌ತದ ಪೊದ್ಯನ ಹೇಳ್‌ದೆ. ಒಳ್ದವ್ ಪ್ರತಿ ಸಾಲ್‌ನ ಮತ್ತೊಮ್ಮೆ ಹೇಳ್‌ವೆ. ವೇಸಗಾರರ್ ಆಯಾಪ್ರಾಣಿಗಳ ಮರ್‌ಡುವಂಗೆ ಸದ್ದ್ ಮಾಡಿ ಪೊದ್ಯದ ಲಯಕ್ಕೆ ಸೆರಿಯಾಗಿ ಕೊಣ್‌ದವೆ. ದೊರೆ ಹುಲಿ ಮತ್ತೆ ಹಂದಿಗೆ ಬೆಡಿ ತೋರ್‌ಸಿಕಂಡ್ ಬ್ಯಾಟೆನ ಅನುಕರಣೆ ಮಾಡ್‌ದೆ.

ಪಿಲಿಪಿಂಜಿ ಕೊಣ್‌ತದ ಪೊದ್ಯಂದ ತಿಳ್‌ದ್ ಬಾವಂಗೆ ಈಸ್ವರ ದೇವುರು ಹುಲಿ, ಹಂದಿ ಮತ್ತೆ ಹಾವ್‌ನ ಸೃಸ್ಟಿ ಮಾಡ್‌ವೆ

ಒಂದ್ ದಿನ ಹುಲಿನ ಹಕ್ಕಲೆ ಕರ್‌ದ್ ನಿಂಗೆ ಹಾಲೆ ಹಿಡ್‌ದ್ ಅಗೆಯಕ? ನೇಗ್‌ಲ್ ಹಿಡ್‌ದ್ ಹೂಡಕಾ? ತ ಕೇಳಿಕನ ಈ ಕೆಲಸಗಳ ಮಾಡಿಕೆ ಒಪ್ಪದ ಹುಲಿ ಹಸ್‌ಗಳ ಮೇಸಿಕೆ ಆದೆನ? ತ ಕೇಳಿಕನ ಒಮ್ಮೆಗೆ ಆ ಕೆಲ್‌ಸಕೆ ತಯಾರಾದೆ. ಹಿಂಗೆ ದನಗಳ ಮೇಸಿಕೆ ಬೆರ್‌ಸಿಕಂಡ್ ಹೋದ ಹುಲಿ ದಿನಕ್ಕೊಂದೊಂದೇ ಹಸ್‌ಗಳ್‌ನ ಹಿಡ್ದ್ ತಿಂದದೆ. ಇದರ್‌ಂದ ಸಿಟ್ಟ್ ಬಂದ್ ಈಸ್ವರ ಹುಲಿನ ಬೇಟೆ ಆಡ್‌ದೆ. ಹುಲಿ ಬೇಟೆಗೆ ಸಿಕ್ಕದೆ ತೊಪ್ಪುಸಿಕಂಡದೆ. ಪಿಲಿಚಾಮುಂಡಿ ದೆವ್ವದ ಹುಟ್ಟುನ ಬಗ್ಗೆ ಪಾಡನಲಿನು ಈ ಮೇಲೆನ ಆಸಯನೇ ಇದ್ದರೂ ಇಲ್ಲಿ ಈಸ್ವರ ಹುಲಿನ ಬೇಟೆ ಆಡಿ ಕೊಂದದೆ. ಇದ್ ಸತ್ತ ಮೇಲೆ ಪಿಲಿಚಾಮುಂಡಿ ದೆವ್ವ ಆದೆ.

ದಕ್ಷಿಣಕನ್ನಡ ಜಿಲ್ಲೆನ ಬೆಳ್ತಂಗಡಿ ತಾಲೂಕ್‌ಲಿ ಈ ಕೊಣ್‌ತ ಹೆಚ್ಚಾಗಿ ಕಂಡ್ ಬಂದದೆ. ಈ ಪ್ರದೇಸಲಿ ಪೊಡ್‌ವಗಟ್ಟಗಳ ರಣಕಾಡ್ ಇರುದರ್‌ಂದ ತಮ್ಮ ಬತ್ತದ ಕ್ರಿಸಿಗೆ ಮಾರಕ ಆಗೊ ಕಾಡಂದಿ ಮತ್ತೆ ಕ್ರಿಸಿ ಸಂಸ್ಕೃತಿಲಿ ಬೇಕಾವ ಪ್ರಾಣಿಗ ಆದ ದನ, ಎತ್ತ್‌ಗಳ ಕೊಲ್ಲ್‌ವ ಹುಲಿಗಳ್ ಬೇಟೆ ಆಡ್ದು ಅನಿವಾರ್ಯ ಆಗಿತ್ತ್. ಪೊದ್ಯಲಿ ಬಾವ ಈಸ್ವರನೂ ಒಬ್ಬ ಅಲೌಕಿಕ ಲೋಕದ ಮೊಯಿಂಸನಾಂಗೆ ಕಾಣದೆ




ಒಬ್ಬ ಸಾಮಾನ್ಯ ಬೂಮಾಲೀಕನಾಗಿ ಕಂಡ್ ಬಂದದೆ. ಕೊಣ್ತಲಿ ಬಾವ ಬೇಟೆಗಾರನ 'ದೊರೆ' ತ ಕರ್‌ದದ್ ಬವುಸ ತನ್ನ ಕ್ರಿಸಿನ ರಕ್ಷಣೆಗೆ ಉಪಕಾರ ಮಾಡ್ದ ಇಂಗ್ಲಿಸ್ ಅದಿಕಾರಿನ ಬೇಟೆನ ಕ್ರಿಸಿಕರ್ ಸಂಬ್ರಮಂದ ಅನುಕರ್‌ಸಿರಕುತ – ಅಬಿಪ್ರಾಯಕೆ ಬಂದೊಳೊ. (ಯದುವತಿಗೌಡ 1989 : 2) ಅಲ್ಲೊ ಕಾಡ್‌ಲಿ ಹುಲಿ ಮತ್ತೆ ಹಂದಿಗಳ ದೊಡ್ಡಾ ಹೋರಾಟನ ಕಂಡ ಇಂಗ್ಲಿಷ್ ಅದಿಕಾರಿನ ಬೇಟೆನ ವಿದಾನದ ಒಂದ್ ಅನುಕರಣೆ ಈ ಕೊಣ್ತ ಇರ್‌ದುತ ಊಹಿಸಿಕಣಕ್.

ಬೂಮಿ ಮೇಲೆನ ಅದಿಕಾರದ ತೆಕಂಬಕೆ ಬೇಟೆ ಕಾರಣ ಆದೆತೇಳ್ದು ಕೋಟಿಚೆನ್ನಯ ಪಾಡ್ದನಂದ ತಿಳ್ಕಣಕ್. ಪರ್ಮತಿಬೀಡ್‌ಲಿ ಬೆಳ್ದ ಕೋಟಿಚೆನ್ನಯರ್ ಬೂಮಿ ಮೇಲೆನ ನ್ಯಾಯಂದ ಬುದ್ಯಂತನ ಕೊಲೆಮಾಡಿ ಪರ್ಮತಿಬುಟ್ಟ್, ಪಂಜದ ಬಲ್ಲಾಳರ್‌ಲಿ ಆಸ್ರಯನ ಪಡ್‌ದವೆ. ವಿಸಯ ತಿಳ್ದ ಪಂಜದ ಬಲ್ಲಾಳ ಇವರ ಮೋಸಂದ ಹಿಡಿಯಕೆ ಬಾಕನ ಅಲ್ಲಿಂದ ತೊಪ್ಪಿಸಿಕಂಡ್ ಎಣ್ಮೂರ ಬಲ್ಲಾಳನಲ್ಲಿಗೆ ಬಂದ್ ಆಸ್ರಯನ ಪಡ್‌ದವೆ. ಎಣ್ಮೂರ್ ಬಲ್ಲಾಳನ ಹಣ್ಣಿ ಜಾಗೆನ ಪಂಜದ ಬಲ್ಲಾಳ ಸ್ವಾದೀನಕೆ ತೆಕಂಡಿದ್ದದೆ. ಈ ಹೊತ್ತುಗೆ ಬೇಟೆನ ನೆವನಲಿ ಕೋಟಿಚೆನ್ನಯರ್ ಪಂಜದ ಬಲ್ಲಾಳನ ಮೇಲೆ ಯುದ್ದ ಮಾಡಿ ಅಂವ ಆಕ್ರಮಿಸಿಕಂಡಿದ್ದ ಬೂಮಿನ ಸ್ವಾದೀನ ಪಡ್‌ಸಿ ಎಣ್ಮೂರ್ ಬಲ್ಲಾಳಂಗೆ ಮತ್ತೆ ಕೊಟ್ಟವೆ. ಅಲ್ಲದೆ ಬೇಟೆಲಿ ತೆಗಿಯದ 'ಜಾಗೆದ ದಾಯೊ' ಇದೆಲ್ಲನೂ ಸನು ಆಯಾ ಜಾಗೆದ್ ಸ್ತಾನನ ಹೊಂದಿಕಂಡ್ ಕೊಡ್‌ವ ಗೌರವದಂಗೆ ಕಂಡದೆ.

ಹೆಚ್ಚಿನ ಪಾಡ್ದನಲಿ ಬ್ಯಾಟೆನ ಪ್ರಸ್ತಾಪ ಉಟ್ಟು. ಇಲ್ಲೆಲ್ಲ ಬ್ಯಾಟೆನ ಒಂದ್ ತರಲಿ ದಿಗ್ವಿಜಯದ ಮಾದರಿಲಿ ಚಿತ್ರಿಸಿದರ ಕಾಣಕ್. ತಾನ್ ಬೇಟೆ ಆಡಕಿದ್ದ ಕಾಡ್‌ಗೆ ಮುಂದೆನೆ ನಿಸಾನೆನ ಕಟ್ಟಿಬಾದು, ಬೇಟೆನ ಚಂದ್ರಾಯುದನ ಪಲ್ಲಕ್ಕಿಲಿ ಇಸಿಕಂಡ್ ಬಾಳರ್ ಬೇಟೆಗೆ ಹೊರ್‌ಡುದು, ಬೇಟೆನ ವ್ಯೂಹರಚನೆನ ಕಲ್ಪನೆ ಬೇಟೆಲಿ ಕೂಡುವ ಜೆನರ ಅಂತಸ್ತಿಗೆ ತಕ್ಕಂಗೆ ಅವು ಹಿಡಿವ ಹತ್ಯಾರ್, ಬೇಟೆಗೆ ಕರೆಕೊಡ್ದು – ಹಿಂಗೆ ಉದಾರ್‌ಣೆ ಕೊಟ್ಟ್‌ಕಂಡ್ ಹೋಕ್. ಆದ್‌ರೆ ಒಟ್ಟಿಗೆ ಬೇಟೆನ ನೋಡಿಕನ ಕ್ರಿಸಿಪ್ರದಾನ ಸಂಸ್ಕೃತಿನ ಜೆನಪದ ಸಮುದಾಯಗಳೇ ತನ್ನ ಕ್ರಿಸಿ ಉತ್ಪನ್ನಗಳ ರಕ್ಸಣೆಗೆ ಬೇಟೆ ಸಂಸ್ಕೃತಿನ ಅಳವಡ್‌ಸಿಕಂಡಿರ್‌ದದರ ಕಾಣಕ್. (ಎ.ಎ.)

**ಪ್ರಾಣಿ ಜೆನಪದ ವೈದ್ಯ :** ಬೊದ್‌ಕುವ ಯಾದೇ ಪ್ರಾಣಿಯಾಗಲೀ ಅಲ್ಲೊ ಮೊಯಿಂಸನೇ ಆಗಲಿ ಒಂದಲ್ಲ ಒಂದ್ ತರಲಿ ಕಾಯಿಲೆಗೆ ಬೀಳುದು ಸಾಮಾನ್ಯ ಸಂಗತಿ, ಆರೋಗ್ಯಪೂರ್ಣವಾದ ಬೆಳವಣಿಗೆನ ಊನ ಅಲ್ಲರೆ ಕೊರ್‌ತೆ ಕಂಡುಬಂದಾಕನ ಆ ಜೀವಿ ಯಾದೋ ಒಂದ್ ಕಾಯಿಲೆಗೆ ಬಿದ್ದುಟು ತೇಳಿ ಗ್ರೇಸಿಕಾದೆ. ಈ ಊನ ದೈಹಿಕ ಆಗಿರ್‌ದು ಅಲ್ಲರೆ ಮಾನಸಿಕ ಆಗಿರ್‌ದು ಅಲ್ಲೊ ಹುಟ್ಟು ಗುಣದ ವರ್‌ತನೆಲಿ ಆಗಿರ್‌ದು. ಸಾಮಾನ್ಯರ ಒಟ್ಟಿಗೆ ಅಸಾಮಾನ್ಯವಾಗಿರ್‌ದೇ ಕಾಯಿಲೆನ ಪ್ರಾತಮಿಕ ಲಕ್ಷಣ ತೇಳಕ್. ಕಾಯಿಲೆ ಮತ್ತೆ ಅದರ ಕಾರಣಗಳ ಹಿನ್ನೆಲೆಲಿ ಅದಕ್ಕೊಂದು ಹೆಸ್‌ರ್ ಮತ್ತೆ ಅದ್ಕೆ ಪರಿಹಾರನ ಕಂಡ್‌ಕಂಬ ಸಂಶೋದನೆಗ ಇಂದ್‌ನ ವೈಜ್ಞಾನಿಕ ಯುಗಲಿ ಹೆಚ್ಚ್ ನಡೆತಿರ್‌ವ ಸಂಗತಿಗ. ಆದರೆ ವೈಜ್ಞಾನಿಕ ಆಗಿದ್ ಚಿಂತನೆ ಮಾಡಿಕೆ ಸುರು ಮಾಡ್ದಕು ಮುಂದೆ ಜೆನಪದರ್ ರೋಗಕೆ ಪರಿಹಾರಗಳ ತಮ್ಮ ಬುದ್ದಿ ಮಟ್ಟಕೆ ಅನುಸಾರಸಲಿ ಮತ್ತೆ ತಾವು ಬೊದ್‌ಕಿ ಬಾಳ್‌ವ ನೆಲದ ಸಾಂಸ್ಕೃತಿಕಹಿನ್ನೆಲೆಲಿ ಕಂಡ್‌ಕಂಬಕೆ ಪ್ರಯತ್ನ ಪಟ್ಟೊಳೊ. ಜೆನಪದ ಈ ಪೊದ್ದುನ ಕ್ರಮದ ಮುಂದೆ ವೈಜ್ಞಾನಿಕ ಆಗಿ ಪರಿಹಾರ ಆಗಿ ಕೆಲಸ ಮಾಡಿಟು. ಈಗಲೂ ಗ್ರಾಮೀಣ ಪ್ರದೇಶಗಳ್‌ಲಿ ಜೆನಪದ ವೈದ್ಯರಕ್ಕಲೆ ಹೋವ ಸುಮಾರ್ ಜೆನಂಗ ಒಳೊ. ಆದರೆ ಇಂತ ಪರಿಹಾರೋಪಾಯಗ ವೈಜ್ಞಾನಿಕ ತೆಕಂಬದುಲೆತ ಅಲ್ಲ, ತ ಮೊದ್ದ್ ಮಾಡ್ಸಿರು ತನ್ನದೇ ಆದ ಮತ್ತೊಂದ್ ಸೊಂತ ಮೊದ್ದ್‌ನ ಜೆನಪದರ್ ಬಳ್‌ಸಿಕಂಡ್ ಕನಿಸ್ಟ ಮಾನಸಿಕ ಆಗಿದ್ ನೆಮ್ಮದಿನ ಕಂಡ್‌ಕಂತ ಒಳೊ. ತುಳುನಾಡಿನ ಪ್ರಾಣಿಜೆನಪದ ಮುದ್ದುನ ಮುಕ್ಯ ಆಗಿ ಎರ್‌ಡ್ ಬಾಗ ಆಗಿ ವರ್‌ಗೀಕರಿಸಿಕಂಡ್ ಅದ್ಯಯನ ನಡೆಸಕ್. 1. ಮೊಂಸ್‌ರ ಕಾಯಿಲೆಗಳಿಗೆ ಪ್ರಾಣಿ, ಪ್ರಾಣಿ ಉತ್ಪನ್ನಗಳ್‌ಂದ ಪರಿಹಾರೋಪಾಯಗ, 2. ಪ್ರಾಣಿ ಕಾಯಿಲೆಗಳಿಗೆ ಜೆನಪದ ವೈದ್ಯದ ಬಳಕೆ. ಮೊಯಿಂಸರ್‌ಗೆ ಬಾವ ಸುಮಾರ್ ಬಗೆನ ಕಾಯಿಲೆಗ ತೇಳಿರೆ ಕಾಣದ ಸಕ್ತಿಗಳಿಂದ ಆವ ಕಾಯಿಲೆಗ, ಹವಾಮಾನದ ಏರಿಳ್ತಂದ ಅಲ್ಲರೆ ಹೊರೆಗೆನ ಕಾರಣಂದ ಬಾವ ಕಾಯಿಲೆಗ, ದೇಹದ ಒಳೆಗೆನ ಸಮಸ್ಯೆಂದ ಆವ ಕಾಯಿಲೆಗಳಿಗೆ ಪ್ರಾಣಿ ಅಲ್ಲರೆ ಪ್ರಾಣಿ ಉತ್ಪನ್ನಗಳ್‌ನ ಬಳ್ಸಿ ಪರಿಹಾರೋಪಾಯಗಳನು ಕಂಡ್ ಕೊಂಡವೆ. ಇದರ ಒಂದೆರ್‌ಡ್ ಉದಾಹರಣೆಗ ಇಲ್ಲಿ ಹೇಳಿಯೊಳೊ. ಸಾಮಾನ್ಯವಾಗಿ ದೇಹಲಿ ಕಾಣ್ಸಿಕಂಬ ಕೆಮ್ಮು ಜಾಸ್ತಿ ಆಕನ ಇದರ 'ಕಪ್ಪೆತೆಮ್ಮೊ' ತೇಳ್‌ವ ಹೆಸರ್‌ಂದ ಗುರ್‌ತ್‌ಸ್‌ವೆ.

ಕೆಮ್ಮು ಸುಮಾರ್ ಸರ್‌ತಿ ಆದು ಕಪ್ಪೆ ಮರ್‌ಡ್ವಂಗೆ ಕೇಳ್ದರ್‌ಂದ, ಇದರ ಆ ಹೆಸರ್‌ಂದ ಹೇಳ್‌ವೆ. ಇದ್ಕೆ ಮೊದ್ದ್‌ಗೆ ದೊಡ್ಡಕಪ್ಪೆನ ಕಾಲುಗಳ ತಂದ್ ಅದರ ಚೋಲಿ ತೆಗೆದ್ ಬೇಸಿ. ಎರಡ್ ದಿನಗಳ ಕಾಲ ತೆಕಂಡರೆ 'ಕಪ್ಪೆತೆಮ್ಮೊ' (ಕಪ್ಪೆ ಕೆಮ್ಮು)ಕಡಿಮೆ ಆದೆ ತೇಳ್ದರ ಕಂಡುಕೊಂಡ. ಹೀಂಗೆ ದೇಹಲಿ ಕಾಣ್ಸಿಕಂಬ ಕಾಯಿಲೆಲಿ ಒಂದ್ ಪ್ರಾಣಿನ ಲಕ್ಷಣನ ಕಂಡ್‌ಕೊಂಡ ಜೆನಗ ಇದ್ಕೆ ಮೊದ್ದಾಗಿ ಅದೇ ಪ್ರಾಣಿನ ದೇಹದ ಬಾಗನ ತೆಕಂಡ್ ಕಡಿಮೆ ಮಾಡ್ದರ ಕಂಡ್‌ಕೊಂಡ. ಹೀಂಗೆ ಮೊಯಿಂಸರ ಕಾಯಿಲೆಗಳಿಗೆ ಪ್ರಾಣಿ ಅಲ್ಲರೆ ಪ್ರಾಣಿಉತ್ಪನ್ನಗಳ ಮೊದ್ದ್‌ನಾಂಗೆ ಬಳ್‌ಸಿಕಾಕನ ಅದ್ ಕಡಿಮೆ ಆದರ ನೋಡಕ್. ಕೇರೆಹಾವು ಕಚ್ಚಿರೆ ಎಲಿ ಮಾಸನ ಗೈಪು ಮಾಡಿ ತಿಂಬೊದು,ಎಲಿ ಕಚ್ಚಿರೆ ಕೇರೆ ಹಾವುನ ಮಾಸನ ಗೈಪು ಮಾಡಿ ತಿಂದರೆ ಗಾಯ ಕಡಿಮೆ ಆದೆ ತೇಳುವ ಜೆನಪದರ ವಿವರಣೆನ ನೋಡಿಕಾಕಾನ ಜೆನಪದ ವೈದ್ಯ ಕೆಲ್ಸನ

ವಿದಾನಲಿ ವಿರೋದ ತತ್ವ'ನು ಕೆಲಸ ಮಾಡ್‌ದೆ ತೇಳ್‌ವ ಜೆನಪದರ ಆಲೋಚನೆನೂ ಗುರ್‌ತ್‌ಸಕ್. ಹಿಂಗೆ ಅಲ್ಲದೆ ನಾಗರಹಾವು ಕಚ್ಚಿರೆ ನಾಗಂಗೆ ವೈರಿ ಆದ ಮುಂಗುಲಿನ ಗೈಪುಮಾಡಿ ತಿಂದರೆ ವಿಸ ಏರ್‌ದುಲೆ ಇಂತೆಲ್ಲ ಸುಮಾರ್ ಮೊದ್ದ್‌ನ ಉದಾಹರಣೆಗಳ ತುಳುನಾಡ್‌ನ ಪ್ರಾಣಿಜೆನಪದ ಮೊದ್ದ್‌ಗೆ ಸಮ್ಮಂದ ಪಟ್ಟಂಗೆ ನೋಡಕ್. ದನಗಳ್‌ಲಿ ಕಾಣ್ಸಿಕಂಬ ರೋಗಗಳ್‌ಲಿ ಪರಂಗಿರೋಗನೂ ಒಂದ್. ಇದರ್‌ಲಿ ದೊಡ್ಡ ಜಾತಿನ ಪರಂಗಿ ಆಕನ ಇದರ 'ಆನೆಪರಂಗಿ' ತ ಹೇಳ್‌ವೆ. ಮೈಮೇಲೆನ ಚೋಲಿಗೆಲ್ಲಾ ಎದ್ದ್ ಒಂದ್ ತರದ ಚರ್ಮರೋಗದಂಗೆ ಕಾಂಬ ಈ ರೋಗಕೆ ಮೊದ್ದಾಗಿ ಆನೆತಜಂತು' ದೈನ ಬಳ್ಸಿ ಗುಣಪಡ್ಸುವೆ. ಈ ದೈನ ಸೊಪ್ಪುನ ತಂದ್ ಉಪ್ಪುನ ಒಟ್ಟಿಗೆ ಅರ್‌ದ್ ಅರ್ದಕೊಂಡೆನಸ್ಟ್ ರಸನ ರೋಗಹಿಡ್ದ ಜಾಗೆಗೆ ಪೂಜುದರ್‌ಂದ ಇದರ ಗುಣ ಮಾಡಕ್. ಹಿಂಗೆ 'ಆನೆಪರಂಗಿ' ತೇಳ್‌ವ ರೋಗಕ್ಕೆ ಮೊದ್ದಾಗಿ ರೋಗದ ಹೆಸರ್‌ಗೆ ಹಕ್ಕಲೆ ಇರ್‌ವ ಆನೆತಜಂಕು' ದೈನ ಬಳ್ಸುವೆ. ಈ ರೋಗದ ಲಕ್ಷಣದ ಹೆಸ್‌ರ್‌ಗು ರೋಗನ ವಾಸಿ ಮಾಡಿಕೆ ತೆಕಂಬ ಗಿಡಮೂಲಿಕೆನ ಹೆಸ್‌ರಿಗೂ ಹೊಂದಾಣಿಕೆ ಉಟ್ಟು. ಈ ಅರ್‌ತಲಿ ರೋಗನ ಗುರುತಿಸುವ ಮತ್ತೆ ಅದರ ಕಡಿಮೆ ಮಾಡ್‌ವ ವೈದ್ಯವಿದಾನದ ನಡುವೆ ಹೋಲಿಕೆನ ಕಲ್ಪನೆನ ಕಂಡ್ ಕಣಕ್. ಹೀಗೆ ಸುಮಾರ್ ದೈಗ, ಪ್ರಾಣಿಗಳ ವಿಸೇಸ ಕಾಯಿಲೆಗಳಿಗೆ ಮೊದ್ದಾಗಿ ಬಳ್ಕೆ ಆದರ ಕಾಣಕ್. ಪ್ರಾಣಿವೈದ್ಯವು ಸಸ್ಯವೈದ್ಯದಸ್ಟ್ ಹೆಸ್‌ರ್ ಮಾಡ್ತ್‌ಲೆ ಬವುಸ ಇದ್ಕೆ ಅದ್ ಸಿಕ್ಕದಿರದ್‌ನು ಒಂದ್ ಕಾರಣ ಆಗಿರ್‌ದು. ಈ ದ್ರಿಸ್ಟಿಲಿ ಅಪ್ರೂಪದ ಪ್ರಾಣಿಗಳ ಸಂರಕ್ಷಣೆ ನಡೆಯೋಕು ಅಲ್ಲದೆ ಈ ತರದ ವೈದ್ಯಪೊದ್ದತಿನ ಹೊಸ ಪ್ರಯೋಗ ಪರೀಕ್ಷೆಗಳಿಗೆ ಗುರಿ ಮಾಡಿ ಒಳ್ಳ ಫಲಿತಾಂಸಗಳ್‌ನ ಪಡಿವಂಗಾಕು. ಆಗ ಮಾತ್ರ ಈ ಮೊದ್ದ್‌ನ ಎಲ್ಲ ಪ್ರಯೋಜೆನ ಎಲ್ಲವುಕೂ ಸಿಕ್ಕಿಕೆ ಸಾದ್ಯ. (ಎ.ಎ.)

**ಕಳಿ :** ಸುಮಾರ್ ಎರಡೂವರೆ ಅಡಿ ಉದ್ದ ನಾಕ್ ಇಂಚ್ ದಪ್ಪದ ಎರಡ್ ಗಟ್ಟಿ ಮರದ ಉರುಂಟು ರೋಲ್‌ನಂಗಿರ್‌ವ ಮರದ ಕೋಲುಗ ಬೇಕ್. ಇದರ ಒಂದ್ ತಲೆಲಿ ಎರಡ್ ಕೋಲ್‌ಗಳ ಗಟ್ಟಿ ಹುರಿಬೊಳ್ಳಿ ಇಲ್ಲಾರ್ ಸಲಿಗೆಲಿ ಜೋಡ್ಸಿ ಕಟ್ಟ್‌ವೆ. ಕಳಿನ ಬೀಜದ ಹೋರಿದ್ ಬಿತ್ತ್ ಒಡ್ದ್ ನೀರ್ ಮಾಡಿಕೆ ಬಳಸ್‌ವೆ. ಹೋರಿ, ಕೋಣಂಗಳಿಗೆ ಎರಡ್ ಪರು/ಹಲ್ಲ್ ಆಕೆ ಮುಂದೆ ಈ ಕೆಲ್ಸನ ಮಾಡಿ ಮುಗ್ಸೊಕು. ಹೆಚ್ಚಿಗೆ ಪ್ರಾಯ ಆದರೆ ಅಪಾಯ ಆದೆ ತ ಅನುಬವಸ್ತರ ಮಾತ್. ಬೀಜದ ಹೋರಿಗಳ ಗದ್ದೆ ಹೂಡ್‌ಕೆ, ಗಾಡಿ ಎಳೆಕೆ ಉಪಯೋಗ ಬಾರಿ ಕಮ್ಮಿ. ಬೀಜ ಒಡ್ದ ಎತ್ತ್‌ಗ ರೈತಂಗೆ ಕಸ್ಟದ ಗದ್ದೆ ಕೆಲ್ಸಕ್ಕೆ ಉಪಯೋಗ ಆತಿತ್. ಬೀಜ ಒಡ್ದ ದಿನಂದ ಎರ್ಡ್ ಮೂರ್ ದಿನ ಎತ್ತ್‌ಗಳ್‌ಗೆ ಜ್ವರ ಬಾತಿತ್. ಒಡ್ದ ಬಿತ್ತ್‌ಗೆ ಮೇಲೆಂದ ಒಳ್ಳಮೆಣ್ಸ್ ಹೊಡಿಮಾಡಿ ಎಣ್ಣೆಲಿ ಕಲ್ಸಿ ಲೇಪ ಹಾಕ್‌ತಿದ್ದೊ. ಆ ಮೊದ್‌ಲೇ ಬೇನೆ ಕಮ್ಮಿ ಆತಿತ್. ಎತ್ತ್‌ನ ಮೂರ್ ನಾಕ್ ದಿನ ಹೊರಗೆ ಮೇಯಕೆ ಬುಡ್‌ತಿತ್ಲೆ. ಕಟ್ಟಿದಲ್ಲಿಗೆ ಹುಲ್ಲ್ ನೀರ್ ಕೊಡ್ತಿದ್ದೊ. ಈಗ ಪಶು ವೈದ್ಯರಕ್ಕಲೆ ಬಿತ್ತ್‌ನೀರ್ ಮಾಡ್‌ವ ಬೇರೆ ಕ್ರಮ ಉಟ್ಟು. ಮುಸ್ಲಿಂ ರಾಜರ ಕಾಲಲಿ ರಾಣಿ ವಾಸದ ಅರಮನೆ ಕಾವಲ್ ಮಾಡಿಕೆ ಬೀಜ ಒಡ್ದ ಗಂಡಸರ ನೇಮಕ ಆತಿತ್ತ್ ಗಡ. (ಕು.ಶಿ.)

**ಗೊಟ್ಟೆ :** ದನ ಕರ್‌ಗಳಿಗೆ ಮೊದ್ದು ಕುಡ್ಸಿಕೆ ಬೇಕಾದ ಸೊತ್ತು. ಇದ್ ದನಗಳಿಗೆ ಕಪ್ಪೆ– ಅಜೀರ್ಣ ಆದರೆ ಜರ ಬಂದರೆ ಅಲ್ಲರ್ ಬೇರೇನಾರೂ ತೊಂದರೆ ಆದರೆ ಮೊದ್ದು ಕುಡ್ಸಿಕೆ ಇರ್‌ವ ಬೆದ್ರ್‌ನಸೊತ್ತು. ಇದರ ಸಪೂರದ ಬೆದ್ರ್ ಅಲ್ಲರ್ ಅಮೆ ಓಟೆಲಿ ಮಾಡಿಕೆ ಆದೆ. ಒಂದ್ ಕಡೆಲಿ ಗಂಟ್ ಉಟ್ಟು. ಇನ್ನೊಂದು ಕಡೆಲಿ ಚಾರೆ ಕೊಯ್ದ್ ತುಂಡು ಮಾಡ್‌ವೆ. ಹೆಚ್ಚ್ ತೋರ ಇರಿಕೆ ಬೊತ್ತು. ದನ ಕರ್‌ಗಳ ಬಾಯಿಗೆ ಹೋವಸ್ಟ್ ತೋರ ಇದ್ದರೆ ಸಾಕ್. ಆರ್ ಏಳ್ ಅಂಗುಲಂದ ಎರಡ್ ಗೇಣ್‌ನಸ್ಟ್ ಉದ್ದ ಉಟ್ಟು. ಗೊಟ್ಟೆನ ಯಾರೂ ಸಹ ಮಾಡಕ್. ವ್ಯವಸಾಯದ ಒಟ್ಟೊಟ್ಟಿಗೆ ಜಾನುವಾರು ಸಾಕಣೆ ಸುರು ಆತ್. ಆಗಂದಲೇ ದನ ಕರ್‌ಗಳಿಗೆ ಕಾಯಿಲೆ ಕಸಲೆ ಬಾಕನ ಮೊದ್ದು ಕೊಡುವ ಕ್ರಮ ಸುರು ಆತ್. ಮೊದ್ದುನ ಗೊಟ್ಟೆದ ಒಳಗೆ ಸುರ್‌ದ್ ದನದ ಬಾಯಿಗೆ ಹಾಕಿ ಕುಡ್‌ಸತಿದ್ದೊ. ದನಗಳಿಗೆ ಏನಾರ್ ಹೆಚ್ಚ್ ಕಮ್ಮಿ ಆದರೆ ಅದ್ಕೆ ಮೊದ್ದು ಆಗನ ಜನಗಳಿಗೆ ಗೊತ್ತಿತ್. ಅಲ್ಲರ್ ಗೊತ್ತಿದ್ದೊವು ಊರ್‌ಲಿ ಯಾರಾರ್ ಇರ್‌ತಿದ್ದೊ. ಬೇರೆ ಬೇರೆ ಕಾಯಿಲೆಗೆ ಬೇರೆ ಬೇರೆ ಸೊಪ್ಪುನ ಅರ್ದ್ ದನಗಳಿಗೆ ಕೊಡ್ತಿದ್ದೊ. ಕಪ್ಪೆ ಮೊನಿ ಆದರೆ ಗಾಂದಾರಿ ಮೆಣ್ಸ್ ಯಾವುದೋ ಸೊಪ್ಪುನ ಸೇರ್‌ಸಿ ಅರ್‌ದ್ ರಸ ತೆಗೆತಿದ್ದೊ. ಅಲ್ಲರ್ ಗೇರ್‌ದಹಣ್ಣಿನ ಸರಾಯ ಕುಡ್‌ಸುವೆ. (ಎಂ.ಜಿ.ಕೆ.)

**ಪ್ರಾಣಿ ಬೊಲಿ :** 'ಪ್ರಾಣಿಬಲಿ'ಗೆ ಸಮ್ಮಂದಪಟ್ಟಂಗೆ ಜಗತ್ತ್‌ಲಿ ಸುಮಾರ್ ತರದ ಆಚರಣೆಗ ಒಳೊ. ಇದ್ ದಾರ್ಮಿಕ ಆಚರಣೆನ ಬಾರಿ ಮಹತ್ವದ ಕ್ರಮ ಆಗಿ ಜಗತ್ತ್‌ಲಿ ಸುಮಾರ್ ತರಲಿ ನಡ್ಕಂಡ್ ಬಂದುಟು. 'ಬಲಿ' ತೇಳ್ದು ಒಂದ್ ಪ್ರಾಣಿನ ಇಲ್ಲೆ ಒಂದ್ ವಸ್ತುನ ಅಲೌಕಿಕ ಸಕ್ತಿಯೊಂದಕೆ ಒಪ್ಪುಸುದು ತೇಳ್‌ವ ಒಂದ್ ಕಲ್ಪನೆ ಉಟ್ಟು. ಪಂಡ್‌ಕಾಲಂದನೆ ಸಂಸ್ಕ್ರತಿಗಳ್‌ಲಿ 'ಬಲಿ' ತೇಳಿರೆ ನಿರ್‌ದಿಸ್ಟಾಗಿ ದೈಹಿಕ ಬಲಿನೇ ಆಗಿತ್. ಉದ್ದೇಸ ಮೂಡಕದ ಸಾವ್ ಇಲ್ಲೆ ರಕ್ತ ಚೋಂಪುದು ಒಂದಕ್ಕೊಂದ್ ಒಟ್ಟಿಗೆ ಸಮ್ಮಂದಪಟ್ಟುಟು. ಸಮುದಾಯದ ಬಾಗನೇ ಆದ ಮೊಯಿಂಸ ಇಲ್ಲೆ ಪ್ರಾಣಿನ ಉದಾತ್ತೀಕರಣದ ನೆಲೆಲಿ ಕೊಲ್ಲುದರೊಟ್ಟಿಗೆ ಅಲೌಕಿಕ ಸಕ್ತಿಗೆ ಅರ್ಪುಸಿ ಅಲೌಕಿಕ ಸಕ್ತಿ ಮತ್ತೆ ಮೊಯಿಂಸರ ನಡುಲಿ ಇರ್‌ವ ಸಮ್ಮಂದನ ಸುರು ಮಾಡ್ದೇ ಈ ಕ್ರಿಯೆನ ಮುಕ್ಯ ನೆಲೆ ಆಗುಟು. ಇದ್ ಬರೀ ಜೀವಂತ ಪ್ರಾಣಿಗೆ ಮಾತ್ರ ಅನ್ವಯಿಸ್‌ದೆ ಜಿವ ಇಲ್ಲದ ಸಾಮಾನ್‌ಗಳಿಗೆ ಅನ್ವಯಿಸಿದೆ. ಬಲಿ ತೇಳ್‌ದು ಬೇರೇ ಬೇರೆ ಸುಮಾರ್ ಕಾರಣಕೆ ನಡೆತಿತ್. ಸಾರ್ವಜೆನಿಕ ಕಾರಣಕೆ, ಕುಟುಂಬದ ಕ್ಷೇಮಕೆ ರೋಗಗಳ ತಡೆ ಕಟ್ಟಿಕೆ, ನೈಸರ್‌ಗಿಕ ದುರಂತಗಳ ತಡೆಕೆ– ಹಿಂಗೆ ಸುಮಾರ್ ಕಾರಣಗಳಿಗೆ ಇಂತ ಆಚರಣೆಗ




ನಡಿತಿದ್ದದ್ ಇಂದ್‌ಗೂ ಸನ ಕಾಣಕ್. ಅಲ್ಲದೆ ದೇಸ್ತಾನದ ಕಟ್ಟಿಕನ, ಹೊಸಕಟ್ಟಡ ಕಟ್ಟಿಕನ, ಹೊಸಕೆರೆಲಿ ನೀರ್‌ಸಿಕ್ಕಿದಕೆ ಹಿಂಗೆ ಸುಮಾರ್ ಮಹತ್ವದ ಗಟನೆಗಳ ಲೆಕ್ಕಲಿ ಬಲಿ ಕೊಡ್‌ತಿದ್ದೊ. ಕನ್ನಡದ ಪ್ರಕ್ಯಾತ ಲಾವಣಿ 'ಕೆರೆಗೆ ಹಾರ' ತೇಳ್ದರ್‌ಲಿ ಈ ವಿಚಾರಗಳ ಕೇಳಕ್, ಇಂತ ಕತೆಗಳ್‌ಲಿ ಸಾಮುದಾಯಿಕ ಒಳ್ಳೆದ್ಕಾಗಿ ನರಬಲಿಕೊಡ್‌ವ ಪೊದ್ದತಿನ ಕಚಿತ್ತಾಗಿ ಗುರ್‌ತುಸಕ್, ಸಾಮಾನ್ಯ ಸಂಗತಿಗಳ್‌ಂದ ಹಿಡ್‌ದ್ ದೊಡ್ಡ ಮಟ್ಟದ ಉದ್ದೇಸಗಳಿಗೂ ಬಲಿದ್ – ಆಚರಣೆ ನಡ್‌ದದೆ ತೇಳ್ದು ಗೊತ್ತಾದೆ. ಸಮುದಾಯಲಿ ಹರ್‌ದ್ವ ಕಾಯ್‌ಲೆಗ ಅದರ್‌ಲೂ ಸಾಂಕ್ರಾಮಿಕ ಕಾಯ್‌ಲೆಗಾದ ಪ್ಲೇಗ್, ಮೈಮೇಲೆ ಬೀಳ್‌ದು (ಅಮ್ಮ, ಸಿಡುಬು), ಕಾಲೆರಾ, ಬರ, ನೈಸರ್‌ಗಿಕ ದುರಂತಗ, ಅತಿವೃಸ್ಟಿ, ಅನಾವೃಸ್ಟಿ – ಹಿಂಗೆ ಸುಮಾರ್ ಕಾರಣಕೆ ನಡಿವ ಬಲಿ ಮುಕ್ಯಾಗಿ ಎರ್‌ಡ್ ತರಲಿ ನಡ್‌ದದೆ. 1. ರಕ್ತ ಇಲ್ಲದೆ ಅರ್‌ಪಣೆ, 2. ರಕ್ತದ ಅರ್‌ಪಣೆ.

**ರಕ್ತ ಇಲ್ಲದ ಅರ್ಪಣೆ :** ನೆಟ್ಟಿಕಾಯಿಗಾದ ಚೀನಿಕಾಯಿ, ಕಾಯಿ, ಬಾಳೆಕಾಯಿ, ಪಿಂಗಾರ – ಹಿಂಗೆ ಬೇರೇ ಬೇದೆ ನೆಟ್ಟಿಕಾಯಿ ಹೂಗಳ ಬೊಲಿಗಾಗಿ ಕೊಟ್ಟವೆ. ತಾವ್ ಬೆಳ್‌ದ ಬೆಳೆದ್ ಹಣ್ಣ್‌ಬಾಗನ ಅಲೌಕಿಕ ಸಕ್ತಿಗೆ ಅರ್ಪುಸುದು ಬಲಿತ ಗ್ಯಾನ ಮಾಡಿರೆ, ರಕ್ತಸಹಿತ ಬೊಲಿಲಿ, ಅಲೌಕಿಕ ಸಕ್ತಿಗೆ ಪ್ರಾಣಿ ಇಲ್ಲೆ ಮೊಯಿಂಸರ ಕೊಡ್‌ವ ವಿದಾನ ಇದಾಗುಟು. ಈ ತರದ ಆಚರಣೆಗ ಹೆಚ್ಚಿ ಆಗಿ ಕ್ರಿಸಿ ಮತ್ತೆ ಕ್ರಿಸಿಗೆ ಸಮ್ಮಂದಪಟ್ಟ ಚಟುವಟಿಕೆಲಿ ತೊಡಗಿಕಂಬ ಸಮುದಾಯಗಳ್‌ಂದ ನಡ್ದದೆ. ಏಕೆಂತೇಳಿರೆ ರಕ್ತ ಚೆಲ್ಲಿರೆ ಸಮೃದ್ದಿ ಆದೆತ ಮೊನ್‌ಸನ ಸಾಮಾನ್ಯ ತಿಳ್‌ವಳಿಕೆ, ಹಂಗಾಗಿ ಸಾಮಾನ್ಯಾಗಿ ನಡ್ಸುವ ಇಂತ ಆಚರಣೆಗ ಸಮೃದ್ದಿನ ಬಯ್‌ಸಿ ನಡ್ಸ್‌ವ ಆಚರಣೆನೇ ಆವುಟು. ಹಿಂಗೆ ಚೆಲ್ಲಿದ ರಕ್ತನ ಕ್ರಿಸಿ ಬೂಮಿ ಮೇಲೆ ಚೆಲ್ಲಿ ಹೆಚ್ಚಿನ ಬೆಳೆಗಾಗಿ ಪ್ರಾರ್‌ತನೆ ಮಾಡ್‌ದು ಸಾಮಾನ್ಯಾಗಿ ಕಾಂಬ ಅಂಸ ಆವುಟು. ರಕ್ತ ಮತ್ತೆ ಸಮೃದ್ದಿನ ಆಚರಣೆ ಒಂದಕೊಂದ್ ಸಮ್ಮಂದದ ಆಚರಣೆಗ ಆಗೊಲೊ. ಹಂಗಾಗಿ ಎಲ್ಲ ತರದ ರಕ್ತ ಸಹಿತದ ಬಲಿ ಕ್ರಿಸಿಗಾರರ ಒಟ್ಟಿಗೆ ನಡ್ದ್ ಬಂದಿರ್‌ದು ನಾವ್‌ಗೆ ಕಾಂಬಕೆ ಸಿಕ್ಕಿದೆ. ಮೊನ್‌ಸರ್ ಅರ್ಪುಸ್‌ತಿದ್ದ ರಕ್ತಬಲಿ ಮತ್ತೆ ಮತ್ತೆ ಕಾಲ ಹೋದಂಗೆ ಕೆಲ ಸಾಮಾನ್‌ಗಳ ಕೊಡಿಕೆ ಸುರು ಮಾಡ್ದರ ಕಾಣಕ್. ಒಂದ್ ಪೂರ್ಣಾದ ವಸ್ತುನ ಬಲಿಕೊಡೊ ಬದ್‌ಲ್ ಅದರ ಒಂದ್ ಬಾಗನ ಬಲಿಕೊಡ್‌ವಂತ ಪೊದ್ದತಿ ಬೆಳ್‌ದ್ ಬಾತ್. ದಾರ್ಮಿಕ ಆಚರಣೆದ್ ಪರ ಆಗಿ ನಡಿವ ಕೂದೊಲು ಕೊಡ್‌ದು, ತುಲಾಬಾರ ಹಿಂಗೆ ಆಚರಣೆಗ ತಲೆದ್ ಬದ್‌ಲ್‌ಗೆ ಕೂದೊಲು, ಸರ್ಗದ ಬದ್‌ಲ್‌ಗೆ ಅಷ್ಟೇ ತೂಕದ ದವಸದಾನ್ಯ, ದುಡ್ಡು ಹಿಂಗೆ ಬೇರೆ ವಸ್ತುಗಳ ಅರ್ಪಣೆ ಮೊಯಿಂಸರ ಬಲಿಕೊಡ್‌ವ ಕ್ರಿಯೆಗಿಂತ ಬೇರೆನೇ ಆತ್‌ಂತ ತಿಳ್‌ಕಂಬಕೆ ಆದೆ. ಪ್ರಾಣಿಗೆ ಬದ್‌ಲಾಗಿ ಹಿಟ್ಟ್‌ನ ಹೊಂಜೆನ ಬೊಲಿಕೊಡ್‌ವ ಪ್ರಸಂಗನ ಜೆನ್ನನ 'ಯಸೋದರ ಚರಿತೆ' ಕಾವ್ಯಂದ ತಿಳ್‌ಕಣಕ್. ಈ ಎಲ್ಲ ಮಾದರಿಗ ರಕ್ತ ಸಹಿತಾದ ಬಲಿದ್ ರೂಪಾಂತರಗಳೇ ಆವುಟು.

ದಕ್ಷಿಣಕನ್ನಡ ಜಿಲ್ಲೆನ ಮಂಗಳೂರ್ ತಾಲೂಕ್‌ನ ಬೋಳಾರ ಮಾರಿಗೆಲಿ ಮಾರಿಪೂಜೆಲಿ ನರಬೊಲಿ ನಡೆತಿದ್ದದರ ಬಗ್ಗೆ ದಾಕಲೆಗ ಉಟ್ಟು. ಮೊನ್‌ಸ ನಾಗರಿಕ ಆಕಂಡ್ ಬಂದಗೆ ನರಬೊಲಿಗೆ ಬದ್‌ಲಾಗಿ ಪ್ರಾಣಿಗಳ ಬಲಿಕೊಡೊವಲ್ಲಿಗೆ ಬಂದುಟು. ಪ್ರಾಣಿಬಲಿ ಮುಕ್ಯಾಗಿ ಕೋಣ, ಆಡ್, ಕುರಿ, ಕೋಳಿ, ಹಂದಿ ಇಂತ ಪ್ರಾಣಿಗಳ್‌ನೆ ಬೊಲಿ ಕೊಟ್ಟವೆ, ಈ ಪ್ರಾಣಿಗಳ ಬಲಿಕೊಡ್‌ದರ್‌ಂದ ಮಾರಿ ತೃಪ್ತಿ ಆದೆತ ನಂಬುವೆ. ಇದರ್‌ಂದ ಸಾಮುದಾಯಿಕ ಆರೋಗ್ಯ ಸಂರಕ್ಷಣೆ ಆದೆತ ಜೆನ ನಂಬತಿದ್ದೊ. ಆದ್‌ರೆ ಮಂಗ್‌ಳೂರ್ ತಾಲೂಕ್‌ನ ಹೆಚ್ಚಿನ ಮಾರಿಗುಡಿಗಳ್‌ಲಿ ಇಂದ್‌ಗು ಪ್ರಾಣಿಗಳ ಬಲಿಕೊಡ್‌ದು ನಿಸೇದ ಆಗುಟು. ಪ್ರಾಣಿಗಳ ಬದಲ್‌ಗೆ ಸಸ್ಯವಸ್ತಾದ ಬೂದಿಕುಂಬಳಕಾಯಿನ ರಣಕಂಬದ ಮೇಲೆ ಇಸಿದ್ ಪಟ್ಟದ ಕತ್ತಿಂದ ಮಾದಿಗ ಕತ್ತರ್‌ಸುವೆ. ರಕ್ತದ ಬದ್‌ಲ್‌ಗೆ ಹಂಡೆಗಟ್ಟ್‌ಳೆ ಓಕುಳಿ ನೀರ್‌ನ ಚೋಂಪುವೆ. ಈ ವಿದಿನ ಹಿಂದೆ ಸಾಲ್‌ಗೆ ನಡೆತಿದ್ದ ಪ್ರಾಣಿಬೊಲಿಗೆ ಪ್ರತಿ ಆಗಿದ್ ಕಟ್ಟಿಕಂಡ ವಿದಾನ ಇದಾಗುಟು.

ಈ ಹಿಂದೆ ಮಾರಿಕಾಯ್‌ಲಗತ ಕರೆತಿದ್ದ ಮೈಮೇಲೆ ಬೀಳ್‌ದು (ಸಿಡುಬು), ಕಾಲೆರಾ, ಪ್ಲೇಗ್ – ಇಂತ ಕಾಯಿಲೆ ಸಾಮಾನ್ಯ ಆಗಿತ್ತ್. ಇಂತ ಮಾರಿಕಾಯಿಲೆಗ ಮಾರಿದೇವತೆನ ಸಿಟ್ಟ್‌ಂದ ಬಂದದೆತ ನಂಬ್‌ತಿದ್ದ ಜೆನ ಮಾರಿಗೆ ನರಬೊಲಿ, ಪ್ರಾಣಿಬಲಿ ತರದ ಹೆಚ್ಚಿ ತೀವ್ರತೆನ ಬಲಿಗಳ ಕೊಟ್ಟ್ ಅವಳ ತೃಪ್ತಿ ಪಡ್ಸುದರ್‌ಂದ ಈ ಕಾಯ್‌ಲೆಗ ಮತ್ತೆ ಬಾಕಿಲೆತ ನಂಬುತ್ತಿದ್ದೊ. ಆದ್‌ರೆ ಆದುನಿಕ ದಿನಲಿ ನಾವ್‌ಗೆ ಈ ತರದ ಮಾರಿಕಾಯ್‌ಲೆಗಳ ಹೆದ್‌ರಿಕೆ ಇಲ್ಲೆ. ಈ ತರದ ಕಾಯ್‌ಲೆಗಳ ಸುಲಬಲಿ ಕಡಿಮೆ ಮಾಡಿಕೆ ಸಾದ್ಯ ಇರ್‌ವ ವೈದ್ಯಕೀಯ ಸಂಸೋದನೆಗ ನಡ್‌ದುಟು. ಆದ್‌ರೂ ಮಾರಿ ಆಚರಣೆಗ ಹಿಂದೆನಂಗೆ ನಡ್‌ಕಂಡ್ ಬರತುಟ್ಟು. ಆದ್‌ರೆ ನರಬಲಿ, ಪ್ರಾಣಿಬಲಿನಂತ ಹೆಚ್ಚಿ ತೀವ್ರತೆನ ಬಲಿಗಳ್‌ಗೆ ಬದ್‌ಲಾಗಿ ಸಸ್ಯಬಲಿ ಬೆಳ್ದ್ ಬಂದದರ ಕಾಣಕ್. ಅಲ್ಲದೆ ಜೆನಸಂಕ್ಯೆ ಹೆಚ್ಚಿ ಆದಂಗೆ ದಾರ್ಮಿಕ ಆಚರಣೆಗಳ್‌ಲಿ ಇದ್ದ ಬಿಗಿನೂ ಹಣ್ಣ್ ಸೆಡ್‌ಲಾಕಂಡ್ ಬಾತ್. ಬದ್‌ಲಾದ ದಾರ್ಮಿಕ, ಆರ್‌ತಿಕ ವೆವಸ್ತೆಗಳ ಮಾತ್ರ ಅಲ್ಲದೆ ಬದ್‌ಲಾದ ನೈಸರ್‌ಗಿಕ ಪರಿಸರ ಸನು ಬಲಿಗೆ ಮೂಲತಃ ಇದ್ದ ಅವಸ್ಯಕತೆಗಳ ಬದ್‌ಲ್ ಮಾಡ್‌ತ್. ಒಟ್ಟಿಗೆ ರಾಜಕೀಯ ಕಾರಣನೂ ಬಲಿನ ಬದಲಾವಣೆಲಿ ಸಾಕಸ್ಟ್ ಪ್ರಬಾವ ಆದದರ ಕಾಣಕ್. ಭಾರತಲಿ ಪ್ರಚಲಿತಲಿದ್ದ ನರಬಲಿ ತರದ ಅಮಾನುಸ ಪೊದ್ದತಿಗ ಬ್ರಿಟಿಸರ ಆಡಳ್ತೆ ಕಾಲಲಿ ಬದಲಾದೇ ಇದ್ಕೆ ಒಳ್ಳ ಉದಾರ್‌ಣೆ. ಆದ್‌ರೆ ಆ ಹೊತ್ತುಗೆ ಬಲಿಂತೇಳ್‌ದು ದಾರ್ಮಿಕ ಆಚರಣೆನ ಒಂದ್ ಮುಕ್ಯ ಅಂಗಾಗಿ ಬೆಳ್‌ದ್ ಬಂದಿರ್‌ದು ಒಮ್ಮಂದೊಮ್ಮೆಗೆ ಇದರ ತಡೆಕೆ ಬೊತ್ತಾತ್. ಇದ್ಕೆ ಬದ್‌ಲೀ ವೆವಸ್ತೆನ ಕಟ್ಟಿಕಣಕಾಗಿತ್ತ್. ಇಂದ್ ನಾವ್‌ಗೆ ಕಾಂಬ ದೈಗ ಇಲ್ಲರೆ ನೆಟ್ಟಿಕಾಯಿಗ ಬಲಿಗಾಗಿ ಕೊಡ್‌ವ ವಿದಾನನು ಹಿಂದೆಂದಳೆ ನಡೆತಿದ್ದ ನರಬಲಿ ಮತ್ತೆ

ಪ್ರಾಣಿಬಲಿಗೆ ಬದ್‌ಲಾಗಿ ಕಟ್ಟಿಕಂಡ ಆಚರಣೆನೇ ಆವುಟು. (ಎ.ಎ.)

**ಪಶು ವೈದ್ಯ – ದನಕರ್‌ಗೆ ಮೊದ್ದ್ :** ಇದ್ ದನಕರ್‌ಗಳಿಗೆ ಸಮ್ಮಂದ ಪಟ್ಟ ಮೊದ್ದ್‌ನ ಕ್ರಮ. ಕ್ರಿಸಿಕರಾದ ಅರೆಬಾಸಿಗರ್‌ಲಿ ಪಸುಗಳಿಗೆ ಬಾರಿ ಮುಕ್ಯ ಸ್ತಾನ ಉಟ್ಟು. ಎತ್ತ್ ದನ, ಎಮ್ಮೆ ಮತ್ತೆ ಕೋಣಂಗ ಇಲ್ಲದ ಅರೆಬಾಸಿಗರ ಮನೆಗಳೇ ಇಲ್ಲೆಂತೇಳಕ್. ಹಾಂಗೆ ಕೋಳಿ, ಹಂದಿ, ಆಡ್ ಮತ್ತೆ ಅಪ್ರೂಪಕೆ ಬಾತುಕೋಳಿಗಳ ಕೂಡ ಅರೆಬಾಸಿಗರ್ ಸಾಂಕುವೆ. ಇಂತ ಸಾಂಕಿದ ಮ್ರುಗಂಗಳಿಗೆ ರೋಗ ಬಾಕನ ಅರೆಬಾಸಿಗರ್ ಅದ್ಕೆ ಅವರ್‌ದೇ ಆದ ಕ್ರಮಲಿ ಪರಿಹಾರ ಮಾಡಿಕಂಡವೆ.

ಪಶುವೈದ್ಯಲಿ ಸುರುಗೆ ಎಂತ ಸೀಕ್‌ಂತ ಹುಡ್‌ಕಿ ಹಿಡ್‌ದವೆ, ಕಳ್‌ಂಕ್ ನೀರು ಕುಡಿದರ್‌ಂದ, ಕಾಡ್‌ಲಿ ಮೇಯಕನ ಕೈಕಾಲ್ ಬೇನೆ ಆದರ್‌ಂದ ತೊಂದರೆಗಾದವೆ. ಕೆಲ ಸರ್‌ತಿ ದನಗ ಮೆಲ್‌ಕ್ ಹಾಕುದೂ ನಿಲ್ಸಿರೆ ಅದ್ಕೆ ಅಜೀರ್ಣ ಆಗುಟುಂತ ಅರೆಬಾಸೆವು ನೆನ್‌ಸುವೆ. ಕೈಕಾಲ್ ಬಾಪುದು, ಮೂಕುಂದ ರಕ್ತ ಸೋರ್‌ದು, ಕಾಲಡಿ ಒಡಿದು, ಹುಲ್ಲ್ ತಿನದೆ ಇರ್‌ದು, ಚರ್‌ಮ ಬಿರ್‌ಕ್ ಬುಡ್ದು, ಗಂಟ್ಲಡಿ ಚರ್‌ಮ ಬಾಪುದು ದನಕರ್‌ಗೆ ಬಾವ ಸಾಮಾನ್ಯ ರೋಗಂಗ.

ದನಗಳ ಮೈಗೆ ಗಾಯ ಆದರೆ ಒಂದೆರ್‌ಡ್ ದಿನಲಿ ಆ ಜಾಗೆಲಿ ಹುಳ ಬಿದ್ದದೆ. ಇದರ ಕಂಡಾಂಗೆ ನಮ್ಮ ಜೆನಂಗ ಗಾಯ ಆದಲ್ಲಿಗೆ ಕೆಂಡಸಂಪಿಗೆ ಕಾಯಿನ ಎಣ್ಣೆನ ಪೂಜುವೆ. ಬೂದಿ ಹಾಕಿದೂ ಕೆಲವ್ ಗಾಯನ ಗುಣ ಮಾಡ್‌ವೆ.

ಗದ್ದೆ ಕರೆಲಿ ಸಿಕ್ಕವ ಕಳ್ಳಿ ಚಿಗ್‌ರ್‌ನ ಬಿಳ್ಗಿಲ್ ನೊಟ್ಟಿಗೆ ಸೇರ್‌ಸಿ ದನಗಳಿಗೆ ಕೊಟ್ಟರೆ ತಾಂಗಿ ಗಡಿ ಆದ್ದ್ ಒಣ್‌ಗುದಲ್ಲದೆ ಹುಳಂಗ ಬಿದ್ದ್ ಹೋದೆಂತ ನಂಬುವೆ.

ಮೊಜ್ಜಿಗೆಗೆ ಇಂಗ್ ಸೇರ್‌ಸಿ ಕುಡ್‌ಸಿರೆ ಅಜೀರ್ಣ ನಿತ್ತದೆಂತ ಹೇಳ್‌ವೆ. ಮೆಣ್ಸ್‌ನ ಕಾಯಿಗೆ ತುಪ್ಪ ಸೇರ್‌ಸಿ ದನಕೆ ತಿನ್ಸಿರೆ ಅದರ ಮೂಕುಂದ ರಕ್ತ ಸೋರ್‌ದು ನಿತ್ತದೆ. ಕಾಯಿ ಹಾಲ್‌ಗೆ ಉಪ್ಪು ಸೇರ್‌ಸಿ, ತುಂಬೆ ಸೊಪ್ಪುನ ರಸ ಹಿಂಡಿ ಮಾಡ್ದದರ ದನಗಳ ಮೈಗೆ ಉಜ್ಜಿರೆ ಅಂಗಾಂಗ ಗಟ್ಟಿ ಆದೆಂತಳೂ ಅದ್ಕೆ ಹೊಳ್ಪು ಬಂದದೆಂತಳೂ ಹೇಳ್‌ವೆ.

ಅರೆಬಾಸೆವರ್‌ಲಿ ದನಂಗಳಿಗೆ ಶಸ್ತ್ರಚಿಕಿತ್ಸೆ ಅಂದರೆ, ಹತ್ಯಾರ್ ಬಳ್ಸಿ ಮೊದ್ದ್ ಮಾಡವೂ ಒಳೊ. ಗಾಡಿ ಎತ್ತ್‌ಗಳ ಕಾಲ್‌ಗೆ ಲಾಳ ಹೊಡ್ದ್ ನಡಿಯಕೆ ಸುಲಬ ಆವಂಗೆ ಮಾಡ್‌ವೆ. ಹೋರಿಗಳ ನೆಲಲಿ ಅಡ್ಡ ಮಲ್ಗ್‌ಸಿ ಎರ್‌ಡ್ ಕೈಕಾಲ್ ಅಲ್ಗದಂಗೆ ಹಿಡ್ದ್ ಎರ್‌ಡ್ ಬೆದ್ರ್ ಕೋಲುಲಿ ಹೋರಿನ ತರ್‌ಡ್ ಬಿತ್ತ್ ಒಡ್ದವೆ. ಅದಾಗಿ ಒಳ್ಳೆ ಮೆಣ್ಸ್‌ಹೊಡಿನ ಹರಳೆಣ್ಣೆಲಿ ಕಲ್ಸಿ ಆ ಜಾಗೆಗೆ ಉಜ್ಜುವೆ ಕೆಲ ದಿನಲಿ ಬೇನೆ ಕಮ್ಮಾದೆ. ಹಿಂಗೆ ಬಿತ್ತ್ ಒಡಿದರ್‌ಂದ ಎತ್ತ್‌ಗ ಸಾದು ಆಗಿ ಕ್ರಿಸಿ ಕೆಲ್ಸಲಿ ಬಳ್ಸಿಕಂಬಕೆ ಸುಲಬ ಆದೆ.

ದನಗಳ ಕಾಲ್ ಮುರ್‌ದರೆ ಕಾಡ್‌ಂದ ಕೆಲ ಸೊಪ್ಪುಗಳ ತಂದ್ ಗುದ್ದಿ ಉಪ್ಪು ಸೇರ್‌ಸಿ ಮುರ್‌ದೋದ ಜಾಗೆಗೆ ಕಟ್ಟುವೆ. ಹೊರೆಗೆ ಪುಡೆಂದ ಬೆದ್ರ್‌ನ ಪಟ್ಟಿ ಕಟ್ಟುವೆ, ಒಂದ್ ತಿಂಗಳ್‌ಲಿ ಇದ್ ಸರಿ ಆದೆ.

ಇಂತ ನಾಟಿ ಮೊದ್ದ್‌ಲಿ ಕೈಗುಣಕೆ ವಿಸೇಸ ಮೊರ್‌ಯಾದಿ ಉಟ್ಟು. ಎಲ್ಲದರನು ಮೊದ್ದ್ ಮಾಡಿ ಸರಿ ಆದೆಂತ ಹೇಳಿಕಾದ್‌ಲೆ. ಕೆಲವ್ ಮೊದ್ದ್‌ಮಾಡವ್‌ಕೆ ಕೈಗುಣ ಇರ್‌ದಂರ್‌ದ ಅವೇ ಮಾಡಕುತ ನಂಬುವೆ. ಹಾಂಗೆ ಮೊದ್ದ್‌ನ ಗುಟ್ಟುನ ಎಲ್ಲವ್ಕೆ ಹೇಳಿಕೆ ಬೊತ್ತುಂತಳೂ ನಂಬುವೆ. ಹಾಂಗೆ ಈ ವಿಚಾರಂಗ ಸುಲಬಲಿ ಎಲ್ಲವ್‌ಕೆ ಗೊತ್ತಾದುಲೆ. (ಪಿ.ಬಿ.)

**ಬಚ್ಚನಾಯಕ (ಕ್ರಿ. ಶ. 1535) :** ಸುಳ್ಯದ ಯೇನೆಕಲ್ಲ್ ತೇಳ್‌ವಲ್ಲಿ ಬಚ್ಚನಾಯಕ ತುಂಬಾ ಕಾರ್ಣಿಕದ ದೆವ್ವ. ಬಚ್ಚನಾಯಕನ ಬಗ್ಗೆ ಸುಮಾರ್ ಪಾಡ್ದನ ನಿರೂಪಣೆಗ ಒಳೊ. ಯೇನೆಕಲ್ಲ್ ಮಾಗಣೆನ ನಾಲ್ಕೂರುಗುತ್ತು ಸುಬ್ಬಣ್ಣ (ಸುಬ್ಬೇ) ಗೌಡ ಪಂಜದ ಬಲ್ಲಾಳಂಗೆ ಕೊಡಕಾದ ಕಂದಾಯನ ಕೊಡ್‌ದುಲೆ. ಇದ್ ಬಲ್ಲಾಳಂಗೆ ಸಿಟ್ಟ್ ಬರ್‌ಸಿದೆ. ಬಲ್ಲಾಳ ಗೌಡನ ಹೆದ್‌ರ್‌ಸಿಕೆ ಗಟ್ಟದ ಮೇಲೆಂದ ಬಚ್ಚನಾಯಕ ತೇಳಂವನ ಕರ್‌ಸಿದೆ. ಇಂವ ನಂಗಾಗಿದೇ ಬಾದುಂತೇಳ್ದರ ಗೌಡ ಸುರುಗೇ ತಿಳ್ಕಂಡಿದ್ದದೆ. ದಾರಿ ನೆಡುಲಿ ಮೊಗೇರ ಒಬ್ಬ ಬುಟ್ಟ ವಿಸ ಪೂಜಿದ ಬಾಣನ ಬಚ್ಚನಾಯಕಂಗೆ ಗುರಿ ಇಸಿ ಹೊಡ್‌ದದೆ.ಈ ಪೆಟ್ಟ್‌ಗೆ ಸಿಕ್ಕಿ ಬಚ್ಚನಾಯಕ ಬಿದ್ದದೆ. ಆಗ ಗೌಡನ ಹೆಣ್ಣ್‌ಗ ಬಚ್ಚ ನಾಯಕನ ಗಂಟ್ಲ್‌ನ ಮೆಟ್ಟಿ ನಾಳಿನ ಕತ್ತ್‌ರ್‌ಸುವೆ. ಸಾಯಕಾಕನ ಸ್ತಮೆ ಕೇಳ್‌ವ ಬಚ್ಚನಾಯಕ ದೆವ್ವತ್ವಕ್ಕೇರ್‌ದೆ,ಆರಾದನೆ ಮಾಡ್ಸಿಕಂಬ ದೆವ್ವ ಆದೆ.

ಬಚ್ಚನಾಯಕ ನಾಯಕ ಪರಂಪರೆನ ದೆವ್ವ. ಬವುಸ ಇಕ್ಕೇರಿಯವರ ಪ್ರತಿನಿದಿ ಆಗಿದ್ ಕಂದಾಯ ವಸೂಲಿಗೆ ದಕ್ಷಿಣಕನ್ನಡಕೆ ಬಂದವ ಆಗಿರೋಕು. ಸುಬ್ಬೇಗೌಡ ಸ್ತಳೀಯ ಬಲ್ಲಾಳನ ಸೋಲ್‌ಸಿ ಅಂವನ ಆಡೆಳ್ತಿಗೆನ ಅಕೇರಿ ಮಾಡಿದ್ ತನ್ನ ನೆಲೆನ ಗಟ್ಟಿಮಾಡ್‌ವ ಸೂಚನೆ ಈ ಕತೆಲಿ ಸಿಕ್ಕಿದೆ. ಬಚ್ಚನಾಯಕನ ನಿಜ ವೆಕ್ತಿತ್ವನ ತಿಳ್‌ದ್ ಗೌಡ ತನ್ನ ತೊಪ್ಪುಗೆ ಪಸ್ಚಾತಾಪ ಪಟ್ಟ್ ದೆವ್ವ ಆಗಿ ಆರಾದ್‌ಸಿಕಂಡ್ ಬಾತ್. ಬಚ್ಚನಾಯಕ ತನ್ನ ಪ್ರಬಾವಕೆ ಬಾವ ಗೌಡರ ಕಾದದೆ ತೇಳ್‌ವ ನಂಬಿಕೆ ಉಟ್ಟು

ಕಾಯರ್‌ತೋಡಿನ ಜಾಲಾಟಲಿ ಜಂಗಮ ಬಂಟಂಗೆ ಆರಾದನೆ ಉಟ್ಟು. ಇಂವನ ನೇಮಂದ ಮುಂದೆ ಬೈಸುನಾಯಕಂಗೆ ನೇಮವ ಇದ್ದದೆ. ಇಂವ ಬಚ್ಚನಾಯಕನ ಸಹೋದರ ತೇಳ್‌ದೆ. ಒಂದ್ ಸರ್‌ತಿ ಸುಬ್ಬಣ್ಣ ಗೌಡ ಮನೆಲಿ ಎಲೆ ನುಳ್ಳಿಕಂಡ್ ಇರ್‌ಕಕನ (ವೀಳ್ಯ ಕೀಳ್‌ತ್ತಿರ್‌ಕಾಕನ) ಬೈಸುನಾಯಕ ಗುತ್ತುನ ಮನೆಗೆ ಬಂದ್ ನೀರ್ ಕೇಳ್‌ದೆ. ಆಗ ಗೌಡನ ಸೊಸೆ ಅವಂಗೆ ನೀರ್ ತಂದ್ ಕೊಟ್ಟದೆ. ಆಗ ನಾಯಕ ತುಂಬು ಗರ್ಬಿಣಿ ಆದ ಅದರ ಕೈಲಿ ಹಿಡ್‌ದ್ ಎಳ್‌ದ್




ಗರ್ಬನ ಸೀಳಿ ಕೂಸುನ ತನ್ನ ಕೈಲಿ ಹಿಡ್‌ದದೆ. ಅದಾಗಿ ನಾಯಕ ಓಡಿಹೋಕೆ ನೋಡ್‌ದೆ. ಆದರೆ ಅಂವನ ಬೆರ್‌ಸಿ ಹಿಡ್ದ್ ಕೈಕಾಲ್ ಕಡ್ದವೆ..

ಇಂವನ ಮುಂದೆ ಜಂಗಮ ಬಂಟ ತೇಳಿ ಜಾಲಾಟದ ಹೊತ್ತುಲಿ ಆರಾದ್‌ಸುವೆ. ಕಾಯರ್‌ತೋಡಿ, ಗುತ್ತಿಗಾರ್‌ನಂತ ಪ್ರದೇಸಗಳ್‌ಲಿ ಇಂವನ ಆರಾದನೆ ನಡೆತುಟ್ಟ್.

ಬಚ್ಚನಾಯಕನ ಕೊಂದದರ ದ್ವೇಸನ ತೀರ್‌ಸಿಕೆ ಬೈಸುನಾಯಕ ಗೌಡನ ಮನೆಗೆ ಬಾತ್‌ತ ಕಂಡದೆ. ಆದರೆ ಒಂದ್ ಕತೆನ ನಿರೂಪಣೆನ ಹೀಂಗೆ ಬೆಳ್‌ಸುವ ಸೊತಂತ್ರನು ಜಾನಪದರ್‌ಗೆ ಇರಿಕಾಕನ ಬೈಸುನಾಯಕನ ಕತೆನೂ ಬಚ್ಚನಾಯಕಂಗೆ ಹೋಲಿಕೆನಂಗೆ ಮಾಡಿರಿಕು ಸಾಕ್.


ಬಚ್ಚನಾಯಕ

ನಾಯಕ ಸಂಪ್ರದಾಯದ ದೆವ್ವಗೆಲ್ಲನು ಗಟ್ಟದ ಮೇಲೆಂದದ ಬಂದವು. ಇವು ರಾಜಕೀಯ ಕಾರಣಕೆ ತುಳುನಾಡ್‌ಗೆ ಬಂದೊವು. ನಾಯಕರ ಪರಂಪರೆ ಇಕ್ಕೇರಿಯವರ್‌ಂದಲೆ ಬಂದಿರೊಕು. ಇಕ್ಕೇರಿ ನಾಯಕರ್ ಬಳ್ಪ, ಸುಬ್ರಹ್ಮಣ್ಯ ಇಂತಕಡೆ ತಮ್ಮ ಕೊಡುಗೆ ಗಳ ಕೊಟ್ಟೊಲೊ. ಸೊತ ಗೌಡರ ಸುಳ್ಯ, ಪುತ್ತೂರು ಬಾಗಗಕೆ ಕರ್‌ಕಂಡ್ ಬಂದವರ್‌ಲಿ ದಂಡನಾಯಕ, ತಿಮ್ಮಣ್ಣನಾಯಕ ತೇಳವು ಒಳೊ. ಇದ್ ಇಕ್ಕೇರಿ ಸಂಸ್ತಾನದ ಅದಿಪತ್ಯ ತುಳುನಾಡ್‌ಲಿ ಗಟ್ಟಿ ಆದ ಸೂಚನೆಗಳ ಕೊಟ್ಟದೆ. ಹಂಗೆನೇ, ನಾಯಕ ಪರಂಪರೆನ ದೆವ್ವಗಾದ ಗೌಡ ಮೂಲದ ಬಚ್ಚನಾಯಕ, ಬೈಸುನಾಯಕ, ಕರಿಯಣ್ಣನಾಯಕರೂ ಇದರಾಂಗೆ ಕಂದಾಯ ವಸೂಲಿಗಾಗಿ ದಕ್ಷಿಣಕನ್ನಡಕೆ ಬಂದವು ಅಸಹಜ ಸಾವುಲಿ ಅಂತ್ಯ ಕಂಡವೆ. ಮುಂದೆ ಪ್ರಬುತ್ವದ ನೆಲೆಂದ ದೆವ್ವಗಾಗಿದ್ ಆರಾದನೆ ಪಡ್ಕಂಡವೆ. ಸುಳ್ಯದ ಅಹತ್ತಡ್ಕ ಕಡೆ ಕನ್ನಡಬೂತ ತೇಳುವ ದೆವ್ವಕೆ ಆರಾದನೆ ಉಟ್ಟು. ಇಂವ ಗಟ್ಟದ ಮೇಲಿನ ರಾಜ್ಯಂದ ತುಳುನಾಡ್ ನೋಡಿಕೆ ಬಂದ 'ಬೈರವನ' ಬಕ್ತ. ಕುಮಾರದಾರಾಲಿ ಮೀಯಕನ ಕಾಯಬುಟ್ಟು ಮಾಯಕಕ್ಕೆ ಸೇರ್‌ದೆ. ಹಿಂಗೆ ಕನ್ನಡ ಮಾತಾಡ್‌ವ ಸುಮಾರ್ ದೆವ್ವಗ ದಕ್ಷಿಣಕನ್ನಡಲಿ ಒಳೊ. (ಎ.ಆರ್.ಜಿ.)

**ಬಂಟ್ರ್‌ಗ :** 'ಬಂಟ್ರ್' ಕರ್ನಾಟಕ ಕರಾವಳಿ ಕಡೆಲಿ ತುಂಬಾ ಬೇಗ ಬಹುನೆಲೆಗಳ್‌ಲಿ ಪ್ರತಿಸ್ಟೆ, ಪ್ರಬಾವಲಿ ಹಬ್ಬಿಕಂಡಿರ್‌ವ ಜೆನಾಂಗ. ಇವರ ಮೂಲ ಕರಾವಳಿನ ದಕ್ಷಿಣಕನ್ನಡ ಜಿಲ್ಲೆ. ಕೇರಳದ ಚಂದ್ರಗಿರಿಂದ ಹಿಡ್ದ್ ಉಡುಪಿನ ಬೈಂದೂರು ಮುಟ್ಟ ಇವರ ಪ್ರಾಬಲ್ಯ ಉಟ್ಟು. ಕ್ರಿಸಿ ಉದ್ಯಮ, ಶಿಕ್ಷಣ, ಬ್ಯಾಂಕಿಗ್, ಕಲೆ– ಹಿಂಗೆ ಬಹುನೆಲೆಗಳ್‌ಲಿ ಪಳ್ಗಿರುವ ಇವ್ ಈ ಪ್ರದೇಸದ ರಾಜಕೀಯ, ಸಾಮಾಜಿಕ, ದಾರ್ಮಿಕ ವಲಯಲಿ ಬಾಗಸ ಅದಿಕಾರ ಕೇಂದ್ರಿತರ್ ಕೂಡಾ ಹೌದು.

ಇಂತ ಬಂಟ್ರ ಇತಿಯಾಸನ ಮೂಲಂದ ಹುಡ್ಕಿಕೆ, ಕೂಡ್ಸಿಕೆ ಅಲ್ಲೊ ನಿರೂಪ್‌ಸಿಕೆ ಸಿಕ್ಕುವ ಸಾಕ್ಸ–ಕುರುಹುಗ ಸುಮಾರೊಳ. ನೆಲಮೂಲ– ಜೆನಮೂಲದ ಐತಿಹ್ಯ–ಕತನಗ, ಸರ್‌ಕಾರ ಅಲ್ಲೊ ಪ್ರಬುತ್ವದ ಜೆನಗಣತಿ, ವಿದೇಸಿ ಬರಹಗ, ಎಡ್ಗರ್ ತರ್‌ಸ್ಟನ್‌ನ ಎತ್ನೋಗ್ರಾಫಿಕ್ ಸರ್‌ವೆ, ವಿದ್ವಾಂಸರ ಹಂಗೆನೆ ಸಂಸೋದಕರ ಲೇಕನಗ, ಲಬ್ಯ ಜಾನಪದ ಸಂದಿ–ಪಾಡ್ದನಗ, ದೆವ್ವ ನಿರೂಪಿತ ನುಡಿಕಟ್ಟ್‌ಗ, ಹಿರಿತಲೆಗ ಜತನಂದ ಕಾಪಾಡಿಕಂಡ್ ಬಂದ ಬಾಯಿಂದ ಬಾಯಿಗೆ ಬಂದ ಕತೆಗ ಒಂದ್ ಬಗೆನ ಮಾಹಿತಿಗಾದರೆ; ಈ ಸಮುದಾಯದ ಬಗ್ಗೆ ಈ ನೆಲದವು ಅಲ್ಲೊ ಸಮಾಜದವೆ ನಡ್ಸಿದ ವಿದ್ಯೆನ ಅದ್ಯಯನಗ ಮತ್ತೊಂದು ಮಹತ್ವ ಮೂಲಗಾಗೊಳ. ಗೋವಿಂದ ಪೈ, ಕಡವ ಶಂಭುಶರ್ಮ, ಶಂಬಾ ಜೋಷಿ, ಬಿ. ಎ. ಸಾಲೆತ್ತೂರು, ಕೆ. ವಿ. ರಮೇಶ, ಗುರುರಾಜ ಭಟ್ಟ್, ವಸಂತ ಮಾದವ, ಕಯ್ಯಾರ ಕಿಞ್ಞಣ್ಣ ರೈ, ವಿವೇಕ ರೈ, ಚಿನ್ನಪ್ಪ ಗೌಡ, ಪುರುಷೋತ್ತಮ ಬಿಳಿಮಲೆ, ಏರ್ಯ ಲಕ್ಷ್ಮೀನಾರಾಯಣ ಆಳ್ವ ಇಂತವೆಲ್ಲ ನಡ್ಸಿದ ಶೈಕ್ಷಣಿಕ ಉದ್ದೇಸದ, ಗಂಬೀರ ಸಂಶೋದನೆಗ ಬಂಟ್ರ ಬಗ್ಗೆ ನುಮಾರ್ ಪಾಲ್ ಕೂಡಿಟು.

ಇಂತ ಅಡಿಮಟ್ಟದ ಅದ್ಯಯನಲಿ ಬಂಟ ಇತಿಯಾಸಕೆ ಒಳ್ಳದಾದು ಹೌದುಂತೇಳಿ ಗುರ್‌ತುಸಿ ಒಪ್ಪಕಾದ ಎರ್‌ಡ್ ಸಂಶೋದನಾ ಕೃತಿಗತ ಹೇಳ್ರೆ ಒಂದ್ : ಇಂದಿರಾ ಹೆಗ್ಗಡೆಯವರ 'ಬಂಟರು–ಒಂದು ಸಾಮಾಜಿಕ–ಸಾಂಸ್ಕಂತಿಕ ಅಧ್ಯಾಯನ', ಮತ್ತೊಂದ್ : ಬಿ. ಸುರೇಂದ್ರ ರಾವ್ ಬರ್‌ದ 'ಇತಿಹಾಸ ಮತ್ತು ಸಂಸ್ಕೃತಿಗಳಲ್ಲಿ ಬಂಟರು'. ಈ ಪಟ್ಟಿಲಿ ಸೇರ್‌ಸೊಕಾದ ಮತ್ತೊಂದ್ ಗಮನಾರ್ಹ ಕೃತಿ ಸೂರ್ಯನಾತ ಕಾಮತರ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು'. ಇದ್ ಮೂರ್ ದೊಡ್ಡ ಸಂಪುಟಗಳ ಹೊಂದಿದ್ದ್ ಅವಿಬಜಿತ ಕರಾವಳಿ ಜಿಲ್ಲೆಂದ ಸುಮಾರ್

66 ಜೆನ ಸ್ವಾತಂತ್ಯ ಹೋರಾಟಗಾರರ ಈ ಲೇಕಕರ್ ಮಾತಾಡ್‌ಸಿ ಮಾಹಿತಿ ಪಡ್ಡೊಳ. ಅಸ್ಟೂ ಜೆನಲಿ ಹೆಚ್ಚಿನವೆಲ್ಲ ಹೋರಾಟಗಾರರ್ ಬಂಟ್ರ್‌ತ ಹೇಳ್ದು ಇಲ್ಲಿ ನೋಡಕಾದ ಸಂಗತಿ.

ಇಸ್ಟೆ ಅಲ್ಲ, ಬಂಟ್ರ ಮೂಲನ ಸೋದ್‌ಸುವ, ಅವರ ಸಾಮಾಜಿಕ ಆರ್ತಿಕ, ದಾರ್ಮಿಕ ಕೊಡುಗೆಗಳ ದಾಕಲ್ಸುವ, ಅವು ಹುಟ್ಟುಮೂಲ ನೆಲ–ನೆಲೆಂದ ಹಾರಿ ಜಗತ್ತ್‌ಲಿಡೀ ಹರ್‌ಂಡಿಕಂಡಿರ್‌ವ ಜಾಗೆನ ಗುರ್‌ತುಸುವ ಸುಮಾರ್ ಲೇಕನಗ ಬಂಟ್ರ್‌ಗಳೇ ಪ್ರಕಟ್‌ಸ್‌ವ ಪತ್ರಿಕೆಲಿ ಆಗಾಗ ಬಂದದೆ. ದೇಶ–ವಿದೇಸಗಳ್‌ಲಿರುವ ಬಂಟ್ರ ಸಂಗಗ ಪ್ರಕಟಿಸುವ ಸಂಸ್ಮರಣಾ ಗ್ರಂತ, ಅಬಿನಂದನಾ ಗ್ರಂತಲಿ ಅದ್ ಪ್ರಕಟ ಆಗುಟು. ಮತ್ತೆ ಇಂತ ಲೇಕನಂಗ ಹರ್‌ಂಡಿದಾಂಗೆ ಇದ್ದರೂ ಯಾದೂ ಕೂಡಾ ಇಡೀ ಸಮುದಾಯನ ಹಕ್ಕಲೆಂದ ನೋಡ್‌ವಂಗೆ ಮಾಡ್ಲಿಕೆ ಆದುಲೆ. ಅಂತ ಸಾವಿರಾರ್ ಲೇಕನಂಗ ಇದ್ದರೂ ಅದ್ ಜಾತಿಪ್ರೀತಿನ, ಅವರ ಬಗ್ಗೆ ಬರ್ದದೆ ಹೊರ್ತ್ ಒಳ್ಳ ಚಾಳದ ಸಂಸೋದನೆ ಅಲ್ಲ. ಈ ಸಮುದಾಯದ ಟ್ರಸ್ಟ್‌ಗ, ವಿಶ್ವವಿದ್ಯಾನಿಲಯಗ ಹಂಗೆನೆ ಅದ್ಯಯನ ಕೇಂದ್ರಗ ಅನುದಾನ ಕೊಟ್ಟು, ಸಂಶೋದಕರ, ಸಂಶೋದನಾ ಸಹಾಯಕರ ಮಾಡಿ ಕೈಗೊಂಡ ಶೈಕ್ಷಣಿಕ ಚೌಕಟ್ಟು ಶಿಸ್ತು, ಉದ್ದೇಸದ ಕಾರ್ಯಗ ಅಲ್ಲ. ಬೇರೆಬೇರೆ ಕ್ಷೇತ್ರಲಿ ಇಂದ್ ಬಂಟ್ರ್‌ಗ ಏರ್‌ದ ಎತ್ತರ, ಸಾದನೆನ ಕಂಡಿತಾ ಕಳ್ದ್‌ಹೋದ ಕಾಲ–ಚರಿತ್ರೆಲಿ ಈ ಸಮಾಜ ಗಟ್ಟಿ ಆಗಿದ್ ನಿತ್ತಿರ್‌ದುತ ಸುಲಬಲಿ ನೆನ್ಸಕ್. ವಸ್ತುಸ್ತಿತಿಲಿ ಬಂಟ್ರ್‌ಗ ಗಳ್ಸಿದ ಪ್ರತಿಸ್ಟೆ, ರಾಜಕಾರಣಕೇಂದ್ರಿತ ಅದಿಕಾರ ಬಾಹುಗಳ ಪರಿಮಾನಗಳ್‌ಂದಾಗಿದೆ ಅವರ ಇತಿಯಾಸ,ಜೀರ್ಣೋದ್ದಾರದ ಕತೆಗ ಇರೊಕಾದೆ. ದಕ್ಷಿಣಕನ್ನಡದ ಒಟ್ಟ್ ಚರಿತ್ರೆಲಿ ಬಂಟರ ಕತೆಗಳ ಕೇಂದ್ರಲಿಸಿ ನೋಡೋಕಾದ ಅಗತ್ಯ ಉಟ್ಟು.

'ಬಂಟ್ರ್'ತ ಹೇಳ್ವ ನಾಮವಿಸೇಸ ಇಡೀ ಸಮುದಾಯಕೊಂದ್ ಗುಣವಾಚಕ ಆಗಿದ್ ಉಟ್ಟು. ಆಳುವ–ಪಾಲ್ಸುವ–ಕಾಪಾಡ್ವ ಜೆನಕಾಗಿ, ಪಾಳೇಗಾರ್‌ರಾಗಿ, ಗುತ್ತು–ಬಾರಿಗೆನ ಅದಿಕಾರಸ್ತರ್ ಆಗಿರ್‌ವ ಇವರ ಅಲ್ಲಿನ ತುಳುವರ್ ಹಂಗೆನೆ ಒಳ್ದವು 'ಸೆಟ್ರ್'ಗ ತ ಕರ್‌ದವೆ. ಬಂಟ್ರೇ ಆರಾದ್‌ಸ್‌ವ ದೆವ್ವಗ 'ಬಾರಗ'ರೇ ತ ಕರ್‌ದರೆ; ಇಪ್ಪತ್ತನೆ ಸತಮಾನದ ಅಕೇರಿಗೆ ಮುಟ್ಟ ಇವರ್‌ಲಿ 'ಒಕ್ಕೆಲಗುಲು' ತ ಕರ್‌ಸಿಕಂಡವು. 'ಬಂಟ'ತ ಹೇಳ್ರೆ ಸೈನಿಕ, ಸೇನಾ ಮುಕ್ಯಸ್ತ, ಕಲಿ, ಸೂರ ದೈರ್ಯವಂತತ ಹೇಳ್ವ ಅರ್ತನೂ ಉಟ್ಟು. ಜೆ. ಸ್ಟುರಕ್ ಬಂಟ್ರಗಳ್ ಹಿಂಗೆ ಹೇಳಿಟು. "ಶ್ರೇಷ್ಟ ಕಟ್ಟಾಳ್ ಜೆನಾಂಗದ ಬಂಟ್ರ್ ಬಲಿಷ್ಟ ವ್ಯಕ್ತಿತ್ವದ ಸ್ವತಂತ್ರ ನಡವಳಿಕೆ ಇದ್ದವು. ಸಾಮಾನ್ಯಾಗಿ ಕರಾವಳಿಲಿ ಇರುವವರಂಗೆ ಗೌರವರ್ಣದವು. "ಬಂಟ್ರ ಹೆಚ್ಚ್‌ನಪಾಲ್ ಆಚರಣೆಗ ದ್ರಾವಿಡ ಪರಂಪರೆ–ಪೊದ್ದತಿನಾಂಗೆ ಇದ್ದದೆ.ಬಟ್ರ ಕ್ರಮ, ಮತದ ಪ್ರಬಾವ ಅವರ ಮೇಲೆ ಆಲ್ಲೆ. ಬಂಟ್ರ ವ್ಯಕ್ತಿತ್ವನ ವಿವರ್ಸಿದ್ದ ಜೆ. ಸ್ಟುರಕ್ 1894ರ್‌ಲಿ ಭಾರತಕೆ ಬಂದವ. ಮತ್ತೆ ಬಂದವ ತರ್‌ಸ್ಟನ್ ಇವಿಬ್ಬೊರೂ ಬಂಟ್ರ್‌ಲಿ ನಾಕ್ ಬಗೆ ಉಟ್ಟ್‌ತ ಗುರ್ತ್‌ಸುವೆ. ಒಂದ್‌ನೆದ್ : ಮಾಸಾದಿಗೆ ಬಂಟ್ರ್; ಎರ್‌ಡ್ : ಜೈನ ಬಂಟ್ರ್; ಮೂರ್ : ನಾಡವರ್ ಅಲ್ಲರ್ ಬಂಟ್ರ್; ನಾಲ್ಕ್ : ಪರಿವಾರ ಬಂಟ್ರ್. 1801ರ್‌ಲಿ ಬಂದ ವಿದೇಸಿ ಬುಕನಾನ್ ಪ್ರಕಾರ ಬಂಟ್ರ್‌ಗಳ್‌ಲಿ ಬರೀ ಮೂರ್ ವರ್‌ಗಗ. ಅವರ ನಾಡವು ಮತ್ತೆ ಬಂಟ್ರ್‌ತೇಳಿ ಗುರ್‌ತುಸುದುಲೆ. ಸಿಕ್ಕಿದ ದಾಕಲೆಗಳ್‌ಲಿ ಕಂಬಳ ಬಂಟ, ಹಾವೇರಿ ಬಂಟತೇಳ್ವ ವಿಬಾಗನೂ ಉಟ್ಟು. ಕಾಸ್ಟ್ರೊಡ್ ಕಡೆಲಿ 'ಬೂಡುಬಂಟ'ತೇಳ್ವ ಒಂದ್ ಬಗೆನ ಬಂಟ್ರ್‌ಗೊಳೊ, ಕುಂಡ ಬಲೆಕರ್‌ತೇಳ್ದು ಒಕ್ಕಲಿಗ ಜಾತಿನ ಉಪವರ್‌ಗತ ಹೆಸ್ರಾಂತ ಬಂಟ ಸಂಶೋದಕಿ ಇಂದಿರಾ ಹೆಗ್ಡೆ ಹೇಳ್ವೆ. ಜೆ. ಸ್ಟುರಕ್ ಮತ್ತೆ ತರ್‌ಸ್ಟನ್ ಗುರ್‌ತುಸುವ ಪರಿವಾರ ಬಂಟ್ರ್‌ಗ ಜಾತಿಲಿ ನಿಜವಾದ ಒಕ್ಕಲ್‌ನವು ಅಲ್ಲ. ಅವರ ಜೀವನ ಒಟ್ಟುಮಾಡ್ವ, ಆಚಾರ–ವಿಚಾರ, ನಂಬಿಕೆ ಬಂಟ್ರ್‌ಗಳ್‌ಂದ ಎಲ್ಲಾ ಬೇರೆನೆ ಇದ್ದದೆ. ಅಪ್ಪೂಪಕೆ ಈಗ ಮೊದ್ವೆ ಸಮ್ಮಂದ ನಡೆತುಟ್ಟುತ ಬುಟ್ರೆ ಸಮುದಾಯ ನೋಡಿಕಂಡ್ ಆವ ಸಂಗಟನೆಗಳ್‌ಲಿ ಸದಸ್ಯರ ಕೊಡ್ದುತಕಂಬ ಯಾವ ಒಡನಾಟನೂ ಇಲ್ಲೆ.

ಉಡುಪಿನ ಕುಂದಾಪುರಂದ ಆಚೆ ಉತ್ತರ ಕನ್ನಡಲಿ ಜಾಸ್ತಿ ಇರ್‌ವ ನಾಡವರೊಟ್ಟಿಗೆ ಬಂಟ್ರ ಸಮ್ಮಂದ ಬಂಟ್ರಸ್ಟೆ ಹಳ್ತ್. ಬಂಟ–ನಾಡವರ ಸಮ್ಮಂದನ ವಿವರ್‌ಸುವ ಮುಂದೆ ಇಲ್ಲಿ ಬಂಟ್ರ್‌ಗೂ ಜೈನರ್‌ಗೆ ಎಂತ ಸಮ್ಮಂದ ಒಳದ್‌ತ ತಿಳ್ಯೊಕು. ಕದಂಬ ವಂಸದ ಹೆಸ್ರಾಂತ ರಾಜ ಮಯೂರವರ್ಮಂಗೆ ಸಮ್ಮಂದ ಪಟ್ಟ ಒಂದ್ ಕತೆ–ಇತಿಯಾಸ ಬಂಟ–ಜೈನ ನೆಡುನ ಗೆರೆ–ದೂರಕೆ ಕಾರಣ ಆದ ಅಂಸನ ಹೇಳ್ದೆ. ಏಳ್ನೆ ಸತಮಾನಲಿ ಉತ್ತರ ಕನ್ನಡದ ಬನವಾಸಿ ಮತ್ತೆ ದಕ್ಷಿಣಕನ್ನಡದ (ವಿಬಜಿತ) ಬಾರ್‌ಕೂರ್‌ನ ಮಯೂರವರ್ಮ ಆಳ್‌ತಿತ್ತ್.

ಯೋದ ಆಗಿದ್ದ ರಾಜಂಗೆ ಬೇಟೆ ಇಸ್ಟದ ಆಟ–ಕ್ರೀಡೆ. ಅದ್ ಯುದ್ದಕೆ ಮುಂದೆನ ತಾಲೀಮ್‌ನು ಆಗಿತ್ತ್. ಮಯೂರವರ್ಮ ಹೀಂಗೆ ಒಂದ್ ಸರ್ತಿ ತಪ್ಪಿ ನವಿಲ್‌ನ ಬೇಟೆ ಮಾಡಿ ಕೊಂದತ್. ಜೈನರಾಜ ಇಂತ ಹಿಂಸೆ ಮಾಡ್‌ವಂಗಿಲ್ಲೆ. ಬಂಡೆದ್ದ ಜೆನಗ ರಾಜಂಗೆ ಬೊಯ್ದೊ. ರಾಜ ಅಂದರು ತಪ್ಪೊಪ್ಪಿಕಣದೆ ನಾ ದರ್ಮಲಿ ಜೈನ, ಕಸುಬುಲಿ ರಾಜ. ಹಂಗಾಗಿ ಪ್ರಜೆಗಳ ನೋಡಿಕಂಬೊದು ನನ್ನ ಕೆಲ್ಸ ರಾಜ ದರ್ಮಕೆ ಹಕ್ಕಲೆ ಆದ್ದ್, ನ್ಯಾಯವಾದ್ದ್‌ತ ಪ್ರತಿಪಾದ್‌ಸಿದೆ. ಇದರ ಪರಿಣಾಮ ಜೈನ ವಂಸೀಯರ್‌ಲಿ ಎರ್‌ಡ್ ಪಾಲಾಗಿ ಒಂದ್ ಗುಂಪು 'ಬಂಟ್ರ್'ಗತ ಹೇಳ್ವೆ ಮತ್ತೆ ಈ ಗಟನೆ ನಡ್ದದ್ ತುಳುನಾಡಾದ ಬಾರ್‌ಕೂರ್‌ಲೆ ತೇಳ್ವ ಉಲ್ಲೇಕ ಉಟ್ಟು. ರಾಜೆನ ಪರ ನಿತ್ತ್ ನಾಡ್ ಕಟ್ಟಿಕೆ ಉಪಕಾರ ಮಾಡ್ದ ಇವು 'ನಾಡವರ್'ತ ಹೇಳ್‌ವೆ. ಬಾರ್‌ಕೂರ್, ಕುಂದಾಪುರ, ಬೈಂದೂರ್, ಉತ್ತರ ಕನ್ನಡದ ಅಂಕೋಲ ಮುಟ್ಟ ಹಬ್ಬಿದ ಈ ನಾಡವರ್ ಮಾತಾಡ್ದು ಕನ್ನಡನೇ. ಕವಿಗ ನಾಡವರ್‌ಗಳ್ ತ ಕರ್‌ದ ಜೆನವರ್‌ಗಕೆ ಮತೆ ಈ ನಾಡವರ್‌ಗೆ ಯಾದೇ ಸಮ್ಮಂದ ಇಲ್ಲೆ




ನಾಡವರ್ ಮತ್ತೆ ಬಂಟ್ರ್‌ಲಿ ಬಳಿ–ಕುಲನಾಮಗೊಳ. ಬೊಳಿ(ಬಳಿ) ಅಮ್ಮನ ಮೂಲಂದ ಬಂದದೆ. ಕರಾವಳಿನ ಬಂಟ್ರ್‌ಗಳ್‌ಲಿ ಇಂದ್‌ಗು ಮೊದ್ವೆ ಹೊತ್ತುಲಿ ಇಂತ ಬೊಳಿನ ಆದರ್ಸಿದ್ ಮೊದ್ವೆ ನಡ್ದದೆ. ಗಂಡ್–ಹೆಣ್ಣ್ ಒಂದೇ ಬೊಳಿನವಾದರೆ ಮೊದ್ವೆ ನಡೆದುಲೆ.ವಿಜ್ಞಾನಲಿ ಕೂಡಾ ಅದ್ ಒಂದೇ ಗುಂಪುನ ರಕ್ತ ಸಮ್ಮಂದತೇಳ್ದು ದೃಡ ಆಗುಟು. ನಾಡವರ್ ಮಾತ್ರ ಮೊದ್‌ವೆನ ಬಟ್ರ ಕಟ್ಟುಪಾಡ್‌ಗಳಿಗೆ ಹೆಚ್ಚಾಗಿ ಅಳವಡ್ಸಿಕಂಡಿರ್ದರ್‌ಂದ ಅವು ಈಗ ಬೊಳಿನ ತುಂಬಾ ನೋಡ್ದುಲೆ. ಬೊಳಿ ಅಮ್ಮನಮೂಲ ಆಗಿರ್‌ದರ್‌ಂದ ಬಂಟ್ರ್‌ಗ ಸಹಜ ಆಗಿದ್ ಮಾತೃ ಮೂಲದೊವ್. ಕರಾವಳಿನ ಸುಳ್ಯ, ಪುತ್ತೂರು, ಬಂಟ್ವಾಳ, ಕಾರ್ಕಳ, ಬೆಳ್ತಂಗಡಿ, ಮಂಗ್ಳೂರು, ಬಾಗಸ ಉಡುಪಿಯವೆಲ್ಲ ಅವು ಬಂಟ್ರ್‌ತ ಕರೆಕೆ, ಕರ್‌ಸಿಕಂಬಕೆ ಕುಸಿಪಟ್ಟರೆ ಉತ್ತರ ಕನ್ನಡದವು ನಾಡವರ್‌ತ ಕರ್‌ಸಿಕಂಬಕೆ ಬಯ್ಸುವೆ. ಈ ನೆಡುಲಿ ಕುಂದಾಪುರ–ಬೈಂದೂರ್ ಕಡೆನ ಅರ್ದ ಜೆನಗ ಅವು 'ಬಂಟರ ಯಾನೆ ನಾಡವರ್'ತ ಕರ್‌ಸಿಕಂಬಕೆ ಬಯ್ಸುವೆ. ಇದೇ ಹೆಸರ್‌ಲಿ ಈ ಬಾಗಲಿ ಸಂಗಟನೆ, ಸಬಾಬವನಂಗ ಹೆಚ್ಚಿರ್‌ದರ ಗಮನ್ಸಕ್. ಪುತ್ತೂರ್–ಸುಳ್ಯ ಕಡೆ ಇಂತ ಬವನಗಳ್‌ಲಿ ಈಗ ಬರೀ 'ಬಂಟ್ರ ಸಂಘ'ತ ಪದನಾಮಗ ಮಾತ್ರ ಉಟ್ಟು.

ಉತ್ತರ ಕನ್ನಡದ ಲೇಕಕ, ವಿದ್ವಾಂಸ ಎನ್. ಆರ್. ನಾಯಕ್ ಬರ್‌ದ ನಾಡವರ್‌ಗೆ ಸಮ್ಮಂದ ಪಟ್ಟ ಅಪ್ರಕಟಿತ ಕೃತಿನ ಆದರ್ಸಿ ಹಿರಿಯ ಸಂಶೋದಕಿ ಇಂದಿರಾ ಹೆಗ್ಡೆಯವು ಅವರ 'ಬಂಟರು–ಒಂದ್ ಸಮಾಜೋ–ಸಾಂಸ್ಕಂತಿಕ ಅದ್ಯಯನ' (2004) ಕೃತಿಲಿ "ಬಂಟ್ರ್ ನಾಡವರ ಒಂದ್ ಶಾಕೆತ ಹೇಳ್ದು ಹೆಚ್ಚ್ ಸೂಕ್ತ. ಯಾಕೆತೇಳ್ರೆ ನಾಡವರ ಹೆಸರೇ ಬಾರೀ ಹಳ್ತ್. ಇವು ಕ್ಷಾತ್ರ ಕಸುಬುನ ಪ್ರಮುಕವಾಗಿ ಆಶ್ರಯ್ಸಿದ ಮೇಲೆ ಬಂಟ್ರ್‌ತ ಹೆಸರಾದೊತ ಹೇಳ್ವೆ. ಬಂಟ್ರ್–ನಾಡವರ್ ಇಬ್ಬರೂ ಮೂಲ ನೆಲದವು, ಕ್ರಿಸಿಕರ್. ಗಟ್ಟಿ ದೇಹ–ಮೊಯಿಂಸ್‌ನ ಯೋದರ್. "ಉತ್ತರ ಕನ್ನಡ ಜಿಲ್ಲೆನ ನಾಡವರ್ ಹಿಂದೆ ಕೆಲವ್ ಸತಮಾನದ ಕಾಲ ಜೈನ್ರಾಗಿದ್ದ್ ಮುಂದೆ ವೈಷ್ಣವರಾದೊ. ತೀರ್ಥಹಳ್ಳಿ ಪರಿಸರದ ನಾಡವರ್ ಹಿಂದೆ ಜೈನ್ರಾಗಿದ್ದ್ ಮುಂದೆ ವೈಷ್ಣವರಾಗಿ ನಾಮದಾರಿಗತ ಹೆಸ್ರ್ ಪಡ್ದವು. ಇವರ್‌ಲಿ ಕುಂದಾಪುರ ಪರಿಸರಂದ ವಲ್‌ಸೆ ಬಂದವು ಸುಮಾರ್ ಇದ್ದ್ ಕುಂದಾಪುರದವರಂಗೆ ಇವೂ ಅಳಿಯಕಟ್ಟ್ ಪೊದ್ದತಿ ಅನುಸರ್ಸತಿದ್ದೊಂತ ಸುಮಾರ್ ಸಾಸನಗಳ್‌ಂದ ಸ್ಪಸ್ಟ ಆಗುಟು. ಆದರೆ ಕುಂದಾಪುರ ಕಡೆವು ನಾಡವರ್‌ತೇಳಿದೆ ಪರಿಚಿತರ್. ನಾಮದಾರಿಗತ ಅಲ್ಲ. ತೀರ್ಥಹಳ್ಳಿ ಹಂಗೆನೆ ಕರಾವಳಿ ಪ್ರದೇಶದ ನಾಡವರ್ ಕೆಳದಿ ಮತ್ತೆ ಸೋದೆ ನಾಯಕರ ಸೇವೆಲಿದ್ದ್ ಅಂಕೋಲ, ಕುಮಟ ಪ್ರದೇಸಲಿ ನೆಲೆನಿತ್ತೊ. ಇವರ್‌ಲಿ ಊರ ಮುಕ್ಯಸ್ತರ್‌ಗೆ 'ಗಾಂವ್‌ಕಾರ' ಹೆಸ್ರ್ ಬಂದುಟು. ಈ ಮೂರ್ ನಾಡವರ ಗುಂಪುಗ ಮತ್ತೆ ಬಂಟ್ರ್‌ತ ಹೇಳ್ವ ತುಳುನ ಒಕ್ಕಲ್ಮೆ ಒಂದೇ ಮೂಲದವು ಹಿಂದೆ ಅಳಿಯಕಟ್ಟ್ ಅನುಸರ್ಸತಿದ್ದೊವ್. "

ಬಂಟ್ರ್ ಮಾತೃಮೂಲ ಅಲ್ಲರೆ ಅಳಿಯಕಟ್ಟ್‌ನವು. ಸಮ್ಮಂದ ಪಟ್ಟ ಇತಿಯಾಸನ ಆದರ್ಸಿ ಹೊನ್ನಯ ಶೆಟ್ರ್ ಬರ್‌ದ 'ಅಳಿಯಕಟ್ಟು' ಕತನ ಕವನವೊಂದ್ ಆ ಕತೆನ ಹಿಂಗೆ ನಿರೂಪ್‌ಸಿದೆ ತುಳುನಾಡ್‌ನ ರಾಜ ಬೂತಾಳ ಪಾಂಡ್ಯ ಹೊಸ ಹಡಗ್ ಕಟ್ಟ್‌ಸಿ ಸಮುದ್ರಕೆ ಇಳ್ಸ್ಯಾಕನ ಅದ್ ಚೂರೂ ಮೆದ್ದಿತ್ಲೆ. ಆಗ ಜೋಯಿಸರ್‌ಲಿ ಕೇಳ್ಯಾಕನ ಅವು 'ನರಬಲಿ' ಕೊಡೊಕುತ ಸೂಚಿಸುವೆ. ಹಡ್ಗ್ ಕಟ್ಟಿದ ಸೌದೆಲಿದ್ದ ಬೂತರಾಜೆನ ಓಡ್ಸಿಕೆ, ಕುಸಿ ಪಡ್ಸಿಕೆ ನರಬಲಿ ಕೊಡಿಕೆ ರಾಜ ಮುಂದಾದೆ. ಅಂವನ ಮಕ್ಕಳೇ ಇದ್ಕೆ ಮುಂದಾಕುತ ಈ ಸಂಗತಿನ ರಾಜ ಅಂವನ ಹೆಣ್ಣ್‌ನ ಗಮನಕ್ಕೆ ತಂದದೆ. ನರಬಲಿನ ಸುದ್ದಿ ಕೇಳಿ ಹೆಣ್ಣ್ ಮಕ್ಕಳ ಕರ್‌ಕಂಡ್ ತೌರುಮನೆಗೆ ಹೋದೆ. ರಾಜ ಚಿಂತೆಲಿ ಮಲ್ಗಿರ್‌ಕನ ಅಂವನ ಒಡಹುಟ್ಟಿದ ತಂಗೆ ಸುದ್ದಿ ಕೇಳಿ ಅದರ ಮಜ್ಜನನೆ ಬಲಿಗೆ ಒಪ್ಪುಸಿಕೆ ಕರ್‌ಕಂಡ್ ಬಂದದೆ. ಇನ್ನೇನ್ ಬಲಿ ಕೊಡೊಕುತ ಹೇಳ್ಕನ ಬೂತರಾಜ ಅಸ್ಟರ್‌ಲೆ ತೃಪ್ತಿ ಆಗಿದ್ ಹಡ್ಗ್ ನೀರಿಗೆಳ್ದದೆ. ಹಡ್ಗ್ ದೇಸ–ವಿದೇಸ ಸಂಚರಿಸಿ ಸಿರಿಸಂಪತ್ತ್ ತುಂಬಿಕಂಡ್ ಬಂದ್ ರಾಜ ಅಂವನ ಎಲ್ಲಾ ಕೀರ್‌ತಿ–ಐಶ್ವರ್ಯನ ಅದೇ ಅಳಿಯಂಗೆ ದಾರೆ ಎರ್‌ದದೆ. ಅಂವನ ಮಾನ ಕಾಪಾಡ್ದ ಅಳಿಯಂಗೆ ರಾಜ ಎಲ್ಲಾ ಕೊಟ್ಟ್ ಕುದ್ದದೆ. ಇದ್ ಬೂತಾಳಪಾಂಡ್ಯನ ಕತೆ. ಇಲ್ಲಿಂದಲೆ ತುಳುನಾಡ್‌ನ ಬಂಟ್ರ್‌ಲಿ 'ಅಳಿಯಕಟ್ಟು' ಹುಟ್ಟಿತ್‌ತ ಹೇಳ್ವೆ. ಇಲ್ಲಿಂದಲೇ ಹುಟ್ಟಿಕಂಡ ಇನ್ನೊಂದ್ ಕತೆ, ನಂಬಿಕೆ ಹಿಂಗುಟ್ಟು. ಬಲಿಕೊಡಿಕೆ ತಯಾರಿಲ್ಲದೆ ಮಕ್ಕಳ ತೌರುಮನೆ–ಉತ್ತರ ಕನ್ನಡಕೆ ಕರ್‌ಕಂಡ್ ಹೋದ ಹೆಣ್ಣ್‌ನ ಮೂಲದ ಮಕ್ಕಳೇ 'ನಾಡವರ್'ತ ಹೇಳ್ವೆ. ಗಂಡನ ಸಾಪಂದಾಗಿ ಈ ವಂಸ (ನಾಡವರು) ಪಾಪದವಾದೊ. ಮೂಲಲಿ ಒಳ್ದ ತುಳು ಬಂಟ್ರ್ ಶ್ರೀಮಂತರಾದೊತ ಹೇಳ್ವೆ ಉತ್ತರ ಕನ್ನಡದ ಕನ್ನಡ ನಾಡವರ್‌ಗೂ ಕರಾವಳಿನ ತುಳು ಬಂಟ್ರ್‌ಗು ಮೊದ್ವೆ ಸಮ್ಮಂದ ನಡ್ದದೆ.

ಸುರೂಗೆ ಹೇಳ್ದಂಗೆ ರೈ, ಹೆಗ್ಡೆ, ಬಂಡಾರಿ, ಆಳ್ವ, ಶೇಣವ ಹಿಂಗೆ ಸುಮಾರ್ ಜಾತಿ ಸಮ್ಮಂದದ ಉಪನಾಮಗ ಇದ್ದರೂ ಈ ಸಮುದಾಯನ ಒಟ್ಟಾಗಿ 'ಬಂಟ್ರ್'ತ ಕರೆವಂಗೇ 'ಶೆಟ್ಟರ್', 'ಶೆಟ್ರು'ತ ಕರೆವ ಅಬ್ಯಾಸನು ಉಟ್ಟು. ಬಂಟ್ರ್‌ತೇಳ್ವ ಪದನಾಮದಂಗೆ ಶೆಟ್ರ್ ತೇಳ್ದು ಗೌರವಸೂಚಕನೇ. ಬಂಟ್ರ್‌ಲೇ ಒಂದಸ್ಟ್ ಜೆನ ವ್ಯಾಪಾರ–ವ್ಯವಾರದ ಉದ್ದೇಸಂದ ಪಟ್ಟಣಕೇಂದ್ರಿತ ಆಗಿ ವ್ಯಾಪಾರಗ ಆಗಿದ್ ಹಿಂಗೆ ಶೆಟ್ಟಿ–ಸೆಟ್ಟರಾಗಿರೊಕು ತೇಳ್ವ ಅನ್ಮಾನನು ಉಟ್ಟು. ಇವರ ಶೆಟ್ರುಗತ ಕರೆಕೆ ಇನ್ನೊಂದ್ ಕಾರಣ ಗಟ್ಟದ ಮೇಲೆನ ಜೈನ್ರ್‌ಗ ಇಲ್ಲಿಂದ ಮೊದ್ವೆಯಾದ್ದ್. ಅಲ್ಲಿಂದ ಶೆಟ್ರ್‌ತ ಕರೆವ ಕ್ರಮ ವಾಡಿಕೆಗೆ ಬಾತ್‌ತ ಹೇಳ್‌ವ. ಕುಂದಾಪುರ ಅಲ್ಲರೆ ಉತ್ತರ ಕನ್ನಡದ ನಾಡವರ್ ಮತ್ತೆ ಉಡುಪಿ–ದಕ್ಷಿಣಕನ್ನಡದ ಬಂಟ್ರ ನೆಡುನ ಒಳಸಮ್ಮಂದದ ಬಗ್ಗೆ ಕುಂದಾಪುರದ ಹಕ್ಕಲೆನ ನೆಲವಾಸಿ, ಹಿರಿಯ ಅನುಬವಿ ರಾಜೀವ ಶೆಟ್ರ್ ಹೇಳಿರ್‌ವ ಹೇಳಿಕೆನ ಸಂಶೋದಕಿ ಇಂದಿರಾ ಹೆಗ್ಡೆ ಹಿಂಗೆ ಬರ್ದೊಳೊ.

"ದಕ್ಷಿಣಕನ್ನಡದ ನಾಡವ ಯಾನೆ ಬಂಟ್ರ ಸಮುದಾಯಕೂ ಸಿವಮೊಗ್ಗದ ನಾಮದಾರಿ ಗೌಡ್ರ ಸಮುದಾಯಕೂ ಇರ್‌ವ ನಿಕಟ ಸಾಂಸ್ಕೃತಿಕ ಸಮ್ಮಂದನ ಇವರ ದೆವ್ವಾರಾದನೆ, ಜಕಣ ಆರಾದನೆನ ವಿದಿ ವಿದಾನಲಿ ಗುರ್ತ್‌ಸಕ್. ನಾಮದಾರಿ ಗೌಡ್ರ್‌ಗೆ ಉಡುಪಿನ ಹಿರಿಯಡ್ಕ ಆಲಡೆ (ಬೆರ್ಮರು) ದೆವ್ವ ಸ್ತಾನ ಬಾರಿ ಮುಕ್ಯದ್ದ್. ಈ ದೆವ್ವಕೆ ಇವು ಮುಡಿಪು–ಹರ್‌ಕೆ ಹೊತ್ತವೆ. ಇಲ್ಲಿನ ಜಾತ್ರೆಗೆ ನಾಮದಾರಿಗ ಬಾರಿ ಕಡಿಮೆ ಸೇರ್‌ವೆ. ಈ ನಾಮದಾರಿ ಸಮಾಜ ದಕ್ಷಿಣಕನ್ನಡದ ನಾಡವ ಮೂಲದವೇ ಆಗಿದ್ದ್ ಇವು ಸತಮಾನದ ಕೆಳೆಗೆ ಕುಂದಾಪುರ, ಉಡುಪಿ, ಕಾರ್ಕಳಗಳ್‌ಂದ ಶಿವಮೊಗ್ಗ ಜಿಲ್ಲೆನ ಶೃಂಗೇರಿ, ಕೊಪ್ಪಳಕೆ ವಲಸೆ ಹೋಗಿರೊಕುತ ಕಂಡದೆ" (ಪುಟ 10, ಬಂಟರು–ಒಂದ್ ಸಾಮಾಜಿಕ ಸಾಂಸ್ಕೃತಿಕಅದ್ಯಯನ) ಹಿಂಗೆನೇ ಶಿವಮೊಗ್ಗ ಜಿಲ್ಲೆನ ಕೆಲವೊಂದ್ ಪ್ರದೇಸಲಿರ್‌ವ ವಂಡಾರು ಗೌಡ, ಸುರಾಲು ಗೌಡ, ಬಾಂಡ್ಯ ಗೌಡ, ಯೆಡ್ತರೆ ಗೌಡತೇಳ್ವ ಮನೆತನಗ ಏನೊಳನೋ ಅದೇ ಹೆಸ್ರ್‌ನ ಮನೆತನಗ ಕುಂದಾಪುರ ಹೆಸ್ರಾಂತ ಬಂಟ–ಶೆಟ್ಟಿ ಮನೆತನಗಳೂ ಹೌದುತೇಳ್ದು ಇಲ್ಲಿ ನೋಡಕಾದ್ದ ಸಂಗತಿ. ಇಲ್ಲಿ ಬಾವ ಸುರಾಲು ಗೌಡ್ರ್ ಮಾತ್ರ ಜೈನ್ರ್ ಒಳ್ದವೆಲ್ಲ ಬಂಟ್ರ್‌ಗ. ಇವೆಲ್ಲಾ ಪ್ರೀತಿಂದ, ಗೌರವಂದಳೆ ಅವರ ಮೂಲನ ಈಗೊ ಹೇಳ್‌ವೆತ ದಾಕಲ್ಸ್‌ವೆ ಇಂದಿರಾ ಹೆಗ್ಡೆ ಅವ್.

ತುಳುನೆಲದ ದೆವ್ವ 'ಲೆಕ್ಕೆಸಿರಿ'ನ ಪಾಡ್ದನ ಸಾದರಪಡ್ಸುವ ಕತನಲಿ ಈ ಪ್ರದೇಸದ ಗಡಿ–ರೇಕೆಗಳ ಬಗ್ಗೆ ಉಟ್ಟು. ಅದ್ ಸರಿಯಾದ್ದ್‌ತ ಸಿಕ್ಕಿದ ಶಾಸನಗ ದೃಡಪಡ್ಸುವೆ. ನಗಿರೆ ಆಳ್ದ ಸಾಳ್ವ ವಂಸ, ಬನವಾಸಿನ ಕದಂಬ, ಗಂಗರ ದೊಂಗುವಂಸ– ಇವೆಲ್ಲ ಬಂಟ್ರ ಮೂಲವಂಸಗಳೇ. ಹಿಂಗಾಗಿ ಈಗನ ಉತ್ತರ ಕನ್ನಡ, ಶಿವಮೊಗ್ಗ ಜಿಲ್ಲೆಗಳ್‌ಲಿ ಹರ್‌ಡಿರ್‌ವ ಈ ಮೇಲೆನವು ತುಳು–ಕರಾವಳಿ ಮೂಲದ ಬಂಟ್ರ್‌ತೇಳ್ದು ಕಂಡಿತಂತ ಇಂದಿರಾ ಹೆಗ್ಡೆಯವರ ವಾದ ಸರಿ ಆಗಿದ್ ಉಟ್ಟ್. ಮೊದ್ವೆ ಸಮ್ಮಂದಲಿ ಇಪ್ಪತ್ತ್‌ನೆ ಸತಮಾನದ ಅಕೇರಿಮುಟ್ಟ ಬಂಟ್ರ್–ನಾಡವರ್ ಒಂದೇ ಆಗಿ ಒಳ್‌ದಿತ್ತ್‌ಲೆ ಕುಂದಾಪುರದ ನಾಡವರ್ ಅವರ ಬಂಟ್ರ್‌ತ ಗುರ್‌ತಿಸಿಕಂಡರು ಮೊದ್ವೆನ ಸಮ್ಮಂದ ಇತ್ಲೆ. ಈಗ ಅರ್ದದಸ್ಟ್ ಮೊದ್ವೆ ಸಮ್ಮಂದ ನಡೆತುಟ್ಟು.

ಬೆನ್ನಿ ಬೇಸಾಯ ಬಂಟ್ರ ಮೂಲ ಗುರ್‌ತ. ದುಡ್ಡುನ ಬಹುಮುಕ್ಯ ಆಕರ ಅಡ್ಕೆನ 'ಕಂಡಿ' ಬರ್‌ದರ್‌ಂದಲೂ ಬತ್ತ–ಅಕ್ಕಿನ 'ಮುಡಿ' ಈ ಸಮುದಾಯನ ಆದಾಯ ಆಗಿತ್ತ್. 1807ರ್‌ಲಿ ಭಾರತಕೆ ಬಂದ ಬುಕನಾನ್ 'ಕರಾವಳಿನ ಮೂಲ ಬೂಮಾಲಕರ್ ಬಂಟ್ರೇ. ಕೇರಳದ ಮಲಬಾರ್‌ಂದಳು ಇವು ದನಿಗ.ಸೊಂತ ಬೇಸಾಯ ಮಾಡದ್ದರು ಬೇರೆಯವರ್‌ಂದ ಸಾಗುವಳಿ ಮಾಡ್ಸಿ ದಾನ್ಯ ಬೆಳೆ ತೆಗೆತಿದ್ದೊತ ಹೇಳ್‌ವೆ. ಬಂಟ್ರ್‌ಗೆ ಇನ್ನೊಂದ್ ಹೆಸರ್ ಆದ 'ಒಕ್ಕೆಲಗುಲು'ತೇಳ್ವ ಸಬ್ದಲೇ ಇರ್‌ವ ಒಕ್ಕುದು, ಒಕ್ಕುವವು, ಒಕ್ಕುನೆ ಇದೆಲ್ಲಾ ಬೂಮಿನ ಉಳುಮೆ ಕ್ರಿಸಿ ಸಮ್ಮಂದದ ಪದಗಳೇ. ಬೂಮಿನ ಬಗೆದು, ಬಗೆದು ಬೀಜ ಬಿತ್ತುದು, ದೈ ನೆಡ್ದು– ಹಿಂಗೆ ಒಕ್ಕುವವ ಬೆನ್ನಿ–ಬೇಸಾಯ ಮಾಡವನೇ ಬಂಟ. ಕ್ರಿಸಿಲಿ ಬಂಟ ಗಂಡ್‌ಗೆ ಉಪಕಾರ ಮಾಡ್‌ವ ಹೆಣ್ಣೇ 'ಒಕ್ಕೆಲ್ತಿ.'

ಆರ್ತಿಕ ಸಾಮಾಜಿಕ ಆಗಿ ಬಂಟ್ರ್ ಇಂದ್ ಜಗತ್ತ್‌ಲಿಡೀ ಹರ್‌ಂಡಿಕೊಂಡೊಳ. ರಾಜಕೀಯ, ಉದ್ಯಮ, ಶಿಕ್ಷಣ, ಕಲೆ, ಸಾಹಿತ್ಯ, ಚಲನಚಿತ್ರ, ದಾರ್ಮಿಕ, ಸಾಮಾಜಿಕ– ಹೀಗೆ ಬಂಟ್ರ್ ಇವ್ ಇರದ ಕ್ಷೇತ್ರಗಳೇ ಇಲ್ಲೆ. ಬೊದ್ಕ್‌ಗೆ ಇಸ್ಟೆಲ್ಲಾ ದಾರಿಗ ಇದ್ದರೂ, ದೇಸ ಬುಟ್ಟರೂ ಮಾತೃಮೂಲದ ವಿಸಯಲಿ ಇವರಸ್ಟ್ ಬಾವನಾತ್ಮಕ ಸಮ್ಮಂದ ಇಸಿಕಂಡವು ಬವುಸ ಕರಾವಳಿಲಿ ಬೇರೆವು ಇರಿಕಿಲೆ.

1970ರ ದಸಕಲಿ ಜಾರಿಗೆ ಬಂದ ಬೂಮಸೂದೆ– 'ಉಳುವವನೇ ಬೂಒಡೆಯ'ತೇಳ್ವ ಕಾನೂನ್‌ಂದ ಸುಮಾರ್ ಶ್ರೀಮಂತ ಗುತ್ತು ಬಾರಿಗೆ ತರವಾಡ್‌ನ ಜಮೀನ್ದಾರಿ ಬಂಟ್ರ್ ಬೂಮಿನ ಒಕ್ಲುನವರ್‌ಂದಾಗಿ ಕಳ್ಕಂಡೊ. ಕಾನೂನು ಪ್ರಕಾರ ಬೂಮಿ ಪಡ್ದ ಬಡ ಬಂಟ್ರೂ ಇಲ್ಲದಿಲ್ಲೆ. ಆದರೆ ಅವರ ಪ್ರಮಾಣ ಮಾತ್ರ ತುಂಬಾ ಕಡಿಮೆ. ಈ ಕಾನೂನ್‌ಂದಾಗಿ ಒಮ್ಮೆಲೇ ಶ್ರೀಮಂತ ಮಹಾಮನೆನ ಕುದ್ದು ಉಂಬೊ ಬಂಟ್ರ ದರ್ಪ–ದೌಲತ್ತ್ ಕೆಳೆಗೆ ಬಿದ್ದದೂ ಉಟ್ಟು.

ಕರಾವಳಿನ ಸಿಕ್ಕ್‌ವ ಸಾಸನಗ ಬಂಟ್ರ ಕ್ರಿಸಿ ಸಮ್ಮಂದೀ ಚಟುವಟಿಕೆಗ, ನೆಲ–ಪಚ್ಚೆ ಸಮ್ಮಂದೀ ಆರಾದನೆಗ– ಇಲ್ಲೆಲ್ಲಾ ಬಂಟ್ರ್‌ಗಿದ್ದ ಮುತುವರ್ಜಿ, ಮುತಾಲಿಕೆನ ಎತ್ತಿ ತೋರ್‌ಸಿದೆ. ಪೋರ್ಚುಗೀಸ್ ದಾಕಲೆಗ ಕುಂದಾಪುರ–ಬಸ್ರೂರು ಪ್ರಾಂತ್ಯಲಿ ಬಂಟ್ರ್ ವ್ಯಾಪಾರಕೆ ಹೆಚ್ಚ್ ಆದ್ಯತೆ ಕೊಟ್ಟಿದ್ದೊತ ಹೇಳ್ವೆ. ಕ್ರಿಸಿ ಮತ್ತೆ ವ್ಯಾಪಾರ ಇಲ್ಲಿ ಯಾಗೊಳು ಒಂದಕ್ಕೊಂದು ಪೂರಕತ ಹೇಳ್ದು ಸತ್ಯ. ಇದರನೆ ಸುರೇಂದ್ರ ರಾವ್ ಅವರ 'ಇತಿಯಾಸ ಮತ್ತು ಸಂಸ್ಕೃತಿಯಲ್ಲಿ ಬಂಟರು'ತೇಳ್ವ ಕೃತಿನೂ ದೃಡ ಪಡ್ಸಿದೆ. "ಬಂಟ್ರ್ ಈ ಎಲ್ಲಾ ಚಟುವಟಿಕೆಲಿ ಅವರ ತೊಡ್ಗಿಸಿಕಂಡದ್ದ್ ಅವುಗಳ್‌ಲಿ ಒಂದ್ ಇನ್ನೊಂದರ ಬಲಪಡ್ಸ್‌ತಿತ್ತ್. ದೇಸದ ದಾಕಲೆಗ ಬಂಟ್ರ ಕ್ರಿಸಿ ನಾಯಕತ್ವನ ಒತ್ತಿಹೇಳ್ರೆ ಅದ್ಕೆ ಕಾರಣ ಕ್ರಿಸಿ ಜಗತ್ತ್‌ಲಿ ಬಂಟ್ರ ಇದ್ದದರ ಸ್ವರೂಪ ಮತ್ತೆ ಮಾಹಿತಿನ ಹೇಳ್‌ವೆ ಆಕರಗಳ ಸೊರೂಪ ಮತ್ತೆ ಉದ್ದೇಸ. ಪೋರ್ಚುಗೀಸ್ ಹೇಳಿಕೆಗ ಬಂಟ್ರ ಜಮೀನ್ದಾರಿಕೆನ ಬಗೆಗೆ ಕಡಿಮೆ ತಿಳ್ಸುವೆ. ಏಕೆಂತೇಳಿರೆ ಗ್ರಾಮೀಣ ಪ್ರಪಂಚಲಿ ಬಂಟ್ರ ಉಪಸ್ತಿತಿಗೆ ಅವು ಪೂರಲಿ ಹುಗ್ಗಿತ್ಲೆ. ಬದ್ಲಾಗಿ ಬಂಟ್ರ್ ಕುಂದಾಪುರ, ಬಸ್ರೂರು ಇಂತ ಬಂದರ್ ಪಟ್ಟಣಗಳ್‌ಲಿ ಏನ್ ಮಾಡ್ತಿದ್ದೊತ ಹೇಳ್ದು ಅವ್ಕೆ ಗೊತ್ತಿತ್ತ್" (ಪುಟ 60)

ಬಂಟ ಕುಟುಂಬದವು ಗುಂಪಾಗಿ ಇರ್‌ವ ದೊಡ್ಡಮನೆಗಳ 'ಗುತ್ತುಮನೆ'ತ ಕರ್‌ದವೆ. ಸಂಶೋದಕ ಗುರುರಾಜ ಭಟ್ಟ್‌ರ್ ಇಂತ ಗುತ್ತ್‌ನ "ಆಸ್ತಿಗಳ್‌ಂದ ಸುತ್ತುವರ್‌ದ ಮತ್ತೆ ನಿಶ್ಚಿತ ವಿಸೇಸಾದಿಕಾರಿಗಳ 'ಜಹಗೀರು ಮನೆ"ತ ಹೇಳ್ಯೊಳ. ಕನ್ನಡದ ಕೆಲವೊಂದ್ ಸಾಸನಗಳ್‌ಲಿ 'ಗುತ್ತು'ತ ಸಬ್ದ ಇರದೆ 'ಗುತ್ತಗೆ'ತ ಹೇಳ್ವ ಪದ ಉಟ್ಟು 'ಗುತ್ತಗೆ'ನೇ




'ಗುತ್ತು' ಆಗಿರ್‌ದುತ ಹೇಳ್ವ ಚರ್‌ಚೆನ ಬಗ್ಗೆ ಸುಮಾರ್ ಸಂಶೋದಕರ್‌ಲಿ ಸಹಮತವುಟ್ಟು. ಗುತ್ತೇದಾರ ಅತವಾ ಗುತ್ತುದಾರ–ಗುತ್ತುನವ ಬೂಮಿ ಜಹಗೀರು ಹೊಂದಿರ್‌ದರ್‌ಂದ ಅವ ಸರಾಗವಾಗಿ ಬೂಮಿಪಾಲ ರಾಜಂಗೆ ಕರ–ಕಂದಾಯ ಕೊಡೊಕಾಕಿತ್ತ್. ಗುತ್ತುನವ ರಾಜಂಗೆ ಕಂದಾಯ–ತೆರಿಗೆ ಕೊಡ್ಡು ಒಂದ್ ಬಗೆ ಆದರೆ ಆಪತ್ತು, ರಾಜ್ಯ ವಿಸ್ತರಣೆ, ಯುದ್ದಕಾಕನ ಉಪಕಾರ ಮಾಡಕಾಗಿತ್ತ್. ಗುತ್ತುಗಳಂಗೆನೇ ಇರ್‌ವ ಮತ್ತೊಂದ್ ಸಹಸಕ್ತಿ ನಿಯಂತ್ರಕ ಕೇಂದ್ರ ಮಾಗಣೆ.

ಎಪ್ಪತ್ತರ ದದಕದ ಬೂಸುದಾರಣೆ ಕಾನೂನ್ ಸುಮಾರ್ ಗುತ್ತು–ಮಾಗಣೆನ ಬಂಟ್ರ ಅಹಂ– ರೆಕ್ಕೆ ಕತ್ತ್‌ರ್ಸುದುತ ಸತ್ಯ. 'ಜಮೀನ್ದಾರ'ತೇಳ್ವ ಬೂಸಮ್ಮಂದೀ ಕಿರೀಟ ಹೋಗಿ ನೆಲ–ನೆಲೆ ಎರ್‌ಡೂ ಕಳ್ಕಂಡದ್ ಸುಳ್ಳಲ್ಲ. ನೂರಾರ್ ಮುಡಿನ ಒಡೆತನಗ ಎಲ್ಲಾ ಬೇರೆಬೇರೆ ಆಗಿ ಒಕ್ಕಲ್‌ನವರ ಪಾಲಾತ್. ಬೂಮಿನ ಸತಾಯ ಗತಾಯ ಉಳ್ಸೊಕುತ ಹೊಡಿಬಡಿ ಹೋರಾಟ ನಡ್ದದೂ ಉಟ್ಟು. ಇಂತ ಹೊತ್ತುಲಿ ಹೆಚ್ಚಿನ ಬಂಟ ಹೈದಂಗಳ ಕಾಪಾಡ್ದೇ ವಿಜಯ ಬ್ಯಾಂಕ್ ಮತ್ತೆ ಬೊಂಬಾಯಿ ವಲ್‌ಸೆ. ಮುಲ್ಕಿ ಸುಂದರರಾಮ ಶೆಟ್ಟಿ 'ವಿಜಯಾ ಬ್ಯಾಂಕ್‌ಲಿ ಸುಮಾರ್ ಹೈದಂಗಳಿಗೆ ಕೆಲ್ಸ ಕೊಟ್ಟ್ ಕಾಪಾಡ್ದೊವು. ಇಂದ್ ಬಂಟ್ರ್ ಮುಂಬೈ ಹಂಗೆನೆ ಅರಬ್ ರಾಷ್ಟಗಳಿಗೆ ವಲಸೆ–ಕೆಲ್ಸದ ಮೇಲೆ ಹೋಗಿ ಸಾದ್ಸಿದ ಸಾದನೆ ಕಡಿಮೆ ಅಲ್ಲ. ವೈದ್ಯಕೀಯ, ತಾಂತ್ರಿಕ ಕ್ಷೇತ್ರಲೂ ಬಂಟ್ರ್‌ಗ ಮುಂದೆ ಒಳೊ. ರಾಜಕೀಯ, ಸಾಹಿತ್ಯ, ಶಿಕ್ಷಣ ಸಾಮುದಾಯಿಕ ಸಂಗಟನೆಗಳ್‌ಲಿನೂ ಬಂಟ್ರ್ ಹಿಡ್ತ ಸಾದಿಸ್ಯೊಳ. (ಎನ್.ಆರ್.)

**ಬಂಟ್ವಾಳ :** ದಕ್ಷಿಣಕನ್ನಡ ಜಿಲ್ಲೆನ ಒಂದ್ ತಾಲೂಕ್ ಮತ್ತೆ ತಾಲೂಕ್ ಕೇಂದ್ರನೂ ಹೌದು. ಈ ತಾಲೂಕ್‌ನ ತೆಂಕಕೆ ಕೇರಳ ರಾಜ್ಯನೂ ಮೂಡ ಮತ್ತೆ ಈಶಾನ್ಯಲಿ ಪುತ್ತೂರು ಮತ್ತೆ ಬೆಳ್ತಂಗಡಿ, ಬಡಗಲಿ ಕಾರ್ಕಳ ಮತ್ತೆ ಪೊಡ್ವಲಿ ಮಂಗ್ಳೂರ್ ತಾಲೂಕ್‌ಗ ಒಳ. ಈ ತಾಲೂಕ್‌ಲಿ ಒಟ್ಟು 84 ಗ್ರಾಮ ಉಟ್ಟು. ಪಾಣೆಮಂಗ್ಳೂರ್, ಬಂಟ್ವಾಳ ಮತ್ತೆ ವಿಟ್ಲ ಹೋಬಳಿಗ ಉಟ್ಟು. ಇಲ್ಲಿ ಒಟ್ಟು ಎಷ್ಟ್ ಜಾಗೆವುಟ್ಟ್‌ಂತೇಳ್ರೆ ಸುಮಾರ್ 715 ಚ. ಕಿಮೀ. ಇಲ್ಲಿ ಬೊದ್ಕ್‌ವ ಒಟ್ಟು ಜೆನಗ 3, 61, 554. ಪೊಡ್‌ವಗಟ್ಟಶ್ರೇಣಿ ಮತ್ತೆ ಸಮುದ್ರ ಕರೆಗೆ ನೆಡುಲಿ ಹರ್‌ಡಿಕಂಡಿರುವ ಈ ತಾಲೂಕ್‌ಲಿ ಅಲ್ಲಲ್ಲಿ ಸಣ್ಣ ಬೆಟ್ಟಗುಡ್ಡೆಗ ದೊಡ್ಡದಾದ ಸಮತಟ್ಟ್ ಪ್ರದೇಸಗ ಉಟ್ಟು. ತಾಲೂಕ್‌ನ ನೆಡು ಬಾಗಲಿ ಮೂಡಂದ ಪೊಡ್ವಕೆ ನೇತ್ರಾವತಿ ಹಳ್ಳ ಹರ್‌ದ್ ಮಂಗ್ಳೂರು ಆಗಿ ಅರಬ್ಬಿ ಸಮುದ್ರ ಸೇರ್‌ದೆ. ಬಂಟ್ವಾಳಂದ ಮಂಗ್ಳೂರ್‌ಗೆ ದೋಣಿಲೂ ಹೋಕೆ ಆದೆ. ಈ ಜಲಮಾರ್‌ಗಲಿ ಸಾಮಾನ್ ಸಾಗ್‌ಸುವೆ. ಇಲ್ಲಿ ವರ್ಸಲಿ ಹೊಯಿವ ಒಟ್ಟು ಮಳೆ ಎಷ್ಟ್‌ಂತೇಳ್ರೆ 3, 773 ಮಿಮೀ. ತಾಲೂಕ್‌ಲಿ ನೇತ್ರಾವತಿ ಹಳ್ಳಕ್ಕೆ ಹಂಚಿಕಟ್ಟೆ ಮತ್ತೆ ಬಂಟ್ವಾಳಲಿ ಕಟ್ಟ(ಕಟ್ಟೆ) ಕಟ್ಟುವ ಯೋಜೆನೆ ಉಟ್ಟು. ಈ ತಾಲೂಕ್‌ಲಿ ಒಟ್ಟು 6, 103 ಹೆಕ್ಟೇರು ಕಾಡ್ ಉಟ್ಟು. 23, 528 ಹೆಕ್ಟೇರುಗಳ್‌ಲಿ ನಮೂನೆ ನಮೂನೆನ ಬೆಳೆ ಬೆಳ್ದವೆ. 1, 915 ಹೆಕ್ಟೇರ್ ಹುಲ್ಲುಗಾವಲ್ ಉಟ್ಟು. ಬತ್ತ, ಅಡ್ಕೆ, ಕಾಯಿ, ಗೇರ್‌ಬೀಜ, ಒಳ್ಳೆಮೆಣ್ಸ್, ಮೆಣ್ಸಿನಕಾಯಿ, ಶುಂಟಿ ನೆಟ್ಟಿಕಾಯಿಗಳ ಬೆಳ್ದವೆ. ಇಲ್ಲಿನ ಜೆನರ ಆದಾಯದ ಮೂಲನೂ ಇದುವೆ. ಇದರೊಟ್ಟಿಗೆ ಹಲ್ಸನಣ್ಣ್ ಮಾಯಿನಣ್ಣ್, ಚೌಳಿಕಾಯಿ ಬಾಳೆನೂ ಬೆಳ್ದವೆ. ತಾಲೂಕ್ ವಸ್ತುಗಳ ಮೇಲ್ ಹೊದಿಕೆ, ಮಡ್ಕೆ ಕುಡ್ಕೆ ಮಾಡುದು. ಜೇನ್‌ಸಾಕಣೆ, ದನ ಸಾಕಾಣೆನೂ ಉಟ್ಟು.

ಈ ತಾಲೂಕ್‌ನ ಆಲಿಕೆ ಗ್ರಾಮ ಲೋಕಸೇವಾ ವೃಂದದ ರಚನಾತ್ಮಕ ಕಾರ್ಯ ಚಟುವಟಿಕೆಗಳ್‌ಂದಾಗಿ ಪ್ರಸಿದ್ದಿ ಪಡ್‌ದುಟ್ಟು. ಕರಂಜೆಂತೇಳುವ ಗ್ರಾಮಲಿ ಹಳೆಕಾಲದ ಶಿವನ ದೇಸ್ತಾನ ಉಟ್ಟು. ಬಂಟ್ವಾಳದ ತೆಂಕಕೆ 6ಕಿಮೀ ದೂರಲಿ ಪಾಣೆ ಮಂಗ್ಳೂರ್‌ಂತೇಳ್‌ವ ಊರ್ ಉಟ್ಟು. ನೇತ್ರಾವತಿ ಹಳ್ಳದ ಕರೆನ ಈ ಊರ್‌ಗೆ ಸೇತುವೆ ಕಟ್ಟಿ ಬಂಟ್ವಾಳದೊಟ್ಟಿಗೆ ಸೇರುವಂಗೆ ಮಾಡ್ಯೊಳ. ಇದ್ ಯಾಪಾರ ಕೇಂದ್ರನೂ ಹೌದ್. ಇಲ್ಲಿನ ವೆಂಕಟರಮಣ ದೇಸ್ತಾನಲಿ ವರ್ಸಕೊಮ್ಮೆ ಲಕ್ಷದೀಪ ನಡ್‌ದದೆ. ವಿಟ್ಲ ಒಂದ್ ಹೆಸ್‌ರ್‌ವಾಸಿ ಜಾಗೆ ಆಗಿದ್ದ್ ಇಲ್ಲಿ ನಾಕ್ ದೇಸ್ತಾನಗ ಮತ್ತೆ ಹಿಂದೆನ ಹೆಗ್ಗಡೆ ಅರಮನೆನ ಹಳೆ ಒಳ್ಕಡೆಗ ಉಟ್ಟು. ಬಂಟ್ವಾಳ ಈ ತಾಲೂಕ್‌ನ ಮುಕ್ಯ ಜಾಗೆ. ನೇತ್ರಾವತಿ ಹಳ್ಳದ ಉತ್ತರ ದಂಡೆ ಮೇಲೆ ಮಂಗ್ಳೂರ್‌ನ ಮೂಡಕೆ ಸು. 25ಕಿಮೀ ದೂರಲಿ ಉಟ್ಟು ಇಲ್ಲಿರ್‌ವ ಒಟ್ಟ್ ಜೆನಗ 54, 820. ಈ ಊರ್‌ಂದಾಗಿ ಮಂಗ್ಳೂರ್, ಪುತ್ತೂರ್, ಕೇರಳಲಿರ್‌ವ ಮಂಜೇಶ್ವರ, ಕಾಸರಗೋಡ್‌ಗೆ ಎಲ್ಲಾ ಹೋಕೆ ಲಾಯ್ಕನ ಮಾರ್‌ಗವುಟ್ಟು. ಬಂಟ್ವಾಳಲಿ ಹಾಸನ–ಮಂಗ್ಳೂರ್ ರೈಲ್ ನಿಲ್ಲುವ ನಿಲ್ದಾಣ ಉಟ್ಟು ನೇತ್ರಾವತಿ ಹಳ್ಳಂದಾಗಿ ದೋಣಿಗಳ್‌ಲಿ ಮಂಗ್ಳೂರ್ ಬಂದರ್‌ಗೆ ಇಲ್ಲಿಂದ ಸಾಮಾನ್ ಸಾಗ್ಸವೆ. ಇದ್ ಒಂದ್ ಯಾಪಾರ ನಡ್ಸುವ ಜಾಗೆನೂ ಹೌದು. ಸರ್‌ಕಾರಿ ಆಸ್ಪತ್ರೆ, ಶಾಲೆ ಕಾಲೇಜ್‌ಗನು ಉಟ್ಟು. ಇಲ್ಲಿ ಆಡೆಳ್ತ ನಡ್‌ಸುದು ನಗರ ಸಬೆ. ನೇತ್ರಾವತಿ ಹಳ್ಳದ ನೀರ್ ತುಂಬಿ ಹರಿಯಕ ಈ ಊರ್‌ಗೂ ಮುಟ್ಟಿದೆ. ಊರಿನ ಕೆಲವ್ ಬಾಗಂಗಳ ಟಿಪ್ಪು ದಾಳಿ ಮಾಡಿ ಹಾಳ್ ಮಾಡಿಟ್ಟು. ಈ ಊರ್‌ಲಿ ವೆಂಕಟ್ರಮಣ, ಸೀತಾರಾಮ ಮತ್ತೆ ಮಾಲಿಂಗೇಶ್ವರ ದೇಸ್ತಾನಗ ಉಟ್ಟು. ಊರ್‌ನ ಹಕ್ಕಲೆ ನರಹರಿ ಪರ್‌ವತಂತೇಳ್‌ವ ಬೆಟ್ಟ ಇದ್ದ್ ಅಲ್ಲಿ ಬೆಟ್ಟದ ಮೇಲೆ ದೇಸ್ತಾನನು ಉಟ್ಟು.

**ಬೊಯ್‌ಕೆ ಮೊದುವೆ : ಹೂ ಮುಡ್ಸುವ ಹಬ್ಬ ಅಲ್ಲೊ ಬೊಯ್‌ಕೆ :** ಮೊದ್‌ವೆ ಆದ ಮೇಲೆ ಹೆಣ್ಣ್ ಗಂಡನ ಮನೆಲಿಯೇ ಇದ್ದ್, ಅವಸ್ಯಕತೆ ಇದ್ದರೆ ಮಾತ್ರ ತೊವ್‌ರ್‌ಗೆ ಹೋಗಿ ನಾಕ್ ದಿನ ಇದ್ದ್ ವಾಪಾಸ್ ಬಂದದೆ. ಗರ್‌ಬಿಣಿ ಆಕನ ಮಾತ್ರ ತೊವ್‌ರ್‌ನ ಜೆನಂಗಳೇ ಬಂದ್ ಅದರ ಕರ್‌ಕಂಡ್ ಹೋಗಿ 'ಹೂ ಮುಡ್ಸುವ

ಹಬ್ಬನ ನಡ್ಸುವೆ ಇದರ 'ಬೊಯ್‌ಕೆ' ತೇಳಿನೂ, ಸೀಮಂತ' ತೇಳಿನೂ ಕರ್‌ದವೆ. ಸಾಮಾನ್ಯ ಆಗಿದ್ ಅದ್ 'ಏಳು ತಿಂಗಳ' ಗರ್ಬಿಣಿ ಆಕನ ಇದ್ ನಡ್ದದೆ.

ಒಳ್ಳ ದಿನಲಿ ಗರ್ಬಿಣಿನ ತೊವ್‌ರ್ ಮನೆವು ಗಂಡನನೂ ಅವರ ಮನೆವರ ವಿಸೇಸ ಆಗಿ ಕರ್‌ದವೆ. ಬೊಳ್ಪುಗೆ ಅಲ್ಲರೆ ಮದ್ಯಾನದ ಒಳ್ಳ ಮೂರ್‌ತಲಿ ಗರ್ಬಿಣಿನ ಬಿಸಿ ನೀರ್‌ಲಿ ಮೀಸ್‌ವೆ. ಹೊಸ ಬಟ್ಟೆನ ಅದರ ಪ್ರೀತಿನ ಕೊಡುಗೆ ಆಗಿ ತೊವ್‌ರ್‌ನವು ಕೊಟ್ಟವೆ. ಅದರ ಅದ್ ಉಟ್ಟುಕಂಡದೆ. ಮತ್ತೆ ಅದ್ ಮೂಡ ದಿಕ್ಕ್‌ಗೆ ಮೋರೆ ಮಾಡಿ ಕುದ್ದುರ್‌ಸಿ, ಚಿನ್ನದ ಮಾಲೆ ಹಾಕಿ, ಚಿನ್ನದ ಬಳೆಗಳ್ ತೊಡ್ಸಿ, ಬೊಸುರಿನ ವಿಸೇಸಾಗಿ ಸಿಂಗರ್‌ಸುವೆ.ಬೊಸುರಿನ ತಲೆಗೆ ಬೇರೆ ಬೇರೆ ನಮೂನೆನ ಹೂನ ಮಾಲೆಗಳ್ ಮುಡ್ಸಿದ ಮೇಲೆ ಮುತ್ತೈದೆಗ ಪೊದ್ಯಗಳ ಹೇಳ್‌ವೆ.


ಬೊಯ್‌ಕೆ ಮೊದುವೆ

ಮುರುಗ ಮಲ್ಲಿಗೆ ಜಾಜಿ ಸಂಪಗೆ ಸರವ
ಪರಕೀನದವನಾದ ಹೂಗಳ ಶಾರದ
ಕೊಡುತಾಯೆ ಕುಸುಮವನು
ಸಂತರರೂಪಿನೊಳಿರುವ ಸಂಪಿಗೆ ಹೂವ
ಸಂತತಿದನವಾದ ಹೂಗಳ ಶಾರದ
ಕೊಡುತಾಯ ಕುಸುಮವನು
ಎಲ್ಲರ ಮನಸೀಗೆ ಉಲ್ಲಾಸ ತೋರುವ
ಬಲ್ಲವರು ಮೆಚ್ಚಿದ ಮಲ್ಲಿಗೆ ಹೊಸರವ
ಕೊಡುತಾಯೆ ಕುಸುಮವನು
ಅರಳಿದ ಮಲ್ಲಿಗೆ ಪರಿಮಳದ ಪುಸ್ಪಗಳ
ಸುರರುತಂದಿಹರು ಮುಂದಿಂದ ಜಾನಕಿಗೆ
ಕೊಡುತಾಯೆ ಕುಸುಮವನು

ಬಗೆ ಬಗೆನ ಹೂಗಳ್‌ಂದ ಬೊಸುರಿನ ಸಿಂಗಾರ ಮಾಡಿ ಮೋರೆಗೆ ತೆಳುಲಿ ಅರ್‌ಸಿನ ಪೂಜುವೆ. ಹಣೆಗೊಂದು ಕಪ್ಪು ಬೊಟ್ಟಿಸುವೆ. ಅದರ ಎದುರ್‌ಲಿ ಬಾಳೆಲೆ ಹಾಕಿ, ಅದ್ಕೆ ಒಂದ್ ಹಿಡಿನಸ್ಪ್ ಹೊದ್ರಿಹಾಕಿ, ರಸಾಯನನ ಹೊಯ್‌ದವೆ. ಬಾಳೆಹಣ್ಣ್ ಮತ್ತೆ ಬೇರೆ ಬಗೆನ ಹಣ್ಣ್‌ಗಳ, ಸ್ವೀಂತಿಂಡಿಗಳ ಎಲೆಗೆ ಹಾಕುವೆ. ಆಗ ಮುತ್ತೈದೆಗೆಲ್ಲ ಸುತ್ತ ನಿತ್ತ್ ಆ ಬಾಳೆಲೆಗೆ ಕೈಮುಗ್ದ್, ಬೊಸುರಿಗೆ ತಿನ್ಸುವೆ. ನಾಚಿಕೆ ಕುಸಿನ ನಡುಲಿ ಬೊಸುರಿ ಹೆಣ್ಣ್ ಅದರ ಚೂರ್ ಚೂರ್ ತಿಂದದೆ. ಅದರ ಒಟ್ಟಿಗೆ ಸೇರ್‌ದವೆಲ್ಲ ಪ್ರತ್ಯೇಕ ಆಗಿದ್ ಊಟ ಮಾಡ್‌ವೆ. ಈ ಆಚರಣೆಲಿ ಹೆಣ್ಮಕ್ಕಳ್‌ದೆ ಕಾರ್‌ಬಾರ. ಮನೆ ತುಂಬಾ ಗೌಜಿನ ವಾತಾವರಣ ಇದ್ದದೆ. ಸೀಮಂತ ಮುಗ್ಸಿದ ಗಂಡ ಮನೆಗೆ ಹೊರ್ಟ್ ಹೋದೆ. ಬೊಸುರಿ ತೊವ್‌ರು ಮನೆಲೇ ಇದ್ದ್ ಹೆರಿಗೆ ಮುಗ್ಸಿ ಹೋದೆ.

ಕೆಲ ಕಡೆ ಸೀಮಂತದ ದಿನ ಮೊಟ್ಟೆ ಇಸದ ಹೇಂಟೆ ಕಡ್ತಕೆ ಹಜ್ಜ್ ಅಕ್ಕಿ ತಿನ್ಸ್‌ಸಿಬುಟ್ಟವೆ. ಆ ಕೋಳಿನ ಸಾಮಾನ್ಯ ಆಗಿದ್ ಕೊಲ್ಲುದುಲೆ. ಅದ್ ಮೊಟ್ಟೆ ಇಸಿ ಪಿಳ್ಳೆ ಮಾಡುದರನು ಮನೆವು ಗುರ್‌ತ ಇಸಿಕಂಡಿದ್ದವೆ. ಕೋಳಿಗೆ ಪಿಳ್ಳೆಗ ಹೆಚ್ಚಿದ ಹಾಂಗೆ ಹೆಣ್ಣ್ ಮಗಳ ಸಂತತಿ ವೃದ್ದಿ ಆಗಲಿ ತೇಳ್ದು ಇಲ್ಲಿನ ಮೂಲ ಆಸಯದಾಂಗೆ ಕಂಡ್ ಬಂದದೆ. ಹೆಚ್ಚಾಗಿ ಹೆಣ್ಣ್‌ನ ಸುರೂನ ಸೀಮಂತನ ಮಾತ್ರ ಗಡದ್ದಾಗಿ ಮಾಡ್‌ವೆ. ಒಳ್ದದ್ ಏನಿದ್ದರೂ ಸಾಂಕೇತಿಕ ಆಗಿದ್ ನಡ್ದದೆ. ಗರ್ಬಿಣಿ ಹೆಣ್ಣ್‌ನ ಮನೆವೆಲ್ಲ ಬಾರಿ ಪ್ರೀತಿಂದ ನೋಡಿಕಂಡವೆ. ಗದ್ದೆ ತೋಟಗಳ್‌ಲಿ ದುಡಿಯಕೆ ಬೊತ್ತ್‌ಂತ ಇದ್ದದೆ, ಮನೆ ಒಳಗೆನ ಸಣ್ಣ ಪುಟ್ಟ ಕೆಲ್‌ಸ ಮಾಡ್‌ಕಂಡ್ ಇದ್ದದೆ. ಆದರೂ ಕೆಲಸ ಮಾಡಿಕಂಡೇ ಇದ್ದರೆ ಹೆರಿಗೆ ಸುಲಬ ಆದೆ ತೇಳುವ ನಂಬಿಕೆ ಗೌಡರ್‌ಲಿ ಉಟ್ಟು. (ಪಿ.ಬಿ.)

**ಬರಪೊಳೆ** : ಬರಪೊಳೆ ತೇಳ್ವಂತದ್ ಕೊಡಗ್ ನ ಒಂದ್ ದೊಡ್ಡ ಹಳ್ಳ. ಬ್ರಹ್ಮಗಿರಿ ಮಲೆನ ಅಡಿಲಿ ಹುಟ್ಟಿ ಕಂಗನ್ ಹಳ್ಳ ಮತ್ತೆ ಕಕ್ಕಟ್ಟು ಹಳ್ಳದ ಎರ್‌ಡ್ ಚಾರ್‌ಗಳ(ತೊರೆಗಳ) ಕೂಡಿಕಂಡ್, ಗುಡ್ಡೆನ ಒಳ್ಬೆಗಳ ನೊಡುಲಿ ಪಡ್ವಕೆ ಕೆಲವ್ ಕಿಮೀ ನವರೆಗೆ ಸೊರ್‌ತಕೆ ಹರ್‌ದ್, ಮುಂದೆ ಸಾರತ್ ಹಳ್ಳನ ಸೇರಿಕಂಡದೆ. ಇಲ್ಲಿ ಸಾರತ್ ಹಳ್ಳ ದೊಡ್ಡ ಬಂಡೆನ ಮೇಲೆಂದ ಬಿದ್ದ್ 134 ಮೀ ಚಾಳದ ಲಾಯಿಕ್ ನ ಅಬ್ಬಿ(ಜಲಪಾತ) ಆಗಿ ಹರ್‌ದದೆ. ಮತ್ತೆ ಕೇರಳ ರಾಜ್ಯದ ಕಡೆಗೆ ಹರಿವ ಬರಪೊಳೆ ಗಡಿನ ಹಕ್ಕಲೆಲಿ ಇನ್ನೊಂದ್ ಅಬ್ಬಿ(ಜಲಪಾತ) ಆದೆ. ಈ ಅಬ್ಬಿ ನೋಡಿಕೆ ಬಾರಿ ಲಾಯ್ಕ್ ಕಂಡದೆ. ಇಲ್ಲಿಂದ ಮುಂದೆ ಈ ಹಳ್ಳ ಕೇರಳ–ಕೊಡಗ್ ಗಡಿಲಿ ಸುಮಾರ್ 3ಕಿಮೀ ಹರ್‌ದ್ ಬಡಗದ ಒಳ್ಬೆಂದ ಬಾವ 'ಕಲ್ಲ್ ಹಳ್ಳ'ನ ಕೂಡಿಕಂಡ್ ಕೇರಳ ರಾಜ್ಯನ ಹುಕ್ಕ್(ಕಣ್ಣಾನೂರು ಜಿಲ್ಲೆನ ಕೊಟ್ಟಿಯೆನ್ ತಾಲ್ಲೂಕ್‌ಂದಾಗಿ), ಬ್ರಹ್ಮಗಿರಿಂದಳೆ ಹುಟ್ಟಿ ಬಾವ ಇನ್ನೊಂದ್ ಹಳ್ಳನ ಇರಿಟ್ಟಿ ತೇಳ್ವಲ್ಲಿ ಕೂಡಿಕಂಡ್ ಚಿರಲ್‌ಪುಯ್ಯತ ಹೆಸ್ರ್‌ಲಿ ಮುಂದೆ ಹರ್‌ಕಂಡೋದೆ. ಕಣ್ಣೂರ್‌ಗೆ ಹಜ್ಜ್ ಬಡ್ಗಕೆ 'ವಳಪಟ್ಟಿನಂ' ತೇಳ್ವಲ್ಲಿ ಬೇರೊಂದ್ ಹಳ್ಳದೊಟ್ಟಿಗೆ ಸೇರಿ 'ಚೆರ್‌ಕಳ' ತ ಹೇಳ್ವಲ್ಲಿ ಅರಬ್ಬೀ ಕಡಲ್‌ನ ಸೇರ್‌ದೆ. ಕಣ್ಣೂರು ಮಾರ್‌ಗಲಿ ಈ ಹಳ್ಳಕೆ ಅಡ್ಡಕೆ ಸಂಕಗಳ ಕಟ್ಟಿಯೊಳೊ.




**ಬರಪೊಳೆ ಜಲವಿದ್ಯುತ್ ಉತ್ಪಾದನ ಯೋಜೆನೆ :** ಕೊಡಗ್ ಜಿಲ್ಲೆನ ಹಿಂದೆ ಮದ್ರಾಸ್ ಪ್ರಾಂತ್ಯದ ಆಡಳ್ತಕೆ ಸೇರಿರ್‌ಕನ 1945 ರ್‌ಲಿ **'ಮದ್ರಾಸ್ ವಿದ್ಯುಚ್ಛಕ್ತಿ ಇಲಾಕೆ'** ಕೊಡಗ್ ನ ಜಲವಿದ್ಯುತ್ ಉತ್ಪಾದನೆ ಜಾಗೆಗಳ ಬಗ್ಗೆ ಸಮೀಕ್ಸೆ ನಡ್ಸಿ ಅದರ್‌ಲಿ ಜಾಸ್ತಿ ಸಕ್ತಿ ಉತ್ಪಾದನ ತಾಕತ್‌ನ ಬರಪೊಳೆ ಯೋಜೆನೆ ಮಾಡ್ರೊ. ಆದರೆ ಯಾದೇ ಕೆಲ್ಸ ನಡ್‌ತ್ಲೆ. ಕರ್ನಾಟಕ ಸರ್‌ಕಾರ ಪಂಚವಾರ್‌ಸಿಕ ಯೋಜೆನೆಲಿ ಬರಪೊಳೆ ಜಲವಿದ್ಯುತ್ ಉತ್ಪಾದನಾಕೇಂದ್ರ ಸ್ಥಾಪನೆ ಕಾರ್‌ಯನ ಕೈಗೆತಕಂಡೊ. ಈ ಯೋಜೆನೆಂದ 1,80,000ಕಿ.ವಾಟ್ ಕರೆಂಟ್ ಸಕ್ತಿ ತೆಗಿವ ನಿರೀಕ್ಸೆ ಉಟ್ಟು. ಬರಪೊಳೆಗೆ ಅಡ್ಡಕೆ ವಿರಾಜಪೇಟೆಂದ ತೆಂಕಮೂಡಕೆ 17ಕಿಮೀ ದೂರಲಿ ಪೊನ್ನಂಪೇಟೆ ನಾಡ್‌ನ ಕುಟ್ಟಾಂಡಿ ಗ್ರಾಮಲಿ ಅಣೆಕಟ್ಟ್‌ನ ಕಟ್ಟಿಯೊಳೊ. ಅಣೆಕಟ್ಟ್‌ನ ನೀರೆರ್‌ಕುವ ಜಾಗೆನ ಉದ್ದಗಲ(ವಿಸ್ತೀರ್ಣ) 98. 05 ಚ. ಕಿಮೀ ಉಟ್ಟು. ವಿರಾಜಪೇಟೆಂದ ಈ ಯೋಜೆನಾಕೇಂದ್ರಕೆ ವಾಹನಸಂಚಾರಕೆ ಅನುಕೂಲದ ಮಾರ್‌ಗ ಸೌಕರ್‌ಯ ಉಟ್ಟು. ಇಲ್ಲಿನ ಮಲೆಗುಡ್ಡೆಗ, ಕಾಡ್‌ಬೊಯ್ಲ್‌ಗಳ ಪೊರ್‌ಲು ನೋಡ್ದೇ ಲಾಯ್ಕ್.

ಇದ್ ಕೊಡಗ್ ಪ್ರದೇಸಲಿ ಹರಿವ ಒಂದ್ ಹೊಳೆ. ಬರ್ಪೊಳೆ, ಕಂಗನ ಹೊಳೆ ಮತ್ತೆ ಕಾಕಟ ಹೊಳೆ ತೇಳ್‌ವ ಎರ್‌ಡ್ ಮೂರ್ ದೊಡ್ಡ ಹೊಳೆ ಸೇರಿ ಈ ಬರಪೊಳೆ ಆವುಟು. ಬ್ರಹ್ಮಗಿರಿ ಪರ್‌ವತಗಳ ಸಾಲ್‌ಲಿ ಹುಟ್ಟಿ ಹರಿವ ಈ ಹಳ್ಳ ಸುರೂಗೆ ಮೂಡ ಕಡೆ ಹೋಗಿ, ಮತ್ತೆ ಪಡ್‌ವ ಕಡೆ ತಿರ್‌ಗಿ ಮಲ್‌ಬಾರ್‌ನ ಒಟ್ಟಿಗೆ ಅರಬ್ಬಿ ಸಂದ್ರನ ಸೇರ್‌ದೆ. ದಕ್ಷಿಣ ಕೊಡಗ್‌ನ ವಿರಾಜಪೇಟೆ ತಾಲೂಕುಲಿ ಗೋಣಿಕೊಪ್ಪಂದ ಹುದಿಕೇರಿಗೆ 12 ಕಿಮೀ ಹೋಗಿ ಇಲ್ಲಿಂದ ಟಿ. ಶೆಟ್ಟಿಗೇರಿಗೆ 10 ಕಿಮೀ ಹೋದರೆ ಕೆ. ಕೆ. ಆರ್ ಜಂಕ್ಸನ್ ಸಿಕ್ಕಿದೆ. ಅಲ್ಲಿಂದ ಹಜ್ಜ ಮುಂದೆಗೆ ಹೋದರೆ ಸಿಕ್ಕುದೇ ಬರಪೊಳೆ.

ಪ್ರಕೃತಿ ಮದ್ಯಲಿ ಹರಿವ ಈ ಹಳ್ಳಲಿ ರಿವರ್ ರಾಫ್ಟಿಂಗ್‌ಲಿ ಪ್ರವಾಸಿಗರ್ ಈ ರೋಚಕ ಅನುಬವನ ಇಲ್ಲಿ ಸವಿಯಕ್. (ಎಂ.ವಿ.)

**ಬಿಸು ಸಂಕ್ರಮಣ :** ಅರೆಬಾಸೆನ ಕೇಲಂಡರ್‌ನ ಪೊಗ್ಗ್ ತಿಂಗಳ ಸುರುನ ದಿನ. ಬೂಮಿನ ಉಳ್‌ವ ರೈತನ ನೇಗಿಲ ಯೋಗಿ ತೇಳ್ದ ಮೇಲೆ ಉಳುವ ಪ್ರತಿ ಒಬ್ಬಂಗೂ ಉಳುವ ಹೊತ್ತು, ಕಾಲಗಳ ಗೊತ್ತ್ ಮಾಡ್ದು ತಿಳ್ದಿದ್ದದೆ. ಹಾಂಗೆ ಆ ದಿನ, ಕಾಲಗಳ ಬಕ್ತಿಂದ ಕಂಡ್ ಹುರುಪುಂದ ಹೂಡಿಕೆ ಸುರು ಮಾಡ್‌ವ ದಿನನೆ ಬಿಸು ಸಂಕ್ರಮಣದ ದಿನ. ಈ ದಿನಲಿ ಗೌಡ್‌ರ್ ಅವರ ಕುಟುಂಬದ ಮನೆಗಳ್‌ಲಿ ಬೆಳ್‌ಜರ್‌ಗೆ ಎದ್ದ್ ಮನೆನ ಮನಾರ ಮಾಡಿ, ಮನೆನ ಯಜಮಾನ ಬಕ್ತಿಂದ ಮಣೆ ಮೇಲೆ ಮೊಡಿ ಬಿಳಿ ಬಟ್ಟೆನ ಹಾಸಿ ನೆಲ್ಲಕ್ಕಿಲಿ ದೀಪ ಇಸಿ ಹಾಸಿದ ಮೊಡಿಲಿ ಕಾಲ್ದೀಪ ಹೊತ್ತುಸಿ ಇಸ್‌ವೆ. ಇದರೊಟಿಗೆ ಒಂದ್ ಹರಿವಾಣಲಿ ಅಕ್ಕಿ ಹಣ್ಣ್, ಕಾಯಿ, ಎಲೆ, ಅಡಿಕೆ, ಹೂಗಳ್‌ಂದ ಶ್ರೀ ಗಣಪತಿಗೆ ಇಸುವೆ. ಇನ್ನೊಂದರ್‌ಲಿ ಬೆಳ್ಳಿ ನಾಣ್ಯಗ, ಸ್ವರ್ಣ, ಗಂದದ ಕಡ್ಡಿ, ಇಂತದರ್‌ಂದ ಅಲಂಕರ್‌ಸಿ ಪೂಜ್‌ಸುವೆ, ಕುಟುಂಬದ ಎಲ್ಲೊವ್ ಆ ದೀಪನ ನೋಡಿ ಕೈಮುಗ್ದ್ ಮತ್ತೆ ಕೆಲಸ ಕಾರ್‌ಯಕೆ ಹೊರ್ಟವೆ ಹಿರಿಯರ ಹೇಳಿಕೆನಂಗೆ ಇದರ ಕಣಿ ಪೂಜುದು ತೇಳಿ ಕರ್‌ದವೆ

ಅದಾಗಿ ಕೊಟೆಗೆಂದ ನೇಗ್ಲ್ ಮತ್ತೆ ಬೇರೆ ಸಾಮಾನ್‌ಗಳ ತೆಕಂಡ್ ಗದ್ದೆಲಿ ನಿಲ್ಸಿ ಕ್ರಮಪ್ರಕಾರ ಗದ್ದೆ ಏರಿಲಿ ಕೊಡಿ ಬಾಳೆಲೆ ಶ್ರೀ ಗಣಪತಿಗೆ ಹಣ್ಣ್, ಕಾಯಿ, ಎಲೆ ಅಡಿಕೆ ಇದರೆಲ್ಲ ಇಸಿ ಇನ್ನೊಂದ್ ಕೊಡಿ ಬಾಳೆಲೆಲಿ ಸ್ಟೀಂ ಹಿಟ್ಟ್ ಉಂಡ್ಲಕ್ಕಿ ಹೂವು ಇಸಿ ಹಣ್ಣ್ ಕಾಯಿ ಒಡ್‌ದ್ ಪೂಜೆಮಾಡಿ, ದೂಪದ ದೀಪಗಳ್‌ಂದ ಎತ್ತ್‌ಗಳ ಪೂಜೆ ಮಾಡಿ ಗಂದ ಬೊಟ್ಟುನ ಎತ್ತ್‌ಗಳಿಗೂ ಇಸುವೆ. ದೇವ್ರ ಪ್ರಾರ್‌ತನೆ ಮಾಡಿ ಎತ್ತ್‌ಗಳ ತಲೆಗೆ ಅಕ್ಕಿ ಹಾಕಿ ನೊಚ್ಚ ಕಟ್ಟಿ ನೇಗಿಲು ಹೂಡುವೆ.

ಮತ್ತೆ ಒಂದ್ ಹೊಳಿ ಅಂದರೆ ಅದ್ ಎರಡ್ ಅಂಕ ಆಗಿ ನಾಕೈದ್ ಸುತ್ತು ಸಣ್ಣದಾಗಿ ಹೂಡಿ ಈ ಹೂಡ್‌ದ ಜಾಗೆಗ ಗೊಬ್ಬರ ಮತ್ತೆ ಹಸಿ ಸೊಪ್ಪು ಹಾಕುವೆ. ಹೂಡುವವು ನೆಕ್ಕಿ ದೈನ ಕೋಲುನ ಎತ್ತುಗಳ್‌ನ ಹತೋಟಿಲಿ ಇಸಿಕಂಬಕೆ ಹಿಡ್ಕಂಡವೆ. ಹಿಂಗೆ ಮಾಡೋಕು ತೇಳುವ ನಿಯಮ ಉಟ್ಟು, ಈ ದಿನಲಿ ದೇಸ್ಥಾನಗಳ್‌ಲಿ ಪೂಜೆ ಪುನಸ್ಕಾರತೇಳಿ ಪುಣ್ಯ ಕಾರ್‌ಯಗಳ್‌ಲಿ ಬಾಗವಯ್‌ಸುವೆ

**ಬಿತ್ತ್ ಬಿತ್ತುದು :** ಬಿಸು ದಿನಂದ ಜೆನಗ ಕ್ರಿಸಿ ಕೆಲಸಗಳ್‌ಲಿ ತೊಡ್ಗ್‌ವೆ. ಬೇಸಾಯ ಸುರು ಮಾಡ್ದಕೆ ಬತ್ತ ಬಿತ್ತಿಕೆ ಗದ್ದೆನ ಹದಮಾಡಿ ಇಸಿ ಅದರ ಉತ್ತವೆ.ಇದರ ಬಾರಿ ಕ್ರಮ ಬದ್ದಲಿ ತಯ್ಯಾರ್ ಮಾಡಿ ಬಿತ್ತ್ ಬಿತ್ತುದಕೆ ಮುಂದೆ ಬಿತ್ತಿಕೆ ಸರಿಯಾದ ನಕ್ಷತ್ರ ಕರಣ, ವಿಸ ಅಮೃತ ಗಳಿಗೆಗಳ ಪಂಚಾಂಗ ನೋಡೊವರೊಟ್ಟಿಗೆ ಕೇಳಿ ತಿಳ್‌ದ್ ಅದ್ಕೆ ತಕ್ಕಾಂಗೆ ಬಿತ್ತ್ ಬಿತ್ತುವ ರೂಡಿ ಉಟ್ಟು. ಇದರ್‌ಂದ ಬತ್ತದ ಹುಲ್ಲ್‌ಗೆ ಕ್ರಿಮಿ, ಕೀಟ, ಮೃಗ ಮತ್ತೆ ಹಕ್ಕಿಗಳ ಉಪದ್ರ ಬಾರದಂಗೆ ಈ ಮುಂಜಾಗ್ರತೆ ವಯ್‌ಸುವೆ. ಹಿಂಗೆ ತಯಾರಾದ ಅಗಾಡಿಗೆ ಪೊಲಿ, ಪೊಲಿ ತೇಳಿ ಹೇಳಿಕಂಡ್ ಬಿತ್ತ್ ಬಿತ್ತುವೆ. (ಎಮ್.ಎಮ್.ಎಸ್.)

**ಬಿಸುಕಣಿ :** ಬಿಸುಕಣಿ ತೇಳ್ವ ಪದ ವಿಸು ಕಾಣಿಕೆ ತೇಳ್‌ದರ ಬುಡ್ಸಿದ ರೂಪ. ಬಿಸು ಸಂಕ್ರಮಣದ ದಿನದಂದ್ ಗೌಡ್‌ರ್ ತಮ್ಮ ದನಿಗಳಿಗೆ ಕಾಣಿಕೆ ಕೊಟ್ಟು ಬಾವ ಕ್ರಮ ಉಟ್ಟು. ಇದರ್‌ಂದಾಗಿದೆ ಈ ಹೆಸರು ಬಂದುಟು. ಕ್ರಿಸಿಕರ್‌ಗೆ ಬಿಸುಂದ ಹೊಸ ವರ್‌ಸ ಸುರಾದೆ. ಕ್ರಿಸಿ ಕೆಲ್ಸನು ಹೊಸದಾಗಿ ಸುರಾದೆ. ಇಂತ ಹೊತ್ತುಲಿ ಬೂಮಿನ ಮತ್ತೆ ಬೂಮಿ ಬೇಸಾಯಕೆ ಎಡೆ ಮಾಡಿಕೊಟ್ಟ ದನಿಗಳ ಗೌಡ್‌ರ್ ಗೌರವಿಸುವೆ.

ಬಿಸುನ ದಿನ ಮನೆವೆಲ್ಲ ಬೊಳ್ಪುಗೆ ಬೇಗನೇ ಎದ್ದ್ ಮೀದವೆ. ಕನ್ನಿಕಂಬದ ಬುಡಲಿ ತಾವ್ ಬೆಳ್ದ ನೆಟ್ಟಿಕಾಯಿಗಳೆಲ್ಲ ತಂದ್ ಇಟ್ಟವೆ. ದೇವರ್‌ಗೊಂದ್ ದೀಪ ಹೊತ್ತುಸಿಸಿ ಎಲ್ಲವೂ ಕೈ ಮುಗ್ದವೆ. ಹಣೆಗೆ ಬೊಟ್ಟಿಸಿಕಂಡ್ ಎಲ್ಲವೂ ಗದ್ದೆನ ಹಕ್ಕಲೆ ಹೋದವೆ. ಒಬ್ಬ ಹಜ್ಜ

ಗೊಬ್ಬರನ ಮತ್ತೊಬ್ಬ ಹಜ್ಜ ಸೊಪ್ಪು ಹಿಡ್ಕಂಡದೆ. ಸರೀ ಜಾಗೆಲಿ ಗೊಬ್ಬರನ ಮತ್ತೆ ಸೊಪ್ಪುನ ಹರಂಡಿ, ಎತ್ತ್ ಕಟ್ಟುವೆ. ದನಿ ನೊಗನ ಎತ್ತ್‌ನ ಗಂಟ್ಲ್‌ಗೆ ಇಸಿ, ಹಿಂದೆ ಬಂದದೆ. ಒಕ್ಕಲ್‌ಂವ ನೆಕ್ಕಿನ ಕೋಲು ಹಿಡ್ದ್ ಸುತ್ತಕೆ ಮೂರು ಸಾಲು ಹೂಡ್‌ದೆ, ಕ್ರಮಕೆ ಹೂಡಿ ಆದ ಮೇಲೆ ಮತ್ತೆ ಎತ್ತುಗಳ ಬುಟ್ಟುವೆ. ನೆಲನ ಉತ್ತ ಜಾಗೆಲಿ ಮಣೆ ಒಂದರ ಇಸಿ, ದೀಪ ಹೊತ್ತ್‌ಸಿ, ಬಿತ್ತಿಕಿರುವ ಬತ್ತನ ಎದುರಿಸಿ ಅದ್ಕೆ ಬೂಮಿನ ಒಡೆಯಂಗೆ ಕೈ ಮುಗ್‌ದದೆ. ಮತ್ತೆ ಹಿಡಿ ಬತ್ತ ತೆಗ್‌ದ್ ಮೂರು ಸರ್‌ತಿ ನೆಲಕೆ ಹಾಕಿದೆ. ಇದರ 'ಕೈ ಬಿತ್ತು ಹಾಕುದು' ತೇಳಿ ಕರ್‌ದವೆ. ಕಡೆಲಿ ಎಲ್ಲವೂ ವಾಪಸ್ ಬಂದವೆ, ಮನೆಲಿ ಇನ್ನೊಮ್ಮೆ ದೇವ್‌ರಿಗೆ ಕೈ ಮುಕ್ಕಂಡವೆ. ವಿಸೇಸ ಆಗಿ ಅಕ್ಕಿನ ಹೊರ್‌ದ್ ಮಾಡ್‌ದ 'ಉಂಡ್ಲಿಕಿ'ನ



ಬಿಸುಕಣಿ

ತಿಂಬೊತ್ತಿದ್ದೊ. ಇದೆಲ್ಲ ಮುಗ್‌ದ ಮೇಲೆ ದನಿಗ ಮತ್ತೆ ಒಕ್ಕಲೊಟ್ಟಿಗೆ ಕುದ್ದ್ ಮುಂದೆನ ವರ್‌ಸದ ಗೇಣಿನ ಬಗ್ಗೆ ಮಾತಾಡುವೆ. ಒಕ್ಕಲ್‌ಲಿ ಏನಾರ್ ಬದಲಾವಣೆ ಆಕಿದ್ದರೆ ದನಿಗ ಈ ಹೊತ್ತುಲಿ ಹೇಳ್‌ವೆ. ಮಹತ್ವದ ನಿರ್ಣಯಗಳ್‌ನ ಆ ದಿನ ತಕಂಡವೆ. ಬೂ ಮಸೂದೆ ಬಂದ ಮೇಲೆ ದನಿ ಮತ್ತೆ ಒಕ್ಕಲುಗಳ ನಡುಲಿ ಸುಮಾರ್ ಬದಲಾವಣೆ ಆಗುಟು. ಬೂಮಿ ಇಲ್ಲದ ಸುಮಾರ್ ಗೌಡ್ರುಗ ಬೂ ಒಡೆತನನ ಹೊಂದಿದ್ದವೆ. ಇದರೊಟ್ಟಿಗೆ ಬಿಸು ಕಣಿನು ನಿತ್ತದೆ.

ಇಷ್ಟೆಲ್ಲ ಆಚರಣೆಗಳ ನಡುಲಿ ಇನ್ನೂ ಸುಮಾರ್ ಕ್ರಮಗಳ್‌ಲಿ ಗೌಡ್‌ರ್ ಕೂಡುವೆ. ಕಾವೇರಿ ಸಂಕ್ರಮಣ ದಿನನ ಪವಿತ್ರತ ನೆನ್ನಿ ಮೀದ್ ದೇವ್ರಿಗೆ ಕೈ ಮುಗ್‌ದವೆ. ಸುಗ್ಗಿ ಹುಣ್ಣಿಮೆ, ಶಿವರಾತ್ರಿ, ಬಿಸು, ಪತ್ತನಾಜೆ, ಗದ್ದೆ ಗೋರಿಗಳೂ ಗೌಡರ ಆಚರಣೆಲಿ ಸೇರಿ ಹೋದ ಬೇರೆ ಅಂಸಗ. ತುಳುನಾಡ್‌ನ ದಾರ್‌ಮಿಕ ಆಚರಣೆಗಳಿಗೆ ಸರ ಆಗಿ ಅದೆಲ್ಲನು ಗೌಡರ್ ನಡ್ಸಿಕಂಡ್ ಬಂದವೆ. ಸೋಣ ತಿಂಗಳ್‌ಲಿ ಉಪಾಸ ಮಾಡ್‌ವೆ, ದಿನಕ್ಕೊಂದರಂಗೆ ಒಟ್ಟು 30 ದೀಪಗಳ್‌ನ ಉಳ್ಳಾಗ್ಳ್ ದೆವ್ವದ ಚಾವಡಿಲಿ ಹೊತ್ತ್‌ಸಿ ಕೈ ಮುಗ್‌ದವೆ. ಇದರ ಸೋಣ ದೀಪ' ತೇಳಿ ಕರ್‌ದವೆ. ಗೌಡ್ರ್‌ಗ ಈ ಎಲ್ಲಾ ಸಂಪ್ರದಾಯಗಳ ಇಂದ್‌ಗು ಒಳ್‌ಸಿಕೊಂಡು ಬಂದೊಳೊ.

ಬೂಮಿನ ಒಡೆಯನ ಗದ್ದೆಲಿ ಗೇಣಿ ಕೊಡುವ ಒಕ್ಕಲಾಗಿ ಕೆಲಸ ಮಾಡ್‌ವವು ತಾವು ಬೆಳ್ಸಿದ ನೆಟ್ಟಿಕಾಯಿಗಳ ಆರ್‌ಸಿ ಕಟ್ಟಿಕಂಡ್ ಹೋಗಿ, ದನಿಗಳಿಗೆ ಕೊಟ್ಟವೆ. ದನಿಗಳ ಕಾಲ್ ಮುಟ್ಟಿ ನಮಸ್ಕಾರ ಮಾಡಿ ಗೌರವ ಕೊಟ್ಟದೆ. ತಂದ ಕಾಣಿಕೆನ ದನಿಗಳಿಗೆ ಒಪ್ಪಿಸುದಕಾಗಿ, ದನಿಗ, ಅಂವಂಗೆ ಏನಾರ್ ಇನಾಮು ಕೊಟ್ಟವೆ. ಹೆಚ್ಚಾಗಿ ಉಡಿಕೆ ಒಂದ್ ಪಂಚೆ ಅಲ್ಲರೆ ಹೆಣ್ಮಕ ಉಡುವ ಸೀರೆನ ಕೊಟ್ಟವೆ.

ಕೆಲವ್ ಕಡೆ ಕಣಿ ಕಾಣಿಕೆ ಕೊಡ್‌ವ ಕ್ರಮ ಉಟ್ಟು. ಚಾಳೆ ಮಡ್ಲ್ ಮೆಡ್ದ್ ಅದರ ನಡುಲಿ ಎರಡ್ ಓಲೆ ಬೆಲ್ಲನ ಇಸಿ ಮಡ್ಲ್‌ಲಿ ಅದರ ಸುತ್ತಿ ದನಿಗಳಿಗೆ ಕೊಡುದು ಕ್ರಮ. ಇದರ ತಂದಂವಂಗೂ ದನಿಗ ಒಳ್ಳೆದರ್‌ಲಿ ಸಮ್ಮಾನ ಮಾಡ್‌ವೆ. (ಪಿ.ಬಿ.)

**ಬಿಸು ಹಬ್ಬ :** ಭಾರತ ದೇಸಲಿ 'ಚಾಂದ್ರಮಾನ ಯುಗಾದಿ' ಮತ್ತೆ 'ಸೌರಮಾನ ಯುಗಾದಿ'ತೇಳಿ ಎರಡ್ ಬಗೆ ಉಟ್ಟು. ಭಾರತಲಿ ಯಾಗೋಳು ಚಾಂದ್ರಮಾನ ಯುಗಾದಿನ ಹೊಸ ವರ್‌ಸತೇಳಿ ಆಚರ್‌ಸ್‌ವೆ ಚಾಂದ್ರಮಾನ ಕಳ್‌ದ 15ನೇ ದಿನಕೆ ಸೌರಮಾನ ಯುಗಾದಿ ಬಂದದೆ. ದಕ್ಷಿಣ ಭಾರತದ ತಮಿಳುನಾಡು, ಕೇರಳ ಮತ್ತೆ ಕರಾವಳಿ ಕರ್ನಾಟಕಲಿ ಸೌರಮಾನ ಯುಗಾದಿನ 'ವಿಸು' ಇಲ್ಲರೆ 'ಬಿಸು' ತೇಳಿ ಆಚರಣೆ ಮಾಡ್‌ವೆ. ಅರೆಬಾಸೆಕ್ಕೆ ಬಿಸು ಹೊಸ ವರ್‌ಸನು ಹಾಗೇನೇ ಹಬ್ಬ ಕೂಡ. ಕರಾವಳಿನ ಜಿಲ್ಲೆಗ ಪೂರ ಕರ್ನಾಟಕದ ಒಂದ್ ಬಾಗನೆ ಆದರೂ ದಕ್ಷಿಣಕನ್ನಡ ಜಿಲ್ಲೆ ಮತ್ತೆ ಉಡುಪಿ ಜಿಲ್ಲೆಲಿ ಬೇರೆಲ್ಲು ಕಾಣದ ಸುಮಾರು ಸಂಗತಿಗ ಕಂಡ್‌ಬಂದವೆ.ತಿನಿ, ಬಾಸೆ, ವರ್‌ಸ ಮತ್ತೆ ಜೀವನದ ಆಚರಣೆಗಳ್‌ಲಿ ಬೇರೆನೆ ಆದ ವಿಸೇಸತೆನ ಪಡ್ಕಂಡುಟು. 'ಬಿಸು' ವಾರ್‌ಸಿಕಾವರ್‌ತನದ ಆಚರಣೆ. ವರ್‌ಸ ಮುಗ್ದ್ ಬಾವ ವರ್‌ಸದ ಸುರುನೇ 'ಬಿಸು' ಆಚರಣೆ ಬಂದದೆ.ಬೇಸಾಯ ಮಾಡ್‌ವ ಮನೆತನಲಿರ್‌ವ ಜೆನಂಗ ಈ ದಿನನ ತುಂಬಾ ವಿಸೇಸ ಆಗಿದ್ ಆಚರ್‌ಸ್‌ವೆ. ವರ್‌ಸದ ಎಲ್ಲಾ ಹಬ್ಬಂದಲು 'ಬಿಸು'ಲಿ ಜಾಸ್ತಿ ಗೌಜಿ ಇದ್ದದೆ. ಹೊಸ ಬಟ್ಟೆ ಉಟ್ಟವೆ. ಬಗೆಬಗೆನ ಊಟ ಮಾಡ್‌ವೆ. ಹಿರಿಯರ್‌ಂದ ಆಸಿರ್‌ವಾದ ಪಡ್ಕಂಡವೆ. 'ಕೈಬಿತ್ತ್ ಹಾಕುವೆ. ಬಿಸು ಆಚರಣೆಗೆ ಇಂತ ಮಹತ್ವ ಎಂತಕೆ? ಕರ್ನಾಟಕಲಿ ಎಲ್ಲೂ ಇಲ್ಲದ ಈ ವಿಸೇಸ ಕರಾವಳಿಲಿ ಏಕೆ ಕಾಂಬಕ್ಕೆ ಸಿಕ್ಕಿದೆ? ಬಿಸುನ ಬಗೆಗೆ ಇರ್‌ವ ತಾತ್ವಿಕ ಅಬಿಪ್ರಾಯಗ ಎಂತ? ಕರಾವಳಿಲಿ ಬಿಸುನ ಎಲ್ಲವೂ, ಎಲ್ಲಾ ದರ್‌ಮದವು ಮಾಡ್‌ವೆ? ಹಿಂಗೆ ಸುಮಾರ್ ಪ್ರಸ್ನೆಗ ಈ ಪ್ರದೇಸಕೆ ಬಂದ ಹೊಸಬರ್‌ಗೆ ಬಾರದಿರಿಕಿಲೆ. ಇದ್ದೆಲ್ಲ ಒಂದಸ್ಟ್ ಉತ್ತರ ಉಟ್ಟು, ಇದ್ ಪ್ರಾದೇಶಿಕ ಹಬ್ಬ ಆದರುಂದ ತುಳು ಬಾಸೆಲಿ ಬಾವ ಸುಮಾರು ಪಾರಿಬಾಸಿಕ ಪದಗಳ ಲೇಕನಲಿ ತುಳುಲಿ ಕೊಟ್ಟೊಳೊ. ಅದರ ಅರ್‌ತನ ಲೇಕನದ ಕಡೆಲಿ ಕನ್ನಡದ ಅರ್‌ತದೊಟ್ಟಿಗೆ ಕೊಟ್ಟೊಳೊ.





**ಪದಕೋಶಲಿ ಬಿಸು ಮತ್ತೆ ವಿಸು ಪದಗಳ ಬಳಕೆ :**

1. ತುಳು ನಿಘಂಟ್. 2. ಕಿಟ್ಟೆಲ್ ಕೋಶ

ಭಾರತ ದೇಸಕೆ 'ಚಾಂದ್ರಮಾನ ಯುಗಾದಿ'ಹೊಸ ವರ್ಸ. ಯುಗಾದಿ ಕಳ್ದು 15 ನೆ ದಿನಕೆ ಬಿಸು ಬಂದದೆ. ಆದರೆ ತುಳುನವ್ಕೆನು ಅರೆಬಾಸೆವ್ಕ 'ಬಿಸು' ಹೊಸ ವರ್ಸ. ಸೌರಮಾನ ಯುಗಾದಿನೂ ಬಿಸುನೂ ಒಂದೇ ಆದೆ. ತುಳು ನಿಘಂಟು, 1997. ಸಂಪುಟ 5 ಪುಟ 2328, 6 ಪುಟ 2815 ಲಿ ಬಿಸು(bisu)/ವಿಸು(vishu) ಸೌರಮಾನಯುಗಾದಿ; ವಿಸವತ್ ಸಂಕ್ರಾಂತಿ. ಕಿಟ್ಟೆಲ್ ಕನ್ನಡ ಇಂಗ್ಲಿಸ್ ನಿಘಂಟು, 1973. ಸಂಪುಟ ನ–ಮ ಪುಟ 1192. ಬಿಸುಗದಿರ್. ಕದಿರ್ ಬಿಸುಗದಿರ – ಸೂರ್ಯ –ಕಿಟ್ಟೆಲ್ ಕನ್ನಡ ಇಂಗ್ಲಿಸ್ ನಿಘಂಟು, 1973. ಸಂಪುಟ ನ–ಮ ಪುಟ 1192. ವಿಸು ನಿಘಂಟ್‌ನ ಪ್ರಕಾರ, ಬಿಸಿಯ ಕಿರಣ ಇರ್‌ವ ಸೂರ್ಯ ತೇಳ್ವ ಅರ್ತ ಉಟ್ಟು. ವಿಸುವತ್ ಸಂಕ್ರಾತಿಗೆ ಸೂರ್ಯ ಬೂಮಿನ ನೆಡುಲಿ ರೇಕೆಗೆ ಬಂದದೆ. ಹಂಗಾಗಿ ಈ ದಿನ ಬಾರೀ ಒಳ್ಳ ದಿನ ಸೂರ್ಯಂಗೆ ಚಂದ್ರನೂ[29 ಕಾಲ್ ದಿನ] ಹಂಗೇನೇ ಸೂರ್ಯಂಗೆ ಬೂಮಿನೂ[365 ದಿನ] ಸುತ್ತಿಕಂಡ್, ಅವುನು ಸೊತ ಒಟ್ಟಿಗೆ ತಿರ್‌ಗೆಂಡಿದ್ದವೆ.

ಅರೆಬಾಸೆ ತುಳುನವು ಅಲ್ಲದೆ ಮಲೆಯಾಳಿ, ತಮಿಳುನವು ಕೂಡ ಬಿಸು ಆಚರ್‌ಸ್‌ವೆ. ವಿಸು – ಬಿಸು – ಬೀಸು – ಬೆಸು ಹಿಂಗೇ ಬೇರೆ ಬೇರೆ ಪದಗಳ್‌ಲಿ ಬಿಸುನ ಕಲ್ಪನೆ ಮಾಡಿಕೊಂಡವೆ.

**ತಿಂಗಗ :** ಅರೆಬಾಸೆವ್ಕೆ ತಿಂಗ ಸುರಾದು ಪಗ್ಗುಲಿ ನಮ್ಮ ಸಾಲೆನ ಲೆಕ್ಕಾಚಾರಲಿ ಎಪ್ರಿಲ್–ಮೇ ತಿಂಗಲಾದೆ. ಎಪ್ರಿಲ್ ತಿಂಗಳ ಅರ್ದಲಿ ಸುರಾದೆ. ಮೇ ತಿಂಗಳ್ಳಿ ಪಗ್ಗು ಮುಗ್ದದೆ. ಪಗ್ಗು ಆದಮೇಲೆ ಬೇಶ[ಮೇ– ಜೂನ್], ಕಾರ್‌ತಿಂಗ [ಜೂನ್– ಜುಲೈ], ಆಟಿ[ಜುಲೈ – ಆಗಸ್ಟ್], ಸೋಣ[ಆಗಸ್ಟ್ – ಸೆಪ್ಟೆಂಬರ್], ನಿರ್‌ನಾಲ್‌ಸೆಪ್ಟೆಂಬರ್ – ಅಕ್ಟೋಬರ್], ಬೆಳ್ತಿಂಗ(ಬೊಂತೆಲ್] [ಅಕ್ಟೋಬರ್ – ನವೆಂಬರ್], ಜಾಲ್ದೆ[ನವೆಂಬರ್– ಡಿಸೆಂಬರ್], ಪೆರಗಾಲ್ದೆ [ಡಿಸೆಂಬರ್– ಜೆನವರಿ], ಪೊನ್ನಿ [ಪುಯಿಂತೆಲ್][ ಜೆನವರಿ [ವರ್‌ಸಾರಂಬ]–ಫೆಬ್ರವರಿ], ಮಾಯಿ [ಫೆಬ್ರವರಿ– ಮಾರ್ಚ್], ಸುಗ್ಗಿ [ಮಾರ್ಚ್ – ಎಪ್ರಿಲ್] ಹಿಂಗೇ 12 ತಿಂಗಗ. ಪಗ್ಗು ಅರೆಬಾಸೆನ ಸೌರಮಾನದ ಸುರುನ ತಿಂಗ. ಅರೆಬಾಸೆವ್ಕೆ ವರ್ಸದ ಅಕೇರಿಂತ ಹೇಳಿರೆ ಸುಗ್ಗಿ ತಿಂಗ.

**ಸಂಕ್ರಾಂತಿ :** ಜೆನವರಿ ತಿಂಗಳಲ್ಲಿ ಬಾವ ಮಕರ ಸಂಕ್ರಾಂತಿ ಹೆಚ್ಚಾಗಿ 14ನೇ ತಾರೀಕ್‌ಗೆ ಆದೆ. ಹಂಗಾಗಿ ಮಕರ ಸಂಕ್ರಾಂತಿನ ದಿನಗಳ ಹೊಂದಿಕಂಡ್ 12 ಸಂಕ್ರಾಂತಿಗಳ ಅರೆಬಾಸೆನವ್ ಹಬ್ಬ ಹೇಳ್ವೆ. ಸುಗ್ಗಿ ತಿಂಗಳಿಗೆ, ಸಂಕ್ರಾಂತಿನೇ ಮೀನ ಸಂಕ್ರಾಂತಿ ಹೇಳ್ವೆ, ಪಗ್ಗು ಸುರುನ ದಿನನ ಬಿಸು ಹೇಳ್ವೆ.

ವೃಸಬಃ– ಮಿತುನಂ – ಕರ್‌ಕಟಃ[ವರ್‌ಸಾರಂಬ]– ಸಿಂಹಃ – ಕನ್ಯಾ – ತುಲಾ – ವೃಶ್ಚಿಕಃ– ದನುಃ– ಮಕರಃ – ಕುಂಬಃ –ಮೀನ ಹಿಂಗೆ 12 ಮಾಸ : ಸಂಕ್ರಾಂತಿನ ಮಾರನೇ ತಿಂಗಳ ಸುರುನ ದಿನ ತಿಂಗಳಾಡಿ. ಯಾರಿಗೂ ದುಡ್ಡು, ಬಿತ್ತು, ಹಿಂಗೆ ಏನು ಕೊಡ್ತುಲೇ. ತಿಂಗಳಾಡಿ ದುಡ್ಡು ಕೊಟ್ಟರೆ ಇಡೀ ತಿಂಗ ಪೂರಾ ಕರ್‌ಚಾದೆ ತೇಳಿ ನಂಬುವೆ. ಹಾಂಗೆನೇ ಸುಬಕಾರ್‌ಯಾಕೆ ತಿಂಗಳಾಡಿ ಒಳ್ಳೆದಲ್ಲ ಹೇಳ್ವೆ.

**ಬಿಸುಕಣಿ/ವಿಸುಕಣಿ :** ಕಣಿ ಹೇಳ್ರೆ ಕಾಣಿಕೆ. ಬಿಸುನಂದು ಬೊಳ್ಪುಗೆ ತೊಳ್ಸಿಕಟ್ಟೆ ಹಕ್ಕಲೆ ಜೋಡಿ ಸೊಪ್ಪುಲಿ ಒಂದ್ ಮಣೆ ಇಸಿ ಅದರ ಮೇಲೇ ದೀಪ ಇಸಿ, ಅದರ ಎಡ ಬಲ ಬೇರೆ ಬೇರೆ, ಹೂ ಹಣ್ಣು, ಹಿಂಗಾರ, ಬಣ್ಣ ಬಂಗಾರ ತರಕಾರಿ, ಅದರ ನಡುಲಿ ಕನ್ನೆಟಿ ಇಸಿ ಕೈ ಮುಗ್ದವೆ.

ಸುಳ್ಯ ಪುತ್ತೂರುನ ಆಚೆ ಮನೆ ಒಳಗೆ ಕನ್ನಿ ಕಂಬದಕ್ಕಲೆ ಬಿಸುಕಣಿ ಇಸುವೆ. ಗುತ್ತುನ ಮನೆ ಆದರೆ ಪ್ರತೀ ಸಂಕ್ರಾಂತಿನಂದ್ ದೆವ್ವದ ಮನೆಲಿ ಹೂ ನೀರ್ ಇಸುವ ಕ್ರಮ. ಹಾಂಗೆನೆ ಬಿಸುನ ಮುಂದೆನ ದಿನ (ಸಂಕ್ರಾಂತಿನಂದು) ಹೂ ನೀರ್ ಇಸುವೆ. ಬಿಸುನ ಮುಂದೆನ ದಿನ ಹೂ ನೀರು ತೆಗ್ದ್ ಹೊಸ ಹೂ ನೀರ್ ಇಸಿ ಜೋಡಿ ಸೊಪ್ಪುಲಿ ಸುತ್ತಿ ಇಸಿ ಅದರ ಕರೆಲಿ ದೀಪ ಇಸಿ ಅದರ ಎಡ ಬಲ ಬೇರೆ ಬೇರೆ ಹೂ, ಹಣ್ಣು ಹಿಂಗಾರ, ಬಣ್ಣ, ಬಂಗಾರ, ನೆಟ್ಟಿಕಾಯಿ(ವಿಸೇಸವಾಗಿ ಕೆಂಬುಡೆ ಇಸುವೆ.) ಅದರ ನೆಡುಲಿ ಕನ್ನಡಿ ಇಸಿ ಕೈ ಮುಗ್ದವೆ. ದೆವ್ವಕೆ ಇದೇ ತಂಬಿಲ ಸಮ್ಮನ.

ಬಿಸು ಕಣಿ ಇಸಿ ಹಳ್ಳಿ ನೆಟ್ಟಿಕಾಯಿನ ದನಿಗಳ ಮನೆಗೆ ತಕಂಡ್ ಹೋಗಿ ಅವರ ಇಜ್ಜಲ್‌ನ ತೊಳ್ಸಿ ಕಟ್ಟೆ ಹಕ್ಕಲೆ ಇಸುವೆ. ಪುತ್ತೂರುನ ಕಬಕಲಿ ದನಿಗಳ ಮನೆಲಿ ಎಲ್ಲವು ಒಂದ್ ಕೆಂಬುಡೆ ತಕಂಡು ಹೋಗಿ ಕಣಿ ಇಸುವೆ.

ನಿಘಂಟುಕಾರರ ಪ್ರಕಾರ, ಸೌರಮಾನದ ಯುಗಾದಿನಂದ್ ಎದ್ದ ಕೂಡ್ಲೆ ದೇವರೆದುರುಲಿ (ಹಿಂದೆನ ರಾತ್ರಿ ಜೋಡ್‌ಸಿಸಿದ) ಸ್ವಸ್ತಿಕ, ನೆಟ್ಟಿಕಾಯಿ ಬೇರೆ ಬೇರೆ ಪಲವಸ್ತುಗಳ, ಕನ್ನೆಟಿ, ಚಿನ್ನ, ಇಂತಹ ಮಂಗಲ ವಸ್ತುಗಳ ನೋಡಿ ಕೈಮುಗಿವ ಆಚರಣೆ.

ಕಾಲ್ ಹಿಡೆದು : ಬಿಸು ಕಣಿ ಇಸಿ ದೇವುರುಗೆ ದೀಪ ಇಸುವಲ್ಲಿ, ಅಲ್ಲರ್ ಚಾವಡಿನ ಹಿರಿಯವ್ಕೆ ಕಾಲ್ ಹಿಡಿವ ಕ್ರಮ. ಮನೆ ಪಾಲಾಗಿದ್ದರೆ ಬಿಸುನಂದು ಅಪ್ಪ ಅಮ್ಮ ಇರ್‌ವ ಮನೆಗೆ ಬಂದ್ ಕಾಲ್ ಹಿಡ್ದವೆ.

ಒಕ್ಕಲುನಂದ್ ದನಿಗಳ ಕಾಲು ಹಿಡಿದು ಆಸಿರ್‌ವಾದ ಬೇಡಿಕಂಡವೆ. ಒಕ್ಕಲುನವುಕೆ ದನಿಗ ವರ್‌ಸಕೊಂದ್ ಕೊಡುವ ಉಡುಗೊರೆನ ಕೊಟ್ಟವೆ. ಹೆಣ್ಮಳಿಗೆ ಸೀರೆ, ಗಂಡಸರಿಗೆ ಅಂಗಿ ಬಟ್ಟೆ ಕೊಟ್ಟವೆ.

**ಕೈ ಬಿತ್ತ್ :** ಬಿಸುನಂದ್ ಬೊಳ್ಪುಗೆ ಕೈಬಿತ್ತ್ ಹಾಕ್‌ವ ಕ್ರಮ ಉಟ್ಟು. ಹಟ್ಟಿಲಿ ದನಗಳಿಗೆ ತೆಳಿ ಇಸಿ ಕಟ್ಟಿ ಹಾಕಿದ ಬೊಳ್ಳಿ ಬದಲ್ಸಿ ಮಕ್ಕಳ ಕೈಗಿಸಿ ಮನೆ ಯಜಮಾನ ನೊಜ ನೇಗ್‌ಲ್‌ನ ಹೆಗಲ್ ಮೇಲೆ ಇಸಿ ಮನೆ ಹಕ್ಕಲೆ ಕೊಳೆಂಜಿಲಿ ಮೂಡಕೆ ಮೋರೆ ಮಾಡಿ ಎರ್ಡ್ ಹೋರಿಗಳ ಸಿಂಗರ್‌ಸಿ ಹೆಗಲ್‌ಗೆ ನೇಗ್ಲ್ ಇಸಿ ಮಾಂಕಾಲಿ ಬೊಳ್ಳಿನ ಎಡ ಬಲ ಎತ್ತುಗಳ ಗಂಟ್ಲ್‌ಗೆ ಕಟ್ಟುವೆ. ನೇಗ್ಲ್ ಕಟ್ಟಿ ನೇಗ್‌ಲ್‌ನ ಪುಣೆ ಬೊಳ್ಳಿ ಪಿಂಟಿಸಿ ನೇಗಿಲು ಸಿಕ್ಕಿಸಿ ನೆಕ್ಕಿನ ಹಸಿ ಅಡರ್‌ನ ಬೀಸಿಕಂಡ್

ಗದ್ದೆ ಹೂಡಿಕೆ ಸುರು ಮಾಡ್‌ವೆ.ಸುಮಾರ್ ಕಾಲಂದ ಹೂಡ್‌ದು ನಿತ್ತದರ್‌ಂದ ಅಂದ್ ಎತ್ತ್‌ಗ ಚೂರ್ ಪೆರ್‌ಚಿ ಆದೆ. ಹಂಗಾಗಿ ಒಬ್ಬ ಎದ್‌ರ್ ಹೋಕಾದೆ. ಮಳೆ ಬರದೆ ಮೊಣ್ಣುನ ಹಿಂಟೆ ಗಟ್ಟಿ ಆಗಿ ಒಳ್‌ಂಗಿದ ಗದ್ದೆ ಆದರೆ ಗೆಣಸು, ಮೆಣ್ಸು ಮಾಡ್ದ ಜಾಗೆಲಿ ಬರೆ ಹಾಕುವೆ. ಮೊಟ್ಟೆ ಆಕಾರಲಿ ಒಂದ್ ಪೊರಿ ಕಟ್ಟಿ ಅದೇ ಪೊರಿಲಿ ಮೂರು ಸುತ್ತು ತಿರುಗುಸುವೆ. ಮೂರು ಮೂರು ಸುತ್ತು ಆದ ಮೇಲೆ ಹೋರಿಗಳ ನಿಲ್ಸುವೆ.

ನೇಗ್ಲ್ ನೊಜ್ಜ ಬಿಚ್ಚಿ ದನಗಳಿಗೆ ಹುಳಿ ಹಿಟ್ಟ್ ಕೊಟ್ಟ್ ಮೇಯಕೆ ಬುಟ್ಟವೆ. ಪೊರಿ ಹಾಕುವ ಜಾಗೆ ಕನ್ನಡಲಿ ಕೊಂಬು ಹ ಬರ್‌ದಾಂಗೆ ಆದೆ. (ಹಕ್ಕಲೆ ಹಕ್ಕಲೆ ಎರಡು ಸೊನ್ನೆನ ಸೇರ್‌ಸಿ ಬರೆದಾಂಗೆ)

ಈ ಎರಡ್ ಬರೆನ ನಡುಲಿ ಮೂರ್ ಹೆಡೆಗೆ ಹಟ್ಟಿನ ಗೊಬ್ಬರ ಹಾಕುವೆ. ಅದರ ಮೇಲೆಗೆ ಹಸಿ ಸರ್ಳಿನ ಸೊಪ್ಪುನ ಗೆಲ್ಲ್ ಹಾಕುವೆ. ಪಡ್ವ ಇಲ್ಲರೆ ಮೂಡದ ಕರೆಲಿ ಒಂದ್ ಸಣ್ಣ ಕಳ ಮಾಡ್‌ವೆ. ಆ ಕಳಕೆ ಏಣೆಲ್ ಬೇಸಾಯದ ಬಿತ್ತ್‌ನ ಹರ್‌ಗುವೆ. ಇದರ ಮೂರು ಮೂರು ಸರ್‌ತಿ ಬಿತ್ತ್ ಹರ್‌ಂಡ್‌ವೆ. ಅಲ್ಲಿಗೆ ಹೋದ ಎಲ್ಲವು ಕೈಬಿತ್ತ್ ಹಾಕುವೆ. ಬಿತ್ತಿದ ಮೇಲೆ ಮೊಣ್ಣ್ ಹರ್‌ಗಿ, ಸರಳಿ ಕಣೆನ ಕುತ್ತುವೆ. ಬಿತ್ತ್‌ನ ಮೇಲೆಗೆ ಒಂದ್ ಕೊಡ್ಪಣ ನೀರ್ ಚಿಪ್ಪುಳ್ಸುವೆ. ನೊಜ್ಜ–ನಾಯೆರ್‌ನ್ ತೊಳ್ದ್ ನೀರ್‌ಲಿ ಇಸುವೆ. ಎತ್ತ್ ಹೊಡಿಯಕೆ ತಕಂಡ್ ಹೋದ ನೆಕ್ಕಿನ ಗೆಲ್ಲ್‌ನ ಮನೆನ ಮೆಟ್ಟ್‌ಕಲ್ಲ್ ಹಕ್ಕಲೆ ಸೂರಡಿ ಮಾಡ್‌ಗೆ ಕಟ್ಟುವೆ. ಎಲ್ಲೊವು ಕೈಕಾಲ್ ತೊಳ್ದ್ ಹಿಟ್ಟ್ ಗೈಪು ಮಾಡ್‌ವೆ.

ಕೆಲ ಪುಸ್ತಕಗಳ ಪ್ರಕಾರ, 'ಗದ್ದೆಲಿ ಬತ್ತನ ಬಿತ್ತುದಕೆ. ಕೈ ಬಿತ್ತ್ ಹಾಕುದು ತೇಳುವೆ. ಸುರುನ ಬೆಳೆ ಕೆಲ್ಸದ ಉತ್ಸಾಹ ಈ ಹೊತ್ತುನ ಎಲ್ಲಾ ಪೊದ್ಯಲಿ ಇದ್ದದೆ. ಹಾಂಗೇ ಬತ್ತ ಬೆಳಿವ ಬೂಮಿ ಅವ್ವನ ಬಕ್ತಿನ ಕೇಂದ್ರ ಆಗಿದ್ದದೆ. ಈ ಬಕ್ತಿನ ಸ್ವರೂಪ ಬೆಳೆಗೆ ಮತ್ತಗ ತಿನಿಗೆ ಸಮ್ಮಂದಪಟ್ಟದರ್‌ಂದ ಲೋಕದ ಸಂಗತಿ ಇರ್‌ವಂತದ್..

**ಬೇಸಾಯ ಕ್ರಮ ಮತ್ತೆ ಬೆಳೆ :** ಅರೆಬಾಸೆವು ಮೂರ್ ಬೆಳೆ ಬೆಳ್ದವೆ. ಕಡೇನ ಬೆಳೆ ಏಣೆಲ್. ಇದ್ಕೆ ಆರ್ ತಿಂಗ ಹಿಡ್ದದೆ. ಪಗ್ಗುಂದ ನಿರ್‌ನಾಲ್ ಮುಟ್ಟ ಏಣೆಲ್. ಪಂಡ್‌ನ ಕಾಲಲಿ ಅಲ್ಯಂಡೆ, ಕಯಮೆ, ಬಿಳಿ ಕಯಮ್ಮೆ, ಕಳಮ್ಮೆ, ರಾಜಕಳಮ್ಮೆ, ಗಂದಸಾಲೆ ಇಂತೆಲ್ಲ ಬೆಳೆಗ ಇದ್ದೊ. ಏಣೆಲ್ ಬೆಳೆನ ಮನೆ ತುಂಬುಸಿಕೆ, ಹೊಸ್ತ್ ಉಂಬಕೆ ಕೊಯ್ಲಾಕನ ಕಾವೇರಿ ಸಂಕ್ರಾಂತಿ ಬಂದದೆ. ಕೊಯ್ಲಾಗಿ ಬಿತ್ತ್ ಮುಡಿನ ಅಟ್ಟಕೆ ಹಾಕುವೆ. ಇಂತ ಏಣೆಲ್ ಬೆಳೆಗೆ ಬಾರಿ ಕ್ರಮಗ ಉಟ್ಟು ಏಣೆಲ್ ಕಳ್ದರೆ ಸುಗ್ಗಿ. ನೀರಂಬಟೆ, ಅತಿಕರಯೆ, ಕಲ್ಚಾರ್, ಜಯ, ಅಜಿಪ್ಪೊ ಪಿಳ್ಳೆ ಇಂತ ಬೆಳೆಗಿದ್ದೊ ಬೊಂತೆಲ್‌ಂದ ಪೆರಗಾಳ್ತೆ ಮುಟ್ಟ ಮೂರ್ ತಿಂಗಳ್‌ಲಿ ಈ ಬೆಳೆ ಆದೆ. ಸುಗ್ಗಿಂದ ಮೇಲೆ ಕೊಳಕೆ. ಬಾರೀ ಬಿಳ್ಗಿಲ್‌ನ ಗದ್ದೆ ಕೊಳಕೆನ ಗದ್ದೆ. ಪೊನ್ನಿಂದ ಸುಗ್ಗಿ ತಿಂಗ ಮುಟ್ಟ ಮೂರ್ ತಿಂಗಳ್‌ಲಿ ಕೊಳಕೆ ಬೆಳೆಕಾದೆ. (ಎ.ಬಿ.)

**ಬೆಳ್ತಂಗಡಿ :** ದಕ್ಷಿಣಕನ್ನಡ ಜಿಲ್ಲೆನ ಒಂದ್ ತಾಲೂಕ್ ಮತ್ತೆ ಮುಕ್ಯ ಜಾಗೆ. ಈ ತಾಲೂಕ್ ಈಶಾನ್ಯ ಮತ್ತೆ ಮೂಡಲಿ ಚಿಕ್ಕಮಗಳೂರ್ ಮತ್ತೆ ಹಾಸನ ಜಿಲ್ಲೆಗ ತೆಂಕಲಿ ಪುತ್ತೂರ್, ಪೊಡ್ವಲಿ ಬಂಟ್ವಾಳ ಮತ್ತೆ ಮಂಗಳೂರ್ ತಾಲೂಕ್‌ಗಳ್‌ಂದ ಸುತ್ತುವರ್‌ದುಟ್ಟು. ಈ ತಾಲೂಕ್ ಅಸ್ತಿತ್ವಕೆ ಬಂದದ್ 1954ರ್‌ಲಿ. ಈ ತಾಲೂಕ್‌ಲಿ ವೇಣೂರ್, ಬೆಳ್ತಂಗಡಿ ಮತ್ತೆ ಕೊಕ್ಕಡಂತೇಳುವ ಮೂರು ಹೋಬಳಿಗ ಒಳ. ಈ ತಾಲೂಕ್‌ಲಿ ಒಟ್ಟ್ 84 ಗ್ರಾಮಗ ಉಟ್ಟು. ವಿಸ್ತೀರ್ಣ 1, 375 ಚ. ಕಿಮೀ. ಈ ತಾಲೂಕ್‌ಲಿ ಇರ್‌ವ ಒಟ್ಟು ಜೆನಸಂಕೆ ಎಸ್ಟ್‌ಂತೇಳ್ರೆ 2, 46, 494.

ಈ ತಾಲೂಕ್‌ನ ಮೂಡಕೆ ಬಡಗಂದ ತೆಂಕದವರೆಗೆ ಪೊಡ್‌ವ ಗಟ್ಟಗ ಹಬ್ಬಿಟ್ಟು. ಬೆಳ್ತಂಗಡಿನ ಎದುರ್‌ಲಿ ಮೂಡಲಿ ಕುದುರೆಮುಕ ಸಾಲ್ ಉಟ್ಟು. ಚಾರ್‌ಮಡಿ ಗಾಟ್ ಈ ತಾಲೂಕ್‌ನ ಮೂಡದ ಗಡಿಲಿದ್ದ್ ಇಲ್ಲಿಂದಾಗಿ ಚಿಕ್ಕಮಗಳೂರಿಗೆ ಹೋಕೆ ಆದೆ. ಈ ತಾಲೂಕ್‌ನ ಮೂಡಕೆ ಪರ್‌ವತ ಶ್ರೇಣಿಗಳ್‌ಲಿ ಹುಟ್ಟ್‌ವ ನೇತ್ರಾವತಿ ಹಳ್ಳ ಬಡಗಂದ ತೆಂಕಕೆ ಮತ್ತೆ ಮುಂದೆ ನೈಋುತ್ಯ ದಿಕ್ಕ್‌ಲಿ ಹರ್‌ದ್ ಮಂಗ್ಳೂರ್ ಹಕ್ಕಲೆ ಅರಬ್ಬೀಕಡಲ್‌ನ ಸೇರ್‌ದೆ. ಹೆಚ್ಚಿ ಮಳೆ ಬೀಳ್‌ವ ಪ್ರದೇಸತೇಳಿಕಂಡ್ ಕರ್‌ಸಿಕಂಬ ಈ ತಾಲ್ಲೂಕ್‌ಲಿ ಸರಾಸರಿ 4, 058 ಮಿಮೀ. ಮಳೆ ಬಿದ್ದದೆ. ದಟ್ಟ ಕಾಡ್ ಇರುವ ಈ ಗಟ್ಟ ಪ್ರದೇಸಲಿ ಬೇರೆ ಬೇರೆ ಜಾತಿನ ದೈಮರಗ ಒಳ. ಈ ತಾಲೂಕ್‌ನ ಕಾಡ್‌ಗಳ ಹೆಚ್ಚ್‌ಸುವ ಮತ್ತೆ ಅದರ ರಕ್ಸಣೆ ಮಾಡಿ ಒಳ್ಸಿಕಂಬ ಕಾರ್‌ಯ ನಡೆತಾ ಉಟ್ಟು. ಇಲ್ಲಿ ಬತ್ತ ಮತ್ತೆ ಕಬ್ಬು ಜಾಸ್ತಿ ಬೆಳ್ದವೆ. ಇದರೊಟ್ಟಿಗೆ ಅಡ್ಕೆ, ತೆಂಗ್, ಗೇರ್‌ಬೀಜ, ಮೆಣ್ಸ್, ಏಲಕ್ಕಿನನೂ ಬೆಳ್ದವೆ.

ಬೆಳ್ತಂಗಡಿ ತಾಲ್ಲೂಕ್‌ಲಿ ಇರ್‌ವ ಕೆಲವ್ ಮುಕ್ಯ ಜಾಗೆಗಳ್‌ಲಿ ಆಲದಂಗಡಿ ಒಂದ್ ಇದ್ ಬೆಳ್ತಂಗಡಿಂದ 12 ಕಿಮೀ ದೂರಲಿ ಉಟ್ಟು ಇಲ್ಲಿ ರಾಣಿ ಮದರಕ್ಕ ಕಟ್ಟ್‌ಸಿದ ಅರ್‌ಮನೆ, ಅದರ ಹಕ್ಕಲೆ ಅರ್‌ದನಾರೀಶ್ವರ ಮತ್ತೆ ಸೋಮನಾತ ದೇಸ್ತಾನಗಳ ಒಂದ್ ಬಸದಿ ಉಟ್ಟು. ಬೈಲಂಗಡಿ ಬೆಳ್ತಂಗಡಿಂದ 22 ಕಿಮೀ ದೂರದಲಿದ್ದ್ ಇಲ್ಲಿ ರಾಣಿ ಸೋಮಲದೇವಿ ಮತ್ತೆ ಅದರ ಗಂಡನ ಗುರ್ಜಿನೊಟ್ಟಿಗೆ ಬೇರೆ ಕೆಲವ್ ಸಮಾದಿಗಳೂ ಒಂದ್ ಬಸದಿನೂ ಉಟ್ಟು. ಬಂಗವಾಡಿಂತೇಳ್‌ವ ಊರ್ ಬೆಳ್ತಂಗಡಿನ ಈಶಾನ್ಯಕೆ 12 ಕಿಮೀ ದೂರದಲ್ಲಿದ್ದ್ ಇದ್ ಬಂಗರಸರ ರಾಜಧಾನಿಯಾಗಿತ್ತ್. ಇಲ್ಲಿಂದ ಕುದುರೆಮುಕ ಪರ್‌ವತಶ್ರೇಣಿನ ನೋಡಕ್. ಚಾರ್‌ಮಡಿ ಬೆಳ್ತಂಗಡಿಗೆ ಮೂಡಲಿ 19 ಕಿಮೀ ದೂರಲಿರ್‌ವ ಗಡಿ ಗ್ರಾಮ. ಇಲ್ಲಿಂದ ಗಾಟಿ ಮಾರ್‌ಗ ಸುರಾಗಿ ಚಿಕ್ಕಮಗಳೂರ್‌ನ ಮೂಡಿಗೆರೆ ತಾಲೂಕ್‌ಗೆ ಸೇರ್‌ದೆ. ದರ್‌ಮಸ್ತಳ ಬೆಳ್ತಂಗಡಿಗೆ 16 ಕಿಮೀ ದೂರಲಿರುವ ಒಂದ್ ಪವಿತ್ರ ಕ್ಸೇತ್ರ. ಇಲ್ಲಿ ಪ್ರಸಿದ್ದ ಮಂಜುನಾಥ ದೇಸ್ತಾನ ಉಟ್ಟು. ಜಮಾಲಾಬಾದ್ ಬೆಳ್ತಂಗಡಿಗೆ 6 ಕಿಮೀ ದೂರದಲ್ಲಿದ್ದ್. ಇಲ್ಲಿ ಟಿಪ್ಪು ತನ್ನ ಅಮ್ಮನ ನೆಂಪುಗಾಗಿ ಕಟ್ಟಿದ ಕೋಟೆನ ಒಳ್ಕಡೆಗ ಉಟ್ಟು. ಬೆಳ್ತಂಗಡಿಗೆ 24




ಕಿಮೀ ದೂರಲಿರ್‌ವ ನಾರಾವಿ ಲಿ ಸೂರ್‌ಯ ಮತ್ತೆ ಸ್ಕಂದ ದೇಸ್ತಾನಗ ಉಟ್ಟು. ತೋಟತೊಡಿ ಬೆಳ್ತಂಗಡಿನ ಮೂಡಕೆ 19 ಕಿಮೀ ದೂರದಲ್ಲಿದ್ದ್ ಇಲ್ಲೊಂದ್ ಸರೋವರವುಟ್ಟು. ಬೆಳ್ತಂಗಡಿಗೆ 19 ಕಿಮೀ ದೂರಲಿರುವ ವೇಣೂರ್‌ಲಿ 38' ಅಡಿ ಎತ್ತರದ ಹೆಸ್ರ್‌ವಾಸಿಯಾದ ಗೊಮ್ಮಟ ವಿಗ್ರಹ ಮತ್ತೆ ಹಿಂದೆನ ಕಾಲದ ಅರಮನೆ ಮತ್ತೆ ಕಟ್ಟಣಗಳ ಒಳ್ಕಡೆಗಳು ಇಲ್ಲಿ ಉಟ್ಟು.

ಬೆಳ್ತಂಗಡಿ ತಾಲೂಕ್‌ನ ತಾಲೂಕ್ ಕೇಂದ್ರ ಮಂಗ್ಳೂರ್‌ನ ಮೂಡಕ್ಕೆ ಸು. 60 ಕಿಮೀ ದೂರಲಿ ಉಟ್ಟು. ಇಲ್ಲಿರುವ ಒಟ್ಟ್ ಜೆನಸಂಕೆ 7, 305. ಇಲ್ಲಿ ಹಳೆಕಾಲದ ಸೋಮನಾತ ದೇಸ್ತಾನ, ಒಂದ್ ಬಸದಿ ಮತ್ತೆ ಹಳೇಕೋಟೆಯ ಅವಶೇಸ ಒಳ್‌ಕಂಡ್‌ವುಟ್ಟು.

ಬೆಳ್ತಂಗಡಿ ಬಾರಿ ಪೊರ್‌ಲ್‌ನ ಜಾಗೆ. ಇಲ್ಲಿರ್‌ವ ಪ್ರವಾಸಿ ಮಂದಿರಲಿ ಕುದ್ದ್ ಪೊಡ್‌ವಗಟ್ಟಗಳತ್ತ ಕಣ್ಣ್ ಹಾಯಿಸಿರೆ ಕುದುರೆಮುಕ ಶಿಕರ, ಬಂಡಾಜೆ ಜೋಗ್ ಮತ್ತೆ ಕುದುರೆಮುಕದ ಮರಿಯಂಗೆ ಇರ್‌ವ ಗಡಾಯಿಕಲ್ಲ್ ಕಂಡದೆ. ಬೆಳ್ತಂಗಡಿಂದ ಕಾರ್ಕಳ, ಮಂಗ್ಳೂರ್ ಚಿಕ್ಕಮಗಳೂರ್‌ಗೆ ಹೋಕೆ ಲಾಯ್ಕ್‌ನ ದಾರಿ ಉಟ್ಟು.

**ಬೆಳ್ಳಾರೆ :** ದಕ್ಷಿಣಕನ್ನಡ ಜಿಲ್ಲೆನ ಸುಳ್ಯ ತಾಲೂಕ್‌ಲಿರುವ ಒಂದ್ ಪೇಟೆ. ಇದ್ ಸುಳ್ಯಂದ 18 ಕಿಮೀ ಹಂಗೆನೆ ಪುತ್ತೂರ್‌ಂದ 26 ಕಿಮೀ ದೂರಲಿಟ್ಟು. ಇದ್ ಬೌಗೋಳಿಕ ಆಗಿ 12ಲಿ40 75ಲಿ22 ರ್‌ಲಿ ಬಂದದೆ. ಇಲ್ಲಿ ಸುಮಾರ್ 50, 000 ಜೆನಸಂಕೆ ಉಟ್ಟು. 'ಬೆಳ್ಳಾರೆ' ತೇಳ್ವ ಹೆಸ್ರ್ ಜಲವಾಚಕಂದ ಬಂದುಟು. ಇಲ್ಲಿ ಇರ್‌ವ ಗೌರಿ ಹಳ್ಳದ ನೀರ್ ಮಳೆಗಾಲಲಿ ಉಕ್ಕಿ ಹರ್‌ದದೆ. ತುಳುಲಿ ಬೊಳ್ಳ ಏರುನ ಜಾಗೆನೆ ಬೊಳ್ಳ ಏರ್>ಬೆಳ್ಳಾರೆ ಆಗುಟು.

ಇದ್ ಐತಿಹಾಸಿಕ ಆಗಿ ನಾಲ್ಕ್ ಮಾಗಣೆಗಳ ಮುಕ್ಯ ಜಾಗೆಯಾಗಿತ್ತ್. ಇದ್ ಬಲ್ಲಾಳ ವಂಸದವರ ಮೂಲಜಾಗೆ ಆಗಿದ್ದ್ ಅವು ಕಟ್ಟ್‌ಸಿದ ಬಸದಿ ಈಗಲೂ ಉಟ್ಟು. ಇಕ್ಕೇರಿನ ವೆಂಕಟಪ್ಪ ನಾಯಕ ಇಲ್ಲಿ ಕೋಟೆ ಕಟ್ಟಿಸಿತ್. ಮುಂದೆ ಇಕ್ಕೇರಿನ ನಾಯಕರ್ ಈ ನಾಲ್ಕ್ ಮಾಗಣೆಗಳ ಕೊಡಗ್‌ನ ರಾಜರ್‌ಗೆ ಒಪ್ಪುಸಿದೊ. 1775 ರ್‌ಲಿ ಟಿಪ್ಪು ಸುಲ್ತಾನ ಇದರ ವಶಪಡ್ಸಿಕಂಡರೂ ಅಂವನ ಕಾಲ ಮುಗ್ದ ಮೇಲೆ 1799ರ್‌ಲಿ ಬ್ರಿಟಿಸರ್ ಇದರ ಕೊಡಗ್‌ನ ರಾಜರ್‌ಗೆ ತಿರ್‌ಗ್‌ಸಿ ಕೊಟ್ಟ.

ಬೆಳ್ಳಾರೆನ ಮೂಡಕೆ ಗೌರಿ ಹಳ್ಳ ಹರ್‌ದದೆ. ಇದ್ ಬಂಟಮಲೆನ ಬಡಗಲಿ ಹುಟ್ಟಿ ಹಂಗೇ ಬೆಳ್ಳಾರೆ ಕಡೆಂದ ಹರ್‌ಕಂಡ್ ಹೋದೆ. ಮುಂದೆ ಪುತ್ತೂರ್ ತಾಲೂಕ್‌ನ ಸರ್‌ವೆನ ಹಕ್ಕಲೆ ಕುಮಾರದಾರ ಹಳ್ಳನ ಸೇರ್‌ದೆ. ಹೆಚ್ಚ್ ಮಳೆ ಬೀಳ್‌ವ ಪ್ರದೇಸಾಂತೇಳಿಕಂಡ್ ಕರ್‌ಸಿಕಂಬ ಈ ಊರುಲಿ ಸರಾಸರಿ 4, 058 ಮಿಮೀ ಮಳೆ ಬಿದ್ದದೆ. ಇಲ್ಲಿ ಬತ್ತ, ಅಡ್ಕೆ, ತೆಂಗ್, ಗೇರ್‌ಬೀಜ, ಮೆಣ್ಸ್, ಏಲಕ್ಕಿನನೂ ಬೆಳ್ದವೆ.

**ಬೇಟೆ :** ಹೊಟ್ಟೆಪಾಡ್ ಮತ್ತೆ ಸ್ವ ರಕ್ಸಣೆನ ಕಾರಣಕೆ ಬೇಟೆ ಸುರು ಆಗುಟುತ ಅಂದಾಜಿ ಮಾಡಕ್. ಸುಳ್ಯ ಪರಿಸರಲಿ ರಣ ಕಾಡ್‌ಗ, ಮಲೆಗ ಇರ್‌ದರ್‌ಂದ ಅಲ್ಲಿನ ಜೀವನಕ್ರಮಲಿ ಬೇಟೆ ಸಾಮಾನ್ಯ ಕೆಲ್ಸ ಕಾರ್‌ಯ ದಿನಗ ಆಗುಹೋಗುನೊಟಿಗೆ ಸೇರಿಕಂಡುಟು. ಪೂಮಲೆ, ಎಲಿಮಲೆ, ಕರಿಮಲೆ, ಬೇಂಗಮಲೆ, ಬಂಟಮಲೆ, ಕುಮಾರಪರ್‌ವತ,ಚೋನಪ್ಪಾಡಿ, ಕೋಳಿಕಮಲೆ ಇದೆಲ್ಲಾ ದೊಡ್ಡಾ ಕಾಡ್‌ಮಲೆಗ. ಇಂತ ಮಲೆಗಳೊಟಿಗೆ ಅಲ್ಲಲ್ಲಿ ಕಾಂಬ ನೆರೆಕರೆ ಸಣ್ಣಪುಟ್ಟ ಕಾಡ್ ಗುಡ್ಡೆಗಳ್‌ಲಿನು ಕಾಡು ಮೃಗಂಗ ಒಳೊ. ಈ ಕಾಡ್ ಕರೆಲಿ ಮನೆ ಕಟ್ಟಿಕಂಡ್ ಬೊದ್ಕೆಂಡಿರ್‌ವ ಗೌಡ್ರು ಸ್ವಯಂರಕ್ಸಣೆಗೆಂತ ಬೇಟೆ ಆಡುವೆ, ತಿಂಬಕಾಗಿನೂ ಬೇಟೆ ಆಡುವೆ. ರಕ್ಸಣೆನ ಕಾರಣಗಳ್‌ಂದ ಕೊಂದ ಪ್ರಾಣಿಗಳ ಆಹಾರ ಆಗಿದ್ ಬಳ್ಸುವ ಕ್ರಮನೂ ಉಟ್ಟು. ಆದರೆ ಈಚೆನ ದಿನಗಳ್‌ಲಿ ಮೃಗಂಗಳ ಸಂರಕ್ಸಣೆನ ಬಗ್ಗೆ ತಿಳ್‌ವಳ್ಕೆ ಹೆಚ್ಚಿರ್‌ದರ್‌ಂದ ಬೇಟೆ ಕಡ್ಮೆ ಆಗುಟು. ಕಾಡ್ ನಾಸ, ಕಾಡ್‌ಗೆ ಆಗಾಗ ಕಿಚ್ಚಿ ಬೀಳ್ದರ್‌ಂದಳೂ ಕಾಡ್ ಮೃಗಂಗ ಕಮ್ಯಾಗೊಳೊ. ನಾ 1960ರ ದಸಕಲಿ ಬಂಟಮಲೆಲಿ ಕಾಣ್‌ತ್ತಿದ್ದ, ಸುಮಾರ್ ಬಗೆನ ಪ್ರಾಣಿಗ (ಉದಾ : ಅಣ್ಕ್. –ಚಿಪ್ಪು ಹಂದಿ), ಪಕ್ಸಿಗ (ಉದಾ : ಹೊಟ್ಟ : ಗ್ರೇಟ್ ಹಾರ್‌ನಬಿಲ್), ಹಾವುಗ (ಉದಾ : ಕೃಸ್ಣ ಸರ್ಪ), ಮರಂಗ (ಉದಾ : ಬೀಟಿ ಮರ), ಈಗ ಅಸ್ತೇನ್ ಇಲ್ಲೆ.

ಪೂಮಲೆ, ಕೋಳಿಕಮಲೆ ಮತ್ತೆ ಬಂಟಮಲೆಗಳ್‌ಲಿ ಹುಲಿ ಮತ್ತೆ ಚಿರತೆಗ ಇದ್ದರೆ, ಬಳ್ಪದ ಕಾಡ್ ಹಾಂಗೆ ಕುಮಾರ ಪರ್‌ವತದ ಕರೆಲಿ ಆನೆಗ ಒಳ. ಅದಲ್ಲದೆ ಸುಳ್ಯದ ಪೇಟೆಗೆ ಹಕ್ಕಲೆಲೆ ಇರ್‌ವ ನೆರೆ ಕರೆ ಕಾಡ್‌ಗ ಆದ ಆಲೆಟ್ಟಿನ ಚೋನಪ್ಪಾಡಿ ಮತೆ ದೇಸಮಲೆ ಕಾಡ್‌ಲಿ ಆನೆಗ ಜಾಸ್ತಿ ಒಳೊ. ದನ ಸಾಂಕಾಣೆ ಪ್ರದಾನ ಆಗಿರ್‌ವ ಗೌಡ್ರ್‌ಗೆ ಹುಲಿಗಳ್‌ಂದ ಉಪದ್ರ ಹೆಚ್ಚ್. ಬತ್ತದ ಕ್ರಿಸಿಗೆ ಮತ್ತೆ ಅಡ್ಕೆ, ಬಾಳೆ ತೋಟಕೆ ತೊಂದರೆ ಕೊಡುವಂತ ಪ್ರಾಣಿಗ ಆನೆ ಮತ್ತೆ ಕಾಡು ಹಂದಿ, ಇದರ್‌ಲಿ ಕಾಡ್ ಹಂದಿನ ಮಾಸ ಮಾತ್ರ ತಿಂಬಕಾವಂತದ್.

ಮೀನ್ ಬೇಟೆ ಮತ್ತೆ ಬೇರೆ ಕೆಲವ್ ಪ್ರಾಣಿಗಳ ಬೇಟೆನ ತಿಂಬಕೆತೇಳಿದೇ ಮಾಡ್‌ವೆ. ಸುಬ್ರಹ್ಮಣ್ಯಲಿ ಹುಟ್ಟಿ ಪಡ್ವಕೆ ಮೋರೆ ಮಾಡಿ ಹರಿವ ಕುಮಾರದಾರಾ ಹಳ್ಳ ಹಾಂಗೆ ಅದರ ಉಪನದಿಗಳ್‌ಲಿ ಮತ್ತೆ ಸುಳ್ಯ ಪೇಟೆನ ಕರೆಲಿ ಹರ್‌ದ್ ಹೋವ ಪಯಸ್ವಿನಿ ಹಾಂಗೆ ಅದರ ಉಪನದಿಗಳ್‌ಲಿ ಬೇರೆ ಬೇರೆ ಜಾತಿನ ಮೀನ್‌ಗ ದಾರಾಳ ಸಿಕ್ಕುವೆ. ಇದೆಲ್ಲದರ ಗೌಡ್ರುಗ ತಿಂಬಕೆಂತ ಹಿಡ್ದವೆ. ಕಾಡ್‌ಲಿ ಸಿಕ್ಕ್‌ವ ಮೊಲ, ಹೊಳ್ಕೆ ಕಡವೆ ಇಂತದೆಲ್ಲ ತಿಂಬಕಾವಂತದ್. ಹಕ್ಕಿ ಬೇಟೆನೂ ಆಹಾರದ ಕಾರಣಕ್ಕಾಗಿದೆ ಒಳದ್. ಸುಳ್ಯ ಪರಿಸರದ ಕಾಡ್‌ಲಿ ಹೆಚ್ಚಿಗೆ ಕಾಂಬಕೆ ಸಿಕ್ಕ್‌ವ ಕಾಡ್‌ಕೋಳಿ, ಮೊಂಟೊಳು/ಮೋಂಟುಕುಳ್ಳ ಇಂತೆಲ್ಲ ಹಕ್ಕಿಗಳ ಬಲೆ ಮತ್ತೆ ಉರ್ಳ್ ಹಾಕಿ ಹಿಡ್ದ್ ತಿನತಿದ್ದೊ.

**ರಕ್ಸಣೆಗಾಗಿ ಬೇಟೆ :** ಸ್ವ ರಕ್ಸಣೆನ ಉದ್ದೇಸಂದ ನಡೆವ ಈ ಬೇಟೆಲಿ ಸತ್ತ ಪ್ರಾಣಿನ ಆಹಾರ ಆಗಿ ತಿಂಬೊದುಲೆ. ಹುಲಿ ಮತೆ ಚಿರತೆ ಬೇಟಿ ಆ ಬೇಟೆಗಳ ಈ ಪಾಲ್‌ಗೆ ಸೇರುವೆ.

ಹುಲಿ ಬೇಟೆ ಇದ್ ಬಾರಿ ಅಪಾಯಕಾರಿ ಬೇಟೆ. ಬೇಟೆಗಾರ ಇಲ್ಲಿ ಎಚ್ಚರಿಕೆಂದ ಇದ್ದದೆ. ಹುಲಿ ಕಣ್ಣ್ ಕೆಬಿ ಬಾರಿ ಚುರುಕಾಗಿರ್‌ದರ್‌ಂದ ಬೇಟೆಗಾರ ತುಂಬ ಸೂಕ್ಸ್ಮ ಆಗಿ ಗುರಿಗೆ ನಿತ್ತದೆ. ಹಣೆಗೆ ಬ್ಯಾಟರಿನ ಕಟ್ಟಿಕಂಡ್ ಹೋವ ಮಾಮೂಲೀ ಬೇಟೆಗೆ ಹುಲಿ ಎದ್‌ರ್ ಸಿಕ್ಕುದು ಕಡಿಮೆ. ಸಿಕ್ಕಿರೆ ಗುಂಡು ಹಾರ್‌ಸಿ ಹುಲಿನ ಕೊಲ್ಲುದು ಸುಲಬ. ಹುಲಿ ಎದುರ್‌ಗೆ ಸಿಕ್ಕದಿರಿಕನ ಮಾತ್ರ ಹುಲಿ ಹೊಡೆವ 'ಅಟ್ಟಣೆ' ಕಟ್ಟುವೆ. ಅಟ್ಟಳಿಕೆ ಅಲ್ಲೊ ಅಟ್ಟಣೆ ಕಟ್ಟುವ ಜಾಗೆನ ಹುಡ್ಕುದೇ ಬಜ್ಜದ ಕೆಲ್ಸ. ಹುಲಿ ದಿನಂಪ್ರತಿ ಅಡ್ಡಾಡ್‌ವ ಜಾಗಲಿ ಅಲ್ಲೊ ಹುಲಿ ಈಗಾಗಲೇ ಯಾದಾದರ್ ಒಂದ್ ಪ್ರಾಣಿನ ಕೊಂದಿದ್ದಲ್ಲಿ ಆ ಜಾಗೆಲಿ 'ಅಟ್ಟಳಿಕೆ' ಕಟ್ಟುವೆ. ಸರ್‌ಯಾದ ಮರ ಒಂದರ ಆರ್‌ಸಿ, ಅದರ್‌ಲಿ ನೆಲಂದ ಸುಮಾರ್ 15 ರಿಂದ 20 ಅಡಿ ಎತ್ತರಲಿ ಬೆದ್ರ್ ಇಲ್ಲರೆ ಮರದ ಗೆಲ್ಲ್‌ಗಳ ಬಿಗ್ದ್ ಇಬ್ಬೊರು ಕುದ್ರ್‌ವಸ್ಟ್ ಅಗಲದ ಜಾಗೆ ಮಾಡ್‌ವೆ. ಇದರ ಅಟ್ಟಳಿಕೆ' ತೇಳುವೆ. ಹಿಂಬೋತು ಆಕಂಡ್ ಇದ್ದಂಗೆ ಬೇಟೆಗಾರ ಬೆಡಿ ಸಮೇತ ಅಟ್ಟಳಿಕೆ ಹತ್ತಿ ಕುದ್ದದೆ. ಎಲೆಡ್ಕೆಸ ತಿನದೆ, ಜೋರಾಗಿ ಉಸ್ರ್ ಬುಡದೆ, ಕೆಮ್ಮು ಬಂದರೂ ಒಳಗೊಳಗೇ ತಡ್‌ಕಂಡ್, ಬೇಟೆಗಾರ



ಬೇಟೆ

ಜಾಕ್ರತೆಂದ ಕುದ್ದಿದ್ದದೆ. ತಾನ್ ಕೊಂದು ಹಾಕಿದ ಪ್ರಾಣಿನ ಮಾಸನ ತಿಂಬಕೆ ಬಂದ ಹುಲಿನ 'ಅಟ್ಟಳಿಕೆಂದನೆ ಗುಂಡ್ ಹೊಡ್ದ್ ಹೊಣ್ಕ್‌ಸುವೆ. ಹಿಂಗೆ ಗುಂಡ್ ಹೊಡೆಕಾಕನ ಸಾಮಾನ್ಯ ಆಗಿ ಬೆಳ್ಕ್ ಹಾಕುದುಲೆ. ತಿಂಗಳ್ ಬೊಳ್ಪಾದರೆ ಆ ಬೊಳ್ಪು ಸಾಕಾದೆ. ಇಲ್ಲರೆ ಸಬ್ದ ಅಂದಾಜಿ ನೋಡಿಕಂಡ್, ಹುಲಿನ ಹೊಡ್‌ದವೆ. ಹುಲಿ ಮೊಯಿಂಸರ ವಾಸನೆನ ಗ್ರಹಿಸುವ ಕಾರಣ ಆ ಎಚ್ಚರನೂ ಇಲ್ಲಿ ಅಗತ್ಯ. ಸುಳ್ಯದ ಹಕ್ಕಲೆನ ಕುಡೆಕಲ್ಲು ಅಪ್ಪಯ್ಯ ಗೌಡ್ರು 40ಕ್ಕೂ ಹೆಚ್ಚ್ ಹುಲಿಗಳ ಹೊಡ್ದುರ್‌ಳಿಸಿ ಹೆಸ್ರ್ ಮಾಡ್ದ ದಂತಕತೆ. ಹುಲಿನ ಕೊಂದ್ ಹಾಕಿದ ಪ್ರಾಣಿಗೆ ವಿಸ ಕಲ್ಸಿಸಿರೆ ಅದರ ತಿಂದ್‌ದು ಹುಲಿ ಸತ್ತದೆ. ಆದರೆ ವಿಸದ ವಾಸನೆನ ಗ್ರಹಿಸಿ ಮಾಸನ ತಿನ್ನದೆ ಹುಲಿನ ಹಿಂದೆಗೆ ಹೋದೆ ಹೆಚ್ಚಿ. ದನಗಳ್‌ನ ತಿಂಬ ಹುಲಿಗ ಇನ್ನೂ ಸುಳ್ಯ ಪರಿಸರದ ಕಾಡುಲಿ ಇರುದರ್‌ಂದ ಈ ಬೇಟೆ ಈಗಲೂ ತನ್ನ ಅಸ್ತಿತ್ವನ ಒಳ್‌ಸಿಕಂಡುಟು.

**ಆನೆ ಬೇಟೆ :** ಕುಮಾರಪರ್‌ವತ ಮತ್ತೆ ಬಳ್ಳದ ಕಾಡ್‌ಗಳ್‌ಲಿ ಕಾಡಾನೆಗ ಒಳೊ. ಇವ್ ಇರ್‌ಲ್ ಹೊತ್ತ್ ಗದ್ದೆ ಇಲ್ಲರೆ ತೋಟಕ್ಕೆ ಹುಗ್ಗಿ ಕ್ರಿಸಿಕರಿಗೆ ತುಂಬಾ ಉಪದ್ರ ಮಾಡ್‌ವೆ. ಚಾಳೆ ಹೊಡಿ ಮಾಡಿ ಗದ್ದಲ ಎದ್ದುರ್‌ಸುವೆ. ಗದ್ದೆ ಇಲ್ಲರೆ ತೋಟಗಳ್‌ಲಿ ಕಿಚ್ಚಿ ಹೊತ್ತ್‌ಸಿ, ಆನೆಗಳ್‌ನ ಹೆದರ್‌ಸಿ ಓಡ್ಸುವ ತಂತ್ರನ ಕೆಲವ್ ಗೌಡ್ರುಗ ಉಪಯೋಗಿಸಿರೆ, ಇನ್ನು ಕೆಲವ್ ಗುಂಡು ಹಾರ್‌ಸಿ ಆನೆಗಳ್‌ನ ಓಡ್ಸವೆ.

ಆನೆನ ಕೊಲ್ಲುದು ಕಾನೂನುಲಿ ವಿರೋದ ಆಗಿರ್‌ದರ್‌ಂದ ಈಗ ಆನೆ ಬೇಟೆ ನಿತ್ತ್ ಹೋಗುಟು. ಬಳ್ಳದ ಕಾಡು ಇಡಿ ನಾಶ ಆಗಿ ಅಲ್ಲಿ ರಬ್ಬರ್ ಬೆಲ್ದ ಆ ಪರಿಸರಲಿ ಆನೆಗಳೇ ಇಲ್ಲೆ. ಕುಮಾರ ಪರ್‌ವತಕ್ಕೆ ಪ್ರತಿ ವರ್‌ಸನೂ ಕಿಚ್ಚಿ ಬಿದ್ದ್, ಕಾಡ್ ಕಡ್ಮೆ ಆದರ್‌ಂದ ಆನೆಗಳ ಸಂಕೆ ಅಲ್ಲಿನು ಕಮ್ಮ್ಯಾಗುಟು.

**ಸಂರಕ್ಸಣೆ ಮತ್ತೆ ಆಹಾರಕ್ಕಾಗಿ ಬೇಟೆ :** ಸುಳ್ಯ ಪರಿಸರದ ಕಾಡುಗಳ್‌ಲಿ ಹಂದಿಗ ಜಾಸ್ತಿ ಒಳೊ. ಇವು ಗದ್ದೆಗೆ ಹುಗ್ಗಿ ಬತ್ತನ ತಿಂದ್ ಹಾಳ್ ಮಾಡ್‌ವೆ. ತೋಟಗಳಿಗೆ ಇಳ್ದ್ ಬಾಳೆ, ಚಾಳೆ ಮತ್ತೆ ಕಮ್ಮುನ ದೈಗಳ ಬುಡ ಚಬ್ಬಿದ್ ಮೇಲೆ ಕೆಳೆಗೆ ಮಾಡ್‌ವೆ. ಈ ತೊಂದರೆನ ನಿಲ್ಸುದಕೆ ಗೌಡ್ರು ಹಂದಿ ಬೇಟೆಯಾಡುವೆ. ಬೇಟೆಲಿ ಸಿಕ್ಕಿದ ಹಂದಿ ಮಾಸನ ತಿಂಬೊತ್ತಿದ್ದೊ. ಹಿಂಗೆ ಎರಡ್ ದ್ರಿಸ್ಟಿಂದ ಹಂದಿ ಬೇಟೆ ಸುಳ್ಯ ಪರಿಸರಲಿ ತುಂಬಾ ಜೆನಪ್ರಿಯ ಆಗುಟು. ಹಂದಿ ಬೇಟೆಲಿ ಒಟ್ಟ್ ಐದು ಬಗೆಗ ಒಳೊ. 1. ಬೆಡಿಕಟ್ಟುದು, 2. ನೆಲಬಾಂಬು ಇಸುದು, 3. ಲೈಟು ಹಾಕಿ ಹೊಡಿದು, 4. ಉರ್‌ಲ್ ಹಾಕಿ ಹಿಡಿದು, 5. 'ಕಳು' ತೋಡುದು/ ಕೆಡ್ಡ ತೋಂಡುದು

**ಬೆಡಿ ಕಟ್ಟುದು :** ಗದ್ದೆಲಿ ಬತ್ತ ಬೆಳೆತಿದ್ದಂಗೆ ಅದ್ಕೆ ಕಾಡ್ ಹಂದಿಗ ಬಾಕೆ ಸುರ್‌ಮಾಡ್‌ವೆ. ಇರ್‌ಲಿಡಿ ಪಾರ ಕುದ್ರಿಕೆ ಬಜ್ಜ ಆದರ್‌ಂದ ಕಾಡು ಹಂದಿಗಳ ಕೊಲ್ಲಿಕೆ ಬೆಡಿ ಕಟ್ಟುವೆ. ಗೌಡ್ರು ಇದರ 'ಬೆಡಿ ಕಟ್ಟುದು' ತೇಳುವೆ. ಇಲ್ಲಿ ಬೆಡಿ ತೇಳ್‌ರೆ ಕೋವಿ. ಬೆಡಿ ಕಟ್ಟ್‌ಕೆ ಸರಿ ಆದ ಜಾಗೆನ ನೋಡಿಕಂಡವೆ ಸಾಮಾನ್ಯ ಆಗಿ ಹಂದಿಗ ಒಂದೇ ಜಾಗೆಲಿ ಹೋದು ಬಾದು ಇದ್ದದೆ. ಹಿಂಗಾಗಿ ಬೆಡಿ ಕಟ್ಟಿಕೆ ಅದೆ ಸರಿಯಾದ ಜಾಗೆ. ಆ ದಾರಿಗೆ 'ಪೊರಿ' ತೆಳಿ ಹೆಸ್ರ್, ಪೊರಿಂದ ಸುಮಾರ್ ಮೂರು ಮೀಟರ್ ದೂರಲಿ ಸಮಾನ ಆಗಿ ಎರಡ್ ಕರೆಗೆ ಕಂಬಗಳ ಊರಿ, ಅದರ ಜೋಡ್ಸುವಂಗೆ ಅಡ್ಡಕೆ ತಟ್ಟೆ ಒಂದರ ಕಟ್ಟುವೆ. ಈ ತಟ್ಟೆನ ಮೇಲೆಗೆ ಬೆಡಿನ, ಅದರ ಮೋರೆ 'ಪೊರಿ'ಗೆ ಎದುರಾಗಿರುವಂಗೆ ಗಟ್ಟಿ ಬಿಗ್ದವೆ. ಬೆಡಿ ನೆಲಂದ ಸುಮಾರ್ ಒಂದೂವರೆ ಅಡಿಂದ ಎರಡ್ ಅಡಿ ಎತ್ತರಲಿ ಇರೋಕು. 'ಪೊರಿ' ಲಿನು ಒಂದ್ ಸಣ್ಣಗೂಟ (ಕಂಬ)ನ ಹುಗ್ದ್, ಅದ್ಕೆ ಒಂದ್ ಬೊಳ್ಳಿ ಕಟ್ಟಿ, ಆ ಬೊಳ್ಳಿನ ಇನ್ನೊಂದ್ ಕೊಡಿನ ಬೆಡಿನ 'ಕುದುರೆ'ನ ಕೆಳೆಗಿರುವ 'ಕಳ್ಳ' ಕೆ ಬಿಗ್ದವೆ. 'ಕುದುರೆ'ನ ಎಳ್ದ್ ತಯಾರ್ ಮಾಡಿ ಈಡ್‌ಗಾರರ್ ಮನೆಗೆ ಹೋದವೆ. ಹಂದಿಗ 'ಪೊರಿ'ನ ದಾಟಿಕಾಕನ ಬೊಳ್ಳಿಗೆ ಎಡ್ಗಿಕನ ಬೊಳ್ಳಿ ಮುಂದೆಗೆ ಜಗ್ಗಿದೆ. ಆಕ ಬೊಳ್ಳಿ




ಎಳಿದರ್‌ಂದ ಇನ್ನೊಂದು ಕೊಡಿಲಿ ಕಟ್ಟಿದ ಬೆಡಿನ 'ಕಳ್ಳ'ನ ಹಿಂದೆಗೆ ಜಗ್ಗುದರ್‌ಂದ ಗುಂಡು ಹಾರ್‌ದೆ.ಕಣ್ಣ್ ಮುಚ್ಚಿ ಬುಡಿಕೆ ಮುಂದೆ ಹಂದಿ ಟಮ್ಮಂತೇಳಿದ್ ನೆಲಕ್ಕೆ ಹೊಣ್ಕಿದೆ. ಗುಂಪುಲಿ ಹಂದಿಗ ಬಂದರೆ ಒಳ್ದ ಹಂದಿಗ ಓಡ್‌ವೆ. ಗುಂಡುನ ಸಬ್ದ ಕೇಳಿ ಎದ್ದ್ ಬಾವ ಜೆನಂಗ ಮುಂದೆನ ಕೆಲ್ಸ ಮಾಡ್‌ವೆ.

ಈ 'ಬೆಡಿ ಕಟ್ಟುದು' ತುಂಬ ಅಪಾಯದ ಬೇಟೆ. ಮೊಯಿಂಸರ್, ದನಂಗ, ನಾಯಿಗ ಸೆನಿ ಹಿಡ್ದ್ ಆ ದಾರಿಲಿ ಹೋದರೆ ಇದ್ಕೆ ಬಲಿ ಆದುಟ್ಟು. ಆದರೂ ಈ ಬೇಟೆಗೆ ಸ್ರಮ ಕಡ್ಮೆ. ಒಬ್ಬನೇ ಇದ್ದರೆ ಸಾಕ್. ಅಂವ ಮಾತ್ರ ತುಂಬಾ ಸೂಕ್ಷ್ಮ ಸ್ವಬಾವದವನಾಗಿದ್ದ್ ಹಂದಿ ಬಂದ್ ಹೋದರ ಗ್ರಹಿಸಿಕಂಬಸ್ಟ್ ಜಾಣ ಆಗಿರಕು. ಸಾಮಾನ್ಯ ಆಗಿ ಇರ್‌ಲ್ ಗಂಟೆ ಎಂಟರ ಮೇಲೆ 'ಬೆಡಿ' ಕಟ್ಟಿ ಬೊಳ್ವಾಕೆ ಮುಂದೆ ಅದರ್‌ನ ಬಿಚ್ಚಿ ಬುಟ್ಟವೆ. ಈ ಬೇಟೆಲಿ ಒಂದೇ ಮೃಗ ಸಿಕ್ಕುದು. ಅದೂ ಕಟ್ಟ್‌ಕಾಕನ ಚೂರ್ ಹೆಚ್ಚಿ ಕಮ್ಮಿ ಆದರೆ ಆಯ ತಪ್ಪಿರೆ ಗುಂಡು ಎಲ್ಲಿಗೆ ಹೊಡಿದು

**ನೆಲಗುಂಡ್ –ನೆಲಬಾಂಬು :** ವಿಸೇಸ ಆಗಿ ಇದ್ಕೆಂತೇಳಿದೆ ಮಾಡ್ದ ಬಾಂಬು ತಂದ್ ಗೆಣ್‌ಸ್, ಕಾಯಿ ಇಲ್ಲರೆ ಹಂದಿಗ ತಿಂಬ ಗೆಂಡೆಗಳ ಒಟ್ಟಿಗೆ ನೆಲಲಿ ಇಸುವೆ. ಇದರ 'ಮೊದ್ದಿಸುದು' ತೇಳಿ ಗೌಡ್ರು ಕರ್‌ದವೆ. ಕಾಡುಪ್ರಾಣಿಗ ಅದರ್‌ಲೂ ವಿಸೇಸ ಆಗಿದ್ ಹಂದಿಗ ಬಂದ್ ಗೆಡ್ಡೆಗೆಣ್‌ಸ್‌ಗಳ ತಿಂಬಕಾಕನ ಅದ್ ಸಿಡ್ದ್ ಹಂದಿಯ ತಲೆ ಚೂರು ಚೂರಾದೆ. (ಪಿ.ಬಿ.)

**ಲೈಟ್ ಕಟ್ಟುದು–ಲೈಟ್‌ಗೆ ಹೋದು :** ಲೈಟ್ ಕಟ್ಟುದು ಬ್ಯಾಟರಿಗಳ್‌ನ ಹಣೆಗೆ ಕಟ್ಟಿಕಂಡ್, ಹೆಗ್‌ಲಿಗೆ ಬೆಡಿನ ಏರಿಸಿಕಂಡ್ ಇರ್‌ಲ್ ಹೊತ್ತುಲಿ ನಡ್ಸುವ ಬೇಟೆ ಇದ್. ಹೆಗ್‌ಲಿಲಿ ಇರ್‌ವ ಚೀಲ ಒಂದರ್‌ಲಿ ಈಡ್‌ಗೆ ಬೇಕಾದ ಗುಂಡುಗಳ ಇಸಿಕಂಡವೆ. ಸಾಮಾನ್ಯ ಆಗಿದ್ ಪ್ರಾಣಿಗ ಅಡ್ಡಾಡುವ ಜಾಗೆಲಿ ಹಣ್ಣ್‌ನ ಮರಗ ಇದ್ದರೆ ಅದರ ಬುಡಲಿ ಒಂಣ್ಗಿದ ಬಿತ್ತ್‌ಗ ಇರ್‌ವ ಯಾದೇ ಮರದ ಬುಡಲಿ, ಇವ್ ಅಡ್ಡಾಡುವೆ. ಕಣ್ಣ್‌ಕುತ್ತುವ ಬೊಳ್ಪುನ ದಿಟ್ಟ್‌ಸಿ ನೋಡ್‌ವ ಪ್ರಾಣಿಗಳ 'ಕಣ್ಣ್ ಕೊಟ್ಟುಟು' ತೇಳಿಕಂಡ್ ಗುರಿ ಇಸಿ ಗುಂಡ್ ಹಾರ್‌ಸುವೆ. ಗುರಿ ಸರಿ ಆಗಿದ್ದರೆ ಎರಡ್ ಕಣ್ಣ್‌ಗಳ ನಡುಲಿ ಗುಂಡೇಟ್ ಬಿದ್ದು ಮೃಗ ಸತ್ತದೆ. ಅರೆ ಪೆಟ್ಟಾದರೆ ಆದರ ಹುಡ್ಕೆಂಡ್ ಹೋಗಿ ಮತ್ತೊಮ್ಮೆ ಗುಂಡೊಡ್ದ್ ಕೊಂದವೆ.

ಇಂತ ಇರ್‌ಲ್ ಬೇಟೆನೂ ಅಪಾಯಕಾರಿ. ಕಾಡ್‌ನ ಮೂಲೆ ಮೂಲೆನೂ ಗೊತ್ತಿರುವವ್ ಮಾತ್ರ ಈ ಬೇಟೆ ಆಡ್‌ವೆ. ಕೊಲೆ ಪೀಡೆಗಳ ಬಗ್ಗೆ ನಂಬಿಕೆನ ಹಿನ್ನಲೆಲಿನು ಬೇಟೆ ಬಯಂಕರ ಅನ್ಬವ ಕೊಟ್ಟದೆ. ಬರಿಕಾಲ್‌ಲಿ ನಡೆದರ್‌ಂದ ಹಾವು–ಚೋಳು–ಮುಳ್ಳುಗಳ ಬಗ್ಗೆನೂ ಜಾಗ್ರತೆಂದ ಇರಕಾದೆ. ಇಬ್ಬೊರಿಬ್ಬರ್ ಈ ಬೇಟೆಲಿ ಇದ್ದರ್‌ನೂ ಮಾತಾಡಿಕೆ ಬೊತ್ತಾದರ್‌ಂದ ಮನೆಗೆ ಹೋವಲ್ಲಿವರೆಗೆ ಅವ್ ಮಾತಾಡುದುಲೆ. ಹೊರಿಕಾಗದ ದೊಡ್ಡ ಹಂದಿನೋ, ಕಡವೆನೋ ಹೊಡ್ದರೆ ಅದರ ಅಲ್ಲೇ ಬುಟ್ಟು ಮರ್‌ದಿನ ಜೆನರ ಕರ್‌ಕಂಡ್ ಹೋಗಿ ಬೇಟೆನ ಹೊತ್ತುಕಂಡ್ ಬಂದವೆ. ನಾಯಿಗ ಈ ಬೇಟೆಲಿ ಬಾರಿ ಸಾಕಾರ ಕೊಟ್ಟವೆ. (ಪಿ.ಬಿ.)

**ಉರ್ಳ್ ಹಾಕುದು :** ಹಂದಿನ ಹಿಡಿಯಕೆ ಈ ತಂತ್ರನ ಸುಮಾರ್ ಗೌಡ್ರು ಬಳಸುವೆ. ಸುರುಗೆ ಹಂದಿ ಓಡಾಡ್‌ವ ಪೊರಿನ ಗುರ್‌ತ್‌ಸುವೆ. ಆ ದಾರಿಲಿ ಮೇಲೆ ಅಡ್ಡಕೆ ಏನಾರ್ ಮರದ ಗೆಲ್ಲ್ ಇಲ್ಲರೆ ಗಟ್ಟಿನ ಬೇರ್‌ಗ ಬಂದುಟೋ ತ ಗುರುತು ಹಾಕಿಕೊಂಡವೆ. ಬಲ ಇರ್‌ವ ಕಬ್ಬಿಣದ ಸಲ್ಗೆನ ತಂದ್ ಅದರ ಒಂದ್ ಕೊಡಿಲಿ ಉರ್‌ಲ್ ಹಾಕಿ, ಇನ್ನೊಂದು ಕೊಡಿನ ಮರದ ಬುಡಕೆ ಇಲ್ಲರೆ, ಬೇರ್‌ಗೋ ಗಟ್ಟಿ ಆಗಿ ಕಟ್ಟ್‌ವೆ. ಉರ್‌ಲ್ ಇರ್‌ವ ಬಾಗನ ಹಂದಿ ನಡ್ದಾಡುವ ದಾರಿಗೆ ಅಡ್ಡಕೆ ಇಸಿ, ಅದರ ಎಡ ಬಲಬಾಗಗಳ ದರ್‌ಗ್, ಸೌದೆ ಇಲ್ಲರೆ ಸೋಗೆಗಳ್‌ಂದ ಮುಚ್ಚುವೆ. ಇರ್‌ಲ್ ಅಡ್ಡಾಡ್‌ವ ಹಂದಿ ಉರ್ಳ್‌ನ ಒಳೆಗೆ ನಡೆಕಾಕನ, ಅದರ ಕೈ ಕಾಲ್ ಇಲ್ಲರೆ ದೇಹದ ಯಾದಾರೊಂದ್ ಬಾಗ ಉರ್ಳುಲಿ ಸೆಕ್ಕಿಕಂಡದೆ. ಬುಡ್ಸಿಕಂಬಕೆ ಕೊಡ್ಕಿದರ್‌ಸ್ಟ್ ಉರ್ಳ್ ಗಟ್ಟಿ ಕಾದದೆ. ಉರ್‌ಲ್ ಗಂಟ್ಲ್‌ಗೆ ಸೆಕ್ಕಿಕಂಡರೆ ಹಂದಿ ಸತ್ತ್ ಹೋದೆ. ಹೊಟ್ಟೆ, ಕೈ, ಕಾಲ್, ಸೊಂಟಗಳ್‌ಲಿ ಸೆಕ್ಕಿ ಹಾಕಿಕಂಡಿದ್ದರೆ ದೊಣ್ಣೆಂದ ಬೊಡ್ದ್ ಅಲ್ಲರೆ ಗುಂಡ್ ಹಾರ್‌ಸಿ ಕೊಂದವೆ. ಇದ್ ಹಂದಿ ಹಿಡಿಯಕೆ ಬಳ್ಸುವ ಬಾರಿ ಸುಲ್ಬದ ಕೆಣಿ. (ಪಿ.ಬಿ.)

**ಕಳು ತೋಡುದು – ಕೆಡ್ಡ ತೋಂಡುದು :** ಉಬರಡ್ಕ, ಪೇರಾಲು ಕಡೆಲಿ 'ಕರ್‌ಮ ತೋಡುದು' ತೇಳಿ ಕರ್‌ದವೆ. 'ಕರ್‌ಮ' ತೇಳಿರೆ ಇಲ್ಲಿ ಹೊಂಡ ತೇಳಿ ಅರ್‌ತ. ಹೊಂಡ ತೆಗ್ದ್ ಅದ್ಕೆ ಹಂದಿನ ಬೀಳ್‌ಸಿ ಹಂದಿನ ಹಿಡಿವ ತಂತ್ರನ ಇಲ್ಲಿ ಕಾಣಕ್.

ಸಾಮಾನ್ಯ ಆಗಿ ಗುಡ್ಡೆಂದ ಗದ್ದೆಗೆ ಬಾವ ದಾರಿಲಿ ಸುಮಾರ್ 10 ಅಡಿ ಚಾಳದ ಹೊಂಡ ತೆಗ್ದವೆ. ಹೊಂಡದ ಮೇಲೆಗೆ ತೆಳ್ಳಂಗೆನ ಕಡ್ಡಿಗಳ್‌ನ ಇಸಿ ದರ್‌ಗ್ ಹಾಕಿ ಅದರ ಮುಚ್ಚುವೆ. ನೊಡುಲಿ ಒಂದೆರಡು ಗೆಣ್‌ಸ್‌ನ ಬೊಳ್ಳಿನ ಊರ್‌ವೆ. ಗುಂಡಿ ಬಗ್ಗೆ ಗೊತ್ತಿಲ್ಲದ ಹಂದಿ, ಆ ದಾರಿಲಿ ಬಂದರೆ, ಗೆಣ್‌ಸ್‌ನ ಬೊಳ್ಳಿನ ತಿಂಬಕೆ ತೇಳಿ, ನೆಲನ ಒಕ್ಕಿಕಾಕನ, ಕಡ್ಡಿಗ ಮುರ್‌ದ್ ಹಂದಿ ಹೊಂಡಕ್ಕೆ ಬಿದ್ದದೆ. ಇದ್ ಪೂರಾ ಆನೆನ ಹಿಡೆಕೆ ಮಾಡ್‌ವ 'ಕೆಡ್ಡ'ದ ತಂತ್ರ ನಂಗೇ ಕಂಡದೆ. ನಾಲ್ಕಾರ್ ಹಂದಿಗ ಒಟ್ಟಿಗೆ ಹೊಂಡಕ್ಕೆ ಬೀಳ್‌ದು ಸಾಮಾನ್ಯ ಆಗಿ ಕಂಡ್ ಬಂದದೆ.

ಸುಳ್ಯ ಪರಿಸರಲಿ ಪೂರ ಇಂತ ಸುಮಾರ್ ಹೊಂಡಗಳ್‌ನ ನಾವ್ ಕಾಣಕ್. ಅಪ್ಪಿ ತಪ್ಪಿ ಹೊಂಡಕ್ಕೆ ಮೊಲಗ ಬೀಳ್ದು ಉಟ್ಟು. ಹೊಂಡಕ್ಕೆ ಬಿದ್ದ ಮೃಗನ ಗುಂಡು ಹೊಡ್ದ್ ಕೊಂದವೆ.

ತಿಂಬಕಾಗಿ ಬೇಟೆ : ಬೇಟೆಲಿ ಕೊಂದ ಮೃಗಗಳ ಮಾಸನ ಇಲ್ಲಿ ತಿಂಬಕಾಗಿ ಬಳ್ಸಿಕಂಡವೆ ದೀಪಾವಳಿ, ಕೆಡ್ಡಾಸದಂತ ವಿಸೇಸ ದಿನಗಳ್‌ಲಿ ಇಲ್ಲರೆ ಮನೆಗೆ ನೆಂಟ್ರ್ ಬಂದ ಗೌಜಿನ ದಿನದಂದ್ ಗೌಡ್ರು

ತಿಂಬಕಾಗಿ ಬೇಟೆ ಆಡುವೆ. ಬೇಟೆಲಿ ಬಿರ್‌ಸರ್ ಬೆಡಿ ಇಲ್ಲರೆ ಬೇರೆ ಹತ್ಯಾರ್‌ಗಳಂದ ತಿಂಬಕಾಗಿ ಬೇಟೆ ಆಡುವೆ. ಇಂತ ಬೇಟೆಗಳ ಮೂರ್ ತರಲಿ ನೋಡಕ್ 1. ಕಾಡ್ ಮೃಗಂಗಳ ಬೇಟೆ, 2. ಹಕ್ಕಿ ಬೇಟೆ ಮತ್ತೆ 3. ಮೀನ್ ಬೇಟೆ. (ಪಿ.ಬಿ.)

**ಕಾಡ್ ಪ್ರಾಣಿಗಳ ಬೇಟೆ :** ಕಾಡ್ ಪ್ರಾಣಿಗಳ ರುಚಿನ ಕಂಡ್‌ಕಂಡವು ಅದಾಗಿ ತನ್ನ ತಿಂಬಕೆಂತೇಳಿದ್ ಬೇಟೆ ಆಡುವೆ. ಯಾದಾರ್ ಒಳ್ಳ ದಿನಲಿ, ಹಬ್ಬ ಇಲ್ಲರೆ ಇನ್ಯಾದೆ ಆಚರಣೆನ ಲೆಕ್ಕಲಿ ತಿಂಬಕೆತೇಳಿ ಬೇಟೆ ಆಡುವೆ. ಕೆಲವೊಮ್ಮೆ ಪುರ್‌ಸೋತಿರಿಕಾಕನ ಇರ್‌ಲ್ ಅಲ್ಲರೆ ಹಗಲ್‌ಲಿನು ಬೇಟೆಯಾಡುವೆ. ಇದರ್‌ಲಿ ಎರಡ್ ವಿದಗಳ ನಾವ್ ಕಾಣಕ್ 1. ಇರ್‌ಲ್ ಇಲ್ಲರೆ ಹಗಲ್‌ಲಿ ಒಬ್ಬನೆ ನಡ್ಸುವ ಬೇಟೆ, 2. ಸಾಮೂಹಿಕ ಬೇಟೆ ಮತ್ತೆ– ಕೂಡ್ ಬೇಟೆ 3. ಬಲೆ ಹಾಕುದು.

**ಒಬ್ಬನೇ ನಡ್ಸುವ ಬೇಟೆ :** ಹೆಗಲ್‌ಲಿ ಬೆಡಿನ ಇಸಿಕಂಡ್,ಚೀಲಲಿ ಗುಂಡು ತುಂಬ್‌ಸಿ ಹೆಗಲ್‌ಗೆ ಹಾಕಂಡ್ ಒಬ್ಬ ಒಂಟಿ ಆಗಿದ್ ಕಾಡ್‌ಲಿ ಮೃಗಂಗಳ ಹುಡ್ಕಿಕಂಡ್ ಹೋದೆ. ಇರ್‌ಲ್ ಹೊತ್ತ್‌ಲಿ ಆದರೆ ಬ್ಯಾಟರಿ/ಲೈಟ್ ಒಂದರ ಅಂವ ಹಿಡ್ಕಂಡಿದ್ದದೆ. ಇಲ್ಲರೆ ತನ್ನ ಹಣೆಗೆ ಕಟ್ಟಿಕಂಡಿದ್ದದೆ. ಒಟ್ಟಿಗೆ ನಾಯಿಗಳ್‌ನು ಕರ್‌ಕಂಡೋದೆ. ನಾಯಿಗ ಅಡ್‌ಂಗಿರ್‌ವ ಮೃಗಂಗಳ ಹೊರೆಗೆ ಬಾವಂಗೆ ಮಾಡ್‌ವೆ. ಅದ್ ಬೇಟೆಗಾರಂಗೆ ಕಂಡರೆ ಅಂವ ಗುಂಡ್ ಹೊಡೆಕೆ ಸುಲಬ ಆದೆ. ಇಂತ ಬೇಟೆಲಿ ಸಣ್ಣಸಣ್ಣ ಪ್ರಾಣಿಗ ಮಾತ್ರ ಸತ್ತವೆ. ಅವ್‌ಗಳ ಮಾಸನ ಬೇಟೆಗಾರ ಬೇರೆವ್ಕೆ ಪಾಲ್ ಕೊಡ್ದು ಕಮ್ಮಿ. (ಪಿ.ಬಿ.)

**ಸಾಮೂಹಿಕ ಬೇಟೆ ಕೂಡ್ ಬೇಟೆ :** ಬಿಸು, ಕೆಡ್ಡಾಸ, ಮರೋಟು, ದೀಪಾವಳಿನಂತ ವಿಸೇಸ ದಿನಲಿ ಗೌಡ್ರೆಲ್ಲ ಒಟ್ಟ್ ಸೇರಿ ಕೂಡಿಕಂಡ್ ಬೇಟೆ ಆಡುವೆ. ಒಂದಿನ ಮುಂದೆನೆ ಯಾರಾರ್ ಒಬ್ಬ ಊರವ್‌ಕ್ಕೆಲ್ಲ ಬೇಟೆನ ಸುದ್ದಿ ಹೇಳಿ, ಮಾರ್‌ನೆ ದಿನ ಒಟ್ಟ್ ಸೇರಕಾದ ಜಾಗೆನ ಹೇಳ್‌ವೆ. ಬೇಟೆಲಿ ಕುಸಿ ಇರೋವು ತಮ್ಮ ತಮ್ಮ ಹತ್ಯಾರಗಳ್‌ನ ಹಿಡ್ಕಂಡ್ ನಿಗಂಟ್ ಮಾಡ್ದ ಜಾಗೆಲಿ ಒಟ್ಟು ಸೇರುವೆ. ಬೇಟೆ ನಾಯಿಗಳನು ಕರ್‌ಕಂಡ್ ಬಂದವೆ. ಬೆಡಿಗಳಿಗೆ **'ಈಡ್'** ತುಂಬುಸಿ ತಯ್ಯಾರಿ ಮಾಡ್‌ವೆ. ಇದ್ಯಾದ್ ಇಲ್ಲದವು ಬಡ್ಗೆ ಮತ್ತೆ ಕತ್ತಿನಾರ್ ಹಿಡ್ಕಂಡಿದ್ದವೆ. ಬೇಟೆಲಿ ಒಳ್ಳ ಗೊತ್ತಿರವು ಯಾವ ಜಾಗೆಲಿ ಬೇಟೆಯಾಡಕ್, ಪ್ರಾಣಿಗ ಮತ್ತೆ ಅವ್ ಎದ್ದ್ ಓಡ್‌ವ ಜಾಗೆನ ಗುರ್‌ತ್‌ಸಿಕಂಡವೆ. ಒಂದ್ ಸರಿಯಾದ ಜಾಗೆಲಿ ಪ್ರಾಣಿಗ ಕಾಡ್‌ನ ಒಂದ್ ಪುಡೆಂದ ಇನ್ನೊಂದ್ ಪುಡೆಗೆ ಓಡ್‌ವೆ. ಹಾಂಗೆ ಓಡ್‌ವ ಜಾಗೆನ **'ಗಂಡಿ'** (ಕಂಡಿ) ತೇಳುವೆ. ಗುರಿಲಿ ಉಸಾರ್ ಇರೋವು ಇಂತ ನಾಲ್ಕಾರ್ **'ಕಂಡಿ'**ಗಳ್‌ಲಿ ನಿಲ್ಲುವಂಗೆ ಹೇಳ್‌ವೆ. ಈ ಕಂಡಿಗಳ ಆಯ್ಕೆ ಎಸ್ಟ್ ಸರ್‌ಯಾಗಿದ್ದದೆಂತೇಳಿರೆ ಬೇಟೆ ಸುರಾದ ಹಚ್ಚಾ ಹೊತ್ತ್‌ಲೆ ಅದೇ **'ಕಂಡಿ'**ಲಿ ಪ್ರಾಣಿಗ ಓಡ್‌ವೆ. ಈಡ್‌ನವ ಒಳ್ಳ ಬಿರ್‌ಸ ಆಗಿದ್ದರೆ ಮೃಗ ಸಿಕ್ಕಿದೆ. ಸೇರ್‌ದ ಜೆನಗೆಲ್ಲ ಕಾಡ್‌ನ ಒಂದ್ ಕಡೆಂದ ಇನ್ನೊಂದ್ ಪುಡೆಗೆ ಬೊಬ್ಬೆ ಹೊಡ್‌ಕಂಡ್ ಹೋದವೆ. ನಾಯಿಗಳ್‌ನು ಹಿಡಿಕೂಡ್ಸಿ ಬುಟ್ಟವೆ. ಗರ್‌ನಾಲ್ ಹೊಡ್ಸುವೆ. ದೊಡ್ಡ ದೊಡ್ಡ ಬಲ್ಲೆಂದ ಬಂಡೆಗಳ ಹೊಣ್ಕುಸಿ ಮೃಗಂಗ ಅಡ್‌ಂಗಿದ್ದರೆ ಎದ್ದ್ ಓಡ್‌ವೆಂಗೆ ಮಾಡ್‌ವೆ. ಮೋಟೆಗಳಿಗೆ ಕಲ್ಲುಗಳ ಇಟ್ಟವೆ. ಹಿಂಗೆ ಗದ್ದಲ ಮಾಡಿಕಂಡ್ ನಿಗದಿಪಡ್ಸಿದ ಜಾಗೆಗೆ ಬಂದವೆ. ಈ ಜೆನರ ಗಲಾಟೆಗಳಿಗೆ ಹೆದ್‌ರ್‌ದ ಪ್ರಾಣಿಗ, ಹೆದ್‌ರಿ ಓಡ್‌ವೆ. ಗಂಡಿಲಿ ಬಿಲ್ಲ್ ನಿತ್ತವ್, ಕಾದಿದ್ದವು ಗುಂಡು ಹಾರ್‌ಸುವೆ. ಒಂದೇ ಬೇಟೆಲಿ ಹತ್ತಂದಳು ಹೆಚ್ಚ್ ಹಂದಿಗ ಈಡ್‌ಗೆ ಗುರಿಯಾದುಟ್ಟು ನಾಲ್ಕಾರ್ ಕಡವೆಗನು ಸತ್ತವೆ. ಇಂತ ಸಾಮೂಹಿಕ ಬೇಟೆಗಳ್‌ಲಿ ಸಣ್ಣ ಪ್ರಾಣಿಗಳ್‌ನ ಕೊಲ್ಲುದುಲೆ. ಉದಾ : ಮೊಲ, ಹೊಳಿಂಕ ಇಂತವು.

ಬೇಟೆನ ಕಡೆಗೆ ಕೊಂದ ಪ್ರಾಣಿಗಳೊಟ್ಟಿಗೆ ಒಂದ್ ನಿಗಂಟ್ ಮಾಡ್ದ ಜಾಗೆಲಿ ಒಟ್ಟ್ ಸೇರುವೆ. ಎಲ್ಲವು ಇರ್‌ಕಾಕನ ಮೃಗಂಗಳ ಸಜ್ಜಿ ಮಾಡ್‌ವೆ. ಇದರ **'ಹಜ್‌ರಿ'** ಮಾಡುದು ತೇಳುವೆ.

**'ಹಜ್‌ರಿ'** ಮಾಡಿ ಆದ ಮೇಲೆ ಇಲ್ಲಿ ಎಸ್ಟ್ ಜೆನ ಒಳೊ ತೇಳಿ ತಲೆ ಲೆಕ್ಕ ಮಾಡ್‌ವೆ. ತಲೆಗೊಂದ್ ಪಾಲ್‌ನಂಗೆ ಮಾಸನ ಕೊಟ್ಟವೆ. ಸಣ್ಣವು ಇರ್‌ಲಿ, ದೊಡ್ಡವುಇರ್‌ಲಿ ಒಂದ್ ತಲೆಗೆ ಒಂದ್ ಪಾಲ್ ಕೊಡೊಕೆ. ಈ ದ್ರಿಸ್ಟಿಲಿ ಸಾಮೂಹಿಕ ಬೇಟೆಗೆ ಪ್ರತಿ ಮನೆಂದ ಜಾಸ್ತಿ ಜೆನ ಬಂದ್ ಸೇರಿಕಂಡವೆ. ಬೇಟೆ ಆಡ್ದವಂಗೆ ಮಾತ್ರ ಐದ್ ಪಾಲ್ ಸಿಕ್ಕಿದೆ. ಅದ್ ಕೂಡಾ ದೇಹದ ಮುಕ್ಯ ಬಾಗಂಗ, ತಲೆ, ತೊಡೆ, ಕಣು, ಕರಿಯಟ ಮತ್ತೆ ಬೀವು ಈ ಐದ್ ಬಾಗಂಗ. ಇದರ ಒಟ್ಟಿಗೆ ಒಬ್ಬ ಬೇಟೆಗಾರನಾಗಿ ಅವಂಗೊಂದು ಪಾಲ್, ಮತ್ತೆ ಅಂವನ ಬೆಡಿಗೊಂದ್ ಪಾಲ್, ಹಿಂಗೆ ಒಟ್ಟು ಏಳು ಪಾಲ್ ಈಡುಗಾರಂಗೆ ಸಿಕ್ಕಿದೆ. ಅವ್ಕೆ ಸಿಕ್ಕಿದ ಮಾಸನ ಹಿಡ್‌ಕಂಡ್ ಎಲ್ಲವೂ ಹಿಂತಿರ್‌ಗುವೆ ಈ ಬೇಟೆ ಹಗಲ್‌ಲಿ ಮಾತ್ರ ನಡ್ದದೆ. (ಪಿ.ಬಿ.)

**ಬಲೆ ಹಾಕುದು :** ಬಯಲ್ ಪ್ರದೇಸ ಇರ್‌ವ ಅಜ್ಜಾವರ, ಪೇರಾಲ್, ಮಂಡೆಕೋಲುಗಳಂತ ಕಡೆಗಳ್‌ಲಿ ಕಾಂಬಕೆ ಸಿಕ್ಕ್‌ವ ಬೇಟೆ ಇದ್. ಈ ವಿದಾನಕೆ ಬೆಡಿ ಮತೆ ನಾಯಿಗಳ ಅಗತ್ಯ ಇಲ್ಲೆ. ಸಾಮಾನ್ಯ ಆಗಿ ಮೊಲಗಳ ಹಿಡಿಯಕೆ ಮಾತ್ರ ಬಲೆ ಹಾಕುವೆ. ಪ್ರಾಣಿಗಳ ಹಿಡೆಕೆತೇಳಿದ್ ವಿಸೇಸ ಆಗಿ ತಯ್ಯಾರ್ ಮಾಡ್ದ ಬಲೆನ ಅಗಲಕೆ ಹರ್‌ಂಡ್‌ವೆ. ಬಲೆನ ನಾಕ್ ಮೂಲೆಲಿ ನಾಕ್ ಕಂಬಗಳ ಹಾಕಿ, ಬಲೆನ ಅದ್ಕೆ ಕಟ್ಟುವೆ. ಹುಲ್ಲು ಮೇಯಕೆ ಬಂದ ಮೊಲ ಇಲ್ಲರೆ ಬೇರೆ ಸಣ್ಣ ಪ್ರಾಣಿಗ ಬಲೆಲಿ ಸಿಕ್ಕಿ ಹಾಕಂಡವೆ. ಮತ್ತೆ ದೊಣ್ಣೆಲಿ ಬೊಡ್ದ್ ಅವ್‌ಗಳ ಕೊಂದವೆ. ಕೆಲವ್ ಸರ್‌ತಿ ಪ್ರಾಣಿಗ ಬಲೆನ ಕಚ್ಚಿ ತುಂಡ್ ಮಾಡಿ ತೊಪ್ಪುಸಿಕೊಂಡು ಹೋದವೆ. ಈ ಬಲೆಗಳ ಕಾಪಾಡಿಕೊಂಬದು ಕೂಡಾ ಬಾರಿ ದೊಡ್ಡ ಕೆಲ್ಸನೆ. (ಪಿ.ಬಿ.)

**ಹಕ್ಕಿ ಬೇಟೆ :** ಸುಳ್ಯ ಪರಿಸರದ ಕಾಡುಗ್‌ಲಿ ನಮೂನೆ ನಮೂನೆನ ಹಕ್ಕಿಗ ಇದ್ದವೆ. ಕಾಡ್ ಕೋಳಿ, ಮೋಂಟೊಳು, ಮರಕೊಡ್ಪ, ಮಂಡೆಮುಕ್ರ ಹೊಟ್ಟ ಇಂತೆಲ್ಲ ಸುಮಾರ್ ಬಗೆನ ಹಕ್ಕಿಗಳ ಹಿಡ್ದ್ ತಿಂಬೊತ್ತಿದ್ದೊ. ಬೇರೆ ಬೇರೆ ಬಗೆನ ಹಕ್ಕಿಗಳ ಹಿಡಿಯಕೆ ಕೆಣಿನ ಗೌಡ್ರುಗ ಕಂಡ್‌ಕೊಂಡೊಲೊ. ಅದರ್‌ಲಿ ಕೆಲವ್ ಈ ಮುಂದೆನಂಗೆ ಉಟ್ಟು





**ಉರ್‍ಲ್ ಹಾಕುದು :** ಸಣ್ಣ ಹಕ್ಕಿಗಳ ಹಿಡಿಯಕೆ ಕಾಡ್‍ಲಿ ಉರ್‍ಲ್ ಹಾಕುವೆ. ಸಾಮಾನ್ಯ ಆಗಿ ಎಳೆ ಮಕ್ಕ ಮಾತ್ರ ಈ ವಿದಾನನ ಅನುಸರ್‍ಸುವೆ ಇದರ್‍ಲು ಎರಡ್ ಬಗೆ ಉಟ್ಟು. ಸುರುದರ್‍ಲಿ, ಉರ್‍ಲ್ ತುಂಬ ಸುಲ್ಬಲಿ ಇದ್ದದೆ. ಸಣ್ಣ ಸಣ್ಣ ಕಿಂಡಿಗಳ್‍ಲಿ ಬೊಳ್ಳಿನ ಉರ್‍ಲ್ ಹಾಕಿ ನೇಲ್ಸುವೆ. ಹುಗ್ಗಿ ಬಾವ ಹಕ್ಕಿಗಳ ಗಂಟ್ಲ್‍ಗೆ ಇದ್ ಸೆಕ್ಕಿಕಂಡದೆ. ಬುಡ್ಸಿಕಂಬಕೆ ನೋಡ್ದಸ್ಟ್ ಉರ್‍ಲ್ ಕಾದದೆ ಹಿಂಗಾಗಿ ಉರ್‍ಲ್ ಕಾದ್ ಹಕ್ಕಿ ಸತ್ತದೆ. ಇದೇ ತರದೊಡ್ಡದಾದ ಉರುಲುಗಳ ಇಸಿ ಹಂದಿಗಳ ಹಿಡಿಯಕೆನು ಆದೆ. ಮೊಲ, ಕಾಡ್ ಕೋಳಿಗ ಈ ಉರ್‍ಲ್‍ನ ಸಾಮಾನ್ಯ ಬಲಿಗ.

ಎರಡನೇ ದರ್‍ಲಿ ಉರ್‍ಲ್ ಹಿಙ್ಙಾ ಕಸ್ಟ ಉಟ್ಟು. ದೈ ಒಂದರ್‍ನ ಬೊಗ್ಗುಸಿ, ಅದ್ಕೆ ಕಟ್ಟಿದ ಬೊಳ್ಳಿನ ನೆಲಕೆ ಗಟ್ಟಿ ಆಗಿ ಚೂನಕೆ ಕಟ್ಟುವೆ. ಉರುಲೊಂದರ ಮಾಡಿ ದೈಗು, ಗೂಟಕೂ ಕಟ್ಟಿ, ಮುಟ್ಟಿರೆ ಗಿಡ್ಡನ ಗೆಲ್ಲ್ ರೆಟ್ಟ್‍ವಂಗೆ ಸಣ್ಣ ಕಿಣಿ ಕೋಲೊಂದರ ಈ ಬೊಳ್ಳಿಗೆ ಸೆಕ್ಕ್‍ಸುವೆ. ಸುತ್ತೆಲ್ಲ ಹಿಙ್ಙಾ ಬತ್ತನ ಹರ್‍ಂಡುವೆ. ಬತ್ತ ತಿಂಬಕೆ ಬಾವ ಮರಕೊಪ್ಪ, ಮೊಂಟೋಳು, ಕಾಡು ಕೋಳಿ ಇಂತೆಲ್ಲ ಹಕ್ಕಿಗ ಈ ಕಿಣಿಕೊಲುನ ಮೆಟ್ಟಿದಂಗೆ ಬೊಳ್ಳಿ ತಪ್ಪಿ ಹೋಗಿ ದೈನ ಮೇಲೆಗೆ ಚಿಮ್ಮಿದೆ. ನಿಮ್ಸಲಿ ಹಕ್ಕಿನ ಯಾದೋ ಒಂದ್ ಪುಡೆ ಉರುಳ್‍ಲಿ ಸೆಕ್ಕಿ ಹಾಕಂಡದೆ. ಹಿಙ್ಙಾ ತಪ್ಪಿರೂ ಹಕ್ಕಿ ಹಾರಿ ಹೋದೆ. ಹಾಂಗಾಗಿ ಇದ್ ಬಾರಿ ಕೆಣಿನ ಬೇಟೆ ತೇಳಿ ಹೇಳಕ್. (ಪಿ.ಬಿ.)

**ಮಳ್ಕೋಲು ಒಡ್ಡುದು :** ಹಲ್ಸ್‌ನ ಮರದ ಮಾಯಿಣನ ಬಳಸುದರ್‍ಂದ ಮಾಯ್ನ ಕೊಲುಂತನು ಹೇಳ್‍ವೆ. ಮರೆಕೋಲುಂತನು ಕರ್‍ದವೆ. ಹಲ್ಸ್‌ನ ಮರದ ಮಾಯ್ನಕೆ ಉದ್ದದ ಚಾಳೆ ಕಡ್ಡಿನ ಕಂತ್‍ಸಿ ತೆಗ್ದವೆ. ಆ ಕೋಲು ಸುಮಾರ್ ಉದ್ದ ಇದ್ದದೆ. ಇದರ ಹಣ್ಣಿರ್‍ವ ಮರಗಳ್‍ಲಿ ಇಂತ ಕೋಲ್‍ಗಳ ಗಟ್ಟಿ ಆಗಿದ್ ಕಟ್ಟ್‌ವೆ. ಹಣ್ಣ್ ತಿಂಬಕೆ ಬಂದ ಹಕ್ಕಿಗ ಗೆಲ್ಲ್‍ಲಿ ಕುದ್ದಾಕನ ಅದರ ಕಾಲ್‍ಗೆ ಈ ಅಂಟ್‍ನ ಕೋಲುಗ ಸೆಕ್ಕೆಂಡದೆ. ಬುಡ್ಸಿಕಂಬಕೆ ಕೊಡ್ಕಿಕಣ ಮಾಯ್ನ ರೆಕ್ಕೆಗನು ಅಂಟಿಕಂಡದೆ. ಹಕ್ಕಿಗೆ ಮತ್ತೆ ಓಡಿಕಾದ್ಲೆ. ಮಕ್ಕ ಮರ ಹತ್ತಿ ಹಕ್ಕಿಗಳ ಸುಲ್ಬಲಿ ಹಿಡ್ದವೆ. ಗಿಳಿ ಮರಕೊಟ್ಟದಂತ ಹಕ್ಕಿಗ ಇದರ್‍ಲಿ ಸಿಕ್ಕುವೆ.

**ಬಿಲ್ಲ್ ಕಲ್ಲ್ :** ದೊಡ್ಡದಾದ ತಟ್ಟೆ ಬಿಲ್ಲ್‍ಗೆ ಕಲ್ಲ್‌ನ ಇಸಿ, ಕುದ್ದ ಹಕ್ಕಿಗ ಮಾತ್ರ ಅಲ್ಲದೆ ಹಾರ್‍ವ ಹಕ್ಕಿನ ಕೂಡಾ ಇದರ್‍ಂದ ಹೊಡೆದುರುಳಿಸುವೆ. ಇಲ್ಲಿ ಗುರಿ ಇಸುದು ತುಂಬಾ ಮುಕ್ಯ. ಬಿಲ್ಲ್ ಕಲ್ಲ್‌ಲಿ ಹಕ್ಕಿಗಳ ಮತ್ತೆ ಮಂಗಗಳನು ಹೊಡ್ದ್ ಕೊಂದವೆ. (ಪಿ.ಬಿ.)

**ಅಡ್ಚಿಲ್ ಹಾಕುದು :** ಹಕ್ಕಿಗಳ, ಎಲಿ, ಹೆಗ್ಗಣಗಳ ಕೊಲ್ಲಿಕೆ ಅಡ್ಚಿಲ್' ಹಾಕುವೆ. ಕಮ್ಮುನ ತಟ್ಟೆಗಳ ತಂದ್ ಅಡ್ಡಕೆ ಮೆಡ್ದ್ ಸುಮಾರ್ ಮೂರು ಅಡಿ ಅಗಲ ಮತ್ತೆ ಐದ್ ಅಡಿ ಉದ್ದದ ಅಡ್ಚಿಲ್ ಮಾಡ್‍ವೆ. ಅದರ ಒಂದ್ ಕೊಡಿಲಿ ಉದ್ದದ ಎರಡ್ ಬಡ್ಗೆಗ ಇದ್ದ್, ಅದರ ನೆಲಂದ ಎತ್ತರಲಿ ಇರ್‍ವಂಗೆ ಕಂಬಕೆ ಕಟ್ಟ್‌ವೆ. ಸುಮಾರ್ ನಾಕರ್‍ಂದ ಐದಡಿ ಎತ್ತರಲಿ ಇದ್ದದೆ. ಅಡ್ಚಿಲ್‍ನ ಕೆಳೆಗೆ ಒಂದ್ ಸಪೂರದ ದಂಡ್‍ನ ಕಟ್ಟಿ ಅದ್ಕೆ ಮೀನ್ ಇಲ್ಲರೆ ಹುಳನ ಕಟ್ಟುವೆ. ಈ ಬಡ್ಗೆನ ಕಂಬಗಳ ನಡುಲಿ ಜೋಡ್ಸಿ;ಹಿಙ್ಙಾ ಎಳ್‍ದರೂ ಇಡೀ ಅಡ್ಚಿಲ್ ನೆಲಕೆ ಬೀಳ್‍ವಂಗೆ ಮಾಡ್‍ವೆ. ಅಡ್ಚಿಲ್‍ನ ಮೇಲೆಗೆ ತೂಕದ ಕಲ್ಲ್‌ನ ಅಟ್ಕ್‌ವೆ. ಹಕ್ಕಿಗ ಬಂದ್ ಕಟ್ಟಿದ ಹುಳ, ಮೀನ್‍ನ ಎಳ್ದರೆ ಇಲ್ಲರೆ ಅದರ ಕಿಣಿಕೋಲುನ ಹಿಙ್ಙಾ ಒತ್ತಿರೂ ಸಾಕ್, ಕೋಲು ಜಾರಿ ಅಡ್ಚಿಲ್ ಸೀದಾ ಬೆನ್ನ್‌ನ ಮೇಲೆ ಬಿದ್ದ್ ಅಪ್ಪಚ್ಚಿ ಆದೆ. ಹೆಚ್ಚಾಗಿ ಹೆಗ್ಗಣಗಳ ಹಿಡಿದು ಹಿಂಗೆನೆ. ಆಚಾರಿಗ ಮಾಡಿಕೊಟ್ಟ 'ಎಲಿ ಗೂಡು' ಎಲಿಗಳ ಹಿಡಿಯಕೆ ಉಟ್ಟು. ಇತ್ತೀಚೆಗೆ ಕಬ್ಬಿಣದ 'ಎಲಿ ಕತ್ತೆರಿ'ಗ ಬಂದುಟು. ಆದರೆ ಎಲಿನ ಆಹಾರ ಆಗಿ ಉಪಯೋಗ್ಸುದುಲೆ. (ಪಿ.ಬಿ.)

**ಮೀನ್ ಹಿಡಿದು :** ಮೀನ್ ಗೌಡ್ರ ಯಾಗೋಳುನ ತಿನ್ಸ್‌ಗಳ್‍ಲಿ ಒಂದ್, ಗೌಡ್ರ್ ಗದ್ದೆಂದನೂ, ಹಳ್ಳಂದನು ಮೀನ್ ಹಿಡ್ದವೆ. ಮಳ್ಗಾಲಲಿ ಗದ್ದೆ ಹತ್ತಿದ ಮೀನ್‍ಗಳ ಸುಮಾರ್ ನಮೂನೆನ ಕೊಂತಾಣ ಮಾಡಿ ಹಿಡ್‍ದವೆ. (ಪಿ.ಬಿ.)

**ಗಾಳ ಹಾಕುವುದು :** ಇದ್ ಸಾಮಾನ್ಯ ಆಗಿ ಎಲ್ಲ ಕಡೆನೂ ಕಂಡ್ ಬಾವ ಮೀನ್ ಹಿಡಿವ ಕಿಣಿ. ಹೆಚ್ಚಿನ ಗೌಡ್ರ ಮನೆಲಿ ಎರ್‍ಡಂದ ಹೆಚ್ಚಿ ಗಾಳಗ ಇದ್ದವೆ. ಅಂಗಡಿಂದ ತಂದ ಗಾಳಗಳಿಗೆ ತಂಗೀಸ್‍ನ ಕಟ್ಟಿ, ತೂಕ ಆವ ಉದ್ದೇಸಂದ ಒಂದ್ ಚೂರು ಸೀಸನ ಕಟ್ಟಿ, ಉದ್ದದ ಬೆದ್ರ್‌ನ ಕೋಲುಗೆ ಗಟ್ಟಿ ಕಟ್ಟಿರೆ ಗಾಳ ತಯಾರಾದೆ. ಸುರೂನ ಮಳೆ ಬಿದ್ದ್ ಹಳ್ಳಲಿ ಕೆಂಪು ನೀರ್ ಬಾಕೆ ಆಕನ ಗೌಡ್ರ್ ನೆಲಂದ ಹುಡ್ಕಿ, ನೊಕ್ಕುಳುನ ಚಿಪ್ಪಿಲಿ ಹಾಕಂಡ್, ಗಾಳನ ಹಿಡ್ಕಂಡ್ ಹಳ್ಳದ ಕರೆಗೆ ಹೋದವೆ. ನೊಕ್ಕುಳುನ ನುಂಗುವ ಮೀನ್ ಗಾಳನನೂ ನುಂಗಿದೆ. ಅಚೀಚೆ ಎಳೆಕನ ಅದ್ ಗಾಳ ಹಿಡ್ದವನ ಅನುಬವಕೆ ಬಂದದೆ. ಆಗ ಕೂಡ್ಲೆ ಅದರ ನೇಚಿ ಮೇಲೆಗೆ ಹಾಕಕು.ಗಾಳಲಿ ಒಮ್ಮೆಗೆ ಒಂದೇ ಮೀನ್ ಸಿಕ್ಕಿದೆ. ಆದರೆ ಅದ್ ಗಾಳನ ನುಂಗಿಕೆ ಸಾದ್ಯ ಇರ್‍ವ ಕಾರಣ ಸಾಕಸ್ಟ್ ದೊಡ್ಡದಿದ್ದದೆ. ಮೊರ್‍ಂಟೆ, ಮೂಡು, (ಮುಗುಡು) ಬಾಳೆ, ಕರಿ ಮೀನ್, ಹಾವು ಮೀನು, ಕೀಜೋಣ್, ಎಸ್‍ಂಡ್ ಇಟ್ಟಿ ಇದರೆಲ್ಲ ಗಾಳ ಹಾಕಿದೆ ಹಿಡ್‍ದವೆ. (ಪಿ.ಬಿ.)

**ಕಡು ಹಾಕುದು :** ಬೇಸಿಗೆಲಿ ಹಳ್ಳಲಿ ನೀರ್ ಹರಿದು ನಿತ್ತಾಕನ, ಮೀನ್ ಹಿಡಿಯಕೆ ಈ ಕಿಣಿ ಮಾಡ್‍ವೆ. ಆಗ ಹೊಂಡಗಳ್‍ಲಿ ತುಂಬಿಕಂಡ ನೀರ್‍ಲಿ ಮೀನುಗ ಇದ್ದವೆ. ಇಲ್ಲಿಂದ ಸಾದ್ಯ ಆದಸ್ಟ್ ನೀರ್‍ನ ಹೊರೆಗೆ ಹಾಕಿ ಕಾಲಿ ಮಾಡ್‍ವೆ.

ಮತ್ತೆ ಕಾಡ್‍ಲಿ ಸಿಕ್ಕುವ ಬೇಪರೆ ಬಿತ್ತ್, ಅಲ್ಲರೆ ಐರೋಳ್ ಗೆಂಡೆನ ತಂದ್ ಕಲ್ಲ್‌ಲಿ ಗುದ್ದಿ ಲಾಯ್ಕ ಹೊಡಿ ಮಾಡ್‍ವೆ. ಆ ಹೊಡಿಗೆ ಬೂದಿ ಕಲ್ಸಿ ಹೊಂಡಕ್ಕೆ ಹಾಕುವೆ. ಕೆಲ ಕಡೆ 'ನರ್‍ವೋಳು' ಬಿತ್ತ್ ಹೊಡಿ ಮಾಡಿ ಹಾಕುವೆ. ಇದರ್‍ಂದ ನೀರ್ ವಿಸ ಆಗಿ ಮೀನ್‍ಗ ಸತ್ತವೆ. ಮತೆ ಬಲೆಲಿ ಗೋಂಚಿ ಹಿಡ್ದವೆ. (ಪಿ.ಬಿ.)



**ನೀರು ಆರ್‌ಸಿ ಮೀನ್ ಹಿಡಿದು :** ಬೇಸಗೆಲಿ ನೀರ್ ಕಡಮೆ ಆಗಿದ್ದ್ ಹಚ್ಚ್ಯ ಹರ್‌ಕಂಡ್ ಇದ್ದರೆ ನೀರ್ ಆರ್‌ಸಿ ಮೀನ್ ಹಿಡ್‌ದವೆ. ಇದ್ಕೆ ಸುರುಗೆ ಮೀನಿರ್‌ವ ಹೊಂಡನ ನೋಡಿಕಣಕು ಈ ಹೊಂಡಕೆ ಬಾವ ನೀರ್‌ನ ಹರಿವುನ ಬೇರೆ ಕಡೆ ತಿರ್‌ಗಿಸಿ, ಹೊಂಡಕ್ಕೆ ನೀರು ಬಾರದಂಗೆ ಮಾಡೋಕು. ನೀರ್ ಇಲ್ಲದಾಕನ ಬಲೆ ಹಾಕಿ ಇಲ್ಲರೆ ನೀರು ಆರ್‌ಸಿ ಬರಿ ಕೈಲಿಯೇ ಮೀನುಗಳ ಹಿಡ್ದವೆ. (ಪಿ.ಬಿ.)

**ಬಲೆ ಹಾಕುದು :** ಸುಳ್ಯಲಿ ನೀರ್ ಗುಂಡಿಗಳಿಗೆ ಇಳಿವಲ್ಲಿ, ಹಳ್ಳದ ನೀರ್ ನಿತ್ತ ಗುಂಡಿಗಳಿಗೆ ಬಲೆ' ಬೀಸಿ ಮೀನ್ ಹಿಡ್‌ದವೆ.

ತೋಟೆ ಹಾಕುದು : ಜೆನವರಿಂದ ಮಾರ್ಚ್ ತಿಂಗಳ ನಡುಲಿ ಹಳ್ಳಲಿ ಮೀನ್‌ಗ ಹಿಂಡಿಂಡ್ ಇದ್ದವೆ. ಚಳಿ ಕಾಲಲಿ ಕೂಡಾ ಮೀನ್‌ಗ ಜಾಸ್ತಿ ಇದ್ದದೆ. ಹಳ್ಳಲಿ ನೀರ್ ಕೂಡಾ ಕಡಿಮೆಯಾಕಂಡ್ ಬರ್‌ತಿದ್ದದೆ. ಇಂತ ಹೊತ್ತುಲಿ ಹಳ್ಳಕೆ ತೋಟೆ ಇಸುವೆ.. ಇದರ ತೋಟೆ' ಹಾಕುದು ತೇಳುವೆ. ಒಂದೊಳ್ಳ ಜಾಗೆಲಿ ಮೀನ್‌ಗ ಹಿಂಡಿಂಡ್ ಇರಿಕನ ತೋಟೆಗೆ ಕಿಚ್ಚಿ ಕೊಟ್ಟ್ ಹಳ್ಳಕೆ ಇಟ್ಟವೆ. ಗುಂಡು ಹೊಡ್ದ ಮೀನುಗೆಲ್ಲ ಸತ್ತವೆ. ಆಗ ಹಳ್ಳಕೆ ಇಳ್ದ್ ಮುಳ್‌ಂಗಿ, ಮೀನ್‌ಗಳ ಹಿಡ್ದವೆ. ಒಳ್ಳ ಮೀನ್ ಸಿಕ್ಕುವ ಜಾಗೆ ಆದರೆ 10 ರಿಂದ 20 ಸೇರ್‌ನಸ್ಟ್ ಮೀನ್‌ಗ ಸಿಕ್ಕವೆ.

**ಗುಂಡು ಹಾಕುವುದು :** ಒಂದೊಂದೇ ಮೀನ್, ಅದರ್‌ಲೂ ದೊಡ್ಡ ಮೀನ್ಗ ಕಂಡರೆ, ಬೆಡಿಲಿ ಗುಂಡು ಹೊಡ್‌ದು ಮೀನುಗಳ್‌ನ ಕೊಂದವೆ. ಇದ್ಕೆ ತುಂಬಾ ಚಲಾಕ್‌ನು ಬೇಕ್, ಹಚ್ಚ್ಯ ಗುರಿ ತಪ್ಪಿರೂ ಒಂದ್ ಈಡ್ ನಸ್ಟ ಆದೆ. ಗುರಿ ನಾಟಿರೆ ಒಂದ್ ಈಡ್‌ಗೆ ಒಂದೇ ಮೀನ್ ಸಿಕ್ಕಿದೆ. (ಪಿ.ಬಿ.)

**ಉಬರ್ ಮೀನ್ :** ಮಳ್ಗಾಲಲಿ ಕಳ್‌ಂಕ್ ನೀರ್ ಹಳ್ಳಕೆ ಹರಿದರ್‌ಂದ ಮತೆ ಆಗ ಮೀನ್‌ಗ ಮೊಟ್ಟೆ ಇಸುವ ಕಾಲ ಆದ್ದರ್‌ಂದ ಜೋರ್ ಮಳೆ ಇರ್‌ವಂದ್ ಒಳ್ಳ ನೀರ್ ಹುಡ್ಕೆಂಡ್, ಗದ್ದೆಗಳಿಗೆ, ತೋಟದ ಸಣ್ಣ ಸಣ್ಣ ಕಣಿಗಳಿಗೆ ಮೀನ್‌ಗ ಹಳ್ಳಂದ ಬಂದ್ ಹತ್ತುವೆ. ಮಳೆ ಮುಗೆತಿದ್ದಂಗೆ ನೀರ್‌ನೊಟ್ಟಿಗೆ ಇಳ್ದ್ ಹೋದವೆ. ಆದರೆ ಮಳೆ ನಿತ್ತಾಕನ ನೀರ್ ಎರ್‌ಕಿದಲ್ಲಿ ವಪಾಸ್ ಹೋಕೆ ನೀರ್‌ನ ಹರಿವು ಇಲ್ಲದಾಕನ ಈ ಮೀನ್‌ಗ ಗದ್ದೆಗಳ್‌ಲಿ ಅಲ್ಲಲ್ಲಿ ಸಣ್ಣ ಸಣ್ಣ ಗುಂಡಿಗಳ್‌ಲಿ ಬಾಕಿ ಆದವೆ. ಈ ಹೊತ್ತುನ ನೋಡಿಕಂಡ್ ಅಂದರೆ ಹೆಚ್ಚಾಗಿ ಬೆಳ್ಗರ್ ಹೊತ್ತುಗೆ ಹೋಗಿ ಈ ಮೀನ್‌ಗಳ ಹಿಡ್ದವೆ. (ಪಿ.ಬಿ.)

**ಸೂಟೆ ಮೀನ್ :** ಇದು ಬಾರಿ ಸುಲಬ ಮತ್ತೆ ಎಲ್ಲವ್ ಹಿಡಿವ ಕಿಣಿ ಇದ್. ಕಮ್ಮುನ ತಟ್ಟೆಗಳ ಬೊಳ್ಳಿಲಿ ಸುತ್ತಿ ಮಾಡ್ದ ಸೂಟೆ ಹಿಡ್ಕಂಡ್, ಇನ್ನೊಂದ್ ಕೈಲಿ ಉದ್ದದ ಕತ್ತಿನ ಹಿಡ್‌ಕಂಡ್, ಇರ್‌ಲ್ ಗದ್ದೆಗೆ ಇಳ್ದವೆ. ಇರ್‌ಲ್ ಹೊತ್ತು ಮೀನ್‌ಗ ಎಲ್ಲ ಕಣಿಕರೆಗೆ ಬಂದ್ ನಿತ್ತಿದ್ದವೆ. ಕತ್ತಿಂದ ಮೀನ್‌ಗಳ ಕಡ್ದ್ ತುಂಡು ಮಾಡ್‌ವೆ. ಹಳ್ಳಂದನು ಹಿಂಗೆನೆ ಮೀನ್‌ನ ಹಿಡ್‌ದವೆ. ಆದರೆ ಹೆಚ್ಚಿ ಗುಂಡಿ ಇರ್‌ವಲ್ಲಿ ಈ ಬೇಟೆ ಅಡಿಕೆ ಆದುಲೆ. ಗದ್ದೆಲಿ ಸುಲಬ ಆದೆ. (ಪಿ.ಬಿ.)

**ಕೂಳಿ :** ಕೂಳಿ ಮೀನ್ ಹಿಡೆಕೆ ಬೇಕಾದ ಒಂದ್ ಸೊತ್ತು. ಇದರ ಒಳಗೆ ಹೋದ ಮೀನ್‌ಗೆ ಹೊರಗೆ ಹೋಕೆ ಆದುಲೆ. ತುಳುಲಿ ಕೂರಿ, ಮಲಿಯಾಳಿಲಿ ಮೀನ್‌ಕೂಡ್ ತ ಹೇಳ್‌ವೆ. ದಕ್ಷಿಣಕನ್ನಡ, ಉಡುಪಿ, ಕೊಡಗ್ ಮತ್ತೆ ಹಾಸನ ಜಿಲ್ಲೆನ ಸಕ್ಲೇಸ್ಪುರ ಕಡೆ ಹಳ್ಳ ಜೋಡಿ ಇರ್‌ವ ಕಡೆಗಳ್‌ಲ್ಲಿ ಮತ್ತೆ ಗದ್ದೆ ಬೇಸಾಯ ಇರ್‌ವ ಕಡೆಲೆಲ್ಲ ಇದರ್‌ಲಿ ಮೀನ್ ಹಿಡ್ದವೆ. ಕೂಳಿನ ಚಾಳೆ ಮಡಲ್‌ನ ಕಡ್ಡಿಲಿ, ಬೆದ್ರ್‌ನಕಡ್ಡಿಲಿ, ಬೈನೆ ಸೋಗೆ ಕಡ್ಡಿಲಿ ಮಾಡ್‌ವೆ. ಅದ್ ಅಲ್ಲದೆ ಕಾಡ್ಲಿ ಇರ್‌ವ 'ಚಿಕ' ದೆಯ್ಯಿನ – ಪಾಮ್‌ಎಣ್ಣೆ ಮರದ ಹಾಂಗೇ ಇರ್‌ವ ಒಂದ್ ಜಾತಿ ಮರದ ಸೋಗೆ ಕಡ್ಡಿಂದಲೂ ಮಾಡ್‌ವೆ. ಕಡ್ಡಿನ ಪೊರ್‌ಲು ಕೀಸೊಕು. ಕೂಳಿಗೆ ಆಕಾರ ಬರೊಕುಂತಾದರೆ ಹಚ್ಚ್ಯದಪ್ಪದ ಮಾದ್ರಿ ಬೊಳ್ಳಿ ಅಲ್ಲರ್ ಬೆತ್ತಲಿ ಚಕ್ರದ ಹಾಂಗೆ ಮಾಡಿಕಂಡ್ ಅದ್ಕೆ ಸುತ್ತಲೂ ಕಡ್ಡಿಗಳ ಬೆತ್ತದ ಬೊಳ್ಳಿಲಿ ಹಕ್ಕಲೆ ಹಕ್ಕಲೆ ನೇಯೊಕು. ಇನ್ನೊಂದು ಕಡೆ ಗಾತ್ರ ಸಣ್ಣದಾಗ್ತಾ ಹೋದೆ. ಹಾಂಗೆ ಆಕರ್ ಅಲ್ಲಿಗೆ ಸಣ್ಣ ಚಕ್ರಗಳ ಇಸಿಕಣಕು, ಕೂಳಿನ ಆಕಾರ ಬಂದ ಮೇಲೆ ಸಪೂರದ ಕಡೆಲಿ ಎಲ್ಲಾ ಕಡ್ಡಿಗಳ ಜೋಡಿಸಿ ಕಟ್ಟೊಕು. ಮತ್ತೆ ಸಣ್ಣ ಕಡ್ಡಿಗಳ ಹಕ್ಕಲೆ ಹಕ್ಕಲೆ, ಅಂದಾಜ್ ಅರ್‌ದ ಮಾರ್‌ನಸ್ಟ್ ನೇಯೊಕು. ಅದರ ಒಂದ್ ಪುಡೆಲಿ ನೇಯದೇ ಹಾಂಗೇ ಬುಡೊಕು. ನೇಯ್ದ ಮೇಲೆ ಹಾಂಗೇ ಬುಟ್ಟ ಪುಡೆನ ದೊಡ್ಡ ಬಾಯಿ ಇರ್‌ವಲ್ಲಿ ಒಳಗೆ ಹೋವಾಂಗೆ ಮಾಡೊಕು. ಇನ್ನೊಂದು ಪುಡೆ ದೊಡ್ಡ ಬಾಯಿಲಿ ಇರ್‌ವ ಚಕ್ರಕ್ಕೆ ಜೋಡಿಸಿ ಕಟ್ಟಿಕಂಡ್ ಹೋಕು. ಅದರ್‌ಲಿ ಒಳ್ದ ಬಾಗನ ಮೇಲೆ ಕಿರೀಟದ ಹಾಂಗೇ ಕಾಂಬ ರೀತಿ ಕಟ್ಟೊಕು. ಇದ್ಕೆ 'ಕಂಜಿ' ತ ಹೇಳ್‌ವೆ. ಇದರ್‌ಲಿ ಮೀನ್‌ಗಳ್ಗೆ ಒಳಗೆ ಹೋಕೆ ಆಕು. ಹೊರಗೆ ಬಾಕೆ ಆಗದ ಹಾಂಗೆ ಇರೊಕು. ಅದರ ಎಡೆಗೆ ಕಾಯಿಚೊಪ್ಪು ಇಸಿ ಸೆರೆ ಇಲ್ಲದ ಹಾಂಗೆ ಕಟ್ಟುವೆ. ಚಾಳೆಕಡ್ಡಿ, ಬೈನೆ ಕಡ್ಡಿಲಿ ಮಾಡ್ದ ಕೂಳಿ ಹೆಚ್ಚ್ ದೊಡ್ಡದಿರುದುಲೆ. ಬೆದ್ರ್ ಕಡ್ಡಿಲಿ ಮಾಡ್ದ ಕೂಳಿ ಉದ್ದ ಉಟ್ಟು. ಕೂಳಿನ ಮೇಲ್ಪುಡೆಗೆ ಹಿಡ್ಕಂಕೆ ಆವಾಂಗೇ ಕೈ ಉಟ್ಟು. ಕೂಳಿ ಮಾಡಿಕೆ ಎಲ್ಲವುಕು ಆಕಿಲೆ. ಒಮ್ಮೆ ನೋಡಿರೆ ಯಾರಿಗೂ ಮಾಡಕ್. ಅದರೆ ಒಸಿ ಚಾತುರ್‌ಪು ಬೇಕು ಅಸ್ಟೆ. ಮಳ್ಗಾಲ ಮಳೆ ಬಾಕನ ಹಳ್ಳಲಿ ನೀರ್ ಜಾಸ್ತಿ ಆಕನ ಮೀನ್‌ಗ ನೀರ್ ಬಾವ ಕಡೆಗೆ ಬಂದವೆ. ಮಳೆಗಾಲ ಮೀನ್‌ಗ ಉಬರ್ ಹತ್ತುವೆ. ಉಬರ್ ಹತ್ತುದ್ ತೇಳ್ರೆ ಒರ್‌ತೆನೀರ್ ಬಾವಲ್ಲಿಗೆ ಮೊಟ್ಟೆ ಇಸಿ ಮರಿ ಮಾಡಿಕೆಂತ ಮೀನ್‌ಗ ನೀರ್ ಹರ್‌ದ್ ಬಾವ ಕಡೆಗೆ ಹೋದವೆ. ಆಗ ಹಳ್ಳಕ್ಕೆ ಅಲ್ಲರ್ ಕಣಿಗೆ ಅಡ್ಡಕ್ಕೆ ಮರ, ಕೊಮ್ಮುನ ಅಲ್ಲರ್ ಬೆದ್ರ್‌ನ ತುಂಡುಗಳ ಗೂಟ ಹಾಕಿ ಕಟ್ಟಿ ಅದರ ಎಡೆಲಿ ಕೂಳಿನ ದೊಡ್ಡ ಬಾಯಿ ನೀರ್ ಹರ್‌ಕಂಡ್ ಹೋವ ಕಡೆಗೆ ಜಾಗ್ರತೆಲಿ ಕಟ್ಟಿ ಇಸುವೆ. ಕೂಳಿ ನೀರ್‌ಲಿ ಕೊಚ್ಚಿ ಹೋಗದ ಹಾಂಗೆ ಕೂಳಿನ ಮೇಲೆ ತೂಕದ ಕಲ್ಲ್ ಇಸುವೆ. ಮೀನ್‌ಗ ಮೇಲೆ ಮೇಲೆ ಹತ್ತಿಕನ್ ಬಂದ್ ಕೂಳಿ ಒಳಗೆ ಹೋದವೆ. ಒಳಗೆ ಹೋದ ಮೀನ್‌ಗಳಿಗೆ ಹೊರೆಗೆ ಹೋಕೆ ಆದುಲೆ. ಮೂಡು, ನೊಳಿ, ಕೀಜಣ,




ಚೀಕೊಟೆ, ಹರ್‌ಗ್ಲ್, ಕೂರ್‌ಲು, ಕರಿಮೀನ್, ಕಾಜೋವ್, ಪಾಚೋಳ್ತಿ, ಕಲ್ಮುಳ್ಳ, ಬಾಳೆಮೀನ್, ಹಾವುಮೀನ್ ಹೀಂಗೆ ತರ ತರದ ಮೀನ್‌ಗ ಕೂಳಿ ಒಳಗೆ ಇದ್ದವೆ. ಒಮ್ಮೊಮ್ಮೆ ಎರಡ್ ಮೂರ್ ಸೇರ್‌ನಸ್ಟ್ ಮೀನ್ ಸಿಕ್ಕುದುಟ್ಟು. ಕೂಳಿನ ಮೇಲೆ ತಂದ್ ಅದರ ಸಪೂರದ ಪುಡೆಲಿ ಇರ್‌ವ ಕಟ್ಟ ಬಿಚ್ಚಿ ಕೊಡ್ಕಿರೆ ಮೀನ್‌ಗ ಉದುರುವೆ. ಅರ್‌ಕಿಲ್ಲ್‌ಲಿ ಗದ್ದೆ ನೀರ್ ಆರ್‌ಸುವ ಕ್ರಮ ಉಟ್ಟು, ಆಗ ಗದ್ದೆಲಿ ಇದ್ದ ಮೀನ್‌ಗ ನೀರ್ ಹೋದ ಕಡೆಗೇ ಹೋದವೆ. ಗದ್ದೆಗೆ ಬಡ್ಚಿಲ್ ಕಡ್ದ್ ನೀರ್ ಹೋಕೆ ಬುಟ್ಟ ಜಾಗೆಲಿ ಕೂಳಿ ಇಸುವೆ. ಸಣ್ಣ ಸಣ್ಣ ಮೀನ್‌ಗ ಇರ್‌ವ ಜಾಗೆಲಿ ಚಾಳೆ ಮಡಲ್ ಕಡ್ಡಿಂದ ಮಾಡ್ದ ಕೂಳಿ ಒಳ್ಳೆದ್ ತ ಹೇಳ್‌ವೆ. ಮಳ್ಗಾಲ ಅಲ್ಲದೆ ಬೇರೆ ದಿನಗಳಲಿ ಕೂಳಿ ಒಳಗೆ ಕೋಳಿ ಕರ್‌ಳ್ ಹಾಕಿ ದೊಡ್ಡ ದೊಡ್ಡ ಗುಂಡಿಲಿ ಕಲ್ಲ್ ಕಟ್ಟಿ ಇಸುವೆ. ಮೀನ್‌ಗ ಕರ್‌ಳ್ ತಿಂಬಕೆ ಅದರ ಒಳಗೆ ಹೋಗಿ ಅಲ್ಲೇ ಬಾಕಿ ಆದವೆ. ಇಂತಾ ಕೂಳಿಗೆ ಎಡ್‌ಗಡೆ ಕಿರೀಟ ಇರ್‌ದುಲೆ. ಹಿಂದೆನ ಕಾಲದ ಜನಕ್ಕೆ ಬೇಜಾರ್ ಆಕನ ಕಾಡಿಗೆ ಮುರ್‌ಗ ಬೇಟೆಗೆ ಹಳ್ಳ ಚೋಡಿಗೆ ಮೀನ್‌ಬೇಟೆಗೆ ಹೋತಿದ್ದೊ. ಮಳೆಗಾಲ ಮೀನ್ ಹಿಡೆಕೆ ಕೂಳಿನ ಮಾಡ್ತಿದ್ದೊ. ಹಾಂಗಾಗಿ ಕೂಳಿ ಪಿರಾಕ್ಲೇ ಜನ ಕಂಡ್ ಹಿಡ್ದ ಒಂದ್ ಸೊತ್ತು. ಮಳ್ಗಾಲ ಮಾತ್ರ ಅಲ್ಲದೇ ಅರ್‌ಕಿಲ್ ಸ ಇದ್ ಉಪಯೋಗಕ್ಕೆ ಬಂದದೆ. ಕೂಳಿಗೆ ಒಮ್ಮೊಮ್ಮೆ ಎಸ್‌ಂಡ್, ಹಾವು ಕೂಡ ಕೂಳಿಲಿ ಸಿಕ್ಕಿ ಬಿದ್ದದೆ. ಹಾವು ಸಿಕ್ಕಿಬಿದ್ದರೆ ಮೀನ್ ತಿಂದ್ ಕಾಲಿ ಮಾಡ್ದೆ. ಒಳಗೆ ಹೋಕೆ ಆದೆ. ಹೊರಗೆ ಬಾಕೆ ಆದುಲೆ, ಹುಗ್ಗಿಕೆ ಆದೆ, ಹೊರಡಿಕೆ ಆದುಲೆ. ಹೋಕೆ ಹೋಗೊಳ, ಬಾಕೆ ಆದುಲೆ' ತ ಕೂಳಿ ಬಗ್ಗೆ ಒಡ್ಪೋಕತೆ ಉಟ್ಟ್. (ಎಂ.ಜಿ.ಕೆ.)

**ಕೂಳಿ ಇಸುದು :** ಗದ್ದೆಂದ ನೀರ್ ಇಳ್ದ್ ಬಾವ ಜಾಗೆಲಿ ಇಲ್ಲರೆ ಗದ್ದೆಂದ ಹಳ್ಳಕೆ ನೀರ್ ಹೋವ ಜಾಗೆಲಿ ಎರಡ್ ಗೂಟಗಳ ಜಡ್ದ್ ಕೂಳಿ ಇಸುವೆ. ಬೆತ್ತಂದ ಮೆಡ್‌ದ್ ಮಾಡ್‌ದ ಕೂಳಿನ ಒಳೆಗೆ ಹುಕ್ಕ



ಕೂಳಿ

ಮೀನಾಗಲೀ ಹಾವಾಗಲೀ ಹೊರೆಗೆ ಬಾರದಂಗೆ ಇದ್ದದೆ. ಗಂಟೆಗೊಮ್ಮೆ ಅದರೊಳೆಗೆಂದ ಮೀನ್‌ನ ಗೋಂಚುವೆ. ಒಬ್ಬ ಇಸಿದ ಕೂಳಿಂದ ಇನ್ನೊಬ್ಬ ಮೀನ್‌ನ ತಕಂಡ್ ಹೋಗಿ ಜಗಳ ಆದು ಉಟ್ಟು.

**ಕೂಂಜೋಳು :** ಮೀನ್ ಹಿಡೆಕೆ ಆವ ಒಂದ್ ಸೊತ್ತ್. ಕೂಂಜೋಳು ತೇಳ್ರೆ ಗದ್ದೆಕಣ ಅಲ್ಲರ್ ಚೋಡ್‌ಲಿ ಎತ್ತರಂದ ಬೀಳುವ ನೀರಿದ್ದಲ್ಲಿ ಉಬರ್ ಮೀನ್ ಹತ್ತಿಕನ್ ಬಾಕನ ಹಿಡೆಕೆ ಆವ ಸೊತ್ತು. ಕೂಂಜೋಳು ಮಾಡಿಕೆ ಬೆಳ್ದ ಹಳ್ಳಿ ತೋರದ ಬೆದ್ರ್‌ನತುಂಡು ಬೇಕ್. ಬೆದ್ರ್ ನೀರ್ ಬೀಳುವ ಜಾಗೆ ನೋಡಿಕಂಡ್ ಅದರ ಎತ್ತರಕ್ಕೆ ಸರಿಯಾಗಿ ಸೀಳಿ ಸಪೂರಲಿ ಎಂಟ್ ಹತ್ತ್ ಬಾಗ ಮಾಡೊಕು. ಆ ಬಾಗಗಳ ಅಗಾಲಕ್ಕೆ ಬುಡ್ಸಿಕಾಂಕು. ಅದ್ಕೆ ಒಳಗೆಂದ ದಪ್ಪದ ಬೊಳ್ಳಿನ ಮಾದ್ರಿ ಬೊಳ್ಳಿ ಅಲ್ಲರ್ ಇಂಜೆರ್ ಬೊಳ್ಳಿ ಚಕ್ರದ ಹಾಂಗೆ ಮಾಡಿ ಇಸಿಕಾಂಕು. ಈಗ ಬೆತ್ತದ ಬಾಸ್ ಅಲ್ಲರ್ ಬೆದ್ರ್‌ನ ಬಾಸ್‌ಂದ ಓಟೆ ಬಾಸ್ನೂ ಆದೆ. ಬಾಸ್ ತೇಳ್ರೆ ತೆಳ್ಳಂಗೆ ಕೀಸಿ ಮಾಡ್ದ ಸೀಳ್. ಅದರ ಸುತ್ತೋಳು ಎಡೆ ಇಲ್ಲದ ಹಾಂಗೇ ನೇಯೋಕು. ಹೀಂಗೆ ಕೂಂಜೋಳು ತಯಾರ್ ಆದೆ. ಇದರ ಎಲ್ಲಾ ಸಮುದಾಯದವು ಕಲ್ತ್ ಮಾಡ್ತಿದ್ದೊ.

ಹರ್‌ಕಂಡ್ ಹೋವ ನೀರಿಗೆ ಕೂಳಿ ಇಸುವೆ. ಎತ್ತರಂದ ಬೀಳುವ ನೀರಿದ್ದಲ್ಲಿಗೆ ಮೀನ್ ಹಿಡೆಕೆ ಕೂಂಜೋಳು ಇಸುವೆ. ಮಳೆಗಾಲ ಮೀನ್‌ಗ ಉಬರ್ ಹತ್ತುವೆ. ಇದ್ ಒರ್‌ತೆನೀರ್ ಬಾವಲ್ಲಿಗೆ ಮೊಟ್ಟೆ ಇಸಿ ಮೊರಿ ಮಾಡಿಕೆಂತ ಮೀನ್‌ಗ ನೀರ್ ಹರ್‌ದ್ ಬಾವ ಕಡೆಗೆ ಹೋದವೆ. ಆಗ ಕೆಲವು ಕಡೆ ನೀರ್ ಎತ್ತರಂದ ಬೀಳ್‌ವ ಜಾಗ ಉಟ್ಟು, ಅಲ್ಲಿ ಮೀನ್‌ಗ ಮೇಲೆ ಹಾರಿ ಹತ್ತಿ ಹೋಕೆ ನೋಡುವೆ. ಮೇಲೆ ಹರ್‌ದ ಮೀನ್‌ಗ ಕೆಲವೊಮ್ಮೆ ಹಾರಿಕನ ನೀರ್‌ನ ರಬಸಕ್ಕೆ ಹತ್ತಿಕಾಗದೆ ಕಾಗಡೆ ಬಿದ್ದ್ ಬುಟ್ಟವೆ. ತ ಜಾಗಲಿ ಕೂಂಜೋಳು ಇಸುವೆ. ಹಾರಿಕಾಕನ ಬಿದ್ದ ಮೀನ್‌ಗ ಕೂಂಜೋಳು ಒಳಗೆ ಬಿದ್ದರೆ ಮತ್ತೆ ಹಾರಿಕಾಗದೆ ಅದರ್‌ಲೆ ಬಾಕಿ ಆದವೆ. ಮಳೆಗಾಲಲಿ ಕೂಂಜೋಳು ಇಸಿದ್ ಮೀನ್ ಹಿಡೆಕೆ ಉಪಯೋಗ ಮಾಡ್‌ವೆ. ಕೂಂಜೋಳುನ ಹಾಂಗೇ ಇನ್ನೊಂದು ಏಪೆ. ಇದ್ ಅಗಲಕ್ಕೆ ಇದ್ದದೆ.

**ಕೂಂಜೊಳು ಇಸ್‌ದು :** ಕೂಳಿನ ಬದಲ್ 'ಕೂಂಜೊಳು'ನು ಇಸ್‌ವೆ. ಕೂಂಜೊಳ್‌ನ ಕೂಡಾ ಬೆತ್ತಂದಂಳೆ ಮಾಡಿದ್ದವೆ. ಅಗಲದ ಬಾಯಿ ಇದ್ದದೆ. ಕೂಂಜೋಳುಗೆ ಬಿದ್ದ ಮೀನ್‌ಗ ಕೂಡಾ ಹೊರಗೆ ಬಾಕೆ ಆದುಲೆ. ಇದರ ಇಸಿಕೆ ನೀರ್‌ನ ಸಣ್ಣ ಗೊಡಲ್ ಬೇಕು. ಎತ್ತರಂದ ಬೀಳ್‌ವ ನೀರ್‌ಗೆ ಅಡ್ಡಕೆ ಕೂಂಜೋಳ್‌ನ ಕಟ್ಟಿರೆ ಸಾಕ್, ನೀರೊಟ್ಟಿಗೆ ಬಂದ್ ಹಾರ್‌ವ ಮೀನುಗ ಕೂಂಜೋಳುಲಿ ಸಿಕ್ಕಿ ಹಾಕಂಡವೆ.

**ಗೋರಿ :** ಮೀನ್ ಹಿಡೆಕೆ ಆವ ಒಂದ್ ಸೊತ್ತು. ಇದರ್‌ಲಿ ಹಳ್ಳಲಿ ಮೀನ್‌ನ ಗೋರಿಕೆ ಆದೆ – ಹಾಂಗಾಗಿ ಇದ್ಕೆ ಗೋರಿಂತ ಹೆಸ್ರ್ ಬಂದಿರ್‌ದು. ಇದ್ ಬೆತ್ತಂದ ಮಾಡ್ದ್. ಬೆತ್ತದ ಬಾಸ್‌ನ ಸಪೂರಕ್ಕೆ ಕೀಸಿ ಪೊರ್‌ಲು ಮಾಡಿ ಮತ್ತೆ ಮೆಡೆಕು. ಇದರ ಅಜಲರ್, ಕೊರಗರ್ ಮಾಡ್‌ವೆ.

ಹಳ್ಳಕ್ಕೆ ಕಡು ಹಾಕಿರೆ ಅದರ ಕಾರಕ್ಕೆ ಮೀನ್‌ಗ ಮೇಲೆ ಮೇಲೆ ಬಂದವೆ. ಆಗ ಈ ಗೋರಿಲಿ ಮೀನ್‌ನ ಗೋಂಚಿಕೆ ಆದೆ. ಗದ್ದೆಲಿ ಸ ಮೀನ್ ಗೋಂಚಿಕೆ ಆದೆ. ಬೆದ್ರ್‌ನಬಾಸ್‌ಂದಲೂ ಇದರ ಮಾಡಿಕಾದೆ. (ಎಂ.ಜಿ.ಕೆ.)

**ಗೋರಿ ಹಾಕುದು :** ಬೆತ್ತಂದ ಮಾಡ್ದ ಗೋರಿಗಳ ಹಿಡ್‌ಕಂಡ್ ಗದ್ದೆಂದ ಮೀನ್ ಹಿಡ್‌ದವೆ. ಗದ್ದೆನ ನೀರ್ ಕಡಿಮೆಯಾಕಂಡ್ ಬಂದಂಗೆ ಮೀನ್‌ಗ ಎಲ್ಲ ಗದ್ದೆ ನಡುಲಿರುವ ಬಡ್ಚಿಲ್‌ಲಿ ಸೇರುವೆ. 'ಬಡ್ಚಿಲ್' ತೇಳಿರೆ ಗದ್ದೆ ನಡುಲಿ ನೀರ್ ಹೋಕೆಂತೇಳಿ ಮಾಡ್ದ ಸಣ್ಣ ಕಣಿ ಇಲ್ಲರೆ ನೀರ್ ಹೋವ ಸಣ್ಣ ಜಾಗೆ. ಈ ಜಾಗೆಂದ ನೀರ್‌ನ ಆರ್‌ಸಿ ಬುಡ್ದು ಸುಲಬ. ವರ್‌ಸಕೊಂದ್ ಬೆಳೆ ಇರ್‌ವ ಗದ್ದೆ ಇರುವವೆಲ್ಲ ಹಿಂಗೆ ಮೀನು ಹಿಡ್‌ದವೆ. ಸಿಕ್ಕಿದ ಮೀನ್‌ಗಳ ಕಟ್ಟಿಕೊಂಡಿ 'ಕುಡ್ಕೆ'ಗಳ್‌ಲಿ ಕೂಡಿಸುವೆ, ಸಣ್ಣದಾದ ಬಾಯಿ ಇರ್‌ವ ಕುಡ್ಕೆಗಳ್‌ಂದ ಮೀನುಗಳೂ ಹೊರಗೆ ಹಾರ್‌ದುಲೆ, ಈ ಕುಡ್ಕೆಗಳ ಸೊಂಟಕೆ ಇಸುದರ್‌ಂದ, ಮೀನುಗಳ ಅದ್ಕೆ ತುಂಬ್‌ಸಿಕಂಬಕೆ ಸುಲಬ ಆದೆ.

ತೀರಾ ಮಲೆನಾಡ್‌ಲಿ ಗಾಳಕೆ ಹೋದವು ಮಾತ್ರ ಓಟೆ ಬೆದ್‌ರ್‌ನ ಕಬ್ಚೆಗೆ ಮೀನ್‌ನ ಸಿಕ್ಕಿಸಿಬುಟ್ಟವೆ. ಹಿಂಗೆ ಗೌಡ್ರುಗ ತಿಂಬಕೆತೇಳಿ ಬಗೆಬಗೆಲಿ ಬೇಟೆ ಆಡುವೆ. ಬೇಟೆ ಅವರ ಉಪಕಸುಬು, ತಮ್ಮ ಸುತ್ತಕೆ ಅವಸ್ಯಕತೆಗಾಗಿ ಮಾಡಿಕಂಡ ಕೆಲ ಸರಳ ತಂತ್ರಗಳ ಕಂಡ್‌ಕಂಡ್ ಬೆಳ್ಸಿಯೊಳ. ಉರ್‌ಲ್, ಅಡ್ಚಿಲ್ ಹಾಕುದರ್‌ಲಿ ಬಾರಿ ಉಸಾರ್. ಇಳ್‌ಜಾರ್ ಗುಡ್ಡೆಲಿ ಕಾಯಿನ ಹೊಣ್ಣುಸಿ ಬುಟ್ಟು, ಅದ್ಕೆ ಗುಂಡ್ ಹೊಡ್ದು, ಹೊಡಿ ಮಾಡ್ವ ಒಳ್ಳೊಳ್ಳ ಈಡುಗಾರರೊಳೊ. ಓಡ್‌ವ ಪ್ರಾಣಿಗೆ, ಹಾರುವ ಹಕ್ಕಿಗೆ ಗುಂಡು ಇಲ್ಲರೆ ಬಿಲ್ಲ್‌ಂದ ಕಲ್ಲ್ ಹೊಡ್‌ದ್ ನೆಲಕೆ ಬೀಳ್ಸುವ ಶೂರರ್ ಒಳೊ. ಗೌಡ್ರು ಕಾಡ್ ಪ್ರದೇಸಲಿ ಬೊದ್‌ಕುದರ್‌ಂದ ಈ ತರದ ಕಿಣಿಗ ಇರ್‌ದರ್‌ಲಿ ಆಸ್ಚರ್‌ಯ ಇಲ್ಲೆ. 'ಮನೆಲಿ ಹುಳಿ ಮೆಣ್ಸ್ ಕಡಿಯಕೆ ಹೇಳಿ, ಕಾಡಿಗೆ ಹೋಗಿ ಬೇಟೆ ಮಾಡಿ ಬಾವಸ್ಟ್ ಅವರವರ ಬೇಟೆನ ಮೇಲೆ ನಂಬಿಕೆ ಇರೋವು ಗೌಡ್ರುಗ' (ಪಿ.ಬಿ.)

**ಬೇಟೆ ದೆವ್ವಂಗ :** ಬೇಟೆನೇ ಪ್ರದಾನ ಕಸುಬಾಗಿ ಇರ್‌ವ ಸಮುದಾಯಗಳ್‌ಲಿ ಬೇಟೆ ದೆವ್ವಂಗ ಕಾಂಬಕೆ ಸಿಕ್ಕುದು ತೀರಾ ಸಾಮಾನ್ಯವಾದ ವಿಚಾರ ಆಗುಟು. ಗೌಡ್ರು ಬೇಟೆಗೆ ಹೊರ್‌ಡಿಕೆ ಮುಂದೆ ಸಾಮಾನ್ಯ 'ಕುಕ್ಕೃತಿ ಬಿಲ್ಲು' ಮತೆ ಬೊಯ್ನಾಟಿ ದೆವ್ವಂಗಳಿಗೆ ಕೈ ಮುಗ್‌ದವೆ.

'ಕುಕ್ಕೆತಿ ಬಿಲ್ಲು' ದೆವ್ವಕೆ ಕೈ ಮುಗಿವ ಜಾಗೆಲಿ ಸಣ್ಣ ಕತ್ತಿ ಒಂದಿದ್ದದೆ. ಇದ್ಕೆ ಕೈ ಮುಗ್ದು ಬೇಟೆಗೆ ಹೋದರೆ ಬೇಟೆ ಸಿಕ್ಕಿದೆ ತೇಳ್‌ವ ನಂಬಿಕೆ ಉಟ್ಟು. ಹೆಸರ್‌ನ ಆದಾರಂದ ಇದೊಂದು 'ಹೆಣ್ಣ್ ದೆವ್ವ' ತೇಳಿ ಹೇಳಕ್. ಕುಕೃತಿ, ಕುಕ್ಕೆರಿ ತೇಳುವ ಹೆಸ್‌ರ್‌ಗ ಸ್ತ್ರೀಲಿಂಗ ರೂಪಿಯಾಗಿ ದಲಿತರ್‌ಲಿ ಬಳಕೆಲಿ ಉಟ್ಟು. ಕಾಡ್‌ಲಿ ಪ್ರಾಣಿ ಸಿಕ್ಕಿರೆ, ಅದರ ತಂದ್ ಮಾಸ ಮಾಡಿ, ಬೇಸಿ ಊಟ ಮಾಡಿಕೆ ಮುಂದೆ, 'ಕುಕ್ಕೆತಿ ಬಿಲ್ಲು'ಗೆ ಇಕ್ಕಿದ್, ಎಲ್ಲವೂ ಕೈ ಮುಗ್‌ದವೆ. ಕುಕೃತಿ ಬಿಲ್ಲು 'ಅದರ್‌ನ ಸ್ವೀಕರಿಸಿದೆ ತೇಳುವ ನಂಬಿಕೆನು ಉಟ್ಟು.

ಬೊಯ್ನಾಟಿ ದೆವ್ವಗ ಅಂದರೆ ತೊಂಡಚ್ಚ, ಕೋರಚ್ಚನ್, ಕಂಡನಾರ್ ಕೇಳನ್ ದೆವ್ವಗಳ ನಂಬುವ ಮನೆತನಗಳ್‌ಲಿ ಆ ದೆವ್ವಗಳಿಗೆ ವರ್‌ಸಕೊಮ್ಮೆ ಕೊಡ್‌ವ ಮರೋಟ್‌ನ ಲೆಕ್ಕಲಿ ಕಡ್ಡಾಯ ಆಗಿದ್ ಬೇಟೆಗೆ ಹೋವ ಕ್ರಮ ಉಟ್ಟು. ಬೇಟೆಗೆ ಹೋವ ಮುಂದೆ ಈ ದೆವ್ವಂಗಳ ಸ್ತಾನಕೆ ಬಂದ್ ಬೆಡಿ ಹತ್ಯಾರ್‌ಗಳ ಇಸಿ ಕೈಮುಗ್ದ್ ಹೋದವೆ. ಬೇಟೆ ಸಿಕ್ಕಿರೆ ಇದೇ ಸ್ತಾನಲಿ ಸುರುಗೆ ದೆವ್ವಗಳಿಗೆ ಇಕ್ಕುವೆ. ಈ ಬೇಟೆಗ ಹೆಚ್ಚಾಗಿ ಕೂಡ್ ಬೇಟೆನೆ ಆಗಿದ್ದದೆ. ಒಬ್ಬೊಬ್ಬನೆ ಹೋಗಿ ಸಿಕ್ಕಿರೂ ಬಕ್ತಿಲಿ ಈ ದೆವ್ವಗಳಿಗೆ ಇಕ್ಕುವೆ. ಹನ್ನೆರ್‌ಡ್ ವರ್‌ಸಕೊಮ್ಮೆ ನಡಿವ ಈ ದೆವ್ವಗಳ ತೆಯ್ಯಂಕಟ್ಟು ಮಹೋತ್ಸವಕೆ ಸಾರ್ದರ್ಣ ಆಗಿ ಸೀಮೆ, ರಾಜ್ಯದ ಗಡಿ ದಾಟಿ ಜೆನಂಗ ಈ ದೆವ್ವದ ಹೆಸರ್‌ಲಿ ಬೇಟೆ ಆಡಿ ತಂದ್ ಇಲ್ಲಿಗೆ ಒಪ್ಪುಸುವೆ. ಕಂಡನಾರ್ ಕೇಳನ್' ಅಪ್ಪಟ ಬೇಟೆಗಾರ ದೆವ್ವ ಆಗಿರ್‌ದರ್‌ಂದ ದೆವ್ವ ಕೋಣಿವ ಹೊತ್ತುಗೆ ಸಿಕ್ಕಿದ ಎಲ್ಲಾ ಬೇಟೆನ ಈ ದೆವ್ವದ ಮುಂದೆ ತಂದ್ ದೆವ್ವಕೆ ಒಪ್ಪುಸುವೆ. ಈ ಹೊತ್ತುಗೆ ದೆವ್ವ ಕೋಣಿವ ಜಾಗೆ,ಅಲ್ಲಿ ದೆವ್ವದ ಬೆಳ್ಚಪಾಡರ ಕೂಕ್‌ಳ್ ಅದರೊಟ್ಟಿಗೆ ದೆವ್ವದ ಮೇಲೆಗೆ ಹಾರಿದ್ ಕೋಣಿವ ಕೊಣ್‌ತನ ನೋಡ್ದೆ ಕಣ್ಣ್‌ಗೆ ಹಬ್ಬ. ದೆವ್ವದೆದುರ ಕ್ರಮಕೆ ಸಜ್ಜಿ ಮಾಡಿ ತೆಗ್ದವೆ.ಅದಾಗಿ ಬೇಟೆನ ಪ್ರಸಾದನ ಬಕ್ತಮ್ಮಾರ್‌ಗೆ ಕೊಟ್ಟವೆ. ಸುಳ್ಯಲಿ ಕೇರಳಕೆ ಹೊಂದಿಕಂಡ ಊರುಗಳ್‌ಲಿ ಬಯ್ನಾಟಿ ದೆವ್ವಗಳ ಆರಾದನೆ ಉಟ್ಟು. ಆಲೆಟ್ಟಿ, ಅಜ್ಜಾವರ, ಜಾಲ್ಸೂರು, ಪೆರ್ಜದ ಪ್ರತಿಸ್ಟಿತ ಮನೆತನಗಳ್‌ಲಿ ಬೊಯ್ನಾಟಿ ದೆವ್ವಗಳ ಸ್ತಾನ ಉಟ್ಟು.

**ಗಣ ಪೂಜೆಯ ಕ್ರಮ :** ಹಜೆರಿ ಮಾಡ್ದ ಮಾಸಲಿ ಹಳ್ಳ್ಳಿ ತೆಗ್ದ್, ಉಪ್ಪು, ಹುಳಿ, ಕಾರ ಹಾಕಿ ಲಾಯ್ಕ್ ಬೇಸುವೆ. ಕಾಡ್‌ಲಿ ಅಗಲ ಇರ್‌ವ ಯಾದೇ ಮರದ ಐದ್ ಸೊಪ್ಪುನ ತಂದ್ ಅದ್‌ಕೆ ಹಳ್ಳಿ ಬೇಸಿದ ಮಾಸನ ಹಾಕುವೆ. ಆ ಐದ್ ಎಲೆಗಳ ದೊಡ್ಡದಾದ ಮರದ ಬುಡಲಿ ಮೂಡಪಡ್ವಕೆ ಇಸಿ, ಬೇಟೆಗೆ ಸೇರ್‌ದವೆಲ್ಲ ಅದ್ಕೆ ಕೈ ಮುಗ್‌ದ್; ಒಂದ್ ನಿಮ್ಸ ಮಾತಾಡದೆ, ಅಗಲ್‌ಗೆ ಬೆನ್ನ್ ಹಾಕಿ ನಿತ್ತವೆ. ಅದಾಗಿ ಸೊಪ್ಪುಲಿದ್ದ ಮಾಸನ ಸಣ್ಣ ಮಕ್ಕಳಿಗೆ ತಿಂಬಕೆ ಕೊಟ್ಟವೆ.

ಹಿಂಗೆ ಮಾಡಿರೆ ಕಾಡ್‌ಲಿದ್ದ ಅಸುರ ಸಕ್ತಿಗಳಿಗೆ ಕುಸಿ ಆದೆ ತೇಳಿ ಗೌಡ್ರುಗ ನಂಬುವೆ. ಅಸುರೀ ಗಣಂಗಳಿಗೆ ತೃಪ್ತಿ ಆದರೆ ಮುಂದೆ ಆ ಮಾಸಂದ ಮೊಯಿಂಸಂಗೆ ಯಾದೇ ತೊಂದರೆ ಆಕಿಲೆಂತನು, ಗಣಗಳಿಗೆ ತೃಪ್ತಿ ಆಗದಿದ್ದರೆ ಮಾಸ ತಿಂದವ್‌ಕ್ಕೆಲ್ಲ ಹೊಟ್ಟೆ ಬೇನೆ ಬಂದದೆ, ಇಲ್ಲರೇ ಹೊಟ್ಟೆ ಹಾಳಾದೆತೇಳಿ ಗೌಡ್ರು ನಂಬಿಯೊಳೊ.

**ಬೆಡಿ ಪೂಜೆ :** ಬೇಟೆಲಿ ದೊಡ್ಡದ್ ಏನಾರ್ ಸಿಕ್ಕಿರೆ ಬೇಟೆಗಾರನ ಬೆಡಿಗೆ ಪೂಜೆ ಮಾಡ್‌ವ ಸಂಪ್ರದಾಯ ಎಲ್ಲಲ್ಲಿ ಉಟ್ಟು. ಇದರ 'ಬೆಡಿ ಪೂಜೆ' ತೇಳುವೆ. ಬೇಟೆ ಆದ ಮೇಲೆ ಬೆಡಿನ ಲಾಯ್‌ಕ್ ತೊಳ್‌ದ್,




ಗಂದದೂಪದ ಹೊಗೆ ಹಾಕಿ, ಇಜ್ಜಲ್‌ನ ಮೂಡ ದಿಕ್ಕ್‌ಲಿ ಒಂದ್ ಮಣೆನ ಮೇಲೆ ಬೆಡಿನ ನೆಟ್ಟಂಗೆ ಇಸುವೆ. ಅದರೆದ್‌ರ್ ಎರಡ್ ಬಾಳೆ ಎಲೆ ಹಾಕಿ, ಎರಡೆರಡು ರೊಟ್ಟಿ ಹಾಕಿ ಅದೇ ಬೆಡಿಂದ ಸಿಕ್ಕಿದ ಪ್ರಾಣಿನ ಮಾಸನ ಬೇಸಿ ಎಲೆಗೆ ಹಾಕುವೆ. ಮನೆನ ಗಂಡಸ್‌ಗೆಲ್ಲ ಒಟ್ಟ್ ಸೇರಿ ಅದ್ಕೆ ಬಕ್ತಿಂದ ಕೈ ಮುಗ್‌ದವೆ. ಈಡುಗಾರ ಅದೇ ಬೆಡಿಂದ ಬಾಣಕೆ ಒಂದ್ ಗುಂಡು ಹಾರಿಸಿದೆ.ಸೇರ್‌ದ ಎಲ್ಲವೂ ಎಲೆಗೆ ಹಾಕಿದ ಮಾಸ ಮತ್ತೆ ರೊಟ್ಟಿನ ತಿಂಬೊತ್ತಿದ್ದೊ. ಹೀಂಗೆ ಗೌರವ ಕೊಟ್ಟವೆ.

ಬೆಡಿನ ಸಾಮಾನ್ಯ ಆಗಿ ತುಂಬ ಪವಿತ್ರಂತೇಳಿ ಗ್ರೇಸುವೆ. ಒಲೆ ಕರೆಲಿ ಬೆಚ್ಚಂಗೆ ಇರಲಿಂತೇಳಿ ಬೆಡಿನ ಜಾಗ್ರತೆಲಿ ಇಸುವೆ. ಅದರ ಹೆಣ್ಮಕ ಮುಟ್ಟಿಕಾಗದ್ ತೇಳಿ ಕ್ರಮ ಉಟ್ಟ್, ಆಕಸ್ಮತ್ತಾಗಿ ಮುಟ್ಟಿರೆ, ಮತ್ತೆ ಬೇಟೆಗೆ ಹೋವ ಜಾಗೆಲಿ ಕುರ್‌ದಿ ನೀರ್‌ಲಿ ಬೆಡಿನ ಸುದ್ದ ಮಾಡ್‌ವೆ. ಹಿಂಗೆ ಸುದ್ದ ಮಾಡದಿದ್ದರೆ ಬೇಟೆಲಿ ಪ್ರಾಣಿಗ ಕಾಂಬಕೆ ಸಿಕ್ಕುದುಲೆ ತೇಳ್‌ವೆ ನಂಬಿಕೆ ಉಟ್ಟು.

ಹಿಂಗೆ ಬೇಟೆ ಗೌಡ್ರ ಪ್ರದಾನ ಕಸುಬಲ್ಲದೇ ಇದ್ದರೂ ಉಪಕಸುಬಾಗಿ ಜೆನಪ್ರಿಯ ಆಗುಟು. ಆದರೆ ಇತ್ತೀಚೆಗೆ ಬೇಟೆ ಸಂಸ್ಕೃತಿ ತುಂಬಾ ಕಡಿಮೆ ಆಗುಟು. ಮೀನ್ ಬೇಟೆ ಮತ್ತೆ ಹಂದಿ ಬೇಟೆನ ಬುಟ್ರೆ ಒಳ್ದ ಬೇಟೆನ ಕ್ರಮಗೆಲ್ಲ ಮರೆ ಆಗತುಟ್ಟ್. (ಪಿ.ಬಿ.)

**ಮಾಂಸಾರ :** ಜೆನಪದರ್ ತಾವ್ ಬೆಳ್ದ ಪಸ್‌ಲ್ ಗಳ ಹಾಳ್ ಮಾಡಿಕೆ ಬಂದ ಕಾಡ್ ಮೃಗಂಗಳ ಬೇಟೆ ಮಾಡಿ ಅದರ ಮಾಸನ ತಿಂಬೊಕೆ ಸುರು ಮಾಡ್ದೊ. ಕ್ರಿಸಿನ ನಂಬಿ ಬೊದ್‌ಕ್‌ವ ಜೆನಂಗಳೆ ಹೆಚ್ಚ್ ಮಾಸ ತಿಂಬೊದರ ನಾವ್ ಇಲ್ಲಿ ನೋಡಕ್. ಹಂಗೆ ಈ ಮಾಸಹಾರಂತೇಳ್‌ದು ಜೆನಪದ ಸಂಸ್ಕ್ರತಿನ ಒಂದ್ ಬಾಗನೇ ಆಗುಟ್ಟುಂತೇಳ್ರೆ ತಪ್ಪಾಕಿಲೆ.

ಈ ಮೊಯಿಂಸರ ಜೀವನಲಿ ತಿಂಬೊದು ಬಾರಿ ಮುಕ್ಯ ಆದಂತದ್. ಅದ್ದಾಗಿನೇ ಜೆನಪದ ಸಂಸ್ಕ್ರತಿಲಿ ಉಂಬ ವಿಚಾರಲಿ ಎಂತ ತಿನೊಕು,, ಎಂತರ ತಿಂಬೊಕೆ ಬೊತ್ತು, ಎಸ್ಟ್ ತಿನೊಕು, ಹೆಂಗೆ ತಿನೊಕುಂತೇಳುವ ವಿಚಾರಕೆ ಹೆಚ್ಚ್ ಒತ್ತು ಕೊಟ್ಟಳ. ಒಂದ್ ಕಾಲ ಇತ್ತ್ ಆ ಕಾಲಲಿ ಮೊಯಿಂಸ ಮೊಯಿಂಸನನೆ ತಿಂಬೊತ್ತಿದ್ದ ಕಾಲ ಅದ್, ಇಂದ್ ಇದ್ ಬದಲಾವುಟ್. ಇಂದ್ ಮೊಯಿಂಸರ ಬೊಲಿ ಕೊಡುವ ಬದಲ್ ಪ್ರಾಣಿಗಳ ಬೊಲಿ ಕೊಡುವ ಪೊದ್ದತಿ ಉಟ್ಟು. ಇದ್ ಮೊಯಿಂಸರ ಬೊಲಿ ಕೊಡ್ದರ ಮೀರ್‌ದ ಸಂಗತಿ ಆದರು ಇದ್ ತಮ್ಮ ಅನುಕೂಲಕೆ ತಕ್ಕಂಗೆ ಮೊಯಿಂಸರೇ ಹುಟ್ಟು ಹಾಕಿಕಂಡ ಪೊದ್ದತಿ. ಮೊಯಿಂಸರ ಬದಲ್‌ಗೆ ಪ್ರಾಣಿಗಳ, ಪ್ರಾಣಿಗಳ ಬದಲ್‌ಗರ ನೆಟ್ಟಿಕಾಯಿಗಳ ಬಳ್ಸುದು ಮೊಯಿಂಸನೇ ಮಾಡಿಕಂಡ ಕಲ್ಪನೆಗ. ಹಿಂಗೂ ಆಚರ್‌ಸಕ್ ತ ಹೇಳ್‌ದು ಮೊಯಿಂಸ ಮಾಡ್ದ ನಿರ್‌ದಾರ. ಮೊಯಿಂಸರ್ ಮೊಯಿಂಸರ ತಿಂಬೊದ್ ಹೆಂಗೆ ತಪ್ಪೋ ಹಂಗೆನೆ ಕೆಲವ್ ಕಡೆ ಕೆಲವ್ ಪ್ರಾಣಿಗಳ ತಿಂಬೊದುನೂ ಬಾರಿ ತೊಪ್ಪು. ನಮ್ಮ ಊರ್‌ನೆರೆಕರೆ ಸಮ್ಮಂದಪಟ್ಟಂಗೆ ಹೇಳ್ದಾರ್, ಬೆಳ್ತಂಗಡಿ ತಾಲೂಕುನ ಶಿಶಿಲ ಗ್ರಾಮದ ಮಲೆಕುಡಿಯರ್‌ಲಿ ಉರಿಯೊಳ್ ಮತ್ತೆ ಕುದುಂಬಲು ಹಕ್ಕಿನ ಒಟ್ಟುಗೆ ಗೈಪು ಮಾಡಿಕೆ ಬೊತ್ತು. ಇದ್ಕೆ ಸಮ್ಮಂದ ಪಟ್ಟಂಗೆ ಒಂದ್‌ಕತೆನೂ ಉಟ್ಟು. ಒಂದ್ ದಿನ ಅಣ್ಣ ಮತ್ತೆ ತಮ್ಮ ಜೇನ್ ತೆಗೆಕೆ ಕಾಡ್‌ಗೆ ಹೋದವೆ. ಮರಲಿ ಜೇನ್ ಇರ್‌ದರ ನೋಡ್ದ ಅಣ್ಣ ತಮ್ಮನ ಮರ ಹತ್ತ್‌ಸಿದೆ. ತಮ್ಮ ಮರ ಹತ್ತಿ ಜೇನ್ ತೆಗೆತಿರ್‌ಕನ ಅಣ್ಣ ಮರಂದ ಏಣಿ ತೆಗ್‌ದ್ ಕೆಳಗಿಸಿ ಮನೆಗೆ ಹೋದೆ. ಮರಂದ ಇಳಿಯಕಾಗದೆ ತಮ್ಮ ಮರಲಿ ಮರ್‌ಟ್‌ಕಂಡ್ ಕುದ್ದದೆ. ಅವ್ವ ಇಂವನ ಬಗ್ಗೆ ವಿಚಾರ್‌ಸಿಕನ ಅಂವ ಕಾಡ್‌ಲೇ ಇರ್‌ದು ಗೊತ್ತಾಗಿ ಅದ್ ಕಾಡ್‌ಗೆ ಹುಡ್ಕಿಕಂಡ್ ಹೋದೆ. ಕಾಡ್‌ಲಿ ಮರ ಇಳಿಯಕಾಗದೆ ಮರ್‌ಟ್‌ಕಂಡ್ ಇರ್‌ದರ ನೋಡ್‌ದ ಅವ್ವ ಕೆಳಗೆ ಬಾಕೆ ಮಜ್ಜನೊಟ್ಟಿಗೆ ಕೇಳ್‌ದೆ. ಆಗ ಇಂವ ಅಣ್ಣ ಮಾಡ್ದ ಮೋಸನ ತಿಳ್ಸಿ ನಾ ಉರಿಯೊಳ್ ಆಗಿ ಮರಲೇ ಒಳ್ದನೆ ಅಣ್ಣ ಕುದುಂಬಲು ಹಕ್ಕಿ ಆಗಿ ಹಾರಿ ಹೋಗಲಿ ಅಂತ ಹೇಳ್ದೆ.

ಹಿಂಗೆ ಅಣ್ಣ ತಮ್ಮಂದಿರಾಗಿದ್ದೊವ್ ಉರಿಯೊಳ್ ಮತ್ತೆ ಕುದುಂಬಲು ಆಗಿ ಬದಲಾದರ್‌ಂದ ಅವೆರಡರ ಒಟ್ಟಿಗೆ ಹಾಕಿ ಗೈಪು ಮಾಡಿಕೆ ಬೊತ್ತು. ಅಸ್ಟೆ ಅಲ್ಲ ಇನ್ನೊಂದ್ ವಿಚಾರೊನು ಉಟ್ಟು. ಉರಿಯೊಳು ರೂಪೊಲಿ ಮತ್ತೆ ಸೊರಲಿ ಸಣ್ಣ ಕೂಸುನಂಗೆ ಕಾಂಬೊದರ್‌ಂದಾಗಿ ಅದರ ಕೊಲ್ಲಿಕೆ ಬೊತ್ತ್ ಅಂತನೂ ಕೆಲವ್ ಹೇಳ್ವೆ. ಕಾಡ್‌ಪಾಪ ತ ಕರ್‌ಸಿಕಂಬ ಇದರ ಅನಿಸ್ಟದ ಪ್ರಾಣಿ ಅಂತನೂ ಕರ್‌ದವೆ. ಬೇಟೆಗೆ ಹೋಕನ ಎಲ್ಲಾರ್ ಇದ್ ಕಣ್ಣ್‌ಗೆ ಬಿದ್ದರೆ ಆ ದಿನ ಬೇಟೆನೆ ಸಿಕ್ಕುದ್ಲೆಂತೇಳ್ವ ನಂಬಿಕೆನೂ ಉಟ್ಟು. ಇದ್ ಮನೆ ಹಕ್ಕಲೆ ಬಂದ್ ಮರ್ಟರೆ ತೊಟ್ಟಿಲ್‌ಲಿ ಇರುವ ಕೂಸುಗೆ ಅನಿಸ್ಟ ಅಂತನೂ ಹೇಳ್ವೆ. ಹಿಂಗೆ ಉರಿಯೊಳ್ ಮತ್ತೆ ಕುದುಂಬಲುನ ಕತೆ ಅಣ್ಣ ತಮ್ಮಂದರ ಸಮ್ಮಂದದ ಬಗ್ಗೆ ತಿಳ್ಸಿದೆ. ಅಣ್ಣ ತಮ್ಮಂದರ್ ಜಾಗೆಗೆ ಬೇಕಾಗಿ ಏನ್ ಬೇಕಾರ್ ಮಾಡ್‌ವೆ ತ ಹೇಳ್‌ದಕೆ ಇದ್ ಒಂದ್ ಉದಾರಣೆ. ಅಣ್ಣ ಕುತಂತ್ರ ಮಾಡಿ ತಮ್ಮನ ಕಾಡ್‌ಗೆ ಕರ್‌ಕಂಡ್ ಹೋಗಿ ಅಲ್ಲೇ ಬುಟ್ಟು ಬಂದ್ ತಾನ್ ಮಾಡಕಾದರ ಸಾದ್‌ಸಿದೆ. ಇದ್ ಮಲೆಕುಡಿಯ ಸಮಾಜಲಿ ಆಸ್ತಿಗಾಗಿ ಅಣ್ಣತಮ್ಮಂದರ್ ಮಾಡ್‌ವ ಕುತಂತ್ರದ ಕತೆ. ಇದ್ಕೆ ಹೇಳ್ದು ಹುಟ್ಟಿಕನ ಅಣ್ಣತಮ್ಮಂದರ್ ಬೆಳೆಕನ ದಾಯಾದಿಗ ತ. ಕತೆನ ಕಡೆಲಿ ಅಮ್ಮ ಬಂದ್ ಮಜ್ಜನ ಮನೆಗೆ ವಾಪಾಸ್ ಕರೆಕನನೂ ತಮ್ಮ ಅಣ್ಣನ ಕೆಟ್ಟ ಉದ್ದೇಸನ ತಿಳ್ಸಿ ಕಾಡ್‌ಲೇ ಒಳಿವ ಮಾತ್‌ನ ಹೇಳ್‌ವಲ್ಲಿನೂ ಇಂತ ಸೂಚನೆಗಳ ಕಾಣಕ್.

ಸಮ್ಮಂದಗ ಸಂಸ್ಕ್ರತಿಂದ ಪ್ರಕೃತಿಗೆ ದಾಟಿ ಬಂದದೆ. ಅಣ್ಣ ತಮ್ಮಂದಿರ್ ಇಬ್ಬೊರ್ ಉರಿಯೊಳು ಮತ್ತೆ ಕುದುಂಬು ಆಗಿ ರೂಪ ಬದಲಾವಣೆ ಪಡ್‌ಕಂಡವೆ. ಇದ್ ಮಲೆಕುಡಿಯ ಸಂಸ್ಕೃತಿಲಿ ಅಪಸಕುನದ ಸೂಚನೆ. ಮಲೆಕುಡಿಯ ಸಮಾಜಲಿ ಅಣ್ಣ ತಮ್ಮಂದರ್ ಒಟ್ಟಿಗೆ ಹೊಂದಾಣಿಕೆಲಿ ಬಾಳ್ವೆ ಮಾಡಿಕಾಗದೆ ತಮ್ಮ ಸಮ್ಮಂದನ ಪ್ರಕೃತಿಗೆ ವರ್‌ಗಾವಣೆ ಮಾಡುದರ ಕಾಣಕ್.

ಈಗ ಹಂದಿಮಾಸ ತಿಂಬೊದ್ ಎಲ್ಲಾ ಕಡೆಗಳ್‌ಲಿ ಕಂಡ್‌ಬಂದರೂ ಒಂದ್ ಕಾಲಲಿ ಇದರ್‌ನ್ನೂ ತಿಂಬೊಕೆ ಬೊತ್ತು ತ ಹೇಳ್‌ತಿದ್ದೊ ಹಂದಿ ಮಾಸ ತಿಂದವಂಗೆ ಗುರುಬಲ ಇಲ್ಲೆ. ಹಂದಿ ಮಾಸ ತಿಂದವನ ದೇವ್‌ರ್ 48 ದಿನ ಕೈ ಬುಟ್ಟವೆ ತ ಹೇಳ್‌ವೆ. ಈ ನಂಬಿಕೆ ಹಂದಿ ತಿಂಬೊಕೆ ಬೊತ್ತ್‌ಂತೇಳಿಕೆ ಕಾರಣಗ. ಬವ್‌ಸ ಹಂದಿ ನಮ್ಮ ಬತ್ತದ ಗದ್ದೆನ ಹಾಳ್ ಮಾಡ್‌ದರ್‌ಂದ ಅದರ ಸಾಂಕುದಕ್ಕೂ ನಿಸೇದ ಉಟ್ಟು. ತುಳುನಾಡ್‌ಲಿ ಪಂಜುರ್‌ಲಿ, ಮಲೆರಾಯ ದೆವ್ವಗಳ ಆರಾದನೆ ಮಾಡ್‌ದು ಇನ್ನೊಂದ್ ಕಾರಣ ಇರ್‌ದು ಏಕೆಂತೇಳ್ರೆ ಪಂಜುರ್‌ಲಿ ಮಲೆರಾಯ ದೆವ್ವಗ ಇರ್‌ವಲ್ಲಿ ಹಂದಿಬೇಟೆ ಮಾಡ್‌ದು, ಮಲೆರಾಯ ದೆವ್ವ ಚಾಕ್‌ರಿಲಿ ಹಂದಿ ಮಾಸ ತಿಂಬಕಾಗದ್‌ಂತೇಲ್‌ದು ಇಂದ್‌ಗೂ ಪ್ರಚಲಿತಲಿ ಉಟ್ಟು. ಇದರ್‌ಂದಾಗಿನು ಹಂದಿ ಮಾಸ ತಿಂಬಕೆ ಬೊತ್ತ್ ತ ಹೇಳ್‌ದು ಆಗಿರಿಕೂ ಸಾಕ್.

ಅರೆಬಾಸೆಲಿ ಸಂಸ್ಕೃತಿಲಿ ಬಾಳೆಮೀನ್ ಮತ್ತೆ ಮೂಡ್ ಮೀನ್‌ಗಳ ಒಟ್ಟಿಗೆ ಗೈಪು ಮಾಡಿಕೆ ಬೊತ್ತ್ ತ ಹೇಳ್‌ವ ನಂಬಿಕೆ ಉಟ್ಟು. ಇದ್ಕೆ ಸಮ್ಮಂದ ಪಟ್ಟಂಗೆ 'ಒರೂ ಜಪ್ಪ, ಜಮನೇರ' (ಒಮ್ಮೆ ಇಳಿಯೋ ಜಮನೇರಳೆಯೋ) ತ ಹೇಳ್‌ವ ಕತೆಗ ಚಾಲ್ತಿಲಿ ಉಟ್ಟು. ಈ ಕತೆ ಅಣ್ಣ ತಂಗೆಕಳ ಲೈಂಗಿಕ ಸಮ್ಮಂದ ತೊಪ್ಪು ತ ಹೇಳ್‌ವ, ಬೇರೆ ಬೇರೆ ಬೊಳಿನೊವ್ ಮೊದ್ವೆ ಆಕೂ, ಒಂದೇ ಬೊಳಿಯೊವ್ ಮೊದ್‌ವೆ ಆಕೆ ಬೊತ್ತು ತ ಹೇಳ್ವ ವಿಚಾರಕೆ ಸಮ್ಮಂದ ಪಟ್ಟಂಗೆ ಬಾಳೆಮೀನ್, ಮೂಡ್ ಮೀನ್‌ಗಳ ಒಟ್ಟಿಗೆ ಗೈಪು ಮಾಡಿಕಾಗದ್ ತ ಹೇಳ್‌ವ ವಿಚಾರಕ್ಕೂ ಸಮ್ಮಂದ ಉಟ್ಟು. ಇದರ ಬಗ್ಗೆ ಈಗ ತುಂಬ ಅದ್ಯಯನ ಕೂಡ ನಡ್‌ದುಟು. ಅಗತ್ಯಂದ ಹೆಚ್ಚ್ ಉಂಡರೆ ಆರೋಗ್ಯ ಹಾಳಾದೆ, ಅಜೀರ್ಣ ಆದೆ. ದೇಹದ ಆರೋಗ್ಯ ಹಾಳಾಗದಂಗೆ ನೋಡಿಕಂಬೊಕೆ ಒಳ್ಳ ತಿನಿ ತಿನೊಕು. ಕೆಲವೊಂದ್ ಪ್ರಾಣಿಗಳ ಮಾಸ ಕೂಡ ವೈದ್ಯಕೀಯ ಚಿಕಿತ್ಸೆಲಿ ಆಹಾರ ಆಗಿ ಬಳ್ಸುವೆ. ಉದಾರಣೆಗೆ ವಿಸದ ಹಾವ್ ಕಚ್ಚಿದವಂಗೆ ಉಡು ಇಲ್ಲರೆ ಮುಂಗುಲಿನ ಗೈಪು ಕೊಟ್ರೆ ವಿಸ ನಾಟುದುಲೆ ತೇಳ್‌ದು ಜೆನಪದರ ನಂಬಿಕೆ. ಇದ್‌ಕೆ ಕಾರಣನೂ ಉಟ್ಟು. ಮುಂಗುಲಿ ತಿಂಬೊದು ವಿಸದ ಹಾವುಗಳ, ಇದರೊಟ್ಟಿಗೆ ಇನ್ನೊಂದ್ ನಂಬಿಕೆ ಉಟ್ಟು. ಮುಂಗುಲಿ ನಾಗರಹಾವುನ ಕಂಡಂಗೆ ಅದರ ಸುತ್ತ ಉಚ್ಚೆ ಹೊಯ್ದ್ ಆ ಹಾವು ಅದರ್‌ಂದ ಹೊರಗೆ ಹೋಗದಂಗೆ ತಡ್‌ದದೆ. ಆಮೇಲೆ ಹಾವುನ ತಲೆ, ದೇಹ ಹಂಗೆ ಬೀಲನ ಮೂರ್ ತುಂಡು ಮಾಡಿ ನಡುನ ಒಂದ್ ತುಂಡು ತಿಂದದೆ. ಒಳ್‌ದೆರಡ್ ತುಂಡುಗ ಅಂದರೆ ತಲೆ ಮತ್ತೆ ಬೀಲದ ತುಂಡುಗಳ ಒಟ್ಟಿಗೆ ಸೇರ್‌ಸಿ ಹಕ್ಕೆಲೆನ ಗಿಡ್ಡೆಬುಡಕೆ ಹೋಗಿ ಯಾದೋ ಒಂದ್ ಮೊದ್ದ್‌ನ ಸೊಪ್ಪುನ ತಂದ್ ಆ ಬಾಗಕ್ಕೆ ಮುಟ್ಟುಸಿ ಹಾವುನ ಇಡಿ ಮಾಡಿದ್ ಬುಟ್ಟದೆಂತ ಹೇಳ್‌ವೆ ಇಲ್ಲಿ ಮುಂಗುಲಿ ಹಾವುನ ವೈರಿ ಆಗಿ ಕಂಡದೆ. ಅಸ್ಟೇ ಅಲ್ಲದೆ ಹಾವುನ ತಿಂದ್ ತನ್ನ ದೇಹಲಿ ವಿಸನ ನಿಯಂತ್ರಣ ಮಾಡ್‌ವ ಸಕ್ತಿನನು ಪಡ್‌ಕಂಡದೆ. ಹಂಗಾಗಿನೇ ಮೊಯಿಂಸರ್‌ಗೆ ಹಾವ್ ಕಚ್ಚಿಕನ ಹಾವುನ ವೈರಿ ಆದ ಮುಂಗುಲಿನ ಮಾಂಸನ ತಿಂದರೆ ಆ ವಿಸನ ನಿಯಂತ್ರಿಸಕ್ ತ ಹೇಳ್ದರ ಕಂಡ್‌ಕಂಡ. ಹಿಂಗಾಗಿ ಒಂದ್ ಪ್ರಾಣಿನ ವಿಸೇಸ ಗುಣ ಮೊನ್‌ಸನ ಕಾಯಿಲೆಗಳ ಗುಣಪಡ್‌ದಿದೆ. ಇಲ್ಲಿ ವಿರೋದ ತತ್ವ ಅನ್ವಯಿಸ್‌ದರ ನಾವ್ ಇಲ್ಲಿ ಗಮನಿಸಕ್. ಪಕ್ಷಪಾತದಂತ ಕಾಯಿಲೆಗೆ ಪಾರಿವಾಳದ ಮಾಸ ಅಲ್ಲರೆ ರಕ್ತನ ಬಳಸುದರ್‌ಂದ ಕಾಯಿಲೆ ಗುಣ ಮಾಡಕ್‌ಂತನೂ ಹೇಳ್‌ವೆ. ಹಂಗಾಗಿದೆ ಪಾರಿವಾಳನ 'ಪಕ್ಷಪಾತ ಹಕ್ಕಿ'ಂತನೂ ಕರ್‌ದವೆ. ಇದರಂಗೆ ಮೊಯಿಂಸರ್ ಬೇರೆ ಬೇರೆ ಕಾಯಿಲೆಗೆ ಮುಚ್ಚ, ಮೊಲ, ಹಂದಿ, ಬೆಕ್ಕು(ಕಬ್ಬೆಕ್ಕು) ನ ಮಾಸನ ತಿಂಬೊತ್ತಿದ್ದೊ. ಹಿಂಗೆ 'ಆರೋಗ್ಯ ' ದ ವಿಚಾರ ಜೆನಪದರ 'ಆಹಾರ' ದ ಪರಿಕಲ್ಪನೆನ ಬಾಗ ಆಗಿ ಕೆಲ್ಸ ಮಾಡ್ದೆ. ಆರೋಗ್ಯಕ್ಕು ಆಹಾರಕ್ಕೂ ಹಕ್ಕಲೆನ ನೆಂಟಸ್ತಿಗೆ ಉಟ್ಟು ಅಂತಾನೇ ಹೇಳಕ್. (ಎ.ಎ.)

**ಮೀನ್ ಹುಡ್ಕೆ :** ಮೀನ್ ತುಂಬುಸುವ ಕುಕ್ಕೆಗೆ ಮೀನ್ ಹುಡ್ಕೆಂತ ಹೇಳ್‌ವೆ. ಗಾಳ ಹಾಕಿ, ಬಲೆ ಬೀಸಿ ಅಲ್ಲರ್ ಕೂಳಿ ಇಸಿ ಹಿಡ್ದ ಮೀನ್‌ಗಳ ತುಂಬುಸುವ ಕುಕ್ಕೆ. ಈ ಕುಕ್ಕೆನ ಹೆಚ್ಚಾಗಿ ಬೆತ್ತದ ಬೊಳ್ಳಿಂದಲೇ ಮಾಡುದು. ಮಾದ್ರಿ ಬೊಳ್ಳಿ, ಇಂಜೆರ್ ಬೊಳ್ಳಿಂದಲೂ ಮಾಡಿಕಾದೆ. ಇದರ ಕೊರಗರ್, ಮಾಯಿಲರ್, ಅಜಲ ಜನಂಗ ಮಾಡ್ತಿದ್ದೊ. ಅವು ಅಲ್ಲದೆ ಬೇರೆ ಜಾತಿಯವೂ ಸ ಮಾಡ್ತಿದ್ದೊ. ಮೀನ್ ಹಿಡಿಯಕೆ ಹೋಕನ ಇದರ ಸೊಂಟಕ್ಕೆ ಕಟ್ಟಿಕಾಂತಿದ್ದೋ. ಮೀನ್ ಸಿಕ್ಕಿದ ಹಾಂಗೇ ಅದರ ಈ ಕುಕ್ಕೆಗೆ ಹಾಕ್ತಿದ್ದೊ. ಇದರ್‌ಲಿ ಹಾಕಿರೆ ಅದ್ ಹಾರಿ ಮೇಲೆ ಹೋಕೆ ಆದುಲೆ. ಯಾಕೆಂತೇಳಿರೆ ಈ ಕುಕ್ಕೆನ ಕುತ್ತಿಗೆ ಸಪೂರ ಉಟ್ಟು. ಮೀನ್ ಬೇಟೆ ಸುರಾಕನೇ ಈ ಕುಕ್ಕೆ ಮಾಡಿಕೆ ಸುರು ಮಾಡಿರುವೊ. ತೇಳಿರೆ ನಮ್ಮ ಹಿಂದೆನವು ಬೇಸಾಯ ಕೆಲ್ಸ ಸುರು ಮಾಡಿಕನೇ ಇದರ ಉಪಯೋಗ ಬಂದಿರ್‌ದು. ಇದರ್‌ಲಿ ಹಣ್ಣುಎತ್ತರಲಿ ಹೆಚ್ಚಿ ಕಮ್ಮಿ ಮತ್ತೆ ಗಾತ್ರಲಿ ಸಣ್ಣದ್. ದೊಡ್ಡದ್ ಇರ್‌ದು. (ಎಂ.ಜಿ.ಕೆ.)

**ಬ್ಯಾರಿ ಬಾಸೆ ಮತ್ತೆ ಸಾಹಿತ್ಯ :** ಕರಾವಳಿ ಕರ್ನಾಟಕದ ದಕ್ಷಿಣಕನ್ನಡ ಜಿಲ್ಲೆನ ಮಂಗ್ಳೂರು ನಗರನ ಕೇಂದ್ರ ಮಾಡಿಕಂಡಿರ್‌ವ ಬ್ಯಾರಿಗ ದಾರ್‌ಮಿಕ ಆಗಿ ಇಸ್ಲಾಂ ದರ್‌ಮದ ಅನುಯಾಯಿಗ. ಇಡೀ ವಿಸ್ವಲಿ ಸುಮಾರ್ 20 ಲಕ್ಷ ಬ್ಯಾರಿ ಸಮುದಾಯದ ಜೆನಗ ಒಳೊತ ಅಂದಾಜಿ ಉಟ್ಟು. ಬ್ಯಾರಿಗ ಮಾತಾಡ್‌ವ ಬಾಸೆನ 'ಬ್ಯಾರಿ' ಬಾಸೆತ ಕರ್‌ದವೆ. ಬ್ಯಾರಿ ಬಾಸೆಗೆ ಸುಮಾರ್ 1200 ವರ್‌ಸದ ಇತಿಯಾಸ ಉಟ್ಟುಂತ ಇತಿಯಾಸಗಾರರ್ ಹೇಳ್ಯೊಳೊ.

ಬ್ಯಾರಿ ಬಾಸೆಲಿ ತುಳು, ಮಲ್ಯಾಳ, ಕೊಡವ, ತಮಿಳ್, ಅರಬಿಕ್ ಬಾಸೆನ ಪದಗ ಕಂಡ್ ಬಂದವೆ. ಬ್ಯಾರಿ ಬಾಸೆ ಮಾತಾಡ್ತನ ಮಲ್ಯಾಳ ಬಾಸೆನ ಹೋಲುವಂಗೆ ಕಂಡದೆ. ಆದರೆ ಶೇ. 50ರ್‌ಂದ ಹೆಚ್ಚಿನ ತುಳು ಪದಗ ಬ್ಯಾರಿ ಬಾಸೆಲಿ ಕಾಂಬಕೆ ಸಿಕ್ಕಿದೆ.




ಕ್ರಿ. ಶ. 644 ರ್‌ಲಿ ಮಾಲಿಕ್ ದಿನಾರ್ ಇಸ್ಲಾಮ್ ದರ್‌ಮದ ಪ್ರಚಾರಕೆ ಬೇಕಾಗಿ ಕರಾವಳಿ ಕರ್ನಾಟಕಲಿ ಯಾತ್ರೆ ಸುರುಮಾಡ್ಡೊ. ಆಗ ಇಲ್ಲಿನ ತುಳುನವರ ಪೈಕಿಲಿ ಸುಮಾರ್ ಇಸ್ಲಾಮ್ ದರ್‌ಮದ ಅನುಯಾಯಿಗಾದೊ. ಮಾಲಿಕ್ ದಿನಾರ್ ಮತ್ತೆ ಅವರ ಒಟ್ಟಿಗಿದ್ದ ಸಿಸ್ಯರ್ ಇಲ್ಲಿ ಬಾಸೆನ ಸಮಸ್ಯೆನ ಎದುರ್‌ಸಕಾತ್. ಆದಾಗ್ಯೂ ಇಲ್ಲಿನ ಜೆನಗ ಮಾಲಿಕ್ ದಿನಾರ್ ಮತ್ತೆ ಅವರ ಶಿಸ್ಯರೊಟ್ಟಿಗೆ ತುಳು, ಕೊಂಕಣ, ಕನ್ನಡ, ಮಲ್ಯಾಳ ಬಾಸೆಲಿ ಮಾತಾಡ್ರೆ, ದರ್‌ಮ ಪ್ರಚಾರಕರಾಗಿ ಬಂದವು ಅರಬಿ ಬಾಸೆಲಿ ವೆವಹಾರ ಮಾಡಿಕೆ ಸುರುಮಾಡ್ಡೊ. ಹಿಂಗೆ ಈ ಎಲ್ಲಾ ವರ್‌ಗದ ಜೆನರ್‌ಂದ ಕೂಡ್ದ ಬಾಸೆ 'ಬ್ಯಾರಿ' ಬಾಸೆ ಆತ್‌ಂತ ನಂಬಿಕೆ ಉಟ್ಟು. ಆದರೆ ಕೆಲವ್ ಈ ಸಂಗತಿನ ಒಪ್ಪದುಲೆ. ಅದರ್‌ಂದ ಎಸ್ಟೊ ವರ್‌ಸ ಮುಂದೆ ಬ್ಯಾರಿ ಬಾಸೆ ಇತ್ತ್‌ತ ಹೇಳೊವೊಳ.

ಜಗತ್ತ್‌ನ ಯಾವ ಬಾಸೆನೂ ಹದ ಆದ್ದಂತದಲ್ಲ, ಪರಿಪೂರ್ಣನೂ ಅಲ್ಲ. ಅದರ್‌ಲಿ ಇನ್ನೊಂದು ಬಾಸೆಗಳ ಪ್ರಬಾವ ಇದ್ದೇ ಇದ್ದದೆ. ಅದ್ಕೆ ಬ್ಯಾರಿ ಬಾಸೆನೂ ಬೇರೆ ಅಲ್ಲ. ಬ್ಯಾರಿ ಬಾಸೆ ಒಂದ್ ಸೀಮಿತ ಪ್ರದೇಸಲಿ ಹರ್‌ಡಿದ್ದರೂ ಈ ಪ್ರದೇಸದ ವ್ಯಾಪ್ತಿ ಹಙ್ಞ ಹೆಚ್ಚಾಗಿರ್‌ದಂದಲೋ ಏನೋ, ಬ್ಯಾರಿ ಬಾಸೆಲೂ ಸುಮಾರ್ ತರಗೊಳೊ. ಇದ್ಕೆ ಪ್ರಾದೇಶಿಕತೆ, ಕಸಬು ಅತವಾ ವರ್‌ಗ ಆದಾರಿತನೂ ಮುಕ್ಯ ಕಾರಣವಾಗುಟುತ ಹೇಳಕ್.

'ಬ್ಯಾರಿ' ಬಾಸೆ ಮಾತಾಡ್‌ವ ಕೆಲವ್ ಪ್ರದೇಸದ ಜೆನಗ 'ನಕ್ಕ್ ನಿಕ್ಕ್' ತ ಕರ್‌ದವೆ. ಪುತ್ತೂರ್ ಮತ್ತೆ ಸುಳ್ಯ ತಾಲೂಕ್‌ನ ಹಂಗೆನೆ ಕಾಸ್ರ್‌ಗೋಡ್ ಜಿಲ್ಲೆನ ಗಡಿನ ಬ್ಯಾರಿಗ ಬಾಸೆನ 'ಮಲಾಮೆ' ತ ಹೆಸ್ರಿಸಿದೊ. ಹಿಂಗೆ ಬಾಸೆನ ಹೆಸ್ರನ ಬ್ಯಾರಿ/ನಕ್ಕ್ ನಿಕ್ಕ್/ಮಲಾಮೆ ತ ಮೂರ್ ಪದಗಳ್‌ಲಿ ಗುರ್‌ತುಸುವೆ.

ಬ್ಯಾರಿ ಸಾಹಿತ್ಯಲಿ ಲಿಕಿತ, ಅಲಿಕಿತ, ಮುದ್ರಿತ ಹಿಂಗೆ ಸುಮಾರ್ ಬಗೆಲಿ ಕಾಣಕ್. ಬ್ಯಾರಿ ಬಾಸೆಲಿ ತುಂಬ ಜಾನಪದ ಸಾಹಿತ್ಯ ಉಟ್ಟ್. ಕೂಸು ಹುಟ್ಟ್‌ಕನ, ಅದರ ಮುಂಜಿ ಅಲ್ಲರೆ ಕೆಬಿ ಕುತ್ತುವ ಕಾಲಕೆ, ಮೊದ್‌ವೆ, ಬಯ್ಕೆ ಹಿಂಗೆ ಸುಮಾರ್ ಗೌಜಿನ ದಿನಗಳ್‌ಲಿ ಹಾಡ್ದು, ಮನರಂಜೆನೆ ಸಾಮಾನ್ಯವಾಗಿಟು.

ಬ್ಯಾರಿ ಬಾಸೆ, ಸಾಹಿತ್ಯ, ಸಂಸ್ಕೃತಿ, ಕಲೆಗೆ ಸಮ್ಮಂದ ಪಟ್ಟಂಗೆ ಉಡುಪಿನ ಡಾ. ಸುಶೀಲಾ ಉಪಾದ್ಯಾಯ 1969ರ್‌ಲಿ ಪೂನಾ ವಿಶ್ವವಿದ್ಯಾನಿಲಯಂದ ಡಾಕ್ಟರೇಟ್ ಪದವಿ ಪಡ್ದಿರ್‌ದು ಕೂಡ ಇತಿಯಾಸ ಆಗುಟು. ಮುಲ್ಕಿನ ಫಮೀದಾ ಮಂಗ್ಳೂರ್ ವಿಶ್ವವಿದ್ಯಾನಿಲಯಂದ ಬ್ಯಾರಿ ಕ್ಷೇತ್ರ ಕಾರ್‌ಯಕೆ ಸಮ್ಮಂದಿಸಿ 2008ರ್‌ಲಿ ಎಂಫಿಲ್ ಪಡ್ದಿದ್ದೊ. ಇನ್ನೂ ಸುಮಾರ್ ಮಕ್ಕ ಬೇರೆ ಬೇರೆ ವಿಶ್ವವಿದ್ಯಾನಿಲಯಗಳ್‌ಲಿ 'ಬ್ಯಾರಿ'ಗೆ ಸಮ್ಮಂದ ಪಟ್ಟ ಸಂಸೋದನೆಲಿ ಕೆಲ್ಸ ಮಾಡ್ತೊಳೊ. ಅದಲ್ಲದೆ ಕರ್ನಾಟಕ ಬ್ಯಾರಿ ಸಾಹಿತ್ಯ ಅಕಾಡೆಮಿ 'ಬೆಲ್ಕಿರಿ' ದೈಮಾಸಿಕ, ಬ್ಯಾರಿ ಸಾಹಿತ್ಯ ಮತ್ತೆ ಸಾಂಸ್ಕೃತಿಕಸಂಘ 'ಬ್ಯಾರಿ ವಾರ್‌ತೆ' ಇ–ಮಾಸಿಕ ಪತ್ರಿಕೆ ಹಾಂಗೇ ದೇರಳಕಟ್ಟೆನ 'ಮೇಲ್ತೆನೆ'ತೇಳ್ವ ಸಂಗಟನೆ 'ಮೇಲ್ತೆನೆ' ಬ್ಲಾಗ್‌ಲಿ ಬ್ಯಾರಿ ಸಾಹಿತ್ಯಕೆ ಉಮೇದ್ ನೀಡ್ತುಟ್ಟು. ಇನ್ನ್ ಸೊಂತ ಆಗಿ ಕೆಲವ್ ಪತ್ರಿಕೆಗ/ಸುದ್ದಿ ವಾಹಿನಿಗ ಆಡಿಯೋ–ವೀಡಿಯೋಗಳ್‌ಲಿ ಹೊರಬರ್‌ತಾ ಉಟ್ಟು.

'ಬ್ಯಾರಿ' ಕ್ಷೇತ್ರಕಾರ್‌ಯಕೆ ಸಮ್ಮಂದಪಟ್ಟಂಗೆ ಇಂಗ್ಲಿಸ್‌ಲಿ ಕೆಲವ್ ಕೃತಿಗ ಹೊರಬಂದುಟು. ಬ್ಯಾರಿ ಬಾಸೆಲಿ ಕತೆ, ಕವನ, ಚುಟುಕು, ಪೊದ್ಯ, ಹಾಸ್ಯ, ಲೇಕನ, ಕಾದಂಬರಿ ಹಿಂಗೆನೆ ಸಾಹಿತ್ಯ ಕೃತಿಗ ಪ್ರಕಟವಾಗುಟು. ಒಟ್ಟಿಗೆ ಜಾನಪದ ಪೊದ್ಯಗೊಳೊ, ಒಡ್ಸ್‌ಕತೆಗೊಳೊ, ಗಾದೆಗ, ಕತೆಗ, ನುಡಿಮುತ್ತುಗಳೂ ಒಳೊ.

ಬಿ. ಎ. ಶಂಸುದ್ದೀನ್ ಮಡಿಕೇರಿ ಸುರೂಗೆ 'ಬ್ಯಾರಿ ಪಾಟ್‌ಜ' ತ ಕ್ಯಾಸೆಟ್, 1980ರ್‌ಲಿ ಮಂಗ್ಳೂರ್‌ನ ಮುಹಮ್ಮದಾಲಿ ಅವು 'ಬ್ಯಾರಿ ಬಾಸೆಲ್ ಇಲ್ಮಿ ಬೈತ್' ಪೊದ್ಯಗಳ ಕ್ಯಾಸೆಟ್, 1994ರ್‌ಲಿ 'ಬ್ಯಾರಿಜ ಆರಜ'ತ ಬಾಸಣದ ಕ್ಯಾಸೆಟ್, 1996ರ್‌ಲಿ 'ಲಾ ಇಲಾಹ ಇಲ್ಲಲ್ಲಾಹ್' ಬ್ಯಾರಿ ಪೊದ್ಯಗಳ ಕ್ಯಾಸೆಟ್‌ಗಳ ಮಾಡಿದ್ದೊ. ಪಾವೂರ್ ಗ್ರಾಮದ ಇನೋಳಿನ ರಹೀಂ ಬಿ. ಸಿ. ರೋಡ್ ಬ್ಯಾರಿ ಬಾಸೆನ ಪೊದ್ಯಗಳ ಕ್ಯಾಸೆಟ್‌ಗಳ ಹೊರ ತಂದೊ. ಬೀಡಿ ಹಂಗೆನೆ ಒಳ್ದ ಉದ್ಯಮಗಳ ಪ್ರಚಾರಕೆ ಬ್ಯಾರಿ ಬಾಸೆನ ಪೊದ್ಯನ ಮಾಡಿ ಕೊಟ್ಟೊ. ಬ್ಯಾರಿ ಕಿರು ಚಲನಚಿತ್ರ, ಬ್ಯಾರಿ ಟೆಲಿಚಿತ್ರ, ಬ್ಯಾರಿ ಕತಾ ಪ್ರಸಂಗ, ಬ್ಯಾರಿ ನಸೀಹತ್ ಮಜ್ಲಿಸ್‌ನ ಆಡಿಯೋ, ವೀಡಿಯೋ ಕ್ಯಾಸೆಟ್‌ಗ ಕೂಡ ಹೊರಬಂದುಟು. ಬ್ಯಾರಿ ಕವನ ವಾಚನ, ಬ್ಯಾರಿ ಕವಿಗೋಸ್ಟಿ, ಬ್ಯಾರಿ ಸಾಂಸ್ಕೃತಿಕ ಕಾರ್‌ಯಕ್ರಮ, ಬ್ಯಾರಿ ಕವ್ವಾಲಿ, ಬ್ಯಾರಿ ಗಝಲ್, ಬ್ಯಾರಿ ಚಿರಿಕಲಿ, ಬ್ಯಾರಿ ಪ್ರಹಸನ, ಬ್ಯಾರಿ ರಸಪ್ರಶ್ನೆ ಕಾರ್‌ಯಕ್ರಮಗನು ನಡೆತಾ ಇದ್ದದೆ.

ಇಂಗ್ಲಿಸ್, ಕನ್ನಡ, ಬ್ಯಾರಿ ಬಾಸೆಲಿ ಬ್ಯಾರಿ ಸಾಹಿತ್ಯ ಅಕಾಡೆಮಿ ಮತ್ತೆ ಕಾಸಗಿ ಪ್ರಕಟಿತ ಈವರೆಗೆ ಸುಮಾರ್ 103 ಕೃತಿಗ ಹೊರಬಂದುಟು. ಈ ಪೈಕಿ ಬೇರೆಬೇರೆ ಲೇಕಕ, ಲೇಕಕಿಯರ್ ಬರ್‌ದ ಕೃತಿಗಳ ಸಂಪಾದನೆನೂ ಉಟ್ಟು.

ಕನ್ನಡ, ಇಂಗ್ಲಿಸ್, ಅರೆಬಿಕ್, ಉರ್‌ದು ಬಾಸೆಗಳ್‌ಲಿ ಪಾಂಡಿತ್ಯ ಇರ್‌ವ, ಪತ್ರಕರ್‌ತರ್ ಆಗಿದ್ದ ದಿ, ಅಬೂರೈಹಾನ್ ಅಹಮದ್ ನೂರಿ 1960ರ್‌ಲಿ 'ಮೈಕಾಲ' ಕೃತಿ ರಚಿಸಿದ್ದೊ. ಇದರ್‌ಲಿ ಮಂಗ್ಳೂರ್‌ನ ಮುಸ್ಲಿಮರ ಬಗ್ಗೆ ಬೊಳ್ಪು ತೋರ್‌ಸಿಯೊಳ. ಮಂಗ್ಳೂರ್‌ಗೆ ಮೈಕಾಲ ತ ಹೆಸ್ರ್ ಹೆಂಗೆ ಬಾತ್? ವಿದೇಶಿಯರ, ಟಿಪ್ಪುಸುಲ್ತಾನನ ಆಡೆಳ್ತ ಕಾಲಲಿ ಇಲ್ಲಿನ ಮುಸ್ಲಿಮರ್ ಹೆಂಗಿದ್ದೊ? ಇಲ್ಲಿನ ದಾರ್‌ಮಿಕ ಕೇಂದ್ರಗ, ಮುಸ್ಲಿಮ್ ಸಮಾಜದ ಮುಕಂಡರ ಬಗ್ಗೆ ಸಾಕಸ್ಟ್ ವಿವರಣೆ ಈ ಕೃತಿಲಿಟ್ಟು.

ಮಂಗ್ಳೂರ್‌ನ ಪ್ರತಿಸ್ಟಿತ ಪೌನಾರಗ ಮನೆತನದ ಕಸುಬುಲಿ ವೈದ್ಯರಾಗಿದ್ದ ಪ್ರಕಸುಬುಲಿ ಸಂಶೋದಕರಾಗಿದ್ದ ಡಾ. ವಹಾಬ್

ದೊಡ್ಡಮನೆ 1993ರ್‌ಲಿ 'ಮುಸ್ಲಿಮ್ಸ್ ಇನ್ ದಕ್ಷಿಣಕನ್ನಡ' ಕೃತಿನ ಬರ್‌ದಿದ್ದೊ ದಕ್ಷಿಣಕನ್ನಡ ಜಿಲ್ಲೆನ ಮುಸ್ಲಿಮರಾದ ನವಾಯಿತ, ಮೇಮರನರ್, ಬೋಹ್ರಾ ಮತ್ತೆ ಬ್ಯಾರಿಗಳ ಬಗ್ಗೆನೂ ಈ ಕೃತಿಲಿ ಬೊಳ್ಪು ಉಟ್ಟು. ಇಂಗ್ಲಿಸ್ ಕೃತಿನ ಸರಿಮಾಡಿ 'ತುಳುನಾಡಿನ ಮುಸ್ಲಿಮರು' ತೇಳ್ವ ಕನ್ನಡ ಕೃತಿನ 2008ರ್‌ಲಿ ಅವು ಹೊರ ತಂದಿದ್ದೊ. ಡಾ. ವಹಾಬರು ಇಂಗ್ಲಿಸ್–ಕನ್ನಡ–ಬ್ಯಾರಿ ಅರ್ತಕೋಶನ ಕೂಡ ಬರ್‌ದಿದ್ದೊ. ಇದರ್‌ಲಿ 8 ಸಾವಿರ ಬ್ಯಾರಿ ಶಬ್ದಗಳ ಅರ್ತನ ಕನ್ನಡ ಮತ್ತೆ ಇಂಗ್ಲಿಸ್‌ಲಿ ಮಾಡಿ ಕೊಟ್ಟೊಳೊ. 2006ರ್‌ಲಿ ಡಾ. ವಹಾಬರು 'ಓದು ಕಿಡಾವು ಓದು'ತ ಮಕ್ಕಳ ಸಾಹಿತ್ಯ ಕೃತಿನ ರಚಿಸ್ಯೊಳೊ

ಬ್ಯಾರಿ ಬಾಸೆ, ಜೆನಾಂಗ, ಸಂಸ್ಕೃತಿಗೆ ಸಮ್ಮಂದಪಟ್ಟಾಂಗೆ ಕೆಲ್ಸ ಮಾಡ್ದ ಮತ್ತೊಬ್ಬ ಸಂಸೋದಕ ಪ್ರೊ. ಬಿ. ಎಂ. ಇಚ್ಲಂಗೋಡು ಬರ್‌ದ 'ತುಳುನಾಡ ಮುಸ್ಲಿಮರು–ಬ್ಯಾರಿ ಸಂಸ್ಕೃತಿ' ಈ ಕೃತಿನ 1997ರ್‌ಲಿ ಬೆಂಗ್ಳೂರ್‌ಲಿ ನಡ್ದ ಸುರುನ ಬ್ಯಾರಿ ಸಮ್ಮೇಳನಲಿ ಅನಾವರಣ ಮಾಡ್ಯಾಗಿತ್ತ್. ಈ ಕೃತಿಲಿ ಬ್ಯಾರಿ ಬಾಸೆ, ಸಂಸ್ಕೃತಿ, ಜೆನ ಜೀವನ, ಬ್ಯಾರಿಗಳ ಬಟ್ಟೆ, ಬ್ಯಾರಿ ಕೊಡವ ಸಂಸ್ಕೃತಿನ ಬಗ್ಗೆ ಹೇಳ್ಯಾವ್ವು. ಬ್ಯಾರಿ ಬಾಸೆ–ಪದ ಪ್ರಯೋಗದ ಅರಿವು ವ್ಯಾಕರಣ ಪುಸ್ತಕನ ಇಚ್ಲಂಗೋಡು ರಚಿಸ್ಯೊಳೊ.

ಬ್ಯಾರಿ ಬಾಸೆನ ಬಗ್ಗೆ ಸಂಶೋದನೆ ನಡ್ಸಿ 1969ರ್‌ಲಿ ಪೂನಾ ವಿಶ್ವವಿದ್ಯಾನಿಲಯಂದ ಪಿಎಚ್.ಡಿ. ಪಡ್ದ ಉಡುಪಿನ ಡಾ. ಸುಶೀಲ ಉಪಾದ್ಯಾಯ ಅವರ 'ಬ್ಯಾರಿ ಬಾಸೆ ಮತ್ತೆ ಜಾನಪದ ಕತೆಗಳು' ಈ ಪುಸ್ತಕನ 1997ರ್‌ಲಿ ಬೆಂಗ್ಳೂರ್‌ನ ಬ್ಯಾರಿ ಪ್ರಕಾಶನ ಹೊರತಂದುಟು. ಲೇಕಕ ಯು. ಎ. ಕಾಸಿಂ ಉಳ್ಳಾಲ 1998ರ್‌ಲಿ 'ಚೆಲ್ಲೊನ್ನು ಚೇಲೊನ್ನು' ಕತಾ ಸಂಕಲನ, 2004ರ್‌ಲಿ ನಮಾಜ್‌ನ ಬಗ್ಗೆ 'ನಿಸ್ಕಾರತೊ ಕ್ರಮ ಅದ್‌ಲ್ ಚೆಲ್ರೆದ್ ಪಿನ್ನೆ ಅದ್‌ರೊ ಅರ್ತ' ದಾರ್‌ಮಿಕ ಪುಸ್ತಕ, 2010ರ್‌ಲಿ 'ತರವಾಡ್' ಕಾದಂಬರಿ ರಚಿಸ್ಯೊಳೊ. ಕವಿ ಮಹಮ್ಮದ್ ಬಡ್ಡೂರು 1999ರ್‌ಲಿ 'ಕಮ್ಮನೆ' ಬ್ಯಾರಿ ಕವನ ಸಂಕಲನ ರಚಿಸ್ಯೊಳೊ. ಕವಿ ಇಬ್ರಾಹೀಂ ತಣ್ಣೀರ್‌ಬಾವಿ ಇವರ 'ತನಲ್' ಬ್ಯಾರಿ ಕವನ ಸಂಕಲನ 2005ರ್‌ಲಿ ಪ್ರಕಟ ಆವ್ವು. ಅಲ್ಲದೆ 'ಸಾವುಙ್ಙಂಕರೊ ಸಾಲೆ' ಈ ನಾಟಕನೂ ಪ್ರಕಟಿಸ್ಯೊಳೊ. ಹುಸೈನ್ ಕಾಟಿಪಳ್ಳ 'ಬ್ಯಾರಿ ಕ್ಯಾಸೆಟ್‌ರೊ ಪಾಟ್‌ಜ', 'ಮೊಲಾಂಜಿ', 'ಬಿರ್‌ಂದ' ಈ ಕವನ ಸಂಕಲನ ಹೊರ ತಂದೊಳೊ.

ಹಂಝ ಮಲಾರ್ 'ಮೊಲಾಂಜಿ', 'ಬ್ಯಾರಿ ಮುಸ್ಲಿಮರು–ಒಂದು ಅದ್ಯಯನ' 'ಒರು ಪೆನ್ನ್ನೆ ಕಿನಾವ್' 'ಮುತ್ತು ನೆಬಿರೆ ಮುತ್ತು ಪಲಕ' 'ಕಣ್ಣನ್ನಿ' 'ಪಾಲುಂ ತೇನ್' ಕಾಕ... ಕಾಕ... ಕೃತಿ ರಚಿಸ್ಯೊಳೊ. ಅಸ್ಪಲ್ಲದೆ ಬೇರೆ ಬೇರೆ ಬರಹಗಾರರ್ ಬರ್‌ದ ಬ್ಯಾರಿ ಕತೆಗಳ ಕನ್ನಡಕೆ ಅನುವಾದ ಮಾಡಿ 'ತಲ್ಲಣ' ಕೃತಿನ ಹೊರತಂದೊಳೊ. ಕರ್ನಾಟಕ ಬ್ಯಾರಿ ಸಾಹಿತ್ಯ ಅಕಾಡೆಮಿನ ಸುರುನ ಅದ್ಯಕ್ಷ ಎಂ. ಬಿ. ಅಬ್ದುಲ್ ರಹ್‌ಮಾನ್ ಸಂಗ್ರಹಿಸಿದ 444 ಬ್ಯಾರಿ ಗಾದೆಗಳ ಸಂಕಲನ 'ಪೊಂಚಿರಿ' 1998 ರ್‌ಲಿ ಹೊರ ಬಂದುಟು. ಕರ್ನಾಟಕ ಬ್ಯಾರಿ ಸಾಹಿತ್ಯ ಅಕಾಡಮಿನ ಮೂರ್‌ನೇ ಅಧ್ಯಕ್ಷ ಬಿ. ಎ. ಮಹಮ್ಮದ್ ಹನೀಫ್ 'ಬ್ಯಾರಿ ಆಂದೋಲನದ ಹೆಜ್ಜೆಗಳು'. 2008ರ್‌ಲಿ ಹೊರತಂದೊಳೊ. ಅದಲ್ಲದೆ ಬ್ಯಾರಿ–ಕನ್ನಡ–ಇಂಗ್ಲಿಸ್ ನಿಘಂಟ್ ಕೂಡ ಪ್ರಕಟ ಆಗುಟು.

ಮಹಮ್ಮದ್ ಕುಳಾಯಿ 1998 ರ್‌ಲಿ 'ಪೆರ್‌ನಾಳ್' ಕತಾ ಸಂಕಲನ ಹೊರತಂದೊಳೊ. ಅಸ್ಪಲ್ಲದೆ 'ಬ್ಯಾರಿ ಬಾಸೆಲ್ ಅರೇಬಿಯನ್ ನೈಟ್ಸ್' ಕೃತಿನ ಕೂಡಾ ರಚಿಸ್ಯೊಳ. ಬಶೀರ್ ಅಹಮದ್ ಕಿನ್ಯ 'ಕೊತ್ತಿಪೂ' ಮತ್ತೆ ನಲ್ಮಾಲೆ ಕವನ ಸಂಕಲನನ ರಚಿಸ್ಯೊಳೊ. ಬೋಳಿಯಾರ್ ಗ್ರಾಮದ ಪಾಣೇಲದ ಎಂ. ರಫೀಕ್ ಮತ್ತೆ ಎ. ಆರ್. ಇಸ್ಮಾಯಿಲ್ ಇವು 'ಪಿ. ಕೆ. ಬಶೀರ್ ಅಹ್ಮದ್ ಕಿನ್ಯ ಬರ್‌ದ ಬ್ಯಾರಿ ಪಾಟ್‌ಜ' ಈ ಕೃತಿನ ಪ್ರಕಟಿಸ್ಯೊಳೊ ಬಿ. ಸಿ. ರೋಡ್ ಹಕ್ಕಲೆನ ಎನ್. ಎಮ್. ಹನೀಫ್ ಪರ್‌ಲ್ಯ ಮತ್ತೆ ಹನೀಫ್ ಪರ್‌ಲ್ಯ 'ನಲ್ಲೊ ತೆರು' ಕವನ ಸಂಕಲನನ 2008ರ್‌ಲಿ ಒಟ್ಟಿಗೆ ಹೊರತಂದೊಳೊ. ರಝಿಯಾ ಎಸ್. ಜೆ. ಬಿ ಅವರ ಜಾನಪದ ಕತೆಗಳ ಸಂಕಲನ 'ಯೆರ್ಚಿಗೆಟ್ಟಿರೊ ಕತೆ' 2002ರ್‌ಲಿ ಪ್ರಕಟ ಆಗುಟು. ಇಸ್ಮಾಯೀಲ್ ಮೂಡುಶೆಡ್ಡೆ 'ಮೈಸೂರು ಪಿಲಿ ಟಿಪ್ಪು' ಕೃತಿ ರಚಿಸ್ಯೊಳೊ. ಶಮೀಮ್ ಕುಟ್ಟಿಕಳ 'ಪಿರ್‌ಸಪಾಡ್' ಬ್ಯಾರಿ ಮೆಸೇಜ್‌ಗಳ ಸಂಗ್ರಹ ಕೃತಿನ 2008ರ್‌ಲಿ ಹೊರ ತಂದೊಳೊ. ಮುಹಮ್ಮದ್ ತಣ್ಣೀರ್‌ಬಾವಿ ಬ್ಯಾರಿ ಸಮಾಜಲಿ ಬಳಕೆಲಿರುವ ನುಡಿಗಟ್ಟ್‌ಗಳ ಕೂಡ್ಸಿ 'ಬ್ಯಾರಿ ಚೆಲ್ತ್' ಈ ಕೃತಿನ 2009ರ್‌ಲಿ ರಚಿಸ್ಯೊಳೊ.

ಮಂಗ್ಳೂರ್‌ನ ಬ್ಯಾರಿ ಅದ್ಯಯನ ಕೇಂದ್ರ 2008ನೇ ವರ್‌ಸನ ಬ್ಯಾರಿ ಅದ್ಯಯನ ವರ್‌ಸತ ಆಚರ್‌ಸಿದ ಈ ಹೊತ್ತುಲಿ ಸುಮಾರ್ ಕಡೆ ವಿಚಾರಗೋಸ್ಟಿ ಬ್ಯಾರಿ ಅದ್ಯಯನ ಪ್ರವಾಸನ ಕೈಗೊಂಡಿತ್ತ್. ಅಸ್ಪಲ್ಲದೆ ಬೇರೆಬೇರೆ ಲೇಕಕರ್ ನಾಲ್ಕ್ ವಿಚಾರಗೋಸ್ಟಿಲಿ ಮಂಡಿಸಿದ 8 ಪ್ರಬಂದಗ ಮತ್ತೆ ಬ್ಯಾರಿ ಅದ್ಯಯನ ತಂಡ ಮಂಜೇಶ್ವರಲಿ ನಡ್ಸಿದ ಬ್ಯಾರಿ ಅದ್ಯಯನ ಲೇಕನನ ಒಟ್ಟು ಸೇರ್‌ಸಿ 'ಬ್ಯಾರಿ ಅದ್ಯಯನ–2008' ಕೃತಿನ ಹೊರಗೆತಂದೊ.

ಅಬುಲ್ ಹಸನ್ ಮೌಲವಿ 1997ರ್‌ಲಿ 'ಮುತ್ತುಮಾಲೆ'ತೇಳ್ವ ಬ್ಯಾರಿ ಕೃತಿ ರಚಿಸಿದ್ದೊ. ಎಂ. ಪಿ. ಹಸನ್ ಮುಕ್ಕ 2006ರ್‌ಲಿ ಹೊರತಂದ 'ಬ್ಯಾರಿಜ, ಇಜ ಬಾರಿ ನಲ್ಲಜ' ಬ್ಯಾರಿ ಕೃತಿಲಿ ಪ್ರವಾದಿ ಮುಹಮ್ಮದ್‌ರ ಜೀವನ ಸಂದೇಸ ಸಮೇತ ಸುಮಾರ್ ಸದ್ಬೋದನೆನ ಬರಹಗೊಳ.

ಮಂಗ್ಳೂರ್‌ನ ಮಹಮ್ಮದ್ ಅಲಿ ಕುರ್‌ಆನ್‌ನ ಒಂದ್ ಅದ್ಯಾಯವಾಗಿರ್‌ವ 'ಯಾಸೀನ್' ನ ಬ್ಯಾರಿ ಬಾಸೆಗೆ ಅನ್‌ವಾದ್‌ಸಿ 'ಯಾಸೀನ್' ಹೆಸ್ರ್‌ನ ಕೃತಿ ರಚಿಸಿ 2000ರ್‌ಲಿ ಹೊರತಂದೊಳೊ. ಟಿ. ಎ. ಆಲಿಯಬ್ಬ ಜೋಕಟ್ಟೆನ 'ನಂಡೊ ರಾಯ ನಂಡೊ ಸಂಸ್ಕೃತಿ', ಫಕುದ್ರೀನ್ ಇರುವೈಲ್‌ರ 'ನೊಂಬಲ' 'ಕಿರ್ಘ', ಮೂನು ಮಿನಿ




ಕಾದಂಬರಿಜ, ಝುಬೇದಾ ಗುರುಪುರ ಅವರ 'ಕಾಲಡಿರೆ ಸ್ವರ್ಗ', ಕೆ. ಪಿ. ಅಬ್ದುಲ್ ಕಾದರ್ ಕುತ್ತೆತ್ತೂರ್‌ರ 'ನಲ್ಲೊ ತೆರು', ಅಶ್ರಫ್ ಅಪೋಲೊರ 'ಪಿರ್‌ಸಪ್ಪಾಡ್', ಅಕ್ಬರ್ ಅಲಿ ಕಾವಳಕಟ್ಟೆ 'ಮರಿಪ್ಪು', ಅಬ್ದುಲ್ ಕಾದರ್ ಕೃಸ್ಣಾಪುರ 'ಸಂದೋಲ', ಅಝೀಝ್ ಬೈಕಂಪಾಡಿಯವರ ದಮ್ಮು 'ಬಿರಿಯಾನಿ', 'ಕಾರ್ ನೂರ್', 'ಓದಿ ಬಾನಿಯ' ಮರಿಯಂ ಇಸ್ಮಾಯಿಲ್‌ರ 'ಊನ್ ತೀನ್', 'ಕುರಾಸೆ', 'ನಾಟಿಮರಂದ್', ಇಸ್ಮತ್ ಪಜೀರ್‌ರ 'ಎಲ್ತೊ ಕಾದಿಮು ಹರೇಕಳ ಹಾಜಬ್ಬಾಕ', ಅನ್ಸಾರ್ ಇನೋಳಿಯ 'ಬ್ಯಾರಿ ಕೌಮು', ಅಬ್ದುಲ್ ರಹ್ಮಾನ್ ಕುತ್ತೆತ್ತೂರ್‌ರ 'ಜೀಯಸೆಲೆ', ಕೆವೈ ಅಬ್ದುಲ್ ಹಮೀದ್ ಕುಕ್ಕಾಜೆಯ 'ಮಾಣ ಕ್ಯತ್ತೊ ಕಲ್ಲ್', ಪಿ. ಕೆ. ಸಂಶುದ್ದೀನ್ ಉಳ್ಳಾಲರ 'ತುಳುನಾಡಿನ ಮಾಪ್ಲಾಗಳು', ಹಾರೂನ್ ರಶೀದ್ ಅರ್‌ಕುಳರ 'ಪರ್‍ರೊ ಪಕ್ಕಿ', ಸಂಶೀರ್ ಬುಡೋಳಿಯ 'ಪಿರ್‌ಸತ್ತೊ ಪಲಕ', ಬಿಎ ಸಂಶುದ್ದೀನ್ ಮಡಿಕೇರಿನ 'ನೆನಪುಜ', 'ಬ್ಯಾರಿ ವಿಶಿಸ್ಟ ಜೆನಾಂಗ', ಅನ್ಸಾರ್ ಕಾಟಿಪಳ್ಳರ 'ಅಂಗಲಾಪು' ಕೃತಿಗ ಪ್ರಕಟ ಆಗುಟು. (ಎಚ್.ಎಮ್.)

**ಬ್ಯಾರಿಗ ಮತ್ತೆ ಮಾಪ್ಪೆಗ** : ಕೇರಳದ ಮುಸ್ಲಿಮರ ಮಾಪಿಳ್ಳಾ/ ಮಾಪಿಲಾ/ಮಾಪ್ಲಾ ಮುಸ್ಲಿಮರ್‌ತ ಕರ್‌ದವೆ. ಆಗ ಇನ್ನೂ ದಕ್ಷಿಣಕನ್ನಡ ಜಿಲ್ಲೆನ ಮುಸ್ಲಿಮರ ಬ್ಯಾರಿತ ಗುರ್‌ತಿಸಿಕಣತಿತ್ಲೆ. ಆಗ ಬ್ಯಾರಿಗಳನೂ ಮಾಪ್ಪೆಗಂತೇಳಿದೇ ಕರೆತಿದ್ದೊ.

ಮಾಪ್ಪೆಗತ ಗುರ್‌ತ್‌ಸಿಕಣವು ಕೇರಳ, ಲಕ್ಷದ್ವೀಪಲಿ ಹೆಚ್ಚಿಗೆ ಒಳೊ. ಕೆಲವ್ ವಿದ್ವಾಂಸರ ಪ್ರಕಾರ ಮಾಪ್ಪೆಗ ದಕ್ಷಿಣ ಏಸ್ಯಾದ ಸುರೂನ ಮತ್ತೆ ಪಂಡ್‌ನ ಮುಸ್ಲಿಂ ಸಮುದಾಯದವು. ಪೊಡ್‌ವ ಏಸ್ಯಾ ಕೂಡಾಟಂದ ಕೇರಳಲಿ ಈ ಸಮುದಾಯ ಹುಟ್ಟಿಕಂಡತ್ ತ ಹೇಳ್ವೆ.

ಮಾಪ್ಪೆಗ ದಾರ್‌ಮಿಕ ಆಗಿ ಇಸ್ಲಾಮ್‌ನ ಕಟ್ಟಾ ಅನುಯಾಯಿಗ. ಅಲ್ಲದೆ ಸ್ವರಾಜ್ಯ ಬಾಸಾಬಿಮಾನಿಗ. ಹಂಗಾಗಿ ಅವೆಲ್ಲಾ ಆಚಾರ ಮತ್ತೆ ವಿಚಾರಗಳಲ್ಲಿ ಅದರ್‌ಲೂ ದಾರ್‌ಮಿಕ ಕ್ರಿಯೆಲಿ ಅರಬಿಕ್‌ನೊಟ್ಟಿಗೆ ಮಲಯಾಳನೂ ಸೇರಿಟು.

ಕೇರಳದ ಮಾಪ್ಪೆಗಳ್‌ಲಿ ವಿಸೇಸ ಕಟ್ಟ್‌ಪಾಡ್‌ಗ ಉಟ್ಟು. ಮಲಯಾಳಿ ಮತ್ತೆ ಇಸ್ಲಾಮೀ ಸಂಸ್ಕೃತಿ 'ಮಾಪ್ಪೆಗಳ' ಬೊದ್ಕುಲಿ ಹೆಚ್ಚಿಗೆ ಕಾಣಕ್. ಹುಟ್ಟ್, ಸಾವ್, ಮೊದ್ವೆ ಇಂತೆಲ್ಲ ಆಚರಣೆಗೆ ಸಾಂಸ್ಕೃತಿಕವಾಗಿ ಮಾತ್ರಲ್ಲದೆ, ದಾರ್‌ಮಿಕ ವಿಚಾರಲೂ ಮಹತ್ವ ಕೊಟ್ಟವೆ. ಹಂಗಾಗಿ ಮಾಪ್ಪೆಗಳ ಸಂಪ್ರದಾಯವಾದಿಗತ ಹೇಳಕ್.

ಮಾಪ್ಪೆಗಳ ಮತೆ ಬ್ಯಾರಿಗಳ ಕೆಲ್ಸ ಕಾರ್‌ಯಲಿ, ಉಡ್‌ವ ಬಟ್ಟೆ, ಅಲಂಕಾರ, ತಿಂಬ ಕ್ರಮಲಿ, ಶಿಕ್ಷಣ, ನಂಬಿಕೆಗಳ್‌ಲಿ, ದಾರ್‌ಮಿಕ ಕೇಂದ್ರಗಳ ವಾಸ್ತುಶಿಲ್ಪಲಿ, ಮನೆಗಳ ಕಟ್ಟಣ ಕಟ್ಟುದರ್‌ಲಿ, ಸಾಂಸ್ಕೃತಿಕ ಚಟುವಟಿಕೆಗ ಕೂಡ ಬೇರೆಬೇರೆ ಆಗುಟು.

ಮಲ್ಯಾಳ ಸಾಹಿತ್ಯಲಿ ಕೂಡ ಮಾಪ್ಪೆಗಳ ಜೆನಜೀವನ ಬೊದ್ಕ್‌ನ ಸಾರ, ಸಂಗತಿಗಳ ಬಗ್ಗೆ ಬೇಕಾದಸ್ಟ್ ಉಟ್ಟು. ಸುಮಾರ್ ವರ್‌ಸಗಳ ಹಿಂದೆ ಕೇರಳದ ಹೆಚ್ಚಿನ ಅರಬಿಕ್ ಕಾಲೇಜುಗಳ್‌ಲಿ ಡಿಗ್ರಿ ಪಡ್ದವು (ಸನದುದಾರಿಗಳು) ಕೆಲ್ಸ ಹುಡ್ಕಿಕಂಡ್ ದಕ್ಷಿಣಕನ್ನಡ ಜಿಲ್ಲೆನ ಪಳ್ಳಿ ಮತ್ತೆ ಪಳ್ಳಿಸಾಲೆಗಳ್‌ಲಿ ಸೇರಿಕಂಡಿದ್ದೊ. ಹಾಂಗೆ ಇಲ್ಲಿನ ಮಕ್ಕಳಿಗೆ ಪಳ್ಳಿಸಾಲೆಲಿ ಅರಬಿಕ್, ಮಲಯಾಳಂಲಿ ಕಲ್ಸಿಕೆ ಸುರುಮಾಡ್ದ. ಅದರ್‌ಂದಾಗಿ ಮಾಪ್ಪೆ ಮತ್ತೆ ಬ್ಯಾರಿಗಳ ನೊಡುಲಿ ಸಮ್ಮಂದ ಬೆಳ್‌ತ್ತ ಹೇಳಕ್. ಓದ್‌ಬರ ಅಕ್ಷರದ ಬಗ್ಗೆ ಅಸ್ಟೇನ್ ಗೊತ್ತಿಲ್ಲದ ಬ್ಯಾರಿಗ, ಸುರುಲಿ ಮಾಪ್ಲೆಗಳನೆ ನಂಬಕಾತ್. ಹಂಗಾಗಿ ಕೇರಳ ಮತ್ತೆ ದಕ್ಷಿಣಕನ್ನಡ ಜಿಲ್ಲೆನ ನಡುಲಿ ಹೆಚ್ಚಿನ ವಲಸೆ ಹೋವ ಪ್ರಕ್ರಿಯೆ ನಡ್‌ತ್ತ ಹೇಳ್ವೆ. ಮಲ್ಯಾಳ ಮತ್ತೆ ಬ್ಯಾರಿ ಬಾಸೆನ ನಡುಲಿ ಒಂದಸ್ಟ್ ಸಾಮ್ಯತೆನೂ ಕಂಡ್ ಬಂದ ಕಾರಣ ಈ ಮುಸ್ಲಿಮರ ನಡುಲಿ ಬಾಸೆನ ಸಮಸ್ಯೆ ದೂರ ಆತ್.

ದಿನಕಳ್ದಂಗೆ ಬ್ಯಾರಿ ಮತ್ತೆ ಮಾಪ್ಪೆಗಳ ನಡುಲಿ ಕೊಡ್ದು-ತಕಂಬ ಸಮ್ಮಂದನೂ ಬೆಳ್ತ್. ಅರಬಿಕ್ ಮಲ್ಯಾಳ ಮಿಸ್ರ ಮಾಪ್ಪೆ ಪಾಟ್ (ಪೊದ್ಯ), ಒಪ್ಪನಪಾಟ್ (ಮೊದ್‌ವೆ ಕಾರ್‌ಯಕ್ರಮಲಿ ಮನರಂಜೆನೆ ಹಾಡ್), ಕೋಲ್‌ಕಳಿ (ಕೋಲಾಟ), ದಪ್ ಹಿಂಗೆ ಎಲ್ಲದರನೂ ಮಾಪ್ಪೆಗ ಬ್ಯಾರಿಗಳಿಗೆ ಕಲ್ಸಿದೊ. ಕೇರಳದ ಬಡಗ ಬಾಗದ ಅಂದರೆ ಕಾಸರಗೋಡು ಕಡೆನ ಮಾಪ್ಪೆಗ ಬ್ಯಾರಿಗಳೊಟ್ಟಿಗೆ ಹಕ್ಕಲೆನ ಸಮ್ಮಂದ ಇಸಿಕಂಡೊ. ಅದ್ ಮೊದ್ವೆ ಸಮ್ಮಂದಕ್ಕೂ ಮುಟ್ಟಿತ್.

ಇಲ್ಲಿ ಬಾಸೆ ಬುಟ್ಟು ಸಂಸ್ಕೃತಿ ಇಲ್ಲೆ. ಸಂಸ್ಕೃತಿಬುಟ್ಟು ಬಾಸೆ ಇಲ್ಲೆ. ಅವರ್‌ಡೂ ಕೂಡ್ಯೋಗುಟು. ಅದರ್‌ಲಿ ಸಂಸ್ಕೃತಿಹೇಳ್ರೆ ಅದೊಂದ್ ದರ್ಮದ ಬಾಗಂತ ನೆನ್ಸಿದವೂ ಒಳೊ. ಆದರೆ ಸಂಸ್ಕೃತಿ ಮೊಯಿಂಸನ ಬೊದ್ಕ್‌ನ ವಿದಿ-ವಿದಾನ, ಆಚಾರ-ವಿಚಾರಗಳ ಅಂಸ. ಹಂಗೆತ ದರ್‌ಮಕು ಸಂಸ್ಕೃತಿಗೂ ಸಮ್ಮಂದ ಇಲ್ಲೆತ ಹೇಳಿಕಾದುಲೆ. ಇದ್ದರೂ ಅದ್ ಬಾಸೆ ಮತ್ತೆ ಪ್ರದೇಸಗಳ ಗಡಿ ಮೀರಿ ಹೋಗುಟು. ಹಂಗೇಳ್ರೆ ಒಂದೇ ದರ್‌ಮದ ಜೆನಂಗ ಬೇರೆ ಬೇರೆ ಪ್ರದೇಸಲಿ ನೆಲ್ಸಿ ಬೇರೆಬೇರೆ ಬಾಸೆಗಳ್‌ಲಿ ಮಾತಾಡ್‌ವ, ಆ ಸೀಮೆಲಿ ಇರ್‌ವ ಆಚಾರ-ವಿಚಾರಗಳ ಒಪ್ಪಿಕಂಡ್ ಬೊದ್ಕುವೆ. ಹಿಂಗೆ ಇರ್‌ಕನ ಬೊದ್ಕ್, 'ಕಲೆ ಸಂಸ್ಕೃತಿ'ಗಳ ಬಾಗ ಆಗುಟು.

ಮಾಪ್ಪೆ ಮತ್ತೆ ಬ್ಯಾರಿಗಳ ನಡುಲಿ ಕಾಂಬ ಸತ್ಯ ಸಂಗತಿ ಕೂಡ ಅದೇ ಆಗುಟು. ದೇವರ ನಂಬುವ ವಿಚಾರಲಿ ಒಂದೇ ನಂಬಿಕೆ ಇದ್ದವಾಗಿದ್ದರೂ ಕೂಡ ಬಾಸೆಲಿ ವೆತ್ಯಾಸ ಉಟ್ಟು. ಕಾಸರಗೋಡ್‌ನ ಚಂದ್ರಗಿರಿ(ಪಯಸ್ವಿನಿ ಹಳ್ಳ) ಕರೆಂದ ಕುಂದಾಪುರದ ಬಾರ್‌ಕೂರ್ ಮುಟ್ಟ ಬ್ಯಾರಿಗ ನೆಲ್ಸಿದ್ದೊಂತೇಳ್ವ ಮಾತ್ ಉಟ್ಟು. ಕೆಲ್ಸಂದಾಗಿ ಕೊಡಗ್, ಚಿಕ್ಕಮಗಳೂರ್, ಹಾಸನ, ಶಿವಮೊಗ್ಗ ಜಿಲ್ಲೆಗಳ್‌ಲಿ ಬ್ಯಾರಿಗ ಇಂದ್ ಒಳೊ.

ಅಲ್ಲದೆ 'ಮಂಗ್ಳೂರ್' ಬ್ಯಾರಿಗಳ ರಾಜಧಾನಿತ ಅಲಿಕಿತ ಮಾತ್ ಕೂಡ ಕೇಳಿ ಬಂದದೆ. ಬ್ಯಾರಿಗ ಹೆಚ್ಚಿಗೆ ಮೆರೆತಿದ್ದ ಕಾಲಲಿ ದೊಡ್ಡ ದೊಡ್ಡ ಬ್ಯಾರಿ ಮನೆತನಗ ಮಂಗಳೂರ್‌ಲೆ ಕಂಡ್ ಬಂದದ್

ಅದ್ಕೆ ಸಾಕ್ಸಿಂತ ಹೇಳಕ್. ಇಸ್ಲಾಂಲಿ ಮೇಲ್–ಕೀಳ್ ಹೇಳ್ದು ಇಲ್ಲೆ. ಇಸ್ಲಾಂ ದರ್ಮದ ಅನುಯಾಯಿಗಾಗಿದ್ದ ಬ್ಯಾರಿಗ ಊರೊಳೆಗೆನ ಸಂಸ್ಕೃತಿನ ಪ್ರಬಾವಕೆ ಒಳಗಾಗಿ ಅವರೊಳೆಗೆ 'ಇಲ್ಲ' ಎಂಬ ಪೊದ್ದತಿನ ಅನುಸರ್‌ಸಿದರ್‌ಂದ ಅರಿವಿದ್ದೋ, ಇಲ್ಲದೆನೋ 'ಮೇಳು–ಕೀಳು' ಕ್ರಮದೊಟ್ಟಿಗೆ ಬೊದ್ಕು ಸಾಗ್‌ಸತಿದ್ದೊ. ಕ್ರಮೇಣ ದಾರ್‌ಮಿಕ ಪ್ರಜ್ಞೆ ಬೆಳೆಕನ ಜಗತ್ತ್ 'ಆದುನೀಕರಣ' ಆಕನ ಈ ಪೊದ್ದತಿನೂ ಕಾಣೆ ಆತ್. ಈಗ ಬ್ಯಾರಿಗಳ್‌ಲಿ 'ಇಲ್ಲ' ಪೊದ್ದತಿನೂ ಇಲ್ಲೆ. ದರ್ಮದ ವಿದಿ ವಿದಾನದ ಹೊತ್ತುಲಂತು ಮೇಲು–ಕೀಳ್‌ತ ಹೇಳ್ದು ಇಲ್ಲೆ. ಉದಾಹರಣೆಗೆ : –ಪಳ್ಳಿಲಿ ಕರಿ–ಬಿಳಿ, ಪಾಪದಂವ–ಶ್ರೀಮಂತ, ಹಿರಿಯ–ಕಿರಿಯತೇಳ್ವ ಬೇದ ಇಲ್ಲದೆ ನಮಾಜ್ ಮಾಡಕ್.

ಹಂಗೆನೆ ಪೊಡ್‌ವ ಕರಾವಳಿನ ಬ್ಯಾರಿಗ ದರ್‌ಮಾಚರಣೆ ಮತ್ತೆ ಸಾಮಾಜಿಕ ಕಟ್ಟಳೆಗಳ ವಿಸಯಲಿ ಬಟ್ಕಳದ ದರ್‌ಮ ಪಂಡಿತರ್‌ಂದ ದೂರ ಇದ್ದ್, ಕೇರಳದ ಮಾಪ್ಲೆಗಳಿಗೆ ತುಂಬಾ ಹಕ್ಕಲೆ ಆಗ್ಯೊಳ. ಆದರೆ ಮಲೆಯಾಳಿಗಳ ಹಾಂಗೆ ಬ್ಯಾರಿಗಳ್ದ್ ಅಳಿಯಕಟ್ಟ್‌ನ ಸಂಪ್ರದಾಯ ಅಲ್ಲ ಹೇಳ್ದು ಸರಿಲಿ ಗೋಸ್ಪಿ ಮಾಡಕಾದ ಸಂಗತಿ.. ಈ ನೆಡುಲಿ ಬ್ಯಾರಿಗಳ ಬೊದ್ಕು ತುಳು ಬೊದ್ಕುನೊಟ್ಟಿಗೆ ಕೂಡಿಕಂಡಾಂಗೇ ಕಾಂಬದರ ಅಲ್ಲಂತೇಳಿಕೆ ಸಾದ್ಯ ಇಲ್ಲೆ ದರ್‌ಮನಿಸ್ಟ ಬ್ಯಾರಿಗ ಕೂಡ ಕೆಲವ್ ಹೊತ್ತ್ ತುಳು ಸಂಸ್ಕೃತಿನ ಕಡೆಗೆ ಗಮನ ಹರ್‌ಸುದು ಅಲ್ಲಲ್ಲಿ ಕಂಡ್ ಬಂದದೆ.

ಬೊದ್ಕುಲಿ ಮೊದ್ವೆ ಮತ್ತೆ ಸಾವುಗೆ ಮೊಯಿಂಸರ್ ಹೆಚ್ಚ್ ಆದ್ಯತೆ ನೀಡ್ವೆ, ಅವರ ಬದ್ದ ವೈರಿನ ಕೂಡ ಮೊದ್ವೆಗೆ ಕರೆವ ಪರಿಪಾಟ ಬ್ಯಾರಿಗಳ ನೆಡುಲಿ ಉಟ್ಟು. ಇನ್ನ್ ಮೊಯಿಂಸ ಸಾಯಕನ ಅಂವನ ವೈರಿನೂ ಬಾಯಿಗೆ ನೀರ್‌ಕೊಟ್ಟ್ ಬಂದದೆ. ಇದ್ಕೆ ಬ್ಯಾರಿ ಬಾಸೆಲಿ 'ಕನ್ನೋಕ್‌ರೆ' (ಕೊನೆಯ ನೋಟ ಬೀರುವುದು)ತ ಹೇಳ್ವೆ.

ಆಚರಣೆ, ಸಂಪ್ರದಾಯದ ವಿಸಯಕೆ ಬಾಕನ ಮುಕ್ಯ ಆಗಿ ಬ್ಯಾರಿಗಳ ಮೊದ್ವೆ ಪೊದ್ದತಿ ಗಮನ ಸೆಳ್ದದೆ. ಇಸ್ಲಾಂ ಸರಳತೆಗೆ ಒತ್ತು ಕೊಟ್ಟರು ಕೂಡ ಬ್ಯಾರಿಗಳ ಮೊದ್ವೆ ಮಾತ್ರ ಗೌಜಿಲಿ ನಡ್ದದೆ. ಪ್ರಾಚೀನ ಬ್ಯಾರಿಗಳ ಮೊದ್ವೆ ಕಡಿಮೆತೇಳಿರು 15 ದಿನಗಳವರೆಗೂ ನಡ್ದದೆ. ಅದ್ ರಾತ್ರೆ ಹೊತ್ತು ನಡೆತಿತ್ತ್. ಬ್ಯಾರಿಗಳ ಮೊದ್ವೆ ಪೊದ್ದತಿನೂ ವಿಸೇಸ ಆಗಿದ್ ಉಟ್ಟು. ಹೆಚ್ಚಿನ ಕಟ್ಟುಪಾಡ್‌ಗ ತುಳುವರ್‌ಲಿ ಇರ್‌ವಂತದೇ ಆಗುಟು.

ಹಿಂದೆ ಬ್ಯಾರಿಗಳ್‌ಲಿ 'ತಲಕಾರ್ ಅಲ್ಲರೆ ಪೌನಾರ್ ಅಗ'ತ ಹೇಳ್ವ ಮನೆತನಗ ಇದ್ದೊ. ಮತ್ತೆ ಇದ್ 21 ಮನೆತನಗಾಗಿ ಕವಲೊಡ್ತ್. ಕ್ರಿ. ಶ. 1940ರವರೆಗೂ ಈ ಮನೆತನಗಳ ನೆಡುಲಿ ಮಾತ್ರ ಮೊದ್ವೆ ನಡೆತ್ತಿತ್ತ್.

ಬ್ಯಾರಿಗ ಅವರ ಮೊದ್ವೆ ಹೊತ್ತುಲಿ ಸುರೂಗೆ ಎತ್ತುವ ಸಂಗತಿ 'ಕಾಸಿ–ಬಂಗಾರ್' ಅಲ್ಲರೆ 'ಎಡಿಕೆ–ಕೊಡಿಕೆ'. ಹಂಗೇಳ್ರೆ ವರದಕ್ಷಿಣೆ. ಇಸ್ಲಾಂ ದರ್‌ಮಲಿ ವರದಕ್ಷಿಣೆ ಕೊಡಿಕಿಲ್ಲೆ. ಅಲ್ಲೇನಿದ್ದರೂ ವದುದಕ್ಷಿಣೆ ಮಾತ್ರ. ಬ್ಯಾರಿಗ ಇಸ್ಲಾಂ ದರ್‌ಮದ ಅನುಯಾಯಿಗ ಆಗಿದ್ದರು ಕೂಡ ಸ್ತಳೀಯ ತುಳು ಸಂಸ್ಕೃತಿನ ಪ್ರಬಾವಂದ ವರದಕ್ಷಿಣೆ ಪಡೆತಿದ್ದಂತ ಹೇಳ್ವೆ. ಇನ್ನ್ ಬ್ಯಾರಿಗಳ ಗೂಡೆ ನೋಡ್ವ ಪೊದ್ದತಿ, ಗೂಡೆ ಒಪ್ಪಿಗೆ ಆದರೆ 'ಮೋದರ' (ಉಂಗುರ) ಹಾಕುವ, ಊಟ ಮಾಡ್ವ ಕ್ರಮನು ಮಾಪ್ಳೆಗಳ್‌ಲಿ ಕಂಡದೆ.

ಬ್ಯಾರಿಗಳ ಪ್ರತಿಯೊಂದ್ ಆಚರಣೆಲೂ ದರ್‌ಮದ ವಿದಿ–ವಿದಾನನ ಬುಟ್ಟುಬುಡದೆ ನಡ್ಸುವೆ. ಅದ್ಕಾಗಿ ಸ್ತಳೀಯ ಪೊಳ್ಳಿನ 'ಮುಕ್ರಿ/ಮೋಯ್ಲಾರಿ/ ಕತೀಬ್/ಇಮಾಮ್/ಮುರ್ರಿಸ್‌ರ್‌ಂದ ವಿಸೇಸ 'ದುಂಆ'(ಪ್ರಾರ್‌ತನೆ) ದೊಟ್ಟಿಗೆ ಕಾರ್‌ಯ ಸುರು ಮಾಡ್ವೆ. ಗೂಡೆಗೆ ಗಂಡ್‌ನ ಕಡೆವು ಒಪ್ಪಿ ಉಂಗುರ ಹಾಕಿದ ಮೇಲೆ ಹೆಣ್ಣ್‌ನ ಒಟ್ಟಿಗೆ ಊಟ ಮಾಡ್ದ ಮೇಲೆನೂ 'ದುಂಆ' (ಪ್ರಾರ್‌ತನೆ) ಮಾಡ್ದು ವಾಡಿಕೆ. ಈ ಕ್ರಮ ಮಾಪ್ಳೆಗಳ್ಲೂ ಉಟ್ಟು.

ಬ್ಯಾರಿ ಬಾಸೆ, ಸಂಸ್ಕೃತಿನ ಒಳ್ಸಿ ಬೆಳ್ಸುವ ಮತ್ತೆ ಸಾಹಿತ್ಯನ ಸೃಸ್ಟಿಸುವ ಪ್ರಯತ್ನ ಒಂದ್ ಕಡೆ ಸಾಗಿರೆ, ಇನ್ನೊಂದು ಕಡೆ ಜಾಗತೀಕರಣ ಅದೆಲ್ಲದರ ಸುದ್ದಿಲ್ಲದೆನೆ ಕೊಲ್ಲುತುಟ್ಟು. ಹಂಗಾಗಿ ಇಂದ್ ಬ್ಯಾರಿಗಳ ಚಿನ್ನ–ಬಣ್ಣ, ಅಡ್ಗೆ ಮನೆನ ಸಾಮಾನ್‌ಗ, ಬಟ್ಟೆಬರೆಗ ಎಲ್ಲನೂ ಕಾಲದ ಪೆಟ್ಟ್‌ಗೆ ಸಿಕ್ಕಿಟು. ಹಳೆ ಚಿನ್ನಬಣ್ಣಗ ಇಂದ್ ಮಾಯಾಕಂಡುಟ್ಟು. ಅದರ ಬದಲ್‌ಗೆ ಹೊಸ ನಮೂನೆನ ಚಿನ್ನಬಣ್ಣಗ ಬರ್‌ತೊಳ. ಅದ್ಕೆ ಇಂಗ್ಲಿಸ್‌ಲೆ ಹೆಸ್ರಿಸ್‌ವ ಪರಿಪಾಟ ಬೆಳೆತುಟ್ಟು. ಅದ್ಕೆ ಮಾಪ್ಲಾ ಜೆನಗ ಕೂಡ ಬುಟ್ಟಿಲ್ಲೆ ಒಟ್ಟುಲಿ ಬ್ಯಾರಿಗ ಮತ್ತೆ ಮಾಪ್ಳೆಗಳ ನೊಡುಲಿ ದಾರ್‌ಮಿಕ ನಂಬಿಕೆ, ಆಚಾರ, ವಿಚಾರಗಳ್‌ಲಿ ಸಾಮ್ಯತೆ ಉಟ್ಟು. ಆದರೆ ಸಾಂಸ್ಕೃತಿಕಆಗಿ ಒಂದಸ್ಟ್ ಬಿನ್ನತೆ ಉಟ್ಟು. ಅದ್ಕೆ ಪ್ರದೇಸದೊಳೆಗೆನ ಜೆನಜೀವನ ಕಾರಣ ಆಗಿರ್‌ದು. (ಎಚ್.ಎಮ್.)

**ಬ್ರಹ್ಮಗಿರಿ :** ಮಡಿಕೇರಿ ತಾಲೂಕ್‌ಲಿರ್‌ವ ಒಂದ್ ಎತ್ತರದ ಮಲೆ. ಕೊಡಗ್ ಜಿಲ್ಲೆನ ನಾಕ್ ದಿಕ್ಕ್‌ಗಳ್‌ಂದ ಕೂಡ್ದ ಪೊಡ್‌ವಗಟ್ಟದ ಬೆಟ್ಟಗಳ ಸಾಲ್‌ಲಿ ಬ್ರಹ್ಮಗಿರಿ ಬೆಟ್ಟ ಬಾರೀ ಮುಕ್ಯದ್. ಬೇಂಗುನಾಡ್ ಬೆಟ್ಟಗಳ ಸಾಲ್‌ಗ ಮಡಿಕೇರಿನ ಹಕ್ಕಲೆಂದ ಸುರು ಆಗಿ ಪೊಡ್‌ವ ದಿಕ್ಕ್ ಕಡೆ ಹೋಗಿ, ಮಡಿಕೇರಿ ತಾಲ್ಲೂಕ್‌ನ ತಾವುನಾಡ್ ಹಕ್ಕಲೆ ಇರ್‌ವ ಪೊಡ್‌ವ ಗಟ್ಟನ ಸೇರ್‌ದೆ. ಈ ಜಾಗೆಲಿ ಬ್ರಹ್ಮಗಿರಿ ಉಟ್ಟು. ಇದರ ಎತ್ತರ ಸು. 1, 745 ಮೀ. ಜಾಸ್ತಿ ಮಳೆ ಮತ್ತೆ ಕನಿಜಗ ಸೇರ್‌ದ ಗೋಡು ಮಣ್ಣ್‌ಂದಾಗಿ ಇಲ್ಲಿನ ಕಾಡ್‌ಗ ದಟ್ಟ ಆಗುಟ್ಟು. ಯಾಗೋಳು ಪಚ್ಚೆ ಆಗಿರ್‌ವ ಕಾಡ್‌ನ ಮುಕ್ಯ ದೈಗಳ್‌ಲಿ ಒಂದಾಗಿರ್‌ವ ಬೆದ್‌ರ್ ಈ ಮಲೆಲಿ ಜಾಸ್ತಿ ಬೆಳ್ದದೆ.

ಬ್ರಹ್ಮಗಿರಿ ಕಾವೇರಿ ಮತ್ತೆ ಕನ್ನಿಕಾ ಹಳ್ಳಗಳ ಉಗಮಸ್ತಾನ. ಈ ಮಲೆನ ನೆತ್ತಿ ಮೇಲೆ ನಿತ್ತ್ ಸುತ್ತಾ ಕಣ್ಣಾಡ್ಸಿರೆ ಕುದುರೆಮುಕ, ಬೆಟ್ಟದಪುರ, ಮತ್ತೆ ನೀಲಗಿರಿಬೆಟ್ಟಗಳ ಪೊರ್‌ಲುನ ಕಣ್ಣ್ ತುಂಬ್ಸಿಕಣಕ್. ಈ ಬೆಟ್ಟ




ಮೂಡಂದ ಪೊಡ್ವದ ಕಡೆ ಇಳ್ಜಾರಾಗಿದ್ ಉಟ್ಟು. ಕಿಗ್ಗಟ್ಟನಾಡ್‌ನ ಕಡೆಗೆ ತುಂಬಾ ಕವಲುಗ ಒಡ್ದುಟ್ಟು. ಈ ಕವಲುಗಳ್‌ಲಿ ವಿರಾಜಪೇಟೆನ ಅಂಬಟೆಬೆಟ್ಟ, ಬೆಟ್ಟಂಗಾಲದ ಬೆಟ್ಟ, ಹಾತೂರಿನ ಕುಂದದಬೆಟ್ಟ, ಸಿದ್ದೇಶ್ವರಬೆಟ್ಟ ಮತ್ತೆ ಮಾಕಲ್ ಬೆಟ್ಟಗ ಮುಕ್ಯ ಆದವುಗ. ಇದ್ ಬಾರೀ ಗುಂಡಿನೂ, ಇಳಿಜಾರ್‌ನೂ ಆಗಿದ್ ಉಟ್ಟು. (ವಿ.ಎನ್.ಎನ್.)

**ಭಾಗಮಂಡಲ :** ಮಡಿಕೇರಿ ತಾಲೂಕ್‌ನ ಒಂದ್ ಗ್ರಾಮ ಮತ್ತೆ ಹೋಬಳಿ ಕೇಂದ್ರ. ಮಡಿಕೇರಿಗೆ ಪೊಡುವಲಿ 40 ಕಿಮೀ ದೂರಲಿ ಕಾವೇರಿ ಹಳ್ಳದ ಕರೆಲಿ ಉಟ್ಟು. ಕಡಲ್ ಮಟ್ಟಂದ ಸು. 350' ಎತ್ತರ ಉಟ್ಟು. ಸುತ್ತ ದೊಡ್ಡ ಕಾಡ್, ಪ್ರಕೃತಿ ಸೌಂದರ್ಯಂದ ಕೂಡಿ ಬಾರೀ ಪೊರ್‌ಲುಟ್ಟು. ಇಲ್ಲಿನ ಜೆನಸಂಕೆ 2, 149.



ಭಾಗಮಂಡಲ

ಭಾಗಮಂಡಲ ಜೇನ್‌ಸಾಕಣೆಗೆ ಹೆಸ್ರಾವ್ಟು. ಇಲ್ಲಿ ಜೇನ್‌ಸಾಕಣೆ ಮತ್ತೆ ತರಬೇತಿ ಕೇಂದ್ರ ಉಟ್ಟು. ಗ್ರಾಮಾಂತರ ಪಶುವೈದ್ಯಶಾಲೆ ಉಟ್ಟು. ಶಾಲೆಗ, ಆಸ್ಪತ್ರೆ, ವಿದ್ಯುತ್, ಅಂಚೆ, ತಂತಿ ಹಿಂಗೆ ಸುಮಾರ್ ಸೌಲಬ್ಯಗನು ಇಲ್ಯುಟ್ಟು. ಭಾಗಮಂಡಲಂದ ಒಳ್ದ ಕಡೆಗಳಿಗೆ ಹೋಕೆ ಲಾಯಿಕ್‌ನ ಮಾರ್‌ಗಗನು ಉಟ್ಟು.

ಬಗಂಡೇಶ್ವರ ಮುನಿ ಇಲ್ಲಿ ತಪಸ್ಸ್ ಮಾಡ್‌ತಿದ್ದದರ್‌ಂದ ಈ ಜಾಗೆಗೆ ಭಾಗಮಂಡಲತ ಹೆಸ್ರ್ ಬಾತ್‌ತ್ಳೆಲ್ದು ಇತಿಯಾಸ. ಬ್ರಹ್ಮಗಿರಿ ಮಲೆನ ನೆಡುಂದ ಹರ್‌ದ್ ಬರ್‌ವ ಕನ್ನಿಕೆ ನದಿ ಕಾವೇರಿ ನದಿನ ಭಾಗಮಂಡಲದ ಹಕ್ಕಲೆ ಸೇರ್‌ದೆ. ಅಲ್ಲದೆ ಸುಜ್ಯೋತಿತ ಗುಪ್ತಗಾಮಿನಿನೂ ಇಲ್ಲಿ ಸೇರ್‌ದೆತ ನಂಬಿಕೆ ಉಟ್ಟು. ಇದ್ ತ್ರಿವೇಣಿ ಸಂಗಮ ಆಗಿ ಪುಣ್ಯಕ್ಷೇತ್ರ ಆಗುಟು. ಕೊಡಗ್‌ನ ಜೆನ ಹೆಚ್ಚಿನ ಸಂಕೆಲಿ ಪರ್‌ವ ದಿನಗಳ್‌ಲಿ ಇಲ್ಲಿ ಸೇರುವೆ.

ಇಲ್ಲಿ ಬಗಂಡೇಶ್ವರ ದೇಸ್ತಾನ ಉಟ್ಟು. ದೇಸ್ತಾನಲಿ ತಮಿಳ್‌ಬಾಸೆ ಮತ್ತೆ ಗ್ರಂತಲಿಪಿಲಿರುವ ಒಂದ್ ಸಾಸನ ಉಟ್ಟು. 1785–90 ರವರೆಗೆ ಟಿಪ್ಪುಸುಲ್ತಾನ ದೇಸ್ತಾನನ ಕೋಟೆ ಆಗಿ ಬದಲಾವಣೆ ಮಾಡಿ ಇಲ್ಲಿ ಒಂದ್ ಸೈನ್ಯನ ಇಸಿತ್. ಭಾಗಮಂಡಲನ ಅಫಜಲಾಬಾದ್‌ತ ಹೆಸ್ರಿಸಿತ್. 1790ರ್‌ಲಿ ಕೊಡಗ್‌ನ ದೊಡ್ಡ ವೀರರಾಜೇಂದ್ರ ಭಾಗಮಂಡಲನ ಗೆದ್ದ್‌ಕಂಡತ್. ಯುದ್ದಕಾಲಲಿ ನಾಸ ಆದ ದೇಸ್ತಾನದ ಮೂರ್ ತಾಮ್ರದ ಮಾಡ್‌ನ ಬದಲ್‌ಗೆ ರಾಜ ನಾಕ್ ಬೆಳ್ಳಿನ ಹಂಚಿಗಳ ಹೊದ್‌ಸಿತ್‌ಗಡ. ಕಾವೇರಿನ ಹುಟ್ಟಾದ ತಲಕಾವೇರಿ ಇಲ್ಲಿಂದ 16 ಕಿಮೀ ದೂರಲಿಟ್ಟು. (ಎಸ್.ಪಿ.ಕೆ.)

**ಮಂಗಳೂರು :** ಮಂಗಳೂರು ದಕ್ಷಿಣಕನ್ನಡ ಜಿಲ್ಲೆಲಿ ಇರ್‌ವ ಒಂದ್ ತಾಲೂಕು. ಇದ್ ಜಿಲ್ಲೆ ಹಾಂಗೆ ತಾಲ್ಲೂಕುನ ಆಡೆಳ್ತ ನಡ್ಸುವ ಜಾಗೆ. ಈ ತಾಲ್ಲೂಕುನ ಮೂಡಲಿ ಬೆಳ್ತಂಗಡಿ ಮತ್ತೆ ಬಂಟ್ವಾಳ ತಾಲೋಕುಗ ಒಳ. ಬಡಗಲಿ ಕೇರಳ ರಾಜ್ಯ ಮತ್ತೆ ಪಡುವಲಿ ಅರಬ್ಬಿ ಕಡಲ್, ತೆಂಕಲಿ ಉಡುಪಿ ಜಿಲ್ಲೆನ ಕಾರ್ಕಳ ಮತ್ತೆ ಉಡುಪಿ ತಾಲೂಕುಗ ಸುತ್ತ ಒಳ.

ತಾಲ್ಲೂಕುಲಿ ಗುರುಪುರ, ಮಂಗಳೂರು–ಎ, ಮಂಗಳೂರು–ಬಿ, ಸುರತ್ಕಲ್ಲು ಮತ್ತೆ ಮುಲ್ಕಿ ಹೋಬಳಿಗ, 7ಪೇಟೆಗ ಹಾಂಗೆನೆ 102ಗ್ರಾಮಗ ಒಳ. ಈ ತಾಲ್ಲೂಕುನ ವಿಸ್ತೀರ್ಣ 560 ಚ. ಕಿಮೀ. ತಾಲ್ಲೂಕುನ ಒಟ್ಟು ಜೆನಸಂಕೆ 8, 82, 856ರಸ್ಟ್ ಉಟ್ಟು. ತಾಲ್ಲೂಕುನ ಪೊಡ್‌ವಗಟ್ಟ ಮತ್ತೆ ಅರಬ್ಬಿ ಕಡಲ್‌ಗಳ ನೆಡುಲಿ ಹಾಂಗೆನೆ ಪಡ್ವದ ಕಡೆ ಇಳ್ಜಾರ್ ಜಾಗೆಲಿ ಮಂಗಳೂರು ಪೇಟೆ ಉಟ್ಟು.

ತಾಲ್ಲೂಕುನ ಹೆಚ್ಚಿನ ಕಡೆ ಅಗಲದ ಮಟ್ಟಸ ಜಾಗೆಗ ಹಾಂಗೆನೆ ನೆಡು ನೆಡುಲಿ ಗುಡ್ಡೆ ಜಾಗೆಗ ಉಟ್ಟು. ಹಳ್ಳದ ಕರೆ ಬುಟ್ಟು ಬೇರೆ ಕಡೆಲಿ ಪೊಯ್ಯೆ ಮೊಣ್ಣು ಕಾಂಬಕೆ ಸಿಕ್ಕಿದೆ.

ಗುರುಪುರ ಹಳ್ಳ ಮುಂದೆ ತಾಲ್ಲೂಕುನ ಮೂಡ ದಿಕ್ಕ್‌ನತ್ತ ಹಜ್ಞಾ ದೂರ ಹರ್‌ಕೊಂಡು ಹೋಗಿ ಮತ್ತೆ ವಾಯುವ್ಯ ದಿಕ್ಕ್‌ನತ್ತ ತಿರ್‌ಗಿ ತಾಲ್ಲೂಕುನ ನೆಡುಲಿ ಅಡ್ಡಲಿ ಹೋಗಿ ಮತ್ತೆ ಹಾಂಗೆನೆ ಬಡಗ ದಿಕ್ಕುಲಿ ಸಮತಟ್ಟ್‌ಲಿ ಮಂಗಳೂರುನ ಬಡಗ ದಿಕ್ಕುನ ಕೊಡಿಮುಟ್ಟ ಹರ್‌ದು ಅರಬ್ಬಿ ಕಡಲ್‌ನ ಸೇರ್‌ದೆ.

ನೇತ್ರಾವತಿ ಹಳ್ಳ ಬಂಟ್ವಾಳ ತಾಲ್ಲೂಕುಲಿ ಆಗಿ ಹರ್‌ಕೊಂಡ್ ಬಂದ್ ತಾಲ್ಲೂಕುನ ತೆಂಕಲಿ ತಾಲ್ಲೂಕು ಒಳಗೆನೆ ಅಡ್ಡ ದಾಟಿ ಮಂಗಳೂರುನ ತೆಂಕ ಬಾಗಲಿ ಗುರುಪುರ ಹಳ್ಳನ ಸೇರ್‌ದೆ.

ಮುಲ್ಕಿ ಹಳ್ಳ ಈ ತಾಲ್ಲೂಕುನ ಉಡುಪಿ ಮತ್ತೆ ಕಾರ್ಕಳ ತಾಲ್ಲೂಕುಗಳಂದ ಬೇರೆ ಮಾಡ್ವ ಉತ್ತರದ ಗಡಿಯಾಗುಟು.ಕೆಲ ಸಣ್ಣಪುಟ್ಟ ಹಳ್ಳಂಗ ಪಡ್ವದ ಕಡೆ ಹರ್‌ಕಂಡ್ ಹೋಗಿ ಅರಬ್ಬೀಕಡಲ್‌ನ ಸೇರ್‌ದೆ. ಹಳ್ಳಗ ಹರ್‌ಕೊಂಡು ಹೋಗಿ ಕಡಲ್‌ನ ಸೇರುವಲ್ಲಿ ಅಗಲ ಆಗುಟು. ಹಳ್ಳಗಳ ನೆಡುಲಿ ಅಲ್ಲಲ್ಲಿ ನೀರ್‌ನಮಟ್ಟಂದ ಒಂಚೂರು ಎತ್ತರಲಿ ಇರ್‌ವ ಜಾಗೆಗ ಒಳ. ಈ ತಾಲ್ಲೂಕುಲಿ ವರ್‌ಸಲಿ ಸರಾಸರಿ ಮಳೆ 3, 398. ಮಿ. ಮೀ ನಸ್ಟ್ ಆದೆ. ನೈಋತ್ಯ ಮಾರುತಲಿ ವಿಸೇಸ

ಮಳೆ ಆದೆ. ಆಕನ ಜರಿ ಹಳ್ಳಗ ತುಂಬಿ ಹರ್‌ದದೆ ಆದರೆ ಬೇಸಗೆಲಿ ಕೆಲವ್ ಕಡೆ ನೀರಿಲ್ಲದೆ ಪೊಟ್ಟಾಗಿದ್ದದೆ. ತಾಲ್ಲೂಕುಲಿ ಒಟ್ಟು 55, 380 ಹೆಕ್ಟೇರು ಜಾಗೆಲಿ 9, 835 ಹೆಕ್ಟೇರ್ ಹಡ್ಲು ಜಾಗೆ 1, 076 ಹೆಕ್ಟೇರ್ ಹುಲ್ಲಡ್ಕ, 23, 838 ಹೆಕ್ಟೇರ್ ಬೇಸಾಯ ಬೂಮಿ ಉಟ್ಟು. ಕಾಡು ಜಾಗೆಗ ಇಲ್ಲಿ ಬತ್ತ ಇಲ್ಲಿನ ಮುಕ್ಯ ಆಹಾರ ಬೆಳೆ.

ಉಜಿರ್‌ಕಣಿ, ಹಳ್ಳ ಜರಿಗಳ ಕರೆಗಳ್‌ಲಿ ಮಳೆ ನೀರ್‌ನ ನಂಬಿ ಬತ್ತನ ಬೆಳ್ದವೆ. ಬತ್ತ ಬೆಳ್ಯಕೆ ನೀರ್ ಮುಕ್ಯ. ಚಾಳೆ ಈ ತಾಲೂಕುನ ಇನ್ನೊಂದ್ ಮುಕ್ಯ ಬೆಳೆ. ಅಡ್ಕೆ, ಬೀಜ, ಮೆಣ್ಸು, ನೆಟ್ಟಿಕಾಯಿಗ, ಹಸಿ ಮೆಣ್ಸು, ಶುಂಟಿ, ಮಾಯಿನ, ಬಾಳೆ, ಹಲಸು ಇಂತದರ ಬೆಳ್ದವೆ. ಮೀನುಗಾರಿಕೆ ಈ ತಾಲೂಕುನ ಒಂದ್ ಮುಕ್ಯ ಕಸುಬು. ಈ ತಾಲೂಕುನ ಎಲ್ಲಾ ಗ್ರಾಮಕೆ ಕರೆಂಟುನ ಸೊವ್‌ಲಬ್ಯ ಉಟ್ಟು ಇಡೀ ಜಿಲ್ಲೆಲಿ ಈ ತಾಲೂಕು ಕೈಗಾರಿಕಾ ಕ್ಷೇತ್ರಲಿ ಮುಂದುವರ್‌ದುಟು. ಬೀಜದ ಫ್ಯಾಕ್ಟರಿ, ಹಂಚಿ, ಎಣ್ಣೆ ಮತ್ತೆ ಸಾಬೂನು ಮಾಡ್ವ ಫ್ಯಾಕ್ಟರಿಗ ಸುಮಾರ್ ಒಳೊ. ದೊಡ್ಡ ಪ್ರಮಾಣಲಿ ರಸಗೊಬ್ಬರ ಕಾರ್‌ಕಾನೆ ಕೆಲಸ ಮಾಡ್ತಾ ಉಟ್ಟು. ಕೈಮಗ್ಗದ ಬಟ್ಟೆ, ಮರದ ಸಾಮಾನುಗ, ಕಾಯಿನಾರುನ ಸಾಮಾನುಗ, ಮೊದ್‌ರಿ, ಚರ್‌ಮದ ವಸ್ತುಗ ಇಂತೋವುಗಳ ತಯಾರ್‌ಸುವ ಉದ್ಯಮಗ ಒಳ. ಸುಮಾರ್ ಸಂಕೆಲಿ ಕಾಫಿ ಸಂಸ್ಕರಣೆ ಕೇಂದ್ರ ಉಟ್ಟು. ತಾಲ್ಲೂಕುನ ವೆವಸಾಯ ಮತ್ತೆ ಕೈಗಾರಿಕೋದ್ಯಮಗಳ ಅಬಿರುದ್ದಿಗೆ ಇಲ್ಲಿರ್‌ವ ಸುಮಾರು ವಾಣಿಜ್ಯ ಬ್ಯಾಂಕ್‌ಗಳ ಸಹಕಾರ ಕೂಡ ಉಟ್ಟು. ಮಂಗಳೂರುಂದ ದಕ್ಷಿಣ ಕಡೆಗೆ ಹೋವ ರೈಲ್ ಮಾರ್‌ಗ ಈ ತಾಲ್ಲೂಕುಲಿ ಕೆಲವ್ ಕಿಮೀಗಳಸ್ಟ್ ದೂರ ಮಾತ್ರ ಹೋದೆ. ಮಂಗಳೂರುಂದ–ಹಾಸನಕೆ ರೈಲುಮಾರ್‌ಗ ಉಟ್ಟು. ತಾಲ್ಲೂಕುನ ಎಲ್ಲಾ ಕಡೆ ಹೋಕೆ ಹೆದ್ದಾರಿ ಮಾರ್‌ಗಗ ಒಳ. ಮಂಗಳೂರುಂದ ಕಾಸರಗೋಡು ಕಡೆಗೆ ಬಂಟ್ವಾಳ, ಕಾರ್ಕಳ, ಉಡುಪಿ ಈ ಜಾಗೆಗಳಿಗೆ ಹೋವ ಮಾರ್‌ಗಗ ಈ ತಾಲ್ಲೂಕುನಮುಕ್ಯಮಾರ್‌ಗಂಗ. ಕೊಂಕಣ ರೈಲ್ವೆಮಾರ್‌ಗಂಗ ಮಂಗಳೂರಲಿ ಆಗಿ ದಾಟಿ ಹೋದೆ. ಮಂಗಳೂರುನ ಬಂದರು ನೌಕಾಸಂಪರ್‌ಕಕೆ, ಬೇರೆದೇಸದ ಒಟ್ಟಿಗೆ ಯಾಪಾರಕೆ ಇದ್ ಪ್ರೇಜನ ಆದೆ.

ದೇರೆಬೈಲು, ಪಡವು, ಕಂಕನಾಡಿ, ಮಂಗಳೂರು, ಉಳ್ಳಾಲ, ಮುಲ್ಕಿ, ಮತ್ತೆ ಸೋಮೇಶ್ವರ ಇದ್ ಈ ತಾಲ್ಲೂಕುನ ಹೆಸರ್ ಮಾಡ್ದ ಪೇಟೆಗ ಈ ತಾಲ್ಲೂಕುನ ಅತ್ತೂರುಲಿ ಹೆಸರ್ ಮಾಡ್ದ ಸುರಗಿರಿ ಮಹಾಲಿಂಗೇಶ್ವರ ದೇಸ್ತಾನ ಉಟ್ಟು. ಮಂಗಳೂರುಗೆ 25 ಕಿಮೀ ದೂರ ಇರ್‌ವ ಬಜ್ಪೆಲಿ ವಿಮಾನ ನಿಲ್ದಾಣ ಉಟ್ಟು. ಇಲ್ಲಿನ ಬಜ್ಪೆ ಜಲಪಾತ ಬಾರಿ ಲಾಯ್ಕ್. ಗುರುಪುರ ನೋಡಿಕೆ ಒಂದ್ ಒಳ್ಳ ಜಾಗೆ. ಮಂಗಳೂರುನ ತೆಂಕಕೆ 19 ಕಿಮೀ ದೂರಲಿ ಇರುವ ಹರೆಕಲ ಗ್ರಾಮದ ಹಕ್ಕಲೆ ನರಹರಿ ಪರ್‌ವತದ ಮೇಲೆ ನರಸಿಂಹ ಮತ್ತೆ ಶಾರದಾಂಬೆ ದೇಸ್ತಾನಗ ಉಟ್ಟು. ಕಡಲ್‌ದ ಕರೆಲಿರುವ ಈ ಜಾಗೆ ಒಂದ್ ಆರೋಗ್ಯದಾಮದಾಂಗೆ ಉಟ್ಟು. ಮಂಗಳೂರುಂದ 27 ಕಿಮೀ ಮೂಡಲಿ ನಂದಿನಿ ಹಳ್ಳದ ಕರೆಲಿ ಇರ್‌ವ ಕಟೀಲು ದುರ್ಗಾಪರಮೇಶ್ವರಿ ದೇಸ್ತಾನ ಬಾರೀ ಹೆಸರ್ ಮಾಡ್ದ ದೇಸ್ತಾನ.

ಮಂಗಳೂರುನ ಈಶಾನ್ಯಕೆ 19 ಕಿಮೀ ದೂರದಲಿರ್‌ವ ಕಿನ್ನಿಗೋಳಿ ಗ್ರಾಮದ ಶ್ರೀರಾಮದೇಸ್ತಾನ ಹೆಸರ್ ಇರುವಂತದ್. ಮಂಗಳೂರುಂದ 22 ಕಿ. ಮಿ ದೂರದಲ್ಲಿರುವ ಮಳಲಿ ಗ್ರಾಮದ ಹಕ್ಕಲೆ ಬಾರಿ ಲಾಯಿಕ್‌ನ ಪೊಳಲಿ ರಾಜರಾಜೇಶ್ವರಿ ದೇಸ್ತಾನ ಉಟ್ಟು.

ಮಂಗಳೂರುಂದ 5 ಕಿಮೀ ದೂರ್‌ಲಿರ್‌ವ ಪದವು ಗ್ರಾಮಲಿ ಕಾಫಿ ಸಂಸ್ಕರಣ ಕೇಂದ್ರ ಉಟ್ಟು. ಹಾಂಗೆನೇ ಗೇರ್‌ಬೀಜದ ಕಾರ್‌ಕಾನೆ ಉಟ್ಟು. ಇಲ್ಲಿನ ಸಕ್ತಿನಗರಲಿರ್‌ವ ರಾಮಶಕ್ತಿ ಮಿಸನ್ ಜೆನರ ಮನ್ಸ್ ಗೆದ್ದದೆ. ಮಂಗಳೂರುನ ಉತ್ತರಕೆ 9 ಕಿಮೀ ದೂರಲಿರುವ ಪಣಂಬೂರು, ಫಲ್ಗುಣಿ ಹಳ್ಳದ ಕರೆಲಿರ್‌ವ ಒಂದ್ ಯಾಪಾರ ಕೇಂದ್ರ.

ಪಣಂಬೂರುಲಿ ದೊಡ್ಡ ಸರ್‌ವಋತು ಬಂದರ್ ಮತ್ತೆ ಗೊಬ್ಬರ ಕಾರ್‌ಕಾನೆ ಸುರಾಗುಟು. ಸುರತ್ಕಲ್ ಒಂದ್ ಯಾಪಾರ ಮತ್ತೆ ವಿದ್ಯಾ ಕೇಂದ್ರಸ. ಉಲ್ಲಾಳ ಇತಿಯಾಸ ಪ್ರಸಿದ್ದ ಜಾಗೆ ಹಂಗೇ ವ್ಯಾಪಾರಕೇಂದ್ರ



ಕದ್ರಿ ದೇವಸ್ಥಾನ

ಪೊಡ್‌ವ ಕರಾವಳಿನ ಮುಕ್ಯ ರೇವುಪಟ್ಟಣಸ ಆಗುಟು. ಇದ್ ಬೆಂಗಳೂರುಗೆ ಪೊಡ್‌ವಂದ 363 ಕಿ. ಮಿ ದೂರನೂ ಮುಂಬಯಿನ ದಕ್ಷಿಣಕೆ 673ಕಿಮಿ ದೂರಲು ಉಟ್ಟು. ಪದ್‌ರ ಇರುವ ಮಂಗಳೂರು ನಗರಲಿ 2, 69, 176 ಜೆನ ಗಂಡುಗ, 169, 384. ಜೆನ ಹೆಣ್ಮಕ್ಕ ಒಳ. ಒಟ್ಟು ಜೆನಸಂಕೆ 5, 38, 560 ಮಂಗಳೂರು ನಗರ ಪಾಲಿಕೆ ವ್ಯಾಪ್ತಿಲಿ 2, 08, 665 ಜೆನ ಗಂಡುಗ 2, 06, 784 ಜೆನ ಹೆಣ್ಮಕ್ಕ ಒಳ ಒಟ್ಟು ಜೆನಸಂಕೆ. 4, 15, 449. ದೇರೆಬೈಲು, ಕಂಕನಾಡಿ, ಸೋಮೇಶ್ವರ ಮತ್ತೆ ಉಳ್ಳಾಲಲಿ ನಗರ ಸಮಿತಿಗೆ ಸೇರಿಸಿಕೊಂಡೊಳ. ಮಂಗಳೂರು, ನಗರ ಕರ್ನಾಟಕದ ಪೊಡ್‌ವ ಕರಾವಳಿನ ಪೊರ್‌ಲ್‌ನ ಪೇಟೆಂತೇಳಿ ಹೆಸರ್ ಆಗುಟು..





ಗುರುಪುರ ಮತ್ತೆ ನೇತ್ರಾವತಿ ನದಿಗ ಸಂಗಮ ಆಗಿ ಕಡಲ್ ಸೇರುವಲ್ಲಿ ಇದ್ದ್ ಪಡ್ವ ಮತ್ತೆ ಬಡಗಲಿ ಹರಿವ ಈ ಹಳ್ಳಗಳ ಒರತೆಂದ ಆಗ್ನೇಯ ದಿಕ್ಕ್‌ಲಿ ಪಸಲ್ ತುಂಬಿದ ಕ್ರಿಸಿ ಜಾಗೆ ಉಟ್ಟು. ಹಾಂಗೇನೆ ಉತ್ತರ ಮತ್ತೆ ಈಶಾನ್ಯಕೆ ಹಬ್ಬಿಕಂಡಿರುವ ಮಲೆ ಗುಡ್ಡೆಗ. ಅದರ ನೆಡುಲಿ ಪಚ್ಚೆ ಪಚ್ಚೆ ಹುಲ್ಲು, ಬಲ್ಲೆ ತುಂಬಿದ ಕಡ್‌ಜಂಗ ಉಟ್ಟು. ಎಲ್ಲಾ ಕಡೆ ಚಾಳೆ, ಅಡ್ಕೆ ಮತ್ತೆ ಬೇರೆ ಬೇರೆ ಕ್ರಿಸಿ ಬೆಳೆಗಳಂದ ತುಂಬಿಟು. ಹಾಂಗೇನೆ ಇಲ್ಲಿ ಸಾಮಾನ್ಯ ಆಗಿ ಹೊಂದಿಕಂಬ ವಾತಾವರಣ ಇದ್ದರೂ ಬೇಸಗೆಲಿ ತುಂಬ ಸೆಕೆ ಇದ್ದದೆ. ಇದ್ ವ್ಯಾಪಾರ, ವಾಣಿಜ್ಯ ಹಾಂಗೆನೆ ಕೈಗಾರಿಕಾ ನಗರ ಆಗುಟು. ಇಲ್ಲಿ ಹಂಚಿ ತಯಾರ್‌ಸುವ ಕಾರ್‌ಕಾನೆ ಉಟ್ಟು. ಶ್ರೀಲಂಕಾ, ಮಾಯನ್ಮಾರ್, ಮೂಡ ಆಫ್ರಿಕಾ ಮತ್ತೆ ಆಸ್ಟ್ರೇಲಿಯಕೆ ಇಲ್ಲಿಂದ ಹಂಚಿ ಹೋದೆ. ಬೀಜದ ಕಾರ್‌ಕಾನೆಗನು ಇಲ್ಲಿ ಉಟ್ಟು.

ಬೀಡಿ ಮಾಡ್ದರ್‌ಲು ಮಂಗಳೂರುಗೆ ಹೆಸರ್ ಉಟ್ಟು. ಮೋಟಾರ್ ಸ್ಪ್ರಿಂಗ್ಸ್, ತಂತಿ, ಸಣ್ಣ ದೋಣಿ, ನಾಡದೋಣಿ ಕಟ್ಟುದು ಕೈಮಗ್ಗಲುಂಗಿ, ಗುಬ್ಬಿ, ಬೆತ್ತದ ಕುರ್‌ಚಿ, ಪ್ಲಾಸ್ಟಿಕ್ ಸಾಮಾನ್‌ಗಳ ತಯ್ಯಾರ್ ಮಾಡ್ದು, ಕಾಯಿ ನಾರ್‌ನ ಉತ್ಪನ್ನಗ, ಸಾಬೂನು ಮತ್ತೆ ಕಾಯೆಣ್ಣೆ ಉತ್ಪಾದನೆ ಈ ಊರುನ ಉದ್ಯಮಗ. ಬ್ಯಾಂಕ್ ಉದ್ದಿಮೆಗೆ ಮಂಗಳೂರು ಹೆಸರಾಗುಟು. ಇಲ್ಲಿ ಕೆನರಾ, ವಿಜಯ, ಸಿಂಡಿಕೇಟ್ ಇಂತ ಬ್ಯಾಂಕ್‌ಗ ಒಳ. ಮಂಗಳೂರ್‌ನ ಬ್ಯಾಂಕ್‌ಗಳ ತೌರು ಮನೆಂತ ಹೇಳ್‌ವೆ. ಮಂಗಳೂರು ಈಗ ವಿಸೇಸ ಆಗಿ ಬೆಳೆತ ಇರ್‌ವ ಪಟ್ಟಣ. ನಾಡ್‌ನ ಬೇರೆಬೇರೆ ಕಡೆಗಳಿಗೂ ಜಿಲ್ಲೆನ ಸುಮಾರು ಜಾಗೆಗಳಿಗೂ ಲಾಯಿಕ್ಕನ ಮಾರ್‌ಗ ಉಟ್ಟು. ದುಬೈ, ಮುಂಬಯಿ, ಬೆಂಗಳೂರು, ಪಣಜಿಗೆ ಇಲ್ಲಿಗೆ ವಿಮಾನ ಸೌಕರ್‌ಯ ಉಟ್ಟು.

ಇಲ್ಲಿರುವ ಬಂದರ್ ಅಸ್ಟೇನ್ ಮುಂದುವರ್‌ತುಲೇ. ಆದರೆ ಇಲ್ಲಿ ಬೆಳೆವ ಅಡ್ಕೆ, ಕಾಯಿ, ಮತ್ತೆ ಕಾಯಿನ ಉತ್ಪಾದನೆಗ, ಹಾಸನ ಮತ್ತೆ ಕೊಡ್‌ಗು ಜಿಲ್ಲೆಗಳ್‌ಂದ ಬಾವ ಕಾಫಿ, ಏಲಕ್ಕಿ, ಮೆಣ್ಸು ಇಲ್ಲಿಂದ ಹೊರೆ ಯಾಪಾರ ಆದೆ.

ಆದರೆ ಈ ಬಂದರ್ ಮಳ್ಗಾಲಲಿ ಬಳ್ಸಿಕೆ ಆಗತಿತ್ತೆ. ಆದರ್‌ಂದ ಈಚೆಗೆ ಮಂಗಳೂರುಂದ 9 ಕಿಮೀ ದೂರಲಿ ಗುರುಪುರ ಹಳ್ಳಕೆ ತೆಂಕಲಿ ಪಣಂಬೂರು ಗ್ರಾಮದ ಹಕ್ಕಲೆ ಯಾಗೋಳ್ ನಡಿವಂತ ಬಂದರ್ ಕಟ್ಟಿಯೊಳೊ. ಇಲ್ಲಿ ಹಡಗ್‌ಗಳ ಸಂಪರ್‌ಕ ಇಲ್ಲದಿರ್‌ಕನ ಕುದುರೆಮುಕದ ಕಬ್ಬಿಣದ ಅದಿರುಗಳ ಹೊರದೇಸಂದ ರಪ್ತು ಮಾಡ್‌ವ ವಿಸೇಸ ವೆವಸ್ತೆ ಮಾಡಿದ್ದ. ಈಗ ಹೊಸ ಬಂದರು ಆಗುಟು ಚೆನ್ನೈಂದ ಕೊಯಮತ್ತೂರು, ಶೋರನೂರುಗಳ ಮುಕಾಂತರ ಈ ಊರ್‌ಗೆ ಬ್ರಾಡ್ ಗೇಜ್ ರೈಲ್ ಸಂಪರ್‌ಕ ಉಟ್ಟು. ಆ ಮಾರ್‌ಗದ ಅಕೆರಿಲಿ ನಿಲ್ಲ್‌ವ ಜಾಗೆ ಉಟ್ಟು. ಈಗ ಮಂಗಳೂರು –ಹಾಸನ ರೈಲ್ವೆ ಮಾರ್‌ಗಸ ಸುರಾಗುಟು.

ಕೊಂಕಣ ರೈಲ್ ಮಾರ್‌ಗ ಮಂಗಳೂರುಲಿ ಆಗಿ ಹೋದೆ. ಪೊಡ್‌ವ ಕರಾವಳಿನ ದೊಡ್ಡ(ಹೈವೆ) ಮಾರ್‌ಗ ಈ ಊರುಲಿ ಆಗಿ ಹೋದೆ. ಇಲ್ಲಿಂದ ಬೆಂಗಳೂರು, ಮೈಸೂರು, ಶಿವಮೊಗ್ಗ ಇಂತ ಕಡೆಗೆ ಮತ್ತೆ ಜಿಲ್ಲೆನ ಸುಮಾರ್ ಕಡೆಗೆ ಲಾಯಿಕ್‌ನ ಮಾರ್‌ಗಗ ಒಳ.ಮಂಗಳೂರು– ಪಾಣೆ ಮಂಗಳೂರು, ಮಂಗಳೂರು–ಗುರುಪುರ ಜಲಮಾರ್‌ಗಂಗ ಸ ಸಂಪರ್‌ಕ ಮಾಡಿಕೆ ಉಪಕಾರ ಆದೆ.

ಮಂಗಳೂರುನ ಸೇಂಟ್ ಅಲೋಸಿಯಸ್, ಸೇಂಟ್ ಆಗ್ನೆಸ್ ಮತ್ತೆ ಸರ್‌ಕಾರಿ ಕಾಲೇಜುಗಳ ಒಟ್ಟಿಗೆ, ಒಂದ್ ಉಪಾದ್ಯಾಯ ತರಬೇತಿ ಕಾಲೇಜು, ಕೈಗಾರಿಕಾ ತರಬೇತಿ ಕೇಂದ್ರ ಮತ್ತೆ ಸಮಾಜ ಕಾರ್‌ಯಕರ್‌ತರ ತರಬೇತಿ ಸಂಸ್ತೆ ಉಟ್ಟು. ಮೈಸೂರು ವಿಶ್ವವಿದ್ಯಾನಿಲಯ 1968 ರ್‌ಲಿ ಮಂಗಳೂರುನ ಕೊಣಾಜೆಲಿ ಮಂಗಳ ಗಂಗೋತ್ರಿತೇಳ್ವ ಸ್ನಾತಕೋತ್ತರ ಕೇಂದ್ರ ಸುರುಮಾಡಿಟು.ಇದೇ ಮುಂದೆ ಮಂಗಳೂರು ವಿಶ್ವವಿದ್ಯಾಲಯ ಆಗಿ ಪರಿವರ್‌ತನೆ ಆತ್. ಕಾರ್‌ನಾಡ ಸದಾಶಿವರಾಯ ಕೇಂದ್ರ ಗ್ರಂತಾಲಯ, ಸರ್‌ಕಾರಿ ವಸ್ತುಸಂಗ್ರಹಾಲಯ ಇಂತ ಸಂಸ್ತೆಗ ಸೇವೆ ಕೊಡ್ತಾ ಉಟ್ಟು. ಇಲ್ಲಿ ಕೇಂದ್ರ ಮತ್ತೆ ರಾಜ್ಯಸರ್‌ಕಾರಗಳ ಕಚೇರಿಗ ಮುನ್ಸಿಫ್ ಮತ್ತೆ ಮ್ಯಾಜಿಸ್ಟ್ರೇಟ್ ನ್ಯಾಯಾಲಯಗ ಒಂದ್ ಪೋಲಿಸ್ ತರಬೇತಿ ಕೇಂದ್ರನೂ ಉಟ್ಟು, ಗೃಹರಕ್ಸಕದಳ, ಅಗ್ನಿಶಾಮಕದಳ, ವೈದ್ಯಕೀಯ ಮತ್ತೆ ನಾಗರಿಕ ಸೌಕರ್‌ಯಗಳ ಕಚೇರಿ ಸಂಸ್ತೆಗ ಒಳೊ.

ಮಂಗಳೂರುಲಿ ಸುಮಾರ್ ದೇಸ್ತಾನಗ, ಪಳ್ಳಿ ಮತ್ತೆ ಇಗರ್ಜಿಗಳ ಒಳ. ಇದರ್‌ಲಿ ಬಾರಿ ಪ್ರಸಿದ್ದಿ ಇರ್‌ದು ಮಂಗಳಾದೇವಿ ದೇಸ್ತಾನಕೆ ಇದರ ಆಳುಪ ವಂಸದ ದೊರೆ ಎರಡನೆ ಕುಂದವರ್‌ಮ 968ರ್‌ಲಿ ಈ ದೇಸ್ತಾನ ಕಟ್ಟಿಸಿತು. ಈಗಿರ್‌ವ ದೇಸ್ತಾನನ ಬಿದನೂರುನ ನಾಯಕಂಗ ಕಟ್ಟಿಸಿದತೇಳಿ ತಿಳಿಯಕಾದೆ.

ಈಗ ಮಂಗಳೂರ್‌ಗೆ ಸೇರಿರ್‌ವ ಕದ್ರಿಲಿ ಪ್ರಸಿದ್ದ ಮಂಜುನಾಥ ದೇಸ್ತಾನ ನಾತಪಂತದವರ ಜೋಗಿಮಟನು ಉಟ್ಟು. ಮತ್ಸೆಂದ್ರನಾತ ಮತ್ತೆ ಗೋರಕನಾತ ಇಬ್ಬೊರು ಈ ಜಾಗೆಗೆ ಬಂದಿದ್ದತೇಳಿ ಹೇಳ್ವೆ. ಇಲ್ಲಿ ಅದರಸ್ಟಕೆ ಬಾವ ನೀರ್‌ನ ಚಿಲುಮೆ ಇರ್‌ವ ಒಂಬತ್ತು ಕೆರೆಗ ಉಟ್ಟು. ಇಲ್ಲಿರುವ ಕೆಲ ಗುಯೆಗಳ ಪಾಂಡವ ಗುಯೆಂತ ಕರ್‌ದವೆ. ಮಂಜುನಾಥ ದೇಸ್ತಾನ ಸುಮಾರ್ ಹತ್ತ್‌ನೆ ಸತಮಾನಲಿ ಕಟ್ಟಿದಂತದ್. ಈಗ ಈ ಬಾಗಕೆ ಕೆಲವ್ ಸೇರ್ಪಡೆಗ ಆಗುಟು. ಇಲ್ಲಿನ ಮೂಲ ಲಿಂಗನ ವಾದಿರಾಜ ದರ್‌ಮಸ್ತಳಕೆ ತೆಕಂಡು ಹೋದ್‌ಂತ ಹೇಳ್ವೆ. ಈಗ ಮುಂದೆನೆ ಇರ್‌ವ ನೀರ್‌ನ ಗುಂಡಿಗೆ ಪೂಜೆ ಆದೆ.

ಈ ದೇಸ್ತಾನಲಿರುವ ಪಂಚಲೋಹದ ಲೋಕೇಶ್ವರ ವಿಗ್ರಹದ ಪೀಟದ ಮೇಲೆ ಗ್ರಂತ ಲಿಪಿಲಿ ಬರ್‌ದ ಸಂಸ್ಕೃತ ಸಾಸನದ ಪ್ರಕಾರ ಉಟ್ಟು. ಸುಮಾರು 968ರ್‌ಲಿ ಆಳುಪ ದೊರೆ ಎರ್‌ಡನೆ ಕುಂದವರ್‌ಮಂದ ಪ್ರತಿಸ್ಥಾಪನೆ ಆಗುಟುತಾ ತಿಳ್ದು ಬಂದದೆ.

ವಿಗ್ರಹ 150 ಸೆಂಮೀ ಎತ್ತರ ಉಟ್ಟು ಮೂರ್ ತಲೆ ಆರ್ ಹೆಗಲ್ ಉಟ್ಟು. ಇಲ್ಲಿ 90ಸೆಂಮೀ ಎತ್ತರ ಇರ್‌ವ ಪಂಚಲೋಹದ ಮಂಜುನಾಥ ಮೂರ್‌ತಿ ಉಟ್ಟು. ದೇಸ್ತಾನಲಿ ಗಣಪತಿ, ಪಾರ್‌ವತಿ, ಸುಬ್ರಹ್ಮಣ್ಯ ಹಾಂಗೇನೆ ಅಣ್ಣಪ್ಪ ಮತ್ತೆ ಪಂಜುರ್‌ಲಿ ದೆವ್ವಗಳ ವಿಗ್ರಹಂಗ ಒಳ. ನಾತಪಂತಕೆ ಸೇರ್‌ದ ಕೆಲವ್ ಸಾಸನಗ ವಿಜಯನಗರ ಕಾಲದ ಕೆಲವ್ ದತ್ತಿ ಶಾಸನಂಗ ಉಟ್ಟು. (ಡಿ.ಎನ್.ಕೆ.; ಆರ್.ಟಿ.ಎಸ್.)

ಮಂಗಳೂರುನ ಚರ್‌ಚುಗಳ್‌ಲಿ ಬೋಳಾರದ ರೋಸರಿ ಚರ್‌ಚ್ 1526ರ್‌ಲಿ ಕಟ್ಟಿಯೊಳ. ಇದರ 1910ರ್‌ಲಿ ಅಗಲ ಮಾಡಿಯೊಳೊ. ಸೇಂಟ್ ಅಲೋಸಿಯಸ್ ಕಾಲೇಜ್‌ನ ಚರ್‌ಚುನ 1885ರ್‌ಲಿ ಕೆ. ಜೋಸೆಫ್ ವಿಲ್ಲಿ ತೇಳಂವ ಕಟ್ಟಿಟು. ಇದ್ ರೋಮನ್ ಸೇಂಟ್ ಫಿಲಿಫ್ ನೇರಿ ಚರ್‌ಚಿನ ಮಾದರಿಲಿ ಉಟ್ಟು..

ಬಲ್ಮಟದ ಶಾಂತಿ ಚರ್‌ಚನ 1862ರ್‌ಲಿ ಕಟ್ಯೋಳ. ಇದ್ ಸ್ವಿಟ್ಜರ್‌ಲೆಂಡಿನ ಬಾಸೆಲ್‌ನ ಮಿಶನ್ ಹೌಸ್‌ನ ಮಾದರಿಲಿ ಉಟ್ಟು. ಇದೂ 1962ರ್‌ಲಿ ಜೀರ್ಣೊದ್ಧಾರ ಮಾಡಿಯೊಳೊ.

ಇದರ ಒಟ್ಟಿಗೆ ಕಾಂತಿ ಚರ್‌ಚ್ ಮತ್ತೆ ವಿಶ್ರಾಂತಿ ಚರ್‌ಚ್ಗಳ ಹೆಸರುಟ್ಟು. ಮಂಗಳೂರುನ ಬಂದರ್ ಪ್ರದೇಸಕೆ ಸೇರಿಕಂಡಿರುವ ಹಾಂಗೆ ಇರ್‌ವ ಜೀನತ್‌ಬಕ್ಸ್ ಜುಮ್ಮಾ ಮಸೀದಿ ಹೆಸರು ಮಾಡಿಟು.

ಇದರ ಹಿಂದೆ ಮಲ್ಲಿಕ್ ದೀನಾರ್ ತೇಳ್ವ ಸಂತನೊಟ್ಟಿಗೆ ಮಂಗಳೂರುಗೆ ಬಂದ ಅರಬ್ಬೀ ಜೆನ ಕಟ್ಟಿಸಿದತೇಳಿ ನಂಬಿಕೆ. ಪಳ್ಳಿನ ಮರದ ಕಂಬಗ ಮತ್ತೆ ಪ್ರಾರ್‌ತನೆ ಮಾಡ್‌ವ ಜಗ್‌ಲಿ ಆಕರ್‌ಸಿಕ ಕೆತ್ತನೆಗ ಕಣ್ಣರ್ಳ್‌ಸಿದೆ. ಲೈಟ್‌ಹೌಸ್ ಗುಡ್ಡೆಲಿರುವ ಈದ್ಗಾ ಪಳ್ಳಿನ ಟಿಪ್ಪುಸುಲ್ತಾನ್ ಕಟ್ಟಿಸಿದತೇಳಿ ಕತೆ ಉಟ್ಟು. ಡೊಂಗರಕೇರಿಲಿರ್‌ವ ಸಾ ಅಮೀರರ ಮಸೀದಿ ಸುಮಾರು 200 ವರ್‌ಸಗಳಸ್ಟ್ ಹಳ್ತ್. ಇದರ ಹಕ್ಕಲೆ ಸಾ ಅಮೀರ ತೇಳ್ವ ಸಂತನ ದರ್‌ಗಾ ಸಹ ಉಟ್ಟು. ಅಂದ್‌ನ ಕಾಲಲಿ ಇಲ್ಲಿ ನಾಕ್ ಕೋಟೆಗಳಿದ್ದ ಹೇಳ್ತಾ ಇದ್ದ. ಒಂದ್‌ನೆದ್, ಬಿದನೂರ್‌ನ (ಇಕ್ಕೇರಿ) ಬಸವಪ್ಪನಾಯಕ (1730–54) ಕಟ್ಟಿಸಿದ ಮಂಗಳೂರು ಕೋಟೆ. ಇದರ 1784ರ್‌ಲಿ ಟಿಪ್ಪು ಸುಲ್ತಾನ್ ಹೊಡಿಮಾಡಿ ಹಾಳು ಮಾಡ್ತ್.

ಎರಡ್‌ನೆದ್, 1568ಲ್ಲಿ ಪೋರ್ಚುಗೀಸರ್ ಕಟ್ಟಿದ ಸೇಂಟ್ ಸೆಬಾಸ್ಟಿಯನ್ ಕೋಟೆ. ಮೂರ್‌ನೆದ್, ಕೆಲವ್ ಹಳೆ ದಾಕಲೆಗಳ ಆದಾರದ ಮೇಲೆ ಇತ್ತುಂತೇಳಿ ಹೇಳ್‌ವ ಲೈಟ್‌ಹೌಸ್ ಹಿಲ್ ಕೋಟೆ. ಇದರ ಇಕ್ಕೇರಿನ ವೆಂಕಟಪ್ಪ ನಾಯಕ ನೆಲಸಮ ಮಾಡ್ತು ಹೇಳ್ವೆ. ಈಗ ಮಂಗಳೂರು ಕೋಟೆ ಮತ್ತೆ ಸೆಬಾಸ್ಟಿಯನ್ ಕೋಟೆಗಳ ಕೆಲ ತಳಪಾಯಗ ಮಾತ್ರ ಉಳ್ದುಟು. ಗುರುಪುರ ಹಳ್ಳಕೆ ಶತ್ರುಗಳ ದೋಣಿಗ ಬರದಂಗೆ ನೋಡಿಕಂಬಕೆ ಟಿಪ್ಪುಸುಲ್ತಾನ ಕಟ್ಟ್‌ಸಿದ ಸುಲ್ತಾನ್ ಬತೇರಿ ಉಟ್ಟು. ಮಂಗಳೂರುನ ಕೋರ್ಟ್ಹಿಲ್ ಬಾರಿ ಲಾಯಿಕ್ಕನ ಜಾಗೆ. ಈ ಗುಡ್ಡೆನ ಮೇಲೆ ನಿತ್ತ್ ಇಡೀ ಮಂಗಳೂರು ನಗರನ ಕಡಲ್‌ದ ನೀರುನ ನೋಡಕು. ಇದರ ಹಾಂಗೇ ಕೇಂದ್ರ ಮೈದಾನ ಮತ್ತೆ ಉರ್‌ವ ಮೈದಾನ ಪ್ರದೇಸಗ ವಿಹಾರಕ್ಕೆಂತ ಹೇಳಿ ಇಸಿಯೋಳ. ನಗರದ ನೆಡುಲಿರ್‌ವ ಬಾವುಟಗುಡ್ಡೆನ ಮೇಲೆ ಹಳ್ತು ಆಗಿರ್‌ವ ಲೈಟ್‌ಹೌಸ್ ಉಟ್ಟು. ಅದರ ಸುತ್ತ ಲಾಯಿಕ್ಕನ ಉದ್ಯಾನವನ ಉಟ್ಟು. ಹೊಸ ಲೈಟ್‌ಹೌಸ್‌ನ 1900ರ್‌ಲಿ ಕಟ್ಟಿಸಿಯೋಳ. ಇದರ ಗೋಪುರ 48 ಅಡಿ ಎತ್ತರ 17 ಕಿಮೀವರೆಗೂ ಬೊಳ್ಪು ಕಂಡದೆ.

ಊರ್‌ಗೆ ಮಂಗಳೂರುತ ಮಂಗಳಾದೇವಿ ದೇಸ್ತಾನಂದ ಬಂದುಟುಗಡ. ಕೊಡಿಯಾಲ ಬಂದರುತೇಳ್ವೆ. ಹಳ್ಳಗ ಕೂಡ್‌ವ ಜಾಗೆ ಆದರ್‌ಂದ ತುಳುಬಾಸೆಲಿ ಕುಡ್ಲ ತೇಳ್ವೆ. ಕುಡ್ಲ ಹೇಳ್ರೆ ಕೂಡುಲತ ಅರ್‌ತ.

ರೋಮನ್ ಗ್ರಂತಕರ್ ಅರಿಯನ್ ಮಂಗಳೂರುನ ಮುಂಡೆಗೋರತೇಳಿ ಕರ್‌ದುಟು. ಪ್ರಾಚೀನ ಕ್ರಿಶ್ಚಿಯನ್ ಬೂಪಟಲಿ ಮಂಗಳೂರುನ ಮಂಗರೌತ್ ತೇಳಿನು ಕರ್‌ದೊಳ. 7ನೇ ಸತಮಾನದ ಒಂದ್ ತಾಮ್ರ ಸಾಸನ ಮಂಗಳೂರ್‌ನ ಮಂಗಳಾಪುರ ತೇಳಿ ಕರ್‌ದವೆ. ಅರಬ್ಬುನವ ಮಂಜದೂರ್‌ತೇಳಿ ಕರೆತಿದ್ದ.

ಮಂಗಳೂರುನ ಪಂಡ್‌ನ ಇತಿಯಾಸ ಅಸ್ಪಸ್ಟ. ಇದ್ 10–12ನೇಯ ಶತಮಾನದ ಸುಮಾರ್‌ಗೆ ಆಳುಪ ಅರಸರ್‌ಗೆ ಸೇರಿತ್ತು. 1347ರ್‌ಲಿ ಮಂಗಳೂರುಗೆ ಬಂದ ಇಬ್ನ್ ಬತೂತ ಇಲ್ಲಿನ ಪರ್‌ಸಿಯನ್ ಮತ್ತೆ ಯೆಮನ್ ಯಾಪಾರಿಗ ಒಳಾಂತ ಹೇಳಿಟು.

1448ರ್‌ಲಿ ವಿಜಯನಗರಕೆ ಹೋವ ಮಾರ್‌ಗಲಿ ಪರ್‌ಸಿಯದ ರಾಯಬಾರಿ ಅಬ್ದುಲ್ ರಜಾಕ್ ಮಂಗಳೂರ್‌ಗೆ ಬಂದಾಕನ ಪೊರ್‌ಲ್‌ನ ದೇಸ್ತಾನ ನೋಡಿತ್ತ್ ಗಡ 1505ರ್‌ಲಿ ವಿಜಯನಗರದ ಅರಸರುಗ ಪೋರ್ಚುಗೀಸರ್‌ಗೆ ಕೋಟೆ ಕಟ್ಟಿಕಂಬಕೆ ಬುಟ್ಟು ಕೊಟ್ಟ. 1526ರ್‌ಲಿ ಮಂಗಳೂರು ಪೋಚುಗೀಸರ ವಸ ಆತು. 15551ರ್‌ಲಿ ಮಂಗಳೂರುನ ಹೊಸ್ತಾಗಿ ಕಟ್ಟಿದ ಬಿದನೂರುನ ನಾಯಕರ್‌ಗೆ ಮತ್ತೆ ಪೋರ್ಚುಗೀಸರ್‌ಗೆ ಆದ ಒಪ್ಪದಾಂಗೆ 1670ಲ್ಲಿ ಪೋರ್ಚುಗೀಸರ್‌ಗ ಮಂಗಳೂರುಲಿ ಒಂದ್ ಕೋಟೆನ ಕಟ್ಟಿದ. ಅರಬ್ಬರ ವ್ಯಾಪಾರಕ್ಕೆ ಇವು ತಡ್ಯಕನ ಅರಬ್ಬರುಗ 1695ರ್‌ಲಿ ಮಂಗಳೂರುನ ಸುಟ್ಟೊ.

ಬಿದನೂರುನ ನಾಯಕರ ಮಾತ್ ತೆಕಂಡು ಪೋರ್ಚುಗೀಸರು ಮತ್ತೆ 1714ರ್‌ಲಿ ಕೋಟೆ ಕಟ್ಟಿಕೊಂಡ. 1763ರ್‌ಲಿ ಹೈದರ್ ಅಲಿನ ಕೈಲಿದ್ದ ಮಂಗಳೂರು 1768ರ್‌ಲಿ ಇಂಗ್ಲಿಸರ ಕೈಗೋತು. 1784ರ್‌ಲಿ ಟಿಪ್ಪುಸುಲ್ತಾನ್ ಮಂಗಳೂರುನ ಸೋದೀನ ಮಾಡಿಕಂಡತ್. ಆದರೆ ಶ್ರೀರಂಗಪಟ್ಟಣದ ನಾಸದೊಟ್ಟಿಗೆ 1799ರ್‌ಲಿ ಮಂಗಳೂರು ಮತ್ತೆ ಬ್ರಿಟಿಸರ ಕೈಗೋತು. ಅಂದುಂದ ಮದರಾಸು ಪ್ರಾಂತ್ಯಲಿದ್ದ ಮಂಗಳೂರು1956ಲಿ ಕರ್ನಾಟಕ ರಾಜ್ಯಕೆ ಸೇರ್‌ತ್.




**ಮಡಿಕೇರಿ :** ಭಾರತ ದೇಸದ ಕರ್ನಾಟಕ ರಾಜ್ಯಲಿರ್‌ವ ಕೊಡ್‌ಗ್ ಜಿಲ್ಲೆನ ತಾಲೂಕ್‌ಗಳ್‌ಲಿ ಒಂದ್ ಈ ಮಡಿಕೇರಿ. ಜಿಲ್ಲೆನ ರಾಜಧಾನಿ ಆದ್ದರ್‌ಂದ ಮುಕ್ಯ ಸರ್‌ಕಾರಿ ಕಚೇರಿಗ ಇಲ್ಲಿಯೇ ಒಳೊ. ಹಾಲೇರಿ ರಾಜವಂಸದ ಮುದ್ದುರಾಜ (1633–1687) ಕಟ್ಟಿದ್ ಹಾಲೇರಿಂದ ಇಲ್ಲಿಗೆ ಅಂವನ ರಾಜಧಾನಿನ ವರ್‌ಗಾಯಿಸಿತ್.ಈ ಊರ್ ಒಂದ್ ಕಾಲಲಿ ಮುದ್ದರಾಜಕೇರಿ ಆಗಿತ್ತ್. (ಬ್ರಿಟಿಸ್‌ನವ್ ಆಳಿಕನ 1834ರ್‌ಲಿ 'ಮರ್‌ಕೆರಾ' ಆಗಿ ಈಗ 'ಮಡಿಕೇರಿ'ತ ಹೆಸ್ರಾಗುಟು. ಮಡಿಕೇರಿ ಸಂದ್ರ ಮಟ್ಟಂದ 1150 ಮೀಟರ್ ನಸ್ಟ್ ಎತ್ತರಲಿ ಉಟ್ಟು. ಪಡುಬೆಟ್ಟದ ಸಾಲ್‌ಲಿರ್‌ವ ಇದ್ ಬಾರಿ ಹೆಸರ್ ಇರ್‌ವ ಪ್ರವಾಸದ ಜಾಗೆ. ಬಡಗ ದಿಕ್ಕ್ ಲಿ 115 ಕಿಮೀ ದೂರಲಿ ಹಾಸನ ಜಿಲ್ಲೆ, ಪಡು ದಿಕ್ಕ್ ಲಿ ಮಂಗ್‌ಳೂರ್, ಮೂಡ ದಿಕ್ಕ್ ಲಿ ಕೇರಳದ ಕಣ್ಣೂರು ಸುಮಾರ್ 100 ಕಿಮೀ ನಸ್ಟ್ ದೂರಲಿ ಉಟ್ಟು. 80 ಕಿಮೀ ದೂರಲಿ ಕಣ್ಣೂರು ಅಂತರಾಸ್ಟ್ರೀಯ ವಿಮಾನ ನಿಲ್ದಾಣ ಉಟ್ಟು. ಜೆನವರಿ ತಿಂಗಳ್‌ಲಿ ಇಲ್ಲಿ ತಾಪಮಾನ 11 ಡಿಗ್ರಿ ಸೆಲ್ಸಿಯಸ್ (52 ಡಿಗ್ರಿ ಫ್ಯಾ) ಇದ್ದರೆ ಸೆಕೆಗಾಲಲಿ 24 ಡಿಗ್ರಿ ಸೆಲ್ಸಿಯಸ್‌ಂದ 27 ಡಿಗ್ರಿ ಸೆಲ್ಸಿಯಸ್ ಮುಟ್ಟ ಇದ್ದದೆ. ಮೈಸೂರ್‌ಂದ 120 ಕಿಮೀ ದೂರಲೂ, ಮಂಗ್‌ಳೂರ್‌ಂದ 136 ಕಿಮೀ ದೂರಲೂ ಮಡಿಕೇರಿ ಉಟ್ಟು. ಅದರೊಟಿಗೆ ಮಡಿಕೇರಿ ನೆರೆಕರೆ ಸುಮಾರ್ ನೋಡುವಂತ ಪೊರ್‌ಲುನ ಜಾಗೆಗ ಒಳೊ.

**ಶ್ರೀ ಓಂಕಾರೇಸ್ವರ ದೇಸ್ತಾನ :** ಇದ್ ಕೊಡಗ್‌ನ ದೊಡ್ಡಾ ಹೆಸರ್ ಇರ್‌ವಂತ ದೇಸ್ತಾನ. ಮಡಿಕೇರಿ ಬಸ್ ನಿಲ್ದಾಣಂದ ಅರ್‌ದ ಕಿಮೀ ದೂರಲುಟ್ಟು ಈ ಓಂಕಾರೇಸ್ವರ ದೇಸ್ತಾನ. ಕ್ರಿ. ಸ 1820ರ್‌ಲಿ ಇಮ್ಮಡಿ ಲಿಂಗ ರಾಜೇಂದ್ರ ಕರ್‌ಸಿದ ಈ ದೇಸ್ತಾನದ ವಾಸ್ತು 'ಇಸ್ಲಾಮಿಕ್' ಸೈಲಿಲುಟ್ಟು. ಚೌಕಾಕಾರದ ಗರ್ಬಗೃಹಲಿ ಸಿವಲಿಂಗ ಉಟ್ಟು. ಗರ್ಬಗೃಹದ ನಡೂಲಿ ಒಳೆಗೆ ಹುಗ್ಗಿಕಂಡ್ ಬಾಕೆ ಬಾಗ್‌ಲ್‌ನೊಟ್ಟಿಗೆ, ಹೊರೆಗೆ ಸುತ್ತ್ ಬಾಕೆ ಪ್ರಾಂಗಣನೂ ಉಟ್ಟು. ಒಂದ್ ಪೊರ್‌ಲುನ



ಶ್ರೀ ಓಂಕಾರೇಸ್ವರ ದೇಸ್ತಾನ

ಗುಮ್ಮಟ, ಅದರ ಎದ್‌ರನೆ ಒಂದ್ ಕೆರೆ, ಅದರ ನಡುಲಿ ಮಂಟಪ ಇದ್ದ್ ದೇಸ್ತಾನದ ವಿನ್ಯಾಸ ಬಾರೀ ಲಾಯ್ಕಾಗುಟು. ಓಂಕಾರೇಸ್ವರ ದೇಸ್ತಾನದ ಇತಿಯಾಸನ ಗೊತ್ತ್ ಮಾಡ್‌ವ ತಾಮ್ರಪತ್ರಗ ಇಲ್ಲಿ ಉಟ್ಟು.

**ರಾಜಾಸೀಟ್ :** ಮಡಿಕೇರಿ ಬಸ್ ನಿಲ್ದಾಣಂದ ಸುಮಾರ್ 2–2. 5 ಕಿಮೀ ದೂರಲಿ ರಾಜಾಸೀಟ್ ಕಾಂಬಕೆ ಸಿಕ್ಕಿದೆ. ಪಂಡ್‌ಲಿ ರಾಜವಂಸದವ್ ನೋಡಿ ಕುಸಿಪಡ್‌ತಿದ್ದ ಜಾಗೆ ಇದ್. ಅವ್ ಕುದ್ದ್ ಕಣ್‌ತಿದ್ದ ನಾಕ್ ಕಾಲ್‌ನ ಪೊರ್‌ಲುನ ಮಂಟಪನೂ ಇಲ್ಲುಟ್ಟು. ಹೊತ್ತಾರೆ ಮತ್ತೆ ಹಿಂಬೊತು ಬೇರೆ ಬೇರೆ ತರಲಿ ದೂರದ ಮಲೆಗುಡ್ಡಗ ಮೇಲೆ ಬಾಣದ ಕಾಂಬಕೆ ಬಣ್ಣದ ಆಟದಂಗೆ ಇದ್ದದೆ. ಬಾರಿ ಲಾಯ್ಕಲಿರ್‌ವ ಹೂನ ದೈಗ ಇಲ್ಲಿ ಒಳ. ಹೂಗಳ ನಡೂಲಿ ಸಂಗೀತ ಕಾರಂಜಿನೂ ಉಟ್ಟು. ಮಕ್ಕಳಿಗೆ 'ಬಾಬಾ ಸಾಹೇಬ್ ಎಕ್ಸ್‌ಪ್ರೆಸ್'ತೇಳೊ ಪುಟಾಣಿ ರೈಲ್, ಆಟದ ಅಟ್ಕನು ಉಟ್ಟು. ಅದ್‌ರ ಹಕ್ಕಲೆ 'ಕುಂದುರು ಮೊಟ್ಟೆ ಚೌಟಿ ಮಾರಿ' ದೇಸ್ತಾನನೂ ಉಟ್ಟು.

**ಗಾಂದಿ ಮಂಟಪ :** ರಾಜಸೀಟ್‌ಂದ ಒಂದ್ ಪರ್‌ಲಾಂಗ್ ದೂರಲಿರ್‌ದೆ ಈ ಗಾಂದಿಮಂಟಪ. ಮಡಿಕೇರಿಗೆ ಮಹಾತ್ಮ ಗಾಂದಿಯವ್ ಈ ಜಾಗೆಗೆ ಬಂದಿರ್‌ಕನ ಆ ನೆಂಪುಗಾಗಿ 'ಗಾಂದಿಮಂಟಪ' ಕಟ್ಟಿಯೊಳೊ. ಈ ಅಪರೂಪದ ಸ್ಮಾರಕದ ಒಳೆಗೆ ಗಾಂದಿ ಪ್ರತಿಮೆನ ನೋಡಕ್. ಇದರ ಎದುರಲೆ ಆಡಿಕೆ ದೊಡ್ಡ ಅಟ್ಕ ಉಟ್ಟು ಇದರ 'ಗಾಂದಿ ಮೈದಾನ'ತೇಳ್‌ವ ಹೆಸರ್‌ಂದ ಕರ್‌ದವೆ.

**ನೆಹರು ಮಂಟಪ :** ರಾಜಾಸೀಟ್‌ಂದ ಅರ್‌ದ ಕಿಲೋಮೀಟರ್ ದೂರಲಿ ಆಕಾಸವಾಣಿ ಕೇಂದ್ರ ಮತ್ತೆ ದೂರದರ್‌ಸನ ಮರುಪ್ರಸಾರ ಕೇಂದ್ರ ಕಟ್ಟಣಗಳ ಹಿಂದೆ ಈ ನೆಹರುಮಂಟಪ ಕಂಡದೆ. ನೆಹರು ಅವ್ ಮಡಿಕೇರಿಗೆ ಬಂದಿರ್‌ಕನ ಈ ಜಾಗೆಲಿ ನಿತ್ತ್ ಮಡಿಕೇರಿನ ಪೊರ್‌ಲುನ ನೋಡ್ದ ನೆಂಪುಲಿ ಈ ಮಂಟಪ ಕಟ್ಟಿದೊ.

**ರಾಜ ಗದ್ದ್‌ಗೆ :** ಕೊಡಗ್‌ನ ಆಳ್‌ದ ರಾಜರ ಗುರ್‌ಜಿಗಳ ಇಲ್ಲಿ ನಾವ್ ಕಾಣಕ್. ಮಹದೇವ ಪೇಟೆನ ಗುಡ್ಡೆನ ಮೇಲೆ ಇರ್‌ವ ರಾಜಗದ್ದುಗೆಗ 'ಇಂಡೋ ಸಾರ್‌ಸೆನಿಕ್ ಸೈಲಿ'ಲಿ ಒಳದ್. ಕೊಡ್‌ಗ್‌ನ ಆಳ್ದ ರಾಜ ವೀರರಾಜೇಂದ್ರ, ಮಹದೇವಮ್ಮಾಜಿ ಮತ್ತೆ ನಡೂಲಿ ಲಿಂಗರಾಜೇಂದ್ರರ ಗೋರಿಗ ಒಳೊ.

ರಾಜೆನ ಗುರು ಆಗಿದ್ದ ರುದ್ರಪ್ಪನ ಸಮಾದಿಸ ಇಲ್ಲಿ ಉಟ್ಟು. ಈ ಗದ್ದುಗೆಗೆ ಚಿನ್ನದ ಲೇಪನ ಮಾಡ್ದ ನಾಕ್ ಗೋಪುರಗ, ಅದ್‌ರ ನಡುಲಿ ಒಂದ್ ಗುಮ್ಮಟನೂ ಉಟ್ಟು. ಕಿಡ್‌ಕೆನ ಸರಳ್‌ಗಳ ಪೂರಾ ಹಿತ್ತಾಳೆಲಿ ಮಾಡಿಯೊಳೊ. ಅದೆಲ್ಲರ ನಡೂಲಿ ಲಾಯ್‌ಕಾದ ಕುಸುರಿ ಕೆತ್ತನೆಗನೂ ಒಳೊ.

**ಅರಮನೆ :** ಇಂದ್‌ಗು ಬದ್ರ ಇರ್‌ವ ಕೋಟೆನ ನಡೂಲಿ ಇರ್‌ವ ಅರಮನೆ ರಾಜರ 'ಸೌಂದರ್‌ಯ ಪ್ರಜ್ಞೆಗೆ ಸಾಕ್ಸಿ ಆಗಿದ್ ಉಟ್ಟು. ಇಂದ್ ಸುಣ್ಣ ಬಣ್ಣ ಸರಿಯಾಗಿ ಇಲ್ಲದೆ ಮಂಕಾವ್‌ಟು. 1814ರ್‌ಲಿ ಆಗನ

ರಾಜ 2ನೇ ಲಿಂಗರಾಜೇಂದ್ರ ಕಟ್ಟ್‌ಸಿದ ಇಟ್ಟಿಗೆ ಸಾರಣೆನ ಅರಮನೆಲಿ ಎರಡ್ ಉಪ್ಪರಿಗೆಗ (ಮಾಳಿಗೆ) ಇದ್ದ್, ನೂರ್ ಅಡಿ ಉದ್ದಲುಟ್ಟು. ಮಾಡ್‌ಗೆ ಅಂಟಿಕಂಡ್ ಇರ್‌ವ ಮರಲಿ ಮಾಡ್‌ದ ಎರ್‌ಡ್ ಕುದುರೆಗಳ ನೋಡಿಕೆ ಬಾರೀ ಕುಸಿಯಾದೆ. 'ಯುರೋಪಿಯನ್ ವಾಸ್ತು ಸೈಲಿಲಿ ಮಾಡ್‌ದ ಅರಮನೆ ಒಳಗೆನ ಬಾಗದ ಜಾಲ್‌ಲಿ ರಾಜರ ಕಾಲಲಿ ಗುಟ್ಟುಲಿ ಓಡಾಡಿಕೆ ದಾರಿ ಆಗಿದ್ದ ದೊಡ್ಡ ಕಲ್ಲ್ ಲಿ ಮಾಡ್‌ದ ಏಮೆನ ಬಾಗ್‌ಲ್ ಕಂಡದೆ. ವೀರರಾಜೇಂದ್ರನ ಗುರ್‌ತಲಿ 'ವಿ' ಆಕಾರಲಿ ಸಂಕೇತಗ ಒಳೊ. ಅರಮನೆನ ಎರಡ್ ಸರ್‌ತಿ ಸರಿ ಮಾಡ್‌ಸಿದ ಬ್ರಿಟಿಸರ್‌ಗ ಗಂಟೆನ, ಗೋಪುರನ ಮತ್ತೆ ಕೈಯಾಲೆನ ಸ ಮಾಡ್‌ಸಿದ್ದೊ.

**ಮಡಿಕೇರಿ ಕೋಟೆ :** ಈ ಕೋಟೆ ನಾವ್‌ಗೆ ರಾಜರ ಕಾಲದ ವೈಬವನ ನೆಂಪುಸಿದೆ. ಕಾಂಬಕೆ ಬಾರೀ ದೊಡ್ಡದುನು ಅಸ್ಟೆ ಪೊರ್‌ಲುನ ಕೋಟೆನ ವಿನ್ಯಾಸ ಆಸ್ಚರ್‌ಯ ಕಂಡದೆ. ಮಡಿಕೇರಿನ ಕಟ್ಟಿದ ಮುದ್ದುರಾಜ ಸ್ವತ ತಾನೇ ನಿತ್ತ್ ಕಂಡ್ ಮೊಣ್ಣ್‌ಲಿ ಈ ಕೋಟೆನ ಕಟ್ಟಿಸಿತ್‌ಗಡ. ಟಿಪ್ಪುನ ಕಾಲಲಿ ಈ ಕೋಟೆನ ಅಂವ ಕಲ್ಲ್ ಲಿ ಕಟ್ಟಿಸಿತ್‌ಗಡ. ಅಲ್ಲಲ್ಲಿ ಪಾರಕಾಯಕೆ (ಕಾವ್‌ಲಿಗೆ) ಸೈನಿಕರ್ ನಿತ್ತ್ ಕಂಡರೆ ಹೊರಗೆಂದ ಬಾವಂತ ವೈರಿಗಳ ಕಾಂಬಕೆ ಮಾಡ್‌ದ ಸಣ್ಣ ಮೋಟೆಗ ಒಳೊ.ಬೆಡಿ ಹಿಡ್‌ಕಂಡ್ ಕಾಂಬಂಗೆ ಹೊಡಿಯಕೆನೂ ವೆವಸ್ತೆ ಉಟ್ಟು. ಕೋಟೆನ ಒಳಗೆ ನಿಜದ ಆನೆಗಳಂಗೆ ಕಾಂಬ ಸಿಮೆಂಟ್ ಸಾರಣೆಂದ ಮಾಡ್‌ದ 2 ಆನೆಗ ಒಳೊ. ಸಿಟ್ಟ್ ಬಂದ್ ಪಟ್ಟದ ಆನೆನ ಕೊಂದ ತೊಪ್ಪುಗೆ ಪಸ್ಚಾತಾಪಲಿ ಈ ಆನೆಗಳ ರಾಜ ವೀರರಾಜೇಂದ್ರ ಕಟ್ಟಿತ್ ಗಡ. ಯಾಗೋಳು ಹೊತ್ತಾರೆ ಎದ್ದ್ ರಾಜ ಕಿಡ್‌ಕೆಂದ ಆನೆಗಳ ನೋಡ್ದೂ, ಆನೆಗ ಸೊಂಡಿಲೆತ್ತಿ ನಮಸ್ಕಾರ ಮಾಡ್ದೂ ಪೊದ್ದತಿಯಾಗಿತ್ತ್ ಗಡ. ಹಿಂಗಿರ್‌ಕನ ಒಂದಿನ ರಾಜ ಯಾಗೋಳ್‌ನಾಂಗೆ ಕಿಡ್‌ಕೆ ತೆಗ್ದರೂಸ ಆನೆಗ ಮೊಸಿಗಿತ್‌ಲೆಗಡ. ರಾಜಂಗೆ ಬಾರೀ ಸಿಟ್ಟ್ ಬಾತ್. ಹಿಂದೆ ಮುಂದೆ ಗ್ಯಾನ ಮಾಡದೆ ಬೆಡಿ ತೆಗ್ದ್ ಗುಂಡು ಹೊಡ್‌ತ್. ಹಿಂಗೆ ಆನೆಗಳ ಕೊಂದಾದ ಮೇಲೆ ಅವ್‌ಕೆ ಅಂದ್ ಸೌಕೆ ಇತ್‌ಲೆತ ಅವಂಗೆ ಗೊತ್ತಾಗಿ ಬಾರೀ ಬೇಜಾರಾತ್. ಅದೇ ಪಸ್ಚಾತಾಪಲಿ ಇಂದ್ ನಾವ್ ನೋಡ್‌ವ ಆನೆಗಳ ಕಟ್ಟಿಸಿತ್‌ಗಡ.

ಕೋಟೆನೊಳಗೆ ಆಂಗ್ಲಿಕನ್ ಚರ್ಚ್ ಸನ ಕಂಡದೆ. 1855ರ್‌ಲಿ ಈ ಜಾಗೆಲಿದ್ದ ವೀರಬದ್ರಗುಡಿನ ಮಟ್ಟ ಹಾಕಿ ಬ್ರಿಟಿಸರ್ ಚರ್ಚ್ ಕಟ್ಟಿದ್ದೊ. 'ಗೋದಿಕ್ ಸೈಲಿ'ಲಿ ಇದರ ಕಟ್ಟಿಯೊಳೊ. ಬಣ್ಣ ಬಣ್ಣದ ಚಿತ್ರಗಳ ಕನ್ನಡಿಗಿರ್‌ವ ಈ ಚರ್ಚ್ ಈಗ ಹಳೇ ವಸ್ತುಗಳ ಸಂಗ್ರಾಲಯ ಆವುಟು. ಇದ್ ಕರ್ನಾಟಕ ರಾಜ್ಯ ಸರ್‌ಕಾರದ ಪ್ರಾಚ್ಯ ವಸ್ತು ಇಲಾಕೆನ ಉಸ್ತುವಾರಿಲಿ ಉಟ್ಟು. ಕೊಡಗ್‌ನ ಇತಿಯಾಸ ತಿಳ್‌ಸ್‌ವ ಸುಮಾರ್ ಹಳೇ ವಸ್ತುಗ, ಆಯುದಗ, ಬಟ್ಟೆ ಬರಿ, ತಿರಿ–ತೋಕ್, ವೀರಗಲ್ಲ್, ಮಾಸ್ತಿಕಲ್ಲ್ ಪಂಡ್‌ಕಾಲದ ವೈಬವನ ಸಾರಿ ಹೇಳ್‌ವೆ. ಪಂಡ್ ಕಾಲಲಿ ರಾಜಂಗ ಮತ್ತೆ ಸೈನಿಕರ್ ಬಳ್‌ಸ್‌ತಿದ್ದ ಪಿರಂಗಿಗ ಸಂಗ್ರಹಾಲಯದ ಒಳಗೂ ಹೊರಗೂ ಒಳೊ. ಸೊತಂತ್ರ ಭಾರತದ ಸುರೂನ ಸೇನಾನಿ ಬೂಸೇನೆನ ಸುರೂನ ಮಹಾದಂಡನಾಯಕ ಪೀಲ್ಡ್ ಮಾರ್‌ಸಲ್ ಕಾರ್‌ಯಪ್ಪನವ್ ಸನ ಅವ್ಕೆ ಸಿಕ್ಕಿದ ಪ್ರಸಸ್ತಿ, ಇನಾಮುಗಳ ಇಲ್ಲಿಗೆ ಕೊಟ್ಟೊಳೊ. ಅದೆಲ್ಲದರ ನಾವಿಲ್ಲಿ ನೋಡಕ್.

**ಮಡಿಕೇರಿ ದಸರಾ :** ಲೋಕಕೆ ಗೊತ್ತಿರ್‌ವಂತ ಮೈಸೂರ್ ದಸರನ ಸರಿಗಟ್ಟುವಂಗೆ ಮಡಿಕೇರಿಲಿನು ದಸರಾ ನಡ್ದದೆ. ನಗರದ ಸಕ್ತಿ ದೇವತೆಗಾದ ಆರೋಗ್ಯ ಕೊಟ್ಟ್ ಕಾಪಾಡ್‌ವ ಕಂಚಿ ಕಾಮಾಕ್ಸಮ್ಮ, ಕೋಟೆನ ಕಾಪಾಡ್‌ವ ಕೋಟೆ ಮಾರಿಯಮ್ಮ, ಜೆನರ ಕಾಪಾಡ್‌ವ ಕುಂದುರುಮೊಟ್ಟೆ ಚೌಟಿ ಮಾರಿಯಮ್ಮ, ಸೈನ್ಯನ ಕಾಪಾಡ್‌ವ ದಂಡ್‌ನ ಮಾರಿಯಮ್ಮ ದೇವತೆಗಳಿಗೆ ಪೂರಾ ಕರಗಪೂಜೆ ನಡ್ದದೆ. ಒಂಬತ್ತ್ ತರದ ದಾನ್ಯಗಳ ಬಳ್ಸಿದ್ ಕರಗಗಳ ಅಲಂಕಾರ ಮಾಡ್‌ವೆ. ಕೈಲಿ ಮುಟ್ಟದೆ ಬರೀ ತಲೆಲೇ ಹೊತ್ತ್ ಕಂಡ್ ಕೊಣೆದರ ನೋಡಿಕೆ ಬಾರೀ


ಮಡಿಕೇರಿ ದಸರಾ

ಲಾಯ್ಕ್ ಇದ್ದದೆ. ಸ್ರೀ ಕಂಚಿ ಕಾಮಾಕ್ಸಿ, ಸ್ರೀ ಕೋಟೆ ಮಾರಿಯಮ್ಮ, ಕುಂದುರು ಮೊಟ್ಟೆ ಸ್ರೀ ಚೌಟಿ ಮಾರಿಯಮ್ಮ, ಸ್ರೀ ದಂಡಿನ ಮಾರಿಯಮ್ಮ, ಚೌಡೇಸ್ವರಿ ಬಾಲಕ ಬಕ್ತ ಮಂಡ್‌ಳಿ, ಪೇಟೆ ಸ್ರೀರಾಮ ಮಂದಿರ, ದೇಚೂರು ಸ್ರೀ ರಾಮ ಮಂದಿರ, ಕೋದಂಡ ರಾಮ ಮಂದಿರ, ಕೋಟೆ ಸ್ರೀ ಮಹಾಗಣಪತಿ, (ಕರ್‌ವಾಲೆ) ಬಗವತಿ ದೇಸ್ತಾನಗಳ್‌ಂದ ಹೊರ್‌ಡುವ ಬೇರೆ ಬೇರೆ ಪೌರಾಣಿಕ ಕತೆನ ದೃಸ್ಯಗಳ ತರ್‌ಸಿಕಂಡ್ ಹೋವ ಈ ಮಂಟಪಗಳ ವೈಬವ ಲಾಯ್‌ಕಿದ್ದದೆ.

**ಅಬ್ಬಿ ಜಲಪಾತ :** ಮಡಿಕೇರಿಂದ 8 ಕಿಮೀ ದೂರಲಿ (ನೆರವಂಡ) ಶ್ರೀ ನಾಣಯ್ಯನವರ ಕಾಪಿ–ಯಾಲ ತೋಟದ ನಡೂಲಿ ಇದ್ ಕಂಡದೆ. ದೊಡ್ಡ ದೊಡ್ಡ ಪಾರೆಕಲ್ಲ್ ಗಳ ನಡೂಲಿ ಸುಮಾರ್ 50 ಅಡಿ ಎತ್ತರಂದ ನೀರ್ ಹಾರ್‌ದೆ. ಹಕ್ಕಲೆ ಹೋಗಿ ನೋಡ್‌ಕನ ಜೀವಕೆ




ಅಪಾಯ ಆಕಾಗದ್‌ತ ಒಂದ್ ತೂಗುಸೇತುವೆನಸ ಹಳ್ಳಕ್ಕೆ ಅಡ್ಡ ಕಟ್ಟಿ ನೋಡಿಕೆ ಸುಲಬ ಆವಂಗೆ ಮಾಡಿಯೊಳೊ. ಬ್ರಿಟಿಸ್‌ನವ್ ಈ ಜಲಪಾತನ 'ಜೆಸ್ಸಿ ಪಾಲ್ಸ್'ತ ಕರಿತಿದ್ದೊಗಡ.

**ಕೋಟೆ–ಅಬ್ಬಿ ಜಲಪಾತ :** ಮಡಿಕೇರಿಂದ ಸುಮಾರ್ 23 ಕಿಮೀಗಳಸ್ಟ್ ದೂರಲಿ ಮಾಂದಲ್‌ಪಟ್ಟಿಂದ 5 ಕಿಮೀ ದೂರಲಿ ಇದ್ ಇರ್‌ದು. ಇಲ್ಲಿಗೆ ಹೋಕೆ ಯಾವ್‌ದೇ ರೀತಿನ ಬಸ್ ವೆವಸ್ತೆ ಇಲ್ಲೆ. ಬಾಡಿಗೆ ಜೀಪುಲಿ ಅಂಕ್–ಡೊಂಕಾದ ದಾರಿಲಿ ಹೋಕಾದೆ. ಪಾರೆಕಲ್ಲ್‌ಗಳ ನಡೂಂದ 80 ಅಡಿಗಳಸ್ಟ್ ಮೇಲೆಂದ ಬಿದ್ದ್ ಹರ್‌ಕಂಡ್ ಹೋವ ನೀರ್ ಈ ಜಲಪಾತನ ಸೃಸ್ಟಿ ಮಾಡಿಟು.

**ಕೋಳಿಕ್ಕಿಮಲೆ :** ಕೊಡ್‌ಗ್ ಜಿಲ್ಲೆನ ಬಡಗ ದಿಕ್ಕಿಗೆ ಇರುವ ಕೋಳಿಕ್ಕಿಮಲೆ(ಕೋಳಿ ಕಲ್ಲ್‌ಮಲೆ) ಬೆಟ್ಟ ಮಡ್ಕೇರಿ ತಾಲೂಕ್‌ನ ಪೆರಾಜೆ ಗ್ರಾಮಲಿ ಬಂದದೆ, ಪುಣ್ಯನದಿ ತಲಕಾವೇರಿನ ಇನ್ನೊಂದು ಪುಡೆಲಿರುವ ಏರು ಪರ್ವತ ಸ್ರೇಣಿ ಭಾಗಮಂಡಲದ ಬ್ರಹ್ಮಗಿರಿ ಬೆಟ್ಟಕ್ಕೆ ಎತ್ತರಲಿ ಸೆರಿ ಸೆರಿ ಇರುವ ಇದ್ ಸುಳ್ಯ ಪೇಟೆಂದ ಸುಮಾರು 15 ಕಿ.ಮೀ. ದೂರಲಿ ಉಟ್ಟು. ಪ್ರತಿವರ್ಷ ಈ ಶ್ರೇಣಿನ ಪೆರಾಜೆ, ಕರಿಕೆ ಮತ್ತೆ ತೊಡಿಕಾನಂದಾಗಿ ನೂರಾರ್ ಜೆನ ಹತ್ತಿ ಇಳ್ದ್ ಬಂದವೆ. ಈ ಬೆಟ್ಟಕ್ಕೂ ಪೆರಾಜೆ ಶ್ರೀ ಶಾಸ್ತಾವು ದೇಸ್ತನಕ್ಕೆ ದಾರ್ಮಿಕ ಹಿನ್ನೆಲೆ ಇದ್ದ್, ಬೆಟ್ಟದ ಮೇಲೆ ಕಲ್ಲ್‌ನ ತೊಟಿಗಿಲ್ ಅಕಾರ ಮತ್ತೆ ಗುಂಡಿಲಿ ಯಾಗೋಳ್ ನೀರ್ ಇರ್‌ದು ವಿಸೇಸ. (ಕಿ.ಜಿ.ಕಿ.)

**ಮಾಂದಲ್ ಪಟ್ಟಿ :** ಮಡಿಕೇರಿಂದ 20 ಕಿಮೀ ದೂರಲಿ ಪೊಡ್‌ವನ ಗಟ್ಟದ ತಪ್ಪಲ್‌ಲಿ ಗೊಂಡಾರಣ್ಯಂದ ಕೂಡ್‌ದ ಪುಸ್ಪಗಿರಿ ವನ್ಯದಾಮಕ್ಕೆ ಸೇರ್‌ದ ಜಾಗೆಲಿ ಮಾಂದಲ್‌ಪಟ್ಟಿ ಉಟ್ಟು. ದಾರಿ ಉದ್ದಕೆ ಕಾಂಬಂತ ಕಾಪಿ–ಯಾಲ ತೋಟಗ, ತೊರೆ–ಜರಿಗ, ಪೊಡ್‌ವನ ಗಟ್ಟ ಸ್ರೇಣಿಗ, ಆಕಾಸದೆತ್ತರ ಬೆಳ್‌ದ್ ನಿತ್ತ ದೈ ಮರಗಳ ನೋಡ್‌ದೇ ಒಂದ್ ಪೊರ್‌ಲು.

ಸಂದ್ರ ಮಟ್ಟಂದ 4000 ಅಡಿ ಎತ್ತರಲಿ 'ನಡೆದು ನೋಡ ಕೊಡಗಿನ ಬೆಡಗಾ'ತ ಕವಿ ಹೇಳ್ದಂಗೆ ನಡ್‌ಕಂಡ್ಬೆಟ್ಟ ಹತ್ತಿರೆ ಕಣ್ಣ್ ತಂಪಾದೆ.



ಮಾಂದಲ್ ಪಟ್ಟಿ

ಪುಸ್ಪಗಿರಿ ಮತ್ತೆ ಕೋಟೆ ಬೆಟ್ಟನ ಸುತ್ತ ಹರಂಡಿಕಂಡಾಂಗೆ ಕಾಂಬಂತ ಬೆಟ್ಟಗಳ ಸಾಲ್. ಅಲೆಗಳಂಗೆ ಬಾವ ಮಂಜ್ ಮಾಂದಲ್‌ಪಟ್ಟಿನ ಸೊರ್‌ಗ ಮಾಡಿಟು. 12 ವರ್‌ಸಕ್ಕೊಮ್ಮೆ ಮಾತ್ರ ಹೂ ಬುಡುವಂತ ಕುರುಂಜಿ ಹೂ ಗ ಆಗಸ್ಟ್–ಸೆಪ್ಟೆಂಬರ್ ತಿಂಗಳ್‌ಲಿ ಅರ್‌ಳಿ ನಿತ್ತ್ ಬೆಟ್ಟನೆಲ್ಲಾ ನೀಲಿ ಕಾಂಬಂಗೆ ಮಾಡ್ದೆ.

**ಪ್ರಾಚ್ಯ ವಸ್ತ್ ಸಂಗ್ರಾಲಯ :** ಇದ್ ರಾಜ್ಯ ಸರ್‌ಕಾರದ ಪ್ರಾಚ್ಯ ವಸ್ತ್ ಇಲಾಕೆನ ಅಡಿಲಿ ಇರ್‌ವ ಪಂಡ್‌ಕಾಲದ ಸೊತ್ತ್‌ಗಳ ತೆಗ್‌ದ್ ಇಸಿದ್ ಕೊಡಗ್‌ನ ಇತಿಯಾಸನೇ ಹೇಳಿಕೊಟ್ಟದೆ. ಅಲ್ಲಿ ಹತ್ಯಾರುಗ, ಬಟ್ಟೆ–ಬರಿಗ, ವೀರಗಲ್ಲ್‌ಗ, ಮಾಸ್ತಿಗಲ್ಲ್‌ಗ ಸೇರ್‌ದಂಗೆ ಬಾರೀ ಅಪರೂಪದ ವಸ್ತುಗಳ ನಾವ್ ನೋಡಕ್. ಹಿಂದೆ ರಾಜ–ಮಹಾರಾಜರ್, ಸೈನಿಕರ್ ಬಳ್ಸತಿದ್ದ ಫಿರಂಗಿಗಳ ಸಂಗ್ರಹ ಒಳೆಗೆ–ಹೊರೆಗೆ ಎರಡೂ ಕಡೆಲೂ ಕಂಡದೆ. ಸೊತಂತ್ರ ಭಾರತದ ಸುರೂನ ಸೇನಾನಿ, ಬೂಸೇನೆನ ಸುರೂನ ಮಹಾದಂಡನಾಯಕ ಫೀಲ್ಡ್ ಮಾರ್‌ಸಲ್ ಕೆ. ಎಮ್ ಕಾರ್‌ಯಪ್ಪನವ್‌ಕೆ ಸಿಕ್ಕಿದ ಇನಾಮುಗಳ ಸನ ಅಲ್ಲಿ ಇಸಿಯೊಳೊ. (ಕೆ.ಎಲ್.ಡಿ.)

## ಮೊದುವೆ ಮತ್ತೆ ಮೊದುವೆ ಸಂಪ್ರದಾಯಗ–ಕೊಡಗ್ ಗೌಡ್ರ ಮೊದ್ವೆ ಸಂಪ್ರದಾಯ

**ಮೊದುವೆ ಮತ್ತೆ ಮೊದುವೆ ಸಂಪ್ರದಾಯಗ–ಕೊಡಗ್ ಗೌಡ್ರ ಮೊದ್ವೆ ಸಂಪ್ರದಾಯ :** ಮೊಯಿಂಸನ ಸಮಾಜದ ಮೂಲಬೂತ ಅವಸ್ಯಕತೆನ ಪೂರೈಸುದರ್‌ಲಿ ಮೊದ್‌ವೆ ಅನಿವಾರ್ಯ. ಕೊಡಗ್ ಗೌಡ್ರ್ ಮೊದ್ವೆನ 'ಒಂದ್ ಪವಿತ್ರವಾದ ಕಾರ್ಯ, ಮಾನವ ಬೊದ್ಕುನ ಸಾರ್‌ತಕತೆನ ಕಂಡ್‌ಕಂಬಕೆ ಜೀವನಾವರ್‌ತನೆಲಾವ ಮುಕ್ಯ ಮಜಲ್' ತ ನಂಬುವೆ. ಈ, ಮೊದ್ವೆ ಕಾರ್ಯಕೆ ಪವಿತ್ರ ಆದ ಸ್ತಾನ ಕೊಟ್ಟ್ ತುಂಬಾ ಸ್ರದ್ದೆಂದ ಸುಮಾರ್ ಶಾಸ್ತ–ಪೊದ್ದತಿಗಳ ಅಳವಡಿಸಿಕಂಡ್ ಕ್ರಮಪ್ರಕಾರವಾಗಿ ಏರ್ಪಡ್‌ಸ್‌ವೆ. ಮೊದ್ವೆಗೆ ವಿಸೇಸ ಮಹತ್ವನ ಕೊಟ್ಟ್, ಸಂಪ್ರದಾಯಲಿ ಅದರ ನೆರೆವೇರ್‌ಸಿಕಂಡ್ ಹೋದವೆ. ಮನೆತನದ ಗೌರವನೆ ಮೊದ್ವೆ.

ಕೊಡಗ್‌ನ ಗೌಡ್ರ ಮೊದ್‌ವೆ ಸುರಾದು ಸುರುಗೆ 'ಗೋತ್ರ'ದ ಆಯ್ಕೆಲಿ. ಪಿತೃಪ್ರದಾನ ಆದಂತ ಗೌಡ್ರ ಸಮಾಜಲಿ 'ಬೊಳಿ' ಇಲ್ಲರೆ 'ಗೋತ್ರ' ಅಪ್ಪನ ಕಡೆಂದ್ ಮಜ್ಜಂಗೆ ಬಂದದೆ. ಒಂದೇ ಗೋತ್ರದೊಳಗೆ ಮೊದ್ವೆ ಆದು ಇವರ್‌ಲಿ ಇಲ್ಲೆ. ಬೊಳಿ ಆಯ್ಕೆ ಗೂಡೆನ ಆಯ್ಕೆನ ಸಮರ್‌ತಿಸಿದೆ. ಇವರ್‌ಲಿ 18 ಗೋತ್ರಗ ಇದ್ದ್, ಅವರ ಗೋತ್ರನ ಬುಟ್ಟು ಅವ್ಕೆ ಸರಿಹೊಂದುವ ಗೋತ್ರನ ಹುಡ್ಕೆಣಕ್. ಒಂದೇ ಬೊಳಿನವು ಸೋದರ ಸಮ್ಮಂದದವುತ ಇವು ನೆನ್ಸುವೆ. ಇವರ ಮೊದ್‌ವೆನ ಸುರೂನ ಸುಬಕಾರ್ಯನ 'ಹತ್ತ್ ಕುಟುಂಬ ಹದ್ನೆಂಟ್ ಗೋತ್ರ ದೇವಸಬೆ ಸಮಸ್ತರ ಕೇಳಿ... ' ತ ಹಿಂಗೆ ಸುರುಮಾಡಿ ದೇವ್ರ ದೀಪಕ್ಕೆ ಅಕ್ಕಿ ಹಾಕಿ ಕುಲದೇವುಗೆ ಕೈಮುಗ್ದವೆ. ಈ ನುಡಿಗಟ್ಟ್‌ನ ಎಲ್ಲಾ ಶಾಸ್ತದ ಹಂತಲೂ ಅನುಸರಿಸುವೆ.

ಗೂಡೆನ ನೋಡಿ ಗೊತ್ತ್‌ಪಡ್ಸಿದ ಮೇಲೆ, ಮೊದ್‌ವೆ ಸುರಾದು ವಿಳೆಶಾಸ್ತ್ರಂದ. ಕೊಡಗ್ ಗೌಡ್ರ ಮೊದ್‌ವೆಲಿ ವೀಳ್ಯದೆಲೆ–ಅಡ್ಕೆ ಮುಖ್ಯವಾದ್ದ್, ಸೋದರ ಮಾವ ಮುಖ್ಯ ಪಾತ್ರ ವಹಿಸುವೆ. ಚಪ್ಪರದ ದಿನ ಸೋದರ ಮಾವ 'ಕಾಸ್ತಾಳಿ'ತ ಹೇಳ್ವ ಮುಹೂರ್‌ತ ಮಣಿನ ಕಟ್ಟಿ ಎಣ್ಣೆ ಅರ್ಶಿಣ ಶಾಸ್ತ್ರಕ್ಕೆ ಕುದುರ್‌ಸುವೆ. ಮಂಗಳಸ್ನಾನ, ಆರತಿ, ಗಂಗೆಪೂಜೆ, ಹಸೆಬರೆದು, ಮೊದ್ರೆಂಗಿ ಶಾಸ್ತ್ರ, ಕುಲದೇವ್ರಿಗೆ ಹರ್‌ಕೆ ಕಟ್ಟುದು, ಬಳುವಳಿ ಸಮೇತ ಪೆಟ್ಟಿಗೆ ತುಂಬುಸುದು, ಮಡಿಲಕ್ಕಿ ತುಂಬುದು ಹಿಂಗೆ ಸುಮಾರ್ ಶಾಸ್ತ್ರಗ ಸಂಪ್ರದಾಯದಾಂಗೆ ನಡ್ದದೆ. ಎಲ್ಲಾ ಶಾಸ್ತ್ರಗಳಿಗೂ ಸರಿಯಾದ ಸೋಬಾನೆ ಪೊದ್ಯಗ ಮಹತ್ತರ ಪಾತ್ರ ವಹಿಸುವೆ.

ಕೊಡಗ್‌ನ ಗೌಡ್ರ ಮೊದ್‌ವೆ ಚಪ್ಪರ 12 ಕಂಬಗಳ್‌ಂದ ಕೂಡಿದ್ದ್, ಇದ್ಕೆ 'ಸೀತಾವಳಿ ಚಪ್ಪರ' ಹೇಳ್ವೆ. ಒಳಗೆನ 4 ಕಂಬಗಳ ತ್ರಿಮೂರ್‌ತಿ ಹಂಗೆನೆ ಗಣಪತಿನ ಸಂಕೇತತ ಹೇಳಿನು ಹೊರಗೆನ ಎಂಟ್ ಕಂಬಗ ಅಷ್ಟದಿಕ್ಪಾಲಕರ ಸಂಕೇತಂತ ನೆನ್ಸುವೆ. ಈ ಹನ್ನೆರ್‌ಡ್ ಕಂಬದೊಳಗಿರ್‌ವ ಜಾಗೆನ ದಾರೆಮಂಟಪತ ಕರ್‌ದವೆ, ಇಲ್ಲಿ ಮೊದುಮಕ್ಕಳಿಗೆ ದಾರೆ ನಡ್ಸುದಲ್ಲದೆ, ಈ ಜಾಗೆ ದೇಸ್ತಾನದಸ್ಟೆ ಪವಿತ್ರವಾದ್ದ್‌ತ ನೆನ್ಸುವೆ. ಗೂಡೆಗೆ ದಾರೆನ ಹೊತ್ತುಲಿ ಮಡಿಲಕ್ಕಿ ತುಂಬುಸುವೆ. ಹೈದ ಕಡ್ಡಾಯ ಆಗಿ ಮೂಗುತಿ, ತಾಳಿ, ಸೀರೆ, ರವ್ಕೆ, ಕಾಲುಂಗುರ ತರೊಕು. ವರದಕ್ಷಿಣೆಯಿಲ್ಲದೆ ಕೊಡಗ್ ಗೌಡ್ರ ಮೊದ್‌ವೆ ಅವರ ಸಂಸ್ಕೃತಿನ ಪ್ರಮುಕ ಅನನ್ಯತೆನ ಸಂಗತಿಗ.

ಕೊಡಗ್ ಗೌಡ್ರ ಮೊದ್‌ವೆಲಿ ಹೈದನ ಕಡೆವು ಗೂಡೆ ನೋಡಿಕೆ ಹೋದವೆ. ಹಾಂಗೆ ಹೋಕನ ಎರ್‌ಡ್ ಬೇರೆ ಬೇರೆ ಗುಂಪುಗಳ ನೆಡುಲಿ ಸಮಾಲೋಚನೆ ನಡ್ಸಿಕೆ ನಡುಲಿ ಜೆನ ಒಬ್ಬನ ಇಸಿಕಂಡವೆ. ಇವಂಗೆ 'ದಲ್ಲಾಳಿ'ತ ಹೆಸ್ರ್, ಇಂವ ಎರ್‌ಡೂ ಕಡೆವರ ಪರಿಚಯಸ್ತದವ ಆಗಿರಕು. ಇಂವ ಎರ್‌ಡು ಕಡೆನ ಜೆನರ ಸಿಕ್ಕ್‌ವ ಹೊತ್ತುಲಿ ಸಮತೋಲನನ ಕಾಪಾಡಿಕಂಡದೆ.

ಕೊಡಗ್ ಗೌಡ್ರ ಮೊದ್‌ವೆ ದಿನದ ನಿರ್‌ದಾರ ಮತ್ತೆ ಮುಹೂರ್‌ತದ ನಿರ್‌ದಾರನ 'ಮನೆ ಜಗಲಿಲಿ' ಅಲ್ಲರೆ ಅರೆಬಾಸೆಲಾದರೆ 'ಕೈಯಾಲೆ'ಲಿಯೇ ಮಾಡೊಕು. ಕೈಯಾಲೆ ಮನೆನ ಒಳಗೆನೂ ಅಲ್ಲದ ಹೊರಗೆನೂ ಅಲ್ಲದ ನಡುನ ಜಾಗೆ. ದಲ್ಲಾಳಿನ ಹಾಂಗೆ ಸಮತೋಲನದ ಜಾಗೆ. ಹೊರಗೆನವರ ಒಳಗೆ ಬರಮಾಡಿಕಂಬಕನ ಕುದ್ದುರ್‌ಸುವ ಜಾಗೆ. ಆದರೆ ಕೈಯಾಲೆ ಸಂಸ್ಕೃತಿನ ಅಂತರಂಗ ಮತ್ತೆ ಬಹಿರಂಗಗಳ ನಡುನ ಅವೆರ್‌ಡರ ನಡುಲಿ ಸಮ್ಮಂದ ಕುದ್ದುರ್‌ಸಿಕೆ ಉಪಕಾರ ಆದೆ. ಗೂಡೆ ಇನ್ನೂ ಮನೆ ಒಳಗೆ ಬರದರ್‌ಂದಾಗಿ ಗೂಡೆನ ಕಡೆವು ಜಗ್ಲಲೇ ಮಾತ್‌ಕತೆ ಮಾಡ್ವೆ. ಈ ಮಾತ್‌ಕತೆ ತುಂಬಾ ಮುಕ್ಯವಾದ್ದರ್‌ಂದ ಎಲ್ಲಾ ಗೌಡ್ರ ಮನೆಲಿಯೂ 'ಜೆಗ್ಲಿ' ಇದ್ದೇ ಇರೊಕು. ಜೆಗ್ಲಿ ಅವರ ವಾಸ್ತುನ ಮೂಲ ಗಟಕಗಳ್‌ಲಿ ಒಂದ್. ಅವಿಬಕ್ತ ಕುಟುಂಬ ಪೊದ್ದತಿ ಇರುವಲ್ಲಿ ಐನ್‌ಮನೆಲಿ ಚಾವಡಿ ಇದ್ದ್, ಅಲ್ಲಿ ಮೊದ್‌ವೆ ನಿರ್‌ದಾರಗ ಆದವೆ.

ಕೊಡಗ್ ಗೌಡ್ರ ಮೊದ್‌ವೆ ಸಂಪ್ರದಾಯನ ನೋಡ್ಕನ ಮೊದ್‌ವೆನ ಸುರೂನ ಹಂತ, ಗೂಡೆನ ನೋಡ್ದರ್‌ಂದ ಸುರುಮಾಡಿ, ಕೂಡಾವಳಿ ಸಂಪ್ರದಾಯದ ಮುಟ್ಟ ಅಲ್ಲಿನ ಎಲ್ಲಾ ಆಚರಣೆಗ ಹೈದ, ಗೂಡೆ ಸಾಮಾನ್ಯ ಜಗತ್ತ್‌ಂದ ಪ್ರತ್ಯೇಕಿಸಿ ಒಂದ್ ತರದ ಅಲೌಕಿಕ ಲೋಕಲಿ ಅಲ್ಲರೆ ಮದ್ಯಂತರ ಜಗತ್ತ್‌ಲಿ ನಿಲ್ಸಿದೆ. ಮೊಯಿಂಸರ ಬೆಳವಣಿಗೆನ ಯೌವನಾವಸ್ತೆನ ಅಗತ್ಯನ ಪೂರೈಸುವಲ್ಲಿ ಕೊಡಗ್ ಗೌಡ್ರು ಗೂಡೆ ಹೈದನ ಸಾಮಾನ್ಯ ಬೊದ್ಕಿಗೆ ಸುವರ್ಣದ ಚೌಕಟ್ಟ್ ನ ಹಾಕುವೆ. ಹಂಗೆನೆ ಮಕ್ಕಳಾಟಲಿ, ಸ್ವತಂತ್ರವಾಗಿ ಮುಕ್ತವಾಗಿ ಜೀವನ ಮಾಡ್ತಿದ್ದ ಹೈದ, ಗೂಡೆಗಳಿಗೆ ಮೊಯಿಂಸ ಜೀವನದ ಅವಿಬಾಜ್ಯ ಜವಾಬ್ದಾರಿನ ಹೊರ್‌ಸುವ ಕಾರ್ಯನ ಗೌಜಿಲಿ ನೆರವೇರ್‌ಸುವೆ. ಮನೆ ಕಾರ್ಯಗಳ ಸೂಚ್ಯವಾಗಿ ಇಲ್ಲಿನ ಶಾಸ್ತ್ರಕ್ರಿಯೆಗ ಮನವರಿಕೆ ಮಾಡ್‌ವೆ.

ಈ ನಿಟ್ಟ್‌ಲಿ ಕೊಡಗ್ ಗೌಡ್ರ ಮೊದ್‌ವೆ ಕ್ರಿಯೆಗ ಹಸಿವು– ಕಾಮಗಳ ಸಮನ್ವಯ ಮಾಡ್‌ದರ್‌ಲಿ ಸಾರ್‌ತಕತೆನ ಪಡ್ಕಂಡದೆ. ಒಂದ್ ಸಂಸ್ಕೃತಿನ ಮೂಲ ಗಟಕ ಗಂಡ್ ಮತ್ತೆ ಹೆಣ್ಣ್. ಇವೆರ್‌ಡೂ ಪರಸ್ಪರ ಸರಿ ಮತ್ತೆ ವಿರೋದ ಗುಣ ಇರುವಂತದ್ದ್, ಮೊದ್‌ವೆ ಮತ್ತೆ ಸಂತಾನ ಮತ್ತೆ ಅದ್ ಬೆಳ್ದ್ ಬಂದ್ ಅವ್ವಕ್ಕೆ ಬೇಕಾದ ಕುಟುಂಬನ ಕಟ್ಟಿಕಂಡದೆ. ಕುಟುಂಬ 'ಕೂಡಿ ಉಂಬ' ಗಂಡ್ ಹೆಣ್ಣ್‌ನ ವೆವಸ್ತೆನ ಹೇಳ್ದೆ. ಆಹಾರ ನಿಯಮಕೆ ಮತೆ ಕೂಡಿಬಾಳ್ದಕೆ ಸಮ್ಮಂದಿಸಿದ 'ಕುಟುಂಬ'ಪದ ಸಮ್ಮಂದ ವಾಚಕ (Kinship) ಅಲ್ಲ, ಬದಲಾಗಿ ಮೂಲತಃ ಮೊದ್‌ವೆತೇಳ್ವ ಗಟನೆಗನುಸಾರ ಆಗಿ ರೂಪುಗೊಳ್ಳ್‌ವಂತದ್. ಹಂಗೇಳ್ರೆ ಕುಟುಂಬದ ನಡತೆಲಿ (Behaviour) ಮೊದ್‌ವೆನ ವಿದಿ–ವಿದಾನಗ ಸಾಂಕೇತಿಕ ಆಗಿದ್ ತೋರ್‌ಸಕಾದೆ. ಇಂತ ಕಡೆ ಒಂದೇ ತರದ ಆಚರಣೆ ಇರ್‌ವ ಒಂದ್ ಗುಂಪುಗೆ, ಆ ಗುಂಪುನ ಮೊದ್‌ವೆ ಕ್ರಮ ಸಹಜ ಆಗಿ ಕಂಡರೆ, ಒಳ್ದವರ ಆದರ್ಶಗ, ಬಾವನೆಗ, ನಡಾವಳಿಗ ವಿಚಿತ್ರ, ಅಸಂಬದ್ದತ ಕಾಂಬಕೆ ಸುರಾದೆ. ಒಂದ್ ಕುಟುಂಬದ ಆಹಾರ ನಿಯಮ, ಬಟ್ಟೆನ ಕ್ರಮಂಗ, ತೊಡುಗೆಗ, ಅಲಂಕಾರ, ಮೊದ್ವೆ ಸಮ್ಮಂದಗ, ಮೊಯಿಂಸರ ಸಮ್ಮಂದಗ, ಕ್ರಿಸಿ ಪೊದ್ದತಿಗ ಹಿಂಗೆ ಎಲ್ಲನೂ ಅದರ ಅದ್ಯಯನದ ವ್ಯಾಪ್ತಿಗೆ ಬಂದದೆ. ದಯೆ, ಕರುಣೆ, ದ್ವೇಷ, ಬಕ್ತಿ, ವಿನಯ, ಗೌರವ, ಈ ಬಾವನೆಗಳ ಯಾರ್ ಯಾರ್‌ಲಿ ಯಾವ ಮಟ್ಟಲಿ, ಏಕೆ ತೋರ್‌ಸೊಕುತ ಇದರ್‌ಲಿ ಸೇರ್‌ದೆ. ಹೊರಗೆನ ಸಂಸ್ಕೃತಿಗಳ ಸಂಪರ್‌ಕ ಹೆಚ್ಚಾದಂಗೆ ಈ ಬಾವನೆ ಕಡಿಮೆಯಾದು.

ಪ್ರತಿ ಸಂಸ್ಕೃತಿಗೆ ಅದ್‌ರದೆ ಆದ ವಿಸೇಸ ಸಂಗತಿಗ ಇದ್ದೇ ಇದ್ದದೆ. ಇದರ್‌ಂದಾಗಿ ಒಂದ್ ಜೆನಾಂಗದ ಕುಟುಂಬ ವೆವಸ್ತೆ ಅದರ ಬೇರೆ ಬೇರೆ ತರದ ಹೊಂದಾಣಿಕೆಗಳ ಪರ್ಣಾಮಂದಾಗಿ ತನ್ನ ಆಶ್ರಯಲಿ ಇರುವವ್ಕೆ ತೃಪ್ತಿ ನನ್ನೋ, ನಿರಾಸೆನ್ನೋ, ಸಮಚಿತ್ತತೆನ ಕೊಟ್ಟದೆ. ಇದರ ಒಂದ್ ಕುಟುಂಬದ ಅದ್ಯಯನಲಿ ಸ್ಪಸ್ಟ ಆಗಿದ್ ಗುರುತಿಸಿಕೆ ಸಾದ್ಯ.




ಈಗಾಗಲೇ ಸ್ಪಷ್ಟಪಡಿಸಿರುವಂಗೆ, ಒಂದ್ ಕುಟುಂಬದ ನಡ್ತೆ ಮತ್ತೆ ದ್ರಿಷ್ಟಿಕೋನನ ಆ ಕುಟುಂಬ ಯಾ ಗುಂಪುಗೆ ಸೇರಿಟೋ ಅವರ್‌ಲಿರುವ ಮೊದ್‌ವೆ ಕ್ರಮನ ನಾವು ಗುರ್‌ತ್‌ಸಕ್. ಕೊಡಗ್‌ಲಿ ಇದ್ ನಮ್ಮ ಗಮನಕೆ ಬಂದದೆ.

ಕೊಡಗ್ ಗೌಡ್ರು ಮೊದ್‌ವೆನ ಮೊಯಿಂಸನ ಜೀವನ ಕ್ರಮದ, ಮೊಯಿಂಸನ ಬೊದ್ಕುನ ತುಂಬಾ ಮುಕ್ಯ ಆದ, ಋ ಚತ್ರತ ಒಂದ್ ಗಟ್ಟ ತ ಮಾನ್ಯಮಾಡಿ ಮೊದ್‌ವೆಗೆ ಪ್ರಮುಕ ಸ್ತಾನನ ಕೊಡ್ತಾ ಬಂದೊಳೊ. ಅವರ ಮನೆತನದ ಮೊರ್ಯಾದಿನ, ಗೌರವನ, ಅವರ ಅಂತಸ್ತ್‌ನ ಇದ್ ತೋರ್‌ಸಿದೆತ ಅವರ ನಂಬಿಕೆ. ಕುಟುಂಬ ಮತ್ತೆ ಸಮಾಜದ ವ್ಯಾಪ್ತಿನ ನಿರ್‌ದರ್‌ಸುವ ಮುಕ್ಯ ಮಾನದಂಡ 'ಮೊದ್‌ವೆ'ತ ಕೊಡಗ್ ಗೌಡ್ರ್ ಲಿ ಜಾರಿಗೆ ಬಂದದೆ.

ಮೊದ್‌ವೆನ ನಿರ್‌ದಿಷ್ಟ ದಿನ, ಮುಹೂರ್‌ತ ಗೊತ್ತುಮಾಡ್ಡಿ ಮೊದ್‌ವೆ ಜಂಬರ ಸುರಾವಲ್ಲಿಂದ ಹಂಗೇಳ್ರೆ ಚಪ್ಪರದ ದಿನಂದ ಮೊದುಮಜಂಗು – ಮೊದೊಳಿಗೆಗೂ 'ಪ್ರತ್ಯೇಕ ಅಸ್ತಿತ್ವ' ಒಂದ್ ತಯಾರಾದೆ. ಮೈಗೆ ಅರ್ಶಿನ ಉಜ್ಜಿ, ಗಂಟ್ಲ್‌ಗೆ ಕಾಸ್ತಾಳಿ (ಮುಹೂರ್‌ತ ಮಣಿ) ಕಟ್ಟಿದ ಮೇಲೆ ಮೊದುಮಜ – ಮೊದೊಳಿಗೆ ಮನೆನ ವಾತಾವರಣನ ಬುಟ್ಟು ಹೊರಗೆ ಹೋಕೆಬೊತ್ತುತ ಅಡ್ಡಿ ಉಟ್ಟು. ಅರ್ಶಿನ ಉಜ್ಜಿದ ಮೇಲೆ ಅವು 'ಹಸಿಮೈ' ಜೆನಗ ಆದವೆ.

ಮೊದ್‌ವೆ ಸುರುಂದಲೇ ಎಲ್ಲಾ ಆಚರಣೆಗ ಮೊದುಮಕ್ಕಳ ಸಾಮಾನ್ಯ ಜೀವನ ಕ್ರಮಂದ ಬೇರೆಮಾಡ್ಡೆ ಮತ್ತೆ ಹಂಗೆ ಬೇರೆಮಾಡ್ದರ್‌ಂದ ಮಾತ್ರ ಅವು ಸಾಮಾನ್ಯ ಜೀವನ ಕ್ರಮಲಿ 'ಅಸಾಮಾನ್ಯ'ರಾಗಿ ಬೇರೆನೇ ಸ್ತಾನನ ಗಳ್ಸಿಕಂಡವೆ. ಇದ್ ಸ್ಪಷ್ಟ ಆಕೆ ಅವರ ಮೀಸುವೆ. ಹೊಸ ಬಟ್ಟೆ ಉಡ್ಸುವೆ. ಗಂಡಿಗೆ ಕ್ಷೌರ ಮಾಡ್ಸುವೆ ಪಟ್ಟೆ ಬಾಸಿಂಗ ಕಟ್ಟುವೆ. ಮುಂಡಾಸ್ ಕಟ್ಟುವೆ. ಮತ್ತೆ ಆಗಾಗ ಸೋಬಾನೆಗಳ ಹಾಡಿ ಅವರ ಪುರಾಣಗಳ ಎತ್ತರಕ್ಕೆ ತಕಂಡ್ ಹೋದವೆ. ಜೆನಗಳ ಬೇರೆಮಾಡಿ 'ದಾರೆಮಂಟಪ'ನ ಮಾಡ್‌ವೆ. ಮುಹೂರ್‌ತಕ್ಕೆ ಮಹತ್ವ ಇದ್ದ ಹಾಂಗ ದಾರೆ ಮಂಟಪಕೂ ಮಹತ್ವ ಇರ್‌ದರ್‌ಂದ ಅದರ ವಿಸೇಸಾಗಿ ಸಿಂಗಾರಮಾಡ್ವೆ. 'ವ್ಯಕ್ತಿ' ಮುಹೂರ್‌ತ ಮತ್ತೆ 'ಸ್ತಳ' ಒಂದ್ ನಿರ್‌ದಿಸ್ಟ ಉದ್ದೇಸಕೆ ತಯಾರಾಗಿಯೇ ಸಮಾನವಾದ ಮಹತ್ವನ ಪಡ್ದ್ ಒಟ್ಟು ಮೊದ್‌ವೆ ಪಾವಿತ್ರ್ಯನ ಪಡ್ದದೆ.

ಕೊಡಗ್ ಗೌಡ್ರು ಅವರ ಮೊದ್‌ವೆ ಜಂಬರಲಿ ಅವರ ನೆರೆಕರೆನ ಜಾತಿ ಬಾಂದವ್ಕೆ ಹೆಚ್ಚಿನ ಪ್ರಾಮುಕ್ಯತೆನ ಕೊಡ್ದರ ಇಲ್ಲಿ ನೋಡಕ್. 'ಒಗ್ಗಟ್ಟ್ ಲಿ ಬಲವುಟ್ಟು' ಮತ್ತೆ ಯಾವುದೇ ಜಂಬರನ ಊರವರ ಸಹಾಯ ಇಲ್ಲದೆ ಸ್ವತಂತ್ರ ಆಗಿ ನಿಬಾಯ್ಸಿಕೆ ಆದುಲೆತ ತಿಳ್ಕಂಡ ಇವು, ಮೊದ್‌ವೆಗೆ ಚಪ್ಪರ ಹಾಕಿಕೆ ಊರವರ ಕರ್‌ಸುವೆ. ಅವ್ಕೂ ಅವರ ಜವಾಬ್ದಾರಿನ ಕೊಟ್ಟವೆ ಹಂಗೆನೆ ಊರೊಳಗೆ ನಡೆವ ಮೊದ್‌ವೆ ಮತ್ತೆ ಒಳ್ಳ ಕಾರ್ಯಗಳ್‌ಲಿ ಅವು ಕೂಡಾ ಉಪಕಾರ ಮಾಡ್‌ವೆ. ಕೊಡಗ್ ಗೌಡ್ರ ಮೊದ್‌ವೆ ಕಾರ್ಯಕೆ ಮೊಡ್ಯಾಳರ್, ಓಲಗದವ್, ಬಳೆಗಾರರ್ ಮತ್ತೆ ಕ್ಷೌರಿಕರ್ ಮುಕ್ಯವಾಗಿದ್ದವೆ. ವೀಳ್ಯಕೆ ತುಂಬಾ ಮಹತ್ವನ ಕೊಡ್ವ ಇವು, ವೀಳ್ಯಕೊಟ್ಟ್ ಅವ್ಕೆಲ್ಲವ್ಕೂ ಬಾಕೆ ಹೇಳ್‌ವೆ.

ಮೊದ್‌ವೆಲಿ ಮೊದುಮಕ್ಕಳಿಗೆ ಬೆಳ್ಗುವ ಆರತಿ ಬೇರೆಬೇರೆ ಸಂಗತಿಗಳ ತೋರ್‌ಸಿದೆ. ಇಲ್ಲಿ ಬರೇ ನೀರ್‌ಂದ, ಕರಿ ನೀರ್‌ಂದ, ಕುರ್‌ದಿ ನೀರ್‌ಂದ, ಅಕ್ಕಿಂದ ಆರತಿನ ಬೆಳ್ಗಿ ನೂತನವಾಗಿ ಸಿಂಗಾರ ಆದ ಮೊದುಮಕ್ಕಳಿಗೆ ಯಾರ ಕೆಟ್ಟ ದ್ರಿಷ್ಟಿ ತಾಂಗದ ಹಾಂಗೆ ಈ ಆರತಿಗಳ ಮಾಡ್ವೆ. ಮೊದ್‌ವೆನ ಸಮಯದ ಕಾರ್ಯಗ ಎಲ್ಲಾ ಅಸಾಮಾನ್ಯ. ಮದ್ಯಂತರ ಜಗತ್ತ್‌ಲಿ ಮೊದುಮಕ್ಕಳ ಬಗ್ಗೆ ತುಂಬಾ ಕಾಳಜಿನ ಇಲ್ಲಿ ಗಮನಿಸಕ್. ಜಾಗೆನ ಪ್ರತ್ಯೇಕತೆಲಿ ಹಸೆ ಬರೆದು ಮುಕ್ಯ. ಹಸೆನ ಮುಂದೆ ಮೊದುಮಕ್ಕಳ ಕುದ್ರಿಸಿಕನ ಅವು ಒಳ್ದವರ್‌ಂದ ಬೇರೆಯಾಗಿದ್ದವೆ. ಹಂಗೆನೇ ಕಲ್ಸಕನ್ನಡಿ ಹಿಡೆದು ಸುಬ ದ ಸಂಕೇತವಾಗಿದ್ದದೆ. ಕಲ್ಸಕನ್ನಡಿ ಇಲ್ಲರೆ ಕಂಚುಮೆಲಿ ಹೊತ್ತುವ ದೀಪ ಹೊಸ ಮೊದುಮಕ್ಕಳ ಮುಂದೆನ ಬೊದ್ಕುಗೆ ದಾರಿದೀಪ ಆಗಿ ಅವರ ಸಂಸಾರ ಬೊಳ್ಪುನ ಕಡೆಸಾಗಿ ಯಾಗೊಳು ಹೊತ್ತುವ ನಂದಾದೀಪದಂಗಿರ್‌ಲಿ ತೇಳ್‌ದರ ವೆಕ್ತಪಟ್‌ಸಿದೆ. ಬಳೆ ಹಾಕ್‌ವ ಶಾಸ್ತ್ರ, ಮೊದ್ರೆಂಗಿ ಸಾಸ್ತ್ರಗ ಅವರ ಅಲಂಕಾರನ ಹೆಚ್ಚುಸುದರೊಟ್ಟಿಗೆ 'ಬಳೆ' ಇಲ್ಲಿ ಸುಬಸೂಚಕ ಆಗಿ ಮೂಡಿಬಂದದೆ. ಹಿಂದೆ ಸಿಂಗಾರ ಸಾದನಗ ಕಡಿಮೆ ಇದ್ದ ಕಾಲಲಿ ಮೊದ್ರಂಗಿನ ಚಿತ್ತಾರಗ ಸಿಂಗಾರನ ಹೆಚ್ಚುಸುವ ಸಾದನ ಆಗಿ ಬಳಕೆಗೆ ಬಂದಿರ್‌ವ ಸಾದ್ಯತೆಗ ಹೆಚ್ಚ್.

ಮೊದ್‌ವೆ ಮನೆನ ಮುಂದೆ ಹಾಕಿದ ಚಪ್ಪರನ ಸೀತಾವಳಿ ಚಪ್ಪರ, ಹಂಗೆನೆ ದೇವಸಬೆತ ಕರ್‌ದ್ ದೇವಲೋಕದ ಕಲ್ಪನೆನ ತರ್‌ವ ಪ್ರಯತ್ನ ಇದಾಗಿಟು. ಹೊಸ ಮೊದುಮಕ್ಕಳ ಮುಂದೆ ಸೋಬಾನೆ ಪೊದ್ಯಗಳ ಹೇಳಿ ಪಂಡ್‌ನ ದೊಡ್ಡ ದೊಡ್ಡ ಪಾತ್ರಗಳಿಗೆ ಹೋಲ್ಸಿ ಹಂಗೇಳ್ರೆ ಸೀತಾರಾಮ, ಕೃಷ್ಣರುಕ್ಮಿಣಿಯವ್ಕೆ ಹೋಲ್ಸಿ ಅವರ ಅಸಾಮಾನ್ಯಗೊಳ್ಸುವ ಕೆಲಸನ ಮಾಡ್‌ವೆ.

ದಾರೆನ ಹೊತ್ತುಲಿ ಇಬ್ಬೊರ ನೆಡುಲಿ ಅಡ್ಡಕೆ ಬಿಳಿ ಬಟ್ಟೆ ಹಿಡ್ದ್ ಮುಹೂರ್‌ತಕ್ಕೆ ಕಾದವೆ. ನಿಗಂಟ್‌ಮಾಡ್ದ ಹೊತ್ತುಗೆ ಮೊದುಮಜನ ಕೈ ಮೇಲೆ ಮೊದೊಳಿಗೆನ ಕೈ ಇಸಿ, ಮೊದೊಳಿಗೆನ ಅಪ್ಪ ನೀರ್ ಹೊಯ್ದ್ ದಾರೆ ಮಾಡಿಕೊಟ್ಟವೆ. ಪ್ರತ್ಯೇಕಿಸಿದ ಕಾಳ, ಜಾಗೆ ಮತ್ತೆ ಗಂಡ್ ಹೆಣ್ಣ್ ಒಂದ್ ಹಂತಲಿ ಒಂದಾದಕೆ ಮುಕ್ಯ ಆದ ಎರ್‌ಡ್ ಉದ್ದೇಸಂಗ ಒಳೊ. ಈ ದಂಪತಿಗ ಬವಿಷ್ಯಲಿ ಒಳ್ಳದಾಗಲಿ ಹೇಳ್ವ 'ಮಂಗಳ ಕಲ್ಪನೆ' ಇದ್ ಅಲೌಕಿಕ ಸ್ವರೂಪಲಿಲ್ಲೆ. ಮುಂದೆನ ಜೀವನಲಿ ಕೆಡುಕು ಆಕಾಗದ್‌ತ ಇದರ ಸದಾಶಯ. ಹೊಸ ತಲೆಮಾರ್‌ನ ಜೀವನ ಕ್ರಮಕೆ ಸಮ್ಮಂದಿಸಿಟು. ದಾರೆ ಹೊಯ್ದ ಮೇಲೆ ಮೊದುಮಕ್ಕ ಗಂಡ–ಹೆಣ್ಣ್ ಆಗಿ ಬದಲಾದರ್‌ಂದ ವಂಸಾಬಿರುದ್ದಿಗೆ ಒಪ್ಪಿಗೆ ಸಿಕ್ಕಿದಂಗಾದೆ. ಪರೋಕ್ಷ ಆಗಿ ಆಸ್ತಿಗೆ ಉತ್ತರಾದಿಕಾರಿನ ನೇಮಕಾತಿ ನಡೆದಂಗಾದೆ.

ಗೌಡ್ರ ಮೂಲಕಸುಬು 'ಒಕ್ಕಲುತನ' ಇಲ್ಲರೆ ಅಕ್ಕಿಗೆ ಸಂಬದಿಸುದರ್‌ಂದ, ಮುಹೂರ್ತಲಿ ಅಕ್ಕಿಗೆ ಒಡೆಯನ ಅದಿಕೃತವಾಗಿ ಒಪ್ಪಿಕಂಡವೆ. ಸೇರ್‌ದವೆಲ್ಲವು ಇದ್ಕೆ ಸಾಕ್ಷಿ ಆದವೆ. ಇದ್ ಮುಹೂರ್ತಕ್ಕೆ ಇರ್‌ವ ಆರ್ತಿಕ ಮತ್ತೆ ಸಾಮಾಜಿಕ ಆಯಾಮ ಆಗುಟು. ಮುಹೂರ್ತದ ಹೊತ್ತುಲಿ ಏನಾರ್ ಕೆಟ್ಟದಾದರೆ ಅದರ್‌ಂದ ಮೊದ್ವಗೆ ಕೇಡ್ ಬಂದದೆತ ಹೇಳ್ವ ನಂಬಿಕೆಲಿ ಬವಿಷ್ಯದ ಬಗ್ಗೆ ತುಂಬಾ ಕಾಳಜಿ ವ್ಯಕ್ತವಾದೆ.

ಮೊದ್‌ವೆ ಆದ ಮೇಲೆ ಮೊದುಮಕ್ಕಳ ಮಂಟಪದೊಳಗೆ ಕುದ್ರಿಸಿ ಅವರ ಮೈಮೇಲೆ ಅಕ್ಕಿ ಹಾಕುವೆ. ಮೊಣ್‌ಕಾಲ್ ಗಂಟ್, ಮೊಣ್‌ಕೈಗಂಟ್, ಬುಜದ ಸಂದ್‌ಗಳಿಗೆ ಅಕ್ಕಿನ ಮುಟ್ಟುಸಿ, ಅಕೇರಿಗೆ ನೆತ್ತಿನ ಮೇಲೆ ಅಕ್ಕಿನ ಚೆಲ್ಲುವ, ಕೆಲವ್ ಅಕ್ಕಿನ ಬಾಯಿಗೆ ಇಸಿ ತಿನ್ಸುವಂತದ್ ನಡ್ದದೆ. ಜೀವದಾತು ಆಗಿರ್‌ವ, ಸಮೃದ್ದಿನ, ಪಲವಂತಿಕೆನ ಸೂಚಿಸ್ವ ಮತ್ತೆ ಉತ್ಪಾದನೆನ ಗಟಕ ಆಗಿರ್‌ವ ಅಕ್ಕಿನ ಅನಂತ ಶಕ್ತಿನ ಹೊಸಮೊದುಮಕ್ಕಳಿಗೆ ದಾಟ್ಸುವ ಸಾಂಕೇತಿಕ ಅಬಿವ್ಯಕ್ತಿಯಾಗಿಟು. ಇದರ ಒಟ್ಟು ಮೊದ್‌ವೆಲಿ ಅಕ್ಕಿಗೆ ಇರ್‌ವ ಸ್ತಾನನ ಲಕ್ಷಿಸಿ ಇನ್ನಷ್ಟ್ ವಿವರ್‌ಸಕ್.

ಪೊದುವೆನ ದಿನ ಮೊದೊಳಿಗೆಗೆ ಚೌಕಳಿನ ಬಟ್ಟೆಲಿ ಮಡಿಲಕ್ಕಿ ಕಟ್ಟುವೆ. ಇದರ ಕಟ್ಟ್‌ಕನ ಹೆಣ್ಮಕ ಸೋಬಾನೆ ಪದಗಳ ಹಾಡ್ವೆ. ಮೊದೊಳಿಗೆ ಗಂಡನ ಮನೆಗೆ ಹೋದಮೇಲೆ ಈ ಮಡಿಲಕ್ಕಿಂದ ಪಾಯ್ಸಮಾಡಿ ಗಂಡಂಗೂ, ನೆಂಟ್ರಿಗೂ ಉಂಬಕೆ ಬಡ್ಸಿದೆ. ಇಲ್ಲಿ 'ಅಕ್ಕಿ' ಮೊದ್‌ವೆನೊಟ್ಟಿಗೆ ಅನುಷ್ಟಾನದ ಅರ್‌ತ ಪಡೆದಿರ್‌ದರ ಗಮನಿಸಕ್. ದಾರೆ ಮಂಟಪಕೆ ಮೊದುಮಕ್ಕ ಸುತ್ತು ಬಾಕನಲೂ, ಮಂಟಪದ ಮೇಲೆಗೆ ಅಕ್ಕಿನ ಕಟ್ಟುದರ್‌ಲಿನೂ ಇದೇ ಅರ್‌ತ ಉಟ್ಟು. ಅಕ್ಕಿ ಇಲ್ಲದೆ ಕೊಡಗ್ ಗೌಡ್ರ್‌ಲಿ ಮೊದ್‌ವೆ ಇಲ್ಲೆ. ಈ ಅರ್‌ತಲಿ ಮೊದ್‌ವೆ ಅಕ್ಕಿನ ಒಡೆತನನ ಮತ್ತೆ ಅಕ್ಕಿನ ಅನಂತಶಕ್ತಿನ, ಹೊಸ ತಲೆಮಾರಿಗೆ ವರ್‌ಗಾಯಿಸ್ವ ಪ್ರಕ್ರಿಯೆಯಾಗಿಟು.

ಕೊಡಗ್ ಗೌಡ್ರ ಮೊದ್‌ವೆಲಿ ಚಪ್ಪರದ ದಿನಂದ ಸುರಾಗಿ ಅಕೇರಿಮುಟ್ಟ ಮೊದುಮಕ್ಕ ಸುಮಾರ್ ಸರ್‌ತಿ ಹಿರಿಯರ ಕಾಲ್ ಮುಟ್ಟಿ ಗೌರವ ಕೊಡೊಕು. ಇದ್ಕೆ 'ಮರ್ಯಾದೆ ಕೊಡ್ದು'ತ ಹೇಳ್ವೆ. ಈ ಕಾಲ್ ಹಿಡೆವ ಕ್ರಿಯೆಂದಾಗಿ ಪ್ರತ್ಯೇಕಿಸಿ ಮೊದ್‌ವೆ ಆದ ದಂಪತಿಗ ಮತ್ತೆ ಸಹಜ ಜೀವನ ಕ್ರಮಕೆ ಹೋದವೆ. ಅದಲ್ಲದೆ, ಹಿರಿಯರ ತಲೆಮಾರ್‌ಂದ ಬಂದ ಪರಂಪರೆನ ಮುಕ್ಯ ಬಾಗವಾದವೆ. 'ಕಾಲ್ ಹಿಡೆದು' ಹಿಂದೆನ ತಲೆಗಳೊಟ್ಟಿಗೆ ಅವು ಕೂಡ ಸೇರಿಕಂಬೊದರ ಹೇಳ್ದೆ. ಶರ್‌ರಲಿ (ದೇಹ ಲಿ) ಕನಿಷ್ಟವಾದ್ದ್ ಕಾಲ್ ಮತ್ತೆ ಗರಿಷ್ಟವಾದ್ದ್ ತಲೆ. ದೊಡ್ಡವರ ಕಾಲಿಗೆ ಸಣ್ಣವು ಅವರ ತಲೆನ ಮುಟ್ಟುಸುದರ್‌ಂದ, ಹಿರಿಯರ ಕನಿಷ್ಟಕೆ ಸಣ್ಣವರ ಗರಿಷ್ಟ ಸರಿಯಾದ್ದ್‌ತ ಸೂಚಿಸಲಾದೆ.

ಮೊದ್‌ವೆ ಹಿಂದೆನ ದಿನ ಮೊದುಮಜ್ಜನ ಸಮೇತ ಆಗಿ ಮನೆನ ಹಿರಿಯರ್, ಇದ್ಕೆ ಮುಂದೆ ಸತ್ತ್‌ಹೋಗಿರ್‌ವ ಕುಟುಂಬದ ಹಿರಿಯರ್‌ಗೆ ಗೌರವ ಕೊಡುವ ಕಾರ್‌ನೂರ್‌ಗೆ ಬಳ್ಸುವ ಕ್ರಮನ ಮಾಡ್ವೆ. ಈ ಕ್ರಮ ಕೂಡಾ ಜೀವಂತ ಇರುವವು, ಆಸ್ತಿನ ಆಳ್ವಿ ಸತ್ತ್‌ಹೋದ ಹಿರಿಯರ ಪರಂಪರೆನ ಮುಂದೊರ್‌ಸುವ ಆಶಯ ಆವು. ಹಿರಿಯರ್‌ಂದ ಹೊಸ ತಲೆಮಾರ್‌ಗೆ ಪರಂಪರೆನ ಮೊದ್‌ವೆಂದಾಗಿ ಮತ್ತೆ ದಾಟಿ ಬಂದದೆ. ಮೊದ್‌ವೆ ಇಲ್ಲದೆ ಪರಂಪರೆ ದಾಟಿ ಬಾಕೆ ಸಾದ್ಯವಿಲ್ಲೆ. ಇದರೊಟ್ಟಿಗೆ ಮೊದ್‌ವೆನ ಮೂಲಕ ಪರಂಪರೆನ ಜವಾಬ್ದಾರಿ ಹೊತ್ತ ಮೊದುಮಂಜ, ಅಂವನ ಮನೆ ಒಳಗೆ ಹುಗ್ಗಿಕೆ ಮುಂದೆ ತಂಗೆನ ಮಂಜಂಗೆ ಅಂವನ ಮಗಳ ಕೊಟ್ಟನೆತೇಳ್ವ ಮಾತ್ ಕೊಟ್ಟ್, ಇನ್ನೂ ಹುಟ್ಟದ ಕೂಸುನ ಬವಿಷ್ಯದ ಬಗ್ಗೆನೂ ತೀರ್ಮಾನ ತಕಂಡದೆ.

ದಾರೆ ಆದ ಮೇಲೆ ಬೂಮಿಕ್ಕುವ ಶಾಸ್ತ್ರಲಿ ಮೊದುಮಗ್ಳ್ ಹಾಲ್ ಮತ್ತೆ ತುಪ್ಪನ ಕೈ ಬೆರ್‌ಳ್‌ಲಿ ಬೂಮಿಗೆ ಸಿಡ್ಕಕು. ಹಿಂಗೆ ಅಕ್ಕಿನ ಇಲ್ಲರೆ ಬೆಳೆ ಬೆಳೆವ ಬೂಮಿಗೆ ಗೌರವ ಕೊಟ್ಟವೆ. ನಾಗೋಲಿ ಸಾಸ್ತ್‌ರಲಿ ಮೊದುಮಕ್ಕ ಒಬ್ಬರ್‌ಂದೊಬ್ಬ ಅರ್‌ಸಿನ ನೀರ್‌ನ ಚೋಂಪಿಕಂಡ್, ಚೆಂಡಿಯಾದು, ಗೊಬ್ಬರನ ಮೊದೊಳಿಗೆ ಹೊತ್ತು ಗದ್ದೆಗೆ ಹಾಕುದು, ನೀರ್ ತಾದು ಈ ಕೆಲ್ಸಗ ವಂಶಾಬಿವೃದ್ದಿ ಮತ್ತೆ ಆಹಾರ ಪೂರೈಕೆನ ಆಸಯಗಳ ಬಾರೀ ಲಾಯಿಕ್‌ಲಿ ರಂಜಿಸಿದೆ.

ಮೊದ್‌ವೆಲಿ ಹಾಕುವ ಊಟಂದಾಗಿ ಗೂಡೆನ ಕಡೆ ಮತ್ತೆ ಗಂಡ್‌ನ ಕಡೆವು ಒಂದೇ ಊಟ ಉಂಡ್ ಒಂದಾವ ಮನ್ಸಿಗೆ ಬಂದವೆ. ಹಿಂಗೇಳ್ರೆ ಅವರ್‌ಲಿದ್ದ ಬಿನ್ನತೆನ ಮರ್‌ತ್ ಊಟದ ಮಟ್ಟಿಗೆ 'ಕುಟುಂಬ'ದವಾದವೆ. ಮೊದ್‌ವೆಂದ ಊಟನ ಬೇರೆ ಮಾಡಿಕೆ ಆಗದ ಸ್ತಿತಿ ಉಟ್ಟು. ಈ ಮೊದ್‌ವೆ ಗುರ್‌ತ ಇಲ್ಲದ ಕುಟುಂಬಗಳ ಒಟ್ಟಿಗೆ ಸೇರ್‌ಸುವ ಕೆಲಸನ ಮಾಡ್ದರೊಟ್ಟಿಗೆ ಸಮ್ಮಂದಗಳ ವಿವರ್‌ಸಿದೆ.

ಮೊದ್‌ವೆ ಇವರ್‌ಲಿ ಹೆಣ್ಣ್ ಗಂಡ್‌ನ ಸಮ್ಮಂದಕೆ ಸಾಶ್ವತ ರೂಪ ಕೊಟ್ಟದೆ. ಅದ್ ಕುಟುಂಬದ ರಚನೆ ಕೊಟ್ಟ್, ಜೆನಗಳ ಅದರೊಳಗೆ ಹಾಕಿದೆ. ಇವರ ಮೊದ್‌ವೆನ ಆಚರಣೆಗ ಮೊದ್ವೆ ಆವ ಗೂಡೆಹೈದನ ಹಂಗೆನೆ ಅವರ ಬೇಡದ ಇಕ್ಕಟ್ಟ್‌ಲಿ ಸಿಕ್ಕ್‌ಸಿಹಾಕ್ಸಿದೆ. ಉದಾಹರಣೆಗೆ ಹೆಣ್ಣೊಪ್ಪಿಸಿ ಕೊಡ್ದು ಇಲ್ಲಿ ಗಂಡ್‌ಗೆ ಹೆಣ್ಣ್‌ನ ಒಪ್ಪುಸುಕನ ಅದರ ಮೇಲೆ ಅಂವನ, ಅದರ್‌ಂದಾಗಿ ಅಂವನ ಇಡೀ ಕುಟುಂಬದ ಅದಿಕಾರನ ಕಟ್ಟ್‌ವಂತ ಒಂದ್ ವೆವಸ್ತೆನ ಮೊದ್‌ವೆ ಸ್ರಿಷ್ಟಿಸಿದೆ. ಮೊದ್‌ವೆನ ಆಚರಣೆಗ ಮೊದ್‌ವೆ ಹೇಳ್ವ ಸಮ್ಮಂದಕೆ ಸಾಮಾಜಿಕ ಮಹತ್ವನ ಕೊಟ್ಟದೆ ಹಂಗೆ ಆ ಸಮ್ಮಂದನ ಪಡ್‌ಕಂಡವ್‌ಕೆ ಅವರವರ ಜೊವಾಬ್ದಾರಿಗಳ ಬಗ್ಗೆ ಅರಿವು ಮೂಡ್‌ದೆತ ಹೇಳ್ದು ಸತ್ಯ ಆದರೂ ಈ ಆಚರಣೆಗಳೇ ಸುಮಾರ್ ಸರ್‌ತಿ ಸೋಷಣೆಗೆ ಕಾರಣ ಆದೆತ ಹೇಳ್ದರ ಗಮನ್ಸಕಾದೆ. ಇನ್ನೊಂದ್ ದ್ರಿಷ್ಟಿಲಿ ನೋಡ್ದಾದರೆ ಮೊದ್‌ವೆನ ಸಂದರ್ಬದ ಆಚರಣೆಗಳ ಗಂಡ್ ಶ್ರೇಷ್ಟ, ಹೆಣ್ಣ್ ಕನಿಷ್ಟತೇಳ್ವ ಶ್ರೇಣೀಕರಣನ ಕಾಯ್ದುದಂಡ್ ಬಂದುಟು. ಅದರ ಗೊಬ್ಬರ ಹೊರ್‌ಸುವ, ನೀರು ಹೊರ್‌ಸುವ, ಮೊದ್‌ವೆನ ದಿನಂಲೇ ಪಾಯ್ಸ ಬೇಸುದು, ಇದ್ ಅಡ್ಗೆ ಮನೆಗೆ ದೂಡ್ವ ಕ್ರಿಯೆಗಳ




ಗಮನಿಸಕ್. ಒಟ್ಟ್‌ಲಿ ಕೊಡಗ್ ಗೌಡ್ರ ಮೊದ್‌ವೆ ಕ್ರಮ ಜೆನಾಂಗದ ಸಾಂಸ್ಕೃತಿಕ ದ್ರಿಸ್ಟಿಕೋನನ ಸಾಂಕೇತಿಕವಾಗಿ, ಸರಿಯಾದ ರೀತಿಲಿ ತೋರ್‌ಸಿದೆ. (ಕೆ.ಎಸ್.)

**ಸುಳ್ಯ ಗೌಡ್ರ ಮೊದ್‌ವೆ :** ಗೌಡ್ರ್ ಮೊದ್‌ವೆನ ಬೊದ್ಕ್‌ನ ಬಾರಿ ಮುಕ್ಯ ಗಟ್ಟಂತ ಒಪ್ಪಿಕಂಡೊಳೊ ಅದ್ ಮನೆತನದ ಗೌರವವನ ತೋರ್‌ಸಿದೆಂತ ಹೇಳ್ದರನು ನಂಬುವೆ. ಕುಟುಂಬ ಮತೆ ಸಮಾಜದ ಒಳೆಗೆ ನಿರ್‌ದಾರ ಮಾಡ್ವ ಮುಕ್ಯ ಮಾನದಂಡ ಆಗಿದ್ ಮೊದ್‌ವೆನ ಕಾಣಕ್. ಗೌಡರ ಮೊದ್‌ವೆನ ಸುರುನ ಕ್ರಮ ಸುರಾದು ಈಗ ಬಳ್ಕೆಲಿ ಇರ್‌ವ ಹನ್ನೆರ್‌ಡ್ ಬೊಳಿಲಿ, ಮೊದ್‌ವೆ ಆವ ಹುಡ್‌ಗನ ಬೊಳಿಬುಟ್ಟ್ ಅಂವನ ಬೊಳಿಗೆ ಸರಿ ಹೊಂದ್‌ವ ಬೊಳಿನ ಹುಡ್ಕಕಾದೆ. ಇಂತದ್‌ಕೆ ಹುಡ್ಗನ ಅಪ್ಪ ಅಮ್ಮನ ಬೊಳಿನ ಗಣನೆಗೆ ತಕಣಕಾದೆ. ಆಸ್ತಿನ ಒಡೆತನ ಹಾಂಗೆ ಬೊಳಿನು ಅಪ್ಪಂದ ಮಜ್ಜಂಗೆ ಇಳ್ದ್ ಬಾದರ್‌ಂದ, ಅಪ್ಪನ ಬೊಳಿನ ಇಲ್ಲರೆ ಸೊಂತ ಕುಟುಂಬದ ಬೊಳಿನ ಗೂಡೆನ ಮೊದ್ವೆ ಆವಂಗಿಲ್ಲೆ. ಆದರೆ ಅಪ್ಪನ ತಂಗೆನ ಬೇರೆ ಕಡೆಗೆ ಕೊಟ್ಟಿರ್‌ದಂದ ಅವ್ಕೆ ಹುಟ್ಟಿದ ಹೆಣ್ಣ್‌ನ ಮತ್ತೆ ಮನೆಗೆ ಮೊದ್‌ವೆ ಆಗಿ ಕರ್‌ಕಂಡ್ ಬರಕ್. ಮಗಳನೂ ಕೊಡಕ್. ಅದೆ ಪ್ರಕಾರ ಮಗಳ ಅಮ್ಮನ ತಮ್ಮನೂ ಮೊದ್‌ವೆ ಮಾಡಿಕಣಕ್. ಇಲ್ಲರೆ ಸೋದರ ಮಾವನ ಮಜ್ಜನೂ ಮೊದ್‌ವೆ ಆಕ್. ಇಲ್ಲಿ ನಿಸೇದ ಒಂದಕೆ ಇರ್‌ದು. ಒಂದೆ ಬೊಳಿನ ಒಳೆಗೆ ಮೊದ್‌ವೆ ಆಕೆ ಆಗದ್‌ಂತೇಳ್ಳು. ಒಂದೆ ಬೊಳಿಯವು ಎಲ್ಲವು ಅಣ್ಣ ತಂಗೆಕ ಆಗಿರ್‌ದಂದ ಮತೆ ಅಪ್ಪಂದ ಇಳ್ದ್ ಬಂದರ್‌ಂದ ಬೊಳಿನ ಒಳೆಗೆ ಮೊದ್ವೆ ಆಕಂಬದು ನಿಸೇದ ಉಟ್ಟು. ಇಲ್ಲಿ ಅಮ್ಮನ ಬೊಳಿನ ಗೂಡೆ ಹುಡ್ಕುದೆ ಜಾಸ್ತಿ. ಅಪ್ಪಂಗೆ ಆದ ಆಯ್ಕೆನೆ ಮಜ್ಜಂದೂ ಆಗಿದ್ದದೆತ ಹೇಳ್ವೆ. ಬೊಳಿನ ಈ ನಿರ್‌ದಾರ ಹೆಣ್ಣ್‌ನ ಒಪ್ಪಿಗೆನನೂ ನೋಡಕಾದೆ. ಅಕ್ಕನ ಮಗಳ ಅಣ್ಣ ಅಂದರೆ ಆ ಗೂಡೆನ ಮಾವ ಮೊದ್ವೆ ಆಕ್. ಇಲ್ಲರೆ ಅಣ್ಣನ ಮಜ್ಜನು ಮೊದ್ವೆ ಆಕ್. ಅಂದರೆ ಒಂದ್ ಹೆಣ್ಣ್‌ನ ಮೇಲೆ ಆ ಗೂಡೆನ ಸೋದರ ಮಾವಂಗೂ, ಮಾವನ ಮಜ್ಜಂಗೂ ಮೊದ್‌ವೆ ಆಕೆ ಸಮಾನ ಹಕ್ಕ್ ಉಟ್ಟುಂತ ಹೇಳ್ದ್ ಇದರ್‌ಲಿ ಕಂಡ್‌ಬಂದದೆ. ಅವ್ಕೆ ಮೊದ್ವೆ ಆಕೆ ಆಗದ್ದರೆ ಮುಂದೆನ ತಲೆಮಾರ್‌ಗೆ ದಾಟ್ಸಿ ಆ ಗೂಡೆನ ಒಳೆಗೆ ತಾವ ಕ್ರಮ ಉಟ್ಟು. ಗೌಡ್ರ ಮೊದ್‌ವೆ ಸೇಕಡ 30ರಸ್ಟ್ ನಂದರ ಹೆಮ್ಮನ, ಬಂಗಾರ ಮತೆ ಮೂಲರ ಬೊಳಿಲೆ ಕೂಡಿದ್ದದೆ. ಅಲ್ಲಿ ಗೊತ್ತಿದ್ದ್ ಒಂದೆ ಬೊಳಿಲಿ ಮೊದ್‌ವೆ ಆದ್ ಉಟ್ಟು. ಅಪ್ಪನ ತಂಗೆನ ಕಡೆಂದ ಹೆಣ್ಣ್‌ನ ತಾದು ಮತೆ ಅಯ್ಯೆನ ಸೋದರನ ಕಡೆಗೆ ಹೆಣ್ಣ್‌ನ ಕೊಡ್ದು ಗೌಡರ್‌ಲಿ ತಿರ್‌ಗಿ ತಿರ್‌ಗಿ ಬಾದರ್‌ಂದ ಇಲ್ಲಿ ಕೊಡ್‌ವ ತಾವ ಎರ್‌ಡ್ ಗುಂಪುಗ ಬೇಕಾದೆ. ಇದರ ಹೆಣ್ಣ್‌ನ ಕಡೆ, ಗಂಡ್‌ನ ಕಡೆ ತ ಗೌಡ್ರುಗ ಕರ್‌ದವೆ.

ಮೊದ್‌ವೆಲಿ ಗಂಡ್‌ನ ಕಡೆವೇ ಗೂಡೆ ನೋಡಿಕೆ ಹೋದವೆ. ಹಾಂಗೆ ಹೋಕನ ಎರ್‌ಡೂ ಕಡೆವರೊಟ್ಟಿಗೆ ಮಾತಾಡಿಕಂಬಕೆ ಒಬ್ಬ ಜೆನನ ಇಸಿಕಂಡಿದ್ದವೆ. ಇಂವನ ದಲ್ಲಾಳಿ ತ ಕರ್‌ದವೆ. ಆ ದಲ್ಲಾಳಿ ಎರ್‌ಡ್ ಕಡೆವರೊಟಿಗೆ ಪರ್‌ಚಯ ಇರಂವ ಆಗಿರಕೂ. ಇಂವ ಎರ್‌ಡ್ ಕಡೆವ್ ಸೇರಿಕನ ಮಾತಾಡಿ ಸರಿಮಾಡಿಕೆ, ಏನಾರ್ ಬಿನ್ನ ಅಬಿಪ್ರಾಯಗ ಪ್ರಶ್ನೆಗ, ಬೇಡಿಕೆಗ ಇದ್ದರೆ ಹೇಳಿ ಒಪ್ಪುಸಿ ಸರಿ ಮಾಡಿಕೆ ಇದ್ದದೆ. ಗೂಡೆ ಒಪ್ಪಿಗೆ ಆದರೆ ಗೂಡೆನ ಕಡೆವರ ಹುಡ್ಗನ ಕಡೆಗೆ ಅಂದರೆ ಮನೆ ನೋಡಿಕೆ ಬಂದವೆ. ಪರಸ್ಪರ ಊಟೋಪಚಾರ ಆದ ಮೇಲೆ, ಗೂಡೆನ ಮನೆಲಿ ಮೊದ್‌ವೆ ದಿನ ಮತೆ ಮುಹೂರ್‌ತನ ನಿಗಂಟ್ ಮಾಡ್‌ವೆ.

ಈ ಮೊದ್‌ವೆ ದಿನ ನಿಗಂಟ್ ಮತೆ ಮುಹೂರ್‌ತ ನಿಗಂಟ್ ಮಾಡ್ದರ ಮನೆನ ಜಗಲಿ ಇಲ್ಲರೆ ಚಾವಡಿಲಿ/ಕೈಯ್ಯಾಲೆ ಮಾಡಕು. ಕೈಯ್ಯಾಲೆ ಇಲ್ಲರೆ ಜಗಲಿನ ಒಳೆಗೂ ಅಲ್ಲದ ಹೊರೆಗೆ ಅಲ್ಲದ ನೊಡುನ ಜಾಗೆ, ದಲ್ಲಾಳಿನಾಂಗೆ ಸಮತೋಲನಲಿ ಇರ್‌ವ ಜಾಗೆ, ಹೊರೆಗೆನವರ ಒಳೆಗೆ ಬಾಕೆ ಮಾಡಿಕೆ ಮುಂದೆ ಕುದ್ದುರ್‌ಸುವ ಜಾಗೆ ತೇಳಿರೆ ಜಗ್‌ಲಿ. ಇದ್ ಸಂಸ್ಕೃತಿನ ಅಂತರಂಗ ಮತೆ ಬಹಿರಂಗದ ನಡುಲಿ ಅದೆರ್‌ಡರ ನಡುಲಿ ಸಮ್ಮಂದ ಕೂಡ್ಸಿಕೆ ಆವಂತ ಜಾಗೆ ಇದ್. ಹೆಣ್ಣ್ ಇನ್ನೂ ಮನೆ ಒಳ್ಳೆಗೆ ಬಂದಿರದೆ ಇರ್‌ದಂರ್‌ದ. ಹೆಣ್ಣ್‌ನ ಕಡೆವು ಜಗಲಿಲೇ ಮಾತ್‌ಕತೆ ನಡ್ಸುವೆ. ಈ ಮಾತ್‌ಕತೆ ಬಾರಿ ಮುಕ್ಯ ಆಗಿರ್‌ದರಿಂದ ಮೊದ್‌ವೆ ಇರ್‌ವ ಎಲ್ಲಾ ಗೌಡ್ರ ಮನೆಲಿನೂ ಜಗ್‌ಲಿ ಇದ್ದೆ ಇದ್ದದೆ. ಇದ್ ಅವರ ವಾಸ್ತುನ ಮೂಲ ಸೌಕರ್ಯಲಿ ಒಂದಾಗಿದ್ದದೆ. ಅವಿಬಕ್ತ ಕುಟುಂಬ ಪೊದ್ದತಿ ಅಂದರೆ ಕೂಡ್ ಕುಟುಂಬ ಇರ್‌ವಲ್ಲಿ ಐನ್ಮನೆಲಿ ಜಗಲಿ ಇದ್ದ್ ಅಲ್ಲಿ ಮೊದ್‌ವೆ ನಿರ್‌ದಾರ ಆದೆ. ಜಗಲಿ /ಚಾವಡಿ ಇಲ್ಲದೆ ಗೌಡರ್‌ಲಿ ಮೊದ್‌ವೆ ನಡಿದುಲೆ.

ಮೊದ್‌ವೆ ದಿನ ನಿಗಂಟ್ ಆದ ಮೇಲೆ ಮತೆ ಗೂಡೆನ ಮನೆಲಿ ಪ್ರತ್ಯೇಕ ತಯ್ಯಾರಿಗ ನಡ್ದದೆ. ಎರ್‌ಡೂ ಕಡೆನ ಆಚರಣೆಗ ಮನೆನ ಒಳೆಗೆ, ಅಡ್ಗೆ ಕೋಣೆನ ತೊಂಬರದ ಕೋಣೆಲಿ ನಡ್ದದೆ. ಅಡ್ಗೆ ಮನೆಲಿ ಇರ್‌ವ ಕನ್ನಿಕಂಬ ಬಾರಿ ಪವಿತ್ರ ಜಾಗೆ ಆಗಿದ್ದದೆ. ಈಜಾಗೆಲಿ ಮೊದುಮಜ್ಜನ, ಮೊದ್‌ಮಗಳ ಕುದ್ರುಸುದರ್‌ಂದ ಅವ್ಕೆ ಪ್ರತ್ಯೇಕ ಅಸ್ತಿತ್ವ ಒಂದ್ ಇದ್ದದೆ. ಮೈಗೆ ಅರ್‌ಸಿನ ಉಜ್ಜಿ, ಗಂಟ್ಲ್‌ಗೆ ಮುಹೂರ್‌ತದ ಮಣಿ ಕಟ್ಟಿದ ಮೇಲೆ ಮೊದುಮಕ್ಕ ಮನೆನ ಬುಟ್ಟು ಹೊರೆಗೆ ಹೋಕೆ ಬೊತ್ತುಂತ ಹೇಳ್‌ವೆ. ಅರ್‌ಸಿನ ಉಜ್ಜಿದ ಮೇಲೆ ಅವು 'ಹಸಿಮೈ' ತ ಕರ್‌ಸಿಕಂಡವೆ.

ಸಾಮಾನ್ಯ ಆಗಿ ಮೊದ್‌ವೆನ ಹಿಂದೆನ ದಿನ ನಡಿವ ಎಲ್ಲಾ ಆಚರಣೆಗ ಮೊದುಮಕ್ಕಳ ಸಾಮಾನ್ಯ ಜೀವನಕ್ರಮಂದ ಬುಟ್ಟಿಸುವೆ. ಮತೆ ಹಾಂಗೆ ಪ್ರತ್ಯೇಕ ಮಾಡಿರ್‌ದರ್‌ಂದ ಮಾತ್ರ ಸಾಮಾನ್ಯ ಜೀವನಕ್ರಮಲಿ ಅವು 'ಅಸಾಮಾನ್ಯ' ಆಗಿ ಪ್ರತ್ಯೇಕ ಸ್ತಾನನ ಪಡ್ಕಂಡವೆ. ಇದ್ ಸೆರಿಲಿ ಗೊತ್ತಾಕೆ ಅವರ ಮೀಸುವೆ, ಬಿಳಿ ಬಟ್ಟೆ ಉಡ್ಸುವೆ ಗಂಡ್‌ಗೆ ಚೌರ ಮಾಡ್‌ವೆ, ಪಟ್ಟೆ ಬಾಸಿಂಗ ಕಟ್ಟುವೆ, ಮುಂಡಾಸು ಕಟ್ಟುವೆ ಮತ್ತೆ ಆಗಾಗ

ಸೋಬಾನೆಗಳ ಹೇಳಿ ಅವರ ಪುರಾಣಗಳ ಎತ್ತರಕೆ ತಕಂಡೋದವೆ. ಮೊಯಿಂಸರ ಪ್ರತ್ಯೇಕ ಮಾಡ್ದಂಗೆ ಹೊತ್ತ್‌ನನು ಪ್ರತ್ಯೇಕ ಮಾಡಿ 'ಮುಹೂರ್‌ತ'ನ ನಿರ್‌ದಾರ ಮಾಡ್‌ವೆ. ಜಾಗೆನ ಪ್ರತ್ಯೇಕ ಮಾಡಿ "ದಾರೆಮಂಟಪ'ನ ಮಾಡ್‌ವೆ. ಮುಹೂರ್‌ತಕೆ ಮಹತ್ವ ಇದ್ದ ಹಾಂಗೇ ದಾರೆ ಮಂಟಪಕೂ ಇರ್‌ದಂರ್‌ಂದ ಅದರ ವಿಸೇಸ ಆಗಿ ಸಿಂಗಾರ ಮಾಡ್‌ವೆ. 'ವ್ಯಕ್ತಿ 'ಮುಹೂರ್‌ತ' ಮತ್ತೆ 'ಜಾಗೆ' ಒಂದ್ ನಿರ್‌ದಿಷ್ಟ ಉದ್ದೇಸಕೆ ಬದ್ದ ಆಗಿದ್ ಸಮಾನ ಆದ ಮಹತ್ವನ ಪಡ್ದ್ ಒಟ್ಟ್ ಮೊದ್‌ವೆಲಿ ಪಾವಿತ್ರ್ಯತೆನ ಪಡ್ದಿದ್ದದೆ.

ದಾರ ಮಂಟಪಕೆ ಹೆಣ್ಣ್ ಮನೆ ಒಳೆಗೆಂದ ಬಂದರೆ, ಗಂಡ್ ಚಪ್ಪರದ ಹೊರೆಗೆಂದ ಒಳಗೆ ಬಂದದೆ. ಗಂಡ್‌ನ ಮನೆಲೇ ಮೊದ್‌ವೆ ಆದಿದ್ದರೆ ಅಂವ ಮನೆನ ಕೆಲ ಕಾಲಕೆ ಹೆಣ್ಣ್‌ನ ಕಡೆವ್ಕೆ ಬುಟ್ಟುಕೊಟ್ಟು, ತಾನ್ ಹೊರಗೆಂದ ಬಂದದೆ. ಅಂದರೆ ಗಂಡ್ ಮನೆಂದ ಹೊರೆಗೆ ಹೋಗಿ ಹೆಣ್ಣ್‌ನ ತಂದದೆ. ಹೀಗೆ ತಾಕನ ಎರ್‌ಡೂ ಕಡೆನ ಹಿರಿಯರ್ ಚಪ್ಪರದಡಿಲಿ ಒಟ್ಟ್ ಸೇರಿ ವೀಳ್ಯಕೊಟ್ಟು ಪರಸ್ಪರ ಒಪ್ಪಂದ ಮಾಡಿಕಂಡವೆ. ಈ ಒಪ್ಪಂದ 12 ವಿದಲಿ ನಡ್ದದೆ – ಅದ್ಯಾದ್‌ಂತೇಳಿರೆ : 1. ಹೆಣ್ಣ ಮಾತಾಡ್ಸುದು, 2. ಬೊಳಿ ನಿರ್ಣಯ ಮಾಡ್ದು, 3. ಹೆಣ್ಣ್‌ನ ಒಪ್ಪಿಕಂಬೊದು, 4. ಲಗ್ನ ನಿಶ್ಚಯ ಮಾಡ್ದು, 5. ದೇವುರ್‌ಗೆ ಗೌರವ, 6. ಹಿರಿಯರ್‌ಗೆ ಗೌರವ, 7. ಬಂದುಗಳಿಗೆ ಗೌರವ, 8. ಅಪ್ಪಂಗೆ ಗೌರವ, 9. ಅಯ್ಯೆಗೆ ಗೌರವ, 10. ಅಚ್ಚುಕಟ್ಟಾಗಿ ಮೊದ್‌ವೆ ಆದರ ಬಗ್ಗೆ, 11. ಬಣ್ಣ ಬಂಗಾರದ ಗೌರವ, 12. ಎಲ್ಲವ್ಕೂ ಗೌರವ.

ಮೊದ್‌ವೆಲಿ ಎಲ್ಲವ್ ಸೇರ್‌ದರ್‌ಂದ ಅವ್ಕೆ ಮೊರ್ಯಾದಿ ಕೊಟ್ಟ್ ಆದ ಮೇಲೆ ದಾರಾಕಾರ್ಯ ನಡ್ದದೆ. ದಾರೆಗಾಗಿ ಮೊದುಮಕ್ಕ ಚಪ್ಪರದೊಳಗೆ ಬರ್‌ತಿದ್ದಂಗೆ ಮುತ್ತೈದೆಗ 5 ಅಕ್ಕಿ ಆರತಿ ಮಾಡ್‌ವೆ. ಅವುಗಂತೇಳಿರೆ : 1. ತಾಯಿ ಅಕ್ಕಿ ಆರತಿ, 2. ಕಟ್ಟೆಮನೆ ಅಕ್ಕಿ ಆರತಿ, 3. ಗ್ರಾಮ ಗೌಡನ ಅಕ್ಕಿ ಆರತಿ, 4. ಗ್ರಾಮದ ಅಕ್ಕಿ ಆರತಿ ಮತ್ತೆ 5. ಕುರ್‌ದಿ ನೀರ್‌ನ ಅಕ್ಕಿ ಆರತಿ.

ಇಲ್ಲಿ ಅಕ್ಕಿನ ಆರತಿನಂಗೆ ಮೊದ್‌ವೆ ಜಂಬರಕೆ ಬಂದ ಎಲ್ಲವು ಗೌರವ ಕೊಟ್ಟವೆ. ಕಾಂಬಕೆ ಅದ್ ಮೊದುಮಚ್ಚಂಗೆ ಸಂದಾಯ ಆದರ್‌ನು ಪರೋಕ್ಷವಾಗಿ ಅದ್ ಇಡೀ ಊರ್‌ದಾಗಿದ್ದದೆ. ಅದಾಗಿ ದಾರೆ ಮಂಟಪದೊಳೆಗೆ ಇಸಿದ ಅಕ್ಕಿನ ಮೇಲೆ ಗಂಡ್‌ನ ನಿಲ್ಸುವೆ. ಮೊದೊಳಿಗೆನು ಅಕ್ಕಿನ ಮೇಲೆ ನಿತ್ತದೆ. ಇಬ್ಬರ ನಡುಲಿ ಅಡ್ಡ ಹಿಡ್ದ್ ಮೊಹೂರ್‌ತಕ್ಕಾಗಿ ಕಾದವೆ ನಿಗಂಟ್ ಮಾಡ್ದ ಹೊತ್ತುಲಿ ಗಂಡ್‌ನ ಕೈ ಮೇಲೆ ಗೂಡೆನ ಕೈನ ಇಸಿ, ಗೂಡೆನ ಅಪ್ಪ, ನೀರ್‌ಹೊಯ್ದ್ ದಾರೆ ಕ್ರಮಸ್ಸ, ಪ್ರತ್ಯೇಕ ಮಾಡ್ದ ಕಾಲ, ಜಾಗೆ, ಮತೆ ಗಂಡ್ ಹೆಣ್ಣ್‌ನ ಒಂದ್ ಹಂತಲಿ ಸೇರ್‌ದಕೆ ಮುಕ್ಯ ಆಗಿ ಎರ್‌ಡ್ ಉದ್ದೇಸಗ ಉಟ್ಟು. (ಅ) ಈ ಮೊದುಮಕ್ಕಳ ಬವಿಸ್ಯಲಿ ಒಳ್ಳಾಗಲಿತ ಹೇಳ್ವ 'ಮಂಗಳದ ಕಲ್ಪನೆ'. ಇದ್ ಅಲೌಕಿಕ ಸ್ವರೂಪಲಿಲ್ಲೆ. ಮುಂದೆನ ದಾಂಪತ್ಯಲಿ ಕೆಡ್‌ಕಾಗದಿರ್‌ಲಿಂತೇಳ್ವ ನಂಬಿಕೆನ ಹೊಸ ತಲೆಮಾರ್‌ನ ಜೀವನ ಕ್ರಮಕೆ ಸಮ್ಮಂದಪಟ್ಟದೆ. (ಆ) ದಾರೆ ಹೊಯ್ದಾದ ಮೇಲೆ ಮೊದುಮಕ್ಕ ಗಂಡಹೆಣ್ಣ್ ಆದರ್‌ಂದ ವಂಶಾಬಿವೃದ್ದಿಗೆ ಅನುಮತಿ ಸಿಕ್ಕಿದಂಗಾದೆ. ಪರೋಕ್ಷ ಆಗಿ ಆಸ್ತಿಗೆ ಉತ್ತರಾದಿಕಾರಿನ ನೇಮಕ ಮಾಡ್ದಂಗೂ ಆದೆ. ಒಕ್ಕಲಿಗರ ಮೂಲಕಸುಬು 'ಒಕ್ಕಲುತನ' ಇಲ್ಲೇ ಅಕ್ಕಿಗೆ ಸಮ್ಮಂದಪಟ್ಟರ್‌ಂದ, ಮುಹೂರ್‌ತಲಿ ಅಕ್ಕಿಗೆ ಒಡೆಯನ ಅದಿಕೃತ ಆಗಿ ಒಪ್ಪಿಕಂಡವೆ. ನೆರೆಕರೆವೆಲ್ಲ ಇದ್ಕೆ ಸಾಕ್ಷಿಗಾದವೆ. ಇದ್ ಮುಹೂರ್‌ತಕೆ ಇರ್‌ವ ಆರ್‌ತಿಕ ಮತೆ ಸಾಮಾಜಿಕ ಕಟ್ಟ್‌ಗ. ಮುಹೂರ್‌ತದ ಹೊತ್ತ್‌ಲಿ ಏನಾರ್ ಅವಗಡ ನಡ್ದರೆ ಅದಂರ್‌ದ ದಾಂಪತ್ಯಕೆ ಕೇಡ್ ಆದೆಂತ ಹೇಳ್ವ ನಂಬಿಕೆಲಿನು ಬವಿಸ್ಯದ ಬಗ್ಗೆ ಕಾಳಜಿ ಇಸಿಕಂಡವೆ. ಮೊದ್‌ವೆ ಆದಮೇಲೆ ಮೊದುಮಕ್ಕಳ ಮಂಟಪದೊಳೆಗೆ ಕುದ್ರುಸಿ ಅವರ ಮೈಮೇಲೆ ಅಕ್ಕಿನ ಸೇಸೆ ಮಾಡ್‌ವೆ. ಮೊಣ್ಕಾಲ್‌ನ ಗಂಟ್, ಮೊಣ್ಕೈ ಗಂಟ್, ಬುಜದ ಸಂದ್‌ಗೆ ಅಕ್ಕಿನ ತಾಂಗ್‌ಸಿ ಕಡೆಗೆ ನೆತ್ತಿನ ಮೇಲೆ ಅಕ್ಕಿನ ಹಾಕುವೆ. ಕೆಲವ್ ಅಕ್ಕಿನ ಬಾಯಿಗೆ ಇಸಿ ತಿನ್ಸುವೆನು. ಇಲ್ಲಿ ಜೀವ ದಾತು ಆಗಿರ್‌ವ ಮತೆ ಉತ್ಪಾದನೆನ ಮೂಲ ಆಗಿರ್‌ವ ಅಕ್ಕಿನ ಅನಂತ ಶಕ್ತಿನ ಹೊಸಮೊದುಮಕ್ಕಳಿಗೆ ದಾಟ್ಸುವ ಸಂಕೇತನು ಉಟ್ಟು ಇದರ ಒಟ್ಟ್ ಮೊದ್‌ವೆಲಿ ಅಕ್ಕಿಗೆ ಇರ್‌ವ ಸ್ತಾನನ ನೋಡಿಕಂಡ್ ವಿವರ್‌ಸುವೆ.

ಮೊದ್‌ವೆನ ಹಿಂದೆನ ದಿನ ಮೊದೊಳಿಗೆನ ಸಿಂಗಾರ ಮಾಡಿಕನ ಗೂಡೆ ಉಟ್ಟ ಸೀರೆನ ಒಂದ್ ಕೊಡಿಗೆ ಒಂದ್ ಪುಂಡಿನಷ್ಟ್ ಅಕ್ಕಿ ಕಟ್ಟುವೆ. ಇದ್ಕೆ 'ಮಡಿಲಕ್ಕಿ'ತ ಹೆಸರ್. ಇದರ ಕಟ್ಟಿಕನ ಹೆಂಗ್‌ಸ್‌ಗ ಸೋಬಾನೆ ಪದಗಳ ಹೇಳ್‌ವೆ ಈ ಪೊದ್ಯಗಳ 'ಮಡಿಲಕ್ಕಿ ಪದ'ಗಂತ ಜೆನಪ್ರಿಯ ಆಗುಟು. ದಾರೆ ಆದ ಮೇಲೆ ಗೂಡೆ ಗಂಡನ ಮನೆಗೆ ಹೋದ ಮೇಲೆ, ಈ ಮಡ್‌ಲಕ್ಕಿನ ಬೇಸಿ ಗಂಡಂಗೆ ಉಣ್ಸಕು. ಇಲ್ಲಿ 'ಅಕ್ಕಿ' ಮೊದ್‌ವೆ ನೊಟ್ಟಿಗೆ ಕೂಡುವ ಅರ್ತ ಇರ್‌ದರ್‌ನು ಕಾಣಕ್. ದಾರಾಮಂಟಪಕೆ ಮೊದುಮಕ್ಕ ಸುತ್ತು ಬಾಕಣನು, ಮಂಟಪದ ಮೇಲೆಗೆ ಅಕ್ಕಿನ ಹಾಕುದರ್‌ಲು ಇದೇ ಅರ್‌ತ ಒಳದ್. ಅಕ್ಕಿ ಇಲ್ಲದೆ ಗೌಡ್ರುಲಿ ಮೊದ್‌ವೆ ಇಲ್ಲೆ. ಈ ಅರ್ತಲಿ ಮೊದ್‌ವೆ ಅಕ್ಕಿನ ಒಡೆತನನ ಮತ್ತೆ ಅಕ್ಕಿನ ಅನಂತ ಶಕ್ತಿನ ಹೊಸ ತಲೆಮಾರ್‌ಗೆ ವರ್‌ಗಾಯಿಸುವ ಒಂದ್ ಪ್ರಕ್ರಿಯೆ ಆಗುಟು.ದಾರೆ ಆದ ಮೇಲೆ ಮೊದುಮಕ್ಕ ಮನೆತನದ ಹಿರಿಯರ ಕಾಲ್ ಹಿಡ್ದ್ ಗೌರವ ಕೊಡಕು.ಇದ್ಕೆ 'ಮೊರ್ಯಾದೆ ಕೊಡ್ದು ತ ಹೆಸರ್. ಈ ಮೊರ್ಯಾದೆ ಕೊಡ್‌ವ ಕ್ರಮಂದ ಪ್ರತ್ಯೇಕ ಮಾಡ್ದ, ಮೊದ್‌ವೆ ಆದ ಗಂಡಹೆಣ್ಣ್‌ಗ ಮತ್ತೆ ಸಹಜ ಜೀವನ ಕ್ರಮಕೆ ಹಿಂತಿರ್‌ಗ್‌ವೆ ಅಲ್ಲದೆ ಹಿರಿಯ ತಲೆ ಮಾರ್‌ಂದ ಇಳ್ದ್ ಬಂದ ಪರಂಪರೆನ ಒಂದ್ ಪಾಲ್ ಆದವೆ. 'ಕಾಲು ಹಿಡಿದು' ಹಿಂದೆನ ತಲೆಗಳೊಟ್ಟಿಗೆ ಅವುನು ಸೇರಿಕಂಬದರ ತೋರ್‌ಸಿದೆ. ಸರ್ತಲಿ ಕನಿಷ್ಟಂತೇಳಿರೆ ಕಾಲ್, ಮತೆ ಗರಿಷ್ಟದ್ ತಲೆ, ಹಿರಿಯರ ಕಾಲ್ಗೆ ಕಿರಿಯರ್

ತಮ್ಮ ತಲೆನ ಮುಟ್ಟುಸುದರ್‌ಂದ ಹಿರಿಯರ ಕನಿಸ್ಪಕೆ ತಮ್ಮ ಗರಿಸ್ಪತನ ಸಮಂತ ಕಂಡವೆ. ಈ ಮೊದ್‌ವೆನ ಹಿಂದೆನ ದಿನ ಮೊದುಮಜ್ಜನೂ ಸೇರಿ ಮನೆನ ಹಿರಿಯರ್, ತೀರಿ ಹೋದ 16 ತಲೆಮಾರ್‌ಗೆ ಗೌರವ ಕೊಡ್ವ ಸಲ್ವಾಗಿ ಕೊಲೆಗಳಿಗೆ ಇಸ್‌ವ ಕಾರ್ಯಕ್ರಮನ ಮಾಡ್‌ವೆ.

ಈ ಕಾರ್ಯಕ್ರಮ ಕೂಡಾ ಜೀವಂತ ಇರ್‌ವ, ಈಗಾಗಲೇ ಆಸ್ತಿನ ಆಳಿ ತೀರಿಹೋದ ಹಿರಿಯರ ಪರಂಪರೆನ ಮುಂದುವರ್‌ಸುವ ಕ್ರಮ ಇರ್‌ವಂತದ್. ಹಿರಿಯರ್‌ಂದ ಮೊದ್‌ವೆ ಆಗಿ ಹೊಸ ತಲೆಮಾರ್‌ಗೆ ಮತ್ತೆ ದಾಟಿಬಂದದೆ. ಮೊದ್‌ವೆ ಇಲ್ಲದೆ ಪರಂಪರೆ ದಾಟಿ ಬಾಕೆ ಸಾದ್ಯ ಇಲ್ಲೆ. ಇದರ ಒಟ್ಟಿಗೆ ಮೊದ್‌ವೆಂದ ಪರಂಪರೆನ ಜವಾಬ್ದಾರಿ ಹೊತ್ ಮೊದುಮಜ್ಜ, ತನ್ನ ಮನೆ ಒಳೆಗೆ ಸೇರಿಕೆ ಮುಂದೆ ತಂಗೆನ ಮಜ್ಜಂಗೆ ಮಗಳ ಕೊಟ್ಟನೆಂತ ಬಾಸೆ ಕೊಟ್ಟ್, ಇನ್ನೂ ಹುಟ್ಟಿದ ಕೂಸುನ ಬವಿಷ್ಯದ ಬಗ್ಗೆನು ತೀರ್ಮಾನ ತಕಂಡವೆ.

ದಾರೆ ಆದ ಮೇಲೆ ಎರ್‌ಡ್ ಆಚರಣೆಗ ಉಟ್ಟು. 1. ಬೂಮಿಕ್ಕುವ ಶಾಸ್ತ್ರ, 2. ನಾಗೋಲಿ ಶಾಸ್ತ್ರ, ಸುರುದು 'ಬೂಮಿಗೆ ಇಕ್ಕುವ' ಆಚರಣೆಗೆ ಸಮ್ಮಂದಪಟ್ಟದ್. ಇಲ್ಲಿ ಮೊದುಮಕ್ಕ ಹಾಲ್ ಮತ್ತೆ ತುಪ್ಪನ ಕೈ ಬೆರ್‌ಲ್‌ಲಿ ಬೂಮಿಗೆ ಸಿಡ್ಕಕು. ಹಿಂಗೆ ಅಕ್ಕಿನ ಇಲ್ಲರೆ ಆಹಾರನ ಬೆಳೆವ ಬೂಮಿಗೆ ಗೌರವ ಕೊಟ್ಟವೆ' ನಾಗೋಲಿ ಶಾಸ್ತ್ರಲಿ ಮೊದುಮಕ್ಕ ಪರಸ್ಪರ ಅರ್‌ಸಿನ ನೀರ್‌ನ ಸಿಡ್ಕಿಕಂಡ್, ಚಂಡಿ ಆಗಿ ಹಾಲು ಬಾವಂತ ಹಾಲೆ ಮರದ ದೈನ ತಂದ್ ನೆಲಲಿ ಇಸಿ ಅದ್ಕೆ ಗೊಬ್ಬರನ ಹೊತ್ತ್ ತಂದ್ ಹಾಕುವೆ. ವಂಸಾಬಿವೃದ್ದಿ ಮತ್ತೆ ಆಹಾರ ಪೂರೈಕೆನ ಎರಡ್ ಆಶಯಂಗ ಇಲ್ಲಿ ಅದ್ಬುತ ಆಗಿ ಕಾಣಕ್. ಮೊದ್‌ವೆನ ದಿನ ಹಾಕ್‌ವ 'ಊಟಂದಾಗಿ ಹೆಣ್ಣ್‌ನ ಕಡೆ ಮತ್ತೆ ಗಂಡ್‌ನ ಕಡೆವು ಒಂದೇ ಊಟನ ಉಂಬದರ್‌ಂದ ಒಂದಾವ ಮನ್ಸ್‌ಗೆ ಬಂದವೆ. ಅಂದರೆ ಅವರ್‌ಲಿದ್ದ ಬಿನ್ನತೆನ ಮರ್‌ತ್ ಊಟದ ಮಟ್ಟ್‌ಗೆ 'ಕುಟುಂಬ'ದವಾವೆ. ಮೊದ್‌ವೆಂದ ಊಟನ ಪ್ರತ್ಯೇಕ ಮಾಡಿಕಾಗದ ಸ್ತಿತಿ ಉಟ್ಟು. (ಪಿ.ಬಿ.)

**ಬೊಳಿ ಪೊದ್ದತಿ :** ಗೌಡರ್‌ಲಿ ಇರ್‌ವ ಬೊಳಿ ಪೊದ್ದತಿ ತುಳುನಾಡ್‌ನ 'ಬರಿ' ಪೊದ್ದತಿಂದ ಪ್ರೇರಣೆ ಪಡ್ದಂತದ್. ಗೌಡರ್‌ಲಿ ಚಲಾವಣೆಲಿ ಇರ್‌ವ ಬೊಳಿ ಪೊದ್ದತಿ ಅವ್ಕೆ ಮೂಲ ಆಗಿರ್‌ವ ಐಗೂರು ಪರಿಸರಲಿ ಇಲ್ಲೆ. ಗೌಡ್ರ್ ಅವರ ಬೊಳಿನ ಹೆಸರ್‌ನ ಬೇರೆವ್ಕೆ ಹೇಳಿಕನ, ಬೊಳಿ ಪದಕೆ ಇನ್ನೊಂದ್ ಹೆಸರ್‌ನ, ಜೆನರ ನಡುಲಿ ಎಲ್ಲವ್ಕೆ ಗೊತ್ತಿರ್‌ವ ಗೋತ್ರ ತೇಳ್‌ವ ಪದನ ಬಳ್ಸುವೆ. ಆದರೆ ಬೊಳಿ ಮತ್ತೆ ಗೋತ್ರ ಎರ್‌ಡೂ ಪದಂಗ ಸಮಾನ ಅಲ್ಲ. ಮುಕ್ಯ ಆಗಿ ನೋಡಕುಂತಾರೆ ಗೋತ್ರ ಸಂಸ್ಕೃತ ಪದ ಆಗಿದ್ದ್, ಗೋ (ಗೋವು) ಮೂಲಂದ ಬಂದಂತದ್, ಬೊಳಿ ದ್ರಾವಿಡ ಪದ ಆಗಿದ್ದ್, ಒಂಚೂರ್ ವೆತ್ಯಾಸದೊಟಿಗೆ ಎಲ್ಲ ದ್ರಾವಿಡ ಬಾಸೆಗಳ್‌ಲು ನಡ್‌ಕಂಡುಟ್ಟು. ಬಹುಮಟ್ಟ್‌ಗೆ ಗೋತ್ರಂಗ ರುಸಿ ಮೂಲಂದ ಬಂದಿದ್ದರೆ, ಬೊಳಿಗ ಸಮುದಾಯಗ ನೆಲೆ ನಿತ್ತ ಬೂಮಿ, ಸೀಮೆ ಊರ್‌ನ ಕಾರಣಂದ ಹುಟ್ಟಿಕಂಡುಟು. ದ್ರಾವಿಡ ಬಾಸೆಗಳ್‌ಲಿ ಜಾತಿಗೆ ಸಮ ಆಗಿದ್ ಬೇರೊಂದ್ ಪದ ಇಲ್ಲೆಂತೇಳ್‌ದರ ಗಮನ್‌ಸಕು. ಬೊಳಿನೆ ದ್ರಾವಿಡ ಜೆನಾಂಗಲಿ ಮೊದ್‌ವೆ ಜಂಬರಗಳ ಮುಕ್ಯ ಸಂಗತಿ ಆಗುಟು. ಈ ಅರ್‌ತಲಿ ಸಮುದಾಯಲಿ ಬಳಕೆಲಿ ಇರ್‌ವ ಬೊಳಿ ಪೊದ್ದತಿ ಜಾತಿ ವೆವಸ್ತೆ ಹುಟ್ಟಿಕಂಬೊಕು ಮುಂದೆನ ಒಂದ್ ಪೊದ್ದತಿಂತನೆ ಹೇಳಕ್. ತುಳುನಾಡ್‌ನ ಬೇರೆ ಬೇರೆ ಸಮುದಾಯಲಿ ಇರ್‌ವ ಬೊಳಿಗಳ ಸಂಕೆ ಒಂದೇ ತರ ಇಲ್ಲೆ. ಅವ್ಗಳ ಸಂಕೆ ಆರರ್‌ಂದ 60ರ ವರೆಗೆ ಉಟ್ಟು. ದಲಿತರ್‌ಲಿ ಬೊಳಿಗಳ ಸಂಕೆ ಬಾರಿ ಕಡ್‌ಮೆ ಇದ್ದರೆ, ಮೇಲ್ಜಾತಿಯವರ್‌ಲಿ ಅದರ ಸಂಕೆ ಹೆಚ್ಚಿ ಉಟ್ಟು. ಆದರೆ ಒಂದ್ ಬೊಳಿಗೆ ಸೇರ್‌ದ ಜೆನಂಗೆಲ್ಲ ಮೂಲತ ಒಂದೇ ಕುಟುಂಬಕೆ ಸೇರ್‌ದವುಂತೇಳ್‌ವ ನಂಬಿಕೆಲಿ ಮಾತ್ರ ಯಾದೇ ವೆತ್ಯಾಸ ಇಲ್ಲೆ. ಹಾಂಗಾಗಿ ಒಂದೇ ಬೊಳಿನ ಒಳೆಗೆ ಮೊದ್‌ವೆ ಸಮ್ಮಂದಗ ನಡಿದುಲೆ.

ಸುಳ್ಯ ಗೌಡರ್‌ಲಿ ಬೊಳಿ ಅಪ್ಪಂದಳೆ ಇಳ್ದ್ ಬಂದದೆ. ಸಾಮಾನ್ಯ ತಿಳಿವಳಿಕೆನ ಪ್ರಕಾರ ಗೌಡರ್‌ಲಿ ಒಟ್ಟು 18 ಬೊಳಿಗ ಒಳ. ಮೊದ್‌ವೆ ಕಾರ್‌ಯಲಿ ಹೇಳ್‌ವ 'ಹತ್ತು ಕುಟುಂಬ ಹದಿನೆಂಟು ಗೋತ್ರ' ತೇಳ್‌ವ ಮಾತ್ ಈ ನಂಬಿಕೆಗೆ ಇರ್‌ವ ಒಂದೆ ಒಂದ್ ದೊಡ್ಡ ಆದಾರ. 1. ನಂದರ ಬೊಳಿ,,2. ಹೆಮ್ಮನ ಬೊಳಿ, 3. ಸೆಟ್ಟಿ ಬೊಳಿ (ಹಾಲು ಗುಂಡರ), 4. ಕಬರ್ ಬೊಳಿ, 5. ಚಾಲ್ಯರ ಬೊಳಿ, 6 ಮೂಲ್ಯರ ಬೊಳಿ, 7 ಬಂಗಾರ ಬೊಳಿ, 8. ಗೌಡ ಬೊಳಿ, 9. ಗೋಳಿ ಬೊಳಿ, 10. ಸಾಲೆ ಬೊಳಿ, 11. ಬಳಸನ್ನ ಬೊಳಿ, 12. ಕರ್ಬನ್ನ ಬೊಳಿ, 13. ಔದನ್ನ ಬೊಳಿ, 14. ನಾಯರ್ ಬೊಳಿ, 15. ಕಂರ್ಬೆರ್ ಬೊಳಿ, 16. ಚಿತ್ತೆರ್ ಬೊಳಿ, 17. ಗುಂಡನ. ಬೊಳಿ, 18. ಲಿಂಗಾಯಿತ ಬೊಳಿ. ಗೌಡರ್‌ಲಿ ಕಾಂಬಕೆ ಸಿಕ್ಕ್‌ವ 12 ಬೊಳಿಗಳ ಮಾಹಿತಿ ಈ ಕೆಳೆಗೆ ಉಟ್ಟು.

**ನಂದರ ಬೊಳಿ :** ನಂದರ ಬೊಳಿನ ಜೆನಗ ನಂದ ವಂಸದವುಂತ ಹೇಳಿಕೆ ಉಟ್ಟು. ಜೆನಗಳ ಲೆಕ್ಕ ಹಾಕ್‌ವ ದ್ರಿಸ್ಟಿಂದ ನೋಡಿಕನ ಇವರ ಗೌಡರ್‌ಲಿ ಎರಡ್‌ನೆ ದೊಡ್ಡ ಬೊಳಿಂತ ಹೇಳಕಾದೆ (17. 6 ಶೇ), ಗೌಡರ್‌ಲಿ ಇದ್ ಪ್ರತಿಸ್ಟಿತ ಬೊಳಿ' ತೇಳ್ವ ನಂಬಿಕೆ ಉಟ್ಟು.

ತಲಕಾಡ್‌ನ ಗಂಗರ ಮನೆ ದೆವ್ವ ಆಗಿದ್ದ ಏಳೂರ ಮುನಿಸ್ವಾಮಿನ ಈ ಬೊಳಿಯವ್ ವಿಸೇಸಾಗಿ ಆರಾದನೆ ಮಾಡ್‌ವೆ. ಮೂಲತ ಸುಳ್ಯದ ಎಲ್ಲ ಗೌಡರ್ ಗಂಗಡಿಕಾರರ್ ಆಗಿದ್ದ್, ನಂದರ ಬೊಳಿಯವರ್‌ಲಿ ಇಂತ ದಾರ್‌ಮಿಕ ಆರಾದನೆನ ರೂಪ ಒಳ್ಕಂಡದರ ನೋಡಿಕನ, ಇವು ಅದೇ ಮನೆತನಕ್ಕೆ ಸೇರ್‌ದೆವೆ ಆಗಿರ್‌ದು. ಐಗೂರುಂದ ಸುಳ್ಯದ ಕಡೆ ಗೌಡರ್ ವಲ್‌ಸೆ ಬಂದ ದಾರಿ ಉದ್ದಕೆ ನಂದರ ಬೊಳಿಯೊವು ಇರ್‌ದರ ಕಾಣಕ್. ಈ ಬೊಳಿಯವ್ ಬೇರೆ ಬೊಳಿಯವರ್‌ಂದ ಹಳ್ಳಾ ಹೆಚ್ಚಿ ಕಪ್ಪು ಇದ್ದವೆ. ಅವರ ಕೂದಲ್ ಗುಂಗುರಾಗಿದ್ದದೆ. ರುದ್ರಾಂಡಿ

ದೆವ್ವದ ಪಾಡ್ದನಲಿ "ನಂದೆರೆನ ನಂದಾದೀಪ' ತ ಮಾತ್ ಬಂದದೆ. (ನಂದರ ಬೊಳಿಯವರ ನಂದಾದೀಪ). ಇವು ಹೆಚ್ಚಿಗೆ ದೆವ್ವಂಗಳ ನಂಬೊವು. ಪುರ್ಸ ದೆವ್ವದ ಪಾಡ್ದನಲಿ ಇರ್ವ ಪ್ರಕಾರ ನಂದರ ಬೊಳಿಯವ್ ಸುರುಗೆ ನೆಲೆನಿತ್ತದ್ ಸುಬ್ರಹ್ಮಣ್ಯದ ಹಕ್ಕಲೆನ ಕುಲ್ಕುಂದ, ಅಲ್ಲಿಂದ ಎರ್‌ಡ್ ಬಾಗ ಆಗಿ ಒಂದ್ ಬಾಗ್ ಬಳ್ಪ, ಪಂಜ, ಕುಲ್ಕುಳಿ, ಚೊಕ್ಕಾಡಿಲಿ ಹರ್‌ಂಡಿಕಂಡಿದ್ದರೆ, ಇನ್ನೊಂದ್ ಬಾಗ ಗುತ್ತಿಗಾರ್, ಸುಳ್ಯ, ಅರಂತೋಡ್‌ನ ಕಡೆ ಹಬ್ಬಿಟು. ಈ ಜಾಗೆಲಿ ಹೆಚ್ಚಿನವೆಲ್ಲ ನಂದರ ಬೊಳಿಯವೆ ಒಳದ್. ಈ ದಾರಿ ಐಗೂರ್ ಸೀಮೆಂದ ಗೌಡ್ರ್ ಹಬ್ಬಿದಕೆ ಸರಿ ಆಗಿದೆ ಉಟ್ಟು. ನಂದರ ಬೊಳಿನ ಹೈದಂಗೆ ಬೇರೆಲ್ಲಾ ಬೊಳಿಯೊವ್ ಗೂಡೆನ ಮೊದ್ವೆ ಮಾಡಿ ಕೊಡಿಕೆ ತಯ್ಯಾರ್ ಇದ್ದವೆ. ನಂದರ ಬೊಳಿಯವ್ ಗುಂಡನ ಬೊಳಿನ ಗೂಡೆನ ಮೊದ್ವೆ ಆದ್ಲೆ. ನಂದರ ಬೊಳಿನ ಗೂಡೆನ ಬೇರೆ ಎಲ್ಲಾ ಬೊಳಿಯವ್ ಮೊದ್‌ವೆ ಆಕೆ ಒಪ್ಪಿಕಂಡವೆ. ಬಂಗಾರ್ ಮತ್ತೆ ಹೆಚ್ಚಿನ ಬೊಳಿಯವರೊಟಿಗೆ ಇವರ ಮೊದ್ವೆ ಸಮ್ಮಂದ ಹೆಚ್ಚಿಗೆ ಇದ್ದದೆ. ನಂದರ ಬೊದ್ಕ್‌ನ ನರಿ ನಾಯಿ ತಿಂದತ್ತ್ ಗಾದೆ ಒಂದರ ನೋಡ್‌ರೆ, ನಂದರ ಬೊಳಿಯವ್ ಹೆಚ್ಚಿ ಎರ್ಪರ್ ತ ಹೇಳ್‌ವೆ. ಇಸ್ಟಿದ್ದರೂ ಈ ಬೊಳಿಯವ್ ಸ್ರೇಸ್ಟರ್‌ತ ತೇಳ್ದರ ಒಳ್ದೆಲ್ಲ ಬೊಳಿಯವ್ ಒಪ್ಪಿಕಂಡವೆ. 'ನಂದರ ನಡಾವಳಿ' ತ ಒಂದ್ ಮಾತ್ ಉಟ್ಟು. ಸುಳ್ಯ ಪರಿಸರದ ದಲಿತರ್‌ಲಿ ನಂದರ ಬೊಳಿ ಉಟ್ಟು. ಆದರೆ ಗೌಡರ್‌ಳಿಗೂ ಇವ್ಕೂ ಸಾಂಸ್ಕೃತಿಕ ಆಗಿದ್ ಯಾವ ಸಮ್ಮಂದನೂ ಇಲ್ಲೆ. ಕೊರಗ ಜಾತಿಲಿನೂ ನಂದರ ಬೊಳಿ ಉಟ್ಟು ತುಳುನಾಡ್‌ನ ಸುಮಾರ್ ಕಾಲ ಆಳ್ದ ನಂದಾವರದ ನಂದ ಅರಸರ ಆಳ್ವಿಕೆನ ಅಡಿಲಿ ಇದ್ದದರ್‌ಂದ ಈ ಹೆಸರ್ ಬಂದಿರ್‌ದು.

**ಹೆಮ್ಮನ ಬೊಳಿ :** ತುಳು ಮಾತಾಡ್‌ವ ಗೌಡ್ರ್ ಹೆಮ್ಮನ ಬೊಳಿ ಬೊಳಿನ ಪೆರ್ಬನ್ನು ಬರಿತ ಕರ್‌ದವೆ. ತಲೆ ಲೆಕ್ಕ ಹಿಡ್ದರೆ ಗೌಡರ್‌ಲಿ ಇವರ ಸಂಕೆನೆ ಹೆಚ್ಚಿ ಒಳದ್ ಇವ್ ಶೇ 20. 7 ಒಳೊ. ಹೆಮ್ಮನವರ ಹೇಳಿಕೆ ಉಟ್ಟು. ಇವು ಮಾತ್‌ಲಿ ಜಾಣರ್‌ತ ಈ ಮಾತ್‌ನ ಅರ್‌ತ. ಸುಳ್ಯದ ನೆರೆಕರೆ ಇಡಿ ಹರ್‌ಂಡಿಕಂಡಿರ್‌ವ ಈ ಬೊಳಿಯವ್ಕೆ ಹೆಣ್ಣ್ ಕೊಡಿಕು ತಾಕೂ ಯಾವ ಸಂಪ್ರದಾಯದ ಅಡ್ಡಿಗ ಇಲ್ಲೆ. ಹೆಮ್ಮನ ಬೊಳಿನ ಹೆಣ್ಣ್ ಮನೆ ತುಂಬ್‌ಸಿದೆ ತೇಳ್ವ ಒಳ್ಳ ಮಾತ್ ಪ್ರಚಲಿತಲಿ ಇರ್‌ವ ಕಾರಣ ಈ ಬೊಳಿನ ಹೆಣ್ಮಕ್ಕಳಿಗೆ ಬಾರಿಬೇಗ ಮೊದ್ವೆ ಆದೆ. ಇವು ಹೆರ್‌ಗಲ್ ತೇಳ್‌ವ ಮೀನ್ ತಿಂಬಕಾಗದ್‌ತ ಸಾಸ್ತ್ರ ಒಂದ್ಟು. ಹೆರ್‌ಗಲ್ ಮೀನ್ ಮುಂದೆ ಹೆಮ್ಮಿನ್ ಆಗಿ, ಅದ್ ಹೆಮ್ಮನ ಆಗಿರ್‌ದುತ ನಂಬುವೆ. ಹಾಂಗೆ ಸುಳ್ಯ ತಾಲೂಕು ಇಡಿ ಇವೇ ಹಬ್ಬಿಕಂಡೊಳೊ.

**ಬಂಗಾರ್ ಬೊಳಿ :** ತುಳುನಾಡ್‌ನ ಆಳ್ದ ಬಂಗ ಅರಸರ ವಂಸದೊವ್‌ತ ಈ ಬೊಳಿಯವ್ ಹೇಳಿಕಂಡವೆ. ತುಳುನಾಡ್‌ನ ಅರಸರಾಗಿದ್ದ ಬಂಗರಸರ ಮೇಲೆನ ಅಬಿಮಾನಂದ, ಇಲ್ಲರೆ ಬಂಗರಸರ ಆಳ್ವಿಕೆಗೆ ಒಳಪಟ್ಟ ಗುಂಪು ತೇಳ್ವ ಅರ್‌ತಲಿ ಬಂಗಾರ್ ಬೊಳಿತ ಹೆಸರ್ ಬಂದಿರ್‌ದು. ಗೌಡರ ಒಟ್ಟ್ ಜೆನಸಂಕೆಲಿ ಇವ್ಕೆ ಎರ್ಡ್‌ನೆ ಜಾಗೆ ಶೇ. 10. 95 ಒಳೊ. "ಬಂಗಾರ್ ಬೊಳಿಯವರ ಬಾಳಿಕೆ' ತೇಳ್ವ ನುಡಿಕಟ್ಟ್‌ನ ಪ್ರಕಾರ ಇವ್ ಕುಟುಂಬನ ಒಳ್ಳಿ ಬೆಳ್ಸುದರ್‌ಲಿ ನಿಸ್ಸೀಮರ್‌ಂತಹೇಳ್‌ವೆ. ಇದ್ಕೆ ಪೂರಕ ಆಗಿದ್ 'ಬಂಗಾರ್ ಬೊಳಿ ಗೂಡೆ ಮನೆಗೆ ಬಂಗಾರ' ತೇಳ್‌ವ ಗಾದೆನು ಉಟ್ಟು. ಹಿಂಗಾಗಿ ಈ ಬೊಳಿನ ಗೂಡೆಗಳಿಗೆ ಬೇಗ ಮೊದ್ವೆ ಆದೆ. ಹೆಚ್ಚಿಗೆ ನಂದರ ಬೊಳಿಯವರೊಟಿಗೆ ಇವರ ಮೊದ್ವೆ ಸಮ್ಮಂದಗ ಇದ್ದದೆ, 'ಕುಕ್ಕೆತ್ತಿ ಬಲ್ಲು' ತೇಳ್ವ ಹೆಣ್ಣ್ ದೆವ್ವನ ಇವ್ ವಿಸೇಸ ಆಗಿದ್ ಆರಾದನೆ ಮಾಡ್‌ವೆ. ತುಳುನಾಡ್‌ನ ಬಿಲ್ಲವರ್‌ಲಿನು, ಕೊರಗರ್‌ಲಿ, ಬಂಟರ್‌ಲಿ ಬಂಗೇರ ಗೋತ್ರ ಉಟ್ಟು, ಆದರೆ ಅಲ್ಲಿ ಎಲ್ಲಾ ಕಡೆನು ಈ ಬೊಳಿ ಅಯ್ಯೆಂದ ಮಕ್ಕಳ್‌ಗೆ ಬಂದದೆ. ಬೂತಾಳ ಪಾಂಡ್ಯ ಮಾಡ್ತ್ ತೇಳ್ವ ಕಟ್ಟ್‌ಲಿ 'ಬಂಗಾರನಾಯ' ತೇಳ್ವ ಬೊಳಿ ಒಂದ್ಟು.

**ಮೂಲರ ಬೊಳಿ :** ಮೂಲರ ಬೊಳಿ ಜೆನಂಗ ಕಮ್ಮಿ ಒಳದ್. ಇವ್‌ಕೆ ಒಳ್ಳ ಹೆಸರ್ ಮಾಡ್ದ ಬೊಳಿಯವುಂತ ಹೇಳ್‌ವೆ. ಬೊಳಿನ ಹೆಸರ್‌ನ ಆದರ್‌ಸಿ 'ಇವ್ ಪಂಡ್‌ನ ಕುಲಸ್ತರು' ಮತ್ತೆ 'ಗೌಡರ್‌ಗೆ ತಾವೇ ಮೂಲ' ತೇಳಿಕಂಡವೆ. ಇನ್ನು ಕೆಲವರ ಹೇಳಿಕೆಗಳ ಪ್ರಕಾರ ಇವು ಮೂಲತ ಗೌಡ್ರೇ ಅಲ್ಲ, ಮೂಲರ ಸಮುದಾಯದ (ಕುಂಬಾರರು) ಕೆಲವ್ ಗೌಡ ಸಮುದಾಯಕೆ ಸೇರಕುಂತ ಆಸೆ ಮಾಡಿಕನ, ಸೃಂಗೇರಿ ದರ್‌ಮಾದಿಕಾರಿಗ ಅವರ ಗೌಡ ಜಾತಿಗೆ ಸೇರ್‌ಸಿ, 'ಮೂಲ್ಯರ' ಬೊಳಿಂತ ಹೆಸರ್ ಕೊಟ್ಟಂತೇಳುವೆ. ತುಳುನಾಡ್‌ನ ಆಳ್ದ ಅರಸು ಮನೆತನದ ಪೈಕಿ ಬೈಲಂಗಡಿನ ಮೂಲರ್ ತಕ್ಕಮಟ್ಟ್‌ಗೆ ಪ್ರಬಾವ ಸಾಲಿಗ ಆಗಿದ್ದೊ. ಇವು ಸುಳ್ಯ ಸೀಮೆನ ಕಲ್ಮಡ್ಕದ ನೆಲದ ಒಡೆತಯರ್ ಆಗಿದ್ದೊ, ಈ ಅರಸು ಮನೆತನದ ಆಳ್ವಿಕೆಗೆ ಒಳಪಟ್ಟ ಅಲ್ಲೊ ಅವರ ಮೇಲೆ ಅಬಿಮಾನ ಇಸಿಕಂಡ ಗೌಡರ ಒಂದ್ ಗುಂಪು ಮೂಲರ್ ಬೊಳಿಯವುಂತ ಹೇಳಿಕಂಡಿರ್‌ವ ಸಾದ್ಯತೆ ಉಟ್ಟು. ಕಲ್ಮಡ್ಕ ಪರಿಸರಲಿ ಈ ಬೊಳಿಯವರ ಸಂಕೆ ಹೆಚ್ಚಿ ಉಟ್ಟು. ಸಾಮಾನ್ಯ ಆಗಿದ್ ಗೌಡ ಸಮುದಾಯಲಿ ದೂರ ಇಸಿರ್‌ವ ಗುಂಡನ ಬೊಳಿಂದಳೇ ಇವು ಮೊದ್‌ವೆ ಆದವೆಂತೇಳ್ದು ವಿಸೇಸ. ಒಳ್ದಂಗೆ ನಂದ, ಬಂಗ ಮತ್ತೆ ಹೆಮ್ಮನ ಬೊಳಿಂದಳೂ ಸಮ್ಮಂದ ಕುದ್ದದೆ. ಈ ಬೊಳಿನ ಗೂಡೆನ ನಂದರ ಬೊಳಿಯವು ಸಾಮಾನ್ಯ ಆಗಿದ್ ಮೊದ್ವೆ ಆದ್ಲೆ 'ಮೂಲಾರ್ ಬೊಳಿ ಗೂಡೆ' ತಂದರೆ ಹಿರಿಯೊಮ್ಮೆ ಕೇಡ್' ತೇಳ್‌ವ ಮಾತ್‌ನ ಹಿನ್ನೆಲೆಲಿ ನಂದರ ಬೊಳಿಯವ್ ಮೂಲಾರ್ ಬೊಳಿನ ಹೆಣ್ಣ್‌ನ ಮೊದ್ವೆ ಆಕೆ ಒಪ್ಪುದುಲೆ.

ಮೇಲೆ ಹೇಳ್ದ ನಾಕ್ ಬೊಳಿಗ ಗೌಡರ್‌ಲಿ ಮುಕ್ಯ ಬೊಳಿಗತ ಹೇಳಕ್. ದೆವ್ವಂಗ ಈ ನಾಕ್ ಬೊಳಿಯವರನೆ ಕರಿದು ಜಾಸ್ತಿ. ಒಟ್ಟು ಗೌಡರ್‌ಲಿ ಶೇ. 58 ಜೆನಗ ಈ ನಾಕ್ ಬೊಳಿಯವು ಒಳ್ದ ಎಂಟ್ ಬೊಳಿಲಿ ಶೇ. 42ರಸ್ಟ್ ಜೆನಗ ಒಳೊ, 'ನಂದರ ನಂದಾದೀಪ,

ಬಂಗಾರನ ಬಾಳಿಕೆ, ಹೆಚ್ಚಿನ ಹೇಳಿಕೆ, ಮೂಲರನ ಮೂಲ ಸ್ತಾನ' ತೇಳ್ವ ನುಡಿಗಟ್ಟ್‌ಗ ಆಯಾಯ ಬೊಳಿಯವರ ಹಿರಿಮೆನ ಹೇಳ್ದಿ. ಮೊದ್ವೆ ಸಮ್ಮಂದಗ ಈ ನಾಕ್ ಬೊಳಿನ ಒಳೆಗೆ ಹೆಚ್ಚಾಗಿ ನಡಿದರ ಕಾಣಕ್.

**ನಾಯರ್ ಬೊಳಿ :** ನಾಯರ್ ತೇಳಿರೆ ನೇಗಿಲ್‌ತ ಅರ್‌ತ. ನೇಗ್‌ಲ್‌ನ ಕುಲ ಲಾಂಚನ ಆಗಿದ್ದರ್‌ಂದ ಹೆಸರ್ ಬಂದಿರುದು.. ಕೇರಳಲಿ ನಾಯರ್‌ತ ಒಂದ್ ಸಮುದಾಯ ಉಟ್ಟು. ಆದರೆ, ಸಾಂಸ್ಕೃತಿಕ ಆಗಿದ್ ಅವ್ರೂ ಗೌಡರ್‌ಗೂ ಏನೂ ಸಮ್ಮಂದ ಇಲ್ಲೆ. 'ನಾಯರ್' ತೇಳ್‌ವ ದೆವ್ವ ಸುಳ್ಯ ಪರಿಸರಲಿ ಉಟ್ಟು.. ಶೇ. 8. 1ರಸ್ಟ್ ಇರ್‌ವ ಇವು ಮೊದ್ವೆಗೆ ಯಾವ ಬೊಳಿಯವರನು ಆದವೆ. ಗೌಡರ್‌ಗೆ ಕಟ್ಟೆಮನೆ ಆದ ಕೂಜುಗೋಡುನವು ಈ ಬೊಳಿಯವು.

'ನಾಯ' ತೇಳ್ವ ಪದಕೆ 'Leader'ತ ಅರ್‌ತ ಉಟ್ಟು. ಈ ಹಿನ್ನೆಲೆಲಿ ನಾಯಕರ್, ಮಾರ್‌ಗದರ್‌ಶಿಗತ ಹೇಳ್ವ ಅರ್‌ತಲಿ ನಾಯರ್ 'ಬೊಳಿ' ತೇಳ್ದು ಸೃಸ್ಟಿ ಆಗಿರುದು. ಈ ಬೊಳಿಯವ್ ಕೆಲವ್ ಲಿಂಗಾಯತರ ಗೌಡ ಜಾತಿಗೆ ಸೇರ್‌ಸಿಕಂಡಳೊಂತ ಹೇಳ್‌ವೆ.

**ಚಾಲ್ಯರ ಬೊಳಿ :** ಬಟ್ಟೆ ಹೊಲಿವರ ಚಾಲ್ಯೆರ್‌ತ ತುಳುನವ್ ಕರ್‌ದವೆ. ಮೂಡಲಿ ಬಟ್ಟೆ ಹೊಲೆತಿದ್ದ ಗುಂಪೊಂದ್ ಗೌಡ ಸಮುದಾಯಕೆ ಸೇರಿ ಈ ಬೊಳಿನ ಸೃಸ್ಟಿ ಅಗಿರುದು. ಸಾಮಾನ್ಯ ಆಗಿ ಈ ಬೊಳಿಯವೆಲ್ಲ ಶ್ರೀಮಂತರೇ ಆಗಿರ್‌ದು ವಿಸೇಸ. ಸಂಕೆ ದ್ರಿಸ್ಟಿಂದ ಶೇ 5. 4ರಸ್ಟ್ ಒಳೊ. ಇದೇ ಬೊಳಿನ ಸಾಲೆ, ಚಾಲೆ, ಚಾಲ್ಯರ ಬೊಳಿಂತ ಕರ್‌ದವೆ. ಮಲೆಕುಡಿಯರ್‌ಲಿ ಮತ್ತೆ ಬಿಲ್ಲವರ್‌ಲಿ ಇರ್‌ವ 'ಸಾಲಿಯಾನ್' ಬೊಳಿನ ಇದ್ ಹೋಲ್ದೆ. ಸಾಂದಿರ ಬೊಳಿ, ಚಂದಿರ ಬೊಳಿ' ತನೂ ಇದ್‌ಕೆ ಹೆಸರುಟ್ಟು.

**ಗೋಳಿ ಬೊಳಿ :** ಐಗೂರ್‌ಂದ ಸುರುಗೆ ವಲ್‌ಸೆ ಬಂದವ್ ಒಂದ್ ಗೋಳಿ ಮರದ ಬುಡಲಿ ನೆಲೆ ನಿತ್ತದರ್‌ಂದ, ಆ ಮನೆತನಕೆ ಮುಂದೆ 'ಗೋಳಿ ಬೊಳಿ'ತ ಹೆಸರ್ ಬಾತ್‌ಂತ ಹೇಳ್‌ವೆ. ಗೋಳಿ ಮರದ ಬುಡಲಿ ಆಸ್ತಿ ಮಾಡಿ ನೆಲೆ ನಿತ್ತ ಜಾಗೆಗೆ 'ಗೋಳಿಯಡಿ ಬೂಮಿ–ಗೋಳ್ಯಾಡಿ' ತ ಹೆಸರ್ ಬಂದದರ ನೋಡಿರೆ ಮೇಲೆನ ಐತಿಹ್ಯ ನಿಜ ಆಗಿರ್‌ದು. ಸೇಕಡಾ 74ರಸ್ಟ್ ಇರ್‌ವ ಈ ಬೊಳಿಯವ್ ಕಟ್ಟ್‌ನಿಟ್ಟ್‌ನ ಯಾವ ಕಾನೂನ್‌ನ ತಮ್ಮ ಮೇಲೆ ಇಸಿಕಂಡತ್ಲೆ. ಮಲೆಕುಡಿಯರ್‌ಲಿನೂ ಈ ಬೊಳಿ ಉಟ್ಟು. ನಂದರ ಮತ್ತೆ ನಾಯರ್ ಬೊಳಿಯವರೊಟಿಗೆ ಇವರ ಮೊದ್‌ವೆ ಸಮ್ಮಂದ ಹೆಚ್ಚಿ ಇದ್ದದೆ.

**ಗುಂಡನ ಬೊಳಿ :** ಗುಂಡನ ಬೊಳಿಲಿ ಹಾಲುಗುಂಡ ಮತ್ತೆ ಕುತ್ತಿಗುಂಡತ ಎರ್‌ಡ್ ತರ ಉಟ್ಟು. ಮೊದ್ವೆ ಸೌಕರ್‌ಯಕೆ ಹಾಲ್ ಗುಂಡ, ಕುತ್ತಿ ಗುಂಡತ ವೆತ್ಯಾಸನ ಮಾಡಿಕೊಂಡಳೊ.

**ಕಬರ್ ಬೊಳಿ :** ಆ ಮನೆತನಗಂತೇಳಿರೆ ಸುಳ್ಯಕೋಡಿ, ಕೆದಂಬಾಡಿ, ಕೂಟೇಲು, ಕಾನತ್ತಿಲ, ಬಳ್ಳಡ್ಕ, ಕುದ್ಪಾಜೆ, ಕೊಯಿಂಗಾಜೆ, ಪಡ್ಡಂಬೈಲ್ ಪರಿವಾರ ಮತ್ತೆ ಕುಡೆಕಲ್ಲ್. ಇವರ ಬಗೆ ಒಂದ್ ಕತೆ ಹೀಂಗೆ ಉಟ್ಟು. 'ಗಟ್ಟದ ಮೇಲೆಂದ ಎತ್ತ್‌ನ ತೇರ್ ತೆಕಂಡ್ ಇಬ್ಬರ್ ಲಿಂಗಾಯತರ್ ಸುಬ್ರಹ್ಮಣ್ಯಕೆ ಬಂದೊಗಡ. ಸಸ್ಟಿ ಮುಗ್ದ ಮೇಲೆ ಅವು ಹಿಂದಕೆ ತಿರ್‌ಗಿ ಹೋಗದೆ ಸುಳ್ಯದ ಕಡೆ ಮುಂದ್‌ವರ್‌ದ್ ಬಂದ್ ಬಳ್ಳಡ್ಕಲಿ ನೆಲೆನಿತ್ತೊ. ಅಲ್ಲಿ ಅಡ್ಗೆ ಮಾಡಿ ಉಂಡ್, ಚಕ್ಕೆ ಅಡರ್‌ಗೆ ಕಿಚ್ಚಿ ಹಾಕಿ ಚಳಿಕಾಸಿಕಂಡ್ ಕತ್ತಲೆಗೆ ಮಲ್ಗಿದೋ, ಬೊಳ್ಪುಗೆದ್ದ್ ನೋಡಿಕನ 'ಚಕ್ಕೆ' ದೈ ಅಡರ್ ಹೊತ್ತಿದಲ್ಲಿ ಬೊಳ್ಪಾದರ್‌ನೂ ಕಿಚ್ಚಿಹಾಕಿದ ಜಾಗೆಲಿ ಇನ್ನೂ ಕೆಂಡ ಇರ್‌ದರ ನೋಡಿ, ಇದ್ ಕಾರಣಿಕ ಜಾಗೆಂತ ಗೊತ್ತ್‌ಮಾಡಿಕಂಡೊ. ಇಬ್ಬರ್‌ಲಿ ಸಣ್ಣವ ಅಲ್ಲೆ ನೆಲೆ ನಿತ್ತತ್. ಹಿರಿಯಂವ ಕಾಸರಗೋಡಿನ ಕಡೆಗೆ ಮುಂದುವರ್‌ದ್ ಮಾಯಿಪ್ಪಾಡಿಲಿ ನೆಲೆನಿತ್ತ್ ಮುಂದೆ ಅಲ್ಲಿ ರಾಜ ಆತ್. ಬಳ್ಳಡ್ಕಲಿ ನೆಲೆನಿತ್ತ ಲಿಂಗಾಯತ ಗೌಡ ಜಾತಿಗೆ ಸೇರಕುತ ಮನ್ಸ್‌ಮಾಡ್ತ್. ನಾಯರ್ ಬೊಳಿಯವ್ ಅಂವನ ಜಾತಿಗೆ ಸೇರ್‌ಸಿಕಂಡ್ ತಮ್ಮ ಬೊಳಿನ ಕಬರ್‌ತ ಹೇಳಿಕಂಡೊ. ಮಾಣಿಬೆಟ್ಟ್‌ನ ಹೆಮ್ಮನ ಬೊಳಿನ ಗೌಡ್ರ್ ಅವಂಗೆ ದೈರ್‌ಯ ಆಗಿ ಹೆಣ್ಣ್ ಕೊಟ್ಟೊ. ಅಂದ್‌ಂದ ಕಬರ್ ಬೊಳಿ ಗೌಡರ ಒಂದ್ ಬಾಗ ಆತ್. ಕಬರ್ ಬೊಳಿನ ಕೂಡ್ ಬೊಳಿಂತನೂ ಗುರ್‌ತ್‌ಸುವೆ.

ಕಬರ್ ಬೊಳಿಯವೆಲ್ಲ ಮೂಲಲಿ ಲಿಂಗಾಯತರ್ ತೆಳ್‌ವ ಮಾತ್ ಉಟ್ಟು. ಈ ಬೊಳಿಯವ್ ಮನೆಲಿ ಮಾಸ ತಿಂಬಕೆ, ಹೆಂಡ ಕುಡ್ಯಕಾಗದ್‌ತ ನಂಬಿಕೆ ಉಟ್ಟು. ಒಟ್ಟಿಗೆ ಇವು ಮಹಾ ಸಿವರಾತ್ರೆನ ಗೌಜಿಂದ ನಡ್ಸ್‌ವೆ. ಇತರ ಬೊಳಿಗೆ ಸೇರ್‌ದ ಗೌಡ್ರ್ ಆ ಊರ್‌ನ ದೆವ್ವ ದೇವ್ರ್‌ಗಳಿಗೆ ಹರ್‌ಕೆ ಒಪ್ಪುಸಿದ ಹಾಂಗೆ ಇವು ಹರ್‌ಕೆ ಒಪ್ಪುಸುದುಲೆ. ಇವು ಮೂಲ ನೆಲೆಂತ ಹೇಳಿಕಂಬ ಬಳ್ಳಡ್ಕ ಕುಮಾರಸ್ವಾಮಿ ದೇಸ್ತಾನನ ಪ್ರತ್ಯೇಕ ಆಗಿ ಕಟ್ಟಿಕಂಡ್ ಪೂಜೆ ನಡ್ಸ್‌ವೆ.

ಕಬರ್ ಬೊಳಿಯವ್ ವಲಸೆ ಬಾಕೆ ಮುಂದೆನೆ ಲಿಂಗಾಯತರ್ ಆಗಿದ್ದೊ. ಈಗ ಎಲ್ಲಾ ಬೊಳಿಯವರೊಟ್‌ಗೆ ಮೊದ್ವೆ ಸಮ್ಮಂದ ನಡ್ಸುವೆ. ಅದರೆ 'ನಾಯರ್' ಬೊಳಿಯವರೊಟ್‌ಗೆ ನೆಂಟಸ್ತಿಗೆ ಇಲ್ಲೆ. ಇದೇರ್‌ಡೂ 'ಕೂಡು ಬೊಳಿ'ತೇಳ್‌ವೆ. ಜಾತಿಗೆ ಸೇರ್‌ಸಿಕಂಡ ಕಟ್ಟೆಮನೆನ ನಾಯರ್ ಬೊಳಿಯವ್ ಕಬರ್ ಬೊಳಿಯವರ ಅಣ್ಣತಮ್ಮಂದರಾಂಗೆ ಕಂಡವೆ. ಸುಳ್ಯ ಪರಿಸರಲಿ ಇಂದ್‌ಗೂ ನಾಯರ್ ಬೊಳಿಯವರ ಮತ್ತೆ ಕಬರ್ ಬೊಳಿಯವ್ ಒಂದೇಂತ ಎಲ್ಲ ನೆನ್ಸಿಕಂಡವೆ.

ಇದ್ ಲಿಂಗಾಯತ ಕುಟುಂಬಗ ಸುಳ್ಯ ಪರಿಸರಕೆ ವಲ್‌ಸೆ ಬಂದ ಮೇಲೆ ನಡ್‌ದಿರುದು.. ಕ್ರಿ. ಶ. 1835ರ ಅಮರ ಸುಳ್ಯದ ಹೋರಾಟಲಿ ಮುಂದೆ ಇದ್ದ ಕೆದಂಬಾಡಿ ರಾಮ ಗೌಡ, ಕುಡೆಕಲ್ಲು ಪುಟ್ಟ ಗೌಡ ಇವೆಲ್ಲ ಕಬರ್ ಬೊಳಿಯವಾಗಿದ್ದೊ. ಕ್ರಿ. ಶ. 1600ರ್‌ಲಿ ಸುಳ್ಯ ಸೀಮೆ ಇಕ್ಕೇರಿ ನಾಯಕರ ಆಡೆಳ್ತಿಗೆಗೆ ಒಳಪಟ್ಟಿತ್. ಇಕ್ಕೇರಿ ಅರಸರ್ ಲಿಂಗಾಯತರಾದ್ದಂರ್‌ದ, ಅವರ ಆಳ್ವಿಕೆನ ಕಾಲಲಿ ಸಾಕಸ್ಟ್ ಲಿಂಗಾಯತರ್ ಸುಳ್ಯ ಸೀಮೆಗೆ ಬಂದಿರುವೊ. ಕ್ರಿ. ಶ. 1600ಕಾಕನ ಗೌಡ್ರ್ ಸುಳ್ಯ ಪರಿಸರಲಿ ಗಟ್ಟಿ ಆಗಿದ್ದೊ. ಆ ಕಾಲಕೆ

ಮೊದ್‌ವೆನು ಸೇರ್‌ದಂಗೆ, ಕೆಲವ್ ಅನುಕೂಲಕಾಗಿ ಲಿಂಗಾಯತರ್ ಗೌಡ ಸಮುದಾಯದೊಟ್ಟಿಗೆ ಸೇರಿಕಂಡಿರಕು. ಪಡ್ಡಂಬೈಲ್‌ನ ಕಬರ್ ಬೊಳಿಯವು 'ನಾವ್ ಇಸ್ವಲಿಂಗನ ತಿರುಪತಿ ದೇವರ ಮುಡಿಗೆ ಹಾಕಿ ಗೌಡರ್ ಆದೋ' ತ ಹೇಳ್‌ವೆ. ಇಂದ್‌ಗೂ ಕೆಲವ್ ಬೇರೆನೆ ಆದ ವಿಸೇಸತೆನ ಒಳ್ಸಿಕಂಡಿರ್‌ವೊ ಕಬರ್ ಬೊಳಿಯವು ಗೌಡರೊಟಿಗೆ ಬೇದಬಾವ ಇಲ್ಲದೆ ಒಂದಾಗಿದ್ ಒಳೊ. ಜೆನಸಂಕೆಲಿ ಇವ್ ಶೇ 2. 1 ಒಳೋ. ತುಳುಲಿ ಇವರ ಕರ್‌ಂಬೆರ್ ಬರಿತಕ್‌ಲ್‌ತ ತೇಳ್‌ವೆ

**ಚಿತ್ತರ್ ಬೊಳಿ :** ಚಿತ್ರ ಬರೆವ ಕೆಲ್ಸ ಮಾಡವ್‌ಂತೇಳ್‌ವೆ. ಆದರೆ ಈಗ ಈ ಬೊಳಿಲಿ ತ ಕಲಾವಿದಂಗೇನ್ ಇಲ್ಲೆ. ಶೇ 3. 5ರಸ್ಟ್ ಇರ್‌ವ ಈ ಬೊಳಿಯವರ್‌ಲಿ ಹೇಳಿಕಂಬಂತ ವಿಸೇಸಗ ಏನಿಲ್ಲೆ. ಇವು ಎಲ್ಲಾ ಬೊಳಿನ ಜೆನರೊಟಿಗೆ ಮೊದ್‌ವೆ ಸಮ್ಮಂದ ಇಸಿಕಂಡವೆ.

**ಗೌಡ್ರ ಬೊಳಿ :** ಗೌಡ್ರ ಬೊಳಿನ 'ವಾಗ'ಬೊಳಿಂತನೂ ಕರ್‌ದವೆ.. 'ದೇವರ್ ಉಚ್ಚೆ ಹೊಯ್ಯಕಂಡಿರಿಕನ ಕೊಟ್ಟ ಬೊಳಿ ಅದ್' ತೇಳ್‌ದು ವಾಡಿಕೆನ ಮಾತ್, ಶೇ. 4. 9ರಸ್ಟ್ ಇವರ ಸಂಕೆ ಉಟ್ಟು. ಎಲ್ಲ ಬೊಳಿಯವರೊಟಿಗೆ ಇವರ ಮೊದ್‌ವೆ ಸಮ್ಮಂದ ನಡ್ದದೆ.

**ಬಳಸನ್ನ ಬೊಳಿ :** ತುಳುಲಿ ಬಳಸನ್ನ ಬೊಳಿನ 'ಬರ್‌ಸನ್ನ' ಬೊಳಿತ ಕರ್‌ದವೆ. ಬರ್‌ಸನ ತೇಳಿರೆ ಗೋದಿತ ಅರ್‌ತ. ಗೋದಿ ಬೆಳ್ಸುವ ಕೆಲ್ಸನ ಮುಕ್ಯ ಆಗಿ ಮಾಡ್ತಿದ್ದವು ಆಗಿರುದು. ಆದರೆ ಈಗ ಸುಳ್ಯ ಪರಿಸರಲಿ ಗೋದಿ ಬೆಳೆ ಇಲ್ಲೆ. ಈ ಬೊಳಿಯವ್ ಸುಳ್ಯ ಪರಿಸರಲಿ ಕಮ್ಮಿ ಆದರೆ ಪುತ್ತೂರು, ವಿಟ್ಲ ಪರಿಸರಲಿ ಕೆಲವ್ ಕುಟುಂಬಗ ಒಳೊ. ಇವ್ ತುಳು ಮಾತಾಡುವೆ.

ಮೇಲೆ ಹೇಳ್ದ 12 ಬೊಳಿನ ಜೆನಗ ಇಂದ್‌ಗೂ ಸುಳ್ಯ ಪುತ್ತೂರ್‌ಲಿ ಒಳೊ. ಮೊದ್‌ವೆಗಾಕನ ಹೇಳ್‌ವ ಹತ್ತ್ ಕುಟುಂಬ ಹದಿನೆಂಟು ಗೋತ್ರ ತೇಳ್‌ವ ಮಾತ್‌ನ ಹೇಳಿಕೆ ಉಟ್ಟು.

ಗೌಡರ್‌ಲಿ ಒಂದೇ ಬೊಳಿನೊಳಗೆ ಮೊದ್‌ವೆ ಆದಕೆ ಒಪ್ಪಿಗೆ ಇಲ್ಲೆ. ಬಂದು ಬಳಗದವ್ ಯಾರೂ ಇಲ್ಲದೆ, ಅನಾತ ಆಗಿ ಯಾರಾರ್ ಸತ್ತರೆ, ಅಂವನ ಬೊಳಿಯವ್ ಕ್ರಮಕೆ ನಿತ್ತ್ ನಡ್ಸಿಕೊಡಕ್. (ಪಿ.ಬಿ.)

**ಮೊದ್‌ವೆ ಕ್ರಮಗ :** ಭಾರತದವರ ಬೊದ್ಕ್‌ನ ದಾರಿಲಿ ಮೊಯಿಂಸ ಒಬ್ಬನ ಮೊದ್‌ವೆಗೆ ಬಾರಿ ಬೆಲೆ ಉಟ್ಟು. ಮೊದ್‌ವೆನ ಸಂಪ್ರದಾಯಬದ್ದ ಆಗಿದೇ ಆಚರಣೆ ಮಾಡ್‌ವೆ. ಗೌಡ್ರ್‌ಲಿನು ಈ ಮೊದ್ವೆ ತ ಹೇಳ್ದು ಅವರ ಬೊದ್ಕ್‌ನ ಮುಕ್ಯ ಸಂಗತಿ ತ ಹೇಳ್ರೆ ತಪ್ಪಾಕಿಲೆ.

ಗೌಡ್ರ್‌ಗ ಮನೆತನದ ಗೌರವನ ಒಳ್ಸಿಕಂಡೇ ಮೊದ್ವೆ ಆಕು ತ ಹೇಳ್ವೆ. ತಮ್ಮಂದ ಕೆಳಗೆನ ಮಟ್ಟ್‌ಲಿ ಇರೋವರೊಟ್ಟಿಗೆ ಮೊದ್ವೆ ಮಾಡ್ತುಲೆ. ಮೊದ್ವೆ ಮಾಡಿಕೆ ಬೊಳಿಗಳ ಆಯ್ಕೆನೂ ಇಲ್ಲಿ ಮುಕ್ಯ. ಎಲ್ಲಾ ಬೊಳಿಗಳೊಟ್ಟಿಗೆ ಮೊದ್ವೆ ನಡೆಲ್ಲೆ. ಬೊಳಿನೂ ಕೂಡಿ ಬರೊಕು. ಒಟ್ಟ್ 12 ಬೊಳಿಗ ಇದ್ದ್, ಅದರ್‌ಲಿ ಒಳ್ಳೆದ್ ತ ಕಂಡ್ ಬಂದ ಬೊಳಿಯವರೊಟ್ಟಿಗೆ ಸಮ್ಮಂದ ಕುದ್ರುಸುದು. ಅಸ್ಟೇ ಅಲ್ಲದೆ ಅವರ ಮನೆತನ, ಜಾಗೆಜಮ್ಮ, ರೂಪ–ಲಾವಣ್ಯ, ಜಾತಕನೂ ಕೂಡಿ ಬರೊಕು. ಕೆಲವೊಮ್ಮೆ ಎಲ್ಲಾ ಸೆರಿ ಬಂದರೂ ಬೊಳಿ ಒಂದೇ ಇದ್ದರೆ ಆದುಲೆ. ಇಲ್ಲಿ ಬೊಳಿ ಕೂಡಿ ಬಾದೇ ಮುಕ್ಯ.

ಒಂದೇ ಬೊಳಿಯೊಳಗೆ ಮೊದ್ವೆ ಮಾಡಿಕೆ ಬೊತ್ತು. ಒಂದೇ ಬೊಳಿಯೊವ್ ಅಣ್ಣ ತಂಗೆ ಆದವೆ ತೇಳ್‌ವ ನಂಬಿಕೆ ಉಟ್ಟು. ಆದರೂ ಹೆಚ್ಚ್ ಜೆನ ಇರ್‌ವ ನಂದರ ಮತ್ತೆ ಹೆಮ್ಮನ ಬೊಳಿಲಿ ಇಂತ ಮೊದ್ವೆ ನಡ್ದ ಉದಾರಣೆಗ ಒಳ. ಹೆಚ್ಚ್ ಪ್ರತಿಸ್ಟಿತ ಬೊಳಿಗ ಅಂದರೆ ಮೂಲರ, ಬಂಗಾರ, ಹೆಮ್ಮನ ಮತೆ ನಂದರ ಬೊಳಿಯೊಳಗೆ ಕಸ್ಟದ ನಿಯಮಗ ಉಟ್ಟು. ಒಳ್ದ ಬೊಳಿಯೊವ್ ಉದಾರಿಗ ಅಲ್ಲಿ ಸಡಿಲಿಕೆ ಉಟ್ಟು. ಎಲ್ಲಾ ಒಪ್ಪಿಗೆ ಆದರೆ ಗೂಡೆ ನೋಡ್‌ವ ಕಾರ್‌ಯ ನಡ್ದದೆ.

**ಗೂಡೆ ನೋಡ್ದು :** 'ಗೋಡೆ ನೋಡ್ದು' ತ ಹೇಳ್ರೆ ಗೂಡೆನ ಮನೆಯೊವುಕೆ ಮೊದ್ವೆ ಸಮ್ಮಂದ ಸರಿಕಂಡರೆ ಗಂಡ್‌ನ ಕಡೆವರ ಮನೆಗೆ ಕರ್‌ದವೆ. ಒಂದ್ ಒಳ್ಳೆ ದಿನನೋಡಿ ಗಂಡ್ ಮತ್ತೆ ಗಂಡ್‌ನ ಕಡೆನ ಮುಕ್ಯದೊವ್ ಗೂಡೆನಮನೆಗೆ ಬಂದವೆ. ಅಲ್ಲಿ ಆ ದಿನ ಉಂಬಕ್ಕೆ ಗಮ್ಮತ್ತ್ ಮಾಡ್‌ವೆ. ಹುಡ್‌ಗನ ಕಡೆವ್‌ಕೆ ನೀರ್ ಕೊಡಿಕನ ಅಲ್ಲರ್ ಊಟ ಬಳ್ಸಿಕನ ಹೂ ಮುಡ್ದ್ ಅಲಂಕಾರ ಮಾಡಿಕಂಡ್ ಇದ್ದ ಗೂಡೆ ಹೊರಗೆ ಬಂದದೆ. ಆ ಹೊತ್ತುಗೆ ಹುಡ್ಗ ಗೂಡೆನ ಗೂಡೆ ಹುಡ್ಗನ ನೋಡಿಕಣಕು. ಗೂಡೆ ನಾಚಿಕಂಬೊದು ತಲೆ ತಗ್ಗ್‌ಸಿದೆ. ಗಂಡ್‌ನ ಕಡೆವ್ ಗೂಡೆನ್ ನಡೆ ನುಡಿ ಮತ್ತೆ ಗೂಡೆನ ಕಾಲ್‌ಗಳ ಎಚ್ಚರಿಕೆಂದ ನೋಡ್ವೆ. ಊಟ ಆದ ಮೇಲೆ ಆ ದಿನನೇ ಗಂಡ್‌ನ ಕಡೆನೊವ್ ವಾಪಾಸ್ ಹೋದವೆ. ಗೂಡೆನ ಕಡೆನೊವ್ ಗೂಡೆನೊಟ್ಟಿಗೂ ಗಂಡ್‌ನ ಕಡೆನೊವ್ ಗಂಡ್‌ನೊಟ್ಟಿಗೂ ಒಪ್ಪಿಗೆ ಕೇಳುವೆ. ಗಂಡ್ ಹೆಣ್ಣ್ ತಲೆ ಅಲ್ಲಾಡ್ಸಿರೆ ಸಾಕ್. ಮನೆಯೊವ್ ದಲ್ಲಾಳಿನ ಒಟ್ಟಿಗೆ ಹೇಳ್‌ವೆ. ಎರ್‌ಡ್ ಮನೆಯೊವರ ಒಪ್ಪಿಗೆ ಇದ್ದರೆ ಗಂಡ್‌ನ ಕಡೆಯೊವ್ ಗೂಡೆನ ಕಡೆವರ ಮನೆಗೆ ಕರ್‌ದವೆ. ಗೂಡೆನ ಕಡೆವು ಹೈದನ ಮನೆಗೆ ಬಂದ್ ಅವರ ಜಾಗೆ, ಮನೆ, ಕುಟುಂಬನ ನೋಡಿ ವಿಚಾರ್‌ಸಿ ನಮ್ಮ ಗೂಡೆಗೆ ಆದೋ ಇಲ್ಲೆನೋ ತ ತೀರ್‌ಮಾನ್‌ಸುವೆ. ಇಲ್ಲಿ ಗೂಡೆನ ಕಡೆನೊವ್ ಮಾಡ್ದ ಸಮ್ಮನಕ್ಕಿಂತ ಹೆಚ್ಚಿನ ಸಮ್ಮನ ಹೈದನ ಕಡೆನೊವ್ ಮಾಡ್ವೆ. ಇದಾದ ಮೇಲೆ ಗೂಡೆ ಮತ್ತೆ ಹೈದನ ಜಾತಕನ ಜೋಯಿಸರ್‌ಲಿ ತೋರ್‌ಸುವೆ. ಅವ್ ಜಾತಕ ನೋಡಿ ಒಳ್ಳೆದ್ ಕೆಟ್ಟದ್ ಹೇಳ್‌ವೆ. ಜಾತಕ ಕೂಡಿ ಬಾತ್ಲೆರ್ ಎರ್‌ಡ್ ಕಡೆನೊವ್ ದೇಸ್ತಾನ ಕ್ಕೆ ಹೋಗಿ ಹೂ ತೆಗ್ಗಿ ನೋಡ್ತುವೆ. ದೇವರ ಎಡಕ್ಕೆ ಹೂ ಬಿದ್ದರೆ ಮೊದ್ವೆ ನಿತ್ತದೆ, ಬಲಕ್ಕೆ ಬಿದ್ದರೆ ಮೊದ್ವೆ ದಿನ ಗೊತ್ತ್ ಮಾಡ್ವೆ.

**ದಿನ ನಿಸ್ಚಯ ಮಾಡ್ದು :** ಮೊದ್ವೆ ದಿನನ ಗೂಡೆನ ಮನೆಲೆ ನಿಸ್ಚಯ ಮಾಡ್‌ವೆ. ನಿಗಂಟ್ ಮಾಡ್ದ ಒಳ್ಳೆ ದಿನದಂದ್ ಹೈದನ ಕಡೆನೊವ್ ಊರ್ ಗೌಡ್ರ್ ಒಟ್ಟಿಗೆ ಬಂದ[illegible] ಆ ದಿನ ಹೈದ ಹೋಕೆ




ಇಲ್ಲೆ. ಪಂಚಾಂಗ ನೋಡಿ ಒಂದ್ ಮೂಹುರ್ತ ಇಸುವೆ. ಅಲ್ಲಿ ಹಕ್ಕಲೆನ ಬಟ್ರೊಟಿಗೆ ಇದರ ಕೇಳ್ವೆ. ಮತ್ತೆ ಕೊಡ್ದು ತಾವ ವಿಚಾರ ಅಂದರೆ ವರದಕ್ಷಿಣೆ ಮತ್ತೆ ಗೂಡೆಗೆ ಹಾಕ್‌ವ ಚಿನ್ನದ ವಿಚಾರಗಳ ಇಲ್ಲಿಮಾತಾಡುವೆ. ವರದಕ್ಷಿಣೆ ಕೊಡಿಕೆ ಇದ್ದರೆ ಅದೇ ದಿನ ಕೊಟ್ಟವೆ. ದಿನ ಗಳಿಗೆ ಗೊತ್ತಾದ ಮೇಲೆ ಎರ್‌ಡ್ ಕಡೆನೊವ್ ಮೊದ್ವೆ ಕಾಗದ ಮಾಡ್ಸುವೆ. ಮತ್ತೆ ಅದರ ನೆಂಟ್ರ್‌ಗಳಿಗೆ ಕೊಟ್ಟವೆ. ಕುಟುಂಬದೊವ್ಕೆ ವೀಳ್ಯ ಕೊಟ್ಟು ಹೇಳ್ವೆ. ಈ ಕೆಲ್ಸನ ಮನೆ ಹಿರಿಯೊವ್ ಮಾಡ್ವೆ. ಅವ್ ಒಂದ್ ಚೀಲಲಿ ಎಲೆ ಮತ್ತೆ ಅಡ್ಕೆ ಹಿಡ್ಕಣ್ ಮನೆ ಮನೆಗೆ ಹೋಗಿ ಅಲ್ಲಿ ಹರಿವಾಣಲಿ 5 ಎಲೆ ಅಡ್ಕೆ ಇಸಿ ತಲೆಗೆ ಮುಂಡಾಸ್ ಕಟ್ಟಿ ಪಂಚೆ ಇಳ್ಸಿ ಮೂಡ ಕ್ಕೆ ಮೋರೆ ಮಾಡು ನಿತ್ತ್ ಯಾರಿಗೆ ಯಾರೊಟ್ಟಿಗೆ ಯಾವ ದಿನ ಎಲ್ಲಿ ಮೊದ್ವೆ ತ ಹೇಳ್ವೆ. ಹೈದನ ಅಮ್ಮನ ತಮ್ಮ ಇಲ್ಲರ್ ಅಣ್ಣ ಸೋದರ ಮಾವ ಆಗಿದ್ದ್ ಅವ್ ಅಳಿಯನ ಕರ್‌ಸಿ ಗಮ್ಮೊತ್‌ನ ಊಟ ಹಾಕ್ಸಿ ಅಳಿಯಂಗೆ ಚಿನ್ನದ ಚೈನ್‌ಹಾಕಿ ಮೊದ್‌ವೆಗೆ ಆಶೀರ್‌ವಾದ ಮಾಡ್ದೆ. ಗೂಡೆನ ಸೋದರಮಾವನು ಹಿಂಗೆ ಮಾಡ್ವೆ. ಮೊದ್ವೆಲಿ ಸೋದರ ಮಾವಂಗೆ ಹೆಚ್ಚ್‌ನ ಗೌರವ ಉಟ್ಟು.

**ಮೊದು ಮಜ್ಜನ ಮನೆಲಿ ನಡೆವ ಕಾರ್‌ಯಕ್ರಮಗ :** ಮೊದ್‌ವೆನ ಹಿಂದೆನ ಕತ್ತಲೆಗೆ ಮೊದು ಮಜ್ಜನ ಮನೆಲಿ ಮೊದುರೆಂಗಿ ಶಾಸ್ತ್ರ ನಡ್ದದೆ. ಇದ್ಕೆ ಕುಟುಂಬದೊವ್ ಊರ್‌ನೊವ್, ನೆಂಟ್ರ್‌ಗ ಎಲ್ಲಾ ಬಂದವೆ.

ಸುರುಗೆ, ಮೊದುಮಜ್ಜನ ಮನೆ ಒಳಗೆ ಕನ್ನೆ ಕಂಬದ ಬುಡಲಿ ಒಂದ್ ಮಣೆ ಹಾಕಿ ಕುದ್ರುಸುವೆ. ಅಂವನ ಎದ್ರ್‌ಗೆ ಹಸೆ ಬರ್‌ದ್ ಅದರ ಮೇಲೆ ಬಾಳೆ ಎಲೆ ಹಾಕಿ ಅದ್ಕೆ ಬೆಳ್ತಿಗೆ ಅಕ್ಕಿ ಹಾಕಿ ಇಸುವೆ. ಒಂದ್ ಪುಡೆಲಿ ದೇವ್ರ್‌ಗೆತ ದೀಪ ಹೊತ್ತುಸಿ ಇಸುವೆ. ದೀಪದ ಹಕ್ಕಲೆ ಒಂದ್ ಬಟ್ಲ್‌ಲಿ ಅರಶಿನನ ತೆಳ್ಳಂಗೆ ಮಾಡಿ ಇಸುವೆ. ಮುತ್ತೈದೆ ಒಂದ್ ಬಂದ್ ದೇವರ ದೀಪಕ್ಕೆ ಕೈಮುಗ್ದ್ ಮೊದು ಮಜ್ಜಂಗೆ ಅಕ್ಕಿ ಹಾಕಿ ಅರ್‌ಶಿಣನ ಅಂವನ ಮೊಯ್‌ಗೆ ಪೊರ್‌ಲು ಪೂಜುವೆ. ಹಿಂಗೆ ಐದ್ ಜೆನ ಮುತ್ತೈದೆಯರ್ ಮಾಡ್ವೆ. ಈ ಅರ್‌ಶಿಣ ಶಾಸ್ತ್ರ ಆಕನ ಸುಮಂಗಲೆಯರ್ ಸೋಬಾನೆ ಹೇಳ್ವೆ. ಅದ್ ಹಿಂಗೆ ಉಟ್ಟು.

ಸಾಲು ಪಟ್ಟೆಯ ಕಟ್ಟಿ ಮೇಲು ಪಟ್ಟಿಯ ಕಟ್ಟಿ
ಶಿವ ಶಿವ ಶಂಕರನಿಗೆ ಶರಣವನ್ನು ಮಾಡಿ
ಮೂಡಣ ಹೊಲಕ್ಕೋಗಿ ಹಸಿ ಗರಿಕೆ ತಂದೀಗ
ಎಣ್ಣೆ ಅರಸಿನಕೆ ಹದವಾದೋ
ನೀರೆಯರೈವರು ಬನ್ನಿ ಮುತ್ತೈದೆಯರು ಬನ್ನಿ
ಹತ್ತಾರು ಬೆರಳುಗಳ ಸಮನಿರಿಸಿ ಒತ್ತುತ್ತಾ
ಎಣ್ಣೆ ಅರಸಿನವ ಮಾಡಿ ಶಿವ ಶಿವ

ಅಸ್ಪೊತ್ತಿಗಾಕನ ಊರ್ ಗೌಡ ಅಲ್ಲಿಗೆ ಬಂದ್ ಮೊದುಮಜ್ಜನ ಎದ್ರ್ ನಿತ್ತ್ ಎರ್‌ಡ್ ಕೈ ಜೋಡ್ಸಿ ಮುಗ್ದ್ ಸಬೆನವರೊಟಿಗೆ ಕೇಳಿ ಮೊದುಮಜ್ಜನ ಗಂಟ್ಲ್‌ಗೆ ಚಿನ್ನದ ತಗಡ್‌ನ ಮೂರ್‌ತಮಣಿನ ಕಟ್ಟಿದೆ. ಇದಾದ ಮೇಲೆ ಮೊದುಮಜ್ಜ 'ಹಸಿಮೊದುಮಜ್ಜ' ತ ಕರ್‌ಸಿಕಂದೆ. ಈಕಾರ್‌ಯ ಆದ ಮೇಲೆಮೊದುಮಜ್ಜ ಒಬ್ಬನೇ ಎಲ್ಲಿಗೂ ಹೋಕೆ ಆಗದ್. ಮತ್ತೆ ಮೊದುಮಜ್ಜನ ಮೀಸ್‌ವೆ. ಬಿಳಿ ಬಟ್ಟೆ ಉಡ್ಸಿ ಮತ್ತೆ ಚಪ್ಪರದಡಿಲಿ ಕುದ್ರುಸಿ, ಮತ್ತೆ ಅರ್‌ಸಿನ ಪೂಜುವೆ. ಕೆಲವ್ ಕಡೆ 'ಎಣ್ಣೆ ಅರ್‌ಶಿಣ 'ಶಾಸ್ತ್ರ ಅಂತನೂ ಕರ್‌ದವೆ. ಎಣ್ಣೆ ಅರ್‌ಶಿಣ ಆದ ಮೇಲೆ ಮೊದುಮಜ್ಜನ ಮೀಸಿ ಚಪ್ಪರದಡಿಗೆ ಕರ್‌ಕಂಡ್ ಬಂದವೆ. ಚಪ್ಪರ್‌ದಡಿಗೆ ಬಾಕನ ಮುತ್ತೈದೆಯರ್ ಸೋಬಾನೆ ಹಾಡ್‌ವೆ.

ಮಂಗಳಾರತಿ ಎತ್ತಿದರು ರಂಗೆಯರು ರಂಗನಾತನಿಗೆ
ಸಂಭ್ರಮವೆಂದರೆ ಮೂರು ಲೋಕವನು ಒಲಿದು ಪಾಲಿಸುವಗೆ
ನೀಲಮೇಗ ಶಾಮನಿಗೆ ಕರುಣಾಪಾಲ ಕಮಲನಾಬನಿಗೆ
ಸುರುಚೀರ ಗಂಬೀರ ಹರಿಗೆ ರಂಗನಾತಗೆ
ಜಗನ್ನಾತಗೆ ಮಂಗಳಾರತಿ ಎತ್ತಿದರು

ಆರತಿ ಎತ್ತಿದ ಮೇಲೆ ಮೊದುಮಜ್ಜನ ಸೀದಾ ಮನೆ ಒಳಗೆ ಕರ್‌ಕಂಡ್ ಹೋಗಿ, ಜಗ್‌ಲಿಲಿ ಅಲ್ಲರ್ ಮಂಟಪದಡಿಲಿ ಮೊಂದ್ರಿ ಹಾಕಿ ಕುದ್ರುಸುವೆ. ಅಂವನ ಬಲಮತ್ತೆ ಎಡ ಕೈಗೆ ಗೂಡೆಗ ಮೊದ್ರೆಂಗಿ ಇಸುವೆ. ಕೈಲಿ ಸೂರ್‌ಯ ಮತ್ತೆ ಚಂದ್ರನ ಚಿತ್ರ ಬುಡ್ಸುವೆ. ಅದರೊಟ್ಟಿಗೆ ಬೇರೆ ಚಿತ್ರಗಳ ಮಾಡ್ಜೆ. ಹಂಗೆ ಮೊದ್‌ರೆಂಗಿ ಇಸಿಕನನು ಮುತ್ತೈದೆಯರ್ ಶ್ರೀ ಕೃಷ್ಣಂಗೆ ತಂಗೆಕ ಮೊದ್‌ರೆಂಗಿ ಇಸಿದ ಕತೆನ ಹಾಡ್ ಮಾಡಿಕಂಡ್ ಹೇಳ್ವೆ. ಆ ಹಾಡ್ ಹಿಂಗೆ ಉಟ್ಟು.

ರುಕ್ಕಿಣಿ ಎಂಬವರಿಗೆ ದಿನವೆಂಟರೊಳಗೆ
ಸುಬಲಗ್ನವೆಂದಾರು ಸೋಬಾನೆ
ಅಣ್ಣ ಕೇಳಣ್ಣ ಶ್ರೀಕೃಸ್ಣ ನಿನಗೀಗ
ತಂದಿರ್‌ಪೆನರಮನೆಯ
ಮುಂದೆ ಉಂಟೆಂದೆನುತ
ಚೌಕಿಯರ ಮನೆಯ ಮುಂದೆ ನಡೆದಾಳು
ಎಣ್ಣೆಗೆ ಹಿರಿಯಕ್ಕ ದೌಪದಿ ನೀನೀಗ
ಮದುರಂಗಿ ಪಯಣಕ್ಕೆ ಹೊರಡುವ ಸಮಯಾ
ನಾಲ್ವರು ಸತಿಯಾರು ಕರೆದಾರೂ ತಂದಿರ್ಪೆನರಮನೆಯ

ಮೊದ್‌ರೆಂಗಿಗೆ ಕುದ್ದಲ್ಲಿಂದ ಮೊದುಮಜ್ಜನ ಊರ್ ಗೌಡ ಕೈ ಹಿಡ್ದ್ ಎದ್ರ್‌ಸಿದೆ. ಮತ್ತೆ ಗಡ್ಡ ತೆಗ್‌ದ್ ಕೂದಲ್ ತೆಗ್‌ದ್ ನಡ್ದದೆ. ಅದ್ಕೆ ಊರ್‌ನ ಚೌರಿಜ್ಜ ಬಂದದೆ. ತಲೆಕೂದಲ್ ಮತ್ತೆ ಗಡ್ಡ ತೆಗೆಕನ ಮೊದುಮಜ್ಜನ ಸುತ್ತ ನಿತ್ತ ಮುತ್ತೈದೆಯರ್ ಪೊದ್ಯ ಹೇಳ್‌ವೆ.

ಅಂಗಳ ಸಾರೀಸಿ ರಂಗೋಲಿ ಬರೆದಿರಿಸಿ
ರಾಯವಣ್ಣಯ್ಯನಚವುರಕ್ಕೆ
ನಾಪಿತನಿಲ್ಲದೆ ಮದುವಿಲ್ಲ
ನಾಪಿತನ ಕೇಳಲಿಕೆ ಯಾರಾರು ಹೋಗಬೇಕು.
ಸಮರಾತ್ರಿಲೆದ್ದೂ ಮೊಸರೂಟ ಮಾಡಿ ಅಣ್ಣಯ್ಯ
ನಾಪಿತನ ಮನೆಗೆ ನಡೆದಾನೂ

ಈ ಪೊದ್ಯ ತುಂಬಾ ಉದ್ದ ಇದ್ದ್ ಅದ್ ಮುಗೆಕನ ಚೌರನು ಮುಗ್ದದೆ ಮತ್ತೆ ಮೊದುಮಜ್ಜನ ಮೀಸುವೆ. ಮೀದ್ ಬಂದ ಅಂವನ ಪಲ ಇದ್ದ ಮರದ ಬುಡಕೆ ಉದಾರಣೆಗೆ ಮಾಯಿಣ ಮರ, ಹಲ್ಸಿನ ಮರ, ಅಲ್ಲರ್ ಬಾಳೆ ಬುಡಕ್ಕೆ ಕರ್‌ಕಂಡ್ ಬಂದವೆ. ಅಲ್ಲಿ ಮರದ ಬುಡಲಿ 12 ನೀರ್‌ನ ಗುಂಬಗಳ ಇಸುವೆ.

ಮೂಡಕ್ಕೆ ಮೋರೆ ಮಾಡಿ ನಿತ್ತ ಮೊದುಮಜ್ಜನ ಹಣೆಗೆ ಊರ್ ಗೌಡ ಪಟ್ಟೆಬಾಸಿಂಗ ಕಟ್ಟಿದೆ. ಮೊದುಮಜ್ಜ ಆ ಮೊಣ್ಣ್‌ನ ಗುಂಬಗಳಿಗೆ ಕೈ ಮುಗ್ದದೆ. ಇದ್ಕೆ **'ಗುಂಬ ಪೂಜೆ'** ತ ಹೆಸ್ರ್. ಮರಕೆ ಇಲ್ಲರ್ ಗುಂಬಕೆ ಐದ್ ಸರ್‌ತಿ ಸುತ್ತ್ ಬಂದ್ ಮೊದುಮಜ್ಜ ಒಟ್ಟಿಗಿದ್ದವರೊಟ್ಟಿಗೆ ಮತ್ತೆ ಚಪ್ಪರದಡಿಗೆ ಬಂದದೆ. ಚಪ್ಪರದ ಬಾಗಿಲ್‌ಲಿ ನಿತ್ತ ಮೊದುಮಜ್ಜನ ಸೋದರಮಾವ ಸಬೆಲಿ ಕುದ್ದವರೊಟ್ಟಿಗೆ ಕೇಳಿಕಂಡ್ ಪಂಚೆನ ಕೊಡಿಗೆ ನಾಲ್ಕಾಣೆ ಪಾವ್‌ಲಿನ ಕಟ್ಟಿದೆ. ಅಲ್ಲಿಂದ ಸೀದ ಒಳಗೆ ಬಂದ್ ಕುಲದೇವ್‌ರ್‌ಗೆ ನಾಕಾಣೆ ಪಾವ್‌ಲಿ, ಮಾಯಿಣ ಸೊಪ್ಪು ಮತ್ತೆ ಒಳ್ಳೆ ಮೆಣ್ಸ್‌ನ ಸೇರಿಸಿ ಒಂದ್ ಬೆದ್ರ್‌ನ ಗುತ್ತಿನೊಳಗೆ ಹಾಕ್‌ವೆ. ಈ ಹರ್‌ಕೆ ಕಟ್ಟ್‌ಕನನು ಹಾಡ್ ಹಾಡ್ವೆ. ಇಲ್ಲಿಗೆ ಆ ದಿನದ ಕಾರ್‌ಯಕ್ರಮ ಮುಗ್ದದೆ. ಮತ್ತೆ ಎಲ್ಲವು ಊಟ ಮಾಡ್ವೆ.

**ದಿಬ್ಬಣ ಹೊರ್‌ಡುದು :** ಮೊದುರೆಂಗಿ ಕಾರ್‌ಯಕ್ರಮದ ಮೊರ್‌ದಿನ ಮೊದುಮಜ್ಜನ ಮನೆಯೊವ್ ಮೊದುಮಜ್ಜನ ಸೇರ್‌ಸಿಕಂಡ್ ಮೊದುಮಗ್ಳ ಮನೆಗೆ ದಿಬ್ಬಣ ಹೋದವೆ. ಮೊದ್‌ವೆನ ಹೆಚ್ಚಾಗಿ ಗೂಡೆನ ಮನೆಲೇ ಮಾಡ್ವೆ. ಇತ್ತೀಚೆಗೆ ಮಂಟಪಗಳ್‌ಲಿ ಮೊದ್‌ವೆ ನಡ್ದದೆ. ಮೊದುಮಜ್ಜನ ಮನೆಲಿಮೊದ್ವೆ ನಡ್ದರೂ ಮೊದುಮಜ್ಜನ ಕಡೆನೊವ್ ಚಪ್ಪರಂದ ಹೊರಗೆ ಹೋಗಿ ನಿತ್ತ್ ಮನೆನ ಗೂಡೆ ಕಡೆವುಕೆ ಬುಟ್ಟು ಕೊಡೊಕು. ಹಂಗಾಗಿ ಹುಡ್‌ಗನ ಕಡೆಲಿ ಮೊದ್ವೆ ನಡ್ದರೂ ಅಂವ ಅಲ್ಲಿಗೆ ದಿಬ್ಬಣ ಬಾವ ನೆಂಟನಂಗೆ ಇರೊಕಾದೆ.

ಮೊದುಮಜ್ಜನ ಕಡೆಂದ ಮೊದೊಳಿಗೆ ಮನೆಗೆ ದಿಬ್ಬಣ ಹೋದಕೆ ಕೆಲವ್ ನಿಯಮಗ ಒಳ. ದಿಬ್ಬಣ ಹೊರ್‌ಡಿಕೆ ಮುಂದೆ ಮೊದುಮಜ್ಜನ ಅಪ್ಪ ಅಲ್ಲರ್ ಯಾರಾರ್ ಹಿರಿಯೊವ್ ಊರ್ ಗೌಡರ್ ವೀಳ್ಯ ಕೊಟ್ಟ್ ಹೇಳಿಕೆ ಕೊಡೊಕು. ಅದಾಗಿ ಮೊದುಮಜ್ಜನ ಸೋದರಮಾವ ಕೊಡೆ ಬುಡ್ಸಿ ಹಿಡ್ದ್ ಮೊದುಮಜ್ಜನ ಕರ್‌ಕಂಡ್ ಹೋಕು. ಎಲ್ಲವ್ ಕುಸಿಲಿ ಹೊರ್ಟವೆ. ಮುತ್ತೈದೆಗ ಸೋಬಾನೆ ಹಾಡ್‌ವೆ. ಅದರ್‌ಲಿ ದಿಬ್ಬಣ ದ ಪೊರ್‌ಲುನ ಬಣ್ಣ್‌ಸುವೆ.

ಅರಮನೆ ಸಾರಿಸಿ ರಂಗೋಲಿ ಬರೆಯಿಸಿ
ಮಗನ ಸಿಂಗರಿಸಿ ಒಳಗಿಂದ ತಾಯವ್ವ
ಚಿನ್ನದ ಪಟ್ಟಿಗೆ ತೆಗೆದರಿಸಿ
ಏಳೇಳು ಇಂದನೆ ಏಳೇಳು ಚಂದ್ರನೆ
ಏಳೇಳು ಗಂಬೀರ ಗರುಡನೇ
ಏಳೇಳು ಎಂದರೆ ಏಳುವವ ನಾನಲ್ಲ
ಸೋದರತ್ತೆ ಮಾವಂದೀರು ಬರಬೇಕೂ

ಮೊದ್‌ವೆ ದಿಬ್ಬಣ ಮೊದುಮಗಳ ಮನೆ ಎತ್ತಿದಂಗೆನೆ ಮಂಗಳ ವಾದ್ಯಗ ಜೋರು ಕೇಳ್ದೆ. ಸುದ್ದಿ ತಿಳ್ದಂಗೆ ಗೂಡೆನ ಕಡೆನೊವ್ ಬಂದ್ ಹುಡ್ಗನ ಕಡೆವರ ಮಾತಾಡ್ಸುವೆ. ಚಪ್ಪರದೊಳಗೆ ಕರ್‌ಕಂಡ್ ಬಂದವೆ. ಅಲ್ಲಿ ದಿಬ್ಬಣ ಬಂದವೊಕೆ ತ ಇಸಿದ ಜಾಗೆಲಿ ಅವರ ಕುದ್ರುಸಿ ನೀರ್ ಕೊಟ್ಟವೆ ಹರ್‌ವಾಣಲಿ ವೀಳ್ಯ ಇಸಿ ದಿಬ್ಬಣದೊವುಕೆ ಕೊಟ್ಟು ಕೈ ಮುಕ್ಕಂಡವೆ. ಇದರ ದಿಬ್ಬಣ ಮಾತಾಡ್ಸುದು ತ ಕರ್‌ದವೆ. ಇದ್ಕೆ ಎದ್‌ರಾಗಿ ಗಂಡ್‌ನ ಕಡೆನೊವ್ ಹರ್‌ವಾಣಲಿ ವೀಳ್ಯ ಇಸಿ ಗೂಡೆನ ಕಡೆನ ಮುಕ್ಯಸ್ತರ್‌ಗೆ ಕೊಟ್ಟು **'ಹೌದು ದಿಬ್ಬಣ ಬಂದೊ'** ತ ಹೇಳ್‌ವೆ. ಹೆಂಗ್‌ಸರ್ ಹೆಂಗ್‌ಸರ, ಗಂಡ್‌ಸರ್ ಗಂಡ್‌ಸರ ಮಾತಾಡ್ಸುವೆ.

ಮೊದುಮಗಳ ಮನೆಲಿ ನಡೆವ ಕಾರ್‌ಯಗ : ಎಣ್ಣೆ ಅರ್‌ಸಿಣ, ಮೊದುರೆಂಗಿ, ಗುಂಬಪೂಜೆ, ಗಂಡ್‌ನ ಮನೆಲಿ ನಡ್ದಂಗೆ ಹೆಣ್ಣ್‌ನ ಮನೆಲೂ ನಡ್ದದೆ. ಸೋಬಾನೆ ಬೇರೆ ಬೇರೆ ಅಸ್ಟೆ.

ಎಣ್ಣೆ ಅರ್‌ಶಿಣ ಆಕನ ಈ ಸೋಬಾನೆ ಹಾಡ್‌ವೆ.
ಎಣ್ಣೆಯನೊತ್ತಿದರು ಮೀನಾಕ್ಸಿಗೆ ಎಣ್ಣೆಯನೊತ್ತಿದಾರು
ಸುಗುಣ ಸಂಪೂರ್ಣಗೆ ನಿಗಮ ವಿನೂತೆಗೆ
ಜಾಜಿಯ ಹೂವಿನೆಣ್ಣೆಯ ಅರಸಿನ ಒತ್ತಿದರು.
ಮೀನಾಕ್ಸಿಗೆ ಎಣ್ಣೆಯನೊತ್ತಿದಾರೂ
ಸುರವರನ ಬಾಲೆಗೆ ಗಿರಿರಾಜ ಮಗಳೀಗೆ
ತಿರುವಂತಿನ ಹೂವಿನೆಣ್ಣೆ ಅರಸೀನ ಒತ್ತಿದರು
ಮೀನಾಕ್ಸಿಗೆ ಎಣ್ಣೆಯನೊತ್ತಿದರೂ

ಮೊದುರೆಂಗಿನ ಮೊರ್‌ದಿನ ಮೊದ್‌ವೆಗೆ ಮುಂದೆ ಗೂಡೆನ ಸಿಂಗಾರ ಮಾಡ್‌ವೆ. ಸಿಂಗಾರ ಕಾರ್‌ಯ ಆಕನ ಅತ್ತಲಿ ಒಳ್‌ದ ಎಲ್ಲಾ ಸಾಸ್ತ್‌ರ ಆಗ್ತಾ ಇದ್ದದೆ.

**ವೀಳ್ಯ ಕಟ್ಟುದು :** ಚಪ್ಪರದೊಳೆಗೆ ದಿಬ್ಬಣದವ್ ಬಂದ್ ಕುದ್ದ ಮೇಲೆ, ಗೂಡೆನ ಅಯ್ಯೆ, ಹೈದಂಗೆ ಕುಡುತೆ ಹಾಲ್‌ನ ಕುಡಿಯಕೆ ಕೊಟ್ಟದೆ.. ಹಾಲು ಕುಡ್‌ದ ಮೊದ್‌ಮಜ್ಜ ಕಾಲೀ ಲೋಟಕ್ಕೆ ನಾಕಾಣೆ ಪಾವಲಿನ ಹಾಕಿ ತಿರ್‌ಗ್‌ಸಿ ಕೊಟ್ಟದೆ. ದಾರೆ ಆವವರೆಗೆ ನೆಂಟರ



ವೀಳ್ಯ ಕೊಡ್ಡು





ಬೀಳಿಕಾಗದ್‌ತ ಹೀಗೆ ಮಾಡ್‌ವೆತ ಹೇಳ್‌ವೆ. ಹಾಲ್ ಕುಡ್‌ದಾದ ಮೇಲೆ ಚಪ್ಪರದ ನಡುಲಿ ಹಾಕಿರುವ ದಾರೆಮಂಟಪದಡಿಲಿ ವೀಳ್ಯ ಕಟ್ಟ್‌ವ ಕೆಲಸ ನಡ್‌ದದೆ.

ಗೂಡೆನ ಕಡೆಯ ಪ್ರಮುಕರು ನಾಕಾರ್ ಜೆನ ಮತೆ ಹೈದನ ಕಡೆನ ಮುಕ್ಯರಾದ ನಾಕಾರ್ ಜೆನ ಎದುರು ಬದುರಾಗಿ ಮಂಟಪದೊಳಗೆ ಮೂಡ ಪೊಡ್‌ವ ಮೋರೆಮಾಡಿ ಕುದ್ದ್‌ಕಂಡವೆ. ಅದಾಗಿ ಹೈದನ ಕಡೆಯವು ಅವ್ ತಂದಿದ್ದ ವೀಳ್ಯಂದ 12 ವೀಳ್ಯನ ಗೂಡೆನ ಕಡೆವ್‌ಕೆ ಎಲ್ಲವ್ಕೆ ತೋರ್‌ಸಿ ಕೊಡಕು. ಹೈದನ ಕಡೆನ ಊರ್ ಗೌಡ ವೀಳ್ಯದ ಹೆಸರ್ ಹೇಳಿ, ಅದ್ ಎಲ್ಲವ್‌ಕು ಕೇಳುವಂತೆ ಜೋರ್ ಕರ್‌ದ್ ಹೇಳಿ ಗೂಡೆನ ಕಡೆವುಕೆ ಕೊಟ್ಟವೆ.ಹಾಂಗೆ ಕೊಡುವ 12 ವೀಳ್ಯದ ಹೆಸರ್ ಹೀಂಗುಟ್ಟ್.

ವೀಳ್ಯ (5 ಕವಳಿಗೆ ವೀಳ್ಯದೆಲೆ ಮತ್ತೆ 5 ಅಡಿಕೆ) : 1. ಹೆಣ್ಣು ಮಾತಿನ ವೀಳ್ಯ, 2. ಸಲಾವಳಿ ವೀಳ್ಯ, 3. ಹೆಣ್ಣು ಮಾತ್‌ನ ಕರಾರ್ ವೀಳ್ಯ, 4. ಲಗ್ನದ ಕುದಿ ವೀಳ್ಯ, 5. ದೇವರ ವೀಳ್ಯ, 6. ಗುರು ವೀಳ್ಯ, 7. ಬಾಂದವರ ವೀಳ್ಯ, 8. ತಂದೆ ವೀಳ್ಯ, 9. ತಾಯಿ ವೀಳ್ಯ, 10. ಅಚ್ಚುಕಟ್ಟುವ ವೀಳ್ಯ, 11. ಬಣ್ಣ ಬಂಗಾರದ ವೀಳ್ಯ(ಎಲೆ ಕವಳಿಗೆ ನಾಲ್ಕರ ಸೂಡಿ ಒಂದ್ ಮತ್ತೆ ಐದಡಿಕೆ), 12. ತೆರವು ಮರವು ವೀಳ್ಯ

ಒಂದ್ ಕವಳೆಲಿ ಒಟ್ಟು 25 ಎಲೆ ಇದ್ದದೆ. ನಾಕ್ ಕವಳೆ ಸೇರಿರೆ ಒಂದ್ 'ಸೂಡಿ'(ಒಂದ್ನೂರು ವೀಳ್ಯದೆಲೆ) ಆದೆ. ಪ್ರಕೃತ 12 ವೀಳ್ಯಕೆ ಒಟ್ಟು ಸುಮಾರು ಒಂದೂವರೆ ಸಾವಿರ ಎಲೆ ಬೇಕಾದೆ. ವದುನ ಕಡೆವುಕೆ ಸಿಕ್ಕಿದ ಇಸ್ಟ್ ವೀಳ್ಯನ ಅವ್ ತಮ್ಮ ಕಡೆನ ಪ್ರಮುಕರ್‌ಗೆ ಹಂಚಿ ಕೊಟ್ಟವೆ.. ಹೀಂಗೆ ವೀಳ್ಯ ಕಟ್ಟುದಕೆ ಗೌಡರ ಮೊದ್‌ವೆಲಿ ವಿಸೇಸ ಮಹತ್‌ವ ಉಟ್ಟು ಅದ್ ಸಮ್ಮಂದಗಳ ಕಟ್ಟಿ ಎಲ್ಲವ್‌ಕೆ ಗೊತ್ತಾವಂಗೆ ಮಾಡ್‌ವ ಗೌರವ ಸೂಚಕ ಕ್ರಮ. ಅದರ್‌ಲಿ ತಪ್ಪಾದರೆ ಗೌರವಕೆ ಚ್ಯುತಿ ಬಂದಂಗೆತ ಜೆನ ನಂಬುದರ್‌ಂದ ಅದರ ಬಾರಿ ಜಾಕ್ರತೆಂದ ಮಾಡಡ್‌ವೆ. 12 ವೀಳ್ಯಲಿ ಒಂದೂ ಕಡಿಮೆ ಆಕಾಗದ್. ವೀಳ್ಯದ ಕಟ್ಟುದರ್‌ಲಿ ತಪ್ಪಾದರೆ ಮೊದ್‌ವೆ ನಿತ್ತೋದೆತೇಳ್‌ವ ಮಟ್ಟ್‌ಗೆ ಈ ಕ್ರಮದ ಮೇಲೆ ನಂಬಿಕೆ,ಗೌರವ ಉಟ್ಟು..

**ಬಣ್ಣ ಬಂಗಾರ ಕೊಡ್‌ದು :** ವೀಳ್ಯ ಕಟ್ಟಿದ ಜಾಗೆಲೆ ಹೈದನ ಕಡೆನ ಪ್ರಮುಕರ್ ಗೂಡೆನ ಕಡೆವ್‌ಕೆ 'ಬಣ್ಣಬಂಗಾರ' ಕೊಟ್ಟವೆ. ಹೈದನ ಕಡೆಂದ ಈ ಕೆಳೇಗೆನ 19 ಸಾಮಾನ್‌ಗಳ ಇಸಿದ್ ಕೊಡೊಕುಂತ ಸಂಪ್ರದಾಯ. 1. ಗಂಟ್ಲ್‌ಗೆ ಹಾಕ್‌ವ ಒಂದ್ ಮಾಲೆ, 2. ಗಂಟ್ಲ್‌ಗೆ ಹಾಕ್‌ವ ಎರಡು ಗುಂಡುನ ಮಾಲೆ, 3. ಒಂದ್ ಜೊತೆ ಕಿಬಿ ಬೆಂಡ್, 4. ಮೂಗುತಿ, 5. ಒಂದೊಂದ್ ಕೊಪ್ಪು ಮತ್ತೆ ಬುಗುಡಿ, 6. ಒಂದ್ ರಟ್ಟೆ ಪಟ್ಟಿ, 7. ಸೊಂಟಕ್ಕೆ ಹಾಕ್‌ವ ನೇವಳ, 8. ತಾಳಿ, 9. ಕಾಲ್‌ಗೆ ಹಾಕ್‌ವ ಬೆಳ್ಳಿನ ಬಳೆ, 10. ಕೈಗೆ ಹಾಕ್‌ವ ಕಡಗ ಒಂದ್ ಜೊತೆ, 11. ಕಾಲುಂಗುರ ಒಂದ್ ಜೊತೆ, 12. ಕರಿಮಣಿ ಮಾಲೆ, 13. ಪಿಂಗಾರ



(ಹಿಂಗಾರ), 14. ಕೆಂಪು ಕಂಬಿನ ಬಿಳಿಸೀರೆ ಒಂದ್, 15. ಬಿಳಿ ಮುಸುಕುನ ಒಂದ್ ಬಟ್ಟೆ, 16. ಒಂದ್ ರೊವ್‌ಕೆ ಅಲ್ಲರೆ ರೊವ್‌ಕೆ ಬಟ್ಟೆ, 17. ಹಣೆಗೆ ಕಟ್ಟುವ ಒಂದ್ ಬಾಸಿಂಗ, 18. ಹಣೆಗೆ ಕಟ್ಟುವ ಒಂದ್ ಪಟ್ಟಿ, 19. ದಾರೆ ಅದ ಮೇಲೆ ಊಟೋಪಚಾರಕೆ ಬಾಕನ ಉಡಿಕೆ ಒಂದ್ ಸೀರೆ.

ಸೇರ್‌ದವ್‌ಕೆಲ್ಲ ಕೇಳ್‌ವಂಗೆ ಗಟ್ಟಿ ಆಗಿ 'ಬಂಗಾರ ಕೊಟ್ಟವೇ' ತ ಹೇಳಿದ್ ಊರು ಗೌಡ ಅದೆಲ್ಲದರ ಗೂಡೆನ ಕಡೆವ್‌ಕೆ ಒಪ್ಪುಸಿದೆ. ಈ ಹೊತ್ತುಗೆ ಹೈದನ ಕಡೆನ ಹೆಣ್ಮಕ ಹೇಳ್‌ವ ಸೋಬಾನೆ ಹೀಂಗಿದ್ದದೆ.

ಹಿಂಗಡೆಗೆ ಮುಂಗಡೆಗೆ ಬೆಳ್ಳಿಯ ಕಡಗ
ಒಪ್ಪಾವೆ ನಿಮ್ಮ ಮನಸೀಗೆ ಮಾವನವರೇ
ತೋರೀರಿ ನಿಮ್ಮ ಸಬೆಗೆಲ್ಲಾ
ಸ್ಯಾಲೆ ತಂದೀದೇನೆ ಹನ್ನೆರಡು ವರಹಾದ ಪಟ್ಟಿ
ಒಪ್ಪಾವೆ ನಿಮ್ಮ ಮನಸೀಗೆ ಮಾವನವರೇ
ತೋರೀರಿ ನಿಮ್ಮ ಸಬೆಗೆಲ್ಲಾ

ಗೂಡೆನ ಕಡೆವ್‌ಕೆ ಮೊದ್‌ವೆಗೆ ಬೇಕಾವ ಎಲ್ಲದರ ಒಪ್ಪುಸಿ ಮೊದ್‌ವೆ ಆವ ಸಂಪ್ರದಾಯ ಇಲ್ಲಿ ಉಟ್ಟು. ಬಣ್ಣ ಬಂಗಾರಲಿ ಇರ್‌ದೆಲ್ಲ ಗೂಡೆಗೆ ಸೇರ್‌ವಂತದ್. ಅದರ ಹಣೆಗೆ ಪಟ್ಟಿ ಬಾಸಿಂಗನ ಕಟ್ಟುವೆ. ಕೆಂಪು ಕಂಬಿನ ಬಿಳಿ ದಾರೆಸೀರೆನ ಉಡ್‌ಸ್‌ವೆ. ಸೀರೆನ ಒಂದ್ ಕೊಡಿನ ಮೇಲೆಗೆ ಸುಮಾರು ಅರ್‌ದ ಸೇರ್ ಅಕ್ಕಿ, ಒಂದ್ ವೀಳ್ಯದೆಲೆ, ಅಡಿಕೆ ಮತ್ತೆ ಕರಿಮಣಿ ಮಾಲೆನ ಕಟ್ಟುವೆ. ಇದರ 'ಮಡಿಲು ತುಂಬಿಸುವುದು' ತೇಳ್‌ವೆ. ಆಗ ಹೇಳ್‌ವ ಸೋಬಾನೆನ ಕೆಲವ್ ಸಾಲ್‌ಗ ಹೀಂಗಿದ್ದದೆ

ಅಕ್ಕಿಯ ಹೊಲಗಳು ಹತ್ತೆಂಟು ಫಲಗಳು
ರಾಣಿ ರುಕ್ಕಿಣಿ ಸೀತಾದೇವಿಗೆ
ಮಡಿಲು ತುಂಬಿರೋ
ಕಡಲ ಶಯನನೇ ಕಾಯೋ ಕಾಯೋ
ತೆಂಗಿನ ಕಾಯಿ ತಟ್ಟೇಲಿರಿಸಿರೋ
ರಾಣಿ ರುಕ್ಕಿಣಿ ಸೀತಾದೇವಿಗೆ
ಮಡಿಲು ತುಂಬಿರೋ

ಮಡ್‌ಲ್ ತುಂಬಿಸಿದ ಮೇಲೆ ತಲೆಗೆ ಬಿಳಿ ಮುಸ್‌ಕ್ ಹಾಕಿ ಗೂಡೆನ ದಾರೆ ಮಂಟಪದಡಿಗೆ ಕರ್‌ಕಂಡ್ ಬಂದವೆ. ಗೂಡೆನ ಸೋದರಮಾವ ಅಲ್ಲರೆ ಅಪ್ಪ ಗೂಡೆನ ಕೈ ಕೈ ಹಿಡ್‌ದ್ ಕರ್‌ಕಂಡ್ ಬಂದವೆ.

**ದಾರೆ ಕಾರ್‌ಯ :** ದಾರೆಲಿ ಎರಡ್ ನಮೂನೆ ಉಟ್ಟು. ಪಂಜ, ಬಳ್ಳ, ಕೂತ್ಕುಂಜ, ಕಲ್ಮಡ್ಕ, ಬೆಳ್ಳಾರೆ, ಗುತ್ತಿಗಾರು, ಸುಬ್ರಹ್ಮಣ್ಯದ ಕಡೆಲಿ ಅಂದರೆ ಸುಳ್ಯ ಪೇಟೆನ ಮೂಡ ಬಾಗಲಿ ಸರ್‌ವೇಸಾಮಾನ್ಯ ಆಗಿ ಮೊದುವೆಗೆ ವೈದಿಕ ಬ್ರಾಹ್ಮಣರ್ ಬೇಕು. ಬಟ್ರ್ ನಡ್ಸಿಕೊಡ್‌ವ ಮೊದ್‌ವೆನ 'ಬ್ರಾಹ್ಮಣದಾರೆ'ತ ಕರ್‌ದವೆ ಸುಳ್ಯದ ತೆಂಕಕೆ ಅಂದರೆ ಅರಂತೋಡು, ಕಿರ್‌ಲಾಯ, ಪೇರಡ್ಕ,ಆಲೆಟ್ಟಿ ಗೂನಡ್ಕ, ಸಂಪಾಜೆ, ಭಾಗಮಂಡಲ ಇಂತ ಕಡೆಲಿ ಗೂಡೆನ ಅಪ್ಪನೆ ಮುಂದೆ ನಿತ್ ಮೊದ್‌ವೆ ನಡ್ಸಿದೆ. ಇಲ್ಲಿ ಬಟ್ರ್‌ಗ ಬೇಡ. ಮೊದ್‌ವೆನ ಬಂಟ ದಾರೆ'ತ ಕರ್‌ದವೆ. ಬಟ್ರ ದಾರೆಲಿ ಈ ಕೆಳೆಗೆನ್ ಸಾಮಾನ್‌ಗಳ ಕೊಡಕಾದೆ.

**ಗಂಡ್‌ನ ಕಡೆಂದ :** 1. ಬಿಳಿನೂಲ್‌ನ ಉಂಡೆ, 2. ಪಿಂಗಾರ (ಹಿಂಗಾರ), 3. ನೀರಿರ್‌ವ ಎರ್‌ಡ್ ಕಾಯಿ, 4. ಎರಡ್ ಸೇರ್ ಅಕ್ಕಿ, 5. ಒಂದ್ ಕವಳೆ ಎಲೆ, 6. ಮೂರ್ ಅಡ್‌ಕೆ, 7. ಕದಳಿ ಬಾಳೆಹಣ್ಣು, 8. ನಾಲ್ಕಾಣೆ ಬೆಳ್ಳಿ ಪಾವಲಿ ಒಂದ್, 9. ಅಚ್ಚು ಬೆಲ್ಲ, 10. ಎರಡ್ ತುಂಡ್ ಅರ್‌ಸಿನ

ಗೂಡೆನ ಕಡೆಂದಲು ಇಸ್ಟೆ ಕೊಡಕು. ಬಟ್ರ್ ಇಲ್ಲದಿದ್ದಲ್ಲಿ ಅಪ್ಪನೆ ಬಾರಿ ಸರಳ ಆಗಿಮೊದ್‌ವೆಗೆ ತಯ್ಯಾರ್ ಮಾಡ್‌ವೆ.

ಇಸ್ಪರ್‌ಲಿ ವಿಸೇಸ ಆಗಿ ಸಿಂಗರ್‌ಸಿ ಕಂಡ ಹೈದ ಮೊದ್‌ವೆ ಚಪ್ಪರದಡಿಗೆ ಬಂದದೆ. ಅಂವ ದಾರಾಮಂಟಪಕೆ ಬಾವ ದಾರಿಲಿ ಅಂವನ ನಿಲ್ಸ್‌ಸಿ ಗೂಡೆನ ಕಡೆನ ಮುತ್ತೈದೆಗ ಆರ್‌ತಿ ಎತ್ತುವೆ. ಇಲ್ಲಿ ಒಟ್ಟು ಐದ್ ಆರತಿಗ ಆಕು ಅದ್‌ಂತೇಳಿರೆ – 1. ತಾಯಿ ಅಕ್ಕಿ ಆರತಿ, 2. ಕಟ್ಟೆಮನೆ ಅಕ್ಕಿ ಆರತಿ, 3 ಗ್ರಾಮ ಗೌಡನ ಆರತಿ, 4. ಗ್ರಾಮದವರ ಅಕ್ಕಿ ಆರತಿ ಮತ್ತೆ, 5. ಕುರ್‌ದಿ ನೀರಿನ ಆರತಿ

ಮೇಲೆನ ಐದ್ ಆರತಿಗ ಕೂಡಾ ಗೌರವ ಸೂಚಕ ಆರತಿಗ ಆಗಿದ್ದವೆ. ಕಟ್ಟೆಮನೆ ಆರತಿ, ಗೌಡರ ಒಳಾಡ್‌ತಲಿ ದೊಡ್ಡ ಹುದ್ದೆ 'ಕಟ್ಟೆಮನೆಗೆ ಸಮ್ಮಂದ್‌ಸಿದೆ ಗ್ರಾಮ ಗೌಡನೂ ಊರ್‌ನ ಮುಕ್ಯಸ್ತ ಆಗಿರ್‌ದರ್‌ಂದ ಗ್ರಾಮ ಗೌಡನ' ಆರತಿನು ಇದ್ದದೆ. 'ಕುರ್‌ದಿ ನೀರು' ಪವಿತ್ರ ಆಗಿರ್‌ದರ್‌ಂದ ಅದ್ಕೆ ದಾರ್‌ಮಿಕ ಮಹತ್ವ ಇದ್ದದೆ. ಈ ಐದ್ ಆರತಿಗು ಐದ್ ಸೋಬಾನೆಗಳ ಹೇಳ್‌ವೆ.

ಪ್ರತಿ ಒಂದ್ ಆರತಿಗೂ ವರನು ನಾಕಾಣೆ ಪಾವಲಿ, ಮೂರ್ ಎಲೆ ಕವಳೆ ಮತ್ತೆ ಮೂರು ಅಡ್‌ಕೆನ ಸಂಬಳ ಆಗಿ ಕೊಡೊಕು. ಎಲ್ಲ ಆರತಿಗ ಆದ ಮೇಲೆ ಕಡೆಗಡ ಗೂಡೆನ ಕಡೆನ ಸಣ್ಣ ಮಕ್ಕ ಯಾರಾರ್ (ಹೆಚ್ಚಾಗಿ ವದುವಿನ ಕಿರಿಯ ತಮ್ಮ) ಮೊದ್‌ಮಜ್ಜನ ಕಾಲ್‌ಗೆ ನೀರ್ ಹಾಕಿ, ಕಾಲ್ ತೊಳ್ದದೆ.. ಹಾಂಗೆ ಕಾಲ್ ತೊಳ್‌ದವಂಗೆ ಮೊದ್‌ಮಜ್ಜ ಏನಾರ್ ಕಾಣಿಕೆ ಕೊಡೊಕು. ಇಸ್ಪರ್‌ಲಿ ಮೊಡ್ಯಾಳ ಮೊಡಿನ ಬಿಳಿಬಟ್ಟೆನ ದಾರಿಗೆ ಹಾಸಿದ್ದದೆ. ಅದರ ಮೇಲೆ ನಡ್‌ಕಂಡ್ ಬಂದ ವರ ಮೂಡ ದಿಕ್ಕ್‌ಂದ ದಾರಾಮಂಟಪ ಹತ್ತಿದೆ.ದಾರೆಮಂಟಪನ ಆಚಾರಿ (ಬಡಗಿ) ಅಂವನ ಅಳ್‌ತೆನ ಪ್ರಕಾರ ನಾಕ್ ಕಂಬಗಳ ಹಾಕಿ ಇಸಿದ್ದದೆ.. ಅದರ ಮೇಲೆ ಪುಡೆಗೆ ಬಿಳಿ ಬಟ್ಟೆ ಕಟ್ಟಿದ್ದವೆ ಮೂಡಲಿ ಸರಳಿ ದೈಂದ ಮಾಡ್‌ದ 12 ಕಂಬಗ ಇದ್ದೊತ ಹಿರಿಯರ್ ಹೇಳ್‌ವೆ. ಅಂದರೆ ಒಂದ್ ಮೂಲೆಲಿ ಮೂರು ಕಂಬಗ ಇದ್ದದೆ.

ದಾರೆಮಂಟಪಕೆ ಬಂದ ಮೊದ್‌ಮಜ್ಜ ಮಂಟಪದೊಳಗೆ ಹಾಕಿಸಿದ ಅಕ್ಕಿನ ಮೇಲೆ ನಿತ್ತದೆ. ಕಲ್‌ಸ ಕನ್ನಡಿ ಹಿಡ್‌ದ ಮೊದ್‌ಮಜ್ಜನ ಅಕ್ಕ ಇಲ್ಲರೆ ತಂಗೆ ಅಂವನ ಕರೆಗೆ ನಿತ್ತದೆ. ಹೈದನ ಅಯ್ಯೆನ ಬುಟ್ಟ್ ಒಳ್‌ದ ಮುಕ್ಯಸ್ತರ್ ಅಂವನ ಸುತ್ತ ಇದ್ದವೆ. ಮಜ್ಜನ ಮೊದ್‌ವೆನ ಅಯ್ಯೆ ನೋಡಿಕಾಗದ್‌ತ ಕ್ರಮ ಇರ್‌ದರ್‌ಂದ ಅದ್ ಅಲ್ಲಿರ್‌ದುಲೆ. ಮೊದೊಳಿಗೆ ಪೊಡ್‌ವ ದಿಕ್ಕ್‌ಂದ ಮೊದ್‌ಮಜ್ಜಂಗೆ ಎದ್‌ರ್ ಬದ್‌ರಾಗಿ ದಾರೆಮಂಟಪಕೆ ಬಂದದೆ.ಅದರ ಅಕ್ಕತಂಗೆಕ ಯಾರಾರ್ ಕಲ್‌ಸ ಕನ್ನಡಿ ಹಿಡ್ದವೆ. ಮೊದೊಳಿಗೆ ಮತೆ ಮೊದ್‌ಮಜ್ಜನ ನೊಡುಲಿ ಅಡ್ಡಕೆ ಬಟ್ಟೆ ಒಂದರ ಹಿಡ್‌ದವೆ.

ಸುಬ ಮೂರ್‌ತ ಹಕ್ಕಲಾಕಂಡ್ ಬಂದಾಂಗೆ, ಮಂತ್ರೋಚ್ಚಾರಣೆ ಮಾಡ್‌ವ ಬಟ್ಟ ಕಲ್‌ಸನ ಮೊದ್‌ಮಗಳ ಅಪ್ಪನ ಕೈಲಿಸಿದೆ.ಅವ್ ಆ ಕಲಸನ ಹಿಡ್‌ಕಂಡ್ ಸೇರ್‌ದ ಪ್ರಮುಕರ ಕೈ ಮುಟ್ಟುಸಿಕಂಡ್, ಮತ್ತೆ ದಾರೆಮಂಟಪಕೆ ಬಂದವೆ. ನಿಗಂಟ್ ಮಾಡ್ದ ಹೊತ್ತುಗೆ ಸರಿ ಆಗಿ ಮೊದ್‌ಮಜ್ಜನ ಕೈಗೆ ಕೊಟ್ಟ ಪಿಂಗಾರದ ಹೂ ಮಾಲೆನ ಅಂವ ಮೊದೊಳಿಗೆನ ಗಂಟ್‌ಲ್‌ಗೆ ಹಾಕಿದೆ. ಊರು ಗೌಡ ಸೇರ್‌ದ ಸಬೆವುಕೆ ವಿಸಯ ತಿಳ್‌ಸಿಕೆ ಗಟ್ಟಿ ಆಗಿದ್ ಮೊದ್‌ವೆನ ಕರ್‌ದ್ ಹೇಳ್‌ವೆ. ಅಡ್ಡ ಹಿಡ್‌ದ ತೆರೆನ ತೆಗ್‌ದವೆ. ಹೈದ ಗೂಡೆನ ಗಂಟ್‌ಲ್‌ಗೆ ತಾಳಿನ ಕಟ್ಟಿದೆ. ಮುತ್ತೈದೆಗ ಸೋಬಾನೆ ಹೇಳತಿದ್ದಾಂಗೆ ಮೊದೊಳಿಗೆನ ಕೈನ ಮೊದ್‌ಮಜ್ಜನ ಕೈಗಳ ಮೇಲೆ ಇಸಿಕೆ ಹೇಳ್‌ವೆ.

ಮೊದೊಳಿಗೆನ ಅಪ್ಪ ಕಲ್‌ಸಂದ ಮೂರ್ ಸರ್‌ತಿ ನೀರ್‌ನ ಮೊದ್‌ಮಕ್ಕಳ ಕೈಮೇಲೆ ಹೊಯ್ದದೆ. ಊರ್ ಗೌಡ ಗಟ್ಟಿ ಆಗಿ 'ಅರಮನೆವು ಗುರುಮನೆವು, ಹತ್ತು ಕುಟುಂಬ ಹದಿನೆಂಟು ಗೋತ್ರ, ಬಂದ ನೆಂಟ್ ಇದ್ದ ನೆಂಟ್ ಸಬೆ ಸಮಸ್ತರೊಟ್ಟಿಗೆ ಕೇಳಿಕಂಡ್. ಗ್ರಾಮದ... ಮನೆಯ ಗೌಡರ ಮಗ... ಬೊಳಿಯ... ಎಂಬ ಹುಡುಗರಿಗೆ... ಗ್ರಾಮದ... ಮನೆಯ... ಗೌಡ್ರ ಮಗಳು... ಬೊಳಿನ ಗೂಡೆನ ಸಬೆ ಸಮಸ್ತರೆದುರು ದಾರೆ ಹೊಯ್ದು ಕೊಟ್ಟವೆಂತೇಳೋ' ತೇಳ್‌ದೆ. ಸೇರ್‌ದ ಜೆನ 'ಅಕ್ಕಂತೇಳ್‌ವೆ' (ಆಯಿತು ಎನ್ನುತ್ತೇವೆ) ತೇಳಿಕನ ಅಪ್ಪ ದಾರೆ ಹೊಯ್ದದೆ.

ಅದಾಗಿ ಬಟ್ರ್ ಮೊದ್‌ಮಜ್ಜನ ಹೆಗಲ್ ಮೇಲಿರುವ ಸಾಲ್‌ನ ಕೊಡಿಗೆ ಗೂಡೆನ ಸೆರಂಗ್‌ನ ಕಟ್ಟಿ ಹೊರೆಗೆ ಬಾಕೆ ಹೇಳ್‌ದೆ.. ಇಬ್ಬರ ಕೈಗೆ ಹಿಡಿ ಅಕ್ಕಿ ಕೊಟ್ಟ್ ಗಂಡ್ ಮುಂದೆ, ಗೂಡೆ ಹಿಂದಾಗಿ ದಾರೆ




ಮಂಟಪಕೆ 5 ಸುತ್ತು ಬಾಕೆ ಹೇಳ್‌ದೆ.ಮೊದ್‌ಮಕ್ಕ ಹಾಂಗೆ ಮಾಡ್‌ವೆ. ಹಾಂಗೆ ಸುತ್ತು ಬಾಕನ ದಾರಾಮಂಟಪದ ನಾಕ್ ಕಂಬಗಳ ಮೇಲೆಗೆ ಚೂರ್ ಚೂರ್ ಅಕ್ಕಿನ ಹಾಕಂಡ್ ಸುತ್ತುವೆ. ಕಡೆಗೆ ಮಂಟಪದೊಳಿಗೆನ ಅಪ್ಪ ಮೊದ್‌ಮಕ್ಕಳ ಕರ್‌ಕಂಡ್ ಮನೆ ಒಳೆಗೆ ಹೋದವೆ.

ಮನೆ ಒಳೆಗೆ ಒಂದಿನ ಮುಂದೆನೆ ಮುತ್ತೈದೆಗ ಹಸೆ ಬರ್‌ದಿದ್ದವೆ. ಸುಣ್ಣ ಅಲ್ಲರೆ ಗಂದಲಿ ಗೋಡೆನ ಹಸೆ ಬರೆಕನ ಬೇರೆ ಬೇರೆ ಸೋಬಾನೆಗಳ ಹೇಳ್‌ವೆ. ಮೊದ್ರ್‌ಲಿ ಮೊದ್‌ಮಕ್ಕಳ ಕುದ್ರುಸಿ, ಅವ್‌ಕೆ ಕುಡಿಯಕೆ ಬಿಸಿ ಹಾಲ್ ಕೊಟ್ಟವೆ. ಮೊದ್‌ಮಕ್ಕ ಹಾಲ್ ಕುಡಿಯಕನ ಮುತ್ತೈದೆಗ ಸೋಬಾನೆ ಹೇಳ್‌ವೆ. ಸೋಬಾನೆ ಆಕಂಡಿರಿಕನನೆ ಹಾಲ್ ಕುಡ್‌ದ ಮೊದ್‌ಮಕ್ಕ ಹಿರಿಯರ ಆದೇಸದಂಗೆ ಬೂಮಿಕ್ಕುವ' ಕ್ರಮ ಮಾಡ್‌ವೆ

**ಬೂಮಿಕ್ಕುವ ಕಾರ್ಯಕ್ರಮ :** ಮೊದ್‌ಮಕ್ಕಳ ಎದ್‌ರಕೆ ಒಂದ್ ಮಣೆ ಇಸಿ, ಅದರ ಮೇಲೆ ಬಿಳಿಬಟ್ಟೆ ಹಾಸಿ, ಕಂಚಿನ ಬಟ್ಟ್‌ಲ್ ಇಸಿ, ಅದ್ಕೆ ದನದ ಹಾಲ್ ಹೊಯ್‌ದವೆ. ಈ ಹಾಲ್‌ಗೆ ಕದಳಿ ಬಾಳೆ ಹಣ್ಣ್‌ನ ಪಿಳ್‌ಂಚಿ ಹಾಕಿ, ಅದ್‌ಕೆ ಹಜ್ಜಿ ತುಪ್ಪನ ಸೇರ್‌ಸುವೆ. ಮೊದ್‌ಮಜ್ಜನ ಕಿರ್ ಬೆರ್‌ಲ್‌ನ ಈ ಬಟ್ಲ್‌ಲಿ ಕಂತ್‌ಸಿ, ನೆಲಕೆ ಸಿಡ್‌ಕ್‌ವೆ. ಮೂರ್ ಸರ್‌ತಿ ಹಾಂಗೆ ಮಾಡ್‌ದ ಮೇಲೆ ಮೊದೊಳಿಗೆ ಮೂರ್ ಸರ್‌ತಿ ಬೆರಳ್‌ಂದ ನೆಲಕೆ ಹಾಲ್ ಸಿಡ್‌ಕ್‌ವೆ. ಹೀಂಗೆ ನೆಲನ ಹೊಸ ಮೊದ್‌ಮಕ್ಕ ಆರಾದ್‌ಸ್‌ವ ಸಾಸ್ತ್‌ರನ 'ಬೂಮಿಕ್ಕುವ ಶಾಸ್ತ್ರ'ತ ಕರ್‌ದವೆ. ಇದಾದ ಮೇಲೆ ಹಣೆಗೆ ಕಟ್ಟಿದ ಪಟ್ಟೆ ಬಾಸಿಂಗನ ಸಡ್‌ಲ್ಸಕ್. ಇಲ್ಲರೆ ಹಾಕಂಡ ಬಟ್ಟೆನನು ತೆಗ್ದ್ ಬೇರೆ ಹಾಕಣಕ್. ಮೊದ್‌ಮಜ್ಜನ ತಲೆನ ಮುಂಡಾಸ್ ಮತ್ತೆ ಮೊದೊಳಿಗೆನ ತಲೆನ ಮುಸ್‌ಕ್‌ಲಿ ಯಾದೇ ಬದಲಾವಣೆ ಇರ್‌ದುಲೆ.

**ಸೇಸೋಪಚಾರ ಅಲ್ಲರೆ ಪಚಾರ :** ಮೊದುಮಕ್ಕಳ ಮತ್ತೆ ದಾರಾಮಂಟಪಕೆ ಕರ್‌ಕಂಡ್ ಬಂದ್ ಕುದ್ರಿಸ್‌ವುವೆ. ಅವರ ಎದ್‌ರ್‌ಗೆ ಇಸಿದ ಹರಿವಾಣಲಿರ್‌ವ ಅಕ್ಕಿನ ತಕಂಡ್ ಮೊದ್‌ಮಕ್ಕಳ ತಲೆಮೇಲೆ ಅದರ ಹಾಕಿ, ಊರ್‌ನ ಹಿರಿಯವು ಅವ್‌ಕೆ ಆಸಿರ್‌ವಾದ ಮಾಡ್‌ವೆ. ಮೊದ್‌ಮಕ್ಕಳಿಗೆ ಕೊಡೊಕುತ ತಂದ ಉಡ್ಗಿರೆನೋ ದುಡ್ಡೊ ಅವರ ಕೈಗೆ ಕೊಟ್ಟವೆ. ಬಂದವೆಲ್ಲವೂ ಉಡ್ಗಿರೆ ಕೊಟ್ಟ ವಿಸಯನ ಊರ್ ಗೌಡ್ರ್ ಸೇರ್‌ದ ಎಲ್ಲವ್ಕೂ ಕೇಳ್‌ವಂಗೆ ಗಟ್ಟಿ ಆಗಿ ಕರ್‌ದ್ ಹೇಳ್‌ವೆ. ಎಲ್ಲವ್ ಹೀಂಗೆ ಅರತಕ್ಸತೆ ಮಾಡ್‌ದ ಮೇಲೆ ಸೋಬಾನೆ ಹೇಳಿ, ಮೊದುಮಕ್ಕಳ ಅಲ್ಲಿಂದ ಎದ್ರ್‌ಸ್‌ವೆ. ಅದಾಗಿ ಮೊದುಮಕ್ಕಳ ಮನೆ ಒಳೆಗೆ ಕಳ್ಸಿದ ಮೇಲೆ ಮನೆನ ಯಜಮಾನನ ಕೇಲಿಕೆನಾಂಗೆ, ಎಲ್ಲವ್ ಉಂಬಕೆ ಎದ್ದವೆ. ಮೊದ್‌ವೆ ಲೆಕ್ಕಲಿ ಮಾಡ್‌ದ ವಿಸೇಸ ಊಟನ ಎಲ್ಲವ್ ಉಂಡ್ ಕುಸಿ ಪಟ್ಟವೆ. ಊಟ ಆದ ಮೇಲೆ ಬಾರಿ ಮುಕ್ಯ ಆದ ಇನ್ನೊಂದ್ ಶಾಸ್ತ್ರ ನಡ್ದದೆ. ಅದರ 'ಹೆಣ್ಣೊಳಿಸಿ ಕೊಡ್‌ದುತ' ಹೇಳ್‌ವೆ.

**ಹೆಣ್ಣೊಳ್‌ಸಿ ಕೊಡ್‌ದು :** ಮೊದ್ ಮಕ್ಕಳ ದಾರಾ ಮಂಟಪದಡಿಗೆ ಕರ್‌ಕಂಡ್ ಬಂದ್, ಮೊದೊಳಿಗೆನ ಅಪ್ಪ ಮಗಳ ಕೈನ ಮೊದ್‌ಮಜ್ಜನ ಕೈಲಿ ಇಸಿ, ಸೇರ್‌ದವರೊಟ್ಟಿಗೆ 'ಒಪ್ಪಿಸಿ ಕೊಟ್ಟನೇ ತ ಮೂರ್ ಸರ್‌ತಿ ಹೇಳ್‌ವೆ. ಮೊದೊಳಿಗೆನ ಮನೆಂದ ಮೊದ್‌ಮಜ್ಜಂಗೆ ಸಲ್ಲಕಾದರ ಅದರೊಟ್ಟಿಗೆ ಇಸಿ, ಮೊದ್‌ಮಜ್ಜನ ಕಡೆವರ ಕರ್‌ದ್, ಅವರ ಎದುರಕೆ ನಿಲ್ಸ್‌ಸಿಕಂಡ್ ಮೊದೊಳಿಗೆನ ಅಪ್ಪ ಅಲ್ಲರೆ ಅವರ ಕಡೆನ ಮುಕ್ಯಸ್ತರ್ ಹೀಂಗೆ ಹೇಳ್‌ವೆ 'ಪರಮ ವೈಬವದಿಂದ ತಮ್ಮ ಇಸ್ಟ ಮಿತ್ರರಿಂದೊಡಗೂಡಿ ಪುರುಸನ ಕಡೆಯಿಂದ ಆಗಮಿಸಲ್ಪಟ್ಟ ದಿಬ್ಬಣದ ಮುಕ್ಯಸ್ತರಾದ ಮಹನೀಯರು ಯಾರಯ್ಯ... ?' ಆಗ ಗಂಡ್‌ನ ಕಡೆಂದ ಒಬ್ಬ 'ನಾವಯ್ಯ' ತ ಹೇಳಕು. ಅದಾಗಿ ಮಾತ್ ಮುಂದ್‌ವರ್‌ದದೆ.

'ಹಾಗಾದರೆ ನಾವ್ ನಮ್ಮ ಪೂರ್‌ವ ಪೊದ್ದತಿನಂಗೆ ವಿಜ್ಞಾಪನೆನ ಸ್ವೀಕರ್‌ಸಿ ಚಂದ್ರರಾಜೆನೆಂಬ ಪುರುಸನಿಗೆ ಪದ್ಮಾವತಿಯೆಂಬ ಕನ್ನಿಕೆಯನ್ನು ವದೂವರರನ್ನಾಗಿ ಮಾಡ್‌ವುದೆಂತ ಈ ಮನದತ್ತ ಮಾಡಿ ಆಮೇಲೆ ವಾಗ್ದತ್ತ ಮಾಡೋಣಾಯುತ್ತ ಅಲ್ಲವೋ?'

'ಹೌದು' (ತ ಗಂಡ್‌ನ ಕಡೆವು)

ವಾಗತ್ತ ಮೇರೆಗೆ ನಾವ್ ಉಬಯಸ್ತರು ಸೇರಿ ಆಕಾಶದಸ್ಟು ದೊಡ್ಡ ಚಪ್ಪರವನ್ನು ಹಾಕಿ, ಬೂಮಿಯಸ್ಟು ದೊಡ್ಡ ಹಸೆಯನ್ನು ಬರೆದು, ರತ್ನ ಕಚಿತವಾದ ಮಂಟಪದಡಿಯಲ್ಲಿ ಸಮಸ್ತ ಬಂದು ಬಾಂದವರ ಸಮಕ್ಸದಲ್ಲಿ ಅಗ್ನಿಸಾಕ್ಸಿಯಾಗಿ ನಮ್ಮ ಕನ್ಯಾ ರತ್ನವನ್ನು ದಾರೆಯೆರೆದು ಕೊಟ್ಟಿದ್ದೇವೆ. ಅಲ್ಲವೋ?'

''ಹೌದು'... (ಗಂಡ್‌ನ ಕಡೆವು)

'ಹಾಗಾದರೆ ನಿನ್ನೆಯ ದಿನ ಪುರುಸನನ್ನು ಮನ್ಮತನಂತೆಯೂ, ಕನ್ಯೆಯನ್ನು ರತಿದೇವಿಯಂತೆಯೂ ಶೃಂಗರಿಸಿದರಲ್ಲಾಗಲೀ, ರೂಪ ಲಾವಣ್ಯದಲ್ಲಾಗಲೀ ಏನೊಂದು ಕುಂದು ಕೊರತೆಯಿಲ್ಲದೆ, ರಾಮಚಕ್ರೇಶ್ವರನನ್ನು ಹೋಲುವ ಪುರುಸನದ್ವಯ ಹಸ್ತಗಳಿಗೆ, ಜಾರು ಹಸ್ತಗಳಾಗಿ ಮಾಡಿಸಿದರಲ್ಲಾಗಲೀ, ಯಾವ ಲೋಪಗಳೂ ಕಂಡು ಬಂದಿಲ್ಲವಸ್ಟೆ... ?'

'ಇಲ್ಲ... ' (ಗಂಡ್‌ನ ಕಡೆವು)

* ಹಾಗಾದರೆ ನಮ್ಮ ಮುದ್ದು ಬಾಲಕಿಯನ್ನು ನಿಮ್ಮ ಸ್ವಾದೀನಕ್ಕೆ ಒಪ್ಪಿಸಿಕೊಡುತ್ತೇವೆ. ಹಾಂಗೆ ಒಪ್ಪಿಸಿಕೊಡುವಾಗ ಬಾಲಕಿಗೆ ಹನ್ನೆರಡು– ಹನ್ನೆರಡು ಇಪ್ಪತ್ತನಾಲ್ಕು ವರಹಗಳನ್ನು, ಉಡಲು ವಸ್ತ್ರವನ್ನು, ತೊಡಲು ಚಿನ್ನಾಬರಣಗಳನ್ನು, ಊಟ ಮಾಡಲು ಬೆಳ್ಳಿ ಬಟ್ಟಲು, ಕೈ ತೊಳೆಯಲು ಬೆಳ್ಳಿಗಿಂಡಿಯನ್ನು, ಕರೆದುಣ್ಣಲು ಗೋವಿನ ಹಿಂಡನ್ನು, ಬಳುವಳಿಯಾಗಿ ಕೊಟ್ಟಿರುತ್ತೇವೆಯಸ್ಟೆ?'

'ಹೌದು'... (ಗಂಡ್‌ನ ಕಡೆವು)

'ಹೀಗಾಗಿ ನಾವ್ ಕೊಟ್ಟ ಕಿಂಚಿತ್ ಕಾಣಿಕೆಯನ್ನು ಒಂದಕ್ಕೆ ಹತ್ತು : ಹತ್ತಕ್ಕೆ ನೂರು, ನೂರಕ್ಕೆ ಸಾವಿರವೆಂದು ಬಾವಿಸಿ, ಅಬಿವೃದ್ಧಿ ಮಾಡಿಕೊಂಡು ಬಾವ ಕ್ಯಾತಿವಂತ ಮಹನೀಯರು ಯಾರಯ್ಯ?'

'ನಾವಯ್ಯ'

'ನಮ್ಮ ಬಾಲಕಿಗೆ ಕಡೆ ಹಲ್ಲು ಬಾತ್ಲೆ, ನೆತ್ತಿ ಎಣ್ಣೆ ಆರಲಿಲ್ಲ, ಕಡೆ ಬಾಯಿ ಹಾಲು ಆರಲಿಲ್ಲ, ಅಂಗೈ ಬರೆ ಮಾಜಲಿಲ್ಲ, ಬುದ್ದಿ ಜ್ಞಾನ ಬಾತ್ಲೆ. ಹೆತ್ತ ತಂದೆ ತಾಯಿಯರ ನೆನಪು ಮರೆಯಲಿಲ್ಲ. ಹಸಿ ಕಡಿಯಲರಿಯಳು, ಒಣಗಲು ಮುರಿಯಲರಿಯಳು, ಬೀಸಿ ಗುಡಿಸಲರಿಯಳು, ಹಾಸಿಗೆ ಹಾಸಲರಿಯಳು, ಅಂಗಳದಲ್ಲಿ ಆಡಿ, ಹಾಲನ್ನು ಉಂಡು, ಮೆಟ್ಟಿಲಲ್ಲಿ ಓಡಿ, ತೊಟ್ಟಿಲಲ್ಲಿ ಮಲಗಬೇಕೆಂಬ ಇಚ್ಚೆ ಇರುವ ಬಾಲಕಿಗೆ ತಕ್ಕ ಬುದ್ದಿವಾದವನ್ನು ಬೋದಿಸುವಂತ ಬೋದಕರು ಯಾರಯ್ಯ?'

'ನಾವಯ್ಯ'

'ನಮ್ಮ ಬಾಲಕಿಯು ಚಿಕ್ಕದಾಗಿರುವ ಕಾಲದಿಂದಲೂ ಮಾವನವರ ಮನ ಗುಣವನ್ನು ಅರಿಯಳು, ಅತ್ತೆಮ್ಮನವರ ಅಡಿಗೆ ಕೆಲಸ ತಿಳಿಯಲಿಲ್ಲ. ಬಾವ ಮೈದುನರ ಬಾವನೆ ಗೊತ್ತಿಲ್ಲ. ಅಕ್ಕ ತಂಗಿಯರ ಹಂಗಿಗೆ ಒಳಪಟ್ಟವಳಲ್ಲ. ಕುಟುಂಬದ ಕೂಟಕ್ಕೆ ಕೂಡಿದವಳಲ್ಲ. ಹೀಗಿರುವಲ್ಲಿ ತಮ್ಮ ಮದ್ಯೆ ಏನಾದರೂ ಮಾತಿನಲ್ಲಿ ಕಲಹಗಳು ಉಂಟಾದರೆ ಅಂವನ್ನು ಉಪಶಮನ ಮಾಡ್‌ವಂತಹ ಮಹನೀಯರು ಯಾರಯ್ಯ?'

'ನಾವಯ್ಯ' 'ಹಾಗಾದರೆ ದಿಬ್ಬಣದ ಮಹಾಶಯರೇ, ನಾವ್ ಹೇಳಿದ ಮಾತಿಗೆ ಎರಡೆನ್ನದೆ,

ನಾವ್ ಕೊಡುವ ಕನ್ಯಾರತ್ನವನ್ನು, ಬಕ್ತವತ್ಸಲನು ಬಕ್ತರನ್ನು ಪ್ರೀತಿಸುವಂತೆಯೂ, ನರಹರಿಯು ಕೂರ್‌ಮವನ್ನು ಕಾಯುವಂತೆಯೂ, ಹಸು ತನ್ನ ಎಳೆಗರುವನ್ನು ಪ್ರೀತಿಸು ವಂತೆಯೂ ಪ್ರೀತಿಸುವಿರೆಂಬುದಾಗಿ ಅಗ್ನಿಸಾಕ್ಷಿಯಾಗಿ ನಾವ್ ನಂಬುತ್ತೇವೆ. ಇನ್ನು ಮುಂದೆ ಈ ನವದಂಪತಿಯರನ್ನು ಬಕ್ತವತ್ಸಲನು ನಾಬಿ ಕಮಲದಲ್ಲಿ ಬ್ರಹ್ಮನಿಗೆ ಸ್ಥಾನವಿತ್ತವ ನಾದ ಆ ಕ್ಷೀರಶಯನ ಶ್ರೀಮನ್ನಾರಾಯಣನೇ ವಂದಿಸೋಣ'.

ಮಾತು ಮುಗ್‌ದಾಂಗೆ ಎಲ್ಲವು 'ಸ್ವಾಮಿ' ತೇಳಿ ಕೈ ಮುಗ್‌ದ್, ತಲೆಬಾಗ್‌ವೆ. ಕೆಲವ್ ಕಡೆ ಈ ಮಾತುಗಳ ಹೇಳ್ದಕೆ ಮೂಡಲಿ ಕಾಗಡೆನ ಸೋಬಾನೆನ ಹೇಳ್‌ವೆ. ಅದರ ಊರ್‌ಲಿ ಸೋಬಾನೆ ಹೇಳ್‌ದರ್‌ಲಿ ದೊಡ್ಡ ಹೆಸರ್ ಇರ್‌ವ ಮುತ್ತೈದೆ ಒಂದ್ ಹೇಳ್‌ದೆ.

ಪಟ್ಟೆ ಅಂಚಿನ ಮುದ್ದು ಮುತ್ತಿನ ಉಂಗುರವನಿಟ್ಟು
ಮುತ್ತಿನ ಹರಿವಾಣ ಬಲಗೈಲಿ ಇಡಕ್ಕೊಂಡು
ಮಗಳ ನಿಮ್ಮೊಶ ಕೊಡುತ್ತೇವೆ...

ಆರೆಂಬ ಲೆಕ್ಕ ಅರಿಯಳು ನಮ್ಮಗಳು ಮಗಳ ನಿಮ್ಮೊಶ ಕೊಡುತ್ತೇವೆ...

ಆರು ವರುಸ ಸಾಗಲಿಲ್ಲ ಬಾಯಿ ಹಲ್ಲು ತೆಗೆಯಲಿಲ್ಲ.
ಅಂಗಳ ಗುಡಿಸೋಳಲ್ಲ ತಂಗಳ ಊಟ ಮಾಡೋಳಲ್ಲ
ಅಂಗಳದಲ್ಲಿ ಆಟ ಆಡಿ ಬಾವ ಶಿಸುವನು
ಮಗಳ ನಿಮ್ಮೊಶ ಕೊಡುತ್ತೇವೆ.
ತಾಯಿಗೂ ತಂದೆಗೂ ಮೋಹದ ಕಿರಿಮಗಳು
ಸೆಲೆತುಪ್ಪ ಬಿಟ್ಟು ಸಲುಗ್ಯಾರು ನಮ್ಮನೆಯ
ಮಗಳ ನಿಮ್ಮೊಶ ಕೊಡುತ್ತೇವೆ..
ಕನ್ನೆ ಹುಟ್ಟಿದ ಮೇಲೆ ಕನ್ನಡಿಯಾಕಪ್ಪ
ಕನ್ನೆತಂಗ್ಯಮ್ಮ ಒಳಗಿಂದ ಬಾವಾಗ
ಕನ್ನೆಡಿಯಂತೆ ಹೊಳೆದಾಳು..
ಅಂಗಳ ಗುಡಿಸೋದು ಬಿಟ್ಟು ಗಂಗಳ ತೊಳೆಯೋದು ಬಿಟ್ಟು
ಕೂಡಿ ಆಡುವವರ ಮನೆ ಬಿಟ್ಟು ಜಾನಕಿ
ಬಾಳುವವರ ಮನೆಗೆ ನಡೆದಾಳೂ..
ಒಂದ್ ಮೆಟ್ಟು ಇಳಿದಾಳು ಹಿಂದಿರುಗಿ ನೋಡಿದಾಳು
ಅಪ್ಪಯ್ಯ ಬನ್ನಿಂತ ಕರೆದಾಳು ಜಾನಕಿಯು
ತುಂಬಿದ ಕಣ್ಣೀರು ಹರಿದ್ಯಾವು...
ಪಟ್ಟೆ ಸೆರಗೆಲ್ಲ ನೆನದಾವು...
ಎರಡು ಮೆಟ್ಟು ಇಳಿದಾಳು ಹಿಂದಿರುಗಿ ನೋಡಿದಾಳು
ತಾಯವ್ವ ಬನ್ನಿಂತ ಕರೆದಾಳು ಜಾನಕಿ
ತುಂಬಿದ ಕಣ್ಣೀರು ಹಿರಿದಾವು
ಪಟ್ಟೆ ಸೆರಗೆಲ್ಲ ನೆನೆದಾವು
ಮೂಡಣ ಮಂಟಪದಲ್ಲಿ ನಿಂತಾಳು ಮದುಮಗಳು
ಕೂಡ್ಯಾಡುವ ಸಂಸಾರ ಕರೆದು ಮಾತಾಡಲು
ತುಂಬಿದ ಕಣ್ಣೀರು ಹರಿದಾವು
ತಾಯಿತಂದೆಯರೆಲ್ಲ ಚಪ್ಪರತೋರಣ ತನಕ
ಮಿಕ್ಕುಳಿದವರೆಲ್ಲ ಹೊಳೆತನಕ, ಎಲೆಮಗಳೆ
ಬಾಳುವವರ ಮನೆಗೆ ನಡೇ ಬೇಗ
ಮಾವ ಬಾವಾಗ ಎದುರಿಗೆ ನಿಲ್ಲದಿರು
ಮಾವಂಗೆ ಉತ್ತರ ಕೊಡದಿರು ಎಲೆಮಗಳೆ
ಹಾಲುಹಣ್ಣು ಕೊಟ್ಟು ಸಲುಗ್ಯಾರು
ಅತ್ತೆ ಬಾವಾಗ ಎದುರಿಗೆ ನಿಲ್ಲದಿರು
ಅತ್ತೆಗೆ ಉತ್ತರಾಕೊಡದಿರು ಎಲೆಮಗಳೆ ನಿ
ಬಾ ಬಾಲೆ ಎಂದು ಕರೆದಾರೂ
ಪುರುಸ ಬಾವಾಗ ದೇವರೆಂದು ನಿಂತಿರು
ಪುರುಸರಿಗೆ ಉತ್ತರ ಕೊಡದಿರು ಎಲೆಮಗಳೆ ಪ
ಟ್ಟೆಯ ಕೊಟ್ಟು ಸಲುಗ್ಯಾನು
ಮಗಳತ್ತ ಕಳಿಸಿದರು. ತಾವಿತ್ತ ತಿರುಗಿದರು.
ಮಗಳು ಸಾಕಿನ್ನೀ ಜೆನುಮಕ್ಕೆ
ಬಳೆಗಾರ ಸೆಟ್ಟಿಯ ಬಳೆ ಯಾಕೆ ತಂದಿಯೋ




ಬಳೆ ಇಸುವ ಮಗಳೂ ಮನೇಲಿಲ್ಲ ಮಂಟಪದಲಿಲ್ಲ
ಬಾಗ್ಯವಂತರ ಮನೆಗೆ ನಡೆದಾಳು
ಕೆರೆಸುತ್ತ ಕೇದಿಗೆ ಮನೆಸುತ್ತ ಮಲ್ಲಿಗೆ
ಕೊಯ್ದು ಮುಡಿಯುವಾ ಮಗಳಿಲ್ಲ ಶೆಟ್ಟರೆ
ಬಾಳುವವರು ಮನೆಗೇ ನಡೆದಾಳು

ಈ ಸೋಬಾನೆ ಮುಗಿಯಕನ ಸೇರ್‌ದ ಮೊದ್ ಮಕ್ಕಳ ಕಡೆವು ಕಣ್ಣೀರ್ ಹಾಕಿಕಂಡ್ ಇದ್ದವೆ.

ಇದಾದ ಮೇಲೆ ಹೆಚ್ಚಿಗೆ ತಡಮಾಡದೆ ಮೊದೊಳಿಗೆನ ಕರ್‌ಕಂಡ್ ಮೊದ್‌ಮಜ್ಜನ ಕಡೆವು ಹೊರ್‌ಟವೆ. ಸೇರ್‌ದ ಹಿರಿಯರ ಪಾದ ಮುಟ್ಟಿ ನಮಸ್ಕಾರ ಮಾಡಿ ಮೊದೊಳಿಗೆ ಹೊರ್‌ಟದೆ. ಸಾಮಾನ್ಯ ಆಗಿ ಮೊದೊಳಿಗೆನ ತಂಗೆಕಳ್‌ಲಿ ಒಂದ್ ಮೊದೊಳಿಗೆನ ಒಟ್ಟಿಗೆ ಹೋಕು. ತಂಗೆ ಇಲ್ಲದಿದ್ದರೆ ಅದರ ಪರ್‌ಚಯದ ಗೂಡೆ ಹೋದೆ. ಹೀಂಗೆ ಮೊದೊಳಿಗೆನ ಒಟ್ಟಿಗೆ ಹೋಕಾದ ಗೂಡೆನ 'ಕುರ್‌ಂಟು'ತ ಕರ್‌ದವೆ. ಕುರ್‌ಂಟ್‌ನೊಟಿಗೆ ಮೊದ್‌ಮಕ್ಕ ತಮ್ಮ ಮನೆಯವರೊಟ್ಟಿಗೆ ತಿರ್‌ಗಿ ಬಂದವೆ.

**ಗಂಡ್‌ನ ಮನೆಲಿ :** ಮೊದ್‌ಮಕ್ಕ ಮೊದ್‌ವೆ ಮನೆಂದ ಹೊರ್‌ಟ್ ಬಂದ್, ಗಂಡ್‌ನ ಮನೆಂದ ಒಂದಸ್ಟ್ ದೂರಲಿ ನಿಲ್ಲೊಕು ಹಣೆಂದ ಸಡ್‌ಲ್ಸಿದ ಪಟ್ಟಿ ಬಾಸಿಂಗನ ಮತ್ತೆ ಹಾಕಣಕು. ಮಡ್‌ಲಕ್ಕಿ ತುಂಬಿದ ದಾರೆ ಸೀರೆನ ಗೂಡೆ ಹೆಗಲ್‌ಗೆ ಹಾಕಿಕಣಕು ಇಸ್ಟರ್‌ಲಿ ಗಂಡ್‌ನ ಕಡೆ ಹೆಣ್ಣ್‌ಮಕ್ಕ ಆರತಿ ತಟ್ಟೆ ಹಿಡ್‌ಕಂಡ್ ಅಲ್ಲಿಗೆ ಬಂದ್ ಸೋಬಾನೆ ಹೇಳ್‌ವೆ.

ಮೊದುಮಕ್ಕಳ ಇಜ್ಜಲ್‌ಗೆ ಕರ್‌ಕಂಡ್ ಬಂದವೆ. ಅಲ್ಲಿ ಚಪ್ಪರ ಹಾಕಿದ್ದವೆ. ಚಪ್ಪರದ ಬಾಗಲ್‌ಲಿ ಏಳ್ ಆರತಿ ಎತ್ತಿ, ಕಾಲ್ ತೊಳ್‌ದ್, ಮನೆ ಒಳೆಗೆ ಕರ್‌ಕಂಡ್ ಬಂದವೆ. ಮನೆಬಾಗ್‌ಲ್‌ಲಿ ಮೊದ್‌ಮಜ್ಜನ ಅಕ್ಕ ತಂಗೆಕ ಮೊದ್‌ಮಕ್ಕಳ ತಡ್‌ದ್ ನಿಲ್ಲ್‌ಸ್‌ವೆ.ಮೊದೊಳಿಗೆಗೆ ಮೊದ್‌ಮಜ್ಜ ಹೆಸರ್ ಹೇಳ್‌ವಂಗೆ ಒತ್ತಾಯ ಮಾಡ್‌ವೆ. ಅದ್ ಗಂಡನ ಹೆಸರ್‌ನ ಮೆಲ್ಲ ಉಸ್‌ರ್‌ಲಿ ಹೇಳ್‌ದ ಮೇಲೆ ಮೊದ್‌ಮಜ್ಜನ ಚುಡಾಯಿಸ್‌ವೆ. ಅಕ್ಕತಂಗೆಕಳ್‌ಲಿ ಒಂದ್, ಸುರುಗೆ ಮಗಳು ಹುಟ್ಟಿರೆ ನನ್ನ ಮಜ್ಜಂಗೆ ಕೊಡಕುತ ಕೇಳಿ, ಅದ್‌ಕೆ ಅಂವಂದ ಒಪ್ಪಿಗೆ ಪಡ್‌ದವೆ ಮುತ್ತೈದೆಗ ಸೋಬಾನೆ ಹೇಳಿಕಂಡೆ ಇದ್ದವೆ

ಸೋಬಾನೆ ಆದಾಂಗೆ ಸೀದಾ ಮನೆ ಒಳೆಗೆ ಹೋದವೆ. ಅಲ್ಲಿನು ಕನ್ನಿಕಂಬದ ಹಕ್ಕಲೆ ಗೋಡೆಲಿ ಹಸೆ ಬರ್‌ದಿದ್ದವೆ. ಅಲ್ಲಿ ಕುದ್ದ್ ಕುಡ್‌ತೆ ಹಾಲ್ ಕುಡ್‌ದ್, ಗೂಡೆನ ಮನೆಲಿ ನಡ್‌ಸಿದ ಹಾಂಗೆ ಬೂಮಿಕ್ಕುವ ಸಾಸ್ತ್ರ ಮಾಡ್‌ವೆ. ಅದಾಗಿ ಪಟ್ಟಿ ಬಾಸಿಂಗನ ಸಡ್‌ಲ್‌ಸಿರೆ ಆ ದಿನದ ಸಾಸ್ತ್ರ ಮುಗ್ದದೆ. ಗಂಡ್‌ನ ಮನೆಲು ಪಚಾರ ಕಾರ್‌ಯಕ್ರಮ ಇದ್ದರೆ ಅದೂ ನಡ್ದದೆ. ಸೇರ್‌ದವೆಲ್ಲ ಮೊದ್‌ಮಕ್ಕಳ ಹರ್‌ಸಿ, ಉಡುಗೊರೆ ಕೊಟ್ಟು, ಊಟ ಮಾಡಿ ಅವರವರ ಮನೆಗೆ ಹಿಂತಿರ್‌ಗುವೆ.

**ಕುರುಂಟು (ಸಂಗಾತಿ) ಕಳ್ಸುದು :** ಮೊದುಮಜನ ಮನೆಗೆ ದಿಬ್ಬಣ ಹೊರ್‌ಡಿಕನ ಮೊದೊಳಿಗೆನೊಟ್ಟಿಗೆ ಕಳ್ಸಿ ಕೊಡ್ವ ಸಣ್ಣಪ್ರಾಯದ ಗೂಡೆನ ಇಲ್ಲರೆ ಹೈದನ ಕುರುಂಟುತೇಳಿ ಕರ್‌ದವೆ. ಯಾರ ಗೊತ್ತಿಲ್ಲದೆ ಮನೆಗೆ ಬರ್‌ವ ಮೊದೊಳಿಗೆನೊಟ್ಟಿಗೆ ಮಾತ್‌ಕತೆಗೆ ಹಂಗೆನೆ ಮನೆಂದ ಹೊರಗೆ ಹೋಕಾಕನ ಹಂಗೆನೆ ಮೊದುಮಜ್ಜ-ಮೊದೊಳಿಗೆನ ಮಾತಾಡ್ಸಿಕೆ ನೆಡುಲಿ ಒಂದ್ ಪಾಸಡಿ ಆಗಿ ಎಲ್ಲದಕೂ ಮೊದೊಳಿಗೆಗೆ ಒಟ್ಟಿಗೆ ಕುರುಂಟುನ ಕಳ್ಸುವೆ.

**ಕುರುಂಟು ಒಪ್ಪುಸುದು :** ಕುರುಂಟುನ ಮೊದೊಳಿಗೆನ ಊರ್‌ಗೌಡ್ರ್‌ಗೆ ಒಪ್ಪುಸುದು ಮೊದುಮಜ್ಜನ ಕಡೆನ ಊರುಗೌಡ್ರ್. ಕುರುಂಟುನ ಗೂಡೆನ ಮನೆವು ಹೈದನ ಕಡೆವರ ಕಣ್ಣ್ ತೊಪ್ಪ್‌ಸಿ ಅಡ್‌ಂಗುಸುವೆ. ಹೈದನ ಕಡೆವ್ಕೆ ಹುಡ್ಕಿ ಒಪ್ಪುಸಿಕೆ ಆಗದಿದ್ದರೆ ಸೂಡಿ ಎಲೆ ಅಡಿಕೆನೊಟ್ಟಿಗೆ ಹರಿವಾಣಲಿಸಿ ತೊಪ್ಪು ಒಪ್ಪುಸುವ ಕ್ರಮ ಉಟ್ಟು.

ಮತ್ತೆ ಮನೆ ಯಜಮಾನ ಹೈದನ ಕಡೆನ ಊರುಗೌಡ್ರ ತುಪ್ಪದ ಚೊಂಬು ಬಿಚ್ಚಿಕೆ ಕರ್‌ದವೆ. ಕ್ರಮಲಿ ಕಟ್ಟಿದ ತುಪ್ಪದ ಚೊಂಬುನ ಗೂಡೆನ ಕಡೆನ ಊರುಗೌಡ್ರು ಬಿಚ್ಚಿ ಹೈದ-ಗೂಡೆನೊಟ್ಟಿಗೆ ನಂದಾದೀಪಕೆ ತುಪ್ಪ ಹಾಕ್ಸುವೆ. (ತುಪ್ಪದ ಬಾಯಿ ಕಟ್ಟಿದ್ದ್ ತಪ್ಪಿರೆ ಹೈದನ ಕಡೆಂದ ತೊಪ್ಪು ಕೇಳುವೆ) ಒಳ್ದ ತುಪ್ಪನ ಆ ದಿನದ ಉಂಬಕೆ ಬಡ್ಸುವ ಕ್ರಮ ಉಟ್ಟು.

ಉಂಬಕೆ ಹೈದ-ಗೂಡೆಗ ಹಂಗೆನೆ ಹೈದನ ಕಡೆನ ಊರುಗೌಡ್ರು, ಅಡೋಳಿ, ಕಂಚಿಮಿ ಸಮೇತ ಮೂಡಕೆ ಮೋರೆಮಾಡಿ ಮೇಲ್ಕಟ್ಟ್‌ನಡಿಲಿ ಕುದ್ದವೆ. ಉಂಬಕೆ ಇವ್ಕೆ ವಿಸೇಸ ಆಗಿ ಕೊಡಿ ಬಾಳೆಲೆನ ಕೊಡೊಕು. ಇವರ ಬಾಳ್ಲೆನ ಕೊಡಿಗೆ ಆ ದಿನ ಮಾಡ್ದ ಹೊಸಬಗೆನ ಚಟ್ನಿನ ಇಕ್ಕಿ, ಗೂಡೆನ ಅಣ್ಣ-ತಮ್ಮಂದ್ರ್ ಹಂಗೆನೆ ಮನೆವು ಒಂದ್ ಚೊಂಬು ನೀರ್‌ನ ಇಸಿ ಪೊಜ್ಜಿ ಹೆಸ್ರ್ ಹೇಳಿ ಊಟಂದ ಎದ್ರೊಕುತ ಹೇಳ್‌ವೆ. ಊಟ ಮಾಡ್ತಿರ್‌ಕನ ಹೈದನ ಕಡೆವ್ಕೆ ಪೊಜ್ಜಿ ಹಾಕಿದ ಹೆಚ್ಚುವರಿ ವಸ್ತುಗಳ ಹೆಸ್ರ್ ಹೇಳ್ದು ಸಾಗಿದೆ. ಹೆಸ್ರ್ ಹೇಳದಿದ್ದರೆ ಹೈದನ ಕಡೆವು ಸೋಲೊಪ್ಪಿಕಂಡ್ ಊಟಂದ ಎದ್ದವೆ. ಹಿಂದೆನ ಕಾಲಲಿ ಆ ದಿನ ರಾತ್ರೆ ಅಲ್ಲೇ ಒಳ್ದ್ ಮಾರ್‌ನೆದಿನ ಹೊರ್‌ಡುದು ಕ್ರಮ. ಹೈದನ ಮನೆಗೆ ಹೊರ್‌ಡುವ ಮುಂದೆ ಊರುಗೌಡ್ರು ಹೈದ-ಗೂಡೆನ ಮನೆ ಒಳಗೆ ಹಸೆ ಮೊಂದ್ರಿನ ಮೇಲೆ ಕುದುರ್‌ಸುವೆ. ತುಪ್ಪದ ಚೊಂಬುಗೆ ಕಲ್ಸಿದ ಸ್ಹೀಂ ಅವ್ಲೆಕಿ (ಅವಲಕ್ಕಿ+ಬಾಳೆಹಣ್ಣು+ಬೆಲ್ಲ) ಮತ್ತೆ 5 ವೀಳ್ಯದೆಲೆ, 1 ಅಡ್ಕೆ ಹಾಕಿ ಬಾಯಿ ಕಟ್ಟೊಕು. (ತುಪ್ಪದ ಚೊಂಬು ಕಟ್ಟುದು ಅಮ್ಮ ಅತವಾ ಹಿರಿಯ ಮುತ್ತೈದೆ) ಊರುಗೌಡ್ರು ಮನೆ ದೆವ್ವ ದೇವರುಗಳಿಗೆ ಪ್ರಾರ್‌ತನೆ ಮಾಡಿಯಾದ ಮೇಲೆ ಹೈದ-ಗೂಡೆನು ದೀಪಕೆ ಕೈಮುಗ್ದು ದೊಡ್ಡವರ ಆಸಿರ್‌ವಾದ ಪಡ್ದವೆ. ಗೂಡೆನ ಅಮ್ಮ ಹಂಗೆನ ದೊಡ್ಡೊವು (ಮುತ್ತೈದೆಯರ್) ಚೊಂಬು ಎತ್ತಿ ಕೊಟ್ಟವೆ. ಮತ್ತೆ ಹೈದ-ಗೂಡೆನ ಮನೆಂದ ಕಳ್ಸಿಕೊಟ್ಟವೆ. ಮನೆಗೆ ಬಂದ ಮೇಲೆ ಹೈದ-ಗೂಡೆನ ಹಸೆ ಮೊಂದ್ರಿಲಿ ಕುದುರ್‌ಸಿ ಹೈದನ ಮುಹೂರ್‌ತದ ಮಣಿನ ಸೋದರಮಾವ ಬಿಚ್ಚಿಸುವೆ.

**ನಾಗೋಳಿ ಶಾಸ್ತ್ರ :** ಇದು ಗೂಡೆ ಗಂಡನ ಮನೆಗೆ ಬಂದ ಮೂರ್‌ನೆ ದಿನ ನಡ್‌ದದೆ. ಈ ಕಾರ್‌ಯಕ್ರಮಕೆ ಗೂಡೆನ ಮನೆಂದ ಕೆಲವ್ ಜೆನ ಬಂದಿದ್ದವೆ.

ಮೊದ್‌ಮಕ್ಕಳ ಚಪ್ಪರದಡಿಗೆ ಕರ್‌ಕಂಡ್ ಬಂದ್, ಅವರ ಕೈಗೆ ಅಗಲ ಬಾಯಿನ ಒಂದ್ ಪಾತ್ರೆ ಕೊಟ್ಟವೆ.. ಆ ಪಾತ್ರದೊಳೆಗೆ ಚಿನ್ನದ ಉಂಗುರ ಹಾಕಿ, ಅರಸಿನದ ನೀರ್‌ನ ತುಂಬ್‌ಸ್‌ವೆ. ಮೊದ್‌ಮಕ್ಕಳ ಏಕಕಾಲಕೆ ಅದರೊಳೆಗೆ ಕೈ ಹಾಕಿ ಉಂಗುರನ ತೆಗಿಯಕು ಮೂರ್ ಸರ್‌ತಿ ತೆಗಿಯಕನ ಯಾರ್ ಜಾಸ್ತಿ ಸರ್‌ತಿ ಉಂಗುರ ಹಿಡ್‌ದವೆನೊ ಅವ್ ಗೆದ್ದವೆ.

ಅದಾಗಿ ದೊಡ್ಡ ಪಾತ್ರಲಿ ಅರಸಿನದ ನೀರ್‌ನ ತುಂಬುಸಿದರ ಮೊದ್‌ಮಕ್ಕ ಒಬ್ಬಂದೊಬ್ಬ ಅದರ ಚೋಂಪಿಕಣಕು. ಇಬ್ಬರೂ ಇಡೀ ಚೆಂಡಿ ಆವವರೆಗೆ ಇದ್ ನಡ್‌ದದೆ. ಅದಾಗಿ ಚೆಂಡಿ ಬಟ್ಟೆಲಿ ಚಪ್ಪರದ ಮೂಲೆಲಿ ಹಾಕಿರ್‌ವ 12 ಕಂಬಗಳ ಹಕ್ಕಲೆ ಬಂದವೆ. ಈ 12 ಕಂಬಗಳ ನಡುಲಿ ಹಾಲೆ ಮರದ ಒಂದ್ ಕಂಬ ಇದ್ದದೆ. ಇದರ ಬುಡಲಿ ಒಂದ್ ಹೆಡೆಗೆ ದನದ ಗೊಬ್ಬರ ಇಸಿದ್ದವೆ.ಮೊದ್‌ಮಜ್ಜ ಅದರ ಮೊದೊಳಿಗೆಗೆ ಹೊರ್‌ಸಕು.ಮೊದ್‌ಮಜ್ಜ ಹಾಲೆಮರದ ಕಂಬನ ಹೊತ್ತ್‌ಕಂಡ್ ಹೋಗಿ ಮನೆನ ಹಿತ್ಲ್‌ಲಿ ನೆಟ್ಟವೆ. ಮೊದೊಳಿಗೆ ಗೊಬ್ಬರ ಅದರ ಬುಡಕೆ ಹಾಕಿದೆ.. ದಾರೆ ಹೊತ್ತುಲಿ ಹಾಕಿದ್ದ ಮಾಲೆನ ಆ ಹಾಲೆ ಮರಕೆ ಸೆಕ್ಕ್‌ಸಿದ ಮೇಲೆ ಇಬ್ಬೊರು ಹಿಂದೆ ಬಂದವೆ.

ಮತ್ತೆ ಚಪ್ಪರದಡಿಲಿರ್‌ವ 12 ಕಂಬಗಳ ಕರೆಗೆ ಬಂದವೆ. ಈ ಕಂಬಗಳ ಎದುರ್‌ಗೆ 12 ಬಾಳೆ ಎಲೆ ಹಾಕಿ, ಅದ್‌ಕೆ ಪಾಯಸ, ತುಪ್ಪ, ಹಪ್ಪಳ ಇಂತ ತಿಂಡಿಗಲ ಹಾಕಿಸ್‌ವೆ. ಗೂಡೆ ಕಾಯಿನ ಒಡಿಯಕು. ದೇವ್‌ರ್‌ಗೆ ಆರತಿ ಆದೆ.ಅದಾಗಿ ಗಂಡ್ ಎಡದ ಕೈಂದ ಮೊದೊಳಿಗೆಗೆ ತುಂಬೆ ಹೂನ ಮುಡ್‌ಸಕು. ಮೊದೊಳಿಗೆ ಬಲದ ಕೈಲಿ ಮೊದ್‌ಮಜ್ಜನ ತಲೆಗೆ ತುಂಬೆ ಹೂನ ಮುಡ್‌ಸಕು. ಅದಾಗಿ ಇಬ್ಬೊರು ಕಂಬಕೆ ಮೂರ್ ಸುತ್ತು ಬಂದವೆ. ಇದರ 'ಗೌರಿ ಪೂಜೆ' ತ ಕರ್‌ದವೆ. ಇಲ್ಲಿ ತುಂಬೆ ಪ್ರದಾನ ಪಾತ್ರ ವಯಿಸಿದೆ.

ಗೌರಿಪೂಜೆನ ಮೇಲೆ ಮೊದ್‌ಮಜ್ಜ ಮನೆಗೆ ಹೋಕನ ಮೊದೊಳಿಗೆ ಅವಂಗೆ ಆರತಿ ಎತ್ತೊಕು.ಅದ್ ಎತ್ತಿದ ಆರತಿ ತಟ್ಟೆಗೆ ಐದು ವೀಳ್ಯದೆಲೆ, ಒಂದ್ ಅಡ್‌ಕೆ ಮತ್ತೆ ಬೆಳ್ಳಿ ಪಾವಲಿಯೊಂದರ ಗಂಡ್ ಹಾಕಿ ಗೌರವ ಕೊಟ್ಟದೆ. ಮುಂದೆ ಪಟ್ಟಿ ಬಾಸಿಂಗನ ತಿರುಪತಿ ವೆಂಕಟರಮಣ ದೇವರ ಮುಡ್‌ಪುಗೆ ಹಾಕ್‌ವ ಕೆಲಸನ ಈ ಗಂಡೆಣ್ಣ್ ಮಾಡುವೆ.

'ಮಡಿಲಕ್ಕಿ'ನ ಈಗ ಬೇಸಿ ನೈವೇದ್ಯ ಮಾಡ್‌ವೆ. ಮೊದೊಳಿಗೆ ಗಂಡಂಗೆ ತಿನ್ಸಕು. ಗಂಡ ಉಂಡ ಮೇಲೆ ಅದೇ ಬಟ್ಟಲ್‌ಲಿ ಹೆಣ್ಣ್‌ನು ಊಟ ಮಡ್‌ದೆ. ಸೇರ್‌ದ ನೆಂಟರಿಸ್ಟರ್‌ನು ಊಟ ಮಾಡ್‌ವೆ. ಇದಿಸ್ಟ್ ಮೊದ್‌ಮಜ್ಜನ ಮನೆಲಿ ನಡಿವ ಕಾರ್‌ಯಕ್ರಮಂಗ.

ತುಪ್ಪದ ಕಟ್ಲೆ : ಮೊದ್‌ವೆ ಆದ ಐದನೇ ಅಲ್ಲರೆ ಏಳನೇ ದಿನ ತುಪ್ಪದ ಕಟ್ಟ್‌ಲೆ ನಡ್‌ದದೆ.. ಆ ದಿನ ಸುಮಾರ್ ಒಂದ್ ಸೇರಿನಸ್ಟ್ ತುಪ್ಪನ ಕೊಡ್ಪಣಕೆ ಹಾಕಿ ವರನೂ, ಅರ್‌ದ ಸೇರ್‌ನಸ್ಟ್ ತುಪ್ಪನ ಗೂಡೆ ಹಿಡ್‌ಕಂಡ್ ಬಂದುಗಳ ಒಟ್ಟಿಗೆ ಗೂಡೆನ ತೊವ್‌ರ್ ಮನೆಗೆ ಬಂದವೆ. ಇಸ್ಟರವರೆಗೆ ಗೂಡೆನ ಒಟ್ಟಿಗಿದ್ದ 'ಕುರುಂಟು' ಈಗ ಅವರೊಟಿಗೆ ವಾಪಾಸ್ ಬಂದದೆ,ಗಂಡ್‌ನ ಕಡೆವು 'ಕುರ್‌ಂಟ್'ಗೆ ವಿಸೇಸ ಆದ ಉಡುಗೊರೆನ ಕೊಟ್ಟವೆ.

ತೊವ್‌ರ್ ಮನೆನ ಬಾಗ್‌ಲ್‌ಲಿ ಆರತಿ ಎತ್ತಿ, ಸೋಬಾನೆ ಹೇಳಿ ಇವರ ಬಾಕೆಮಾಡಿಕಂಡವೆ. ಕುಡಿಯಕೆ ಹಾಲ್ ಅಲ್ಲರೆ ಬೆಂಡನೀರ್ ಕೊಟ್ಟ್ ಆದರ್‌ಸುವೆ. ಕೋಳಿ ಮಾಸದೂಟ ಸಮ್ಮಾನ ಆದೆ.. ಮೊದ್‌ಮಕ್ಕ ತಂದ ತುಪ್ಪನ ಉಂಬಕೆತ ಬಳ್‌ಸ್‌ವೆ. ಸತ್ತ್ ಹೋದ ಹಿರಿಯರ ನೆಂಪುಸಿಕಂಡ್ 'ಕೊಲೆಗಳಿಗೆ ಇಸಿ ಕೈ ಮುಗ್‌ದ್ ಗೌರವ ಕೊಟ್ಟವೆ. ಅದೇ ದಿನ ಅಲ್ಲರೆ ಮರ್‌ದಿನ ಗಂಡೆಣ್ಣ್ ತಮ್ಮ ಮನೆಗೆ ಹಿಂದೆ ಹೋದವೆ.

**ಹತ್ತ್ ಒಳೆದು :** ಇದರ 'ಕಾಲ್ ಬೊಚ್ಚಿಗೆ ಕರ್‌ಕಂಡ್ ಬಾದ್' (ಕಾಲಿನ ಆಯಾಸಕ್ಕೆ ಕರೆದುಕೊಂಡು ಬಾವುದು) ತ ಕರ್‌ದವೆ. ತುಪ್ಪದ ಕಾರ್‌ಯ ಆದ ಮೇಲೆ ಗಂಡನ ಮನೆಲಿ ಗೂಡೆ ಹೊಸ ಪರಿಸರಕೆ ಏಕಾಂಗಿ ಆಗಿದ್ ಒಗ್ಗಿಕಣಕಾದೆ. ಅಸ್ಟರವರೆಗೆ ಇದ್ದ ಕುರ್‌ಂಟು ಇಲ್ಲದ್ದರ್‌ಂದ ಸಹಜಾಗಿ ಅದ್‌ಕೆ ಬೇಜಾರಾದುಟ್ಟು, ಇದರ ತೊವ್‌ರ್ ಮನೆವು ಅರ್‌ತ ಮಾಡಿಕಂಡದರ್‌ಂದ ತುಪ್ಪದ ಕಾರ್‌ಯಕ್ರಮದ 10–15 ದಿನಗಳ ಮೇಲೆ, ಗೂಡೆನ ಅಣ್ಣಂದರ್ ಯಾರಾರ್ ಹೋಗಿ ಅದರ ಮತ್ತೆ ಕರ್‌ಕಂಡ್ ತೊವ್‌ರ್‌ಗೆ ಬಂದವೆ.ಈ ಸರತಿ ಅದ್ ಗಂಡ ಒಪ್ಪಿರೆ ಎಸ್ಟ್ ದಿನ ಬೇಕರು ನಿಲ್ಲಕ್. ಸುಮಾರ್ 10 ರಿಂದ 15 ದಿನಗಳವರೆಗೆ ನಿಲ್ಲುದು ರೂಡಿ. ಈ ದಿನಲಿ ಅದ್ ಗಂಡನ ಮನೆನ ಬಗ್ಗೆ ತನ್ನ ಅಯ್ಯೆನೊಟಿಗೆ ಸಂಗತಿ ಹೇಳಿಕಂಡದೆ. ನಿಗಂಟ್ ಮಾಡ್‌ದ ದಿನದಂದ್ ಗಂಡ ಬಂದ್ ಹೆಣ್ಣ್‌ನ ಕರ್‌ಕಂಡ್ ಹೋದೆ..

**ಆಟಿ ಕುದುರ್‌ದು :** ತುಳುನಾಡ್‌ಲಿ ಆಟಿ ತಿಂಗಳ ಕಡು ಬಡತನದ ಕಾಲ. ಈ ಕಾಲಲಿ ಹೊಸ ಗಂಡೆಣ್ಣ್ ಒಬ್ಬರ್‌ಂದೊಬ್ಬ ಮೋರೆ ನೋಡಿಕಂಬಕಾಗದ್‌ತ ಉಟ್ಟು ಅದ್‌ಕಾಗಿ ಗೂಡೆನ ಮನೆವು ಅದರ ತೊವ್‌ರ್‌ಗೆ ಕರ್‌ಕಂಡೋದವೆ. ಆಟಿ ಕಳ್‌ದ ಮೇಲೆ ಗಂಡನ ಮನೆಗೆ ಕಳ್‌ಸಿ ಕೊಟ್ಟವೆ.. ಇದ್ ಹೊಸಮೊದ್‌ಮಕ್ಕಳ ಕಡೆ ಕಾರ್‌ಯಕ್ರಮ.

ಮೊದ್‌ವೆ ಆದದ ಸುರುನ ವರ್‌ಸದ ದೀಪಾವಳಿನ ಗಂಡ ಹೆಣ್ಣ್ ಸಾಮಾನ್ಯ ಆಗಿ ಹೆಣ್ಣ್‌ನ ತೊವ್‌ರು ಮನೆಲಿ ಆಚರ್‌ವೆ. ಕೊಡಗ್‌ನ ಭಾಗಮಂಡಲ ಪರಿಸರದ ಗೌಡರ ಮೊದ್‌ವೆನು ಇದರಂಗೆ ನಡ್‌ದದೆ. ಮೊದ್‌ವೆನ ಮುಂದೆನ ದಿನ ನಡಿವ ಮೊದುರಂಗಿ ಸಾಸ್ತ್‌ರ ದಿನ ಅಲ್ಲಿ ಬರ್‌ಜರಿ ಉಂಬಕೆ ಇದ್ದದೆ ಅದ್ 'ಚಪ್ಪರದೂಟ'ತ




ಹೆಸರಾಗುಟು.. ಮೊದ್‌ವೆ ದಿನ ಗೂಡೆನ ಅದರ ಸೋದರಮಾವ ಎತ್ತಿಕಂಡ್ ದಾರೆಮಂಟಪಕೆ ಬರಕು. ಸುಳ್ಯ ಪರಿಸರದಲ್ಲಿ ಕನ್ನಿಕಂಬ ಪ್ರದಾನವಾಗಿದ್ದರೆ, ಕೊಡಗಿನಲ್ಲಿ ನೆಲ್ಲಕ್ಕಿ ದೀಪ' ಪ್ರದಾನ ಆಗುಟು. ಒಳ್‌ದಾಂಗೆ ಯಾದೆ ವೆತ್ಯಾಸ ಇಲ್ಲೆ.

**ಪುನರ್‌ವಿವಾಹ ಪೊದ್ದತಿ/ಎರ್‌ಡ್‌ನೆ ಮೊದ್‌ವೆ :** ಗೌಡರ್‌ಲಿ ಎರಡನೇ ಮೊದ್‌ವೆಗೆ ಯಾವ ಅಡ್ಡಿ ಇಲ್ಲದಿರ್‌ದರ್‌ಂದ, ಗೌಡರ್‌ಲಿ ಸಾಮಾನ್ಯ ಆಗಿ ವಿದವೆನ ಕಲ್ಪನೆ ಇತ್ತ್‌ಲೆ. ಮರು ಮೊದ್‌ವೆನ 'ಕೈ ಹಿಡೆದು' ತೇಳ್‌ವೆ. ಮರು ಮೊದ್‌ವೆಲಿ ದಾರಾಮಂಟಪ ಇರ್‌ದುಲೆ. ಊರ್‌ನ ಗಣ್ಯರೆದುರ ವರನು ತಾಳಿ ಕಟ್ಟಿದೆ. ಗಂಡ್‌ನ ಕಡೆಂದ ಗೂಡೆಗೆ ಒಂದ್ ಸೀರೆ, ರವಿಕೆ ಮತೆ ಹರಿವಾಣ ಸಂದಾಯ ಆಕು.

**ಮೊದ್‌ವೆನ ಕೆಲ ನಿಸೇದಂಗ :** 1. ಅಣ್ಣ ಸತ್ತರೆ ಅತ್ತಿಗೆಯನ್ನು ತಮ್ಮ ಮೊದ್‌ವೆ ಮಾಡಿಕಂಬಕಿಲ್ಲೆ. ತಮ್ಮ 'ಸತ್ತರೆ ಅಂವನ ಹೆಣ್ಣ್‌ನ ಅಣ್ಣ ಮೊದ್‌ವೆ ಮಾಡಿಕಣಕ್. 2. ಒಂದೇ ಬೊಳಿಯೊಳಗೆ ಮೊದ್‌ವೆ ಆಕಿಲ್ಲೆ. 3. ಮೊದ್‌ವೆ ಆವ ಹೆಣ್ಣು ಮೈನೆರ್‌ದಿರಕು. 4. ಮೊದ್‌ವೆ ಆಗದ ಗಂಡಸು ವಿದವೆನ ಮೊದ್‌ವೆ ಮಾಡಿಕಂಬಕಿಲ್ಲೆ. 5. ಒಂದ್ ಕುಟುಂಬಂದ ಹೊರೆಗೆ ಹಾಕಿದ ಹೆಣ್ಣ್‌ನ ಆ ಕುಟುಂಬದವ್ ಯಾರು ಮರು ಮೊದ್‌ವೆ ಮಾಡಿಕಂಬೊದುಲೆ. 6. ವಿದವೆಯ ಮೂಗುತಿ, ತಾಳಿ, ಕಾಲುಂಗುರ, ಕರಿಬಳೆ, ಕರಿಮಣಿ ಮತ್ತೆ ಹಣೆಗೆ ಬೊಟ್ಟುನ ಇಸಿಕಂಬದುಲೆ. ಅದ್ ಮರು ಮೊದ್‌ವೆ ಮಾಡಿಕಂಡರೆ ಕಾಲುಂಗುರ, ತಾಳಿ ಮತ್ತೆ ಹಣೆ ಬೊಟ್ಟುನ ಹಾಕಕ್. 7. ಗಂಡ್‌ನ ಕಡೆಂದ ಗೂಡೆಗೆ ನಾಲ್ಕೂವರೆ ರೂಪಾಯಿ ತೆರವು ಹಣ ಕಟ್ಟುವೆ. ಎರ್ಡ್‌ನೆ ಮೊದ್‌ವೆ ಆದರೆ ಎರಡೂವರೆ ರೂಪಾಯಿ ಸಾಕ್, ಮೂರನೇ ಮೊದ್‌ವೆಯಾದರೆ ಒಂದ್ ರೂಪಾಯಿ ಮತ್ತೆ ಎರಡಾಣೆ, ನಾಲ್ಕನೇ ಮೊದ್‌ವೆ ಆದರೆ ಒಂದ್ ಬಿಳಿ ಸೀರೆ ಮಾತ್ರ ತೆರವು ಕಟ್ಟಿದರೆ ಸಾಕು. 8. ಒಂದ್ ದಾರಾಮಂಟಪಲಿ ಒಂದೇ ಮೊದ್‌ವೆ ಆದೆ. 9. ಮರುಮೊದ್‌ವೆನ ಹೆಣ್ಮಕ್ಕ ಮತ್ತೆ ವಿದವೆಗ ಮೊದ್‌ವೆ ಉದ್ದಕೆ ಯಾವ ಆರತಿನ ಎತ್ತಿಕಾಗದ್. ಸೋಬಾನೆ ಹೇಳಿಕಾಗದ್. 10. ಮಗನ ಮೊದ್‌ವೆನ ಅಯ್ಯೆ ನೋಡಿಕಾಗದ್.

ಗೌಡ ಹಿರಿಯರ್‌ಲಿ ಸುಮಾರ್ ಜೆನ ಎರಡು ಮೊದ್‌ವೆ ಮಾಡಿಕಂಡೊವ್ ಒಳೋ.ಸುರುನ ಹೆಣ್ಣ್ ಬಂಜೆ ಆಗಿದ್ದರೆ ಅಲ್ಲರೆ ತೀರಿಕಂಡರೆ ಅದ್ ತಂಗೆನ ಮೊದ್‌ವೆ ಆದು ರೂಡಿ. ಯಾಗೊಳು ಹೆಣ್ಣ್‌ನ ಪ್ರಾಯ ಗಂಡ್‌ಂದ ಕಡಿಮೆ ಇದ್ದದೆ. ಆಕಸ್ಮತ್ತಾಗಿ ಹೆಚ್ಚಿದ್ದರೆ ದಾರೆ ಆಕನ ಬೆಳ್ಳಿ ಪಾವಲಿ ಒಂದರ ಅದರ ನೆತ್ತಿಲಿ ಇಸುವೆ.

ಮೇಲೆನ ವಿವರಣೆಲಿ ಸ್ಪಸ್ಟ ಆಗಿರ್‌ವಂಗೆ, ಗೌಡ್‌ರ್ ಮೊದ್‌ವೆನ ಬೊದ್‌ಕ್‌ನ ಬಾರಿ ಮುಕ್ಯ ಗಟ್ಟಂತ ಒಪ್ಪಿಕಂಡೊಳೊ. ಅದ್ 'ಮನೆತನದ ಗೌರವ'ವನ ತೋರ್‌ಸಿದತ ಹೇಳ್‌ದು ಅವರ ನಂಬಿಕೆ. ಕುಟುಂಬ ಮತೆ ಸಮಾಜದ ಉದ್ದಗಲನ ನಿರ್‌ದರ್‌ಸ್‌ವೆ.ಮೊದ್‌ವೆ ದಿನ ನಿಗಂಟ್ ಮತೆ ಮುಹೂರ್‌ತದ ನಿರ್‌ದಾರನ ಮನೆನ ಜಗಲಿಲಿ' ಅಲ್ಲರೆ ಅರೆಬಾಸೆಲಾರೆ 'ಕೈಯ್ಯಾಲೆ'ಲೆ ಮಾಡಕು. ಕೈಯಾಲೆ ಅಲ್ಲರೆ ಜಗಲಿ ಮನೆನ ಒಳಗೂ ಅಲ್ಲದ, ಹೊರಗೂ ಅಲ್ಲದ ನೊಡುನ ಜಾಗೆ, ಸಮತೋಲನ ಇರ್‌ವ ಜಾಗೆ, ಅಂದರೆ, ಜಗಲಿನ ಸಂಸ್ಕೃತಿನ ಅಂತರಂಗ ಮತ್ತೆ ಬಹಿರಂಗಗಳ ನಡುಲಿ ಮದ್ಯೆ ಸಮ್ಮಂದ ಆಕೆ ಉಪಕಾರ ಆವ ಜಾಗೆ, ಹೆಣ್ಣು ಇನ್ನೂ ಮನೆ ಒಳೆಗೆ ಬಂದಿರದ ಕಾರಣ ಹೆಣ್ಣ್‌ನ ಕಡೆವು ಜಗಲಿಲಿ ಮಾತುಕತೆ ಮಾಡಿಕಂಡವೆ. ಈ ಮಾತ್‌ಕತೆ ಮುಕ್ಯ ಆದ್ದರ್‌ಂದ ಮೊದ್‌ವೆ ಇರ್‌ವ ಎಲ್ಲಾ ಗೌಡರ ಮನೆಲಿ 'ಜಗಲಿ' ಇದ್ದೇ ಇರಕು. ಇದ್ ಅವರ ವಾಸ್ತುನ ಮೂಲ ಒಂದ್. ಕೂಡ್‌ಕುಟ್‌ಂಬ ಪೊದ್ದತಿ ಇರ್‌ವಲ್ಲಿ ಮೂಲ ಮನೆಲೆ(ತರವಾಡಿನ ಮನೆ, ಐನ್ ಮನೆ) ಜಗಲಿ ಇದ್ದು, ಅಲ್ಲೆ ಮೊದ್‌ವೆ ನಿರ್‌ದಾರ ಆದದೆ. ಜಗಲಿ ಇಲ್ಲದೆ ಗೌಡರ್‌ಲಿ ಮೊದ್‌ವೆ ಆದುಲೆ.

ಸಾಮಾನ್ಯ ಆಗಿ ಮೊದ್‌ವೆನ ಹಿಂದೆನ ದಿನ ನಡೆವ ಎಲ್ಲಾ ಆಚರಣೆಗ ಮೊದುಮಕ್ಕಳ ಸಾಮಾನ್ಯ ಜೀವನ ಕ್ರಮದಿಂದ ಪ್ರತ್ಯೇಕ ಮಾಡಿದ್ದವೆ. ಮತ್ತೆ ಹಾಂಗೆ ಮಾಡ್‌ದು ಮಾತ್ರ ಸಾಮಾನ್ಯ ಜೀವನಕ್ರಮಲಿ ಅವು ಅಸಾಮಾನ್ಯ'ರಾಗಿ ಪ್ರತ್ಯೇಕ ಜಾಗೆ ಪಡ್‌ಕಂಡವೆ. ಇದ್ ಗೊತ್ತಾಕೆ, ಅವರ ಮಿಸ್‌ವೆ.ಬಿಳಿ ಬಟ್ಟೆ ಉಡ್‌ಸ್‌ವೆ. ಗಂಡ್‌ಗೆ ಚೌರ ಮಾಡ್‌ಸ್‌ವೆ ಪಟ್ಟೆ ಬಾಸಿಂಗ ಕಟ್ಟುವೆ, ಮುಂಡಾಸ್ ಕಟ್ಟುವೆ ಮತ್ತೆ ಆಗಾಗ ಸೋಬಾನೆಗಳ ಹೇಳಿ ಅವರ ಪುರಾಣಗಳ ಎತ್ತರಕೆ ತೆಕಂಡ್ ಹೋದವೆ ಮೊಯಿಂಸರ ಪ್ರತ್ಯೇಕ ಮಾಡ್‌ದ ಹಾಂಗೆ ಹೊತ್ತುನ ಪ್ರತ್ಯೇಕ ಮಾಡಿ 'ಮುಹೂರ್‌ತನ ನಿರ್‌ದಾರ ಮಾಡ್‌ವೆ.. ಜಾಗೆನ ಪ್ರತ್ಯೇಕ ಮಾಡಿ 'ದಾರಾಮಂಟಪ'ನ ಮಾಡ್‌ವೆ. ಮುಹೂರ್‌ತಕೆ ಮಹತ್‌ವ ಇದ್ದ ಹಾಂಗೇ ದಾರಾಮಂಟಪಕು ಇರ್‌ದರ್‌ಂದ ಅದರ ವಿಸೇಸ ಆಗಿ ಸಿಂಗರ್‌ಸ್‌ವೆ .ಮೊಯಿಂಸ ಮುಹೂರ್‌ತ, ಮತೆ ಜಾಗೆ ಒಂದ್ ನಿರ್‌ದಿಸ್ಟ ಉದ್ದೇಸಕೆ ಬದ್ದ ಆಗಿದ್ ಸಮಾನ ಆದ ಮಹತ್ವನ ಪಡ್‌ದ್ ಮೊದ್‌ವೆಲಿ ಪಾವಿತ್ರ್ಯನ ಪಡ್‌ದಿದ್ದವೆ.

ಮೊದ್‌ವೆಲಿ ಕಲ್‌ಸನು ಮುಕ್ಯ ಕಾರ್‌ಯಗಳ ನಿರ್‌ವಯಿಸಿದೆ. ಕಲ್‌ಸದ ಕೆಳೆಗೆ ಬಾಯಿ ಬುಟ್ಟಿರ್‌ವ ಒಂದ್ ಮೊಣ್ಣ್‌ನ ಚೆಂಬು ಇದ್ದದೆ. ಇದರ ಗಿಂಡಿ ತೇಳ್‌ವೆ,ಇದ್‌ಕೆ ಒಂದ್ ಕೊಂಬು ಇರೊಕು. ಇದ್ ಕೂಡಾ ಅದರ ಬಾಯಿ ಬುಟ್ಟಿರ್‌ದರ ತೋರ್‌ಸಿ ಇದರೊಳಗೆ ನೀರ್ ಇದ್ದದೆ. ಈ ಚೊಂಬುನ ಬಾಯಿಗೆ ಮಾಯಿಣ ಸೊಪ್ಪು ಇಸಿ ಅದರ ಮೇಲೆಗೆ ಜುಟ್ಟು ತೆಗಿಯದ ಮತೆ ಒಳೆಗೆ ನೀರ್ ತುಂಬಿರ್‌ವ ಒಂದ್ ಕಾಯಿ ಇಸಿರೆ ಕಲ್‌ಸ ತಯ್ಯಾರಾದೆ. ಸೂಕ್ಮಲಿ ನೋಡಿದರೆ ಕೆಳಗೆನ ಚೊಂಬುನ ಒಳಗೂ ನೀರ್, ಮೇಲೆಗು ಕಾಯಿನ ಒಳಗೂ ನೀರ್. ಆದರೆ ಚೊಂಬುಲಿ ಬುಟ್ಟ ಬಾಯಿ ಆದರೆ, ಕಾಯಿದ್

ಮುಚ್ಚಿದ ಬಾಯಿ ಈ ಎರಡರ ನಡುಲಿ ಅದೆರ್‌ಡರ ಕೂಡ್‌ಸುವ ಮಾಯಿನ ಸೊಪ್ಪುಗ, ಮಾಯಿನ ಸೊಪ್ಪುನ ಮನೆ ಬಾಗ್‌ಲುಗು ತೋರಣ ಆಗಿ ಕಟ್ಟುವೆ. ಅಲ್ಲಿ ಕೂಡಾ ಅದರ ಕಾರ್‌ಯ ಸಮ್ಮಂದ ಮಾಡ್‌ದೆ ಆಗುಟು.. ಮನೆನ ಒಳೆಗೆನ ಮತ್ತೆ ಹೊರೆಗೆನ ಸಂಗತಿಗಳ ಒಗ್ಗೆ ಹಾಕ್‌ವ ಕೆಲ್‌ಸ ಅದ್ ಮಾಡ್‌ದೆ.. ಮೊದ್‌ವೆಲಿ ಹೆಣ್ಣ್‌ನ ಕಡೆ ಮತೆ ಗಂಡ್‌ನ ಕಡೆ ತ ಎರಡ್ ಗುಂಪುಗ ಇದ್ದದೆ ಈ ಎರಡು ಗುಂಪುಗಳ ಕೂಡ್ಸಿಕೆ ಮಾಯಿಣ ತೋರಣ ಬೇಕು, ಕಳ್‌ಸನು ಬೇಕು. ಇದ್ ಹೌದಾದರೆ, ಕಲ್‌ಸದ ನೊಡುಲಿರುವ ಮಾಯಿಣ ಸೊಪ್ಪುನ ಕಾಯಿ ಮತ್ತೆ ಚೊಂಬುನ ಕೂಡ್‌ಸ್‌ವ ಕಾರ್‌ಯ ಮಾಡ್‌ದೆ. ಹೀಂಗೆ ಗಂಡ್ ಮತ್ತೆ ಹೆಣ್ಣ್‌ನ ಮೊದ್‌ವೆಲಿ ಒಗ್ಗೆ ಹಾಕ್‌ವ ಕ್ರಿಯೆ ಕಲ್‌ಸ ಒಂದ್ ಚೆನ್ನೆನಾಂಗೆ ಇದ್ದದೆ.

ದಾರೆ ಹೊಯ್‌ದ ಮೇಲೆ ಮೊದ್‌ಮಕ್ಕ ಗಂಡ ಹೆಣ್ಣ್ ಆದರ್‌ಂದ ವಂಸೊದ್ದಾರಕೆ ಒಪ್ಪಿಗೆ ಕೊಟ್ಟಂಗಾದೆ ಪರೋಕ್ಸವಾಗಿ ಆಸ್ತಿಗೆ ಉತ್ತರಾದಿಕಾರಿನ ಮಾಡ್‌ದಂಗಾದೆ. ಒಕ್ಕಲಿಗರ ಮೂಲಕಸುಬು 'ಒಕ್ಕಲುತನ' ಅಲ್ಲೊ ಅಕ್ಕಿಗೆ ಸಮ್ಮಂದಪಟ್ಟದರ್‌ಂದ ಮುಹೂರ್‌ತಲಿ ಅಕ್ಕಿಗೆ ಒಡೆಯನ ಒಪ್ಪಿಕಂಡಂಗಾದೆ. ಸೇರ್‌ದವೆಲ್ಲೆ ಇದ್‌ಕೆ ಸಾಕ್ಸಿಗಾದವೆ. ಇದ್ ಮುಹೂರ್‌ತಕ್ಕೆ ಇರುವ ಆರ್‌ತಿಕ ಮತ್ತೆ ಸಾಮಾಜಿಕ ಆಯಾಮ ಆಗುಟು. ಮೊದ್‌ವೆ ಆದ ಮೇಲೆ ಮೊದ್‌ಮಕ್ಕಳ ಕುದ್ದ್‌ರ್‌ಸಿ ಅವರ ಮೈಮೇಲೆ ಅಕ್ಕಿನ ಸೇಸೆ ತೆಗ್‌ದವೆ. ಮೊಣಕಾಲ್‌ನ ಗಂಟು, ಮೊಳಕೈ, ಗಂಟು, ಬುಜದ ಸಂದುಗಳಿಗೆ ಅಕ್ಕಿನ ತಾಂಗ್‌ಸಿ ಕಡೆಗೆ ನೆತ್ತಿನ ಮೇಲೆ ಅಕ್ಕಿನ ಹಾಕುವೆ. ಕೆಲವ್ ಒತ್ತುಲಿ ಅಕ್ಕಿನ ಬಾಯಿಗೆ ತಿನ್ಸ್‌ವೆನು. ಅಕ್ಕಿ ಇಲ್ಲದೆ ಗೌಡರ್‌ಲಿ ಮೊದ್‌ವೆ ಇಲ್ಲೆ. ಈ ಅರ್‌ತಲಿ ಮೊದ್‌ವೆ ಅಕ್ಕಿನ ಒಡೆತನನ ಮತ್ತೆ ಅಕ್ಕಿನ ಅನಂತ ಸಕ್ತಿನ, ಹೊಸ ತಲೆಮಾರ್‌ಗೆ ವರ್‌ಗಾಯಿಸುವ ಒಂದ್ ಕ್ರಿಯೆ.

ದಾರೆ ಆದ ಮೇಲೆ ಮೊದುಮಕ್ಕ ಮನೆತನದ ಹಿರಿಯರ ಕಾಲು ಮುಟ್ಟಿ ಆಸಿರ್‌ವಾದ ತೆಕಂಡವೆ. ಈ ಮರ್‌ಯಾದೆ ಕೊಟ್ಟ್ ತಾತ್ಕಾಲಿಕ ಆಗಿ ಸಾಮಾನ್ಯ ಜೀವನಂದ ಪ್ರತ್ಯೇಕ ಆದ ಮೊದುಮಕ್ಕ ಮತ್ತೆ ಸಹಜ ಜೀವನಕ್ರಮಕೆ ಹಿಂತಿರ್‌ಗುವೆ. ಅಲ್ಲದೆ ಹಿರಿಯ ತಲೆಮಾರ್‌ನ ಮೂಲಂದ ಇಳ್‌ದ್ ಬಂದ ಪರಂಪರೆನ ಪಾಲ್‌ದಾರರಾದವೆ. 'ಕಾಲು ಹಿಡಿದು' ಹಿಂದೆನ ತಲೆಗಳೊಟಿಗೆ ತಾವು ಸೇರಿಕಂಬೊದರ ಹೇಳ್ದೆ. ದೇಹಲಿ ಕನಿಸ್ಟ ಆದ ಕಾಲು ಮತ್ತೆ ಗರಿಸ್ಟ ಆದ ತಲೆ ಹೇಂಗೊ,ಹಾಂಗೆನೆ ಹಿರಿಯರ ಕಾಲ್‌ಗೆ ಕಿರಿಯರು ತಮ್ಮ ತಲೆನ ಮುಟ್ಟ್‌ಸಿ ಹಿರಿಯರ ಕನಿಸ್ಟಕ್ಕೆ ತಮ್ಮ ಗರಿಸ್ಟ ಸಮ ತೇಳಿ ಸೂಚ್‌ಸ್‌ವೆ. ಮೊದ್‌ವೆನ ಹಿದೆನ ದಿನ ಮದುಮಗನ ಈಗಾಗಲೇ ಸತ್ತು ಹೋಗಿರುವ 16 ತಲೆಮಾರ್‌ಗೆ ಗೌರವ ಕೊಡಿಕೆ 'ಕೊಲೆಗಳಿಗೆ ಇಸುವ' ಕ್ರಮ ಮಾಡ್‌ವೆ.. ಈ ಕ್ರಮ ಕೂಡಾ ಜೀವಂತ ಇರುವವ್ ಸತ್ತು ಹೋದ ಹಿರಿಯರ ಪರಂಪರೆನ ಮುಂದುವರ್‌ಸ್‌ವ ನಂಬಿಕೆ ಆಗುಟು.

**ಶಿವ ಕಲ್ಯಾಣ (ಮೊದ್‌ವೆ) :** ಮೊದ್‌ವೆಗಳ್‌ಲೂ ಮೂರು ತರ ಉಟ್ಟು, 1. ಶಿವಕಲ್ಯಾಣ 2. ಗಾಂದರ್‌ವ ವಿವಾಹ, 3. ತಾಳಿ ಕಟ್ಟುವ ಮೊದ್‌ವೆ–ತಾಳಿ (ಮಾಂಗಲ್ಯ) ಅಡೋಡಿ (ಗಡಿಬಿಡಿ) ಮೊದ್‌ವೆ. ಗಾಂದರ್‌ವ ವಿವಾಹ– ಇದ್ ಗಂಡ್ ಹೆಣ್ಣು ಒಪ್ಪಿಕಂಡ್ ರಿಜಿಸ್ಟರ್ ಮೂಲಕ ಮಾಡ್‌ವ ಮೊದ್‌ವೆ. ಮೂರನೆದ್ ಸಾದಾರಣ ಒಂದ್ ನೂರು ವರ್‌ಸಗಳ ಹಿಂದೆ ತೊಟ್ಟಿಲ್ ಹೆಣ್ಣ್ ಕೂಸಿಂದ ಪ್ರಾಯಕ್ಕೆ ಬಂದ ಗೂಡೆನವರೆಗೆ ತಾಳಿ ಕಟ್ಟಿ ತನ್ನ ಹಕ್ಕ್ ತೇಳಿ ಹೇಳಿ ಮತ್ತೆ ಮೊದ್‌ವೆ ಮಾಡಿಕಣ್‌ತ್ತಿದ್ದೊ ಗಡ. ಇವುಗಳ್‌ಲಿ ಶ್ರೇಸ್ಟವಾದ ಮೊದ್‌ವೆ ಶಿವಕಲ್ಯಾಣ – ಇಲ್ಲಿ ಅಯ್ಯೆ ಅಪ್ಪಂದ್‌ರ್ ತಮ್ಮ ಮಗಳಿಗೂ, ಮಜ್ಜಗೂ ಮೊದ್‌ವೆ ಏರ್ಪಾಟ್ ಮಾಡುತ್ತಿದ್ದೊ. ತಮಗೆ ಸರಿ ಕಾಂಬತ್ತಿದ್ದವರ್‌ಲಿ ಈ ನೆಂಟಸ್ತಿಕೆ ಬೆಳೆಸುತ್ತಿದ್ದೊ. ಇದರ್‌ಲೂ ಬಿಳಿ ಹೂ ಬಿದ್ದರೆ ಸುಬತೇಳಿನೂ ಕೆಂಪು ಹೂ ಬಿದ್ದರೆ ಅಸುಬವೆಂದು ತಿಳಿದು ಲಗ್ನ ಕಟ್ಟುತ್ತಿದ್ದರು. ನಂತರ ವೀಳ್ಯಶಾಸ್ತ್ರಕ್ಕೆ ಹೈದನ ಕಡೆಯವರ್‌ನ ಇಂತಹ ಒಂದ್ ದಿನ ಬರೋಕೂಂತ ತಿಳಿಸುವೆ. ಹಂಗೆ ಹೈದನ ಕಡೆಂದ ಐದ್ ಜೆನ ಪೊದ್ದತಿ ಮೇರೆ ನಮ್ಮ ಜೆನಾಂಗದ ಪೊದ್ದತಿಗೆ ಅನುಸಾರವಾದ ಬಟ್ಟೆ ತೊಟ್ಟ್‌ಕಂಡ್ ಬಂದವೆ. ಹಾಂಗೆ ಬಂದ ಅಂವ ಮನೆಯ ಯಜಮಾನ ಅತಿತಿ ಸತ್ಕಾರ ಮಾಡಿ ಯೋಗಕ್ಸೇಮಗಳ್‌ನ ಪರಸ್ಪರ ತಿಳಿಸಿಕಂಡವೆ. ಮತ್ತೆ ಮನೆಯ ಕೈಯಾಲೆ (ಕಯ್ಯಾಲೆ) ಲೂ ಒಂದ್ ಹೊಸ ಮೊಂದ್ರಿನ ಹಾಕಿ ಒಂದ್ ಮುಕ್ಕಾಲ್ ಮಣೆ ಮೇಲೆ ಒಂದ್ ಕಂಚಿನ ಬಟ್ಟ್‌ಲ್‌ಲಿ ಹಜ್ಜ ಅಕ್ಕಿ, ಐದ್ ವೀಳ್ಯದೆಲೆ, ಐದ್ ಹಣ್ಣ್ ಅಡಿಕೆ ಮತ್ತೆ ಲಾಯ್ಕ ಹೊತ್ತಿಕಂಡಿರುವ ಒಂದ್ ಮಣ್ಣ್‌ನ ದೀಪ, ಇನ್ನೊಂದು ಕಡೆ ಅಲ್ಲರೆ ಮೊಂದ್ರಿನ ನಡುಬಾಗಲೂ 'ಮುಕ್ಕಾಲ್‌ನ ಮೇಲೆ ಒಂದ್ ಹರಿ ವಾಣ, ಅದರ್‌ಲೂ ಹಜ್ಜ ಅಕ್ಕಿ, ಎರಡ್ ವೀಳ್ಯದೆಲೆ, ಹಣ್ಣು ಅಡಿಕೆ ಅದರ ಕೆಳಗೆ ಒಂದ್ ತಂಬಿಗೆಲಿ ನೀರ್, ನಂತರ ಕುಲಪೊದ್ದತಿನ ದಿರ್‌ಸ್‌ನ ಮೇರೆ ಹೆಣ್ಣಿನ ಕಡೆಂದ ಮೂರ್ ಜೆನ ಗಂಡ್‌ನ ಕಡೆಂದ ಮೂರ್ ಜೆನ ಎದ್‌ರ್ ಬದ್‌ರ್ ಕುದ್ದ್‌ಕಂಡ್ 1) ಮಾತಿನ ಕರಾರು ವೀಳ್ಯ 2) ವೀಳ್ಯ ಶಾಸ್ತ್ರದ ವೀಳ್ಯ 3) ಬಣ್ಣ ಬಂಗಾರದ ವೀಳ್ಯ, 4) ಮೊದ್‌ವೆ ಕುರಿ ವೀಳ್ಯ ತೇಳುದಾಗಿ ನಾಲ್ಕ್ ವೀಳ್ಯಗಳ್‌ನ ಗಂಡಿನ ಕಡೆಯವು ಹರಿವಾಣಕ್ಕೆ ವೀಳ್ಯನ ತುಂಬಿ ಎದ್ದ್ ನಿತ್ತ್ ಚೊಂಬುಲಿರುವ ನೀರ್‌ನ ಮುಟ್ಟಿ 1ನೇ ವೀಳ್ಯ, ಹತ್ತು ಕುಟುಂಬ ಹದಿನೆಂಟು ಗೋತ್ರ, ಕುಲಸ್ತರ ಸಬೆ ಸಮಸ್ತರ ಸಂಗಡ ಕೇಳಿ ಮಾತಿನ ಕರಾರು ವೀಳ್ಯ ಎತ್ತಿ ಕೊಟ್ಟವೇ ತೇಳಿ ಹೇಳ್‌ವೆ, ಕುಲಸ್ತರು ಒಳ್ಳೆ ಕಾರ್‌ಯ ತೇಳುವೆ. ಪುನಃ ಮೇಲಿ ನಂಗೆ ಹೇಳಿ ವೀಳ್ಯಶಾಸ್ತ್ರದ ವೀಳ್ಯ, 4ನೇ ವೀಳ್ಯ ಮೊದ್‌ವೆ ಕುರಿವೀಳ್ಯ–ಇದರ್‌ಲೂ ಇಂತ ಗಂಡಿಗೆ ಇಂತಹ ಹೆಣ್ಣ್ ಮಾತು ಜೆನನ, 3ನೇ ಬಣ್ಣ ಬಂಗಾರ್ ವೀಳ್ಯ ಗೂಡೆಗೆ ಬೇಕಾದ ಚಿನ್ನ, ಬೆಳ್ಳಿಯ ಆಬರಣ, ಸೀರೆ, ತುಂಡು ಕೈ ರವಕೆ (ಮಾಂಗಲ್ಯದ ವಿಸಯ ಕೇಳ ಬಾರದು) ಉಳ್‌ದ ಎಲ್ಲನೂ ಗೂಡೆನ ಸಮ್ಮಂದಿಕರ್




ಹೇಳಿ ಬಣ್ಣ ಬಂಗಾರ್ ತಾಕನ ವಿಚಾರಿಸಿಕಣಕ್. 4ನೇ ಮೊದ್‌ವೆ ಕುರಿ ವೀಳ್ಯ, ಇಂತಹ ದಿವಸ ಮೊದ್‌ವೆ ತೇಳಿ ತಿಳಿಸುವೆ. ಇಲ್ಲಿಗೆ ವೀಳ್ಯಶಾಸ್ತ್ರ ಮುಗ್‌ದದೆ. ಇನ್ನು ಮೂರು ವೀಳ್ಯಗ ಒಳೊ. ಅವು ಯಾದೆಲ್ಲ ತೇಳಿರೆ 1) ತಂದೆ ಗೋತ್ರ ವೀಳ್ಯ 2) ತಾಯಿ ಗೋತ್ರ ವೀಳ್ಯ 3) ಮಹಾನಾಡು ವೀಳ್ಯ. ಇದರ್‌ನ ದಿಬ್ಬಣ ಬಂದ್ ದಾರೆಗೆ ಮುಂದೆ ಬಣ್ಣ ಬಂಗಾರ ಇಸುವ ಹೊತ್ತುಲಿ ಮುಗ್‌ಸುವೆ. ವೀಳ್ಯ ಶಾಸ್ತ್ರ ಮುಗ್‌ಸಿ ಹೋಕನ ಅವ್‌ಕೆ ಒಕ್ಕಲು ಯಜಮಾನ ಲಗ್ನ ಪತ್ರಿಕೆ ಕೊಟ್ಟು ಕಳಿಸಿದೆ. ಅದಕ್ಕೆ ಅಲ್ಲಿ ಸೇರ್‌ದ ಜೆನರೆಲ್ಲ ರುಜು ಹಾಕುವೆ.

**ಚಪ್ಪರ :** ಮೂರ್‌ತಕ್ಕೆ ಒಂದ್ ದಿನ ಮುಂದೆ ಚಪ್ಪರ ಹಾಕೋಕು. ಆ ಸಮಯಲೂ ಊರ್‌ನ ಕುಲಸ್ತರ್ ಗಂಡ್ ಹೆಣ್ಣ್ ಬಂದ್ ಸೇರೋಕು. ಹನ್ನೆರಡ್ ಕಂಬ ದಾರೆ ಮಂಟಪದ ಕಂಬಗಳ ಒಟ್ಟಿಗೆ ಒಂದ್ ಹಾಲೆ ಮರದ ಕಂಬ ಸೇರಿಸಿ ಅಂತು 12 ಕಂಬಗಳಿರೋಕು, ಇದಕ್ಕೆ ಸರಿಯಾಗಿ 12 ಗುಂಬಗಳಿರೋಕು. ಮೊಣ್ಣ್‌ನ ಮಡ್‌ಕೆಗಳ್‌ನ ಕುಂಬಾರರ್ ತಯಾರ್‌ಸಿ ತರತರದ ಬಣ್ಣಗಳ್‌ಂದ ಅಲಂಕರಿಸಿ ಪ್ರತಿ ಒಂದ್ ಕಂಬಗಳ ಬುಡಲಿನೂ ಒಂದೊಂದು ಮಡ್‌ಕೆ ಇಡೋಕು. ಊರಿನವು (ಕುಲಸ್ತರು) ಚಪ್ಪರ ಹಾಕಿ ದಾರೆ ಮಂಟಪದ ಕೆಲಸ ಸಹ ಪೂರೈಸುವೆ. ದಾರೆ ಮಂಟಪದ ಮೇಲೆ ಬ್ರಹ್ಮವಿಸ್ಣು ಮಹೇಶ್ವರರ ಬಾವಚಿತ್ರ (ಪೋಟೋ) ಗಳ್‌ನ ಇಸಿ ಪುಸ್ಪ ಮಾಲಿಕೆಗಳಿಂದನೂ ತಳಿರು ತೋರಣಗಳಿಂದನೂ ಅಲಂಕರಿಸೋಕು. ಮತ್ತೆ ಹನ್ನೆರಡ್ ಕಂಬ, ಗುಂಬಗಳಿಗೂ ಗಂದದೂಪ ಮೊದಲಾದುವುಗಳ ಹೊಗೆನ ಕೊಟ್ಟು ಎಲ್ಲವೂ ಕುಲದೇವ್‌ರ್‌ನ, ಶಿವನ ದ್ಯಾನಿಸಿ ಪೂಜೆ ಮಾಡ್‌ವೆ. ಮತ್ತೆ ಮನೆಯ ನೆಲ್ಲಕ್ಕಿ ಅಡಿಯ ಗೋಡೆ ಮೇಲೆ ಹಸೆ ಬರೆ ಯುವಂಗೆ ಕುಲಸ್ತರಿಗೆ ಒಕ್ಕಲು ಯಜಮಾನರ್ ವೀಳ್ಯ ಕೊಡೋಕು. ಕುಲಸ್ತರು ಸದ್ರಿ ಗೋಡೆಯ ಮೇಲೆ ಹೆಣ್ಣ್ ಹಸೆ ಮತ್ತೆ ಗಂಡ್ ಹಸೆ ಬರೆದವೆ. ಹೆಂಗಸರ್ ಶೋಬಾನೆ ಹಾಡುವೆ. ಇದ್ ಮುಗ್‌ದ ಮೇಲೆ ಅಲ್ಲಿ ಸೇರಿದ ಎಲ್ಲಾ ಜೆನರಿಗೂ ರಾತ್ರಿ ಉಂಬಕೆ ಹಾಕುವೆ, ಅದು ಮುಗ್‌ದಮೇಲೆ ಮೊದುಮಗ ಅತವಾ ಮೊದುಮಗಳಿಗೆ ಇವರ್‌ನ ಪ್ರತಮ ಎಣ್ಣೆ ಅರ್‌ಸಿನ ಶಾಸ್ತ್ರಕ್ಕೆ ಕೂರಿಸೋಕು. ಹಸೆ ಚಾಪೆ, ಹಸೆಮಣೆಗಳ್‌ನ ಅಲ್ಲಿ ತಂದ್ ಹಾಸುವೆ. ಸೋದರಮಾವಂಗೆ ಒಂದ್ ಚೊಂಬು ನೀರ್ ಕೊಟ್ಟು ಮೊದುಮಕ್ಕಳಿಗೆ ಕಾಸ್ತಾಳಿ ಕಟ್ಟುವಂಗೆ ಒಕ್ಕಲು ಯಜಮಾನ ಹೇಳ್‌ವೆ. ಹಾಂಗೆನೇ ಮೊದುಮಕ್ಕ ಬಂದ್ ಕುಲ ದೇವ್ರಿಗೆ ಅಕ್ಕಿನ ಹಾಕಿ ಅಲ್ಲಿ ಅಯ್ಯೆ – ಅಪ್ಪಂದ್‌ರ ಕಾಲಿಗೆ ಬಿದ್ದ್ ನಂತರ ಎಲ್ಲಾ ಜೆನರ ಕಾಲ್ ನಮಸ್ಕಾರ ಮಾಡಿ ಮತ್ತೆ ಹಸೆ ಚಾಪೆಲಿ ಮೊದುಮಕ್ಕಳ್‌ನ ನಿಲ್ಲಿಸಿಕೊಂಡು ಸೋದರಮಾವ ಕಾಸ್ತಾಳಿನ ಕೈಲಿ ಹಿಡ್‌ಕಂಡ್, ಹತ್ತ್ ಕುಟುಂಬ–ಹದಿನೆಂಟು ಗೋತ್ರ ಕುಲಸ್ತರ ಸಬೆ ಸಮಸ್ತರ್‌ನ ಕೇಳಿ ಸೋದರ ಮಾವ ಮೊದುಮಕ್ಕಳಿಗೆ ಕಾಸ್ತಾಳಿ ಕಟ್ಟನೇತೇಳಿ ಕೂಗಿ ಹೇಳೋಕು. ಕುಲಸ್ತರ್ ಒಳ್ಳೆ ಕಾರ್‌ಯತೇಳಿ ಹೇಳ್‌ವೆ. ಹಿಂಗೆ ಮೂರು ಬಾರಿ ಹೇಳಿ ಸೋದರ ಮಾವ ಕಾಸ್ತಾಳಿ ಕಟ್ಟಿದೆ. ಮತ್ತೆ ಅವರ್‌ನ ಹಸೆ ಮಣೆಗಳ ಮೇಲೆ ಕೂರಿಸುವೆ. ಅಸ್ಟರಲ್ಲೇ ಒಂದ್ ಮುಕ್ಕಾಲ್‌ನಮೇಲೆ ಒಂದ್ ಬಟ್ಟಲ್‌ಲಿ ಎಣ್ಣೆ ಅರ್‌ಸಿನ ಮಿಸ್ರ ಮಾಡಿ ಗರಿಕೆ ಹುಲ್ಲು ತಂದ್ ಇಟ್ಟಿದ್ದವೆ. ಮುತ್ತೈದೆಯರ್ ಶಾಸ್ತ್ರ ಮಾಡಿಕೆ ಸುರು ಮಾಡ್‌ವೆ. ಹೆಂಗಸರ್ ಸೋಬಾನೆ ಹಾಡುವೆ. ಇದ್ ಮುಗ್ದ ಮೇಲೆ ಮೊದುಮಕ್ಕಳ್‌ನ ಮೀಸುವೆ. ಮತ್ತೆ ಹೊಸ ಬಟ್ಟೆ ತೊಟ್ಟು, ಕಹಳೆ ವಾದ್ಯಗಳ್‌ಂದ ಮನೆಗೆ ಕರ್‌ಕಂಡ್ ಬಂದವೆ. ಚಪ್ಪರದ ಅಡಿಲೂ ಅವ್‌ಕೆ ಆರತಿ ಬೆಳ್‌ಗಿ ಮನೆಗೆ ಬಂದ್, ಹಸೆ ಚಾಪೆಯ ಮೇಲೆ ಕೂರ್‌ಸಿ ಮದ್‌ರಂಗಿ ಎರಡ್ ಕೈಗಳಿಗೂ ಇಸಿ ನಿದ್ರೆ ಮಾಡಿಕೆ ಹೇಳ್‌ವೆ.

**ಮೂರ್‌ತ :** ಚಪ್ಪರದ ಮಾರನೆ ದಿನ ಮೂರ್‌ತ, ಅಂದ್‌ನ ದಿನ ಮುತ್ತೈದೆಯರ್ ಚಪ್ಪರದ ದಾರೆಮಂಟಪದೊಳಗೆ ಅಕ್ಕಿ ಹಸೆನ ಬರ್‌ದ್ ಹಸೆಮಣೆಗಳ್‌ನ ತಂದಿಸುವೆ. ಮುಕ್ಕಾಲ್ ಮೇಲೆ ಒಂದ್ ಬಟ್ಟ್‌ಲ್‌ಲಿ ಅಕ್ಕಿ, ಒಂದ್ ದೀಪ ಇಟ್ಟವೆ. ಇನ್ನೊಂದು ಬಟ್ಟ್‌ಲ್‌ಲಿ ಎಣ್ಣೆ, ಅರ್‌ಸಿನ ಹಳ್ಳಿ ಗರಿಕೆ ಹುಲ್ಲುಗಳ್‌ನ ತಂದಿಟ್ಟವೆ. ಇದರ ಹಿಂದಿನ ದಿನ ಅಗಸ ಮಡಿ ಬಟ್ಟೆಗಳ್‌ಂದ ಮೇಲ್ ಕಟ್ಟ್‌ಗಳ್‌ನ ಕಟ್ಟಿದ್ದದೆ. ಮೊದುಮಕ್ಕಳ್‌ನ ಕರ್‌ಕಬಂದ್ ಚಪ್ಪರದ ದಾರೆ ಮಂಟಪಲಿ ಎಣ್ಣೆ ಅರ್‌ಸಿನ ಶಾಸ್ತ್ರ ಮಾಡ್‌ವೆ. ಕಹಳೆ ವಾದ್ಯಗ ಇದ್ದವೆ. ಆ ಹೊತ್ತುಲಿ ಊರಿನ ಜೆನ ನೆಂಟ್‌ರ್, ಸ್ನೇಹಿತರ್ ಬಂದ್ ನೆರ್‌ದಿದ್ದವೆ. ಹೆಣ್ಮಕ್ಕ ಸೋಬಾನೆ ಹೇಳ್‌ತ್ತಿದ್ದವೆ. ಆ ಶಾಸ್ತ್ರ ಮುಗ್‌ದ ಮೇಲೆ ಮೊದುಮಜ್ಜಗೆ ಹಜಾಮ ಕ್ಷೌರ ಮಾಡ್‌ದೆ. ಮತ್ತೆ ಮೀಯಕೆ ಹೋದವೆ. ಮೀದಾದ ಮೇಲೆ ಮೊದುಮಕ್ಕಳಿಗೆ ಕುಲ ಪೊದ್ದತಿಯ ಬಟ್ಟೆಗಳ್‌ನ ತೊಡ್‌ಸುವೆ. ಅಂದರೆ ಮದುಮಜ್ಜಗೆ ಉದ್ದವಾದ ನಿಲುವಂಗಿ, ದೋತ್ರ, ರುಮಾಲೆ ಹಣೆಗೆ ಚಿನ್ನದ ಪಟ್ಟಿ. ಅದರ್‌ಲೂ 'ಓಂ' ತೇಳುವ ಬೀಜ ಅಕ್ಷರನ ಬರ್‌ದಿದ್ದವೆ. ಬಾಸಿಂಗ' ತೇಳಿರೆ ನಾಯಿ ಕಬ್ಬಿನ ಬೆಂಡಿಂದ ಮಾಡ್‌ದ ಗೊಂಡೆಗಳ 'ಹೂ'ಗ. ಅದರ್‌ನ ತಲೆಯ ಮೇಲಿನ ರುಮಾಲ್‌ಂದ ಕೆಳಗೆ ತೂಗಾಡುವಂಗೆ ತೊಟ್ಟವೆ. ಕೈಗೆ ಅದೇ ಬೆಂಡಿಂದ ತಯಾರ್‌ಸಿದ ಗಿಣಿ ಪಕ್ಸಿ ಇದ್ದದೆ. ಮೊದು ಮಗಳಿಗೆ ಚಿನ್ನಾಬರಣಗ ತುಂಬಾ ಹಾಕಿ ಹೆಚ್ಚ್ ಬೆಲೆ ಬಾಳುವ ಸೀರೆ ಮತ್ತೆ ತುಂಡು ಕೈರವಕೆ, ತೊಡ್‌ಸುವೆ. ಬಾಸಿಂಗ ಹಣೆ ಮೇಲೆ ನಿಲ್ಲುವಂಗೆ ಮಾಡ್‌ವೆ. ಬಟ್ಟೆ ಬರೆ ಇವುಗಳ್‌ನ ತೊಟ್ಟ ಮೇಲೆ ಪಲಮರದಡಿಗೆ ಬಂದ್ ಗಂಗೆಪೂಜೆನ ಮಾಡ್‌ವೆ. ಮತ್ತೆ ವಾದ್ಯದೊಟ್ಟಿಗೆ ಚಪ್ಪರದಡಿಗೆ ಬಂದವೆ. ಅಲ್ಲಿ ಮುತ್ತೈದೆಯರ್ ಏಳ್ ಆರತಿಗಳ್‌ನ ಬೆಳಗುವೆ. ಮತ್ತೆ ಸಣ್ಣ ಗೂಡೆಗ ಅವರ ಪಾದ ತೊಳೆದವೆ. ಆಗ ಮತ್ತೊಬ್ಬ ಒಂದ್ ತೆಂಗಿನಕಾಯಿನ ತಲೆ ಸುತ್ತ್ ತಂದ್ ಒಡ್‌ದವೆ. ಇದಿಕ್ಕೆ ದ್ರಿಸ್ಟಿ ಕಾಯಿ ಒಡೆಯುದುತೇಳಿ ಹೇಳ್‌ವೆ. ಮತ್ತೆ ಅಗಸ ಮಡಿಬಟ್ಟೆ ಹಾಸಿದೆ. ಮದುಮಕ್ಕ ಆ ಮಡಿನ ಮೆಟ್ಟಿಕಂಡ್ ಗೃಹಪ್ರವೇಸ ಮಾಡ್‌ವೆ. ಮತ್ತೆ ಹಸೆ ಚಾಪೆಂದ ಮೂಡಕ್ಕೆ ಮುಕ ಹಾಕಿ ನಿಲ್ಲೋಕು. ಒಕ್ಕುಲು ಯಜಮಾನ ಕೈಲಿ ಒಂದ್ ಚೊಂಬುಲಿ ನೀರ್

ಹಿಡ್‌ಕಂಡ್ ಅಲ್ಲಿ ಸೇರ್‌ದವ್‌ಕ್ಕೆಲ್ಲಾ 'ಕುಲದೇವರಿಗೆ ಹರಿಕೆ ಹಣ ಕಟ್ಟುವೆ' ತೇಳಿ ಎಲ್ಲರ್‌ನ ಕರ್‌ದದೆ. ಮತ್ತೆ 'ಹತ್ತು ಕುಟುಂಬ ಹದಿನೆಂಟು ಗೋತ್ರ ಕುಲಸ್ತರ ಸಬೆ ಸಮಸ್ತರ್‌ನ್ನ ಕೇಳಿ ಕುಲದೇವರಿಗೆ ಹರಿಕೆ ಹಣ ಕಟ್ಟಿನೆ' ತೇಳಿ ಮೂರಾ ವರ್‌ತಿ ಕೂಗಿ ಹೇಳೋಕು. ಯಜಮಾನ ಎರಡ್ ನಾಟೆ ಗುತ್ತಿಗಳ್‌ನ ತಯಾರ್‌ಸಿ ಇಸಿ ಕಂಡಿದ್ದದೆ. ಮೊದುಮಕ್ಕಳ ಕೈಲಿ ಎರಡ್ ಆಣೆ ಪಾವಲಿ (ಬೆಳ್ಳಿಯ) ನಾಲ್ಕ್ ಒಳ್ಳೆ ಮೆಣ್‌ಸ್‌ಗಳ್‌ನ ಇಸಿ ಆ ಗುತ್ತಿ ಯೊಳಗೆ ತುಂಬುಸಿ ಮಾಯಿನ ಎಲೆಯ ದಿಮ್ಮಿ (ಗಿಟಕು) ಗಳ್‌ಂದ ಒಂದ್ ಸಣ್ಣ ಕೋಲ್‌ಂದ ಜಡ್‌ದ್ ಬಂದ್ ಮಾಡ್‌ವೆ. ಮತ್ತೆ ಅದನ್ನ ಮುಡಿಪಿನ ಹಕ್ಕಲೆ ಕಟ್ಟಿಟ್ಟ್ ಹರಿಸೇವೆ ಮಾಡಿಕನ ಮುಡಿಪಿನೊಳಗೆ ತುಂಬುಸುವೆ. ಮತ್ತೆ ಕರ್‌ಕೊಂಡು ಬಂದ್ ಹಣ ಕಟ್ಟುವ ಮೂರ್‌ತಕ್ಕೆ ಚಪ್ಪರದಡಿಲಿ ಕೂರ್‌ಸುವೆ. ಮತ್ತೆ ಸೇರ್‌ದ ಜೆನ ಮೊದುಮಕ್ಕಳ ತಲೆಗೆ ಅಕ್ಕಿ ಹಾಕಿ, ಆಶೀರ್‌ವದಿಸಿ ಕೈಗೆ ಹಣ ಕೊಟ್ಟವೆ. ಮತ್ತೆ ಸೇರ್‌ದವ್‌ಕ್ಕೆಲ್ಲಾ ಉಂಬಕೆ ಹಾಕುವೆ.

**ದಿಬ್ಬಣ, ದಾರೆ ಮೂರ್‌ತ :** ಅದೇ ದಿನ ಹಿಂಬೊತ್ತು ಬಣ್ಣ ಬಂಗಾರನ ಸಿದ್ದಪಡ್‌ಸಿಕಂಡ್, ಚೇಲಲಿ ವೀಳ್ಯದೆಲೆ, ಹಣ್ಣಡಿಕೆ ಒಂದ್ ಹರಿವಾಣ ಸೇರ್‌ಸಿ ಕಟ್ಟ್ ಮಾಡ್‌ವೆ. 'ಹಿಂಗಾರ್' (ಇದು ಅಡಿಕೆ ಮರದ ಹೂವು) ಹಿಂಗೆ ಕಳಶ ಕನ್ನಡಿ ಹುಲ್ವಿನೇಳಗೆ (ಇದು ಒಂದ್ ಚಿಕ್ಕ ಪೆಟ್ಟಿಗೆ ಬೆತ್ತ ಯಾ ವಾಟೆಂದ ತಯಾರಿಸುವೆ. ಇದರೊಳಗೆ ಒಂಬತ್ತ್ ತೆಂಗಿನಕಾಯಿ, ಒಂದ್ ಸೇರ್ ಅಕ್ಕಿ, ಒಂಬತ್ತ್ ಬಾಳೆಹಣ್ಣ್, ಇದಕ್ಕೆ ಮಡಿಲು ಅಕ್ಕಿ ತುಂಬಿ ಸುದು ತೇಳಿ ಹೇಳ್‌ವೆ. (ಮದುಮಕ್ಕಳು ಚಪ್ಪರಕ್ಕೆ ಎರಡು ದಿವಸಕ್ಕೆ ಮುಂಚೆಯೇ ಮದ್ಯ ಮಾಂಸಗಳನ್ನು ಸೇವಿಸಬಾರದು) ಹಂಗೆ ಮೊದುಮಜ್ಜನ ದಿಬ್ಬಣ ಮೊದು ಮಗಳ ಮನೆಗೆ ತಲ್‌ಪಿದೆ. ಹೆಂಗಸರ್ ಸೋಬಾನೆ ಹೇಳ್‌ತ್ತಿದ್ದವೆ. ಗೂಡೆನ ಮನೆಯವರ ಮನೆಯ ಹೊರ ಪುಡೆಲಿ ದಿಬ್ಬಣದವರಿಗೆ ಜಾಗೆ ಒದಗಿಸಿ ಕೊಟ್ಟವೆ. ಅದಾಗಿ ಮನೆಯವು ನೀರು ಮೊಂದ್ರಿಗಳ್‌ನ ತೆಕಂಡ್ ಹೆಣ್ಣಿನ ಪರಿವಾರದೊಟ್ಟಿಗೆ ದಿಬ್ಬಣ ಮಾತಾಡಿಸಿಕೆ ಹೋದವೆ. ಮೊದುಮಗಳ ಅಯ್ಯೆ ಅಪ್ಪ ಹಾಲ್ ತುಪ್ಪ ತೆಕಂಡು ಹೋಗಿ ಮೊದುಮಗಂಗೆ ಕೊಟ್ಟದೆ ಮತ್ತೆ ಇದಿಕ್ಕೆ ಮದು ಮಜ್ಜಗೆ ನೆರವು ತೆಕಂಡ್ ಹೋದು ತೇಳಿ ಹೆಸ್ರ್. ಹಂಗೆ ದಿಬ್ಬಣ ಮಾತಾಡಿಸಿ ಬಂದ ಮೇಲೆ ಬಣ್ಣ ಬಂಗಾರ ತರುವಂಗೆ ಹೆಣ್ಣಿನ ಕಡೆಂದ ದಿಬ್ಬಣದ ಮುಕ್ಯಸ್ತರಿಗೆ ತಿಳ್‌ಸುವೆ. ಆಗ ಅವು ಬಣ್ಣ ಬಂಗಾರು ತುಂಬಿದ ಪೆಟ್ಟಿಗೆ ಹುನೇಗೆ, ಕಂಚಿಮಿ (ಕಲಶಕನ್ನಡಿ) ಸಮೇತ ಚಪ್ಪರದಡಿಗೆ ಬಂದವೆ. ಅಲ್ಲಿ ನಿತ್ತ್‌ಕಂಡ್ ಇಂತ ನಾಡ್, ಇಂತ ಗ್ರಾಮದ ಇಂತಹವರ ಮನೆಗೆ ಬಂದ ದಿಬ್ಬಣದ ಮುಕ್ಯಸ್ತರ್ ಬಣ್ಣ ಬಂಗಾರ ತಂದೊಳೊ ತೇಳಿ ಮೂರು ಸಾರಿ ಕೂಗಿ ಹೇಳೋಕು. ಮತ್ತೆ ಅವು ಚಪ್ಪರದ ಮೇಲ್ಕಟ್ಟು ಅಡಿಗೆ ಬಾಕೆ ಅನುಮತಿ ಕೇಳುವೆ. ಅನುಮತಿ ಕೊಟ್ಟವೆ. ಪುನಃ ಅಲ್ಲಿಂದ ದೇವಸಬೆಗೆ ಅನುಮತಿ ಕೇಳುವೆ, ಪುನಹ ಬಣ್ಣ ಬಂಗಾರು ಇಸಿ ಕುದ್ರಿಕೆ ಅನುಮತಿ ಕೇಳುವೆ. ಅನುಂಟು (ದೇವಸಬೆಗೆ ನಮಸ್ಕಾರ ಮಾಡೋಕು) ತೇಳುವೆ. ಬಣ್ಣ ಬಂಗಾರ ಬಳಸಲಿಕ್ಕೆ ಅನುಮತಿ ಕೇಳುವೆ. ಅನುಮತಿ ಕೊಟ್ಟು ಮೊದುಲಿಗೆ ಒಂದ್ ಕಂಚಿನ ಬಟ್ಟ್‌ಲ್‌ಲಿ ಬಣ್ಣ ಬಂಗಾರ ಇಟ್ಟವೆ. ಸುರೂಲಿ ಮೂಗುತಿ, ಮುತ್ತೈದೆತನ ಶಾಲೆ–ವಾಲೆ ಬಾಗ್ಯ ತೇಳಿ ಬಟ್ಟ್‌ಲ್‌ಲಿ ಇಡೋಕು. ಎರಡನೆಯದಾಗಿ ಎಲ್ಲಾ ತರದ ಆಬರಣ ಇಸಿ ಅದರ ಮೇಲೆ ದಾರೆ ಸೀರೆ ತುಂಡು ಕೈರವಕೆ ಅದರ ಮೇಲೆ ಹಿಂಗಾರ ಹೂವು ನಂತರ ಹಾಬು ಇವುಗಳನ್ನೆಲ್ಲಾ ಅಜಮಾಯಿಸಿ, 'ಸರಿ ಯಾಗಿ ಉಟ್ಟಾ?' ತೇಳಿ ಒಕ್ಕಲು ಯಜಮಾನರ್‌ನ ಕೇಳುವೆ. ಸರಿ ತೇಳಿ ಒಪ್ಪಿ ಕಂಡರೆ ಅಲ್ಲಿಗೆ ಮುಗ್‌ತ್. ಇಲ್ಲದ್ರೆ ಚರ್‌ಚೆ ಸುರುವಾದೆ. ಮತ್ತೆ ಹೆಣ್ಣಿನ ಕಡೆಂದ ಒಬ್ಬೊಳು ಹೆಂಗಸ್ ದಿಬ್ಬಣದವರ ಕಡೆಂದ ಒಬ್ಬೊಳು ಹೆಂಗಸ್ ಎದುರು ಬದುರಾಗಿ ನಿತ್ತ್ ಕಂಡ್ ಮೂರು ಮೂರು ಸರ್‌ತಿ ಹಿಂದಕ್ಕೂ ಮುಂದಕ್ಕೂ ನಮಸ್ಕರಿಸಿ ದಿಬ್ಬಣದ ಹೆಂಗಸರ್ ಸೋಬಾನೆ ಹಾಡಿಕಂಡ್ ಕಂಚಿಮಿ, ಹುಮ್ಮಿ ನೇಳಿಗೆ ಇವು ಸಮೇತ ಹಸೆ ಚಾಪೆಗೆ ಹೋದವೆ. ಅಲ್ಲಿ ಕುಸಾಲಿಗಾಗಿ ಮೊದೊಳಿಗೆ ಒಟ್ಟಿಗೆ ಅವರ ಪೈಕಿ ಎಂಟ್ ಹತ್ತು ಗೂಡೆಗ ಕುದ್‌ಕಂಡ್ ಉದ್ದಕ್ಕೂ ಚಾಪೆ ಮುಚ್ಚಿಕೊಂಡ್ ಕುದ್ದಿದ್ದವೆ. ಇದ್ ಮೊದೊಳಿಗೆ ತೇಳಿ ದಿಬ್ಬಣದ ಹೆಂಗಸರ್ ಗುರ್‌ತು ಹಿಡ್‌ದ್ ಅವುಳ್‌ನ ಏಳ್‌ಸಿ ಬಣ್ಣ ಬಂಗಾರ ತೊಡ್‌ಸುವೆ. ಮತ್ತೆ ಹುನ್ನಿ ನೇಳಿಗೆಲಿದ್ದ ಮಡಿ ಲಕ್ಕಿ ತೇಳ್ರೆ ಹಜ್ಜ ಅಕ್ಕಿ, ಒಂದ್ ತೆಂಗಿನಕಾಯಿ, ಬಾಳೆ ಹಣ್ಣ್ ಮೊದ್‌ವೆ ಗೂಡೆಗೆ ಮಡಿಲು ತುಂಬಿ ಉಳ್‌ದ ಎಂಟ್ ಮಡಿಲುಗಳ್‌ನ ಆ ಗೂಡೆಯ ಸಮ್ಮಂದಿಕರಿಗೂ, ನೆರೆಮನೆಯ ಒಬ್ಬ ಹೆಂಗಸಿಗೂ ತುಂಬುವೆ.

**ತೆರೆ :** ಚಪ್ಪರದ ದಾರೆ ಮಂಟಪದಡಿಲಿ ಕುದ್ದ ದಿಬ್ಬಣದ ಮುಕ್ಯಸ್ತರ್ ರೂಪಾಯಿ 6–2ನ್ನ ಒಂದ್ ಕಂಚಿನ ಬಟ್ಟ್‌ಲ್‌ಲಿ ಇಸಿ ಒಕ್ಕಲು ಯಜಮಾನಂಗೆ ಕಂಚು ಎತ್ತಿ ಕೊಟ್ಟವೆ ತೇಳಿ ಕೊಟ್ಟವೆ. ಈ ಆರ್ ರೂಪಾಯಿ ಎರಡ್ ಆಣೆಯ ತೆರದ ವಿವರ ಹಿಂಗುಟ್ಟು : ರೂ 41 ಗೂಡೆನ ಮುತ್ತೈದೆತನಕ್ಕೆ ಕಟ್ಟುವ ಹಣ : ಎಂಟ್ ಆಣೆ ಎಲೆ ಅಡಿಕೆ ಕರ್‌ಚು. ತೇಳಿರೆ ಹಿಂದಿನ ಕಾಲಲಿ ಕಾಗದ ಬರೆವ ಪೊದ್ದತಿ ಇಲ್ಲದ ಕಾರಣ ಪ್ರತಿ ಒಬ್ಬ ನೆಂಟಂಗೂ ಸ್ನೇಹಿತರ್‌ಗೂ ಮತ್ತೆ ನೆರೆಮನೆಯವ್‌ಕೂ ವೀಳ್ಯ ಕೊಟ್ಟು ಮೊದ್‌ವೆಗೆ ಹೇಳ್‌ತ್ತಿದ್ದೊ. ಎಂಟ್ ಆಣೆ ಸ್ತಳ ಮರ್‌ಯಾದೆ. ನಾಲ್ಕು ಆಣೆ ಗೌಡ ಆರತಿ, ನಾಲ್ಕು ಆಣೆ ತಾಯಿ ಆರತಿ, ಎರಡು ಆಣೆ ಬೀಡು ಆರತಿ, ಜುಮು ರೂ. 6.25/– ಮತ್ತೆ ಮೂರ್ ವೀಳ್ಯಗಳ್‌ನ ಈ ಹಿಂದೆ ಹೇಳ್‌ದ ರೀತಿಲಿ ಎತ್ತಿಕೊಟ್ಟವೆ – ತಂದೆ ಗೋತ್ರ, ತಾಯಿ ಗೋತ್ರ, ಮಹಾನಾಡು ವೀಳ್ಯ ಮತ್ತೆ ಪುರೋಹಿತರ್ ವೇದ ಶಾಸ್ತ್ರಗಳ್‌ನ ಹೇಳಿಕಂಡ್ ಕೊಂಬಿನ ಗಿಂಡಿಲಿ ನೀರ್ ತುಂಬಿಸಿ ಅದರ್‌ಲೂ ಮಾಯಿನ ಎಲೆಗ ಅದರ ಮೇಲೆ ತೆಂಗಿನಕಾಯಿಯಿಟ್ಟ್ ಮಂತ್ರಗಳ್‌ನ ಹೇಳಿಕಂಡ್ ಮೊದೊಳಿಗೆನ ಅಪ್ಪನ ಕೈಗೆ ಕೊಟ್ಟವೆ. ನಂತರ ದಿಬ್ಬಣದವು ಮೊದುಮಜ್ಜನ ಕರ್‌ಕಬಂದ್ ದಾರೆ ಮಂಟಪಲಿ ನಿಲ್ಲಿಸಿ ಹೆಣ್ಮಕ್ಕ ಹನ್ನೊಂದು ಆರತಿಗಳ್‌ನ ಬೆಳ್‌ಗುವೆ.




**ಅವುಗಳ್‌ಲಿ ಎರಡ್ ಆರತಿ :** ಗೌಡ ಆರತಿ, ತಾಯಿ ಆರತಿಗಳ್‌ನ ಗೂಡೆಗ ಮನೆ ಮುಂದುಗಡೆ ಹಿಡ್‌ದ್ ನಿತ್ತವೆ. ಮತ್ತೆ ಸಣ್ಣ ಬಾಲಕಿ ಒಬ್ಬುಳು ಒಂದ್ ಚೊಂಬಿಗೆ ನೀರ್ ತಂದ್ ಮದುಮಜ್ಜನ ಕಾಲ್ ತೊಳ್‌ದದೆ ಆ ಚೊಂಬಿಗೆಗೆ ಒಂದ್ ಹಣ (ಮೂರಾಣೆ) ಹಾಕಿ ಕಳ್‌ಸುವೆ. ಎರಡರ ಕಡೆಂದನೂ ವಾದ್ಯ ಆಗ್ತಿದ್ದದೆ. ಮೊದೊಳಿಗೆ ಸೋದರಮಾವ ಮೊದೊಳಿಗೆಗೆ ಹಣ ಕೊಟ್ಟು ದಾರೆಗೆ ಎತ್ತಿಕಂಡ್ ಬಂದವೆ. ಮತ್ತೆ ಮದುಮಕ್ಕಳ್‌ನ ಎದುರು ಬದಿರಾಗಿ ನಿಲ್‌ಸಿ ಹೈದನ ಕೈನ ಗೂಡೆನ ಕೈ ಅಡಿಗೆ ಮಾಡಿ ಅಪ್ಪ ಗಿಂಡಿಲ್ಲಿದ್ದ ನೀರ್‌ನ ಮದೊಳಿಗೆ ಕೈಗೆ ಬುಟ್ಟದೆ. ಪುರೋಹಿತರು ಶಾಸ್ತ್ರಗಳ್‌ನ ಹೇಳಿಕಂಡ್ ಕಲ್ಯಾಣ ಮಸ್ತುಂ ಸುಬಮಸ್ತುಂ ತೇಳುವೆ. ನಂತರ ಸಬಿಕರ್ ಹತ್ತು ಕುಟಂಬ ಹದಿ ನೆಂಟ್ ಗೋತ್ರ ಕುಲಸ್ತರ ಸಬೆ ಸಮಸ್ತರ ಸಂಗಡ ಕೇಳಿ ಇಂತ ಗೋತ್ರದ ಗಂಡಿಗೂ ಇಂತ ಗೋತ್ರದ ಹೆಣ್ಣಿಗೂ ಕನ್ಯದಾರೆ ಎರೆಯುತ್ತೇವೆ' ತೇಳಿ ಮೂರುಸರ್ತಿ ಹೇಳಿ ಮೊದುಮಕ್ಕಳ ಕೈಗಳ್‌ನ ಮೂರುಸರ್ತಿ ಕೆಳಗೂ, ಮೇಲೂ ಮಾಡಿ ದಾರೆ ಎರ್‌ದವೆ. ಮತ್ತೆ ಹೈದ ತನ್ನ ಕೈಯಿಂದ ಮಾಂಗಲ್ಯನ ಗೂಡೆನ ಕುತ್ತಿಗೆಗೆ ಕಟ್ಟದೆ. ಆ ಹೊತ್ತುಲಿ ಮೇಲೆ ಹೇಳ್‌ದ ರೀತಿ ಹತ್ತು ಕುಟುಂಬ ತೇಳುವ ವಾಕ್ಯಗಳ್‌ನ ಮೂರಾವರ್‌ತಿ ಹೇಳೋಕು. ಮತ್ತೆ ಅಗಸ ಮಡಿ ಬಟ್ಟೆಗಳ್‌ನ ದಾರೆ ಮಂಟಪದ ಸುತ್ತು ಮನೆ, ಕೈಯಾಲೆವರೆಗೂ ಹಾಸೋಕು. ಮತ್ತೆ ಮೊದುಮಜ್ಜ ಮೊದೊಳಿಗೆನ ಕೈ ಹಿಡ್ಕಂಡ್ ದಾರೆ ಮಂಟಪಕ್ಕೆ ಮೂರಾವರ್‌ತಿ ಪ್ರದಕ್ಷಿಣೆ ಬಂದ್ ಮೊದೊಳಿಗೆ ಗೃಹಪ್ರವೇಶ ಮಾಡಿ ಅಲ್ಲಿಯ ಹಸೆ ಚಾಪೆಯ ಮೇಲೆ ಕುದ್ದದೆ. ಹೆಂಗಸರ್ ಸೋಬಾನೆ ಹೇಳಿಕಂಡ್ ಒಂದ್ ಬಟ್ಟಲ್‌ಲಿ ಹಾಲ್ ತೇಳಿಕಂಡ್ ಮಂಗಳಾರತಿ ಎತ್ತುವೆ. ಮತ್ತೆ ಎಲ್ಲವುಕೂ ಊಟ ಬಡ್‌ಸುವೆ.

ಎಲ್ಲ ಮುಗ್ದ ಮೇಲೆ ದಿಬ್ಬಣ ವಾಪಾಸ್ ವರನ ಮನೆಗೆ ವದು ಸಮೇತ ಹೊರ್ಟದೆ. ಗೂಡೆನ ಮನೆಯ ಚಪ್ಪರದಡಿಲಿ ನಿತ್ತ್ ನಾಗವಳಿ ಶಾಸ್ತ್ರಕ್ಕೆ ಮಾರನೆ ದಿನ ಬರೋಕೂಂತ ಗೂಡೆನ ನೆಂಟ್ರಗಳೆಲ್ಲವುಕೂ ವೀಳ್ಯ ಕೊಟ್ಟವೆ. ಮತ್ತೆ ದಿಬ್ಬಣ ಮುಕ್ಯಸ್ತರಿಗೆ ಹೆಣ್ಣ್ ಗಂಡ್ ವಹಿಸಿ ಕೊಟ್ಟವೆ,

**ನಾಗೋಳಿ ಶಾಸ್ತ್ರ :** ಇದರ ಹೆಣ್ಣ್ ಕರ್‌ಕಂಡ್ ಹೋದ ಮಾರನೆ ದಿನವೇ ನೆರವೇರಿಸುವೆ. ಗೂಡೆನ ಮನೆ ಸಂಸಾರಸ್ತರ್ ಬಂದು ಬಳಗದವ್ ಮಾರನೆ ದಿನ ಬೆಳಿಗ್ಗೆ 10 ಗಂಟೆಗೆ ಹೈದನ ಮನೆಗೆ ತಲಪುವೆ. ಚಪ್ಪರದ ಅಡಿಲಿ ಒಂದ್ ಬೋಗುಣಿಲಿ ಅರ್‌ಸಿನ ವಿಶ್ರ ಮಾಡ್‌ದ ನೀರ್‌ನ ತುಂಬುಸಿ ಅದರೊಳಗೆ ಒಂದ್ ಚಿನ್ನದ ಉಂಗುರ ಹಾಕಿದ್ದವೆ. ಗಂಡ್ ಹೆಣ್ಣ್ ಇಬ್ರೊಬ್ರು ಆದರೊಳಗೆ ಕೈಗಳ್‌ನ ಹಾಕಿ ಹುಡುಕುವೆ. ಆ ಉಂಗುರ ಸಿಕ್ಕಿದವರ ಪಾಲಿಗಾತ್. ಮತ್ತೆ ಎರಡ್ ದೊಡ್ಡ ಪಾತ್ರೆಗಳ್‌ಲಿ ಅರ್‌ಸಿನ ನೀರ್ ತುಂಬುಸಿ ಇಟ್ಟಿದ್ದವೆ. ಗಂಡ್ ಹೆಣ್ಣ್ ಎದುರು ಬದ್ರಾಗಿ ಸಾದಾರಣ ಹತ್ತ್ ಅಡಿ ದೂರಲಿ ಕುದ್ಕಂಡ್ ಇಕ್ಕಡೆಯವು ಆ ನೀರ್‌ನ ಗಂಡ್ ಹೆಣ್ಣಿನ ಮೇಲೆ, ಹೆಣ್ಣ್ ಗಂಡಿನ ಮೇಲೂ ಚೋಂಪಿಕಂಡವೆ. ಮತ್ತೆ ನಾ ಈ ಹಿಂದೆ ಹೇಳ್‌ದ ರೀತಿಲಿ ಹನ್ನೆರಡ್ ಚಪ್ಪರದ ಕಂಬಗಳ ಒಟ್ಟಿಗೆ ಒಂದ್ ಹಾಲೆ ಮರದ ಕಂಬ ಇದ್ದದೆ. ಅಡಿ ಬಾಗಲಿ ಒಂದ್ ಸಣ್ಣಕುಕ್ಕೆಲಿ ಗೊಬ್ಬರ ಮತ್ತೆ ಅದರ ತುಂಬಿಸಿ ಇಟ್ಟಿದ್ದವೆ. ಹೈದ ಆ ಕಂಬನ ಹೆಗ್‌ಲ್ ಮೇಲೆ ಹೊತ್ತ್‌ಕಂಡದೆ. ಗೂಡೆ ಆ ಗೊಬ್ಬರದ ಬುಟ್ಟಿನ ಹೊತ್ತುಕೊಂಡ್ ಹೋಗಿ ಅವರ ಮನೆ ಹಿಂದೆ ನೆಟ್ಟದೆ. ಗೂಡೆ ಅದಿಕ್ಕೆ ಈ ಗೊಬ್ಬರ ಹಾಕಿದೆ. ಮತ್ತೆ ಮೀದ್ ಹೊಸ ಬಟ್ಟೆ ತೊಟ್ಟ್ ಗೃಹ ಪ್ರವೇಶ ಮಾಡ್‌ವೆ ಅಲ್ಲಿಯೇ ಮನೆ ಎದ್‌ರ್‌ಗಡೆ ಬಾಗಿಲ್‌ಲಿ ಮನೆ ಅಕ್ಕ ತಂಗೆಕ ಬಾಗಿಲ್ ತಡ್‌ದವೆ, ಹೆಂಗಸ್‌ರ್ ಸೋಬಾನೆ ಹಾಡುವೆ, ದಂಪತಿಗ ಒಪ್ಪುತ್ತಾರ ಮೇಲೆ ಬಾಗಿಲ್ ಬುಟ್ಟ್, ಸಿಹಿ ಪದಾರ್‌ತಗಳ್‌ನ ಉಂಬಕ್ಕೆ ಕೂಡಿಸಿದ್ದವೆ. ಸುರೂಗೆ ಹನ್ನೆರಡ್ ತುದಿ ಬಾಳೆ ಎಲೆಗಳ್‌ನ ಹನ್ನೆರಡ್ ಕುಂಬಗಳಿರುವ ಕಂಬಗಳ ಬುಡಲಿ ಹಾಕಿದ್ದವೆ. ಗೂಡೆ ಆ ಕಂಬಗಳ ಬುಡಲಿ ಹಾಕಿರುವ ಎಲೆಗಳಿಗೆ ಪಾಯಸ, ತುಪ್ಪ, ಹಪ್ಪಳ, ಸಂಡಿಗೆ ಇಂತೆಲ್ಲ ಪದಾರ್‌ತಗಳ್‌ನ ಬಡ್‌ಸಿದೆ. ಹೈದ ಅವ್‌ಕ್ಕೆಲ್ಲ ಗಂದ, ದೂಪಗಳ್‌ಂದ ಹೊಗೆ ಹಾಕಿದೆ. ಎಲ್ಲವ್ ಸೇರಿ ಪರಮಾತ್ಮನಾದ ಶಿವನ ನೆನ್ಸುವೆ. ಮತ್ತೆ ಎಲ್ಲವೂ ಉಂಬಕ್ಕೆ ಕುದ್ದವೆ. ಗೂಡೆ ಬಡ್ಸಿದೆ. ಮತ್ತೆ ತನ್ನ ಗಂಡನೊಟ್ಟಿಗೆ ಸಟ್ಟುಗದ ಹಣ ಕೇಳ್‌ದೆ. ಹೈದ ಸಟ್ಟುಗದ ಮೇಲೆ ಹಣ ಇಟ್ಟದೆ. ಊಟ ಮುಗ್ದ ಮೇಲೆ ನಾಗೋಳಿ ಶಾಸ್ತ್ರ ಮುಗ್ದದೆ.

**ತುಪ್ಪದ ಕಟ್ಲೆನ ಪೊದ್ದತಿ :** ಇದರ ಮನೆಂದ ಹೆಣ್ಣ್ ಇಳ್ದ ಐದನೆ ಅತವಾ ಏಳನೇ ದಿನಗಳ್‌ಲಿ ಹೈದನ ಮನೆಂದ ಗೂಡೆನ ಮನೆಗೆ ಬಾಕನ ಗಂಡ್ ಒಂದ್ ಸೇರು ತುಪ್ಪ, ಹೆಣ್ಣ್ ಅರ್‌ದ ಸೇರ್ ತುಪ್ಪ, ಒಂದೊಂದು ತಂಬಿಗೆಲಿ ತಂದ್ ನೆಲ್ಲಕ್ಕಿ ಅಡಿಲಿ ಇಸಿ, ಕುಲಗುರು ಪ್ರಾರ್‌ತನೆ ಮಾಡಿ ಹಿರಿಯರ ಪಾದಗಳ್‌ನ ಮುಟ್ಟಿ ಕೈಮುಗ್‌ದವೆ.ಈ ತುಪ್ಪನ ತನ್ನ ಕುಲಗುರುವಿಗೂ ಮತ್ತೆ ಮುಂದೆ ನಿತ್ತ ಹಿರಿಯರ್‌ಗೂ ಅರ್ಪಿಸಿ ಎಲ್ಲವೂ ಊಟ ಮಾಡ್‌ವೆ. ಉಂಬಕ್ಕೆ ಒಂದ್ ಬಗೆಯ ಹೆಸ್‌ರ್ ಹೇಳ್‌ವ ಪಜ್ಜಿ (ಚಟ್ನಿ) ಮಾಡಿದ್ದವೆ. ಅದರ ಸಬೆಯವು ಅದರ ಹೆಸರು ಹೇಳಿ ಊಟ ಮಾಡೋಕು. ಮಾರನೆ ದಿನ ಬೆಳಿಗ್ಗೆ ಗಂಡ್, ಹೆಣ್ಣ್, ಗಂಡ್‌ನ ಮನೆಗೆ ಹೋದವೆ. ಹೋಕನ ಮೊದ್‌ವೆ ಚಪ್ಪರದ ಒಂದ್ ಸೊಪ್ಪುನ ಗೆಲ್ಲ್‌ನ ತೆಗ್‌ದ್ ಬಿಸಾಕಿ ಹೋದವೆ, ಇಲ್ಲಿಗೆ ಶಿವಕಲ್ಯಾಣ ಮುಗ್‌ದದೆ. (ಇನ್ನೊಂದು ವಿಸಯ : –ಹಿಂದೆ ಸುಳ್ಯ ಸೀಮೆಲಿ ಒಂದ್ ಮೊದ್‌ವೆ ನಡ್‌ದಿತ್ತ್ ಗಡ. ಹೆಣ್ಣ್ ದಾರೆ ಆಗುವ ಹೊತ್ತಿಗೆ ಪುರೋಹಿತರ್ ಬಾತ್ಲೆ. ಕಾರಣ, ಆ ಸುಳ್ಯ ಸೀಮೆಗೆ ಬರಕಾದ ನೆರೆ ಪುರೋಹಿತರಿಗೆ ಮಕ್ಕ ಒಂದ್ ಹೊಳೆ ದಾಟಕಿತ್ತ್ ಗಡ. ಆ ದಿನ ಆ ಹೊಳೆಯಲ್ಲಿ ದೊಡ್ಡ ಪ್ರವಾಹ ಬಂದದ್ದರ್‌ಂದ ದೋಣಿ ಇಲ್ಲದ ಕಾರಣ ಪುರೋಹಿತರಿಗೆ ಸಕಾಲಕ್ಕೆ ದಾರೆ ಮೂರ್‌ತಕ್ಕೆ ಮುಟ್ಟಕೆ ಸಾದ್ಯ ಆತ್ಲೆ. ಸಮಯ ಮೀರ್‌ತಾ ಬಾತ್. ಹಿಂದಿನ ಕಾಲಲಿ ಒಬ್ಬ ಮುಕ್ಯಾದಿಕಾರಿಯಾಗಿದ್ದ ಒಬ್ಬ ಬಂಟ ಜಾತಿಯಂವ ಸಿಟ್ಟಿಂದ ಬ್ರಾಣೆ,

ದಾಯಿತ ಅಪ್ಪ, ಅಮ್ಮ ದಾರೆಮಯಿ ಪುಲೆ' ತೇಳಿ ಗಟ್ಟಿಯಾಗಿ ಗರ್ಜಿಸಿತ್ ಗಡ. ಅದೇ ರೀತಿಲಿ ಅಯ್ಯೆ ಅಪ್ಪ ದಾರೆ ಎರ್‌ದೊ. (ಇದ್‌ಕೆ ಈಗಲೂ ಕೊಡಗ್‌ಲಿ ಬಂಟದಾರೆತ ಹೆಸರುಟ್ಟು) ಈ ವರ್ತಮಾನನ ಅವರ ಸೀಮೆ ಯವು ಶೃಂಗೇರಿ ಗುರುಗಳಿಗೆ ತಿಳಿಸಿದೊ. ಆಗ ಅವು 'ಸುಳ್ಯ ಸೀಮೆಯವ್‌ಕೆ ಇನ್ನು ಮುಂದೆ ನಾನ್ ಗುರು ಅಲ್ಲ. ಅವು ಇನ್ನು ಮುಂದೆ ಶಿವಕಲ್ಯಾಣ ಪೊದ್ದತಿನ ಅನುಸರಿಸಿಕಾಗದ್. ಅಮರದವು ಸುಳ್ಯದವರ ನೆಂಟಸ್ತನ ಮಾಡಿಕಾಗದ್' ತೇಳಿ ಆಜ್ಞೆ ಕೊಟ್ಟ ಗಡ. ಆಮೇಲೆ ಕೊಡಗ್‌ಲಿ ಸಹ ಈ ಎರಡ್ ಊರುಗಳಿಗೆ ನೆಂಟಸ್ತಾನ ನಿತ್ತ್ ಹೋತ್. ಕಾಲಚಕ್ರ ಉರುಳಿಕೊಂಡು ಬಂದಹಾಂಗೆ ಮತ್ತೆ ಇಲ್ಲಿ ಗೌಡುಗಳಿಗೆ ನೆಂಟಸ್ತಾನ ನಡೆತಾ ಬಾತ್. ಆದರೆ ಸುಳ್ಯ ಸೀಮೆ ಗೌಡುಗಳಿಗೆ ಶಿವಕಲ್ಯಾಣ ಪೊದ್ದತಿ ಇಲ್ಲೆ, ಮೊದ್‌ವೆಲಿ ಯಾವ ವೈದಿಕ ಕ್ರಮಗ ಇಲ್ಲೆ.

**ಹತ್ತೊಳಿಯುದು :** ಹೊಸದಾಗಿ ಮೊದ್‌ವೆಯಾದ ಗೂಡೆ ತನ್ನ ತವುರ್‌ಲಿ ಇದ್ದ್‌ಕಂಡ್ ಸಂಸಾರದೊಟ್ಟಿಗೂ ಅಯ್ಯೆ ಅಪ್ಪನೊಟ್ಟಿಗೆ ಬಾಳ ಪ್ರೀತಿಲಿದ್ದ್, ಈಗ ಗಂಡನ ಮನೆ ಸೇರಿ ತನ್ನ ಸಂಸಾರ, ಅಯ್ಯೆ ಅಪ್ಪನ ಗ್ಯಾನ ಮಾಡಿ ಬೇಜಾರ್ ಮಾಡಿಕಂಡದೆ. ಇದಿಕ್ಕಾಗಿ ತನ್ನ ತವರು ಮನೆಯವು 10–15 ದಿನ ಗಂಡನ ಮನೆಲಿ ಕಳ್‌ದ ಮೇಲೆ ತವುರಿಗೆ ಹತ್ತು ಉಳಿಯಕೆ ಕರ್‌ದುಕೊಂಡು ಬಂದವೆ.

ಆಟಿ ಕೂರುದು : ಕರ್‌ಕಾಟಕ (ಆಟಿ) ತಿಂಗ ತುಂಬ ಶೂನ್ಯ ಮಾಸವಾಗಿದ್ದದೆ. ಈ ತಿಂಗಳ್‌ಲಿ ಯಾವ ಒಳ್ಳ ಕಾರ್ಯನ ಮಾಡಿಕಾಗದ್. ಗಂಡ್ ಹೆಣ್ಣ್ ಒಬ್ಬರ ಮುಕ ಒಬ್ಬ ನೋಡಿಕಾಗದ್. ಇದಿಕ್ಕಾಗಿ ತವರು ಮನೆಯವು ಕರ್‌ಕೊಂಡು ಬಂದ್ ಒಂದ್ ತಿಂಗ ತವುರ್‌ಲಿ ಉಳ್‌ಸಿಕಂಡವೆ. (ಪಿ.ಬಿ.)

**ಮನೆ ಒಕ್ಕಲು :** ಮನೆ ಕಟ್ಟಿಕೆ ಸುರುಮಾಡ್‌ದಲ್ಲಿಂದ ಮನೆ ಒಕ್ಕಲಾವ ವರೆಗೆ ಸುಮಾರ್ ತರದ ವಿದಿಗಳ ನಡ್‌ಸಿಕಂಡ್ ಹೋದವೆ. ಇದೆಲ್ಲನೂ ದಾರ್ಮಿಕ ಮಹತ್ವಂದ ಕೂಡಿರ್‌ದಂದ ಕಟ್ಟುನಿಟ್ಟಾಗಿ ನಡ್‌ಸ್‌ವೆ. ಊರ್‌ಲಿ ಒಳ್ಳ ಹೆಸರ್ ಇರ್‌ವಂತ ಜೋಯಿಸರ್ ಮನೆಕಟ್ಟಿಕೆ ಒಂದೊಳ್ಳ ಜಾಗೆನ ನೋಡಿ ಕೊಟ್ಟವೆ. ಇದ್‌ಕೆ ಜೋಯಿಸರ್‌ಗೆ ದುಡ್ಡ್ ಮತ್ತೆ ಕಾಯಿ ಸಂಬಾವನೆ ಆಗಿದ್ ಸಿಕ್ಕಿದೆ. ನಿಗಂಟ್ ಮಾಡ್‌ದ ಸುಬ ದಿನದಂದ್ ಮನೆನ ಯೆಜಮಾನ ಕಮ್ಮ್ರನ ತಟ್ಟೆ ಒಂದರ ನೆಲಲಿ ಊರಿ ಕೆಲಸ ಸುರ್‌ಮಾಡ್‌ವೆ. ಊರ್‌ದ ಕಮ್ಮ್ರನ ತಟ್ಟೆನ ಕರೆಗೆ ಸಣ್ಣ ಹೊಂಡ ಒಂದರ ತೆಗ್‌ದ್, ಅದ್‌ಕೆ ಹಜ್ಞ ಮೊಣ್ಣ್ ಹಾಕಿ, ನೀರ್ ಹೊಯ್ದ್, ಕೈಮುಗ್‌ದ್, ಕಾಯಿ ಒಡ್‌ದ್, ಗೋಡೆಕಟ್ಟಿಕೆ ಸುರ್ ಮಾಡ್‌ವೆ. ಇಸ್ಟ್ ಕ್ರಮನ 'ಕುಟ್ಟಿಪೂಜೆ'ತ ಹೇಳ್‌ವೆ. ಪೂಜೆ ಮುಗ್‌ದ ಮೇಲೆ ಒಳ್‌ದವ್ ಗೋಡೆ ಕಟ್ಟಿಕೆ ಸುರ್‌ಮಾಡ್‌ವೆ. ಗೋಡೆ ಮೇಲೇರ್‌ದಾಂಗೆ ನೋದ್‌ದವರ ದ್ರಿಸ್ಟಿ ಬಿದ್ದ್ (ಕೆಟ್ಟಕಣ್ಣು) ಗೋಡೆ ಹಾಳಾದುತ ಹೆದ್‌ರಿ ಕಳ್ಳಿ ದೈನ ಗುತ್ತಿನ ತಂದ್ ಗೋಡೆನ ಮೇಲೆ ಇಸ್‌ವೆ. ಅಲ್ಲರೆ ಬಿಳ್‌ಗ್‌ಲಿ ಮೊಯಿಂಸನ ಹಾಂಗೆ ಗೊಂಬೆ ಒಂದರ ಮಾಡಿ, ದೊಡ್ಡದಾದ ತುಣ್ಣೆ ಒಂದರ ಅದ್‌ಕೆ ಕಟ್ಟಿ ಎತ್ತರಲಿ ಇಸ್‌ವೆ. ಇದರ 'ಬೆರ್‌ಚಪ್ಪ' ತ ಕರ್‌ದವೆ.. ಮನೆ ಕಟ್ಟಿಕನ ಯಾರಿಗೂ ಏನೂ ತೊಂದರೆ ಆಕಾಗದ್‌ತ ಜಾಕ್ರತೆಂದ ಇದ್ದವೆ. ಗೋಡೆ ಕಟ್ಟಿದ ಮೇಲೆ ಅದರ ಒಣ್‌ಗ್‌ಸಿ, ಪಕ್ಕಾಸ್, ರೀಪುಗಳ ಹಾಕಿ ಮಾಡೊಂದರ ಕಟ್ಟುವೆ. ಇದರ 'ಮಾಡು ಕಟ್ಟುದು' ತ ಹೇಳ್‌ವೆ. ಮಾಡ್‌ಗೆ ಹಂಚಿ, ಮುಳಿ ಅಲ್ಲರೆ ಸೋಗೆನ ಹೊದ್‌ಸ್‌ವೆ.. ಮತ್ತೆ ಇನ್ನೊಮ್ಮೆ ಜೋಯ್‌ಸನ ಕಂಡ್ ಮನೆ ಒಕ್ಕಲ್‌ಗೆ ಸುಬದಿನ ಒಂದರ ನಿಗಂಟ್ ಮಾಡ್‌ವೆ. ಮನೆ ಒಕ್ಕಲಾವ ದಿನನ 'ಮನೆ ಒಕ್ಲ್' ತ ಹೇಳ್‌ವೆ.

ಮನೆ ಒಕ್ಕಲ್‌ನ ಹಿಂದೆನ ದಿನ ಕತ್ತಲೆಗೆ ಮನೆಕಟ್ಟಿಕೆ ಕೂಡ್‌ದ ಆಚಾರಿನೊಟ್ಟಿಗೆ ಮನೆನ ಯಜಮಾನ ಗುತ್ತಿ ಪೂಜೆನ ಮಾಡ್‌ಸ್‌ವೆ. ಗುತ್ತಿ ಪೂಜೆನ ಮನೆನ ಒಳೆಗೆ ಹಾಕಿದ ಕನ್ನಿಕಂಬನ(ನೋಡಿ : ಕನ್ನಿಕಂಬ) ಬುಡಲಿ ಮಾಡ್‌ವೆ. ಇದರ ಮಾಡಿಕೆ ಬೇಕಾದ ಸೊತ್ತ್‌ಗಂತೇಳಿರೆ ಒಂದ್ ಚೊಂಬ್ ನೀರ್, ಕುರ್‌ದಿ ನೀರ್, ಬಿಳಿಬಟ್ಟೆ, ಊದ್‌ಬತ್ತಿ ಇಲ್ಲರ್ ಯಾದೆ ಪೊರಿಮಳ ಬಾವ ಸೊತ್ತ್‌ಗ ಆದೆ, ಏಳ್ ಕಾಯಿ, ಐದ್ ಅಡ್‌ಕೆ, ಒಂದ್ ಸೂಡಿ ವೀಳ್ಯದೆಲೆ, ಬಾಳೆಹಣ್ಣ್, ಹೊದ್‌ರಿ, ಅವುಲ್, ಬೆಲ್ಲ, ದೇವರ ದೀಪ, ಉರಿಸಿಕೆ ಬೇಕಾಸ್ಟ್ ಹತ್ತಿನ ಬತ್ತಿಗ, ಕತ್ತಿ, ಒಂದ್ ಅಡಿನಸ್ಟ್ ಉದ್ದದ ಕಮ್ಮ್ರನ ತಟ್ಟೆಲಿ ಮಾಡ್‌ದ ಕೋಲ್‌ಗೆ ಬಟ್ಟೆ ಸುತ್ತಿ ಎಣ್ಣೆ ಹಾಕಿ ಮಾಡಿಟ್ಟ ನಾಕಾರ್ ಕೋಲ್ತಿರಿಗ, ಬೆಳ್ತಿಗೆ ಅಕ್ಕಿ, ಕದಳಿ ಬಾಳೆನ ಎಲೆಗ, ಬೆಂಡ, ಮಣಿಗ, ಬಾಳೆ ಎಲೆನ ಕೊಯ್‌ದ್ ಉರುಂಟಾಗಿ ಮಾಡ್‌ದ ಕಿಳ್ಳಿ, ತೊಳ್‌ಸಿ ಕೊಡಿ ಮತ್ತೆ ಗಂದದೂಪ, ಕನ್ನಿ ಕಂಬದೆದ್‌ರ್ ಸುದ್ದ ಮಾಡಿಸಿದ ಮಣೆನ ಇಸುವೆ. ಅದರ್‌ಲಿ ಮೂಡನ ಪುಡೆಗೆ ಒಂದ್ ದೀಪನ ಹೊತ್ತುಸಿಸಿ ಅದರ ಎದ್‌ರ್ ಸುದ್ದ ಮಾಡ್‌ದ ಕದೊಳಿ ಬಾಳೆ ಎಲೆ ಇಸ್‌ವೆ. ಎಲೆಗೆ ಮೂರ್ ಪುಂಡಿ ಬೆಳ್ತಿಗೆ ಅಕ್ಕಿ ಹಾಕಿ, ಅಕ್ಕಿನ ನೊಡುಗೆ ಚೊಲ್ಲಿದ ಕಾಯಿನ ಇಸ್‌ವೆ. ಐದ್ ವೀಳ್ಯದೆಲೆ



ಮನೆ ಒಕ್ಕಲು

ಮತ್ತೆ ಒಂದ್ ಅಡ್‌ಕೆನ ಬಾಳೆ ಎಲಿ ಇಸಿ ಅದರ ಹಕ್ಕಲೆ ನಾಕಾಣೆ ಪಾವಲಿ ದುಡ್ಡ್‌ನ ಇಸ್‌ವೆ. ಇದರ ಎಡ್‌ದ ಪುಡೆಲಿ ಒಟ್ಟೆ ಮಾಡ್‌ದ ಎಳನೀರ್‌ನ ಮತ್ತೆ ಕೊಯ್‌ಸಲಕ್ಕಿನ ಹಾಕೊಕು. ಕೊಯ್‌ಸಲಕ್ಕಿ ಮತ್ತೆ ಬೆಳ್ತಿಗೆ ಅಕ್ಕಿನ ನೊಡುಗೆ ಸಣ್ಣ ಎಲೆನ ಹಾಕಿ ಅದರ್‌ಲಿ ಹೊದ್‌ರಿ ಹಾಕ್‌ವೆ. ನೊಡೂದ್ ದೇವರ ಎಲೆ ಆದರೆ, ಎಡ ಪುಡೆದ್ ಮನೆನ ಯಜಮಾನಂಗೆ, ಬಲ ಪುಡೆದ್ ಮನೆ ಕಟ್ಟೆಕೆ ಸಹಕರ್‌ಸಿದ ಆಚಾರಿಗೆತ ಹೇಳ್‌ವೆ. ಆಚಾರಿಗ ಅವ್ ಮನೆಕಟ್ಟೆಕೆ ಬಳ್‌ಸಿದ ಮರದ ಸಾಮಾನ್‌ಗಳ ಮತ್ತೆ ಕಬ್ಬಿಣದ ಹತ್ಯಾರ್ ದೇವರ ಎಲೆನ ಎದ್‌ರ ಇಸುವೆ. ಮಡ್‌ಕೆನ ಚೂರೊಂದರ್‌ಲಿ ಹಿಜ್ಜಿ ಕೆಂಡ ಹಾಕಿ ಗಂದದ ಹೊಡಿನ ಸಿಡ್ಕಿ, ಗಂದ ದೂಪ ಕೊಡುವಲ್ಲಿಂದ ಪೂಜೆ ಸುರಾದೆ. ಮನೆವೆಲ್ಲ ಒಂದ್ ಕೋಣೆಲಿ ಒಟ್ಟು ಸೇರ್‌ವೆ. ಆಚಾರಿ ತೊಳ್‌ಸಿ ಎಸಳ್‌ಗಳ ಕಾಯಿನ ಮೇಲಿಸುವೆ ಅದರೆದುರ ಬಿಳಿ ಬಟ್ಟೆ ಒಂದರ ಇಸಿ, ಬೆಳ್ತಿಗೆ ಅಕ್ಕಿನ ಎಲ್ಲರ ಕೈಗೆ ಕೊಟ್ಟದೆ. ಕೈಮುಗ್‌ದ್ ಎಲ್ಲವ್ ಬೆಳ್ತಿಗೆ ಅಕ್ಕಿನ ಕಾಯಿ ಮೇಲೆ ಸೇಸೆ ತೆಗ್‌ದವೆ. ಮತ್ತೆ ಕೋಲ್ತಿರಿಗಳ ಹೊತ್ತ್‌ಸಿ, ಗಂಡ್‌ಸ್‌ಗ ಅದರ ಕೈಲಿ ಹಿಡ್‌ಕಂಡ್, ಮನೆಗೆ ಹೊರಗೆಂದ ಪ್ರದಕ್ಷಿಣೆ ಬಂದವೆ. ಪ್ರದಕ್ಷಿಣೆ ಬಾಕನ ಮನೆ ಯಜಮಾನ ಅವನ ಕೈಲಿದ್ದ ಕಾಯಿನ ಮನೆನ ಮೂಲೆ ಮೂಲೆಗೆ ಕುಟ್ಟಿಕಂಡ್ ಸುತ್ತ್ ಬಂದವೆ. ಕೋಲ್ತಿರಿನ ಮನೆನ ಸುತ್ತ ಊರ್‌ವೆ. ಒಬ್ಬ ಹುಂಜ ಒಂದರ ಹಿಡ್‌ಕಂಡ್ ಅದ ಕೂಂಗ್‌ಸಿಕಂಡ್ ಸುತ್ತ ಬಂದದೆ. ಹೀಂಗೆ ಕೈಮುಗ್‌ದ್, ಮೂರ್ ಸರ್‌ತಿ ಸುತ್ತ್ ಬಂದವೆ. ಕಡೇ ಸುತ್ತ್‌ಲಿ ಮನೆನ ನಾಕ್ ಮೂಲೆಲು ಬಾಳೆ ಎಲೆ ಇಸಿ, ಹೊದ್‌ರಿ ಹಾಕಿ, ಕುರ್‌ದಿ ನೀರ್ ಹೊಯ್‌ದ್, ದೀಪ ಹೊತ್ತುಸಿ, ಕೈ ಮುಗ್‌ದವೆ. ಹೀಂಗೆ ಕೈಮುಗ್‌ದ್ ಗೋಡೆ ಕಟ್ಟಿಕನ ಊರಿದ್ದ ಗುತ್ತಿಗಳ ಕಿತ್ತ್ ಮೇಲೆ ಎಲ್ಲವೂ ಮನೆ ಒಳೆಗೆ ಬಂದವೆ. ಅವರವರ ಕೈಲಿದ್ದ ಕಾಯಿನ ಮನೆನ ಮುಕ್ಯ ಸಾಮಾನ್‌ಗಳಿಗೆಲ್ಲ ಮುಟ್ಟ್‌ಸ್‌ವೆ. ಮತ್ತೆ ಎಲ್ಲವ್ ಸೀದಾ ಮನೆನ ಇಜ್ಜಾಲ್‌ನ ಕೊಡಿಗೆ ಬಂದವೆ. ಕುರ್‌ದಿ ನೀರ್‌ನ ದಾರಿ ಉದ್ದಕೆ ಸಿಡ್ಕೆಂಡ್ ಕಮ್ಮುನ ತಟ್ಟೆಂದ ಮಾಡ್‌ದ ಗುತ್ತಿಗಳ ಒಟ್ಟು ಸೇರ್‌ಸಿ, ಕಿಚ್ಚಿಕೊಟ್ಟು, ಕೈಲಿ ಹಿಡ್‌ಕಂಡ ಸೂಟೆಗೆ ಎಲ್ಲರೊಟ್ಟಿಗೆ ಇದ್ದದೆ. ಒಂದ್ ಸರಿಕಟ್ಟ್‌ನ ಜಾಗೆಲಿ ಸುತ್ತಕೆ ನಿತ್ತವೆ. ಅಲ್ಲೇ ಒಂದ್ ಕಲ್ಲ್‌ಲಿ ಎಲೆ ಹಾಕಿ,ಹೊದ್‌ರಿ ಹಾಕಿ, ಒಂದ್ ಕರೆಗೆ ಬಾಳೆ ಎಲೆಯಿಂದ ಮಾಡ್‌ದ ಕಿಳ್ಳಿಲಿ ಕಳ್ಳು ಅಲ್ಲರೆ ಸರಾಯ ಇಸುವೆ. ಕೋಳಿನ ತಲೆ ಕೊಯ್‌ದ್ ಹಿಜ್ಜಿ ರಕ್ತ ಹೊದ್‌ರಿನ ಮೇಲೆ ಬೀಳುವಂಗೆ ಮಾಡಿ ಇಟ್ಟವೆ. ಎಲ್ಲವ್ ಆಗ ಕೈಮುಗ್‌ದ್ ತಿರ್‌ಗಿ ನಿತ್ತವೆ. ಇದರ 'ಬಲಿ ಕೊಡ್ದು' ತ ಹೇಳ್‌ವೆ. ದೂರಕೆ ಇಟ್ಟ ಕೋಳಿ ತೆಂಕ ಬಡಗ ಬಿದ್ದಿದ್ದರೆ ದೇವುರುಗೆ ತೃಪ್ತಿ ಆಗುಟುತ ನೆನ್‌ಸಿಕಂಡವೆ. ಕುರ್‌ದಿ ನೀರ್‌ನ ಸಿಡ್ಕಿದ್ ಕೋಳಿನ ತೆಕಂಡ್ ಎಲ್ಲವ್ ಮನೆಗೆ ತಿರ್‌ಗಿ ಬಂದವೆ. ಮನೆನ ಒಳಗೆ ಹೋಕೆ ಮುಂದೆ ಕಾಯಿನ ಮನೆನ ಮೆಟ್ಲ್‌ಲಿ ಒಡ್ದವೆ. ಚೂರುಗ ಪೂರ ಮೇಲೆ ಮೋರೆ ಮಾಡಿ ಬಿದ್ದಸ್ಟ್ ಒಳ್ಳೆದ್‌ತ ನಂಬುವೆ. ಮತ್ತೆ ಎಲ್ಲವ್ ಕನ್ನಿಕಂಬದ ಬುಡಕ್ಕೆ ಬಂದವೆ. ಇನ್ನೊಮ್ಮೆ ಕೈ ಮುಗ್‌ದು ಹಣೆಗೆ ಗಂದನ ಹಾಕಂಡವೆ. ಅದಾಗಿ ತಲೆ ಕೊಯ್‌ದ ಕೋಳಿನ ಗೈಪು ಮಾಡಿ ಎಲ್ಲವ್ ಉಂಡವೆ. ಆ ದಿನ ರಾತ್ರಿ ಹೊಸ ಮನೆಲಿ ದನ ಮತ್ತೆ ಕರ್‌ನ ಕಟ್ಟುವೆ. ಜೆನನು ಹೊಸ ಮನೆಲೆ ಹೆದ್‌ರಿಕೆ ಇಲ್ಲದೆ ಮಲ್‌ಗ್‌ವೆ. ಈ ಗುತ್ತಿ ಪೂಜೆಲಿ ಕೆಲವ್ ಒಳ ವೆತ್ಯಾಸಗ ಇದ್ದದೆ. ಕೆಲವ್ ಕಡೆ ಗೌಡ್ರ್ ಗುತ್ತಿ ಪೂಜೆನ ದಿನದಂದ್ ಮನೆ ಸುತ್ತ ಒಂದ್ ಬೊಳ್ಳಿನ ಕಟ್ಟುವೆ. ಈ ಬೊಳ್ಳಿ ಕಾಡ್‌ಲಿ ಸಿಕ್ಕಿದೆ. ಅದರ ಮನೆಬೊಳ್ಳಿತ ಕರ್‌ದವೆ. ಇದ್ ಒಳ್ಳೆದ್‌ಂತ ನಂಬಿಕೆ ಉಟ್ಟು. ಇನ್ನ್ ಕೆಲವ್ ಮನೆನ ಹೊರೆಗೆ ಪುಡೆನ ಗೋಡೆನ ಮೇಲೆಗೆ ಮಾಡ್‌ಗೆ ತಾಂಗ್‌ವಂಗೆ ಸುಣ್ಣದ ಗುರ್ತ ಮಾಡ್‌ವೆ. ಜೇಡಿ ಮೊಣ್ಣ್‌ಲಿ ಎಡಕೈನ ಕಂತ್‌ಸಿ ಮೇಲೆಗೆ ಒತ್ತುವೆ. ಕೈ ಗುರ್‌ತ್‌ಂದಾಗಿ ದುಸ್ಟ ಸಕ್ತಿಗ ಮನೆ ಒಳೆಗೆ ಬಾಕಾಕಿಲೆಂತ ಅವ್ ನಂಬುವೆ (ಪಿ.ಬಿ.)

**ಮಲೆಕುಡಿಯರ್ :** ಅರೆಬಾಸೆ ಮತ್ತೆ ತುಳುನಾಡ್‌ಲಿ ಇರ್‌ವ ಬುಡಗಟ್ಟ್ ಸಮುದಾಯ. ಅಬಿರುದ್ಧಿ ಆಗತಿರ್‌ವ ಏಸ್ಯಾ ಮತ್ತೆ ಆಪ್ರಿಕಾದ ಬೇರೆ ರಾಸ್ಟಗಳಂಗೆ ಭಾರತಲು ಸುಮಾರ್ ಬುಡಕಟ್ಟ್ ಸಮುದಾಯಗಳ್‌ನ ಹೊಂದಿಟು. 1981ರ ಜೆನಗಣತಿನ ಪ್ರಕಾರ ಭಾರತದ ಒಟ್ಟು ಜೆನಸಂಕೆನ ಸೇಕಡಾ 7.76ರಸ್ಟ್ ಜೆನ ಬುಡಕಟ್ಟ್


ಮಲೆಕುಡಿಯರ್

ಜೆನಾಂಗಕೆ ಸೇರ್‌ದವ್. ಕರ್ನಾಟಕದ ಜೆನಸಂಕೆನ ಶೇಕಡಾ 4.91ರಸ್ಟ್ ಬುಡಕಟ್ಟ್ ಜೆನಂಗ ಇದ್ದ್ ಬೇರೆಬೇರೆ ಬುಡಕಟ್ಟ್ ಗಳ ಜೆನ ಎಲ್ಲಾ ಜಿಲ್ಲೆಗಳ್‌ಲಿನೂ ಹಂಚಿ ಹೋಗೊಲೊ. ಹಿಂಗೆ ಬೇರೆ ಬೇರೆ ಬೂಪ್ರದೇಸಗಳ್‌ಲಿ ಹಂಚಿಹೋದ ಬೇರೆ ಬೇರೆ ಬುಡಕಟ್ಟ್ ಜೆನಾಂಗದ ಜೆನ ತಮ್ಮ ತಮ್ಮ ಪರಿಸರ, ಬೌಗೋಳಿಕತೆಗೆ ಅನುಗುಣಾಗಿ ಬದಲಾವಣೆನ ಬೇರೆ ಬೇರೆ ಹಂತಗಳ್‌ಲಿ ಅವರ ಗುರ್‌ತ್‌ಸಿಕಂಡೊಳೊ. ದಕ್ಷಿಣಕನ್ನಡ ಜಿಲ್ಲೆನ ಸುಮಾರ್ 32 ಬುಡಕಟ್ಟ್ ಜೆನಾಂಗಕೆ ಸೇರ್‌ದ ಜೆನಗ ವಾಸ ಮಾಡ್‌ತಿದ್ದ್, ಇದ್ ಒಟ್ಟು ಜೆನಸಂಕೆನ ಸೇಕಡಾ 3. 71ರಸ್ಟಾದೆ. ಬೆಳ್ತಂಗಡಿಲಿ ತಾಲೂಕ್ ಸೇಕಡಾ 533ರಸ್ಟ್ ಬುಡಕಟ್ಟ್ ಜೆನಸಂಕೆ ಉಟ್ಟು,ಮತ್ತೆ ಒಟ್ಟು ಬುಡಕಟ್ಟ್ ಜೆನಸಂಕೆನ ಸೇಕಡಾ 34 :

15 ಮಲೆಕುಡಿಯರ್ ಒಳೊ. ಬೆಳ್ತಂಗಡಿ ತಾಲೂಕ್‌ನ ಚಾರ್ಮಾಡಿ, ಹತ್ಯಡ್ಕ, ಬಾಂಜಾರುಮಲೆ, ಅಂಬಟೆಮಲೆ, ಎಲಿಮಲೆ (ಕೋಲೋಡಿ), ಆಲಿಂಗಾಯ, ಸಿಸಿಲ, ಸಿಬಾಜೆ, ಎಳನೀರು, ಅರಸೀಕಟ್ಟೆ, ದರ್ಮಸ್ತಳ, ನಿಡೆ, ದಿಡು ಇಂತ ಪ್ರದೇಸಗಳ್‌ಲಿ ಮುಕ್ಯಾಗಿ ಮಲೆಕುಡಿಯರ್ ವಾಸ ಒಳೊ. ಬೌಗೋಳಿಕಾಗಿ ಮಲೆಕುಡಿಯರ್ ಹೆಚ್ಚಿಗೆ ಕಾಡ್, ಬೆಟ್ಟ, ಗುಡ್ಡಗಳ ಇಳಿಜಾರ್ ಪ್ರದೇಸಗಳ್‌ಲಿ ವಾಸ ಮಾಡಿಕಂಡೊಳೊ. ಇವು ಮನೆ ಮಾಡಿಕಂಡಿರೊ ಇನ್ನೂ ಬೇರೆ ಪ್ರದೇಸಗಳ್‌ಲಿ ಸಂಪರ್ಕದ ವೆವಸ್ತೆನ ಕೊರತೆ ಸುಮಾರುಟ್ಟು ಉಟ್ಟು.

'ಮಲೆಕುಡಿಯ' ಸಬ್ದದ ಅರ್ತದ ಬಗ್ಗೆ ಹಲವ್ ವಿದ್ವಾಂಸರ್ ತಮ್ಮದೇ ಆದ ವಿವರಣೆನ ಕೊಟ್ಟೊಳೊ. ಬವ್‌ತೇಕ ಎಲ್ಲಾ ವಿದ್ವಾಂಸರ್ 'ಮಲೆ' ತೇಳಿರೆ ಕಾಡ್ ಇಲ್ಲೆ ಅರಣ್ಯ, ಕುಡಿಯ' ತೇಳಿರೆ ಒಕ್ಕಲ್ ತೇಳ್‌ವ ಅರ್ತನ ಕೊಟ್ಟಿರ್‌ದು ಕಂಡ್ ಬಂದದೆ. ಮಲೆ ಕುಡಿಯತೇಳಿದ್ ಜೆನಾಂಗ ಸೂಚಕ ಪದ, ಈ ಜೆನಾಂಗ ವಾಸ ಮಾಡ್‌ವ ಪ್ರದೇಸ, ಅವರ ಬೊದ್‌ಕ್‌ನ ಕ್ರಮ ಮತ್ತೆ ಆಹಾರ ಪೊದ್ದತಿಗಳನ ನೋಡಿರೆ, 'ಮಲೆಕುಡಿಯ' ಜಾತಿಸೂಚಕ ಪದ ಪ್ರಾದೇಸಿಕ ಸಮ್ಮಂದ ಪಡ್‌ಕಂಡಿರುದು ತಿಳ್‌ದ್ ಬಂದದೆ.

ಸರಿಸುಮಾರ್ ಕಳ್‌ದ ಒಂದ್ ಸತಮಾನಂದ ಸುರಾದ ಅರಣ್ಯನಾಸ ಮಲೆಕುಡಿಯರ ಬೊದ್‌ಕ್‌ಲಿ ಬಾರಿ ಬದಲಾವಣೆಗಳ ತಂದುಟು. ಕಾಡ್‌ನ ನಾಸಂದ ಕಾಡ್ ಉತ್ಪತ್ತಿನನೆ ತಮ್ಮ ಬೊದ್ಕ್‌ಗೆ ಆದಾರ ಆಗಿಸಿಕಂಡ್ ಬೆಟ್ಟ, ಕಾಡ್, ಮೇಡ್‌ಗಳ್‌ಲಿ ಅಲೆತಿದ್ದವರ ಬೊದ್ಕ್‌ಗೆ ಮೊಚ್ಚೆ ಪೆಟ್ಟ್ ಬಿದ್ದ್ ಬೊದ್ಕ್ ನಡ್ಸಿಕೆ ನೆರೆಕರೆನ ಗ್ರಾಮದ ಕಡೆಗೆ ಈ ಜೆನಗ ಬಾದು ಅನಿವಾರ್ಯ ಆತ್. ಒಟ್ಟಿಗೆ ಯಾಗನು ಹೊರಜಗತ್ತ್‌ನ ನೇರ ಸಂಪರ್ಕ ಇಲ್ಲದಿದ್ದ ಮಲೆಕುಡಿಯರ ವಾಸ ಜಾಗೆಂದ ಕಾಡ್ ಉತ್ಪತ್ತಿಗಳ ಹೊತ್ತ್ ಸಾಗ್‌ಸಿಕೆ ಮಾರ್ಗ ಆಗಿ ಪೇಟೆನ ಹತ್ತ್ ಹಲೊವ್ ವಸ್ತುಗ ಕುಡಿಯರ ಬೊದ್‌ಕ್‌ಲಿ ಸೇರಿಕಂಡತ್.

**ಮಲೆಕುಡಿಯರ ಕುಟುಂಬ ಬೊದ್‌ಕ್ :** ಮಲೆಕುಡಿಯರ ಕುಟುಂಬ ವೆವಸ್ತೆಲಿ ವಂಸ, ಆಸ್ತಿಪಾಸ್ತಿ ಬಗ್ಗೆ ಹಕ್ಕ್‌ದಾರಿಕೆ ಮತ್ತೆ ಉತ್ತರಾದಿಕಾರಿಗ ಹೆಚ್ಚಿಗೆ ಹೆಣ್ಣ್ ಪ್ರದಾನತೆನೆ ಅನುಸರ್‌ಸಿದ್ ಕಂಡ್ ಬಂದದೆ. ಮಕ್ಕ ಅವ್ವನ ವಂಸಕ್ಕೆ ಸೇರ್‌ವೆ. ಇಲ್ಲಿ ಗಂಡ್ ಮಕ್ಕಳ್‌ಗೆ ಆಸ್ತಿನ ಬಡತನ ಕಂಡ್ ಬಾದ್‌ಲೆ. ಅನುವಂಸೀಯ ಸ್ತಾನಮಾನಗ ಅವ್ವಂದ ಮಗಳ್‌ಗೆ ಸಿಕ್ಕಿದೆ. ಆದ್‌ರೆ ದಾರ್ಮಿಕ, ರಾಜಕೀಯ ಕ್ಸೇತ್ರಲಿ ಹೆಣ್ಣ್ ಮುಕ್ಯ ಆಗಿರ್‌ದುಲೆ. ನಾಲ್ಮಲೆ (ಬಾಂಜಾರುಮಲೆ, ಅಂಬಟೆಮಲೆ, ಬಾರಿಮಲೆ, ಎಲಿಮಲೆ (ಶೋಲೋಡಿ)] ಯವರ್‌ಲಿ ಮಕ್ಕಳ ಕಟ್ಟ್ ಹೆಚ್ಚಿ ಇದ್ದ್, ಬೇರೆಯವರ್‌ಲಿನು ಈಗ ಅದ್ ಇರ್‌ದು ಕಂಡದೆ. ನಾಕನೆವರ್‌ಲಿ ಮಕ್ಕಳಕಟ್ಟ್ ಪ್ರಚಲಿತ ಆಕೆ ಉರೊಳೊಗೆನ ಜಮೀನ್‌ದಾರನ ಹಕ್ಕ್‌ಗೆ ಪಾಳೆಗಾರಿಕೆ ಕಾರಣ ಆಗಿದ್ದರೆ, ಬೇರೆಯವ್‌ಕೆ ಸುತ್ತದ ಪ್ರಬಾವ ಇರ್‌ವ ಸಂಸ್ಕೃತಿಕಾರಣಾಗಿ ಕಂಡ್‌ಬಂದದೆ. ಇದರೊಟ್ಟಿಗೆ ಸರಕಾರಿ ಬೂಮಿ ಹಂಚಿ ಹೋದುನು ಕಾರಣ ಆಗುಟು.ವಾಸ್ತವಲಿ ಅಪ್ಪ –ಅವ್ವ ಅವರ ಗಂಡ್ ಸಂತತಿನ ಮೇಲೆ ಹೆಚ್ಚಿಗೆ ಪ್ರೀತಿ ಇಸಿಕಂಡಿದ್ದವೆ. ತಮ್ಮ ಸ್ವಯಾರ್ಜಿತ ಆಸ್ತಿನ ಅವು ಸತ್ತ ಮೇಲೆ ಅವರ ಗಂಡ್‌ಮಕ್ಕಳಿಗೆ ಕೊಡ್‌ವ ಪೊದ್ದತಿ ಸಾಮಾನ್ಯಾಗಿ ಕಂಡ್ ಬಂದದೆ.

**ಮಲೆಕುಡಿಯರ ಮೊದ್‌ವೆ :** ಪ್ರತಿಯೊಂದ್ ಸಮಾಜಲಿ ಇರುವಂಗೆನೆ ಕುಡಿಯರ್‌ಲಿನು ಸ ಮೊದ್‌ವೆ ಕುಟುಂಬಕೆ ಬಾರಿ ಮುಕ್ಯ ಆದ್ದ್. ವಂಸೋದ್ದಾರಕೆ ಮತೆ ಗಂಡ್ ಹೆಣ್ಣ್‌ನ ಲೈಂಗಿಕ ಪೂರೈಕೆಗೆ ಮಾಡಿಕಂಡ ಕ್ರಮ ಬದ್ದ ಆದ ವೆವಸ್ತೆ. ಮೊದ್‌ವೆ ಇಂದ್‌ಗೂ ಒಂದ್ ಸಂಸ್ಕಾರ ವಿದಿತೇಳ್‌ವ ನಂಬಿಕೆ ಕುಡಿಯರ್‌ಲಿ ಉಟ್ಟು. ಅವರವರ ಬಾಳಸಂಗಾತಿನ ಹುಡ್‌ಕಿಕಂಬ ಸೊತಂತ್ರ ಅವ್‌ಕವ್‌ಕೆ ಕೊಟ್ಟೊಳೊ. ಕುಡಿಯರ್ ಮೊದ್‌ವೆಗೆ ಮುಂದೆ ತಮ್ಮದೆ ಆದ ನಿಯಮಗಳ ಪಾಲ್‌ಸುವೆ. ಕುಡಿಯರ್‌ಲಿ ರಕ್ತ ಸಮ್ಮಂದದ ಒಳೆಗೆ ಲೈಂಗಿಕ ಸಮ್ಮಂದ ಇರಿಕಿಲ್ಲೆ. ಉದಾರ್‌ಣೆಗೆ : ಅವ್ವ – ಮಙ್ಞನ ಸಮ್ಮಂದ, ಅಪ್ಪ – ಮಗಳ್‌ನ ಸಮ್ಮಂದ, ಅಣ್ಣ – ತಂಗೆನೊಟ್ಟಿಗೆನ ಸಮ್ಮಂದ ಇಂತದೆಲ್ಲ, ಆದ್‌ರೆ ಏಡ್ಗರ್ ತರ್‍ಸ್ಟನ್ (Edgar Thurston) ಹೇಳ್‌ದ ಹಂಗೆ (1909) ಅಪ್ಪ ಸತ್ತ ಮೇಲೆ ಸೊಂತ ತನ್ನ ಅವ್ವನ ಮಙ್ಞ ಮೊದ್‌ವೆ ಆವ ಪೊದ್ದತಿ (ತನ್ನ ಮಲತಾಯಿಯನ್ನೋ ಅಥವಾ ತಾಯಿಯನ್ನೋ ಎಂಬ ಬಗ್ಗೆ ಸ್ಪಸ್ಟತೆ ಇಲ್ಲ) ಪ್ರಸ್ತುತ ಎಲ್ಲೂ ಇಲ್ಲೆ. ಒಂದೇ ಗೋತ್ರದ (ಅಟಚಿಟಿ) ಜೆನ ಒಂದೇ ರಕ್ತನ ಹಂಚಿಕಂಡಿರುವೊಂತೇಳ್‌ವ ನಂಬಿಕೆ ಗಟ್ಟಿ ಇರ್‌ದರ್‌ಂದ ಗೋತ್ರದ ಒಳೆಗೆ ಮೊದ್‌ವೆಯಾದಕೆ ನಿಸೇದ ಉಟ್ಟು. ಆದರೆ ಎಲಿಮಲೆ (ಕೋಲೋಡಿ) ಮಲೆಕುಡಿಯರ್‌ಲಿ ಗೋತ್ರದ ಬಳಕೆನೇ ಕಂಡ್‌ಬಾದುಲೆ. ಇದ್‌ಕೆಲ್ಲ ಹಿಂದೆ ಊರೊಳೆಗೆನ ಬೂಮಾಲೀಕರ್‌ಂದ ನಡ್‌ದ ದಬ್ಬಾಳಿಕೆಗಳೇ ಮೂಲ ಕಾರಣ. ಇಲ್ಲಿನ ಕುಡಿಯರ್ ಈಗನವರೆಗೂ ತಮ್ಮ ವಾಸದ ಜಾಗೆ ಬುಟ್ಟ್ ಹೊರೆಗೆ ಹೋವ ಹಾಂಗಿಲ್ಲೆ. ಅವ್‌ಕೆ ಬೇಕಾದ ವರ್‌ಸಕೆ ನಾಕ್ ತುಂಡು ಬಟ್ಟೆ, ಉಪ್ಪು, ಮೆಣ್‌ಸ್ ಬೇರೆ ಬೇಕಾದ ಸಾಮಾನ್‌ಗಳ ಜಮೀನ್ದಾರನೇ ಅಂವನ ಅನ್‌ಕೂಲಕೆ ತಕ್ಕಂಗೆ ಕೊಡತಿದ್ದೊ.


ಮಲೆಕುಡಿಯರ್

ಹಿಂಗೆ ಕುಡಿಯರ್‌ಗೆ ದುಡ್ಡುನ ಉಪಯೋಗ ತಿಳಿಯದಂಗೆ ನೋಡಿಕಂಬದರೊಟಿಗೆ ಹೊರೆಗೆನ ಪ್ರಪಂಚಂದ ದೂರ ಇಸಿದ ದನಿಗ ನಾಲ್ಮಲೆ ಕುಡಿಯರ್ ಹೊರಗೆನವರ್‌ಲಿ ಮೊದ್‌ವೆ ಸಮ್ಮಂದ ಆಗದ ಹಂಗೆ ನೋಡಿಕೊಂಡೊಳೊ. ಹಿಂಗೆ ದಣಿಗಳ ಒತ್ತಾಯಕೆ ಒಪ್ಪಿದ ಕುಡಿಯರ್ ಅವರವರೊಳೆಗೆ ಹಕ್ಕಲೆನ ರಕ್ತ ಸಮ್ಮಂದದವರ ಬುಟ್ಟ್ ಮೊದ್‌ವೆ ಆದೊ. ಇದರೊಟ್ಟಿಗೆ ದನಿಗ ಇದ್ದ ಪಿತೃ ಪ್ರದಾನ ವೆವಸ್ತೆನ ಕುಡಿಯರ್ ಅನುಸರ್‌ಸಿದೊ. ಹಿಂಗೆ ಮೊದ್‌ವೆನ ಸಮ್ಮಂದಗಳ್‌ಲಿ ಸ್ತಳೀಯ ಆಗಿ ವೆವರ್‌ಸಿದ ಮತ್ತೆ ಹೊರ ಜಗತ್ತ್‌ನ ಸಂಪರ್ಕ ಇಲ್ಲದೆ ಹಿಂದೆ ಒಳ್ದ ನಾಲ್ಮಲೆ ಮಲೆಕುಡಿಯರ ಬೇರೆ ಮಲೆಕುಡಿಯರ್ ತಮ್ಮಂದ ಕೆಳಗಿನವುತ ತಿಳ್‌ಕಂಡದರ್‌ಲಿ ಆಸ್ಚರ್‌ಯ ಇಲ್ಲೆ.

**ಮಲೆಕುಡಿಯರ ಬಂದುತ್ವ (Kinship) :** ಬಂದುತ್ವ ಒಂದ್ ಸಾಮಾಜಿಕ ಸತ್ಯ. (Social fact) ಇದ್ ಎಲ್ಲಾ ಸಮಾಜಗಳ್‌ಲಿ, ಜಾತಿಲಿ ಕಂಡ್‌ಬಂದದೆ. ರಿವರ್ ಅವರ ಪ್ರಕಾರ ಬಂದುತ್ವ ಸಮಾಜಲಿ ಒಪ್ಪಿದ ಸರ್ಣದ ಸಮ್ಮಂದಗ, ವಂಸ ಬೆಳ್‌ಸುವ ದಾರಿಲಿ ಒಂದ್ ಗಂಡ್ ಮತ್ತೆ ಹೆಣ್ಣ್‌ನ ಕೂಡ್‌ವಿಕೆ ಅನಿವಾರ್‌ಯ ಆಗುಟು.. ಮಲೆಕುಡಿಯರ್‌ಲಿ ಗಂಡ – ಹೆಣ್ಣ್ ನ ಬುಟ್ಟ್ ಒಂದ್ ಮೂಲ ಕುಟುಂಬಲಿ (ನ್ಯೂಕ್ಲಿಯರ್ ಫ್ಯಾಮಿಲಿ) ಸಾರೀರಿಕ ಸಮ್ಮಂದಗ ನಿಸೇದ ಆಗಿದ್ದ್ ಒಬ್ಬ ಮೊಯಿಂಸ ತನ್ನ ಬಾಳಸಂಗಾತಿನ ತನ್ನ ಕುಟುಂಬಂದ ಹೊರೆಗೆ ಹುಡ್‌ಕೆಣಕು. ಹಿಂಗೆ ಸಂತಾನ ಬೆಳ್‌ಸುದು ರಕ್ತ ಸಮ್ಮಂದ ಮತ್ತೆ ಮೊದ್‌ವೆನ ಸಮ್ಮಂದ ತೇಳ್‌ವ ಎರ್‌ಡ್ ಬಗೆನ ಬಂದುತ್ವಕೆ ಎಡೆ ಮಾಡಿಕೊಟ್ಟದೆ. ಇದರಾಂಗೆ ಕುಡಿಯರ್‌ಲಿ ಪ್ರತಿಯೊಬ್ಬ ಮೊಯಿಂಸನೂ ಪ್ರತಿಯೊಬ್ಬಂಗೂ ದೂರದ ಇಲ್ಲೆ ಹಕ್ಕಲೆನ ಬಂದುಗ ಅಲ್ಲೊ ನೆಂಟ್ರ್ ಆಗಿದ್ದವೆ. ಹಿಂಗೆ ಕುಡಿಯರ ಸಂಸಾರದ ಜೀವನ ಬಂದುತ್ವದ ಆದಾರದ ಮೇಲೆ ಬೆಳ್ಕಂಡದೆ. ಈ ನಮೂನೆನ ಬೊದ್‌ಕ್ ಮೂಲತ ಪ್ರಾಣಿಗಳ ಬೇಟೆ, ಕಾಡ್ ಉತ್ಪತ್ತಿನ ಸೇಕರಣೆ, ಕುಮೇರಿ, ಕ್ರಿಸಿ ಇದರೊಟ್ಟಿಗೆ ಸಮ್ಮಂದ ಇಸಿಕಂಡುಟು.. ಅಲೆದಾಟದ ಬೊದ್‌ಕ್‌ನ ನಡ್‌ಸತಿದ್ದ ಹೊತ್ತುಲಿ ಅವರವರ ರಕ್ಸಣೆಗೆ ಇದೆಲ್ಲ ಅನಿವಾರ್‌ಯ ಆಗಿತ್ತ್. ಆದ್‌ರೆ ಈ ಬೊದ್‌ಕ್ ಇಂದ್ ಕುಡಿಯರ್‌ಲಿ ಕಾಣೆ ಆಗುಟು. ಇಂದ್ ಬೇರೆ ಬೇರೆ ಕೆಲ್‌ಸಲಿರ್‌ವ ಕುಡಿಯರ್ ಆಸ್ಪತ್ರೆ, ಪೋಲೀಸ್, ನ್ಯಾಯಾಲಯ, ವಿಮಾ ಕಂಪೆನಿತ ಬೇರೆ ಸಂಗ ಸಂಸ್ತೆಗಳ್‌ಂದ ಉಪಕಾರನ ಪಡೆತ ಒಳೊ. ಹಿಂಗೆ ಬಂದುತ್ವ ಸಮಾಜ ಕುಂಟುದರ ಕಾಣಕ್.

**ಮಲೆಕುಡಿಯರ ಹೆಣ್ಣ್‌ನ ಸ್ತಾನಮಾನ :** ಹೆಣ್ಣ್ ನ ಸ್ತಾನಮಾನ ಈ ಕೆಳಗೆನ ಅಂಸಗಳ ಗಮನಲಿ ಇಸಿಕಂಡ್ ಅಳೆಕ್.ಗಂಡ್ಗ ಹೆಣ್ಣ್‌ಮಕ್ಕಳ ನೋಡಿಕಂಬ ರೀತಿ, ಸಾಮಾಜಿಕ ಕಾರ್‌ಯಕ್ರಮಗಳ್‌ಲಿ ಕೂಡಿಕಂಬೊದು ಹೆಣ್ಣ್‌ಗೆ ಇರ್‌ವ ಅವಕಾಸಗ ದರ್‌ಮಸಾಸ್ತ್ರಗಳ್‌ಲಿ ಮತ್ತೆ ಸಾಂಪ್ರದಾಯಿಕ ಪೊದ್ದತಿ ಹಂಗೆ ನಿಯಮಗಳ್‌ಲಿ ಹೆಣ್ಣ್ ನ ಸ್ತಾನಮಾನ, ಹೆಣ್ಣ್ ಮಾಡ್‌ವ ಕಾರ್‌ಯಗ ಮತ್ತೆ ಅದರ ಸೊಬಾವ ಮಲೆಕುಡಿಯರ್‌ಲಿ ಹೆಣ್ಣ್ ನ ಸ್ತಾನಮಾನದ ಬಗ್ಗೆ ಕೆಳಗೆನ ಅಬಿಪ್ರಾಯಗ ಕಂಡ್‌ಬಂದದೆ. ಕೌಟುಂಬಿಕ ಮತ್ತೆ ಸಾಮಾಜಿಕ ವೆವಹಾರಲಿ ಮಲೆಕುಡಿಯ ಹೆಂಗ್‌ಸ್ ಎರ್‌ಡ್‌ನೆ ದರ್ಜೆಲಿ, ಮೊನ್‌ಸನೊಟಿಗೆ ಮತ್ತೆ ಸಂಸಾರಲಿ ಗಂಡ್ ಮತ್ತೆ ಹೆಣ್ಣ್ ಪರಸ್ಪರ ಸಮಾನ ತೇಳ್‌ದು ಮೊದ್‌ವೆ ಹೊತ್ತುಲಿ ಮೊದುಮಜ್ಜಂಗೆ ಮತ್ತೆ ಮೊದೊಳಿಗೆ ಕೊಡ್‌ವ ಹಿತೋಪದೇಸಲಿ ಗೊತ್ತಾದೆ.. ಆದ್‌ರೆ ಇಂದ್ ಬವ್‌ತೇಕ ಮಲೆಕುಡಿಯರ್‌ಲಿ ಹೆಣ್ಣ್‌ಗೆ ಸಮಾನ ಸ್ತಾನಮಾನ ಸಿಕ್ಕದಿರ್‌ದರ ಕಾಣಕ್. ಕುಡಿಯರ್ ಅಲೆಮಾರಿ ಬೊದ್‌ಕ್‌ನ ನಡ್‌ಸ್‌ತಿದ್ದ ಕಾಲಲಿ ಸೂತಕದ ಹೊತ್ತುಗೆ ಹೆಣ್ಣ್ ನ ಮನೆಂದ ದೂರ ಇಸ್‌ವ ಪೊದ್ದತಿನ ಮಾಡ್‌ದುಲೆ.ಏಕೆತೇಳಿರೆ ಕುಡಿಯರ್‌ಗೆ ಆಗ ಒಂದ್ ವಾಸ ಮಾಡಿಕೆ ಬೇಕಾದ ಜಾಗೆನ ಕೊರತೆ ಇತ್ತ್. ಮಳೆಂದ ರಕ್ಸಣೆ ಪಡೆಕೆ ಮತ್ತೆ ತಾವು ಬಿತ್ತಿದ ಬೆಳೆನ (ಕುಮೇರಿ) ಕಾಪಾಡಿಕಂಬಕೆ ಒಂದ್ ಸರಿಗಟ್ಟಾದ ಹೊತ್ತುಗೆ ಮಾತ್ರ ಕಲ್ಲ್ ಬಂಡೆಳ ಇಲ್ಲೆ ತಾತ್ಕಾಲಿಕ ಆಗಿ ಕಟ್ಟಿದ ಬಿಡಾರಗ ಬೇಕಿತ್ತ್. ಮಳೆ ದೂರಾದ ಕೂಡ್‌ಲೆ ಬೇಟೆನ, ಗೆಡ್ಡೆ ಗೆಣ್‌ಸ್‌ಗಳ ಹುಡ್‌ಕಿಕಂಡ್ ಅಲೆಮಾರಿ ಬೊದ್‌ಕ್‌ನ ನಡ್‌ಸ್‌ತಿದ್ದ ಕುಡಿಯರ್ ನೆಲೆ ನಿತ್ತ ನಾಗರಿಕರ ಸಂಪರ್‌ಕಕೆ ಬಾತೆಲೆ. ಹಿಂಗೆ ಒಂದ್ ನಿರ್‌ದಿಸ್ಟ ಸಂಸ್ಕೃತಿನ ಆಕರ್‌ಸಣೆಗೆ ಒಳಗಾದ ಕುಡಿಯರ್ ತಮ್ಮತನನ ಒಳ್‌ಸಿಕಂಡ್ ಬಂದೊ.ಒಟ್ಟಿಗೆ ಅಯ್ಯೆ ಪ್ರದಾನ ಆಗಿತ್‌ವ ಕುಟುಂಬನ ಪಡ್‌ಕಂಡಿದ್ದ ಕುಡಿಯರ್‌ಗೆ ಬೊದ್‌ಕಿಕೆ ಹೆಣ್ಣ್ – ಗಂಡ್‌ಗಳ ಸಹಕಾರ ಅನಿವಾರ್‌ಯ ಆಗಿತ್ತ್. ಕಾಲ ಕ್ರಮೇಣ ಅವು ಬೆಳ್‌ದ ಬೆಳೆ – ಬಿತ್ತ್‌ನ ಹೋದಲೆಲ್ಲಾ ಹೊತ್ತ್ ಕಂಡ್ ಹೋದು ಬಂಗ ಆದೆತ ಗೊತ್ತಾಕನ ಬಿಡಾರಗಳ ಕಟ್ಟಿ, ನೆರೆಕರೆ ಕಾಡ್ ಮೇಡ್‌ಲಿ ಅಲಿಯಕೆ ಸುರು ಮಾಡಿಕಂಡ ಕುಡಿಯರ್ ಕ್ರಮೇಣ ಒಂದ್ ಕಡೆ ನೆಲೆನಿತ್ತೊ. ನರಿಯದ ಪರ್ಜಳಲಿ ವಾಸ ಆಗಿರ್‌ವ ಸುಮಾರ್ 100 – 110 ವರ್‌ಸ ಪ್ರಾಯದ ಐತಪ್ಪ ಮಲೆಕುಡಿಯರ ಹೇಳಿಕೆಗಳ ಇಲ್ಲಿ ಉಪಯೋಗಿಸಿಕಂಡೊಳೊ. ಹಿಂಗೆ ನೆರೆಕರೆ ನಾಗರಿಕ ಜಗತ್ತ್ ನ ಸಂಪರ್‌ಕಕೆ ಒಳಗಾದ ಕುಡಿಯರ್ ಬೊದ್‌ಕ್‌ನ ಪರ ಮತ್ತೆ ಲೌಕಿಕ ಪರ ಸಂಸ್ಕೃತಿನ ರೂಡ್‌ಸಿಕಂಡೊ. ಒಟ್ಟಿಗೆ ಕೆಲೊವು ಕಡೆ ಬೇರೆ ಸಂಸ್ಕೃತಿನ ಗೊತ್ತಿದ್ದೂ ಅನುಕರಣೆ ಮಾಡದೇ ಇದ್ದ್ ಮೋಸ ಹೋಗಿರ್‌ದರ ಕಾಣಕ್. ಹಿಂಗೆ ನೈತಿಕ ಗೊತ್ತುಗಳಿಗು, ವಾಸ್ತವ ಪರಿಸ್ತಿತಿಗೂ ಬಾರೀ ಅಂತರ ಇರ್‌ವ ಆದುನಿಕ ಜಗತ್ತ್ ನ' ಹೆಣ್ಣ್ ನ ಸೋಸಣೆಂತ ಕಟು ಸತ್ಯ ಮಲೆಕುಡಿಯರ ಬೊದ್‌ಕ್‌ಗೆ ಪ್ರವೇಸ ಮಾಡ್‌ತ್. ಇಂದ್‌ಗೂ ಬೆಳ್ತಂಗಡಿನ ಬಾಂಜಾರು ಮಲೆ, ಅಂಬಟೆಮಲೆ, ಕೋಲೋಡಿ (ಎಲಿಮಲೆ) ಇಲ್ಲಿ ಹೆಣ್ಣ್ ಮತ್ತೆ ಗಂಡ್ ಜೆನ ಅನ್ಯೋನ್ಯ ಆಗಿ ಮನೆ ಕೆಲ್‌ಸಂದ ಹಿಡ್‌ದ್ ಎಲ್ಲಾ ದಿನದ ಕಾರ್‌ಯಗಳ್‌ಲಿ ತೊಡಗಿರ್‌ದರ ಕಾಣಕ್. ಆದರೆ ಇಂತ ಅನ್ಯೋನ್ಯತೆ ನಾಗರಿಕ ಜಗತ್ತ್ ನ ನೇರ ಸಂಪರ್‌ಕನ ಇಸಿಕಂಬೊದು ಸುಮಾರ್ ಮಲೆಕುಡಿಯರ್‌ಲಿ ಕಾಣದಂಗೆನೆ ಆವುಟು.

**ನಂಬಿಕೆಗ :** ಮಲೆಕುಡಿಯರ ರೀತಿನೀತಿಗಳ್‌ಲಿ ಸಾಮಾಜಿಕ ಪೊದ್ದತಿ, ನಂಬಿಕೆಗಳ್‌ಲಿ ಹಂಗೆ ಅವರ ಬೇರೆ ಬೇರೆ ಸಾಮಾಜಿಕ ಆಚರಣೆಲಿ ಪ್ರಕಟ ಆವ ವೈಚಾರಿಕ ಆಕೃತಿ ವಾಸ್ತವಿಕ ಆಗುಟು, ಈ ನೆಲಕೆ ಹಕ್ಕಲೆ ಆಗುಟು, ಸಾಮಾಜಿಕ ಆಚರಣೆಗಳ್‌ಲಿ ತಮ್ಮ ಜೆನರ ಒಟ್ಟ್ ಸೇರ್‌ಸುದರ ಒಟ್ಟಿಗೆ ತಮ್ಮ ನಂಬಿಕೆಗಳ ಮುಂದೆನ ಪೀಳಿಗೆಗೆ ವೆವಸ್ತೆನ ರೂಪಲಿ ಉಪಕಾರಾಗುಟು. ಸತ್ತ ಮೇಲೆನೂ ಇರ್‌ವ ಬೊದ್‌ಕ್‌ನ ಬಗ್ಗೆ ಕುಡಿಯರ್‌ಲಿ ನಂಬಿಕೆ ಉಟ್ಟು. ಸತ್ತಂವನ ಆತ್ಮ (ಶುಲೆ) ಜೀವಿತ ಕಾಲಲಿ ಬಂದು ಬಳಗದವರೊಟ್ಟಿಗೆ ಬೊದ್‌ಕಿದಂಗೆ, ಸತ್ತ ಮೇಲೆನೂ ಬೊದ್‌ಕುವೆತ ಅವರ ಬಾವನೆ. ಹಿರಿಯರ್ ಸತ್ತ ಮೇಲೆ ಆತ್ಮ ಅವರ ರಕ್ಸಿಸಿಕಂಬದರ ಒಟ್ಟಿಗೆ ತಮ್ಮ ಬೊದ್‌ಕ್‌ನ ಉದ್ದಕೆ ಸರಿಯಾದ ದಾರಿಲಿ ಮುನ್ನಡಿದುತ ಅವು ನಂಬಿಯೊಳ. ವಿಸೇಸ ದಿನಗಳ್‌ಲಿ, ಪೂಜೆ, ಪುನಸ್ಕಾರ ಕೊಡ್‌ದರೊಟ್ಟಿಗೆ ಕುಟುಂಬದ ನೀತಿ ನಿಯಮಗಳಿಗೆ ತಕ್ಕಂಗೆ ನಡೆದು ಸತ್ತವರ ಆತ್ಮಕೆ ಕುಸಿ ಕೊಡಿಕೆ ನೋಡ್‌ವೆ. ಇದ್‌ಕೆ ತಪ್ಪಿರೆ ಸತ್ತವರ ಆತ್ಮ ಸಿಟ್ಟ್ ಮಾಡಿಕಂಡ್ ಬೆಳೆ ಹಾನಿ, ದನಕರ್‌ಳಿಗೆ ಹಾನಿ ಮತ್ತೆ ಪ್ರಾಣಹಾನಿಯಂತ ಬೀಕರ ನಸ್ಟನ ತಂದೊಡ್ಡಿದೆತ ಹೇಳುವ ನಂಬಿಕೆನು ಉಟ್ಟು. ಹಂಗೆನೆ ಬೂತಾರಾದನೆನೂ ಮಾಡುದರೊಟ್ಟಿಗೆನೆ ಹೆಚ್ಚಿನ ಎಲ್ಲಾ ಹಿಂದೂ ಹಬ್ಬಗಳ್‌ನೂ ಆಚರ್‌ಸುವೆ. (ಎಸ್.ಪಿ.)

**ಮಾಂತ್ರಿಕ ವೈದ್ಯ : ಮಾಟ–ಮಂತ್ರ–ತಂತ್ರ :** ಅಗ್ಗಿ ಕಟ್ಟುದು, ಉರ್‌ಕು ಕಟ್ಟುದು, ಕೊದಿ ತೆಗೆವ ಮಂತ್ರ, ಕೈ ಮೊದ್ದ್ ಹಾಕುದು, ದ್ರಿಸ್ಟಿಗೆ ಮಂತ್ರ, ಬಿಸುರ್‌ಪು ಬುಡ್ಸುವ ಮಂತ್ರ, ಮಾಟ ಮಂತ್ರಗ, ವಿಸ ಬುಡ್ಸುವ ಮಂತ್ರ, ಸೋಂಕ್‌ಗೆ ಮಂತ್ರ

**ಅಗ್ಗಿ ಕಟ್ಟುದು :** ಮೈಕೈಗೆ ಕಿಚ್ಚಿ ಬಿದ್ದರೆ ಆಗಂದಾಗ ಪೊಂಗರೆ ಸೊಪ್ಪುಲಿ ಗಾಳಿ ಬೀಸಿ ಕಿಚ್ಚಿ ಕಟ್ಟುವೆ. ಬಿಳ್ಗಿಲ್ ಎಸಳ್‌ನ ತಂದ್ ಅದರ್‌ಲಿ ಮೂರು ಕಟ್ಟ ಹಾಕಿಕನ ಈ ಮಂತ್ರ ಹೇಳ್‌ವೆ.

ಕಲ್ಲನೇ ಬೀರಿ ಸೋಂಡು
ಮುಳ್ಳನೇ ಬೀರಿ ಪೋಂಡು
ಹಾದೀನೇ ಬೀರಿ ಹೋಂಡು
ಬೀದಿನೇ ಬೀರಿ ಮೊಂಡು
ನೀಲ ದೇವರ ಜಾಲಂತಡಿ ಬೀರಿ ಸೋಂದು
ಕುರುಹು ಕುಪ್ಪುಳು ಸಿರಿಸೊನ್ನೆತ ಮರಟ್ಸ್
ಕಾರಿನೇ ಕಟ್ಟ್‌ಂಡೇ ಕೆತ್ತಿನೇ ಬುಡ್‌ಂಡ್
ಕಿನ್ನಿನೇ ಒಡತ್ತಂಡೇ
ಉರಿ ಪಿದಾಯಿಯಾಲ ತಂಪು ಉಳಾಯಿಯಾಲ (3 ಸಲ)

ತೇಳಿ ಆಣೆ ಕಟ್ಟುವೆ. ಕಡೆಗೆ ಬಿಳ್‌ಗಿಲ್‌ನ ಕಿಚ್ಚಿ ಬಿದ್ದಲ್ಲಿಗೆ ಸುತ್ತಿ ಅದರ ಮೇಲೆ ಪಾಮಜಿನ ಮೆತ್ತುವೆ. ಉರಿ ಕಡ್‌ಮೆ ಆಗಿ ಬೇನೆ ಕಮ್ಮಿ ಆದೆಂತ ಹೇಳ್‌ವೆ.

**ಉರ್‌ಕು ಕಟ್ಟುದು :** ಗಟ್ಟಿಮುಟ್ಟಾಗಿ ಸರ್ಸ(ಪುಡ್ಕನೆ) ಇರ್‌ವವರ ಕಂಡರೆ ಇಲ್ಲರ್ ಬೇರೆ ವಿಸಯಕ್ಕೆ, ಯಾವುದೋ ಕಾರಣಕ್ಕೆ ಪ್ರಕ್ಯಾತರಾಗಿದ್ದರೆ, ಅಂತವ್ಕೆ ಯಾರಾರ್ ಏನಾರ್ ಬಾಯಿತೆಗ್ದ್ ಹೇಳಿ ಬುಟ್ಟವೆ. ಕೆಟ್ಟ ಗಳ್‌ಗೆಲಿ ಹಿಂಗೆ ಹೇಳಿರೆ ಅದ್ ಆ ಮೊಯಿಂಸಂಗೆ ಹಾಳ್ ತ ಜೆನಗ ನಂಬುವೆ. ಹಿಂಗೆ ಆದಕ್ಕೆ ಅರೆಬಾಸೆಲಿ 'ಕಣ್ಣ್ ಮುಟ್ಟುದು'ತ ಹೇಳ್‌ವೆ. ಇದರನೆ ಕೇಡ್ ಕಣ್ಣ್ ತನು ಹೇಳ್‌ವೆ (ಶಂಕರನಾರಾಯಣ 192 : 161). ಹಿಂಗೆ ಆದ ಮೊಯಿಂಸಂಗೆ ನಿದಾನ ಆಗಿ ಜೀವನ ಉತ್ಸಾಹ ಕಮ್ಮಿ ಆಗಿ ತಣ್ಣಂಗಾದೆತ ನಂಬುವೆ. ಎಳೆ ಪ್ರಾಯಲಿ ಪ್ರಾಯ ಆದವರಂಗೆ ವರ್‌ತುಸುವೆ. ಮೂಲತಃ ಇದ್ ಮಾನಸಿಕ ರೋಗನೆ ಆಗುಟು. ಇದ್‌ಕೆ ಪರಿಹಾರ ಆಗಿ ಮಂತರ್‌ಸಿದ ಉರ್‌ಕು ತಂದ್ ಸೋಂಕಿದವಂಗೆ ಕಟ್ಟ್‌ವೆ. ಉರ್‌ಕುಲಿ ಬೇರೆ ಬೇರೆ ಚಿತ್ರಗ, ಲೆಕ್ಕಗ ಇದ್ದ್ ಅದ್ ಕೆಟ್ಟ ಕಣ್ಣ್‌ನ ದೋಸನ ಪರಿಹಾರ ಮಾಡ್‌ದೆಂತ ಅರೆಬಾಸಿಗರ್ ಹೇಳ್‌ವೆ. ಬೂತ, ಪ್ರೇತತೇಳ್‌ವ ದುಸ್ಟ ಸಕ್ತಿಗ ಈ ಉರ್‌ಕುನ ಬಲಂದ ಮೊಯಿಂಸನ ಸೋಂಕದೆ ದೂರಲಿದ್ದವೆ. ಇದರ್‌ಂದಾಗಿ ಲಾಯ್ಕ್‌ನ ಆರೋಗ್ಯಲಿ, ಮನ್ಸ್‌ಲಿ ಮೊಯಿಂಸ ಇದ್ದದೆಂತ ನಂಬಿಯೊಳೊ. ಹಿಂಗೆ ಉರ್‌ಕುನಂಗೆ ಇರ್‌ವ 'ತಡೆ' ನ ಮನೆಲಿರುವ ಕಂಬಕು ಕಟ್ಟಿದ್ದವೆ. ದುಸ್ಟ ಸಕ್ತಿಗಳ ಬಾದೆ ಮನೆ ಮಕ್ಕಳಿಗೆ ತಟ್ಟದಿರಲಿ ತೇಳ್ವಂತದ್ ಅವರ ಲೆಕ್ಕಚಾರ. ಈ ತರದ ಉರ್‌ಕುನ ಹೆಚ್ಚಿಗೆ ಮಲ್ಯಾಳದವ್ ಮಾಡಿ ಕೊಟ್ಟವೆ.

**ಕೈ ಮೊದ್ದ್ ಹಾಕುದು :** ಮೃಗಂಗಳ ಕೊಂದ್ ಅದರ ರಕ್ತಕೆ ಹಣ್ಣು ವಿಸ ಸೇರ್‌ಸಿ, ಅದ್‌ಕೆ ಕೆಲ ಸೊಪ್ಪು ಬೇರ್‌ಗಳ ಸೇರ್‌ಸಿ ವೈರಿಗಳಿಗೆ ಕೊಟ್ಟ್ ಅವರ ಕೊಲ್ಲುದಕೆ ಕೈಮೊದ್ದ್ ಹಾಕುದುಂತೇಳ್‌ವೆ.

ಇನ್ನೊಬ್ಬ ಮೇಲೆ ಏರ್‌ದರ ಕಾಂಬಕಾಗದೆ ಹೊಟ್ಟೆ ಕಿಚ್ಚಿಂದ ಅಂವನ ಹಾಳ್ ಮಾಡಿಕೆ ಇಂತ ಕೆಲ್ಸ ಮಾಡ್‌ವೆ. ಹಾಂಗೆ ಕೈಮೊದ್ದ್ ಮಾಡಿಕೆ ಗೊತ್ತಿರಂವ ಒಮ್ಮೆ ಆರ್ ಯಾರ ಮೇಲಾರ್ ಪ್ರಯೋಗ ಮಾಡಿರಕುಗಡ. ಇಲ್ಲರೆ ಅವಂಗೆ ಹುಗ್ಗ ಸೇರ್‌ದುಲೆತ ನಂಬುವೆ, ಬಟ್ಲ್‌ಲಿ ಗಂಜಿಗೈಪುನ ಬದಲ್ ಹೇಲ್ ಉಚ್ಚೆನಾಂಗೆ ಕಾಂಬೊದುಂತ ಜೆನಂಗ ನಂಬುವೆ.

ಇನ್ನ್ ಕೈ ಮೊದ್ದ್‌ಗೆ ಒಳಗೆ ಆದರ್‌ಲಿ ಕಾಂಬ ಲಕ್ಷಣಗ ಎಂತತೇಳಿರೆ, ನಿದ್ದೆ ಬಾರದಿರ್‌ದು, ಹೊಟ್ಟೆ ಸಂಕಟ, ಮಂಕ್ ಬೊಡ್ಡವರಂಗೆ ಕುದ್ದುರ್‌ದು, ದೊಡ್ಡ ಡಾಟ್ರ್‌ಗಳಿಗೂ ಕಾಯಿಲೆ ಎಂತತ ಗೊತ್ತಾಗದಿರ್‌ದು. ಲೈಂಗಿಕ ಆಗಿದೂ ಕಂಗಾಲಾಗಿ ಹೋದು. ನೆಂಪು ಮರ್‌ತೋದು, ಬುದ್ದಿ ಬ್ರಮಣೆ ಆದು ಹಿಂಗೆ ಸುಮಾರ್ ಲಕ್ಷಣಗಳ ಕಾಣಕ್.

ಆಗ ಜೆನಂಗ ಅವಂಗೆ ಯಾರೋ ಕೈ ಮೊದ್ದ್ ಹಾಕೊಳೊ ತ ಹೇಳ್‌ವೆ. ಇದರ ವೀಸೇಸ ರೀತಿಲಿ ನಿಗಂಟ್ ಮಾಡಿಕಂಡವೆ. ಪಂಡ್‌ನವರ ಪ್ರಕಾರ ಕೈ ಮೊದ್ದ್ ಹಾಕಿರ್‌ದರ ಮೂರು ನಮೂನೆಲಿ





ಕಂಡ್ ಹಿಡ್‌ದವೆ. ಸುರೂದು, ಕಾಯಿ ಚಿಪ್ಪಿಲಿ ಮೈನೀರ್(ಉಚ್ಚೆ) ತಕಂಡ್ ಅದ್ಕೆ ಕುಡುನ ನೆನೆಹಾಕಿ, ಬೊಳ್‌ಪುಗೆದ್ದದ್ ಜಾಗ್ರತೆಲಿ ಪರೀಕ್ಸೆ ಮಾಡಿ ನೋಡೊಕು, ಕುಡು ಕಪ್ಪಾಗಿದ್ದರೆ ಅವಂಗೆ ಕೈ ವಿಸ ಹಾಕೋಳಾಂತ ನಂಬುವೆ. ಕುಡು ಎಸ್ಟ್ ಕಪ್ಪಾವುಟು ತ ನೋಡಿ ಮೊದ್ದ್ ಎಸ್ಟ್ ಹಳ್ತ್ ತ ನಿಗಂಟ್ ಮಾಡಕ್‌ಗಡ.

ಎರ್‌ಡ್‌ನೆದ್, ಒಂದ್ ರೂಪಾಯಿನ ಬೆಳ್ಳಿ ಪಾವಲಿನ ಅಂಗೈ ಮೇಲಿಸಿ ಲಾಯಿಕ್ ಉಜ್ಜೊಕು. ಪಾವಲಿ ಕಪ್ಪಾದರೆ ಕೈ ಮೊದ್ದ್ ಹಾಕೊಳಂತ ಅರ್‌ತ. * ಮೂರ್‌ನೆದಾಗಿ, ಹಸಿಬೊಳ್‌ಪುಗೆ ಕೈಗೆ ನುಗ್ಗೆಸೊಪ್ಪುನ ರಸನ ಹಿಂಡೊಕು. ಆಗ ಅದ್ ಗುಳ್ಳೆನಂಗೆ ಎದ್ದ್‌ಕಂಡರೆ 'ಬಾಪು ಬಂದುಟು, ಮೊದ್ದ್ ಹಾಕ್ಯೊಳ'ತೇಳ್ವೆ.

ಕೈಮೊದ್ದ್ ಹೆಂಗೆ ಮಾಡ್‌ವೆಂತ ಸರಿಯಾಗಿ ಗೊತ್ಲೆ. ಸುಮಾರ್ ಜೆನ ಅರೆಬಾಸಿಗರ ಅಬಿಪ್ರಾಯಲಿ ಕೈಮೊದ್ದ್‌ನ ಸತ್ತ ಹಲ್ಲಿ ಅಲ್ಲರೆ ಆರ್‌ಣೆ ನ ಹಿಡ್ದ್ ಮಾಡ್ವೆಗಡ. ಈ ಪ್ರಾಣಿಗಳ ಸರೀ ಕರ್‌ಗಿಸಿರೆ ಬೆಳ್ಳಂಗಾದ ನೋಳಿ ರಸ ಸಿಕ್ಕಿದೆ. ಆ ರಸಕೆ ಕಾಯರ ಮರದ ಬೇರ್, ಹುಣ್ಸುಳಿ ಮರದ ಬೇರ್ ಮತ್ತೆ ಅಸ್ವತ ಮರದ ಬೇರ್‌ನ ಹಾಕಿ ಲಾಯ್ಕ ಕೊದ್‌ಸೊಕು. ಕೆಲ ಬೇರೆ ಎಲೆಗಳ ಹಿಂಡಿ ರಸ ತೆಗ್ದ್ ಸೇರ್‌ಸೋಕು. ಕೆಲವರ ಪ್ರಕಾರ ಹೆಳ್ಮಕ್ಕ ಮುಟ್ಟಾಕನ ಬಾವ ರಕ್ತನ ಅದ್ಕೆ ಸೇರ್‌ಸೊಕು. ಗಟ್ಟಿಯಾಕನ ಅದರ ಲಾಯ್ಕ್ ಒಳ್‌ಂಗಿಸಿ, ಸಣ್ಣಸಣ್ಣ ಮಾತ್ರೆಗಳಂಗೆ ಮಾಡಿಸಿಕಂಡ್, ವಿರೋದಿಗೆ ಉಪಾಯಲಿ ತಿನ್ಸಿರೆ ಅದ್ ಅಂವನ ಮೇಲೆ ನಿದಾನಕೆ ಕೆಲ್ಸ ಮಾಡ್ದೆ. ಮೊದ್ದ್‌ನ ಪ್ರಮಾಣದ ಲೆಕ್ಕಲಿ ತಿಂದವನ ಸಾವು ನಿರ್‌ದಾರ ಆದೆ. ಹೊಟ್ಟೆ ಒಳೆಗೆ ಕುದೊಲ್‌ನ ಗಂಟ್‌ನಂಗೆ ಮಾಸ ಬೆಳ್‌ದ್ ಒಂದೆರ್‌ಡ್ ವರ್‌ಸಲಿ ಅಂವ ಸತ್ತ್ ಹೋದೆಂತೇಳ್‌ವೆ.

ಕೈಮೊದ್ದ್‌ಗೆ ಕೆಲ ಪರಿಹಾರಂಗ ಒಳೊ. ನಾವ್‌ಗೆ ಸಂಸಯ ಇರುವವರ ಮನೆಲಿ ಏನಾರ್ ತಿಂದರೆ, ರಪ್ಪ ಏಲಕ್ಕಿನ ನೆಂಪು ಮಾಡಿಕಂಡರೆ ಕೈಮೊದ್ದ್ ನಾಟುದುಲೆಗಡ ನುಗ್ಗೆ ಸೊಪ್ಪು ಇತ್ಲರೆ ಕಕ್ಕೆ ಸೊಪ್ಪುನ ಹಾಲ್‌ಲಿ ಅರ್‌ದ್ ಕುಡ್ದರೆ ಕೈಮೊದ್ದ್ ಕಕ್ಕಿ ಹೋದೆಂತ ಕೂಡ ಹೇಳ್ವೆ.

ಈ ಬಗ್ಗೆ ಸರಿಯಾದ ವಿಸಯಗಳ ಹೇಳೊವು ಈಗ ಯಾರೂ ಸಿಕ್ಕುದುಲೆ ಹಾಂಗಾಗಿ ಇದರ ಬಗ್ಗೆ ಸ್ಪಸ್ಟ ಆಗಿದ್ ಹಿಂಗೆಂತ ಹೇಳಿಕೆ ಆಕಿಲೆ. ಆದರೂ ಸುಳ್ಯ ಪರಿಸರದ ಅರೆಬಾಸೆವ್‌ಕೆ ಇದರ ಬಗ್ಗೆ ತುಂಬಾ ಹೆದ್ರಿಕೆ ಉಟ್ಟು. ಈಗಲೂ ಕೈಮೊದ್ದ್ ಹಾಕೊವ್ ನಮ್ಮ ಸುತ್ತಮುತ್ತಲಿ ಒಳೊಂತ ಅವು ಗಟ್ಟಿ ನಂಬುವೆ. ಆದರೆ ಇದರ ಬಗ್ಗೆ ಹುಡ್‌ಕಿಕಂಡ್ ಹೋಕನ ಕೈಮೊದ್ದ್ ಹಾಕುವ ವಿಸಯಗ ಸಿಕ್ಕಿದನೆ ಬುಟ್ಟರೆ, ಕೈಮೊದ್ದ್ ಹಾಕಂವ ಯಾವೊಬ್ಬ ಮೊಯಿಂಸನೂ ಸಿಕ್ಕುದುಲೆ.

**ಕೊದಿ ತೆಗೆವ ಮಂತ್ರ :** ಯಾರಿಗಾರ್ ಹೆಚ್ಚಿಗೆ ತಿಂದ್ ಅವರ ಹೊಟ್ಟೆ ಉಬ್ಬರ್‌ಸಿರೆ, ಅಲ್ಲರೆ ಹೆಚ್ಚಿಗೆ ತಿಂಬವನ ಬಗ್ಗೆ ಯಾರಾರ್ ಮುರ್‌ಯ ಇಸಿರೆ, ಅವ್‌ಕೆ ಸೌಕೆ ಇಲ್ಲದಾದರೆ ಆಗ ಮಂತ್ರವಾದಿನ ಕರ್‌ಕಂಡ್ ಬಂದ್ ಕೊದಿ ತೆಗೆವ ಸಾಸ್ತ್‌ರ ಮಾಡ್‌ವೆ. ಮೂರ್ ಗೆಳ್ಸ್, ಬೆಳ್ಳುಳ್ಳಿ, ಉಪ್ಪು, ಉಂಡೆಹುಳಿ ಮತೆ ನೀರುಳ್ಳಿ ಸೇರ್‌ಸಿ ಪೊಜ್ಜಿ ಮಾಡಿ ಅದರ ಮರದ ಕೆತ್ತೆಲಿ ಹಾಕಿದ್, ಕೈಲಿಸಿ ಈ ಕೆಳೆಗೆನ ಮಂತ್ರ ಹೇಳ್‌ವೆ.

ಕೊದಿ ಕೂದಿ ಎಂತ ಕೂದಿ (3ಸರ್‌ತಿ)
ಆನೆ ಹೊಟ್ಟೆಲಿ ಕಾಯಿ ಕರ್‌ಗಿದಾಂಗೆ
ಕುದುರೆ ಹೊಟ್ಟೆಲಿ ಕುಡು ಕರ್‌ಗಿದಾಂಗ
ಕೋಳಿ ಹೊಟ್ಟೆಲಿ ಕಡ್ಡೆರಿಕರ್‌ಗಿದಾಂಗೆ
ಪುದದ ಹೊಟ್ಟೆಲಿ ಬೆಳ್ಗಲ್ಲು ಕರ್‌ಗಿದಾಂಗೆ
ಮೊಲದ ಹೊಟ್ಟೆಲಿ ಒರ್‌ಲೆ ಕರ್‌ಗಿದಾಂಗೆ

ತ ಹೇಳಿ ಆಣೆ ಕಟ್ಟುವೆ. ಕಡೆಗೆ ಪೊಜ್ಜಿನ ಸೌಕೆ ಇಲ್ಲದವನ ಬಾಯಿಗೆ ಹಾಕುವೆ. ಅವ ಅದರ್‌ಲಿ ಚೂರರ ಉಗ್‌ದ್ ಒಳ್ದದರ ನುಂಗಿದೆ. ಇದಂರ್‌ದ ಒಂದೇ ದಿನಲಿ ರೋಗ ಕಮ್ಯಾದೆತ ಅರೆಬಾಸೆ ಜೆನಂಗ ನಂಬುವೆ

**ದ್ರಿಸ್ಟಿ ಆದಕ್ಕೆ ಮಂತ್ರ :** ಊರ್‌ನ ವಿಸೇಸ ದಿನಲಿ ಅಲ್ಲರೆ ಜಂಬರಲಿ ಸಾಹಸ ಮಾಡ್ದ ಹೈದಂಗಳಿಗೆ ದ್ರಿಸ್ಟಿ ಆದು ಉಟ್ಟು. ದ್ರಿಸ್ಟಿ ಆದಂವ ಎಲ್ಲದರ್‌ಲಿ ಆಸಕ್ತಿ ಕಳ್‌ಕಂಡ್ ಜಡ ಹಿಡ್ದವರಂಗಾದೆ. ಅಂತವನ ಜಗಲಿಲಿ ಕಾಲ್ ನೀಂಡಿ ಕುದ್‌ರಿಕೆ ಹೇಳ್‌ವೆ. ಅಂವನ ಕಾಲ್ ಬುಡಲಿ ಒಂದ್ ಮಡ್‌ಕೆ ಇಸಿದ್ ಅದ್‌ಕೆ ಕೆಂಡ ಹಾಕುವೆ. ಕೆಂಡಕೆ ಬೆಳ್ಳುಳಿ ಸಾಸ್ವೆ, ಉಪ್ಪು ಹಾಕಿ ಹೊಗೆ ಬಾವಂಗೆ ಮಾಡಿ ಆ ಹೊಗೆನ ಕುದ್ದವನ. ಮೋರೆಗೆ ಹೋವಂಗೆ ಮಾಡ್‌ವೆ. ಮಂತ್ರವಾದಿ ಕೈಲಿ ಇರ್‌ಂಜಿರ್ ದೈನ ಐದ್ ಚಿಗ್‌ರ್‌ನ, ಕಾಯರ ಮರದ ಐದ್ ಚಿಗ್‌ರ್, ನೆಕ್ಕಿ ದೈನ ಐದ್ ಕೊಡಿ ನ ಒಟ್ಟು ಸೇರ್‌ಸಿ ಹಿಡ್‌ಕಂಡ್ ಈ ಕೆಳೆಗೆನ ಮಂತ್ರ ಹೇಳ್‌ದೆ.

ಕುತ್ತಿಕಣ್ ಕುನ್ನೆರ್ ಕಣ್
ಹೊಲೆಯನ ಕಣ್ ಹೊಲ್ತಿಕಣ್
ಹಾರವನ ಕಣ್ ಹಾರ್‌ತಿ ಕಣ್
ಹಾದಿಯವನ ಕಣ್ ಬೀದಿಯವನ ಕಣ್
ನೋಡ್ದವನ ನಾಲ್ಗೆ ಕೇಳವನ ಕೆಬಿ
ಒಲೆಲಿ ಚಿರ್‌ವಕೆಂಡ ಹಾರ್‌ದಂಗೆ ಹಾರೊಕು
ಇಸ್ಟ್ ಹೇಳ್‌ದ ಮೇಲೆ ನೂಲುನ
ಎರಡೂ ಕೈಲಿ ಹಿಡ್‌ದ್ ಆಣೆ ಕಟ್ಟಿದೆ.
ಮೂಡಾಯಿ ಸೂರ್‌ಯದೇವರಾಣೆ ಉಟ್ಟು
ಪಡ್ಡಾಯಿ ಚಂದ್ರದೇವರಾಣೆ ಉಟ್ಟು
ತೆಂಕ ಬಲೀಂದ್ರದೇವರಾಣೆ ಉಟ್ಟು
ಬಡಗ ಬಾಲೆಪುತ್ರದೇವರಾಣೆ ಉಟ್ಟು
ನನ್ನ ನಿನ್ನ ಹುಡ್ಸಿದವನ
ಹರಿಗುರು ನಾರಾಯಣ ಆಣೆ ಉಟ್ಟು,
ಸಾಮಿ ಸಿವಾ

ಇದಾದ ಮೇಲೆ ಸೊಪ್ಪುನ ಆ ಮೊಯಿಂಸನ ತಲೆಂದ ಕಾಲೊರೆಗೆ ಐದ್ ಇಲ್ಲರೆ ಏಳ್ ಸರ್‌ತಿ ಪೂಜಿದ್, ಅದರ ಎರ್‌ಡ್ ಪಾಲ್‌ಮಾಡಿ, ಕೊಡಿ ಸೇರುವಾಂಗೆ ನೆಲಲಿಸಿದ್ ಸೋಂಕು ಆದವನ ಇದರ ಕಡ್‌ಪ ದಾಟಿಕೆ ಹೇಳ್‌ವೆ. ಹಾಂಗೆ ದಾಟಿದ ಮೇಲೆ ಆ ಜೆನ ಉಸಾರಾಗಿ ಉಲ್ಲಾಸಂದ ಇದ್ದವೆ ತೇಳ್‌ವ ನಂಬಿಕೆ ಉಟ್ಟು.

**ಮಾಟ ಮಂತ್ರಗ :** ಮಂತ್ರ ಮತ್ತೆ ಮಾಟಕೆ ಸಮ್ಮಂದಪಟ್ಟ ಆಚರಣೆಗ ನಿಜಕ್ಕಾದರೆ ಮಾಯದ ಸಕ್ತಿಗಳ್‌ಲಿ ನಂಬಿಕೆ ಇರುವಂತದ್. ಕಾಡೇ ಜಾಸ್ತಿ ಇರ್‌ವ ಸುಳ್ಯಕಡೆಗಳ್‌ಲಿ ಇಂತ ಮಾಯದ ಸಕ್ತಿಗಳ ಬಗ್ಗೆ ಜೆನಂಗಳ್‌ಲಿ ವಿಸೇಸ ನಂಬಿಕೆನೂ ಇದ್ದದೆ. ವಿಜ್ಞಾನ ಮತ್ತೆ ತಾಂತ್ರಿಕ ಕಳಲಿ ಮುಂದ್‌ವರ್‌ದದ್ದ್ ಸುಮಾರ್ ಹಳ್ಳಿಗಳಿಗೆ ಇನ್ನೂ ಎತ್ತದರ್‌ಂದಾಗಿ, ಇಂತ ನಂಬಿಕೆಗ ಇನ್ನೂ ಒಳ್ಕಂಡೊಳೊ.

ಮಾಟ ಮಾಡ್‌ವ ಕ್ರಿಯೆಗೆ ಸುಳ್ಯ ಕಡೆಗಳ್‌ಲಿ ಒಳ್ಳ ಅರ್‌ತ ಏನಿಲ್ಲೆ. ಅದ್ ದುಸ್ಟ ಮಂತ್ರವಿದ್ಯೆಂತ ಜೆನಂಗ ನೆನ್ಸುದರ್‌ಂದ, ಅದ್‌ಕೆ ಹೆದ್ರುದು ಸಾಮಾನ್ಯ. ಮಳೆ ಮತ್ತೆ ಬೆಳೆ, ಹುಟ್ಟು ಮತೆ ಸಾವು ಹಿಂಗೆ ಮಾಮೂಲು ಬೊದ್‌ಕ್‌ನ ಕ್ರಿಯೆಗಳ್‌ಲಿ ಏನಾರ್ ಹೆಚ್ಚ್ ಕಮ್ಮಿ ಕಂಡರೆ, ಅರೆಬಾಸಿಗರ್ ಅಂತದಕೆ ಯಾರೋ ಮಾಟ ಮಾಡಿಯೊಳೊಂತ ನೆನ್ಸಿಕಂಬೊದು ಉಟ್ಟು. ಯವ್ವನಲಿ ಇರ್‌ವ ಹೈದಂಗೆ ನೆನ್ಸದೆ ಬಂದ ಸಾವು, ಊರಿಡೀ ಹಬ್ಬುವ ಯಾದಾರ್ ಒಂದ್ ಸೀಕ್, ಲಾಯ್ಕನ ಕ್ರಸಿ ಬೇಸಾಯ ಒಮ್ಮೆಗೆ ಹಾಳಾದು, ಸೀಕ್ ಹಿಡ್ಯೊದು, ಇರ್‌ಲ್‌ನ ಹೊತ್ತುಲಿ ಸುಮ್ಮನೆ ಹಕ್ಕಿಗ ಮರ್‌ಡುದು, ಇಲ್ಲಾರ್ ನಾಯಿಗ ಬೊಗುಳ್‌ದು–ಇದೆಲ್ಲ ಮಾಟಂದಾಗಿತ ಅನುಮಾನ ಪಟ್ಟವೆ. ಒಟ್ಟ್‌ಲಿ ನೈಸರ್‌ಗಿಕವಾದ ಕ್ರಿಯೆಗಳ್‌ಲಿ ಒಂದ್ ಚೂರು ಹೆಚ್ಚ್‌ಕಮ್ಮಿ ಆದರೂ ಅರೆಬಾಸಿಗರ್‌ಲಿ ಸುಮಾರ್ ಜೆನ ಅದ್ ಮಾಟಂದಾಗಿತೇಳ್ವೆ.

ಮಾಟಲಿ ಅನುಕರಣ ಮಾಟ ಮತ್ತೆ ಸಂಕರ ಮಾಟಂತ ಎರ್‌ಡ್ ಬಗೆಗ ಒಳೊ. ಸುರುಗೆ ಹೇಳ್‌ದ ಅನುಕರಣ ಮಾಟ ನಾಟಕೀಯದ ಅನುಕರಣೆಲಿ ನಂಬಿಕೆ ಇಸಿರ್‌ವಂತದ್. ಉದಾರಣೆಗೆ ವೈರಿ ಒಬ್ಬನ ಮೂರ್‌ತಿನ ಮೊಣ್ಣುಲೊ, ಪೊಯ್ಯೆಲೊ ಇಲ್ಲರ್ ಮೇಣಲೊ ಮಾಡಿ, ಮಾಟದ ಸಾಸ್ತ್‌ರ ಪ್ರಕಾರ 'ಕ್ರಿಯೆ'ಮಾಡ್ರೆ ಅದರ ಪಲ ಯಾರಿಗೆ ತಾಂಗೊಕೊ ಅವಂಗೆ ತಟ್ಟಿದೆ. ಮೂರ್‌ತಿನ ಕೈಕಾಲ್ ಊನ ಮಾಡ್‌ರೆ, ಆ ಮೊಯಿಂಸನ ಕೈಕಾಲ್‌ಗ ಊನ ಆದವೆಂತ ಇಲ್ಲಿ ನಂಬುವೆ.

ಎರ್‌ಡ್‌ನೆದ್ ಸಂಕರ ಮಾಟ ಜಾಸ್ತಿ ವಿಚಿತ್ರ ಆಗಿದ್ ಉಟ್ಟು. ಇಲ್ಲಿ ಮೊಯಿಂಸ ಉಡ್‌ವ ಅಂಗಿ, ಸೀರೆ, ಕುದೊಲು, ಉಗುರು, ಎಲ್‌ಬು, ಜೊಲ್ಲು, ಹೇಲ್ ಉಚ್ಚೆನ ತಕಂಡ್ ಅದರ ಮಾಟದ ಕ್ರಮದಂಗೆ ಮಂತ್ರದೊಟ್ಟಿಗೆ ಕಟ್ಟುವೆ. ಅದರ ಪಲ ಯಾರಿಗೆ ಮಾಟ ತಟ್ಟೊಕೊ ಆ ಮೊಯಿಂಸನ ಮೇಲೆ ಆದೆಂತ ನಂಬುವೆ. ಕೆಲ ಹೊತ್ತ್ ಅನುಕರಣ ಮಾಟ ಮತ್ತೆ ಸಂಕರ ಮಾಟಗಳೆರ್‌ಡೂ ಒಟ್ಟಿಗೆ ಸೇರ್‌ದು ಕೂಡ ಉಟ್ಟು.

ಈ ಎರ್‌ಡೂ ಬಗೆನ ಮಾಟಲಿ ಬಳ್‌ಸ್‌ವ ಮಂತ್ರಗ ಸಿಕ್ಕುದೇಲೆ. ಏಕೆಂತೇಳಿರೆ ಅದೆಲ್ಲಾ ಕದ್ದ್ ಮುಚ್ಚಿದೆ ನಡಿವಂತದ್. ಬೇರೆವ್‌ಕೆ ಹೇಳ್‌ರೆ ಹೇಳ್ದವಂಗೇ ಮಾಟ ಮಾಡ್ಡಂಗಾದೆತೇಳ್ವ ಬಲವಾದ ನಂಬಿಕೆಂದಾಗಿ ಯಾರೂ ಈ ಮಂತ್ರನ ಹೇಳ್‌ದುಲೆ. ಹಾಂಗಾಗಿ ಮಂತ್ರಗ ಯಾವ ಬಾಸೆಲಿ ಉಟ್ಟುಂತೇಳಿ ಹೇಳಿಕಾದುಲೆ.

ಆದರೆ ಕೆಲು ಮಂತ್ರಗ ಅಸ್ಪೇನ್ ಕೇಡ್ ಮಾಡ್ದುಲೆಂತ ನಂಬಿಕೆನೂ ಉಟ್ಟು. ತ ಮಂತ್ರಗಳ್‌ಲಿ ಕೆಲು ಸಂಗ್ರಹ ಮಾಡಿಯೊಳೊ.. ಅದರ್‌ಲಿ ಜಾಸ್ತಿ ಮಲ್ಯಾಳ ಬಾಸೆಲುಟ್ಟು ಇದ್ಕೆ ಕಾರಣ ಸ್ವಸ್ಟ ಯಾಕೆಂತೇಳ್ರೆ ಮಲ್ಯಾಳಿಗಳೆ ಈ ಮಂತ್ರನ ಜಾಸ್ತಿ ಪ್ರಯೋಗ ಮಾಡ್ದು, ಉರ್‌ಕು ಕಟ್ಟುದು, ಸೋಂಕ್‌ಗೆ ಮಂತ್ರ, ದ್ರಿಸ್ಟಿ ಆದ್ದಕ್ಕೆ ಮಂತ್ರ, ಕೊದಿ ತೆಗೆವ ಮಂತ್ರ, ಕಿಚ್ಚಿ ಕಟ್ಟುವ ಮಂತ್ರ, ಬಿಸುರ್ಪು ಬುಡ್ಸುವ ಮಂತ್ರ ಮತ್ತೆ ವಿಸ ಬುಡ್ಸುವ ಮಂತ್ರಗ ಸುಳ್ಯ ಕಡೆಗಳ್‌ಲಿ ಬಾರಿ ಹೆಸ್ರ್‌ವಾಸಿ.

**ಬಿಸುರ್‌ಪು ತೆಗೆವ ಮಂತ್ರ :** ಮೈಮೇಲೆ ಸಣ್ಣ ಸಣ್ಣ ಕಜ್ಜಿಗಾಗಿದ್ದರೆ ಬಿಸುರ್‌ಪು ತೇಳುವೆ. ಇದ್‌ಕೆ ಕಾಡ್‌ಲಿ ಸಿಕ್ಕವ ಅರ್ಣಿ ಬೊಳ್ಳಿನ ತಂದ್ ರೋಗ ಬೊದ್ದವನ ಸೊಂಟಕೆ ಕಟ್ಟಿ, ತೊಳ್ಸಿ ಕೊಡಿ ಕಂತ್‌ಸಿದ ನೀರ್‌ನ ಮೈಗೆ ಸಿಡ್‌ಕ್‌ವೆ. ಕುಡು ಬಿತ್ತ್‌ನ ಅರ್‌ದ್ ಮೈಗೆ ಮೆತ್ತುವೆ. ತಾಮ್ರಾಣಿ ಸೊಪ್ಪುನ ಸಣ್ಣಕೆ ಅರ್‌ದ್ ಕಸಾಯ ಮಾಡಿ ಕುಡಿಯಕೆ ಹೇಳ್‌ವೆ. ನಡುಲಿ ಬೆಂಡದ ನೀರ್‌ನ ಮೈಗೆ ಸಿಡ್‌ಕಿಕೆ ಹೇಳ್‌ವೆ. ಆಗ ಈ ಮಂತ್ರ ಹೇಳ್‌ವೆ.

ಬಿಸುರ್ಪಗಡಾ ಬಿಸುರ್ಪ :  
ಎಂತಾ ಬಿಸುರ್ಪ  
ಅರ್‌ನೆ ಬಿಸುರ್ಪ  
ಓಂತಿ ಬಿಸುರ್ಪ  
ಕಲ್ಲು ಬಿಸುರ್ಪ  
ನೋಡಿ ಬಿಸುರ್ಪು  
ಮಾಜಿಯೇ ಹೋಗಲಿ (3 ಸಲ)

ತೇಳಿ ಆಣೆ ಕಟ್ಟುವೆ. ಹಿಂಗೆ ಮಾಡಿರೆ ಒಂದೆರ್‌ಡ್ ದಿನಲಿ ಬಿಸುರ್‌ಪು ಕಮ್ಮ್ಯಾದೆಂತ ಅರೆಬಾಸೆವು ನಂಬುವೆ.

**ವಿಸ ತೆಗೆವ ಮಂತ್ರ :** ಹಾವ್ ಕಚ್ಚಿರೆ ಕೂಡ್‌ಲೆ ಆ ಜಾಗೆಗೆ ನೀರ್ ಹೊಯ್‌ದವೆ. ಕಚ್ಚಿದ ಜಾಗೆಗೆ ಸುತ್ತೊಳು ಗಟ್ಟಿ ಆಗಿ ಬೊಳ್ಳಿಲಿ ಕಟ್ಟಿ ಏಕನಾಯ್ಕನ ಬೇರ್, ಪಾಂಡಿ ಬೇರ್, ಈಸ್ವರ ಬೇರ್, ಗರ್‌ಡ ಪಾತಾಳ ಬೇರ್, ನಾಗದಾಳಿ, ಗಂದ ಬಜೆ, ಬೇವುನ ಸೊಪ್ಪು, ಕಾಡ್ ನರ್‌ವೊಳು ಸೊಪ್ಪು, ಪಡವಲ ಕಾಯಿ ತೊಪ್ಪೆ, ಹಸಿ ಅರ್‌ಸಿನ, ಕಾಯರಕಾಯಿ ಮರದ ಬೇರ್ ತಂದ್ ಹಾವು ಕಚ್ಚಿದ ಜಾಗೆಗೆ ಲೇಪ ಹಾಕುವೆ. ಲೇಪ ಒಣ್‌ಗಿದಾಂಗೆ ನೋಡಿಕಂಡ್ ಈ ಕೆಳೆಗೆನ ಮಂತ್ರ ಹೇಳ್‌ವೆ.




ಹುಂ ಸುರು ಸುರಂಬ್ರ ಮೂಂಕಟ್ಟಿದೆ
ಮೊಕೆಸಂದರ ಬಾಯ್ಕಟ್ಟಿದೆ
ಗುರ್‌ಗಿನಂತ ಕಣ್ಣು ಕಟ್ಟಿದೆ.
ಅಡಿಕೆಯಂತ ತಡೆ ಕಟ್ಟಿದ
ಒರ್‌ಲಂಬ ಹುರ್‌ಲೆ ಕಟ್ಟಿದೆ
ಒನ್ನೆಯೆಂಬ ನಡುವೆ ಕಟ್ಟಿದ
ದುಬ್ಬಣದಂತ ಬಾಲವ ಕಟ್ಟಿದ
ಹಿಂದೂಕಟ್ಟದೆ ಮುಂದೂ ಕಟ್ಟಿದ
ಎಡಕಟ್ಟಿದ ಬಲ ಕಟ್ಟಿದೆ
ದೂತಿಯೆಂಬ ಹಲ್ಲು ಕಟ್ಟಿದ
ಯಮದೂತಿಯೆಂಬ ಹಲ್ಲು ಕಟ್ಟಿದೆ
ಕಾಳಿಯೆಂಬ ಹಲ್ಲು ಕಟ್ಟಿದ
ಕರ್‌ಕಾಳಿಯೆಂಬ ಹಲ್ಲು ಕಟ್ಟಿದ
ಆನುಂಬಾಚಾರಿ, ಅಣೆ ಕಟ್ಟಿದ

ತೇಳಿ ಆಣೆ ಕಟ್ಟುವೆ. ಕಡೆಗೆ ಓಂ ಗರ್‌ಡಮುಂಗಲಿ ಆಣೆ ಕಟ್ಟಿನೆ ತೇಳಿ ಎದುರೊಳಿ ಸೊಪ್ಪುನ ರಸ ತೆಗ್ದ್ ಹಾವು ಕಚ್ಚಿದವಂಗೆ ಕುಡಿಯಕೆ ಹೇಳ್‌ವೆ. ಕೆಲವ್ ಕಡೆ ಎಮ್ಮೆ ಸೆಗ್‌ಣಿನ ನೀರ್ ಮಾಡಿ ಕುಡಿಯಕೆ ಹೇಳ್‌ವೆ. ಉಚ್ಚೆ ಕುಡ್‌ಸ್‌ವ ಕ್ರಮನೂ ಉಟ್ಟು. ಆಗ ಕಕ್ಕಿಕೆ ಬಾದರ್‌ಂದ ವಿಸ ಕಮ್ಮಿ ಆದೆಂತ ಹೇಳಿ ನಂಬುವೆ.

ಹಿಂಗೆ ಸುಮಾರ್ ಬಗೆನ ಮಂತ್ರಗಳೊಟ್ಟಿಗೆ ಕೆತ್ತೆ, ಬೇರ್, ಸೊಪ್ಪುಗಳ ಮೊದ್ದ್‌ಲಿ ಬಳ್ಸುವೆ. ಮೂಲಲಿ ಬರಿ ಕೆತ್ತೆ, ಬೇರ್, ಸೊಪ್ಪುಗ ಮಾತ್ರನೆ ಇದ್ದಿರ್‌ದು, ಮತ್ತೆ ದಿನ ಕಳ್‌ದಾಂಗೆ ರೋಗ ಕಮ್ಮ್ಯಾದರೊಟ್ಟಿಗೆ ಮಾನಸಿಕ ನೆಮ್ಮೊದಿನು ಸಿಕ್ಕಿಕೆ ಈ ಮಂತ್ರಗಳ ಸೇರ್‌ಸಿರುವೋ. ನಾವ್ ದಿನೋಳು ಮಾತಾಡ್‌ವ ಮಾತ್‌ನನೇ ವೀಸೇಸ ಆಗಿ ಹೇಳಿ ಅದ್‌ಕೆ ಮಂತ್ರ ಸಕ್ತಿನ ತುಂಬುಸುವೆ. ಈ ಮಂತ್ರಗಳ ವೈಜ್ಞಾನಿಕ ಸತ್ಯ ಏನೆ ಇದ್ದದ್ರು ಅದರ್‌ಂದ ಉಸಾರಿಲ್ಲದವರ ಮೇಲೆ ಹೆಚ್ಚಿಗೆ ಪರಿಣಾಮ ಬಿದ್ದದೆ ತೇಳ್‌ದು ಮಾತ್ರ ಸತ್ಯ.

**ಸೋಂಕ್‌ಗೆ ಮಂತ್ರ :** ಸುಳ್ಯಲಿ ದೊಡ್ಡ ದೊಡ್ಡ ಕಾಡ್‌ಗೊಳೊ. ಈ ಕಾಡುಗಳ್‌ಲಿ ದುಸ್ಟ ಸಕ್ತಿಗ ಸೇರ್‌ಕಂಡಿದ್ದವೆ. 'ಒಬ್ಬನೆ ಮೊಯಿಂಸ ಅಂತಲ್ಲಿ ನಡ್‌ಕಂಡಡ್ ಬಂದರೆ, ಈ ದುಸ್ಟ ಸಕ್ತಿಗ ಮೊಯಿಂಸಂಗೆ ಸೋಂಕಿ ಅಂವನ ಮೇಲೇನೆ ಇದ್ದವೆ. ಇದರ 'ಸೋಂಕು'ತೇಳ್ವೆ. 'ಸೋಂಕು' ಆದ (ಸೋಂಕಿದ) ಗಳ್ಗಿಂದಲೇ ಇದ್ದಕ್ಕಿದ್ದಂಗೆ ಚಳಿಜೊರ ಬಂದ್ ಗಡಗಡ ದರ್ಪಿದೆ. ತ ಮೊಯಿಂಸನ ಹಸಿ ಬೊಳ್ಪಿಗೆ ಮನೆ ಜಗ್‌ಲಿಲಿ ಮಣೆ ಮೇಲೆ ಮೂಡ ದಿಕ್ಕ್‌ಗೆ ಮೋರೆ ಮಾಡಿ ಕುದ್‌ರ್‌ಸುವೆ. ಮನೆಯವರ್‌ಲಿ ಒಬ್ಬ ಕೈಲಿ ನೆಕ್ಕಿ ಸೊಪ್ಪುನ ಹಿಡ್ಕಂಡ್, ಸೊಪ್ಪ್‌ಲಿ ಅವಂಗೆ ಬೊಡ್ಕಂಡ್ ಕೆಳಗೆನ ಈ ಮೊಂತ್ರನ ಹೇಳ್ದೆ.

ಮೂಡೊಂದು ಗಾಳಿಗೆ ಮುತ್ತುಗದ ಮರ
ತಂಕೊಂದು ಗಾಳಿಗೆ ತೆಂಗಿನ ಮರ
ಪಡೊಂದ ಗಾಳಿಗೆ ಸೊಂಗಾರೆ ಮರ
ಬಡೊಂದ ಗಾಳಿಗೆ ಬಾಳೆಮರ
ನಾ ಮಂತ್ರಿಸುವುದು ಹೋದರೆ ಹೋಗಲಿ
ಹೋಗದಿದ್ದರೆ ಮಾರಣೆ, ಶೀತಣೆ, ಸೀರ್‌ಗಣೆ,
ಕೊಲ್ಲಪುರಿ... ಬನ್ನಿ ಮಹಂಕಾಳೀ ಪಾದದಾಣೆ
ಓಂ ಹರಿಹರುದ್ರ.

ಮಂತ್ರದ ಅಕೇರಿಗೆ ಮೊಯಿಂಸನ ಮೈಗೆ ಬೆಳ್ಳುಳ್ಳಿ ಪೂಜುವೆ. ಒಂದೆರ್‌ಡ್ ಗಂಟೆಲಿ ಸೋಂಕು ಬುಟ್ಟು ಹೋದೆಂತೇಳಿ ನಂಬುವೆ. (ಪಿ.ಬಿ.)

**ಮಾಯಿದ ಪುರುಸರ್ :** ಮಾಯಿದ ಪುರುಸರ್ ನಲಿಕೆಯವು ಕೊಣಿವ ಕೊಣ್‌ತ. ಈ ಕೊಣ್‌ತನ ಮಾಯಿ (ಕುಂಬ – ಮಾಘ – ಮಾರ್ಚ್)ತಿಂಗಳ ಹುಣ್ಣಿಮೆಂದ ಅಮವಾಸ್ಯೆ ಇರ್‌ಲ್ ಹೊತ್ತು ಮನೆ ಮನೆಗೆ ಹೋಗಿ ನಡ್‌ಸುವೆ. ಇದು ಸುಮಾರ್ ಪಾತ್ರದಾರಿಗ ಇರ್‌ವ ಕೊಣ್‌ತ ಆಗುಟು. ಕೊಣ್‌ತದ ಪೊದ್ಯ ಪಾಡ್ದನ ರೂಪಲಿದ್ದ್ ಅದರ್‌ಲಿ ಒಂದ್ ಜೆನಪದ ಕತೆ ಉಟ್ಟು. ಕತೆ ಒಂದ್ ಸಾಂಸಾರಿಕ ಚಿತ್ರಣನ ಕೊಟ್ಟದೆ. ಆದರೆ ಇದ್ ನಾತ ಪಂತದ ಅನುಯಾಯಿಗಳ ಕತೆ ಆಗಿದ್ದ್, ಜೋಗಿ ಪುರ್‌ಸ ಹೇಂಗೆ ತಮ್ಮ ಕುಟುಂಬದ ಹೆಣ್ಣ್ ಮಕ್ಕಳ ಬಗ್ಗೆ ಕಾಳಜಿ ವಯ್‌ಸತಿದ್ದೊ ತೇಳುದರ ಎತ್ತಿ ತೋರ್‌ಸಿದೆ.

**ವೇಸಬೂಸಣ :** ಗಂಡಸರ್ ಈ ಕೊಣ್‌ತನ ನಡ್‌ಸ್‌ವೆ ಈ ಕೊಣ್‌ತಲಿ ಒಂಬತ್ತು ಪಾತ್ರದಾರಿಗ ಇದ್ದವೆ. ಹಿಮ್ಮೇಳ ಸೇರಿ ಒಟ್ಟು 10 ಜೆನ ಕಲಾವಿದರ್ ಕೂಡಿಕಂಡವೆ. ಪೊದ್ಯ ಉದ್ದ ಇರ್‌ದರ್‌ಂದ ಕೊಣ್‌ತ ಹೆಚ್ಚ್ ಕಾಲ ತೆಕಂಡದೆ. ಇದರ್‌ಲಿ 7 ಗಂಡ್ ಪಾತ್ರಗ 2 ಹೆಣ್ಣ್ ಪಾತ್ರಗ. ಗಂಡ್‌ಗ ರಾಜಕುಮಾರರಂಗೆ ವೇಸ ತೊಟ್ಟಿದ್ದವೆ. ಹೆಣ್ಣ್ ಪಾತ್ರಗಳ್‌ಲಿ ಒಂದ್ ಅಜ್ಜಿನಾಂಗೆ ಹಾಂಗೆ ಇನ್ನೊಂದ್ ಗೂಡೆನಾಂಗೆ ವೇಸ ಹಾಕಿದೆ.

ಗಂಡಸ್‌ಗ ಪಂಚೆ ಕಚ್ಚೆ ಹಾಕಿ ಉಟ್ಟವೆ. ಉದ್ದ ಕೈನ ಅಂಗಿ ಹಾಕುವೆ. ಕೆಲವ್ ಮೈಬುಟ್ಟು ಬಸ್‌ಮ ಹಾಕಿದ್ದವೆ. ಎದೆ, ಹೊಟ್ಟೆ, ತೋಳು, ಬುಜ, ಹಣೆ, ಗಂಟ್ಲ್‌ಗೆ ಬಸ್ಮಾದಾರಣೆ ಮಾಡಿಕಂಡಿದ್ದವೆ. ತಲೆಗೆ ಮುಂಡಾಸ್ ಹಾಕಿಕಂಡಿದ್ದವೆ. ಮೋರೆಗೆ ಸಪೇತ ಮೆತ್ತಿಕಂಡಿದ್ದವೆ. ಕಣ್ಣ್‌ಗೆ ಕಣ್ಣ್‌ಕಪ್ಪು ತುಟಿಗೆ ಕೆಂಪು, ಹಣೆ ನಡುಲಿ ಕೆಂಪು ಬೊಟ್ಟು ಅಡ್ಡ ನಾಮ, ಗಂಟ್‌ಲ್‌ಗೆ ಹೂನ ಮಾಲೆ ಹಾಕಂಡಿದ್ದವೆ. ಹೆಗ್‌ಲಿಗೆ ಸಾಲ್ ಹಾಕಿಕಂಡಿದ್ದವೆ. ನಿಜ ಆಗಿ ಈ ಕೊಣ್‌ತಲಿ ಏಳ್ ಪುರಸ ವೇಸಗ ಇರೋಕು. ಆದರೆ ಕಲಾವಿದರ ಅಬಾವಂದ ಆ ಸಂಕೆ

ಏಳಂದ ಕಡಿಮೆ ಇದ್ದದೆ. ಗಂಡಸರ್‌ಲಿ ಹಿರಿಯರ್ ಕಾಲ್‌ಗೆ ಗಗ್ಗರ ಕಟ್ಟಿಕೊಂಡಿದ್ದವೆ. ಒಳ್‌ದವು ಗೆಜ್ಜೆ ಕಟ್ಟಿಕಂಡಿದ್ದವೆ. ಗೂಡೆನ ಪಾತ್ರಲಿ ಇದ್ದಂವ ಸಾದಾಸೀರೆ ರವ್‌ಕೆ ಹಾಕಂಡಿದ್ದದೆ. ತಲೆ ಕೂದಲು ನೈದ್ ಜಡೆ ಬುಟ್ಟಿದ್ದದೆ. ಹೂ ಮುಡ್‌ದಿದ್ದದೆ. ಕೈಲಿ ಬಳೆ, ಗಂಟ್‌ಲ್‌ಗೆ ಮಾಲೆ ಇದ್ದದೆ. ಕೆಬಿ ಮೂಕುಗೆ ಆಬರಣ ಇದ್ದದೆ. ಮೋರೆಗೆ ಬಣ್ಣ ಹಾಕಿ, ಕಣ್ಣ್‌ಗೆ ಕಪ್ಪು ತುಟಿಗೆ ಕೆಂಪು ಮೆತ್ತಿದ್ದದೆ. ಹಣೆಗೆ ಕೆಂಪು ಬೊಟ್ಟು ಇಸಿಕಂಡಿದ್ದವೆ.

ಅಜ್ಜಿನ ಪಾತ್ರದಾರಿ ಸೀರೆ ರವ್‌ಕೆ ಹಾಕಿ ದಡ್ಡಾಲ್ ಮರದ ಜೊಂಕು (ನಾರು)ಂದ ಮಾಡ್‌ದ ಟೋಪನು ಇಸಿಕಂಡಿದ್ದದೆ. ಕೈಗೆ ಬಳೆಗ, ಕೆಬಿಗೆ ಬೆಂಡ್, ಗಂಟ್‌ಲ್‌ಗೆ ಮಾಲೆ ಹಾಕಂಡಿದ್ದದೆ. ಹಲ್ಲು ಉದ್ದ ಕಾಂಬಕೆ ಅಡಿಕೆ ಹಾಳೆನ ತುಂಡುಗಳ್‌ನ ಎದುರ ದುಂಡುಗೆ ಹೊರಗೆಂದ ಸಿಕ್ಕಿಸಿಕಂಡಿದ್ದದೆ. ಹಣೆಗೆ ಬಸ್ಮ ಹಾಕಂಡಿದ್ದದೆ. ಹೆಗಲ್‌ಲಿ ಒಂದ್ ಬಟ್ಟೆನ ಜೋಳಿಗೆ ಇದ್ದದೆ. ಒಂದ್ ಕೈಲಿ ಒಂದ್ ದಂಟೆ ಇದ್ದದೆ. ಬೆನ್ನ್ ಬೊಗ್ಗ್‌ಸಿ ಕೋಲ್ ಊರಿಕಂಡ್ ಕೊಣ್‌ದದೆ. ತೆಂಬರೆ ಬೊಟ್ಟಿಕಂಡ್ ಪೊದ್ಯ ಹೇಳಿಕನ ಕೊಣಿವವು ಅದ್‌ಕೆ ಸೊರ ಸೇರ್‌ಸಿ ಕೊಣ್‌ತಕ್ಕೆ ಸುರುಮಾಡ್‌ವೆ.

**ಕೊಣ್‌ತ :** ಪೊದ್ಯದ ಲಯಕೆ ತಕ್ಕಾಂಗೆ ಪಾದದ ಮುಂದೆ ನೇಚಿ ಜಾರ್‌ಸಿ ಪಾದದ ಹಿಂದೆಪುಡೆನ ನೆಲಕ್ಕೆ ಊರಿ ಹೆಜ್ಜೆ ಇಸಿ ಕೊಣ್‌ದವೆ. 'ಡಂ ಡಂ ಡಕ್ಕ್ ಡಕಾ' ತೆಂಬರೆ ಬೊಟ್ಟುದಕೆ ಸರಿಯಾಗಿ ಹೆಜ್ಜೆಹಾಕುವೆ. ಗೂಡೆನ ವೇಸ ಹಾಕಿದಂವ ಹೆಣ್ಣ್ ಮಕ್ಕಳಂಗೆ ಸಣ್ಣ ಹೆಜ್ಜೆ ಇಸಿ ಕೊಣ್‌ದದೆ. ಅಜ್ಜಿನ ವೇಸದಾರಿ ಇಸ್ಟ ಬಂದಂಗೆ ಕೋಮಟಿ ಮಾಡಿಕಂಡ್ ಕೊಣ್‌ದದೆ. ಕೊಣ್‌ತದವು ಹಂಗೆ ಕತೆಗನುಸಾರ ಆಗಿ ಕೊಣ್‌ದವೆ. ಪೊದ್ಯದ ಕಡೇ ಸಾಲ್‌ನ ಮತ್ತೊಮ್ಮೆ ಹೇಳ್‌ವೆ.

**ಪೊದ್ಯ :** ಈ ಕೊಣ್‌ತದ ಪೊದ್ಯ ಒಂದ್ ಸಣ್ಣ ಪಾಡ್ದನ ಆಗಿದ್ದ್ ಸುಮಾರ್ ಉದ್ದ ಉಟ್ಟು. ಪಾಡ್ದನದ ದಾಟಿಲೇ ಈ ಪೊದ್ಯನ ಹಳ್‌ವೆ. ಆ ಪೊದ್ಯದ ಸಾರನ ಇಲ್ಲಿ ಕೊಟ್ಟೊಳೊ.

ಪಂಡ್ ಕಾಲಲಿ 7 ಜೆನ ಪುರುಸರ್ ಹುಣ್ಣಿಮೆನ ಚತುರ್‌ದಶಿ ದಿನ ಕಾಂಬಕೆ ಸಿಕ್ಕಿದ್ದೊ. ಅವು ಯುದ್ದಕೆ ಹೋವ ಸಿದ್ದತೆ ನಡ್‌ಸಿದೊ. ಅವರವರ ಹೆಣ್ಣ್‌ಗಳ ಕರ್‌ದ್ ನಾವ್ ಯುದ್ದಂದ ತಿರ್‌ಗೆ ಬಾವವರೆಗೆ ನಮ್ಮ ಒಂದೆ ತಂಗೆನ ಜಾಗ್ರತೆಲಿ ನೋಡಿಕಣಿ ತೇಳ್‌ದೊ. ಪುರುಸರ್ ಯುದ್ದಕ್ಕೆ ಹೋದ ಕೆಲ ದಿನಲಿ ಅವರ ಹೆಣ್ಣ್‌ಗ ನಾದಿನಿನ ಕರ್‌ದ್, ಚಿಪ್ಪಿಲಿ ಸೀಗೆ ಗಂಜಿನೀರ್ ಕೊಟ್ಟ್ ಹಳ್ಳಕೆ ಹೋಗಿ ಮೀದ್‌ಕಂಡ್ ಬಂದ್ ಕೋಂಬರೆಲಿ ಕುದ್ದ್‌ಕಂಬಕೆ ಹೇಳ್‌ದೊ. ನಾದಿನಿನ ಕೈಲಿ ಕತ್ತಿಕೊಟ್ಟು ಸೊಪ್ಪು ತಾಕೆ ಹೇಳ್‌ದೊ. ಕೊಡಪಾನ ಕೊಟ್ಟು ಬಾಮಿಂದ ನೀರ್ ತಾಕೆ ಹೇಳ್‌ದೊ. ಜೋಗತಿ ಗೂಡೆ ಅದ್ ಹೇಳ್‌ದಂಗೆ ಎಲ್ಲನು ಮಾಡ್ತ್.

ಒಂದ್ ದಿನ ಅವ್ ನಾದಿನಿನ ಕರ್‌ದ್ 'ನಮ್ಮೊಟಿಗೆ ಬಾ. ಕಾಡ್‌ಗೆ ಹೋಗಿ ಹೂ ಕೊಯ್‌ಕಂಡ್ ಬರಮೊ ತೇಳ್‌ದೊ. ಅತ್ತಿಗೆ ನವರೊಟ್ಟಿಗೆ ನಾದಿನಿ ಕಾಡ್‌ಗೆ ಹೋತು. ಬಂಗಾರದ ಹೆಡೆಗೆ ಬೆಳ್ಳಿನ ತೊಡಂಕ್ (ಕತ್ತಿ ಸೆಕ್ಕ್‌ಸಿಕಂಬಕೆ ಸೊಂಟಕ್ಕೆ ಕಟ್ಟಿಕಂಬ ಪಟ್ಟಿ ತೆಕಂಡ್, ಕಾಡ್‌ಗೆ ಹೋದೊ. ಸಂಪಿಗೆ ಮರಕ್ಕೊಂದು ಏಣಿ ಇಸಿ ಕೆಳಗೆನ ಹೂಗ ಬೇಡ. ಮೇಲೆನ ಹೂಗಳ ಕೊಯ್‌ದ್ ಕೊಡಿಕೆ ಹೇಳ್‌ದೊ. ಅದ್ ಹಾಮಗೆ ಮರದ ಕೊಡಿ ಹತ್ತಿತ್. 7 ಜೆನ ಅತ್ತಿಗೆಯವ್‌ಕೂ ಬೇಕಾದಸ್ಟ್ ಹೂಗಳ ಕೊಯ್‌ದ್ ಕೊಟ್ಟತ್. ಅಸ್ಟರ್‌ಲಿ ಮರಕ್ಕೆ ಇಸಿದ ಏಣಿನ ಅತ್ತಿಗೆಕ ತೆಗ್‌ದ್ ನಾದಿನಿನ ಮರಲೇ ಬುಟ್ಟು ಹೋದೊ. ಜೋಗತಿಹೆಣ್ಣ್ ಇಳಿಯಕಾಗದೆ ಮರಲೇ ಒಳ್‌ದ್ ಹೋತ್. ನಡು ಇರ್‌ಲ್ ಹೊತ್ತ್‌ಗೆ ಜೋಡಿ ಹುಲಿಗ ಆ ಮರದ ಬುಡಕ್ಕೆ ಬಂದೊ. ಜೋಗತಿ ಹೆಣ್ಣ್ ಮರ್‌ಟ್ ಮರ್‌ಟ್ ಅರ್‌ಸಿದ ಕಣ್ಣೀರ್ ಮರದಡಿಗೆ ಬಿದ್ದ್ ಅಲ್ಲೊಂದು ಹಳ್ಳ ಆಗಿತ್ತ್. ಅಸ್ಟ್ ಹೊತ್ತ್‌ಗೆ ಹುಲಿಗ ಬಂದ್ ಮರಂದ ನೀರ್ ಹನಿ ಬೀಳುದರ್‌ನ ನೋಡಿ ಮೇಲಕ್ಕೆ ದ್ರಿಸ್ಟಿ ಹಾಕಿದೊ. ಮರಲಿ ಕುದ್ದ ಜೋಗತಿ ಹೆಣ್ಣ್‌ನ ಎಳ್‌ದ್ ಹಾಕಿ ತಿಂದ್ ಮುಗ್‌ಸಿದೊ.

ಅದರ ಹುಲಿ ತಿಂಬಕಾಕನ ಬಲದ ಕೈ ಕಿರುಬೆರಳೊಂದ್ ಮಾತ್ರ ದೂರಕ್ಕೆ ಹಾರಿ ಬುಟ್ಟತ್. ಮಾರನೆ ದಿನ ಆ ದಾರಿಲಿ ಬಂದ ಆಡುಗೂಲಜ್ಜಿಗೆ ಆ ಬೆರಳ್ ಸಿಕ್ಕಿತ್. ಅದರ ಅದ್ ಅರ್‌ಸಿನದ ತುಂಡು ತೇಳಿ ಗ್ರೇಸಿ ಜೋಳಿಗೆಲಿ ಹಾಕಿಕೊಂಡತ್. ಮನೆಗೆ ಬಂದ ಮೇಲೆ ಅದರ ಹೊಸ ಒಮದ್ ಮಡಕೆಲಿ ಹಾಕಿತ್. ಯುದ್ದಕೆ ಹೋದ ಪುರುಸರ್ ಬಂದೊ. ತಮ್ಮ ಹೆಣ್ಣ್‌ಗಳೊಟ್ಟಿಗೆ ತಂಗಿ ಎಲ್ಲಿ ತೇಳಿ ಕೇಳ್‌ದೊ. 'ಕಪ್ಪೆ ಸೊಕ್ಕಿರೆ ಹಳ್ಳಲಿ ನಿಲ್ಲಿಕ್ಕಿಲ್ಲೆ, ಹೆಣ್ಣ್ ಸೊಕ್ಕಿರೆ ಮನೆಲಿ ಉಳಿಯಕಿಲ್ಲೆ. ತಂಗೆನ ಹುಲಿ ತಕೊಂಡ್ ಹೋತ್ ತೇಳ್‌ದೊ. ತಂಗೆನ ಹುಡ್‌ಕಿಕಂಡ್ ಅಣ್ಣಂದರ್ ಹೊರಟೊ. ಸುಮಾರ್ ಮನೆಗಳ್‌ನ ಹುಡುಕಿ ಕಡೆಗೆ ಆಡುಗೂಲಜ್ಜಿನ ಮನೆಗೆ ಬಂದೊ. ಅಜ್ಜಿ ಮನೆಗೆ ಬಾಕನ ಮಡಕೆಲಿ ಕಿರುಬೆರಳ್‌ನ ರೂಪದಲ್ಲಿದ್ದ ಗೂಡೆ ತನ್ನ ನಿಜರೂಪನ ತಾಳಿ ಹೊರಗೆ ಬಾತ್. ತನ್ನ ಅತ್ತಿಗೆಯಂದಿರ್ ಮಾಡ್‌ದ ಕೆಟ್ಟ ಕೆಲಸನ ಅಣ್ಣಂದ್‌ರ್‌ಲಿ ಹೇಳಿಕೊಂಡತ್. ಆಣ್ಣಂದರ್ ಬಂದ್ ತಮ್ಮ ಹೆಣ್ಣ್‌ಗ ಇದ್ದ ಮನೆಗೆ ಕಿಚ್ಚಿ ಕೊಟ್ಟ್ ಸುಟ್ಟೊ. ತಂಗಿನೊಟಿಗೆ ಅವಿಬ್ಬರ್ ಕದ್ರಿಗೆ ಹೋಗಿ ಮಾಯಾದೊ.

ಪೊದ್ಯದ ರೂಪಲಿರುವ ಈ ಕತೆನ ಕೊಣ್‌ತಕೆ ಪರಿವರ್‌ತಿಸಿ ಪಾಣಾರರ್ ಬಾರಿ ಲಾಯ್ಕ್ ಮಾಡಿಯೊಳೊ. ಈ ಕೊಣ್‌ತಕೆ ಯಾದೇ ಆಚರಣೆಗ ಇರುದುಲೆ. ಈ ಕೊಣ್‌ತ ಲಿ ನಾಟಕೀಯತೆ ಉಟ್ಟು. ಅಣ್ಣ–ತಂಗೆನ ಗಾಡ ಆದ ಪ್ರೀತಿನ ವ್ಯಕ್ತಪಡಿಸುವ ಈ ಕೊಣ್‌ತ ಪ್ರಾಚೀನ ಕೌಟುಂಬಿಕ ಪೊದ್ದತಿಲಿ ರಕ್ತಸಮ್ಮಂದಕಿದ್ದ ಬಾಂದವ್ಯನ ಎತ್ತಿ ತೋರಿಸಿದೆ. (ಪಿ.ಆರ್.)




**ಮಾಯಿಲರ್ :** ತುಳುನಾಡ್ ಮತ್ತೆ ಅರೆಬಾಸೆ ಪ್ರದೇಸಲಿ ಇರ್‌ವ ಜೆನಾಂಗ. ಇವ್ ದಕ್ಷಿಣಕನ್ನಡ ಜಿಲ್ಲೆನ ಬೆಳ್ತಂಗಡಿ, ಪುತ್ತೂರು, ಮತ್ತೆ ಸುಳ್ಯ ತಾಲೂಕ್‌ನ ಕೆಲ ಗ್ರಾಮಗಳ್‌ಲಿ ಮಾಯಿಲ ಜೆನಾಂಗದವು ಒಳೊ. ಇವು ಒಟ್ಟು ಸೇರ್‌ರೆ ಸುಮಾರು ಮೂರು ಸಾವಿರ ಆವೊ. ಇವ್ಕೆ ಪಂಚಮರ್‌ತೇಳಿ, ಅಂತ್ಯಜರ್‌ತೇಳಿ, ಕೂಡ ಕರ್‌ದವೆ. ಈ ಜಾತಿನ ಹೆಣ್ಮಕ್ಕಳ ಮಾಯಿಲಿತೇಳಿ ಹೇಳ್ವೆ. ಮಾಯಿಲ ಮತ್ತೆ ಮಾಯಿಲಿ – ಈ ಎರ್‌ಡ್ ಪದಗ ಹೆಂಗೆ ಹುಟ್ಟಿಕಂಡೊತೇಳಿ ಹೇಳಿಕೆ ಆಗ್ತಾ ಇಲ್ಲೆ.

ಮಾಯಿಲರ್‌ಲಿ ಮೂರು ಬಗೆ. 1. ಮಲೆಯಾಳಿ ಮಾಯಿಲರ್, 2. ತುಳು ಮಾಯಿಲರ್, 3. ಕಜೆ ಮಾಯಿಲರ್. ಈ ವೆತ್ಯಾಸಬಾಸೆ ಮತ್ತೆ ಬೊದ್ಕುವ ಜಾಗೆಗಳ್‌ಂದಾಗಿ ಆವುಟು. ಕೇರಳದ ಕಾಸರಗೋಡುಲಿ ಇರೋವು ಮಲೆಯಾಳ ಮಾತಾಡ್ರೆ, ಪುತ್ತೂರು ಮತ್ತೆ ಸುಳ್ಯ ತಾಲೂಕ್‌ಲಿರವು ತುಳು ಮಾತಾಡ್‌ವೆ. ಈ ತುಳು ಮಾಯಿಲರ್ ಹೆಬ್ಬಾರ ಹಿತ್ತು, ಆಚೊಳ್ಳಿ, ದೇವ, ಕಂದ್ರಪ್ಪಾಡಿ, ಒಲಾಡು, ನೆಕ್ಕಿಲ, ಕಾಣಿಯೂರು, ಬಳ್ಳಕ್ಕ, ಕರಿಕ್ಕಳ, ಮಡಪ್ಪಾಡಿ, ಕಾಂಚೋಡು, ಕೊಂಬಾರು ಇಂತ ಕಡೆ ಒಳೊ. ಇವರ 'ಕೋಟಿ ಮಾಯಿಲ'ತೇಳಿ ಕೂಡ ಹೇಳ್ವೆ. ಈ ಮೂರು ಗುಂಪುಗ ಮತ್ತೆ ಅವರೊಳಗೆ ಜಾತಿ ಲೆಕ್ಕಾಚಾರಗ ಆಗಿ, ಮಲೆಯಾಳ ಮಾಯಿಲರು ಮೇಲೆ ಜಾತಿಯವು, ಕಜೆ ಮಾಯಿಲರ್ ಕೆಳಜಾತಿಯವುಂತ ನೆನ್ಸೊಳೊ. 'ತುಳುನಾಡ್‌ನ ಇನ್ನೊಂದು ಹರಿಜೆನರ ಪೈಕಿ ಮೇರರ ಅಚಾರ, ಕ್ರಮ ಕಟ್ಟ್‌ಕಟ್ಟಳೆಗ ಮತ್ತೆ ನಮ್ಮ ಕ್ರಮ ಒಂದೇಂತ ಮಾಯಿಲರ್ ಹೇಳ್ರೂ ಕೂಡ ಮೇರರ್‌ಗ ಅದರ ಒಪ್ಪುದುಲೆ. ಮೇರರ ಲೆಕ್ಕಲಿ ಮಾಯಿಲರ್ ಅವರ್‌ಂದ ಕೆಳಗೆನವು.

ಮಾಯಿಲರ ಒಂದ್ ಪೈಕಿಗೆ 'ಕೋಟೆಮಾಯಿಲರ್'ತೇಳ್ವ ಹೆಸರ್ ಉಟ್ಟು. ಇದರ ನೋಡ್‌ಕನ ಮಾಯಿಲರ್‌ಗೆ ಕೋಟೆ (Fort)ಒಟ್ಟಿಗೆ ಸಮ್ಮಂದ ಇತ್ತ್‌ಂತ ಗ್ರಹಿಸಕ್. ಆದರೆ ಇದ್ಕೆ ಚರಿತ್ರೆನ ದಾಕಲೆಗ ಇಲ್ಲೆ. ಆದರೆ ಮಾಯಿಲರು 'ನಾವ್ ಪಂಡ್‌ಲಿ ಕೋಟೆ ಕಟ್ಟಿ ರಾಜ್ಯ ಆಳ್ದವುಂತ ಹೇಳಿಕಂಡವೆ. ಸುಳ್ಯ ಪುತ್ತೂರು ಮತ್ತೆ ಬೆಳ್ತಂಗಡಿನ ಕೆಲ ಗುಡ್ಡೆ ಕೊಡಿಲಿರುವ ಕಲ್ಲ್‌ಬಂಡೆಗಳ ತೋರ್‌ಸಿ 'ಅದ್ ಮಾಯಿಲಕೋಟೆ' ತೇಳ್ವೆ. ಬೇರೆ ಜೆನಾಂಗದವೂ ಮಾಯಿಲಕೋಟೆ ಇರ್‌ದರ ಒಪ್ಪುವೆ. ಇದ್ಕೆ ಹೊಂದುವಂಗೆ ಆ ಕಡೆಗಳ್‌ಲಿ, ಮುಕ್ಯ ಆಗಿ ಮಾಯಿಲರ್‌ಲಿ ಇತಿಯಾಸ (Legend)ಒಂದ್ಟು. ಅದರ ಸಣ್ಣ ರೂಪ ಹೀಂಗುಟ್ಟು

'ಒಂದಾನೊಂದು ಕಾಲಲಿ ಮಾಯಿಲರ್‌ದೆ ಸಾಮ್ರಾಜ್ಯ ಇತ್ತ್. ಅದರ್‌ಲಿ ಒಬ್ಬ ಮಾಯಿಲರ ದೊರೆ ಇತ್ತ್ ಬಾರಿ ದೈರ್‌ಯ ಇರವನು, ಸೂರನೂ ಆಗಿತ್ತ್. ಅಂವ ಒಮ್ಮೆ ಅಂವನ ಸೈನಿಕರೊಟ್ಟಿಗೆ ಜೈನ ಬಲ್ಲಾಳನಕ್ಕಲೆ ಗೂಡೆ ಕೇಳಿಕೆ ಹೋತ್. ಇದರ್‌ಂದಾಗಿ ಬಲ್ಲಾಳಂಗೆ ಅವ್ಮಾನ ಆತ್. ಹಾಂಗೇತೇಳಿ ಗೂಡೆ ಕೊಡ್ದುಲೆಂತೇಳಿ ಹೇಳಿಕೆ ಅವಂದ ಆತ್ಲೆ, ಅಂವ ಒಂದ್ ಉಪಾಯ ಮಾಡ್ತ್. ಮಾಯಿಲರಸು ಬಾಕನ ಬಾರಿ ದೊಡ್ಡ ಚಪ್ಪರ ಹಾಕ್ಸಿತ್, ಇಜ್ಜಲ್‌ಲಿ ನೆಲ್ಲಿಕಾಯಿ ಹರ್‌ಂಡಿಸಿ, ಅದರ ಮೇಲೆ ಮೊಂದ್‌ರಿ ಹಾಕ್ಸಿತ್ ದಿಬ್ಬಣ ಬಂದವು ಮೊಂದಿರ್‌ಲಿ ಕುದ್ರುಕಾಕನ, ಹೊಣ್ಕಿ ಬಿದ್ದೊ. ಬಲ್ಲಾಳನ ಕಡೆವು ಬಿದ್ದವರ ಹೊಡ್ದ್ ಹಾಕಿದೊ.

ಈ ಐತಿಹ್ಯ ಮಾಯಿಲರ ಪಾಪದ ಮನ್ಸ್‌ನ, ಒಂದ್ ಕಾಲಲಿ ಅವರು ಏರ್‌ದ ಎತ್ತರನೂ ಹೇಳ್ದೆ. ಇಂತ ಇತಿಯಾಸದ ಬಗೆಗೆ ಮಾಯಿಲರಿಗೆ ಬಾರಿ ಹೆಮ್ಮೆ ಉಟ್ಟು. ಅವರ್‌ಲಿ ಬಳಕೆಲಿರುವ ಇನ್ನೊಂದು ಕತೆನ ಪ್ರಕಾರ ಮಾಯಿಲ್ತಿ ಮಾಯಿಲಂದ ಬಲ ಜಾಸ್ತಿ. ಹಂಗಾಗಿ ಮಾಯಿಲರ ಕುಟುಂಬ ವೆವಸ್ತೆಲಿ ಹೆಣ್ಮಕ್ಕಳಿಗೆ ಜಾಸ್ತಿ ಮೊರ್‌ಯಾದಿ ಇತ್ತ್‌ಂತೇಳ್ವಂತದ್ ಗೊತ್ತಾದೆ. 'ಹೊರೆಗೆನ ದೇಸಗಳ್‌ಲಿ ಮಾಯಿಲರ್ ಈಗಲೂ ಹೆಸ್ರ್ ಪಡ್ದ ಅರಸರಾಗಿ ಬೊದ್ಕುತ್ತೊಳೊಂತ ಅವು ಈಗಲೂ ನಂಬುವೆ. ಮಾಯಿಲರ್ ದೊಡ್ಡ ಕಾಡ್‌ನ ಅಡ್ಕ ಜಾಗೆಗಳ್‌ಲಿ ಬೊದ್ಕುವೆ. ಊರ್‌ನ ದನಿಗಳ ಮನೆಲಿ ಇವು ದಿನ ಕೆಲ್ಸಕ್ಕೆ ಕೂಲಿ ಕೆಲ್ಸ ಮಾಡ್‌ವೆ. ಇವ್ಕೆ ಯಾರಿಗೂ ಕೂಡ ಸೊಂತ ಆಸ್ತಿ ಇಲ್ಲೆ. ಸರ್‌ಕಾರ ಕೊಟ್ಟ 5 ಸೆಂಟ್ಸ್ ಮನೆಗಳ್‌ಲಿ ಕೆಲು ಬೊದ್ಕುವೆ, ಸುಮಾರ್ ಜೆನ ಅವರ ತಲೆಮಾರ್‌ಗಳ್‌ಂದ ಬಂದಿರ್‌ವ ಹಳೆ ಮನೆಗಳ್‌ಲಿ ಬೊದ್ಕುವೆ. ಮಾಯಿಲರ ಮನೆಗಳ 'ಪಡಂಪೆ'ತೇಳಿ, 'ದಟ್ಟಿಗೆ'ತೇಳಿದೂ 'ಪಟ್ಟಿ'ತೇಳಿದೂ ಕರ್‌ದವೆ. ಕಾಡ್‌ಂದ ಜೇನ್, ಹಣ್ಣ್ ತಂದವೆತೇಳ್ರೂನು ಅದೇ ಇವರ ಮುಕ್ಯ ಬೊದ್ಕುನ ಕೆಲ್ಸ ಅಲ್ಲಾ.

ಮಾಯಿಲರ ಮೈಕಟ್ಟ್, ಗಟ್ಟಿಮುಟ್ಟಾಗಿ ಇದ್ದ್ ಬಾರಿ ಲಾಯ್ಕ್ ಉಟ್ಟು. ಅವರ ಮೈನ ಬಣ್ಣ ಕಪ್ಪು, ಕುದೊಲ್ ಸುಮಾರಾಗಿ ಗುಂಗುರು. ದೊಡ್ಡ ಕೆಬಿ ಮತ್ತೆ ಎದೆ, ತಿಳಿಅರ್‌ಸಿನ ಕಣ್ಣ್, ಯಗೊಳು ಎಲಾಡ್ಕೆ ತಿಂದ್ ಕೆಂಪಾದ ದಪ್ಪ ತುಟಿಗ, ಸೊಂಟಕ್ಕೆ ಕಪ್ಪು ಬಣ್ಣದ ನೂಲು ಸುತ್ತಿ, ಅದ್ಕೆ ಕೋಮಣ ಕಟ್ಟುವೆ. ಉದ್ದ ತಲೆ ಕುದೊಲು ಮೇಲೆ ಕಮ್ಮುನ ಹಾಳೆಲಿ ಮಾಡ್ದ 'ಮೊಡ್ಪಾಳೆ'ನ ಇಸುವೆ. ಮಾಯಿಲ್ತಿಗಳ್‌ಲಿ ರಪ್ಪ ಗುರ್‌ತ ಹಿಡಿವಂತದ್‌ತೇಳ್ರೆ ಅವರ ಗಂಟ್ಲ್‌ಲಿ ಇರ್‌ವ ಕಪ್ಪುನ ಮಣಿಸರ, ದಪ್ಪ ಮೊಲೆಗಳ ಇವು ಸೀರೆ ಸೆರ್‌ಗ್‌ಲಿ ಮುಚ್ಚಿಕಂಡವೆ. ಪ್ರಾಯದ ಅಜ್ಜಿಕ ರವ್‌ಕೆ ಹಾಕುದುಲೆ ಕಿರಿ ಪ್ರಾಯದವು ಹಾಕುವೆ. ಕೆಬಿಗೆ ತಾಳೆ ಓಲಿಂದ ಮಾಡ್ದ 'ಓಲೆ' (Made up of Palm Leaf) ಹಾಕುವೆ. ಸೆರ್‌ಗ್‌ನ ಮುಂದೆ ತಂದ್ ಸೊಂಟಕ್ಕೆ ಅಡ್ಡ ಎಳ್ದ್‌ಕಟ್ಟುವೆ. ಉಂಬೊದು ತಿಂಬೊದರ್‌ಲಿ ಮಾಯಿಲರದ್ದೇ ತೇಳ್ವ ವಿಸೇಸ ತಿನ್ಸ್‌ಗ ಏನಿಲ್ಲೆ. ಊರ್‌ನ ದುಡ್ಡಿದ್ದವರ ಮನೆಗಳ್‌ಲಿ ಏನಾರ್ ಸಿಕ್ಕಿರೆ ಅದರ ತಂದು ತಿಂಬೊತ್ತಿದ್ದೊ. ಜಂಬರಗಳ್‌ಲಿ ಉಂಡು ಇಟ್ಟ ಬಾಳೆಲೆಗಳ್‌ಂದ ಒಳ್ದದರ ತಂದ್ ತಿಂಬೊತ್ತಿದ್ದೊ. ಬೇರೆ ದಿನಗಳ್‌ಲಿ ಬೊಳ್ಪಿಗೆ ಅಕ್ಕಿಂದ ಮಾಡ್ದ ಗಂಜಿನ ಉಂಡವೆ. ಮದ್ಯಾನ್ನಾ ಗೈಯ್ಯುವರ ಮನೆಲಿ ಉಂಡವೆ. ಇರ್‌ಲ್‌ಗೆ ಹುಗ್ಗೆ ಮತ್ತೆ ಏನಾರ್ ಮಾಸ ಇಲ್ಲರ್ ತರಕಾರೀ ಸಾರ್ ಮಾಡ್ವೆ. ಎಲ್ಲಾ ಮಾಯಿಲರ್ ಮಾಸ ತಿಂಬೊತ್ತಿದ್ದೊ.ಚಾಳಿ ಮರ ಮತ್ತೆ ಚಾಳೆಂದ ತೆಗ್ದ ಕಳ್ಳ್ (Toddy) ಮಾಯಿಲರ್‌ಲಿ ತುಂಬ ಹೆಸ್ರ್‌ವಾಸಿ,

ಗ್ಯಾರ್‌ದನ್ನ್‌ಂದ ಅವ್ವೆ ಮಾಡ್ದ ಸರಾಯನ ಮಾಯಿಲರ್ ಹೊತ್ತ್ ಸಿಕ್ಕಿದಾಂಗೆಲ್ಲ ಕುಡ್ದವೆ. ಇದರ ಗಂಡಸರ್, ಹೆಳ್ಮಕ್ಕ ಮತ್ತೆ ಮಕ್ಕಳೂ ಕುಡ್ದವೆ.

ಹುಟ್ಟುದು, ಗೂಡೆ ರುತ ಆದು, ಮೊದ್‌ವೆ, ಸಾವು ಇಂತ ವಿಸೇಸ ಸಂದರ್ಬಲಿ ಮಾಯಿಲರ್, ಕೋಳಿ, ಮೀನ್, ಹಂದಿ ಮಾಸನ ಗೈಪು ಮಾಡಿ ನೆಂಟ್ರ್‌ಗಳಿಗೆ ಇಕ್ಕುವೆ. ಹೆಂಡ ಕುಡೆದು ಕೂಡ ಇಂತ ದಿನಗಳ್‌ಲಿ ಉಟ್ಟು. ಆದರೆ ದನದ ಮಾಸದ ಬಳಕೆ ಈಗ ಇಲ್ಲೆ. ಇದೊಂದು ಬುಟ್ಟರೆ ಒಳ್ದಂಗೆ ಮಾಯಿಲರ ತಿಂಬ ಕ್ರಮಲಿ ದೊಡ್ಡ ಬದಲಾತ್‌ಲೆ.

ಮಾಯಿಲರರೊಳಗೆ ಮತ್ತೆ ವಿಬಾಗ ಉಟ್ಟು ಅದರ ಅವು 'ಬರಿ' ತೇಳ್ವೆ (ಬೊಳಿ). ಇದ್ ಅಯ್ಯೆಂದ ಮಕ್ಕಳಿಗೆ ಬಂದದೆ. ಈ 'ಬರಿ' ಬೇರೆ ಜೆನಾಂಗದವರ್‌ಲಿ 'ಬೊಳಿ'ತೇಳಿ ಬಳಕೆಲುಟ್ಟು.ಮಾಯಿಲರ್‌ಲಿ ಒಟ್ಟು ಎಸ್ಟ್ 'ಬೊಳಿ'ಗ ಒಳಾಂತ ಗೊತ್ತ್‌ಲೆ. ಒಟ್ಟು ಎಸ್ಟ್ ಬೊಳಿ ಉಟ್ಟುಂತೇಳ್ವಂತದ್ದರ ಬಗ್ಗೆ ಮಾಯಿಲರ್‌ಲಿ ಒಮ್ಮತ ಇಲ್ಲೆ. ಹೆಚ್ಚಿನವರ ಲೆಕ್ಕಲಿ ಅವರೊಳಗೆ 18 'ಬೊಳಿ'ಗ ಒಳೊ. ಕ್ಷೇತ್ರ ಕಾರ್ಯಲಿ ಸಿಕ್ಕಿದ ಎಂಟ್ 'ಬೊಳಿ'ಗಳ ಹೆಸ್ರ್ ಹಿಂಗುಟ್ಟು. 1. ಬಂಗೆರೆ ಬರಿ, 2. ಎಲಿಕಣ್ಣೆ ಬರಿ, 3. ನಾಯರೆ ಬರಿ, 4. ನಂದರೆ ಬರಿ, 5. ಕಾಡಾರಣೆ ಬರಿ, 6. ಕೂಡಾರಣೆ ಬರಿ, 7. ಪೆರ್ಬಣ್ಣೆ ಬರಿ, 8. ಗುಂಡರೆಣ್ಣೆ ಬರಿ.

ಇದರ್‌ಲಿ ಕೂಡ ಒಳ್ಳ ಬೊಳಿ, ಹಾಳ್‌ಬೊಳಿತೇಳ್‌ವಂತದ್ ಉಟ್ಟು. ಮಾಯಿಲರ ಲೆಕ್ಕಲಿ 'ಬಂಗಾರ್ ಬೊಳಿ' ಬೇರೆ ಎಲ್ಲ 'ಬೊಳಿ'ಗಳ್‌ಂದ ಒಳ್ಳದ್. ಆ ಬೊಳಿನ ಹೈದಂಗಳಿಗೆ ಗೂಡೆ ಕೊಡ್‌ದಕು, ಆ ಬೊಳಿಂದ ಗೂಡೆ ತಾದಕು ಮಾಯಿಲರ್ ಜಾಸ್ತಿ ಮನ್ಸ್ ಮಾಡ್‌ವೆ. ಹಾಂಗೆ 'ಕೆಟ್ಟಬೊಳಿ', 'ಹಾಳ್‌ಬೊಳಿ'ತ ನೆನ್‌ಸುವೆ 'ಗುಂಡರೆಣ್ಣೆ ಬೊಳಿ'ನೊಟಿಗೆ ಸಮ್ಮಂದ ಮಾಡಿಕೆ ಮಾಯಿಲರ್ ಹೆದ್ರುವೆ. ಹಿಂಗಾಗಿ ಗುಂಡರೆಣ್ಣೆ ಬೊಳಿನ ಗೂಡೆಗಳಿಗೆ ಮೊದ್‌ವೆ ಆಕೆ ಬಜ್ಜ ಆದೆ. 'ಗುಂಡರೆ ಬರಿತ ಪೊಣ್ಣು ಕನತ್ತಂಡ ಇಲ್ಲ್ ಗುಂಡಾಂತ್ರ ಪೋವು' (ಅರೆಬಾಸೆ ಅನುವಾದ : ಗುಂಡನ ಬೊಳಿಂದ ಗೂಡೆ ತಂದರೆ, ಮನೆ ಗುಂಡಾಂತ್ರ ಹೋದು) ತೇಳ್‌ವ ಒಂದ್ ನುಡಿ ಕಟ್ಟು ಕೂಡ ಉಟ್ಟು.

ಮೇಲೆ ಹೇಳ್‌ದ 'ಬೊಳಿ'ಗಳ್‌ಲಿ 5ನೇದ್ ಮತ್ತೆ 6ನೇದರ 'ಕೂಡು ಬೊಳಿ'ತ ಕರ್‌ದವೆ. ಇದರ ಹೆಚ್ಚಾಗಿ ಮಾಯಿಲರ್ ಒಂದೇ ಬುಡಂತ ನೆನ್‌ಸುವೆ ಇದೆರ್‌ಡ್ ಬೊಳಿಗಳ ಒಳೆಗೆನ ಹೈದ-ಗೂಡೆಗ, ಅಣ್ಣ ತಂಗೆಕತೇಳ್ವ ನಂಬಿಕೆಂದಾಗಿ ಅವರೊಳಗೆ ಮೊದ್‌ವೆ ನಡೆವಂಗಿಲ್ಲೆ. ಒಳ್ದಂಗೆ ಒಂದೇ ಬೊಳಿನ ಒಳಗೇ ಮೊದ್‌ವೆ ಆಕಾಗದ್. ಹಂಗೆ ನೋಡ್ರೆ ಮಾಯಿಲರ್‌ಲಿ 'ಬೊಳಿ'ನೇ ಮೊದ್‌ವೆ ನಿಗಂಟ್ ಮಾಡ್‌ವಂತ ಮುಕ್ಯ ವಿಸಯ. ಮೊದ್‌ವೆಲಿ ಬುಟ್ರೆ ಬೇರೆ ಕಡೆ 'ಬೊಳಿ'ನ ಸುದ್ದಿ ಎಲ್ಲಿ ಕೂಡಾ ಬಾದುಲೆ. ಬೊದ್‌ಕುದರ್‌ಲಿ, ಊರ್‌ಕಟ್ಟ್‌ಲಿ, ಸಾಂಸ್ಕೃತಿಕ ಆಚರಣೆಗಳ್‌ಲಿ, ದೆವ್ವ-ದೇವರ ಕ್ರಮಲಿ ಎಲ್ಲಿ ಕೂಡ 'ಬೊಳಿ'ನ ಹೆಸ್ರ್‌ಲಿ ಅದ್ ನಡಿದು ಕಾಂಬಕೆ ಸಿಕ್ಕುದುಲೆ.ಮೊದ್‌ವೆಲಿ ಮಾತ್ರ ಅದ್ ಮುಕ್ಯ ಬೇಕಾದೆ, ದಾರೆನ ಹೊತ್ತುಲಿ ಮೊದುಮಕ್ಕಳ 'ಬೊಳಿ'ನ ಎಲ್ಲವ್ಕೂ ಕೇಳುವಂಗೆ ಜೋರಾಗಿ, ಎತ್ತರ ಸೊರಲಿ ಕರ್‌ದ್ ಹೇಳ್ವೆ. ಬೇರೆ ಜಾತಿಂದ ಮಾಯಿಲ ಜಾತಿಗೆ ಯಾರಾರ್ ಸೇರ್‌ರೆ, ಅಂವನ ಯಾರ್ ಸೇರ್‌ಸಿಕಂಡದೆ, ಅಂವನ ಬೊಳಿನೇ ಸೇರ್‌ದವಂಗೆ ಬಂದದೆ. ಮಾಯಿಲರ ಒಳಾಡಳಿತದ ಮುಕಂಡ 'ಮಂಡಿಕರ' ನ ಎದ್‌ರ್‌ಗೆ ಈ 'ಬೊಳಿ' ಕೊಡುವ ಕೆಲ್ಸ ನಡ್ದದೆ.

**ಮಾಯಿಲರ ಮೊದ್‌ವೆ** : ಮಾಯಿಲರ ಮೊದ್‌ವೆ ಸಂಪ್ರದಾಯದಂಗೆ ನಡ್ದದೆ. ಸಾಮಾನ್ಯ ಆಗಿ ಹೈದ ಅಯ್ಯೆನ ಅಣ್ಣತಮ್ಮಂದರ ಮಗಕ್ಕಳಲಿ ಮೊದ್‌ವೆ ಆದೆ. ಗೂಡೆನೂ ಹಾಂಗೆ ಅಯ್ಯೆನ ಅಣ್ಣತಮ್ಮಂದರ ಮಜ್ಜದರ್‌ಲಿ ಮೊದ್‌ವೆ ಆದೆ. ಸೋದರ ಮಾಂವನ ಕೂಡಾ ಮೊದ್‌ವೆ ಆವ ಕ್ರಮ ಉಟ್ಟು. ಅಪ್ಪನ ಅಕ್ಕತಂಗೆಕಳ ಮಜ್ಜ ಅಲ್ಲರ್ ಮಗಳ ಮೊದ್‌ವೆ ಆವ ಕ್ರಮ ಇದ್ದರೂ ಅದ್ ತುಂಬಾ ಕಮ್ಮಿ. ಇದಿತ್ಲಾರ್ ಹೈದನ ಅಪ್ಪ ಒಳ್ಳ ಬೊಳಿನೊಂದರ ಹುಡ್ಕಿ ಅಲ್ಲಿ ಗೂಡೆ ಹುಡ್ಕಿದೆ. ಗೂಡೆನ ಮನೆಗೆ ಹೈದನ ಮನೆನ ಹಿರಿಯವ್ ಹೋಗಿ ಮೊದ್‌ವೆ ನಿಗಂಟ್ ಮಾಡ್ವೆ. ಮೊದ್‌ವೆ ನಿಗಂಟ್‌ಗೆ 5 ಎಲೆ, ಒಂದ್ ಅಡ್ಕೆ ಮತ್ತೆ ನಾಕಾಣೆ ದುಡ್ಡು ಬೇಕಾದೆ. ಮೊದ್‌ವೆ ನಿಗಾಂಟಾದರೆ ಹೈದನ ಕಡೆವು ಗೂಡೆನ ಕಡೆಯವ್ಕೆ ಒಂದ್ ಮುಡಿ ಬತ್ತ ಕೊಡೊಕು. ಮತ್ತೆ ಮೊದೊಳಿಗೆನ ಒಬ್ಬಳ ಬುಟ್ಟು ಒಳ್ದವು ಮೊದುಮಜ್ಜನ ಮನೆಗೆ ಬಂದ್ ಗಮ್ಮತ್ ಉಂಡವೆ. ಮೊದ್‌ವೆನ ಹಿಂದೆನ ದಿನ ಮೊದುಮಕ್ಕಳಿಗೆ ಅರ್‌ಸಿನ ಪೂಜುವ ಕ್ರಮ ಉಟ್ಟು, ಮುತ್ತೈದೆಗ ಅವರ ಮೀಸುವೆ. ಮೊದ್‌ವೆನ ದಿನ ಹೈದನ ಕಡೆವು ದಿಬ್ಬಣ ಸಮೇತ ಮೊದೊಳಿಗೆನ ಮನೆಗೆ ಹೋಕು. ದಾರೆನ ಹೊತ್ತುಲಿ ಮೊದುಮಜ್ಜನ ಅಕ್ಕಿ ಮುಡಿನ ಮೇಲೆ ಕುದ್‌ರ್‌ಸಿ ಸೋದರ ಮಾಂವ ದಾರೆ ಹೊಯ್ದದೆ. ಮೊದ್‌ವೆನ ಸಂಕೇತ ಆಗಿ ತಾಳಿನ ಮೊದೊಳಿಗೆನ ಗಂಟ್ಲ್‌ಗೆ ಕಟ್ಟುವೆ. ಕೆಲು ಕಡೆಗಳ್‌ಲಿ ಸೋದರ ಮಾಂವನೇ ಮೊದೊಳಿಗೆಗೆ ತಾಳಿ ಕಟ್ಟಿದೆ. ಇನ್ನು ಕೆಲುಕಡೆ ಮೊದುಮಜ್ಜನೇ ಕಟ್ಟಿದೆ. ಇದಾದ ಮೇಲೆ ಎಲ್ಲವೂ ಮೊದ್‌ವೆ ಚಪ್ಪರದ ಅಡಿಲಿ ಉಂಡವೆ. ಊಟಕ್ಕೆ ಸಾಮಾನ್ಯ ಆಗಿ ಮಾಸ ಮತ್ತೆ ಕಳ್ಳ್ ಇದ್ದದೆ. ಮೊದುಮಕ್ಕಳ ಒಂದೇ ಬಟ್ಟ್‌ಲ್‌ಲಿ ಉಂಬಕೆ ಒತ್ತಾಯ ಮಾಡ್ವೆ, ಮೊದ್‌ವೆನ ಊಟದ ಕರ್‌ಚ್‌ನ ಮೊದುಮಜ್ಜನ ಕಡೆವೇ ನೋಡಿಕಂಕುತಿದ್ದರೂ ಈಗೆಲ್ಲಾ ಅದರ ಎರ್‌ಡೂ ಕಡೆವೂ ಸರಿಪಾಲ್‌ಮಾಡಿಕಂಡವೆ. ಮೊದ್‌ವೆ ದಿನನೇ ಮೊದುಮಕ್ಕ ಮೊದುಮಜ್ಜನ ಮನೆಗೆ ಹೋದವೆ. ಮೊದುಮಜ್ಜನ ಮನೆ ಹುಗ್ಗಿಕೆ ಮುಂದೆ ಮೊದುಮಜ್ಜನ ಅಕ್ಕತಂಗೆಕ ಬಾಗ್ಲ್‌ಲಿ ಅಡ್ಡ ನಿತ್ತ್ ಹುಟ್ಟುವ ಮಗಳ ಅವರ ಮಜ್ಜಂಗೆ ಕೊಡುವಂಗೆ ಒತ್ತಾಯ ಮಾಡ್ವೆ. ಮೊದ್‌ವೆ ಆದ ಐದನೇ ದಿನಕೆ ಒಸಿ ತುಪ್ಪನ ತಕಂಡ್ ಮೊದುಮಕ್ಕ, ಮೊದೊಳಿಗೆನ ತವ್ರು ಮನೆಗೆ ಹೋಗಿ, ಒಂದ್ ದಿನ





ಅಲ್ಲೇ ಒಳ್ದ್ ಬರಕು. ಎಸ್ಟೋ ಸರ್‌ತಿ ಹಿಂಗೆ ಕ್ರಮಪ್ರಕಾರ ಮೊದ್‌ವೆ ಆದುಲೆ. ಮಾಯಿಲ ಹೈದಂಗ ಅವುಕೆ ಇಸ್ಟ ಆದ ಗೂಡೆಗಳೊಟ್ಟಿಗೆ, ಓಡಿ ಹೋದವೆ. ಕೆಲು ದಿನ ಕಳ್ದ ಮೇಲೆ ಮತ್ತೆ ಅವರ ಬೊಟ್ಟಕೆ ಬಂದವೆ. ಆಗ ಮಾಯಿಲರ ಹಿರಿಯವು ಎಲ್ಲಾ ಸೇರಿ ಅವರ ವಿಚಾರ್‌ಸುವೆ. ಆಗ ಹೈದನೂ ಗೂಡೆನೂ ಜಾತಿನೆಂಟ್ರ್‌ಗಳಿಗೆ ಒಂದ್ ಮುಡಿ ಅಕ್ಕಿ ಮತ್ತೆ ಹಂದಿನ ತೊಪ್ಪುಕಾಣಿಕೆ ರೂಪಲಿ ಕೊಡೊಕಾದೆ. ಇದಾದ ಮೇಲೆ ಹಿರಿಯರ್ ಅವರ ತೊಪ್ಪುನ ಮಾಪು ಮಾಡಿ, ಅವರಿಬ್ಬರ 'ಕೂಡಾವಳಿ' ಮಾಡಿಕೊಟ್ಟವೆ(ಕೈ ಹಿಡ್ಸುದು). ಕೂಡಾವಳಿಲಿ ದಾರೆನ ಕ್ರಮ ಇಲ್ಲೆ. ಹೈದನ ಗೂಡೆನ ಕೈಸೇರ್‌ಸಿ ಬುಟ್ಟವೆ. ಇಲ್ಲಿ ಹೈದನ ಕಡೆವು, ಗೂಡೆಗೆ ಒಂದ್ ಹೊಸ ಸೀರೆನ ಕೊಡೊಕು.

ಮಾಯಿಲರ್‌ಲಿ ಗಂಡ್ ಮಕ್ಕ ಒಂದರ್‌ಂದ ಹೆಚ್ಚಿಗೆ ಹೆಣ್ಣ್‌ಗಳ ಇಸಿಕಂಡವೆ. ಸಾಮಾನ್ಯಾಗಿ ಹೆಣ್ಣ್‌ನ ತಗೆನೇ 'ಕೂಡಿಕೆ' ಮಾಡ್ಕಂಡವೆ. ಗಂಡ ಸತ್ತ ಹೆಣ್ಮಕ್ಕಳಿಗೆ ಮತ್ತೆ ಮೊದ್‌ವೆ ಮಾಡಿಕಂಬ ಹಕ್ಕುಟ್ಟು. ತೀರಿ ಹೋದ ಗಂಡನ ಅಣ್ಣತಮ್ಮಂದರ್‌ಲಿ ಅಲ್ಲರ್ ಬೇರೆ ಯಾರ್‌ನಾರ್ ಅವುಳು ಕೂಡಿಕೆ ಮಾಡಿಕಂಕ್. ಮೊದ್‌ವೆ ಬುಡ್ಗಡೆಗೂ ಮಾಯಿಲರ್‌ಲಿ ಅವಕಾಸ ಉಟ್ಟು. ಹೆಣ್ಣ್‌ಗೆ ಬುಡ್ಗಡೆ ಬೇಕಾರ್ ಅದ್ ಮೊದ್‌ವೆ ಕರ್‌ಚ್‌ನ ಗಂಡಂಗೆ ಕೊಟ್ಟ ಮೇಲೆನೇ, ಬುಡ್ಗಡೆ ಮಾಡ್ದು. ಒಮ್ಮೆ ಮೊದ್‌ವೆ ಆಗಿದ್ದರೆ ಮೊದ್‌ವೆ ಹಕ್ಕ್‌ನ ತೆಗೆಯದೆ ಅದ್ ಬೇರೆ ಮೊದ್‌ವೆ ಆಗುವಂಗಿಲ್ಲೆ. ಬುಡ್ಗಡೆ ಹೊತ್ತ್‌ಲಿ ಅವುಳಿಗೆ ಮಕ್ಕ ಇದ್ದರೆ, ಮಕ್ಕಳ ಅಪ್ಪನೊಟ್ಟಿಗೆ ಬುಟ್ಟವೆ. ಎರ್‌ಡ್‌ನೆ ಮೊದ್‌ವೆಲಿ ದಾರೆ ಇರ್‌ದುಲೆ ಅದ್ ಕೂಡಾವಳಿ(ಕೈ ಹಿಡ್ಸುದು) ರೂಪಲಿದ್ದದೆ. ಕರಿಮಣಿ ಮತ್ತೆ ತಾಳಿನ ಕಟ್ಟುವೆ. ಸಾಮಾನ್ಯ ಆಗಿ ಗಂಡನ ಕುಡ್ಕತನ, ಪೆಟ್ಟ್, ಮತ್ತೆ ಬೇರೆ ಹೆಣ್ಮಕ್ಕಳ ಸಮ್ಮಂದ ಬುಡ್ಗಡೆಗೆ ಕಾರಣ. ಹೆಣ್ಣ್ ಬೇರೆ ಗಂಡ್‌ಮಕ್ಕಳೊಟ್ಟಿಗೆ ಸಮ್ಮಂದ ಇಸಿಕಂಡಿದ್ದರೆ ಆಗ ಗಂಡನೂ ಅದರ ಬುಡಕ್. ಈ ಎಲ್ಲಾ ಅವಕಾಸಗ ಇದ್ದರೂ ಕೂಡ ಈಗ ಮಾಯಿಲರ್‌ಲಿ ಮೊದ್‌ವೆ ಬುಡ್ಗಡೆಗ ಕಮ್ಮಿ ಆವುಟು.

**ಮಾಯಿಲರ ಕುಟುಂಬ ವೆವಸ್ತೆ :** ಮೊದ್‌ವೆ ಆದಮೇಲೆ ಮೊದುಮಕ್ಕ ಹೈದನ ಅಪ್ಪನ ಮನೆಲೇ ಬೊದ್ಕುವೆ. ಸಾಮಾನ್ಯ ಆಗಿ ಮಾಯಿಲರ್‌ದ್ ಕೂಡುಕುಟುಂಬ. ಒಂದೇ ಮಾಡ್‌ನಡಿಲಿ ಸುಮಾರ್ ಕುಟುಂಬಗ ಇದ್ದವೆ. ಆದರೆ ಆಸ್ತಿನ ಹಕ್ಕ್ ಇಲ್ಲದಿರ್‌ದಂದ, ಕುಟುಂಬಂದ ಹೊರಗೆ ಹೋವ ಕೆಲ್ಸನೂ ಬೇಗನೇ ಆದೆ. ಮೊದ್‌ವೆ ಆದ ಮೇಲೆ ಹೆಣ್ಣ್‌ನೊಟ್ಟಿಗೆ ಮಜ್ಜನೂ ಬೇರೆ ಮನೆ ಕಟ್ಟಿಕಂಡ್ ಬೊದ್ಕಿರೆ, ಅದ್ಕೆ ಹಿರಿಯವು ಯಾದೇ ಅಡ್ಡಿ ಮಾಡ್ದುಲೆ. ವಿಸೇಸ ಆಗಿ ಸಾಮಾಜಿಕ, ದೆವ್ವ ದೇವ್ರ ಕಾರ್‌ಯ, ಸಾಂಸ್ಕೃತಿಕ ಆಚರಣೆಗಳ್‌ಲಿ ಎಲ್ಲವೂ ಒಟ್ಟಾದವೆ. ಅಪ್ಪ-ಅಯ್ಯೆ ಮತ್ತೆ ಮೊದ್ವೆ ಆಗದ ಮಕ್ಕ, ಮಾಯಿಲರ ಕುಟುಂಬ ವೆವಸ್ತೆನ ಮೂಲ, ಮನೆನ ಹಕ್ಕ್ ಅಪ್ಪಂದ ದೊಡ್ಡ ಮಜ್ಜಂಗೆ ಬಂದದೆ. ಮಕ್ಕ ಸಣ್ಣೊವಾಗಿದ್ದರೆ ಸಣಪನ(ಅಪ್ಪನ ತಮ್ಮ) ಕೈಗೆ ಹೋದೆ. ಹೆಣ್ಣು ಮಕ್ಕ ಮೊದ್‌ವೆಯಾಗಿ ಹೋದ ಮೇಲೆ ಮನೆನ ಹಕ್ಕ್ ಕಳ್ಕಂಡವೆ. ಮಾಯಿಲರ್ ಅವರ ಕುಲದೆವ್ವಗಳ ಇಸಿಕಂಡ್ ಪೂಜೆ ಮಾಡ್‌ವ ಮನೆನ "ಐನ್' ಮನೆತ ಕರ್‌ದವೆ. ಈ ಐನ್ ಮನೆ ಕೇರಳದ ನಾಯರ್ ಜೆನಾಂಗದವರ ತರವಾಡು ಮನೆನಂಗೆ ಇದ್ದದೆ. ಐನ್ ಮನೆನ ಅದಿಕಾರ ಪ್ರಾಯದ ಲೆಕ್ಕಲಿ ಸಿಕ್ಕಿದೆ. ತುಂಬಾ ಹಿರಿಯೊವು ಈ ಮನೆನ ಮುಕಂಡ ಅಂವನ 'ಮುಕಾರ್‌ವೆ' ಅಲ್ಲರ್ 'ಮುಕಾರಿ'ತ ಕರ್‌ದವೆ. ಇವಂಗೆ ಅನುಬವನೂ ಇರೋಕು, ಕುಟುಂಬದ ವಿಸೇಸ ಆಚರಣೆಗಳಿಗೆಲ್ಲಾ ಇಂವ ಜೆನ ಸೇರ್‌ಸೋಕಾದೆ, ಹೇಳಿಕೆ ಕೊಡಕಾದೆ. ಅಗತ್ಯ ಬಿದ್ದರೆ ಕುಟುಂಬದವೆಲ್ಲಾ ಸೇರಿ, ಒಂದ್ ಕಡೆ ಕುದ್ದು; ಉಂಡು, ಮಾತ್‌ಕತೆ ಮಾಡಿ, 'ಮುಕಾರ್‌ವೆ' ಪಟ್ಟನ ಒಬ್ಬಂಗೆ ಕೊಡಕ್, ಇಲ್ಲರ್ ಒಬ್ಬಂದ ಅದರ ತೆಗ್ಯಾಕ್ ಕೂಡ. ಇದ್ಕೆ ಕುಟುಂಬದ ಸರ್‌ವರ ಒಪ್ಪಿಗೆ ಅಗತ್ಯ. ಮುಕಾರ್‌ವೆ ಅಂವನ ಪಾಸಾಡಿಗೆ ಒಬ್ಬನ ತಕಂಡದೆ. ಅವಂಗೆ 'ಮೂಂಡಿಕರೆ'ತ ಹೆಸ್ರ್ ಉಟ್ಟು. 'ಮುಕಾರ್‌ವೆ' ಹೇಳ್ದ ಕೆಲ್ಸಗ ಅಲ್ಲದೆ ಮುಕಾರ್‌ವೆ ಇಲ್ಲದಿರಿಕನ ಮುಕಾರ್‌ವೆನ ಕೆಲ್ಸನ ಮೂಂಡಿಕರ' ಮಾಡೊಕಾದೆ. ಇವಿಬ್ಬರ್ ಕುಟುಂಬದ ಸಮಸ್ಯೆಗಳ ಪರಿಹಾರ ಮಾಡೊವು, ನ್ಯಾಯ ತೀರ್‌ಮಾನ ಮಾಡೊವು ಆಗಿದ್ದವೆ. ಈ ಕಾರಣಕ್ಕೆ ಇವ್‌ಕೆ ಮಾಯಿಲರ ಒಳ ಆಡಳ್ತೆಲಿ ನ್ಯಾಯಾದೀಸನ(ನ್ಯಾಯ ಕೊಡಂವ) ಪಟ್ಟನೂ ಸಿಕ್ಕಿದೆ. ಹುಟ್ಟುದು ಮೊದ್‌ವೆ, ಸಾವು – ಇಂತಹ ಜಾತಿನ ಸಮ್ಮಂದದ ಆಚರಣೆಗಳ್‌ಲಿ ಮುಕಾರ್‌ವೆನ ಉಪಸ್ತಿತಿ ಬೇಕು. ಕುಟುಂಬದ ಎಲ್ಲೊವೂ ಮುಕಾರ್‌ವೆಗೆ ಮತ್ತೆ ಮೂಂಡಿಕರೆಗೆ ಎಲ್ಲಾ ತರದ ಮೊರ್‌ಯಾದಿ ಕೊಟ್ಟವೆ.

ಕುಟುಂಬದ ಸಮ್ಮಂದಗ ತುಂಬ ಸೂಕ್ಶ ಆಗಿದ್ದದೆ. ಕುಟುಂಬದ ಹಿರಿಯನ ಮಾತ್‌ಗೆ ಎಲ್ಲೊವೂ ಮೊರ್‌ಯಾದಿಕೊಟ್ಟವೆ. ಅಪ್ಪ-ಅಯ್ಯೆ-ಸಣಪಾ-ಸಣಂವ್ವ – ಈ ಸಮ್ಮಂದಗಳಿಗೂ ಮೊರ್‌ಯದಿ ಉಟ್ಟು. ಅಜ್ಜ ಮತ್ತೆ ಪುಳ್ಳಿಕಳ ಸಮ್ಮಂದಲಿ ಕುಸಾಲ್ ಇದ್ದದೆ. ಅತ್ತಿಗೆ-ಬಾವ-ಮೈದುನ-ನಾದಿನಿ – ಇವರೊಳಗೆ ಪ್ರೀತಿ ಮತ್ತೆ ಕುಸಾಲ್‌ನ ಸಮ್ಮಂದ ಇದ್ದದೆ. ಮಾಯಿಲರ್ ಮಾತಾಡ್‌ವ ತುಳು ಬಾಸೆಲಿ ಸಮ್ಮಂದದ ಮೂರು ತಲೆಮಾರ್‌ಗಳವರೆಗೆ ಹೇಳ್‌ವ ಪದಗ ಒಳೊ, ಅದೆಲ್ಲಾ ದ್ರಾವಿಡ ಪೊದ್ದತಿಗೆ ಹೊಂದ್‌ವಂಗೆ ಉಟ್ಟ್. ಮೂರು ತಲೆಮಾರ್‌ಗಳ್‌ಲಿ ಸುರುನ ಎರ್‌ಡ್ ತಲೆಮಾರ್‌ಗಳ್‌ಲಿ ಗಂಡು-ಹೆಣ್ಣ್ ವೆತ್ಯಾಸ ಹೇಳ್‌ವ ಪದಗೊಳೊ. ಮೂರ್‌ನೇ ತಲೆಮಾರ್‌ಲಿ ಪುಳ್ಳಿತೇಳ್ವ ಒಂದೇ ಪದ ಇದ್ದ್, ಅದ್ ಪುಳ್ಳಿಕಳ್‌ಲಿ ಗಂಡ್ ಮತ್ತೆ ಹೆಣ್ಣ್‌ಗೆ ಎರ್‌ಡಕ್ಕೂ ಒಂದೇ. ಪ್ರಾಯಲಿ ಹಿರಿಯವ್‌ಕೆ ಮತ್ತೆ ಕಿರಿಯವ್‌ಕೆ 'ಮಲ್ಲ ಮತ್ತೆ 'ಎಲ್ಯಾಯೆ'ತೇಳ್ವ ಪದಗಳ ಬಳ್‌ಸ್‌ವೆ. ಸಾಮಾನ್ಯ ಆಗಿ ಅವರವರ ಒಳಗೆನ ಕಾರಣಂದ ವೈಮನಸ್ ಬಂದ್ ಕುಟುಂಬಗ ಪಾಲಾದವೆ. ಈಗೀಗ ವಿಬಕ್ತ(ಪಾಲಾದ) ಕುಟುಂಬಗ ಜಾಸ್ತಿ ಅಗ್ತಾ ಒಳೊ.

ಮಾಯಿಲ ಹೆಣ್‌ಮಕ್ಕಳ 'ಮಾಯಿಲ್ತಿ' ತೇಳಿಯೊ ಕರ್‌ದವೆ.

ಕುಟುಂಬಲಿ ಇವರ ಸ್ಥಾನಮಾನ ಗಂಡ್‌ಮಕ್ಕಳಿಗೆ ಸರಿಸಮ ಆಗಿ ಉಟ್ಟು. ಸೋದರ ಮಾಂವ ಅಲ್ಲರ್ ಸೋದರ ಮಾಂವನ ಮಜ್ಜನನೆ ಮೊದ್‌ವೆ ಆವ Kinship Societyಗೆ ಇವು ಸೇರ್‌ದ್ದರ್‌ಂದ, ಇವರ್‌ಲಿ ಮೊದ್‌ವೆಗೆ ದೊಡ್ಡ ಸಮಸ್ಯೆಗ ಇಲ್ಲೆ. ಇಲ್ಲಿ ಜಾತಿಗೆ ಬೇಕಾಗಿ ಅವುಳು ಮಕ್ಕಳ ಹೆರಕಾದ ಅಗತ್ಯ ಇಲ್ಲದ ಕಾರಣ, ಅವುಳ ಲೈಂಗಿಕತೆಗೆ ಪಾವಿತ್ರ್ಯದ ಬೇಲಿ ಇಲ್ಲೆ. ಅದ್‌ಕೆ ಸುಮಾರ್ ಮಟ್ಟ್‌ಗೆ ಲೈಂಗಿಕ ಉಪದ್ರ ಇರ್‌ದುಲೆ. ದಿನ ಇಡೀ ಅದ್ ಗಂಡ್‌ಸ್‌ಗಳೊಟ್ಟಿಗೆ ದುಡ್ದದೆ. ಒಟ್ಟಿಗೆ ಮನೆ ವೆವಹಾರನು, ಅಡ್ಗೆ ವೆವಸ್ತೆನು ಮಾಡ್ದೆ. ಮಕ್ಕಳನು ಸಾಂಕಿದೆ, ಗಂಡ ಸತ್ತರೆ ಅದ್ ತಲೆ ಬೋಳ್ಸೊಕುಂತಿಲ್ಲೆ. ಅದರ ಬದಲ್ ಇನ್ನೊಬ್ಬನೊಟ್ಟಿಗೆ 'ಕೂಡಾವಳಿ' ಮಾಡಿಕಂಕ್(ಕೈ ಹಿಡ್ಸಿಕಂದು) ಮನ್ಸ್‌ಮಾತ್ರೆ ಗಂಡಂದ ಬುಡ್ಗಡೆ ತಕಂಕ್. ಕುಟುಂಬದ ಎಲ್ಲ ಸಾಮಾಜಿಕ ಆಚರಣೆಲಿನೂ ಸೇರಿಕಂಡದೆ. ದೆವ್ವದೇವ್ರುಗಳ ಆಚರಣೆಲಿನು ಗಂಡ್‌ಮಕ್ಕಳ ಆದರ್‌ಸಿದೆ, ಜೆನಪದ ಪೊದ್ಯ, ಕತೆ, ಕೊಣ್‌ತಲಿ ಅದರ್‌ದೆ ದೊಡ್ಡ ಪಾಲ್, ಅದ್‌ಕೆ ಇರ್‌ವ ಒಂದೇ ಅಡ್ಡಿತೇಳ್ರೆ ಅವ್ಳಿಗೆ 'ಮುಕಾರ್‌ವೆ' ಮತ್ತೆ 'ಮೂಂಡಿಕರೆ' ಆಕೆ ಆದ್ಲೆ. ಇದ್ ಬುಟ್ಟರೆ ಮಾಯಿಲ್ತಿಗ ಕುಟುಂಬದ ಗಂಡ್‌ಮಕ್ಕಳಿಗೆ ಸರಿಸಮ. ಉಂಬೊದು–ತಿಂಬೊದು–ಕುಡೆದರ್‌ಲಿ ಅದ್‌ಕು ಗಂಡ್‌ಮಕ್ಕಳಿಗು ಸಮಪಾಲ್ ಇದ್ದದೆ.

**ಮಾಯಿಲರ ಆಚರಣೆಗ :** ಬೊದ್ಕುನ ಹುಟ್ಟ್‌ಂದ ಸಾಯವಲ್ಲಿವರೆಗೆ ಸುಮಾರ್ ಆಚರ್ಣೆಗಳ ಮಾಯಿಲರ್ ಜಾಸ್ತಿ ಮುತುವರ್ಜಿಂದ ಆಚರ್‌ಸುವೆ. ಹೆಣ್ಣ್ ಬೊಸುರಿ ಆಗಿ ಏಳ್‌ನೇ ತಿಂಗಳ್‌ಲಿ, ಅವರ ತವ್ರು ಮನೆವು ಬಂದ್ ಅವರ ಮನೆಗೆ ಕರ್‌ಕಂಡ್ ಹೋಗಿ 'ಹೂ ಮುಡ್ಸುವ' ಕ್ರಮನ ಮಾಡ್ವೆ. ಊರ್‌ನ ಮುತ್ತೈದೆರ್ ಬಂದ್ ಬೊಸುರಿನ ತಲೆಗೆ ಬಗೆಬಗೆನ ಹೂವುನ ಮುಡ್ಸಿ, ಪೊದ್ಯ ಹೇಳ್‌ವೆ. ಬೇರೆ ಬೇರೆ ಬಗೆನ ತಿಂಡಿನ ಅದ್‌ಕೆ ತಿಂಬಕೆ ಕೊಟ್ಟವೆ. ಕುಟುಂಬದ ಎಲ್ಲೊವು ಒಟ್ಟು ಸೇರಿ, ಇದ್ಕೆ ಮುಂದೆ ತೀರಿ ಹೋದ ಹಿರಿಯವ್ಕೆ ಕೈಮುಗ್ದು ಬೊಸುರಿಗೆ ಸುಕದ ಹೆರ್‌ಗೆ ಆಗಲಿಂತ ಬೇಡಿಕಂಡವೆ. ಆ ದಿನ ಗಮ್ಮತ್ ಊಟದ ವೆವಸ್ತೆ ಇದ್ದದೆ. ಅಂದ್ ಮಾಸದೂಟನೂ ಮತ್ತೆ ಕಳ್ಳ್‌ನೂ ಕುಡ್ದವೆ. ಹೂ ಮುಡ್ಸಿದ ಹಬ್ಬಂದ ಮೇಲೆ ಅದರ ಬಾರಿ ಜಾಗ್ರತೆಲಿ ನೋಡಿಕಂಡವೆ. ಹೆರ್‌ಗೆ ಆವಲ್ಲಿವರೆಗೂ ಅದ್ ತವ್ರು ಮನೇಲೆ ಇರೋಕುಂತೇಳ್ವ ನಂಬಿಕೆ ಉಟ್ಟು.

ಹೆರ್‌ಗೆ ಆಗಿ 5 ದಿನ ಸೂತಕ ಆಚರ್‌ಸುವೆ. ಹುಟ್ಟಿದ ಐದ್‌ನೆ ದಿನಕ್ಕೆ ಊರ್‌ನ ಹೆಣ್ಮಕ ಒಟ್ಟು ಸೇರಿ, ಬಾಣಂತಿ–ಕೂಸುನ ಬೆಚ್ಚನೀರ್‌ಲಿ ಮೀಸುವೆ. ಕೂಸುನ ತೊಟ್ಟ್ಲ್‌ಗೆ ಹಾಕಿ ಹೆಸ್ರ್ ಇಸುವೆ. ಸಾಮಾನ್ಯವಾಗಿ ಅಜ್ಜೆನ ಹೆಸರ್‌ನ ಗಂಡ್ ಕೂಸ್‌ಗೂ, ಅಜ್ಜಿನ ಹೆಸ್ರ್‌ನ ಹೆಣ್ಣ್ ಕೂಸ್‌ಗೂ ಇಸುವೆ. ಇಲ್ಲಿ ಅಪ್ಪನ ಕಡೆನ ಅಜ್ಜ ಅಜ್ಜಿಕಳ ಹೆಸ್ರ್‌ನೆ ಇಸುವೆ. ಇದಾದ ಮೇಲೆ ಎಲ್ಲವೂ ಉಂಡವೆ. ಈ ಒಟ್ಟು ಆಚರ್ಣೆನ 'ಐದರ ಅಮೆ ತೆಗೆದು'ತೇಳ್‌ವೆ. ಹೆತ್ತವಳ/ಬಾಣಂತಿನ 40 ದಿನಗಳವರೆಗೆ ಜಾಗ್ರತೆಲಿ ನೋಡಿಕಂಡವೆ. ಆ ದಿನಗಳ್‌ಲಿ ಬೇರೆ ಬೇರೆ ಬಗೆನ ಚಿಗ್‌ರ್, ಬೇರ್ ಮತ್ತೆ ಕೆತ್ತೆಗಳ ತಂದ್ ಕಸಾಯ ಮಾಡಿ ಕುಡ್ಸುವೆ; ಅದರ ಸೊಂಟಕೆ ಸೀರೆ ತುಂಡುನ ಕಾಸಿ ಕಟ್ಟುವೆ. ಬೆಚ್ಚನೀರ್‌ಲಿ ಮೀಸುವೆ. ಕೂಸಿಗೆ ಮತ್ತೆ ಬಾಣಂತಿಗೆ ಕಾಯಿಲೆ ಬಂದರೆ ಸಾಮಾನ್ಯವಾಗಿ ಹಕ್ಕಲೆನ ಮಂತ್ರವಾದಿಂದ ಮಂತ್ರಿಸಿದ ಉರ್‌ಕು ಮತ್ತೆ ಬಸ್ಮನ ತಂದ್ ಹಾಕುವೆ. ಈಗೆಲ್ಲಾ ಹಕ್ಕಲೆನ ಆಸ್ಪತ್ರೆಗೆ ಹೋಗಿ ಮೊದ್ದ್ ತಂದವೆ. ಹಳ್ಳಿ ಮೊದ್ದ್ ಮತ್ತೆ ಮಂತ್ರವೈದ್ಯದ ಬಗ್ಗೆ ಮಾಯಿಲರಿಗೆ ಇನ್ನೂ ನಂಬಿಕೆ ಉಟ್ಟು.

ಗೂಡೆ ಸುರು ಮೈನೆರೆಕನ (ರುತು ಆಕನ) ಮಾಯಿಲರ್‌ಲಿ ವಿಸೇಸವಾದ ಆಚರ್ಣೆಗೊಳೊ. ಅವು ಇದರ ಮದಿಮಾಳ್ ಮದಿಮೆತೇಳ್ವೆ. ಮೈ ನೆರೆದಕೆ 'ಮುಳ್ಳು ಮೊಟ್ಟುನೆ'ತೇಳ್ವೆ. ಮೈನೆರ್‌ದ ಕೂಡ್ಲೆ ಅದರ ಮನೆ ಹಕ್ಕಲಿರ್‌ವ ಹಾಲ್ ಬರ್‌ವ ಮರ (Milky Tree) ದ ಬುಡಲಿ ಕುದ್ದದೆ. ಸಾಮಾನ್ಯವಾಗಿ ಹಲ್ಸ್‌ನ ಮರದಡಿಲೇ ಗೂಡೆಗ ಕುದ್ದವೆ. ಅದ್ ಅಲ್ಲಿ ಕುದ್ದದರ ನೋಡ್ದ ಮಾಯಿಲ್ತಿಗ ಕೂಡ್ಲೆ ನೆರೆಕರೆವ್ಕೆ ಸುದ್ದಿ ಮುಟ್ಟ್‌ಸುವೆ. ಅದಾದ ಮೇಲೆ ಐದ್ ಜೆನ ಪ್ರಾಯದ ಹೆಣ್ಮಕ್ಕ ಒಟ್ಟು ಸೇರಿ ಅದರ ತಲೆ ಮೈ ಮೀಸಿದ ಮೇಲೆ ಐದ್ ದಿನ ಅದ್ ಮನೆ ಒಳಗೆ ಬಾರದೆ ಹೊರಗೆ, ಹೆಚ್ಚಾಗಿ ಕೊಟೆಗೆಲಿ ಇದ್ದದೆ. ಈ ದಿನಂಗಳ್‌ಲಿ ಅದ್‌ಕೆ ಬಗೆಬಗೆನ ತಿಂಡಿನ ತಿಂಬಕೆ ಕೊಟ್ಟವೆ. ಅಕ್ಕಿನ ಹೊರ್‌ದು, ಹೊಡಿ ಮಾಡಿ, ಬೆಲ್ಲ ಸೇರ್‌ಸಿ ಮಾಡ್ದ ತಿಂಡಿನ ನೆನ್ನೆಕ್ಕಿತೇಳ್ವೆ. ಇದರ ಹೆಚ್ಚಾಗಿ ತಿಂಬಕೆ ಕೊಟ್ಟವೆ. ಇದರ ನೊಡುಲಿ ಮಾಯಿಲರ ಮುಕಂಡ ಮುಕಾರ್‌ವೆಗೂ ವಿಸಯ ತಿಳ್ಸುವೆ. ಮುಕಾರ್‌ವೆ ಬಂದ್ ಮೈನೆರ್‌ದ ಗೂಡೆನ ನೋಡಿ, ತಿಂಡಿಕೊಟ್ಟು ಹೋದೆ. ಗೂಡೆನ ಅಯ್ಯೆನ ಅಣ್ಣತಮ್ಮಂದರ್, (ಸೋದರ ಮಾವಂದರ್) ಗೂಡೆನ ನೋಡಿಕೆ ಬಂದವೆ, ಹಾಂಗೆ ಬಾಕನ ನೆನ್ನೆಕ್ಕಿನೊಟ್ಟಿಗೆ ಬೇರೆ ಬೇರೆ ತಿಂಡಿನ ತಂದ್ ಕೊಟ್ಟವೆ. ಮೈನೆರ್‌ದ ಐದ್‌ನೆ ದಿನಕೆ ಇನ್ನೊಮ್ಮೆ ಊರ್‌ನ ಹೆಣ್ಮಕ್ಕ, ಮುಕಾರ್‌ವೆ, ಮುಂಡಿಕರೆ, ಸೋದರಮಾಂವ ಮತ್ತೆ ನೆಂಟ್ರ್‌ಗೆಲ್ಲಾ ಗೂಡೆನ ಮನೆಲಿ ಒಟ್ಟು ಸೇರ್‌ವೆ. ಮುತ್ತೈದೆಗ ಗೂಡೆನ ಕರ್‌ಕಂಡ್ ಬಂದ್ ಐದ್ ಕಾಯಿನ ಮೇಲೆ ಕುದುರ್‌ಸಿ ಮೈಗೆ ಎಣ್ಣೆ ಉಜ್ಜಿ ತಲೆಮೈ ಮೀಸುವೆ. ಮೀದಾದ ಮೇಲೆ ಗೂಡೆನ ನೆಲಲಿ ನಿಲ್ಸಿ, ಅವ್ಳ ತಲೆಂದ ಕಾಲ್‌ನವರೆಗೂ ನೂಲುನ ಎಳ್ದ್ ಕಟ್ಟುವೆ. ಮೂಡ ದಿಕ್ಕ್‌ಗೆ ಅದರ ನಿಲ್ಸಿ, ಬತ್ತ ಕುಟ್ಟುವ ಒನ್ಕೆನ ದಾಟಿಕೆ ಹೇಳ್ವೆ. ಅಲ್ಲಿಂದ ಬಾಮಿ ಕರೆಗೆ ಅಲ್ಲರ್ ಹಳ್ಳದಕರೆಗೆ ಅವ್ಳ ಮುತ್ತೈದೆಗ ಕರ್‌ಕಂಡ್ ಹೋದವೆ. ಅಲ್ಲಿ 5 ಮಡ್ಕೆಲಿ ನೀರ್ ತುಂಬ್‌ಸಿ, ಅದ್ಕೆ ಒಸಿ ಹಾಲ್ ಹಾಕಿ, ಗೂಡೆನ ಕೈಮುಗೆಕೆ ಹೇಳ್ವೆ. ಮತ್ತೆ ನೀರ್‌ನ ಪಲ ಕೊಡುವ ಮರದಕ್ಕಲೆ ತಕಂಡ್‌ಹೋಗಿ (ಉದಾ : ಹಲ್ಸ್‌ನ ಮರ, ಚಾಳೆ ಇಂತದ್) ಅಲ್ಲಿ ಒಪಾಸ್ ಆ ಮರಕ್ಕೆ ಕೈಮುಗ್ದ್ ಬಂದವೆ. ಇದರ 'ಗುಂಬ ಪೂಜೆ'ತೇಳ್ವೆ. ಮತ್ತೆ ಮನೆ ಒಳಗೆ ಅವಳ ಕರ್‌ಕಂಡ್ ಹೋಗಿ, ಮನೆನ ಎಲ್ಲಾ ಮುಕ್ಯ




ಸೊತ್ತುಗಳಿಗೆ ಅವಳ ಮುಟ್ಟ್‌ಸುವೆ. ಇದಾದ ಮೇಲೆ ಅವಳ ತಲೆತುಂಬಾ ಹೂ ಮುಡ್‌ಸಿ ಮಣೆನ ಮೇಲೆ ಕುದ್‌ರ‍ುಸುವೆ, ಬೇರೆಬೇರೆ ಬಗೆನ ತಿಂಡಿಗಳ ಇಕ್ಕುವೆ. ಅಕ್ಕಿನ ಹೊರ್‌ದ್ ಹೊಡಿಮಾಡಿ, ನೀರ್‌ಲಿ ಕಲ್ಸಿ ಮುದ್ದೆ ಮಾಡಿ, ಸೆಕೆಗೆಗಿಸಿ ಬೇಸಿದ 'ಪುಂಡಿ'ತೇಳ್ವ ತಿಂಡಿನ ಸೋದರ ಮಾಂವ ಅಪ್ಪಿಗೆ ಕೊಟ್ಟದೆ, ಮುಕಾರ್‌ವೆ ಮತ್ತೆ ಮೂಂಡಿಕರೆಗ ಕೂಡಾ ಈ ದಿನ ತಿಂಡಿಗಳ ಕೊಟ್ಟವೆ ಮತ್ತೆ ಸೇರ್‌ದ ಎಲ್ಲವೂ ಉಂಡವೆ. ಉಂಬಕೆ ಮಾಸದ ಗೈಪುನ ಅಡ್ಗೆ ಇದ್ದದೆ. ಅದಿತ್ಲಾರ್ ಪಾಯ್‌ಸದ ಊಟ ಇದ್ದದೆ. ಮೆಂತೆನ ಗಂಜಿಗೆ ಸೇರ್‌ಸಿ ಮಾಡ್‌ದ 'ಮೆಂತೆಡಿಗೆ'ನ ಎಲ್ಲೊವೂ ಉಂಡವೆ. ತೀರಿ ಹೋದ ಹಿರಿಯವ್ಕೆ ತಿಂಡಿನ ಇಸಿ, ತಿಂಬಕೆ ಹೇಳಿಕಂಬ ಕ್ರಮನೂ ಉಟ್ಟು(ಪ್ರಾರ್‌ತನೆ ಮಾಡಿಕಂದು). ಇದರ 'ಕಾರ್‌ನೂರಿಗೆ ಇಸುದು'ತೇಳ್ವೆ

ಈ ಬಗೆನ ಎಲ್ಲಾ ಆಚರಣೆಗ ಮುಗ್‌ದ ಮೇಲೆ, ಗೂಡೆನ ಸೋದರ ಮಾಂವ ಅಪ್ಪ ಕರ್‌ಕಂಡ್ ಅಂವನ ಮನೆಗೆ ಹೋದೆ. ಕೆಲು ದಿನಗಳವರೆಗೆ ಅವ್‌ಳು ಅಲ್ಲಿಯೇ ಇದ್ದ್, ವಿಸೇಸವಾದ ಊಟೋಪಚಾರಗಳ ಸಮ್ಮನ ಆಗಿ ಮತ್ತೆ ಮನೆಗೆ ಬಂದದೆ.

**ಮಾಯಿಲರ್‌ಲಿ ಸಾವುನ ಕ್ರಮಗ :** ಮಾಯಿಲರ್‌ಗ ಹೆಣನ ಸುಟ್ಟವೆ. ಸತ್ತ ಕೂಡ್ಲೆ ಕುಟುಂಬದವ್ಕೆ ನೆಂಟ್ರ್‌ಗಳಿಗೆ ಸುದ್ದಿ ಮುಟ್ಟ್‌ಸುವೆ. ಅವೆಲ್ಲಾ ಬಂದ್ ಹೆಣಸುಡಿಕೆ ಬೇಕಾದ ಸೌದೆ ಮಾಡ್ವೆ. ಮತ್ತೆ ಹೆಣನ ಮೀಸಿ ಬಿಳಿ ಬಟ್ಟೆ ಉಡ್ಸುವೆ. ಮಕ್ಕ ಮತ್ತೆ ಒಳ್ದವೆಲ್ಲಾ 'ನಾರಾಯಣ' ತೇಳ್ಕಂಡ್ ಹೆಣಕ್ಕೆ ಮೂರ್ ಸುತ್ತ್ ಬಂದ್, ಬೆದ್‌ರ್‌ಂದ ಮಾಡ್ದ 'ಚಟ್ಟ'ಲಿ ಹೆಣನ ಮಲ್ಗ್‌ಸಿ, ಹೆಗ್‌ಲ್‌ಲಿ ಹೊತ್ತ್‌ಕಂಡ್ ಹೆಣ ಸುಡುವ ಜಾಗೆಗೆ ಬಂದವೆ. ಕಾಟ ಒಯ್ಪಿದ ಸೌದೆ ಮೇಲೆ ತೆಂಕ–ಬಡ್ಗ ಹೆಣನ ಮಲ್‌ಗ್‌ಸುವೆ ಸತ್ತವನ ದೊಡ್ಡ ಮಜ್ಜ ಕಾಟಕೆ ಕಿಚ್ಚಿ ಕೊಟ್ಟದೆ. ಒಸಿ ಹೊತ್ತು ಇದ್ದ್ ತಲೆ ಮೈ ಮೀದ್ ಎಲ್ಲೊವೂ ತಿರ್‌ಗಿ ಮನೆಗೆ ಬಂದವೆ, ಸತ್ತ ಮೇಲೆ ಹೆಣ ಸುಡುವವರೆಗೆ ಸತ್ತವನ ಬಂದು ಬಾಂದವರ್ ಉಂಬೊದ್ಲೆ. ಹೆಣ ಸುಟ್ಟ ಮೂರ್‌ನೇ ದಿನಕೆ ಕೆಲುಜೆನಂಗ ಹೆಣ ಸುಟ್ಟ ಜಾಗೆಗೆ ಬಂದವೆ. ಈಗ ಆ ಜಾಗೆಗೆ 'ಸುಡ್‌ಕುಳಿತ ಹೇಳ್‌ವೆ.ಇಲ್ಲಿ ಹೊತ್ತದೇ ಒಳ್ದ ಸರ್‌ರದ ಬಾಗಗಳ ಒಟ್ಟು ಸೇರ್‌ಸಿ, ಕೊಳ್ಳಿ ಕೂಡ್ಸಿ ಇನ್ನೊಮ್ಮೆ ಸುಟ್ಟವೆ. ಸತ್ತ ಐದ್‌ನೆ ದಿನಕೆ ಸುಟ್ಟ ಜಾಗಲಿರುವ ಬೂದಿನ ಒಟ್ಟ್ ಸೇರ್‌ಸಿ ಗುಪ್ಪೆ ಮಾಡ್‌ವೆ ಇದ್‌ಕೆ 'ಬೂದಿ ಮುಚ್ಚುದು'ತ ಹೆಸ್ರ್. ಇದರ ನೊಡುಲಿ ಸಾವುನ ಕ್ರಿಯೆಗೆಲ್ಲ ಮಾಡಿಕೆ ಮಕ್ಕಳ್‌ಲಿ ಒಬ್ಬ ತಯ್ಯಾರಾಕು. ಅಂವನ ತಲೆ ಮತ್ತೆ ಗಡ್ಡಮೀಸೆನ ಪೂರಾ ಬೋಳ್ಸುವೆ, ಹಾಂಗೆ ಅಂವನ ಗಂಟ್ಲ್‌ಗೆ ಬಿಳಿ ಬಟ್ಟೆನ ತುಂಡುನ ಕಟ್ಟುವೆ. ಅವಂಗೆ 'ಸವಾಳೆ'ತ ಹೆಸ್ರು. ಇಂವ ಸಾವ್‌ನ ಎಲ್ಲಾ ಕ್ರಿಯೆಗ ಮುಗೆವವರೆಗೆ ಅಕ್ಕಿಂದ ಮಾಡ್‌ದ ಯಾವುದೇ ತಿನ್ಸ್‌ಗಳ ತಿಂಬುದುಲೆ. ಅದರ ಬದ್‌ಲ್ ರಾಗಿಂದ ಮಾಡ್‌ದ ತಿನ್ಸ್‌ಗಳ ತಿಂದದೆ.

ಸತ್ತ 11ನೇ ದಿನಕೆ 'ಬೊಜ್ಜ' ಮಾಡ್‌ವೆ. ಅಂದ್ ಅಕ್ಕಿಂದ ಮಾಡ್‌ದ ಹುಗ್ಗೆ ಮತ್ತೆ ಬೇರೆ ತಿನಿಗಳ ಕುಡ್‌ಕುಳಿಲಿ ಸತ್ತವಂಗೆ ಇಕ್ಕುವೆ. 'ಸ್ವರ್‌ಗಂದ ಬಂದ್ ತಿಂದ್ ಹೋಗು' ತೇಳಿ ಎಲ್ಲೊವೂ ಕರ್‌ದವೆ, ಸುಡ್‌ಕುಳಿಗೆ ಸುತ್ತು ಬಂದವೆ. ಇದಾದ ಮೇಲೆ ಎಲ್ಲೊವು ತಿರ್‌ಗ ಮನೆಗೆ ಬಂದ್, ಸರ್‌ವ್‌ರೂ ಸೇರಿ ಉಂಡವೆ. ಸಾಮಾನ್ಯ ಆಗಿ 'ಹಂದಿಗೈಪು' ಹೆಂಡ ಇದ್ದದೆ. ಬಾಳೆಕಾಯಿನ ಬೇಸಿ ಮಾಡ್ದ ಪಲ್ಯ ಬೇಕೇ ಬೇಕು. ಸತ್ತ 16ನೇ ದಿನಕೆ 16 ಕೊಲೆಗಳಿಗೆ ಸೇರ್‌ಸುವ' ಕ್ರಮ ನಡ್ದದೆ. 17 ಬಾಳೆ ಎಲೆಲಿ ಕೋಳಿ ಗೈಪು ಮತ್ತೆ ರೊಟ್ಟಿ ಅಲ್ಲರ್ ದೋಸೆನ ಇಕ್ಕಿ, ಅಗ್‌ಳ್ ಹಾಕಿ ಅಡ್ಗೆ ಕೋಣೆಲಿ ಮೂಡಕೆ ಮೋರೆ ಮಾಡಿಸುವೆ. ಎಲ್ಲೊವೂ ಕೈ ಮುಗ್ದ್, ಈಗಾಗಲೇ ತೀರಿ ಹೋದ 16 ತಲೆಮಾರ್‌ನ ಹಿರಿಯರ ನೆನ್ಸಿ, ಈಗ ತೀರಿಹೋದಂವನೂ ಅವರೊಟ್ಟಿಗೆ ಸೇರಿಕಂಕುತೇಳಿ ಪ್ರಾರ್‌ತನೆ ಮಾಡಿಕಂಡವೆ. ಇದಾದಮೇಲೆ 17ನೇ ಅಗ್‌ಳ್‌ನ ಸಾಲ್‌ಂದ ಹೊರಗೆ ಜಾರ್‌ಸುವೆ. ಇದಾದ ಮೇಲೆ ಎಲ್ಲೊವೂ ಉಂಡವೆ. ಇದ್ ಕೂಡಾ ಮಾಸದೂಟನೆ ಆಗಿದ್ದದೆ. ಹಿಂಗೆ ಮಾಯಿಲರ್‌ಲಿ ಹುಟ್ಟಿದಲ್ಲಿಂದ ಸಾಯ್‌ಲ್ಲಿವರೆಗೆ ಸುಮಾರ್ ತರದ ಆಚರ್ಣೆಗೊಳೊ. ದ್ರಾವಿಡ ಪೊದ್ದತಿಗೆ ಸೇರ್‌ದ ಈ ಆಚರ್‌ಣೆಗೆ ಬಾರಿ ಲಾಯ್ಕ್ ಹಾಂಗೆ ಒಂದರ್‌ದೊಂದ್ ಪೊರ್‌ಲುನೂ. ಇದರ್‌ಲಿ ಯಾದೇ ಬದ್ಲಾವಣೆ ಮಾಡಿಕಂಬಕೆ ಮಾಯಿಲರ್ ತಯ್ಯಾರಿಲ್ಲೆ. ಅವು ಅದರ ಬಾರಿ ನಿಯತ್ತ್‌ಲಿ ನಡ್ಸಿಕಂಡ್ ಬಂದೊಳೊ.

**ಮಾಯಿಲರ ದಾರ್‌ಮಿಕ ವೆವಸ್ತೆ :** ಮಾಯಿಲರ್‌ಗೆ ಅವರ್‌ದೆ ಆದ ಪ್ರತ್ಯೇಕ ದಾರ್‌ಮಿಕ ವೆವಸ್ತೆ ಉಟ್ಟು. ಈ ದಾರ್‌ಮಿಕ ವೆವಸ್ತೆ ಒಂದ್ ಕುಟುಂಬಕ್ಕೆ ಮಾತ್ರ. ಇದರನೆ 'ಕುಲದೆವ್ವ'ತೇಳಿ ಹೇಳ್‌ವೆ ಮಾಯಿಲರ ಕುಲದೆವ್ವಕೆ 'ಮಂಜ'ತೇಳಿ ಹೆಸ್ರ್. ವರ್‌ಸಕ್ಕೊಮ್ಮೆ 'ಮಂಜ'ತೇಳಿ ನೆನ್ಸಿದ ಕಲ್ಲ್‌ನೆದ್ರ್ ಕೋಳಿ ಕೊಯ್ದ್, ರೊಟ್ಟಿ, ಕಳ್ಳ್ ಇಸಿ ಅಗ್‌ಳ್ ಇಕ್ಕಿ ಕೈ ಮುಗ್‌ದವೆ. ಇದ್ಕೆ 'ಮಂಜಮಾಳುನ'ತೇಳ್ವೆ. 'ಮಂಜ'ನ ತಂಬಿಲ ಕ್ರಮಗ ಮತ್ತೆ ಬೇರೆ ವಿಸಯಗ ಬೌದ್ದರ್‌ಲಿ ಇದ್ದ್ 'ಮಂಜುಘೋಸ'ನ ಪೂಜೆ ಕ್ರಮಕೆ ಹೋಲಿಕೆ ಇದ್ದಾಂಗೆ ಉಟ್ಟು. ಕುಲದೆವ್ವ ಅಲ್ಲದೆ ಮಾಯಿಲರ್ ಸುಮಾರ್ ಬಗೆನ ಗ್ರಾಮ ದೇವತೆಗಳನು ನಂಬುವೆ. ಅದರ್‌ಲಿ ಕಲ್ಲುರ್ಟಿ, ಕಲ್ಕುಡ, ಪಂಜುರ್‌ಲಿ, ಗುಳಿಗ, ಪುರುಸ ದೆವ್ವ ಇವು ಮುಕ್ಯ ದೆವ್ವಗ. ಕೋಳಿ–ದೋಸೆ ಮತ್ತೆ ಕಳ್ಳ್‌ನ ಮಾಯಿಲರ್ ದೆವ್ವಕೆ ಕೊಟ್ಟವೆ. ಇದಲ್ಲದೆ ಊರ್‌ನ ಮುಕ್ಯ ದೇಸ್ತಾನಕು ಮಾಯಿಲರ್ ಹರ್‌ಕೆ ಸಂದಾಯ ಮಾಡ್‌ವೆ. ಈ ಊರ್‌ನ ಮುಕ್ಯ ದೇಸ್ತಾನದ ದೆವ್ವಕೆ ಸಾಮಾನ್ಯ ಆಗಿ ವೈದಿಕ ಕ್ರಮಲಿ ಪೂಜೆ ನಡ್ದದೆ. ಇದರೆಲ್ಲ ನೋಡ್ರೆ ಮಾಯಿಲರ್ ವೈದಿಕ ಮತ್ತೆ ವೈದಿಕೇತರ ಸಂಪ್ರದಾಯಯದ ದೇವ್ರುಗಳ ಪೂಜೆ ಮಾಡ್ವೆಂತೇಳಿ ದೌರ್‌ಯಲಿ ಹೇಳಕ್. ಕುಟುಂಬಕೆ ಒಳ್ಳೆದಾಗಲಿ ಸಂತಾನದ ಸೌಬಾಗ್ಯನ ಕೊಡ್‌ವ 'ಮಂಜ'ನೇ ಪ್ರದಾನ ದೆವ್ವ, ಆದರೆ ಒಳ್ದವೆಲ್ಲ ದೆವ್ವಗಳ್‌ನೂ ಮಾಯಿಲರ್ ನಂಬುವೆ.

ವರ್‌ಸದ ಕೆಲವ್ ಹಬ್ಬಗಳ್‌ಲಿ ಮಾಯಿಲರೆಲ್ಲ ಒಟ್ಟಾಗಿ ಕಲ್‌ತ್,

ಕಳ್ಳ್ ಸರಾಯ ಕುಡ್ದ್ ಕೊಣ್ದವೆ. ಬಿಸು, ದೀಪಾವಳಿ, ಕೆಡ್ಡಾಸಗಳ ಬಾರಿ ಗೌಜಿಂದ ಆಚರ್‌ಸುವೆ. ಮೊದ್‌ವೆ, ಸಾವು, ಹುಟ್ಟುನ ಹೊತ್ತ್‌ಲು ಅವೆಲ್ಲ ಕೊಣ್ದವೆ.ತುಳುಲಿ ಕೆಲ ಸಾಲುಗಳ ಪೊದ್ಯನ ಹೇಳಿಕಂಡ್ ಲಯಬದ್ದ ಆಗಿ ಕೊಣ್ದವೆ. ಮಂಗನ ಚರ್‌ಮಂದ ಮಾಡಿರ್‌ವ 'ದುಡಿ'ನ ಬೊಟ್ಟ್‌ದರರ್‌ಲಿ ಮಾಯಿಲರ್ ಬಾರಿ ಉಸಾರ್ ಒಳೊ. ಅದರ ಬೊಟ್ಟಿಕನ ಬೇರೆ ಬೇರೆ ತಾಳಕೆ ಸರ ಆಗಿ ಕೊಣ್ದವೆ.

ಮಾಯಿಲರ್‌ಲಿ ಸುಮಾರ್ ಬಗೆನ ಕತೆಗೊಳೊ. ಈ ಕತೆಗ ತುಳುಬಾಸೆಲುಟ್ಟು. ಮೂರ್, ನಾಕ್ ಸಾಲ್‌ನ 'ಉರಲ್'ಗ ತೇಳ್‌ವ ಕವಿತಾ ಪ್ರಕಾರಗಳೂ, ಕತನ ಕಾವ್ಯ (Ballad) ಗಳ ಮಾದರಿನ ಕಬಿತಗ ಉಟ್ಟು. ಈ ಕಬಿತಗಳ ಕ್ರಿಸಿ ಕೆಲ್ಸದ ಹೊತ್ತುಲಿ ಹೇಳ್‌ವೆ. ಒಡ್ಸ್‌ಕತೆಗ, ಗಾದೆಗ, ನಂಬಿಕೆಗ, ಇವರ್‌ಲಿ ಉಟ್ಟು. ಜೆನಪದ ಮೊದ್ದುನು ಇವ್‌ಕೆ ಗೊಡುಟು.ಸುಮಾರ್ ಬಗೆನ ದೈ ನಾರ್‌ಬೇರ್ ಮೊದ್ದುಗಳ ಕೂಡ್‌ಸಿ, ಅದರ್‌ಂದ ಮಕ್ಕಳಿಗೆ, ಬಾಣಂತಿಯರ್‌ಗೆ ಹಾಂಗೆ ಬೇರೆ ಬೇರೆ ನಮೂನೆನ ಕಾಯಿಲೆಗಳಿಗೆ ಇವು ಮೊದ್ದು ಮಾಡ್‌ವೆ ಮಾಯಿಲರ್ ಮಾಟ ಮಾಡ್‌ದರ್‌ಲಿನು ಬಿರ್‌ಸಿರ್. ಬೇರೆ ಬೇರೆ ಮಂತ್ರಗಳ ಉಚ್ಚರ್‌ಸ್‌ವ ಅವು ಮಂತರ್‌ಸಿದ ಬೂದಿನ ರೋಗ ಪರಿಹಾರಕೆ ಕೊಟ್ಟವೆ. ಮನೆಗಳಿಗೆ ಕೊಲೆ ಪೀಡೆಗ ಹುಗ್ಗಿ, ಜೆನಕೆ ಉಪದ್ರ ಕೊಡದಂಗೆ ಮಾಡಿಕೆ ಮನೆಗೆ ತಡೆನ ಮಾಡ್‌ವೆ. ಸತ್ರುಗಳ ಕೊಲ್ಲಿಕೆನು ಕೂಡಾ "'ಮಾಟ' ಮಾಡ್‌ದಲ್ಲದೆ, 'ಕೈ ಮಾಸು' ತೇಳ್‌ವ ವಿದ್ಯೆಂದ ನಿದಾನಕೆ ಕೊಲ್ಲ್‌ವ ತಂತ್ರಗಾರಿಕೆನ ಇವ್ ಕಲ್ತೊಳೊ. ಇತ್ತೀಚಿನ ಹೊಸ ತಲೆಮಾರ್‌ನ ಹುಡ್ಗರ್ ಇದರೆಲ್ಲ ಮಾಡದೆ, ಆಸ್ಪತ್ರೆಗಳಿಗೆ ಬೇಟಿ ಹೋದವೆ.

ಬೇರೆ ಜೆನಾಂಗದ ಜೆನಂಗ ಮಾಯಿಲರ ತಮ್ಮೊಡಿಕೆ ಸೇರ್‌ಸಿ ಕಣದೆ ಇರ್‌ದರ್‌ಂದ ಮಾಯಿಲರ ಅಸ್ತಿತ್ವ ಪ್ರತ್ಯೇಕ ಆಗಿದೆ ನಡ್ಕಂಡ್ ಬಂದುಟು. ಇವು ಬೇರೆ ಯಾವ ಜಾತಿನವರ ಮನೆಗೂ ಹೋಕಿಲ್ಲೆ. ದೇಸ್ತಾನದ ಒಳಗೆ ಇವ್ ಹೋದುಲೆ. ಜಮೀನ್ದಾರರ ಮನೆಲಿ ಬೇರೆ ಜಾತಿಯವರೊಟಿಗೆ ದುಡ್ದರು, ಅವ್ ಯಾರೂ ಇವರ ಮುಟ್ಟುದುಲೆ ಆದರೆ ಮಾಯಿಲರ್ ಬೇರೆ ಯಾರಾರ ಬಾಮಿಂದ ನೀರ್ ತೆಕಣಕ್.

ಮಾಯಿಲರ್‌ಲಿ ಬಡತನದಿಂದಾಗಿ ಮಕ್ಕಳ ಕನಿಸ್ಟ ಅವಶ್ಯಕತೆನ ಈಡೇರ್‌ಸುವಲ್ಲಿ ಸೋತೊಳೊ. ಅಯ್ಯೆಪ ದುಡಿಯವಾದರೆ ಮಕ್ಕ ದುಡ್‌ದ್ ಅವರ ಸಾಂಕಕಾದೆ. ಈ ನಡುಲಿ ನಿರುದ್ಯೋಗದ ಬಗ್ಗೆನು ಅವ್ ಅಸ್ಪಿಸ್ಟ್ ತಿಳ್ದವಾಗೊಳೊ. ಈ ಎಲ್ಲಾ ಕಾರಣಂದ ಮಾಯಿಲರು ವಿದ್ಯಾವಂತರ್ ಆಗತಿಲ್ಲೆ.

ಒಟ್ಟುಲಿ ಸಾಂಸ್ಕೃತಿಕ ಆಗಿದ್ ಬಾರಿ ಸ್ರೀಮಂತ ಜೆನಾಂಗ ಮಾಯಿಲರ್‌ದ್. ದ್ರಾವಿಡ ಪೊದ್ದತಿನ ಹಾಂಗೆ ನೀತಿಗೆ ಅನುಗುಣ ಆದ ಸುಮಾರ್ ಪೊದ್ದತಿಗ ಅವರ್‌ಲಿ ಉಟ್ಟು.. ಇದರ ಒಟ್ಟಿಗೆ ಇವು ಬರಿ ಪಾಪದ ಜೆನಂಗ, ಹೊಸ ಲೋಕದ ಸೋಗ್ ಇಲ್ಲದೆ, ಇವರ ಆಚಾರ ವಿಚಾರಲಿ ಪಂಡ್‌ನ ಕಾಲದ ನಡಾವಳಿಗಳೂ ಇನ್ನೂ ಒಳ್ದಟು. ಅವ್‌ಕೆ ತಮ್ಮದೇ ಆದ ಸಾಮಾಜಿಕ, ದಾರ್‌ಮಿಕ, ರಾಜಕೀಯ ವೆವಸ್ತೆ ಉಟ್ಟು. ಬಾಸೆ ಉಟ್ಟು. ಭಾರತೀಯ ಸಂಸ್ಕೃತಿಗೆ ಇವರ ಕೊಡುಗೆ ಬೇರೆನು,ವಿಸೇಸನು ಮತೆ ಬಾರಿ ಸ್ರೀಮಂತಿಕೆ ಇರ್‌ವಂತದ್. ಈ ಲೋಕನ ಅಕ್ಷರ ಮಾದ್ಯಮ ಇದ್‌ವರೆಗೆ ಹುಕ್ಕತ್‌ಲೆ, ಓದ್ ಬರ ಗೊತ್ತಿಲದ ಇದ್ ನಿಗೂಡ ಲೋಕ ಇದ್. (ಪಿ.ಬಿ.)

**ಮುಗೇರರ್ :** ತುಳುನಾಡಿನ ಮೂಲವಾಸಿ ಸಮುದಾಯಗಳ್‌ಲಿ ಮುಗೇರರ್ ಮುಕ್ಯಪಟ್ಟವ್. ಈ ಮುಗೇರ ಸಮುದಾಯಂದ ಆರಾದನೆ ಆವ ದೆವ್ವಂಗ ಮುಗೇರ್‌ಲು ತೇಳಿಯೆ ಕರ್‌ಸಿ ಕೊಂಡವೆ. ಈ ದೆವ್ವಂಗ ಮುಗೇರ ಸಮುದಾಯಂದ ಹಿರಿಯರ ಆರಾದನೆನ ಹಿನ್ನೆಲೆಲಿ ಆರಾದನೆ ಪಡಿತೊಳೊ. ಈ ಮುಗೇರ್‌ಲು ದೆವ್ವದ ಬಗ್ಗೆ ಸಂದಿ/ಪಾಡ್ದಗ ನಿರೂಪಣೆಗಳ ಪ್ರಕಾರ ವೀರಯೋದರಾಗಿ ಕಾಣ್‌ಸಿಕಂಡವೆ. ಅಲ್ಲದೆ ಮೋಸದ ಯುದ್ದತಂತ್ರಲಿ ಅಪಮೃತ್ಯುವಿಗೆ ಒಳಗಾದ ಹಾಂಗೆ ಸತ್ತ ಮೇಲೆ ದೆವ್ವಾಗಿ ಆರಾದನೆ ಬಂದ ಬಗೆನ ತೋರ್‌ಸ್‌ವೆ. ಈ ದ್ರಿಸ್ಟಿಂದ ಮುಗೇರ್‌ಗ ದೆವ್ವಂಗಳ ಮಗೇರರ ಅವಳಿ ಸಾಂಸ್ಕೃತಿಕವೀರರ್‌ತೇಳಿದ್ ಹೇಳ್‌ವೆ. ಈ ದೆವ್ವಗ ಸಾರ್‌ವತ್ರಿಕ ಆಗಿ 'ಮುಗೇರ್‌ಲು'ಗ ತೇಳಿ ಕರ್‌ದವೆಯಾದರೂ ಆ ಹೆಸ್‌ರ್ ಮತ್ತೆ ಸಂಕೆಲಿ ಬೌಗೋಳಿಕ ಹಿನ್ನೆಲೆಲಿ ವೆತ್ಯಾಸಗ ಕಂಡ್ ಬಂದದೆ. ಬಂಟ್ವಾಳ, ಕಾಸರಗೋಡು, ಮಂಗಳೂರು ಕಡೆಲಿ ಎಣ್ಮೂರುದೈಯ್ಯ- ಕೆಲತಪೆರ್‌ನ್ನೆ ಅವಳಿಗಳಾಗಿ, ಅವರ ಬಾವನಿಗೆ ಪೊಸಕಳಲ, ಬದ್ರಕಡೆಂಜ, ನನಿಕೆ ಎಂಬಿತ್ಯಾದಿ ಹೆಸರುಗ ಇರ್‌ದು ಕಂಡು ಬದ್ದದೆ. ಉಡುಪಿ ಪ್ರದೇಸಲಿ ಎಣ್ಮೂರುದೆಯ್ಯು ಮತ್ತೆ ತನ್ನಿಮಾನಿಗ, ದೈಯ್ಯುವಿನ ಬಾವ ತನ್ನಿಮಾನಿಗಳ ಗಂಡ ಕೆಲತಪೆರ್‌ನ ಹಿಂಗೆ ಮೂರು ದೆವ್ವಗ ಆರಾದನೆ ಆದವೆ. ಪುತ್ತೂರು, ಬೆಳ್ತಂಗಡಿ, ಸುಳ್ಯ ತಾಲೂಕುಗಳ್‌ಲಿ ಅವುಳಿ ಸೂರರಾಗಿ ಮುದ್ದ- ಕಳಲ ಮತ್ತೆ ತಂಗೆ ತನ್ನಿಮಾನಿ ಮಾತ್ರ ಕಂಡ್ ಬಂದವೆ.

ಮುಗೇರರ್‌ಗೆ ಸಮ್ಮಂದಪಟ್ಟ ಸಂದಿ/ಪಾಡ್ದನಗ ಸುಮಾರ್ ಪಟ್ಯಗ ಸಿಕ್ಕುವೆ. ಇವು ಒಂದೆ ತರ ಮುಗೇರ್‌ಲುಗಳ ವಿವರಗ ಕೊಡ್‌ದುಲೆ. ಸಾಮಾನ್ಯ ಆಗಿ, ಮುಕ್ಯಲಿ ಸುಳ್ಯ ಪ್ರದೇಸಲಿ ಕೇಳಿಬಾವ ಮುದ್ದ- ಕಳಲ ಸಂದಿನ ಕತಾ ಸಾರಾಂಸನ ಬುಡ್‌ಸಿದ್ ಇಲ್ಲಿ ಹೇಳಿಯೊಳೊ.

ಬಂಗಾಡಿ ರಾಜ್ಯಲಿ ಬಂಗರಸ ಸೀಮೆ ಸಾಮನ ಮುದ್ದ–ಕುರ್‌ಮಾನ ಮುದ್ದೆತಿ ದಂಪತಿ ಇದ್ದೊ. ಸಂತತಿ ಆಗದ ಈ ಮುಗೇರ ದಂಪತಿಗ ನಾಗಬಿರ್‌ಮೆರೆ ಹರ್‌ಕೆಂದ ಅವುಳಿ ಮಕ್ಕ ಹುಟ್ಟಿದೊ. ಈ ಮಕ್ಕಳಿಗೆ ಮುದ್ದ–ಕಳಲರ್‌ತ ಹೆಸರ್ ಇಸಿದೊ. ಈ ಮಕ್ಕ ಹುಟ್ಟಿದ ಮೇಲೆ ಹೆಣ್ ಕೂಸೊಂದು ಹುಟ್ಟಿತ್ ಇದ್‌ಕೆ ತನ್ನಿಮಾನಿಗತ ಹೆಸರಿಸಿದೊ. ಈ ಮಕ್ಕಳ ಅಯ್ಯೆ– ಅಪ್ಪ ತೀರಿಹೋದೊ. ತಬ್ಬಲಿ ಮಕ್ಕ ಒಡೆಯರ ಮನೆನ ದನಪಾರ ಕೆಲ್ಸನ ಸುರ್ ಮಾಡ್‌ದೊ.




ಮಕ್ಕ ಹಿಂಗೆ ಬೆಳ್‌ದ್ ದೊಡ್ಡದಾಕಂಡ್ ಬಾಕನ ಮದನಪ್ಪ ಸೆಟ್ಟಿಯಂತ್ಲೇಳಂವ ಇವರ ಜೋಸ್ತಿ ಆದೆ. ಮುಗೇರ್‌ಲು ಸಣ್ಣಿತರ್‌ಲಿ ಅರಸು ಮಕ್ಕಳೊಟ್ಟಿಗೆ ಆಟಾಡಿಕೆ ಹೋಗಿ ಕೆಳಜಾತಿಯವುತೇಳಿ ಅವಮಾನ ಆದವೆ. ಕಾಡಿನ ಪಲ್ಲೆಕಾಯಿ, ಕಲೆಂಜಿ ಕಾಯಿಗ ಎಲ್ಲಾ ತಂದ್ ಮದನಪ್ಪ ಸೆಟ್ಟಿನೊಟ್ಟಿಗೆ ಆಟ ಆಡಿ ಅಂವನ ಸೋಲ್ಸುವೆ. ಇದರ ದೂರಂದ ನೋಡ್ದ ಅರಸು ಮಕ್ಕ ನಂಜಿ ಪಟ್ಟವೆ.

ಮುಗೇರ ಮಕ್ಕ ಯವ್ವನಕ್ಕೆ ಬಂದೊ. ಅವ್ವ ನಾಗ ಬಿರ್‌ಮರ್‌ಗೆ ಹೇಳ್‌ದ ಹರ್‌ಕೆನ ತೀರ್‌ಸಕುತೇಳಿ ಮಾವೂರಿ ತೀರ್‌ತಸ್ನಾನದ ಗುಂಡಿಗೆ ಇಳ್ದವೆ. ಮುಗೇರರ್‌ಂದ ಮುಂದೆನೆ ಬೈದರ್ಲು (ಕೋಟಿ– ಚೆನ್ನಯ್ಯ) ಕೂಡ ಮಾವೂರಿ ತೀರ್‌ತಕ್ಕೆ ಬಂದಿದ್ದವೆ. ತೀರ್‌ತ ಮೀಯೊಕುತಾದರೆಚ



ಮುದ್ದ–ಕಳಲ ಅವುಳಿ ಮಕ್ಕ. ತನ್ನಿಮಾನಿಗ ಅವರ ತಂಗೆ. ಕೇಳತ ಪೆರ್ಣು (ಹೊಸ ಕಳಲೆ) ತನ್ನಿಮಾನಿಗನ ಗಂಡ.

ಸುರುಗೆ ಪಾರೆಕಲ್ಲ್‌ನ ಒಡ್ಡು ನೀರು ಬರ್‌ಸಿ ಅದರ್‌ಲಿ ಮೀಯೊಕು. ಬೈದರ್ಲು ಅವರ ಸುರಿಯ (ಕತ್ತಿ) ಹಾಕಿದೊ ನೀರು ಬಾತ್ಲೆ. ಮುಗರ್ಲು ತಮ್ಮ ಪಗರಿ ಬುಟ್ಟು ನೀರ್ ಬರ್‌ಸಿದೊ. ಕೆಳಜಾತಿನ ಮುಗೇರ್‌ಲು ಬರ್‌ಸಿದ ನೀರಾದ್ದರ್‌ಂದ ಬೈದರ್ಲು ತೀರ್‌ತ ಮೀಯಕೆ ಒಪ್ಪುದುಲೆ. ಕೋಪಂದ ಮೀಯದೆ ಹೋದವೆ. ಮುಗೇರ್‌ಲು ತೀರ್‌ತ ಮೀದವೆ, ನಾಗಬಿರ್‌ಮೆಂಗೆ ಹರ್‌ಕೆ ಸಂದಾಯ ಮಾಡಿ ತಿರ್‌ಗಿ ಬಂದವೆ.

ಊರ್ ಬಲ್ಲಾಳ ಮೃಗ ಬೇಟೆಗೆ ತೇಳಿದ್ ತಯ್ಯಾರ್ ನಡ್ಸಿದೆ. ಕೋಟಿ–ಚೆನ್ನಯರೊಟ್ಟಿಗೆ ಮುಗೇರರನು ಕಳ್ಸಿದೊ. ಬೇಟೆಲಿ ಒಂದ್ ಬೇಟೆನೂ ಸಿಕ್ಕದಿರ್‌ಕನ ವಿಸ್ರಾಂತಿ ಕಟ್ಟೆಲಿ ವೀರರ್ ಬೊಜ್ಜಲ್‌ತೆಗೆಕೆ ಕುದ್ದೊ, ಅಲ್ಲಿಗೆ ಬಂದ ಹಾರಂವ(ಬ್ರಾಹ್ಮಣ)ನೊಬ್ಬ ನೀವು ಎಲ್ಲಿಗೆ ಹೋದ್‌ತೇಳಿ ಪ್ರಶ್ನೆ ಹಾಕಿದೆ. ತಮ್ಮ ಚೆನ್ನಯ ಬೈದ್ಯ ಅಂವ ಎಲ್ಲಿಗೆ ತ ಕೇಳ್ದಕ್ಕೆ ಸಿಟ್ಟ್‌ಲಿ ನಿನ್ನ ಈಗ ಕೊಂದನೆ ತೇಳಿ ಸುರ್‌ಯಕ್ಕೆ ಕೈಹಾಕಿತ್. ಅಣ್ಣ ಕೋಟಿ ಬೈದ್ಯ ಸಮಾದಾನಂದ ತಡ್ತ್. ಬ್ರಾಹ್ಮಣಂಗೆ ಎಲ್ಲಾ ಸಂಗತಿನ ತಿಳಿಸಿತ್. ಬ್ರಾಹ್ಮಣ ಒಂದ್ ಒಂಟಿ ಹಂದಿ ಇರುಂವ ಜಾಗೆನ ತೋರಿಸಿತ್. ಬೈದರ್ಲು ಮತ್ತೆ ಮುಗೇರ್‌ಲು ಕಾಡ್ ಸೇರಿ ಹಂದಿನ ಹುಡ್ಕಿಕಂಡ್ ಹೊರಟೊ. ಮುಗೇರ್‌ಲು ಬೆರ್‌ಸಿಕಂಡ್ ಬಂದ ಹಂದಿನ ಚೆನ್ನಯ ಬೈದ್ಯ ಕೊಂದತ್. ಮುಗೇರರ್ ನಮ್ಮ ಬೇಟೆನ ನೀ ಬೇಟೆಯಾಡ್ದನ ತೇಳಿ ಮಾತೆತ್ತಿದೊ. ಆಗ ಕೋಟಿ ಬೈದ್ಯ ತನ್ನ ಸುರ್‌ಯಂದ ಸತ್ತ ಹಂದಿಗೆ ನೀರು ಬುಟ್ಟುಜೀವ ಬರ್‌ಸಿತ್. ಜೀವ ಬಂದ ಹಂದಿನ ಬೆರ್‌ಸಿಕಂಡ್ ಹೋಗಿ ಮುಗರ್‌ಲು ಪಂಜದ ಗಡಿಲಿ ಹೊಡ್ದು ಬೀಳ್ಸಿದೊ. ಪಂಜದ ಸಾವಿರಾಳುಗ ಹಂದಿನ ಆರ್ಬಟೆ ಕೇಳಿ ಬಂದೊ. ನಮ್ಮ ಗಡಿಲಿ ಬಿದ್ದ ಬೇಟೆನ ನಾವ್ ಕೊಡ್ಕಿಲೆತ ವಾದ್ ಸುವೆ. ಆಗ ನಡ್ದ ಕಾಟ್‌ಕಾಯಿಲಿ ಮುಗೇರ್‌ಲು ಪಂಜದವರ ಸೋಲ್ಸಿದ್ ಓಡ್ಸುವೆ. ಬೇಟೆನ ತಂದ್ ಸೆಜ್ಜಿ ಮಾಡ್‌ವೆ. ಪಾಲುಲಿ ಮುಗೇರ್‌ಗೆ ಸಿಕ್ಕಿದ ಮಾಸಲಿ ಎಲು ಹೆಚ್ಚಿಗೆ ಇದ್ದದೆ. ಇದರ ನೋಡಿದ್ ಸಿಟ್ಟುಲಿ ಮುಗೇರರ್ ಆ ಪಾಲುನ ನಾಯಿಗಳಿಗೆ ಹೆರ್‌ಕಿಇಸಿದ್ ತಿರ್‌ಗಿ ಬಂದವೆ.

ಹಿಂಗೇ ದಿನ ಹೋದಂಗೆ ಮುಗೇರ್‌ಗೆ ಮೊದ್‌ವೆನ ತಯಾರ್ ನಡೆತಿರಿಕನ ದಂಡ್‌ಂದ ಓಲೆ ಬಂದದೆ. ಬಂಗರಸು ಮತ್ತೆ ಕೊಪ್ಪದರಸರುಗಳ ನೆಡುಲಿ ನಡ್ದ ಲಡಾಯಿಲಿ ಬಂಗರಸನ ಕಡೆಲಿ ಮುಗೇರರು ಹೋರಾಡಿ ಮದನಪ್ಪ ಸೆಟ್ಟಿಯೊಟ್ಟಿಗೆ ಮುಂದೆ ಹೋದವೆ. ಉಪಾಯಲಿ ಇವರ ಗೆಲ್ಲೊಕುಂತ್ಲೇಳಿ ವಿರೋದಿಗ ಬಾವ ದಾರಿಲಿ ಬೆದುರ್‌ಗಂಟ್‌ನ ಹುಗ್ದ್‌ಸಿ ಅಡ್‌ಂಗಿ ಕುದ್ದವೆ. ಆ ಬೆದುರ್‌ಗಂಟ್ ಒಳಗೆ ಕಾಲು ಹಾಕಿದ್ ಬಿದ್ದ ತಮ್ಮ ಕಳಲನ ವಿರೋದಿಗ ಬಂದು ತಲೆಕಡ್ದವೆ. ಕತ್ತ್‌ರ್‌ಸಿದ ತಮ್ಮನ ತಲೆ ಈಸ್ವರಮಂಗಲದ ಈಸ್ವರ ದೇಸ್ತಾನದ ಅಂಗಣಕ್ಕೆ ಹೋಗಿ ಬಿದ್ದದೆ. ಊರವರ ಪ್ರಾರ್‌ತನೆನಂಗೆ ಸಕ್ತನಾದ ತಮ್ಮ ಕಳಲನ ತಲೆನ ಪ್ರತಿರೂಪನ ಎದ್‌ರ್ ಬೆಳ್ಳಿ ಕಟ್ಟಂದ ಬದ್ರಮಾಡಿದ್ ದೇಸ್ತಾನದ ಒಳಾಂಗಣಲಿ ಜೋಪಾನ ಇಸ್‌ವೆ. ಬೊಳ್ಪುಗೆ ಪೂಜೆ ಈಸ್ವರಂಗೆ ಹಿಂಬೊತ್ತುನ ಪೂಜೆ ಕಳಲನ ತಲೆಗ್' ತೇಳುವ ನುಡಿ ಕಟ್ಟ್‌ನಾಂಗೆ ಅಲ್ಲಿ ಇಂದೂ ಸಹ ಆರಾದನೆ ಸಂದದೆ. ಯುದ್ದಂದ ತಿರ್‌ಗಿಬಂದಾ ಅಣ್ಣ ಮುದ್ದ ಬಲ್ಲಾಳರ ಕ್ರಿಸಿ ಕೆಲ್ಸ ಮಾಡಿಕಂಡ್ ದಿನಕಳ್ದದೆ. ಕಂಬಳ ಗದ್ದೆನ ಕೆಲ್ಸಾ ಮುಗ್ಸಿದ್ ಮಾರಣೆದಿನ ಬೊಳ್ಪಿಗೆ ಗದ್ದೆ ಪುಣಿಲಿ ನೀರ್ ಕಡಿನ ಬುಡ್‌ಸಿಕ್ಕೆ ಹೋದಂವ ನಾಗ ಕಚ್ಚಿ ಸತ್ತದೆ..

ಈ ಕತಾ ಬಾಗಲಿ ಮುಗೇರ್‌ಲು ದೆವ್ವಗಳ ಪರಾಕ್ರಮ ಸಾಮಾಜಿಕ ಸ್ತರಲಿ ಅವರಿಗಾದ ಅನ್ಯಾಯ, ಅದ್‌ಕೆ ಅವು ಮಾಡ್ದಾ ಪ್ರತಿಬಟನೆಗ ವ್ಯಕ್ತ ಆದೆ.

ತುಳುನಾಡ್‌ಲಿ ಮುಗೇರ್‌ಲುಗಳ ಮುಗೇರ ಸಮುದಾಯ ತಮ್ಮ ಸಮುದಾಯದ ಸಾಂಸ್ಕೃತಿಕ ಅನನ್ಯತೆನ, ವೀರತ್ವದ, ಸ್ವಾಬಿಮಾನದ ಪ್ರತೀಕದಂಗೆ ನಂಬಿಕಂಡ್ ಆರಾದ್‌ಸತೊಳೊ. ತೀರಿಹೋದ ಮೇಲೆ ದೆವ್ವಗ ಆಗಿ ಈ ವೀರನಾಯಕರ್ ನಮ್ಮ ಕಾಯ್‌ವ ದೆವ್ವಗ

ಆಗೋಲೋತ ಇವು ನಂಬುವೆ. ಈ ನಂಬಿಕೆನ ಹಿನ್ನೆಲೆಲಿ ಮುಗೇರ್‌ಲು ದೆವ್ವಗಳಿಗೆ ವರ್‌ಸೊಳ್ ಅಗೆಲ್ ಬಡ್ಸುದು (ಎಡೆ ಹಾಕುವ), ಕೋಲ ಕೊಡುವ ಆಚರಣೆ/ ಆರಾದನೆಗಳ ಮಾಡ್‌ವೆ. ದೆವ್ವಂಗಳ ಆಯುದ/ ಬಂಡಾರಗಳ ಇಸ್ಸುವ 'ಮುಗೇರ್‌ರ ಕೊಟಗೆ' (ಮುಗರ್ಲೆ ಕೊಟ್ಯ) ತೇಳ್‌ವ ದೆವ್ವಸ್ತಾನಗಳ ಅವು ಕಟ್ಟ್‌ಸಿಯೊಳೊ. ಈ ಕೊಟೆಗೆನ (ಗರಡಿ) ಅಂಗಣಲಿ ನಲಿಕೆ ಕಲಾವಿದರ್‌ಂದ ವರ್‌ಸೊಳು ಕೋಲ ನಡ್ಸುವ ಪೊದ್ದತಿ ಉಟ್ಟು. ಈಗ ಮುಗೇರ್‌ಲು, ಮುಗೇರರ ದೆವ್ವಂಗ ಮಾತ್ರ ಅಗಿರದೆ ಎಲ್ಲಾ ಸಮುದಾಯದ ದೆವ್ವಗಾಗಿ ಮಂಜದ ಆಚರಣೆ, ಕೋಲ ಇತ್ಯಾದಿ ಆರಾದನೆನ ಪಡ್ದವೆ.

**ಮೋಹನ ಸೋನ :** ರಂಗಭೂಮಿ, ಶಿಕ್ಷಣ ಮತ್ತೆ ಕಲಾವಿದ ಮೋಹನ ಸೋನ ದಕ್ಷಿಣಕನ್ನಡ ಜಿಲ್ಲೆನ ಸುಳ್ಯ ತಾಲೂಕ್‌ನ ಸೋನಂಗೇರಿ ನಡುಮನೆಯವು. ತಂದೆ ವೆಂಕಟ್ರಮಣ ಗೌಡ ತಾಯಿ ಚೆನ್ನಮ್ಮ ದಂಪತಿಯವ್ಕೆ ಜನವರಿ 29, 1954ರ್‌ಲಿ ಮೋಹನ ಸೋನ ಜನಿಸಿದೊ. ಇವರ ಹೆಣ್ಣ್ ಮಾದವಿ. ಇಬ್ಬರ್ ಮಕ್ಕ. ಮಗ ಮೃಣಾಲಿನಿ ಮಜ್ಜ ಗಗನ್. ಸೋನ ಸುಳ್ಯದ ಬೋರ್ಡ್ ಹೈಸ್ಕೂಲ್‌ಲಿ ಎಸ್.ಎಸ್. ಎಲ್.ಸಿ., ಪಿಯುಸಿ, ಮಂಗಳೂರ್ ಸರಕಾರಿ ಸ್ಕೂಲ್‌ಲಿ ಟಿಸಿಎಚ್ ಮತ್ತೆ ಮೈಸೂರ್‌ಲಿ ಆರ್ಟ್ ಡಿಪ್ಲೋಮಾ ಓದಿದೊ. ಮುಂದೆ ಮಂಗಳೂರ್‌ನ ಬದ್ರಿಯಾ ಹೈಸ್ಕೂಲ್‌ಲಿ ಡ್ರಾಯಿಂಗ್ ಮಾಸ್ಟ್ರ್, ಸುಳ್ಯ ತಾಲೂಕ್‌ನ ದೊಡ್ಡತೋಟಲಿ ಪ್ರಾತಮಿಕ ಸಾಲೆಲಿ ಡ್ರಾಯಿಂಗ್ ಮಾಸ್ಟ್ರ್ ಆಗಿ ಕೆಲ್ಸ ಮಾಡಿದ್ದೊ. 1983ರ್‌ಲಿ ಬಂಟ್ವಾಳ ತಾಲೂಕ್‌ನ ವಿಟ್ಲದ ಸಿಪಿಸಿಅರ್‌ಐಲಿ ತಾಂತ್ರಿಕ ಸಹಾಯಕರಾಗಿ ಕೆಲಸ ಮಾಡ್ಯೊಳೊ.

'ಬಣ್ಣಗ ಮತ್ತೆ ಮಕ್ಕಳ ಮನಸ್ಸ್' ಬಗ್ಗೆ ಹಲವಾರ್ ರಂಗಪ್ರಯೋಗನ ದಕ್ಷಿಣಕನ್ನಡ ಜಿಲ್ಲೆಲಿ ಸೋನ ಸಂಗಟಿಸಿಯೊಳೊ. ವಿಟ್ಲದ ಸಿಪಿಸಿಅರ್‌ಐ ವಾರ್ಷಿಕೋತ್ಸವಲಿ ಕ್ಯಾಂಪಸ್‌ನ ಮಕ್ಕಳ್‌ಗೆ ಮಾಡ್ಸಿದ ನಾಟಕಗ, ವಿಟ್ಲ ಪೇಟೆನ ಹೆಬ್ಬಾರರ ಮನೆಯಂಗಳಲಿ ನಡ್ದ ಮಕ್ಕಳನಾಟಕ ಜನಮಾನಸಲಿ ಇಂದ್‌ಗೂ ನೆಂಪು ಮಾಡ್ದೆ. ಸೋಣಂಗೇರಿನ 40 ಮೂಲಮನೆಗಳ ಚಿತ್ರ ಗ್ಯಾಲರಿ ಬಯಲು ಚಿತ್ರಾಲಯ ಕಲಾಂದೋಲನ ರಾಷ್ಟ್ರ ಮಟ್ಟಲಿ ಅಂದ್ ಸಂಚಲನ ಮೂಡ್ಸಿತ್ತ್. ಇವರ ನಿರ್ದೇಸನಲಿ ವಿಟ್ಲಲಿ ಚೋಮ(ಕಾರಂತರ ಚೋಮನ ದುಡಿ ಆಧರಿಸಿ) ನಾಟಕ ತಯಾರಾಗುಟು. ಸುಳ್ಯದ ಅಭಿನಯ ನಾಟಕ ತಂಡದವು ತಯಾರ್ ಮಾಡ್ದ 'ಚೋಮನ ದುಡಿ' ಮತ್ತೆ 'ನಾಳೆ ಯಾರಿಗೂ ಇಲ್ಲ' ನಾಟಕಲಿ ಮುಕ್ಯ ಪಾತ್ರದಾರಿಯಾಗಿದ್ದೊ. ಅವು ಬರ್ದ ನೂರಾರ್ ಪುಸ್ತಕಗಳ ಮುಕಪುಟ ಕರ್ನಾಟಕ ರಾಜ್ಯಲಿ ಚಿರ ನೆಂಪಾಗಿ ಒಳ್ದುಟ್ಟು. ಪುತ್ತೂರ್‌ನ ಬಾಲವನಲಿ 2012ರ ಸಮಯಲಿ ಮಕ್ಕಳ್‌ಗೆ ಪ್ರತೀ ಸನಿವಾರ ಉಚಿತ ನಾಟಕ ತರಬೇತಿ, ನೈಸರ್ಗಿಕ ಬಣ್ಣಗಳ್‌ಂದ ಚಿತ್ರಗಳ್‌ಗೆ ಬಣ್ಣಲೇಪನ ಮಾಡ್‌ವ ತರಬೇತಿ ನೀಡ್‌ತ್ತಿದ್ದೊ. ಶಿವರಾಮ ಕಾರಂತರ ಕಾದಂಬರಿನ ಆದರಿಸಿದ ಕಲಾ ಚಿತ್ರಗಳ ಅರ್ಟ್ ಗ್ಯಾಲರಿ ರಾಜ್ಯದ ಕ್ಯಾತ ಕಲಾವಿದರ್‌ಂದ ನಿರ್ಮಾಣ ಮಾಡ್‌ಸಿದೊ. ಕೊಡಗ್‌ಲಿ ಮಡಿಕೇರಿ ಸಂಸ್ಕೃತಿಕಾಲಾಚಿತ್ರ ಶಿಬಿರ ಮಾಡ್ಡೊ. 2019ರ್‌ಲಿ ಉತ್ತರಕನ್ನಡ ಜಿಲ್ಲೆನ ಕುಮಟಾ ತಾಲೂಕ್‌ನ ಕಂಡರಕುಳಿ ಗ್ರಾಮಲಿ ಕರಾವಳಿ ಉತ್ಸವಕ್ಕೆ ಕಲಾತ್ಮಕ ಬಂಡೆಗಳ್‌ಲಿ ರಾಕ್‌ಗಾರ್ಡನ್ ಕಲಾಶಿಲ್ಪ ಮಾಡ್‌ದೊ. ಇದರ್‌ಲಿ ಉತ್ತರಕನ್ನಡ ಜಿಲ್ಲೆನ ಹಾಲಕ್ಕಿ, ಸಿದ್ದಿ, ಕುಣಬಿ ಮೂಲನಿವಾಸಿ ಜನರ ಬೊದ್‌ಕ್, ವೇಸಬೂಸಣ, ಜಾನಪದ ಮತ್ತೆ ವ್ಯಕ್ತಿಚಿತ್ರಣಕೆ ಜೀವತುಂಬ್‌ಸಿಯೊಳೊ..


ಮೋಹನ ಸೋನ

1980ರ್‌ಲಿ ಇವರ ಕಲಾಚಿತ್ರಕೆ ಜಾನಪದ ಅಕಾಡೆಮಿ ಬಹುಮಾನ, 1983ರ್‌ಲಿ ಉಡುಪಿಲಿ ನಡ್ದ ನಾಟಕ ನಿರ್ದೇಶನ ಬಹುಮಾನ, 2005 ಮತ್ತೆ 2006ರ್‌ಲಿ ಮಕ್ಕಳ ಶೈಕ್ಷಣಿಕ ನಾಟಕಕ್ಕೆ ರಾಜ್ಯಮಟ್ಟದ ಬಹುಮಾನ, 200ರ್ಲಿ ಜೆಸಿಐ ರಾಜ್ಯಮಟ್ಟದ ಪ್ರಶಸ್ತಿ, ದಕ್ಷಿಣಕನ್ನಡ ಜಿಲ್ಲಾ ಕನ್ನಡ ರಾಜ್ಯೋತ್ಸವ ಪ್ರಶಸ್ತಿ, ಕಾಂತಾವರ ಕನ್ನಡ ಸಂಗದ ನಾ. ಮೊಗಸಾಲೆ ಪುರಸ್ಕಾರ, ಸುಳ್ಯ ತಾಲೂಕ್ ಸಾಹಿತ್ಯ ಸಮ್ಮೇಳನಲಿ ಗೌರವ ಸನ್ಮಾನ, ಕುರುಂಜಿ ವೆಂಕಟ್ರಮಣ ಗೌಡರ ಗೌರವ ಸನ್ಮಾನ, ಅಭಿನಯ ಸುಳ್ಯಂದ ಗೌರವ ಸನ್ಮಾನ, ಮಂಡ್ಯ ಗುರುದೇವ ನಾಟಕ ಅಕಾಡೆಮಿನ ಗೌರವ ಸನ್ಮಾನಗ ಸಿಕ್ಕಿಟು.

**ಯುಗಾದಿ :** ಯುಗಾದಿ ಹಬ್ಬ ಹಿಂದೂಗಳ ವೊರ್‌ಸದ ಸುರೂನ ದಿನ, ಯುಗಾದಿ ಹಬ್ಬನ ಬಾರೀ ಗೌಜಿಂದ ಮಾಡ್ವೆ. ಉಗಾದಿನ ಹಬ್ಬದ ದಿನ ಬೊಳ್‌ಪುಗೆ ಮನೆನ ತೊಳ್ದ್ ರಂಗೋಲಿ ಹಾಕಿ, ಮಾರ್ಯ್‌ಣ ಸೊಪ್ಪುನ ತೋರಣಂದ ಸಿಂಗಾರ ಮಾಡ್ವೆ. ಮನೆವು ಮೀದ್, ಸೆಗ್‌ಣಿ ಗುಡ್ಸಿ ಅಡ್ಗೆ ಮಾಡಿಕೆ ಸುರುಮಾಡ್ವೆ. ಮನೆವೆಲ್ಲಾ ಮೀದ್ ಹೊಸಬಟ್ಟೆಗಳ ಹಾಕಂಡ್ ಹಜ್ಜ ಹೊತ್ತು ಉಪಾಸಲಿದ್ದ್ ಬೇವು–ಬೆಲ್ಲ ತಿಂಬೊತ್ತಿದ್ದೊ. ಹೊಸ ವೊರ್‌ಸಲಿ ಸ್ವೀಂಕೈಂಯಿ ಎರ್‌ಡೂ ಆ ವೊರ್‌ಸದ ಜೀವನಲಿ ಸಮಲಿ ಬರಲಿತೇಳ್‌ವ ಬಾವನೆನು ಅದಲ್ಲದೆ ಬರೇ ಬೇವು ತಿಂಬಕೆ ಬಜ್ಜತೇಳಿ ಏನೋ ಬೇವು ಬೆಲ್ಲ ಒಟ್ಟಿಗೆ ತಿಂಬೊತ್ತಿದ್ದೊ. ಬೇವು ಬೆಲ್ಲನ ತಿಂಬಕೆ ಮುಂದೆ ಪೂಜೆ ಮಾಡಿ ಹಣ್ಣ್ ಕಾಯಿ ಗಂದ ಹಿಂಗೆ ದೇವ್‌ರ ಪ್ರಸಾದನ ತಕಂಡ ಮೇಲೆ ಬೇವು ಬೆಲ್ಲನ ತಿಂಬೊತ್ತಿದ್ದೊ.

ಗೌಡರ್‌ಲಿ ಒಂದ್ ಕುಟುಂಬತೇಳ್‌ರೆ ಅಪ್ಪಮ್ಮ, ಮಕ್ಕ ಮಾತ್ರ




ಅಲ್ಲ. ಸಂಸಾರಲಿ ಸುಮಾರ್ ಜೆನಗ ಒಟ್ಟಿಗೆ ಸೇರಿರ್‌ದಕೆ ಕುಟುಂಬತ ಕರ್‌ದವೆ. ಈ ಕುಟುಂಬದವೆಲ್ಲ ಸೇರಿ ಒಂದೇಮನ್ಸ್‌ಂದ ಸೇರಿಕಂಡ್ ಒಂದೇ ಹಂತಿಲಿ ಕುದ್ದ್ ಪಾಯ್ಸ ಊಟ ಮಾಡ್‌ವೆ. ಆ ದಿನ ಮಾಂಸ, ಹೆಂಡನ ಯಾರೂ ಮುಟ್ಟುದುಲೆ. ಹೆಚ್ಚಾಗಿ ಅವವೆ ಸೊಂತ ಬೆಳ್ಸಿದ ಹೊಸ ತರ್‌ಕಾರಿ ಗೈಪು ಪಲ್ಯಲೆ ಅಡ್ಗೆ ಮಾಡ್‌ವೆ. ಗಮ್ಮತ್ ಊಟ ಉಂಡಾದ ಮೇಲೆ ಎಲೆಡಿಕೆ ತಿಂಬೊತ್ತಿದ್ದೊ. ಆಯವ್ಯಯ, ಕಸ್ಟ, ಸುಕ, ಜಯ ಅಪಜಯ ದನ ದಾನ್ಯಗಳ ಪಲ ಇರ್‌ವ ಕಾರ್‌ಯಗಳ ಸಂಬವ ಹಿಂಗೆನೆ ಸಾಮಾನ್ಯ ರೀತಿಂದ ಕಂಡ್‌ಕಂಬ ಹುರುಪುಗಾಗಿ ಹೊಸ ವೊರ್‌ಸದ ಪಂಚಾಂಗನ ಯಜಮಾನಂದ ಹಿಡ್‌ದ್ ಎಲ್ಲರ ಜೆನ್ಮ ನಕ್ಸತ್ರಗಳ ಆದಾರಂದ ಅವರವರ ಕಾರ್‌ಯ ಕಲಾಪಗಳ್‌ಲಿ ಸೇರಿಕೆ ಗುರ್‌ತು ಹಾಕಂಡವೆ. ಅದರಂಗೆ ಇಂತಿಂತ ಕಾರ್‌ಯಗಳಿಗೆ ಇಂತವೇ ಆಕುತ ತೀರ್‌ಮಾನ ಮಾಡ್‌ವೆ. ಇನ್ನೂ ಗೌಜಿಲಿ ಮಾಡ್ದಾರ್ ಊರುನ ಜೆನಗ ಒಂದ್‌ಕಡೆ ಸೇರಿ ದೇಸ್ತಾನನೋ ಇಲ್ಲೆರ್ ಯಾದಾರ್ ಅಡ್‌ಕಲಿ ಪೂಜೆ, ಉತ್ಸವ ಚೆಂಡಾಟ, ಕಾಯಿಗೆ ಗುರಿ ಇಸಿ ಗುಂಡು ಹೊಡೆದು ಹಿಂಗೆ ಸುಮಾರ್ ಆಟೋಟ ಸ್ಪರ್‌ದೆಗ, ಸಬೆ ಬಹುಮಾನ ವಿತರಣೆಗಳ ಬಾರೀ ಕುಸಿಲಿ ನಡ್‌ಸ್‌ವೆ. ಇದಲ್ಲದೆ ಜೆನಗ ಎಲ್ಲವೂ ಸೇರಿ ಕೂಡಿಕೆ ಬೇಕಾಗಿ ನೆರೆಕರೆವರ ಕರ್‌ದ್ ಎಲ್ಲಾ ಮನೆಲಿನೂ ಅತಿತಿ ಸಮ್ಮಾನದೊಟ್ಟಿಗೆ ದಾಸರ್, ಬೇಡವ್ ಬಂದರೆ ದಾನ ಮಾಡ್‌ವ ಪೊದ್ದತಿನೂ ಉಟ್ಟು. (ಎಮ್.ಎಸ್.)

**ರಂಗಬೂಮಿ– ಸುಳ್ಯ ತಾಲೂಕಿನ ರಂಗಬೂಮಿ: ರಂಗಬೂಮಿಲಿ ಅರೆಬಾಸೆ ಪ್ರದೇಸ :** ಸುಳ್ಯ ತಾಲೂಕು ಮನೆನಾಡ್ ಪ್ರದೇಸಲಿ ಸಾಂಸ್ಕೃತಿಕರಂಗಲಿ ತುಂಬಾ ಸಿರಿವಂತಿಕೆಲಿ ಬೆಳ್ದ ಒಂದ್ ಸಣ್ಣ ತಾಲೂಕು. ಯಕ್ಸಗಾನದ ಒಟ್ಟ್‌ಗೆ ಎಲ್ಲಾ ಬಗೆನ ಜಾನಪದ ಪ್ರಕಾರಗ ಸೇರಿಕಂಡ್ ಇಲ್ಲಿನ ಸಮುದಾಯಕೆ ಮೆರ್‌ಗ್ ಕೊಟ್ಟ ತಾಲೂಕು. ಈಚೆಗೆ ಬೇರೆ ಬೇರೆ ಕಸುಬುನೊಟ್ಟಿಗೆ ರಂಗಬೂಮಿನೂ ಇಡೀ ದೇಸಕೆ ಮಾದರಿ ಆವ ಹಾಂಗೆ ಪ್ರಯತ್ನ ಮಾಡ್‌ತಾ ಒಳೊ. ರಂಗಬೂಮಿ ಬೇರೆ ಕಡೆಂದ ಬಂದದ್ ಅಲ್ಲ. ಬೂತಾರಾದನೆ, ಯಕ್ಸಗಾನ, ಜಾನಪದ ಈ ಎಲ್ಲಾ ವಿಸಯದ ಒಟ್ಟ್‌ಗೆ ತಾಲೂಕ್‌ಲಿ ರಂಗಬೂಮಿ ಬೇಳ್ದುಟ್ಟು.

ಸುಳ್ಯ ತಾಲೂಕ್‌ನ ರಂಗ ಬೂಮಿಗೆ ಅದರ್‌ದೇ ಆದ ಇತಿಯಾಸ ಉಟ್ಟು. ಪಂಡ್‌ಲಿ ಹಳ್ಳಿಲಿ ರಂಗಬೂಮಿ ಬೆಳ್‌ತ್, ಅದ್ ಪಂಜ, ಬೆಳ್ಳಾರೆ, ಚೊಕ್ಕಾಡಿ, ಕಲ್ಮಡ್ಕ, ದೇರಾಜೆ, ಸುಬ್ರಹ್ಮಣ್ಯ ಹಿಂಗೆ ತಾಲೂಕ್‌ನ ಬೇರೆ ಬೇರೆ ಜಾಗೆಲಿ ನಡ್‌ಕಂಡ್ ಇತ್ತ್. ಈಗೊಳು ನಡ್‌ಕಂಡ್ ಉಟ್ಟು. ಪೈಲೂರು ಗೋಪಾಲಕೃಸ್ಣಯ್ಯ ಅವರ 'ಕೊಂಬೆಟ್ಟು ನಾಟಕ ಮಂಡಳಿ' ಕಂಪೆನಿ ನಾಟಕ ಶೈಲಿಲಿ, ಪೌರಾಣಿಕ, ಸಂಗೀತ, ನಾಟಕ ಆಡ್‌ತ್ತಿದ್ದೊ. ಬೆಳ್ಳಾರೆ ಇದ್‌ಕ್ಕೆ ಕೇಂದ್ರ ಜಾಗೆ ಆಗಿತ್ತ್. ಹಂಗೇನೆ ಸುಬ್ರಹ್ಮಣ್ಯಲಿ ಮಟದ ಸ್ವಾಮಿಗ ಸುಮಾರು 1930 ರ ದಶಕಲೇ 'ವಾಸುಕೀ ನಾಟಕ ಸಬಾ' ತೇಳಿ ನಾಟಕ ತಂಡ ಮಾಡಿಕಂಡ್ ನಾಟಕ ನಡ್ಸತ ಇದ್ದೊ.

1933–38 ರವರೆಗೆ ಸುಳ್ಯಲಿ ಶಿವರಾಮ ಕಾರಂತರ್ ಡೊಮಿಂಗೋ ನಾಟಕ ಆಡಿಯೊಳ. ಬೆಳ್ಳಾರೆಲಿ ಕೊಟ್ಟೆಕಾಯಿ ನಾರಾಯಣ ರಾಯರ್ 'ಸಮಾಜವಲೋಕನ' ತ ಸಾಮಾಜಿಕ ನಾಟಕನ ಪ್ರದರ್‌ಶಿಸ್ಸೊಳ. ಕಲ್ಮಡ್ಕ ಪರಿಸರಲಿ ಯಕ್ಸಗಾನ ಮತ್ತೆ ರಂಗಬೂಮಿ ಯಾಗೊಳು ನಡ್‌ಕಂಡ್ ಬಂದಿತ್ತ್. ಹಂಗೇನೇ 1940ರ ದಸಕದ ನಾಟಕಲಿ ಜಿ. ವಿ. ಕೃಸ್ಣ, ಕುರುಂಜಿ ವೆಂಕಟ್ರಮಣ ಗೌಡರ್ ಸೇರಿಕಂಡಿದ್ದೊ. ಪ್ಯಾರ ನಾವೂರು ಹೆಸರ್ ಇಸ್‌ಕಂಡ್ ಪ್ರಬಾಕರ ನಾವೂರು ಯಕ್ಸಗಾನ, ನಾಟಕ, ಸಾಹಿತ್ಯ, ಚಿತ್ರಕಲೆ, ಸಿನಿಮಾ ಹಿಂಗೆ ಎಲ್ಲಾ ಕ್ಸೇತ್ರಲಿ ತನ್ನ ಪ್ರತಿಬೆನ ತೋರ್‌ಸಿದವು. 1970ರ್‌ಲಿ ಕುಕ್ಕುಜಡ್ಕ ಚೊಕ್ಕಾಡಿಲಿ ರಂಗಬೂಮಿನ ಬಿತ್ತಿದವ್. ಶ್ರೀಸುಬ್ರಾಯ ಚೊಕ್ಕಾಡಿ ಒಬ್ಬ ಕವಿಯಾಗಿ ರಂಗಬೂಮಿಗೆ ಅಪಾರ ಕೊಡುಗೆ ಕೊಟ್ಟೊಳೊ.

**ಅಬಿನಯ ಸುಳ್ಯ :** 1979ರ್‌ಲಿ ಅಬಿನಯ ಸುಳ್ಯ ಶಿವರಾಮ ಕಾರಂತರ ನಾಟಕ ಚೋಮನ ನಾಟಕಂದ ಸುರು ಆತ್. ಎಂ. ಬಿ. ಸದಾಶಿವ, ಸುಬ್ರಾಯ ಚೊಕ್ಕಾಡಿ ಅವರ ಉಮೇದ್‌ಲಿ ಆರ್. ನಾಗೇಶ್ ಕ್ಯಾತ ನಾಟಕ ನಿರ್‌ದೇಸಕರ್ ಸುಳ್ಯಕ್ಕೆ ಬಂದ್ ತಾಲೂಕ್‌ನ ಮೂಲೆ ಮೂಲೆಂದ 90 ಜೆನ ಕಲಾವಿದರ ಕೂಡಿ ಹಾಕಿ ಬಾರಿ ದೊಡ್ಡ ಶಿಬಿರ ಮಾಡಿದ್ದೊ. ಚೋಮ ನಾಟಕ ಜಿಲ್ಲೆಲಿ 4 ಕಡೆ ಪ್ರದರ್‌ಶನ ಕಂಡ್‌ತ್. ಈ ನಾಟಕಲಿ ಸುಬ್ರಾಯ ಚೊಕ್ಕಾಡಿ, ಜಯಪ್ರಕಾಶ ಮಾವಿನಕುಳಿ, ದಿ. ಮೋಹನ ಸೋನ, ಪುರುಷೋತ್ತಮ ಬಿಳಿಮಲೆ, ಪ್ರಭಾಕರ ಶಿಶಿಲ, ತುಕರಾಮ ಏನೆಕಲ್, ಜಿ. ಎಸ್. ಉಬರಡ್ಕ, ದಿ. ಪದ್ಮಯ್ಯ ಕಾನತ್ತಿಲ, ಸತ್ಯಮೂರ್ತಿ ದೇರಾಜೆ, ಸುಬ್ರಾಯ ಭಟ್ ಚೊಕ್ಕಾಡಿ, ಇವು ಮುಕ್ಯ ಆಗಿದ್ ಇದ್ದೊ.. ಮುಂದೆ ಪ್ರತೀ ವರ್‌ಸನು ನಾಟಕೋತ್ಸವ, ಮಕ್ಕಳ ನಾಟಕ ಶಿಬಿರ, ಜಿಲ್ಲಾ ನಾಟಕೋತ್ಸವ, ನಾಟಕದ ಶಿಬಿರ ಮಾಡ್‌ದ ಕೀರ್‌ತಿ ಅಬಿನಯ ಸುಳ್ಯ ತಂಡಕೆ ಇತ್ತ್.ತೆರೆಗ, ಮಾಯ ಆದ ಸೇತುವೆ, ಜೂಲಿಯಸ್ ಸೀಸರ್, ಉತ್ತಮ ಪ್ರಬುತ್‌ಲೊಳ ಲೊಟ್ಟೆ, ಬಂಕಾಪುರದ ಬಯಲಾಟ, ಕಲ್ಯಾಣ ಸ್ವಾಮಿ, ಅಲೆಮಾರಿಗಳು, ನಾಗಮಂಡಲ ಹಿಂಗೆ ಈ ಎಲ್ಲಾ ನಾಟಕಕೆ ತನ್ನ ಶಕ್ತಿ ಮೀರಿ ಕೆಲಸ ಮಾಡ್‌ದವು ಯಚ್. ಎಂ. ಕುಮಾರಸ್ವಾಮಿ ವಿಶ್ರಾಂತ ಪ್ರಾಂಶುಪಾಲರ್ ರಂಗಕರ್‌ಮಿ, ನಾಟಕ, ಅನುವಾದಕ, ನಾಟಕ ರಚನೆ ಈ ರೀತಿಲಿ ದುಡ್‌ದವು.

**ಕುಕ್ಕೆ ಶ್ರೀ ಸುಬ್ರಹ್ಮಣ್ಯೇಶ್ವರ ಮಹಾವಿದ್ಯಾಲಯದ ಸಾಂಸ್ಕೃತಿಕ ರಂಗ (ಕುಸುಮ ಸಾರಂಗ) :** 1992–93ರ್‌ಲಿ ಸುರ್ ಆಗಿ ಕಾಲೇಜ್ ರಂಗಬೂಮಿ ಕ್ಸೇತ್ರಲಿ ಇಡೀ ರಾಜ್ಯಕೆ ಒಂದ್ ಮಾದರಿ ಆಗಿ ಹೆಸ್‌ರ್ ಮಾಡ್ದ ತಂಡ ಆಗುಟು. ಪ್ರತೀ ವರ್‌ಸ ಬುಡದೇ ಇಂದ್‌ನವರೇಗೆ ಸುಮಾರ್ 20 ರಿಂದ 30 ಮಕ್ಕಳ ಕೂಡಿ ಹಾಕಿ ಬಾರೀ ದೊಡ್ಡ ದೊಡ್ಡ ನಾಟಕನ ಮಾಡಿ ರಾಜ್ಯ, ಜಿಲ್ಲೆಲಿ ತುಂಬಾ ಸರ್‌ತಿ ಬಹುಮಾನ ಪಡ್‌ದುಟು. ಇದರ್‌ಂದಾಗಿ ಸುಮಾರು 500 ಜೆನ ವಿದ್ಯಾರ್‌ತಿಗ ಬೇರೆ

ಬೇರೆ ರಂಗಲಿ ಕೆಲಸ ಮಾಡ್‌ವಂಗೆ ಉಪಕಾರ ಆಗುಟ್ಟು. ರಾಜ್ಯಂದ ನೀನಾಸಂ, ಎನ್. ಎಸ್. ಡಿ. ತರಬೇತಿ ಪಡ್‌ದ್ ಸುಮಾರ್ 25 ಜೆನ ನಿರ್‌ದೇಸಕರ್ ಈ ತಂಡಕೆ ತರಬೇತಿ ಕೊಟ್ಟೊಳೊ. ಸುರೇಶ್ ಆನಗಳ್ಳಿ, ಪ್ರವೀಣ ಎಡಮಂಗಲ, ಕೃಷ್ಣ ಗುತ್ತಿಗಾರ್ ಇವು ಎನ್. ಎಸ್. ಡಿ. ಪರಿಣತರ್. ಆದರೆ, ಜೀವನ್‌ರಾಂ ಸುಳ್ಯ, ವೆಂಕಟರಮಣ ಐತಾಳ, ಶೀನಾ ನಾಡೋಳಿ, ಮಂಜುನಾಥ ಬಡಿಗೇರ್, ಮೌನೇಶ್ ಬಡಿಗೇರ್, ಕೃಷ್ಣಮೂರ್ತಿ ಕವತ್ತಾರ್, ಮೋಹನ ಸೋನ, ಐಕೆ ಬೊಳುವಾರು, ಪ್ರವೀಣ ತಳೂರು, ದಿ. ನವೀನ ಎಡಮಂಗಲ ಇವೆಲ್ಲಾ ನೀನಾಸಂ ಪದವೀದರರ್‌ಗ. ಈ ತಂಡನ ಹುಟ್ಟು ಹಾಕಿದವು ತುಕಾರಾಮ ಏನೆಕಲ್. ಇವ್ ಕುಕ್ಕೆ ಶ್ರೀ ಸುಬ್ರಹ್ಮಣ್ಯೇಶ್ವರ ಮಹಾ ವಿದ್ಯಾಲಯದ ನಿವೃತ್ತ ಶಾರೀರಿಕ ಶಿಕ್ಷಣ ನಿರ್‌ದೇಸಕರ್. ಈ ತಂಡ ಮುಕ್ಯ ಆಗಿ ನಡ್‌ಸಿದ ತರಬೇತಿ ಶಿಬಿರ ಮತ್ತ್ ಕನ್ನಡ ನಾಟಕ ಸಿರಿಸಂಪಿಗೆ, ಕೆರೆಗೆ ಹಾರ, ಅಂದಯುಗ, ಲೋಕ ಶಾಕುಂತಲ, ಅಗ್ನಿ ಮತ್ತೆ ಮಳೆ, ಸೂರ್‌ಯ ಶಿಕಾರಿ, ತಲೆದಂಡ, ಮಹಾಮಾಯಿ, ಸಾಹೇಬರು ಬಂದವೆ, ಕನಸು, ಹೂ ಹುಡುಗಿ, ಮಲ್ಲಮ್ಮನ ಮನೆ, ಹೋಟ್ಲ್ ಜೊತೆಗಿರುವನು, ಚಂದಿರ, ಘಾಸಿರಾಂ ಕೊತ್ವಾಲ್ ಎಂಬ ಚಿತ್ರಗಾರ ಹಾಂಗೆ ಅರೆಬಾಸೆ ನಾಟಕ 'ಹೊತ್ತ್ ಕಂತ್‌ಕನ'.

**ವಿನ್ಯಾಸ್ ಬಾಳಿಲ :** 1976ರ್‌ಂದಲೇ ಈ ತಂಡ ಮಕ್ಕಳಿಗೆಂತ ಸುರ್ ಮಾಡಿ 1980 ರ್‌ಂದ ಮಕ್ಕಳಿಗೆ ಹಾಂಗೇಸ ದೊಡ್ಡೊವ್‌ಕೆ ಕೂಡಾ ನಿರಂತರ ಆಗಿದ್ ನಾಟಕ ಸಿಬಿರ ಮಾಡ್‌ದ ಕೀರ್‌ತಿ ಆರ್. ಕೆ. ಬಾಸ್ಕರ್ (ಜಿಜ್ಞಾಸು ಕಾಸರಗೋಡು) ಇವುಕ್ಕೆ ಸಲ್ಲೋಕು. ಈ ತಂಡ ನಡ್ಸಿದ ಕೆಲವ್ ನಾಟಕಗ. ಆಕಾಶ ಮಾನವ, ಟ್ರೈನ್ ಯಂತ್ರಗಳು, ಆರೋಹಣ, ಆಲಿ ಬಾಬ ಮತ್ತೆ ಕಳ್ಳರು, ಸೊಳ್ಳೆಯೂ ತಗಣೆಯೂ, ಎಣ್ಣೆ ಚಿಮಿಣಿ ಎಣ್ಣೆ, ಕೊಡೆಗಳು, ಮಹಾರಾಣ, ಕೊಡೆಗಳು, ಹಯವದನ, ಪ್ರೊಪೊಸಲ್, ಜಾತ್ರೆ, ಮಾದವಿ ನಾಟಕ ಮಾಡಿ ನಿರ್‌ದೇಶನ ನೀಡ್‌ದ ನಿರ್‌ದೇಶಕ್‌ಗ ಸಿ. ಆರ್. ಜಂಬೆ, ಅಚ್ಚುತ ಮಂಜೇಶ್ವರ, ಇಕ್ಬಾಲ್ ಅಹಮದ್, ಮೋಹನ ಸೋನ, ಮಹಾಬಲ ಕಲ್ಮಡ್ಕ ಈ ರಾಜ್ಯದ ಬೇರೆ ಬೇರೆ ಕಡೆ ನಾಟಕಗಳ ಪ್ರದರ್‌ಸನ ಕೂಡ ಮಾಡಿಯೊಳೊ ಉಡ್‌ಪಿ, ಸಿವಮೊಗ್ಗ, ಮೈಸೂರು, ಬೆಂಗಳೂರು ಕಡೆಲಿ ನಾಟಕನ ಪ್ರದರ್‌ಸನ ಮಾಡ್‌ದ ಕೀರ್‌ತಿ ಇವರ್‌ದ್.

**ರಂಗಮನೆ ಸುಳ್ಯ :** ಜೀವನ್ ರಾಂ ಸುಳ್ಯ ಅವರ ಸಾರತ್ಯಲಿ ನಡೆವ ಈ ರಂಗ ಮನೆ ಕಾರ್‌ಯಕ್ರಮ ಅದ್ ನಿತ್ಯ ನಿರಂತರ. ತನ್ನ ಮನೆನನೆ ಒಂದ್ ನಾಟಕ ತಾಣಂತ ಮಾಡ್ಕಂಡ್ ಅಲ್ಲಿಯೇ ಬಯಲು ರಂಗ ವೇದಿಕೆನ ನಿರ್‌ಮಾಣ ಮಾಡಿ ವರ್‌ಸ ಇಡಿ ಮಕ್ಕಳಿಗೆ, ದೊಡ್ಡವೊಕೆ ಹಿಂಗೆ ಇಡೀ ರಂಗಬೂಮಿಗೆ ಸಮ್ಮಂದ ಆವ ಒಳ್ಳ ಒಳ್ಳ ಕಾರ್‌ಯಕ್ರಮಗ ನಡ್‌ಕಂಡ್ ಬಂದುಟು. ಅದು ಜಾದು, ನಾಟಕೋತ್ಸವ, ಚಿಣ್ಣರ ಮೇಳ, ಪ್ರಸಂಗ, ಕಾರ್‌ಯಗಾರ, ಸಂಗೀತ, ಯಕ್ಸಗಾನ, ಬರತನಾಟ್ಯ ತರಬೇತಿ, ಬೀದಿ ನಾಟಕ, ರಂಗ ತರಬೇತಿ, ರಂಗ ವಿನ್ಯಾಸ, ವಸ್ತು ವಿನ್ಯಾಸ, ರಂಗ ಗಾಯನ, ಚಿತ್ರಕಲೆ, ಕ್ರಾಫ್ಟ್, ಮುಕವಾಡ ರಚನೆ, ಅಲ್ಲದೆ ಇನ್ನೂ ಅನೇಕ ರಂಗಮನೆ ಪ್ರೀತಿನ ಸೆಲೆ ಆಗಿದ್ ಎಲ್ಲವುಕು ಒಂದ್ ಪ್ರೀತಿನ ತಾಣ ಆವುಟು. ಜೀವನ್‌ರಾಮ್ ಒಬ್ಬ ಶ್ರಮ ಜೀವಿ. ರಂಗಬೂಮಿಗೆ ಹೆಚ್ಚ್‌ನ ಕೊಡುಗೆ ಕೊಟ್ಟ ಒಬ್ಬ ಕರ್‌ಮ ಜೀವಿ. ರಂಗ ಮನೆ ಅಲ್ಲದೇ ಮೂಡಬಿದಿರೆಲಿ ಮಕ್ಕಳ ನಾಟಕ ಕಟ್ಟಿಕಂಡ್ ಅಲ್ಲಿಂದ ದೇಶದಾದ್ಯಂತ ಸುತ್ತಿ ಮೂರು ಸರ್‌ತಿ ರಾಸ್ಟ್ರೀಯ ಪ್ರಶಸ್ತಿ ಪಡ್‌ದ ತಂಡ ಅದ್. ಹಂಗೇನೇ 8 ಸರ್‌ತಿ ರಾಜ್ಯ ಪ್ರಶಸ್ತಿ ಕೂಡ ಪಡ್‌ದೊಳ. ಇದರೊಟ್ಟ್‌ಗೆ 'ರಂಗಮನೆ ರಾಜ್ಯ ಪ್ರಶಸ್ತಿ' ತ ಮಾಡಿಕಂಡ್ ಪ್ರತೀ ವರ್‌ಸ ವಿಸೇಸ ಸಾದನೆ ಮಾಡ್‌ದ ಮಹನೀಯರಿಗೆ ಈ ಪ್ರಶಸ್ತಿನ ಕೊಟ್ಟವೆ.

**ಸಂಗಮ ಕಲಾ ಸಂಘ ಕಲ್ಮಡ್ಕ :** ತಾಲೂಕ್‌ನ ಕಲ್ಮಡ್ಕ ಎಂಬ ಹಳ್ಳಿಲಿ ಕಳ್‌ದ 30–35 ವರ್‌ಸಂದ ಯಕ್ಸಗಾನ, ವೇಸಬೂಸಣ, ಮುಕವಾಡ ತಯಾರಿ, ಬೊಂಬೆ ತಯಾರಿ, ನಾಟಕ ಅಬಿನಯ ತರಬೇತಿ ಪ್ರಸಾದನ ಹಿಂಗೆ ಸುಮಾರ್ ತರಲಿ ರಂಗಬೂಮಿನ ಜೀವಂತ ಕಲೆ ಜೀವ ತುಂಬುವ ಕೆಲಸ ಮಾಡ್‌ತ್ತಾ ಸದ್ದಿಲ್ಲದೇ ಕಾರ್‌ಯ ಸಾದನೆ ಮಾಡ್‌ತ್ತಾ ಒಳೊ. ರಂಗ ಪರಿಕರಗಳ ಕೇಂದ್ರ ಮಾಡಿಕಂಡ್ ರಂಗಾಸಕ್ತರಂಗೆ ತುಂಬಾ ಒಳ್ಳದರ್‌ಲಿ ಇದ್ದ್, ನೀನಾಸಂ ಪದವೀದರನಾಗಿ ದುಡಿದ್‌ಕ್ಕೊಂಡ್ ಬಂದವು ರಂಗಕರ್‌ಮಿ ಮಹಾಬಲ ಕಲ್ಮಡ್ಕ.

**ಶ್ರೀಗುರು ಆರ್ಟ್ಸ್ ಬೆಳ್ಳಾರೆ :** ಕಳ್‌ದ 20 ವರ್‌ಸಂದ ನಿತ್ಯ ಕನ್ನಡ ನಾಟಕ, ತುಳುನಾಟಕ, ಐತಿಹಾಸಿಕ ನಾಟಕ, ಪೌರಾಣಿಕ ನಾಟಕಗಳಿಗೆ ನಾಟಕದ ಪರಿಕರ, ಪ್ರಸಾದನ ಕೂಡ ಮಾಡ್‌ವೆ ಈ ತಂಡಲಿ ಪ್ರಾಮಾಣಿಕ ಆಗಿ ಕೆಲಸ ಮಾಡ್ತಾ ಇರ್‌ವ ವಾಸುದೇವ ರೈ ಬೆಳ್ಳಾರೆ ಇದರ ಸಂಪೂರ್ಣ ಜೊವಾಬ್ದಾರಿ ಹೊತ್ತೊಳೊ.

ಇನ್ನ್ ಸಂಪಾಜೆ, ಗುತ್ತಿಗಾರ್, ಪಂಜ ಪರಿಸರಲಿ ಏನೆಕಲ್, ಕನಕಮಜಲು, ಕರಿಕಳ ಈ ಊರ್‌ಲಿ ಕೂಡಾ ಕೆಲ ಸಮಯಲಿ ಕೆಲ ದಿನ ನಾಟಕಗಳ ಮಾಡಿಕಂಡ್ ಬಂದೊಳೊ. ಇಲ್ಲಿ ಒಳ್ಳೆ ಒಳ್ಳೆ ನಾಟಕ ಆಸಕ್ತರ್ ಮತ್ತೆ ರಂಗ ಪ್ರೇಮಿಗಳಿಂದ ನಾಟಕಗ ಆಗುತ್ತಾ ಉಟ್ಟು, ಅಲ್ಲದೇ ಕನಕಮಜಲ್‌ಲಿ ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ ಅವರ ನೇತೃತ್ವದಲ್ಲಿ ಪ್ರತೀ ವರ್‌ಸನು ರಂಗಬೂಮಿ ಕಾರ್‌ಯ ಮತೆ ಚಲನಚಿತ್ರದ ಪ್ರದರ್‌ಸನ ಕೊಟ್ಟ್ ಇಡೀ ಊರ್‌ನ ಜೆನಂಗಳಿಗೆ ರಂಗಬೂಮಿ ಪರಿಚಯ ಮಾಡ್‌ವೆ.

ಸುಳ್ಯತಾಲೂಕ್‌ನ ಪ್ರತಿಬಾನ್ವಿತ ನಾಟಕ ತರಬೇತಿ ಪಡ್‌ದ ಜೆನಂಗ : ನಾಟಕ ಶಾಲೆ ನವದೆಹಲಿ ಎನ್. ಎಸ್. ಡಿ. ಪದವೀದರ್ ಕೃಷ್ಣ ಗುತ್ತಿಗಾರು, ನೀನಾಸಂ ಎನ್. ಎಸ್. ಡಿ., ಪ್ರವೀಣ ಎಡಮಂಗಲ, ನೀನಾಸಂ ಎನ್. ಎಸ್. ಡಿ. ನೀನಾಸಂ ಪದವೀದರ್‌ಗ ಕೃಷ್ಣ ಕುಮಾರ ನಾರ್ಣಕಜೆ, ಜೀವನ್‌ರಾಂ ಸುಳ್ಯ, ರೇಣುಕಾ ಪಂಜ, ದಿ. ನವೀನ ಎಡಮಂಗಲ, ಜಯಶೇಕರ ಮಡಪ್ಪಾಡಿ, ರಾಜೇಶ್ವರಿ ಸುಳ್ಯ,




ಪ್ರವೀಣ ತಳೂರು, ಬಾಸುಮ ಕೊಡಗ್, ಮಹಾಬಲ ಕಲ್ಮಡ್ಕ, ಸರಸ್ವತಿ ಬೊಳಿಯಮಜಲು, ಪದ್ಮಾ ಕೊಡಗ್ ಸಂಪಾಜೆ, ರಂಗಾಯಣ ಮೈಸೂರುನ ಶ್ರೀಮತಿ ಗೀತಾ ಮೋಂಟಡ್ಕ

**ತಾಲೂಕ್‌ನ ಹಿರಿಯ ನಾಟಕ ಕಲಾವಿದರ್ :** ಹೆಚ್. ಎಂ. ಕುಮಾರ ಸ್ವಾಮಿ, ಪ್ರಭಾಕರ ಶಿಶಿಲ, ಪದ್ಮಾ ಕೊಡಗ್, ಬಾಸುಮ ಕೊಡಗ್, ಜಯಪ್ರಕಾಶ್ ಮೋಂಟಡ್ಕ, ಜಯಪ್ರಕಾಶ್ ಕುಕ್ಕೆಟ್ಟಿ, ದಯಾನಂದ ಕೇರ್ಪಳ, ವಿ. ಪರಮೇಶ್ವರ ಹೊಳ್ಳ, ಜೀವನ್‌ರಾಂ ಸುಳ್ಯ, ತುಕರಾಂ ಏನಕಲ್, ಗಿರಿದರ ಕೊಯಿಂಗೋಡಿ, ಪೂವಪ್ಪ ಕಣಿಯೂರು, ಆರ್. ಕೆ. ಜೋಸಿ, ತೇಜಕುಮಾರ ಬಡ್ಡಡ್ಕ, ಪ್ರಸನ್ನ ಬಡ್ಡಡ್ಕ, ಗೋವಿಂದ ಎನ್. ಎಸ್., ಕಿಶೋರ್ ಕುಮಾರ್ ಕಿರ್‌ಲಾಯ, ಕೆ. ರಾಮಕೃಷ್ಣ, ಗೀತಾ ಮೋಂಟಡ್ಕ, ಟಿ. ಜಿ. ಮೂಡೂರು, ರಾಜೇಶ್ವರಿ, ಯು. ಸುಬ್ರಾಯ, ದಿ. ಮೋಹನ ಸೋನ, ಜೆನಾರ್ದನ ಕಣಕ್ಕೂರು, ನಾಗರಾಜ ಮುಳ್ಯ, ಕೆ. ಶಶಿದರ, ಆರ್. ಕೆ. ಬಾಸ್ಕರ್, ಕೆ. ವಿ. ಶರ್ಮ, ದಿ. ಎನ್. ಎಸ್. ದೇವಿಪ್ರಸಾದ್, ಮಹಾಬಲ ಕಲ್ಮಡ್ಕ, ಸುಬ್ರಾಯ ಚೊಕ್ಕಾಡಿ, ಸುಬ್ರಾಯ ಭಟ್ ಚೊಕ್ಕಾಡಿ, ರಾಮಚಂದ್ರ ಸುಬ್ರಹ್ಮಣ್ಯ, ಗೀತಾ ಮುಳ್ಯ, ರಾಜೇಶ್ವರಿ ಸುಳ್ಯ

**ತಾಲೂಕ್‌ನ ಬೊಯ್‌ಲ್ ರಂಗ ಮಂದಿರಂಗ :** ರಂಗಮನೆ ಸುಳ್ಯ, ಸರಕಾರಿ ಜೂನಿಯರ್ ಕಾಲೇಜು ಸುಳ್ಯ, ಯುವಜೆನ ಸಂಯುಕ್ತ ಮಂಡಳಿ ಸುಳ್ಯ, ಸಂಪಾಜೆ ಜೂನಿಯರ್ ಕಾಲೇಜು, ಸರಕಾರಿ ಹಿರಿಯ ಪ್ರಾತಮಿಕ ಶಾಲೆ ಸೋಣಂಗೇರಿ, ಕುಸುಮ ಸಾರಂಗ ಸುಬ್ರಹ್ಮಣ್ಯ, ಸರಕಾರಿ ಹಿರಿಯ ಪ್ರಾತಮಿಕ ಶಾಲೆ ಕನಕಮಜಲು. (ಟಿ.ಎ.)

**ಲಕ್ಷ್ಮಣ ತೀರ್‌ತ :** ಕಾವೇರಿ ಹಳ್ಳಕೆ ಅದರ ಬಲದಂಡೆಲಿ ಬಂದ್ ಸೇರ್‌ವ ಉಪನದಿಗಳ್‌ಲಿ ಒಂದ್. ಕೊಡ್‌ಗುನ ತೆಂಕದ ಬಾಗದ ಬ್ರಹ್ಮಗಿರಿನ ದೇವಸಿ ಬೆಟ್ಟಲಿ, ಮುನಿಕಾಡ್ ತೇಳ್ವಾ ಕಾನಲಿ ಈ ಹಳ್ಳ ಹುಟ್ಟಿದೆ. ಈ ಹಳ್ಳ ಹರ್‌ಕಂಡ್ ಹೋವ ಒಟ್ಟು ಉದ್ದ ಸು. 180 ಕಿಮೀ. ಲಕ್ಷ್ಮಣ ತೀರ್‌ತ ಮತ್ತೆ ಇದರೊಟ್ಟಿಗೆ ಕೂಡ್‌ವ


ಲಕ್ಷ್ಮಣ ತೀರ್‌ತ

ರಾಮತೀರ್‌ತ ಮತ್ತೆ ಕೆರೆಹೊಳೆ ನದಿಗ ಕೊಡ್‌ಗ್ ಜಿಲ್ಲೆನ ವಿರಾಜಪೇಟೆ ತಾಲೂಕ್‌ನ ಆಗ್ನೇಯ ಬಾಗಕೆ ನೀರಾವರಿ ಸೌಲಬ್ಯಗಳ ಕೊಟ್ಟದೆ. ಬ್ರಹ್ಮಗಿರಿಂದ ಒರ್‌ಬರೆಲಿ ಹರ್‌ಕಂಡ್ ಬಾವ ಈ ಹಳ್ಳ ಹೆಚ್ಚಿನಂಸ ಇಳಿಕುತ್ತದಂಗಿರುವ ಗೋಡೆನಂತ ಬೂಪ್ರದೇಸದೊಟ್ಟಿಗೆ ಸೇರಿಕಂಡದೆ. ಈ ಕಾರಣಂದ ಈ ಎಡೆನ ಜಾಗೆ ಬಾರಿ ಲಾಯ್ಕ್ ಕಂಡದೆ ಬಾಗದ ಇರ್ಪು ತೇಳ್‌ವ ಜಾಗೆಲಿ ಲಕ್ಷ್ಮಣ ತೀರ್‌ತದ ಒಂದ್ ಜಲಪಾತ ಉಟ್ಟು. ಈ ಹಳ್ಳ ಹುಣ್‌ಸೂರು ತಾಲೂಕುನ ಚಿಕ್ಕಹೆಜ್ಜೂರ್‌ನ ತೆಂಕಕೆ ಸು. 3 ಕಿಮೀ ದೂರಲಿ ಮೈಸೂರು ಜಿಲ್ಲೆನ ಮುಟ್ಟಿದೆ. ಮುಂದೆ ಹನಗೋಡು, ಹುಣಸೂರು ಮತ್ತೆ ಕಟ್ಟೆಮಳಲವಾಡಿಂದಾಗಿ ಹರ್‌ಂಕಡ್ ಇದ್ ಕೃಷ್ಣರಾಜೆನಗರ ತಾಲೂಕುಗೆ ಬಂದ್‌ದ್ ಸಾಗರಕಟ್ಟೆ ಹಕ್ಕಲೆ ಕಾವೇರಿ ಹಳ್ಳದೊಟ್ಟಿಗೆ ಸೇರಿಕಂಡದೆ. ಇದ್ ಸಣ್ಣ ಹಳ್ಳ ಆದರ್ ಎಲ್ಲ ಕಾಲಲು ಇದರ್‌ಲಿ ನೀರ್ ಹರ್‌ಂಕಡ್ ಇದ್ದದೆ. ಈ ಹಳ್ಳನ ಉದ್ದಕೆ ಸುಮಾರ್ ಅಣೆಕಟ್ಟುಗಳ ಕಟ್ಟಿದ್ ನೀರಾವರಿ ಸೌಲಬ್ಯನ ಕೊಟ್ಟಳೊ. ಕೊಡ್‌ಗ್‌ಲಿ ಲಕ್ಷ್ಮಣ ತೀರ್‌ತ ಜಲಾಶಯನ 1893ರ್‌ಲಿ ಕಟ್ಟಿದ್. ಇದರ್‌ಂದ ಸು. 45 ಚ. ಮೈಲಿ ಜಾಗೆಗೆ ನೀರ್ ಪೂರೈಕೆಯಾಗ್‌ತ ಉಟ್ಟು. ಮೈಸೂರು ಜಿಲ್ಲೆಲಿ ಹನಗೋಡು, ರಾಮೇನಹಳ್ಳಿ, ಕಟ್ಟೆಮಳಲವಾಡಿ, ಹಂಗರಹಳ್ಳಿ, ಮಾರ್ಚಳ್ಳಿ, ಸಾಗರಕಟ್ಟೆ ಮತ್ತೆ ಜೋಳನಹಳ್ಳಿ ಈ ಜಾಗೆಗಳ್‌ಲಿ ಸಣ್ಣ ಅಣೆಕಟ್ಟುಗಳ ಕಟ್ಟಿಕಂಡೊಳ. ಸಾಗರಕಟ್ಟೆ ಅಣೆಕಟ್ಟನ ಕಟ್ಟಸಿದವ್ ದಿವಾನ್ ಪೂರ್ಣಯ್ಯನವ್. (ಡಿ.ಸಿ.ಜೆ.)

**ವಾರ್ಷಿಕಾವರ್ತನ : ಪಗ್ಗು (ಏಪ್ರಿಲ್– ಮೇ) :** ಗದ್ದೆಲಿ ಬತ್ತನ ಬಿತ್ತುದು, ಇದರ ಕೈ ಬಿತ್ತ್ ಹಾಕುದುಂತೇಳ್ವೆ. ಸುರುನ ಬೆಳೆ ಕೆಲ್ಸದ ಹುಮ್ಮಸ್ ಎಲ್ಲ ಪೊದ್ಯಗಳ್‌ಲಿ ಉಟ್ಟು. ಹಾಂಗೇ ಬತ್ತ ಬೆಳೆವ ಬೂಮಿ ಅವ್ವನೆ ಬಕ್ತಿನ ಕೇಂದ್ರ ಆದೆ. ಈ ಬಕ್ತಿನ ರೂಪ ಬೆಳೆಗೆ ಮತ್ತೆ ಉಂಬಕೆ ಸಮ್ಮಂದಪಟ್ಟದರ್‌ಂದ ಇದ್ ಲೋಕದ ಇಚ್ಚೆಗಳ ಇಸಿಕಂಡಿರ್‌ವಂತದ್.

ಕ್ರಿಸಿ ಕೆಲ್ಸದ ಸುರು, ಗದ್ದೆಗೆ ಬಿತ್ತ್ ಹರ್‌ಂಡುದು, ಕೈ ಬಿತ್ತ್ ಹಾಕುದು ಇಲ್ಲಿ ಕೂಡ ಮುಂದುವರ್‌ಕಂಡ್ ಬಂದದೆ. ಹಿಂದೆನ ತಿಂಗಳ ಹುಮ್ಮಸ್, ಬಕ್ತಿನೂ ಇಲ್ಲಿ ಕೂಡ ಮುಂದುವರ್‌ಕಂಡ್ ಬಂದದೆ.

**ಪೊಗ್ಗು ತಿಂಗಳ ಪರ್‌ಚಯ :** ಈ ತಿಂಗ ಮೇಸ ಸಂಕ್ರಮಣ ಕಳ್ದ್ ಮಾರನೇ ದಿನಂದ ಸುರಾಗಿ ವೃಸಬ ಸಂಕ್ರಮಣ ಮುಟ್ಟ ಇದ್ದದೆ. ಅಂದರೇ ಇಂದ್‌ಂದ (ಏಪ್ರಿಲ್ 15 ರ್‌ಂದ ಮೇ 15 ಕ್ಕೆ ಮುಟ್ಟ) ಈ ತಿಂಗಳ್‌ಲಿ ಸುಮಾರ್ ಕಡೆ ಊರು ಹಬ್ಬಗ, ಜಾತ್ರೆಗ ಅದವೆ. ಆಟದ ತವೂರು ಕೊಡಗ್ ಜಿಲ್ಲೆಲಿ ಇದೀಗ ಈ ತಿಂಗಳ್‌ಲಿ ಆಟಗಳ ಗೌಜಿ, ಕ್ರಿಕೆಟ್, ವಾಲಿಬಾಲ್, ಹಾಕಿ, ಕಾಲ್ಚೆಂಡ್ ಆಟ ಸೇರ್‌ದಂಗೆ ಸುಮಾರ್ ಆಟಗ ನಡೀವ ಹೊತ್ತು. ಕೆಲವ್ ಕುಟುಂಬಗಳ್‌ಲಿ ಕುಲದೇವ್ರ್ ವೆಂಕಟರಮಣ ಸ್ವಾಮಿನ ಹರ್‌ಸಯ ನಡ್ಡದೆ. ಅಕ್ಸಯ

ತದಿಗೆ ಬಂದದೆ. ಮೊದ್‌ವೆ ಜಂಬರಗ, ಸುಬ ಕಾರ್‌ಯಗ ಜಾಸ್‌ತಿ ಈ ತಿಂಗಳ್‌ಲಿ ಇದ್ದದೆ. ಬಾರೀ ರಣ ಬಿಸ್ಲ್, ತಡಿಯಾಕಗದ ಸೆಕೆ ಹಂಗೆ ನಡು ನಡುಲಿ ಮಳೆನು ಜಾಸ್ತಿ ಬಿದ್ದದೆ. ಇನ್ನ್ ತೋಟಲಿ ಕಾಫಿ ಗಿಡ ಕಪಾತ್, ಮರ ಕಪಾತ್, ಸೌದೆ ಕೆಲ್ಸ, ಗದ್ದೆ ಹೂಡುದು, ಗೇರೆಗಾಡ್ ಕಡಿಯೋದು, ಪಟ್ಟೆ ಮೊಣ್ಣ್ ಹೊರುವ ಕೆಲ್ಸ ಸೇರ್‌ದಂಗೆ ಸುಮಾರ್ ಕ್ರಿಸಿ ಕೆಲ್ಸಗಳೊಟ್ಟಿಗೆ ಜೆನ ಮಳ್‌ಗಾಲಕೆ ತಯಾರಿ ಮಾಡಿಕಂಡವೆ. ಮಕ್ಕ ಪರೀಕ್ಷೆ ಎಲ್ಲಾ ಮುಗ್ಸಿಕಂಡ್ ಗೌಜಿಲ್ಲಿ ನೆಂಟ್ರ ಮನೆ ಅಲ್ಲಿ ಇಲ್ಲಿತ ಸುತ್ತಿಕಂಡ್ ಕುಸಿಲ್ಲಿ ಗೌಜಿಲ್ಲಿ ಇದವೆ. ನೇರಳೆ ಹಣ್ಣ್, ಹಲ್ಸ್ ನ ಹಣ್ಣ್, ಮಾವಿನ ಹಣ್ಣ್, ಜಂನೇರಳೆ, ಗೇರ್ ಹಣ್ಣ್, ಗೊಟ್ಟೆ ಹಣ್ಣ್ ಹಿಂಗೆ ಸುಮಾರ್ ತರದ ರುಚಿಯಾದ ಕಾಡ್ ಹಣ್ಣ್ ಗ ಸಿಕ್ಕಿದೆ. ಬೂಮಿ ಜಾಸ್ತಿ ತಂಪಾದ ಜಾಗೆಲಿ ಕೆಲವ್ ಅಳ್‌ಂಬುಗ, ಗಿಣಿಕೆ, ಚರ್‌ಮೆ ಹಿಂಗೆ ಸುಮಾರ್ ತರಹದ ಸೊಪ್ಪುಗ, ಬಿದ್ರುನ ಕಣಲೆ ಸಹ ಸಿಕ್ಕಿಕೆ ಸುರಾದೆ. ಇದಿಸ್ಟ್ ಪೊಗ್ಗು ತಿಂಗಳ ವಿಸೇಸ ಅವ್ವು.

**ಬೇಸ ತಿಂಗಳ ಪರ್‌ಚಯ :** ಈ ತಿಂಗ ವೃಸಬ ಸಂಕ್ರಮಣ ಕಳ್ದ ಮಾರನೇ ದಿನಂದ ಸುರಾಗಿ ಮಿತುನ ಸಂಕ್ರಮಣ ಮುಟ್ಟ ಇದ್ದದೆ. ಅಂದರೇ (ಮೇ 15 ರ್‌ಂದ ಜೂನ್ 15 ರವರೆಗೆ) ಈ ತಿಂಗಳ್‌ಲಿ ವಿಪರೀತ ಬಿಸ್‌ಲ್ ತಡಿಯಾಕಗದ ಸೆಕೆ ಗಾಳಿನೊಟ್ಟಿಗೆ ನಡು ನಡುಲಿ ಮಳೆ ಸುರಾದೆ. ಸುಮಾರ್ ಕಡೇ ಊರು ಹಬ್ಬಗ, ಹರಿಸೇವೆಗ ಮೊದ್‌ವೆ ಜಂಬರಗ ಸುಮಾರಾಗಿ ಮುಗ್ದಿದ್ದದೆ. ರೈತರ್ ಮಳೆ ಬಿಳ್ದ್ ರ್‌ಂದ ಈ ತಿಂಗಳ್‌ಲಿ ಚುರುಕಾಗಿ ಕ್ರಿಸಿ ಕೆಲ್ಸದ ಕಡೆ ಮೋರೆ ಮಾಡ್‌ವೆ. ತ್ವಾಟಲ್ಲಿ ದೈ ಕಪಾತ್, ಮರ ಕಪಾತ್, ಗೊಬ್ಬರ ಹಾಕಿಕ್ಕೆ ಗಿಡ ಬುಡ್‌ಸ್‌ವ ಕೆಲ್ಸ, ಚಿಗ್ರ್, ಗದ್ದೆಲ್ಲಿ ಗೆರೆಗಾಡ್ ಕಡಿಯೋದು, ಪಟ್ಟೆ ಮೊಣ್ಣ್ ಹೋರ್‌ದು, ಸಗ್ಗಣಿ ಗೊಬ್ಬರ ಹೋರ್‌ದು, ಗದ್ದೆ ಹೂಡುವ ಕೆಲ್ಸ ಸೇರ್‌ದಂಗೆ ಸುಮಾರ್ ಕೆಲ್ಸಗಳೊಟ್ಟಿಗೆ ಮಳೆಗಾಲಕೆ ಬೇಕಾದ ಎಲ್ಲಾ ತಯಾರಿನ ಮಾಡಿಕಂಡವೆ. ಈ ತಿಂಗಳ್‌ಲಿ ಅಳ್‌ಂಬು, ಸುಮಾರ್ ತರದ ಕಾಡ್ ಹಣ್ಣ್‌ಗ, ಮಾಯಿಣ ಹಣ್ಣ್, ಹಲ್ಸ್‌ನ ಹಣ್ಣ್, ಕಣಲೆ, ಮಳೆ ಹಿಡಿಯಾಕನ ಹಳ್ಳ, ಚೋಡಿಗಳ್‌ಲಿ ಏಸೆಂಡ್, ಮೀನ್ ಉಬರ್ ಹತ್ತುವೆ.. ಸುಮಾರ್ ತರದ ಸೊಪ್ಪುಗ ಸೇರ್‌ದಂಗೆ ಕಾಡ್‌ಲಿ ಸಿಕ್ಕುವ ಸುಮಾರ್ ವಸ್ತುಗ ಸಿಕ್ಕಿದೆ. ಕೊಡಗ್‌ನ ಹೆಸ್ರ್ ಪಡ್ದ ಪಣ್ ಪುಳಿ ಸಹ ಹಣ್ಣ್ ಅಕೆ ಸುರಾದೆ. ಇದ್ದಿಸ್ಟ್ ಬೇಸಿಗೆ/ಬೇಸ ತಿಂಗಳ ವಿಸೇಸತೆ

**ಕಾರ್‌ತಿಂಗ (ಜೂನ್–ಜುಲೈ):** ಮಳ್ಗಾಲ ಸುರು ಆಗಿದ್ದದೆ. ಜೋರು ಮಳೆ ಬಾದರ್‌ಂದ ಮೊಯಿಂಸ ಹೊರಗೆ ಓಡಾಡುವಂಗಿಲ್ಲೆ. ಮನೆ ಒಳಗೆ ಕುದ್ದು ಮನೆ ದೇವ್ವಗಳಿಗೆ ಹರ್‌ಕೆ ಒಪ್ಪುಸುವೆ. ಮನೆ ದೇವ್ವಗಳಿಗೆ ಹರ್‌ಕೆ ಒಪ್ಪುಸಿಕೆ ಕಾರಣ ವಪಾಸ್ ಅದುವೇ ಗದ್ದೆಲಿರುವ ಬೆಳೆನ ಮತ್ತೆ ಗುಡ್ಡೆಗೆ ಹೋಗಿರುವ ದನ–ಕರ್‌ಗಳ ಕಾಪಾಡ್‌ವಂತದ್.

**ಕಾರ್‌ತಿಂಗಳ ಪರ್‌ಚಯ :** ಈ ತಿಂಗ ಮಿತುನ ಸಂಕ್ರಮಣ ಕಳ್ದ ಮಾರನೇ ದಿನಂದ ಸುರು ಅಗಿ ಕರ್‌ಕಾಟಕ ಸಂಕ್ರಮಣ ಮುಟ್ಟ ಇದ್ದದೆ. ಅಂದರೇ ಜೂನ್ (15 ರ್‌ಂದ ಜುಲೈ 15 ಕ್ಕೆ ಮುಟ್ಟ) ಈ ತಿಂಗಲಿ ತುಂಬಾ ಮಳೆ, ಚಳಿ, ಜಾಸ್ತಿ ಇದ್ದದೆ. ಬಿಸ್‌ಲ್ ತುಂಬಾ ಕಮ್ಮಿ ಇದ್ದದೆ. ಆರ್‌ದ್ರಾ ಮತ್ತೆ ಪುನರ್‌ವಸು ನಕ್ಸತ್ರದ ಮಳೆ ಜೋರ್ ಇದ್ದದೆ. ಮೊದ್‌ವೆ ಜಂಬರಗ, ಹರಿಸೇವೆಗ, ಸುಬ ಕಾರ್‌ಯಗ ಕಡಿಮೆ ಆಗಿದ್ದದೆ. ಮುಂಗಾರ್ ಮಳೆ ಬೀಳ್ದರ್‌ಂದ ಕ್ರಿಸಿ ಕೆಲ್ಸಗ ತುಂಬಾ ಜಾಸ್ತಿ ಇದ್ದದೆ. ರೈತರ್ ಚುರ್‌ಕ್‌ಲಿ ಕ್ರಿಸಿ ಕೆಲ್ಸಲಿದ್ದವೆ.

ತ್ವಾಟಲ್ಲಿ ಗೊಬ್ಬರ ಹಾಕುದು, ಕಾಫಿ ಗಿಡ ಚಿರಿ, ಕಾಡ್ ಕಡಿಯೋದು, ಕಾಫಿ ಗಿಡ, ಒಳ್ಳೆ ಮೆಣ್ಸ್ ಬಳ್ಳಿ ಹಿಂಗೆ ದೈಗಳ ನೆಡುವ ಕೆಲ್ಸ, ಗದ್ದೆಗೆ ಗೊಬ್ಬರ ಹೋರ್‌ದು, ಗದ್ದೆ ಹೂಡುದು, ಬತ್ತದ ಬೀಜ ಹಾಕುದು ನಾಟಿ ಕೆಲ್ಸಕ್ಕೆ ತಯಾರದವೆ. ಈ ತಿಂಗಲಿ ಮಾಯಿಣ ಹಣ್ಣ್, ಹಲ್ಸ್ ನ ಹಣ್ಣ್, ಮಡಿಕೆ ಹಣ್ಣ್, ಲಕೋಟೆ ಹಣ್ಣ್, ಬೆಣ್ಣೆ ಹಣ್ಣ್, ಕಿತ್ತಳೆ ಹಣ್ಣ್, ಹಿಂಗೆ ಸುಮಾರ್ ತರದ ಹಣ್ಣ್‌ಗ, ಕಣಲೆ, ಸುಮಾರ್ ತರದ ಅಳ್‌ಂಬುಗ, ಮಳೆ ಹಿಡಿಯಾಕನ ತೋಡು, ಹಳ್ಳಲಿ ಸುಮಾರ್ ತರದ ಮೀನ್ ಗ, ಎಸೆಂಡ್ ಸಿಕ್ಕಿದೆ.

ಈ ತಿಂಗಳ ಇನ್ನೊಂದು ವಿಸೇಸತ ಎಂತತ ಹೇಳ್ರೆ ಗೌಡ ಜೆನಾಂಗದ ಎಲ್ಲಾ ಕುಟುಂಬಗಳ್‌ಲಿ ಕುಟುಂಬದವು ಎಲ್ಲಾ ಕೂಡಿಕಂಡ್ ತಮ್ಮ ರಕ್ಸಣೆ ಮಾಡ್‌ವ ದೇವ್ರುಗಳಿಗೆ, ದೆವ್ವಗಳಿಗೆ ತುಂಬಾ ಕ್ರಮಬದ್ದ ಅಗಿ ಕೊಡುವ ಅಗಲ್ ಇಸ್‌ವ ಒಂದ್ ಪೊದ್ದತಿ ನಮ್ಮ ಹಿರಿಯವರ ಕಾಲಂದನು ನಡ್ಕಂಡ್ ಬಂದುಟ್ಟು ಈಗನು ಎಲ್ಲಾ ಕುಟುಂಬಗಳ್‌ಲಿ ಕ್ರಮಬದ್ದ ಅಗಿ ಕೊಟ್ಟವೆ, ಕೊಡುವ ಪೊದ್ದತಿ ಉಟ್ಟು. ಇದರ 'ಕಾರ್‌ತಿಂಗಳ್‌ಲಿ ದೆವ್ವಕ್ಕೆ ಕೊಡ್ಡುತ' ಹೇಳಿವೆ.

**ಆಟಿ (ಜುಲೈ – ಆಗಸ್ಟ್) :** ಹೊಸ ಬೆಳೆ ಇನ್ನೂ ಬೆಳ್ದಿರ್‌ದುಲೆ. ಸುಗ್ಗಿನ ಅಕ್ಕಿ ಮುಗೆವ ಕಾಲ, ಹಾಂಗಾಗಿ ಮೊಯಿಂಸಂಗೆ ಉಂಬಕೆ–ತಿಂಬಕೆ ಬಾರಿ ಬಜ್ಜದ ಕಾಲ, ಸಂಕಟದ ಕಾಲ, ಅಕ್ಕಿನ ಬದಲ್ ಬೇಸಿದ ಹಲ್ಸಿನಕ್ಕಿ ತಿಂಬಂತ ಗತಿಕೆಟ್ಟ ಹೊತ್ತಿದ್ ಆದ್ದರ್‌ಂದ ಈ ತಿಂಗ ಅನಿಸ್ಟದ ಕಾಲ.

**ಆಟಿ ತಿಂಗಳ ಪರ್‌ಚಯ :** ಈ ತಿಂಗ ಕೊಡಗ್‌ಲಿ ಪಂಡ್ ಕಾಲದಂನು ಒಂದ್ ವಿಸೇಸ ತಿಂಗ ಅಗಿ ಹೆಸ್ರ್ ಪಡ್ಕೊಂಟು ನಮ್ಮ ಅರೆಬಾಸೆಲಿ ಆಟಿ ತಿಂಗತ ಹಂಗೆ ಕೊಡವ ಬಾಸೆಲಿ ಈ ತಿಂಗನ ಕಕ್ಕಡ ತಿಂಗತ ಕರ್‌ದವೆ. ಈ ತಿಂಗ ಕರ್‌ಕಟಕ ಸಂಕ್ರಮಣ ಕಳ್ದ ಮಾರನೇ ದಿನಂದ ಸುರಾಗಿ ಸಿಂಹ ಸಂಕ್ರಮಣ ಮುಟ್ಟ ಇದ್ದದೆ. ಅಂದರೇ (ಜುಲೈ 15 ರ್‌ಂದ ಅಗಸ್ಟ್ 15 ರವರೆಗೆ) ಗೌಡ ಜೆನಾಂಗದ ಅರೆಬಾಸೆ ತಿಂಗಗಳ್‌ಲಿ ಇದೊಂದು ವಿಸೇಸ ತಿಂಗ ಅವ್ವು. ಈ ತಿಂಗಲಿ ಯಾದೇ ಸುಬ ಕಾರ್‌ಯಗ, ಪೂಜೆಗ, ಮೊದ್‌ವೆ ಜಂಬರಗ, ಹರಿಸೇವೆಗ, ಇರ್‌ದುಲೆ. ಈ ತಿಂಗಲಿ ವಿಪರೀತ ಮಳೆ, ಗಾಳಿ, ಚಳಿ ಇದ್ದದೆ. ಪುಸ್ಯ ಮತೆ ಅಶ್ಲೇಸ ಮಳೆ ಜೋರಿದ್ದದೆ.ನಾಗರ ಪಂಚಮಿ, ವರಮಹಾಲಕ್ಷ್ಮಿ ವ್ರತ, ರಕ್ಸಾ ಬಂದನ ಇದೇ ತಿಂಗಳ್‌ಲಿ ಬಂದದೆ. ಇನ್ಸ್ ಆಟಿ 18 ಕ್ಕೆತ ಹೇಳ್ರೆ ಅಗಸ್ಟ 3 ಕ್ಕೆ ಆಟಿ ತಿಂಗಲಿ ಕಾಡ್, ಕೊಲ್ಲಿ, ಚೋಡಿ

ಕರೆಗಳ್‌ಲಿ ಕಾಂಬಕ್ಕೆ ಸಿಕ್ಕುವ ಆಟಿ ಸೊಪ್ಪುನ ತಂದ್ ಪಾಯಿಸ ಮಾಡಿ ಎಲ್ಲವು ಉಂಬ ಒಂದ್ ಪೊದ್ದತಿ ಉಟ್ಟು. ಅಂದ್‌ನ ದಿನ ಈ ದೈನ ಗಂಟ್‌ಲಿ ಮೊಯಿಂಸರ ಜಿವಕೆ ಬೇಕಾದ 18 ತರದ ಆಯುರ್‌ವೇದದ ಮೊದ್ದ್ ಗ ಇದ್ದದೆತ ಹೇಳ್‌ವ ಒಂದ್ ನಂಬಿಕೆ ಉಟ್ಟು. ಇದ್ ಏಕೆತ ಹೇಳ್ರೆ ಹಿರಿಯವು ಹೇಳ್‌ವ ಪ್ರಕಾರ ಮುಂದೆ ಕೊಡಗ್‌ಲಿ ಜೂನ್ ತಿಂಗಳ್‌ಂದನೇ ಮಳೆಗಾಲ ಸುರು ಅಗ್ತ ಇತ್ತ್ ಅಗ ಎಲ್ಲಾವು ಮಳೆ, ಗಾಳಿ, ಚಳಿಗೆ, ಗದ್ದೆ, ತೋಟಲಿ ಕೆಲ್ಸ ಮಾಡಿಕನ ತಡಿ ಎಲ್ಲಾ ಕ್ವಾಟ ಹಿಡ್ಕಂಡ್ ಇರ್‌ತಿತ್ ಅಗ ಆಟಿ ಪಾಯಿಸ ಮಾಡಿ ಉಂಡ್ರೆ ಹನಿಸ್ ಬಿಸಿ ಅಗಿ ತಡಿಗೆ ಬೇಕಾದ 18 ತರದ ಮೊದ್ದ್ ನು ಸಿಕ್ಕಿದೆತ ಹೇಳ್‌ವ ನಂಬಿಕೆಂದ ಹಂಗೆ ಮಾಡ್ತ್ ಇದ್ದೊತ ಹೇಳಿವೆ. ಇದೆ ನಂಬಿಕೆ, ಇದೆ ಕ್ರಮ ಈಗನ್ನೂ ಹಂಗೆ ನಡ್ಕಂಡ್ ಹೋಗ್ತ ಉಟ್ಟು. ಕಾಡ್‌ಲಿ ದೊಡ್ಡ, ದೊಡ್ಡ ಮರಗಳ್‌ಲಿ, ಪಾರೆ ಕಲ್ಲ್ ಲ್ಲಿ ಸಿಕ್ಕುವ ಮರದ ಕೆಸಕೆ ತುಂಬಾ ಬೇಡಿಕೆ ಉಟ್ಟು ಇದರ ತಂದ್ ಇದರ್‌ಂದ ಪತ್ರೋಡೆತ ಹೇಳ್‌ವ ತಿಂಡಿನ ಮಾಡಿವೆ. ಈ ತಿಂಗಳ್‌ಲಿ ಮಳೆ, ಚಳಿ ಜಾಸ್ತಿ ಇರ್‌ದರ್‌ಂದ ವಿಸೇಸ ಅಡಿಗೆಗಳ ಮಾಡಿಕಂಡ್ ಕಾಲ ಕಳ್ದವೆ. ಇದೊಂದು ಎಲ್ಲಾ ತಿಂಗಂದ ನಮ್ಮ ಜೆನಾಂಗದ ತಿಂಗಗಳ್‌ಲಿ ಬಾವ ಒಂದ್ ವಿಸೇಸ ಗೌಜಿನ ತಿಂಗತ ಹೇಳಕ್. ಇದ್ದ್ ಇಸ್ಟ್ ಆಟಿ ತಿಂಗಳ ವಿಸೇಸ ಅವ್ವು.

**ಆಟಿ ತಿಂಗ :** ಸೌರಮಾನದ ನಾಕ್‌ನೆ ತಿಂಗ ಆಟಿ. ಕರ್‌ಕಟಕ ಮಾಸನ ತುಳುಲಿ ಮತ್ತೆ ಅರೆಬಾಸೆಲಿ 'ಆಟಿ'ತೇಳಿದ್ ಕರ್‌ದವೆ. ಪಂಡ್ ಕಾಲಲಿ ಜನಪದರ್‌ಲಿ ಬಡತನ, ರೋಗ ಮತ್ತೆ ಮಾನಸಿಕ ಹೆದ್ರಿಕೆಗಳೇ ಹೆಚ್ಚಾಗಿದ್ದೊ. ಆ ಕಾಲಲಿ ಆಯಾ ದಿನಗಳ ಅನುಸಾರಲಿ ಮತ್ತೆ ಅವರ ಅನುಕೂಲನ ಗಮನಿಸಿಕಂಡ್ ಕೆಲವೊಂದ್ ಆಚರಣೆಗಳ, ನಿಸೇದಗಳ ಅನುಸರ್‌ಸಿಕಂಡ್ ಬಂದಿರೊಕು. ತಹ ಆಚರಣೆ ಮತ್ತೆ ನಿಸೇದಗ ತುಳುನವರ ಮತ್ತೆ ಅರೆಬಾಷಿಗರ ಆಟಿ ತಿಂಗಳ್‌ಲಿ ವಿಸೇಸಾಗಿ ಉಟ್ಟು.

ಅರೆಬಾಸಿಗರ್‌ಲಿ ಮತ್ತೆ ತುಳುವರ್‌ಲಿ ಗದ್ದೆ ಬೇಸಾಯನೇ ಪ್ರದಾನ ಆಗಿತ್ತ್. ಅಂದ್ ಬೇಸಾಯ ಮುಗ್‌ಸಿದ್ ಬೊಚ್ಚೆಲ್ ತಕಂಬ ದಿನ ಆದ್ದರ್‌ಂದ ನಮೂನೆ ನಮೂನೆನ ಆಚರಣೆಗ, ಆಟಗ, ತಿನ್ಸ್‌ಗ, ಔಷದಗ, ನಿಸೇದಂಗ ಈ ತಿಂಗಳ್‌ಲಿ ನಡ್‌ಕಂಡ್ ಇತ್ತ್. ಹಾಂಗೇನೇ ಮಳೆ ಬಿಸುಲುನ ಆಟನೂ ಇರ್‌ತ್ತಿತ್ತ್.

1. ಆಟಿ ಆಚರಣೆಗ – ನಾಗರ ಪಂಚಮಿ, ಆಟಿಕಳ್‌ಂಜ ಮನೆಮನೆಗೆ 'ಮಾರಿ' ತಕಂಡ್ ಹೋಕೆ ಬಾವ ದಿನಗ. ನಾಗರ ಪಂಚಮಿ ನಾಡ್‌ಗೆ ದೊಡ್ಡದ್, ನಾಡ್‌ನವೆಲ್ಲ ಕೊಣ್ಡಾಡ್‌ವೆ' ತೇಳ್‌ವ ಮಾತುಟ್ಟು, ನಾಗರಪಂಚಮಿ ದಿನ ನಾಗಂಗೆ ಹಾಲ್ ಹೊಯ್‌ದವೆ. ನಾಗ ಕುಟುಂಬದ ಸಮೃದ್ಧಿನ ಸಂಕೇತಾಗಿ ಆಚರಣೆಲಿ ಸೇರಿಕಂಡುಟು. ನಾಗ ದೋಸ ಇದ್ದರೆ ಆ ಕುಟುಂಬಲಿ ಮೊದ್‌ವೆಯಾದುಲೆ, ಮೊದ್‌ವೆಯಾದರೂ ಅವ್‌ಕೆ ಮಕ್ಕಾದುಲೆ ತೇಳ್‌ವ ನಂಬಿಕೆಗೊಳ. ಹಂಗಾಗಿ ಪ್ರತಿಯೊಬ್ಬಂಗೂ ನಾಗನ ಮೇಲೆ ತುಂಬಾ ಬಯಬಕ್ತಿ. ನಾಗದೋಸ ಇದ್ದರೆ ಬೂಮಿಲಿ ಕುಡಿವ ನೀರ್‌ಗೂ ಬರಗಾಲ ಬಂದದೆಗಡ. ಹಂಗಾಗಿ ಹೊಸ ಬಾಮಿ ತೆಗೆಕನ ನಾಗಂಗೆ ಹರ್‌ಕೆ ಇಸಿದ್ ಮುಂದೆನ ಕೆಲ್‌ಸ ಮುಂದುವರ್‌ಸುವೆ. ಬಾಮಿಲಿ ನಾಗಬೀದಿ ಉಟ್ಟುತೇಳಿದ್ ನಾಗಸಂಪಿಗೆನ ಬಾಮಿ ದಂಡೆಲಿ ನೆಟ್ಟವೆ. ಆ ಹರ್‌ಕೆನ ಹಕ್ಕಲೆನ ಸುಬ್ರಹ್ಮಣ್ಯ ದೇಸ್ತಾನಕೆ ಹಾಕಿ ಮುಕ್ತಿ ಪಡ್‌ದವೆ.

*ಆಟಿಕಳಂಜ – ಅಜಲರ್ ಆಟಿ ತಿಂಗಳ್‌ಲಿ ಆಟಿಕಳಂಜನ ವೇಸ ಕಟ್ಟಿ, ಪಾಡ್ದನ ಹೇಳಿಕಂಡ್ ಕೊಣ್ಕಂಡ್ ಮನೆಮನೆಗೆ ಹೋದು ಇಂದ್‌ಗೂ ರೂಡಿ. ಮನೆನ ಸೂರಡಿಬಾಗ್‌ಲಿಗೆ ಬಂದ್ ಹಿಂದೆ ಮುಂದೆ ಹೋಕಂಡ್ ಕೊಣ್‌ದವೆ. ಮನೆವ್ ಇವ್ಕೆ ಅಕ್ಕಿ, ಬತ್ತ, ಕಾಯಿ, ಸೋಂತೆಕಾಯಿ, ಸಾಂತನಿ, ಹುಳಿ, ಮೆಣ್ಸು, ಅಣ್‌ಸೆಣ, ಉಪ್ಪು ಇದರೆಲ್ಲ ಕೊಡುವ ಪೊದ್ದತಿ ಉಟ್ಟು. 1. ಕಡಲ್ ಮೀಯಿದು, ದೆವ್ವಕೆ ಅಗ್‌ಲ್ ಹಾಕುದು. 2. ಆಟಿ ಆಟಗ – ಚೆನ್ನೆಮಣೆ ಮಂಜೆಟ್ಟಿ ಆಡ್‌ವ ದಿನಗ. 3. ಆಟಿ ತಿನ್ಸ್‌ಗ – ಪತ್ರೊಡೆ, ಚಗ್ತೆ ಪಲ್ಯ. 4. ಆಟಿ ಮೊದ್ದ್‌ಗ– ಆಟಿ ತಿಂಗಳ್‌ಲಿ ಹಾಲೆ ಮರದ ಕೆತ್ತೆಂದ ರಸ ತೆಗ್‌ದ್ ಮೊದ್ದ್ ಕುಡಿವ ದಿನಗ. 5. ಆಟಿ ನಿಸೇದಂಗ – ಮಗಳ ಗಂಡನ ಮನೆಂದ ತೌರ್ ಮನೆಗೆ ಕರ್‌ಸಿಕಂಡ್ ಅದ್‌ಕೆ ಸಮ್ಮಾನ ಮಾಡ್ದು. ಆಟಿತಿಂಗಳ್‌ಲಿ ಹೊಸ ಮೊದುಮಗಳ್ ಗಂಡನ ಮೋರೆ ನೋಡಿಕೆಬೊತ್ತು ತೇಳುವ ನಿಸೇದ ಉಟ್ಟು. ಇದ್‌ಕೆ ಕಾರಣನೂ ಉಟ್ಟು. ಪಂಡ್ ಕಾಲಲಿ ಏಣೆಲ್ ಬೇಸಾಯ ಮುಗ್‌ದ ಮೇಲೆ ಕೆಲ್‌ಸ ಕಾರ್‌ಯಗ ಇರತಿತ್ತ್‌ಲೆ. ತಿಂಬೊಕೆ ಹುಗ್ಗೆ, ಗಂಜಿ ಸೇರ್‌ದಂಗೆ ತಿಂಬೊಕೆ ಇಲ್ಲದಿರ್‌ಕನ ಹೊಸ ಮೊದುಮಗಳ ಗಂಡನ ಮನೆಲಿ ನಿಲ್ಲ್‌ಸಿ ಇಲ್ಲದ ಕಸ್ಟಬಾದರ್‌ಂದ ಅವ್ವನ ಮನೆಲಿ ಇದ್ದ್‌ದ್ ಹೋದ್ ರೂಡಿಯಾಗಿರೊಕು.

ಮುಂದೆ ಅದೊಂದ್ ಪೊದ್ದತಿ ಆಗಿ ಇಂದುನೂ ರೂಡಿಲುಟ್ಟು. 6. ಆಟಿ ಗಾದೆಗ – ಆಟಿತಿಂಗ ನಿದಾನಲಿ ಹೋದೆ, ಸೋಣ ತಿಂಗ ಅಂಬೆರ್‌ಪುಲಿ ಹೋದೆ, ಆಟಿಗೊಮ್ಮೆ ಸೋಣಕೊಮ್ಮೆ, ಆಟಿಲಿ ಅಗ್‌ಲ್ ಸೋಣಲಿ ಕೋಲ, ಆಟಿ ತಿಂಗಳ್‌ಲಿ ಬಳ್ಳ ದಡ್ಡು ಬತ್ತ ಇದ್ದಂವ ಮನೆ ಬುಟ್ಟು ಹೋಕಿಲೆ, ಆಟಿನ ಬಿಸ್‌ಲ್‌ಗೆ ಆನೆ ಬೆನ್ನುನೂ ಒಡಿದುಗಡ. ಮಾಯಿಂದ ಮೇಲೆ ಮಳ್ಗಾಲ, ಆಟಿಂದ ಮೇಲೆ ಅರೆಗಾಲ, ಮಾಯಿಲಿ ಮಳೆ ಬಂದರೆ ಮಲೆ(ಕಾಡ್)ಬೆಳಿದು. (ವಿ.ಬಿ.)

**ಸೋಣ (ಆಗಸ್ಟ್– ಸೆಪ್ಟೆಂಬರ್) :** ಹೊಸ ಪಸ್ಲ್ ಕೊಯ್ಯಕೆ ತಯ್ಯರಾದರ್‌ಂದ ಬೊದ್ಕುಲಿ ಮತ್ತೆ ಹುಮ್ಮಸ್ ತುಂಬಿದೆ, ಹೊಸ ಅಕ್ಕಿನ ಮನೆಗೆ ತರ್‌ವ ಕುಸಿಲಿ 'ಹೊಸ್ತ್' ಆಚರಣೆ, ಮನೆ ತುಂಬ್ಸುದು ನಡ್ದದೆ

**ಸೋಣ ತಿಂಗಳ ಪರ್‌ಚಯ :** ಈ ತಿಂಗ ಸಿಂಹ ಸಂಕ್ರಮಣ ಕಳ್‌ದ ಮಾರನೇ ದಿನಂದ ಸುರಾಗಿ ಕನ್ಯಾ ಸಂಕ್ರಮಣ ಮುಟ್ಟ ಇದ್ದದೆ ಅಂದರೇ (ಆಗಸ್ಟ್ 15 ರ್‌ಂದ ಸೆಪ್ಟೆಂಬರ್ 15 ಕ್ಕೆ ಮುಟ್ಟ) ಆಟಿ ತಿಂಗ ಕಳ್ದಂಗೆ ಮುಂದೆ ಬಾವ ತಿಂಗಳೇ ಈ ಸೋಣ ತಿಂಗ.

ಈ ತಿಂಗಳ್‌ಲಿ ಗೌರಿ ಗಣೇಶ ಹಬ್ಬ, ಕೊಡಗ್ ನ ಗೌಜಿ ಗದ್ದಲದ ಸಾಂಪ್ರದಾಯಿಕ ಹಬ್ಬ ಕೈಲ್ ಮುಹೂರ್‌ತ ಬಂದದೆ. ಸೋಣ 12 ಅಗಸ್ಟ್ 28 ಕ್ಕೆ ನಾಲ್ಕುನಾಡ್‌ಲಿ ಕೈಲ್ ಮುಹೂರ್‌ತನ ಅಚರಣೆ ಮಾಡ್‌ವೆ. ಸೋಣ 18 ಸೆಪ್ಟೆಂಬರ್ ಮೂರನೇ ತಾರೀಕ್‌ಗೆ ಸುಮಾರ್ ಕಡೆ ಈ ಹಬ್ಬನ ಅಚರಣೆ ಮಾಡ್‌ವ ಕ್ರಮ ತುಂಬಾ ಹಿಂದೇನ ಕಾಲಂದನು ನಡ್ಕಂಡ್ ಬಂದುಟು. ಈ ತಿಂಗಳ್‌ಲಿ ಮಘ, ಮತ್ತೆ ಹುಬ್ಬಾ ನಕ್ಷತ್ರದ ಮಳೆ ಬಿದ್ದದೆ. ನಾಟಿ ಕೆಲ್ಸ ಎಲ್ಲ ಮುಗ್‌ದ್ ನಟ್ಟ ನಾಟಿ ಕರಿ ನಾಟಿ ಹತ್ತಿಕೆ ಸುರಾದೆ.

ಮಳೆನು ಕಮ್ಮಿಯಾಗಿ ಬಿಸ್‌ಲ್ ಬಾಕೆ ಸುರಾದೆ. ರೈತರ್ ತೋಟಲಿ ಕಾಡ್ ಕಡಿಯೋದು, ಗದ್ದೆಲಿ ಕಳೆ ತಗಿಯೋದು ಇಂತ ಕೆಲ್‌ಸಗಳ ಮಾಡ್‌ವೆ. ಇನ್ನ್ ಹೊಸ ತೋಟ ಮಾಡಿಕೆ, ಬಾಳೆ ಹಾಕಿಕೆ, ತರ್‌ಕಾರಿ ಮಾಡಿಕೆ ಈ ತಿಂಗ ತುಂಬಾ ಒಳ್ಳ ತಿಂಗತ ನಮ್ಮ ಹಿರಿಯವು ಹೇಳ್‌ವೆ. ಈ ತಿಂಗಳ್‌ಲಿ ಮಳೆನ ರಬಸ ತುಂಬಾ ಕಮ್ಮಿ ಅಗಿ ಬಿಸ್‌ಲ್ ಬಂದದೆ. ಸುಬ ಕಾರ್‌ಯಗ, ಮೊದ್‌ವೆ ಜಂಬರಗ, ಪೂಜೆಗ ಈ ತಿಂಗಳ್‌ಂದ ಸುರಾದೆ. ಹಂಗೆ ಆಟಿ ತಿಂಗಳ್‌ಲಿ ಸತ್ತವುಕ್ಕೆ ಇದೇ ತಿಂಗಳ್‌ಲಿ ತಿತಿ ಕರ್‌ಮಾಂತರ ಮಾಡಿವೆ. ಇದ್ದಿಸ್ಟ್ ಸೋಣ ತಿಂಗಳ ವಿಸೇಸ ಆಗುಟು..

**ನಿರ್‌ನಾಲ್ (ಸೆಪ್ಟೆಂಬರ್ – ಅಕ್ಟೋಬರ್) :** ಗದ್ದೆಲಿ ಪಸ್ಲ್‌ನ ಕೊಯ್ಲ್ ಆಗಿದ್ದದೆ. ಬತ್ತ ಮನೆಲಿದ್ದದೆ. ಇದೇ ಹೊತ್ತುಲಿ ಕಾವೇರಿ ನದಿಲಿ ಸಂಕ್ರಮಣದ ದಿನದಂದ್ ನೀರ್ ಹೆಚ್ಚಿದೆಂತೇಳ್ವ ನಂಬಿಕೆಲಿ ಕಾವೇರಿ ಸಂಕ್ರಮಣ ಆಚರಣೆ, ಇದ್ ಬೊದ್ಕುನ ಏಳ್ಗೆನ ಸಾಂಕೇತಿಕವಾಗಿ ಹೇಳ್ದೆ. ಬಡಪತ್ ಪೂರಾ ಮರೆವ ಕಾಲ ಇದ್

**ನಿರ್‌ನಾಲ್ ತಿಂಗ :** ಈ ತಿಂಗ ಕನ್ಯಾ ಸಂಕ್ರಮಣ ಕಳ್‌ದ ಮಾರನೇ ದಿನಂದ ಸುರಾಗಿ ತುಲಾ ಸಂಕ್ರಮಣ ಮುಟ್ಟ ಇದ್ದದೆ. ಅಂದರೇ (ಸೆಪ್ಟೆಂಬರ್ 15 ರ್‌ಂದ ಆಕ್ಟೋಬರ್ 15)ಕ್ಕೆ ಮುಟ್ಟ, ಈ ತಿಂಗಳ್‌ಲಿ ಮಳೆ ಕಮ್ಮಿ ಅಗಿ ಬಿಸ್ಲ್ ಬಂದದೆ. ಉತ್ತರ, ಹಸ್ತ, ಚಿತ್ತಾ ನಕ್ಷತ್ರದ ಮಳೆ ನಡು ನಡುಲಿ ಜೋರಿದ್ದದೆ. ಈ ತಿಂಗಳ್‌ಲಿ ನವರಾತ್ರಿ ಹಬ್ಬ, ಆಯುದ ಪೂಜೆ, ಶಾರದಾ ಪೂಜೆ, ದುರ್‌ಗಾಸ್ಟಮಿ, ಮಹಾಲಯ ಅಮಾಸೆ ದಸರಾ, ತಿರುಪತಿ ಬ್ರಹ್ಮೋತ್ಸವ ಬಂದದೆ.ಮೊದ್‌ವೆ ಜಂಬರಗ, ಸುಬ ಕಾರ್‌ಯಗ ಜಾಸ್ತಿ ಇದ್ದದೆ.

**ಬೊಂತೆಲ್ (ಅಕ್ಟೋಬರ – ನವಂಬರ) :** ಕಳ್ದ ತಿಂಗಳ ಹುಮ್ಮಸ್, ಕುಸಿ ಇಲ್ಲಿನೂ ಮುಂದವರ್‌ಕಂಡ್ ಬಂದದೆ. ದೀಪಾವಳಿ ಹಬ್ಬದ ಆಚರಣೆಗೆ ಜಾಸ್ತಿ ಒತ್ತು ಕೊಟ್ಟವೆ. ಅದೇ ಹೊತ್ತುಲಿ ಗೋಪೂಜೆ, ಜಾನುವಾರು ಜಾತ್ರೆ – ನಡ್ದದೆ. ಹಾಂಗೆ ಗದ್ದೆ ಹೂಡುವ ಎತ್ತ್‌ಗಳಿಗೂ ಈಗ ಬೊಚ್ಚೆಲ್ ತೆಗೆವ(ವಿರಾಮ)ಕಾಲ, ಮತ್ತೆ ಇದೇ ತಿಂಗಳ್‌ಂದ ಒಪಾಸ್ ಗದ್ದೆನ ಕೆಲ್ಸ ಸುರುಆದ್ದರ್‌ಂದ ಎತ್ತ್‌ಗ ಅಕೇರಿ ಅಕೇರಿಗೆ ಮತ್ತೆ ಕೆಲ್ಸಕೆ ತಯ್ಯಾರಾಕಾದೆ.

**ಜಾರ್‌ದೆ (ನವಂಬರ – ದಶಂಬರ) :** ಸುಗ್ಗಿ ಬೆಳೆನ ಕೆಲ್ಸಗ ಮತ್ತೆ ಸುರು ಆದವೆ. 'ಗದ್ದೆ ಗೋರಿನ' ಕುಸಿನ ಗಮ್ಮತ್ ಇದ್ದದೆ. ಎತ್ತ್‌ಗಳ ಮಾರಿಕೆ, ತಕಂಬಕೆ ಅನುಕೂಲ ಆವಂಗೆ ಜಾನುವಾರು ಜಾತ್ರೆಗ ಈ ತಿಂಗಳ್‌ಲಿ ನಡ್ದದೆ. ಮಜಲ್– ಗದ್ದೆಗಲ್‌ಲಿ ಜೆನಪದರ ಲೋಕ ಸೃಸ್ಟಿ ಆವ ಕಾಲ ಇದ್.

**ಜಾತ್ರೆ ತಿಂಗಳ ಪರ್‌ಚಯ :** ಈ ತಿಂಗ ವೃಶ್ಚಿಕ ಸಂಕ್ರಮಣ ಕಳ್ದ ಮಾರನೇ ದಿನಂದ ಸುರಾಗಿ ದನು ಸಂಕ್ರಮಣ ಮುಟ್ಟ ಬಂದದೆ. ಅಂದರೆ (ಇಂದ್‌ಂದ ಸುರಾಗಿ ಡಿಸಂಬರ್ 15 ರವರೆಗೆ) ಈ ತಿಂಗಳ್‌ಲಿ ಮಳೆ ಇರ್‌ದುಲೆ. ವಿಪರೀತ ಬಿಸ್ಲ್ ಇದ್ದದೆ. ಇನ್ನ್ ಮೊದ್‌ವೆ ಜಂಬರಗ ಸುಬ ಕಾರ್‌ಯಗ, ಕೆಲವ್ ಕುಟುಂಬಗಳ್‌ಲಿ ಕುಲದೇವ್ರ್ ಶ್ರೀ ವೆಂಕಟರಮಣ ಸ್ವಾಮಿನ ಹರಿಸೇವೆಗ ಇದ್ದದೆ. ಗದ್ದೆಲಿ ಬೆಳೆ ಕದ್ರ್ ಹೋಕೆ ಸುರಾದೆ ಕೆಲವ್ ಬೆಳೆಗ ಪಸಲ್ ಕೊಯಕೆ ತಯ್ಯಾರಾಗಿದ್ದದೆ. ಮಂಜ್ ಜಾಸ್ತಿ ಬಿದ್ದದೆ ಚಳಿನು ಸುರಾದೆ ತರ್‌ಕಾರಿ ಮಾಡಿಕೆ ಈ ತಿಂಗ ತುಂಬಾ ಒಳ್ಳ ತಿಂಗತ ಹೇಳಕ್. ಇನ್ನ್ ಈ ತಿಂಗಳ್‌ಲಿ ಸುಬ್ರಹ್ಮಣ್ಯ ಸಸ್ಟಿ, ಕೊಡಗ್ ನ ಸುಗ್ಗಿ ಹಬ್ಬ ಹುತ್ತೇರಿ ಹಬ್ಬ ಇದೆ ತಿಂಗಳ್‌ಲಿ ಬಂದದೆ.

**ಪೆರಾರ್‌ದೆ (ದಶಂಬರ – ಜೆನವರಿ) :** ಸುಗ್ಗಿ ಬೆಳೆನ ಕೆಲ್ಸದೊಟ್ಟಿಗೆ ಮೊದ್‌ವೆ ಇಂತೆಲ್ಲ ಜಂಬರಕೆ ತಯಾರಿ ಮನೆನ ಮಾಡ್ ಸರಿ ಮಾಡ್ದು ಕೊಟೆಗೆ–ಕಟ್ಟಣಗಳಿಗೆ ಸೋಗೆ–ಕೆದ್ಲ್ ಹಾಕುದು ಇಂತದೆಲ್ಲ ದಿನದ ಅಗತ್ಯದ ಕೆಲ್ಸ ನಡೆವ ಕಾಲ.

**ಪೊನ್ನಿ (ಜೆನವರಿ – ಫೆಬ್ರವರಿ) :** ಈ ತಿಂಗಳ್‌ಲಿ ಬೂಮಿಲಿ ಬತ್ತ ಹುಟ್ಟುವ ಹೊತ್ತುಲಿ ಬೂಮಿ ಅವ್ವನ ಪೂಜೆ ಮಾಡ್‌ವ ಕೆಡ್ಡಸ ಆಚರಣೆ ಮಾಡ್ವೆ. ನೆಲನೂ ರುತು ಆವ(ಪಲವತಿ) ನಂಬಿಕೆಲಿ ಬತ್ತ ಬೆಳೆವ ಸತ್ಯ ಅಡ್‌ಂಗಿಟು, ಅದರ ಸಾಂಕೇತಿಕ ಆಚರಣೆಗೆ ಇದ್ ದಾರಿ ಮಾಡಿ ಕೊಟ್ಟುಟು.

**ಪೊನ್ನಿ ತಿಂಗಳ ಪರ್‌ಚಯ :** ಈ ತಿಂಗ ಮಕರ ಸಂಕ್ರಮಣ ಕಳ್ದ ಮಾರನೇ ದಿನಂದ ಸುರು ಅಗಿ ಕುಂಬ ಸಂಕ್ರಮಣ ಮುಟ್ಟ ಇದ್ದದೆ. ಸಾಮಾನ್ಯ ಅಗಿ ಈ ತಿಂಗಳ್‌ಲಿ ವಿಪರೀತ ಬಿಸ್ ಲ್ ಹಂಗೆ ಮೈಕೋರಿವ ಚಳಿ ಇದ್ದದೆ. ಬೆಳೆ ಕೆಲ್ಸ, ಒಕ್ಲ್ ಕೆಲ್ಸ ಎಲ್ಲಾ ಹಳ್ಟ್ವಾ ಮುಗ್‌ದಿದ್ದದೆ, ಕಾಪಿ ಕೊಯ್‌ವ ಕೆಲ್ಸ ಸುರು ಅದೆ. ಸುಮಾರ್ ಕಡೇ ಊರು ಹಬ್ಬಗ, ಮೊದ್‌ವೆ ಜಂಬರಗ, ಕುಲದೇವ್ರು ವೆಂಕಟರಮಣ ಸ್ವಾಮಿನ ಹರ್‌ಸಯಗ ನಡ್ದದೆ. ಕೆಡ್ಡಾಸ ಹಬ್ಬನು ಇದೇ ತಿಂಗಳ್‌ಲಿ ಬಂದದೆ. ಈ ತಿಂಗ ಕಳ್ದಂಗೆ ' ಮಾಯಿ ' ತಿಂಗ ಸುರು ಅದೆ.

**ಮಾಯಿ ತಿಂಗಳ ಪರ್‌ಚಯ :** ಈ ತಿಂಗ ಕುಂಬ ಸಂಕ್ರಮಣ ಕಳ್‌ದ ಮಾರನೇ ದಿನಂದ ಸುರಾಗಿ ಮೀನ ಸಂಕ್ರಮಣ ಮುಟ್ಟ ಇದ್ದದೆ. ಅಂದರೆ (ಫೆಬ್ರವರಿ 15 ರ್‌ಂದ ಮಾರ್ಚ್ 15 ಕ್ಕೆ ಮುಟ್ಟ) ಈ ತಿಂಗಳ್‌ಲಿ ವಿಪರೀತ ಬಿಸ್‌ಲ್, ತಡಿಯಾಕೆ ಆಗದ ಉರಿ, ಸೆಕೆ, ನಡು ನಡುಲಿ ಮಳೆನು ಇದ್ದದೆ. ಎಲ್ಲಾ ಕಡೆನು ಸುಮಾರ್ ದೇಸ್ತಾನಗಳ್‌ಲಿ




ಊರು ಹಬ್ಬಗ ಸುರು ಆದವೆ. ಕೊಡಗ್ ನ ಕುಲದೇವ್ರ್, ಮಳೆ ದೇವ್ರ್, ಬೆಳೆ ದೇವ್ರ್ ತ ಹೆಸ್ರ್ ಇರ್‌ವ ಕಕ್ಕಬ್ಬೆನ ಪಾಡಿ ಶ್ರೀ ಇಗ್ಗುತ್ತಪ್ಪ ದೇವ್ರ್ ಹಬ್ಬ, ಹಂಗೆ ಮಹಾ ಶಿವರಾತ್ರಿ ಹಬ್ಬ ಇದೇ ತಿಂಗಳ್‌ಲಿ ಬಂದದೆ. ಬೆಳೆ ಕೆಲ್‌ಸ ಎಲ್ಲಾ ಮುಗ್‌ಸಿ ತೋಟಗಳ್‌ಲಿ ಕಾಪಿ ಹಣ್ಣ್ ಕೊಯ್‌ವ ಕೆಲ್ಸ, ಒಳ್ಳೆಮೆಣ್ಸ್ ಕೊಯ್‌ವ ಕೆಲ್ಸ, ಗಿಡ ಕಪಾತ್, ಮರ ಕಪಾತ್, ನೀರ್ ಹಾರ್‌ಸುವ ಕೆಲ್‌ಸ ಜೋರಿದ್ದದೆ. ಹಂಗೆನೆ ಸು ಕಾರ್‌ಯಗ ಮೊದ್‌ವೆ ಜಂಬರಗ ಜಾಸ್ತಿ ಈ ತಿಂಗಳ್‌ಂದ ಸುರಾದೆ. ಇದಿಸ್ಟ್ 'ಮಾಯಿ' ತಿಂಗಳ ವಿಸೇಸ.

**ಮಾಯಿ – ಸುಗ್ಗಿ (ಫೆಬ್ರವರಿ – ಏಪ್ರಿಲ್) :** ಸುಗ್ಗಿ ಬೆಳೆ ಮನೆಗೆ ಬಾವ ಕಾಲ, ಬೊದ್ಕುನ ಏಳ್ಗೆನ ಕಾಲ. ಅಕ್ಕಿನ ಮನೆಲಿ ತುಂಬುಸಿ ಆ ಕುಸಿನ ಲೆಕ್ಕಲಿ ಸುಮಾರ್ ನಮೂನೆನ ಕೊಣ್‌ತ ಮತ್ತೆ ಪೊದ್ಯಗ ಹುಟ್ಯೊಳೊ. (ಪಿ.ಬಿ.; ಆರ್.ಯು.)

**ವಿರಾಜ್‌ಪೇಟೆ :** ಕೊಡಗ್ ಜಿಲ್ಲೆನ ಒಂದ್ ತಾಲುಕ್ ಮತ್ತೆ ಅದೆ ತಾಲುಕ್‌ನ ಒಂದ್ ದೊಡ್ಡ ಪೇಟೆನು ಹೌದು. ತೆಂಕಣ ಕೊಡಗ್‌ಂತೇಳ್ವ ಈ ತಾಲುಕುನ ಮೂಡನಪುಡೆಲಿ ಮೈಸೂರ್‌ಜಿಲ್ಲೆನ ಪಿರಿಯಾಪಟ್ಟಣ ಹುಣ್ಸೂರ್ ಮತ್ತೆ ಹೆಗ್ಗಡದೇವನಕೋಟೆ ತಾಲುಕ್‌ಗ ಒಳ, ಹಾಂಗೆನೆ ಬಡ್‌ಗಕೆ ಸೋಮಾರ್‌ಪೇಟೆ ತಾಲುಕ್ ಮತೆ ಪಿರಿಯಾಪಟ್ಟಣ ತಾಲುಕ್‌ನ ಒಸಿ ಬಾಗ ಪಡ್‌ವಕೆ ಮತೆ ವಾಯುವ್ಯಲಿ ಮಡ್ಕೇರಿ ತಾಲುಕ್ ನೈಋತ್ಯ ಮತ್ತೆ ತೆಂಕಣಲಿ ಕೇರಳ ರಾಜ್ಯ ಉಟ್ಟು. ಅಮ್ಮತ್ತಿ, ವಿರಾಜ್‌ಪೇಟೆ, ಪೊನ್ನಂಪೇಟೆ, ಬಾಳೆಲೆ, ಶ್ರೀಮಂಗಲ ಮತ್ತೆ ಹುದಿಕೇರಿಂತೇಳ್ವ ಹೋಬಳಿಗ, 98ಗ್ರಾಮಗ, 3ದೊಡ್ಡ ಪೇಟೆಗಳೂ ಒಳ. ತಾಲುಕ್ 1, 619. 8ಚ. ಕಿಮೀ ದೊಡ್ಡದಿದ್ದರೆ, ಇಲ್ಲಿನ ಜೆನಸಂಕೆ 1, 78, 148.

ಮಲೆನಾಡ್‌ನ ತೌರುಮನೆ ಆದ ಕೊಡಗ್‌ನ ಈ ತಾಲುಕ್ ಬೆಟ್ಟಗುಡ್ಡಗಳ್‌ಂದ ಕೂಡಿಟು. ಕಣಿವೆ ಪ್ರದೇಸ ಮತ್ತೆ ಗುಡ್ಡೆಗಳ ಇಳ್‌ಜಾರ್ ಪ್ರದೇಸ ಕಾಡುಗಳ್‌ಂದ, ಬತ್ತದ ಗದ್ದೆಗಳ್‌ಂದ ಮತ್ತೆ ಕಾಡ್‌ಗಳ ನೆಡುನೆಡುಲಿ ಇರ್‌ವ ಕಾಫಿ, ಕಿತ್ತಳೆನ ತೋಟಗಳ್‌ಂದ ತುಂಬಿದ್ದದೆ. ಅಂಬಟೆ ಬೆಟ್ಟ, ಬೆಟ್ಟಂಗಾಲ, ಕುಂಡದಬೆಟ್ಟ ಮತ್ತೆ ಸಿದ್ದೇಶ್ವರ ಬೆಟ್ಟ ಈ ತಾಲುಕ್‌ನ ಮುಕ್ಯ ಬೆಟ್ಟಂಗ. ವಿರಾಜಪೇಟೆನ ಕಡೆಲಿ ಬೆಪ್ಪುನಾಡ್ ಮತ್ತೆ ಕಡ್ಯೆಟ್‌ನಾಡ್‌ಗಳಲ್ಲಿ ಕಾಡ್ ಅಸ್ಟೇನಿಲ್ಲೆ. ಮೂಡದ ಕರೆಗೆ ಕಾವೇರಿ, ಲಕ್ಷ್ಮಣತೀರ್‌ತ ಹಳ್ಳಗಳ ನೆಡುಲಿ ಪರ್ಣಪಾತಿ ಮರಗಳ ದೊಡ್ಡ ಕಾಡುಟ್ಟು. ಇದರ ಪಡುವಕೆ ದಿನಾ ಪಚ್ಚೆನೆ ಇರ್‌ವ ಕಾಡ್ ಇದ್ದ್ ಬೆದ್ರ್ ಹಿಂಡ್‌ಲ್‌ಗ ಇಲ್ಲಿನ ವಿಸೇಸ.

ಕಾವೇರಿ, ಲಕ್ಷ್ಮಣತೀರ್‌ತ ಮತ್ತೆ ಬರಪೊಳೆ ಈ ತಾಲುಕ್‌ನ ದೊಡ್ಡ ಹಳ್ಳಂಗ. ಕಾವೇರಿ ಹಲುಗುಂದ ಗ್ರಾಮದ ಬಡಗಲಿ ಈ ತಾಲುಕ್‌ನ ಮುಟ್ಟಿದೆ. ಮತ್ತೆ ಮಡಿಕೇರಿ ಮತ್ತೆ ಸೋಮವಾರ ಪೇಟೆ ತಾಲುಕ್‌ಗಳ ವಿರಾಜಪೇಟೆ ತಾಲುಕ್‌ಂದ ಬೇರೆ ಮಾಡಿ ಗಡಿ ಆಗಿ ಈಸಾನ್ಯಕೆ ಹರ್‌ದದೆ. ಹಳ್ಳದ ಕರೆಗ ವಿರಾಜಪೇಟೆ ತಾಲುಕ್‌ಗೆ ಸೇರಿದ್ದ್ ಬೇಸಾಯಕೆ ಅನುಕೂಲ ಆಗಿದ್ ಉಟ್ಟು. ಇದೇ ತಾಲುಕ್‌ನ ಬ್ರಹ್ಮಗಿರಿ ಬೆಟ್ಟಸಾಲ್‌ನ ದೇವಾಸಿಬೆಟ್ಟದ ಮುನಿಕಾಡ್‌ಲಿ ಲಕ್ಷ್ಮಣತೀರ್‌ತ ಹುಟ್ಟಿ ಮೂಡಕೆ ಹರ್‌ಕಂಡ್, ಅರಕೆರೆ ಮತ್ತೆ ಹತುಗಟ್ಟ್ ಕಾಡ್‌ಗಳ ನೆಡುಲಿ ಹರ್‌ದ್ ಪಿರಿಯಾಪಟ್ಟಣ ತಾಲುಕ್‌ನ ಮುಟ್ಟಿದೆ. ರಾಮತೀರ್‌ತ ಮತ್ತೆ ಕರೆಹೊಳೆ ಎರಡ್ ಉಪನದಿಗ ಈ ಹಳ್ಳಕೆ ಸೇರ್‌ವೆ. ವಿರಾಜಪೇಟೆನ ಆಗ್ನಿ ಮೂಲೆಗೆ ಈ ಹಳ್ಳದ ನೀರ್‌ನ ಆಸ್ರಯ ಸಿಕ್ಕಿಟು. ಈ ತಾಲೂಕ್‌ನ ಮತ್ತೊಂದ್ ಮುಕ್ಯ ಹಳ್ಳ ಬರಪೊಳೆ. ಲಕ್ಷ್ಮಣತೀರ್‌ತ ಮತ್ತೆ ಪಾಪನಾಶಿನಿ ಹುಟ್ಟುವ ಎಡೆಲೇ ಈ ಹಳ್ಳನೂ ಹುಟ್ಟಿ ಪೊಡ್‌ವಾಬಿಮುಕ ಆಗಿ ಹರ್‌ದದೆ. ಕೇರಳನ ಸೇರಿಕೆ ಮುಂದೆ ಬರಪೊಳೆ ಸುಮಾರ್ ಮೂರ್ ಕಿಮೀ ದೂರ ಕೊಡಗ್‌ನ ಗಡಿಲಿ ಆಗಿ ಹರ್‌ದದೆ. ರಣಕಾಡ್‌ನ ನೆಡುಲಿ ಈ ಹಳ್ಳ ಹರ್‌ದರೂ ಇದರ ಎಡಬಲ ಉಳಿಯಗ ಬೇಸಾಯಕೆ ಬೂಮಿಗೆ ನೀರುಣ್ಸಿದೆ. ನೀರ್ ಮತ್ತೆ ದೈಮರಗ ಮಂದಲಿ ಇರ್‌ವ ಈ ತಾಲುಕ್‌ಲಿ ಮಳೆ ಹೆಚ್ಚ್. ಇದರ ವಾರ್‌ಸಿಕ ಮಳೆ ಸು. 2, 839. 40 ಮಿಮೀ.

ತಾಲುಕ್‌ಲಿ ಬತ್ತಕ್ಕೆ ಬೇಕಾದಂತ ಬೂಮಿ ಮತ್ತೆ ನೀರ್ ಪೂರೈಕೆ ಲಾಯ್‌ಕ್ ಇದ್ದ್ ಇದೇ ಮುಕ್ಯ ಬೆಳೆಯಾಗುಟು. ಒಟ್ಟಿಗೆ ಕಾಫಿ, ಮೆಣ್ಸ್, ಏಲಕ್ಕಿ ಮತ್ತೆ ಕಿತ್ತಳೆ ಮುಕ್ಯ ತೋಟದ ಬೆಳೆಗ. ಇವು ಅಲ್ಲದೆ



ವಿರಾಜ್‌ಪೇಟೆ ಕ್ಲಾಕ್ ಟವರ್

ಬಾಳೆ, ಹಳ್ಳ್ಲ ಅಡ್‌ಕೆ, ಹಲ್ಸ್‌ನಣ್ಣ್ ಇಂತದರನು ಬೆಳೆದು ಉಟ್ಟು. ಈ ತಾಲುಕ್‌ಲಿ ಜೇನ್‌ಸಾಂಕಣೆ, ಪಶುಪಾಲನೆ ಮತ್ತೆ ಮೀನ್‌ಸಾಂಕುದು ಸಾಮಾನ್ಯ. ಕೈಗಾರಿಕೆ ಅಸ್ಟಾಗಿ ಅಬಿರುದ್ದಿ ಆತ್‌ಲೆ. ವಿರಾಜಪೇಟೆ– ಮೈಸೂರ್, ವಿರಾಜಪೇಟೆ– ಮಡ್ಕೇರಿ– ಸೋಮಾರಪೇಟೆ, ಹಾಸನ ಮುಂತಾದ ಜಿಲ್ಲೆನ ಹೆದ್ದಾರಿಗ ಇದ್ದ್, ಸಾಕಸ್ಟ್ ಗ್ರಾಮೀಣ ಮಾರ್‌ಗಗ ಇದ್ದ ಸಂಪರ್‌ಕ ಸಾದನಗೊಳ. ತಾಲುಕ್‌ಲಿ ವಾಣಿಜ್ಯ ಮತ್ತೆ ಸಹಕಾರ ಬ್ಯಾಂಕ್‌ಗೊಳ. ಶಾಲೆಗಳೂ ಒಂದ್ ಕಾಲೇಜೂ ಇದ್ದ್ ವಿದ್ಯಾಬ್ಯಾಸಕೆ

ತಾಲುಕ್‌ಲಿ ಸಾಕಸ್ಟ್ ಸೌಕರ್‌ಯ ಉಟ್ಟು. ಕರೆಂಟ್, ಪೋಸ್ಟ್, ತಂತಿ, ದೂರವಾಣಿ, ಆಸ್ಪತ್ರೆ ಮತ್ತೆ ಮೆಡಿಕಲ್‌ಗಳ ಸೌಕರ್‌ಯಗೊಳ.

ವಿರಾಜಪೇಟೆನ ದಕ್ಷಿಣಲಿ 10 ಕಿಮೀ ದೂರಲಿರ್‌ವ ಹೆಗ್ಗಾಲ ಗ್ರಾಮ ಹೆಗ್ಗಾಲ (ಹೆಗ್ಗಾಲ ಪಾಸ್) ಕಣಿವೆ ಮಾರ್‌ಗಂದಾಗಿ ಹೆಸ್ರಾಗುಟು. ಈ ಮಾರ್‌ಗಂದಾಗಿದೆ ಟಿಪ್ಪುಸುಲ್ತಾನ್ ಕೊಚ್ಚಿ ಮತ್ತೆ ತಿರುವಾಂಕೂರು ರಾಜರ ಮೇಲೆ ದಂಡೆತ್ತಿ ಹೋಗಿತ್ತ್‌ತ ಬ್ರಿಟಿಸರ ಸೈನ್ಯ ಸಹ ಕಣ್ಣಾನೂರ್‌ಂದ ಶ್ರೀರಂಗಪಟ್ಟಣಕೆ ಇದೇ ಮಾರ್‌ಗಂದಾಗಿ ಹೋಗಿತ್ತ್‌ತ ತಿಳ್ದ್ ಬಂದದೆ. ವಿರಾಜಪೇಟೆನ ವಾಯವ್ಯಲಿ 6 ಕಿಮೀ ದೂರಲಿರ್‌ವ ಅರಮೇರಿ ಗ್ರಾಮದ ಹಕ್ಕಲೆ ದೊಡ್ಡ ಶಿಲಾ ಸಮಾದಿಯುಗದ ಕಲ್ಲ್‌ಗುಡ್ಡೆ ಸಮಾದಿಗ ಸಿಕ್ಕಿದ್ದ್ ಇಲ್ಲಿನ ಇತಿಯಾಸಮೂಡ ಸ್ತಳಚರಿತ್ರೆನ ವಿಸಯಗಳ ಮೇಲೆ ಬೊಳ್ಪು ಮೂಡ್ಸಿಟು, ವಿರಾಜಪೇಟೆನ ಉತ್ತರಲಿ 13 ಕಿಮೀ ದೂರಲಿರ್‌ವ ಬೈರಂಬಡ ಗ್ರಾಮದ ಸುಬ್ರಹ್ಮಣ್ಯ ದೇಸ್ತಾನ ಹೆಸ್ರಾದ್ದ್. ವಿರಾಜಪೇಟೆಗೆ ಈಸಾನ್ಯಲಿ 16 ಕಿಮೀ ದೂರಲಿರವ ಗುಯ್ಯ ಗ್ರಾಮಲಿರ್‌ವ ಅಗಸ್ತ್ಯೇಶ್ವರ ದೇಸ್ತಾನ ಉಟ್ಟು. ವಿರಾಜಪೇಟೆನ ಆಗ್ನೇಯಲಿರ್‌ವ ಪೊನ್ನಂಪೇಟೆಗೆ 11 ಕಿಮೀ ಮೂಡಲಿರ್‌ವ ಬೀಳೂರು ಗ್ರಾಮಲಿ 9ನೆ ಶತಮಾನಕೆ ಸೇರ್‌ದ ಗಂಗರ ಕೆಲವ್ ಶಾಸನಂಗೊಳ. ಪೊನ್ನಂಪೇಟೆನ ಈಸಾನ್ಯಲಿ 6 ಕಿಮೀ ದೂರಲಿರ್‌ವ ದನುಕಾಲಲಿ ಟಿಪ್ಪುಸುಲ್ತಾನ್‌ನ ಸೈನ್ಯ ಹಾಳ್ ಮಾಡ್‌ದ ಕೊಳ್ಳಿನಿಂಗ ಮತ್ತೆ ಬೆಣ್ಣೆಕೃಷ್ಣ ಇವು ಕಟ್ಟಿದ್‌ತ ಹೇಳ್‌ವ ಕೋಟೆನ ಒಳ್ಕಡೆ ಉಟ್ಟು. ತಾಲುಕ್‌ನ ತೆಂಕದ ಮೂಲೆಲಿರ್‌ವ ಪೊನ್ನಂಪೇಟೆಗೆ 35 ಕಿಮೀ ದೂರಲಿರ್‌ವ ಕುಟ್ಟ ಗ್ರಾಮಲಿ ಪ್ರತಿ ಮಾರ್ಚ್–ಏಪ್ರಿಲ್ ಲಿ ನಡೆವ ಕಾಳಿಕಾದೇವಿನ ಜಾತ್ರೆ ನಡ್‌ದದೆ. ತಾಲುಕ್‌ನ ತೆಂಕದ ಕೊಡಿಲಿ ಪೊನ್ನಂಪೇಟೆಗೆ ತೆಂಕಣಲಿ 24 ಕಿಮೀ ದೂರಲಿರ್‌ವ ಕುರ್‌ಚಿ ಗ್ರಾಮದ ಹಕ್ಕಲೆ ಶ್ರೀರಾಮಂದ ಸ್ತಾಪನೆಯಾದ್ದ್‌ತ ಹೇಳ್‌ವ ಶಿವದೇಸ್ತಾನ ಇದ್ದ್ ಶಿವರಾತ್ರಿನಂದ್ ಸಣ್ಣ ಜಾತ್ರೆ ನಡ್ದದೆ. ಪೊನ್ನಂಪೇಟೆನ ತೆಂಕಲಿ 10 ಕಿಮೀ ದೂರಲಿರ್‌ವ ಹುದಿಕೇರಿ ಹಿಂದೆ ಕಿಗ್ಗಟ್‌ನಾಡ್ ತಾಲುಕ್‌ನ ಆಡೆಳ್ತ ಕೇಂದ್ರ ಆಗಿತ್ತ್. ಪೊನ್ನಂಪೇಟೆಗೆ ತೆಂಕಣಲಿ 3 ಕಿಮೀ ದೂರಲಿರ್‌ವ ಚಿಕ್ಕಮಂಡೂರು ಗ್ರಾಮದ ಹಕ್ಕಲೆ ಇತಿಯಾಸ ಮೂಡ ಶಿಲಾಸಮಾದಿಗ ಇರ್‌ದು ಪತ್ತೆ ಆಗುಟು. ಈ ತಾಲುಕ್‌ಲಿ ಪ್ರಸಿದ್ಧ ನಾಗರಹೊಳೆ ಅಬಯಾರಣ್ಯ ಉಟ್ಟು. ಪೊನ್ನಂಪೇಟೆನ ಆಗ್ನೇಯಕೆ 35 ಕಿಮೀ ದೂರಲಿರ್‌ವ ಈ ಕಾಡ್ ಪ್ರದೇಸ ಪ್ರವಾಸಿಗಳ ಕೇಂದ್ರ ಆಗುಟು. ಪೊನ್ನಂಪೇಟೆ ಹೋಬಳಿಗೆ ಸೇರ್‌ದ ಕುಟ್ಟಂದಿ ಗ್ರಾಮದ ಹಕ್ಕಲೆ ಬರಪೊಳೆ ಜಲವಿದ್ಯುತ್ ಕೇಂದ್ರ ಸ್ತಾಪನೆನ ಯೋಜೆನೆ ಮಾಡಕುಂತಾಗುಟು. ಈ ಗ್ರಾಮ ಮತ್ತೆ ಜಲವಿದ್ಯುತ್ ಕೇಂದ್ರದ ಜಾಗೆ ವಿರಾಜಪೇಟೆನ ಆಗ್ನೇಯಕೆ 16 ಕಿಮೀ ದೂರಲುಟ್ಟು. ವಿರಾಜಪೇಟೆನ ಆಗ್ನೇಯಕೆ 5 ಕಿಮೀ ದೂರಲಿರ್‌ವ ಬಿಟ್ಟಂಗಾಲ ಗ್ರಾಮದ ಹಕ್ಕಲೆ ಅಬಯಾರಣ್ಯ ಪ್ರದೇಶದ ಪ್ರಕೃತಿಸೌಂದರ್‌ಯ ಹೆಸರಾದ್ದ್. ಇಲ್ಲಿಂದ ಬರಪೊಳೆನ ಸರತಾಬಿ ಜಲಪಾತಕೆ ಮಾರ್‌ಗ ಉಟ್ಟು. ವಿರಾಜಪೇಟೆನ ಮೂಡಕೆ 16 ಕಿಮೀ ದೂರಲಿರ್‌ವ ಗೋಣಿಕೊಪ್ಪಲ್ ಒಂದ್ ಯಾಪಾರ ಕೇಂದ್ರ. ವಿರಾಜಪೇಟೆನ ಆಗ್ನೇಯಲಿ 20ಕಿಮೀ ದೂರಲಿರ್‌ವ ಪೊನ್ನಂಪೇಟೆ ಒಂದ್ ದೊಡ್ಡ ವ್ಯಾಪಾರಕೇಂದ್ರ. ವಿರಾಜಪೇಟೆನ ತೆಂಕಕೆ ಇರ್‌ವ ವಾಟೆಕೊಲ್ಲಿ ಗ್ರಾಮ ಪೆರಿಯಂಬಾಡಿ ಗಾಟಂದಾಗಿ ಕಣ್ಣಾನೂರಿಗೆ ಹೋವ ಹೆದ್ದಾರಿಲಿಟ್ಟು. ಹೆಚ್ಚಿ ಮಳೆ ಬೀಳ್‌ವ ಕೊಡಗ್‌ನ ಭಾಗಮಂಡಲ ಬುಟ್ಟರೆ ವಾಟೆಕೊಲ್ಲಿ ಎರ್‌ಡ್‌ನೆದ್. ಇದರ ಕೊಡಗ್‌ನ ಚಿರಾಪುಂಜಿತ ಕರ್‌ದವೆ.

ವಿರಾಜಪೇಟೆ ಈ ತಾಲುಕ್‌ನ ಆಡಳಿತ ಕೇಂದ್ರ. ತಾಲುಕ್‌ನ ವಾಯವ್ಯಲಿ ಕಣ್ಣಾನೂರ್–ಮಡಿಕೇರಿ, ಕಣ್ಣಾನೂರ್–ಮೈಸೂರು ಹೆದ್ದಾರಿಲಿರ್‌ವ ಈ ಪಟ್ಟಣ ಮಡಿಕೇರಿನ ದಕ್ಷಿಣಕೆ 32 ಕಿಮೀ ದೂರಲುಟ್ಟ್. ಜೆನಸಂಕೆ 22,480. ಇದ್ ಕೊಡಗ್‌ನ ಎರಡ್‌ನೆ ಮುಕ್ಯ ಪಟ್ಟಣ. ಈ ಪಟ್ಟಣನ ಕೊಡಗ್‌ನ ದೊಡ್ಡ ವೀರರಾಜೇಂದ್ರ ಒಡೆಯ 1792ರ್‌ಲಿ ಬ್ರಿಟಿಸ್ ಸೈನ್ಯಾದಿಕಾರಿ ಆಗಿದ್ದ ಜೆನರಲ್ ಸರ್ ರಾಬರ್ಟ್ ಅಬರ್‌ಕ್ರಾಂಬಿನ ಸಿಕ್ಕಿದ ಜಾಗೆಲೇ ಅದರ ನೆಂಪುಗಾಗಿ ಕಟ್ಟ್‌ಸಿ, ವೀರರಾಜೇಂದ್ರಪೇಟೆತ ಹೆಸ್ರಿಸಿತ್. ಮುಂದೆಗೆ ಈ ಪಟ್ಟಣದ ಹೆಸ್ರ್ ವಿರಾಜಪೇಟೆತ ಬಳಕೆಗೆ ಬಾತ್. ಇಲ್ಲಿ ಕ್ಷೇತ್ರಾಬಿವೃದ್ಧಿ ಅದಿಕಾರಿಗಳ ಕಚೇರಿನು ಮುನ್ಸಿಪಾಲ್ಟಿಯರ ಮತ್ತೆ ಸುರುನ ದರ್ಜೆನ ಮ್ಯಾಜಿಸ್ಟ್ರೇಟರ ಕೋರ್ಟುಗನು ಸರ್‌ಕಾರಿ ಆಸ್ಪತ್ರೆಗ, ಕರೆಂಟ್, ಅಂಚೆ, ತಂತಿ, ದೂರವಾಣಿ ಸೊವ್‌ಕರ್‌ಯ, ಕಾಸಗಿ ಮತ್ತೆ ಸರ್‌ಕಾರಿ ಪ್ರಾತಮಿಕ ಮತ್ತೆ ಪ್ರೌಡಸಾಲೆಗ ಒಳೊ. ಈ ಪೇಟೆಲಿ 1870ರ್‌ಂದ ಪುರಸಬೆ ಉಟ್ಟು. ಇಲ್ಲಿಂದ ಕೇರಳದ ತಲಚೇರಿ, ಕಣ್ಣಾನೂರ್‌ಗೆ ಜಿಲ್ಲೆನ ಮತ್ತೆ ನೆರೆಜಿಲ್ಲೆನ ಎಲ್ಲಾ ಊರ್‌ಗೆ ವಾಹನ ಸಂಪರ್‌ಕ ಇದ್ದ್, ಇದ್ ಜಿಲ್ಲೆನ ಒಂದ್ ಮುಕ್ಯ ವ್ಯಾಪಾರಕೇಂದ್ರ ಆಗುಟು. ಕಾಫಿ, ಏಲಕ್ಕಿ, ಮೆಣ್ಸ್ ಮತ್ತೆ ಅಕ್ಕಿ ಇಲ್ಲಿನ ಮುಕ್ಯ ವ್ಯಾಪಾರ ಪದಾರ್‌ತಗ. ಈ ಪೇಟೆ ಮಲೆತಂಬಿರಾನ್ ಬೆಟ್ಟದ ಬುಡಲಿಟ್ಟು. ಇಲ್ಲಿನ ರೋಮನ್ ಕ್ಯಾತೊಲಿಕ್ ಚರ್ಚ್ ಮತ್ತೆ ಗಡಿಯಾರದ ಗೋಪುರ ವಿಸೇಸವಾಗಿಟ್ಟು. (ಡಿ.ಎನ್.ಕೆ.)

**ಅರೆಬಾಸೆ ಸಿಸುಪ್ರಾಸ :** ಅರೆಬಾಸೆ ಚುಟುಕು ತೇಳ್‌ವ ಜನಪದ ಸಾಹಿತ್ಯ ಅರೆಬಾಸೆ ಸಂಸ್ಕೃತಿನ ಒಂದ್ ವಿಸೇಸ ಬಾಗ. ಅದ್ ಹಿಂದೆ ಬಾಳಿ ಬೊದ್‌ಕಿದ ಹಿರಿಯರ ಪಂಡ್‌ನ ಅನುಬವದ ಒಂದ್ ದೊಡ್ಡ ಗುರ್‌ತ. ಯಾದೇ ಬಾಸೆಲಿ ಅದರ ಸಿರಿತನ ಗೊತ್ತಾದು ಜನಪದ ಸಾಹಿತ್ಯದ ಹಿನ್ನೆಲೆಲಿ ನೋಡಿಕನ ಅದೇ ಮೂಲ ಸಾಹಿತ್ಯಂತ ಹೇಳಕ್. ಹಾಂಗಾಗಿ ಅದುವೇ ಮುಂದೆನ ಸಾಹಿತ್ಯದ ಗಟ್ಟಿ ಬುಡ. ಅರೆಬಾಸೆಲಿ ಕೂಡ ಜನಪದ ಸಾಹಿತ್ಯಲಿ ಸುಮಾರ್ ತರದ ಜಾನಪದ ಬಗೆಗಳ ನೋಡಕ್. ಇದರ್‌ಲಿ ಚುಟುಕುಗ ಸಣ್ಣ ಮಟ್ಟ್‌ನ ಪೊದ್ಯಗ ಒಟ್ಟು. ತ ಚುಟುಕುಗ ಬೇರೆ ಬೇರೆ ಬಗೆಲಿ ಉಟ್ಟು. ಸಣ್ಣ ಮಕ್ಕಳಿಗೆ, ದೊಡ್ಡ ಮಕ್ಕಳಿಗೆ, ಗೂಡೆಗಳಿಗೆ, ಮೊದುಮಕ್ಕಳಿಗೆ, ದನ ಕರ್‌ಗಳಿಗೆ, ಕೊತ್ತಿ,




ನಾಯಿಗೆ, ಜಾಗೆ ಜಮ್ಮಕ್ಕೆ, ಮೊದ್‌ವೆ, ಸಾವು, ಕ್ರಿಸಿ, ಬೇಸಾಯ ಹಿಂಗೆ ಎಲ್ಲಾದಕ್ಕೂ ಸಮ್ಮಂದಪಟ್ಟಂಗೆ ಕುಸಾಲ್, ಬೆಚ್ಚ, ಮತ್ತೆ ಬುದ್ದಿವಾದ ಹೇಳ್‌ವಂತ ಚುಟುಕಗ ಒಳೊ. ಇದರ್‌ಲಿ ಪೆದಂಬು, ಅಸ್ಲೀಲತೆ ಕೂಡ ಉಟ್ಟು.

ಸಣ್ಣ ಮಕ್ಕಳಿಗೆ :

ಕಾಲಾಡ್ ಕಪ್ಪೆ ಕಾಲಾಡ್
ನೀರಿಗೆ ಬಿದ್ದರೆ ತೇಲಾಡ್
ಗುಡ್ಡೆಗೆ ಬಿದ್ದರೆ ಹಾರಾಡ್
ಕಾಲಾಡ್ ಕಪ್ಪೆ ಕಾಲಾಡ್

ಇಲ್ಲಿ ಸಣ್ಣ ಪ್ರಾಯದ ಎದ್ದ್ ಬಿದ್ದ್ ನಡೆವ ಮಕ್ಕಳ, ಮನೆ ಚಿಂಟೆ, ಕುರ್‌ಸ್ ಇಲ್ಲಾರ್ ಯಾದಾರ್ ಎತ್ತರದ ಜಾಗೆಲಿ ಕುದ್ದ್‌ದ್, ಕಾಲ್‌ನ ಕೆಳಗೆ ಹಾಕಿ ಪಾದದ ಮೇಲೆ ಕೂಸುನ ನಿಲ್ಸಿ, ಕೂಸುನ ಎರ್‌ಡ್ ಕೈನ ಹಿಡ್‌ಕಂಡ್ ಕಾಲಾಡ್‌ಸಿಕಂಡ್ ಹೆಚ್ಚಾಗಿ ಇದರ ಅಜ್ಜಿಕ ಅಜ್ಜಂದರ್, ಅಪ್ಪ ಚಿಕ್ಕಪ್ಪಂದರ್ ಮಕ್ಕಳ ಆಟ ಆಡ್‌ಸ್‌ಕನ ಹೇಳ್‌ವೆ. ಇಲ್ಲಿ ಮಕ್ಕ ಆಗ ತಾನೇ ಮಾತ್ ಕಲೆವ ಕಾರಣಕ್ಕೆ ಒಂದ್ ತರದ (ಸಿಸು ಪ್ರಾಸ ಪದ) ಮಾತ್ ಕಲ್‌ಸ್‌ವ ಪೊದ್ಯ ಅಂತನೂ ಹೇಳಕ್. ಹಂಗೆ ಕಾಲ್‌ಲಿ ಕುದ್ರ್‌ಸಿ ಆಟ ಆಡ್ಸುದರ್‌ಂದ ಮಕ್ಕಳಿಗೆ ಸಣ್ಣ ಮಟ್ಟ್‌ನ ಯಾಯಾಮ ಕೂಡ ಆದೆ.

ಡಾಕ್ ಡೂಕ್ ಡಗಾರಿಕಂಡೆ
ಹುಲಿಮೀಸೆ ರಕ್ಕಸಿ
ರಕ್ಕಸಿನಜ್ಜಿ ರಟ್ಟೆ ಮುರಡಣ
ಗರಡನಾ ತೂಗೋಣ

ಇದ್ ಬಾಸೆಗೆ ಪ್ರಾಸ ಇರ್‌ವಂಗೆ ಇದ್ದರೂ ಮಕ್ಕಳಿಗೆ ಹೆದ್ರ್‌ಸುವ ಹಾಂಗೆ ಕಂಡರೂ ಅದರ ಸಮಾದಾನ ಮಾಡಿ ನಿಲ್‌ಗ್‌ಸ್‌ವೆ,ಉಣ್‌ಸ್‌ವೆ, ತೊಟ್ಟಿಗಿಲ್ ತೂಗ್‌ವ ಹೊತ್ತ್‌ಗೆ ಅಜ್ಜಿಕ ಹೇಳತಿದ್ದೊ. ಇಲ್ಲಿ ಪದದ ಉಚ್ಚಾರ ಇನ್ನೂ ಸ್ಪಸ್ಟ ಆಗಿ ಸಿಕ್ಕಿತ್ಲೆ. ಹಾಂಗಾಗಿ ಎಲ್ಲ ಅರ್‌ತ ಮಾಡಿಕಂಬಕೆ ಕಸ್ಟ ಆದೆ.

ದೊಡ್ಡ ಮಕ್ಕಳಿಗೆ :

ಅಪ್ಪಂಗೆ ಜರ
ಅವ್ವಂಗೆ ಕುರ
ನಂಗೆಮ್ಮೆ ಪಾರ
ಚಾಂಪಂಗೆ ದನಪಾರ
ಚಾಮವ್ವಂಗೆ ಮಕ್ಕಳ ಪಾರ
ನೀವ್ಗೆಲ್ಲಾ ಸಸಾರ

ಹಿಂದೆಲ್ಲ ಮನೆನ ದೊಡ್ಡ ಮಕ್ಕ ದನ ಮೇಸುದು ಮಾಮೂಲು. ಹಾಂಗೆ ಇಲ್ಲಿ ಮನೆಲಿರ್‌ವ ಒಬ್ಬೊಬ್ಬನ ಕೆಲ್ಸ ಹೆಂಗೆ ಹಂಚಿ ಹೋವುಟುತೆಳ್‌ದರನು ನೋಡಕ್. ಒಟ್ಟ್‌ಗೆ ಅವ್ವ ಅಪ್ಪಂಗೆ ಉಸಾರ್ ಇತ್ಲಾರ್ ಮನೆ ದೊಡ್ಡ ಮಕ್ಕಳಿಗೆ ಆ ಕೆಲ್ಸ ಮಾಡ್‌ವ ಪರಿಸ್ತಿತಿಲಿ ಸಣ್ಣವ್‌ಕೆ ಇದೆಲ್ಲ ಸಸಾರತ ಹೇಳ್‌ವ ಹಾಂಗೆ ಉಟ್ಟು.

ಸಗಣಿ ಕಟ್ಟೆ ಕಟ್ಟಿ
ಪೊವ್ವ ಕುಪ್ಪ ಹಾಕಿ
ಹಾಲ್ ಬೋನ ಉಂಡ್
ಮಾಮನೆಗೆ ನಡಿಮಜ್ಜ ಮುಂದೆ ಮುಂದೆ
ನಾಬನ್ನೆ ನಿನ್ನ ಬೆನ್ನಿ ಹಿಂದೆ.

ಮಕ್ಕ ಹಳ್ಳಿ ದೊಡ್ಡದಾಕನ ಅಯ್ಯೆ ತೊವ್‌ರ್ ಮನೆಗೆ ಅಂದರೆ ಮಕ್ಕಳ ಮಾಮನೆಗೆ ನಡ್‌ದ್ ಹೋದರ ಹೇಳ್‌ದ್, ನಡ್‌ದ್ ಹೋಕನ ಬೊಚ್ಚೆಲ್ ಹೋಕೆ, ದಾರಿ ಸಾಗಿಕೆ ಇಂತದೆ ಪೊದ್ಯಗಳ ಕಟ್ಟಿಕಂಡ್ ಹೇಳಿಕಂಡ್ ಹೋತಿದ್ದೋ ತ ಹಿರಿಯವು ಹೇಳ್‌ವೆ.

ಹುಡ್ಗರ್ (ಬಾವ ನನ್ನಂದರ್, ಅತ್ತಿಗೆ ನಾದಿನಿಕ) :

ಅತ್ತಿ ಮರ ನೋಡಿಕೆ ಲಾಯ್ಕ್
ಅತ್ತಿಗೆ ತಂಗೆ ನೋಡಿಕೆ ಲಾಯ್ಕ್
ಅತ್ತೆನ ಮಗ್ಳ್ ಅಮ್ಮುಣಿ ಗೂಡೆ
ನೋಡಿಕೆ ಇನ್ನೂ ಲಾಯ್ಕ್... !
ಮಾಯಿನ ಮರ ಲಾಯ್ಕ್
ಮಾಯಿನ ಹಣ್ಣ್ ಲಾಯ್ಕ್
ಮಾಂವನ ಮಜ್ಜ ಮೇದಪ್ಪ ಹೈದ
ನೋಡಿಕೆ ಇನ್ನೂ ಲಾಯ್ಕ್ !

ಇಲ್ಲಿ ಸೋದರದ ಸಮ್ಮಂದದೊಟ್ಟಿಗೆ ಸಮ್ಮಂದ ಬೆಳ್‌ಸ್‌ವ ಹಾಂಗೆ ಕುಸಾಲ್ ಮಾಡ್‌ದು, ಅವರ ಪೊರ್‌ಲುನ ಮರ ಮತ್ತೆ ಹಣ್ಣ್‌ನ ಹಿನ್ನೆಲೆಲಿ ಹೊಗಳ್‌ದು ಕಂಡದೆ. ಇಲ್ಲಿ ಚೂರು ಮೂಲ ಪೊದ್ಯದ ರೂಪಲಿ ಸಣ್ಣ ಬದಲಾವಣೆ ಆಗಿರುವ ಸಾದ್ಯತೆ ಕೂಡ ಇರ್‌ದು ಕಂಡದೆ. ಜನಪದ ಪೊದ್ಯಗ ಒಂದ್ ಬಾಗಂದ ಇನ್ನೊಂದು ಬಾಗಕೆ ಹೋಕನ ಸುಮಾರ್ ಬದ್‌ಲಾವ್‌ಟು. ಹಾಂಗೆ ಇಲ್ಲಿ ಕೂಡ ಪದ ವಸ್ತು ಬದ್ಲಾಗುಟು ಅನ್ಸಿದೆ.

ಹಪ್ಪಿ ಮೂಂಗೂ.. ಚಪ್ಪರ ತಲೆ
ದೊಗ್ಗಳೆ ದೊಳ್ಳಕ್ಕ
ಬಾವನ ದೊಡ್ಡಕ್ಕ...

ಸಮ್ಮಂದಲಿ ರೂಪನ ತಮಾಸೆ ಮಾಡ್‌ವ ಕುಸಾಲ್‌ನ ಸಣ್ಣ ಪೊದ್ಯ ಇದ್. ಇದ್ ತಮಾಸೆನೂ ಆಗಿರ್‌ದೂ ಮತ್ತೆ ಸಿಟ್ಟ್‌ಲಿ ಕೂಡ ಹೇಳ್ದಂಗೆ ಉಟ್ಟು. ಹಾಂಗಾಗಿ ಇದರ ಬೊಯ್‌ಗಳದ ದ್ರುಸ್ಟಿಲಿ ಕೂಡ ನೋಡಕ್. ಇನ್ನೊಂದು ಪೊದ್ಯ ಗಂಡ್‌ಸರ ರೂಪದ ಬಗ್ಗೆ ಉಟ್ಟು.

ಹೊಟ್ಟೆ ಡುಮ್ಮಣ್ಣ

ಕೈಕಾಲ್ ಸಣ್ಣಣ್ಣ
ಬೊಕ್ಕ್ ಬಾಯಿ ದೊಡ್ಡಣ್ಣ
ಹರ್‌ಕ್ಲ್ ಬಾಯಿ ಕಿಟ್ಟಣ್ಣ.

ಹಿಂಗೆ ಸರ್ಪದ ಅಂಗಾಂಗ ಮತ್ತೆ ರೂಪದ ಬಗ್ಗೆ ಕೂಡ ಬೇರೆ ಬೇರೆ ಪೊದ್ಯಗ ಹುಡ್‌ಕಿರೆ ಸಿಕ್ಕುವೊ. ಇದ್ ತಮಾಸೆ ಆದರೂ ಕೂಡ ಸತ್ಯ. ಜಾಗೆ ಜಮ್ಮದ ಬಗ್ಗೆನೂ ಸಮ್ಮಂದಲಿ ಕುಸಾಲ್ ಮಾಡ್‌ವ ಪೊದ್ಯ ಒಂದ್ ಹಿಂಗುಟ್ಟು.

ಹಳ್ಳದಕರೆ ಬೂಮಿ
ಬರೆಕರೆ ಮನೆ
ಕೂರಟು ನೇಗ್ಲ್
ಬಡ್ಕಲ್ ಎತ್ತ್
ಯಾರಿಗೆ ಕಮ್ಮಿ ನಮ್ಮಳಿಯ
ಅಳಿಯ ನಮ್ಮ ಮನೆ ತೊಳಿಯ.

ಈ ಪೊದ್ಯಲಿಅಳಿಯನ ಬಗ್ಗೆ ಹೊಗಳಿ ಇಂತಾ ಅಳಿಯ ನಾವ್‌ಗೆ ಸಿಕ್ಕಿತ್ ತೇಳ್‌ವ ಹಮ್ಮುನು ಉಟ್ಟು.

ಮೊದ್‌ವೆ ಜಂಬರದ ಬಗ್ಗೆ :

ನೇರಳೆ ಹಣ್ಣಾತ್
ಅಣ್ಣಂಗೆ ಹೆಣ್ಣಾತ್
ಮಲ್ಲಿಗೆ ಹೂವಾತ್
ಮಳ್ಳಿಗೆ ಗಂಡಾತ್
ಹೆಣ್ಣ್ ತಂದಾತ್
ದಿಬ್ಬಣ ಹೋಗ್ಯಾತ್

ನೇರಳೆ ಹಣ್ಣಾದು ಜಾಳ್ತೆ ಮತ್ತೆ ಪೆರಾಳ್ತೆ ತಿಂಗಳ್‌ಲಿ, ಅಂದರೆ ಮಳೆಗಾಲ ಕಳ್ದ್ ಸೆಳಿಗಾಲ ಸುರು ಆವ ತಿಂಗ ಮೊದ್‌ವೆ ಸಮ್ಮಂದ ಹುಡ್‌ಕಿಕೆ ಅದ್ ಒಳ್ಳ ಹೊತ್ತ್. ಹಾಂಗೆ ಮೊದೊಳಿಗೆ ಮಲ್ಲಿಗೆ ಹೂವು ಬೇಕೇ ಬೇಕು. ಹೂವಾಗುವ ಹೊತ್ತ್‌ಗೆ ಗೂಡೆಗೆ ಮೊದ್‌ವೆ ಆದ ಬಗ್ಗೆ ಇಲ್ಲಿ ತಿಳ್‌ಕಣಕ್. ಒಟ್ಟ್‌ಗೆ ಹೂವು ಮೊದ್‌ವೆಲಿ ಎಸ್ಟ್ ಮುಕ್ಯತನೂ ನೋಡಕ್.

ಕೊಟ್ಟ್ ಕತ್ತಿ ಬಾಣೆಲಿ
ಕೊಂಬೋಲಗ ಕೇಳ್ದೆ
ಮರ್‌ಜ್ಬಡ ನೀ ಕುಞ್ಞಕ್ಕ
ದಬ್ಬಡ್ಕ ಬಾಣೆಲಿ ದಿಬ್ಬಣ ಬಂದುಟು
ಮರ್‌ಜ್ಬಡ ನೀ ಸಣ್ಣಕ್ಕ...

ಮೊದ್‌ವೆ ಆಕನ ಗೂಡೆಗ ಮರ್‌ಡ್‌ದು ಸಾಮಾನ್ಯ. ಅದರ್‌ನೇ ಕುಸಾಲ್‌ನ ಪೊದ್ಯ ಕಟ್ಟಿದ್ ತಮಾಸೆ ಮಾಡ್‌ವೆ ಈ ಪೊದ್ಯಲಿ. ಹುಡ್ಕಿರೆ ಇಂತ ಇನ್ನಸ್ಟ್ ಪೊದ್ಯಗ ಸಿಕ್ಕುವೊ.

ಸಂತೆ ಜಾತ್ರೆಲಿ :

ಎಸ್‌ಂಡ್ ತುಪ್ಪ ಪೂಜ್ಯಳೆ
ಮಲ್ಲಿಗೆ ಹೂವು ಮುಡ್ದಳೆ
ಊರ್ ಗೌಡ್ರ ಮಜ್ಜ ನನ್ನೇ ನೋಡ್ದೆ.

ಊರುಲಿ ಗೂಡೆಗ ಸಂತೆ, ಜಾತ್ರೆ ತಿರ್‌ಗಿಕೆ ಹೋಕನ ಆಗನ ಕಾಲದ ಸಾಮಾಜಿಕ ಸ್ತಿತಿಗತಿಗೆ ಊರ್‌ನ ಜಮೀನ್ದಾರ, ಊರುಗೌಡ್ರ ಮಕ್ಕ ಮೊದ್‌ವೆಗೆ ಗೂಡೆ ನೋಡ್‌ದು ಸಾಮಾನ್ಯ ಆಗಿತ್ ಕಂಡದೆ. ಇಲ್ಲಿ ಪೊರ್ಮಳಕ್ಕೆ ಮಲ್ಲಿಗೆ ಮತ್ತೆ ಎಸ್‌ಂಡ್ ತುಪ್ಪದ ಹೋಲಿಕೆನ ಕೂಡ ನಾವ್ ನೋಡಕಾದೆ.

ದಾಸಯ್ಯನ ಬಗ್ಗೆ

ದಾಸಯ್ಯ ಬಾತ್
ದೋಸೆ ತೀಂತ್
ನೀರ್ ಕುಡ್ತ್
ನೆಗ್ದ್ ಬೀತ್.

ಮಕ್ಕ ದಾಸಯ್ಯ ಬಾಕನ ಅಂವನ ಸುತ್ತ ಓಡಿ ಹೋಗಿ ಸೇರ್‌ದು ಆಗೆಲ್ಲ ಒಂದ್ ಕುಸಿನ ವಿಸಯ. ಹಂಗೆ ಬಂದ ದಾಸಯ್ಯನ ಡೋಂಗಿ ಮಾಡಿಕೆ ಹುಟ್ಟಿಕಂಡ ಮಕ್ಕಳ ಪೊದ್ಯ ಇದಾಗಿರ್‌ದು.

ಸಂಸಾರ–ಕ್ರಿಸಿ–ಬೊದ್‌ಕ್

ನಾನ್ ನೀನ್ ಸೇರಲಾಗಿ
ಗೋಣಿಕೊಪ್ಪಕ್ಕೆ ಹೋಗಲಾಗಿ
ಮುದಿಯೆತ್ತ್ ತರಲಾಗಿ
ಹಡ್ಲ್ ಬೂಮಿ ಹೂಡಲಾಗಿ
ಗೋಳೋ ಗೋಳಣ್ಣಾ..

ನೆರೆಕರೆ ದೋಸ್ತಿಗ ಸೇರಿ ಕ್ರಿಸಿ ಮಾಡ್‌ದು ಹಿಂದೆಂದಲೂ ಇತ್ತ್. ಸುರು ಸುರು ಕ್ರಿಸಿ ಮಾಡೋವು ಬಂದ ಬಜ್ಜ ಮತ್ತೆ ಅನುಬವದ ಕೊರ್‌ತೆ ಈ ಪೊದ್ಯಲುಟ್ಟು.

ಈ ವರ್‌ಸ ಮಳೆಗಾಲ ಬಾಳ
ನಮ್ಮಪ್ಪ ಒಲೆ ಬುಡದಿಂದೇಳ
ಸಾಲ ಕೊಟ್ಟವೆಲ್ಲಾ ಬೊನ್ನಿ
ನಮ್ಮಂಗಳ ಮೊಣ್ಣೆ ತಿನ್ನೀ.

ಇಲ್ಲಿ ಕೂಡ ಮಳೆ ಜಾಸ್ತಿ ಆಗಿ ಕ್ರಿಸಿ ಮಾಡದೆ, ತಕಂಡ ಸಾಲ ಕೊಡಿಕೆ ಆಗದ ಬಜ್ಜದ ಬೊದ್‌ಕ್‌ನ ಕುಹಕ ಉಟ್ಟು.

ಹಿಂಗೆ ಅರೆಬಾಸೆ ಜಾನಪದದ ಒಂದ್ ಬಗೆನ ಸಾಹಿತ್ಯ ಆದಂತಹ ಅರೆಬಾಸೆ ಚುಟುಕುಗ ಹುಡ್‌ಕಿರೆ ಇನ್ನೆಸ್ಟೋ ಸಿಕ್ಕುವೋ. (ಜಿ.ಪಿ.)




**ಕೊಡಗ್ ಅರೆಬಾಸೆನ ಕೂಸುನ ಬಾಸೆ (ಬಾಲ ಬಾಸೆ):** ಮಕ್ಕಳಿಗೂ ಬಾಸೆ ಉಟ್ಟು. ಮಕ್ಕ ಹುಟ್ಟಿದ ದಿನಂದ ಐದ್ ವರ್ಸ ಆಕೆಮುಟ್ಟ ಇರ್‌ವ ಮಕ್ಕಳಿಗೆ 'ಕೂಸು' ತ ಹೇಳ್‌ವೆ. ಈ ಕೂಸುನ ಬಾಸೆ ಬ್ಯಾರೆ ತರಲಿ ಇದ್ದದೆ. ಕೂಸು ಎಂತಾರ್ ಮಾತಾಡಿಕೆ ಒಂದ್ ಹೊಸ ಬಾಸೆನ ತಾನೇ ಮಾಡಿಕಂಬಕೆ ಸಾದ್ಯ ಇಲ್ಲೆ. ಹಾಂಗೆ ಕೂಸುನ ಅಪ್ಪ ಅವ್ವನೂ ಅವರವರ ಕೂಸುಗಳಿಗಾಗಿ ಒಂದ್ ಹೊಸ ಬಾಸೆನ ಅವೇ ಮಾಡಿಕಂಬಕೆನೂ ಸಾದ್ಯ ಇಲ್ಲೆ. ಆದರೆ ಒಂದ್ ಬಾಸಿಕ ಸಮಾಜ ಅದರ ಬಾಸೆಲಿರುವ ಕೆಲವ್ ಪದಗಳ ಹಣ್ಣ ಬದಲ್ಸಿಕಂಡ್, ಹೆಚ್ಚಿ ಅಂದರೆ ಅದ್ಕೆ ಒಂಚೂರು ಹೊಸ ರೂಪನ ಕೊಟ್ಟ್ ಕೂಸುನೊಟ್ಟಿಗೆ ಮಾತಾಡಿವೆ. ಈ ಬಾಸಿಕ ರೂಪನ 'ಕೂಸುನ ಬಾಸೆ' ತ ಬಾಸಾವಿಜ್ಞಾನಿಗ ಗುರ್ತುಸಿಯೊಳೊ. ಕೂಸುನ ಬಾಸೆನೂ ಆ ಪರಿಸರಲಿ ಇರುವ ಬಾಸೆನ ನಿಯಮಕೆ ಸರಿಯಾಗಿದೆ ಇದ್ದದೆ. ಒಂದ್ ಬಾಸೆಲಿ ಕೂಸುನ ಬಾಸೆನ ಪದಗಳ ರೂಪಗ ಆ ಬಾಸೆನ ಸರಳ ರೂಪ ಆಗಿದ್ದದೆ. ಇಲ್ಲರೆ ಆ ಬಾಸಿಕ ಪರಿಸರಲಿ ಇರುವ ಪ್ರಾಣಿ, ವಸ್ತುಗ, ಮೋಟಾರ್‌ಗ ಇವ್ಗಳ ಅನುಕರಣ ಆಗಿದ್ದದೆ. ಈ ಎಲ್ಲದರ ಹಿಂದೆ ಇರುವ ಉದ್ದೇಸ ಹುಟ್ಟಿದ ಕೂಸುಗೆ ನಿದಾನಕೆ ಅದ್ ಬಾಳೋಕಾದ ಪರಿಸರನ ಕೂಸುನ ಬಾಸೆಲಿ ಪರಿಚಯ ಮಾಡಿಕೊಡ್‌ದೇ ಆಗಿದ್ದದೆ.

**ಕೂಸು ಬಾಸೆ ಕಲಿದರ್‌ಲಿ ಅವ್ವನ ಪಾತ್ರ :** ಅವ್ವ/ಅಯ್ಯೆ ಕೂಸುನ ಸುರುನ ಗುರು. ಸಣ್ಣದರ್‌ಲಿ ಕೂಸು ಎಲ್ಲದಕೂ ಅವ್ವನ ಅವಲಂಬಿಸಿದ್ದದೆ. ಹಾಂಗೆ ಕೂಸುಗೆ ಬಾಸೆನ ಕಲ್ಸುವಲ್ಲಿನೂ ಅವಳ ಪಾತ್ರ ಹೆಚ್ಚಿ ಇದ್ದದೆ. ಆಗ ಅವ್ವ ಅವಳ ಕೂಸುಗೆ ಬಾಸೆ ಕಲ್ಸಿಕನ ಕಸ್ಟದ ರೂಪ ಬುಟ್ಟ್ ಅದರ ಸುಲಬ ಮಾಡಿ ಕೂಸುನೊಟ್ಟಿಗೆ ಮಾತಾಡ್ದೆ. ಒಂದೋ ಹೊಸ ಪದನ ಮಾಡ್‌ದೆ ಇಲ್ಲೆ ಹಿಂದೆ ಆ ಸಮಾಜಲಿ ಮಕ್ಕ ಮಾತಾಡ್ವ ಬಾಸೆನೇ ಹೇಳಿಕೊಟ್ಟದೆ.

ಕೂಸು ಹುಟ್ಟಿದಲ್ಲಿಂದ ಅವ್ವ ಅದರ ಅಂಗೈಲಿಸಿ ಸಾಂಕಿದೆ. ಕೂಸುಗೆ ಯಾವ ಬಾಸೆನೂ ಅರ್ತ ಮಾಡಿಕಂಬ ಸಕ್ತಿ ಇಲ್ಲೇಂತ ಹೇಳ್‌ವ ಸತ್ಯ ಅವ್ವಂಗೆ ಗೊತ್ತಿದ್ದರೂ ಕೂಸುನೊಟ್ಟಿಗೆ ಮಾತಾಡ್ದೆ. ಅವ್ವಂದರ್‌ಗೆ ತನ್ನ ಕೂಸುನ ಜೈವಿಕ ಸಬ್ದಗಳನ ಬಳ್ಸಿಕಂಡ್ ಕೂಸುನೊಟ್ಟಿಗೆ ಆದಸ್ಟ್ ಬೇಗ ಮಾತಾಡಿಕೆ ಆ ಕೂಸುಗೆ ಉತ್ತೇಜನ ಕೊಡುವ ಒಂದ್ ಕಲೆ ಇದ್ದದೆ ಕಂಡದೆ. ಹಾಂಗಾಗಿ ಕೂಸುನ ತೊದಲ್ ಬಾಸೆಗೆ ಒಂದ್ ಉದ್ದೇಸನ ಕೊಟ್ಟಂಡ್ ಅವ್ವ ಯಾಗೋಳು ಕೂಸುನೊಟಿಗೆ ಮಾತಾಡ್ತಾ ಇದ್ದದೆ. ಕೂಸ್‌ಗೆ ಹೊಟ್ಟೆ ಇಸಿಕನ, ನಿದ್ದೆಂದ ಎದ್ರ್‌ಕನ, ಮೀಸ್‌ಕನ ಅದರ ಪ್ರಸ್ನೆ ಮಾಡ್‌ವಂಗೆ ಮಾತಾಡ್ದೆ. ಆ ಪ್ರಸ್ನೆಗಳ ನಡುಲಿ ಕೂಸುನ ಪ್ರತಿಕ್ರಿಯೆಗೆ ಕಾದದೆ. ಅವ್ವನ ಕೂಸುನ ಈ ಒಡನಾಟ ಕೂಸುನ ಮುಂದೆನ ಹಂತದ ಸಂಬಾಸಣೆನ ರೂಪುಸಿದೆ.

ಕೂಸುನ ಬಾಸೆ ಮಕ್ಕಳ ಒಂದ್ ಪ್ರಾಯದವರೆಗೆ ಮಾತ್ರ ಬಳಕೆಲಿ ಇದ್ದದೆ. ಅಲ್ಲದೆ, ಕೂಸುನ ಬಾಸೆನ ರೂಪಗ ಕೂಸುನ ಅವ್ವ ಮತ್ತೆ ಕೂಸುನ ನಡುಲಿ ಒಂದ್ ಬುಡ್ಸಿಕೆ ಆಗದ ಸಮ್ಮಂದನ ಬೆಳ್ಸಿದೆ. ಸುರೂನ ಹಂತಲಿ ಕೂಸು ಮರ್ದುದೇ ಅದರ ಬಾಸೆ. ಮರ್ದ್‌ಕನ ಕೂಸು ಬ್ಯಾರೆ ಬ್ಯಾರೆ ರೂಪನ ಹೊರ್‌ಡ್ಸಿದೆ. ಎರಡನೆ ಹಂತಲಿ ಮಕ್ಕ ಅವ್ವನ ಇಲ್ಲರೆ ಮನೆಲಿ ಇರುವವರ ದ್ವನಿಗಳ ಗುರ್ತುಸಿದೆ. ಅಸ್ಟ್ ಹೊತ್ತಿಗೆ ಕೂಸುಗೆ ಒಂದ್ ವರ್ಸ ಆಗಿದ್ದದೆ. ಆ ಹೊತ್ತುಗೆ ಕೂಸ್‌ನ ಪದಕೋಸಲಿ ಸುಮಾರ್ ಪದಗ ಸೇರಿದ್ದವೆ. ಉದಾಹರಣೆಗೆ ಅಪ್ಪ, ಅವ್ವ, ಮಾಮ್, ಅಂಬಾ, ಬುವ್ವ, ಬ್ಬೂ ಇತ್ಯಾದಿ.

ಎರಡ್ ವರ್ಸ ತುಂಬ್‌ಕನ ಕೂಸು ಸುಮಾರ್ ಸಬ್ದಗಳ ಹೇಳಿಕೆ ಆಗಿದ್ದದೆ. ಉದಾಹರಣೆಗೆ ಅಪ್ಪ ಬಾತ್, ಅವ್ವ ಬಾತ್, ಹಿಂಗೆ ಎರಡ್ ಪದಗಳ ಹೇಳ್‌ವಸ್ಟ್ ಆಗಿದ್ದದೆ. ಈ ಹಂತಲಿ ಕೂಸುನ ಬಾಸೆಲಿ ಅನುಕರಣೆ ಬಂದದೆ. ಆಗ ಕೂಸು ಪ್ರಾಣಿ, ವಾಹನ, ಇದರ ಸದ್ದ್‌ನ ಅನುಕರಣೆ ಮಾಡ್ದೆ. 'ಅಂಬಾ, 'ಬೌಬೌ 'ಮಿಯ್ಯ, ರ್ರ್... ಪೋಂ... ಪೋ ಹಿಂಗೆ ಅನುಕರಣೆನ ಸಬ್ದಕೆ ಒಂದ್ ಬಾಸಿಕ ರೂಪ ಕೊಟ್ಟದೆ. ಮೂರ್ ವರ್ಸಕೆ ಕೂಸು ಮಾತಾಡಿಕೆ ಸುರು ಮಾಡಿದ್ದದೆ. ಅದರ ಉಚ್ಚಾರಣೆ ಹಣ್ಣ ತಪ್ಪಾಗಿದ್ದದೆ. ಆದರೆ ಆ ಕೂಸು ಅದರ ಪ್ರಕಾರಲಿ ಸರಿಯಾಗಿನೇ ಉಚ್ಚಾರ ಮಾಡ್ತಾ ಇದ್ದದೆ. ಆ ಕೂಸು ಹೇಳ್ದಂಗೆ ನಾವೂ ತೊಪ್ಪು ಉಚ್ಚಾರ ಮಾಡ್ದರೆ ಆ ಕೂಸು ಅದರ ಒಪ್ಪುದುಲೆ. ಉದಾಹರಣೆಗೆ : ಎರ್‌ಡ್‌ನೆ ಕೂಸು 'ಎದ್ದು' ತ ಉಚ್ಚಾರ ಮಾಡ್ದೆ. ಆಗ ಕೂಸುನ ಅವ್ವ ಕೂಸುನೊಟ್ಟಿಗೆ ಎದ್ದು ಅಪ್ಪಿ ತ ಹೇಳ್ದರೆ ಆಗ ಕೂಸು ಅಲ್ಲ 'ಎದ್ದು' ತ ಹೇಳ್ದೆ. ಆಗ ಅದರಲಿ ನಾವು ಕೂಸು ಸರಿಯಾಗಿಯೇ ಉಚ್ಚಾರ ಮಾಡ್ತಾ ಇರುದರ ಕಾಂಬಕ್.

ನಾಲ್ಕನೇ ವರ್ಸಲಿ ಕೂಸುನ ಬಾಸೆನ ರೂಪಗ ಕಡಿಮೆ ಆಗಿ ಅದ್ ಮಾಮೂಲಿ ಬಾಸೆನ ಕಲೀತಾ ಇದ್ದದೆ, ಆದರೂ ಕಸ್ಟದ ಪದಗಳ ಹೇಳಿಕೆ ಕಸ್ಟಪಟ್ಟದೆ. ಐದ್ ವರ್ಸಕೆ ಕೂಸುನ ಬಾಸೆ ಬೆಳ್ದ್ ಪ್ರೌಡ ಬಾಸೆನ ಕೂಸು ರೂಪುಸಿಕಂಡದೆ.

**ಅರೆಬಾಸೆಲಿ ಕೂಸುನ ಬಾಸೆನ ರೂಪಗ :** ಕೊಡಗ್ ಅರೆಬಾಸೆ ಪರಿಸರಲಿ ಇರುವ ಕೂಸುನ ಬಾಸೆಲಿ ಬ್ಯಾರೆ ಇತರ ಬಾಸೆಲಿರುವ ಕೂಸುನ ಪದಗಳ ರೂಪಗ ಕೂಡ ಇರುದರ ನಾವು ಕಾಣಕ್. ಆ ಪದಗ ಎಲ್ಲಾ ಬಾಸೆಲೂ ಕೂಸುನ ಬಾಸೆಲಿ ಬಳಕೆ ಆವ ಸಾಮಾನ್ಯ ಪದಗಳೇ ಆಗಿದ್ದದೆ. ಅದಲ್ಲದೆ ಇಲ್ಲಿ ವಿಸಿಸ್ಟ ಪದಗ ಕೂಸುನ ಬಾಸೆನ ಪದಕೋಸಲಿ ಇರುದರ ನಾವು ಕಾಂಬಕ್. ಅವಗಳ ಈ ಕಾಗಡೆಂಗೆ ಗುರ್ತುಸಕ್.

ಕೂಸಿಗೆ ಊಟ ಮಾಡ್‌ಸಿಕನ : ಕೂಸುಗೆ ಊಟ ಮಾಡ್ಸಿಕನ ಅವ್ವ 'ಮಾಮ್ ಮಾಡಿಯಾನಾ' ತ ಕೆಳ್ದೆ. ತಿಂಬ ಕ್ರಿಯೆಲಿ ತಿಂಬೊದರ 'ಮಾಮ್ ಮಾಮ್' ಹೇಳಿ ಉಣ್ಣುವಂಗೆ ಮಾಡ್ದೆ. ಕೂಸುನ ಊಟಲಿ ಬಾಳ ಮುಕ್ಯ ಮೊಲೆಹಾಲ್. ಇದರ ಕೂಸುಗೆ ಹೇಳ್‌ಕನ ಅಯ್ಯೆ 'ಬೋಬು' ತ ಹೇಳಿ ಕೊಟ್ಟದೆ., 'ನೀರಿಗೆ' 'ಆಬೂ', 'ಬೂ', ಎಂತಾರ್

ತಿಂಬೋ ಪದರ್ತ 'ಕಾರ' ಇದ್ದರೆ ಕೂಸು ಅದನ ಮುಟ್ಟಿಕೆ ಅತ್ವಾ ತಿಂಬಕೆ ಬಂದರೆ 'ಹಾ...' ತ ಹೇಳಿ ಕೂಸುಗೆ ಅದರ ತಿಂದರೆ ಕಾರ ಆದೇತ ಎಚ್ಚರಿಕೆ ಕೊಟ್ಟದೆ, ಚಾಕೋಲೇಟ್, ಬಿಸ್ಕತ್ತು ಇವುನ ಕೂಸಿಗೆ ಹ್ರಸ್ವಕರಣ ಮಾಡಿ ಚಾಕಿ, ಬಿಕ್ಕಿ ಹಿಂಗೆ ಹೇಳಿ ಕೊಟ್ಟದೆ. ಮಕ್ಕ ಚಾಕಿ, ಬಿಕ್ಕಿ ಅಂತನೆ ಹೇಳ್ದುರ ನಾವು ಗಮನ್ಸಕ್.

**ಕೂಸುನ ಮೀಸ್‌ಕನ :** ಅವ್ವ ಬ್ಯಾರೆಯವರೊಟ್ಟಿಗೆ 'ಕೂಸುನ ಮೀಸೋಕು' ತ ಹೇಳಿರೂ, ಅದೇ ಅವ್ವ ಕೂಸಿಗೆ 'ನಾವು ಜಿಜ್ಜಿ ಮೀಯೆನೋ' ತ ಹೇಳ್ದೆ. ಮೀಸುದರ ಕೂಸಿಗೆ ಗೊತ್ತ್ ಮಾಡಿಕೆ ಮೀಸ್‌ಕನ 'ಉಸ್..., ಇಸ್... 'ತ ಸದ್ದ್ ಮಾಡ್ದು ಮಾಡಿವೆ.ಉಚೆ ಹೊಯಕೆ 'ಚರ್ರ, ಸೂ..., ಸೂಸೂ' ತ ಹೇಳಿ ಕಲ್ಸುವೆ. ಹಾಂಗೆ ಮಕ್ಕ ಸಣ್ಣದರ್‌ಲಿ ಎಂತ ಕಂಡರೂ ಅದರ ಮುಟ್ಟಿಕೆ ಹೋದವೆ. ಅದ್ ಹುಳ, ಪಿಜಿನ್ ಎಂತಾರ್ ಆಗಿದ್ದರೆ ಕೂಸಿಗೆ ಕಚ್ಚಿದೆ. ಕೂಸಿಗೆ ಅದ್ ಗೊತ್ತಾಲೆ. ಅದಕೆ 'ಹಾಬೀ..., ಆವಿ... ' ತ ಹೇಳಿ ಕೂಸಿಗೆ ಹೆದ್ರಿಕೆ ಆಗುವಂಗೆ ಮಾಡಿವೆ. ಆಗ ಇನ್ನೊಮ್ಮೆ ಯಾಗಾರ್ ಕೂಸು ಹುಳನ ಕಂಡರೆ ಮತ್ತೆ ಪಿಜಿನ್‌ನ ಕಂಡರೆ ಅದೇ 'ಹಾಬೀ... 'ತ ಹೇಳಿ ದೂರ ಹೋದೆ.

**ಅನುಕರಣೆ ಪದಗ :** ಕೂಸುನ ಬಾಸೆಲಿ ನಾವುಗೆ ಸುಮಾರ್ ಅನುಕರಣೆ ಪದಗ ಸಿಕ್ಕುವೆ. ಕೂಸು ಮಾತ್ ಕಲಿಯಕೆ ಮುಂದೆನೇ ಕೂಸುಗೆ ಅವ್ವ ಅತ್ವಾ ಮನೆಲಿದ್ದವು ದನಗಳ ತರ್ಸಿ ಅದ್ ಕರಿವಂಗೆ 'ಅಂಬಾ' ಹೇಳಿ ತರ್ಸಿವೆ. ಕೂಸ್ ಮಾತ್ ಕಲ್ತಮ್ಯಾಲೆ ದನಗಳ ಕಂಡರೆ 'ಅಂಬಾ' ಹೇಳಿ ದನಗಳ ತರ್ಸಿದೆ. ಹಾಂಗೆ ಬೌಬೌ (ನಾಯಿ), ಕೊಕ್ಕ (ಕೋಳಿ), ಬೊಬ್ಬ (ದನ), ಕಾಕಾ (ಕಾಕೆ), ಮಿಯ್ಯ(ಕೊತ್ತಿ), ಚಿಂಯಿ ಚಿಂಯಿ(ಹಕ್ಕಿ), ಪೋಂಪೋಂ/ಬ್ರ್ರ್(ಬಸ್ಸ್, ಕಾರ್, ಜೀಪ್), ಕೀಕೀ(ಬೈಕ್), ಡಣಡಣ/ಟಿಣ್‌ಟಿಣ್ (ಗಂಟೆ), ಡಂ (ಪಿಟಾಕಿ), ಚುಂಯಿ(ದೋಸೆ) ಹಿಂಗೆ ಕೂಸು ಅವುಗಳ ಸದ್ದ್ ಹೆಂಗೆ ಇದ್ದದೆ ಹಂಗೆ ಸದ್ದ್ ಮಾಡ್‌ವ ಮೂಲಕ ಅವ್ಗಳ ಅನುಕರಣೆ ಮಾಡಿ ತನ್ನ ಬಾಸೆಲಿ ಆ ಪದಗಳ ಬಳ್ಸಿದೆ. ಈ ಪದಗ ಕೂಸುನ ಬಾಸೆಲಿ ಸಹಜ ರೂಪಗ ಆಗಿದ್ದವೆ.

ಕೊಡಗ್ ಜಿಲ್ಲೆಲಿರುವ ಗೌಡ ಸಮುದಾಯದ ಅರೆಬಾಸೆನ ಪರಿಸರಲಿ ಕೂಸುನ ಬಾಸೆನ ರೂಪಗಳ ಈ ಕಾಗಡೆಂಗೆ ಕಾಣಕ್.

ಅಪ್ಪಿ (ರೊಟ್ಟಿ) ಅಂಬಾ (ದನ)
ಆಬೂ (ನೀರ್) ಆಯಿ (ಗಾಯ/ಬ್ಯಾನೆ)
ಕುಪ್ಪ (ಬಟ್ಟೆ) ಉಪ್ಪ/ಉಮ್ಮ (ಮುತ್ತು)
ಕೂಚು (ಕುದ್ದುರು) ಕಾ (ಕಾಕೆ)
ಕೊಕ್ಕ (ಕೋಳಿ) ಮ್...ಮ್... (ಗುಮ್ಮ)
ಜೀಜೀ (ತೊಟ್ಟಿಗಿಲ್) ಚುಂಯಿ (ಇಂಜೆಕ್ಸನ್)
ಜೂಜಿ (ನಿದ್ದೆ) ಟೈ/ಪಟಾ (ಪೆಟ್ಟ್, ಹೊಡ್ತ)
ಪೊವ್ವ (ಪೊರ್‌ಲು) ಬುವ್ವ (ಬಸ್ಸ್ ಇತ್ಯಾದಿಲಿ ಹೋದು)
ಬೊಬ್ಬ (ದನ) ತಾನಿತಾನಿ (ನಡೆಯುದು)
ಮಾಮ್ (ಉಂಬೊದು) ಹಾಬಿ/ಹಾವಿ (ಹುಳ)
ಮಿಯ್ಯ (ಕೊತ್ತಿ) ಮಾಮಿ (ದೇವ)
ಬುಸ್ಸ್ (ಹಾವು) ಬೋಬು (ಮೊಲೆಹಾಲ್)
ಚಂದ (ಪೊರ್‌ಲು) ಬೌಬೌ (ನಾಯಿ) ಇತ್ಯಾದಿ.

**ಅರೆಬಾಸೆಲಿ ಮಕ್ಕಳ ಪದಗ :** ಕೊಡಗ್ ಜಿಲ್ಲೆನ ಅರೆಬಾಸೆ ಗೌಡ ಸಮುದಾಯದ ಕುಟುಂಬದ ವಲಯಲಿ ಮಕ್ಕಳ ಆಡ್ಸಿಕನ ಮಕ್ಕ ಮರ್‌ಡ್ಕನ ಇಲ್ಲರೆ ಬ್ಯಾರೆ ಹೊತ್ತುಲಿ ಅದಕೆ ತಕ್ಕಂಗೆ ದೊಡ್ಡವು ಎಂತಾರ್ ಒಂದ್ ಹಾಡ್ ಹೇಳಿ ಕೊಟ್ಟವೆ. ಇದರ ಕೇಳಿ ಮಕ್ಕಳಿಗೆ ಕುಸೀ ಆದೆ. ಮಕ್ಕ ಮರ್ದುದರ ನಿಲ್ಸಿ ಪದ ಕೇಳಿವೆ. ಇವರ್‌ಲಿ ಇರ್‌ವ ಕೆಲವ್ ಮಕ್ಕಳ ಪದಗ ಹಿಂಗೆ ಒಳೊ.

ಅಪ್ಪಂಗೆ ಜೊರ
ಅವ್ವಂಗೆ ಕುರ
ನಂಗೆಮ್ಮೆ ಪಾರ
ಚಾಂಪಂಗೆ ದನ ಪಾರ
ಚಾಮೆವ್ವಂಗೆ ಮಕ್ಕಳ ಪಾರ
ನಿಮಿಗೆ ಮಾತ್ರ ನನ್ನ ಸಸಾರ

ಎಮ್ಮೆನ ಗದ್ದೆಲಿ ಬುಟ್ಟ್ ಮೇಸಿಕೆ ಹೋದ ಗೂಡೆ ಹೇಳ್ದ ಪದ ಹೇಳಿ ಮಕ್ಕಳಿಗೆ ಹೇಳಿ ಕೊಟ್ಟಿದ್ದವೆ.

ಮನೆಲಿ ದೊಡ್ಡವು ಮಕ್ಕಳ ಎರ್‌ಡ್ ಕೈಲಿ ಮ್ಯಾಲೆ ಎತ್ತಿ ಅತ್ತ-ಇತ್ತ ಬೊಗ್ಗಿಸಿ ಆಡ್ಸಿಕಂಡ್ ಹೇಳ್‌ವ ಪದ,

'ಕೇಡ್ ಗಿಡ್‌ಜ್ಜ...ಕೆಂದ ಗಿಡ್‌ಜ್ಜ
ಅಂಗಳದಲ್ಲಿದ್ದ ಬಿಳಿ ಕೋಳಿ
ಪಿಳ್ಳೆನ ತಕೊಂಡೋಗಿ
ಬಾಗೆ ಮರಲಿ ಕುದ್ದತ್...
ಬಾಗೆ ಮರ ಬಾ...ಗಿ ಹೋತ್'

ಹಾಂಗೆ ಕಾಲ್‌ನ ಮ್ಯಾಲೆ ಕುದ್ದುರ್ಸಿ ತೂಗಿಕಂಡ್ ಹೇಳಿಕೊಡುವ ಪದ

ಕಲಾಡ್ ಕಪ್ಪೆ ಕಲಾಡ್...
ನೀರ್‌ಗೆ ಬಿದ್ದರೆ ತೇಲಾಡ್...

ಹಿಂಗೆ ಒಬ್ಬ ಮುದಿ ಎತ್ತ್‌ನ ತಂದ್ ಗೋಳು ಬಂದದರ ಕತೆ ಹೇಳಿ ಮಕ್ಕಳಿಗೆ ಪದ ಹೇಳಿ ಕೊಟ್ಟವೆ.

ನಾನ್ ನೀನ್ ಸೇರಿಕಂಡ್
ಗೋಣ ಕೊಪ್ಪಕೆ ಹೋಕಂಡ್
ಮುದಿ ಎತ್ತ್ ತಂದ್‌ಕಂಡ್
ಹಡ್ಲ್ ಗದ್ದೆನ ಹೂಡಿಕಂಡ್
ಗೋಳು ಗೋಳು ಗೋಳಣ್ಣ...




ಮಕ್ಕಳ ಎತ್ತಿಕಂಡ್ ಸುಮ್ಮನೆ ಕುದ್ದರೆ ಅವು ಮರ್‍ಬವೆ. ಅವರ ಎತ್ತಿಕಂಡ್ ಅಲ್ಲಿ ಇಲ್ಲಿ ತಿರ್‌ಗಕು. ಆಗ ದೊಡ್ಡವು ಆ ಕೂಸುನ ಕೈ ಹಿಡ್‌ದ್ ತಪ್ಪಾಳೆ ಕೊಟ್ಟಿಸಿ ಹಾಡ್ಸಿ ನೆಗಾಡ್ಸುವ ಪ್ರಯತ್ನ ಮಾಡ್‌ವೆ. ಆಗ ಹಾಡುವ ಪದ,

ಅಪ್ಪಿ ಅಪ್ಪಿ ಅಪ್ಪಿ...
ಅಪ್ಪಂಗೊಂದ್ ಅಪ್ಪಿ...
ಅವ್ವಂಗೊಂದ್ ಅಪ್ಪಿ...
ಅಣ್ಣಯ್ಯಂಗೊಂದ್ ಅಪ್ಪಿ...
ಅಕ್ಕಯ್ಯಂಗೊಂದ್ ಅಪ್ಪಿ...
ಬೋಜಂಗೊಂದ್ ಅಪ್ಪಿ...
ಕೂಸಿಗೊಂದ್ ಅಪ್ಪಿ...
ಮಾಮ್... ಮಾಮ್... ಮಾಮ್.

ಹಿಂಗೆ ಮಾಡ್‌ಕನ ಕೂಸು ತಾನೂ ಕೈಲಿ ತಪ್ಪಾಳೆ ತಟ್ಟಿ ನೆಗಾಡ್ದೆ.

ಹಾಂಗೆ ಮಕ್ಕಳಿಗೆ ಎಣ್ಣೆ ಹಾಕಿ ಮೀಸುವ ನಮ್ಮ ಪದ್ದಿಸ್ಲಲಿ, ಕೂಸುನ ಮೂಕುನ ಉದ್ದ ಬಾಂತ ಹೇಳಿ ಎಳ್ದವೆ. ಆಗ ಕೂಸುಗೆ ಬೇನೆ ಆಗಿ ಮರ್‍ಬದೆ. ಆಗ ಕೂಸುನ ಗಮನ ಬ್ಯಾರೆ ಕಡೆ ಹೋವಂಗೆ ಮಾಡಿಕೆ ಹಿಂಗೆ ಪದ ಹೇಳಿವೆ.

ಉದ್ದ ಬಾ ಮೂಕು ಉದ್ದ ಬಾ...
ಪ್ಯಾಟೆಗೆ ಹೋಬಡ ಮೂಕು... ಇತ್ತ ಬಾ...
ಉದ್ದ ಬಾ ಮೂಕು ಉದ್ದ ಬಾ...
ಕುಂದ್ ಹತ್ತ್ ಬಡ ಮೂಕು ಇತ್ತಬಾ...
ಉದ್ದ ಬಾ ಮೂಕು ಉದ್ದ ಬಾ...
ಆಕಾಸ ನೋಡ್ಬಡ ಮೂಕು ಇತ್ತಬಾ...
ಉದ್ದ ಬಾ ಮೂಕು ಉದ್ದ ಬಾ...

ಹಾಂಗೆ ಕೂಸುನ ಮೀಸ್‌ಕನ ಹೇಳ್‌ವ ಪದಸನ ಇಲ್ಲಿ ಉಟ್ಟು. ಮಕ್ಕ ಮೀಸ್‌ಕನ ನೀರ್ ಬಿದ್ದಂಗೆ ಜೋರು ಮರ್‍ಬವೆ. ಆಗ ಪದ ಹೇಳಿರೆ ಅತ್ತ ಕೆಬಿಕೊಟ್ಟು ಸುಮ್ಮನಾದವೇಂತ ಹಿಂಗೆ ಪದ ಹೇಳಿವೆ.

ಅಪ್ಪ ನೆಟ್ಟ ತೆಂಗಿನ ಮರಕೆ ನೀರ್ ಹೋಗಲಿ
ಜಿಜಿ ಜಿಲಾ...
ಅಪ್ಪ ನೆಟ್ಟ ಬಾಳೆ ಮರಕೆ ನೀರ್ ಹೋಗಲಿ
ಜಿಜಿ ಜಿಲಾ...
ಅಪ್ಪ ನೆಟ್ಟ ಮಾಯನ ಮರಕೆ ನೀರ್ ಹೋಗಲಿ
ಜಿಜಿ ಜಿಲಾ...

ಮಳೆಗಾಲಲಿ ಮನೆಲಿ ಅಪ್ಪ ಅವ್ವ ಮಕ್ಕ ಒಲೆಬುಡಲಿ ಕುದ್ದ್ ಚಳಿ ಕಾಸ್‌ಕನ ಕುಸೀಲಿ ಎಂತಾರ್ ಮಾತಾಡಿಕಂಡ್ ಕುದ್ದಿರ್‌ಕನ ಸಣ್ಣ ಮಕ್ಕಳಿಗೆ ಒಮ್ಮೊಮ್ಮೆ ಈ ಪದ ಹೇಳಿಕೊಟ್ಟವೆ.

ಈ ಕಾಲ ಮಳೆಗಾಲ ಬಾಳ
ನಮ್ಮಪ್ಪ ಒಲೆ ಬುಡಂದ ಏಳ
ಸಾಲ ಕೊಟ್ಟೋವೆಲ್ಲಾ ಬೊನ್ನೀ...
ನಮ್ಮಂಗಳ ಮೊಣ್ಣು ತಿನ್ನಿ...

ಮರ್‍ಬುವ ಮಕ್ಕಳ ಸಮಾದಾನಪಡ್ಸಿಕೆ ಅವ್ವ ಇಲ್ಲರೆ ಮನೆನ ಬ್ಯಾರೆ ಸದಸ್ಯರ್ ಮಕ್ಕಳ ಕರ್‍ದ್, 'ಇಲ್ಲಿ... ಇಲ್ಲಿ... ಇಲ್ಲಿ... ' ಅಂತ ಹೇಳಿ ಕೂಸಿಗೆ ಕಿಳಿಕಿಳಿ ಮಾಡಿ ನೆಗಾಡ್ಸಿವೆ.

ಸೆಗಣ ಕಟ್ಟೆ ಕಟ್ಟಿ, ಜಿಜ್ಜಿ ಮೀದ್
ಪೊವ್ವ ಕುಪ್ಪ ಹಾಕಿ, ಹಾಲನ್ನ ಉಂಡ್
ಮಾಮ ಮನೆಗೆ ನಡಿ ಕೂಸು...
ಮುಂದೆ ಮುಂದೆ ನೀ... ಹಿಂದೆ ಹಿಂದೆ ನಾ...
ಮಾಮನೆಗೆ ದಾರಿಯಾದ್... ಮಾಮನೆಗೆ ದಾರಿಯಾದ್...
ಇಲ್ಲಿ... ಇಲ್ಲಿ... ಇಲ್ಲಿ... ಇಲ್ಲಿ...

ಕೊಡಗ್ ಜಿಲ್ಲೆನ ಅರೆಬಾಸೆ ಗೌಡರ ಬಾಸಿಕ ಪರಿಸರಲಿ ಇರ್‌ವ ಈ ಮಕ್ಕಳ ಪದಗಳ ಗಮನ್ಸಿರೆ ಇವು 'ಶಿಷ್ಟ ಕನ್ನಡ'ಕಿಂತ ಬ್ಯಾರೆ ರೂಪಲಿ ಇರ್‌ದರ ಕಾಣಕ್. ಇದ್ಕೆ ಇಲ್ಲಿನ ಪ್ರಾದೇಸಿಕ ಹಿನ್ನೆಲೆ ಕಾರಣ ಆಗಿರ್‍ದು. ಕೊಡಗ್‌ಲಿ ಬೆಳೆ ಕೆಲ್ಸ ಆದ ಮ್ಯಾಲೆ ದನಗಳ ಗದ್ದೆಗೆ ಬುಟ್ಟು ಪಾರ ಕುದ್ದವೆ. ಆ ಹೊತ್ತುಗೆ ಒಂದ್ ಪದ. ಇಜ್ಜಲ್‌ಲಿ ಇದ್ದ ಕೋಳಿ ಪಿಳ್ಳೆಗಳ ಗಿಡ್‌ಜ್ಜ ಹಾರಿ ಬಂದ್ ಹೊತ್ತ್‌ಕಂಡ್ ಹೋದಕೆ ಸಮ್ಮಂದಪಟ್ಟಂಗೆ ಒಂದ್ ಪದ. ಕೊಡಗ್‌ಲಿ ಯಾಗೋಳು ಬೆಳಿಗ್ಗೆ ಉಂಬಕೆ ರೊಟ್ಟಿ ಮಾಡ್‌ವ ಚಟುವಟಿಕೆ ಉಟ್ಟು. ಅದರ ಮಕ್ಕಳೂ ನೋಡಿದ್ದವೆ. ಹಾಂಗೆ 'ಅಪ್ಪಿ ಅಪ್ಪಿ' ಪದ ಹೇಳಿ ಕೂಸುಗೆ ಕಲ್ಸಿದೊ. ಹಾಂಗೆ ಬೂಮಿ ನೆಡುವ ಕ್ರಿಸಿಕರಾದ ಇವರ ಬೊದ್ಕ್‌ಲಿ ಗದ್ದೆ ನೆಡ್ಡು, ಅದ್ ನೆಡದೆ ಹಾಂಗೆ ಬುಟ್ಟರೆ ಹಡ್ಲ್ ಬಿದ್ದದೆ, ಹಡ್ಲ್ ಬಿದ್ದ ಗದ್ದೆನ ಹೂಡಿಕೆ ಒಳ್ಳ ಎತ್ತ್ ಬೇಕ್. ಅದ್ಕಾಗಿ ಒಬ್ಬ ಗೋಣ ಕೊಪ್ಪಂದ ದುಡ್ಡು ಕಮ್ಮಿ ಕೊಟ್ಟು ಮುದಿ ಎತ್ತ್‌ನ ತಂದ್ ಗದ್ದೆನ ಹೂಡಕಾಗದೆ ಗೋಳು ಬಾತ್‌ಂತ ಪದ ಮಾಡಿ ಕೊಟ್ಟೊ.

ಹಾಂಗೆ ಕೊಡಗ್‌ನ ಮಳೆನ ಹೊಡೆತಂದ ಯಾರೂ ಮನೆಂದ ಹೊರಗೆ ಹೋಕೆ ಆಗದಂತ ಮತ್ತೆ ಕೆಲ್ಸ ಮಾಡಿಕೆ ಆಗದಂತ ಪರಿಸ್ತಿತಿನ ತಿಳ್ಸುವ ಒಂದ್ ಪದ. ಹೆಣ್ಣ್‌ಗೆ ಅವ್ವನ ಮನೆ ವಿಸೇಸ. ಕೂಸು ಹೆಣ್ಣಾಗಲಿ ಗಂಡಾಗಲಿ, ಅದ್ ಹುಟ್ಟಿದರ್‌ಂದ ಹಿಡ್‌ದ್ ಮೊದ್ವೆಗೆ ಮುಟ್ಟ ನಡೆವ ಆ ಕೂಸುನ ಯಾದೇ ಜಂಬರಲಿ ಸೋದರಮಾಂವ ಇದ್ದೇ ಇರೋಕು. ಕೂಸುಗೆ ಮಾಮನೆಗೆ ಹೋದು ಎಲ್ಲಿಲ್ಲದ ಕುಸೀನ ವಿಸಯ. ಮಾವನ ಮನೆ ಕೂಸುನ ಬಾಸೆಲಿ ಸಂಕ್ಷಿಪ್ತ ಆಗಿ ಮಾಮನೆ ಆಗಿ ಬಳಕೆ ಆದೆ. ಹಂಗೆ ಕೂಸುನ ಅವ್ವಂಗೂ ಯಾಗೋಳು ಅದರ ಅವ್ವನ ಮನೆಕಡೆ ಗ್ಯಾನ ಇದ್ದದೆ. ಹಾಂಗೆ ಅವ್ವ ಅವ್ವನ ಮನೆನ ಗ್ಯಾನ ಮಾಡಿಕಂಡ್ ತನ್ನ ಕೂಸುಗೆ ಮಾವನ ಮನೆಗೆ ಹೊಸ ಕುಪ್ಪ ಹಾಕಿ ಪೋಯಿಂತ, ದಾರಿನ ಹುಡುಕುವಂಗೆ ಕೂಸಿಗೆ ಕಿಕ್ಕಿಳಿ ಮಾಡಿ

ನೆಗಾಡ್ಸಿ ತಾನೂ ಕುಸಿಪಟ್ಟದೆ. ಮತ್ತೆ ಕೊಡಗ್‌ನ ಪರಿಸರಲಿ ನಮಿಗೆ ಗೊತ್ತಿರುವಂಗೆ ಗಿಡಮರ ತೋಟದ ಮದ್ಯನೇ ಮನೆ ಇದ್ದದೆ. ಮನೆ ಹಿಂದೆ ಮುಂದೆ ಬ್ಯಾರೆ ಬ್ಯಾರೆ ಹಣ್ಣ್‌ನ ಮರಗ ಇದ್ದವೆ. ಮನೆ ಹಿಂದೆ ಬದಿಲಿ ಮುಕ್ಕಾಲ್ ಮಡ್ಗಿ ಕಾಲ್ ನೀಂಡಿ ಕುದ್ದ್, ನೀಂಡಿದ ಕಾಲ್ ಮ್ಯಾಲೆ ಕೂಸುನ ಮಲ್ಗಿಸಿಕಂಡ್ ಮೀಸುವೆ. ಇದ್ ನಮ್ಮಲ್ಲಿ ಕೂಸುನ ಮೀಸುವ ಕ್ರಿಯೆ. ಹಾಂಗೆ ಮೀಸ್‌ಕನ ಕೂಸು ಮರ್ಡ್ಡಿಕಾಗದ್‌ಂತ ಹೇಳಿ ಒಂದೊಂದು ಚೊಂಬು ನೀರ್ ಹೊಯ್ಯಕನ ಅಲ್ಲಿರುವ ಮರಗಳ ಹೆಸ್‌ರ್ ಹೇಳಿ ನೀರ್ ಹೊಯ್ದ್ದು ಹಾಡಿ ಮೀಸುವ ಇಲ್ಲಿನ ಒಂದ್ ಕ್ರಿಯೆ ಮಕ್ಕಳ ಪದಗಳಲಿ ಬಳಕೆಗೆ ಬಾತ್.

ಹಿಂಗೆ ಒಟ್ಟು ಗಮನ್ಸ್‌ರೆ ಕೊಡಗ್ ಅರೆಬಾಸೆ ಗೌಡರ ಬಾಸಿಕ ನೆಲೆಲಿ ಕೂಸುನ ಬಾಸೆನೂ ಇತರ ಬಾಸೆಗಳ ಕೂಸುನ ಬಾಸೆಲಿರುವ ಸಬ್ದಗಳ ಹೊಂದಿದ್ದರೂ ತನ್ನದೇ ಆದ ವಿಸಿಸ್ಟ ರೂಪಗಳ ಪಡ್‌ಕಂಡ್ ಉಟ್ಟು. ಅಲ್ಲಿನ ಕೂಸುನ ಬಾಸೆಲಿ ಇರುವ ಸಬ್ದಗ, ಪದಗ ಅಲ್ಲಿನ ಬೌಗೋಳಿಕ ಪರಿಸರ, ಸಾಮಾಜಿಕ ಜೀವನ ಇದರ ಬಾಗನೇ ಆಗಿ ಉಟ್ಟು. ಕೂಸುನ ಬಾಸೆ ಬರೀ ಮಕ್ಕಳೊಟ್ಟಿಗೆ ಮಾತಾಡ್‌ವ ಒಂದ್ ಬಾಸೆ ಆಗಿರದೆ ಆ ಕೂಸುಗೆ ತಾನ್ ಬೊದ್ಕುವ ಪರಿಸರನ ಪರಿಚಯ ಮಾಡಿಕೊಟ್ಟದೆ. ತಾನ್ ಬೆಳೆವ ವಲಯನ ಪರಿಚಯ ಮಾಡಿಕೊಟ್ಟದೆ. ಆ ವಲಯಲಿ ತನ್ನ ಪಾತ್ರ ಏನ್‌ಂತ ಮತ್ತೆ ಅದನ ತಾನ್ ಹೇಂಗೆ ನಿಬಾಯ್ಸಕು ತ ಕಲ್ಸಿದೆ. ಒಟ್ಟಾರೆ ಕೊಡಗ್ ಅರೆಬಾಸೆ ಗೌಡರ ಕೂಸುನ ಬಾಸೆ ಬೇರೆ ಬಾಸೆಂದ ಬಿನ್ನ ಆಗಿ ಅದರ್ದೇ ಆದ ವಿಸೇಸತೆನ ಪಡ್ಕಂಡಿರ್‌ದರ ಕಾಣಕ್. (ಎಲ್.ಕೆ.)

**ಶೋಭಾ ಕರಂದ್ಲಾಜೆ :** ಕರ್ನಾಟಕದ ಬಿಜೆಪಿ ರಾಜಕಾರಣಿ, ಮತ್ತೆ 16ನೇ ಲೋಕಸಬೆಲಿ ಉಡುಪಿ–ಚಿಕ್ಕಮಗಳೂರು ಕ್ಷೇತ್ರಂದ ಸಂಸತ್ ಸದಸ್ಯೆ ಆದೊ. ಅಪ್ಪ ಮೋನಪ್ಪಗೌಡ, ಅಯ್ಯೆ ಪೂವಕ್ಕ ಇವ್‌ಕೆ ಮಗ ಆಗಿ 23 ಅಕ್ಟೋಬರ್ 1966ರ್‌ಲಿ ಪುತ್ತೂರ್ ತಾಲೂಕ್‌ನ ಚಾರ್ವಾಕ ಗ್ರಾಮ ಕರಂದ್ಲಾಜೆಲಿ ಹುಟ್ಟಿದೊ. ಸುರುನ ವಿದ್ಯೆನ ಕಾಣಿಯೂರ್‌ಲಿ ಮತ್ತೆ ಮೈಸೂರ್‌ನ ಮುಕ್ತ ವಿಶ್ವವಿದ್ಯಾನಿಲಯಂದ ಎ.ಓ. ಸಮಾಜಶಾಸ್ತ್ರ ಮತ್ತೆ ಮಂಗಳೂರು ವಿಶ್ವವಿದ್ಯಾನಿಲಯ ರೋಶನಿ ನಿಲಯಂದ MSW ಪದವಿ ಓದಿಯೊಳೊ.



ಕರಾವಳಿ ಕರ್ನಾಟಕದ ಪುತ್ತೂರ್‌ನ ಶೋಭಾ ಅವು ಬಾರಿ ಸಣ್ಣ ಪ್ರಾಯಲಿ ರಾಷ್ಟ್ರೀಯ ಸ್ವಯಂಸೇವಕ ಸಂಗಲಿ ಆಸಕ್ತರಾಗಿದ್ದೊ. ಸಂಗ ಪರಿವಾರಂದ ಸುಮಾರ್ ಮಹಿಳಾ ಕಾರ್ಯಕರ್ತೆಯರ್‌ಲಿ ಒಬ್ಬರಾಗಿದ್ದೊ. ಆರ್‌ಎಸ್‌ಎಸ್‌ನ ಸ್ಫೂರ್ತಿಂದಾಗಿ ರಾಜಕೀಯ ಸೇರ್‌ದೊ. ಅವು 2004ರ್‌ಲಿ ಭಾರತೀಯ ಜನತಾ ಪಕ್ಷಂದ ಶಾಸನ ಸಬೆಗೆ ಆಯ್ಕೆ ಆದೊ. ಮೇ 2008ರ್‌ಲಿ ಅವು ಬೆಂಗಳೂರ್‌ನ ಯಶವಂತ ಪುರಂದ ಎಂಎಲ್‌ಎ ಆಗಿ ಆಯ್ಕೆಯಾದೊ. ಮುಂದೆ ಬಿಎಸ್ ಯಡಿಯೂರಪ್ಪ ಮುಖ್ಯಮಂತ್ರಿ ಆಗಿರಿಕನ ಕರ್ನಾಟಕ ಸರ್ಕಾರಲಿ ಗ್ರಾಮೀಣಾಭಿವೃದ್ಧಿ, ಇಂಧನ ಮತ್ತೆ ಪಂಚಾಯತ್ ರಾಜ್ ಸಚಿವೆ ಆಗಿದ್ದೊ. 2014 ಮತ್ತೆ 2019ರ ಭಾರತೀಯ ಸಾರ್ವತ್ರಿಕ ಚುನಾವಣೆಲಿ ಉಡುಪಿ ಚಿಕ್ಕಮಗಳೂರು ಲೋಕಸಭಾ ಕ್ಷೇತ್ರಂದ ಗೆದ್ದೊ. 07–06–2021ರ್‌ಲಿ ಕ್ರಿಸಿ ಮತ್ತೆ ರೈತರ ಕಲ್ಯಾಣ ಕಾತೆ ರಾಜ್ಯ ಸಚಿವೆ ಆಗಿ ನೇಮಕ ಆದೊ. ಮೋದಿ ಸರ್ಕಾರದ ಎರಡನೇ ಅವದಿಲಿ ರಾಜ್ಯ ಸಚಿವೆ ಆದೊ.

**ಸಾವಿನ ಆಚರಣೆಗ : ಶವ ಸಂಸ್ಕಾರ ಕೊಡಗ್ ಕ್ರಮ :** ಒಂದ್ ಮನೆಲಿ ಯಾರಾರ್ ಸತ್ತರೆ ಹನ್ನೊಂದು ದಿನ ಸೂತಕ ಇದ್ದದೆ. ತೀರಿ ಹೋದ ದಿನ ನೆಂಟ್ರ್ ಬಂದುಗ 'ಸ್ವರ್ಗಕ್ಕೆ ಹೋಗಿ, ಸ್ವರ್ಗಕ್ಕೆ ಹೋಗಿ' ತೇಳಿ ಹೆಣದ ಬಾಯಿಗೆ ನೀರ್ ಕೊಟ್ಟವೆ. ಹಾಂಗೆ ಅಲ್ಲಿದ್ದವು ಜೋಡು ಗುಂಡುನ ಹಾರ್‌ಸುವೆ. ಆಗ ಕೂಡ್ಲೆ ನೆಂಟ್‌ರ್‌ಗಳಿಗೂ ಊರುನವವ್ಕೂ ವರ್ತಮಾನ ಕೊಟ್ಟವೆ. ಅವೆಲ್ಲವೂ ಬಂದ್ ಬಾಯಿಗೆ ನೀರ್ ಕೊಟ್ಟ ಮೇಲೆ ಹೇಳ್ದಂಗೆ ಸೊರ್‌ಗಕೆ ಹೋಗಿತೇಳಿ ಹೇಳ್‌ವೆ. ಅದಾಗಿ ಊರ್‌ನವು ಕತ್ತಿ ಮೊಚ್ಚಿ ತಕಂಡ್ ಸುಡುಕುಳಿ ಕಾಡ್‌ಗೆ ಹೋಗಿ ಸೌದೆಗೆ ಹೊರ್ಟವೆ. ಹೆಣನ ಮೀಸಿ ಮಲ್ಗುಸುವೆ. ಮತ್ತೆ ಸತ್ತವನ ಸಂಸಾರಸ್ತರ್, ಕೈಕಾಲ್, ಮೋರೆ ತೊಳ್‌ಕಂಡ್ ಬಂದ್ 'ರಾಮ, ರಾಮ' ತೇಳಿಕಂಡ್ ಆ ಹೆಣಕ್ಕೆ ಮೂರ್ ಸುತ್ತು ಪ್ರದಕ್ಸಿನೆ ಬಂದವೆ. ಅದಾಗಿ ಚಟ್ಟಲಿ ಹೆಣನ ಹೊತ್ತುಕಂಡ್ ಊರ್‌ನವು ಸುಡುಕುಳಿ ಹಕ್ಕಲೆ ಹೋಗಿ ಹೆಣನ ಅಲ್ಲಿ ಆಗಲೆ ಮಾಡಿಸಿದ ಕಾಟಕೆ ಮೂರ್ ಸುತ್ತು ಬಂದ್ ಅದರ ಮೇಲೆ ಇಸ್‌ವೆ. ಗಂದದ ಕೆತ್ತೆ ಇಲ್ಲರೆ ಕೊಳ್ಳಿನ ಹಾಕ್‌ವೆ. ಅದಾಗಿ ಕ್ರಮಕೆ ನಿತ್ತವುನು ನೆಂಟ್ರ್‌ಗ ಕಾಟಕೆ ಕಿಚ್ಚಿ ಕೊಟ್ಟವೆ.

**ಬೂದಿ ಸುದ್ದ :** ಇದರ ಸತ್ತ 3, 5 ಅಲ್ಲರೆ 7 ನೇ ದಿನದಂದ್ ಮಾಡ್‌ವೆ. ಆ ದಿನ ನೆಂಟ್ರಗ, ಊರ್‌ನವು ಎಲ್ಲವೂ ಬಂದ್ ಸೇರಿ ಮನೆನ ಸುದ್ದ ಮಾಡಿ ಅಲ್ಲಿಯೇ ಒಂದ್ ಗುಂಡಿ ತೋಂಡಿ ಈ ಕಾಟದ ಬಸ್ಮನ ಅದರೊಳಗೆ ತುಂಬ್‌ಸಿ ಮೇಲೆಗೆ ಚೂರ್ ಎತ್ತರ ಗುಪ್ಪೆ ಮಾಡುವೆ. ಅದರ್‌ಲೂ ಹೆಚ್ಚಿಗೆ ಬೂದಿ ಒಳ್ದರೆ ಹಳ್ಳಕೆ ಹಾಕಿಬುಟ್ಟವೆ. ಇಲ್ಲಿ ಮನೆಲಿ ನೆರೆಮನೆ ಹೆಣ್ಮಕ ಮನೆನ ಹೊರೆಗೆನ ಕೊಟೆಗೆಲಿ ಪದೆಂಜಿ, ಕಡ್ಲೆಪಾಯಸ, ಅನ್ನ, ಬಾಳೆಕಾಯಿ ಸಾರ್, ಬೂದುಗುಂಬಳದ




ಇನ್ನೊಂದು ಸಾರ್ ಮತ್ತೆ ಬೇರೆ ತಿಂಡಿಗಳ ಮಾಡ್‌ವೆ. ಕೆಲ್ಸ ಮುಗ್ಸಿ ಬಂದಾಂಗೆ ಈ ಮೇಲ್ಕಂಡ ಉಂಬಕೆ ಮಾಡ್ದ ಗೈಪುಗಳ ಚೂರ್ ಚೂರ್ ತಕಂಡ್ ಹೋದವೆ. ದೂಪೆಗೆ ಹಾಕ್‌ವ ಹುಗ್ಗೆಗೆ ಅರ್‌ಸಿನ, ಸುಣ್ಣ, ಮಿಶ್ರ ಮಾಡ್ದ ಹುಗ್ಗೆನ ದೀಕ್ಸೆಗೆ ನಿತ್ತ ಮೊಯಿಂಸ ಹೊತ್ತ್‌ಕಂಡಿದ್ದದೆ. ಸುರು ಅಂವನ ಪಾತ್ರೆಂದ ಒಂದೊಂದು ಹಿಡಿ ತೆಗ್ದ್ ಕಂಡ್ ದೂಪೆಗೆ ಮೂರು ಸುತ್ತು ಬಾವವರೆಗೂ ದೂಪೆಯ ಸುತ್ತಕೆ ಹಾಕಂಡ್ ಬಂದವೆ. ಅದಾಗಿ ಸತ್ತಂವಂಗೆ ಸೊರ್‌ಗ ಹೊಂದುಸುವೆ. ಇದರ ಬಂದ ಹಿರಿಯಾರ್‌ಲಿ ಒಬ್ಬ ಹೇಳ್‌ವೆ. ಅದಾಗಿ ದೀಕ್ಸೆಗೆ ನಿತ್ತವ ಸೊರ್‌ಗಕೆ ಹೋಗ್‌ತೇಳಿ ಬಟ್ಟ್‌ಲ್‌ನ ಕಮ್ಚಿ ಹಾಕಿ ಅಡ್ಡ ಬಿದ್ದದೆ. ಅದಾಗಿ ಎಲ್ಲವೂ ವಾಪಸ್ ಬಂದವೆ, ಮನೆನ ಮುಂದೆ ಇಜ್ಜಲ್‌ಲಿ ಊರವು, ನೆಂಟ್ರ್ ಬಂದ್ ಸಾಲಾಗಿ ನಿತ್ತವೆ. ಹಾಂಗೆನೆ ಮನೆವೆಲ್ಲವೂ ಬಂದ್ ಸಾಲಾಗಿ ನಿತ್ತವೆ. ಮೊಡ್ಯಾಳ ಅಕ್ಕಿಲಿ, ಪುಣ್ಯಾರ್‌ಚನೆಲಿ ಸುದ್ದ ಮಾಡ್ದೆ.

**ತಿತಿ ಬೊಜ್ಜ :** ತೀರ್‌ದವರ 11ನೇ ದಿನಲಿ ಅವರ ಹೆಸ್ರ್‌ಲಿ ಅಲ್ಲಿಗೆ ಬಂದ ಎಲ್ಲಾ ಜೆನಕೂ ಒಂದ್ ಊಟ ಹಾಕುವೆ. ಅಂದರೆ ಸತ್ತಂವನ ಹೆಸ್‌ರ್‌ಲಿ ಅನ್ನದಾನ ಮಾಡ್‌ವೆ.

**ಪಿಂಡ ಹಾಕುದು :** ಸುದ್ದದ ದಿನದಂದ್ ಸಾಸ್ತ್ರಕೆ ನಿತ್ತಂವ ತಲೆ, ಗಡ್ಡ, ಮೀಸೆ ಬೋಳ್ಸಿ ಸತ್ತಂವಂಗೆ ದೀಕ್ಸೆಗೆ ನಿತ್ತದೆ. ಕಾವೇರಿನಂತ ಪುಣ್ಯ ಕ್ಸೇತ್ರಲಿ ತಲೆ, ಗಡ್ಡ, ಮೀಸೆನ ಬೋಳ್‌ಸಿ ಮೀದ್ ಪುರೋಹಿತರ್‌ಲಿ ಸಾಸ್ತ್ರ ಪ್ರಕಾರ ಪಿಂಡ ಹಾಕುವೆ, ಅಂದರೆ ಸತ್ತಂವಂಗೆ ಸೊರ್‌ಗ ಲೋಕದ ಗತಿ (ಮೋಕ್ಸ) ಹೊಂದುಸುದುಂತ ಹೇಳ್‌ವೆ. ಇದರ ವಿಸಯಲಿ ಒಂದ್ ಸಣ್ಣ ಕತೆ ಉಟ್ಟು. ಹಿಂದೆನ ಕಾಲಲಿ ಒಬ್ಬ ರಾಜ ಕುಮಾರ ಬೇಟೆ ಆಡಿಕೆ ದೊಡ್ಡ ರಣಕಾಡ್‌ಗೆ ಹೋದೆ ಗಡ, ಅಲ್ಲಿ ಬೇಟೆ ಸಿಕ್ಕದೆ ಸೋತ್, ವಿಶ್ರಾಂತಿ ತಕಣತಿರಿಕಾನ ಕುದ್ದಿದ್ದ ಆ ಮರದ ಬುಡದ ನೆರಳ್‌ಲಿ ನಿದ್ದೆ ಹೋತ್‌ಗಡ. ಇಂವಂಗೆ ಎಚ್ಚರ ಆಕಾಕನ, ಇರ್‌ಲ್ ಸುಮಾರೊತ್ತ್ ಕಳ್ದ್ ಹೋತು. ಆ ಹೊತ್ತ್‌ಲಿ ಆ ರಣಕಾಡ್‌ಲಿ ಇದ್ದ ಒಂದ್ ರಣ ಆರ್ಬಟೆ ಕೊಟ್ಟ್‌ಕಂಡ್ ಇಂವನ ಹಕ್ಕಲೆ ಬಂದ್ ಈ ರಾಜಕುಮಾರನ, ತಿಂಬಕೆ ನೋಡಿಕನ ರಾಜಕುಮಾರಂಗೆ ಎಚ್ಚರಾಗಿ ಬಯಂಕರ ರೂಪಂದ ಕೂಡ್ದ ಈ ರಣನ ಆಶ್ಚರ್‌ಯಂದ ನೋಡ್ತ್. ಉದ್ದನೆ ಕೋರೆ ದಾಡೆಗ, ಉದ್ದಕ್ಕೆ ಬುಟ್ಟಿದ್ದ ಕೂದಲ್ ರಾಸಿ ಹಂಗೆ ಗಡ್ಡ ಮೀಸೆಗ ಒಂದ್ ಮೊಳದಸ್ಟ್ ಉದ್ದಕ್ಕೆ ಹೊರಗೆ ಇಣ್‌ಕಿದ ನಾಲಿಕೆ, ಕಿಚ್ಚಿನ ಕೆಂಡದಂಗೆ ಹೊತ್ತ್‌ವ ಕಣ್ಣ್‌ಗ, ರಾಜಕುಮಾರ ಹೆದ್ರಿರು ರಣದೊಟ್ಟಿಗೆ ನೀ ಯಾರ್‌ತ ಕೇಳ್ತ್‌ಗಡ. ಆಗ ರಣ ಎರಡ್ ಕೈಗಳ ಜೋಡ್ಸಿ ನಮಸ್ಕಾರ ಮಾಡಿ ಕಣ್ಣೀರ್ ಅರ್‌ಸಿಕಂಡ್, ಅಪ್ಪಾ ರಾಜಕುಮಾರನೇ ನನ್ನ ಕತೆನ ಹೇಳಿನೆ ಕೇಳ್ : ನಾ ಒಂದಾನೊಂದು ಕಾಲಲಿ ನಿನ್ನಂಗೆ ಒಬ್ಬ ರಾಜಕುಮಾರ ಆಗಿದ್ದೆ, ಆಕಸ್ಮಾತಾಗಿ ಸತ್ತ್ ಹೋದೆ. ಆದರೆ ನನ್ನ ಸಮ್ಮಂದಿಕರ್ ಎಲ್ಲಿಯೋ ದೇಸ ಸಂಚಾರಕ್ಕೆ ಹೋಗಿರ್‌ವೆ ತೇಳಿ ನೆನ್ಸಿದೊ. ಆ ಕಾರಣಂದ ಸತ್ತವ್‌ಕ್ಕಾಗಿ ಮಾಡಕಾದ ತಿತಿ, ಕರ್‌ಮಗಳ್‌ನ ಮಾಡ್ತ್‌ಲೆ; ಪುಣ್ಯ ಕ್ಸೇತ್ರಗಳ್‌ಲಿ ಪಿಂಡ ಇಸಿತ್‌ಲೆ; ಆ ಕಾರಣಂದ ನಂಗೆ ಈ ರಕ್ಕಸನ ಜೆನ್ಮ ಪ್ರಾಪ್ತ ಆತ್. ಗತಿ ಮೋಕ್ಸ ಸಿಕ್ಕಿತ್‌ಲೆ. ಆದರ್‌ಂದ ನನ್ನ ನಿನ್ನ ಒಡಹುಟ್ಟಿದಂವ ತೇಳಿ ಬಾವಿಸಿ ನಂಗಾಗಿ ಈಗಂದ ನೀ ಒಂದ್ ತಿಂಗಳವರೆಗೆ ಕುಂಟಿ ನಿತ್ತ್ ಪುಣ್ಯ ಕ್ಸೇತ್ರಲಿ ಪಿಂಡ ಹಾಕೋಕು ತೇಳಿ ನಯ ಬಕ್ತಿಂದ ಆ ರಣಪೀಡೆ ಕೇಳಿಕಂಡತ್. ರಾಜಕುಮಾರ ಹಾಂಗೆಯೇ ಆಗಲಿತೇಳಿ ಒಪ್ಪಿಕೊಂಡತ್. ಅಂದ್‌ಂದ ಅಂವ ರಣಬೂತ ಜೆನ್ಮದಲ್ಲಿದ್ದಂವಂಗೆ ಎಲ್ಲಾ ಕ್ರಿಯೆಗಳ್‌ನ ಮಾಡಿ ಒಂದ್ ತಿಂಗಳ್‌ಲಿ ಕುಂಟಿ ನಿತ್ತ್ ಪುಣ್ಯ ಕ್ಸೇತ್ರಲಿ ಪಿಂಡ ಇಸಿತ್, ಮತ್ತೆ ರಣಪೀಡೆ ಆಗಿದ್ದ್ ರಾಜಕುಮಾರಂಗೆ ಗತಿ, ಮೋಕ್ಸ ಸಿಕ್ಕಿ ಸ್ವರ್‌ಗ ಸುಕನ ಅನುಬವಿಸಿದೊ.



ಪಿಂಡ ಹಾಕುದು

**ಶವ ಸಂಸ್ಕಾರ :** ಸತ್ತ ದಿನ ತೀರಿ ಹೋದ ಕೂಡ್ಲೆ ನೆರೆಮನೆಯವ್‌ಕೆ ಗೊತ್ತಿರಲಿಂತೇಳಿದ್, ದೇವ್ರುಗಳಗೆ ಆತ್ಮ ಐಕ್ಯವಾಗಲಿ ತೇಳಿದು, ಬಾಣಕೆ ತುಪಾಕಿಲಿ ಗುಂಡು ಹಾರ್‌ಸುವೆ ಮತ್ತೆ ಜೀವ ಹೋದ ಜಾಗೆಲಿ ಮನೆನ ಮಾಡ್‌ನ ಒಟ್ಟೆಮಾಡಿ ಒನಕೆನ ಇಟ್ಟವೆ. ಮತ್ತೆ ನೆರೆಕರೆ ನೆಂಟ್ರ್, ಎಲ್ಲವೂ ಬಂದ್ ಸೇರ್‌ವೆ. ಬಂದ್ ಸತ್ತವನ ಬಾಯಿಗೆ ತೊಳ್ಸಿ ಕೊಡಿಲಿ ನೀರ್‌ನ ಕೊಟ್ಟವೆ. ಮತ್ತೆ ಊರು ಗೌಡ್ರ್ ಹೆಣನ ಸುಡಿಕೆ ಬೇಕಾವಸ್ಟ್ ಸೌದೆನ ಹೊತ್ತು ಇಸುವೆ. ಮತ್ತೆ ಹೆಣನ ಕ್ರಮದಂಗೆ ಬಿಳಿಬಟ್ಟೆನ ಹೊದ್‌ಸಿ ಚಟ್ಟದ ಮೇಲೆ ತೆಂಕು, ಬಡಗು ಬಾವಂಗೆ ಮಲ್ಗುಸುವೆ. ಮೃತಪಟ್ಟ ಸಂಕ್ಯೆನ ಕೇಳ್ದವ್ ನೆಂಟ್ರ್, ಬಿಳಿ ಬಟ್ಟೆನ ತಂದು ಹೊದ್‌ಸುವೆ. ಮತ್ತೆ ಹಣೆಗೆ ಚಿಲ್ಲರೆ ಅಂಟುಸುವೆ, ಹಕ್ಕಲೆನೇ ಒಂದ್ ದೀಪನ ಹೊತ್ತುಸಿಸುವೆ. ಮತ್ತೆ ಚಟ್ಟಕೆ ಎಲ್ಲವೂ 'ನಾರಾಯಣಾ, ನಾರಾಯಣಾ, ತೇಳಿ ದೇವರ ನಾಮನ ಸ್ಮರಣೆ ಮಾಡಿಕಂಡ್ ಐದು ಯಾ ಒಂಬತ್ತು ಸುತ್ತು ಬಂದ ಮೇಲೆ ನೆರೆಕರೆವು ಕಾಲ್‌ನ ಕಡೆಂದಲೂ ಮನೆವು ತಲೆನ ಕಡೆಂದಳೂ, ಹಿಡ್ದ್ ಹೊತ್ತ್ ಕಂಡ್ ವಾದ್ಯದೊಟ್ಟಿಗೆ ಚೂಟು ಕಳಕ್ಕೆ ನಡ್ದವೆ. ಅಲ್ಲಿ ಹೆಣನ ಸೌದೆನ ನಿರಿಪಿನ ಮೇಲೆ ಇಸಿ ಕಾಲ್ ಕಡೆಂದ ನೆರೆಯವು ತಲೆ ಕಡೆಂದ ಮನೆಯವು ಕಿಚ್ಚಿ ಕೊಟ್ಟು ಲಾಯ್ಕ ಹೊತ್ತುವವರೆಗೆ ಅಲ್ಲಿಯೇ ಇದ್ದ್ ಮತ್ತೆ ತಿರ್‌ಗಿ ಬಂದವೆ. (ಎಸ್.ಎಮ್.)

**ಕೊಳ್ಳಿ ಕೊಡುದು :** ಒಪ್ಪ ಆದ ಮಾರಣಿ ದಿನ ನಮ್ಮ ಶಾಸ್ತ್ರ ಪ್ರಕಾರ ಕೊಳ್ಳಿ ಕೊಡುದು ತೇಳ್ರೆ ಹೊತ್ತದೆ ಇರುವ ಬಾಗನ ಒಟ್ಟುಗೂಡ್ಸಿ ಪುನ ಹೊತ್ಸುವ ಕ್ರಮ.

**ಮೂರರ ಸುದ್ದ ಬೂದಿ ಮುಚ್ಚುದು :** ಸತ್ತಲ್ಲಿಂದ ಮೂರ್‌ನೆ ದಿನಕೆ ಮೂರರ ಸುದ್ದತೇಳಿ ಹೇಳ್‌ವೆ. ಈ ದಿನ ಊರುನ ಮೊಡ್‌ಯಾಳ ಬರೋಕು. ನೆರೆಕರೆ ಮನೆಯವು ಎಲ್ಲವೂ ಸೇರಿ ಚೂಟು ಕಳಕ್ಕೆ ಹೋದವೆ, ಸುರುಗೆ ಮೊಡ್‌ಯಾಳ ಆ ಬೂದಿನ ಸುದ್ದ ಮಾಡ್ದೆ. ಆ ಬೂದಿನ ತಲೆ ಕಡೆದ್ ಬೇರೆ, ಕಾಲು ಕಡೆದ್ ಬೇರೆ ಹಿಂಗೆ ಬೇರೆಬೇರೆ ಮಾಡಿ ನಡುಲಿ ಒಂದ್ ಹೊಂಡನ ತೆಗ್ದವೆ. ಬೇರೆ, ಬೇರೆ ಮಾಡ್ದ ಬೂದಿನ ಕ್ರಮ ಪ್ರಕಾರ ಹೊಂಡದೊಳೆಗೆ ತುಂಬ್‌ಸಿ ಮುಚ್ಚಿದ ಮೇಲೆ, ಒಳ್ದ ಬೂದಿನ ಮೇಲೆಂದ ದೂಪೆನ ಮಾಡ್‌ವೆ. ದೂಪೆನ ಸುತ್ತ ಸರಳಿ ದೈನ ಗೆಲ್ಲ್‌ಗಳ ನೆಟ್ಟವೆ. ತಂಪು ನೆರ್‌ಳ್ ಸದಾ ಕೊಡ್‌ಲಿಂತೇಳಿ ಇದರ ಕುತ್ತ್‌ವೆ.

**ತೀರ್‌ದವರ ಒಂಬತ್ತ್‌ನೆ ದಿನದ ಕ್ರಮಗ :** ಈ ದಿನನ ನೀರ್ ನೆಳಲ್‌ಗೆ ಇಸುದು ತೇಳಿ ಹೇಳ್‌ವೆ. ಈ ಕ್ರಮಕೆ ಬೇಕಾವ ವಸ್ತುಗ : ಬೆಂಡ, ಅರ್‌ಸಿನ ನೀರ್, ಬೆಲ್ಲದ ನೀರ್, ಸರಾಯ/ಕಳ್ಳ್ ನೂಲು, ಬೂದಿ, ದೀಪ,

**ಇಸುವ ಕ್ರಮ :** ಜೀವ ಹೋದ ಜಾಗೆಲಿ ಬೂದಿನ ಲಾಯ್ಕ ಹರ್‌ಂಡಿ ಮತ್ತೆ ಬೆಂಡನ ಒಟ್ಟೆ ಮಾಡಿಸಿ, ನೂಲ್‌ನ ಒಂದ್ ಕೊಡಿಂದ ಅರ್‌ಸಿನ ತುಂಡುನ ಕಟ್ಟಿ ಒಟ್ಟೆಮಾಡ್ದ ಬೆಂಡದ ಒಳಗೆ ಇಸಿ ಇನ್ನೊಂದ್ ಕೊಡಿನ ಮೇಲೆಗೆ ಕಟ್ಟುವೆ. ಎಲ್ಲ ಸಾಮಾನ್‌ಗಳ ಕ್ರಮ ಪ್ರಕಾರ ಇಸಿದ ಮೇಲೆ ಮನೆವೆಲ್ಲವೂ ಒಳೆಗೆ ಬಂದವೆ. ಅವರ್‌ಲಿ ಒಬ್ಬ ಮನೆನ ಜಗಲಿಲಿ ನಿತ್ತ್ ಸತ್ತವನ ಹೆಸ್ರ್ ಹೇಳಿ ನೀರ್ ನೆರಳಿಗೆ ಇಸಿಯೊಳೊ, ಬಂದ್ ಹೋಕು ತೇಳಿ ಮೂರು ಸರ್‌ತಿ ಹೇಳಿ ತುಂಬಿದ ಬೆಡಿಲಿ ಗುಂಡುನ ಬಾಣಕೆ ಹಾರ್‌ಸಿ ಒಳೆಗೆ ಬಂದದೆ. ಇದರ ಅರ್‌ತ ಸತ್ತಂವ ಕಸ್ಪಲಿರದೆ ಸುಕಲಿದ್ದರೆ ನೀರ್‌ನ ಕುಡ್ದ್ ಹೋದೆ ತೇಳ್‌ದು ನಂಬಿಕೆ.

**ದೂಪೆನ ಅಲಂಕರ್‌ಸುವ ಕ್ರಮ :** ದೂಪೆನ ಸುತ್ತ ಬೆದ್‌ರ್‌ಂದ ಕೋಟೆನ ಕಟ್ಟಿದ್ದವೆ. ಆ ಕೋಟೆಗೆ ತೆಂಕ್, ಬಡಗ್, ಎರಡ್ ದ್ವಾರಗಳ ಇಸುವೆ. ಆ ದ್ವಾರಲಿ ಬಾಳೆಲಿ ತೋರಣ ಮಾಡಿ ಕಟ್ಟುವೆ. ಆ ಕೋಟೆನ ಸುತ್ತ ಮಾಯ್‌ಣ ಸೊಪ್ಪುನ ಮಾಲೆ ಚುರ್‌ದಿದ್ದವೆ. ದೂಪೆನ ಮೇಲೆಗೆ ಮೊಡ್ಯಾಳ ಬಿಳಿ ಬಟ್ಟೆನ ಹೊದುಸಿದ್ದದೆ. ಆ ದೂಪೆನ ಎದ್‌ರಕೆ ನೆಂಟ್ರ್ ತಂದ ತಿಂಡಿ, ಬೆಂಡ, ಇದರೆಲ್ಲ ಇಸಿದ್ದವೆ. ಇದ್ ದೂಪೆನ ಸುರುನ ಕಾರ್‌ಯ. ಮನೆಲಿ ಸತ್ತಂವನ ಮಲ್‌ಗ್‌ಸಿದ ಜಾಗೆಲಿ ಒಂದ್ ಚಟ್ಟನ ಮಾಡಿ ಅದ್ಕೆ ಬಿಳಿ ಬಟ್ಟೆನ ಹೊದುಸಿ ಒಂದ್ ನಂದಾದೀಪನ ಹೊತ್ತ್‌ಸಿಸ, ಮತ್ತೆ ಮನೆವು, ಎಲ್ಲವೂ ಮೊಡಿ ಉಟ್ಟ್, ಆ ಚಟ್ಟಕೆ ಸುತ್ತು ಬಂದವೆ. ಸುತ್ತು ಬಾಕನ 'ನಾರಾಯಣ, ನಾರಾಯಣಾ, ತೇಳಿ ದೇವರ ಕರ್‌ಕಂಡ್ ಐದ್ ಇಲ್ಲರೆ ಒಂಬತ್ತ್ ಸುತ್ತು ಬಂದ್ ನಿತ್ತವೆ. ಮತ್ತೆ ಆ ಚಟ್ಟನ ಹೆಗ್‌ಲ್ ಮೇಲೆ ಇಸಿ ಹೊತ್ತ್‌ಕಂಡ್ ವಾದ್ಯದೊಟ್ಟಿಗೆ ಸುಡುಕುಳಿಗೆ ಹೋದವೆ. ಅಲ್ಲಿ ತೋರಣದ ದ್ವಾರಲಿ ಒಳೆಗೆ ಹುಗ್ಗುವೆ. ಆಗ ಮೊಡ್ಯಾಳ ಅಕ್ಕಿನ ಕೊಟ್ಟದೆ. ಆಗ ಎಡದ ಕೈಲಿ ಹಿಡ್ದ್ ದೂಪೆಗೆ ಅಕ್ಕಿನ 'ನಾರಾಯಣ, ನಾರಾಯಣಾ ತೇಳಿಕಂಡ್ ಸುತ್ತು ಬಂದ್ ಎಲ್ಲವೂ ತೋರಣದ ಹೊರೆಗೆ ಬಂದ್ ನಿತ್ತವೆ, ತೆಕಂಡ್ ಹೋದ ಚಟ್ಟನ ಹೊಡಿಮಾಡಿ ತೆಂಕ್ ಬಡಗ್ ದಿಕ್ಕ್‌ಗಳಿಗೆ ಇಟ್ಟವೆ.

**ಸೊರ್‌ಗಕೆ ಸಲ್ಲ್‌ಸ್‌ವ ಕ್ರಮ :** ಆಗೊಬ್ಬ ಈ ಕಾಗಡೆನಂಗೆ ಹೇಳ್‌ವೆ : ಬ್ರಹ್ಮಲಿಪಿ ನಂಗೆ ಹೆತ್ತು ಹೊತ್ತವರ ಮನೆಗೆ ಎರವಾಗಿ ಸತಿಯ ಮನೆಗೆ ನೆರವಾತ್. ಪತಿಯೇ ಗತಿತೇಳಿ ಸೇವೆನ ಮಾಡ್‌ತ್ ಬೇಕಾದಸ್ಟ್ ಅಸ್ವೆಶ್ವರ್‌ಯದಿಂದ ಬಾಳಿ ಬೊದುಕಿತ್, ಮೆರೆತ್. ಮಕ್ಕಳ್‌ನೂ ಮೊಮ್ಮಕ್ಕಳ್‌ನೂ ಇನ್ನೂ ಪಡ್‌ತ್ ಅಲ್ಲದೆ ಮನೆಗೆ ಬಂದವ್‌ಕೆ ಹೊಟ್ಟೆ ನೋಡಿ ಹುಗ್ಗ್ ಕೊಟ್ಟ, ತಲೆ ನೋಡಿ ಎಣ್ಣೆ ಕೊಟ್ಟ, ಮೈ ನೋಡಿ ಬಟ್ಟೆ ಕೊಟ್ಟ, ಎಲ್ಲದರ್‌ಲುನು ದಾನ ದರ್‌ಮ ಮಾಡಿ ಕೀರ್‌ತಿಂದ ಬಾಳಿ ಬೊದುಕಿತ್. ಆದರೆ ಇಂದಿಗೆ, ಚಿಗುರೆಲೆ ಕಾಯಿಯಾತ್, ಕಾಯಿಲೆ ಹಣ್ಣೆಲೆಯಾತ್, ಹಣ್ಣೆಲೆ ಉದರೋಕು ತೇಳ್‌ವ ಸೃಸ್ಟಿ ನಿಯಮದಂಗೆ, ಬಂದುಗಳ, ಮಕ್ಕಳ, ಅಸ್ವೆಶ್ವರ್‌ಯನ ಬುಟ್ಟು ಜೀವಮಾನಂದ ಅಂತ್ಯಗೊಂಡ, ನಾಡ್‌ನ ಬುಟ್ಟು ಕಾಡ್‌ನ ಸೇರ್‌ದ, ಆತ್ಮ ಪರಮಾತ್ಮೊಟಿಗೆ ಒಂದಾತ್. ಪರಮಾತ್ಮನ ವಸ ಆದ ಕೂಡ್ಲೆ ಎಲ್ಲವ್‌ಕೆ ಗೊತ್ತಾಗಲಿತ ಹೇಳಿ ಸೂಚನೆನಂಗೆ ಗುಂಡುನ ಆಕಾಶಕೆ ಹಾರ್‌ಸುವೆ, ಅದಾಗಿ ನೆರೆಕೆರೆಯವು ಊರವು ಬಂದ್ ತೊಳಸೀ ನೀರ್‌ನ ಕೊಟ್ಟೊ, ಗೌಡರ್ ಸುಡಿಕೆ ಬೇಕಾಗುವಸ್ಟ್ ಸೌದೆ ಮಾಡ್‌ದೊ. ಮತ್ತೆ ಕ್ರಮದಾಂಗೆ ಸತ್ತ ಸರ್ರನ ಮೀಸಿ ಮೊಡಿ ಉಡ್‌ಸಿ ಮತ್ತೆ ಹೊದ್‌ಸಿ ಚಟ್ಟದ ಮೇಲೆ ಇಸಿ ತಲೆ ಕಡೆಂದ ಮನೆವು, ಕಾಲ್ ಕಡೆಂದ ನೆರೆವು ಹೊತ್ತ್ ಕೊಂಡು ಹೋಗಿ ತಲೆ ಕಡೆಂದ ಮನೆವು, ಕಾಲ್ ಕಡೆಂದ ನೆರೆವು ಕಿಚ್ಚಿ ಕೊಟ್ಟೊ, ಅಂದ್‌ಂದ ನಿನ್ನ ಶರ್ರ ಬೂಮಿಗೆ ಗೊಬ್ಬರ ಆಗಿದ್ ಬಾಣಕೆ ಹೊಗೆ ಆತ್, ಇಂದ್ ನೀ ಇಹಲೋಕನ ಬುಟ್ಟ ಹನ್ನೊಂದನೆ ದಿನ. ಹಾಂಗೆ ನಾವೆಲ್ಲವೂ ನಿನ್ನ ಆತ್ಮಕ್ಕೆ ಶಾಂತಿನ ಕೋರಿಕಾಗಿ, ಇಲ್ಲಿ ಬಂದು ನೆರ್‌ದಳೊ. ಆದರೆ ನಿನ್ನ ಜಿವ ಮೃತ್‌ಯುಂದಳೊ ಅಪಮೃತ್‌ಯುಂದಳೊ ಹಾರಿಹೋತ್. ಇನ್ನ್ ಮುಂದೆ ಕಸ್ಟಕೆ ಸಿಕ್ಕದೆ ಯಾವ ರೀತಿಲಿ ಇಹ ಲೋಕಲಿ ಇದ್ದನೋ, ಅದೇ ರೀತಿ ಪರಲೋಕಲಿ ಪರಮಾತ್ಮನೊಟಿಗೆ ಸೇರಲಿತ ಹರ್‌ಸುವೆ. ಮತ್ತೆ ಇನ್ನ್ ಮುಂದೆನ ಜೆನ್ಮಲಿ ಅಗಸನ ಕಲ್ಲಾಗಿ ಹುಟ್ಟುಬಡ, ದಾರಿ ಕರೆನ ಮರ ಆಬಡ ಬಟ್ಟನ ಆಳಾಬಡ, ಗಾಡಿ ಎತ್ತಾಗಬಡ, ಇಂತಹ ಜೆನ್ಮನ ಬುಟ್ಟ್ ಬಾಳೆದಂಡ್‌ನ ಪಾಲಲಿ, ನೂಲ್ ಕೈತಾಂಗ್‌ಲಿ ಸೊರ್‌ಗಕೇ ಹೋಗ್ ತೇಳಿ ನಿನ್ನ ಮನೆವೂ, ನೆಂಟ್‌ರ್, ಬಂದುಗ, ನೆರೆಕರೆವು ಎಲ್ಲವೂ ಹರ್‌ಸಿ ಸೊರ್‌ಗಕೆ ಹೋಗು, ಸೊರ್‌ಗಕೆ ಹೋಗು; ಸೊರ್‌ಗಕೇ ಹೋಗು ತೇಳ್‌ವೆ. (ಜಿ.ಪಿ.ಜಿ.)




**ಸಾವ್ ಸುಳ್ಯದ ಕ್ರಮ :** ಗೌಡ್‌ರ್‌ಲಿ ಪ್ರಚಲಿತದ ಇರ್‌ವ ಅಂತ್ಯಸಂಸ್ಕಾರ ಇಲ್ಲರೆ ಉತ್ತರಕ್ರಿಯೆನ ಬೊಜ್ಜ ತೇಳಿ ಕರ್‌ದವೆ. ಗೌಡರ್ ಅಂತ್ಯ ಸಂಸ್ಕಾರದ ಬಗ್ಗೆ ಮಾಹಿತಿ ಹೀಂಗೆ ಉಟ್ಟು.

**ಕಾಟಕ್ಕಿಸುದು :** ಸುಮಾರು 10 ವರ್‌ಸ ಪ್ರಾಯಂದ ಕಾಗಡೆನ ಮೊನ್‌ಸ ಸತ್ತರೆ ಗೌಡ್ರ್‌ಗ ಅಂವನ ಹೂಳುವೆ. ಕುಸ್ವದಂತ ರೋಗಂದ ಸತ್ತರೆ ಅಂವನ ಸುಡಿಕೆ ಆಗದ್ ತೇಳ್ವ ನಂಬಿಕೆ ಉಟ್ಟು. ಒಳ್‌ದಂಗೆ ಗಂಡ್-ಹೆಣ್ಣ್, ಪ್ರಾಯದವು ಸತ್ತಾಕನ ನಡ್ಸುವ ಕ್ರಿಯೆಗಳ್‌ಲಿ ಯಾವ ವೆತ್ಯಾಸ ಇಲ್ಲೆ.

ಮೊಯಿಂಸೊಬ್ಬ ಸಾಯ್‌ವ ಹೊತ್ತುನ ಅರ್‌ತ ಮಾಡಿಕಂಬ ಮನೆವು ತೀರ್‌ದವರ ಮನೆನ ಜಗಲಿಲಿ ಮಲ್‌ಗ್‌ಸುವೆ ಉಸಿರಾಡಿಕೆ ಜೀವ ಕಸ್ಟಪಡತಿದ್ದಾಂಗೆ 'ದೊಡ್ಡ ಜೀವ ಹೋತ್' ತೇಳಿ ಹೇಳಿ ಕಂಡ್, ತೊಳ್‌ಸಿ ಕೊಡಿಲಿ ಅಂವನ ಬಾಯಿಗೆ ನೀರ್ ಮುಟ್ಟ್‌ಸ್‌ವೆ. ಹಕ್ಕಲೆನ ಬಂದುಗ ನಾಲಿಗೆಗೆ ನೀರ್ ಕೊಟ್ಟವೆ. ಇದರ 'ಬಾಯಿಗೆ ನೀರ್ ಕೊಡು' ತೇಳುವೆ. ಮೊನ್‌ಸ ತೀರಿ ಹೋದರೆ, ಅದರ ಗೊತ್ತ್‌ಮಾಡಿಕಂಡ್ ಮನೆವು ಕೇಪುನ ಬೆಡಿಲಿ ಮೂರ್ ಸುತ್ತ್ ಗುಂಡುನ ಬಾಣಕೆ ಹಾರ್‌ಸಿ, ಊರವ್‌ಕೆ ಸುದ್ದಿ ತಿಳಿವಂಗೆ ಮಾಡ್‌ವೆ. ಹೆಣಕೆ ಒಂದ್ ಬಟ್ಟೆ ಹೊದ್‌ಸಿ, ಮೇಲೆಂದ ಒಂದ್ ದೊಣ್ಣೆನ ದಾಟ್‌ಸ್‌ವೆ. ಹೆಣದ ತಲೆನ ತೆಂಕ್ ದಿಕ್ಕ್‌ಗೆ ಇರುವಂಗೆ ಮಾಡಿ, ಮನೆನ ಮೂಡಣ ದಿಕ್ಕ್‌ನ ಬಾಗ್‌ಲ್‌ಲಿ ಮಲ್‌ಗ್‌ಸ್‌ವೆ. ಅಲ್ಲೆ ಮೇಲೆಗೆ ಮನೆನ ಚಾವಣಿಲಿ ಒಂದ್ ಒಟ್ಟೆ ಮಾಡಿ, ಅದರ್‌ಂದಾಗಿ ಒಂದ್ ಒನಕೆನ ದಾಟ್‌ಸುವೆ. ಅಸ್ಪೊತಿಗೆ ಊರವೆಲ್ಲ ಬಂದ್ ಹೆಣದ ಬಾಯಿಗೆ ನೀರ್‌ಕೊಟ್ಟು, ಹೆಣಕೆ ಒಂದ್ ಸುತ್ತು ಬಂದು ಒಟ್ಟು ಸೇರ್‌ವೆ. ಬಿಳಿ ಬಟ್ಟೆ ಒಂದರ ಹೆಣದ ಮೇಲೆ ಪೂರ ಹೊದ್‌ಸುವೆ. ಹೆಣದ ತಲೆ ಪುಡೆಗೆ ಒಂದ್ ದೀಪನ ಹೊತ್ತ್‌ಸಿಸಿ, ಕಾಲಕ್ಕಲೆ ಒಂದ್ ಮಡ್‌ಕೆ 'ಓಡ್‌ಲಿ ಕೆಂಡ ಮತ್ತೆ ಬೂದಿನ ಹಾಕಿಸ್‌ವೆ.

ಮತ್ತೆ ಹೆಣನ ಹೊರಗೆ ತಂದ್ ಎಣ್ಣೆ, ಅರಸಿನ ಪೂಜಿ ಬಿಸಿನೀರ್‌ಲಿ ಮೀಸಿದ್ ಮದುಮಜ್ಜನ ಸಿಂಗರ್‌ಸಿದಂಗೆ ಸಿಂಗಾರ ಮಾಡ್‌ವೆ. ಈ ಕೆಲಸಲಿ ಸತ್ತಂವನ ದೊಡ್ಡ ಮಜ್ಜ, ಅಲ್ಲರೆ ಬಾರಿ ಹಕ್ಕಲೆ ನೆಂಟ್‌ರ್ ಮುಕ್‌ಯ ಆಗಿದ್ದವೆ. ಊರ್‌ನ ಗೌಡ್ರ ಸಮೇತ ಒಳ್ದವು ತಂದ ಬಿಳಿ ಬಟ್ಟೆನೆಲ್ಲ ಈಗ ಹೆಣಕ್ಕೆ ಹೊದ್‌ಸುವೆ. ದೂರದೂರಂದ ಮಕ್ಕ-ಅವು ಹೆಣ್ಣಾಗಲೀ, ಗಂಡಾಗಲೀ ಎಲ್ಲವೂ ಬಾವಲ್ಲಿ ವರೆಗೆ ಕಾದವೆ.

ಮನೆಲಿ ಹೆಣಕ್ಕೆ ಇಂತ ಕ್ರಿಯೆಗ ನಡೆಕಾಕನ, ಇನ್ನೊಂದ್ ಕಡೆ ಗುಡ್ಡೆಲಿ ಊರ್‌ನವೆಲ್ಲ ಸೇರಿ, ಹೆಣ ಸುಡಿಕೆ ಬೇಕಾದ ಜಾಗೆ ನೋದಿದ್, ಸೌದೆನ ಕೂಡ್‌ಸ್‌ವೆ.. ಈ ಜಾಗೆಗೆ 'ಸುಡ್ಕುಳಿ' ತೇಳಿ ಹೆಸರ್. ಸತ್ತಂವನ ಜಾಗೆಲೆ ಈ ಹೆಣಸುಡುವ ಜಾಗೆ ಮಾಡಿದ್ದವೆ.

ಸತ್ತಂವನ ಮಕ್ಕ, ಕುಟುಂಬೊದವ್, ಊರವ್, ಮತ್ತೆ ಊರ್ ಗೌಡ ಬಂದಾದ ಮೇಲೆ, ಅವೆಲ್ಲ ಒಟ್ಟಾಗಿ ಹೆಣಕೆ ಐದ್ ಅಲ್ಲರೆ ಏಳ್ ಸುತ್ತ ಚಿದಂಗ ಸುತ್ತ ಬಂದವೆ. ಚಿದಂಗ ಸುತ್ತ್ ಬಾಕನ 'ನಾರಾಯಣ ನಾರಾಯಣ' ತೇಳ್‌ವೆ. ಬೆಳ್ಳಿನ ಪಾವಲಿ ಇದ್ದರೆ ಅದರ ಹೆಣದ ಹಣೆಗೆ ಅಂಟ್‌ಸುವೆ. ಚಾಳೆ ಮರದ ಕಡ್ಡಿ ಒಂದಕೆ ಪಂಚೋಳೆ ಎಲೆನ ಸೇರ್‌ಸಿ ಅದರ್‌ನ ಹೆಣದ ಎದೆಗೆ ಇಸ್‌ವೆ. ಹೆಣದ ತಲೆ ಕಡೆಗೆ ಅರ್‌ದ ಸೇರ್ ಅಕ್ಕಿ ಮತ್ತೆ ಕಾಲ್ ಹಕ್ಕಲೆ ಬೇಸಿದ ಬತ್ತನ ಒಂದಸ್ಟ್ ಇಸ್‌ವೆ. ಒಂದ್ ಕಾಯಿನ ಮನೆನ ಮೆಟ್ಟ್‌ಕಲ್ಲ್‌ಗೆ ಒಡ್‌ದ ಕಾಯಿನ ಚಿಪ್ಪಿಲಿ ದೀಪ ಹೊತ್ತಿಸಿಸಿ , ಇನ್ನೊಂದು ಚಿಪ್ಪಿನ ಹೆಣದ ಕಾಲ್‌ನ ಹಕ್ಕಲೆ ಇಸೊಕು ಹಿಞ್ಞಾ ಎಲೆ ಅಡ್‌ಕೆನ ಗುದ್ದಿ ಹೊಡಿ ಮಾಡಿ ಹೆಣದ ಬಾಯಿಗಿಸುವೆ.

ಅಸ್ಟ್ ಹೊತ್ತ್‌ಗೆ ಕೆಲವೆಲ್ಲ ಸೇರಿ 'ಚಟ್ಟ'ನ ಮಾಡ್‌ವೆ. ಬೆದ್‌ರ್‌ಂದ ಮಾಡ್‌ದ ಚಟ್ಟಲಿ ಹೆಣನ ಮಲ್‌ಗ್‌ಸ್‌ವೆ. ಮತ್ತೆ ಹೆಣಕೆ ಹೊದ್‌ಸಿದ ಬಿಳಿಬಟ್ಟೆಲಿ ಒಂದಡಿ ತೆಗ್‌ದ್, ಅದರ್‌ಂದ ಸುಮಾರ್ ಎರಡ್ ಅಡಿನಸ್ಟ್ ಬಟ್ಟೆನ ಹರ್‌ದ್, ಸತ್ತಂವನ ಕ್ರಮಕೆ ನಿಂತವು (ಹೆಚ್ಚಾಗಿ ಮೃತನ ಹಿರಿಯ ಮಗ) ತನ್ನ ಗಂಟ್‌ಲ್‌ಗೆ ಹಾಕಿಕಂಡದೆ. ಇದರ



**ದೂಪೆ**

'ಕುಂಟಿಗೆ ಹರೆದು' ತೇಳುವೆ. ಅದೇ ಬಟ್ಟೆನ ಸಣ್ಣ ತುಂಡೊಂದರ ಕೈ ಬೆರಳ್ ಮತ್ತೆ ಕಾಲ್ ಬೆರಳ್‌ಗೆ ಅಂವ ಕಟ್ಟಿಕಣೋಕು. ಒಳ್‌ದ ಬಟ್ಟೆನ ಅಂವನೇ ಉಟ್ಟುಕಂಡದೆ. ಹಿಂಗೆ ಸಂಸ್ಕಾರದ ಕ್ರಿಯೆಗೆ ಒಪ್ಪಿಕೊಂಡವನ ಸುದ್ದಕೆ ನಿತ್ತವ ಅಲ್ಲರೆ 'ಕುಂಟಿ ಹಿಡ್‌ದವ' ತೇಳ್‌ವೆ. ಮುಂದೆ ಹೆಣನ ಸುಡ್‌ಕುಳಿ ಸಾಗ್‌ಸ್‌ವ ಕೆಲ್ಸ, ಚಟ್ಟದ ಎದ್‌ರ್ ಬಾಗಲಿ ಸತ್ತಂವನ ಕುಟುಂಬದವರ್‌ಲಿ ಯಾರಾರ್ ಇಬ್ಬೊರ್ ನಿತ್ತರೆ, ಚಟ್ಟದ ಹಿಂದೆಗೆ ಊರ್‌ನ ಯಾರಾರ್ ನಿಲ್ಲಕ್.

ಮನೆಂದ ಹೆಣನ ಹೊರೆಗೆ ತಾಕನ ಕಾಲ್ ಮುಂದಾಗಿ ಬಂದ ಹಾಂಗೆ, ಚಟ್ಟಕೆ ಏರ್‌ಸಿಕಾಕನೂ ಕಾಲ್ ಮುಂದೆಗೆ ನೀಂಡಿಕಂಡಿದ್ದದೆ. ಹೆಣನ ಸುಡ್‌ಕುಳಿ ಜಾಗೆಗೆ ಮುಟ್ಟಿಕೆ ಮುಂದೆ ಅರ್‌ದದಾರಿಲಿ ಹೆಣ ಇಳ್‌ಸಕಾರೆ, ಬೊಚ್ಚಿರೆ ಅದ್‌ಕೆ ಅವಕಾಸ ಉಟ್ಟು, ಹೆಣ ಇಳ್‌ಸಿದ ಜಾಗೆಲಿ

ಐದ್ ವೀಳ್ಯದೆಲೆ, ಒಂದ್ ಅಡಿಕೆನ ಇಸಿ, ಸುದ್ದಕೆ ನಿತ್ತವ 'ಇರ್‌ಮುಂಡಿ' (ಮೊಣಕಾಲಿನಲ್ಲಿ ಕುಳಿತುಕೊಳ್ಳುವುದು) ಹಾಕೋಕು. ಇಲ್ಲಿಂದ ಮೇಲೆ ಹೆಣ ಹೊರವು ಬೇಕಾರೆ ಹೆಗಲು ಬದಲಾಯಿಸಿಕಣಕ್.

ಹೆಣ ಸುಡಿಕೆ ತಯ್ಯಾರ್ ಮಾಡ್‌ದ 'ಕಾಟ'ಕ್ಕೆ ಹಲ್‌ಸ್‌ನ ಮರದ ಸೊಪ್‌ದೆ, ಮಾಯಿಣ ಸೊಪ್ಪು ಬೇಕೆ ಬೇಕು. ಚಟ್ಟಲಿ ಹೆಣದ ಅಡಿಗೆ ಇಸಿದ ಬಾಳೆ ಎಲೆನೂ ಕಾಟಕ್ಕೆ ಹಾಕೋಕು. ಹೆಣದ ಮುಂದೆಗೆ ಮಡ್ಕೆ ಹಿಡ್‌ಕಂಡ್ ಬಂದಂವ ಆ ಬೂದಿನ ಮಡ್‌ಕೆನ ಕಾಟಕೆ ಮುಟ್ಟ್‌ಸಿದೆ. ಎಲ್ಲವೂ ಹೆಣ ಸಮೇತ ಆಗಿ ಕಾಟಕೆ ಮೂರ್ ಸುತ್ತು ಬಲಂದ ಎಡಕೆ ಬಂದವೆ. ಹಾಂಗೆ ಸುತ್ತಿಕಾಕನ ನಾರಾಯಣ ನಾಮಸ್ಮರಣೆ ಮಾಡ್‌ವೆ. ಮೂರ್‌ನೇ ಸುತ್ತುನ ಕಡೇಲಿ ಹೆಣನ ಕಾಟದ ಮೇಲೆ ಮಲ್‌ಗಿಸುವೆ. 'ಚಟ್ಟ'ನ ಮುರ್‌ದು ಕಾಟಕೆ ಹಾಕ್‌ವೆ. ಮನೆಲಿ ಮೆಟ್ಟ್‌ಲ್‌ಗೆ ಒಡ್‌ದು ಬಾಗ್ ಮಾಡಿದ್ದ ಕಾಯಿನ ಚಿಪ್ಪಿಲಿ ಹೊತ್ತ್‌ಸಿದ ದೀಪನ ಹೆಣದ ನಡುಬಾಗಲಿ ಇಸುವೆ ಬಿಳಿಬಟ್ಟೆ ಬುಟ್ರೆ ಯಾದೇ ಕಪ್ಪುನ ಬಟ್ಟೆ ಕಾಟಕೆ ಬೀಳದಂಗೆ ಜಾಕ್ರತೆ ಮಾಡಿಕಂಡವೆ. ಹೆಣದ ಸೊಂಟಲಿರ್‌ವ ಪಟೆನೂಲ್‌ನ ಕತ್ತರ್‌ಸಿ, ಕೆಬಿಲಿರ್‌ವ ಚಿನ್ನನ ತೆಗ್‌ದವೆ.

ಸತ್ತಂವನ ಕುಂಟಿಗೆ ನಿತ್ತವ ಹೆಣದ ತಲೆ ಪುಡೆಂದ ಕಾಟಕೆ ಕಿಚ್ಚಿ ಕೊಟ್ಟದೆ. ಊರ್ ಮುಕ್ಯಸ್ತ ಒಬ್ಬ ಕಾಲ್‌ನ ಕಡೆಂದ ಕಿಚ್ಚಿ ಕೊಟ್ಟದೆ. ಕಿಚ್ಚಿ ಕೊಡಿಕೆ ಮುಂದೆ 'ಕಿಚ್ಚಿ ತಕನಿ'(ಬೆಂಕಿ ತೆಗೆದುಕೊಳ್ಳಿ,) ತೇಳಿ ಮೂರ್ ಸರ್‌ತಿ ಹೇಳ್‌ವೆ. ಎರಡೂ ಕಡೆಂದ ಹೊತ್ತಿಕಂಡ್ ಬಾವ ಕಿಚ್ಚಿ ಕಾಟದ ನಡುಗೆ ಬಾವಲ್ಲಿವರೆಗೆ ಬಂದವೆಲ್ಲ ನಿತ್ತಿದ್ದವೆ. ಸತ್ತಂವ ಗಂಡಾಗಿದ್ದ್, ಅಂವಂಗೆ ಹೆಣ್ಣ್ ಇದ್ದರೆ, ಅದರ ಕೈ ಬಳೆನ ಅಲ್ಲಿ ಒಡ್‌ದವೆ. ಅದರ ಹಣೆಂದ ಕುಂಕುಮನ ಒರ್‌ಸ್‌ವೆ. ನೆರ್‌ದ ಜೆನಂಗೆಲ್ಲ ಮುಂದೆನ ಕ್ರಿಯೆಗಳ ಬಗ್ಗೆ ಮಾತಾಡಿ, ಸತ್ತ ಐದ್, ಏಳ್, ಅಲ್ಲರೆ ಹನ್ನೊಂದ್‌ನೇ ದಿನಕೆ 'ಬೊಜ್ಜ' ಮಾಡ್‌ವ ಬಗ್ಗೆ ತೀರ್‌ಮಾನ ತಕಂಡವೆ. ಹೆಣ ಸುಡಿಕೆ ಬಂದವ್‌ಕೆ ಬೊಜ್ಜದ ಹೇಳಿಕೆ ಪ್ರತ್ಯೇಕ ಆಗಿ ಇರ್‌ದುಲೆ. ಕಾಟಕ್ಕೆ ಸೌದೆ ಮಾಡಿಕೆ ಬಳ್‌ಸಿದ ಮೊಚ್ಚಿನ ಕಾಟದ ಮೇಲೆಂದ ಇಸಿ, ಮನೆಗೆ ತಂದವೆ. ಮನೆ ಒಳೆಗೆ ಆ ಮೊಚ್ಚಿನ ತಾಕಾಗದ್‌ಂತ ಇರ್‌ದರ್‌ಂದ ಇಜ್ಜಲ್‌ಲೆ ಇಸ್‌ವೆ.

ಮತ್ತೆ ಎಲ್ಲವೂ ಮೀದ್ ಅವರವರ ಮನೆಗೆ ಹೋದವೆ. ಸತ್ತಂವನ ಮನೆಯವ್‌ಕೆ ಮತ್ತೆ ಕುಟುಂಬದವ್‌ಕೆ ಸೂತಕ ಇದ್ದದೆ. ಸೂತಕ ಇದ್ದವು ಬೊಜ್ಜದವರೆಗೆ ಅಕ್ಕಿ ಊಟ ಮಾಡ್‌ವಂಗಿಲ್ಲೆ. ಅವೆಲ್ಲ ಉಪ್ಪು ಹಾಕದ ರಾಗಿ ಮುದ್ದೆನ ಆಹಾರತೇಳಿ ತಿಂಬೊತ್ತಿದ್ದೊ. ಬೊಜ್ಜ ಮುಗಿವವರೆಗೆ ನಡೆವ ಈ ಆಹಾರ ಪೊದ್ದತಿಗೆ ಮಕ್ಕ ಮತ್ತೆ ಪ್ರಾಯದವ್ ಮಾಡಕುತಿಲ್ಲೆ..

**ಕೊಳ್ಳಿ ಕೂಡುದು :** ಹೆಣನ ಸುಟ್ಟ ಮರ್‌ದಿನ ನಡಿವ ಕಾರ್‌ಯಕ್ರಮಕೆ ಕೊಳ್ಳಿ ಕೂಡುದು ತೇಳ್‌ವೆ. ಆ ದಿನ ಸತ್ತಂವನ ಕುಟುಂಬದವರ್‌ಲಿ ಕೆಲವ್ ಚೊಂಬುಲಿ ಹಾಲ್ ಮತ್ತೆ ತುಪ್ಪನ ಹಿಡ್‌ಕಂಡ್ ಕಾಟದ ಹಕ್ಕಲೆ ಹೋದವೆ. ಹಾಲ್ ಮತ್ತೆ ತುಪ್ಪನ ಕಾಟಕೆ ಹೊಯ್ದ್, ಹೊತ್ತದೆ ಒಳ್ದ ಸೌದೆ ತುಂಡುಗಳ, ಬೂದಿ ಆಗದೆ ಒಳ್ದ ದೇಹದ ಬಾಗಗಳ ಒಟ್ಟು ಸೇರ್‌ಸಿ, ಮತ್ತೊಮ್ಮೆ ಕಿಚ್ಚಿ ಕೊಟ್ಟ್, ಅದ್ ಪೂರ ಮುತ್ತ್‌ವಂಗೆ ಮಾಡ್‌ವೆ. ಹಾಂಗೆ ಮಾಡ್‌ದ ಜೆನಂಗ, ಮತ್ತೆ ಮೀದ್, ಚೆಂಡಿ ಬಟ್ಟೆ ಸುತ್ತಿ, ಮನೆ ಒಳೆಗೆ ಹುಕ್ಕ್ ಬರೋಕು. ಸತ್ತಂವನ ಮನೆಲಿ ಅಂದ್ ಕೂಡಾ ಒಲೆ ಹೊತ್ತಿಕಾಗದ್. ರಾಗಿ ಮುದ್ದೆನೇ ಊಟ.

**ಬೂದಿ ಮುಚ್ಚುದು :** ಬೂದಿ ಮುಚ್ಚುದು ಸತ್ತಂವ ತೀರ್‌ದ ಮೂರನೇ ದಿನ ನಡ್ದದೆ. ಆ ದಿನ ಮನೆಗೆ ಚೌರಿಜ್ಜ ಬಂದದೆ. ಅಂವ ಕುಟುಂಬದವರ ಮೀಸೆ ಮತ್ತೆ ತಲೆಕೂದ್‌ಲ್‌ನ ಬೋಳ್‌ಸಿದೆ. ಇದರ 'ತಲೆಪಾಳಿ ತೆಗೆದು' ತೇಳ್‌ವೆ. ಅಸ್ಟ್ ಹೊತ್ತುಗೆ ಮೊಡ್‌ಯಾಳ ಬಂದರೆ, ಅಂವನ ಕರ್‌ಕಂಡ್ ಸುಡ್ಕುಳಿ ಇದ್ದಲ್ಲಿಗೆ ಹೋದವೆ. ಮೊಡ್‌ಯಾಳ ಅಂವ ತಂದಿದ್ದ ಬೆಂಡ ನೀರ್‌ನ ಸಿಡ್ಕಿ , ಬೂದಿನ ಸುದ್ದ ಮಾಡ್‌ದೆ. ಅದಾಗಿ ಬೂದಿಲಿ ತಲೆನ ಬಾಗದ್ದ್, ನೊಡೂದ್ ಮತ್ತೆ ಕಾಲ್‌ನ ಪುಡೆದ್ ತೇಳಿ ಮೂರ್ ಪಾಲ್‌ಮಾಡ್‌ದೆ. ಕಾಟದ ನೊಡುಲಿ ಸುಮಾರ್ ಎರಡಡಿ ಚಾಳದ ಹೊಂಡ ತೆಗ್‌ದ್, ಸುರೂಗೆ ಕಾಲ್‌ನ ಕಡೆ ಬೂದಿನ ಅದ್‌ಕೆ ಹಾಕಿದೆ. ಮತ್ತೆ ನೊಡುದ್, ಮತ್ತೆ ತಲೆ ಬಾಗದ ಬೂದಿನ ಹೊಂಡಕ್ಕೆ ತುಂಬ್‌ಸ್‌ವೆ ಒಳ್‌ದ ಬೂದಿನ ಅದೇ ಹೊಂಡದ ಮೇಲೆ ಕರೆಗೆ ಮಡ್‌ಕೆ ಆಕಾರಲಿ ಸುತ್ತಿದೆ. ಇದರ ಈಗ 'ದೂಪೆ' ತೇಳಿ ಕರ್‌ದವೆ. ದೂಪೆನ ತೆಂಕ್ ಮತ್ತೆ ಬಡಗ್ ಬಾಗಲಿ ಒಂದೆರಡ್ ಮೆಟ್ಟ್‌ಲ್‌ನ ಮಾಡ್‌ವೆ. ಇದಾದ ಮೇಲೆ ದೂಪೆನ ಸುತ್ತ ಸರಳಿ ದೈನ ಗೆಲ್ಲ್‌ಗಳ ನೆಟ್ಟ್ ಜೆನಂಗ ವಾಪಾಸ್ ಹೋದವೆ. ಮನೆ ಹುಗ್ಗಿಕೆ ಮುಂದೆ ಮೀಯೋಕು. ಚಂಡಿ ಬಟ್ಟೆ ಉಟ್ಟ್ ಮನೆ ಒಳೆಗೆ ಹೋಕು. ಆ ದಿನನೂ ಗಂಜಿ ಉಂಬಕಿಲ್ಲೆ.

**ಬೊಜ್ಜ :** ಸತ್ತ ಏಳನೇ ದಿನಕೆ ಬೊಜ್ಜ ನಡ್‌ಸುದುಟ್ಟು. ಆದರೆ ಸುಳ್ಯ ಪರಿಸರಲಿ ಹೆಚ್ಚಾಗಿ ಒಂಬತ್ತನೇ ದಿನದಂದ್ ಅಲ್ಲರೆ ಹನ್ನೊಂದ್‌ನೆ ದಿನ ಬೊಜ್ಜ ನಡ್‌ಸ್‌ವೆ.

ಬೊಜ್ಜದ ಹಿಂದೆನ ದಿನದ ಕತ್ತಲೆಗೆ, ಅಂದರೆ ಸತ್ತ ಎಂಟನೇ ಅಲ್ಲರೆ ಹತ್ತನೇ ದಿನದಂದ್ ರಾತ್ರಿ 'ಮಿಂಚಿಲೂಟ' ಕಾರ್‌ಯಕ್ರಮ ಉಟ್ಟು. ಸಾಮಾನ್ಯ ಆಗಿ ಮಾಸ ಇಲ್ಲರೇ 'ಸಿಹಿ ಊಟ' ಮಾಡ್‌ವ ದಿನ ಅದ್. ಆ ದಿನ 'ನೀರ್ ನೆರಳ್‌ಗೆ' ಇಸ್‌ವ ಕ್ರಮ ಇದ್ದದೆ. ಅದ್‌ಕೆ ಬೆಂಡದ ನೀರ್, ಅರಸಿನದ ನೀರ್, ಬೆಲ್ಲದ ನೀರ್, ಕಳ್ಳ್, ನೂಲ್, ಬೂದಿ, ದೀಪ, ಚೆಂಬು ನೀರ್ ಮತ್ತೆ ಮಸಿ ತುಂಡು ಬೇಕಾದೆ.

ತೀರಿ ಹೋದವರ ಮಲ್‌ಗ್‌ಸಿದ ಜಾಗೆಲಿ ತೆಳುಲಿ ಬೂದಿನ ಹರಂಡುವೆ. ಒಂದ್ ಕೊಡಿಲಿ ಬೆಂಡ ಕೆತ್ತಿ ನೀರ್ ಕಾಂಬಾಂಗೆ ಮಾಡಿದ್, ಇನ್ನೊಂದ್ ಕೊಡಿಲಿ ಚೆಂಬು ನೀರ್ ಇಸ್‌ವೆ. ಉದ್ದದ ಒಂದ್ ನೂಲ್‌ನ ಕೊಡಿಗೆ ಅರ್‌ಸಿನದ ತುಂಡುನ ಕಟ್ಟಿ, ಆ ಅರಸಿನ ತುಂಡ್‌ನ ಕೊಡಿ ಬೆಂಡದ ನೀರ್‌ಗೆ ತಾಂಗ್‌ವಂಗೆ ಮೇಲೆಂದ ಇಳ್‌ಸಿ




ಬುಡೋಕು. ಮೊಸಿ ತುಂಡುನ ನೂಲ್‌ಗೆ ಕಟ್ಟಿ, ಚೆಂಬುಲಿರ್‌ವ ನೀರ್‌ಗೆ ಅದರ ಕೊಡಿ ಮುಟ್ಟುವಂಗೆ ಮೇಲೆಂದ ನೇಲ್‌ಸಕು. ಮನೆವೆಲ್ಲವೂ ಅಲ್ಲಿಗೆ ಬಂದವೆ. ಕರ್‌ಮಕೆ ನಿತ್ತವ ಒಂದ್ ಕುಂಬಳ ಕಾಯಿನ ಕಡ್‌ದ್ ಅಲ್ಲಿ ಇಸಿ, ಎಲ್ಲವರ ಹಿಂದೆ ಹೋಕೆ ಹೇಳ್‌ದೆ. ಅಂವ ಮಾತ್ರ ತನ್ನ ತಲೆಗೆ ಬಿಳಿ ಬಟ್ಟೆ ಒಂದರ ಹೊದ್ದುಕಂಡ್, ಒಂಟಿ ಕಾಲ್‌ಲಿ ನಿತ್ತ್, ಸತ್ತಂವನ ಹೆಸ್‌ರ್ ಅಲ್ಲರೆ ಸಮ್ಮಂದ ಇರ್‌ವ ಸಬ್ದನ ಹೇಳಿ 'ನೀರ್ ನೆರ್ಳಿಗೆ ಇಸೊಳೋ, ಬಂದ್ ಹೋಗಿ' (ನೀರು ನೆರಳಿಗೆ ಇಟ್ಟಿದ್ದೇವೆ, ಬಂದು ಹೋಗಿ) ತ ಮೂರ್ ಸರ್‌ತಿ ಕರ್‌ದವೆ. ಆ ಹೊತ್ತುಗೆ ಇಡೀ ಮನೆ ಸದ್ದಿಲ್ಲದೆ ಇರಕು. ಒಟ್ಟಿಗೆ ಬಾಣಕೆ ಒಂದ್ ಗುಂಡು ಹಾರ್‌ಸೋಕು. ಬಂದ್ ಸೇರ್‌ದ ಜೆನಂಗೆಲ್ಲ ಊಟ ಮಾಡಿ ವಾಪಾಸ್ ಹೋದವೆ. ಹಕ್ಕಲೆನವ್ ಮಾರ್‌ನೇ ದಿನದ ಬೊಜ್ಜದೂಟಕೆ ತಯಾರ್ ಮಾಡ್‌ವೆ.

ಮಾರ್‌ನೇ ದಿನ, ಅಂದರೆ ಒಂಬತ್ತನೇ ದಿನ ಬೊಳ್‌ಪುಗೆ ಕೋಳಿ ಕೂಂಗುವ ಮುಂದೆನೆ ಕುಂಟಿಗೆ ನಿತ್ತವ ಎದ್ದ್, ಹಿಂದೆನ ದಿನ ನೀರ್ ನೆರ್ಳಿಗೆ ಇಸಿದ ಜಾಗೆಗೆ ಬಂದ್, ತಲೆಗೆ ಬಿಳಿ ಬಟ್ಟೆ ಹಾಕಿಕಂಡ್, ಒಂಟಿ ಕಾಲ್‌ಲಿ ನಿತ್ತ್, ಸತ್ತಂವನ ಮೂರ್ ಸರ್‌ತಿ ಕರ್‌ದದೆ. ಇದರ 'ಮುಸ್ಕೊ ಹೊರ್‌ದು' ತೇಳ್‌ವೆ. ಬೊಳ್‌ಪಾದಾಂಗೆ 'ನೀರ್ ನೆಳಲ್‌ಗೆ ಇಸಿದ ಪೂರ ತೆಗ್‌ದವೆ.

'ಕುಂಟಿ ಹಿಡ್ಡವ ಒಂಬತ್ತನೇ ದಿನ ಬೊಳ್‌ಪುಗೆ ಎರಡ್ ಸರ್‌ತಿ ಮೀಯೋಕು. ಬೀಡಿ, ಸಿಗ್‌ರೇಟು, ಹೆಂಡ ಕುಡಿದು ಇಂತದರ್‌ಂದ ದೂರ ಇರೋಕು. ಕುಂಟಿ ಹರ್‌ದ ಬಟ್ಟೆನ ಅಂವ ಗಂಟ್‌ಲ್‌ಂದ ತೆಗೆಕಾಗದ್.

ಬೊಳ್‌ಪುಗೆ ಎಲ್ಲವೂ ಒಟ್ಟು ಸೇರ್‌ದ ಮೇಲೆ ಕೆಲವ್ ಮನೆಯವರ್‌ನ ಒಪ್ಪಿಗೆ (ಅನುಮತಿ) ಕೇಳಿ ಸುಡ್ಕುಳಿ ಇದ್ದಲ್ಲಿಗೆ ಹೋದವೆ. 'ಅನು' ಕೇಳಿಕಾಕನ ಮನೆನ ಒಂದ್ ಪುಡೆಗೆ ಮನೆವ್, ಇನ್ನೊಂದು ಪುಡೆಗೆ ಊರ್‌ನವು ನಿಲ್ಲೋಕ್. ಊರ್‌ನ ಎಲ್ಲ ಜೆನಂಗಳ ಆ ಹೊತ್ತುಲಿ 'ಊರ ಅಣ್ಣಂದಿರ್' ತೇಳಿದೆ ಕರ್‌ದವೆ. ಎದುರ್ ಬದ್‌ರಾಗಿ ನಿತ್ತಾಕಾನ ಊರ ಅಣ್ಣಂದಿರ್ ಮನೆಯವರ ನೋಡಿ, 'ನಾವ್ ದೂಪೆ ಕೆಲ್‌ಸಕೆ ಹೋದವೆ' ತೇಳಿ ಮೂರ್ ಸರ್‌ತಿ ಹೇಳ್‌ವೆ. ಮತ್ತೆ ಸೀದಾ ದೂಪೆನ ಕಡೆಗೆ ಹೋದವೆ.

ಸುರುಗೆ, ದೂಪೆನ ಸುತ್ತ ಬೆದ್‌ರ್‌ನ ಬೇಲಿನ ಕಟ್ಟುವೆ. ಅದಕ್ಕೆ 'ಕೋಟೆ' ತೇಳಿ ಕರ್‌ದವೆ. ಕೋಟೆನ ತೆಂಕ ಮತ್ತೆ ಬಡ್‌ಗ ದಿಕ್ಕ್‌ಗೆ ಎರಡ್ ಬಾಗ್‌ಲ್‌ಗ ಇದ್ದದೆ. ಆ ಬಾಗ್‌ಲ್‌ಗೆ ಬಾಳೆ ನೆಟ್ಟ್, ಕೋಟೆ ಸುತ್ತ ಮಾಯಿಣ ತೋರಣ ಕಟ್ಟಿಸಿಂಗಾರ ಮಾಡ್‌ವೆ. ದೂಪೆನ ಸರಿ ಎತ್ತರಕೆ ಚಪ್ಪರನು ಇದ್ದದೆ. ಚಪ್ಪರದ ಅಡಿಗೆ ಮೊಡ್ಯಾಳ ಬಿಳಿ ಬಟ್ಟೆನ ಬುಡ್‌ಸಿ ಕಟ್ಟಿದ್ದದೆ.

ಇತ್ತ ಮನೆಲಿ 'ಕೂಳಿಗೆ ಇಸ್‌ದು' ಕಾರ್‌ಯಕ್ರಮ ನಡ್‌ದದೆ ಮನೆ ಜಗಲಿಲಿ ಮಣೆ ಒಂದರ ಇಸಿ ಅದ್‌ಕೆ ಬಿಳಿಬಟ್ಟೆ ಹೊದ್‌ಸಿ,ಕರೆಗೆ ದೀಪ ಹೊತ್ತ್‌ಸಿಸ್‌ವೆ. ಕುಂಟಿ ಹಿಡ್‌ದದವ ಆ ಮಣೆಲಿ ಕುದ್ದು ಕಣೋಕು. ಊರ್‌ನ ಮುಕ್ಯಸ್ತರ್ ಅಂವನ ತಲೆಗೆ ಅಕ್ಕಿ ಹಾಕುವೆ. ಹಿಂಗೆ ಹಾಕಿದ ಅಕ್ಕಿನ ಬೇರೆ ಕೂಡಿಸಿ, ಅದರ ಬೇಸಿ ಹುಗ್ಗಿ ಮಾಡೋಕು. ಆ ಹುಗ್ಗಿನ ಒಂದ್ ಬಿಳಿ ಬಟ್ಟೆಲಿ ಗಂಟ್ ಮಾಡಿ, ಕುಂಟಿ ಹಿಡ್‌ದವಂಗೆ ಕೊಡೊಕು. ಅಂವ ಅದರ ತನ್ನ ಹೆಗಲ್‌ಲಿ ಇಸಿಕಂಡದೆ. ಜಗಲಿಲಿ ಆಗಲೆ ಇಸಿದ ಮಣೆ ಮೇಲೆ ಐದ್ ಎಲೆ, ಒಂದ್ ಅಡ್‌ಕೆ ಮತ್ತೆ ಅರ್‌ಸಿಣನ ಇಸಿ ಅದರ ಮೇಲೆ ಬಾಡ್‌ಸಿದ ಎಲೆನ ಮುಚ್ಚಿಸ್‌ವೆ. ಮನೆವೆಲ್ಲ ಅಪ್ರದಕ್ಷಿಣೆ ಆಗಿ ಏಳ್, ಅಲ್ಲರೆ ಒಂಬತ್ತ್ ಸುತ್ತು ಬಂದ್, ನಾರಾಯಣ ಹೇಳಿಕಂಡ್ ದೂಪೆನ ಹಕ್ಕಲೆ ಹೋದವೆ.

ದೂಪೆನ ಹಕ್ಕಲೆ ಹೋಕಾಕನ, ಇಬ್ಬೊರ್ ಬಿಳಿ ಬಾವುಟನ ಎದುರ್‌ಂದ ಹಿಡ್‌ದವೆ. ಎಲ್ಲ ಜೆನರ ಸಾಲ್‌ನ ಹಿಂದೆನು ಇಂತ ಬಾವುಟನ ಹಿಡ್‌ದಿರೋಕು. ಈ ಎರಡ್ ಬಾವುಟಗಳ ನಡುಲಿ ಕುಂಟಿ ಹಿಡ್‌ದಂವ ಚಂಡಿ ಬಟ್ಟೆ ಉಟ್ಟು, ಅನ್ನದ ಗಂಟ್‌ನ ಹೆಗಲ್‌ಲಿ ಇಸಿಕಂಡ್ ನಡ್‌ದದೆ.ನಡು ದಾರಿಲಿ ಹಿಂದೆ ಹೆಣ ಇಳ್ಸಿದ ಜಾಗೆಲಿ ಐದ್ ವೀಳ್ಯದೆಲೆ ಒಂದಡ್‌ಕೆ ಇಸಿ ಮುಂದೆ ಹೋದವೆ..

ಎಲ್ಲವೂ ದೂಪೆನ ಸುತ್ತ ಅರ್‌ದ ಚಂದ್ರಾಕಾರಲಿ ನಿತ್ತ್‌ಕಂಡವೆ. ಕುಂಟಿ ಹಿಡ್‌ದಂವ ಮೊಣಕಾಲ್‌ಲಿ ದೂಪೆಗೆದುರಾಗಿ ಕುದ್ದದೆ. ಆಗ ಅಂವ 'ಇರ್‌ಮುಡಿ' ಹಾಕಿತ್ ತೇಳ್‌ವೆ. ದೂಪೆ ಹಕ್ಕಲೆ ಬಾಕಾಕನ ಜೆನಂಗೆಲ್ಲ ಸತ್ತಂವಂಗೆ ಇಷ್ಟದ ತಿಂಡಿಗಳ ತಂದಿದ್ದವೆ. ಅದರೆಲ್ಲ ದೂಪೆ ಎದುರಕೆ ಇಸ್‌ವೆ. ಮತ್ತೆ ಹೊತ್ತ್‌ವ ಬತ್ತಿಗಳ ದೂಪೆನ ಸುತ್ತ ಇಸ್‌ವೆ. ಎಲ್ಲರ ಕೈಗೆ ಬೆಳ್ತಿಕಿನ ಕೊಟ್ಟ ಮೇಲೆ ಸತ್ತಂವನ ಕುಟುಂಬದವೆಲ್ಲ ಅಪ್ರದಕ್ಷಿಣೆ ಆಗಿ ದೂಪೆನ ಸುತ್ತ ಬಂದವೆ. ಹಾಂಗೆ ಸುತ್ತಿಕನ ಕೈಲಿರ್‌ವ ಅಕ್ಕಿನ ದೂಪೆಗೆ ಹಾಕಂಡ್ ನಾರಾಯಣ ನಾರಾಯಣ ತೇಳ್‌ವೆ. ಐದ್, ಏಳ್ ಅಲ್ಲರೆ ಒಂಬತ್ತ್ ಸುತ್ತು ಬಂದ ಮೇಲೆ ದೂಪೆನ ತೆಂಕಕೆ ನಿಲ್ಲಿಕನ ಕುಟುಂಬದ ಒಬ್ಬ ಹಿರಿಯ ಹಿಂಗೆ ಹೇಳ್‌ವೆ.

'ದೇವ್‌ರ್ ಹೇಂಗೆ ಬರ್‌ದನೋ ಹಾಂಗೆ ಬೊರ್‌ದಿದ್ದರೆ, ಮನೆ ಒಳ್ಳೆದ್ ಮಾಡೋಳರಿ. ಕುಟುಂಬದವರ ಲಾಯ್‌ಕ್‌ಲಿ ನೋಡಿಕಂಡಳರಿ, ಬೇಕಾದ ಬೊದ್ಕ್ ಬಂಗಾರ ಮಾಡಿ, ಮಕ್ಕಳಿಗೆ, ಮೊರಿಗಳಿಗೆ ಒಳ್‌ಸಿ ಹೋದರಿ, ಮನೆಗೆ ಬಂದವ್‌ಕೆ ಗಂಜಿ ಕೊಟ್ಟರಿ, ಎಣ್ಣೆ ಕೊಟ್ಟರಿ, ಬೇಡಿಕೆ ಬಂದವರ ಹಾಂಗೆ ಕಳ್‌ಸಿತ್ಲೆ. ಎಲ್ಲವೂ ಸೈ ತ ಹೇಳ್‌ವ ಹಾಂಗೆ ಬಾಳ್ವೆ ಮಾಡೋಳರಿ. ಇಂದ್‌ಗೆ ನೀವ್ ಈ ಮೊಣ್ಣ್‌ನ ಪುಣ್ಯ ತೀರ್‌ತ್, ಚಿಗರ್ ಕಾಯಾದೆ, ಕಾಯಿ ಹಣ್ಣಾದೆ, ಹಣ್ಣೆಲೆ ಬಿದ್ದದೆ. ನೀವೂ ಸಾ ಹಂಗೇ ಆದರಿ. ಇಂದ್ ನಾವ್ ನಿಮ್ಮ ಹೆಸರ್‌ಲಿ ನಾಲ್ಕೂಜೆನ ಸೇರಿಯೊಳೊ, ಒಂಬತ್ತನೇ ದಿನಕೆ ಇಲ್ಲಿ ಬಂದಳೋ. ಏನೇನೋ ಮಾಡೊಕೋ ಆದರೆಲ್ಲಾ ಕ್ರಮ ಪ್ರಕಾರ ಮಾಡಿಕಂಡ್ ಬಂದೊಳೊ. ಹಾಂಗಾಗಿ ನೀವು ಸಾಂತಿಲಿ, ಇರೊಕು. ಮುಂದೆನ ಜೆನ್ಮಲಿ, ಬಟ್ಟೆ ಒಗೆವಂಗೆ

ಕಲ್ಲಾಗಿ ಹುಟ್ಟಬಡಿ, ದಾರಿ ಕರೆ ಮರ ಆಬಡಿ, ಬಟ್ಟ್‌ರ ಮನೇಲಿ ಕೆಲ್‌ಸಕೆ ಸೇರ್‌ಬಡಿ, ಗಾಡಿನ ಎತ್ತಾಗಿ ಹುಟ್ಟ್‌ಬಡಿ ಇಂದ್ ನಾವ್ ಹಾಕಿದ ಬಾಳೆದಂಡ್‌ನ ಪಾಪುಲಿ, ನೂಲ್‌ನ ಕೈತಾಂಗ್‌ಲಿ, ಸೊರ್‌ಗಕೇ ಹೋಗಿ, ಸೊರ್‌ಗಕೇ ಹೋಗಿ, ಸೊರ್‌ಗಕೇ ಹೋಗಿ ಹೇಳ್‌ವವರ ಕಡೇ ಸಾಲ್‌ಲಿ ಸೊರ್‌ಗಕೇ ಹೋಗಿ ಹೇಳುದರ ಎಲ್ಲವೂ ಒಟ್ಟಿಗೆ ಹೇಳ್‌ವೆ. ಇಸ್ವರವರೆಗೆ ತಡ್‌ಕಂಡಿದ್ದ ಅಳ್ಗೇಲ್ ಈಗ ಕಟ್ಟೆ ಒಡ್‌ದದೆ. ಕೈಲಿದ್ದ ಅಕ್ಕಿನ ದೂಪೆಗೆ ಹಾಕಿ ಕೈಮುಗಿದು ಹಿಂದೆ ಬಂದವೆ. ಮನೆಗೆ ಹೋವ ಮುಂದೆ ಮೀದವೆ. ಮನೆ ಒಲೇಗೆ ಮೊಡ್‌ಯಾಳ ಇದ್ದ್, ಅಂವ ನೀರ್ ಸಿದ್‌ಕಿದ್ ಮೂಲಕ ಎಲ್ಲರ 'ಸುದ್ದ' ಮಾಡ್‌ದೆ. ಮತ್ತೆ ಮನೆ ಒಳೆಗೆ ಇರ್‌ವ ಕನ್ನಿಕಂಬದ ಬುಡಲಿ 'ಕೊಲೆಗಿಸ್‌ವ ಸಾಸ್ತ್‌ರ ನಡ್‌ದದೆ. 16 ಬಾಳೆ ಎಲೆನ ಇಸಿ ಅದ್‌ಕೆ ರೊಟ್ಟಿ ಹಾಕಿ, ಕೋಳಿಗೈಪುನ ಹಾಕ್‌ವೆ. ಆಗ ಪ್ರತಿ ಒಂದ್ ಬಾಳೆ ಎಲೆಗೂ ಐದ್ ವೀಳ್ಯದೆಲೆ ಮತ್ತೆ ಒಂದ್ ಅಡ್‌ಕೆ ಇಸೊಕು. ಕುಂಟಿ ಹಾಕಿದಂವ ಕೊಲೆನ ಕರ್‌ದ್ ಅದರ ತಕಣಕುತ ಕೈಮುಗ್‌ದ್ ಹೇಳ್‌ದೆ. ಅದಾಗಿ ಎಲ್ಲವೂ ವಾಪಾಸ್ ಹೋದವೆ.

ಸೇರ್‌ದ ಜೆನಂಗೆಲ್ಲ ಬೊಜ್ಜದ ಊಟ ಮಾಡ್‌ವೆ. ಹೆಚ್ಚಾಗಿ ನೆಂಟರಿಸ್ಟರ್ ಉಂಬಕೆ ಬಾಕನ ಏನಾರ್ ತಿಂಡಿ ತಂದಿದ್ದವೆ. ಅದರ ಎಲ್ಲವ್ ಹಂಚಿ ಕಂಡವೆ. ಹಿಂಗೆ ತಾದರ 'ಸರಕು ತಾದು' ತೇಳ್‌ವೆ. ಒಂದ್ ಸರಕ್‌ಲಿ ಮೂರ್ ಸೇರ್ ಅಕ್ಕಿ, ಕಡಬು ಮತ್ತೆ ತರಕಾರಿ ಇರ್‌ದು ರೂಡಿ,ಸುಮಾರ್ ಜೆನ ಹೀಂಗೆ ತಾದರ್‌ಂದ ಸತ್ತವನ ಕುಟುಂಬದವ್‌ಕೆ ಜಂಬರ ನಡ್‌ಸಿಕೆ ತೂಕ ಆದುಲೆ.ಬೊಜ್ಜದ ಊಟಲಿ ಕಡುಬು ಪ್ರದಾನ ತಿಂಡಿ, ಬಾಳೆ ಕಾಯಿನ ಬೇಸಿ ಮಾಡ್‌ದ ಪಲ್ಯ ಇದ್ದೇ ಇರೋಕು. ಒಳ್‌ದಂಗೆ ಅವರವರ ಆರ್‌ತಿಕ ಪರಿಸ್ತಿತಿ ನೋಡಿಕಂಡ್, ಸ್ಥೀ ಊಟ ಅಲ್ಲರೆ ಮಾಸದೂಟ ಎರ್‌ಡು ಮಾಡ್‌ವೆ. ಸುಳ್ಯ ಮತೆ ಕೊಡಗ್‌ನ ಗೌಡರ್‌ಲಿ ಮಾಸದೂಟವೇ ಹೆಚ್ಚಿದ್ದದೆ.

**ಹದ್‌ನಾರ್ ಕೊಲೆಗ :** ಸತ್ತ ಮೇಲೆ ಕುಟುಂಬದ ಮಾಯಕದ ಸದಸ್ಯ ಆಗಿದ್ ಮುಂದುವರಿವ ಸಕ್ತಿನೆ 'ಕೊಲೆ'. ಗೌಡ್‌ರ್ ಹಿಂಗೆ ಅಸ್ತಿತ್ವಲಿರ್‌ವ ಕೊಲೆಗಳ ಲೆಕ್ಕ ಒಟ್ಟು ಹದ್‌ನಾರ್ ತೇಳಿ ನೆನ್‌ಸುವೆ. ಈ ಕೊಲೆಗಳಿಗೆ 'ಕಾರ್‌ನೂರ್'ಗ ಅಲ್ಲರೆ 'ಹಿರಿಯರ್' ತೇಳಿ ಹೇಳ್‌ವೆ.ಹದ್‌ನಾರ್ ಕೊಲೆಗಳ ಅಸ್ತಿತ್ವದ ಕಲ್ಪನೆ ಬಟ್ರ್‌ಗಳ್‌ಲಿ ಬುಟ್ಟ್ ಬೇರೆಲ್ಲವರ್‌ಲಿ ಇರುವಂಗೆ ಕಂಡದೆ. ಬಟ್ರ್‌ಗಳ್‌ಲಿ ಕಂಡ್ ಬಾವ ಪಿತೃ ದೇವತೆಗಳ ಸಂಕ್ಯೆ ಮೂರ್. ವಸು, ರುದ್ರ, ಆದಿತ್ಯರ್ ತೇಳಿ ಇವರ ಗುರ್‌ತ್‌ಸ್‌ವೆ. ಇವ್ ಕ್ರಮಲಿ ಮೇಲೆನ ಮೂರ್ ತಲೆಮಾರ್‌ನವ್‌ತ ಹೇಳ್‌ವೆ. 'ಹೊಸದಾಗಿ ಸತ್ತವರ ಮೂರ್ ಪಿತೃ ದೇವತೆಗಳೊಟ್ಟಿಗೆ ಕೂಡ್‌ಸಿ, ಬಾರೀ ಹಿರಿಯರ ಕೈ ಬುಟ್ಟು, ಹೊಸದಾಗಿ ತೀರ್‌ದವರ ವಸು ತೇಳಿ ಹೇಳ್‌ವೆ. ಹಾಂಗೆ ಮತ್ತಿಬ್ಬರ್‌ಗೆ ರುದ್ರ ಮತ್ತೆ ಆದಿತ್ಯ ಆಗಿ ಜಾಗೆಲಿ ಏರಿಕೆ ಆದೆ. 'ಸಪಿಂಡೀಕರಣ ಶ್ರಾದ್ದ' ತೇಳ್‌ವ ವಿದಿ ಇದರಾಂಗೆ ಪಿತೃ ದೇವತೆಗಳ ಲೆಕ್ಕ ಯಾಗೋಳು ಮೂರರ್‌ಲಿ ಇರ್‌ವಂಗೆ ಮಾಡ್ದೆ. ಸತ್ತವರೊಟ್ಟಿಗೆ ಸೇರ್‌ಸ್‌ವ ಕ್ರಮ ಮಾತ್ರ ಎರಡೂ ಕಡೆ ಸಾಮಾನ್ಯ ಕಂಡರೆನು ಒಟ್ಟು ಪಿತೃಗಳ ಸಂಕ್ಯೆಲಿ ಮಾತ್‌ರ ವೆತ್ಯಾಸ ಕಂಡ್ ಬಂದದೆ. ಈ 'ಹದ್‌ನಾರ್' ಸಂಕೆನ ಮಹತ್ವನ ಮತ್ತೆ ಅದ್‌ರ ಔಚಿತ್ಯನ ವಿವರ್‌ಸುದು ಕಸ್ಟ, ಸತ್ತಂವನ 'ಕೊಲೆ' ಅಸ್ತಿತ್ವಲಿರ್‌ದು ಹದ್‌ನಾರ್ ದಿನಗಳ ಮುಟ್ಟ. ಹಂಗೆತೇಳಿರೆ ಹದಿನೈದ್ ಇಡಿ ದಿನಗ ಮತ್ತೆ ಹದ್‌ನಾರ್‌ನೇ ದಿನಂದ ಅದರ ಅಸ್ತಿತ್ವ ಅಳ್ದ್ ಹೋದೆತ. ಕುಟುಂಬಲಿ ವಾಸ ಮಾಡ್‌ವ ಹಿರಿ ಕೊಲೆಗಳ ಒಟ್ಟ್ ಸಂಕ್ಯೆನೂ ಹದ್‌ನಾರೇ. ಬವುಸ ಈ ಸಂಕ್ಯೆ ಚಂದ್ರನ ಹದ್‌ನೈದ್ ದಿನಗಳ ಮುಟ್ಟ ವೃದ್ದಿ ಇಲ್ಲೆ ಕ್ಷಯನ ಆದ್‌ರ್‌ಸಿ ಬೆರ್‌ಸಿಕಂಡ್ ಬಂದ ಸೈದ್ಧಾಂತಿಕ ಕಲ್ಪನೆ' ತ ಕಂಡದೆ.

ಚಂದ್ರನ ಪೂರ್ಣ ವೃದ್ದಿ ಪೂರ್ಣಕ್ಷಯನ ಹದ್‌ನೈದ್ ದಿನಂಗಳ ಮುಟ್ಟ ಒಂದ್ ಇಡಿ ಗಟಕತೇಳಿ ನೆನ್‌ಸಿರೆ, ಆಗ ಹದ್‌ನಾರನೆ ದಿನ ಹೊಸ್ತಾಗಿ, ಹಳೆದಕ್ಕಿಂತ ಇಡೀ ಬೇರೆನೆ ಆದ ಮತ್ತೆ ಪ್ರತ್ಯೇಕಿತ ಕಾಲ ಆಗಿ ಬುಟ್ಟದೆ. ಕಾಲದ ಬಗೆಗಣ ಈ ಸೈದ್ಧಾಂತಿಕ ಕಲ್ಪನೆನ ಕೊಲೆ ಹದ್‌ನಾರ್ ದಿನಗಳ ಅಸ್ತಿತ್ವನ ಆಗು ಮಾಡ್‌ದೆ ಮತ್ತೆ ಮದ್ಯಂತರ ಜಗತ್ತ್‌ಗೆ ಸೀಮಾರೇಕೆಗಳ ಹದ್‌ನಾರ್ ದಿನಗಳಿಗೆ ಕಟ್ಟಿದೆ. ಚಂದ್ರನ ಆದರ್‌ಸಿ ಕಾಲದ ಕಲ್ಪನೆನ ರೂಡ್‌ಸಿಕಂಡ್ ಬಂದ ಜೆನಸಮುದಾಯಗಳ್‌ಲಿ ಹದಿನಾರಕೆ ಪ್ರಾಮುಕ್ಯತೆ ಬಾಕೆ, ಚಂದ್ರನ ವೃದ್ದಿ ಮತ್ತೆ ಕ್ಷಯಗಳೇ ಕಾರಣ ಆಗುಟು. ಈ ಅರ್‌ತಲಿ ಬಟ್ರ್‌ಗಳ್‌ಲಿ ಇರ್‌ವ ಪಿತೃಕಲ್ಪನೆ ಮತ್ತೆ ಗೌಡ್ರ್‌ಗಳ್‌ಲಿ ಇರ್‌ವ 'ಕೊಲೆ' ನ ಕಲ್ಪನೆನ ಬೇರೆ ಬೇರೆತ ಅರ್‌ತಮಾಡಿಕಂಬ ಅಗತ್ಯ ಉಟ್ಟು.

**ಹದ್‌ನಾರರ ಕೊಲೆಗೆ ಇಸುದು :** ತೀರಿ ಹೋದವರ 16ನೇ ದಿನಕೆ 'ಕೊಲೆಗಿಸ್‌ವ ಕ್ರಮ ಮಾಡ್‌ವೆ. ಈ ದಿನನೂ ಕನ್ನಿಕಂಬದೆದುರುಕೆ ಒಂದ್ ಮಣೆ ಹಾಕಿ, ಅದರ ಎದುರಕೆ 16 ಕೊಡಿ ಬಾಳೆಲೆಗಳ ಹಾಕ್‌ವೆ ಈ ಎಲೆಗಳ ಸಾಲ್‌ಂದ ಚೂರ್ ದೂರಲಿ ಇನ್ನೊಂದು ಬಾಳೆಲೆನೂ ಇಸ್‌ವೆ. ಈ ಎಲ್ಲಾ ಬಾಳೆಲೆಗಳಿಗೆ ಕೋಳಿ ಮತ್ತೆ ಕಡುಬು ಅಲ್ಲರೆ ರೊಟ್ಟಿ ಹಾಕೋಕು. ಎಲ್ಲವೂ ಒಬ್ಬೊಬ್ಬ ಆಗಿ ಬಂದ್ ಇದ್‌ಕೆ ಕೈಮುಗ್‌ದು ಕೊಲೆನ ಕರ್‌ದ್ 'ಊಟ ತಕನಿ) ತ ಪ್ರಾರ್‌ತನೆ ಮಾಡಿಕಂಡವೆ. ಎಲ್ಲವೂ ಕೈ ಮುಗ್‌ದಾದ ಮೇಲೆ, ಕ್ರಿಯೆಗೆ ನಿತ್ತಂವ, 16 ಬಾಳೆಲೆಂದ ಒಂದ್ ಎಲೆನ ಮಾತ್ರ ಹಜ್ಜಿ ಮುಂದೆಗೆ ಜಾರ್‌ಸಿ ಇಸಿದ್ ಮತ್ತೆ ಬೇರೆ ಇದ್ದ ಇನ್ನೊಂದು ಬಾಳೆಲೆನ 16 ಬಾಳೆಲೆಗಳೊಟ್ಟಿಗೆ ಸೇರ್‌ಸಿದೆ. ಮತ್ತೆ ಎಲ್ಲವೂ ಊಟ ಮಾಡ್‌ವೆ. ಈ ದಿನ ಉಂಬಕೆ ಹಂದಿ ಮಾಸ ಅಲ್ಲರೆ ಕೋಳಿ ಮಾಸ ಇದ್ದೇ ಇದ್ದದೆ. ಸತ್ತ 16ನೇ ದಿನ ನಡೆವ ಕಾರ್‌ಯಕ್ರಮದೊಟ್ಟಿಗೆ ಮುಕ್ಯವಾದ ಬೊಜ್ಜದಾಚರನೆ ಮುಗ್‌ದದೆ.





**ಅವುಲು ಹಾಕುದು :** ಇದ್ ಸತ್ತಂವಂಗೆ ಮಾಡ್‌ವ ಕಡೆನ ಕ್ರಮ. ದೀಪಾವಳಿನ ದಿನ, ಕನ್ನಿಕಂಬದೆದುರ್‌ಲಿ ಮಣೆ ಇಸಿ, ಚೆಂಬು ನೀರಿಸಿ, ಬಾಳೆಲೆಗೆ ಅರಳ್ ಹಾಕಿ, ಬಾಳೆ ಹಣ್ಣ್ ಚೊಲ್ಲಿಸಿ, ದೀಪ ಹೊತ್ತುಸಿ ಕೈ ಮುಗಿದು. ಇದ್‌ಕೆ ಕುಟುಂಬದವೆಲ್ಲ ಒಟ್ಟು ಸೇರ್‌ವೆ. ಸತ್ತವಂನ ಹೆಸ್‌ರ್‌ಲು ಒಟ್ಟಿಗೆ ಊಟ ಮಾಡ್‌ವೆ. ಇದರೊಟ್ಟಿಗೆ ಸತ್ತವಂಗೆ ಸಮ್ಮಂದ ಪಟ್ಟ ಎಲ್ಲ ಕ್ರಿಯೆಗ ಸ ಮುಗ್‌ದದೆ. ಹಿಂಗೆ 'ಸಾವು' ಗೌಡರ ಬೊದ್‌ಕ್‌ನ ಬಾರೀ ಮುಕ್ಯ ಕ್ರಮಗಳ್‌ಲಿ ಒಂದಾಗುಟು. ಒಳ್ಳ ಕೆಲಸ ಮಾಡಿರೆ, ಸತ್ತಂವ ಸೊರ್‌ಗಕೆ ಹೋದೆ ತೇಳಿ ಗೌಡ್‌ರ್‌ಗ ನಂಬುವೆ. ಬಾಯಿಗೆ ನೀರಿಲ್ಲದೆ ಸತ್ತರೆ, ದಾರಿಲಿ ಅನಾತಾಗಿ ಸತ್ತರೆ, ಯಾರಾದರ್ ಪೆಟ್ಟು ಕೊಟ್ಟು ಕೊಂದರೆ, ಒಟ್ಟುಲಿ ದುರ್‌ಮರಣಕ್ಕೆ ಈಡಾದರೆ, ಅಂವ 'ಕೊಲೆ' ಆಗಿದ್ ಬೇರೆ ಜಿವಗಳಿಗೆ ಉಪದ್ರ ಕೊಟ್ಟದೆಂತ ಜೆನಂಗ ಹೇಳ್‌ವೆ. ಸತ್ತೊವ್ ಮನೆ ಒಳೆಗೆ ಇದ್ದ್‌ಕಂಡ್ ಇಡೀ ಮನೆನ ಕಾಪಾಡ್‌ವೆ ತೇಳುವ ನಂಬಿಕೆನು ಉಟ್ಟು. ಮನೆ ಒಳೆಗಿರ್‌ವ ಕುಟುಂಬದ 16 ಕೊಲೆಗ ಬೇರೆ ಕುಟುಂಬದ 'ಕೊಲೆ'ಗಳ ಅವರ ಮನೆನ ಒಳೆಗೆ ಬಾಕೆ ಬುಡ್‌ದುಲೆ ತೇಳ್‌ವ ನಂಬಿಕೆ ಗಟ್ಟಿ ಆಗಿದ್ ಉಟ್ಟ್. ಮನೆ ಒಳೆಗೆ ಇರ್‌ವ ಇಂತ 16 'ಕೊಲೆ'ಗಳ ಮನೆವು ಕುಟುಂಬದ ಸದಸ್ಯರ್ ಆಗಾಗ ನೆಂಪುಸಿ ಕಂಡವೆ. ಮನೆಲಿ ವಿಸೇಸ ತಿಂಡಿಗಳ್‌ನ ಮಾಡಿಕನ, ಬಾಳೆ ಎಲೆಲಿ ಒಂದ್ ಚೂರು ಹಾಕಿ, 'ಕೊಲೆ'ಗಳಿಗೆ ತೇಳಿ ಎತ್ತರದ ಜಾಗೆಲಿ ಇಸ್‌ವ ಕ್ರಮ ಉಟ್ಟ್. ಸತ್ತವನ ಮೇಲೆ 'ಕೊಲೆ' ಆಗಾಗ ಜೀವಿಗಳ ಮೈಮೇಲೆ ಬಾದರ ಗೌಡರ್‌ಗ ಒಪ್ಪಿಕಂಡವೆ.ಅವ್‌ಕೆ ಬಾರೀ ಪ್ರೀತಿ ಇರ್‌ವವರ ಮೈಲಿ ಈ 'ಕೊಲೆ'ಗ ಕಂಡವೆತೇಳಿ ಗೌಡ್‌ರ್‌ಗ ಹೇಳ್‌ವೆ.

ಮನೆಲಿರ್‌ವ ಸತ್ತಂವನ ಸಮ್ಮಂದದವರ ಮೈಮೇಲೆ, ಇದ್ದಕ್ಕಿದ್ದಂಗೆ ಮೂರರ್‌ಂದ ಐದ್ ಇಂಚಿ ಉದ್ದದ ಮೂರ್ ಗೆರೆಗ ಕಂಡರೆ ಆಗ 'ಕೊಲೆ ಪರ್‌ಂಕಿದ್" (ಕೊಲೆ ಪರಚುವುದು) ತೇಳ್‌ವೆ. ಮನೆಲಿ ಜಂಬರದ ದಿನಲಿ, ಸಾಮಾನ್ಯ ಆಗಿ ಮನೆನ ಹೆಣ್‌ಮಕ್ಕಳಿಗೆ ಹಿಂಗಾದೆ. 'ಕೊಲೆ ಪರ್‌ಕಿ ಎಚ್ಚರ ಕೊಟ್ಟುಟು" ತೇಳಿ ನಂಬುವೆ. ರಾತ್ರಿ ನಿದ್ರೆ ಮಾಡಿಕಾಕನ ಅಲ್ಲರೆ ಸ್ನಾನ ಮಾಡ್‌ವ ಹೊತ್ತುಲಿ ಇದ್ ನಡ್‌ದದೆ ತೇಳಿ ಹೇಳ್‌ವೆ.

ಆತ್ಮಹತ್ಯೆ ಮಾಡಿಕೊಂಡವ್‌ಕೆ ಮೇಲೆ ಹೇಳ್‌ದ ಎಲ್ಲಾ ಕ್ರಿಯೆಗ ನಡ್ದರೂ, ಹಾಂಗೆ ಸತ್ತವರ ಬಗ್ಗೆ ಗೌಡರ್‌ಗೆ ಬಾರಿ ಹೆದ್‌ರಿಕೆ ಇದ್ದದೆ. ಸತ್ತಂವ 'ರಣ'ಆದೆ ಅಲ್ಲರೆ ಪೀಡೆ ಆಗಿ ಉಪದ್ರ ಕೊಟ್ಟದೆ ತೇಳಿ ಅವು ನೆನ್‌ಸುವೆ. ಇದರ ತಡಿಯಕೆ ಮಾಂತ್ರಿಕರ್ ಮಂತರ್‌ಸಿ ಕೊಡ್‌ವ ಕಾಯಿ ಅಲ್ಲರೆ ಬಸ್ಮನ ಮನೆನ ನಿರ್‌ದಿಸ್ಟ ಆದ ಜಾಗೆಲಿ ಕಟ್ಟಿಸಿದು ಉಟ್ಟು. ಸಾಮಾನ್ಯ ಆಗಿ ಹೆಣ ಮಲ್‌ಗಿಸಿದ ಜಾಗೆಲಿ ಸುಮಾರ್ ಕಾಲ ಯಾರೂ ಅಡ್ಡಾಡುದುಲೆ. ಸತ್ತಂವ ಬಳ್‌ಸತಿದ್ದ ಸಾಮಾನ್‌ಗಳ, ಅಂವ ಮಲ್‌ಗ್‌ತ್ತಿದ್ದ ಜಾಗೆನ ಪೂರ ಹೆದರಿಕೆಂದಲೇ ಕಂಡವೆ. ಸ್ರೀಮಂತರ್ ಸತ್ತರೆ, ಅವರ ಹೆಣನ ಹೊತ್ತ್‌ಸಿದ ಜಾಗಲಿ 'ಗುರ್ಜಿ' ಕಟ್ಟುವೆ. ಅನ್‌ಕೂಲಕೆ ತಕ್ಕಾಂಗೆ ಅದರ ರಚನೆ ಇದ್ದದೆ. ಗುರ್ಜಿ ಕಟ್ಟಿದ ಜಾಗೆಲಿ ಜೆನರ ಓಡಾಟ ಕಡಿಮೆ ಇದ್ದದೆ. ಬೊಸ್‌ರಿ ಸತ್ತರೆ ಅದರ ಸುಟ್ಟ ಜಾಗೆಲಿ ಒಂದ್ ಬಾಳೆ ನೆಟ್ಟವೆ. ಆ ಬಾಳೆ ಮುಂದೆ ಗೊನೆ ಹಾಕಿರೆ, ಹೆಂಗಸ್ ಹೆತ್ತತ್‌ಂತ ಹೇಳ್‌ವೆ. ಸಾವ್‌ನ ಹೊತ್ತುಲಿ ಕುಟುಂಬದವೆಲ್ಲ ತಮ್ಮ ಬೇದಗಳ ಮರ್‌ತ್ ಒಂದಾದವೆ. ವರ್‌ಸಾನುಗಟ್ಟ್‌ಲೆ ತೀರ್‌ಮಾನಗೆಲ್ಲ ಜಗಳಗೆಲ್ಲ ಹೆಣದೆದುರ ತೀರ್‌ಮಾನ ಆದುನು ಉಟ್ಟು. (ಪಿ.ಬಿ.)

**ಸುಡು ಸುದ್ದ :** ಯಾರಾರ್ ಗೌಡ ಜಾತಿ ಬುಟ್ಟು ಹೊರಗೆ ಹೋಗಿ, ಅಂವ ಮತ್ತೆ ಜಾತಿಗೆ ತಿರ್‌ಗಿ ಬಾಕೆ 'ಸುಡು ಸುದ್ದ' ಆಕು. ಇದ್ ಕಟ್ಟೆಮನೆ ಮೇಲ್ವಿಚಾರಿಕೆಲಿ ನಡ್ದದೆ. ಜಾತಿಗೆ ಒಪಾಸ್ ಸೇರಕಾದಂವ ಊರು ಗೌಡರ್ ಅಂವನ ಆರಿಕೆ ಮಾಡಿಕಂಕು. ಅದ್ ಕಟ್ಟೆಮನೆನ ಮುಕಾಂತರ ಸ್ರಂಗೇರಿ ಪೀಟಕೆ ಹೋದೆ. ಅವು ಒಪ್ಪಿರೆ ಮತ್ತೆ ಊರ್ ಗೌಡನೇ ಇದರ ನೆರವೇರ್‌ಸಿದೆ. ಕಟ್ಟೆಮನೆಂದ ತಂದ ಮುದ್ರೆನ (ಉರ್‌ಂಟುನ ಕಬ್ಬಿಣದ ಬಳೆ) ಕೆಂಪಾವಂಗೆ ಕಾಸಿ ಅದರ ಆ ಮೊಯಿಂಸನ ಸರ್‌ರದ ಯಾದಾರ್ ಬಾಗಕ್ಕೆ ಒತ್ತಿ, ಅಲ್ಲಿ ಗುರ್‌ತ ಮೂಡುವಂಗೆ ಮಾಡ್‌ವೆ. ಸುಮಾರ್ ಮೂರ್‌ರಂದ ಏಳ್ ಮುದ್ರೆ ಒತ್ತುವ ಕ್ರಮ ಉಟ್ಟು.

ಅರ್‌ದ ಚಂದ್ರನಂಗೆ ಬೊಗ್ಗ್‌ಸಿ(ಕಮಾನ್) ನೆಲಕೆ ಊರ್‌ದ ಬೆದ್‌ರ್‌ನ ಕಡ್ಡಿಗಳ ಮೇಲೆ ಬಿಳ್‌ಗ್‌ಲ್ ಹಾಕಿ ಅದ್‌ಕೆ ಕಿಚ್ಚಿ ಕೊಟ್ಟವೆ. ಅದ್ ಹೊತ್ತಿಕಂಡ್ ಇರ್‌ಕನ ಅದರೊಳಗೆ ಜಾತಿ ಬುಟ್ಟಂವ ಓಡೊಕು. ಒಟ್ಟು ಏಳ್ ಕಮಾನ್‌ಗಳ ಹುಕ್ಕ್ ಹೊರಗೆಬಂದರೆ, ಅಂವನ ಜಾತಿಗೆ ಸೇರ್‌ಸಿಕಂಡವೆ. ಅಂವನ ಸುಟ್ಟು ಹೊಸ್ತಾಗಿ ಮಾಡ್ಯೊಲೊ ತ ಜೆನ ನೆನ್‌ಸ್‌ವೆ ಮತ್ತೆ ನಂಬುವೆ. (ಪಿ.ಬಿ.)

**ಸೂತಕ :** ಗೌಡ ಕುಟುಂಬಗ ಈಗನ ಕಾನೂನುಗ ಬದಲಾವಣೆ ಆದ ಕಾರಣ ಹಿಂದೆನಂಗೆ ಕೂಡ್‌ಕುಟ್‌ಂಬಗಾಗಿ ಒಳಿಯದಿದ್ದರೂ ಸತ್ತಾಕನ ಹೆತ್ತಾಕನ ಬಾವ ಸೂತಕತೇಳ್ದು ಪ್ರತಿಯೊಬ್ಬ ಕುಟುಂಬದ ಸದಸ್ಯಂಗೆ ಅಂವ ತನ್ನ ಹುಟ್ಟೂರ್‌ಲಿಯೇ ಇರಲಿ ಬೇರೆ ಊರ್‌ಲೆ ಇರಲಿ ಸೂತಕಕೆ ಜಾಗೆಗಳ ಗಡಿ ಇಲ್ಲೆ. ಸೂತಕದ ಹೊತ್ತುಲಿ ಸೂತಕದ ವಿಸಯ ಗೊತ್ತಾದರೆ ದೇಸ್ತಾನಗಳಿಗಾಗಲೀ ಅಲ್ಲೊ ಬೇರೆ ಸುಬಕಾರ್‌ಯಗಳಿಗೆ ಹೋದಕೆ ನಿಸೇದ ಉಟ್ಟು. ಅಲ್ಲದೆ ಕುಟುಂಬಲಿ ಯಾರಾರ್ ಸತ್ತರೆ ಸೂತಕ ಕಳಿವರೆಗೆ ಯಾವ ಸುಬಕಾರ್‌ಯನೂ ಮಾಡಿಕಾಗದ್. (ಡಿ.ಪಿ.)

**ಸುಬ್ರಾಯ ಚೊಕ್ಕಾಡಿ :** ಸುಬ್ರಾಯ ಚೊಕ್ಕಾಡಿ (ಜನನ:ಜೂನ್ 29, 1940) ದಕ್ಷಿಣ ಕನ್ನಡದ ಸುಳ್ಯ ತಾಲೂಕ್‌ನ ಚೊಕ್ಕಾಡಿಯವು. ತಂದೆ ಅಜ್ಜನಗದ್ದೆ ಗಣಪಯ್ಯ, ಯಕ್ಷಗಾನ ಬಾಗವತರ್. ಅಯ್ಯೆ ಸುಬ್ಬಮ್ಮ. ಗಣಪಯ್ಯ ಬಾಗವತರ್ ಜೀವನಾದಾರಕೆ ಮನೆಮನೆಗೆ ಹೋಕಂಡ್ ಪುಸ್ತಕ ಮಾರಾಟ ಮಾಡ್‌ವ ಕಾರ್‌ಯನ ಮಾಡತಿದ್ದೊ. ಅಪ್ಪನ ಹೆಗ್‌ಲಿಗೆ ಹೆಗ್‌ಲ್ ಕೊಡಿಕೆ ಸುಬ್ರಾಯ ಚೊಕ್ಕಾಡಿಯವು ತಾವೂ ಪುಸ್ತಕಗಳ ಹೊತ್ತ್‌ಕೊಂಡ್ ಮಾರಾಟ ಮಾಡತತಿದ್ದೊ, ಅಲ್ಲದೇ ಕೈಲಿದ್ದ ಜ್ಞಾನದ ಬಾಗ್‌ಲ್‌ನ ತೆರ್‌ಕಂಡ್ ಅದರೊಳಗ್‌ನಬೊಳ್‌ಪುಗೆ ಮಾರ್ ಹೋದವು. ಓದು ಮತ್ತೆ ಆಸಕ್ತಿನ ಒಟ್ಟಿಗೆ ಬಾಗವತಿಕೆನ ಸೊಲ್ಲುಗ ಕೆಬಿಲಿ



ಗುಂಯಿಗುಟ್ಟಿಕಂಡ್ ಸುಬ್ರಾಯ ಚೊಕ್ಕಾಡಿಯವರ್‌ಲಿ ಕವಿ ಹುಟ್ಟಿತ್. ಅಡಿಗರ 'ಚಂಡೆಮದ್ದಲೆ'ನ ಪರಿಣಾಮಕಾರಿ ದೊನಿ, ಕವಿಮನಕೆ ಹೊಸ ದಿಕ್ಕ್‌ಗೆ ಹಾರಿಕೆ ಸಕ್ತಿ ಆತ್. ಕೆಲ್‌ಸಲಿ ಕನ್ನಡ ಮಾಸ್ಟ್ರ್, ಆಸಕ್ತಿಲಿ ಕವಿ, ಬರಹಗಾರ. ನವೋದಯ–ನವ್ಯ–ನವ್ಯೋತ್ತರ ಸೈಲಿನ ಸಾಹಿತ್ಯ ಚಳುವಳಿನ ನೆಲೆಲಿ ಬರ್‌ದವು. ಮೈಸೂರು ಮುಕ್ತ ವಿಶ್ವವಿದ್ಯಾನಿಲಯಂದ ಕನ್ನಡ ಎಂ.ಎ. ಪದವಿ ಪಡ್‌ದೊ..

'ವಸಂತ ಸಾಹಿತ್ಯ ಮಾಲೆ' ಪ್ರಕಾಶನ ಸಂಸ್ಥೆಂದ ಸುರಾಗಿ 'ಸುಮನಸಾ ವಿಚಾರ ವೇದಿಕೆ'ನ ಲಿ ಸಾಹಿತ್ಯ ಬೀಜನ ಬಿತ್ತಿದ ಕವಿ, ವಿಮರ್‌ಸಕರ ಹೊಸ ಪೀಳಿಗೆನ ಬೆಳ್‌ಸಿದವು. ಕವಿ ಚೊಕ್ಕಾಡಿಯವರ ಸುರೂನ ಕವನ ಸಂಕಲನ 'ತೆರೆ'ಗೆ ಗೋಪಾಲಕೃಷ್ಣ ಅಡಿಗರ ಮುನ್ನುಡಿಲಿ 1970ರ್‌ಲಿ ಪ್ರಕಟ ಆತ್. 1978ರ್‌ಲಿ ಬೆಟ್ಟವೇರಿದ ಮೇಲೆ, 1983ರ್‌ಲಿ ನಿಮ್ಮವೂ ಇರಬಹುದು, 1990ರ್‌ಲಿ ಮೊನ್ನೆ ಸಿಕ್ಕವರು, 1996ರ್‌ಲಿ ಇದರ್‌ಲಿ ಅದು, 1998ರ್‌ಲಿ ಹಾಡಿನ ಲೋಕ(ಗೀತೆಗಳು), 2000 ರ್‌ಲಿ ಇನ್ನೊಂದು ಬೆಳಗು, 2003ರ್‌ಲಿ ಬಂಗಾರದ ಹಕ್ಕಿ(ಗೀತೆಗಳು), 2004ರ್‌ಲಿ ಮಾಗಿಯ ಕೋಗಿಲೆ, 2010ರ್‌ಲಿ ಹಳದಿ ಬೆಳಕಿನ ಸಂಜೆ, 2010ರ್‌ಲಿ ಚೊಕ್ಕಾಡಿಯ ಹಕ್ಕಿಗಳು(ಸಮಗ್ರ), 2015ರ್‌ಲಿ ಬಾವಲೋಕ (ಗೀತೆಗ), –2020ರ್‌ಲಿ ಕಲ್ಲುಮಂಟಪ, 2019ರ್‌ಲಿ ಕನ್ನಡ ಕವಿಕಾವ್ಯ ಕುಸುಮ–36 (ಆಯ್ದು ಕವಿತೆಗ) – 13 ಕವನ ಸಂಕಲನಗಳು ಪ್ರಕಟಾತ್. 1990ರ್‌ಲಿ ಸಂತೆ ಮನೆಯೆಂಬ ಕಾದಂಬರಿ, 1974ರ್‌ಲಿ ಬೇರುಗಳು ಕಥಾಸಂಕಲನ, 1977ರ್‌ಲಿ ಕಾವ್ಯ ಸಮೀಕ್ಷೆ ವಿಮರ್ಶೆ ಕೃತಿ, 2000ದಲ್ಲಿ ಕೃತಿಶೋಧ, 2010ರ್‌ಲಿ ಸಮಾಲೋಕ, 1901–1979ರ್‌ಲಿ ದ.ಕ ಕಾವ್ಯ, ಕಾವ್ಯ ಸೃಷ್ಟಿಯ ಸ್ವರೂಪ, ಚೂಡಾಮಣಿ, ಹೆಜ್ಜೆ ಗುರುತು, ಧಾತು– 2019ರ್‌ಲಿಅವಲೋಕನ ,2019ರ್‌ಲಿ ಎಚ್ಚೆಸ್ವಿ ಕಾವ್ಯ ನೋಟ – ಹೀಂಗೆ ಏಳ್ ಸಂಪಾದನಾ ಕೃತಿಗ, –2006ರ್‌ಲಿ ಅವರ ಬಗ್ಗೆ ಮುಕ್ತಹಂಸಂತ ಅಬಿನಂದನಾ ಪುಸ್ತಕ, 2021ರ್‌ಲಿ ಕಾಲದೊಂದೊಂದೇ ಹನಿಂತ ಅನುಬವ ಕತನ ಪ್ರಕಟ ಆತ್ ಅವು ಬರ್‌ದ ಕವಿತೆಗಳ ಸಿ.ಡಿ, ಕ್ಯಾಸೆಟ್‌ಗ – ಕೃಷ್ಣ, ಅನುರಾಗ, ಸಲ್ಲಾಪ, ನೂಪುರ ಹುಣ್ಣಿಮೆ, ಇಂದ್ರಚಾಪ, ವನಸಿರಿ, ಸಿರಿಗನ್ನಡ ದೀಪ, ಬಾವ ಚಿತ್ತಾರ, ನಿನ್ನ ಬಾಂದಳದಂತೆ ಹೆಸರ್‌ಲಿ ಪ್ರಕಟ ಆತ್.

1983ರ್‌ಲಿ ವರ್ಧಮಾನ ಉದಯೋನ್ಮುಖ ಪ್ರಶಸ್ತಿ,1996ರ್‌ಲಿ ಉತ್ತಮ ಶಿಕ್ಷಕ ಪ್ರಶಸ್ತಿ, 1998ರ್‌ಲಿ ಮುದ್ದಣ ಕಾವ್ಯ ಪ್ರಶಸ್ತಿ, 1997ರ್‌ಲಿ ಸಾರಂಗ ಮಠ ಪ್ರಶಸ್ತಿ, 2001ರ್‌ಲಿ ಸಾಹಿತ್ಯ ಕಲಾನಿಧಿ ಪ್ರಶಸ್ ತಿ, 2008ರ್‌ಲಿ ಸಂದೇಶ ಸಾಹಿತ್ಯ ಪ್ರಶಸ್ತಿ, 2010ರ್‌ಲಿ ಕರ್ನಾಟಕಶ್ರೀ ಪ್ರಶಸ್ತಿ 2011ರ್‌ಲಿ ಮುಳಿಯ ತಿಮ್ಮಪ್ಪಯ್ಯ ಪ್ರಶಸ್ತಿ, 2012ರ್‌ಲಿ ಲಕ್ಷ್ಮರಿ ಪ್ರಶಸ್ತಿ, 2013ರ್‌ಲಿ ಕೆವಿಜಿ ಸಾಹಿತ್ಯ ಪ್ರಶಸ್ತಿ, 2014ರ್‌ಲಿ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ, 2015ರ್‌ಲಿ ಕಾವ್ಯಶ್ರೀ ಪ್ರಶಸ್ತಿ, 2016ರ್‌ಲಿ ಆಳ್ವಾಸ್ ನುಡಿಸಿರಿ ಪ್ರಶಸ್ತಿ, 2016ರ್‌ಲಿ ನಿರಂಜನ ಪ್ರಶಸ್ತಿ, 2018ರ್‌ಲಿ ಶಿವರಾಮ ಕಾರಂತ ಪ್ರಶಸ್ತಿ, 2018ರ್‌ಲಿ ಗುರುನಾರಾಯಣ ಪ್ರಶಸ್ತಿ, 2019ರ್‌ಲಿ ಗೌರಿ ಸುಂದರ್ ಪ್ರಶಸ್ತಿ, 2020ರ್‌ಲಿ ಮಾಸ್ತಿ ಪ್ರಶಸ್ತಿ, 2021ರ್‌ಲಿ ಕೊ. ಅ. ಉಡುಪ ಪ್ರಶಸ್ತಿ ಹೀಂಗೆ 19 ಪ್ರಶಸ್ತಿಗ ಬಂದುಟು. ದಕ್ಷಿಣ ಕನ್ನಡ ಜಿಲ್ಲಾ ಸಾಹಿತ್ಯ ಸಮ್ಮೇಳನ ಅಧ್ಯಕ್ಷತೆ ಹಾಂಗೆ 2001–2004ರ್‌ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿನ ಸದಸ್ಯರಾಗಿದ್ದೊ. (ಡಿ.ಪಿ.)

**ಸುಳ್ಯ :** ದಕ್ಷಿಣಕನ್ನಡ ಜಿಲ್ಲೆನ ಒಂದ್ ತಾಲೂಕ್ ಮತ್ತೆ ತಾಲೂಕ್‌ನ ಆಡಳಿತ ಕೇಂದ್ರ. ಜಿಲ್ಲೆನ ಕಡೇ ತಾಲೂಕ್ ಆದ ಇದರ ಪಡುವ, ವಾಯವ್ಯ ಮತ್ತೆ ಬಡ್‌ಗಲಿ ಪುತ್ತೂರು ತಾಲೂಕು, ಈಶಾನ್ಯಲಿ ಹಾಸನ ಜಿಲ್ಲೆನ ಸಕಲೇಶಪುರ ತಾಲೂಕ್, ಮೂಡ ದಿಕ್ಕ್‌ಗೆ ಕೊಡಗ್ ಜಿಲ್ಲೆನ ಮಡಿಕೇರಿ ಮತ್ತೆ ಸೋಮವಾರ ಪೇಟೆ ತಾಲೂಕ್‌ಗ, ಪಡುವ ಮತ್ತೆ ನೈರುತ್ಯಲಿ ಕೇರಳ ರಾಜ್ಯ, ಮತ್ತೆ ಆಗ್ನೇಯಲಿ ಮಡಿಕೇರಿ ತಾಲೂಕ್ ಸುತ್ತುವರ್‌ಕಂಡ್ ಉಟ್ಟು. ಪುತ್ತೂರು ಉಪವಿಬಾಗಕೆ ಸೇರ್‌ದ ಈ ಪ್ರದೇಸನ 1965 ಡಿಸೆಂಬರ್ 25 ರಂದ್ ಪ್ರತ್ಯೇಕಿಸಿ ತಾಲೂಕುಂತೇಳಿ ಗುರ್‌ತಿಸಿದೊ. ಪಂಜ ಮತ್ತೆ ಸುಳ್ಯ ಹೋಬಳಿಗ. 41ಗ್ರಾಮಗಳಿರ್‌ವ ಈ ತಾಲೂಕ್ ನ ವಿಸ್ತೀರ್ಣ 826.6 ಚ. ಕಿಮೀ. ಜೆನಸಂಕೆ 1,40,754. ಇದರ್‌ಲಿ 1,22,726 ಜೆನ ಗ್ರಾಮವಾಸಿಗ, 18,028 ಜೆನ ಪಟ್ಟಣಿಗರ್ ಒಳೊ.

ತಾಲ್ಲೂಕ್‌ನ ಮೂಡ ಬಾಗ ಪೊಡ್‌ವಗಟ್ಟ ಶ್ರೇಣಿಗಳ್‌ಂದ ಸುತ್ತುವರ್‌ದುಟು. ಪಡುವ ಬಾಗ ಗಟ್ಟಶ್ರೇಣಿ ಇಳ್ವಾರ್ ಮತ್ತೆ ಕ್ರಿಸಿ ಯೋಗ್ಯ ಬೂ ಪ್ರದೇಸಂದ ಕೂಡಿಟು. ಕುಮಾರದಾರ ಮತ್ತೆ ಪಯಸ್ವಿನಿ





ಈ ತಾಲ್ಲೂಕ್‌ನ ಮುಕ್ಯ ಹಳ್ಳಂಗ. ಸುಬ್ರಹ್ಮಣ್ಯದ ಹಕ್ಕಲೆನ ಕುಮಾರ ಪರ್‌ವತಂದ ಹರ್‌ದ್ ಬಾವ ಕುಮಾರದಾರ, ತಾಲ್ಲೂಕ್‌ನ ಮೂಡಲಿ ತೆಂಕಂದ ಬಡ್ಗಗೆ ಹರ್‌ಕಂಡೋದೆ. ಮುಂದೆ ಈ ಹಳ್ಳ ಪುತ್ತೂರು ತಾಲ್ಲೂಕ್‌ನ ಹುಕ್ಕ್ ಮತ್ತೆ ತಾಲ್ಲೂಕ್‌ನ ಬಡ್ಗಗೆ ಹಜ್ಞಾದೂರ ತಾಲ್ಲೂಕ್ ಗಡಿಯಾಗಿ ಹರ್‌ದ್ ಪುತ್ತೂರ್‌ಲಿ ಹರ್‌ಕಂಡ್ ಹೋದೆ.. ಈ ಹಳ್ಳಕೆ ಸುಮಾರ್ ಸಣ್ಣಪುಟ್ಟ ಹಳ್ಳಗನು, ಚೋಡಿಗಳು ಕೂಡಿಕಂಡವೆ.

ಪಯಸ್ವಿನಿ ಹಳ್ಳ ತಾಲೂಕ್‌ನ ತೆಂಕಲಿ ಆಗ್ನೇಯಂದ ವಾಯವ್ಯಕ್ಕೆ ಹರ್‌ದ್ ಸುಳ್ಯನ ಮುಟ್ಟಿ ಮುಂದೆ ಪಡುವಕೆ ಹರ್‌ದ್ ಕೇರಳ ರಾಜ್ಯನ ಮುಟ್ಟಿದೆ. ತಾಲ್ಲೂಕ್‌ಲಿ ಕರಾವಳಿ ಪರ್‌ವತ ಪ್ರದೇಸದ ವಾಯುಗುಣ ಇದ್ದ್ ಮಲ್ನಾಡ್ ಪ್ರದೇಸಕ್ಕೆ ಸೇರಿರೂ ವರ್‌ಸದ ಹೆಚ್ಚ್ ಕಾಲ ಸೆಕೆಂದ ಕೂಡಿದ್ದದೆ. ವಾರ್‌ಸಿಕ ಸರಾಸರಿ ಮಳೆ 4,081. 7 ಮಿಮೀ.

ಈ ತಾಲ್ಲೂಕ್ ಜಲಸಮೃದ್ದಿನೊಟ್ಟಿಗೆ ಕಾಡ್‌ಂದಲು ಕೂಡಿಟು. ಮಲೆ, ಕಣಿವೆಗಳ್‌ಲಿ ದೊಡ್ಡ ಕಾಡ್‌ಗ ಒಳೊ. 46, 626 ಹೆಕ್ಟೇರ್ ಕಾಡ್ ಪ್ರದೇಸ ಇದ್ದ್ ಸಾಗ್ವಾನಿ, ಬೀಟಿ, ಮೊತ್ತಿ, ಜಂಬೆ, ಹೆಬ್ಬಲ್ಸ್, ದೂಪ, ಮಾವು, ಚಿರ್ಪು ಹಿಂಗೆ ಬೆಲೆಬಾಳುವ ಮರಗಳ ಒಟ್ಟಿಗೆ ಉಂಡೆಹುಳಿ, ಮಂತುಳಿ, ಕಾನಕಜೆ, ನರ್‌ವೋಳುನಂತ ಮರಗನು, ಬೆದ್ರ್ ಮತ್ತೆ ಬೆತ್ತನೂ ಬೆಂಕಿಕಡ್ಡಿಗೆ ಬೇಕಾದಂತ ಮೆತ್ತನೆ ತಿರ್ಳ್‌ನ ಮರಗಸ ಬೆಳ್ದವೆ. ರಬ್ಬರ್ ಕೂಪುನ ಬೆಳ್‌ಸಿಯೊಳೊ. 1972ರ್‌ಲಿ 4,390 ಹೆಕ್ಟೇರ್ ಪ್ರದೇಸಲಿ ರಬ್ಬರ್ ತೋಟನ ಬೆಳ್‌ಸಿದ್ದೊ.

ತಾಲ್ಲೂಕ್‌ನ ಹೆಚ್ಚಿನ ಜಾಗೆ ಜಂಬುಮೊಣ್ಣ್‌ಂದ ಕೂಡಿಟು. ಹೆಚ್ಚ್ ಮಳೆ ಬೀಳ್‌ವ ಪ್ರದೇಸಕೆ ಅನುಗುಣಾಗಿ ಇರ್‌ವ ಪ್ರದೇಸಂದಲು ಮೂಡದ ಕಡೆ ಜಂಬುಮೊಣ್ಣ್‌ನ ಪ್ರದೇಸಂದಲೂ ಕೂಡಿಟು. ಬತ್ತ ಇಲ್ಲಿನ ಮುಕ್ಯ ಬೆಳೆ. 4,900 ಹೆಕ್ಟರ್‌ಲಿ ಅಡ್ಕೆ, 1,698 ಹೆಕ್ಟರ್‌ಲಿ ಚಾಳೆ, 3,941 ಹೆಕ್ಟರ್‌ಲಿ ಬೀಜ 55 ಹೆಕ್ಟರ್‌ಲಿ ಕೊಕ್ಕ 100 ಹೆಕ್ಟರ್‌ಲಿ ವೀಳೆದೆಲೆ, 86 ಹೆಕ್ಟರ್‌ಲಿ ಶುಂಟಿ, 50 ಹೆಕ್ಟರ್‌ಲಿ ಏಲಕ್ಕಿ, 2,040 ಹೆಕ್ಟರ್‌ಲಿ ಬಾಳೆ, 425 ಹೆಕ್ಟರ್‌ಲಿ ಮಾಯ್ನ್, 250 ಹೆಕ್ಟರ್‌ಲಿ ಗೇಣ್ಸ್, 600 ಹೆಕ್ಟರ್‌ಲಿ ಬಾಳೆ,, 250 600 ಹೆಕ್ಟರ್‌ಲಿ ಹಲ್ಸ್, 25 ಹೆಕ್ಟರ್‌ಲಿ ಬೊಪ್ಪಂಗಾಯಿ, 800ಹೆಕ್ಟರ್‌ಲಿ ಮರಗೇಣ್ಸ್ ನ ಬೆಳೆತ್ತಿದ್ದೊ.

ಬೇಸಾಯಕೆ ಬೇಕಾದ ಎಮ್ಮೆಗಳ ಸಾಕಣೆ ಇಲ್ಲಿ ಹೆಚ್ಚ್. ಇಲ್ಲಿ ಮಲೆನಾಡ್‌ನ ಗಿಡ್ಡ ಹಸ್‌ಗ ಇದ್ದ್, ಒಳ್ಳ ತಳಿನ ಹಸ್‌ಗ ಕಡಿಮೆ. ತಾಲ್ಲೂಕ್ ನ ಹಳ್ಳಂಗಳ್‌ಲಿ ಮೀನು ಹಿಡ್‌ದವೆ. ತಾಲ್ಲೂಕ್‌ನ ಮನೆ ಕೆಲ್‌ಸಗಾದ ಬೀಡಿ ಮತ್ತೆ ಬೆದ್ರ್ ಹೆಡೆಗೆಗಳ ತಯಾರಿಕೆ ಉಟ್ಟು. ವಿದ್ಯುತ್, ಅಂಚೆ, ತಂತಿ, ಆಸ್ಪತ್ರೆ, ಪ್ರೌಡಶಾಲೆ ಮತ್ತೆ ಕಾಲೇಜ್ ಇಂತದರ ಸೊವ್‌ಲಬ್ಯಂಗ ಒಳೊ. ಬಿಸ್‌ಲೆ ಮತ್ತೆ ಸಂಪಾಜೆ, ಗಟ್ಟ ರಸ್ತೆಗಳೇ ಈ ತಾಲ್ಲೂಕ್‌ನ ಮೂಡದ ಮುಕ್ಯ ಸಂಪರ್‌ಕ ಮಾರ್‌ಗ. ಇದರ್‌ಂದ ಹಕ್ಕಲೆಂದ ಕೊಡ್‌ಗ್ ಜಿಲ್ಲೆನೊಟ್ಟಿಗೆ ಯಾಪಾರ ವೆವಹಾರ ನಡ್ದದೆ. ಮಡಿಕೇರಿ–ಸುಳ್ಯ–ಪುತ್ತೂರು–ಬಂಟ್ವಾಳ–ಮಂಗಳೂರ್‌ಗಳಿಗೆ ಮಾರ್‌ಗ ಉಟ್ಟು. ಬಿಸಲೆಘಾಟ್–ಸುಬ್ರಹ್ಮಣ್ಯ –ಪಂಜ–ಬೆಳ್ಳಾರೆ–ಪುತ್ತೂರು ಈ ಮಾರ್‌ಗನೂ ತಾಲ್ಲೂಕ್‌ಲಾಗಿದೆ ಹೋದೆ.. ತಾಲ್ಲೂಕ್‌ನ ಬೌಗೋಳಿಕ ಸನ್ನಿವೇಸಕೆ ತಕ್ಕಂಗೆ ಇಲ್ಲಿ ಬೆಟ್ಟಗುಡ್ಡೆಗಳ ಹತ್ತಿ ಇಳಿವ ಮೊಣ್ಣ್‌ನ ಮಾರ್‌ಗನೆ ಹೆಚ್ಚ್.

ಸುಳ್ಯದ ಈಶಾನ್ಯಕೆ 34 ಕಿಮೀ ದೂರಲಿರ್‌ವ ಬಳ್ಪ ಗ್ರಾಮ ವಿಜಯನಗರದ ಕಾಲಲಿ ಕೆಲವ್ ನಾಯಕರ ಆಡಳಿತ ಕೇಂದ್ರ ಆಗಿತ್ತ್. ಇಲ್ಲಿ ಹಜ್ಞಾಜಾಗೆ ಹಾಳಾಗಿರುವ ತ್ರಿಶೂಲಿನಿ ದೇಸ್ತಾನ ಉಟ್ಟು. ಸುಳ್ಯದ ಬಡ್‌ಗಕೆ 19 ಕಿಮೀ ದೂರಲಿರುವ ಬೆಳ್ಳಾರೆ ಒಂದ್ ಯಾಪಾರ ಕೇಂದ್ರ. ಇದ್ ಬಲ್ಲಾಳ ವಂಸಸ್ತರ ಗ್ರಾಮ ಆಗಿದ್ದ್ ಇಲ್ಲಿ ಅವ್ ಅರಮನೆ ಮತ್ತೆ ಬಸದಿನ ಕಟ್ಟ್‌ಸಿದ್ದೊ. ಇಕ್ಕೇರಿನ ವೆಂಕಟಪ್ಪನಾಯಕ ಇಲ್ಲಿ ಒಂದ್ ಕೋಟೆ ಕಟ್ಟಿಸಿದ್ದೊ. ಬೆಳ್ಳಾರೆ ಮುಂದೆ 1775ರ್‌ಲಿ ಟಿಪ್ಪುನ ವಸ ಆದ್ದ್ ಮುಂದೆ 1799ರ್‌ಲಿ ಕೊಡಗ್‌ನ ರಾಜರ್‌ಗೆ ಸೇರ್‌ತ್.

1834ರ್‌ಲಿ ಈ ಪ್ರದೇಸ ಎಲ್ಲ ಕೊಡಗ್‌ನ ಒಟ್ಟಿಗೆ ಬ್ರಿಟಿಸರ್‌ಗೆ ಸೇರಿಹೋತ್. ಇಲ್ಲೊಂದ್ ಕಾಲೇಜ್ ಮತ್ತೆ ಪ್ರವಾಸಿಮಂದಿರ ಉಟ್ಟು. ಸುಳ್ಯದ ಈಶಾನ್ಯಕೆ 44 ಕಿಮೀ ದೂರಲಿರ್‌ವ ಸುಬ್ರಹ್ಮಣ್ಯ ಒಂದ್ ಪುಣ್ಯಕ್ಷೇತ್ರ. ಕುಮಾರ ಮತ್ತೆ ಶೇಸ ಮಲೆಗಳ ನಡುಲಿ ಇರ್‌ವ ಇದರ ಕುಕ್ಕೆ ಸುಬ್ರಹ್ಮಣ್ಯ ಮತ್ತೆ ಪುಸ್ಪಗಿರಿಂತೇಳಿದೂ ಕರ್‌ದವೆ. ಮಳ್‌ಗಾಲಲಿ ಹೋಕೆ ಆಗದ ಈ ಗ್ರಾಮಕೆ ತಾಲ್ಲೂಕ್‌ನ ಎಲ್ಲ ಕಡೆಂದನೂ ಮಾರ್‌ಗ ಉಟ್ಟು.. ಇಲ್ಲಿನ ಸುಬ್ರಹ್ಮಣ್ಯ ದೇಸ್ತಾನ ಮತ್ತೆ ಪ್ರತಿವರ್‌ಸ ನವೆಂಬರ್–ಡಿಸೆಂಬರ್ ತಿಂಗಳ್‌ಲಿ ನಡಿವ ಜಾತ್ರೆ ಬಾಳ ಪ್ರಸಿದ್ದ.

ಸುಳ್ಯ ಪೇಟೆ ತಾಲ್ಲೂಕ್‌ನ ಆಡ್ಳೆತ ಕೇಂದ್ರ. ಸಂಪಾಜೆ–ಪುತ್ತೂರು ಹೆದ್ದಾರಿಲಿ ಮಂಗಳೂರ್‌ನ ಆಗ್ನೇಯಕೆ 86 ಕಿಮೀ ದೂರಲೂ ಪುತ್ತೂರ್‌ನಾ ಆಗ್ನೇಯಕೆ 35 ಕಿಮೀ ದೂರಲೂ ಉಟ್ಟು. ಜೆನಸಂಕೆ 18,028. ಇದೊಂದು ಮುಕ್ಯ ವ್ಯಾಪಾರ ಕೇಂದ್ರ. ಆಸ್ಪತ್ರೆ, ಅಂಚೆ, ತಂತಿ, ವಿದ್ಯುತ್, ಪ್ರೌಡಶಾಲೆ, ಕಾಲೇಜು ಇಂತದೆಲ್ಲ ಉಟ್ಟು. ಶ್ರೀಲಂಕಾಂದ ಬಂದ ನಿರಾಸ್ರಿತರ್‌ಗೆ ಮನೆ ಒದ್‌ಗಿಸಿ ಕೊಟ್ಟದ್ದಲ್ಲದೆ ಇಲ್ಲಿ ರಬ್ಬರ್ ತೋಟಗಳ ಬೆಳ್‌ಸಿದ್ ಅವ್ಕೆ ಉದ್ಯೋಗನ ಮಾಡಿಕೊಟ್ಟೊಳೊ. ರಬ್ಬರ್ ತೋಟಗಳ ಬೆಳೆವಣಿಗೆ, ವಿಸ್ತರಣೆನೊಟ್ಟಿಗೆ ಸುಳ್ಯ ಅಬಿವೃದ್ದಿಯಾಗ್‌ತ್ತುಟ್ಟು. (ಡಿ.ಎನ್.ಕೆ.)

**ಸೋಣದ ಜೋಗಿ :** ಸೋಣ (ಸಿಂಹ ಶ್ರಾವಣ) ತಿಂಗಳ್‌ಲಿ ನಲಿಕೆಯವು ಹಗ್‌ಲ್ ಹೊತ್ತ್‌ಲಿ ಮನೆ ಮನೆಗೆ ಹೋಗಿ ನಡ್ಸುವ ಕೊಣ್‌ತ ಸೋಣದ ಜೋಗಿ. ಈ ಕೊಣ್‌ತನ ಸೋಣ ತಿಂಗಳ ಸುರುನ ದಿನಂದ ಬಾದ್ರಪದ ಚೌತಿ ದಿನ ಕಡೆಗೆ ಮುಗ್‌ಸುವೆ. ಕಾಸರಗೋಡು ತಾಲೂಕು ಮತ್ತೆ ಬಂಟ್ವಾಳ ತಾಲೂಕ್‌ನ ವಿಟ್ಲ ಸೀಮೆಲಿ ಈ ಕೊಣ್‌ತ ಹೆಚ್ಚಾಗಿ ನಡ್‌ದದೆ. ಹಿಂದೆ ಪುತ್ತೂರ್ ತಾಲೂಕ್‌ಲಿನೂ ಕೊಣ್‌ತ ನಲಿಕೆಯವರ್‌ಂದ ನಡೆತ್ತಿತ್ತ್., ಕಾಸರಗೋಡ್ ತಾಲೂಕ್‌ಲಿ ಇದರ ಸೋಣದ ಜೋಗಿ ತೇಳಿ ಕರ್‌ದರೆ ಬೇರೆಲ್ಲ ಎಲ್ಲ ಸೀಮೆಲಿ ಈ ಕೊಣ್‌ತನ

ಜೋಗಿ ಪುರುಸೆ ತೇಳುವೆ. ಪೊದ್ಯ ಮತ್ತೆ ವೇಸ ಬೂಸಣಗಳಲ್ಲಿನೂ ಸೋಣದ ಜೋಗಿ ಮತ್ತೆ ಜೋಗಿ ಪುರುಸ ಕೊಣ್ತಲಿ ವೆತ್ಯಾಸ ಕಂಡ್ ಬಂದದೆ. ಹಾಂಗಾಗಿ ಎರಡ್ ಕೊಣ್ತಗಳ್‌ನೂ ಬೇರೆ ಬೇರೆ ಆಗಿದ್ ಕಾಣಕಾದೆ..

**ವೇಸ ಬೂಸಣ :** ಸೋಣದ ಜೋಗಿ ವೇಸ ಹಾಕುವವು ಸಾಮಾನ್ಯ ಆಗಿ ಹೈದಂಗ ಅಲ್ಲರೆ ಗಂಡಸರ್. ಅವರೊಟ್ಟಿಗೆ ತೆಂಬರೆ ಬೊಟ್ಟಿ ನುಡಿಕಟ್ಟ್ ಹೇಳಿಕೆ ಒಬ್ಬ ಹಿರಿಯ ಗಂಡಸ್ ಇದ್ದದೆ. ವೇಸದಾರಿ ಕಾರಂಗಿ (ಕೆಂಪು ಇಜಾರು) ಹಾಕಿ ಅದರ ಮೇಲೆ ಕೆಂಪು ಸೀರೆನ ನೆರಿಗೆ ಹಿಡ್‌ದ್ ಸೊಂಟಕೆ ಸುತ್ತಿ ಕಟ್ಟಿಕೊಂಡವೆ. ಅದರ ಮೇಲೆ ಸೊಂಟಕೆ ಒಂದ್ ಬಿಳಿನ ಜಟ್ಟಿ ಸುತ್ತಿಕಂಡವೆ. ಮೋರೆಗೆ ನಸುಕೆಂಪು ಬಣ್ಣದ ತೆಳುಲಿ ಪೂಜಿಕಂಡ್, ಕೆಪ್ಪೆಗೆ ಹಣ್ಣ ಹೆಚ್ಚಿಗೆ ಕೆಂಪು, ತುಟಿಗೆ ಕೆಂಪು, ಕಣ್ಣ್‌ನ ಕರೆಗೆ ಮತ್ತೆ ಹುಬ್ಬುಗೆ ಕಣ್ಣ್‌ಕಪ್ಪು , ಮೂಕುನ ನೆಡುಲಿ ಅಡ್ಡ ಗರೆ ಅದರ ಎರಡ್ ಪುಡೆಗೆ ಕೆಂಪು ಗೆರೆಗ, ದೌಡೆಗೆ ಬಿಳಿನ ಮೂರ್ ಚುಕ್ಕಿಗ ಅದರ ಹೊರಗೆಂದ ಕೆಂಪು ಆವರಣ, ಹಣೆನ ಮದ್ಯೆ ಕಪ್ಪು ಮತ್ತೆ ಕೆಂಪು ಗೆರೆಗಳ್‌ಂದ ನೀಟ ಕಣ್ಣ್‌ನ ಚಿತ್ರ, ಅದರ ಹೊರ – ಒಳ ಮೈಗಳ್‌ಂದ ಬಿಳಿನ ಗೆರೆಗ, ಕಣ್ಣ್‌ನ ಆಚೆ – ಈಚೆಗೆ ಬಿಳಿ ರೇಕೆಗಳ್‌ಂದ ಅಡ್ಡ ನಾಮ, ಇದಿಸ್ಟ್ ಮುಕ ವರ್ಣಿಕೆ, ಕೈ, ರಟ್ಟೆ, ಎದೆ, ಬೆನ್ನ್‌ನ ಹಕ್ಕಲೆ ವಿಬೂತಿನ ಅಡ್ಡ ನಾಮಗಳ್‌ನ ಹಾಕಿಕಂಡವೆ.

ನೆತ್ತಿ ಮೇಲೆ ಕೆಂಪು ಬಟ್ಟೆನ ಚಕ್ರದಂಗೆ ಸುತ್ತಿ ಮಾಡ್‌ದ ಚೆಂಡ್‌ನಿಸಿ ಬಟ್ಟೆನ ದಾರಂದ ದೌಡೆನ ಅಡಿಗೆ ಕಟ್ಟುವೆ. ಚೆಂಡ್‌ಗೆ ಬಿಳಿ ಬಟ್ಟೆ ಸುತ್ತಿ ಜಡೆನಂಗೆ ಮಾಡ್‌ವೆ. ಕಡೆಗೆ ಅದ್‌ಕೆ ಕೆಂಪು ಬಟ್ಟೆ ಸುತ್ತುವೆ. ಚೆಂಡ್ ಗಟ್ಟಿ ಆಗಿರುವಂಗೆ ತಾಂಗ್ ಬೊಳ್ಳಿನ ಕಟ್ಟುವೆ. ತಲೆನ ಅಲಂಕಾರನ ಚೆಂಡ್‌ಪಾಡುನೆ (ಚೆಂಡು ಹಾಕುವುದು) ತೇಳ್‌ವೆ. ಅರ್‌ದ ವೃತ್ತಾಕಾರಲಿ ಕೆಂಪು ಬಟ್ಟೆ ಸುತ್ತಿ ಅದರ ಮೇಲೆ ಚಿನ್ನದ ಬಣ್ಣದ ಬೇಗಡೆನ ಹೂ ಮುಡ್ಸಿ ಮಾಡ್‌ದ ಅಲಂಕಾರ ಸಾದನನ ಹಣೆನ ಮೇಲೆ ಕಟ್ಟುವೆ. ಇದರ ಪೂ ಬಳೆಚ್ಚೆ ತೇಳುವೆ. ಕುಲಾವಿ ಆಕಾರಲಿ ಮಾಡ್‌ದ ಚಾಳೆ ಚಿರಿನ ಮಡಲ್ ಬಳೆಚ್ಚಿನ ಮೇಲೆ ಕಟ್ಟುವೆ. ಮಡಲ್ಗಟ್ಟೆ ಆಗಿ ನಿಲ್ಲಿಕೆ ಚೆಂಡ್‌ಗೆ ಅದರ ಕಟ್ಟುವೆ. ವೇಸದಾರಿ ನಾರ್‌ಂದ ಮಾಡ್‌ದ ಜೆನಿವಾರ ಹಾಕಂಡದೆ. ಚಿರಿಂದ ಮಾಡ್‌ದ ಅಲಂಕಾರ ಸಾದನ ಕೈನಾಗಮ ಕೈಗೆ ಕಟ್ಟಿಕಂಡದೆ. ಕಾಲ್‌ಗೆ ಗೆಜ್ಜೆ ಹಾಕಂಡದೆ. ಒಂದ್ ಕೈಲಿ ಗಂಟೆ ಮಣಿ, ಇನ್ನೊಂದ್ ಕೈಲಿ ಬೆತ್ತ ಇದ್ದದೆ. ಈ ಬೆತ್ತನ ಕಂತೆ ತೇಳ್‌ವೆ. ಈ ಬೆತ್ತದ ಎರಡ್ ಕೊಡಿಗೆ ಚಿರಿನ ಸೀಳಿ ಕಟ್ಟುವೆ. ಚಿರಿನ ಇಸಿದ್ ಕಟ್ಟಿ ಮತ್ತೆ ಅದರ ಕಡೆಬಾಗನ ಮುಂದೆಗೆ ತಿರ್‌ಗಿಸಿ ಮತ್ತೊಂದು ಕಟ್ಟ ಹಾಕಿ ಕಡೆ ಮತ್ತೆ ಕೊಡಿನ ಒಂದೆ ತರ ಹಿಡ್‌ದ್ ಕತ್ತ್‌ರಿಸಿ ಬುಟ್ಟವೆ. ಬೆತ್ತದ ಎರ್‌ಡೂ ಕೊಡಿಗೆ ಇಂತ ರಚನೆನ ಮಾಡ್‌ವೆ. ಇದಿಸ್ಟ್ ಸೋಣದ ಜೋಗಿನ ವೇಸ ಬೂಸಣಗ. ಕೆಲವ್ ಕಡೆ ವೇಸದಾರಿ ಕೆಂಪು ಉದ್ದ ಕೈನ ಅಂಗಿ ಹಾಕಂಡಿದ್ದದೆ ಕೈಗೆ ಕಂಬಳಿದಾರದ ಕಟ್ಟ್ ಕಟ್ಟಿಕಂಡದೆ.

**ಪೊದ್ಯ/ಮಾತ್‌ಕತೆ :** ಹಿಮ್ಮೇಳದವ್ ಮನೆಯವರ ಅನುಮತಿ ಕೇಳ್‌ದ ಮೇಲೆ ಕೊಣ್ತ ಸುರು ಮಾಡ್‌ವೆ. ಈ ಕೊಣ್ತಕೆ ಪೊದ್ಯ ತ ಇರ್‌ದುಲೆ. ಹಿಮ್ಮೇಳದಂವ ತೆಂಬರೆ ಬೊಟ್ಟಿಕಂಡ್ ಕೋಣೆವಂವನೊಟ್ಟಿಗೆ ಮಾತ್‌ಕತೆ ಮಾಡ್‌ದೆ. ಮಾತ್‌ಕತೆ ಕನ್ನಡಲಿದ್ದದೆ. ಸಂಬಾಸಣೆನ ಎರಡ್ ಪಟ್ಯಗಳ ಇಲ್ಲಿ ಕೊಟ್ಟೊಳೊ.

ಪಟ್ಯ 1 : (ಹಣ್ಣ ಹೊತ್ತು ಕೊಣ್ತ ನಡ್ಸಿದ ಮೇಲೆ ಮಾತ್‌ಕತೆ ಸುರಾದೆ) ಹಿಮ್ಮೇಳ : ಎಲ್ಲಿಂದ ಬಂದ ಜೋಗಿ ? ಜೋಗಿ : ಗಟ್ಟದ ಮೇಲೆಂದ ಬಂದೆ.

ಹಿಮ್ಮೇಳ : ಗಟ್ಟದ ಮೇಲೆ ಹುಟ್ಟಿಕಂಡ್, ಕದ್ರೆ ಮೇಲೆ ಬೆಳ್‌ಕಂಡ್, ಕಾಂತಾನ ಕದ್ರ, ಬೇಂತಾನ ಬೆದ್ರ, ಕುದ್ಯೋನು ಬುಳೇರಿ, ಪರ್‌ಮಲೆ ದಾಟಿಕಂಡ್ ಊರೆಲ್ಲ ಬೇಡಿಕೊಂಡ್ ಕನ್ಯಾರ ಚೌತಿಗೆ ಬಂದೆ ಜೋಗೆ ಜೋಗಿ : ಹೌದು

ಹಿಮ್ಮೇಳ : ಹಾಂಗೆ ಬಂದವಂಗೆ ಬತ್ತ, ತೆಂಗಿನಕಾಯಿ, ಸೌತೆಕಾಯಿ, ಹುಳಿ, ಮೆಣ್ಣು ಕೊಟ್ಟವೆ. ಜೋಗಿ ಇನ್ನೊಂದಾಟ ಆಡ್, (ಮತ್ತೆ ಕೊಣ್ತ ಮುಂದುವರ್‌ದದೆ)

ಪಟ್ಯ 2 : ಹಿಮ್ಮೇಳ : ಎಲ್ಲಿಂದ ಬಂದೆ ಜೋಗಿ? ಜೋಗಿ : ಗಟ್ಟದ ಮೇಲಿಂದ ಬಂದೆ.



ಸೋಣದ ಜೋಗಿ





ಹಿಮ್ಮೇಳ : ಗಟ್ಟದ ಮೇಲಿಂದ ಹುಟ್ಟಿಕೊಂಡು, ಕದ್ರೆ ಮೇಲೆ ಬೆಳ್ಕೊಂಡು, ಕಾಂತಾನ ಪುದ್ದೊಟ್ಟು, ಪರ್‌ಮಲೆ ದಾಟಿಕೊಂಡು, ಊರೆಲ್ಲ ಪುಡಿ ಮಾಡಿಕೊಂಡು, ಕಲುರ (ಕಣಿಪುರ) ಜಾತ್ರೆಗೆ ಹೋವ ಹೊತ್ತುಲಿ ಮುಳಿ, ಮುಂಚಿ, ಬತ್ತ, ಕಾಯಿ, ದುಡ್ಡು, ಬೇಳೆ, ಸಾಂತನಿ ತಕ್ಕೊಂಡು ಕನ್ಯಾರ ಚೌತಿಗೆ ಹೋಗು ಜೋಗಿ, ಇನ್ನೊಂದಾಟ ಆಡ್ ಜೋಗಿ, ಮತ್ತೆ ಕೊಣ್‌ತ ಸುರುವಾದೆ. ಬೇರೆ ಬೇರೆ ಪಟ್ಯಗಳ ಸಂಬಾಸಣೆಲಿ ಬಾವ ಜಾಗೆನ ಹೆಸ್ರ್‌ಗಳ ಕದ್ರಿ, ಅಡೂರು, ಮದೂರು, ಕಾಪು, ಕನಿಯಾಲ, ಮುಜುಂಗಾವು ತೇಳುದಾಗಿ ಬದಲಾಯಿಸಿ ಕೊಂಡವೆ.

**ಕೊಣ್‌ತ :** ಸೋಣದ ಜೋಗಿ ಕೊಣ್‌ತಲಿ ವಿಸೇಸತೆ ಏನೂ ಇರುದುಲೆ. ಮಾತ್‌ಕತೆ ನಡೆವ ಹೊತ್ತಿಗೆ ವೇಸಹಾಕಿದಂವ ನಿತ್‌ಕಂಡೆ ಇದ್ದದೆ. ಸಂಬಾಸಣೆ ನಿತ್ತ ಮೇಲೆ ಕೊಣಿಯಕೆ ಸುರ್ ಮಾಡ್ದೆ. ಡೇಂಗ್ ಡೇಂಗ್ ಡೆಂಡೆಟ್ಸ್ ಹಿಮ್ಮೇಳಕೆ ಸರಿಯಾಗಿ ನಿದಾನಕೆ ಹೆಜ್ಜೆ ಹಾಕಂಡ್, ಒಂದ್ ಕೈಲಿ ಬೆತ್ತನ ತಿರ್‌ಗಿಸಿಕಂಡ್ ಇನ್ನೊಂದ್ ಕೈಲಿ ಗಂಟೆಮಣಿ ಹಿಡ್‌ಕಂಡ್ ಸುತ್ತು ಬಂದದೆ. ಹಿಮ್ಮೇಳಲಿ ತೆಂಬರೆ ಇದ್ದದೆ.

**ಆಚರಣೆ :** ಸೋಣ ತಿಂಗಳ ಸುರೂಗೆ ಕೊಣ್‌ತ ನಡ್ಸಿಕಂಡ್ ಊರ್‌ಗೆ ಹೋಕೆ ತಂಡದವು ತಯಾರಾದವೆ. ಸುರುಗೆ ಊರ್‌ನ ದೇಸ್ತಾನ ಇಲ್ಲರೆ ದೆವ್ವಸ್ತಾನಲಿ ಕೊಣ್‌ತ ಸುರು ಮಾಡ್‌ವೆಕೊಣ್‌ತಕ್ಕೆ ಮುಂದೆ ಪ್ರಾರ್‌ತನೆ ಮಾಡಿಕಂಡವೆ.ಬಟ್ರ್ ದೇವರ ಮುಂದೆ ಗೆಜ್ಜೆ ಇಸಿದ್ ಕೈ ಮುಗ್‌ದ್ ಮತ್ತೆ ಅದರ ಕೊಣೆವವಂಗೆ ಕೊಟ್ಟವೆ. ಕೊಣ್‌ತದಂವ ಅದರ ಕಟ್ಟಿಕಂಡ್ ಅಲ್ಲಿ ಒಂದ್ ಸುತ್ತು ಕೊಣ್‌ದದೆ. ಮುಂದೆ ತಂಡದವು ಊರ್‌ನ ಪ್ರತಿಸ್ಟಿತ ಮನೆತನದ ಮನೆಗಳಿಗೆ ಹೋದವೆ. ಮತ್ತೆ ಒಳ್‌ದ ಮನೆ ಮನೆಗಳಿಗೆ ಹೋಗಿ ಕೊಣ್‌ತ ನಡ್‌ಸುವೆ.

ಕೊಣ್‌ದ ಮನೆಲಿ ಕೊಣ್‌ತ ಮುಗ್‌ಸಿಕಾಕನ ಮನೆನ ಹೆಣ್ಮಕ ಒಂದ್ ದೀಪ ಹೊತ್‌ಸಿ ಅದರೊಂದ್ ತೊಡ್‌ಪೆನ ನಡುಲಿ ಇಸಿ ಅದರ ಸುತ್ತು ಒಂದ್ ಸೇರ್ ಅಕ್ಕಿ, ಕಾಯಿ, ಸೋಂತೆಕಾಯಿ, ಹಲ್‌ಸ್‌ನೆಕ್ಕಿ,, ಹುಳಿ, ಮೆಣ್‌ಸ್, ಅರ್‌ಸಿನ, ಮೊಸಿ ತುಂಡು ಇಸಿ ಇಜ್ಜಲ್‌ಗೆ ತಂದಿಸಿ ಅಂವಂಗೆ ಕೊಟ್ಟವೆ.

ಕೊಣ್‌ತದ ಕಡೇ ದಿನ ಮನೆಲಿ ರೊಟ್ಟಿ, ಹಲಸ್‌ನೆಕ್ಕಿ ಅಲ್ಲರೆ ಕುಡು ಮೀನ್ ಸಾರ್ ಮಾಡಿ ಒಂದೆಲೆಲಿ ಬಳ್‌ಸಿ ಇಜ್ಜಲ್‌ಲಿ ತಂದಿಸುವೆ. ಕಲಾವಿದ ಮೀದ್ ಬಂದ್ ಅದರ ಮುಂದೆ ಮಣೆ ಹಾಕಿ ಕುದ್ದ್‌ಕಂಡದೆ. ಕಲಾವಿದಂಗೆ ಮತ್ತೆ ಅವನ ಕುಟುಂಬದವ್‌ಕೆ ಯಾವ ತೊಂದರೆಗಳೂ ಬಾಕಾಗದ್, ಊರ್‌ನ ಮಾರಿ – ಬೀರಿ ದೂರ ಹೋಕುತೇಳಿ ತೇಳಿ ಪ್ರಾರ್‌ತನೆ ಮಾಡಿಕಂಡವೆ. ಕಲಾವಿದ ಆ ಬಾಳೆಲೆಂದ ಒಂದ್ ತುತ್ತು ಊಟ ಮಾಡ್‌ದೆ. ಮತ್ತೆ ಎಲೆಲಿ ಸುರುನ ಮುದ್ರೆ (ಪಿಂಡ) ಒಂದ್ ಕಿಳ್ಳಿಲಿ ಕುರ್‌ದಿ ನೀರ್ ಇಸಿ,, ಕೋಲ್ತಿರಿ ಹೊತ್‌ಸಿ ಬಾಳೆಲೆನ ಕಲಾವಿದನ ತಲೆಗೆ ನಿವಾಳ್‌ಸಿ ಗುಡ್ಡೆಗೆ ತಕೊಂಡ್ ಹೋದವೆ. ಅದರ ಅಲ್ಲೊಂದು ಕಾಯರ ಮರದ ಬುಡಲಿಸಿ ಮುದ್ರೆಗೆ ಕುರ್‌ದಿ ಹೊಯ್ಯ್‌ದವೆ. ಮತ್ತೆ ಎಲ್ಲವೂ ಮನೆಗೆ ತಿರ್‌ಗಿ ಬಂದ್ ಊಟ ಮಾಡ್‌ವೆ. (ಪಿ.ಆರ್.)

**ಸೋಬಾನೆ :** ಅರೆಬಾಸೆ ಗೌಡ ಜೆನಾಂಗಲಿ ಮೊದ್‌ವೆಲಿ ಹೇಳ್‌ವ ಪೊದ್ಯ. ಗ್ರಾಂತಿಕ ರೂಪದ ಸೋಬಾನೆ ಪೊದ್ಯಗ ಅಳಿಯದೆ ಒಳ್ಕಂಡ್ ಬಂದಂತ ಅಮೂಲ್ಯ ಸೊತ್ತ್. ಕ್ರಿಸಿಕರಾದ ಇವ್ ಜೆನಪದ ಮತ್ತೆ ಸೋಬಾನೆ ಪೊದ್ಯಂದ ಆ ಜೆನಾಂಗದ ಮೂಲ ಸಂಸ್ಕೃತಿನ ಪರಿಚಯ ಮಾಡ್ಸ್‌ವೆ. ಮೊದ್‌ವೆ ಸಾಸ್ತ್ರಗಳಿಗೆ ಸಮ್ಮಂದ ಪಡ್‌ವ ಸುಮಾರ್ ವಿಸಯಂಗ ಇರ್‌ವ ಕನ್ನಡ ನಾಡ್‌ನ ಸ್ರೀಮಂತ ಸಂಸ್ಕೃತಿನ ಇದರ್‌ಲಿ ಕಾಣಕ್.

ಭಾರತ ದೇಸದ ಎಲ್ಲಾ ಜೆನಾಂಗಕು ಅವರ್‌ದೆ ಆದ ಪರಂಪರೆಂದ ಬಂದ ಪೊದ್ಯಗ ಒಳೊ. ಅದರ್‌ಲು ತೊಟಿಗಿಲ್ ಸಾಸ್ತ್ರ, ಗೂಡೆ ನೆರ್‌ದ ಮೊದ್‌ವೆ, ಮೊದ್‌ರೆಂಗಿ ಸಾಸ್ತ್ರಗ ಜೆನಾಂಗಗಳ ದಾಟಿ ಕಾಣ್‌ತಾ ಉಟ್ಟು. ಕನ್ನಡ ನಾಡ್‌ನ ಪರಂಪರೆಂದ ಬಂದ ಎಲ್ಲಾ ಜೆನಪದ ಹಂಗೆ ಸೋಬಾನೆ ಪೊದ್ಯಂಗಳಿಗೆ ಮಹತ್ವ ಪೂರ್ಣ ಸ್ತಾನ ಉಟ್ಟು. ಅಕ್ಕಿಸಾಸ್ತ್ರ, ಎಣ್ಣೆ ಅರ್‌ಸಣ, ಗರ್‌ಕೆ ಹುಲ್ಲುನ ಸಾಸ್ತ್ರಗ 'ಹಿಂದೂ ದರ್‌ಮದ ಬೇರೆ ಜೆನಾಂಗದ ಸಂಸ್ಕೃತಿನಸ್ಟೆ ಹಳ್ತ್.

ಗೌಡರ ಮೊದ್‌ವೆಲಿ ನಡೆವ ಅಕ್ಕಿಸಾಸ್ತ್ರ ಋಗ್ವೇದ ಸಂಸ್ಕೃತಿನ ಪ್ರಕಾರ ಮೊದುಮಕ್ಕಳ ತಲೆಮೇಲೆ ಹಾಕ್‌ವ ಅಕ್ಕಿ ಅನಂತ ಸಕ್ತಿನ ಕೊಡ್‌ವ ಲಕ್ಷ್ಮೀ ಆಗುಟು. 'ಮೊದುವೆನ ಹಂತಹಂತ ಆಗಿ ಪೂಜಿಸುದೇ ಅಕ್ಸತೆ. 'ಹಿರಿಯೊವು ಹೆಣ್ಣ್‌ನ ಕೊಡುದಕೆ ಕನ್ಯಾದಾನಂತೇಳಿ ಕರ್‌ದೊಳೊ. ಅರೆಬಾಸಿಗರ್ ಮೊದ್‌ವೆ ತೇಳ್‌ರೆ ಹೆಣ್ಣ್ ಮತ್ತೆ ಗಂಡ್‌ನ ಒಟ್ಟುಕೂಡ್ಸುವಂತದ್‌ಂತೇಳಿ ಹೆಜ್ಜೆ ಹೆಜ್ಜೆಗೂ ಹತ್ತ್ ಕುಟುಂಬ ಹದ್‌ನೆಂಟ್ ಗೋತ್ರದ ಸಮಸ್ತ ಬಂದ್ ಬಾಂದವರ ಆಸೀರ್‌ವಾದ ಕುಲದೇವರ ಕೃಪೆ ಕಾರಣ ಆದವರ ಸಮ್ಮಂದದ ಅನುಮತಿಂದ ಮುಂದೆ ಬೊದ್‌ಕಿ ಬಾಳ್‌ವ ಮೊದ್‌ಮಕ್ಕಳ ಜೀವನ ಸುಗಮ ಆಕೆ ಹಾರೈಸ್‌ತ ಅಕ್ಕಿ ಹಾಕ್‌ವ ರೂಡಿ ವೇದ ಕಾಲಂದನೆ ಬಂದುಟು ತೇಳ್‌ವ ಮಾತುಟ್ಟು. 'ಅರೆಬಾಸೆ ಗೌಡರ ಮೊದ್‌ವೆ ಸಂಸ್ಕೃತಿಲಿ ಕನ್ನಡ ನಾಡ್‌ನ ಸ್ರೀಮಂತ ಸಂಸ್ಕೃತಿಎದ್ದ್ ಕಂಡದೆ. ಮೊದ್‌ವೆಂತೇಳಿರೆ ಒಬ್ಬಿಬ್ಬರ ಕೂಟ ಅಲ್ಲ. ಅದ್ ಇಡೀ ಊರುಗೆ ಸಮ್ಮಂದಿಸಿದ್. ಎರ್‌ಡ್ ಊರ್‌ಗಳ ಸಮ್ಮಂದ ಬೆಳ್‌ಸುದು, ಒಗ್ಗಟ್ಟ್ ಇಂತಾದೆಲ್ಲಾ ಉಟ್ಟು.

ಜೆನಪದ ಪೊದ್ಯಂಗ, ಕವನ, ಸೋಬಾನೆಲಿ ಒಳ್ಳ ಕತೆನ ಸಾರ ಇದ್ದ್, ಜೆನಪದ ಸ್ರೀಮಂತಿಕೆ ಇದರ್‌ಲಿ ಅಣ್‌ಗಿಟು. ಗ್ರಾಮೀಣ ಜೆನಂಗಳ ಸರಳ ಬೊದ್ಕ್, ಬೇನೆ, ಕುಸಿ, ಎದ್‌ರಿಸ್‌ತ್ತಿರ್‌ವವರ ಸಾಮಾಜಿಕ, ಆರ್‌ತಿಕ ಸಮಸ್ಯೆ ಇದ್ ಮೊಣ್ಣ್‌ನ ಮಕ್ಕಳ ಯಾಗೋಳುನ ಕತೆ. ಮೊದ್‌ವೆ ಪೊದ್ಯಗ ತೇಳ್‌ರೆ ಅದ್ ಹೆಣ್ಮಕ್ಕಳ ಪೊದ್ಯಂಗ ತೇಳಿ

ಪ್ರಸಿದ್ಧಿಲಿ ಉಟ್ಟು. ಹಂಗಾಗಿ ಮೊದ್‌ವೆ ಉದ್ದಕೂ ಹೆಣ್ಮಕ್ಕ ದಿನ ಇಡಿ ಹಾಡ್‌ತಿದ್ದ ಕಾಲ. ಆ ದಿನ ಮೊದ್‌ವೆಲಿ ಬಂದದರ ಕೇಳಿ ಕಲ್ತೊ ಒಳ್‌ಸಿಕಂಡೊಳೊ. ಅದರ್‌ಲೂ ವಿದ್ಯೆ ಓದು ಇಲ್ಲದ ಅಂದ್‌ನ ಹೆಣ್ಮಕ್ಕ ಇದರ ಮುಂದುವರ್‌ಸಕಂಡ್ ಬಂದೊಳೊ. ಹೆಣ್ಣ್ ತೇಳ್‌ರೆ ಅದ್‌ಕೆ ಓದು ಎಂತಕೆ, ಮನೆ, ಮಕ್ಕ ಮಾತ್ರ ಅದರ ಕೆಲ್‌ಸಂತೇಳ್‌ತಿದ್ದ ಆ ಕಾಲಲೆ ಇದರೆಲ್ಲ ಕಲ್ತೊಳೊ. ಇಂತ ಪೊದ್ಯಗ ಈಗ ಅಕ್ಷರ ರೂಪಲಿ ಅಚ್ಚಾಗಿ ಹೆಣ್ಮಕ್ಕ ಸಾಹಿತ್ಯ ಕ್ರಿಸಿಲಿ ಇಳ್‌ದ್ ಅಮೂಡ ಆದ ಕೊಡುಗೆನ ಅಂದ್‌ಂದ ಈ ಪರಂಪರೆಗೆ ಕೊಡ್‌ತಾ ಬರ್‌ತಾ ಒಳೊ. ಗಂಟೆಗಟ್ಲೆ ಹೇಳ್‌ವ ಸೋಬಾನೆನ ಸುಮಾರ್ ನಮೂನೆನ ಪೊದ್ಯಗಳ ಏಕಾಗ್ರತೆಂದ ಕೇಳಿ ಅದರ ಬಕ್ತಿ, ಮುಗ್ದತೆ ತುಂಬಿ ಹೆಣ್ಮಕ್ಕ ಹೇಳ್‌ವೆ. ಈಗೀಗಂತೂ ಕ್ರಿಸಿ, ಕಲೆ, ಸಾಹಿತ್ಯ, ಸಂಸ್ಕೃತಿ, ದರ್‌ಮ, ಸಿಕ್ಷಣ, ಉದ್ಯೋಗನ ಜಾಣ್ಮೆಂದ ಎಲ್ಲ ನಿಬಾಯ್‌ಸೊ ತಾಳ್ಮೆ ಕೆಲ ಹೆಣ್ಮಕ್ಕಳ್‌ಲಿ ಉಟ್ಟು.

ಸೋಬಾನೆಲಿ ಹೆಚ್ಚಿಗೆ ಸ್ರೇಸ್ಟಂತೇಳಿರೆ ಕರ್ನಾಟಕ ಸಾಹಿತ್ಯರಂಗದ ಕನ್ನಡ ಜೆನಪದ ಸಾಹಿತ್ಯ ಕಂಪುನ ಸಿರಿವಂತಿಕೆನ ಕಾಣಕ್. ಇದರ್‌ಲಿ ಹೆಚ್ಚಾಗಿ ಹಳೆ ಕನ್ನಡದ ಸಬ್ದಗಳೇ ಬಂದುಟು. ಉದಾರ್‌ಣೆಗೆ ಆದೊ, ಹೋದೊ, ಬಂದೊ ಹೀಂಗೆ. ಈಚೆನ ಪೊದ್ಯಗಳ್‌ಲಿ ತ ಸಬ್ದಗ ಕಾಂಬಕೆ ಸಿಕ್ಕುದುಲೆ. ಇದ್ ಸೋಬಾನೆವೊಳೆಗೆ ಇನ್ನೂ ಬದ್ರಾಗಿ ಒಳ್ದ ಸಬ್ದ ಬಂಡಾರ ಮಾತ್ರ ಅಲ್ಲದೆ ಇವ್ಗಳ ಒಳ್‌ಸಿಕಂಬ ಪ್ರಯತ್ನ ಕೂಡಾ ತುಂಬಾ ಮುಕ್ಯ. ಇದ್ ಅರೆಬಾಸಿಗರ ಸೋಬಾನೆಲಿ ಮಾತ್ರ ಒಳದ್. ಗ್ರಾಮೀಣ ಜೆನತೆ ತಮ್ಮ ಕೆಲ್‌ಸ ಕಾರ್‌ಯಗ ಸುಲಾಬಲಿ ಸಾಗಿಕೆ ಮನರಂಜೆನೆಗಾಗಿ ಬೊಜ್ಜಿಕನ ಹೇಳಿಕಂಡ್ ಬಂದದರ ಕಲ್ತ್ ಕಂಡೊಳೊ. ಹಿಂಗೆ ಒಬ್ಬರ ಬಾಯಿಂದ ಬಂದದರ ಕಲ್‌ತ್ ಹೇಳ್‌ತಿದ್ದ ಕಾಲ ಅಂದ್‌ದಾದರೂ ಈಗನಂಗೆ ಬರಿಯಕೆ ಓದೂ ಎಂತನೂ ಇತ್ತ್‌ಲೆ.

ಸಾಮಾನ್ಯ ಆಗಿ ಈ ಸೋಬಾನೆ ಪೊದ್ಯಗ ಅಕ್ಕಿ, ರಾಗಿ ಬೀಸ್‌ಕನ, ಬತ್ತನ ಕುಟ್ಟಿ ಅಕ್ಕಿ ಮಾಡ್‌ಕನ, ಮೊದ್‌ವೆಲಿ ಸೋಬಾನೆ ಹೇಳ್‌ಕನ, ಬೇರೆ ಬೇರೆ ಜಂಬರಗಳ್‌ಲಿ, ತುಂಬಿ ಪದಗ, ಇನ್ನ್ ಗಾದೆಗ ಒಡ್ಸೊಕತೆ (ಒಗಟು), ಕತೆಗ ಹಂಗೆ ಗಂಡ್‌ಸ್‌ಗ ಸೇರಿ ತಮಾಸೆಗಾಗಿ ಕಳೆವ ಒಂದ್ ಮಹಾ ಸಾಹಿತ್ಯ ಗ್ರಾಮೀಣ ಜೆನರ್‌ಂದ ಒಳ್ದುಟು. ಈಚೆಗೆ ಕನ್ನಡ ನಾಡ್‌ನ ಮಹಾ ಜೆನಪದ ಸಾಹಿತ್ಯ ರಂಗದ ಕಂಪು ಆಗಿ ಒಳ್ದುಟು.

ಬೌದ್ಧಿಕ ಸಕ್ತಿ ಗಂಡ್‌ದ್. ದೈಹಿಕ ಸ್ರಮಲಿ ಹೆಣ್ಣ್‌ನ ಸಕ್ತಿ ಇಲ್ಲೆಂತೇಳಿ ಅವರ ದುಡಿಮೆನ ಕಡೆ ಮಾಡ್‌ದ್, ಇದಿಕೆ ಪ್ರತಿ ಆಗಿದ್ ಜೆನಪದ ಕತೆ ಒಳೆಗೆನ ಹೆಣ್ಣ್‌ನ ಬುದ್ದಿವಂತರ್, ದೈರ್‌ಯವಂತರ್, ಜಾಣೆಯರ್, ಸಾಹಸಿಗ, ಸ್ವಾಬಿಮಾನಿಗ ತನ್ನ ಬುದ್ದಿವಂತಿಕೆಂದ ಮುಂದಾಗುವ ಗಟನೆಗಳ ತಿಳ್‌ಸುವ ಬುದ್ದಿವಂತೆ ಗಂಡ್‌ನ ಬೊದ್‌ಕ್‌ನ ಒಗಟ್‌ನ ಬುಡ್‌ಸಿಕೆ ಆಗದರ ಬುಡ್‌ಸ್‌ವ ಜಾಣೆ ತೇಳಿ ವಿದ್ವಾಂಸರ್ ಬರ್‌ದೊಳೊ.

ಇದೆಲ್ಲಾ ಹಿಂದೆ ಮಹಾಮುನಿಗ ಸಾಸ್ತ್ರೋಕ್ತಾಗಿ ಹೇಳ್‌ದ ಕ್ರಮನ ಇಂದೂ ನಮ್ಮ ಸಂಸ್ಕೃತಿಲಿ ಪರಿಪಾಲಿಸುವೆ. ಹಂಗೆ ಅರೆಬಾಸಿಗರ್ ಇಂತ ಮಹತ್ವಪೂರ್ಣ 'ಸೇಸಗಳ ಮೊದ್‌ವೆ ಸಾಸ್ತ್ರಗಳೊಟ್ಟಿಗೆ ಒಳ್‌ಸಿಕಂಡ್ ಬಂದೊಳೊ. ಮೊದ್‌ವೆಲಿ ಸುರುಗೆ ಕೂಡ್ದ ಎಲ್ಲಲ ಕರ್‌ದ್ ಒಕ್ಕಣೆ ಹೇಳ್‌ವೆ : ಅದ್–ಹತ್ತ್ ಕುಟುಂಬ ಹದಿನೆಂಟ್ ಗೋತ್ರದ ಕೂಡ್‌ದ ಕುಲಸ್ತರ ಮುಂದೆ ಮೊದುಮಕ್ಕಳಿಗೆ ಸೋದರಮಾವ ಕಾಸ್ತಾಳಿ ಕಟ್ಟುವೆ ತೇಳ್‌ಕನ – ಅಲ್ಲಿದ್ದವು ಒಳ್ಳೆ ಕಾರ್‌ಯವಂತವೇ... ತೇಳಿ ಅಪ್ಪಣೆಕೊಟ್ಟವೆ. ಕಾಸ್ತಾಳಿತೇಳ್‌ರೆ ಮೂರ್ ದಿನ ಗಂಟ್ಲ್‌ಗೆ ಕಟ್ಟುವ ಹವಳದ ಮೊಣಿಸರ. ಅದರ್‌ಂದ ಮುಂದೆ ಊರವು ನೆರೆಮನೆವು ಚಪ್ಪರ ಕಂಬಗಳ ಕಾಡ್‌ಂದ ಕಡ್‌ಕಂಡ್ ಬಂದ್ ಎಲ್ಲಿ ಇಸೊಕುತೇಳಿ ಮನೆವರ್‌ನ ಕೇಳುವೆ.

ಆಗ ಮೂಡಂದ ಬಂದ ಮುತ್ತುನ ಹಸೆಕಂಬ ಯಾವ ಮೂಲೆಲಿ ನಿಲ್ಲೊಕು ತೇಳ್‌ಕನ ತಂದವು ಮೂಡ, ಪಡ್‌ವ, ತೆಂಕ್, ಬಡಗ ದಿಕ್ಕ್‌ಗಳ್‌ಲಿ ಯಾವ್ಯಾವ ಮರದ ಕಂಬಗಳ ಮಡ್‌ಗೊಕುತ ಹೇಳ್‌ವೆ. ಸೋಬಾನೆರೂಪಲಿ ಹಿಂಗೆ ಸುರಾದ ಸೋಬಾನೆ ಪದ ಎಣ್ಣೆಅರ್‌ಸಿನ ಸಾಸ್ತ ಮಾಡ್‌ಕನ– ಸಿವ ಸಿವಾ ಜಯ ಜಯಾ ಸ್ರೀ ಗೌರಿ ಮನೋಹರ ಕಾರುಣ್ಯ ಸಾಗರ ಕರುಣವರ ಪತಿಯೇ ತೇಳ್‌ತಾ ಸುರುಮಾಡ್‌ವ ಎಣ್ಣೆ ಸಾಸ್ತ್ರದ ಕ್ರಮಲಿ ಗಂಡ್ ಹೆಣ್ಣ್‌ನ ದೇಹ್ ಆರೋಗ್ಯಕ್ಕಾಗಿ ಎಣ್ಣೆ ಅರ್‌ಸಣ 'ಮಿಸ್ರಮಾಡಿ ಸಾಸ್ತ ಮಾಡ್‌ವೆ. ಒಟ್ಟಿಗೆ ಏಳ್ ಕೊಡಿ ಗರಿಕೆ ಹುಲ್ಲುನ ಎರ್‌ಡ್ ಕೈಲಿ 'ಹಿಡ್‌ಕಂಡ್ ಮೊದುಮಕ್ಕಳ ಮೈಗೆ ಕಾಲ್, ಮೊಣ್‌ಕಾಲ್ ಬುಜಗಳ್‌ಗೆ, ತಲೆಗೆ ಮುಟ್ಟುಸ್‌ವ ಸಾಸ್ತ ಮಾಡ್‌ವೆ. ಇದ್ ರೋಗ ಬಾರದಂಗೆ ತಡೆವ ಸಕ್ತಿವುಟ್ಟು ತೇಳಿ ತಿಳ್‌ಸಿಯೊಳೊ. ಇನ್ನ್ 'ಮೀಯಕೆ ಹೋದರೆ ಅಲ್ಲಿ ಐದ್‌ಜೆನ ಹೆಣ್ಮಕ್ಕ ಸೇರಿ 'ಮೀಸುವ ಪದ್ದತಿ ಉಟ್ಟು. ಅಲ್ಲಿನೂ ಒಂದ್ ಸೋಬಾನೆ ಹೇಳಿಕಂಡ್ ನೀರ್ ಹಾಕ್‌ಸುವೆ. ಮತ್ತೆ ಹೊಸ ಬಟ್ಟೆ ಹಾಕಿ ಪಲದ ಮರದ ಬುಡಲಿ ಗಂಗೆ ಪೂಜೆಮಾಡ್‌ವೆ. ವಂಸಾಬಿವೃದ್ದಿಗಾಗಿ ಪಲದ ಮರದ ಪೂಜೆ ಮಾಡ್‌ವೆ. ಪೂಜೆ ಮಾಡಿ ಬಂದ್ ಮನೆಗೆ ಹತ್ತ್‌ಕನ ಮುತ್ತೈದೆಗ ಆರತಿ ತಂದವೆ, ಆರತಿ ತಂದವುಕೆ 'ವೀಳ್ಯನ ಬಟ್ಲ್‌ಗೆ ಹಾಕ್‌ವ ಕ್ರಮ ಬಾರಿ ಗೌರವತರದ್. ಮತ್ತೆ ಮೊದುಮಕ್ಕ ಕುಲದೇವರ ಹೆಸ್‌ರ್‌ಲಿ ಸೃಂಗೇರಿ ಪೀಟಕೆ ಗುರುಕಾಣಿಕೆ ಕಟ್ಟಿ ಇಸ್‌ವ ಪದ್ದತಿ ಉಟ್ಟು.

ಮತ್ತೆ ಗಂಡ್‌ಹೆಣ್ಣ್‌ನ ದಾರೆಕ್ರಮ ಹೆಣ್ಣ್‌ಗೆ ಮಡ್‌ಲಕ್ಕಿ ತುಂಬುಸುದು ಪ್ರತಿ ಒಂದ್ ಸಾಸ್ತ್ರಕು ಸೋಬಾನೆ ಮಾಲೆ ಅರೆಬಾಸಿಗರ್‌ಲಿ ಉಟ್ಟು. ಹೆಣ್ಣ್ ಇಳ್‌ಸಿಕಾಕನ ಸೋಬಾನೆ, ಗಂಡನ ಮನೆ ಹತ್ತ್‌ಸಿಕೆ ಸೋಬಾನೆ, ನೀರ್ ಮೊದ್‌ವೆ ಸೋಬಾನೆ, ಹೆಣ್ಣ್ ಪಾಯಸ ಮಾಡಿ ಉಂಬಕೆ ಇಕ್ಕಿ ಸಟ್‌ಗದ ದುಡ್ಡು ಕೇಳ್‌ವ ವರೆಗೆ ಅರೆಬಾಸೆ ಸಂಸ್ಕೃತಿಲಿ ಸೋಬಾನೆಗ ಒಳೊ.





ಇಂತ ಪವಿತ್ರ ಸಂಸ್ಕೃತಿಹಿನ್ನಲೆನ ಅರೆಬಾಸಿಗರ್ ಕ್ರಿಸಿಕರ್, ಕ್ರಿಸಿನೆ ಅವರ ಜೀವಾಳ. ಹಿಂಗೆ ಬೊದ್‌ನ ಕಸ್ಟ ಸುಕಗಳ ಅವು ಜೆನಪದ ಗಾದೆ ಕತೆಲಿ ಸೋಬಾನೆ ರೂಪಲಿ ಹೇಳಿಕಂಡ್ ಬಂದೊಳೊ–ಇಂದ್‌ಗೂ ಪರಂಪರೆಲಿ ಹರ್‌ಸವೆ, ಪೊದ್ಯಗ, ಕ್ರಿಸಿ ಸಂಸ್ಕೃತಿಲಿ ಹೊಯ್ಯಪದ ಹೇಳ್‌ದು ಬಾರಿ ಮಹತ್ವನ ಪದ್‌ಕಂಡುಟು.

ಭಾರತೀಯ ಜೆನಜೀವನಲಿ ಗಾದೆ, ಒಡ್ಪೊಕತೆ, ಸಂಪ್ರದಾಯ, ಜೆನಪದ ಪೊದ್ಯಗಳ ಪ್ರತಿಯೊಂದ್ ಸುಬ ಅಸುಬ ಕಾರ್‌ಯಲೂ ಕಾಣಕ್. ಯಾವ ಸುಬಕಾರ್‌ಯ ನಡ್‌ಸಿಕು ಪದ್ದತಿ ಪರಂಪರೆಗ ಅವಸ್ಯ ಬೇಕಾದೆ. ಹಂಗೆ ಇಂದಿಗೆ ಮುಟ್ಟ ನಡ್‌ಕಂಡ್ ಬಂದುಟು.

ಬಾಸಾಹಿತ್ಯಕೆ ಬೇಕಾದ್ ಸುರೂಗೆ ಬಾಸೆ, ಆಸಕ್ತಿ. ಹಂಗೆನೆ ಬರೆಕೆ ಓದಿಕೆನು ಬೇಕಾದು ಸುರೂಗೆ ಬಾಸೆ ಮತ್ತೆ ಆಸಕ್ತಿ. ಬರೆಕೆ ಓದಿಕೆ ತಿಳ್‌ದಿರೊಕು ಅಬಿರುಚಿ ಕುತೂಹಲ ನಂಬಿಕೆ ಪ್ರಯತ್ನ ಅವಕಾಸ ಅನಿವಾರ್‌ಯ ಕಾರಣಗ ಇದ್ದದೆ.

ಹತ್ತ್ ಕುಟುಂಬ ಹದಿನೆಂಟ್ ಗೋತ್ರದ ಗೌಡರ ಸಿರಿವಂತಿಕೆ ಸಂಸ್ಕೃತಿನ ಗಟ್ಟಿಗೊಳ್‌ಸುವಲ್ಲಿ ಸೋಬಾನೆಗ ದೊಡ್ಡ ಪಾತ್ರ ವಯ್‌ಸುವೆ. ಸಂಸ್ಕೃತಿನ ಬೇರೆ ಬೇರೆ ವಿಚಾರಗಳ ಸೋಬಾನೆ ಪೊದ್ಯಗ ಬುಡ್‌ಸುವೆ. ದೇವ ದೇವತೆಗಳ ಮಾದರಿ ವ್ಯಕ್ತಿತ್ವನ ತಂದ್ ಹೊಸ್‌ದಾಗಿ ಮೊದ್‌ವೆ ಆಗವರ ಹರ್‌ಸುವೆ. ಹಂಗೆ ಅರೆಬಾಸಿಕರ ಮುಕ್ಯ ಬೊದ್‌ಕ್ ಮೊದ್‌ವೆನ ಸೊಬಗ್ ಹೊಸತನದ ಕಂಪುನ ಬೀರ್‌ದೆ. ಎಲ್ಲದಕೂ ಮೊದ್‌ವೆಲಿ ಹಾಕ್‌ವ ಹನ್ನೆರಡ್ ಕಂಬ ಮೊದ್‌ವೆನ ನೆಂಪುಸಿದೆ.

ಕಂಬಗಳ ತಂದ್ ಅದರ ನೆಡ್‌ದರ್‌ಂದ ಅದರೊಳಗೆ ನಡೆವ ಎಲ್ಲಾ ವಿಸೇಸತೆನ ಸೋಬಾನೆ ಪದಗ ವರ್‌ಣ್‌ಸ್‌ವೆ. ಇದ್‌ಕಾಗಿ ಗಂಡ್‌ಹೆಣ್ಣ್‌ಗಳಿಗೆ ಪ್ರತ್ಯೇಕ ಸೋಬಾನೆಗ ಒಳೊ.

ಉದಾರ್‌ಣೆಗೆ : ಬೇರಿ ಕಹಳೆಂದ ಸೋಬಾನೆ ಬೋರಿಡೊ ವಾದ್ಯಗಳ್‌ಂದ ನಾರಿಯರ ಸೋಬಾನೆಗಳ್‌ಂದ ಅಲಂಕರಿಸಿದೊ ಸಿವಾ ಸಿವಾ ಜಯ ಜಯ .

ನೆಲ್ಲಕ್ಕಿ ನಡುಬಾಣೆ ದೀಪದ ಎದುರ್‌ಲಿ
ಅಕ್ಕಿನ ಹಸೆ ಬರ್‌ದ್ ಬಣ್ಣದ ಮೊಂದ್ರಿನ ಹಾಸಿ
ಹಸೆಮೇಲೆ ವೀಳ್ಯಇಸಿ, ಗಂದದ ಮಣೆಮೇಲೆ
ವೀಳ್ಯನ ಹಿಡ್‌ದ್ ಕುದ್ದ ಮೊದೊಳಿಗೆ
ಹೆಣ್ಣ್‌ನ : ತಾವರೆ ಮೇಲೆ ಕುದ್ದಿರೊ ಲಕ್ಷ್ಮಿ ನೀನೀಗಾ
ಸೋಬನಕೆ ಕುದ್‌ಕಂಡಿರೊ ಮೊದುಮಗುಳು ನೀನೀಗಾ
ವೀಣೆನ ಹಿಡ್‌ಕಂಡಿರೊ ಸಾರದೆ ದೇವಿಗೆ ॥ ಸಿವಾ ಸಿವಾ ॥
ಬೆಳ್ಳಿದ್ ಮುಕ್ಕಾಲ್ ಚಿನ್ನಾದ ಎಣ್ಣೆಚರ್‌ಕ್
ಬಣ್ಣಕ್ಕೆ ಅರ್‌ಸಣ ಚಾಯೆಗೆ ಎಣ್ಣೆನಾ ಕಲ್‌ಸಿ
ಮೊದುಮಕ್ಕಳ ಮೈಗೆ ಅರ್‌ಸಣ ಎಣ್ಣೆ ಉಜ್ಜೊ
ರೀತಿನ ಬಣ್ಣಿಸುವೆ.

ಹಂಗೆ ಆ ಅರ್‌ಸಣ ಎಲ್ಲಿಂದ ಬಾತ್,

ಹೆಂಗೆ ತಂದೊ ಆ ಸಾಸ್ತ್ರಗಳಿಗೆ ಯಾರ್‌ಯಾರ್ ಬೇಕು, ಬರೊಕು ತೇಳಿ ಸೋಬಾನೆಲಿ ಹೇಳ್‌ವೆ.

ಇನ್ನ್ ಗಂಡ್‌ನ ಮೋರೆ ಚೌರದ ಪೊದ್ಯ ಬಾರಿ ಮಹತ್ವಪೂರ್ಣಾಗಿ ಉಟ್ಟು. ಚೌರ ಸಾಸ್ತ್ರಕೆ ಬಾವ ಹಜಾಮ, ಬಂದ್ ನಡೆಕೆ ನಡೆದಾಳಿ ತೇಳ್‌ವ ಬಿಳಿ ಬಟ್ಟೆನ ಹಾಸುವ ಮೊಡಿವಾಳ ಮೇಲ್ಕಟ್ಟ್ ಸಾಸ್ತ್ರಕೆ ಮುಕ್ಯ ಬೇಕಾದಂವ ಆಗಿದ್ದದೆ. ಹಿಂಗೆ ಆರ್‌ತಿ ಸಾಸ್ತ್ರಕೆ ಆರ್‌ತಿ ಸಬ್ಬಮ್ಮದೇವತೆ ತೇಳ್‌ರೆ ಅರೆಬಾಸಿಗರ್ ಸೃಂಗೇರಿ ಪೀಟಕೆ ಗುರುಕಾಣಿಕೆ ಕೊಡ್‌ವ ಪದ್ದತಿ ಉಟ್ಟು. ನಾಕಾಣೆ ಪಾವಲಿನ ಒಂದ್ ವಾಟೆಗೊಟ್ಟಕೆ ಮೊದ್‌ಮಕ್ಕಳ ಕೈಲಿ ಹಾಕ್‌ಸಿ ಇನ್ನೊಂದ್ ಗೊಟ್ಟೆಗೆ ಒಳ್ಳಮೆಣ್ಸ್ ಹಾಕ್‌ಸಿ ಅದರ ಮೂಲಸ್ತಾನ ಆದ ಸೃಂಗೇರಿಗೂ, ಕೊಡ್‌ಗ್‌ನವು ಮುಡ್‌ಪುಗೆ ಹಾಕಿ ತಿರ್‌ಪತಿಗೂ ಮುಟ್ಸ್‌ವೆ. ಇನ್ನ್ ಮೊದ್‌ರಂಗಿ ಸಾಸ್ತ್ರಲಿ ಮೊದ್‌ರಂಗಿ ಸೊಪ್ಪು ಕೊಯ್ಯಕೆ ಅಕ್ಕ ತಂಗೆಕ ಹೋಕು. ಹೋಕನ ದೈನ ಬುಡಕೆ ಚೊಂಬುಲಿ ನೀರ್ ಹೊಯ್ಯಕು. ಬಾಳೆಲೆಲಿ ಕೊಯ್‌ದ್ ತಂದ್ ಅರ್‌ದ್ ಸೋದರ ಮಾಂವ ಮೊದ್‌ರಂಗಿ ಹಾಕೊಕುಂತೇಳ್‌ವ ಸಾಸ್ತ ಇಂದಿಗೂ ಉಟ್ಟು. ಇಂತ ಮನರಂಜನೆ ಮತ್ತೆ ಮಹತ್ವಪೂರ್ಣ ಪದಗಳ ಕೇಳಿಕೆ ಕುಸಿ ಆದೆ.

ದಿಬ್ಬಣ ಹೋಕನ ಸೀತಾವಳಿ ಚಪ್ಪರದೊಳಗೆ ಹೆಣ್ಣ್‌ನ ಮನೆಗೆ ಹೋಕನ ಹೇಳ್‌ವ ಹಾಡ್ ಹಿಂಗುಟ್ಟು.

ಪಟ್ಟಣದ ಚೆನ ದೂರದ ಬಂದುಗ
ರಾಯಾವಣ್ಣಯ್ಯನ ಮೊದ್‌ವೆಗೆಂತೇಳ್‌ತಾ
ಎಲ್ಲುಟ್ಟು ಚಪ್ಪರ ಎಲ್ಲುಟ್ಟು ಚಾವಡಿ
ಕುದ್ರಿಕೆ ನಾವ್‌ಗೆ ಜಾಗೆ ಎಲ್ಲಿತ ಕೇಳ್‌ವ ಸೊಗಸ್

ಅತ್ತೆ ಅಳಿಯಂಗೆ ಕುಡಿಯಕೆ ಹಾಲ್ ತುಪ್ಪನ ಕೊಡ್‌ಸಿತಾದು ವಿಸೇಸ.

ದಾರೆಗಾಕನ
ಮುತ್ತ್ ನ ಚಪ್ಪರ ಮೂವತ್ತ್ ಗಾವುದ ಸೋಬಾನವೆ
ಮುತ್ತ್ ನ ಹೊಂಬಾಳೆ ಚಿಗುಸೇವು
ನುಗ್ಗೆ ಮರದಡಿಗಾಗಿ ನುಗ್ಗಿ ಬಾವ ಹಾರುವಯ್ಯಾ ಸೋಬಾನವೆ
ಕಂದನ ಕೈಮೇಲೆ ಕನ್ನೆದ್ ಕೈಕೆಳೆಗೆ ಸೋಬಾನವೆ
ಅಂದರೆ ಆ ಚಪ್ಪರ ಹೆಂಗುಟ್ಟು ತೇಳ್‌ರೆ

ಎರ್‌ಡ್ ಕಡೆಲಿ ಸಾಲಾಗಿ ನೆಟ್ಟ ಬಾಳೆ ಅದರ್‌ಂದ ಹೊರ್‌ಟಂತಾ ಹೂ ತುಂಬಿದ ಬಾಳೆಗೊನೆಗ ಅದಿಕೆ ಅಲಂಕಾರ ಮಾಡ್ದ ಬಂಗಾರದ ಹೂ ಚಿಗ್‌ರಿ ನಿತ್ತುಟುತೇಳಿ ಪೊದ್ಯಲಿ ವರ್ಣಿಸುವೆ. ಇದರ ಕೇಳ್‌ಕನ ನಾವ್ ಅಲ್ಲಿ ನಿತ್ತೊತ್ತೊತೇಳ್‌ದು ಗ್ಯಾನದೆ.

**ಹೆಣ್ಣ್ ಇಳ್ಸ್‌ಕನ :** ಹೇಳ್‌ವ ಬುದ್ದಿಮಾತ್ ಜೆನಕ ರಾಜನ ಮಗಳ್ ಸೀತೆನ ಹೋಲ್‌ಸುವೆ. ದೇವ ದೇವಿಯರ ಹೋಲ್‌ಸಿ ಅವರ ಗುಣಗಾನ ಮಾಡ್‌ವ ಸೋಬಾನೆ ಪದಗಳ ಹೇಳಿ ಅವರಂಗೆ

ದೀರ್ಗಾಯಸ್‌ಗಳಾಗಿ ಗುಣವಂತರಾಗಿ ಬಾಳಿಕೆ ಹಾರೈಸ್‌ವ ದಾಂಪತ್ಯದ ಬೊದ್‌ಕ್‌ನ ಸೋಬಾನೆ ಪದಗಳ ಮಾಲೆನೇ ಸೋಬಾನೆ ಆಗುಟು. ಇದ್ ಅರೆಬಾಸಿಗ್‌ರ್‌ಲಿ ಉಟ್ಟು.

ಸೋಬಾನೆ ತೇಳ್‌ರೆ ಬಟ್ರ್‌ಗ ಇಲ್ಲದ ಮೊದ್‌ವೆಲಿ ಮಂತ್ರದಸ್ಟೆ ಪವಿತ್ರತ ನಂಬುವೆ. ಸೋಬಾನೆ ಮೊದ್‌ವೆಗೆ ಸಮ್ಮಂದ ಪಟ್ಟ ಪದನೆ ಆಗುಟ್ಟು. ಯುವಜೆನತೆ ಹಿಂದೆನ ಜೆನಪದ ಕಲೆ ಸಾಹಿತ್ಯ ಸಂಪ್ರದಾಯ ಸೋಬಾನೆಗಳ ಅವರ ಹಿರಿಯರ್‌ಂದ ತಿಳ್‌ಕಂಡ್ ಸಿಕ್ಷಣದೊಟ್ಟಿಗೆ ತಿಳಿಯೊಕುತಾದರೆ ಅಳ್‌ದ್ ಹೋಗತಿರ್‌ವ ಸಂಸ್ಕೃತಿನ ಒಳ್‌ಸಿ ಸಾಹಿತ್ಯ ರೂಪಲಿ ಬೆಳ್ಸೊಕು. ಈಚೆಗೆ ಸರಕಾರ ವಿಸೇಸಾಗಿ ಅಕಾಡೆಮಿಗಳ ಮೂಲಕ ಇದರೆಲ್ಲ ಒಳ್ಸುವ ಪ್ರಯತ್ನ ಮಾಡ್‌ತುಟ್ಟು. ಸುಮಾರ್ ಹೆಣ್ಮಕ್ಕ ಈಗೀಗ ಸೋಬಾನೆ ಪದಗಳ್‌ನ ಕಲ್‌ತೊಳೊ. ಜೀವ ತುಂಬಿಯೊಳೊ. ಮೊದ್‌ವೆಲಿ ಹಾಡಿ ಅದರ ಮಹತ್ವನ ಹೆಚ್ಚ್ ಮಾಡ್‌ತಿರ್‌ದು ಬಾರಿ ಕುಸಿನ ಸಂಗತಿ.ಈ ರೀತಿಲಿ ಹೆಣ್ಮಕ್ಕ ಸೋಬಾನೆ ಸಂಸ್ಕೃತಿನ ಒಳ್ಸಿಕಂಣ್ತೊಳೊ. (ಜಿ.ಬಿ.)

**ಸೋಮವಾರಪೇಟೆ :** ಕೊಡಗ್ ಜಿಲ್ಲೆನ ಒಂದ್ ತಾಲ್ಲೂಕ್ ಹಂಗೆ ತಾಲ್ಲೂಕ್‌ನ ಆಡೆಳ್ತ ಕೇಂದ್ರ. ಕೊಡಗ್‌ಲಿ ಹಾಸನ ಜಿಲ್ಲೆನ ಸಕಲೇಸ್ಪುರ, ಆಲೂರು ತಾಲ್ಲೂಕ್‌ಗ, ಪಡ್ವ ದಿಕ್ಕ್‌ಗೆ ದಕ್ಷಿಣಕನ್ನಡ ಜಿಲ್ಲೆನ ಪುತ್ತೂರ್ ತಾಲ್ಲೂಕ್ ಮತ್ತೆ ಮಡಿಕೇರಿ ತಾಲ್ಲೂಕ್, ತೆಂಕ ಮತ್ತೆ ಆಗ್ನೇಯಕ್ಕೆ ವಿರಾಜಪೇಟೆ ತಾಲ್ಲೂಕ್, ಮೂಡಕೆ ಹಾಸನ ಜಿಲ್ಲೆನ ಅರಕಲಗೂಡು ಮತ್ತೆ ಮೈಸೂರು ಜಿಲ್ಲೆನ ಪಿರಿಯಾಪಟ್ಟಣ ತಾಲ್ಲೂಕುಗ ಸುತ್ತಂದ ಉಟ್ಟ್. ಸನಿವಾರಸಂತೆ, ಸುಂಟಿಕೊಪ್ಪ, ಸೋಮಾರಪೇಟೆ ಮತ್ತೆ ಕುಶಾಲನಗರ, ಶಾಂತಳ್ಳಿ, ಕೊಡ್ಲಿಪೇಟೆ ಇವು ಹೋಬಳಿಗ. 132 ಗ್ರಾಮಗ ಇರ್‌ವ ಈ ತಾಲ್ಲೂಕ್‌ನ ವಿಸ್ತೀರ್ಣ 938.9 ಚ. ಕಿಮೀ. ಜೆನಸಂಕೆ 2,05, 921. ಇದರ್‌ಲಿ 1,85,515 ಗ್ರಾಮಸ್ತರ್ ಗ 20,406 ಪೇಟೆನವೂ ಒಳ.

ಕೊಡಗ್ ಜಿಲ್ಲೆನ ಬಡಗ ಮತ್ತೆ ಮೂಡದಕಡೆಗೆ ಇರ್‌ವ ಈ ತಾಲ್ಲೂಕ್ ಜಾಸ್ತಿ ಬಾಗ ಪ್ರಸ್ತಬೂಮಿಂದ ಕೂಡಿಟು. ಇಲ್ಲಿ ಹೆಚ್ಚಿ ಎತ್ತರದ ಗುಡ್ಡೆಗ ಇಲ್ಲೆ. ಮಡಿಕೇರಿನ ತೆಂಕಕೆ ಎರಡ್ ಕಬ್‌ರಾಗಿ ಒಡಿವ ಬೇಂಗುನಾಡ್ ಶ್ರೇಣಿನ ಒಂದ್ ಕಬ್‌ರ್ ಡೊಂಕುಡೊಂಕಾಗಿ ಕುಶಾಲನಗರದ ಕಡೆಗೆ ಹೋದೆ. ಇದರ ಬಡಗ ಕೊಡಿ ಕಲ್ಲೂರು ಬೆಟ್ಟ, ಕೋಟೆಬೆಟ್ಟದ ಬಡಗಕೆ ಸಂತೆಹಳ್ಳಿ ಬೆಟ್ಟಗ, ಇದರ ಅಕೇರಿಗೆ ಇರ್‌ದೆ ಮುಕ್ರಿಬೆಟ್ಟ. ಈ ತಾಲ್ಲೂಕ್‌ಲಿ ಚೂನ ಗುಡ್ಡೆಗ ಇಲ್ಲೆ. ಇಲ್ಲಿ ನೆಡುನೆಡುಲಿ ಪಚ್ಚೆ ಇಳ್ಜಾರ್‌ಗ, ಮಂದ ಕಾಡ್‌ಗ ಇದ್ದ್, ಯುರೋಪುನ ಉದ್ಯಾನ, ನೆಲದ ಚಿತ್ರ, ನೆಂಪುಗೆ ಬಂದದೆ ತೇಳುವೆ. ಕಲ್ಲೂರ್ ಮಲೆಲಿ ಸಾಗ್ವಾನಿ ಮರ ಜಾಸ್ತಿ ಉಟ್ಟ್. ಈ ಕಾಡುಗಳ್‌ಲಿ ಗಂದದ ಮರದಂಗೆ ಬೆಲೆಬಾಳುವ ಮರಂಗ ಬೆಳ್ದದೆ. ತಾಲ್ಲೂಕ್ ನ ಮೂಡಕೆ ತೆಟ್ಟ್‌ನ ಜಾಗೆಗ ಕಂಡದೆ.

ಹೆಚ್ಚಾಗಿ ವರ್‌ಸ ಇಡೀ ಪಚ್ಚೆ ಇರ್‌ವ ಇಲ್ಲಿನ ಕಾಡ್‌ಗಳ್‌ಲಿ ಬೇರೆ ಬೇರೆ ಜಾತಿನ ಕಾಡ್ ಪ್ರಾಣಿಗಳ ಕಾಣಕ್. ತಣ್ಣಂಗೆ ಹವೆ ಇರ್‌ವ ಈ ತಾಲ್ಲೂಕ್‌ಲಿ ವರ್‌ಸೋಳ್ ಅಂದಾಜಿಗೆ ಬೀಳ್‌ವ ಮಳೆ 2,301. 10 ಮಿಮೀ.

ಹೇಮಾವತಿ, ಕಾವೇರಿ ಮತ್ತೆ ಹಾರಂಗಿ ಈ ತಾಲ್ಲೂಕ್‌ನ ಹಳ್ಳಂಗ. ತಾಲ್ಲೂಕ್‌ನ ಬಡಗ್‌ನ ಗಡಿ ಕರೆಗೆ ಪಡುವಣಂದ ಮೂಡದಿಕ್ಕ್‌ಗೆ ಮೋರೆ ಹಾಕಿ ಹರಿವ ಹೇಮಾವತಿ ಈ ತಾಲ್ಲೂಕ್‌ನ ಆಲೂರು ತಾಲ್ಲೂಕ್‌ಂದ ಬೇರೆ ಮಾಡಿ ಮುಂದೆ ಹಾಸನ ಜಿಲ್ಲೆನ ಹುಕ್ಕದೆ. ಕಾವೇರಿ ಹಳ್ಳ, ತೆಂಕಂದ ಬಡಗಕೆ ಈ ತಾಲ್ಲೂಕ್‌ನ ಮೂಡಣದ ಗಡಿಲಿ ಹರ್‌ದ್ ವಿರಾಜಪೇಟೆ, ಪಿರಿಯಾಪಟ್ಟಣ ತಾಲ್ಲೂಕುಗಳ ಬೇರೆ ಮಾಡ್ದೆ. ಮಡಿಕೇರಿ ತಾಲ್ಲೂಕ್‌ಂದ ಹರ್‌ದ್ ಬಾವ ಹಾರಂಗಿ, ಕಕ್ಕೆಹೊಳೆ, ಚೇರಹೊಳೆ, ಮಾದಾಪುರಹೊಳೆ ಮತ್ತೆ ಹಟ್ಟಿಹೊಳೆ ಇಂತ ಸಣ್ಣ ಹಳ್ಳಗಳ ಕೂಡಿಕಂಡ್ ಮೂಡಕೆ ಮೋರೆ ಮಾಡಿಕಂಡ್ ಹರ್‌ದ್ ಕುಸಾಲ ನಗರದ ಬಡ್‌ಗಕೆ ಕೂಡಿಗೆನ ಹಕ್ಕಲೆ ಕಾವೇರಿನ ಹಳ್ಳನ ಸೇರಿಕಂಡದೆ. ತಾಲ್ಲೂಕ್ ಲಿ ಬೇಸಾಯಕೆ ಉಪಯೋಗ ಆಗಿರ್‌ವ ಮುಕ್ಯ ಕೆರೆಗಳ್‌ಲಿ ಹಲಗೋಟೆ ಹಕ್ಕಲೆನ ಹಲಗೋಟೆ ಕೆರೆ, ಸೋಮಾರಪೇಟೆ ಹಕ್ಕಲೆಲಿರುವ ಹಳೇದಾದ ಹೊನ್ನಮ್ಮನ ಕೆರೆನ ಹೆಸ್ರಿಸಕ್. ಸೋಮಾರಪೇಟೆ ಹಕ್ಕಲೆ ಕಟ್ಟಿರುವ ಸೌತಿಹಳ್ಳ ಅಣೆಕಟ್ಟ್‌ಂದಲೂ ನೀರಾವರಿಗೆ ಸಾಯ ಆದೆ.

ಇಲ್ಲಿರ್‌ದು ಕಪ್ಪು, ಕೆಂಪು ಜೇಡಿಮಿಶ್ರಿತ ಮಣ್ಣ್‌ನ ಬೂಮಿ. ಬೆಟ್ಟಕಣಿವೆ ಪ್ರದೇಸಲಿ ಕಾಪಿ, ಏಲಕ್ಕಿ, ಇಂತ ತೋಟದ ಬೆಳೆಗಳಿಗೆ ಒಪ್ಪುವಂತ ಪಲವತ್ತಾದ ಕೆಂಪು ಜೇಡಿಮೊಣ್ಣ್ ನ ಜಾಗೆ, ಹಳ್ಳದ ಕರೆಗಳ್‌ಲಿ ಮೆಕ್ಕಲುಮೊಣ್ಣುನ ಜಾಗೆನೂ ಉಟ್ಟ್. ಬೇಸಾಯನ ನಂಬಿಕಂಡಿರ್‌ವ ಈ ತಾಲ್ಲೂಕ್‌ಲಿ ಬತ್ತ, ಕಾಪಿ, ಯಾಲಕ್ಕಿ ಮತ್ತೆ ಕಿತ್ಲೆ ಹಣ್ಣ್ ಬೆಳ್ದವೆ. ಬೇಸಾಯನ ಅಬಿವೃದ್ದಿ ಪಡ್ಸಿಕಾಗಿ ಕೂಡಿಗೆಲಿ ಒಂದ್ ಸರ್‌ಕಾರಿ ಸಂಸ್ಕರಣ ಕೇಂದ್ರ ಉಟ್ಟ್. ದನ ಸಾಂಕಾಣೆ ಮತ್ತೆ ಅಬಿವೃದ್ದಿಗೆ ಸಾಯ ಮಾಡಿಕಾಗಿ ಮುಕ್ಯ ಅಬಿವೃದ್ದಿ ಕೇಂದ್ರಗ ಸೋಮಾರ ಪೇಟೆ ಮತ್ತೆ ಕೂಡಿಗೆಲಿ ಉಟ್ಟ್. ಕೊಡ್ಲಿಪೇಟೆ, ಶಾಂತಳ್ಳಿ, ಸೋಮಾರ ಪೇಟೆ, ಸನಿವಾರಸಂತೆ, ಮಾದಾಪುರ ಮತ್ತೆ ಕುಶಾಲನಗರ ಇಂತ ಕಡೆ ದನದ ಆಸ್ಪತ್ರೆಗ ಒಳೊ. ಹಂದಿ ಸಾಂಕಿಕೂ ಪ್ರೋತ್ಸಾಹ ಕೊಟ್ಟವೆ. ಮೀನುಸಾಂಕಣೆನೂಸ ಹಚ್ಚು ಮಟ್ಟಿಗೆ ಉಟ್ಟ್.

ಸೋಮಾರಪೇಟೆ ಮತ್ತೆ ಕೂಡಿಗೆಲಿ ಒಂದೊಂದು ಬೇಸಾಯಕೆ ಬೇಕಾದ ಸಾಮಾನ್ ಕಾರ್‌ಕಾನೆ ಉಟ್ಟ್. ಕಾಪಿ ತೋಟಕೆ ಬೇಕಾದ ಸಾಮಾನ್‌ಗಳ ಇಲ್ಲಿನೇ ತಯಾರ್ ಮಾಡ್‌ವೆ. ಸನಿವಾರಸಂತೆಲೊಂದು ಹೊಲಿಗೆ ಕಲಿಕೆಸಾಲೆ ಉಟ್ಟ್. ಕೂಡಿಗೆಲಿ ಕಾಪಿ ಪರಿಸ್ಕರಣ ಕಾರ್‌ಕಾನೆ ಉಟ್ಟ್.ಕೆಲೊವ್ ಅಕ್ಕಿ ಮಿಲ್ಲ್‌ಗ ಈ ತಾಲ್ಲೂಕ್‌ಲಿ ಉಟ್ಟ್. ಜೇನ್ ಸಾಂಕಣೆ, ಮೊಂದ್‌ರಿ ಮಾಡ್‌ದು ಇಂತದ್‌ಕೆಲ್ಲ ಸಮ್ಮಂದ ಪಟ್ಟಂಗೆ ಸಹಕಾರ ಸಂಗಗ ಸನಾ ಉಟ್ಟ್. ತಾಲ್ಲೂಕ್‌ನ ಕ್ರಿಸಿ ಮತ್ತೆ ಕೈಗಾರಿಕೆಗಳಿಗೆ

ದುಡ್ಡ್ ಸಾಯ ಮಾಡಿಕಾಗಿ ವಾಣಿಜ್ಯ ಮತ್ತೆ ಸಹಕಾರಿ ಬ್ಯಾಂಕ್‌ಗ ಒಳೊ. ಅಂಚೆ, ತಂತಿ, ದೂರವಾಣಿ, ಪ್ರೌಢಶಾಲೆ, ಆಸ್ಪತ್ರೆ, ವಿದ್ಯುತ್ ಇದೆಲ್ಲನು ಇಲ್ಲಿ ಉಟ್ಟ್.

ಮೈಸೂರ್ – ಕುಸಾಲನಗರ –ಸುಂಟಿಕೊಪ್ಪ – ಮಡಿಕೇರಿ ರಾಜ್ಯ ಹೆದ್ದಾರಿಯಿದ್ದ್, ತಾಲ್ಲೂಕ್‌ನ ಒಳ್ದ ಎಲ್ಲ ಪೇಟೆ ಮತ್ತೆ ಗ್ರಾಮಗಳಿಗೆ ಮಾರ್ಗ ಸಂಪರ್ಕ ಉಟ್ಟ್.ಇಲ್ಲಿಗೆ ಹಕ್ಕಲೆ ಇರ್‌ವ ರೈಲ್ ನಿಲ್ದಾಣ ಹಾಸನ ರೈಲ್ ನಿಲ್ದಾಣ. ಇದ್ ಸುಮಾರ್ 70 ಕಿ. ಲೋ ಮೀಟರ್ ದೂರಲಿ ಉಟ್ಟು. ಹಕ್ಕಲೆನ ಅಂತಾರಾಷ್ಟ್ರೀಯ ವಿಮಾನ ನಿಲ್ದಾಣಂತ ಹೇಳಿರೆ ಕಣ್ಣೂರು ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ. ಇದ್‌ನು 120 ಕಿ. ಲೋ ಮೀಟರ್ ದೂರಲುಟ್ಟು. ಅದಲ್ಲದೆ ಮಂಗ್‌ಳೂರು ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ ಸ 160 ಕಿ. ಲೋ ಮೀಟರ್ ದೂರಲುಟ್ಟು.

ಸೋಮಾರಪೇಟೆನ ವಾಯವ್ಯಕ್ಕೆ 6 ಕಿಮೀ ದೂರಲಿ ದೊಡ್ಡವೀರ ರಾಜೇಂದ್ರ ಒಡೆಯ (18ನೆಯ ಶತಮಾನ) ಕಟ್ಟ್‌ಸಿದ ವೀರಶೈವ ಮಟ ಉಟ್ಟ್. ಅಬ್ಬಿಮಟತೇಳಿನೂ ಇದರ ಕರ್‌ದವೆ. ಇಲ್ಲಿ ಬಾರಿ ಪಂಡ್‌ನ ಓಲೆಗರಿ ಗ್ರಂತಗ ಒಳೊ. ಸುಂಟಿಕೊಪ್ಪದ ಬಡ್ಗಕೆ 8 ಕಿಮೀ ದೂರಲಿರುವ ಗರ್‌ಗಂದೂರ್‌ಲಿ ಚೆಂಗಾಳ್ವರ್‌ಗೆ ಸೇರ್‌ದ (12ನೆಯ ಶತಮಾನ) ಹಳೆಕೋಟೆ ಜಾಗೆನೂ ಮಹಾದೇವ ಚೆಂಗಾಳ್ವರ್‌ನ ಬಗ್ಗೆ 1174ರ ಒಂದ್ ವೀರಗಲ್ಲ್ ಸನಾ ಉಟ್ಟ್. ಸೋಮಾರಪೇಟೆನ ಬಡಗಕೆ 31 ಕಿಮೀ ದೂರಲಿರುವ ಕೊಡ್ಲಿಪೇಟೆ ಒಂದ್ ಯಾಪಾರ ಕೇಂದ್ರ ಮತ್ತೆ ಪೇಟೆ. ಕುಶಾಲ್ ನಗರದ ಬಡಗಕ್ಕೆ 6 ಕಿಮೀ ದೂರಲಿರ್‌ವ ಕೂಡಿಗೆ ಕುಶಾಲನಗರ–ಸೋಮವಾರಪೇಟೆ ಮಾರ್‌ಗ ನಡುಲಿ ಉಟ್ಟ್. ಇಲ್ಲಿ ಮಾದರಿ ಪಶುಸಂಗೋಪನ ಮತ್ತೆ ವ್ಯವಸಾಯ ಕೇಂದ್ರ ಉಟ್ಟ್. ಸೋಮಾರಪೇಟೆನ ವಾಯವ್ಯಕ್ಕೆ 21 ಕಿಮೀ ದೂರಲಿರುವ ಕುಮಾರ ಹಳ್ಳಿಂದ ಸು. 2 ಕಿಮೀ ದೂರಲಿ ಪುಸ್ಪಗಿರಿ ಅಲ್ಲರೆ ಸುಬ್ರಹ್ಮಣ್ಯ ಬೆಟ್ಟವುಟ್ಟ್. ಬೆಟ್ಟದ ಮೇಲೆ ಈಸ್ವರ ದೇಸ್ತಾನಲಿ ತುಲಾಸಂಕ್ರಮಣದ ದಿನ ವಿಸೇಸ ಪೂಜೆ ನಡ್ದದೆ. ಸೋಮಾರಪೇಟೆನ ಆಗ್ನೇಯಕೆ 28 ಕಿಮೀ ದೂರಲಿರುವ ಕುಶಾಲನಗರ ತಾಲ್ಲೂಕ್‌ನ ಒಂದ್ ಮುಕ್ಯ ವ್ಯಾಪಾರ ಕೇಂದ್ರ ಮತ್ತೆ ಪೇಟೆ. ಸನಿವಾರಸಂತೆನ ಆಗ್ನೇಯಕೆ 5 ಕಿಮೀ ದೂರಲಿ ಇರ್‌ವ ನಿಡ್ತ ಗ್ರಾಮಲಿ ಹೊಯ್ಸಳ ದೊರೆ ಮೂರನೆ ನರಸಿಂಹನ ಕಾಲದ 1255 ಮತ್ತೆ 1285ಕ್ಕೆ ಸೇರ್ ದ ಎರಡ್ ವೀರಗಲ್ಲ್‌ಗ ಒಳೊ. ಸನಿವಾರಸಂತೆಗೆ ಆಗ್ನೇಯಕೆ 6 ಕಿಮೀ ದೂರಲಿರ್‌ವ ಮಳ್ಳೂರಿನ ಜೈನಬಸದಿಗೆ ಹೆಸ್ರು ಉಟ್ಟು. ಇಲ್ಲಿರ್ ವ 1058ಕ್ಕೆ ಸೇರ್‌ದ ಸಾಸನದಲಿ ಎರಡ್‌ನೆ ರಾಜೇಂದ್ರ ಚೋಳ ಪೃತ್ವಿ ಕೊಂಗಾಳ್ವ, ಈ ಬಸದಿಗೆ ಎಣ್ಣೆನೂ ಹಳ್ಳಿ ಗ್ರಾಮಂಗಳ ಅವನ ಅಯ್ಯೆ ಪೋಚಬ್ಬರಸಿನ ನೆಂಪುಗಾಗಿ ಕೊಟ್ಟತ್‌ಂತೇಳುವಂತದ್ದ್ ಗೊತ್ತಾದೆ.

ಸೋಮಾರಪೇಟೆನ ನೈಋತ್ಯಕ್ಕೆ ಸು. 19 ಕಿಮೀ ದೂರಲಿರ್‌ವ ಮಾದಾಪುರದ ಹಳ್ಳದ ಕರೆಲಿ ಒಂದನೆ ಮತ್ತೆ ಎರಡ್‌ನೆ ಲಿಂಗರಾಜೇಂದ್ರ ಒಡೆಯರ್ ಇವರ ಗುರ್‌ಜಿಗ ಉಟ್ಟ್. ಹಿಂದೆ ಕೊಡಗ್‌ನ ಹಾಲೇರಿ ರಾಜರ್ ಮಾದಾಪುರ ಮಟಂದ ಹಳ್ಳದ ಆಚೆ ಕರೆಲಿದ್ದ ಗ್ರಾಮಕೆ ಮೆರವಣಿಗೆ ಹೋಗತಿದ್ದೊ. ಆ ಮೆರವಣಿಗೆನ ಜಂಬೂಸವಾರಿ ತೇಳಿ ಕರೆತಿದ್ದದ್ದರ್‌ಂದ ಈ ಊರ್‌ಗೆ ಜಂಬೂರು ಹೇಳ್‌ವ ಹೆಸ್ರೂ ಬಂದುಟು. ಕುಸಲ ನಗರಕ ನೈಋತ್ಯಲಿ 13 ಕಿಮೀ ದೂರಲಿರ್‌ವ ನಂಜರಾಜಪಟ್ಟಣ ಹಳ್ಳಿಸಮಯ ಕೊಡಗ್‌ನ ಚೆಂಗಾಳ್ವರ ರಾಜಧಾನಿಯಾಗಿತ್ತ್. ಈ ಪಟ್ಟಣನ ಪಿರಿಯಾಪಟ್ಟಣದ ದೊರೆ ನಂಜರಾಜ ಕಟ್ಟಿದ್ ಇಲ್ಲಿತ್ತ್. ಇಲ್ಲೊಂದ್ ನಂಜುಂಡೇಶ್ವರ ದೇವಾಲಯ ಉಟ್ಟು ಕೂಡಿಗೆಂದ ಹಾಸನ ಜಿಲ್ಲೆನ ಕೊಣನೂರಿಗೆ ಹೋಕನ ಮಾರ್‌ಗಲಿ ಸಿಕ್ಕುವ ರಾಮಸ್ವಾಮಿ ಕಣಿವೆಲಿ ಪಂಡ್‌ನಕಾಲದ ರಾಮಸ್ವಾಮಿ ದೇವಾಲಯ ಉಟ್ಟ್. ಸೋಮಾರಪೇಟೆನ ಬಡಗಕೆ 20 ಕಿಮೀ. ದೂರಲಿರ್‌ವ ಸನಿವಾರಸಂತೆ ಒಂದ್ ಹೋಬಳಿ ಮತ್ತೆ ಯಾಪಾರ ಕೇಂದ್ರ. ಪ್ರತಿ ಶನಿವಾರ ಸಂತೆ ಸೇರುದು. ಇಲ್ಲಿನ ದನಂಗಳ ಜಾತ್ರೆ ಬಾರಿ ಹೆಸ್ರು ಪಡ್ದುಟು. ಸೋಮಾರ ಪೇಟೆನ ತೆಂಕಕೆ 28 ಕಿಮೀ ದೂರಲಿರ್‌ವ ಸುಂಟಿಕೊಪ್ಪ ಮಡಿಕೇರಿ–ಮೈಸೂರು ರಾಜ್ಯ ಹೆದ್ದಾರಿಲಿರ್‌ವ ಒಂದ್ ಪೇಟೆ ಮತ್ತೆ ಯಾಪಾರ ಕೇಂದ್ರ.

ಸೋಮಾರಪೇಟೆ ಈ ತಾಲ್ಲೂಕ್‌ನ ಆಡಳಿತ ಕೇಂದ್ರ ಹಂಗೆ ಪಟ್ಟಣ. ಮಡಿಕೇರಿನ ಈಸಾನ್ಯಕೆ 40 ಕಿಮೀ ದೂರಲಿ ಮಡಿಕೇರಿ–ಸನಿವಾರಸಂತೆ ಮಾರ್‌ಗ ನಡುಲಿ ಉಟ್ಟ್. ಜೆನಸಂಕ್ಯೆ 20,406. ಈ ಪಟ್ಟಣದ ಸುತ್ತನೂ ಕಾಪಿ, ಯಾಲಕ್ಕಿ, ಕಿತ್ತಳೆ ತೋಟಗ ಬತ್ತದ ಗದ್ದೆಗ ಹರಂಡಿಕಂಡೊಳೊ. ಸುತ್ತ ಮುತ್ತ ಗ್ರಾಮಕೆ ಮುಕ್ಯ ವ್ಯಾಪಾರ ಕೇಂದ್ರಾಗಿ ಇಲ್ಲಿ ಗ್ರಾಮ ಮತ್ತೆ ನೆರೆಕರೆ ಪೇಟೆಗಳಿಗೆ ಮಾರ್‌ಗ ಸಂಪರ್ಕ ಉಟ್ಟ್. ವಾಣಿಜ್ಯ ಮತ್ತೆ ಸಹಕಾರ ಬ್ಯಾಂಕುಗ ಸನಾ ಒಳೊ.

ವಿದ್ಯುತ್, ಅಂಚೆ, ತಂತಿ, ದೂರವಾಣಿ ಆಸ್ಪತ್ರೆ, ಮೊದ್ದ್‌ನಂಗಡಿ, ಪ್ರೌಢಶಾಲೆ, ಒಂದ್ ತಾಂತ್ರಿಕ ಶಾಲೆ ಇಂತೆಲ್ಲ ಸೌಲಬ್ಯ ಉಟ್ಟ್. ವಾರದ ಸೋಮಾರ ಇಲ್ಲಿ ಯಾಗೋಳು ಸಂತೆ ಇದರ್‌ಂದ ಸೋಮಾರಪೇಟೆಂತೇಳುವ ಹೆಸ್ರ್ ಬಂದ್ ಮುಂದೆ ಅದೇ ಪಟ್ಟಣ ಮತ್ತೆ ತಾಲ್ಲೂಕ್‌ನ ಹೆಸ್ರಾಗಿ ನಿಂತುಟುಂತೇಳುವಂತದ್ದ್ ಕತೆ. ಈ ಪಟ್ಟಣ ಪುರಸಬಾಡಳಿತಕೆ ಸೇರಿಟು. (ಡಿ.ಎನ್.ಕೆ.)

**ಸ್ವಾಮಿ ಅಪರಾಂಪರ :** ಅಪರಾಂಪರರ ಊರ್ ಆಗದ ಮೈಸೂರು ಸೀಮೆಗೆ ಸೇರ್‌ದ ತುಮಕೂರು ಜಿಲ್ಲೆನ, ಮಾಯಸಂದ್ರ ತಾಲುಕ್‌ನ ಕಡಗನೂರು ತೇಳ್‌ವ ಹಳ್ಳಿನವ್. ಇವರ ಅಪ್ಪನ ಹೆಸ್ರ್ ಹನುಮಂತರಾಯ ಮತ್ತೆ ಅಮ್ಮ ಗೋಪಮ್ಮ. ಬಾರಿ ಸಣ್ಣ ಪ್ರಾಯಲಿ ಇವ್ಕೆ ಮೊದ್‌ವೆ ಆತ್. ಒಂದ್ ಮಗಳ್ ಇವ್ಕೆ ಇತ್ತ್. ಸ್ವಾಮಿ ಅಪರಾಂಪರ ತೇಳ್‌ವ ಹೆಸ್ರ್ ಬಾಕೆ ಮುಂದೆ ಇವರ ನಿಜದ

ಹೆಸರ್ ಕೇದಾರಬಾವ ತೇಳಿ ಇತ್ತ್. 1807ರ್‌ಲಿ ಇವ್ ಕಡಗನೂರ್ ಬುಟ್ಟ್‌ಹೋಗಿ ಸನ್ಯಾಸಿಯಾಗಿ ಮತ್ತೆ 20 ವರ್ಸ ಆದ ಮೇಲೆ ಬಾರಿ ಹೆಸ್ರ್ ಮಾಡ್ದ ಜಂಗಮ ಆಗಿ ಊರ್‌ಗೆ ವಾಪಾಸ್ ಬಂದೊ. ಇವ್ ದೊಡ್ಡ ಪವಾಡಗಾರ ಆಗಿ ಹೆಸ್ರ್ ಮಾಡಿದ್ದೊ. ಸನ್ಯಾಸಿ ಆದ ಇವ್ಕೆ ಸುಮಾರ್ ಜೆನ ಸಿಸ್ಯಂದರ್ ಆಗಿ ಸೇರಿಕಂಡೊ. 1835ರ್‌ಲಿ ಅವರ ಊರ್‌ಂದ ವಪಾಸ್ ತಮ್ಮ ಸಿಸ್ಯರ ಸೇರ್‌ಸಿಕಂಡ್ ಹೊರ್ಟ್ ಕೊಡ್ಲಿಪೇಟೆಗೆ ಹೋದೊ. ಕೊಡ್ಲಿಪೇಟೆಂದ, ಸೋಮವಾರಪೇಟೆಗೆ ಹೋಗಿ ಅಲ್ಲಿಂದ ಅಪರಂಪರ ಹಾರಂಗಿಗೆ ಹೋದೊ. ಹಾರಂಗಿಲಿ ತಮ್ಮ ಕೂಚುಗಳೊಟ್ಟಿಗೆ ದಳವಾಯಿ ವೆಂಕಟಪ್ಪನಲ್ಲಿ ಒಳ್ಕೊಂಡಿದ್ದೊ. ಅಲ್ಲಿಂದ ಮೇಲೆ ಹಾರಂಗಿಗೆ ಹೋಗಿ ಕೊಡಗ್‌ನ ಉತ್ತರ ಗಡಿನ ದಾಟಿ ಕೆಂಚಮ್ಮನ ಹೊಸಕೋಟೆಗೆ ಹೋದೊ. ಆಗ ಅವರೊಟ್ಟಿಗೆ ಕೊಡಗ್‌ನ ಸುಮಾರ್ ಎಪ್ಪತ್ತ್ ಜೆನ ಇದ್ದೊ. ಈ ಎಪ್ಪತ್ತ್ ಜೆನರ್‌ಲಿ ಮೂವತ್ತು ಜೆನ ಮತ್ತೆ ಕೊಡಗಿಗೆ ತಿರ್‌ಗಿ ಬಂದೊಳ. ಮತ್ತೆ ಒಳ್ದ ನಲ್‌ವತ್ತ್ ಜೆನರ್‌ಲಿ ಹನ್ನೊಂದು ಜೆನ ಜಮ್ಮದ ರೈತರ್‌ಗ ಮತ್ತೆ ಒಬ್ಬ ಕೊಡವ ಇದ್ದದ್ ಗಡ.

ಸ್ವಾಮಿ ಅಪರಾಂಪರ ಸನ್ಯಾಸಿ ಆಗಿ ಹೆಸ್‌ರ್ ಮಾಡ್ದ ಮೇಲೆ ರಾಜ ಚಿಕವೀರ ರಾಜೇಂದ್ರ ಕರ್‌ದೊಂತ ಮಡಿಕೇರಿಗೆ ಬಂದಿದ್ದೊ. ಅಪರಾಂಪರರ ನೋಡಿ ಕೊಡಗ್‌ನ ಜೆನಗ ಚಿಕವೀರರಾಜರ ದೊಡ್ಡಪ್ಪನ ಮಜ್ಜ ವೀರರಾಜ ಅರಸನೇ ಆಗಿರಕು ತ ನೆನ್ಸಿಕಂಡೊ. ಆದರೆ ಹಞ್ಞ ಜೆನ ವೀರರಾಜ ಅರಸಂಗೂ ಸ್ವಾಮಿ ಅಪರಾಂಪರಂಗೆ ಏನು ಸಮ್ಮಂದ ಇಲ್ಲೆಂತ ಹೇಳ್ತಿದ್ದೊ. ವೀರರಾಜ ಅರಸಂಗೆ ಸಿಡುಬು ಆದ ಮೇಲೆ ಅವರ ಮೋರೆ ಮತ್ತೆ ಹಿಂಗೆ ಕಾಣ್ತ ಒಳದ್ ತ ಜೆನಂಗ ಮಾತಾಡಿಕಂಡೊ. ಆದರೆ ಅಪರಂಪರ ಮಾತ್ರ ಈ ವಿಸಯಲಿ ಏನು ಸಮಜಾಯಿಸಿಕೆ ಕೊಡತಿತ್ತ್‌ಲೆ ಯಾರಾರ್ ಕೇಳಿರೆ ಮಾತ್ರ ನಾ ವೀರರಾಜ ಅರಸ ಅಲ್ಲಂತ ಹೇಳತಿದ್ದೊ. ಆದರೆ ಅಪರಂಪರ ಇದರ ಬಗ್ಗೆ ಹೇಳಿಕಾನ ಯಾದೋ ವಿಸಯನ ಅಡ್‌ಂಗ್‌ಸ್ತೊಳೊಂತ ತ ಜೆನಕೆ ಆಗತಿತ್ತ್. ಯಾರಾರ್ ಅಪರಂಪರ ಮಹಾಪುರುಸ ಆದ ಸಂಗತಿಗಳ ಕೇಳ್‌ರೆ ತುಂಬಾ ಒಳ್ಳೆದರ್‌ಲಿ ಉತ್ತರ ಕೊಡತಿದ್ದೊ. ನಾ ಯಾವ ಮಹಾಪುರ್‌ಸ ಅಲ್ಲ, ನನ್ನ ನೋಡಿಕೆ ಬಂದವರ ಸೇವಕ ನಾ ತಾನೆ ಹೇಳತಿದ್ದೊ. ಅಪರಾಂಪರ ಕೊಡಗ್‌ನ ಜೆನರ ಮನ್ಸ್ ನ ಗೆದ್ದೊ. ಅಪರಾಂಪರಂಗೆ ಕೊಡಗ್‌ನರಾಜ ಆಗ್‌ವಂಗೆ ಇದ್ದರು ಸ, ಸಾತ್ವಿಕ ಸನ್ಯಾಸಿ ಆಗಿದ್ದ್ ಕಂಡೆ ನಾಯಕ ಆಗಿ ಇರಿಕೆ ಆಸೆ ಪಟ್ಟೊಳೊತ ಜೆನ ನೆನ್ಸಿಕಂಡೊ.

ಅದಾಗಿ ಅಪರಾಂಪರ ಕೊಡಗ್‌ನ ಕೆಂಚಮ್ಮನ ಹೊಸಕೋಟೆಂದ ಹೊರ್‌ಟ್ ಇಪ್ಪತ್ತ್ ಜೆನರೊಟ್ಟಿಗೆ ಈಗದ ದಕ್ಷಿಣಕನ್ನಡ ಜಿಲ್ಲೆನ ಸುಬ್ರಹ್ಮಣ್ಯಕೆ ಬಂದೊ. ಸುಬ್ರಹ್ಮಣ್ಯದ ಹಕ್ಕಲೆನ ಕೂಜುಗೋಡು ಕಟ್ಟೆಮನೆಲಿ ಒಟ್ಟಿಗಿದ್ದವರೊಟ್ಟಿಗೆ ಅಪರಾಂಪರ ಒಳ್‌ಕಂಡೊ. ಕೂಜುಗೋಡು ಕಟ್ಟೆಮನೆನ ಪಟೇಲ ಮಲ್ಲಪ್ಪ ಗೌಡರ್, ಕೊಡಗ್‌ನ ರಾಜ ಆಗಿದ್ದ ಲಿಂಗರಾಜ ಮತ್ತೆ ಚಿಕವೀರ ರಾಜಂಗೆ ಕೂಚು ಆಗಿದ್ದೊ. ಹಿಂಗಾಗಿ ಕೊಡಗ್‌ನ ಅಪರಾಂಪರಂಗೆ ಇಲ್ಲಿ ನೆಲೆ ಸಿಕ್ಕಿತ್. ಇಲ್ಲಿರಿಕಾನ ಮತ್ತೆ ವಾಪಾಸು ಪವಾಡ, ಮತ್ರಂತ ಹಞ್ಞ ಪ್ರಸಿದ್ದಿಗೂ ಬಂದೊ. ಪುತ್ತೂರುನ ಸುಬೇದಾರಂಗೆ ಆದ ದೊಡ್ಡ ಬೇನೆನ ಗುಣಪಡ್‌ಸಿದ ಹೆಗ್ಗೆ ಸ್ವಾಮಿ ಅಪರಾಂಪರ ಅವ್‌ಕೆ ಸಿಕ್ಕಿದೆ. ಇದ್‌ಕೆ ಪುತ್ತೂರುನ ಸುಬೇದಾರ ಅಪರಾಂಪರಂಗೆ ಕುದುರೆನ ಕಾಣಿಕೆ ಆಗಿ ಕೊಟ್ಟಿದ್ದೊ. ಅವ್ ಮತ್ತೆ ವಪಾಸ್ ಸುಬ್ರಹ್ಮಣ್ಯಂದ ಕೆಂಚಮ್ಮನ ಹೊಸಕೋಟೆಗೆ ಹೋದೋ. ಅಲ್ಲಿಗೆ ವಾಪಾಸಾದ ಮೇಲೆ ಅವರೊಟ್ಟಿಗೆ ಇದ್ದ ಅನುಯಾಯಿಗ ಅವರ ಚಲನವಲನಗಳ ನೋಡಿ ಹೆಂಗೆ ಅರ್‌ತ ಮಾಡಿಕಂಡನೋ ಗೊತ್ಲೆ. ಒಟ್ಟುಲಿ ಅಪರಾಂಪರನೇ ವೀರರಾಜ ಅರಸಾಂತ ಎದುರೆದುರನೆ ಎಲ್ಲರೊಟ್ಟಿಗೆ ಹೇಳ್ತಿದ್ದೊ. ಈಗ ಅಪರಂಪರ ಕೂಡ ಕೊಡಗ್‌ನ ರಾಜರ್ ಹಾಕ್‌ವ ಕೊಂಬುನ ಟೊಪ್ಪಿ, ಬೇರೆ ಸೂಚನೆಗ ಇರ್‌ವ ಚಿನ್ನೆಗಳ ಹಾಕತಿದ್ದೊ. ಕೊಡಗ್‌ಲಿ ಒಂದ್ ದೊಡ್ಡ ದಂಗೆ ಎದ್ದದೆ, ನನ್ನೊಟ್ಟಿಗೆ ಇದ್ದವ್ಕೆ ತೊಂದರೆ ಆದೂಂತ ಅಪರಾಂಪರ ಮುಂದೆನೇ ಬೆಂಬಲಕಿದ್ದೊವ್‌ಕೆ ಹೇಳಿರೆನು ಯಾರೊಬ್ಬರ್ ಅವರ ಬುಟ್ಟ್ ಹೋತ್‌ಲೆ. ದಂಗೆನ ಎದ್‌ರ್‌ಸಿಕೆ ಕೊಡಗ್‌ನ ಒಳಗೊಳಗೆ ಹೋದ ಅಪರಾಂಪರನೊಟ್ಟಿಗೆ ಇನ್ನ್ ಸುಮಾರ್ ಜೆನಗ ಸೇರಿಕಂಡೊ. ಕೊಡಗ್‌ನ ನಾಡೊಳಗೆ ಬಾಕನ ಅಪರಾಂಪರ ಚಿಕ್ಕವೀರ ರಾಜನ ಸಮ್ಮಂದಿತ ಬಾರೀ ಪ್ರೀತಿಲಿ ನೋಡಿಕಂಡ. ಈ ಹೊತ್ತುಲಿ ಬ್ರಿಟಿಸರ ಆಡಳಿತ ಬಾರಿ ಮುಂದುವರ್‌ದ್, ಕೊಡಗ್‌ನ ರಾಜವಂಸಕ್ಕೆ ಇನ್ನ್ ಸಿಂಹಾಸನ ಏರಿಕೆ ಕಸ್ಟ ಉಟ್ಟುಂತ ಕೊಡಗ್‌ನ ಜೆನಗ ಅಪರಂಪರ ಅವ್‌ಕೆ ಹೇಳ್ದೊ. ಸ್ವಾಮಿ ಅಪರಾಂಪರ ನಿಜ ಆಗಿದ್ ವೀರರಾಜ ಅರಸ ಆಗಿದ್ದರೆ ಕೊಡಗ್‌ನ ಸಿಂಹಾಸನಕೆ ಅವೇ ಉತ್ತರಾದಿಕಾರಿ ಆಕು. ಆದರೆ ಸ್ವಾಮಿ ಅಪರಾಂಪರ ಅವಾಗಿದೇ ಇದರ ಹೇಳಿಕಣದ ಕಾರಣ ಕೊಡಗ್‌ನ ಜೆನರ ನಾಯಕ ಆಗಿದೇ ಮುಂದುವರ್‌ದೊ. ಹಿಂಗೆ ಅಪರಾಂಪರ ಮಾಡ್ದ ಬಂಡಾಯದ ಸಂಗಟನೆ ಆ ಕಾಲದ ಸೊತಂತ್ರದ ಹೋರಾಟಕೆ ಒಂದ್ ಮಹತ್ವದ ಮೈಲಿಗಲ್ಲ್ ಆಗಿತ್ತ್.

ಹಿಂಗೆ ಅಪರಾಂಪರ ಉತ್ತರಾದಿಕಾರಿ ಆಗದೆ, ಕೊಡಗ್‌ಲಿ ಇದ್ದರೆ ಬಂಡಾಯದ ಕೊಂಬುಗೆ ಕಸ್ಟ ಆದುಂತ ತನ್ನ ದಿಕ್ಕ್ ನ ವಾಪಾಸ್ ಬದಲ್‌ಸಿ ದಕ್ಷಿಣಕನ್ನಡದ ಕಡೆ ಮೋರೆ ಮಾಡಿ ಬಿಸ್‌ಲೆ ಗಾಟಿ ಆಗಿದ್ ಇಂದ್ ದಕ್ಷಿಣಕನ್ನಡಲಿ ಇರ್‌ವ ಕಡಬಕೆ ಹೋದೋ. 1834 ರಂದ ಕೊಡಗ್ ಬ್ರಿಟಿಸರ ಕೈ ಕೆಳಗೆ ಬಂದ ಮೇಲೆ ಕ್ಯಾಪ್ಟನ್ ಲೀ ಹಾರ್‌ಡಿ ಸೂಪರ್ –ಇನ್ –ಟೆಂಡೆಂಟ್ ಆಗಿ ಇದ್ದೊ. ಆಗ ಅಪರಂಪರರ ಮೇಲೆತಾವ ಕ್ರಮ ತಕಣಕುತ ದಿವಾನರೊಟ್ಟಿಗೆ ಚರ್‌ಚೆ ಅವರ ಹಿಡ್ದ್ ತಾಕೆ ಗುಪ್ತಚರರ ಸೋಮವಾರಪೇಟೆಗೆ ಕಳ್ಸಿಕನ ಅಪರಂಪರ ಮತ್ತೆ ಅವರ ಕೂಟದವ್ ಕಡಬಕ್ಕೆ ಹೋಗಿ ಆಗಿತ್ತ್. ಮತ್ತೆ ಲೀಹಾರ್‌ಡಿ




ಗುಪ್ತಚರರ ಕಡಬಕ್ಕೆ ಕಳ್‌ಸಿ ಅಪರಂಪರರ ಮೇಲೆ ಕಣ್ಣಿಸಿ ಹಣ್ಣಿ ದಿನ ಆದ ಮೇಲೆ ಹಿಡ್‌ದ್ ಕರ್‌ಕಂಡ್ ಬಾಕೆ ಹೇಳ್ದೊ. ಅಪರಂಪರ ಅವ್‌ಕೆ ಈ ಸಂಗತಿ ಗೊತ್ತಾಗಿ ಒಟ್ಟಿಗಿದ್ದವರ ಸೇರ್‌ಸಿಕಂಡ್ ಕಾಡ್ ಕುರುಬರ ವೇಸ ಹಾಕಿ ಅವರವರ ಊರ್‌ಗೆ ಹೋವಂಗೆ ಉಪಾಯ ಮಾಡಿಕಂಡೊ. ಅಪರಂಪರ ಸಿವಮೊಗ್ಗದ ದಾರಿ ಹಿಡ್ದ್ ಕೆಲವರೊಟ್ಟಿಗೆ ಹೊರ್‌ಟೊ. ಅಪರಂಪರರ ಹಕ್ಕಲೆನ ಸಹಾಯಕರ್ ಆದ ಕಲ್ಯಾಣಪ್ಪ ಮತ್ತೆ ಪುಟ್ಟಬಸವ ಕೊಡ್ಲಿಪೇಟೆ ಕಡೆ ಹೊರ್‌ಟೊ. ಆದರೆ ಅಪರಂಪರರ್ ಮಾತ್ರ ಹೆಂಗೋ ಬ್ರಿಟಿಸರ ಕೈಗೆ ಸಿಕ್ಕಿ ಬಿದ್ದೊ. ಬ್ರಿಟಿಸರ್ ಅವರ ತಿರುಚನಾಪಳ್ಳಿ ಜೈಲ್‌ಗೆ ರಾಜಕೀಯ ಕೈದಿ ತೇಳಿ ಕಾರಣ ಕೊಟ್ಟು ಸೆರೆ ಇಸಿದೊ. ಮತ್ತೆ ಸುಮಾರ್ ಮೂವತ್ತನಾಕ್ ವರ್‌ಸ ಜೈಲುವಾಸಲಿ ಕಳ್‌ದ್ ಪ್ರಾಯ ಆತ್. ಮತ್ತೆ ಸೆರೆಂದ ಬುಡಿಕಾನ ಪ್ರಾಯ ಆಗಿದ್ದ ಅಪರಾಂಪರ ಮೈಸೂರುಲಿ ಇರೊಮತ ಹೋಕನ ಸ್ರೀರಂಗಪಟ್ಣಲಿ 1870ರ್‌ಲಿ ತೀರಿಹೋದೋ.

ಅಪರಂಪರ ನಾ ಸತ್ತರೆ ಇಲ್ಲರೆ ಸೆರೆ ಸಿಕ್ಕಿರೆ ಬ್ರಿಟಿಸರ ವಿರುದ್ದ ಬಂಡಾಯನ ಮುಂದುವರ್‌ಸೋಕು ತ ಹೇಳಿದ್ದವೆ ತೇಳ್‌ದರ ನಾವ್ ತಿಳ್ಕನಕ್. ಏಕೆಂತ ಹೇಳ್ರೆ ಅಪರಂಪರರ ಹಕ್ಕಲೆನ ಸಹಚರರ್ ಬ್ರಿಟಿಸರ ವಿರುದ್ದ ಬಂಡಾಯ ಎದ್ದೊಳ. ಅಪರಂಪರನ ಕಾಲಲಿ ಸಾಮಾಜಿಕ ಸಕ್ತಿ ಒಂದ್ ಸಮಾಜಕೆ ಹೋರಾಡಿಟು ತ ಹೇಳುದೆ ನಾವ್‌ಗೆ ಗೌರವದ ಸಂಗತಿ. (ಎಸ್.ಆರ್.)

**ಹಂದಿ ಜೆನಪದ :** ಭಾರತೀಯ ಸಂಸ್ಕೃತಿಲಿ ಹಂದಿನ ಕಲ್ಪನೆ ಹೆಚ್ಚಿನ ವಿಸೇಸತೆನ ಪಡ್‌ಕಂಡುಟು. ಆರಾದನೆ ಮತೆ ಸಕ್ತಿನ ಸಂಕೇತ ಆಗಿದ್ ಈ ಪ್ರಾಣಿಗೆ ಒಳ್ದ ಪ್ರಾಣಿಗಳ್‌ಂದ ಹೆಚ್ಚಿಗೆ ಮುಕ್ಯಸ್ತಿಗೆ ಉಟ್ಟು. ದೇವ ಹಾಂಗೆ ರಕ್ಕಸ ಎರಡ್ ವಿರುದ್ದ ಕಲ್ಪನೆಗ ಇರ್‌ವ ಪ್ರಾಣಿಂತೇಳಿರೆ ಅದ್ ಹಂದಿ. ಸಿಸ್ಟ ಮತ್ತೆ ಜಾನಪದಲಿ ಹಂದಿನ ಕಲ್ಪನೆ ವಿಸೇಸ ಜಾಗೆಲಿ ಉಟ್ಟು. ಹಂದಿಲಿ ಎರ್‌ಡ್ ಬಗೆ. ಒಂದ್ ಕಾಡ್ ಹಂದಿ ಮತ್ತೊಂದ್ ಊರಂದಿ. ಕಾಡ್ ಹಂದಿ ಪ್ರಾಣಿ ಆದರೆ, ಊರಂದಿ ಸಾಕ್‌ಪ್ರಾಣಿ. ಭಾರತದ ಪುರಾಣಗಳ್‌ಲಿ ಹಂದಿ ವಿಸ್ಣುನ ಹತ್ತ್ ಅವತಾರಗಳ್‌ಲಿ ವರಾಹ ಅವತಾರಾಗಿ ಬಂದುಟು. ಬೂಮಿನ ಕಾಪಾಡ್‌ವ ವಿಸ್ಣು ಹಂದಿ ಅವತಾರ ತಾಳ್‌ದ ಬಗ್ಗೆ ಕತೆಗ ಒಳೊ. ಪುರಾಣಗಳ ಹುಟ್ಟ್‌ಗೆ ಪರಿಸರದ ವಸ್ತು ಕ್ರಿಯೆನೆ ಪ್ರೇರಣೆ.

ವರಹಾವಾತಾರದ ಈ ಕಲ್ಪನೆಗೆ ಪಂಡ್‌ಂದಲೂ ಪ್ರಾಣಿ ಸಮ್ಮಂದದೊಟ್ಟಿಗೆ ಬೆಳ್‌ದ್ ಬಂದ ಮೊನ್‌ಸ ಪ್ರಾಣಿಗಳ ಗುಣ ಸೊಬಾವನ ತಿಳ್‌ಕಂಡದರ್‌ಂದ ಹಂದಿ ಸತ್ರುನ ಎದುರ್‌ಸಿಕನ ತೋರ್‌ಸುವ ಸೌರ್‌ಯ, ಪ್ರತಾಪನ ಆ ಸಕ್ತಿನ ಎತ್ತಿ ಹಿಡಿಯಕೆ ಇನ್ನೊಂದ್ ಗಟ್ಟಿ ಸಕ್ತಿ ಬೇಕೂಂತೇಳುವ ಕಾರಣಕೆ ವಿಸ್ಣು ಈ ವರಾಹಾತಾರ ರೂಪ ತಳ್‌ದಿರುವೊ.

ಒಂದ್ ಪ್ರಾಣಿನ ವಿಸೇಸ ಗುಣಂಗ ಆ ಪ್ರಾಣಿನ ರಕ್ಕಸ ಅಲ್ಲರೆ ದೇವುರ್‌ನ ಜಾಗೆಲಿ ಕಾಣಕ್. ಪುರಾಣಗಳ್‌ಲಿ, ಅವತಾರಗಳ್‌ಲಿ ಒಳ್‌ದ ಪ್ರಾಣಿಗಳ ಕಲ್ಪನೆ ಬಂದಿದ್ದರೂ ಹಂದಿನ ಜಾಗೆ ಪಡಿಯಕೆ ಕಾರಣನ ಹುಡ್‌ಕಿಕಾಕನ, ಭಾರತದ ಕಾಡ್ ಹಂದಿ ಪ್ರಪಂಚದ ಬೇರೆ ಕಾಡ್ ಹಂದಿಗಳ್‌ಂದ ಬುದ್ದಿವಂತ ಹಂಗೆ ದೈರ ಇರ್‌ವ ಪ್ರಾಣಿ ತೇಳ್‌ದರ ಗಮನ್‌ಸೊಕು. ಸಂಸ್ಕೃತಿಲಿರ್‌ವ ಉಚ್ಚ ಸಂಪ್ರದಾಯ ವಿದಿಗೆ ಹಂದಿನ ಬೇರೆ ಬೇರೆ ಅಂಸಗಳ ಉಪಮೇಯ ಆಗಿದ್ ಬಳ್‌ಸಿರ್ದು ಆದಿ ವರಾಹಂಗೆ ಅಂದರೆ ಹಂದಿಗೆ ಇರ್‌ವ ಸಕ್ತಿ ಸಾಮರ್ತ್ಯ ಪಾವಿತ್ರತೆ ಹಂಗೆ ಗೌರವದ ಸಂಕೇತಂತ ಹೇಳಕ್. ತಿನಿ ಮತ್ತೆ ಆರಾದನೆ ತೇಳ್‌ವ ಎರಡ್ ನೆಲೆಗಳ್‌ಲಿ ಪ್ರಾಣಿ ಮತ್ತೆ ಮೊಯಿಂಸನ ಸಮ್ಮಂದ ಅವನ ಸಾಂಸ್ಕೃತಿಕ ಬೊದ್‌ಕ್‌ನ ಮುಕ್ಯ ನೆಲೆ ಆತ್. ಮೊಯಿಂಸನ ಸಾಮಾಜಿಕ ಮತ್ತೆ ದಾರ್ಮಿಕ ಬೊದ್ಕ್‌ಲಿ ಪ್ರಾಣಿಗ ಯಾಗೋಳು ಕಾಂಬಕೆ ಸಿಕ್ಕ್‌ವ ಇಂತ ಪ್ರಾಣಿಗಳ ಬಗ್ಗೆ ಅವನ ನಂಬಿಕೆಗ ಬೇರೆ ಬೇರೆ ಆಚರಣೆ ಮತ್ತೆ ಆರಾದನೆಗಳ ರೂಪಲಿ ಕಂಡದೆ.

ಜಗತ್ತ್‌ನ ಇಡಿ ಹಂದಿನ ಮೇಲೆ ಕಲ್ಪನೆಗ ಬೇರೆ ಬೇರೆ ತರಲುಟ್ಟು. ಹಂದಿಗ ಅಸುದ್ದ ತೇಳಿ ಈಜಿಪ್ಟಿನವು ನೆನ್ಸಿದ್ದೊ. ಹಂದಿ ಕಾಯೊವು ದೇಸ್ತಾನ ಹೋಕೆ ಬೊತ್ತುಂತ ಇತ್ತ್. ಅಲ್ಲೊ ಬೇರೆವರ ಹೆಣ್ಣ್ ಮಕ್ಕಳ್‌ನ ಮೊದುವೆ ಆಕೆ ಬುಡ್‌ತಿತ್ತ್‌ಲೆ. ಆದರೂ ವರ್ಸಕ್ಕೊಂದು ಸರ್‌ತಿ ಹಂದಿಗಳ ಚಂದ್ರ ಹಂಗೆ ಒಸ್ಸೈರಿಸ್ ದೇವುರಗೆ ಬಲಿಕೊಡುತ್ತಿದ್ದೊ ಅಲ್ಲದೆ ಬೂಮಿನ ಸ್ತ್ರೀ ದೇವತೆಗೆ ಹೆಣ್ಮಕ ಹಂದಿನ ಮಾಸನ ಬೊಲಿ ಆಗಿದ್ ಅರ್ಪಿಸುತ್ತಿದ್ದೊ ತೇಳ್‌ದರ ಕೆಲವು ಸಂಸೋದಕರ್ ಹೇಳಿಯೊಳೊ. ಹಂಗೆ ಆಟಿಸ್ ಅಡೊನಿಸ್ ಮತ್ತೆ ಡಿಮೆಟರ್ ಮತಗಳೊಟ್ಟಿಗೆ ಇದ್‌ಕೆ ಸಮ್ಮಂದ ಕಟ್ಟಿಯೊಳೊ. ಕ್ರೆಟನ್ಸರ್ ಹಂದಿಗಳ ಪೂಜುಸ್‌ವೆ. ಹಂದಿ ಪವಿತ್ರ ಸಂತರ ದಿನದ ಹಿಂದೆನ ಹಿಂಬೊತು ಕಾಣ್‌ಸಿಕಂಡದೆ ತೇಳಿ ಆದುನಿಕ ವೆಲ್ಕರು ನಂಬುವೆ. ಗ್ರಾಣ ಆಕನ ಜೆನಂಗ ಹಂದಿ ಮುರುಗುಟ್ಟುವದರ ಅನುಕರ್‌ಸ್‌ವೆ. ಹಂದಿನ ಮರ್‌ಡಟ ಸಂತ ಎಲ್ಮೊನ ಬೆಂಕಿನ ಆರಿಸಿದೆ. ಜರ್ಮನಿಲಿ ಬಿರುಗಾಳಿ ಹಂಗೆ ಪಲವಂತಿಕೆನೊಟಿಗೆ ಇದ್‌ಕೆ ಸಮ್ಮಂದ ಕಟ್ಟಿಯೊಳ. ಹಂದಿಗಳ ಬೊಬ್ಬೆ ಬೂಕಂಪನ ಮಾಡ್‌ದೆ ತೇಳ್‌ವ ನಂಬಿಕೆ ಉಟ್ಟು.

ಆರಾದನೆಲಿ ಹಂದಿ: ಪ್ರಾಣಿಗ ದೆವ್ವಗ ಆಗಿದ್ ಬದಲಾದ್ದದರ್‌ಲಿ ಪಂಜುರ್ಲಿ ದೆವ್ವ ಬಾರಿ ಹೆಸರ್ ಇರ್‌ವಂತದ್. ಪಂಜುರ್ಲಿನ ಆರಾದನೆಗೆ ಸಮ್ಮಂದಪಟ್ಟಂಗೆ ಅದರ ಜಾಗೆ ಅಲ್ಲರೆ ಗುಡಿಗಳ್‌ಲಿ ಹಂದಿನ ಮೊಗ, ಹಂದಿಯ ಕಣ್ಣ್‌ಗ ಇದ್ದದೆ. ಅರೆಬಾಸೆ ಪ್ರದೇಸಲಿ ಹಂದಿ ಪಂಜರ್ಲಿ ದೆವ್ವ ಆಗಿದ್ ಆರಾದನೆ ಮಾಡ್‌ದರ ಕಾಣಕ್. ಪ್ರಕೃತಿನ ಪ್ರಾಕೃತ, ಸಮೃದ್ದ, ಅಪಾಯಕರ ಸಕ್ತಿಗಳ ಕಾಡ್ ಹಂದಿ ಆದ ಪಂಜುರ್ಲಿಲಿ ಕಾಂಬೊದಲ್ಲದೆ ಕಾಡ್ ಹಂದಿ ಅದರ ಉಗ್ರತೆಗೆ, ವಿನಾಸ ಮಾಡ್‌ವಂತ ಸಕ್ತಿಗೆ ಹೆಸರ್ ಇರ್‌ವಂತದ್. ಹಿಂಗಾಗಿ ಈ

ಪ್ರಾಣಿನ ಅಪೂಪ್ರದ ಗುಣಗಳ್ಂದ ಇದರ ದೆವ್ವದ ಜಾಗೆಲಿ ನಿಲ್ಸಿಸಿ ಆರಾದ್ಸ್‌ವೆ. ಈ ಒಂದೇ ದೆವ್ವ ನಲ್ವತ್ತು ಬೇರೆ ಬೇರೆ ಹೆಸ್ರ್‌ಗಳ್‌ಲಿ ಬೇರೆ ಬೇರೆ ಜಾಗೆಲಿ ಆರಾಧನೆ ಆದೆ. ಈ ದೆವ್ವ ಹಬ್ಬಿದಸ್ಟ್ ಬೇರೆ ಯಾದೇ ದೆವ್ವಗ ಹಬ್ಬಿತ್‌ಲೆ. ಪಂಜುರ್ಲಿನ ಪ್ರಸರಣದ ಕಾಲನ ನೋಡಿರೆ ಅದ್ ಒಂದೊಂದ್ ಕಡೆ ಒಂದೊಂದ್ ಹೆಸರ್‌ಲಿ ಕರಿದರ ಕಾಣಕ್. ಉದಾರ್ಣೆಗೆ ಧರ್ಮಸ್ಥಳಲಿ ಅಣ್ಣಪ್ಪ ಪಂಜುರ್ಲಿ, ಚಾರ್ಮಾಡಿಲಿ ಅಂಗಣ ಪಂಜುರ್ಲಿ, ನೆರಿಯಲಿ ಉರ್‌ಂದಾರ ಪಂಜುರ್ಲಿ, ನಿಡ್ವಾಳಲಿ ಮನಿಪ್ಪಂದಿ ಪಂಜುರ್ಲಿ, ನಿಡ್ಗಲ್‌ಲಿ ಕ್ಷೇಮಕಲ್ಲ ಪಂರ್ಜುಲಿ, ಬಾರ್ಯಲಿ ಮರ್ಲ್ ಪಂಜುರ್ಲಿ ಹಾಂಗೆ ಮನೆಮನೆಲಿ ಜಾಗೆನ ಪಂಜುರ್ಲಿ ಇಂತೆಲ್ಲ ಹೆಸರ್‌ಂದ ಆರಾದನೆ ಪಡ್ಕಂಡದೆ.

ಹಂದಿ ಹೆಂಗೆ ಪಂಜರ್ಲಿ ದೆವ್ವ ಆತ್ ತೇಳ್ದಕೆ ದೆವ್ವಕೆ ಸಮ್ಮಂದಪಟ್ಟ ಪಾಡ್ದನಲಿ ವಿವರಗ ಸಿಕ್ಕಿದೆ. ಈ ದೆವ್ವಕೆ ನೇಮ, ಕೋಲ, ಮತ್ತೆ ತಂಬಿಲ



**ಪಂಜುರ್ಲಿ ಮೊಗ**

ಮಾಡಿ ಆರಾದನೆ ನಡ್ದದೆ. ಈ ದೆವ್ವ ಮಾಗಣೆ ದೆವ್ವ ಆಗಿದ್‌ನು, ಕೆಲವು ಕಡೆ ಗ್ರಾಮ ದೆವ್ವ ಆಗಿದ್ ಮತ್ತೆ ಕೆಲವೆಡೆ ಕುಟುಂಬ ದೆವ್ವ ಆಗಿದ್ ಆರಾದನೆ ಆದೆ. ದೇವಕ್ರಿಯೆ ಮತ್ತೆ ಅಸುರ ಕ್ರಿಯೆ ಈ ಎರಡ್ ರೀತಿಲಿನೂ ಆರಾದನೆ ನಡ್ದದೆ.

ಪಂಜುರ್ಲಿ ದೆವ್ವದ ಹೆಸರ್‌ಲಿ ನಡೆವ ಆರಾದನೆ ಹಂದಿಗೆ ಸಮ್ಮಂದಪಟ್ಟಂಗೆ ಇದ್ದದೆ. ಅದರ ಆರಾದನೆನ ಹೊತ್ತ್‌ಲಿ ಕಟ್ಟಿಕಂಬ ಮುಕವಾಡ, ಅದರ ಕೊಣ್ತ ಮಾತ್ ಹಂಗೆ ಸ್ವೀಕರ್‌ಸುವ ತಿನಿಗಳ್ಂದ ತಿಳ್‌ದ್ ಬಂದದೆ. ಪಂಜುರ್ಲಿ ದೆವ್ವದ ಬಣ್ಣಗಾರಿಕೆನ ಹೊತ್ತ್‌ಲಿ ಹಣೆಲಿ ಹಂದಿನಂಗೆ ಕಾಂಬ ಚೂಪುನ ಮೊಗನ ಕಟ್ಟಿಕಂಡವೆ. ಪಂಜುರ್ಲಿ ದೆವ್ವಲಿ ಕಟ್ಟಿಕಂಬ ಮೊಗ ಹಂದಿನ ಮೋರೆನ ಸ್ವಸ್ಪ ಆಗಿ ಹೋಲ್‌ದೆ. ಪಂಜುರ್ಲಿ ದೆವ್ವಕೆ ಹಾಳೆ ಅಲ್ಲರೆ ಲೋಹಂದ ಮಾಡ್ದ ಮುಕವಾಡನೂ ಇದ್ದದೆ. ಇದರ ಆರಾದನೆ ಹೊತ್ತ್ ಸೊರ್‌ತಕೆ ಮೋರೆಗೆ ಕಟ್ಟಿಕಂಡ್ ದೆವ್ವ ಕಾರಣಿಕನ ತೋರ್ಸಿದೆ. ಪಂಜುರ್ಲಿ ದೆವ್ವಕೆ ಕೆಲವ್ ಕಡೆ ಹೊದ್‌ರಿ, ಬತ್ತ, ಅವುಲು ಇದರ ಬಾಳ್‌ಲೆಲಿ ಹಾಕಿ ತಿಂಬಕೆ ಮೊಗದ ಬಾರಣೆ ಎದ್‌ರ್ ಹಿಡ್ದವೆ.

ಒಂದು ಕಾಲಲಿ ತನ್ನ ಕ್ರಿಸಿಗೆ ಕಂಟಕ ಆದ ಕಾಡ್ ಹಂದಿನಂತ ಪ್ರಾಣಿಗಳ ಪಂಜುರ್ಲಿ ದೆವ್ವಾಗಿ ಆರಾದ್‌ಸುದರ ಬಗೆಗೆ ಕ್ರಿಸಿ ಆರ್ತಿಕ ಉತ್ಪಾದನಾ ವಿದಾನಕೆ ಮಾರಕ ಆದ ಕಾಡ್ ಹಂದಿ ತೌಲವ ಪೌರಾಣಿಕ ಕಲ್ಪನೆಲಿ ದೆವ್ವ ಆಗಿದ್ ಕಾಯ ಪರಿವರ್ತನೆನ ಹೊಂದಿದೆ. ಹಾಂಗೆ ಜೆನಕೆ ನಿಯಂತ್ರಿಸಿಕೆ ಆಗದ ನಿಸರ್ಗದ ಮೃಗಂಗಳ ನಿಯಂತರ್‌ಸುದು ಮಾತ್ರ ಅಲ್ಲ. ಒಲ್ಸಿಕಂಬ ಹಂಬಲನನೂ ಆರಾದನೆಲಿ ಮೊನ್‌ಸ ತೋರ್ಸಿದೆ. ಹೀಂಗೆ ಕ್ರಿಸಿನ ಮೇಲೆ ಹಕ್ಕ್‌ನ ಸ್ತಾಪುಸುವ ಕಾಡ್ ಹಂದಿಗಳ ಆರಾದ್‌ಸಿ ಅದರ್‌ಂದ ಅವ್‌ಗಳ ಮೇಲೆ ನಿಯಂತ್ರಣನ ತಾವ ಉದ್ದೇಸನ ಪಂಜುರ್ಲಿ ದೆವ್ವದಂತ ಆರಾದನೆನ ರೂಪಲಿ ಕಂಡ್‌ಕಣಕ್. ಆದರೆ ಇಂದ್ ನಾವುಗೆ ಇಂತ ಅಮಸರ ಇಲ್ಲರೂ ಪಂಜುರ್ಲಿನ ಆರಾದನೆ ಪಂಡ್‌ನ ಹಂಗೆನೇ ನಡ್‌ಕಂಡ್ ಬರತುಟ್ಟು.

ಹಂದಿ ಬೊಲಿ : ಬೊಲಿ ಈ ಪದದ ಬಳಕೆಗೆ ಸುಮಾರ್ ದೊಡ್ಡ ಚರಿತ್ರೆ ಉಟ್ಟು. ಬೊಲಿ ತೇಳ್‌ದು ದಾರ್ಮಿಕ ಆಚರಣೆನ ಮಹತ್ವದ ಕ್ರಿಯೆಯಾಗಿದ್ ಜಗತ್ತ್‌ಲಿ ಸುಮಾರ್ ಬಗೆಲಿ ನಡ್‌ಕಂಡ್ ಬಂದುಟು. ಬೊಲಿ ತೇಳ್‌ರೆ ಒಂದ್ ಪ್ರಾಣಿನ, ವಸ್ತುನ ಕಾಣದ ಮಾಯಕ ಸಕ್ತಿಗೆ ಅರ್ಪುಸುದು ತೇಳ್‌ವ ಕಲ್ಪನೆ ಉಟ್ಟು. ಸಾಮಾನ್ಯ ಆಗಿದ್ ಬಲಿ ತೇಳಿರೆ ಉದ್ದೇಸಂದ ಇಸಿಕಂಡ ಸಾವ್ ಅಲ್ಲರೆ ರಕ್ತ ಚೆಲ್ಲುದರ ಒಟ್ಟಿಗೆ ಸಮ್ಮಂದ ಇರ್‌ವಂತದಾಗುಟು. ಒಂದ್ ಸೊತ್ತುನ ಕೇಂದ್ರ ಆಗಿಸಿಕಂಡ್ ಎಲ್ಲಾ ಮಟ್ಟದ ಕ್ರಿಯಾಚರಣೆಗ ಇಲ್ಲಿ ನಡ್‌ದವೆ. ಬಲಿಗೆ ಆವ ಸೊತ್ತ್ ಒಂದ್ ಯಾಗೊಳು ಸಮುದಾಯದ ಪ್ರದಾನ ಅಲ್ಲೊ ಮುಕ್ಯ ಆಗಿದ್ದದೆ. ಹಂದಿ ಬೇರೆ ಬೇರೆ ಆಚರಣೆ ಮತೆ ಆರಾದನೆಗಳ ಹೊತ್ತ್‌ಲಿ ಬೊಲಿನ ರೂಪಲಿ ಬಳಕೆಯಾದೆ. ಬೊಲಿ ಕೊಡ್‌ವ ಕ್ರಮ ಪ್ರದೆಸಂದ ಪ್ರದೇಸಕ್ಕೆ ಹೋಕನ ವೆತ್ಯಸ ಆಕಂಡ್ ಹೋದೆ.

ಹಂದಿನ ಈ ಕೆಳಗೆನ ಹೊತ್ತ್‌ಲಿ ಬೊಲಿಕೊಟ್ಟವೆ. ದೆವ್ವಲಿ ಮುಕ್ಯ ಆಗಿ ಸಿರಾಡಿ ದೆವ್ವಕೆ ವರ್‌ಸೋಳು ಕೋಲ ಇಲ್ಲರೆ ತಂಬಿಲಗ ನಡಿವ ಹೊತ್ತ್‌ಲಿ ಹಂದಿ, ಕೋಳಿಗಳ ತಲೆ ಕೊಯ್‌ದವೆ. ಪುತ್ತೂರು ತಾಲೂಕುನ ಕೋಡಿಂಬಾಳಲಿ ಒಂದೇ ಕಡೆ ಸಿರಾಡಿ ದೆವ್ವಕೆ ವರ್‌ಸೊಳುನ ಕೋಲದ ಹೊತ್ತುಲಿ 20 ರ್‌ಂದ 30 ಹಂದಿಗಳ ಹರ್‌ಕೆನ ರೂಪಲಿ ತಲೆಕೊಯ್ದುವೆ. ಇಲ್ಲಿ ಕೊಯ್‌ದ ಹಂದಿನ ತಲೆ, ತಲೆ ಕೊಯ್ಯುವ ಪೂಜಾರಿಗೆ ಸಿಕ್ಕಿದೆ. ಅಲ್ಲದೆ ಸಿರಾಡಿ ದೆವ್ವನ ಆರಾದ್‌ಸ್‌ವೊವು ಎಲ್ಲವೂ ವರ್ಸಕೊಮ್ಮೆ ತಂಬಿಲಲಿ ಹಂದಿನ ತಲೆಕಡ್ಸುವೆ. ಅದಾಗಿ ಅದರ ತಲೆನ ಗೈಪು ಮಾಡಿ ರೊಟ್ಟಿ ಅಲ್ಲರೆ ಪುಂಡಿ ಮಾಡಿದ್ ಮತ್ತೆ ಬಳ್ಸುವೆ. ಚವುಂಡಿ ದೆವ್ವ (ಚಾಮುಂಡಿ) ಆರಾದಿಸೊವು ವರ್‌ಸಕೊಮ್ಮೆ ದೆವ್ವಕೆ ಹಂದಿ ತಲೆ ಕೊಯ್‌ದವೆ. ಚವುಂಡಿ ದೆವ್ವನ ಹೆಚ್ಚಾಗಿ ಮರದ





ಬುಡಲೇ ಆರಾದ್‌ಸ್‌ವೆ. ಭಾಗಮಂಡಲದ ಹಕ್ಕಲೆ ಕಡೋಡಿ ತೇಳುವಲ್ಲಿ ಶ್ರೀ ಮಹಾವಿಷ್ಣು ಮೂರ್ತಿ ಮತೆ ಚವುಂಡಿ ದೆವ್ವಕೆ 2 ವರ್‌ಸಕೆ ಒಮ್ಮೆ ಕೋಲ ಕೊಟ್ಟವೆ, ಆಗ ಚವುಂಡಿಗೆ ಹರ್‌ಕೆ ಹೊತ್ತವ್ ಹಂದಿಗಳ ತಲೆ ಕೊಯ್ಸ್‌ವ ಕ್ರಮ ಉಟ್ಟು. ಅಲ್ಲಿ 200 – 300ರ್‌ಂದಲೂ ಹೆಚ್ಚಿ ಹಂದಿಗಳ ಬೊಲಿ ಕೊಟ್ಟವೆ. ತಲೆ ಕೊಯ್‌ಸಿದ ಹಂದಿಗಳ ಮಾಸ ಮಾಡಿದ್ ಅದರ ಅಲ್ಲಿಯೇ ಕಿಚ್ಚಾಕಿದ್ (ಸುಟ್ಟ್) ದೇವ್ವಕೆ ಇಸಿದ ಮೇಲೆ ಬಂದ ಜೆನಂಗಳಿಗೆ ತಿಂಬಕೆ ಕೊಟ್ಟವೆ, ಒಳ್‌ದ ಮಾಸನ ಕೇಳ್‌ದವ್‌ಕೆ ಕೊಡುವ ಕ್ರಮ ಉಟ್ಟು. ಅಲ್ಲದೆ ಮಲೆಕುಡಿಯ ಜೆನಾಂಗದವ್ ಆರಾದ್‌ಸುವ ಮಲೆ ದೆವ್ವಂಗಳಿಗೆ ಹಂದಿ ಬಲಿನ ಅನುಕೂಲಸ್ತರ್ ವರ್ಸೊಳ್ ಬೊಲಿ ಕೊಟ್ಟವೆ.

ಗೋಂದೊಳು ಪೂಜೆ: ದಕ್ಷಿಣ ಕನ್ನಡ ಮತ್ತೆ ಉಡುಪಿ ಜಿಲ್ಲೆ, ಕೊಡ್‌ಗ್ ಜಿಲ್ಲೆನ ಕೆಲವ್ ಕಡೆ ಮರಾಟಿ ಜೆನಾಂಗದವ್ ಆರಾದ್‌ಸ್‌ವ ವಿಸೇಸ ಆಚರಣೆ ಗೋಂದೊಳು ಪೂಜೆ. ಇದ್ ಮಹಮ್ಮಾಯಿ ಅಂದರೆ ‘ಅಮ್ಮನವ್’ ದೇವತೆಗೆ ಸಮ್ಮಂದಪಟ್ಟ ಪೂಜೆ ಆದರ್‌ಂದ ಇದರ ‘ಅಮ್ನೂರು’ ತೇಳ್‌ವ ಹೆಸರ್‌ಲಿನು ಕರ್ದವೆ. ಇದರ ಮಾರಿ ಪೂಜೆನ ಇನ್ನೊಂದು ರೂಪ ತೇಳಿ ಹೇಳಕ್.

ಒಂದು ಎತ್ತರದ ಮಂಚ ಅಲ್ಲರೆ ಪೀಟಲಿ ಸುಮಾರ್ ಮೂರ್ ಸೇರ್ ಅಕ್ಕಿನ ಹಾಕಿ ಅದರ ಸುತ್ತ ಎಲೆ ಅಡ್‌ಕೆ ಮತ್ತೆ ಬಾಳೆಹಣ್ಣ್ ಇಸ್‌ವೆ. ಪ್ರತ್ಯೇಕ ಎರಡ್ ಎಲೆಲಿ ಸ್ವಸ್ತಿಕ್ ಚಿನ್ನೆ ಇಸಿ ಅದರ ಮೇಲೆ ಎರಡ್ ಕಳಸಗಳ ಇಸ್‌ವೆ. ಕಳ್‌ಸದ ಮೇಲೆ ಕಾಯಿನ ಆಚೀಚೆ ಎರಡ್ ದೊಡ್ಡ ದೀಪಗಳ ಹೊತ್ತುಸಿ ಇಸುವೆ. ಬಾಳೆನ ಸಣ್ಣ ಕುರ್ಲೆಗಳ್‌ಲಿ ಮಂಟಪನ ಮಾಡ್‌ವೆ. ಅದಾಗಿ ಕಳ್‌ಸಲಿ ಗಂಗೆನ ತಂದ್ ಅಮ್ಮನವರ ಗದ್ದುಗೆನ ಮೇಲೆ ಇಸಿ ಷೋಡಸ ಪೂಜೆನ ಮಾಡುವೆ. ಅಮ್ಮನವರ ಗದ್ದುಗೆನ ಎದುರಕೆ ಹಜ್ಜ ದೂರಲಿ ಭೈರವನ ಗದ್ದುಗೆನ ಇಸುವೆ. ಗೋಂದೊಲುನ ಮುಕ್ಯ ಕ್ರಮ ಆದ ಹಂದಿ ಬೊಲಿನ ಈ ಭೈರವಂಗೆ ಕೊಟ್ಟವೆ. ಇಂವ ಕಾಲಭೈರವ, ವಜ್ರಭೈರವ, ನೇತ್ರ ಭೈರವ, ಅಗ್ನಿ ಭೈರವ, ಜಲ ಭೈರವ, ಬಾಗಿಲ ಭೈರವ, ಪಾತಾಳ ಭೈರವ ತೇಳ್‌ವ ಹೆಸ್‌ರ್‌ಗಳ್‌ಂದ ಆರಾಧನೆನ ಪಡ್ಕಂಡದೆ. ಹಂದಿ ತಲೆಕಡ್‌ದ ಮೇಲೆ ಮಾಸ ಮಾಡಿ ಗೈಪಾದಮೇಲೆ ಬಂದೊವುಕೆ ಊಟ ಕೊಟ್ಟವೆ. ಇಲ್ಲಿ ಬೊಲಿಕೊಟ್ಟ ಹಂದಿನ ಮಾಸನ ಮಾರಿಕೆಬೊತ್ತು ತೇಳ್‌ವ ನಂಬಿಕೆ ಉಟ್ಟು. ಹಂಗಾಗಿ ಎಲ್ಲದರ ಅಲ್ಲೇ ಗೈಪು ಮಾಡಿ ಜೆನಂಗಳಿಗೆ ಊಟಕೆ ಬಳ್ಸುವೆ.(ಹೆಚ್ಚಿನ ನೋಡಿ:ಗೋಂದಲು ಪೂಜೆ)

ಹಟ್ಟಿ ಮಾರಿ: ದನಂಗಳಿಗೆ ಬಾವ ಮಾರಿ ಸೀಕ್ ಗುಣಾಕೆ ಹಟ್ಟಿ ಮಾರಿ ತೇಳ್‌ವ ಆಚರಣೆನ ನಡ್ಸುವೆ. ಈ ಪೂಜೆ ಕೂಡ ಅಮ್ನೂರು ದೆವ್ವಕೆ ಆದೆ. ಹಟ್ಟಿನ ಎದ್‌ರ ದೇವಿನ ಗದ್ದುಗೆನ ಮಾಡಿ ಅದರ ಎದುರಕೆ ದೇವಿನ ಬಂಟ ಭೈರವಂಗೆ ಒಂದ್ ಗದ್ದುಗೆನ ಮಾಡಿ ಹಂದಿನ ಮನೆ ಮತ್ತೆ ಹಟ್ಟಿನ ಸುತ್ತ ಮರ್ದ್‌ಸಿಕಂಡ್ ತಂದ್ ಭೈರವನ ಗದ್ದಿಗೆಲಿ ಬೊಲಿಕೊಟ್ಟವೆ. ಹಂದಿನ ಬೊಲಿಕೊಡ್ಕನ ಒಂದ್ ಕೋಳಿನನೂ ಬಲಿ ಕೊಡುವ ಕ್ರಮನೂ ಉಟ್ಟು. ಹಂದಿ ಗಂಡಾದರೆ ಕೋಳಿ ಹೇಂಟೆ ಆಗಿರೊಕು ಹಂದಿ ಹೆಣ್ಣಾದರೆ ಕೋಳಿ ಹೂಂಜ ಆಗಿರೊಕು. ಇಲ್ಲಿ ಬೊಲಿ ಕೊಟ್ಟ ಹಂದಿನ ತಲೆನ ಗೈಪು ಮಾಡಿ ಪುಂಡಿ ನೊಟ್ಟಿಗೆ ಭೈರವಂಗೆ ಬಳ್ಸ್‌ವೆ. ಊರ್‌ನ ಮಾರಿ ಅಲ್ಲೊ ಗಡಿ ಮಾರಿ : ಇಡೀ ಊರುನ ಅಲ್ಲರೆ ಗ್ರಾಮದ ಜೆನ ಸೇರಿ ಈ ಆಚರಣೆನ ಮಾಡ್‌ವೆ. ಇದರ ಉದ್ದೇಸ ಇಡೀ ಊರುಗೆ ಬಾವ ರೋಗತೇಳ್‌ರೆ ಮೊನ್‌ಸ, ಸಾಂಕ್‌ಪ್ರಾಣಿ, ಕ್ರಿಸಿ ಇಂತದ್‌ಕೆ ಬಾವ ರೋಗರುಜಿನಗಳ ದೂರಾಗಲಿ ತೇಳ್‌ದೆ ಆಗುಟು. ಊರ್‌ನ ಇಲ್ಲರೆ ಗ್ರಾಮದ ಗಡಿ ಪ್ರದೇಸಲಿ ಒಂದು ಮರಲಿ ಮಾರಿದೇವತೆನ ಮೂರ್ತಿ ಮಾಡಿದ್ ಅದರ ಪೂಜೆಮಾಡಿ ಅದ್‌ಕೆ ಹಂದಿನ ತಲೆ ಕೊಯ್‌ಸುವೆ. ಅದಾಗಿ ಅದರ ತಲೆನ ಗೈಪು ಮಾಡಿ ಪುಂಡಿನೊಟ್ಟಿಗೆ ಇಕ್ಕ್‌ವೆ. ಒಳ್‌ದ ಮಾಸನ ಗೈಪು ಮಾಡಿ ಸೇರ್‌ದೊವೆಲ್ಲ ಪ್ರಸಾದ ರೂಪಲಿ ತಿಂದವೆ. ಇದರಾಂಗೆ ‘ಬೈಲ್ ಮಾರಿ’ನ ಮಾಡಿ ಮಾರಿ ದೇವತೆಗೆ ಹಂದಿನ ಬೊಲಿ ಕೊಟ್ಟವೆ.

ತಿನಿ ರೂಪಲಿ ಹಂದಿನ ಬಳಕೆ : ಆಹಾರ ಕ್ರಮ ಮೊನ್ಸನ ಎಲ್ಲಾ ಮಟ್ಟದ ಆಚರಣೆನೊಟ್ಟಿಗೆ ಸಮ್ಮಂದನ ಇಸಿಕಂಡದೆ. ಹಂದಿನ ಜೆನಪದರ್ ಮೊದುವೆ ಸಾವ್ ಇಂತ ಕೆಲವ್ ಜಂಬರಗಳ್‌ಲಿ ತಿನಿ ರೂಪಲಿ ಬೇರೆ ಬೇರೆ ಆಚರಣೆ, ಆರಾದನೆ, ಹಬ್ಬ ಹರಿದಿನಗಳ ಹೊತ್ತ್‌ಲಿ ಬಳ್ಸುವೆ.

ಅರೆಬಾಸಿಗರ್ ಮತ್ತೆ ತುಳುನಾಡ್‌ಲಿ ‘ಕೆಡ್ಡಸ’ ಆಚರಣೆನ ಮುಕ್ಯ ಆದ್ದಂತದ್ ಬೂಮಿದೇವಿನ ಮುಟ್ಟ್‌ನ ಕಾಲ ತೇಳಿ ಪರಿಗಣ್‌ಸುವ ಈ ಆಚರಣೆಲಿ ಮಾಂಸಾರಿಗಳಾದೊವ್ ಮಾಸದೂಟ ಮಾಡೊಕು ತೇಳಿ ನಿಯಮ ಉಟ್ಟು, ಈ ಆಚರಣೆ ಮೂರು ದಿನ ಇದ್ದದೆ. ಅಂದ್ ಹಂದಿನ ಬೇಟೆ ಆಡಿ ಅದರ ಮಾಸನ ಗೈಪು ಮಾಡಿ ತಿಂದವೆ. ಒಂದು ವೇಳೆ ಕಾಡ್ ಹಂದಿ ಸಿಕ್ಕದರೆ ಊರ್ ಹಂದಿನ ಕೊಂದ್ ತಿಂದವೆ. ‘ಬೈನೆಟಿ’ ದೆವ್ವದ ಆರಾದನೆ ಹೊತ್ತ್‌ಲಿ ಕೂಡ ಬೇಟೆ ಆಡಿ ಸಿಕ್ಕಿದ ಹಂದಿ ಮತೆ ಬೇರೆ ಪ್ರಾಣಿಗಳ ಗೈಪು ಮಾಡಿ ದೆವ್ವಕೆ ಬಳ್ಸಿ ಪ್ರಸಾದ ರೂಪಲಿ ಎಲ್ಲೊವ್ ತಿಂದವೆ. ‘ಆಟಿ’ತಿಂಗಳ (ಆಷಾಡ) ಅಮಾಸೆ ದಿನ ಊಟಕೆ ಹಂದಿ ಗೈಪುನನೇ ಮಾಡುವೆ. ಮಲೆನಾಡ್‌ಲಿ ಗೌರಿ ಹಬ್ಬದ ಮರ್‌ದಿನ ಎಲ್ಲೊವ್ ಹಂದಿ ಗೈಪ್ ಮಾಡ್‌ವೆ.

ಗೌಡ (ಒಕ್ಕಲಿಗ) ಜನಾಂಗಲಿ ಸತ್ತ 11ನೇ ದಿನ (ತಿತಿ) ಬೊಜ್ಜದ ದಿನ ಹಂದಿ ಗೈಪು ಮಾಡಿ ಇಕ್ಕುವೆ. ಮಡ್‌ಕೇರಿ ಪ್ರಾಂತ್ಯಲಿ ಗೌಡ ಜೆನಾಂಗ ಮತೆ ಕೊಡವರ ಮೊದುವೆ ಜಂಬರಲಿ ಚಪ್ಪರದೂಟ ಮತ್ತೆ ಮೊದುವೆನ ಊಟಕೆ ಹಂದಿನೇ ಆಕು. ರೋಮನ್ ಕ್ಯಾತೊಲಿಕ್ಸ್ ಸಮುದಾಯದವರ ಮೊದುವೆಲಿ ಹಂದಿ ಅಡುಗೆನೆ ಆಕು. ಇದೆ



ಜೆನಾಂಗದವರ ಚರ್ಚಿನ ವರ್‌ಸದ ಹಬ್ಬ (ಸಾಂತ್ ಮಾರಿ) ದಿನ ಎಲ್ಲಾ ಮನೆಗಳ್‌ಲಿನೂ ಹಂದಿ ಗೈಪ್ ಮಾಡುವೆ. ಕ್ರಿಸ್‌ಮಸ್ ಹಬ್ಬದ ದಿನ ಕ್ರಿಶ್ಚನ್ ಜೆನಾಂಗದವ್ ಹಂದಿ ಗೈಪ್ ಮಾಡುವೆ. ಸಿರಾಡಿ ದೆವ್ವನ ಆರಾದನೆ ಮಾಡೊವ್ ಅದ್‌ಕೆ ಹಂದಿನ ತಲೆಕೊಯ್‌ಸಿ, ಮತ್ತೆ ಅಡ್‌ಗೆ ಮಾಡಿದ್ ಬಂದೊವ್‌ಕೆಲ್ಲ ಕೊಟ್ಟವೆ. ಗೌಡ ಜೆನಾಂಗದ ಮೊದುವೆನ ತುಪ್ಪದೂಟಲಿನೂ ಹಂದಿ ಗೈಪ್ ಮಾಡುವೆ. ಮಾರಿ ಪೂಜೆ ಆಕನ ಹಂದಿ ಗೈಪು ಮಾಡಿ ಇಕ್ಕುವೆ.

ಇಸ್ಟಲ್ಲದೆ ಮನೆಗೆ ನೆಂಟ್ರುಗ ಬಾಕನ ಅವುಕೆ ಹಂದಿ ಗೈಪು ಅಡಿಗೆ ಮಾಡಿ ಬಳ್ಸುವ ಪೊದ್ಧತಿನೂ ಉಟ್ಟು. ಅದರ್‌ಲಿನೂ 'ಹಂದಿ ಸುಕ್ಕ' ಮತೆ 'ಹಂದಿಗಸಿ' ತೇಳಿ ಎರ್‌ಡ್ ನಮುನೆ ಗೈಪ್ ಮಾಡಿ ತಿಂದೆವ. ಕಾಡ್ ಹಂದಿನ ಮಾಸನ ಒಣ್‌ಂಗುಸಿರೆ ಅದ್ ಉಪ್ಪಣ ಆದೆ, ಮುಂದೆ ಅದರ ಗೈಪು ತಿಂಬ ಕ್ರಮ ಉಟ್ಟು.

ನಿಸೇದಂಗ : ಜೆನಪದ ನಿಸಿದ್ದ ಆಗಿರುವ ಪ್ರಾಣಿ ಆಹಾರಗ ಬೇರೆ ಬೇರೆ ತರಲಿ ಕಾಂಬಕೆ ಸಿಕ್ಕುವೆ. ಆಯಾ ಜಾಗೆಗಳಿಗೆ ಬಂದಂಗೆ ಈ ನಿಸೇದಗ ವೆತ್ಯಸ ಆಕಂಡ್ ಹೋದೆ, ಹಿಂಗೆ ನಿಸೇದ ಆದ ಪ್ರಾಣಿ ಆಹಾರಲಿ ಹಂದಿ ಮಾಸನೂ ಒಂದ್. ಹಂದಿ ಮಾಸ ತಿಂದವನ ದೇವುರ್ ಮೂರ್ ದಿನ ಕೈ ಬುಟ್ಟವೆ ತೇಳ್‌ವ ನಂಬಿಕೆಂದ ಕೆಲವ್ ಜೆನ ಹಂದಿ ಗೈಪುನ ತಿಂಬೊದುಲೆ. ಇಸ್ಲಾಂ ದರ್ಮಲಿ ಹಂದಿ ವಿರುದ್ದ ಆದ ಪ್ರಾಣಿ. ಬಿಸ್ಮಿಲ್ಲ ಮಾಡದೆ ಇರ್‌ದು ಅದರ ತಿರಸ್ಕಾರಕೆ ಕಾರಣ ಇರ್‌ದು. ಕೆಲವು ಪ್ರದೇಸಗಳ್‌ಲಿ ಬೊಜ್ಜ(ತಿತಿ) ಜಂಬರಲಿ ಹಂದಿ ಅಡುಗೆ ಮಾಡ್‌ದರ್‌ಂದ ಅದರ ಒಳ್ಳ ಕಾರ್ಯಕ್ಕೆ ತೇಳ್ರೆ ಮೊದುವೆನ ಊಟಕೆ ಮಾಡಿಕೆ ಬೊತ್ತುತಂತೇಳ್‌ವ ನಿಸೇದಗ ಒಳ.

ಹಂದಿ ಮಾಸ ಬೇರೆ ಪ್ರಾಣಿಗಳ ಮಾಸದಂಗಿಲ್ಲೆ. ಅದರ್‌ಲಿ ತುಪ್ಪದ ಅಂಸ ಹೆಚ್ಚೆ ಇರ್‌ದರ್‌ಂದ ಗೈಪು ಮಾಡ್‌ವ ಕ್ರಮನು ಹಜ್ಞಾ ಬೇರೆ ನಮೂನೆ ಇದ್ದದೆ. ಹಂದಿ ಗೈಪು ಮಾಡ್‌ಕನ ಬರೆ ಮೆಣ್‌ಸ್, ಸುಟಿ ಬೆಳ್ಳುಳಿ ಚೂರ್ ಜಾಸ್ತಿ ಸೇರ್‌ಸಿ ಗೈಪು ಮಾಡುವೆ. ಎಣ್ಣೆ ಮತ್ತೆ ಕಾಯಿ(ತೆಂಗಿನ ಕಾಯಿ) ಇದ್‌ಕೆ ಹಾಕುದುಲೆ. ಗೈಪ್ ಮಾಡಿಕನ ಹನೀಸ್ ತೊಪ್ಪಿ ಹೋದರೂ ಹೊಟ್ಟೆಗೆ ಹಿಡಿಯದೆ ತಿಂದವಂಗೆ ಉರ್‌ಚಟದ ಹೆದ್ರಿಕೆ ಇದ್ದದೆ. ಹಂಗಾಗಿ ಹೆಚ್ಚಿನವ್ ಹಂದಿ ಮಾಸ ತಿಂಬೊದುಲೆ. (ವೈ.ಜಿ.)

**ಹಂದಿ ಬೇಟೆ :** ಪಂಡ್‌ನ ಜೆನಂಗ ಬೇಟೆ ಆಡಿದ್ ಅವರ ಆಹಾರ ಮತೆ ಬೇರೆ ಅಗತ್ಯಗಳ ಪೂರೈಸಿಕಂತಿದ್ದೊ. ಬೇಟೆಲಿ ಹಂದಿ ಬೇಟೆ ಮುಕ್ಯ ಆದ್ದಂತದ್. ಹಂದಿ ಒಂದ್ ಗಟ್ಟಿಜ್ಞ ಪ್ರಾಣಿ. ಕಾಡ್ ಹಂದಿಗ ಮೊನ್ನ ಬೆಲ್ದ ನೆಟ್ಟಿ ಮತೆ ಬೆಳೆಗಳ ಹಾಳ್ ಮಾಡುವೆ. ಮೊನ್‌ಸ ಕ್ರಿಸಿ ಸಂಸ್ಕೃತಿಲಿ ಬೊದ್‌ಕಿಕಾಕನ ಅಂವನ ಬೆಳೆಗಳ ರಕ್ಷಣೆಮಾಡಿಕಾಗಿ ಬೇಟೆಯಾಡ್‌ದರ ಅಳವಡಿಸಿಕಂಡ್ ಬಾತ್. ಹಂದಿ ಬೇಟೆನ ಆಹಾರಕೆ ಮತೆ ಬೆಳೆಗಳ ರಕ್ಷಣೆಗಾಗಿ ಇಂದುನು ಕೂಡ ಬೇಟೆಯಾಡ್‌ತ ಒಳೊ. ಮಲೆನಾಡ್ ಮತೆ ಪಸ್ಚಿಮ ಗಟ್ಟದ ಬುಡಲಿ ಇರ್‌ವ ಪ್ರದೇಸಗಳ್‌ಲಿ ಹಂದಿ ಬೇಟೆ ತುಂಬ ಪ್ರಸಿದ್ಧಿನ ಪಡ್‌ಕಂಡುಟು. ದೊಡ್ಡ ಬೇಟೆತೇಳಿರೆ ಹಂದಿ ಬೇಟೆ ತೇಳೆ ಅರ್ತ. ಹಂದಿ ಎಲ್ಲ ಪ್ರಾಣಿಗಳಂಗೆ ಅಲ್ಲ. ಅದ್ ಬಾರಿ ಬೇಗ ಸಿಟ್ಟ್ ಬಾವ ಪ್ರಾಣಿ. ಹಂಗಾಗಿ ಹಂದಿ ಬೇಟೆ ಅಸ್ಟೆ ಅಪಾಯದ್. ಎಲ್ಲಾರ್ ಪೆಟ್ಟಾದರೆ ಸಾಯಕನ ಮುಟ್ಟ ಎದುರ ಕಂಡವರ ಬುಡದ ಪ್ರಾಣಿ ತೇಳ್ರೆ ಅದ್ ಕಾಡ್ ಹಂದಿ. ಹಂದಿ ಬೇಟೆಲಿ ಪೆಟ್ಟಾದ ಹಂದಿಗ ಎಸ್ಟೊ ಬೇಟೆಗಾರರ ಕುತ್ತಿದ್, ಗುದ್ದಿದ್ ಕೊಂದ ಉದಾರ್‌ಣೆಗ ಒಳೊ. ಹಂದಿ ಬೇಟೆಲಿ ಸುಮಾರ್ ನಮೂನೆಗ ಒಳೊ. ಕೂಡು ಬೇಟೆ, ಸಾರಿಕಂಡ್ ಹೋವ ಬೇಟೆ, ಬೆಡಿ ಕಟ್ಟುದು, ಗುಂಡಿ ತೆಗ್‌ದ್ ಇಸುದು, ಪಟಾಕಿನ ಮೊದ್ದು ಇಸುದು, ಉರ್‌ಲು ಇಸುದು ಈ ಎಲ್ಲಾ ನಮೂನೆಲಿ ಹಂದಿನ ಬೇಟೆಯಾಡುವೆ.

ಇತಿಹಾಸಲಿ ಮತೆ ಜೆನಪದ ಪುರಾಣಗಳ್‌ಲಿ ಹಂದಿ ಬೇಟೆನ ವಿವರಗ ನಾವುಗೆ ಸಿಕ್ಕುವೆ. ಬೇಟೆಲಿ ಹಂದಿ ಕೋರೆಲಿ ಕುತ್ತಿ ಸತ್ತ ಗಟನೆಗ ವೀರಗಲ್ಲುಗಳ್‌ಲಿ ಸಿಕ್ಕಿದೆ. ಹಂಗೆನೇ ಬೇಟೆಲಿ ಹಂದಿನೊಟ್ಟಿಗೆ ಲಡಾಯಿ ಮಾಡಿದ್ ಸತ್ತ ನಾಯಿಗಳ ಬಗ್ಗೆನೂ ದಾಕಲೆಗಳ್‌ಲಿ ಮಾಹಿತಿಗ ಸಿಕ್ಕುವೆ. ಜನಪ್ರಿಯ ಪಾಡ್ದನ ಆದ 'ಪಂಜುರ್ಲಿ' ಪಾಡ್ದನಲಿ ಈಸ್ವರ ಹಂದಿನ ಬೇಟೆ ಆಡುವ ಚಿತ್ರಣಂಗ ಒಳೊ. ಈಸ್ವರ ಅವನ ನಂದನವನ ಹಾಳ್ ಮಾಡ್‌ವ ಹಂದಿಗಳ ಉಪದ್ರನ ತಡೆಕೆಬೊತ್ತದೆ ಹಂದಿಗಳ ಬೇಟೆಯಾಡ್‌ದೆ. ಸಿವ ಮುಂದೆ ಬೇಟೆಯಾಡ್‌ದ ಹಂದಿಗೆ ಮರು ಜೀವನನ ಕೊಟ್ಟು ಪಂಜರ್ಲಿ ದೆವ್ವ ಆಗಿ ಬದ್‌ಲ್ಸಿದೆ. ಹಾಂಗೆನೇ ಮೇರರ ಕೊಣ್ತ 'ಹುಲಿ-ಹಂದಿ' ಕುಣ್ತಲೂ ಈಸ್ವರ ಹಂದಿ ಮತೆ ಹುಲಿನ ಬೇಟೆ ಮಾಡ್‌ವ ಚಿತ್ರಣ ಉಟ್ಟು. ಸುಳ್ಯ ತಾಲೂಕುನ ಕುಂಚಡ್ಕ, ಕಲ್ಲೆಂಬಿ, ಕುಡೆಕಲ್ಲ್, ಅಡ್ಪಂಗಾಯ ಹಾಂಗೆ ಕೆಲವ್‌ಕಡೆ 'ಬೈನಾಟಿ' ದೆವ್ವದ ಆರಾದನೆ ನಡ್‌ದದೆ. ಆದಿನ ಬೆಡಿ ಇದ್ದವೆಲ್ಲ ಕಾಡ್‌ಗೆ ಹೋಗಿದ್ ಬೇಟೆಯಾಡೊಕು ತೇಳ್‌ವ ನಿಯಮ ಉಟ್ಟು. ಇಲ್ಲಿ ಮುಕ್ಯ ಆಗಿದ್ ಹಂದಿನನೇ ಬೇಟೆ ಆಡುವೆ.

ದೆವ್ವಾರಾದನೆನ ಬಾಗ ಆದ ಜಾಲಾಟಲಿ ಆರಾದನೆನ ಪಡ್‌ಕಂಬ 'ಬೇಟೆಗಾರರ್' ಹಾಂಗೆ 'ಕಾರಿ ಕಬಿಲ' ದೆವ್ವಗ ಬೇಟೆಗೆ ಸಮ್ಮಂದಪಟ್ಟ ದೆವ್ವಗತೇಳಿ ಹೇಳುವೆ. ಜಾಲಾಟ ಆಕನ 'ಕಳ ಒಡ್ಡುನೆ' ತೇಳ್‌ವ ಕ್ರಮ ಆದೆ. ಅದಾಗಿ 'ಕಾಡೆದಿ' ಮತೆ 'ನಾಯಕ' ದೆವ್ವಗ ಹಂದಿನ ಬೇಟೆನ ಅಬಿನಯ ರೂಪಕನ ಮಾಡಿ ತೋರ್ಸುವೆ. ಆರ್ ಜೆನ ಸುತ್ತುಲಿ ಚುರ್‌ಕರ ಕುದ್ದ್ ನೆಡುಲಿ ಒಂದ್ ಕಾಯಿನ(ತೆಂಗಿನಕಾಯಿ) ನೆಲಕೆ ಒತ್ತಿ ಹಿಡ್‌ದ್ದ್ ಹಂದಿನಾಂಗೆ ಮರ್‌ಟವೆ. ಕಾಡೆದಿ ತೇಳಿರೆ ಬೇಟೆಗಾರ ಬಂದ್ ಹಂದಿನ ಹಿಂಡ್‌ನ ನೋಡಿದ್ ಕುಸಿಲಿ ಕೊಣ್‌ದದೆ. ಒಬ್ಬನ ಮೇಲೆ ಹಂದಿನ ಹಿಂಡ್ ಅಕ್ರಮಣ ಮಾಡ್‌ದೆ. ಒಳ್ದವು ಹಂದಿ ಹಂದಿ ತೇಳಿದ್ ಬೊಬ್ಬೆ ಹೊಡ್ದವೆ ಕಾಡೆದಿ ಬಾಣನ ಬುಟ್ಟದೆ. ಜಾಲಾಟದ ಒಟ್ಟು ಈ ಬಾಗ ಹಂದಿನ ಬೇಟೆನ ಅನುಕರಣೆ ಮಾಡ್‌ವ 'ಹಗರಣ' ರೀತಿನ




ಆಚರಣೆಯಾದೆ. ತಮ್ಮ ಕ್ರಿಸಿಗೆ ಕಂಟಕ ಆವ ಹಂದಿನ ಬೇಟೆ ಮಾಡ್‌ವ ಅನುಕರಣೆಲಿ ಆರಾದನೆನ ನೆಲೆಗಳ್‌ಲಿ ಅದರ ಮೇಲೆ ನಿಯಂತ್ರಣನ ಮಾಡ್‌ವ ಮೊನ್ಸನ ಕ್ರಮಗಳ ನಾವಿಲ್ಲಿ ಕಾಣಕ್. ಕೋಟಿ ಚೆನ್ನಯ ಪಾಡ್ದನಲಿ ಕೋಟಿ ಚೆನ್ನಯ್ಯನವ್ ಬೆಳ್‌ದ ಬೆಳೆಗಳ ಕಾಡ್‌ಹಂದಿಗ ಹಾಳ್ ಮಾಡ್‌ವೆ. ಇವು ಕೇಳ್‌ದಂಗೆ ಬಲ್ಲಾಳರ್ ಬೇಟೆನ ಏರ್ಪಾಟ್ ಮಾಡ್‌ವೆ. ಬೇಟೆಲಿ ಅಣ್ಣ ಕೋಟಿ ದೊಡ್ಡ ಹಂದಿನ ಬಾಣಂದ ಹೊಡ್ದ್ ಬೀಳ್ಸಿದೆ. ಅದಾಗಿ ಪಂಜದ ಬಲ್ಲಾಳನ ಮೇಲೆ ಸೇಡು ತೀರ್‌ಸಿಕ್ಕಾಗಿ ಸತ್ತ ಹಂದಿನ ಮೇಲೆ ಬೆರ್ಮರನ ನೆನ್‌ಸಿ ಮತ್ತೆ ಬೊದ್ಕುಸಿದೆ. ಹಂದಿ ಎದ್ದ್‌ದ್ ಪಂಜದ ಕಡೆಗೆ ಓಡ್‌ದೆ. ಪಂಜದ ಗದ್ದೆನ ಹಕ್ಕಲೆ ಬಾಕನ ಕೋಟಿ ಬಾಣಂದ ಅದರ ಕೊಂದದೆ. ಸತ್ತ ಹಂದಿಗಾಗಿ ಪಂಜದವ್‌ಕೂ ಕೋಟಿ ಚೆನ್ನಯನವ್‌ಕೆ ಜಗಳಾದೆ. ಇದರ್‌ಂದಾಗಿ ಪಂಜದ ಬಲ್ಲಾಳಂಗೆ ಎಣ್ಮೂರು ಬಲ್ಲಾಳನ ಮೇಲೆ ಅಸಮದಾನ ಆಗಿದ್ ಯುದ್ಧ ಸುರಾದೆ. ಈ ಯುದ್ಧಲಿ ಎಣ್ಮೂರ್‌ನ ಬಲ್ಲಾಳ ಗೆದ್ದದೆ. ಆದರೆ ಕೋಟಿ ಚೆನ್ನಯ್ಯನವ್ ವೀರ ಮರಣ ಹೊಂದುವೆ.

ಹೀಂಗೆ ಬೂಮಿನ ಮೇಲೆ ಅದಿಕಾರನ ಸ್ತಾಪುಸುವ ಸಲುವಾಗಿನೇ ಹಂದಿ ಬೇಟೆ ಒಂದು ಕಾರಣ ಆಗಿರ್‌ದರ ಕಾಣಕ್. ಬೇಟೆನ ನೆಪಮಾಡಿಕಂಡ್ ಕೋಟಿ ಚೆನ್ನಯನವ್ ಅವುಕೆ ಆಸ್ರಯ ಕೊಟ್ಟ ಎಣ್ಮೂರು ಬಲ್ಲಾಳಂಗೆ ಕೈಂದ ತೊಪ್ಪಿ ಹೋದ ಜಾಗೆನ ಹಿಂದಕೆ ತಂದ್ ಕೊಟ್ಟವೆ. ಹಂಗಾಗಿದ್ ಬೂಮಿನ ಮೇಲೆನ ಅದಿಕಾರದ ಸ್ತಾಪನೆಲೂ ಹಂದಿ ಬೇಟೆ ಕಂಡ್‌ಬಂದದೆ.

ಗಾದೆ ಮತ್ತೆ ನಂಬಿಕೆಗ : ಹಂದಿನ ಬಗ್ಗೆ ಇರ್‌ವ ಗಾದೆಗ ಮತ್ತೆ ನಂಬಿಕೆಗ ಈ ರೀತಿ ಒಳೊ. ಹಂದಿಗೆ ಗಂದ ಪೂಜಿರೂ ಅದ್ ಹೇಲ್ ಹಂದಿನೇ, ಹಂದಿಗೆ ಮೂಂಡಿ ಕೆಸ ತೋರ್ಸಿದೆನಾ, ಹಂದಿ ಇಳ್‌ದ ಗದ್ದೆಲಿ ಗಂಜಿ ಸಿಕ್ಕಿದಾಂಗೆ, ಹಂದಿನ ಮೊರಿಗಳಿಗೆ ಹಂದಿನ ಬುದ್ದಿನೇ, ಹಂದಿನೊಟ್ಟಿಗೆ ಸೇರಿದ್ ಕರ್ ಹೇಲು ತಿಂದಾಂಗೆ, ಹಂದಿನ ಮೀಸಿದಾಂಗೆ, ಊರ್‌ಗೆ ಹಂದಿ ಬೇಕ್, ಹಕ್ಕಲೆ ದೂರೊವ್ ಇರೊಕು, ನಂದಿ ಬೆಟ್ಟನ ನೋಡದವ್ ಹಂದಿಯಾಗಿ ಹುಟ್ಟುವೆ ಗಡ, ನಂದಿ ನೋಡದವ್ ಹಂದಿದೊಳೂ ಕಡೆ, ಕಾಡ್ ಹಂದಿ ಗದ್ದೆ ಚುಕ್ಕಿತ್ ತೇಳಿ, ಊರ್ ಹಂದಿನ ಕೆಬಿ ಕೊಯ್ದುಗಡ, ಹತ್ತ್ ತಿಂಬೊದು ಒಂದ್, ಹಂದಿ ತಿಂಬೊದು ಒಂದ್, ಹಂದಿ ಬೊಡ್ತ್‌ಲೆ, ಹರಿಹಬ್ಬ ಮಾಡ್ತ್‌ಲೆ, ಹಂದಿ ಸೊಕ್ಕಿದಸ್ಟ್ ಹಂದಿ ಜೋಗಿಗೆನೇ ಲಾಬ, ಹಂದಿನ ಮುಂದೆ ಮುತ್ತ್ ಹರ್‌ಂಡಿರೇನ್, ಹಂದಿಯಾಗಿ ನೂರ್ ವರ್‌ಸ ಬೊದ್ಕುದರ್‌ಂದ ನಂದಿಯಾಗಿ ಮೂರ್ ವರ್‌ಸ ಬಾಳ್‌ದು ಒಳ್ಳೆದ್, ಹಂದಿಯೊವ್ ಹಾದರ ಮಾಡಿರೆ ತಮಟೆವ್ ದಂಡ ಕೊಟ್ಟೊ, ಹಂದಿನ ಕುರ್‌ಸುಲಿ ಕುದ್‌ರ್ಸಿರೆನೂ ಹೇಲ್ ಕಾಂಬಕನ ಹಾರದೆ ಇರ್‌ದಾ, ಹಂದಿ ಇದ್ದರೆ ಕೇರಿ ಸುದ್ದ, ದೂರೊವಿದ್ದರೆ ಜಾಣ ಸುದ್ದ, ಹಂದಿಗೆ ಎಸ್ಟೊ ಮೊರಿ, ಸಿಂಹಂಗೆ ಒಂದೇ ಮೊರಿ

ನಂಬಿಕೆಗ: ಹಂದಿ ಮಾಸ ತಿಂದವನ ದೇವ್‌ರು ಮೂರ್ ದಿನ ಕೈಬುಟ್ಟವೆಗಡ, ಹಂದಿ ತಿಂದರೆ 48 ದಿನ ಗುರುಬಲ ಇರ್ದುಲೆಗಡ, 'ಕೆಡ್ಡಸ'ದ ದಿನ ಕಾಡ್ ಹಂದಿಗಳಿಗೆ ಜೊರ ಬಂದದೆ, ಅಮಾಸೆ ದಿನ ದೊಡ್ಡ ಕಾಡ್ ಹಂದಿಗಳೊಟ್ಟಿಗೆ ದೆವ್ವಂಗ ಇದ್ದವೆಗಂಡ್ ಮಕ್ಕಳಿಗೆ ಮಾಸ ಕೊಡ್‌ಕನ ಸುರುನ ಸರ್ತಿ ಕಾಡ್ ಹಂದಿ ಮಾಸ ಕೊಡೊಕು

ಈ ಎಲ್ಲಾ ತರದ ಗಾದೆಗ ಮತ್ತೆ ನಂಬಿಕೆಗ ಜೆನಪದ ರ್‌ಲಿ ಹುಟ್ಟಿಕಂಡೊಳ. ಹಂಗೆನೇ ಜೆನಪದ ವೈದ್ಯೆಲಿನೂ ಹಂದಿನ ಮಾಸ, ತುಪ್ಪ ಬಳಕೆ ಆದೆ. ಮೂಲವ್ಯಾಧಿ ಸೀಕ್ ಹಂದಿ ಮಾಸ ತಿಂದರೆ ಕಮ್ಮಿಯಾದೆ, ಕಾಲ್‌ನ ಮುಡ್ ಒಡ್‌ದರೆ ಹಂದಿ ತುಪ್ಪ ಉಜ್ಜಿರೆ ಕಮ್ಮಿ ಆದೆ, ಎತ್ತ್‌ಗಳ ಹೆಗ್‌ಲ್ ಬೇನೆಗೆ ಹಂದಿಎ ತುಣ್ಣೆ ಹೇಳಿ ಮಾಡ್ಸಿದ ಮೊದ್ದ್. ಹೀಂಗೆ ಹಂದಿ ಜೆನಪದರ ಬೊದ್ಕುಲಿ ಆರಾದನೆ, ಆಚರಣೆ, ಬಲಿ, ಬೇಟೆ, ನಂಬಿಕೆ, ಗಾದೆ ಹಂಗೆ ತಿನಿನ ರೂಪಲಿನೂ ಉಪಯೋಗಾದೆ ತೇಳ್‌ದರ ಕಾಣಕ್. ಜೆನಪದರ್‌ಲಿ ಒಂದ್ ಕಡೆ ಹಂದಿ ನಿಸೇದದ ಪ್ರಾಣಿ ಆದರೂ ಇನ್ನೊಂದು ಕಡೆ ಅಸ್ಟೇ ಪಾವಿತ್ರದ ಮತೆ ಮುಕ್ಯಪಟ್ಟ ಪ್ರಾಣಿಯಾಗುಟು. (ವೈ.ಜಿ.)

**ಹರ್‌ಸಯ/ಹರಿಸೇವೆ :** ಇದ್ ನಮ್ಮ ಕುಲದೇವ್‌ರು ಆದ ವೆಂಕಟರಮಣ ಸ್ವಾಮಿಗೆ ಕಾಲಕಾಲಕೆ ಆಯಾಯ ಕುಟುಂಬಲಿ ಹಬ್ಬದಂಗೆ ನಡ್ಸುವ ಒಂದ್ ಕಟ್ಟ್‌ಪಾಡ್. ನಮ್ಮ ಮೂಡಕಾಲಂದಲೂ ನಡ್‌ಕಂಡ್ ಬಂದ ಪದ್ದತಿ ಹೇಂಗೆ ತೇಳಿರೆ, 'ಸಂಕಟ ಬಂದಾಗ ವೆಂಕಟರಮಣ, ಸಂಕಟ ಹರಿದ ಮೇಲೆ ಬಿಂಕದ ರಮಣ. ಹಾಂಗೆತೇಳಿರೆ ಕಾಯಿಲೆ ಬೇರೆ ತರದ ಸುಮಾರ್ ಅಸೌಕೆಗ ಒಬ್ಬಂಗೆ ಬಂದರ್‌ನು ಒಳ್ಳೆದ್ ಮಾಡ್ ದೇವರೆ, ನಿಂಗೆ ಹರಿಸೇವೆ ಮಾಡ್ಸಿನೆ ; ನಿನ್ನ ದೂತಂಗಳಿಗೆ 4 ಕಾಲು ಬೇಟಿ ಒಪ್ಪುಸಿನೆ ; ನಿನ್ನ ಮುಡ್‌ಪುಗೆ ಎರಡ್ ಪುಂಡಿ ದುಡ್ಡು ಹಾಕಿನೆತೇಳುವೆ'–ಇಂತ ಹರ್‌ಕೆ ಮಾಡಿ ಚಿಲ್ಲರೆ ಗಂಟ್ ಕಟ್ಟಿಸುವೆ. ವಾಸಿ ಆದ ಮೇಲೆ ಮರ್‌ತರೆ ಮತ್ತೆ ಯಾಗಾರ್ ಒಂದ್ ವರ್‌ಸ ಹರಿ ಸೇವೆ ಮಾಡ್ದೆ.

**ಮೂಡ ಪೊದ್ದತಿ :** ಹರ್‌ಸಯಕೆ ಎಂಟ್ ದಿನಕೆ ಮುಂದೆನೆ ಕುಟುಂಬದ ಹಿರಿಯ ಮೀದ್ ಮೊಡಿ ಉಟ್ಟ್ ಒಂದ್ ಬಾಳೆಗೊನೆ ಕಡ್‌ದ್ ತಂದ್ ಮುಡಿಪು ಕಟ್ಟಿದ ಜಾಗೆಲಿ ತೂಗಿ ಹಾಕಿದೆ. ಹಾಂಗೆ ನೆಂಟ್ರ್, ಊರ್‌ನವ್ಕೆ ಕಾಗದ ಬರ್‌ದ್ ತಿಳ್‌ಸ್‌ವೆ. ಹಾಂಗೆನೆ ದೇವುರುಗೆ ಗುಂಡಕಟ್ಟಿ ಪೂಜೆನ ನಡ್ಸಿ ಕೊಡಕುಂತ ಒಬ್ಬ ದಾಸಂಗೆ ತಿಳ್‌ಸ್‌ವೆ ಮತ್ತೆ ಊರ್‌ನ ಪ್ರತಿ ಒಂದ್ ಕುಟುಂಬಂದಳು ಒಬ್ಬೊಬ್ಬ ಬಕ್ತರಾಗಿ ನಿಲ್ಲುವಂಗೆ ತಿಳ್ಸುವೆ. ನಿಗಂಟ್ ಮಾಡ್‌ದ ದಿನಕೆ ಸರ್‌ಯಾಗಿ ಎಲ್ಲವು ಬಂದ್ ಸೇರುವೆ. ಬಕ್ತರಾಗಿ ನಿತ್ತ ಊರುನವ್ಕೆನು ಪತ್ರ ಬರ್‌ದ್ ತಿಳ್ಸುವೆ. ಆ ದಿನ ಸರಿ ಆಗಿದ್ ಎಲ್ಲವ್ ಬಂದ್ ಸೇರುವೆ. ಬಕ್ತರಾಗಿ ನಿತ್ತ ಊರ್‌ನ ಕುಲಸ್ತರ್ ಪೂಜೆ ಮಾಡ್‌ವ ದಾಸಂಗೆ ಉಪಹಾರ ಕೊಟ್ಟ ಮೇಲೆ ಅವರ ತಲೆಗೆ ಎಣ್ಣೆ ಕೊಟ್ಟ್ ಮೀಯಕೆ ಹೋದವೆ. ಮೊಡ್ಯಾಳ

ಮೊಡಿಪಂಚೆ ಕೊಟ್ಟದೆ. ಅವು ಮಿಂದ್ ಬಂದ್ ದೇವರ ಗುಂಡದ ಮುಂದೆ ನಿತ್ತ್‌ಕಂಡವೆ. ಒಕ್ಕಲ್ ಯಜಮಾನ ಬಂದ್ ಮಾಡ್ದ ಹರ್‌ಕೆನ ವಿವರ್‌ಸ ಹೇಳಿ, ಪೂಜೆ ಸುರುಮಾಡಿಕೆ ದಾಸಂಗೆ ಹೇಳ್‌ವೆ. ಹಣ್ಣ್, ಹೂ, ಕಾಯಿಗಳ್‌ಂದ ಪೂಜೆ ಮಾಡ್ದೆ. ಅಲ್ಲಿ ಬಕ್ತರಾಗಿ ನಿತ್ತ ಕೆಲವ್ಕೆ ದರ್‌ಸನನು ಬಂದದೆ. ಅದರ ದೇವ್ರು ಬಾದುಂತೇಳುವೆ. ಎಸ್ಟೊ ಜೆನ ಕಸ್ಟ, ಸುಕಗಳ ಕೇಳುವೆ. ಅವೇನೋ ಅದ್ಕೆ ಪರಿಹಾರ ಹೇಳ್‌ವೆ. ಅದ್ ಮುಗ್ದ ಮೇಲೆ ಬೇಟ ಬೀಳುವ ಪದ್ದತಿ ಇದ್ದದೆ.

ದೇವರ ಗುಂಡದ ಬಾಗ್ಲ್‌ಗೆ ಒಂದ್ ಬಾಳೆಲೆ ಮಚ್ಚಿ ಅದರ ಮುಂದೆಗೆ ಒಂದ್ ಆಡ್‌ನ ತಂದ್ ದೇವರ ದೂತರ್‌ಗೆ ಬಲಿ ಕೊಟ್ಟವೆ. ಅದಾಗಿ ಬಗವಂತನ ದೂತರ್ ಈ ಪೂಜಾರಿಗಳ್‌ಲಿ ಕೆಲವ್ಕೆ ದರ್‌ಸನ ಬಂದ್ ಆ ರಕ್ತಲಿ ಬಿದ್ದವೆ, ಅದಾಗಿ ಆಡ್‌ನ ಮಾಸನ ಅಡ್‌ಗೆ ಮಾಡಿ ಅಲ್ಲಿ ಸೇರ್‌ದ ಜೆನಂಗಳಿಗೆ ಉಂಬಕೆ ಇಕ್ಕುವೆ. ಹಣ್ಣ್–ಕಾಯಿ ಮಾಡ್ಸಿದ ಕಾಯಿನ ಒಂದ್ ಗಡಿನ ಬಾಳೆಹಣ್ಣ್ ಸಮೇತ ನೆಂಟ್ರ್‌ಗು, ಊರುನವ್ಕು, ಆಯಾಯ ಊರ್‌ಲಿ ಗುರು ಆಸಿರ್‌ವಾದ ಪಡ್ದ ಮನೆತನದವ್‌ಕೆ ಜೋಡುಗಡಿಗಳ ಕೊಟ್ಟು ಕಳ್ಸುವೆ. ಈಗೆಲ್ಲ ಕೆಲವ್ ಕಡೆ ದೇವರ ಗುಂಡನ ಕಟ್ಟಿ ಅರ್‌ಚಕರ್‌ಂದ ಪೂಜೆ ನಡ್ಸುವೆ. ವಾದ್ಯ, ದೇವರ ಬಜೆನೆ ಹಣ್ಣ್, ಹೂ, ಕಾಯಿಗಳ್‌ಂದ ಗಂದ, ದೂಪ, ದೀಪ ನೈವೇದ್ಯಗಳ್‌ಂದ ಆ ವೆಂಕಟರಮಣಸ್ವಾಮಿನ ಪೂಜೆ ಮಾಡ್‌ವೆ. ಅಲ್ಲಿ ಸೇರ್‌ದ ಜೆನಕೆಲ್ಲ ಸ್ಥೀ ಉಂಬಕೆ ಹಾಕುವೆ. ಪ್ರಾಣಿವದೆ, ದರ್‌ಸನ ಬಾದು ಇದೆಲ್ಲ ಕಡಿಮೆ ಆಗುಟು.. ಮುಡಿಪುನ ತಂದ್ ಅದ್ಕೆ ಪೂಜೆ ಮಾಡಿ ಕುಟುಂಬಸ್ತರ್ ಅಲ್ಲಿ ಸೇರ್‌ದ ಜೆನಗೆಲ್ಲ ಅವರವರ ಬಕ್ತಿನ ಕಾಣಿಕೆಗಳ ಮುಡ್ಪುಗೆ ಹಾಕುವೆ ಹಿಂಗೆ ಈ ದುಡ್ಡುನ ತುಂಬಿಕಂಡ್ ಬಂದಲ್ಲು ಕುಟುಂಬದ ಕೆಲವ್ ಜೆನಗ ಈ ಮುಡ್ಪುಲಿರ್‌ವ ದುಡ್ಡುನ ಅಲ್ಲಿನ ಬಂಡಾರಕೆ ಹಾಕಿ ಬಂದವೆ. (ಜಿ.ಕೆ.)

**ಹರ್‌ಸಯ ಹಿನ್ನೆಲೆ :** ಹಿಂದೆ ಶಿವನ ಬಕ್ತರಾಗಿದ್ದ ಗೌಡ್ರ್ ಆಯಾ ಕಾಲದ, ರಾಜರ ಪ್ರಬಾವಂದ ನಿದಾನ ಆಗಿ ವೈಸ್ಣವ ಪರಂಪರೆನ ಕೆಲ ಆಚರಣೆಗಳ ಒಪ್ಪಿಕಂಡೊಳ. ಐತಿಹಾಸಿಕ ಆಗಿ 12ನೇ ಸತಮಾನಲಿ ರಾಮಾನುಜಾರ್‌ಯರ್ ವಿಸ್ಣುವರ್‌ದನನ ಪ್ರೋತ್ಸಾಹಂದ ಕರ್ನಾಟಕಲಿ ವೈಸ್ಣವ ದರ್‌ಮನ ಜೆನಪ್ರಿಯಗೊಳ್ಸಿದೊ. ಬೇಲೂರ್‌ನ ಚೆನ್ನಕೇಶವ ದೇಸ್ತಾನ ಆ ದರ್‌ಮದ ಪರಿಪಕ್ವ ಕೊಡುಗೆ ಆಗುಟು ವೈಸ್ಣವ ದರ್‌ಮ ಜೆನಪ್ರಿಯ ಆಕನ ಶೈವರಾಗಿದ್ದ ಸುಮಾರ್ ಒಕ್ಕಲಿಗರ್ ವೈಸ್ಣವರ್ ಆಗೊಳೊ. ಈ ಕೆಲ್ಸ ವಿಜಯನಗರದರಸರ ಕಾಲದಲಿ ಹೆಚ್ಚಿಗೆ ಆಗುಟು. ಇದರ ಪಲಂದಾಗಿ ಇಂದ್ ನಾವ್ ವೈಸ್ಣವ ಪರಂಪರೆಗೆ ಸೇರ್‌ದ ಕೆಲವ್ ಗೌಡರ ಸುಳ್ಯ ಪರಿಸರಲಿ ಕಾಣಕ್. ಅವರ ನಾಮದಾರೀ ಗೌಡರ್‌ತನೆ ಗುರ್‌ತುಸುವೆ.

ನಾಮದಾರೀ ಗೌಡರ್ ಹಣೆಗೆ ಕುಂಕುಮದ ಬೊಟ್ಟು ಇಸ್‌ವೆ. ಮೈಗೆ ಬಸ್ಮ ಹಾಕಣಟಿಲ್ಲೆ. ಕೃಸ್ಣ, ವಿಸ್ಣು, ಚೆನ್ನಕೇಶವ ಇಂತೆಲ್ಲ ದೇವರ್‌ಗಳ ಇವು ಬಟ್ರ್‌ಗಳೊಟಿಗೆ ಕೂಡಿ ಆರಾದ್‌ಸುವೆ. ಹರ್‌ಸಯನ ವೈಸ್ಣವ ದಾಸಯ್ಯನ ಕರ್‌ದ್ ನಡ್ಸಿಕಂಡವೆ. ಮನೆಗಳ್‌ಲಿ ತಿರುಪತಿ ವೆಂಕಟರಮಣನ ಹೆಸರ್‌ಲಿ ಮುಡಿಪು ಕಟ್ಟಿಸಿ, ಅದರ ತಿರುಪತಿಗೆ ಕಳ್‌ಸಿ ಕೊಟ್ಟವೆ. ಇಜ್ಜಲ್‌ಲಿ ತೊಳ್ಸಿ ದೈನ ನೆಟ್ಟ್ ದಿನೊಳು ಬೊಳ್ಪುಗೆ ಅದ್ಕೆ ಕೈ ಮುಗ್‌ದವೆ ವಿಜಯನಗರ ಕಾಲಲಿ ಶ್ರೀ ವೈಸ್ಣವರ್ ತಮ್ಮ ಮತ ಪ್ರಚಾರಕೆ ಸುಮಾರ್ ಜೆನ ಹೆಬ್ಬಾರ್‌ಗಳ ನಿಲ್‌ಸಿದ್ದೊ., ಆ ಹೆಬ್ಬಾರಂಗ ಹಾಸನ ಜಿಲ್ಲೆನ ನೆರೆಕರೆ ನೆಲ್ಸಿ, ವೈಸ್ಣವ ದರ್‌ಮ ಪ್ರಚಾರ ಮಾಡ್ದರ 'ರೈಸ್' ಗುರ್‌ತುಸಿಯೊಳ (1897 : 324), 16–17ನೇ ಸತಮಾನದಲಿ ಕರಾವಳಿಲಿ ಹರ್‌ಡಿದ್ದ ಹೆಬ್ಬಾರರ ಪ್ರಬಾವಂದ ಸುಳ್ಯ ಪರಿಸರಲಿ ಸುಮಾರ್ ಗೌಡ್ರ್‌ಗ ನಾಮದಾರೀ ಗೌಡರ್‌ಗಿ ಪರಿವರ್‌ತನೆ ಆಗೊಳೊ. ಪರಿವರ್‌ತನೆ ಆಗದೇ ಒಳ್ದವರ ಹಳೇ ಪೈಕಿಂತ ಗುರ್‌ತುಸಿಯೊಳ. ವೈಸ್ಣವ ಪರಂಪರೆಗೆ ಸೇರ್‌ದ ದಾಸಯ್ಯನವ್ ಶಂಕ, ಜಾಗಟೆಗಳ ಹಿಡ್ಕಂಡ್ ಮನೆ ಮನೆಗೆ ಹೋಗಿ, ಕೀರ್‌ತನೆಗಳ ಹೇಳ್ದರ ಕಾಣಕ್. ವರ್‌ತಮಾನ ಕಾಲದಲಿ ನಾಮದಾರೀ ಗೌಡ್ರ್ ಕ್ರಮಲಿ ನಡ್ಸಿಕಂಡ್ ಬಾವ ವೈಸ್ಣವ ಸಂಪ್ರದಾಯಂತೇಳಿರೆ ಅದ್ ಹರಿಸೇವೆ.

ಗೌಡ್ರ್ ನಡ್‌ಸ್‌ವ ಹರಿಸೇವೆ ದಾಸಯ್ಯನ ಮುಕೇನನೆ ನಡಿದು. ದಾಸಯ್ಯ ಮಿಂದ್ ಮಡಿ ಉಟ್ಟು ಇದರ ನೆರವೇರ್‌ಸಿದೆ. ಕುಟುಂಬದವೆಲ್ಲ ಮೀದ್ ಮೊಡಿ ಉಟ್ಟುಕಂಡವೆ. ಕಾಯೆಣ್ಣೆ, ಕದಳಿ ಬಾಳೆ ಎಲೆ, ಬಾಳೆ ಹಣ್ಣು, ಕರ್ಪೂರ, ಊದುಬತ್ತಿ, ಲೋಬಾನ, ಕಾಯಿ, ಕುಂಕುಮ, ಹಾಲು, ತುಪ್ಪ, ಹರಿವಾಣ, ಎಳ್ಳು, ಆರತಿತಟ್ಟೆ, ಕಡಲೆ ಮತ್ತೆ ಹೆಸರು ಬೇಳೆ, ಹಣ್ಣು ಹಂಪಲುಗ ಮತ್ತೆ ಒಳ್ಳೆಮೆಣಸು– ಇದಿಸ್ಟ್ ಹರ್‌ಸಯಕೆ ಅಗತ್ಯ ಆಗಿ ಬೇಕಾದ ವಸ್ತುಗ, ದಾಸಯ್ಯ ಸುರುಗೆ ಇದೆಲ್ಲದರ ಇಜ್ಜಲ್‌ಲಿರ್‌ವ ತೊಳ್ಸಿ ಕಟ್ಟೆನ ಹಕ್ಕಲೆ ಕ್ರಮ ಪ್ರಕಾರಲಿ ಜೋಡ್‌ಸಿಸಿದೆ. ಅದಾಗಿ ಮನೆ ಒಳೆಗೆ ಇರ್‌ವ ವೆಂಕಟ್ರಮಣ ದೇವರ ಮುಡಿಪುನ ತಂದ್ ಎದುರ ಇಸಿಕೆ ಹೇಳ್‌ವೆ. ತೊಳ್‌ಸಿ ಮಾಲೆ ಮಾಲೆ ಹಾಕಂಡ ದಾಸಯ್ಯ ಅಂವನೆ ತಂದ ವಿಸ್ಣುನ ಸಣ್ಣ ಪ್ರತಿಮೆಗೆ ಇಲ್ಲರೆ ಇಸಿದ ಪಟಕೆ ಬಗೆ ಬಗೆನ ಹೂನ ಮಾಲೆ ಹಾಕಿ, ಅಲಂಕರ್‌ಸಿದೆ. ಅದಾಗಿ ಅದ್‌ಕೆ ಆರತಿ ಎತ್ತಿ ಪೂಜೆ ಮಾಡ್‌ದೆ ಕುಟುಂಬದವೆಲ್ಲಾ ಒಟ್ಟ್ ಸೇರ್‌ದಾಂಗೆ ಜಾಗಟೆ ಬೊಟ್ಟಿ, ಸಂಕ ಉರ್‌ಗಿದೆ. ಹಿಂಗೆ ಮಾಡಿಕನ ಒಂದ್ ಹಂತಲಿ ದಾಸಯ್ಯನ 'ಮೈಮೇಲೆ ದೇವರು' ಬಂದದೆ. ಆಗ ಅಂವ ಎದುರ್‌ಗೆ ಇಸಿದ, ಬೆತ್ತದ ಬಾರು ಕೋಲುಂದ ಮೈಮೇಲೆಲ್ಲಾ ಜೋರಾಗಿ ಹೊಡ್‌ಕಂಡದೆ. ಆಗ ಕುಟುಂಬದ ಹಿರಿಯರ್ ಒಬ್ಬ ಕೈಮುಗ್ದ್ 'ನಾವೆಲ್ಲ ನಿನ್ನ ಮಕ್ಕಳು, ನಿನ್ನ ಆದೇಶದಂತೆ ಯಾವತ್ತೂ ನಡೆದುಕೊಂಡು ಬಂದವರು, ಮುಂದೆಯೂ ನಡೆಯುವವರು, ತಿಳಿಯದೆ ತಪ್ಪು ಮಾಡಿದ್ದರೆ ಕ್ಷಮಿಸಬೇಕು' ತೇಳಿ ಬೇಡಿಕೊಂಡವೆ.




ಹಿಂಗೆ ಬೇಡಿಕಂಡ ಮೇಲೆ, ದಾಸಯ್ಯ ಸಾಂತ ಆಗಿ, ಸುರುನ ಸ್ತಿತಿಗೆ ಬಂದದೆ. ಬಕ್ತಂಗೆಲ್ಲ ತೊಳ್‌ಸಿ ಸೊಪ್ಪು, ಹೂ, ಕುಂಕುಮ ಕೊಟ್ಟದೆ. ಅದಾಗಿ ಸೇರ್‌ದ ಎಲ್ಲವು ತಮ್ಮ ಶಕ್ತಾನುಸಾರ ವೆಂಕಟ್ರಮಣ ದೇವರ ಮುಡಿಪುಗೆ ಕಾಣಿಕೆ ಹಾಕುವೆ. ಮುಡಿಪುನ ಮತ್ತೆ ಅಟ್ಟಲಿ ಇಸುವೆ. ಕೆಲವ್‌ಕಡೆ ಹರಿಸೇವೆ ಉದ್ದಕೆ ಮುತ್ತೈದೆಗ ಹರಿಕೀರ್‌ತನೆಗಳ ಹೇಳ್‌ವೆ. ಹೊದ್‌ರಿ ಮತ್ತೆ ಪಂಚಕಜ್ಜಾಯನ ಸೇರ್‌ದವ್ಕೆ ಪ್ರಸಾದ ರೂಪದಲಿ ಕೊಟ್ಟವೆ. ಕಡೆಗೆ ಎಲ್ಲವು ಊಟ ಮಾಡಿ, ಅವರವರ ಮನೆಗೆ ಹಿಂತಿರ್‌ಗುವೆ. ಸುದ್ದಲಿ ಹರಿಪಾರಮ್ಯನ ಹೇಳ್‌ವ ಆಚರಣೆ ಇದ್. ಕನ್ನಡ ಮಾತಾಡ್‌ವ ದಾಸಯ್ಯನೇ ಹರಿಸೇವೆನ ಕೇಂದ್ರ ಬಿಂದು. ವೈಸ್ಣವ ದರ್‌ಮ ಸಮಾಜದ ಕೆಳವರ್‌ಗದ ಸೂದ್ರರ ಹಕ್ಕಲೆ ಸೇರ್‌ಸಿಕಂಡ್ ಅವ್ಕೂ ಮೋಕ್ಸ ಉಟ್ಟುಂತೇಳ್ದರ ಸಾರ್‌ದರ ಪರಿಣಾಮ ತೇಳ್ವಂಗೆ, ಸುಮಾರ್ ಗೌಡ್ರ್ ವೈಸ್ಣವ ಪರಂಪರೆನ ಅನುಸರ್‌ಸಿದೊ.

ಹೆಚ್ಚಿನ ನಾಮದಾರೀ ಗೌಡರ ಮನೆಲಿ ನಡಿವ ಮೊದ್‌ವೆಗಳಿಗೆ ಬಟ್ರ್‌ಗ ಬಂದವೆ. ಹಾಂಗಾಗಿ ತ ಮೊದ್‌ವೆನ ಬ್ರಾಹ್ಮಣ ದಾರೆ ತೇಳಿ ಕರ್‌ದವೆ. ಕೆಲವ್ ಹೇಳ್‌ವ ಪ್ರಕಾರ, ಹಿಂದೆ, ಮೊದ್‌ವೆಗೆ ಮುಂದೆ ಮೊದುಮಗಳ ಅಪ್ಪಂಗೆ ತಾತ್ಕಾಲಿಕ ಆಗಿ ಜೆನಿವಾರನ ಹಾಕ್‌ಸಿ, ಕನ್ಯಾದಾನ ಮಾಡ್‌ವಂಗೆ ಮಾಡತಿದ್ದೊ. ಆದರೆ, ಬ್ರಾಹ್ಮಣನೇ ಬಾಕೆ ಸುರಾದ ಮೇಲೆ ಇದ್ ನಿತ್ತ್ ಹೋತು. ನಾಮದಾರಿ ಗೌಡ್ರ್ ಗಣೇಶ ಚೌತಿ, ಕೃಸ್ಣಾಸ್ಟಮಿ, ಮತ್ತೆ ಯುಗಾದಿನ ಹೆಚ್ಚಿ ಮುತುವರ್ಜಿಂದ ಆಚರ್‌ಸುವೆ. ಸೋಣ ತಿಂಗಳ್‌ಲಿ ಬಾವ ಶನಿವಾರಲಿ ಉಪಾಸ ಮಾಡಿ, ಮದುಮಾಸ ತಿಂಬದರ ಬುಟ್ಟು; ಒಂದ್ ದಿನದ ಮಟ್ಟ್‌ಗೆ 'ಯೋಗಿ'ಗಾದವೆ. ಇದರ ಸೋಣ ಶನಿವಾರತ ಕರ್‌ದವೆ. ನಾಮದಾರಿಗ ತೊಳ್ಸಿ ಕಟ್ಟೆಗೆ ವಿಸೇಸ ಮಹತ್ವ ಕೊಟ್ಟವೆ. ಇವರ ಮನೆನ ಮೆಟ್ಲ್‌ಗೆ ಎದ್‌ರಾಗಿ ಒಂದ್ ತೊಳ್ಸಿ ದೈ ಇದ್ದದೆ. ಹಿಂಬೊತು ಮೀದ ಮೇಲೆ ಇವು ದೇವರ ಬಜೆನೆ ಮಾಡಿ, ತೊಳ್ಸಿ ಕಟ್ಟೆಗೆ ದೀಪ ಇಸುವೆ.

ಈ ಶೈವ ಮತ್ತೆ ವೈಸ್ಣವ ಪರಂಪರೆಗೆ ಸೇರ್‌ದ ಗೌಡರ್ ದಾರ್‌ಮಿಕ ಕಾರಣಂದಾಗಿ ಅವರ ದಿನದ ವೆವಹಾರಲಿ ಯಾದೇ ಬಿನ್ನಾಬಿಪ್ರಾಯಂಗಳ ಇಸಿಕಂಡತ್‌ಲೆ ಹಾಂಗಾಗಿ ಯಾದಾರ್ ಜಗಳ ಜಟ್ಟಿಗ ನಡ್ದ ಉದಾಹರಣೆಗ ಇಲ್ಲೆ. ಹುಟ್ಟು, ಮೊದ್‌ವೆ ಮತ್ತೆ ಸಾವುನಂತ ಮುಕ್ಯ ವಿಚಾರಲಿ ಇದ್ ಸಮಸ್ಯೆ ಆಗಿಲ್ಲೆ. ಹಾಂಗಾಗಿ ಈ ದಾರ್‌ಮಿಕ ವಿಚಾರಗ ಏನಿದ್ದರ್‌ನು ಗೌಡ ಸಂಸ್ಕೃತಿನ ಮೇಲೆನ ತಟ್ಟ್‌ಲಿ ಮಾತ್ರ ಕಾಂಬ ಅಂಸಗಂತ ಹೇಳಕ್. ಗೌಡರ್‌ಗೆ ಮುಕ್ಯ ಆಗಿರ್‌ವ ಸಿದ್ದವೇಸ ಕೊಣ್‌ತಲಿ ಮಾತ್ರ ಲಾಕುಳ ಶೈವ ಮತ್ತೆ ವೈಸ್ಣವರ ನೊಡುಲಿ ಚೊರೆ ಆದರ ಕಾಣಕ್. ಕೈಲಿ ದೊಣ್ಣೆ ಹಿಡ್ದ್ ಉರ್ಬುಳಿ ಇರ್‌ವ ಸನ್ಯಾಸಿ ಅಲ್ಲಿ ಬ್ರಾಹ್ಮಣ ಮತ್ತೆ ದಾಸಯ್ಯನ ಓಡ್ಸುವ, ಅವಮಾನ ಮಾಡ್‌ವ ನಟನೆ ಉಟ್ಟು ಇದ್ ವೈಸಸ್ಣವ ದರ್‌ಮದ ನಿರಾಕರಣೆನೆ ಹೌದುಂತ ಒಪ್ಪಿಕಣಕಾದೆ.

(ಪಿ.ಬಿ.)

**ಹಾರಂಗಿ :** ಕಾವೇರಿ ಹಳ್ಳದ ಮುಕ್ಯ ಉಪನದಿಗಳ್‌ಲಿ ಒಂದ್. ಇದರ ಸುವರ್ಣಾವತಿ ಅಂತನೂ ಕರ್‌ದವೆ. ಈ ಹಳ್ಳ ಮಡ್‌ಕೇರಿ ತಾಲೂಕ್‌ನ ಬೆಟ್ಟಲಿ ಹುಟ್ಟಿ ಆಗ್ನೇಯಾಬಿಮುಕ ಆಗಿ ಹರ್‌ದ್ ಮೆಗತ್ತಲ್‌ಲಿ ದಕ್ಷಿಣಕೆ ತಿರ್‌ಗಿ ಹನಿಸ್ ದೂರ ಹರ್‌ದ್ ಆಮೇಲೆ ಮೂಡ ದಿಕ್ಕ್‌ಗೆ ತಿರ್‌ಗಿ ಮತ್ತೆ ಉತ್ತರಾಬಿಮುಕ ಆಗಿ ಹರ್‌ದ್ ಮತ್ತೊಮ್ಮೆ ಮೂಡನ ಪುಡೆ ಆಗಿ ಸಾಗಿ ಕುಶಾಲನಗರದಕ್ಕಲೆ ಉತ್ತರಲಿ ಕೂಡಿಗೆಂತೇಳ್‌ವಲ್ಲಿ ಕಾವೇರಿ ಹಳ್ಳನ ಸೇರ್‌ದೆ. ಹರದೂರ್ ಮತ್ತೆ ಗರ್‌ಗಂದೂರ್‌ಗಳ ನಡುಲಿರುವ ಇಕ್ಕಟ್ಟ್‌ನ ಕಣಿವೆಲಿ ಹರೆಕನ ಇದ್‌ಕೊಂದ್ ಸೇತುವೆ ಕಟಿಯೊಳೊ. ಈ ಸೇತುವೆಂದಾಗಿ ಮಡಿಕೇರಿ– ಸೋಮವಾರಪೇಟೆಗಳಿಗೆ ಸೊರುತ ಆಗಿ ಮಾರ್‌ಗಸಂಚಾರ, ಸಾರಿಗೆ ಅನುಕೂಲ ಆದೆ. (ಗರ್‌ಗಂದೂರ್‌ಲಿ ಚಂಗಾಳ್ವರ ಕಾಲದ ಒಂದ್ ಕೋಟೆ ಉಟ್ಟು). ಹರದೂರ್‌ನ ಹನಿಸ್ ಮೂಡಲಿ ಕೋಟೆಬೆಟ್ಟಲಿ ಹುಟ್ಟುವ ಹುತ್ತೆಹೊಳೆನ ಕೂಡಿಕಂಡ್ ಹರೆವ ಮಾದಾಪುರ ಹೊಳೆ, ಸಾಂತಳ್ಳಿನ ಕಳಕಂದೂರ್ ಗುಡ್ಡದ ಹಕ್ಕಲೆ ಇಳ್ದ್ ಬಾವ ಚೋರನ ಹಳ್ಳ ಸೋಮವಾರಪೇಟೆ ಬೆಟ್ಟಗಳ್‌ಂದ ಹುಟ್ಟಿಬಾವ ಕಕ್ಕೆಹೊಳೆ – ಇವ್ ಹಾರಂಗಿ ಹಳ್ಳದ ಉಪಹಳ್ಳಗ. ಹಾರಂಗಿವರೆಗೆ ಈ ಹಳ್ಳ ಹರ್‌ದ್ ಹೋವಲ್ಲಿ ಇದರ ಹಟ್ಟಿಹೊಳೆಂತೇಳಿ ಆಮೇಲೆ ಹಾರಂಗಿ ಹಳ್ಳಂತೇಳಿ ಕರ್‌ದವೆ.

ಕೊಡಗ್‌ನ ಬಡಗ–ನೊಡುಲಿ ಬೆಟ್ಟಗಳ ಕಣಿವೆಗಳ್‌ಲಿ ತುಂಬಿ ಹರೆವ ಹಾರಂಗಿ ಹಳ್ಳನ ಕೊಡಗ್‌ನ ದೊಡ್ಡ ನೀರಾವರಿ ಯೋಜೆನೆಗೆ ಬಳ್‌ಸಿಕಂಡ್ ಕಕ್ಕೆಹೊಳೆ ಈ ಹಳ್ಳನ ಸೇರಿಕೆ ಮುಂದೆ ಹುದುಗೂರ್‌ಂತೇಳ್‌ವಲ್ಲಿ ಈ ಹಳ್ಳಕೆ ಅಡ್ಡ ಆಗಿ 67ಮೀ ಎತ್ತರದ ಅಣೆಕಟ್ಟ್‌ನ ಕಟ್ಟಿ ಜಲಾಶಯ ಕಟ್ಟಿಯೊಳ. ಈ ಜಲಾಶಯಂದ ಕೊಡಗ್‌ನ ಸು. 30–35 ಸಾವಿರ ಹೆಕ್ಟೇರ್ ಬೂಮಿಗೆ ನೀರ್‌ನ ಸೌಲಬ್ಯ ಸಿಕ್ಕಿದೆ.

**ಹಾರಂಗಿ ಅಣೆಕಟ್ಟ್ :** ಹಾರಂಗಿ ಕೊಡ್‌ಗ್‌ನ ದೊಡ್ಡ ಅಣೆಕಟ್ಟ್. ಇದ್ ಕೊಡ್‌ಗ್ ಜಿಲ್ಲೆನ ಸೋಮವಾರಪೇಟೆ ತಾಲೂಕ್‌ನ ಹುದುಗೂರು ಗ್ರಾಮಲಿ ಒಳದ್. 1970 ರ್‌ಲಿ ಕಟ್ಟದ ಈ ಅಣೆಕಟ್ಟ್ ಕಾವೇರಿ ಹಳ್ಳದ



ಹಾರಂಗಿ ಅಣೆಕಟ್ಟ್ :

ಉಪನದಿಯಾದ ಹಾರಂಗಿಗೆ ಅಡ್ಡಕೆ ಕಟ್ಟಿದ ಕಲ್ಲ್‌ನ ಅಣೆಕಟ್ಟ್ ಇದ್. ಹಾರಂಗಿ ಹಳ್ಳ ಹುಟ್ಟಿದ್ ಕೊಡ್‌ಗ್ ಜಿಲ್ಲೆನ ಪಡುವ ಗಟ್ಟದ ಪುಸ್ಪಗಿರಿ ಮಲೆಲಿ. ಇದ್ ಕುಸಾಲನಗರ ಪೇಟೆನ ನೊಡುಂದ ಒಂಬತ್ತ್ ಕಿಮೀ ದೂರಲುಟ್ಟು. ಹಾರಂಗಿ ಜಲಾಸಯದ ಒಟ್ಟ್ ಎತ್ತರ 164 ಅಡಿಗ. ಇದರ ಉದ್ದ 2775 ಅಡಿ. ಒಟ್ಟಿಗೆ ಈ ಜಲಾಸಯದ ನೀರ್ ತುಂಬುಸಿಕಂಬ ಸಾಮರ್ತ್ಯ 8. 50 ಟಿ ಎಂ ಸಿ ಅಡಿ ಉಟ್ಟು. ಒಟ್ಟಾರೆ ಆಗಿ ಇದರ ನೀರ್ ಕೂಡಿಸ್‌ವ ಪ್ರದೇಸ 419. 58 ಚ.ಕಿಮೀ ಹಾರಂಗಿಂದ ಕಾವೇರಿ ಸಂಗಮಕೆ ಐವತ್ತ್ ಕಿಮೀ ದೂರ ಉಟ್ಟು. ಕುಸಾಲನಗರಂದ ಐದ್ ಕಿಮೀ. ದೂರಲಿರ್‌ವ ಕೂಡಿಗೆಂದ ಸಾಗಿ ಹೋವ ಕಾವೇರಿ ಹಳ್ಳಕೆ ಈ ಹಾರಂಗಿ ಜಲಾಸಯದ ನೀರ್ ಸೇರಿಕಂಡದೆ. ಸಾರ್‌ವಜನಿಕರಿಗೆತ ಒಂದ್ ದೊಡ್ಡ ಉದ್ಯಾನವನಸ ಇಲ್ಲಿ ಉಟ್ಟು. ಇದರ್‌ಲಿ ಮಾಮುಲಿ ಹಿಂಬೊತ್ತ್ ಗೆ ಸಂಗೀತ ಕಾರಂಜಿ ಇದ್ದದೆ. (ಪಿ.ಡಿ.)

**ಹಾಸನ ಜಿಲ್ಲೆ :** ಹಾಸನ ಜಿಲ್ಲೆ ಭಾರತಲಿ ಕರ್ನಾಟಕ ರಾಜ್ಯದ ನೈರುತ್ಯ ದಿಕ್ಕ್‌ಲಿ ಇರ್‌ವ ಒಂದ್ ಜಿಲ್ಲೆ. ಸ್ರೀಮಂತ ಇತಿಯಾಸಂದ ಮತ್ತೆ ನೆಂಪುಲಿಸಿಕಣಕಾದ ವಿಸಯಗಳ್‌ಂದ ಕೂಡಿಟು. ಬೇಲೂರು ತಾಲೂಕುನ ಈಗನ ಹಳೆಬೀಡಾಗಿರ್‌ವ ಹಿಂದೆನ ದ್ವಾರಸಂದ್ರನ ರಾಜಧಾನಿ ಮಾಡಿಕಂಡಿದ್ದ ಹೊಯ್ಸಳ ರಾಜರ್‌ಗಳ ಆಳ್ವಿಕೆ ಕಾಲಲಿ ಈ ಜಿಲ್ಲೆನ ಗೌಜಿ ಉತ್ತುಂಗಲಿ ಇತ್ತ್. ಕಣ್ಣ್ ಸೆಳಿವ ಪಚ್ಚೆಗೆ ಹೆಸರಾದ ಈ ಜಿಲ್ಲೆ ಬೇಲೂರ್ ಮತ್ತೆ ಹಳೆಬೀಡ್‌ಲಿ ಇರ್‌ವ ಹೊಯ್ಸಳ ಸೈಲಿನ ತೊವ್‌ರ್ ಆವುಟು. ಜೈನ ಸ್ಮಾರಕಗ ಇರ್‌ವ ಚೆನ್ನರಾಯಪಟ್ಟಣ ತಾಲೂಕ್‌ನ ಸ್ರವಣಬೆಳಗೊಳ ಜೈನರ ಯಾತ್ರಾ ಸ್ತಳ ಆವುಟು. ರಾಜ್ಯದ ಎಲ್ಲಾ ಜಿಲ್ಲೆಗಳಂಗೆ ಈ ಜಿಲ್ಲೆನೂ ತನ್ನ ಕೇಂದ್ರ ಕಾರ್‌ಯಸ್ತಾನದ ಪಟ್ಟಣ 'ಹಾಸನ' ತೇಳ್‌ವ ಹೆಸರ್‌ಂದನೆ ಕರ್‌ದವೆ. ಇಲ್ಲಿನ ಜಾಗೆಪುರಾಣಗಳ ಪ್ರಕಾರ 'ಹಾಸನ'ನ ಹಿಂದೆ 'ಸಿಂಹಾಸನಪುರ' ತ ಕರೆತಿದ್ದೊಗಡ. ಪಾಂಡವರ ಪೈಕಿಲಿ ಅರ್ಜುನನ ಮರಿಮಜ್ಜ ಜೆನಮೇಜಯ ಹೆಸರ್‌ನ ಒಟ್ಟಿಗೆ ತಳ್‌ಕ್ ಹಾಕಿಕಂಡುಟ್ಟು. ಆದ್‌ರೆ ಕೆಲವರ ಪ್ರಕಾರ ಇಲ್ಲಿನ ಅದಿದೇವತೆ 'ಹಾಸನಾಂಬೆ' (ನೆಗೆಮೋರೆನ (ಹಸನ್ಮುಕಿ) ದ್ ಹೆಸ್‌ರ್ ಈ ಜಿಲ್ಲೆಗೆ ಬಂದುಟುತ ಹೇಳ್‌ವೆ. ಈ ಹೊತ್ತುಲಿ ಅವ್ವ ಹಾಸನಾಂಬೆ ಈ ಜಾಗೆಗೆ ಹೆಂಗೆ ಬಂದುಟ್ಟುಂತ ಹೇಳ್ದಕೆ ಒಂದ್ ಕತೆಸಾ ಉಟ್ಟು. ಒಮ್ಮೆ ಸಪ್ತಮಾತೃಕೆಯರ್ ವಾರಣಾಸಿಂದ ತೆಂಕಕೆ ಪ್ರಯಾಣ ಮಾಡ್‌ವೆ. ಆಗ ಇಲ್ಲಿನ ಕಾಡ್‌ಮಲೆಗಳ ಪೊರ್‌ಲುಗೆ ಮೊಯಿಂಸ್ ಸೋತ್ ಇಲ್ಲೇ ನೆಲ್ಸಿಕೆ ಮನ್ಸ್ ಮಾಡಿವೆ. ಹಿಂಗೇ ಸಪ್ತಮಾತೃಕೆಯರ ಪೈಕಿಲಿ ಮೂರು ಜೆನ ಹಾಸನದ ನೆರೆಕರೆಲಿ ನೆಲೆ ನಿತ್ತವೆ. ಅವರ್‌ಲಿ ಈ ಹಾಸನಾಂಬೆ 'ದೇವಿಗೆರೆ' ಲಿ ನೆಲೆ ನಿತ್ತರೆ, ಇನ್ನೊಂದ್ ಕೆಂಚಾಂಬ ತೇಳ್‌ವ ಹೆಸ್‌ರ್‌ಂದ ಆಲೂರು ತಾಲೂಕ್‌ನ ಕೆಂಚಮ್ಮನ ಹೊಸಕೋಟೆಲಿ ನೆಲೆ ನಿತ್ತದೆ.


ಹಾಸನಾಂಬೆ

ಈ ಜಿಲ್ಲೆ ಒಟ್ಟು 6826. 15 ಚದರ ಕಿಮೀ ವಿಸ್ತೀರ್ಣ ಉಟ್ಟು. ಇದ್ ಒಟ್ಟು 8 ತಾಲ್ಲೂಕುಗ, 38 ಹೋಬಳಿಗ ಹಾಂಗೇ 2369 ಗ್ರಾಮಗಳ ಉಟ್ಟು. ಇಲ್ಲಿನ ಜೆನಸಂಕ್ಯೆ ಸುಮಾರ್ 15. 67 ಲಕ್ಸ. ಇಲ್ಲಿರ್‌ವ ಸರಾಸರಿ ಮಳೆ ವಾರ್‌ಸಿಕ 1031 ಮಿ. ಮೀ ಗ. ಕಾಪಿ, ಒಳ್ಳಮೆಣ್‌ಸ್, ಗೆಂಡೆ, ಬತ್ತ ಮತ್ತೆ ಕಬ್ಬ್ ಈ ಜಿಲ್ಲೆನ ಮುಕ್ಯ ಬೆಳೆ. ಇದ್ ಬಾಗಸ ಮಲೆನಾಡ್ ಮತ್ತೆ ಬಾಗಸ ಬಯಲ್ ಸೀಮೆ ಜಾಗೆಲಿ ಉಟ್ಟು. ಇದರ ದಕ್ಷಿಣ ಮಲೆನಾಡ್, ಅರೆಮಲೆನಾಡ್ ಹಾಂಗೆ ದಕ್ಷಿಣ ಬಯಲ್ ಸೀಮೆ ಪ್ರದೇಸಂತ ಮೂರ್ ತರಲಿ ವಿಂಗಡನೆ ಮಾಡಕ್.

**ಜೆನಸಂಕ್ಯೆ ಮತ್ತೆ ಬೆಳ್‌ವಣಿಗೆ :** 2001 ರ ಜೆನ ಗಣತಿ ಪ್ರಕಾರ, ಹಾಸನ ಜಿಲ್ಲೆನ ಜೆನಸಂಕೆ 17,21,669 ಇತ್ತ್. ಅದರ್‌ಲಿ 14,16,996 ಗ್ರಾಮೀಣ ಜೆನಂಗ ಆಗಿದ್ದರೆ ; ಪಟ್ಟಣದ ಜೆನಸಂಕೆನ 3,04,673 ಆಗಿತ್ತ್. ಜಿಲ್ಲೆನ ಗ್ರಾಮೀಣ ಮತ್ತೆ ಪಟ್ಟಣದ ಜೆನಸಂಕ್ಯೆ ಕ್ರಮಲಿ ಒಟ್ಟ್ ಜೆನಸಂಕೆನ ಸೇಕಡಾ 82.31% ಮತ್ತೆ 17. 69 ಆಗಿತ್ತ್. 1981 ರ ಜೆನಗಣತಿ ಪ್ರಕಾರ ಪಟ್ಟಣದ ಮತ್ತೆ ಗ್ರಾಮೀಣ ಜೆನಸಂಕೆ ಕ್ರಮ ಆಗಿ ಒಟ್ಟ್ ಜೆನಸಂಕೆನ ಸೇಕಡಾ 85.37% ಮತ್ತೆ 14.62% ಇತ್ತ್. 1981 ಮತ್ತೆ 1991 ರ ನಡುಲಿ ಪಟ್ಟಣದ ಜೆನಸಂಕ್ಯೆ ಸೇಕಡಾ 2.76% ಕ್ಕೆ ಏರಿಕೆ ಕಂಡತ್. 1981 – 91 ರ ದಸಮಾನದ ಜೆನಸಂಕೆ ಬೆಳ್‌ವಣಿಗೆ ಸೇಕಡಾ 15.65% ಆಗಿದ್ದದೆ. 1951–61ರ ಜೆನಸಂಕೆ ಬೆಳ್‌ವಣಿಗೆ ಬಾರಿ ಹೆಚ್ಚಿ ಆಗಿತ್ತ್..

**ಹುತ್ತೆರಿ ಕೋಣ್‌ತ :** ಕೊಡಗ್ ಹುತ್ತೆರಿ ಹಬ್ಬ ಕ್ರಿಸಿಕರ ಸುಗ್ಗಿ ಹಬ್ಬ ಗದ್ದೆಗ ಬೀಜಹಾಕಿ ಅಗೆನ ಕಿತ್ತ್ ನಾಟಿ ನೆಟ್ಟ್ ಕದ್‌ರ್ ಬಾಗ್‌ಕನ ಕೊಯ್ದ್ ಮನೆಗೆ ತಾವ ಸಂಪ್ರದಾಯಕೆ ಹುತ್ತೆರಿ ತೇಳುವೆ. ಹೊಸ ಅಕ್ಕಿ=ಹುತ್ತರಿ.. ಹಾಲೇರಿ ಅರಸರ ಕಾಲಕೂ ಹಿಂದೆಂದ ಹುತ್ತರಿ ರೈತರ ದಾನ್ಯಲಕ್ಷ್ಮಿನ ಹಬ್ಬ ಆಗಿ ನಡಿತಾ ಬಂದುಟು. ಹಾಲೇರಿ ಅರಸರ್ ಹುತ್ತೆರಿಗೆ ಪ್ರೋತ್ಸಾಹ ಕೊಟ್ಟದಲ್ಲದೆ ಅವುಸ ರೈತರಿಗೆ ವಿಸೇಸ ಉಟೋಪಚಾರ ಕೊಡತಿದ್ದೊ




ತೇಳ್ವ ಮಾತುಟ್ಟು, ಆ ದಿನ ಇಗ್ಗುತ್ತಪ್ಪನ ದೇಸ್ತಾನಲಿ ಸುರುಗೆ ಕದ್‌ರ್ ತೆಗೆವ ಪೊದ್ದತಿ. ಅದ್‌ಕ ಮುಂದೆ ಜ್ಯೋತಿಸರ್ ಕದ್‌ರ್ ಕೊಯ್ಯಕೆ ನೆರೆಕಟ್ಟಿಕೆ ಇರ್‌ಲ್ ಪಾಯಸ ಉಂಬಕೆ ಹೊತ್ತ್ ನಿಗದಿ ಮಾಡಿದ್ದವೆ. ಇದ್ ಪ್ರತಿ ವರ್‌ಸ ನವಂಬರ್ ತಿಂಗಳ ರೋಹಿಣಿ ನಕ್ಸತ್ರಲಿ ಆದೆ. ಊರುಲಿರ್‌ವ ಪ್ರತಿ ಮನೆನು ಸುಣ್ಣ ಬಣ್ಣ ಅಲಂಕಾರ ಆಗಿ ಅಂಗಳ ಬೇಟಿ ಕಳಕೆ ಸೆಗ್‌ಣಿ ಕೆರ್‌ದವೆ. ಚೆಂಡುಹೂ ದಿನಗಳ್‌ಲಿ ಅರ್‌ಳಿ ಅರ್‌ಶಿಣ ಕಾಂಬೊದು ಈ ನಾಡ್‌ನ ಹುತ್ತರಿ ವಿಸೇಸ. ರಂಗೋಲಿನ ಸುಣ್ಣದ ನೀರ್‌ಂದ ಮಟ್ಪ್‌ಲ್ ಮಾಡ್‌ವೆ.

ಆದಿನ ಕತ್ತಲಾಕನ ಎಲ್ಲವೂ ಐನ್‌ಮನೆ ಸೇರುವೆ ತಂಬಿಟ್ಟ್ ಕಜ್ಜಾಯ ಚಕ್ಕುಲಿ ಹಿಂಗೆ ಎಲ್ಲವೂ ಅವರವರ ಮನೆಂದ ತಂದ್, ಕುದ್ದ್ ಹಂಚಿಕಂಡ್ ತಿಂಬೊತ್ತಿದ್ದೊ. ಗಂಡ್‌ಸ್‌ಗ ದೇಸ್ತಾನಕ್ಕೆ ಹೋದವೆ. ಆ



ಹುತ್ತರಿ ಕುಣಿತ

ದಿನ ಪ್ರತಿ ಮನೆಂದ ದೇಸ್ತಾನಕೆ ಒಂದ್ ಗುತ್ತಿ ತಕಂಡ್ ಹೋಕು. ಬಾಕನ ಅದರ್‌ಲಿ ಕದ್‌ರ್ ತುಂಬ್‌ಸಿ ತಾದು ಕ್ರಮ. ಮತ್ತೆ ಐನ್‌ಮನೆ ಗದ್ದೆಲಿ ಮನೆವೆಲ್ಲಾ ಸೇರಿ ಕದ್‌ರ್ ಕೊಯ್ಯಕೆ ಹೋದವೆ. ಕದ್‌ರ್ ಗುತ್ತಿನ ನೆಲ್ಲಕ್ಕಿಂದ ಪಟ್ಟೆದಾರ ಎತ್ತಿ ಕೊಟ್ಟವೆ. ಹಿರಿಯಜ್‌ಮಾನ್ತಿ ಕಂಚಿ ತೆಗ್‌ದ್ ಗೊಡೆಗೆ ಕೊಟ್ಟವೆ. ಮತ್ತೆ ಕೊಂಬುಕೊಟ್ಟು ವಾಲಗ ಸಮೇತ ಸಂಪ್ರದಾಯದ ಬಟ್ಟೆಲಿರ್‌ವ ಮೊನ್‌ಸ ಕದ್‌ರ್ ಕೊಯ್ಯಕೆ ಹೋದವೆ. ದಾರಿಲಿ ಪಟಾಕಿ ಹಾರ್‌ಸುವೆ ಮಕ್ಕಳಿಗೆ ಕುಸಿನೋ ಕುಸಿ.

ನೆರೆತೇಳಿರೆ ಕುಂಬಳ ಆಲ ಹಲಸ್ ಗೇರ್ ಮಾಯಿಣ ಸೊಪ್ಪ್‌ನ ಅಚ್ಚಿನಾರ್ ತೇಳುವ ದೈನ ತೊಪ್ಪೆನ ಸಿಗ್ದ್ ಬೊಳ್ಳಿ ಮಾಡಿಕಟ್ಟುವೆ. ಕದ್‌ರ್ ಕೊಯ್‌ದಂಗೆ ಗುತ್ತಿಗೆ ಹಾಕುವೆ. ಮತ್ತೆ ನೆರೆಗೆ ಐದ್ ಕದ್‌ರ್ ತುಂಬ್ಸುವೆ. ಬೇಕಾದಲ್ಲಿಗೆ ಎಲ್ಲ ದೇವರ ಕ್ವಾಂಬರೆ, ಕಡಿಕೆ, ಮೂಡಣ ಕಟ್ಟಳೆಗೆ, ಇತ್ತೀಚೆಗೆ ವಾಹನಗಳಿಗು ಕಟ್ಟುವೆ. ಕದ್‌ರ್ ಕೊಯ್ಯಕನ ಮೂಡಕೆ ಮೋರೆಮಾಡಿ ಐದ್‌ನುಲಿ ಹಿಡ್ದ್ ಕಟ್ಟಿ ಬೂಮಿಗೆ ಹಾಲ್ ಹೊಯ್‌ದವೆ. ಹಿಂಗೆ ಕದ್‌ರ್ ತೆಗೆಕನ ಒಂದ್ ಗುಂಡ್ ಹಾರ್‌ಸುವೆ ಎರ್‌ಡನೆ ಗುಂಡ್ ದಾರಿಲಿ ಬಾಕನ ಮೂರನೆ ಗುಂಡುನ ಮನೆಗೆ ಹತ್ತ್‌ಕನ ಹಾರ್‌ಸುವೆ. ಹಾಲೇರಿ ಅರಸರ ಕಾಲಲಿ ಕೇಪುನ ಬೆಡಿಲಿ ಹದ್‌ನಾರ್ ಗುಂಡು ಹಾರ್‌ಸತಿದ್ದೊಗಡ. ಲಿಂಗರಾಜ ರೈತ ಅದರ್‌ಂದ ಕರ್‌ಚಿ ಕಮ್ಮಿ ಮಾಡ್‌ವ ಉದ್ದೇಸಂದ ಮೂರಕ್ಕೆ ಇಳ್ಸಿ ರೈತರ್‌ಗೆ ಹುಕುನಾಮೆ ಹೊರ್‌ಡಿಸಿದ್ ಇಂದ್‌ಗೂ ನಡ್ಕಂಡ್ ಬಂದುಟು. ಕದ್‌ರ್ ಬಂದ ಮೇಲೆ ಎಲ್ಲವ್ ಸೇರಿ ಪಟಾಕಿ ಹೊಡ್ಸಿ ಪಾಯಸ ಊಟ ಮಾಡ್‌ವೆ. ಅಂದ್‌ನ ಉಂಬಕೆ ಹುತ್ತರಿ ಗೆಣ್ಸ್, ಕೆಸನ ಗೆಂಡೆ, ಇಲಾತ್‌ಕಾಳು ಸುಂಟಿಪೊಜ್ಜಿ ಹಿಂಗೆ ಹನ್ನೊಂದು ತರ ಅಡಿಗೆಯಿದ್ದದೆ. ಹೊಸಕೂಸುಗ ಇದ್ದರೆ ಉಂಬಕೆ ಮುಂದೆ ಕೂಸುನ ಎಲ್ಲರ ಹಕ್ಕಲೆ ತೋರ್‌ಸಿ ಬಾಯಿಗೆ ಪಾಯ್‌ಸ ಮುಟ್ಟುಸುವೆ.

ಇನ್ನ್ ಮಾರನೆದಿನದ ವಿಸೇಸ ಊರುಗೊಂದು ತರದ ಆಟಗ ಇದ್ದದೆ. ಊರು ನೆಂಟರಿಸ್ಟರ್ ಕೂಡಿ ಅನುಬವಿಸುವ ಪಲನೆ ಕೋಲಾಟ. ಇದ್ ಬರಿ ಒಂದ್ ದಿನದ ಜಂಬರ ಅಲ್ಲ– ಒಂದ್ ವಾರಕೆ ಮುಟ್ಟ ನಡ್ದದೆ. ಕೂಡಿ ಬಾಳ್ದು ಇದರ ಪಲ ಅನುಬವಿಸುದು ಊರವರ ಕುಸಿಲಿ ಒಂದ್.

ಊರುನ ಹಬ್ಬಕೆ ಬೇಕಾದು ಮುಕ್ಯಾಗಿ ಮ್ಯಾದ ಅಂವನ ಚಂಡೆ ಕೊಟ್ಟುಯಿಲ್ಲರೆ ಕೋಲಾಟ ಆಕಿಲೆ.ಹಂಗಾಗಿ ವಾಲಗದವ ಇದ್ದದೆ. ಅಲ್ಲದೆ ಒಣ್‌ಗಿದ ಬಾಳೆಲೆ ಕಟ್ಟಿ ಸಾಲ್‌ಲಿ ಅಲ್ಲಲ್ಲಿ ಕೊಣಿತಾ ತಮಾಸೆ ಮಾಡ್ತಾಯಿರ್‌ವ ಹುತ್ತರಿ ಜೋಗಿನು ಇದ್ದದೆ. ಅಂವನ ಗಣಗಣ ಗಂಟೆ ಸದ್ದ್ ಕೇಳಿರೆ ಮಕ್ಕ ಹೆದ್‌ರ್‌ವೆ. ಕೈಲಿ ದೊಣ್ಣೆ ಅಂಗರೆ ಕೋಲು. ಊರ್‌ಗೆ ಆಸಿರ್‌ವಾದ ಮಾಡ್‌ದು ವಿಸೇಸ. ಅವಂದೂರು ತೇಳ್ವ ಶ್ರೀ ಕೃಷ್ಣನ ನೆಲೆಲಿ ಪಂಡ್ ಇದ್ ಒಂದ್ ವಾರ ನಡಿತಾಯಿತ್ತ್ ಜೋಗಿ ವೇಸ ಕಟ್ಟೊವು. ವಿಸ್ಣುನ ಶಕ್ತಿ ತೇಳ್ದುಟ್ಟು. ಮನೆ ಮನೆ ಹಾಡ್‌ಕನ ತಂಬಿಟ್ಟ್ ದಾನ ಕೊಡ್ದು ಕಡೆ ದಿನ ಕಡೆ ಮನೆಲಿ ಹಾಡಿಕಂಡ್ ಬಾದು ಎರ್‌ಡ್ ಜೋಗಿಗ ಕೋಣಿಯೊದು ಅವುಕೆ ಮನೆ ಹೆಣ್ಮಕ್ಕ ದಾನ ಕೊಡ್‌ದು ಪೊರ್‌ಲು ಇದ್ದದೆ.ಈಗ ಈ ಹಬ್ಬ ಅಳಿವ ಅಂಚ್‌ಲಿವುಟ್ಟು ತೇಳ್ದು ಊರವರ ಕೊರ್‌ಗ್. ಜೋಗಿನ ಸಾಲ್‌ಲಿ ನಿಲ್‌ಸಿ ಕೋಲಾಟ ಮಾಡ್ದು ಹುತ್ತೆರಿ ಕೋಲಾಟದ ವಿಸೇಸ.

ಹುತ್ತೆರಿ ಹಾಡ್‌ಗ :

ಕಡೇ ಹಬ್ಬ ಕೋಲಾಟ
ಹುತ್ತರಿ ಪರಂಪರೆ
ನಾಡ್‌ನ ಹಬ್ಬಾ–ಏನದ್ ಹೇಳಿ?
ರೈತರ ಹಬ್ಬಾ–ಹುತ್ತೆರಿ ಹಬ್ಬಾ ॥
ದೇವರ ಹೆಸ್‌ರ್‌ಲಿ ಹಾಡ್‌ತಾ ಬಂದವೆ
ಹೊತ್ತಂತು ಕಳಿಯಕೆ ಆದುಲೆ ನಾವ್ಸ್‌ಗೆ ॥
ಹಬ್ಬದ ಕಟ್ಟ್‌ನ ಮುರಿತಾ ಬಂದೊ...

ದೇವರ ಕಟ್ಟ್‌ನ ಬಕ್ತಿಲಿ ನೆನ್‌ದೊ....
ಜೀವನ ಸಾಗಿಕೆ ಬತ್ತದ ಬೂಮಿನೆ... ಆಕು
ಜಮ್ಮ ಬೂಮಿನ ಹೂಡಿಕೆ ಎತ್ತೆರ್‌ಡ್ ಬೇಕು
ಎತ್ತ್‌ನ ನಿಲ್‌ಸುವ ಗಂಡೊಬ್ಬ ಬೇಕು
ಹೆಣ್ಮಕ್ಕಳ ರಕ್ಷಣೆಗೆ ಅಜ್ಜಜ್ಜಿ ಬೇಕು॥
ಒಂದೇ ಬೂಮಿ ಹಲಬಗೆ ಮಣ್ಣ್
ನಾಲಿಗೆವೊಂದೇ... ಹಲಬಗೆ ಹಾಡ್ ॥
ಕಲಿಯುಗ ಕಾಲಲಿ ಏನೇನ್ ಅಚ್ಚೆರಿ?
ಹ್ಯಾಂಟೆಕೋಳಿ ಕೂಂಗುದು ಕೇಳ್ದೊ
ಕಲ್ಲ್‌ನ ಬಸುವನ ಗುಟುರ್‌ನ ಕೇಳ್ದೊ
ಮಾವ್‌ನ ಮರದ ಬೇರ್-ಮ್ಯಾಲೆನೆ ಹೋತು
ಆಲಿಕಲ್ಲ್ ಮಳೆನ ಹೊಡ್‌ತಕ್ಕೆ ಆಗುಟ್ಟು ॥
ನಾವ್ ಹಾಡ್‌ವ ಹಾಡ್ ಎಲ್ಲಿಗೆ ಕೇಳ್ತ್
ಅಯ್ಯಪ್ಪ ಸ್ವಾಮಿನ ಗುಡಿಯೊಳಗೆ ಕೇಳ್ತ್
ದೇವರ ಮರದಡಿಲಿ ಕಟ್ಟಿದಾ ಉಯ್ಯಾಲೆ
ಬಾಗಿದ ಕೊಂಬೆನ ಲೀಲೆನ ಕಂಡೊ
ಇಂದಿಲ್ಲಿ ಬಂದ್ ಹಾಡ್‌ದ ನಾವ್
ಮುಂದೆನ ಮನಲಿ ಹಾಡುವೆ ನಾಳೆ ॥
ಹುತ್ತೆರಿ :
ಓ.... ತಾಲಿ ತಾಲಿಯೊ ಲಲ್ಲೇ... ಲಾ ॥
ನೀ ಎಲ್ಲಿಂದ ಬಂದೆ ಬೈರಪ್ಪ ಜೋಗಿ
ನಾ ಕಿಗ್ಗಟ್ಟ್ ನಾಡ್‌ಂದ ಬಂದೆನೊ ತಾಯವ್ವಾ
ಯಾಕಾಗಿ ಜೋಗಪ್ಪ ಕೊಡ್‌ಗಿಗೆ ಬಂದ್ಯೊ?
ಕೊಡ್‌ಗ್‌ನಾ... ಹುತ್ತರಿ ನೋಡಿಕೆ ಬಂದೆವ್ವ
ಹುತ್ತರಿ ಹಬ್ಬಕ್ಕೆ ಯಾಕಾಗಿ ಬಂದ್ಯೊ
ತಂಬಿಟ್ಟ್ ಬಾಳೆಣ್ಣ್ ತಿಂಬರೆ ಬಂದೆವ್ವ
ಯಾಕಾಗಿ ಜೋಗಪ್ಪ ನಮ್ಮನೆಗೆ ಬಂದ್ಯೊ
ನಿಮ್ಮನೆ ನೆಲ್ಲಕ್ಕಿ ಬೆಳ್ಳ್ ನೋಡಿ ಬಂದೆವ್ವ
ಜೋಗಿಗೆ ಹೊಡಿಬ್ಯಾಡಿ ಬಯ್‌ಬ್ಯಾಡಿ ಮಕ್ಕಳೆ...
ಜೋಗಿನ ಹೊಡ್‌ದರೆ ಸೊಂಟಾನೆ ಉಳುಕ್ಯೋದು
ಕಣ್ಣ್‌ನ ಬುಟ್ಟರೆ ಬೆಂಕಿನೆ ಕಾಂಬೊದು
ಆ ಬೆಂಕಿ ಬಿದ್ದಲ್ಲಿ ಬೂದಿನೆ ಆಗೋದು
ಕೇಳಿ ಕೇಳಿ ಮಕ್ಕಳೆ ಕೇಳಿ
ಕೇಳಿ ಕೇಳಿ ತಕ್ಕರೆ ಕೇಳಿ
ಜೋಗಿ ಪದನಾ ಹಾಡೊನಾ
ಜೊಗಿ ನೊಟ್ಟಿಗೆ ಕೂಣಿಯೊನಾ
ಓ ತಾಲಿ ತಾಲಿಯೊ ಲಲ್ಲೇ... ಲಾ

ನೀ ಎಲ್ಲಿಂದ ಬಂದೆ ಬೈರಪ್ಪ ಜೋಗಿ
ಕಲ್ಲ್‌ಂದ ಕಲ್ಲಿಗೆ ಹಾರ್‌ಕಂಡ್ ಬಂದೆ
ಓ.. ತಾಲಿ ತಾಲಿಯೋ ಲಲ್ಲೇ... ಲಾ
ನಾ ಹೋನೆ ನಾ ಹೋನೆ ತಾಯವ್ವಾ
ಬರೊರ್‌ಸ ಬನ್ನೆ ತಾಯವ್ವಾ॥
ತಾಲಿ.... ತಾಲಿಯೋ ಲಲ್ಲೇ... ಲಾ॥
ನೆಲ್ಲಕ್ಕಿ ದೀಪ ಬೆಳ್‌ಗ್‌ತಾಯಿರ್‌ಲಿ ತಾಯವ್ವಾ
ತಾಲಿ ತಾಲಿಯೋ ಲಲ್ಲೇ... ಲಾ

ತಕ್ಕರ ಐನ್ ಮನೆ ಮನೆಹಾಡ್
ಚಿ. ತಕ್ಕರ ಮನೆಗೆ ಹೋವ ಬಗೆ ಹೆಂಗೆ?
ಛ. ತಾಳ ತಂಬೂರಿ ಕೊಟ್ಟುನೂ.... ಕೊಣ್‌ತನು
ಚಿ. ಜಾರುವ ನೆಲಲಿ ಸಾಗ್‌ದು ಹೆಂಗೆ?
ಛ. ಕಾಯ್ತಾಯಿರ್‌ವ ಬಿಸ್‌ಲ್‌ಗೆ ಮರದ ನೆರ್‌ಳಿಲ್ಲೆ
ಮಾರಿಮಳೆಗೆ ಹಾದೀಲಿ ನೀರ್ ಮುಚ್ಚಿ
ವಾಟೆ ಗೊರಗ್‌ನ ತಲೆಲಿ ಮಡ್ಗಿ
ಕತ್ತಲೆ ಹಾದಿಲಿ ಸಾಗೊನಾ.. ಬನ್ನಿ
ಚಿ. ಊರು ತಕ್ಕರ ಐನ್‌ಮನೆ ಪೊರ್‌ಲು
ದಪ್ಪದ ಚಪ್ಪಡಿ ಕಲ್ಲ್ ಹಾಸಿದಾ – ಅಂಗಳ
ಮುನ್ನೂರು ಕಲ್ಲ್‌ಲಿ ಕಟ್ಟಿದಾ ಕಕ್ಕಟ್
ಈ ಊರಿಗೆ ಪೊರ್‌ಲು ಕಟ್ಟಿದಾ ಕಕ್ಕಟ್
ಛ. ಅಸ್ಟೊಂದು ಪೊರ್‌ಲು ಕಟ್ಟಿದಾ ಕಕ್ಕಟ್
ಕಾಲ್‌ನ ತೊಳ್ದ್ ಮೆಟ್ಟ್‌ಲ್ ಏರ್‌ನೊ
ಛ. ಇದ್ ಊರು ತಕ್ಕರ ಐನ್‌ಮನೆ
ಚಿ. ನಾಕ್ ಕಟ್ಟ್ ಐನ್ ಮನೆ ಕಂಬಗಳ ಕಂಡೊ
ಕಯ್ಯಾಲೆ ಕಂಬಲಿ ಕಂಡದೆ ಕೆತ್ತನೆ
ಛ. ಅಯ್ಯನ ಮನೆ ಆಚಾರದಂಗೆ ಹಾಡೊನಾ ಪದನಾ
ಕೊಟ್ಟುನವ್‌ಕೆ ಪಡಿಯಕ್ಕಿ ಜೋಗಿಗೆ ತಂಬಿಟ್ಟ್
ಚಿ. ತಕ್ಕರ ಮನೆಲಿ ಏನೆಲ್ಲಾ ಚಿತ್ರನ ಕಂಡೊ
ಕಾಡ್‌ಕೋಳಿ ಹೂಂಜದ ಚಿತ್ರನಾ ಕಂಡೊ
ಚಿ. ರಾಮಸೀತೆನಾ... ಚಿತ್ರನಾ ಕಂಡ್
ಹಾಡ್‌ತಾ ನಿತ್ತೊ ದೀವಿಗೆಯೆದ್‌ರ್
ತಕ್ಕರ ಮನೆಲಿ ಮನೆತುಂಬಾ ಮಕ್ಕಾ
ದಾಸ್ವಾಳ ಹೂನಂಗೆ ಗೂಡೆಗಳಾ ಕಂಡೊ
ಆಚಾರದಂಗೆ ಹಾಡುವೆ ನಾವ್
ಜ್ಯೋತಿಗೆ ಕೈಮುಗ್ದ್ ನೆಮ್ಮದಿಲಿ ನಾವ್॥




ಪೊಲಿ ಪೊಲಿ ಪೊಲಿ ದೇವ ॥4॥
ಪೊಲಿ ಪೊಲಿ ಪೊಲಿ ದೇವ ॥4॥
ಹುತ್ತೆರಿ ಹುತ್ತೆರಿ ಕೋಲು ಯಾರಿಗೆ ಹುತ್ತೆರಿ ಕೋಲು
ಪಾಡಿಲಿರ್‌ವ ಇಗ್ಗುತ್ತಪ್ಪಂಗೆ ಹುತ್ತೆರಿ ಹಬ್ಬದ ಕೋಲು ॥ಹುತ್ತೆರಿ॥
ಕದ್‌ರ್ ಪೂಜೆ ನೆರೆಪೂಜೆ ಇಗ್ಗುತ್ತಪ್ಪಂಗೆ
ಈಡ್‌ಕೋಲು ನಾಡ್‌ಕೋಲು ಇಗ್ಗುತ್ತಪ್ಪಂಗೆ
ಇಗ್ಗುತ್ತಪ್ಪಂಗೆ ಕೋಲು ಕೊಡಗ್‌ಲೆಲ್ಲಾ ಕೋಲು
ಅಂಬಲ ಮಾನಿಲಿ ಕೋಲು । ಬಾಣೆಲಿ ವಾಡೆಲಿ ಕೋಲು
ಬಾಣೆಲಿ ವಾಡೆಲಿ ಕೋಲು । ಆಲದ ಮರದಡಿಕೋಲು
ತಡಿಯಂಡ ಮೋಳ್ ಎದ್‌ರ್‌ಗೆ ಕುದ್ದಾ ಇಗ್ಗುತ್ತಪ್ಪಂಗೆ
ಕೋಲು ॥ಹುತ್ತೆರಿ॥
ಮನೆ ಮನೆ ಬಾದು ಜೋಗಿ । ಹುತ್ತರಿ ಹಬ್ಬದ ಜೋಗಿ
ಅಂಗರೆಕೋಲು ಬಾಳೆಲೆ ತೊಪ್ಪಿ ಗಣ ಗಣ ಗಂಟೆನ
ಸದ್ದ್‌ನ ಜೋಗಿ ॥ಹುತ್ತೆರಿ॥
ಮ್ಯಾದನ ಕೊಟ್ಟ್‌ಗೆ ಕೊಣಿವ ಜೋಗಿ
ಪೊರ್‌ಲುನ ಜೋಗಿ ಕೊಣಿಯೊದು ನೋಡಿ
ನಮ್ಮೂರ ಕೋಲಾಟ ಕೊಣ್ತದ ಜೋಗಿ
ತಂಬಿಟ್ಟ್ ಬಾಳೆಣ್ಣ್ ತಿಂಬೊದು ನೋಡಿ ॥
ಹುತ್ತೆರಿ ಹುತ್ತೆರಿ ಕೋಲು ಯಾರಿಗೆ ಹುತ್ತೆರಿ ಕೋಲು
ಪಾಡಿಲಿರ್‌ವ ಇಗ್ಗುತ್ತಪ್ಪಂಗೆ ಹುತ್ತರಿ ಹಬ್ಬದ ಕೋಲು
ಹುತ್ತೆರಿ ಹುತ್ತೆರಿ ಕೋಲು ॥ ಯಾರಿಗೆ ಹುತ್ತೆರಿ ಕೋಲು
ಕೊಡಗ್‌ನದೇ'.... ಕಾವೇರಮ್ಮಂಗೆ ಹುತ್ತೆರಿ ಹಬ್ಬದ ಕೋಲು
ಗಣ್‌ಮಕ್ಕಳ ಕೋಲಾಟ ಪದ
ಇಗ್ಗುತಪ್ಪನ ಹುತ್ತೆರಿ ಕೋಲಾಟ ॥ ಪೊಯ್‌ಲೆ ಪೊಯ್‌ಲೆ ॥
ಬೈತೂರಪ್ಪನ ಕೋಲುನ ಕೊಣ್ತ ॥ ಪೊಯ್‌ಲೆ ಪೊಯ್‌ಲೆ ॥
ಕಾವೇರಮ್ಮಂಗೆ ಕೋಲಾಟ ಕೊಣ್ತ ॥ ಪೊಯ್‌ಲೆ ಪೊಯ್‌ಲೆ ॥
ಇಗ್ಗುತ್ತಪ್ಪನ ಕೋಲುನ ಕೊಣ್ತ ॥ ಪೊಯ್‌ಲೆ ಪೊಯ್‌ಲೆ ॥
ಕೊಡಗ್‌ನ ಮಣ್ಣ್‌ಲಿ ಬೆಳ್‌ದಂತ ಬತ್ತಾ॥ ಪೊಯ್‌ಲೆ ಪೊಯ್‌ಲೆ ॥
ತೆನೆ ತುಂಬಿ ಬಾಂಗಿ ಜೂಂಗಿ ನಿತ್ತುಟು॥ ಪೊಯ್‌ಲೆ ಪೊಯ್‌ಲೆ ॥
ಪಾಲೂರಪ್ಪನ ಕೋಲಾಟ ಕೊಣ್ತ ॥ ಪೊಯ್‌ಲೆ ಪೊಯ್‌ಲೆ ॥
ಮಾದೂರಪ್ಪನ ಕೋಲುನ ಕೊಣ್ತ ॥ ಪೊಯ್‌ಲೆ ಪೊಯ್‌ಲೆ ॥
ಅಂಬಲ ಬಾಣೆಲಿ ಎಲ್ಲವು ಕೂಡ್ಯೊಳೊ॥ ಪೊಯ್‌ಲೆ ಪೊಯ್‌ಲೆ॥
ಗೆಜ್ಜೆನ ಕಟ್ಟಿದ ಕೋಲುನ ತಂದೊಳೊ ॥ ಪೊಯ್‌ಲೆ ಪೊಯ್‌ಲೆ ॥
ತಕ್ಕರ್‌ಎಲ್ಲವು ಕೊಣಿಯಕೆ ಬನ್ನಿ ॥ ಪೊಯ್‌ಲೆ ಪೊಯ್‌ಲೆ ॥
ಊರವು ಮಕ್ಕಳು ಎಲ್ಲವು ಕೂಡಿ ॥ ಪೊಯ್‌ಲೆ ಪೊಯ್‌ಲೆ ॥
ಕೊಟ್ಟುರಾ ಮ್ಯಾದ ಹೊಡ್‌ದವೆ ಕೋಲು॥ ಪೊಯ್‌ಲೆ ಪೊಯ್‌ಲೆ॥
ಮ್ಯಾದನ ಕೊಟ್ಟುಗೆ ಕೊಣಿಯೆನಿ ನೀವು॥ ಪೊಯ್‌ಲೆ ಪೊಯ್‌ಲೆ ॥
ಬೆಟ್ಟತ್ತ್ ಮಲೆಂದ ತರ್‌ಸಿದ ಕೋಲು ॥ ಪೊಯ್‌ಲೆ ಪೊಯ್‌ಲೆ ॥
ಪಾತೂರ ಬೆತ್ತದ ಕೋಲುನ ಪೊರ್‌ಲು॥ ಪೊಯ್‌ಲೆ ಪೊಯ್‌ಲೆ ॥
ಗೆಜ್ಜೆ ಕೋಲುನ ಬೀಸುವ ಸದ್ದ್ ॥ ಪೊಯ್‌ಲೆ ಪೊಯ್‌ಲೆ ॥
ಗಿಲಿ ಗಿಲಿ ಕೇಳ್ದೆ ಗೆಜ್ಜೆನ ಸದ್ದ್ ॥ ಪೊಯ್‌ಲೆ ಪೊಯ್‌ಲೆ ॥
ಹುತ್ತರಿ ಹಬ್ಬಕ್ಕೆ ಜೋಗಿನು ಬೇಕು ॥ ಪೊಯ್‌ಲೆ ಪೊಯ್‌ಲೆ ॥
ಪೊರ್‌ಲುಲಿ ಕೊಣಿಯಕೆ ಸಾಲ್‌ಲಿ ಇರೊಕು॥ ಪೊಯ್‌ಲೆ ಪೊಯ್‌ಲೆ॥
ಕಿಗ್ಗಟ್ಟ್ ನಾಡ್‌ನ ಕೊಂಗಣ ಜೋಗಿಗೆ ॥ ಪೊಯ್‌ಲೆ ಪೊಯ್‌ಲೆ ॥
ತಿಂಬಕೆ ಬೇಕು ತಂಬಿಟ್ಟ್ ಮುದ್ದೆ ॥ ಪೊಯ್‌ಲೆ ಪೊಯ್‌ಲೆ ॥
ನೂರಾರ್ ಜೆನ ಕೊಣಿತಾವಳೊ ॥ ಪೊಯ್‌ಲೆ ಪೊಯ್‌ಲೆ ॥
ನೂರಾರ್ ಹೆಣ್ಮಕ್ಕ ನೋಡ್ತಾವಳೊ ॥ ಪೊಯ್‌ಲೆ ಪೊಯ್‌ಲೆ ॥
ಬಾ... ಬಾ... ಹುತ್ತೆರಿ ಬರೊರ್‌ಸ ಬಾ ॥ ಪೊಯ್‌ಲೆ ಪೊಯ್‌ಲೆ ॥
ನೆಲ್ಲಕ್ಕಿ ದೀಪ ಬೆಳ್‌ಗ್‌ತಾದ್ದದೆ ॥ ಪೊಯ್‌ಲೆ ಪೊಯ್‌ಲೆ ॥
ಇಗ್ಗುತ್ತಪ್ಪನ ಕೋಲಾಟ ಕೊಣ್ತ ॥ ಪೊಯ್‌ಲೆ ಪೊಯ್‌ಲೆ ॥
ಕಾವೇರಮ್ಮಂಗೆ ಕೋಲಾಟ ಕೊಣ್ತ...
ಪೊಯ್‌ಲೆ ಪೊಯ್‌ಲೆ ॥ (ಜಿ.ಬಿ.)

**ಹುತ್ತೆರಿ :** ಹುತ್ತೆರಿ ಕೊಡಗ್‌ಲಿ ನಡೆವ ಹಬ್ಬ. 'ಹು'ತೇಳ್‌ರೆ 'ಹೊಸ', 'ತ್ತೆರಿ'ತೇಳ್‌ರೆ 'ಅಕ್ಕಿ'. ಅಂದರೆ ಹೊಸ ಅಕ್ಕಿತ ಅರ್ತ. ವಾಸ್ತವಾಗಿ ಬತ್ತದ ಕದ್‌ರ್ ಮನೆಗೆ ತಾವ ಸುಗ್ಗಿ ಹಬ್ಬ ಹುತ್ತೆರಿ.

ಆಚರಣೆ : ಇದ್ ಎರ್‌ಡ್ ದಿನಗಳ್‌ಲಿ ನಡ್‌ದದೆ. ಒಂದನೆ ದಿನ 'ಪಾಡಿ ಪೊಳ್ದ್'; ಎರಡ್‌ನೆ ದಿನ 'ನಾಡ್ ಪೊಳ್ದ್ ನಡ್ಡದೆ. ಸುರುಗೆ ಪಾಡಿಯ ಇಗ್ಗುತ್ತಪ್ಪ ದೇಸ್ತಾನ ಗದ್ದೆಂದ ಕದ್‌ರ್ ತಾವ ಹಬ್ಬ. ಮಾರ್‌ನೆ ದಿನ ಕೊಡಗ್‌ಲೆಲ್ಲ ಕೊಡವರ್ ಕದಿರ್ ಮನೆಗೆ ತಾವ ನಾಡಹಬ್ಬ. ರೋಹಿಣಿ ನಕ್ಷತ್ರ ಹುಣ್ಣಿಮೆ ರಾತ್ರಿಲಿ 'ಕದಿರ್ ತೆಗೆವ' ಅಂದ್ರೆ ಈ ಹೊಸ ಬೆಳೆನ ಸುರೂಗೆ ಮನೆಗೆ ತಾಕೆ ಸೆರಿಯಾದ ಸಮಯಂತ ನಂಬುವೆ.

ಈ ಮೂರ್ತ ಸಾಮಾನ್ಯಾಗಿ ಪೆರಗಾಳ್ದೆ ತಿಂಗಳ್‌ಲಿ ಬಂದದೆ. ಹುಣ್ಣಿಮೆಯಂದ್ ರೋಹಿಣಿ ನಕ್ಷತ್ರ ಇಲ್ಲರೆ ಕೃತಿಕೆನೂ ಲಾಯ್‌ಕಂತ ಲೆಕ್ಕಕೆ ತಕಂಡವೆ. ಹುತ್ತೆರಿ ಹಬ್ಬದ ಲೆಕ್ಕಲಿ ಕೊಡಗ್‌ಲೆಲ್ಲ ಕೋಲಾಟ ಇಂತ ಹಲವ್ ಜನಪದ ಕೊಣ್ತಗಳ ಪ್ರದರ್ಸನಗ ನಡ್‌ದವೆ. ಕುಟ್‌ಂಬದ ಎಲ್ಲವೂ ಹುತ್ತೆರಿ ಹಬ್ಬಲಿ ಪಾಲ್ ತಕಂಡ್ ಐನ್‌ಮನೆಗೆ ಬರೊಕು. ಅಲ್ಲದೆ ಮನೆತನಕೆ ಸೇರ್‌ದ ಕೆಲ್‌ಸದವು, ದೂರ ಮೇಯಕೆ ಬುಟ್ಟ ದನಕರ್‌ಗನೂ ಹುತ್ತೆರಿಗೆ ಐನ್‌ಮನೆಲಿ ಕೂಡಿಕನೊಕುತ ಕಟ್ಟಲೆ ಉಟ್ಟು.

**ಈಡ್ :** ಕದ್‌ರ್ ತೆಗೆವ ದಿನಕೆ ಒಂದ್ ವಾರಕೆ ಮೊದ್‌ಲೆ ಹುತ್ತೆರಿ ಹಬ್ಬದ ಪ್ರಯುಕ್ತ ನಡೆವ ಕೋಲಾಟ, 'ಪರಿಯ ಕಳಿ' ಇಂತ ಆಟಗಳ ತಾಲೀಮ್‌ಗೆ 'ಈಡು' ತೆಗೆದುತ ಹೆಸ್‌ರ್. ರಾತ್ರಿ ಏಳ್–ಏಳೂವರೆಗೆ ಎಲ್ಲ ಕುಟುಂಬದವು ಪ್ರತಿಯೊಬ್ಬರ್ ಇದರ್‌ಲಿ ಬಾಗವಹಿಸಕ್. ಊರ 'ತಕ್ಕ'(ಮುಕ್ಯಸ್ತ)ನ ನೇತೃತ್ವಲಿ ಊರ ಮೈದಾನಲಿ ಈ ಆಟಗಳ್‌ಲಿ ಕಲ್‌ತವು ತರಬೇತ್ ಕೊಟ್ಟವೆ.

ಊರು ಮತ್ತೆ ನಾಡ್‌ನ ಮೈದಾನಲಿ ಮುಂದೆ ನಡೆವ ಪಂತಗಳ್‌ಲಿ ಯುವಕರ್ ಪಾಲ್ ಪಡ್‌ಕಂಡ್ ಲಾಯ್‌ಕಲಿ ಕೊಣ್‌ದ್ ಗ್ರಾಮಕೆ ಹೆಸ್‌ರ ತರೊಕ್‌ಂತ ಇದರ ಉದ್ದೇಸ. ಸುಮಾರ್ ನೂರ್ ವರ್ಸ ಹಿಂದೆ ಪ್ರತಿ ಕುಟುಂಬಂದ ಕಡಿಮೆಲಿ ಒಬ್ಬಾದರೂ ಈಡ್‌ಗೆ ಊರ ತಕ್ಕನ ಮನೆಗೆ ಹೋಕು, ಅಲ್ಲಿ ರಾತ್ರಿಯೂಟನ ಮುಗ್‌ಸಿಕಂಡ್ ಮೈದಾನಕೆ ಹೋತಿದ್ದೊ. ಹೋಕನ ನಾಕ್ ಜೆನ ದುಡಿ ಬೊಡ್‌ಕಂಡ್ ಜೆನಪದ ಹಾಡ್ ಹೇಳಿಕಂಡ್ ಹೋದು.

**ಹಬ್ಬದ ತಯಾರಿ :** ಹಿಂದೆ ಗ್ರಾಮಲಿ ಹಲವ್ ಕಸುಬುದಾರರ್ ಹಬ್ಬಕೆ ಬೇಕಾದ ಕುಕ್ಕೆ, ಮೊಂದ್ರಿ, ಸೆಟ್ಟ್‌ಗ, ಬೆದ್ರ್‌ಗುತ್ತಿ, ಕತ್ತಿ, ಕುಡಿಕೆ ಇಂತದರ ಮೆಡ್‌ದ್ ಮನೆಮನೆಗೆ ತಕಂಡೋಗಿ ಕೊಡ್‌ತಿದ್ದೊ. ಇವುಕೆ ಹೊರ್‌ದಕ್ಕಿ ಹಿಟ್ಟ್, ಹುತ್ತೆರಿ ಗೆಣ್‌ಸ್, ಬೆಲ್ಲ, ಎಳ್ಳ್ ಇಂತದರ ಮನೆಯವು ಕೊಡ್‌ತಿದ್ದೊ.


ಹುತ್ತರಿ ಹಬ್ಬ

ಊರ್‌ನ ಬಟ್ರ್ ಬೊಲ್ಪುಗೆ ದೇಸ್ತಾನಲಿ ಪೂಜೆ ಮಾಡಿ, ತೀರ್ತನ ತೇಗ್‌ದ್ ಎಲ್ಲವ್ಕೂ ಗಂದ ಕೊಡ್‌ತಿದ್ದೊ. ಅವುಕೆ ಅಕ್ಕಿ, ಕಾಯಿ, ಬೆಲ್ಲ ಮತ್ತೆ ಬಾಳೆಣ್ಣ್ ಕೊಡ್‌ತಿದ್ದೊ. ಹಬ್ಬದ ಲೆಕ್ಕಲಿ ಎಲ್ಲವೂ ಮನೆನ ಸಿಂಗಾರ ಮಾಡ್‌ವೆ.

**ನೆರೆ ಕಟ್ಟುದು :** ನೆಲ್ಲಕ್ಕಿ ನಡುಬಾಡೆಲಿ ಮನೆನ (ಚಾವಡಿಲಿ) ಸರಮಾಲೆದೀಪನ ಹಚ್ಚಿ, ಅದರ ಕೆಳಗೆ ಒಲಿಮೊಂದ್ರಿನ ಹಾಸಿ, ಅದರ ಮೇಲೆ 'ಹುತ್ತೆರಿ ಪಚ್ಚೆ' (ಹುತ್ತೆರಿಗೆಂತ ನೆಯ್ದು ಬೆದ್ರ್‌ನ ಕುಕ್ಕೆ) ಇಸಿದ್, ಅದರ್‌ಲಿ ಮಾವಿನೆಲೆ, ಅಸ್ವತೆಲೆ ಮತ್ತೆ 'ಹುತ್ತೆರಿ ನಾರ್'(ಗಬ್ಬಲ್ ಮರದ ನಾರ್) ಇಸುವೆ. ಇನ್ನೊಂದ್ ಕುಕ್ಕೆಲಿ ಹಳೆ ಬತ್ತನ ತುಂಬಿ, ಅದರ ಮೇಲೆ ಒಂದ್ ಸೇರ್‌ಲಿ ಬತ್ತ, ಒಂದ್ ಅಚ್ಚೇರ್‌ಲಿ ಅಕ್ಕಿ, ಹುತ್ತೆರಿ ಕುಡಿಕೆಲಿ (ಮೊಣ್ಣ್‌ನ ಸಣ್ಣ ಕುಡಿಕೆ) ಹೊರ್‌ದಕ್ಕಿ ಹಿಟ್ಟ್‌ನ ತುಂಬಿಸ್‌ತಿದ್ದೊ. ಬೆದ್ರ್‌ಲಿ ತಯಾರ್‌ಸಿದ ಗುತ್ತಿಲಿ ಹಜ್ಞಿ ಹಾಲ್, ಜೇನ್, ತುಪ್ಪ, ಎಳ್ಳ್, ಸುಂಟಿ, ಕಾಯಿಯ ಚೂರ್ ಇಂತದರ ಹಾಕಿ ಕುತ್ತಿನ ಮೊಂದ್ರಿ ಮೇಲಿಸುತಿದ್ದೊ. ಹಕ್ಕಲೆ ಕತ್ತಿ ಇಸ್‌ತಿದ್ದೊ.

ಒಂದ್ ಮುಕ್ಕಾಲಿನ ಮೇಲೆ ಕಂಚಿನ ಒಂದ್ ಹರಿವಾಣಲಿ ಅಕ್ಕಿ ತುಂಬ್‌ಸಿ, ದೀಪ ಹೊತ್ತ್‌ಸಿ ಅದರ ಮೇಲೆ ಇಸ್‌ತಿದ್ದೊ. ಇದರಕ್ಕಲೆ ಎಲೆ–ಅಡಕೆ ಇಸ್‌ತಿದ್ದೊ. ಇದ್‌ಕೆ ಕಳಸಕಣ್ಣೆಟಿಂತ ಹೇಳ್‌ವೆ. ಹಜ್ಞಿ ಅಕ್ಕಿನ ಸುರೂಗೆ ನೀರ್‌ಲಿ ಪದನ್‌ಸಿದ್ ಅದರ ದೋಸೆ ಬಂದದಂಗೆ ಕಡಿತಿದ್ದೊ. ತೊಂಡೆಕಾಯಿನಂತಿರ್‌ವ ಕಾಯಿನ ಅಡ್ಡಕೆ ಕೊಯ್ದ್ ಅದರ ಈ ಬಂದಲಿ ಮುಣ್‌ಂಗಿಸಿ ಕತ್ತಿಗೆ, ಗುತ್ತಿಗೆ, ಸೇರ್ ಮತ್ತೆ ಪಾವುಗೆ, ಕುಡ್‌ಕೆಗೆ ಹಾಂಗೆ ಮನೆ ಕಿಟಿಕಿ ಬಾಗಿಲ್‌ಗೆ ಮುದ್ರೆ ಒತ್ತುತಿದ್ದೊ. ಇದೆಲ್ಲಾ ಕೆಲ್‌ಸ ಮೂರ್ತ ಸಮಯಲಿ ಹಿರಿಯರ ಎದೂರ್‌ಲೇ ನಡೀತಿತ್.

**ಪಲಾರ :** ಎಲ್ಲವೂ ಒಟ್ಟ್‌ಗೆ ಕುದ್ದ್ ಬೆಂದ 'ಹುತ್ತೆರಿ ಕಳಂಜಿ'ನ ಜೇನ್ ಮತ್ತೆ ತುಪ್ಪಲಿ ಸೇರ್‌ಸಿಕಂಡ್ ತಿನ್‌ತಿದ್ದೊ. ಮತ್ತೆ ಕದ್‌ರ್ ತೆಗೆವ ಮೂರ್ತಕೆ ಹಜ್ಞಿ ಮೊದಲೆ ಚಾವಡಿ ಸರಮಾಲೆದೀಪದೆದ್‌ರ ನಿಲ್ಲುವೊ. ಮನೆ ಯಜಮಾನ ಗುರುಕಾರ್‌ನೋರ್ ಎಲ್ಲ ದೇವರ ನೆನ್‌ಸಿ ಹಬ್ಬನ ನಡ್‌ಸಿ ಮನೆಗೆ ಹೊಸ ಕದ್‌ರ್ ತಾಕೆ ಬೇಡಿಕಂಡ್ ಗುತ್ತಿನ ಎತ್ತಿಕಂತಿದ್ದೊ.

ಅದರ ಗದ್ದೆಗೆ ತಕಂಡೋಗಿ ಕದ್‌ರ್ ಕುಯ್ಯಕೆ ತಯಾರಾದವಂಗೆ ಕೊಡ್‌ತಿದ್ದೊ. ಅಂವ ಈ ಕೆಲ್‌ಸಕೆ ಯೋಗ್ಯ ನಕ್ಷತ್ರಲಿ ಹುಟ್ಟಿದಂವ ಆಗಿರೊಕು. ಗುತ್ತಿ ಎತ್ತಿಕಂಡವನ ಹೊರ್‌ತ್ ಬಾಕಿಯವೆಲ್ಲ ಹಿರಿಯರ ಕಾಲ್ಮುಟ್ಟಿ ನಮಸ್ಕರಿಸುವೆ. ಕಳ್‌ಸಕಣ್ಣೆಟಿನ ಗೂಡೆ ಕೈಗೆ ಕೊಟ್ಟವೆ. ಉಳ್‌ದವು ಕುಕ್ಕೆ, ಒಲಿಮೊಂದ್ರಿನ ತಕಂಡವೆ. ಒಬ್ಬ ಬೆಡಿ/ಕೋವಿನ ತಕಂಡದೆ. ಮಕ್ಕ ಪಟಾಕಿ ತಕಂಡವೆ. ಹಿಂಗೆ ಮನೆವೆಲ್ಲ ಗದ್ದೆ ಕಡೆ ಕದ್‌ರ್ ಕೊಯ್ಯಕೆ ಹೋದವೆ.

**ಕದ್‌ರ್ ತೆಗಿದು :** ಎಲ್ಲವೂ ಕದ್‌ರ್ ತೆಗಿಯಕೆಂತ ಗುರ್ತೊ ಮಾಡ್‌ದ ಗದ್ದೆ ಜಾಗೆಗೆ ಬಂದವೆ. ಗುತ್ತಿ ತಕಂಡಂವ ಬೆಳೆನ ಪೂಜೆ ಮಾಡ್‌ದೆ. ಗುತ್ತಿಲಿರ್‌ದೆಲ್ಲದರ ಪೈರ್ ಬುಡಕೆ ಸುರ್‌ದ್ ನೇವೇದ್ಯ ಮಾಡಿ, "ಪೊಲಿ ಪೊಲಿ ದೇವಾ!"ತ ಜೋರ್ ಹೇಳಿ ಕೈ ಮುಗ್‌ದದೆ. 'ಪೊಲಿ'ತೇಳ್‌ರೆ 'ಹೆಚ್ಚಾಗ್'ತ ಅರ್ತ. ಕೂಡ್‌ಲೆ ಕೋವಿಂದ ಆಕಾಶಕೆ ಗುಂಡು ಹಾರ್‌ಸುವೆ. ಎಲ್ಲವೂ "ಪೊಲಿ ಪೊಲಿ ದೇವಾ!" ತ ದೊಡ್ಡ ಸ್ವರಲಿ ಹೇಳಿ ಕೈಮುಗ್‌ದವೆ. ಗುತ್ತಿಯಂವ ಸುರೂಗೆ ಮೂರ್ ಪೈರ್‌ನ ಬುಡಂದ ಕೊಯ್‌ದದೆ. ಅದರ ಪಕ್ಕಲಿ ನಿಂತವಂಗೆ ಕೊಟ್ಟದೆ. ಹೀಂಗೆ ಇನ್ನೂ ಪೈರ್‌ಗಳ ಅಲ್ಲಿ ಸೇರ್‌ದ ಎಲ್ಲವ್‌ಕೂ ಕೊಟ್ಟದೆ. ಎಲ್ಲವೂ "ಪೊಲಿ ಪೊಲಿ ದೇವಾ!" ತ ಕೈಮುಗ್‌ದ್ ಮನೆಗೆ ಹೊರ್‌ಟವೆ. ಕೋವಿ ಗುಂಡ್ ಜತೆಗೆ ಮಕ್ಕ ಪಟಾಕಿ ಸಿಡ್‌ಸುವೆ. ಗುತ್ತಿ ತಕಂಡಂವ ಮನೆಗೆ ಬಾಕನ ಅಂವನ ಕಾಲಿಗೆ ನೀರ್‌ಹಾಕಿ ಕುಡಿಯಕೆ ಗಿಂಡಿಲಿ ಹಾಲ್ ಕೊಟ್ಟವೆ. ತಂದ ಕದ್‌ರ್‌ನ ಒಂದೊಂದೆ ತಕಂಡ್ ಕದ್‌ಕೆಗೆ, ಕೈಮಡದ ಬಾಗಿಲ್‌ಗೆ, ಮನೆ ಕಿಟಿಕಿ–ಬಾಗಿಲ್‌ಗೆ, ಬಾಮಿಗೆ, ಕೊಟಗೆಗೆ, ದಿನನಿತ್ಯ ಉಪಯೋಗದ ಕ್ರಿಸಿ ಸೊತ್ತುಗೆ ಹೀಂಗೆ ಒಂದೊಂದು ಅಸ್ವತ ಎಲೆಲಿ ಸುತ್ತಿ ಹುತ್ತೆರಿ ನಾರ್‌ಂದ (ಗಬ್ಬಲ್ ನಾರ್) ಕಟ್ಟ್‌ವೆ. ಮನೆ ಮುಂಬಾಗಿಲ್‌ಗೆ ಕಲಾತ್ಮಕಾಗಿ ನೇಯ್ದು ಕದ್‌ರ್ ತೋರಣ ಕಟ್ಟ್‌ವೆ.




**ಏಳಕ್ಕಿ ಹಿಟ್ಟ್ :** ಅಕ್ಕಿಹಿಟ್ಟ್, ಎಳ್ಳ್, ಸುಂಟಿ, ಕಾಯಿತುರಿ, ಹಾಗಲಕಾಯಿಯ ಮುಳ್ಳು, ಪೆರಂಬು ಕೊಡಿ ಮತ್ತೆ ಕಲ್ಲ್‌ಬಾಳೆಹಣ್ಣು, ಹಾಲು ಮತ್ತೆ ಜೇನ್‌ನೊಟ್ಟ್‌ಗೆ ಕಲ್‌ಸಿ, ಸಣ್ಣಸಣ್ಣ ಉಂಡೆನ ಮಾಡ್‌ವೆ. ಮೊಂದ್ರಿ ಮೇಲೆ ಹಾಸಿದ ಅಸ್ವತ ಎಲೆನ ಇಸುವೆ. ಒಂದೊಂದೇ ಎಲೆನ ಅಂಗೈಲಿ ಇಸಿದ್ ತೀರಿ ಹೋದ ಹಿರಿಯರ ಹೆಸ್‌ರ್ ಹೇಳಿ ಚಾವಡಿ ಮಾಡಿಗೆ ಇಟ್ಟವೆ. ಅದ್ ಮಾಡ್‌ಲಿ ಅಂಟಿಕಂಡರೆ ಹಿರಿಯೊವು ಒಪ್ಪಿಕಂಡೊಂತ ನಂಬುವೆ.

**ಹುತ್ತರಿ ಊಟ :** ಉಂಬಕೆ ಬೆಲ್ಲ ಸೇರ್‌ಸಿದ ಅಕ್ಕಿನ ಪಾಯ್‌ಸ. ಇದಕೆ ಹೊಸ ಕದ್‌ರ್‌ಂದ ಕೆಲವ್ ಬತ್ತನ ಚೊಲ್ಲಿದ್ ಹಾಕ್‌ತಿದ್ದೊ. ಪಿಣ್‌ಚಿದ ಬಾಳೆ ಹಣ್ಣ್ ಮತ್ತೆ ಹೊರ್‌ದಕ್ಕಿ ಹಿಟ್ಟ್‌ನ ಕಲ್‌ಸಿ ತಂಬಿಟ್ಟ್ ತಯಾರಿಸ್‌ತಿದ್ದೊ. ಮುತ್ತೈದೆ ಇದರ್‌ಂದ ಹಙ್ಞ ಕೈಮಡ ಮತ್ತೆ ದೇವರ ಕೋಂಬರೆಲಿ ನೆವೇದ್ಯನ ಇಸಿದೆ. ಮತ್ತೆ ಮನೆಯವೆಲ್ಲ ಒಟ್ಟ್‌ಗೆ ಕುದ್ದ್ ಪಾಯಸ, ಎಳ್ಳ್ ಮತ್ತೆ ತುಪ್ಪ ಸೇರಿಸಕಂಡ್ ತಂಬಿಟ್ಟ್‌ನ ತಿಂದವೆ.

**ಹುತ್ತರಿ ಕೋಲಾಟ :** ಮಾರ್‌ನೆದಿನ ಮದ್ಯಾಹ್ನದ ಊಟಾದ ಮೇಲೆ ಎಲ್ಲವೂ ಸಂಪ್ರದಾಯದ ಉಡುಪುಗಳ ಹಾಕಂಡ್ ಊರ್‌ನ ಬಾಣೆಗೆ ಹೋತಿದ್ದೊ. ಅಲ್ಲಿರ್‌ವ ಅರಳೀಮರದ ಸುತ್ತೊಲು ದೊಡ್ಡ ವೃತ್ತಾಕಾರದಲಿ ಗಂಡ್‌ಜೆನ ಕೊಣ್‌ಕಂಡ್ ಡೋಲು ವಾಲಗನ ಸದ್ದ್‌ಗೆ ಹಾಡ್ ಹೇಳಿಕಂಡ್ ಕೋಲಾಟ ಆಡ್‌ತಿದ್ದೊ.

**ಊರೊರ್ಮೆ :** ಹುತ್ತರಿ ಮುಗ್‌ದ್ ಒಂದ್ ಹಿಂಬೊತ್‌ಗೆ ಊರ್‌ನ ಪ್ರತೀ ಮನೆಂದ ಒಬ್ಬ ಸಾಮೂಹಿಕ ವನಬೋಜನಲಿ ಸೇರಿಕಂಡವೆ. ಈ ಸಮೆಲಿ ಕಾಡ್‌ಬೇಟೆ ಮಾಡಿ ಉಂಬಕೆ ತಯಾರ್ ಮಾಡ್‌ತಿದ್ದೊ. ಕೋಪ, ವಿರೋದ ಇದ್ದೊವು ಈ ದಿನ ರಾಜಿ ಮಾಡಿಕಂತಿದ್ದೊ.

**ಹುಲಿ ವೇಸ :** ಕರ್ನಾಟಕದ ಎಲ್ಲಾ ಕಡೆಲಿ ಸಾಮಾನ್ಯ ಆಗಿ ಹುಲಿವೇಸ ಹಾಕುವ ಕ್ರಮ ಉಟ್ಟು. ಹಿಂದುಗ ಅಲ್ಲದೆ ಬ್ಯಾರಿಗ ಕೂಡ ಉತ್ತರ ಕರ್ನಾಟಕಲಿ ಮೊಹರಂ ಹಬ್ಬಲಿ ಹುಲಿವೇಸ ಹಾಕುವೆ.

**ವೇಸಬೂಸಣ :** ಹುಲಿ ವೇಸಗಾರರ್ ಕೆಂಪು ಮಿಸ್ರ ಅಣ್‌ಸನ ಆಯಿಲ್ ಪೈಂಟ್‌ನ ಇಡೀ ಮೈಗೆ ಮೆತ್ತಿಕಂಡವೆ. ವೇಸಗಾರ ಬರಿ ಚಡ್ಡಿನ ಮಾತ್ರ ಹಾಕಂಡಿದ್ದದೆ. ತಲೆಗೆ ಗಟ್ಟಿಲಿ ಕುದ್ರುವ ಇಲಾಸ್ಟಿಕ್ ಹಾಕಿದ ಕೆಬಿ ಇರ್‌ವ ಟೊಪ್ಪಿನ ಹಾಕಂಡಿದ್ಧದೆ. ಟೊಪ್ಪಿ ಅರ್‌ಸಿಣ ಬಣ್ಣದ್ದಾಗಿದ್ದದೆ. ಅರ್ದಾಳನ ಮೋರೆಗೆ ಮೆತ್ತಿದ್ದದೆ. ಅಲ್ಲಲ್ಲಿ ಕಪ್ಪು ಪಟ್ಟೆ ಪಟ್ಟೆ ಇದ್ದದೆ. ಬಿಳಿ ಮತ್ತೆ ಕರಿ ಬಣ್ಣದ ರೇಖೆಗಳ್‌ಂದ ಮೀಸೆ ಬುಡ್ಸಿಕಂಡಿದ್ದದೆ. ಮೈ ಮೇಲೆ ಸ ಅರಿಸಿನ ಪೈಂಟ್‌ನ ಮೇಲೆ ಬಿಳಿ ಮತ್ತೆ ಕಪ್ಪು ಪಟ್ಟೆಗಳ ಎಳ್ದ್‌ಕಂಡಿದ್ದವೆ, ಬಾಗಿದ ಕೋಲುಗೆ ಬಟ್ಟೆ ಸುತ್ತಿ ಅದ್ಕೆ ಅರ್‌ಸಿನ ಬಣ್ಣ ಕೊಟ್ಟ್ ಹುಲಿ ಬೀಲ ತಯಾರಿ ಮಾಡುವೆ. ಇದರ ಬೆನ್ನ್ ಹಿಂದೆಂದ ಸೊಂಟಕೆ ಕಟ್ಟಿಕಂಡವೆ.. ಉದ್ದದ ಜೂಂಚಿನ ಉಗುರುಗಳ್‌ನ ಕೈಬೆರ್‌ಲ್‌ನ ಉಗುರುಗೆ ಅಂಟಿಸಿಕಂಡವೆ. ಕೊಣ್ತದ ಹೊತ್ತುಲಿ ಕಾಗದಲಿ ಮಾಡ್ದ ಬಣ್ಣಂದ ಚಿತ್ತಾರ ಬರ್‌ದ ಹುಲಿತಲೆನ ಮುಖವಾಡ ಹಾಕಂಡವೆ. ಬೊಳ್ಪುಂದ ಹಿಂಬೊತ್ತುನವರೆಗೆ ಇವು ಮನೆ ಮನೆಗೆ ಹೋಗಿ ಕೊಣ್ದ್ ಪ್ರದರ್ಸನ ಕೊಟ್ಟವೆ. ಹಿಮ್ಮೇಳಲಿ ಹಲಗೆ, ತಮಟೆ, ತಾಸೆ ವಾದ್ಯಗಳ್‌ನ ಬಳಸಲಾದೆ.

**ಕೊಣ್ತ :** ಹುಲಿ ಕೊಣ್ತ ನೋಡಿಕೆ ಬಾರಿ ಪೊರ್ಲಿದ್ದದೆ. ತಾಸೆನ ಪೆಟ್ಟ್‌ಗೆ ಸರಿಯಾಗಿ ಹುಲಿವೇಸದವು ಹೆಜ್ಜೆ ಹಾಕುವೆ. ಕೆಲವೊಂದು ತಂಡಲಿ ಒಂದರ್‌ಂದ ಹೆಚ್ಚ್ ಹುಲಿಗ ಇದ್ದವೆ. ಹುಲಿಮೊರಿಗ ಸನಾ ಇದ್ದವೆ. ಕಲಾವಿದರ್ ಹುಲಿನಂಗೆ ನಟನೆ ಮಾಡಿಕಂಡ್ ಮುಖವಾಡದ ಬಾಯಿಂದ ಇಳಿಬುಟ್ಟ ಕೆಂಪು ಬಣ್ಣದ ರಬ್ಬರ್ ತುಂಡುನ ಮೇಲೆ ಕೆಳಗೆ



ಹುಲಿ ವೇಸ

ಮಾಡಿಕಂಡ್ ಹುಲಿನಂಗೆ ಆಡುವೆ. ಮೇಲೆಂದ ಮೇಲೆ ಕರ್ನಕುತ್ತ ಪಲ್ಟಿ ಹೊಡ್‌ದವೆ. ಎರಡ್ ಕಾಲ್‌ಲಿ ನಿತ್ತ್ ಬೆನ್ನ್ ಬೊಗ್ಗುಸಿ ಕೈಗಳ್‌ನ ಇಳಿಬುಟ್ಟು ಹೊಂಚು ಹಾಕುವಂಗೆ ಆಟಾಡುವೆ. ಮರಿಹುಲಿಗ ಆಚೀಚೆ ಓಡಿಕಂಡಿದ್ದವೆ. ಕೆಲವು ಕಡೆಗಳ್‌ಲಿ ರಸ್ತೆಲಿ ಮುಂದುವರೆಕಾಕನ ಹುಲಿಮೆರವಣಿಗೆ ನಡ್ದದೆ. ಎರಡ್ ಬೆದ್‌ರ್‌ಗಳ ನಾಕ್ ಜನ ಹೆಗ್‌ಲಿಗೇರಿಸಿ ನಿತ್ತ್‌ಕಂಡಿದ್ದವೆ. ಈ ಬೆದ್‌ರುಗಳ ಮೇಲೆ ಕೈ ಕಾಲೂರಿ ಹುಲಿ ನಿತ್ತಿದ್ದದೆ. ದಾರಿಲಿ ಹೋಕನ ತನ್ನ ಮುಖವಾಡದ ತಲೆನ ಆಚೆ ಈಚೆ ತಿರ್‌ಗಿಸಿ ನೋಡ್‌ತ್ತಿದ್ದವೆ.

ಕಲಾವಿದರ ತಂಡ ಪೇಟೆನ ಊರುಗಳ್‌ನ ಸುತ್ತಿಕಂಡ್ ಮನೆಮನೆಗೆ ಹೋಗಿ ತಮ್ಮ ಕೊಣ್‌ತಂದ ಜನರ್‌ನ ಕುಸಿ ಪಡ್‌ಸಿ ಕಾಣಿಕೆ ಪಡ್‌ಕಂಡವೆ.

ಈ ಕೊಣ್ತಕೆ ವಿಸೇಸ ಆಚರಣೆಗ ಇಲ್ಲೆ ದೇವಿ ದೇವಸ್ಥಾನದೆದ್‌ರ,ಇಲ್ಲರೆ ಪಿಲಿಚಾಮುಂಡಿ ದೆವ್ವದ ಗುಡಿನ ಎದುರ ಕೈ ಮುಗ್‌ದು ಪ್ರಾರ್ಥನೆ ಮಾಡಿ ದೃಸ್ಟಿ ತಾಂಗದಂಗೆ ಅರ್ಚಕರ್ ಕೊಟ್ಟ ನಿಂಬುಳಿನ ಬೊಳ್ಳಿಲಿ ಚುರ್‌ದ್ ಗಂಟ್ಲ್‌ಗೆ ಕಟ್ಟಿಕಂಡವೆ. ಹುಲಿವೇಸದ ತಂಡಕ್ಕೆ ಒಬ್ಬ ನಾಯಕ ಇದ್ದದೆ. ಅಂವ ಪ್ರದರ್‌ಸನಂದ ಬಂದ ದುಡ್ಡುನ ಅವನೇ ಇಸಿಕಂಡದೆ.

ಹಿಮ್ಮೇಳನದವ್‌ಕೆ ಮತ್ತೆ ಕಲಾವಿದರಿಗೆ ಇಂತಿಸ್ಟ ಸಂಭಾವನೆನ ತೇಳಿ ಅಂವನೆ ಕೊಟ್ಟದೆ. ಕಡೇ ದಿನ ವೇಸ ಬಿಚ್ಚಿ ದೇವಿನ ಗುಡಿ ಎದ್‌ರ್ ಬಂದ್ ಪೂಜೆ ಮಾಡಿ ಹರಕೆ ಒಪ್ಪುಸಿ ಪ್ರಸಾದ ತಕಂಡವೆ. (ಪಿ.ಆರ್.)

**ಹೊಸ್ತೂಟ : ಹೊಸ್ತ್–ಕೂಡೂಟ :** ಮೊಯಿಂಸಂಗೆ ಬೊದ್‌ಕಿಕೆ ಅಗತ್ಯ ಮೂಲ ತಿನ್ಸ್. ತಿನ್ಸ್ ತಿಂಬದರ್‌ಂದಳೆ ಮೊಯಿಂಸ ಗಟ್ಟಿ ಆಗಿ ಬಲಾಗಿ ಬೆಳ್ದದೆ. ಕೆಲ್‌ಸ ಕಾರ್ಯ ಮಾಡಿಕೆ ಸಕ್ತಿ ಬಂದದೆ. ಆಯುರ್‌ವೇದ ಮತ್ತೆ ಪಂಡ್‌ನ ಕಾಲದ ಸ್ಲೋಕಗಳ ನೋಡಿಕನ ತಿನ್ಸ್ ಎಲ್ಲಾ ಪ್ರಾಣಿಗಳಿಗೆ ಆದಾರ ಆಗಿರ್‌ವ ತಿನಿ ಆಗುಟುತಾ ಗೊತ್ತಾದೆ. ತಿಂಬತಿನಿ ಪ್ರಾಣರಕ್ಸಕಂತೇಳಿ(ಆರೋಗ್ಯ) ಆಗಿದ್ದರೂ ಸರಿಯಾದ ಕ್ರಮ ಇಲ್ಲದೆ ತಿಂಬದರ್‌ಂದ ಸೌಕೆ ಇಲ್ಲದಾಂಗೆ ಆದೆ. ಬಾರಿ ಪಂಡ್‌ಂದಳೆ ಲೋಕಲಿ 'ದಾನ್ಯದೇವಿ'ತೇಳಿ ಕರೆತಿದ್ದರ್‌ಂದ ದಾನ್ಯದೇವತೆನ ಸುಮಾರ್ ಬಗೆಲಿ ಪೂಜ್‌ಸಿ ಗೌರವಿಸ್‌ವ ಸಂಪ್ರದಾಯ ಉಟ್ಟು. ಬತ್ತದ ಹೊಸ ಕದ್‌ರ್‌ನ ಮನೆಗೆ ತಾದು, ಬೂದೇವಿ ದಾನ್ಯದೇವಿಗೆ ಕೈಮುಗೆದು ಹಿರಿಯರ್ ನಡ್ಸಿಕಂಡ್ ಬಂದ ಸಂಪ್ರದಾಯಗಳ್‌ಲಿ ಒಂದಾದ ಎಳ್ಳ್ ಜೀರಿಗೆ ಬೆಳೆವ ಬೂಮಿನೆ ನಾವ್‌ಗೆ ಅವ್ವ. ಎದ್ದಾಂಗೆ ಅಯ್ಯೆನ ನೆನ್ಸಿಕಂಬವನೆ ಮೊಣ್ಣುನ ಮಜ್ಜನೆ ಒಕ್ಕಲಿಗ.


ಹೊಸ್ತೂಟ ಬಡ್‌ಸುವ ಸೆಡೆ

ನಮ್ಮ ಎಲ್ಲಾ ಉದ್ದಾರಕೆ ಕಾರಣ ಆದ ಬೂಮ್ಯವ್ವನ ಒಕ್ಕಲಿಗರ್ ಪೂಜೆ ಮಾಡಿ, ಬೂಮಿ ಕೊಟ್ಟ ಸುರೂನ ಪ್ರಸಾದನ/ಪಲವಸ್ತುನ ಬಕ್ತಿಂದ ತಕಂಡವೆ. ಅದರ ಅವ್ ಮಾತ್ರ ತೆಕಣದೆ ಕುಟುಂಬ ಬಂದುಬಳಗದವರೊಟ್ಟಿಗೆ ಸ್ವೀಕರ್‌ಸಿ ಕುಸಿಂದ ತಿಂದ್ ಉಂಡ್ ಬೊದ್ಕಿದೆ. ಇದರನೆ ಹೊಸ್ತ್ ಊಟಂತೇಳಿ ಕರ್‌ದವೆ. ಇದ್ ಬೇರೆ ಬೇರೆ ಕಡೆಗಳ್‌ಲಿ ಬೇರೆ ಬೇರೆ ನಮೂನೆಲಿ ಆಚರಣೆ ಮಾಡ್‌ವೆ.

ಅರೆಬಾಸೆಲಿ 'ಹೊಸ್ತ್' ತೇಳಿ, ತುಳುಲಿ 'ಪುದ್ವಾರ್' ತೇಳಿ, ಕನ್ನಡಲಿ 'ನವಾನ್ನ ಬೋಜನ' ತೇಳಿ ಕರ್‌ದವೆ. ಆ ದಿನದ ಹಿಂದೆನ ದಿನ ಸುರುಗೆ ಮನೆನ ಸುದ್ದ ಮಾಡ್ದು, ಕೊಯ್ಲ್‌ಗೆ ಮುಂದೆ ಅಟ್ಟ ಗುಡ್‌ಸ್‌ವ ಕ್ರಮ ಇದ್ದದೆ. ಆಟಿತಿಂಗಳ್‌ಲಿ ಪಂಡ್‌ನ ಹಳೆ ಸಾಮಾನ್‌ಗಳ ಪೂರ ತೆಗ್ದ್ ಮನಾರ ಮಾಡ್‌ವೆ. ಮರ್‌ದಿನ ಬೆಳ್‌ಜಾರ್‌ಗೆ ಬತ್ತದ ಹೊಸ ಕದ್‌ರ್‌ನ ಮನೆಗೆ ತಂದವೆ. ಇದ್‌ಕೆ ಮುಂದೆನೇ ಹಲ್ಸ್‌ನ ಸೊಪ್ಪು, ಮಾಯಿನಸೊಪ್ಪ್, ಅಸ್ವತ್ತ ಸೊಪ್ಪು, ಬೆದ್‌ರ್ ಕೊಡಿ, ಬಗೆಬಗೆನ ಗೋಳಿ ಸೊಪ್ಪು, ಪಲ್ಲಿ ಸೊಪ್ಪ್, ನೆಲ್ಲಿಸೊಪ್ಪ್‌ಗಳ ಪೂರಾ ಜೋಡ್‌ಸಿ ಕಟ್ಟ್‌ವೆ. ಗಬ್ಬಲ ಕೆತ್ತೆನ ಬೊಳ್ಳಿ ಅಲ್ಲದೆ ಬೇರೆ ಬೊಳ್ಳಿಗಳ ಬಳ್‌ಸುವ ಪದ್ದತಿ ಇಲ್ಲೆ. ಕೆಲವ್ ಕಡೆ ನಾಯಿ ಕಬ್ಬುನ, ಇಟ್ಟೆಜ್ಜ ಸೊಪ್ಪುಗಳ ಬಳ್‌ಸಿಕಂಬ ಕ್ರಮಗನೂ ಉಟ್ಟು. ಬೇಕಾವ ಸೊಪ್ಪು ಹಾಂಗೆನೇ ಬೊಳ್ಳಿಗಳ ಮನೆ ಮುಂದೆನ ತೊಳ್ಸಿ ಕಟ್ಟೆನ ಮೇಲೆ ಇಸುವೆ. ಕದ್‌ರ್ ತಾಕೆ ಮುಂದೆ ಮನೆನ ಯಜಮಾನ ತಲೆ ಮೈ ಮೀದ್ ಗಂದ ಅರ್‌ದ್ ಹಾಕಂಡ್, ಕದ್‌ರ್ ಕೊಯ್ದ್ ತಾಕೆ ಹೋದವೆ. ಕದ್‌ರ್ ತೆಗೆವ ದಿನ ಬೆಳ್ಜರ್‌ಗೆ ಗದ್ದೆಗೆ ಮೂರು ಸರ್‌ತಿ ಸುತ್ತ ಬಂದ್, 'ಐದ್ ಎಲೆ' ಮತ್ತೆ ಒಂದ್ ಅಡ್‌ಕೆನ ಗದ್ದೆ ಪುಣಿಲಿಸಿ ಬೂಮಿ ಅವ್ವಂಗೆ ಸೂರ್‌ಯದೇವ್ರ್‌ಗೆ ಕೈ ಮುಗ್ದ್ ಮೂಡ ದಿಕ್ಕ್‌ಗೆ ಮೋರೆಮಾಡಿ ಕದ್ರ್ ತೆಗ್‌ದವೆ. ಹಿಂಗೇ ತೆಗ್‌ದ ಕದ್‌ರ್‌ನ ಬೆಂಡ್ ಕುಕ್ಕೆಲಿಸಿ ಮನೆಗೆ ತಂದ್ ತೊಳ್ಸಿ ಕಟ್ಟೆನ ಮೇಲೆ ಇಸ್‌ವೆ. ಮನೆನ ಯಜಮಾಂತಿ ದೇವ್ರಕೋಣೆಲಿ ಕಾಯೆಣ್ಣೆ ದೀಪ ಹೊತ್ತ್‌ಸಿದಾಂಗೆ ಒಳ್ದೊವ್ ಪೊಲಿಯೋ ಪೊಲಿ ಪೊಲಿ... ಪೊಲಿಯೋ ಪೊಲಿ ಪೊಲಿ ಹೆಚ್ಚಿ ಬಾ ತೇಳಿಕಂಡ್ ಬಂದ್ ಕುಕ್ಕೆನ ಮಣೆನ ಮೇಲೆ ಇಸುವೆ. ಕೆಲವ್ ಕಡೆಲಿ ಕಾಯೆಣ್ಣೆ ಹೊಯ್ದ್ ಮಾಡ್ದ ಕೋಲ್ತಿರಿ ಇಲ್ಲರೆ ಕರ್ಪೂರದ ಆರತಿ ಮಾಡ್‌ವೆ. ಮನೆವು ಪೂರಾ ಕೈ ಮುಗ್ದ್ ಗಂದದ ಬೊಟ್ಟು ಹಾಕಂಡವೆ. ದೇವರ್ ಹಾಂಗೆನೇ ದೆವ್ವಗ ಇರ್‌ವ ಜಾಗೆಗಳಿಗೆ ಕದ್‌ರ್ ಕಟ್ಟುವೆ.

ಸುರುಗೆ ಅಸ್ವತ ಇಲ್ಲರೆ ಕೊಟ್ಟೆಗೋಳಿ ಸೊಪ್ಪು, ಅದರ ಮೇಲೆ ಹಲ್ಸ್‌ನ ಸೊಪ್ಪು, ಮಾಯಿಣ ಸೊಪ್ಪುಗಳ ಒಂದರ ಮೇಲೆ ಒಂದಿಸಿ ಗೋಳಿ, ನೆಲ್ಲಿ, ಪಲ್ಲಿಸೊಪ್ಪು, ಬೆದ್‌ರ್‌ಕೊಡಿ ಇಸಿ ಮೇಲೆ ಎರ್‌ಡ್ ಕದ್‌ರ್‌ಗಳ ಇಸಿ ಸುರುಳಿ ಸುತ್ತಿ ನೊಡುಲಿ ಬೊಳ್ಳಿಂದಕಟ್ಟಿ ದೆವ್ವದ ಸ್ತಾನಕೂ, ಚಾವಡಿನ ಕಂಬಕೆ, ನೊಗ ನೇಗ್ಲ್‌ಗಳಿಗೆ, ಚಾಳೆಗೆ, ಕಮ್ಮುಗೆ, ಮನೆನ ಬಾಗ್ಲ್ ಇಲ್ಲರೆ ಅಟ್ಟದ ಬಿಟ್ಟಕೆ, ಬಾಮಿಕಟ್ಟೆಗೆ, ತೊಳ್‌ಸಿ ಕಟ್ಟೆ, ಹಟ್ಟಿ ಕೊಟೆಗೆಗೆ, ವಾಹನಕೆ ಪೂರಾ ಕಟ್ಟುವೆ. ಒಳ್ದ ಸೊಪ್ಪು ಕದ್‌ರ್‌ಗಳ ವೆಂಕಟರಮಣ ದೇವರ ಮುಡಿಪು ಇರ್‌ವಲ್ಲಿ ಇಸುದು ಕ್ರಮ.

ನಾಕ್ ಕಡೆಗಳ್‌ಂದ ಬತ್ತದ ಕದ್‌ರ್ ನಡುಗೆ ಒಟ್ಟು ಸೇರ್‌ಸಿ ಕಟ್ಟುವೆ. ನಾಕ್ ಕಡೆಂದ ಕೊಯ್‌ದ್ ನಾಕ್ ಪುಡೆಗೂ ಅದರ ಇಸಿದ್ ನೆಡುಲಿ ಎಲೆ ಅಡ್‌ಕೆ ಇಸ್‌ವೆ. ಐದು ಕಿಳ್ಳಿಗಳಿಗೆ ಹಾಲ್ ತುಂಬುಸುವೆ. ಮೇಲೆಗೆ ಒಂದ್, ಕೆಳಗೆ ನಾಕ್ ಬಾಗಕೆ ನಾಕರ ಇಸಿ ಕೈಮುಗ್ದ್ ಒಂದ್ ಹಿಡಿನಸ್ವರ ತಂದ್ ಮನೆನ ಸೂರಡಿಲಿ ಇಸುವೆ. ದನದ ಹಾಲ್ ಇಲ್ಲರೆ ಕಾಯಿ ಹಾಲುಂದಳೂ ಪೂಜೆ ಮಾಡ್‌ವೆ.

ಹೊಸ್ತುಗೆ ನೀರು ತಾಕೆ ಎರಡ್ ಹೆಣ್ಮಕ್ಕ ಹೋದು ಕ್ರಮ. 9,11,13,19.




ಹಿಂಗೆ ಹೊಸ ಬತ್ತನ ಚೋಲಿ ತೆಗ್ದ್ ಮಡ್ಕೆಗೆ ಹಾಕಿ ಹಳೆ ಅಕ್ಕಿಗೆ ಹಾಕುವೆ. ಮಂಡೆಗೆ ನೀರ್‌ಸೋಂತೆನ ಬೊಳ್ಳಿನ ಕಟ್ಟುವೆ. ಅರ್‌ಸಿನದ ಸೊಪ್ಪುನ ಹಾಕುವೆ ತುಂಬಾ ಬೇಸಾಯ ಮಾಡ್‌ವ ಮನೆಗಳ್‌ಲಿ ಹೊಸ್ತ್‌ಗಾಗಿ ಮುಡಿಕಟ್ಟುವೆ. ಇದರ ಅಳತೆ ಮಾಡ್‌ವ ಕ್ರಮ ಇಲ್ಲೆ. ಇದ್‌ಕೆ 'ನಾಲ್ಕು ಕಲ್ಲೆ 'ತೇಳಿ ಹೆಸರು ಉಟ್ಟು.

ಗಂಜಿ ಮಡ್‌ಕೆಗೆ ಇಬ್ಬೊರು ಹೆಣ್ಮಕ್ಕ ಒಟ್ಟಿಗೆ ಹೋಗಿ ಬಾಮಿಂದ ನೀರ್ ಎಳ್‌ದ್ ತರೋಕು. ಮತ್ತೆ ಎಲ್ಲವ್‌ಕೆ ಹೇಳಿ ಮಡ್ಕೆಗೆ (ಕಾಯಿಗಂಜಿ ಮಾಡ್‌ವ ಮಡಿಕೆ) ನೀರ್ ಹೊಯ್ಯೊಕು. ಹೊಸ್ತ್‌ಗೆ ಮುಗುಳಿ ಸಂಕೆಲಿ ಗೈಪುಗಳ ಮಾಡ್‌ವೆ. ಮಾಡ್‌ವ ಗೈಪುಲಿ ಕೆಲ ಕ್ರಮಗನು ಉಟ್ಟು ಎಂತತೇಳಿರೆ ಕೆಸದ ದಂಟ್ ಹಾಂಗೆನೇ ಹರ್‌ವೆ ಸೊಪ್ಪು ಬೇಕೆ ಬೇಕು. ನೀರ್ ಸೋಂತೆ ಪಚ್ಚಂಡಿ ಮಾಡೊಕೆ, ಹಾಗಲಕಾಯಿ ಗೈಪು ಮಾಡಿಕಾಗದ್‌ಂತ ಉಟ್ಟು. ಮದು–ಮಾಂಸದೂಟ ಮಾಡಟಿಲ್ಲೆ. ಇಕ್ಕ್‌ಕನ ಉಪ್ಪು, ಶುಂಟಿಗೆ ಸುರುನ ಇಕ್ಕುದು ಕ್ರಮ.

ಉಂಬಕೆ ಮುಂದೆ ಹೊಸ ಅಕ್ಕಿ ಗಂಜಿನ ಕಿಚ್ಚಿಗೆ ಇಸಿಕನ ನಾವ್ ಸೇರ್‌ದ ನೆಂಟರಿಸ್ಟರ್ ಬಂದುಗಳದವರೊಟ್ಟಿಗೆ, ಕುಟುಂಬದವರೊಟ್ಟಿಗೆ ಹೊಸ ಗಂಜಿನ ಕೇಳಿ ಅಗ್ನಿದೇವಂಗೆ ಕೊಟ್ಟುವೇಂತೇಳಿ ಹೇಳ್‌ವೆ' ಕಿಚ್ಚಿ ಗಾಳಿಗೆ ಸೇರಿ ಗಾಳಿಂದ ಬಾಣಕೆ ಸೇರಿ, ದೇವತೆಗಳಿಗೆ ಸೇರ್‌ದು ತೇಳ್‌ವ ನಂಬಿಕೆ ಇದ್.

ಸುರುಗೆ ಕೊಲೆಗಳಿಗೆ/ಗುರುಕಾರ್‌ನೂರುಗೆ ಇಸಿ ಅದಂರ್‌ದ ಚೂರ್ ಚೂರೇ ತೆಗ್ದ್ ಉಂಡೆ ಮಾಡಿ ಐದ್ ಎಲೆ ಒಂದ್ ಅಡ್‌ಕೆನೊಟ್ಟಿಗೆ ಮರದ ಸೆಟ್ಪ್‌ಗದ ಮೇಲೆ ಇಸಿದ್ ಕೈಮುಗ್‌ದ ಮೇಲೆ ಮನೆನ ಯಜಮಾನಂಗೆ ಮಾಡ್‌ದ ಅಡ್‌ಗೆನ ಮೂರು ಸರ್‌ತಿ ಇಕ್ಕಿದ ಮೇಲೆ ಮತ್ತೆ ಎಲ್ಲವು ಹೊಸ್ತು ಊಟ ಮಾಡಿಕೆ ಕುದ್ದವೆ. ಊಟ ಮಾಡುಕನನು ಒಬ್ಬ ಇನ್ನೊಬ್ಬರೊಟ್ಟಿಗೆ 'ನಾ ಹೊಸ್ತ್ ಉಂಡನೆ, ನಾ ಹೊಸ್ತ್ ಉಂಡನೆ' ಹೇಳಿ ಉಂಬೊದು ಕ್ರಮ. ಐನ್‌ಮನೆಗಳ್‌ಲಿ ನಡಿವ ಹೊಸ್ತ್ ಊಟಲಿ ಉಂಬಕೆ ಕುದ್ದ ಎಲ್ಲವ್‌ಕೆ ಎಲ್ಲ ಬಗೆನ ತಿನ್ಸ್‌ಗಳ ಇಕ್ಕಿದ ಮೇಲೆ ಕುಟುಂಬದ ಯಜಮಾನ ಕೊಡ್‌ವ ಒಪ್ಪಿಗೆ ಮೇಲೆ ಒಟ್ಟಿಗೆ ಉಂಡವೆ.

ಈ ದಿನ ಆವರ್‌ಸ ಹುಟ್ಟಿದ ಹೊಸಕೂಸುಗಳಿಗೆ ಹೊಸ್ತೂಟ ಕೊಡ್‌ವ ಸಂಪ್ರದಾಯನು ಉಟ್ಟು. ಕೊಟ್ಟ ಗೂಡೆಗ ಇದ್ದರೆ ಗಂಡನ ಮನೆಂದ ತುಪ್ಪ ಆಗಲಿ, ಎಣ್ಣೆ ಪ್ರೀತಿಲಿ ತಂದವೆ.

ಹೊಸ್ತ್‌ನ ಮಾರ್‌ನೆ ದಿನ ಬೊಳ್‌ಪುಗೆ ಹಟ್ಟಿನ ಮುಂದೆ ಇರ್‌ವ ಅಂಗಾರನ ಕಲ್ಲ್‌ಗೆ ಹೊಸ ಗಂಜಿನ ಇಕ್ಕ್‌ವೆ. ಅಂಗಾರ ತೇಳಿರೆ ದನಗಳ ಪಾರಕಾಯಂವ(ಅಂಗರಕ್ಷಕ) ಅಂಗಾರನ ಕಲ್ಲ್‌ನ ನೀರ್‌ಂದ ತೊಳ್‌ದ್ ಬಾಳೆಎಲೆನ ಇಸಿ ಕಾಯಿಗಂಜಿ ಇಕ್ಕಿ ನೆಣೆ ಬತ್ತಿ ಹೊತ್ತ್‌ಸಿ ಕೈಮುಗ್ದ್ ದನಗಳಿಗೆ ಬಾವ ಕಸ್ಟ ನಿವಾರಣೆ ಮಾಡೊಕುಂತ ಬೇಡಿಕೊಂಡವೆ. ಮತ್ತೆ ಆ ಗಂಜಿನ ಹೂಡುವ ಎತ್ತ್‌ಗಳಿಗೆ ಕೊಟ್ಟವೆ.ಒಟ್ಟುಲಿ ನೆಂಟ್ರ್‌ಗ, ಕುಟುಂಬದವು ಸಂಸಾರದವರೊಟ್ಟಿಗೆ ಸೇರಿ ಉಂಬ ಕುಸಿನ ಕೂಡೂಟನೇ ಹೊಸ್ತೂಟ. (ಎಸ್.ಕೆ.)



## ಪಟ ಮತ್ತೆ ರೇಖಾ ಚಿತ್ರ ಕೊಟ್ಟವು

**ಅಂತರಜಾಲ** : ವಿಕಿಕಾಮೆನ್ಸ್ ಮತ್ತು ಹಲವು ಮೂಲ

**ಆನ್ವಿತ್ ವಿ.ಬಿ.** : # 9.88/934, ಫ್ಲಾಟ್ ನಂ. 407,
ಧ್ರುವ ರೆಸಿಡೆನ್ಸಿ, ಎಕ್ಕೂರು,
ಮಂಗಳೂರು,
ದ.ಕ. ಜಿಲ್ಲೆ – 575 002

**ಕಿರಣ ಎ.ಬಿ.** ಅಲಸಂಡೆಮಜಲು ಮನೆ,
ಪೆರ್ಲಂಪಾಡಿ ಅಂಚೆ, ಕೊಳ್ತಿಗೆ ಗ್ರಾಮ,
ಪುತ್ತೂರು ತಾಲೂಕು,
ದ.ಕ. ಜಿಲ್ಲೆ – 574 212

**ಶಶಿ ಗೌಡ** ಕೋಯಿಂಗೋಡಿ ಶ್ರೆಯಸ್ ಕಾಂಪ್ಲೆಕ್ಸ್,
ನೆಲ ಮಹಡಿ, ಬಾಳೆಮಕ್ಕಿ,
ಸುಳ್ಯ ತಾಲೂಕು, ದ.ಕ. ಜಿಲ್ಲೆ

**ಪುರುಷೋತ್ತಮ ಬಿಳಿಮಲೆ** : 6098/8, ಆ6,
ಸಂತುಷ್ಟಿ ಅಪಾರ್ಟ್‌ಮೆಂಟ್ಸ್,
ವಸಂತಕುಂಜ್
ನವದೆಹಲಿ–110 070

**ಪೂವಪ್ಪ ಕಣಿಯೂರು** : ನಿವೃತ ಪ್ರಾಂಶುಪಾಲರು
ಸ್ಪೂರ್ತಿ 4ನೇ ಅಡ್ಡ ರಸ್ತೆ,
ದಕ್ಷಿಣ ಬೀರ ಮಂಗಲ,
ಚರ್ಚ್ ರಸ್ತೆ, ಸುಳ್ಯ,
ದ.ಕ. ಜಿಲ್ಲೆ – 574 239

**ಹಿರನ್ ಕೊಂಬಂಡ** : ಕೊಂಬಂಡ ಮನೆ
ನಾಪೊಕ್ಲು ಗ್ರಾಮ ಮತ್ತು ಅಂಚೆ,
ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ – 571 214

## ಲೇಖಕರ ಸೂಚಿ

| | |
|---|---|
| ಎ.ಎ. | **ಅಶೋಕ್ ಆಳ್ವ**<br>8–8/226, ಅನಾವರಣ,<br>ಲಾರ್ಡ್ ಕೃಷ್ಣ ಎಸ್ಟೇಟ್, ಇಡ್ಯಾ,<br>ಸುರತ್ಕಲ್, ದ.ಕ. ಜಿಲ್ಲೆ – 575 014 |
| ಎ.ಸಿ. | **ಅರವಿಂದ ಚೊಕ್ಕಾಡಿ**<br>ಕೊಡಂಗಲ್ಲು ಅಂಚೆ, ಮೂಡುಬಿದಿರೆ,<br>ದ.ಕ. ಜಿಲ್ಲೆ – 574 197 |
| ಎ. ಎಲ್. ಎ. | **ಏರ್ಯ ಲಕ್ಷ್ಮೀ ನಾರಾಯಣ ಆಳ್ವ**<br>ಮದನಕಾಪು ಅಂಚೆ, ದ.ಕ. ಜಿಲ್ಲೆ |
| ಎ.ಆರ್.ಜಿ. | **ಪಿ. ಅನಂತರಾಜ ಗೌಡ**<br>ಸೀತಾ ಫ್ಯೂಲ್ಸ್ ಇಂಕ್, ಡೀಲರ್: BPCL,<br>ಬೊಮ್ಮಸಂದ್ರ– ಜಿಗಣಿ ಲಿಂಕ್ ರಸ್ತೆ,<br>ಬೊಮ್ಮಸಂದ್ರ 4ನೇ ಹಂತ,<br>ಬೆಂಗಳೂರು – 562 105 |
| ಎ.ಎಸ್. | **ಎ. ಸುಬ್ಬಣ್ಣ ರೈ**<br>ಕುಲಸಚಿವರು,<br>ಹಂಪಿ ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ಬಿ.ಎ. | **ಭರತೇಶ ಅಲಸಂಡೆಮಜಲು,**<br>ಎ. ಬೋಜಪ್ಪ ಗೌಡರ ಮಗ,<br>ಅಲಸಂಡೆಮಜಲು ಮನೆ,<br>ಪೆರ್ಲಂಪಾಡಿ ಆಂಚೆ, ಕೊಳ್ತಿಗೆ ಗ್ರಾಮ,<br>ಪುತ್ತೂರು ತಾಲೂಕು,<br>ದ.ಕ. ಜಿಲ್ಲೆ– 574 212 |
| ಬಿ. ಜೆ. | **ಬಾರಿಯಂಡ ಜೋಯಪ್ಪ**<br>ಮದೆ ಗ್ರಾಮ ಮತ್ತು ಅಂಚೆ,<br>ಮಡಿಕೇರಿ ತಾಲೂಕು,<br>ಕೊಡಗು ಜಿಲ್ಲೆ – 571 201 |
| ಬಿ.ಡಿ.ಎಸ್.* | **ಸುಬ್ಬಯ್ಯ, ಬಿ.ಡಿ.**<br>ಇಂಡಿಯನ್ ಎಕ್ಸ್‌ಪ್ರೆಸ್ ಪ್ರತಿನಿಧಿ,<br>ಮಡಿಕೇರಿ, ಕೊಡಗು ಜಿಲ್ಲೆ |
| ಸಿ.ಬಿ. | **ಚಂದ್ರಶೇಖರ ಬೇರಿಕೆ**<br>ಬೇರಿಕೆ ಮನೆ, ಕಳಂಜ ಗ್ರಾಮ<br>ಮತ್ತು ಅಂಚೆ, ಸುಳ್ಯ ತಾಲೂಕು,<br>ದ.ಕ. ಜಿಲ್ಲೆ – 574 212 |
| ಸಿ.ಪಿ. | **ಚಂದ್ರಶೇಖರ ಪೇರಾಲ್**<br>ಅಕ್ಷರ ಹೊಸಗದ್ದೆ, ಹಳೆಗೇಟು,<br>ಸುಳ್ಯ ತಾಲೂಕು, ದ.ಕ. ಜಿಲ್ಲೆ–574 239 |
| ಸಿ.ಎಸ್. | **ಚಕ್ಕೆರೆ ಶಿವಶಂಕರ್**<br>ತೋಟದಮನೆ, ಸುಣ್ಣಘಟ್ಟ,<br>ಕಸಬಾ ಹೋಬಳಿ,<br>ಚನ್ನಪಟ್ಟಣ ತಾಲ್ಲೂಕು, ರಾಮನಗರ ಜಿಲ್ಲೆ |
| ಡಿ.ಸಿ.ಜೆ.* | **ಜಯಶಂಕರ** ಡಿ.ಸಿ.<br>ರಾಣಿಬಹದ್ದೂರ್ ಅಭಿವೃದ್ಧಿ ಅಧ್ಯಯನ ಸಂಸ್ಥೆ,<br>ಮಾನಸಗಂಗೋತ್ರಿ, ಮೈಸೂರು |
| ಡಿ.ಎನ್.ಕೆ.* | **ಕೃಷ್ಣಯ್ಯ ಡಿ.ಎನ್.**<br>ವಿರಾಜಪೇಟೆ, ಕೊಡಗು ಜಿಲ್ಲೆ |
| ಡಿ.ಪಿ. | **ದೀಪಾ ಫಡ್ಕೆ**<br>#225, 'ಆಸ್ಥಾ' 14ನೇ ಎ ಅಡ್ಡ ರಸ್ತೆ,<br>ಆರ್ ಟಿ ನಗರ 2ನೇ ಬ್ಲಾಕ್,<br>ಬೆಂಗಳೂರು –32 |
| ಎಚ್.ಜಿ. | **ಹೆಜಮಾಡಿ ಗಂಗಾಧರ ಭಟ್**<br>ವಿಶ್ರಾಂತ ಪ್ರಾಧ್ಯಾಪಕರು, ಮೃದುಲ,<br>ತೆಂಡೆಲ್ ತೋಟ, ಕಮಲಮ್ಮ ಲೇಔಟ್<br>ಕಪಿತಾನಿಯೋ, ಕಂಕನಾಡಿ – 575 002 |
| ಎಚ್.ಎಂ. | **ಹಂಝ ಮಲಾರ್**<br>'ಅರಸ್ತಾನ ಮನೆ' ಐ.ಎಸ್. ಕಾಂಪೌಂಡ್,<br>ಮಲಾರ್ ಬದ್ರಿಯಾ ನಗರ,<br>ಅಂಚೆ ಮತ್ತು ಗ್ರಾಮ, ಪಾವೂರು,<br>ಉಳ್ಳಾಲ ತಾಲೂಕು, ಮಂಗಳೂರು,<br>ದ.ಕ. ಜಿಲ್ಲೆ – – 574 199 |
| ಎಚ್.ಎಂ.ಎನ್.ಆರ್.* | **ನಾಗರಾಜ ರಾವ್** ಎಚ್.ಎಮ್.,<br>ಶಾಸನ ಸಹಾಯಕ,<br>ಎಪಿಗ್ರಾಫಿಯ ಕರ್ನಾಟಿಕ,<br>ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ,<br>ಮಾನಸಗಂಗೋತ್ರಿ, ಮೈಸೂರು |
| ಜಿ.ಜಿ. | **ಗುಡ್ಡೇರ ಪಿ ಗಣಪತಿ ಕೊಡಗು**<br>ಕೊಡಗು ಜಿಲ್ಲೆ |





## ಲೇಖಕರ ಸೂಚಿ

**ಜಿ.ಕೆ.*** — **ಗೌರೀಶ ಕಾಯ್ಕಿಣಿ**
ಪತ್ರಿಕೋದ್ಯಮಿ, ಗೋಕರ್ಣ

**ಜಿ.ಎನ್.** — **ಗಾಯತ್ರಿ ನಾವಡ**
#1603 ಸಾಲಿಟೇರ್ ಅಪಾರ್ಟ್‌ಮೆಂಟ್,
ಹ್ಯಾಟ್ ಹಿಲ್ ಮಂಗಳೂರು,
ದ.ಕ. ಜಿಲ್ಲೆ – 575 006

**ಜೆ.ಬಿ.** — **ಬೈತಡ್ಕ ಜಾನಕಿ ಬೆಳ್ಯಪ್ಪ**
ಕೋಂ: ಬೈತಡ್ಕ ಬೆಳ್ಯಪ್ಪ,
ರೇಸ್ ಕೋರ್ಸ್ ರಸ್ತೆ,
ಎಲ್.ಐ.ಸಿ ಹತ್ತಿರ, ಮಡಿಕೇರಿ, ಕೊಡಗು

**ಜೆ.ಸಿ.** — **ಜ್ಯೋತಿ ಚೇಳ್ಯೈರು**
ಕ್ಷಿತಿಜ ಸೈಟ್ ನಂ 382
ಚೇಳ್ಯೈರು ಅಂಚೆ, ವಯಾ ಹಳೆಯಂಗಡಿ,
ಮಂಗಳೂರು, ದ.ಕ. ಜಿಲ್ಲೆ – 574 146

**ಜೆ.ಪಿ.** — **ಜೀವನ್ ಪುರ**
ಮರ್ಕಂಜ ಗ್ರಾಮ ಮತ್ತು ಅಂಚೆ,
ಸುಳ್ಯ ತಾಲೂಕು, ದ.ಕ. ಜಿಲ್ಲೆ–574 248

**ಕು.ಸಿ.** — **ಕುಂಞಿಕೇಟಿ ಶಿವರಾಮ ಗೌಡ**
ಕೊಲ್ಲಮೊಗರು ಅಂಚೆ, ಸುಳ್ಯ ತಾಲೂಕು
ದ.ಕ. –574218

**ಕೆ.ಬಿ.ಸಿ.*** — **ಚೆನ್ನಬಸಪ್ಪ ಕೆ.ಬಿ.**
ಇತಿಹಾಸ ವಿಭಾಗ,
ಎಂ.ವಿಶ್ವೇಶ್ವರಯ್ಯ ಸಂಜೆ ಕಾಲೇಜು,
ಚಿಕ್ಕಬಳ್ಳಾಪುರ

**ಕೆ.ಬಿ.ಎಸ್.*** — **ಸೋಮಯ್ಯ ಕೆ.ಬಿ.**
4ನೆಯ ಮುಖ್ಯರಸ್ತೆ, ಸರಸ್ವತಿಪುರಂ,
ಮೈಸೂರು

**ಕೆ.ಡಿ.** — **ಕೃಪ ದೇವರಾಜ್**
ಟಾಟಾ ಕಾಪಿ ಲಿಮಿಟೆಡ್,
ಕೊಹಿನೂರ್ ರಸ್ತೆ,
ಮಡಿಕೇರಿ – 571201, ಕೊಡಗು ಜಿಲ್ಲೆ

**ಕೆ.ಕೆ.** — **ಕೆದಂಬಾಡಿ ಕಾಂಚನ**
ಕೊಕಲ ನೆಸ್ಟ್,
ಸಂತ ಜೋಸೆಪ್ ಕಾನ್ವೆಂಟ್ ಹತ್ತಿರ,
ಭಗವತಿ ನಗರ ರಸ್ತೆ,
ಮಡಿಕೇರಿ – 571201, ಕೊಡಗು ಜಿಲ್ಲೆ

**ಕೆ.ಕೆ.ಎಸ್.** — **ಡಾ. ಕಿಶೋರ್ ಕುಮಾರ್ ಶೇಣಿ**
ಕಮಲ್ ಸುಂದರ್ ಕಿಲ್ಪಾಡಿ, ಕೆಂಚನಕೆ
ಅಂಚೆ, ವಯಾ ಕಾರ್ನಾಡ್,
ಮುಲ್ಕಿ, ಮಂಗಳೂರು,
ದ.ಕ. ಜಿಲ್ಲೆ – 575 154

**ಕೆ.ಕೆ.ಜಿ.** — **ಕೋಡಿ ಕುಶಾಲಪ್ಪ ಗೌಡ**
ಕನ್ನಡ ಪ್ರಾಧ್ಯಾಪಕ,
ಮದ್ರಾಸ್ ವಿಶ್ವವಿದ್ಯಾಲಯ, ಚೆನ್ನೈ

**ಕೆ.ಜಿ.ಕೆ.** — **ಕಿರಣ್ ಕೆ. ಕುಂಬಳಚೇರಿ**
ಕೇಶವ ಕೆ.ಎಸ್.ರವರ ಮಗ,
ಕುಂಬಳಚೇರಿ ಮನೆ,
ಪೆರಾಜೆ ಗ್ರಾಮ ಮತ್ತು ಅಂಚೆ,
ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ – 574314

**ಕೆ.ಎಂ.ಎಲ್.** — **ಕವಿತಾ ಎಂ.ಎಲ್.**
ರಾಜೀವಿ ಲಿಂಗಪ್ಪ ಗೌಡರ ಮಗಳು,
ಕೊಲ್ಲನೂಜಿ ಮನೆ,
ಎಡಮಂಗಲ ಗ್ರಾಮ ಮತ್ತು ಅಂಚೆ,
ಕಡಬ ತಾಲೂಕು,
ದ.ಕ. ಜಿಲ್ಲೆ – 574 221

**ಕೆ.ಎಂ.ಜೆ.*** — **ಜೋಯಪ್ಪ ಕೆ.ಎಂ.**
ಜೇನುಸಾಕಣೆ ಅಧಿಕಾರಿ,
ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ,
ವಿಧಾನ ವೀಥಿ, ಬೆಂಗಳೂರು

**ಕೆ.ಆರ್.ಯು.*** — **ರಾಮಕೃಷ್ಣ ಉಡುಪ ಕೆ.**
ಪ್ರಾಂಶುಪಾಲ, ಕಾವೇರಿ ಕಾಲೇಜು,
ಗೋಣಿಕೊಪ್ಪಲು, ಕೊಡಗು ಜಿಲ್ಲೆ

**ಕೆ.ಎಸ್.** — **ಕೋರನ ಸರಸ್ವತಿ ಪ್ರಕಾಶ್**
ಮೂರ್ನಾಡು ಪಟ್ಟಣ,
ಮೂರ್ನಾಡು ಅಂಚೆ,
ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ

**ಕೆ.ಎಸ್.ಎಸ್.*** — **ಶಿವಣ್ಣ ಕೆ.ಎಸ್.**
ಪ್ರಾಧ್ಯಾಪಕ, #787, ಟಿ.ಕೆ.ಬಡಾವಣೆ,
ಸರಸ್ವತಿಪುರಂ, ಮೈಸೂರು

## ಲೇಖಕರ ಸೂಚಿ

| | |
|---|---|
| ಎಲ್.ಕೆ. | **ಲಾವಣ್ಯ ಸಿ.ಪಿ. ಕೊಟ್ಟಕೇರಿಯನ**<br>ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ<br>ಶೇಷಾದ್ರಿಪುರಂ, ಪದವಿ ಪೂರ್ವ<br>ಕಾಲೇಜು, #25&26 ಹೆಬ್ಬಾಳ<br>ಹೊರವರ್ತುಲ ರಸ್ತೆ,<br>ಹೆಬ್ಬಾಳ, ಮೈಸೂರು – 17 |
| ಎಂ.ಬಿ. | **ಮಿಲನ ಕೆ. ಭರತ್**<br>ಕಾಂಚನ ನಿಲಯ<br>ಭಾಗಮಂಡಲ ಗ್ರಾಮ ಮತ್ತು ಅಂಚೆ,<br>ಮಡಿಕೇರಿ, ಕೊಡಗು ಜಿಲ್ಲೆ |
| ಎಂ.ಡಿ. | **ಮಾಕೋನಹಳ್ಳಿ ದೊಡ್ಡಮನೆ ದೊಡ್ಡಪ್ಪ ಗೌಡ**<br>ಕೊಡಗು ಜಿಲ್ಲೆ |
| ಎಂ.ಜಿ.ಕೆ. | **ಎಂ ಜಿ ಕಜೆ**<br>ಹಸೆಮನೆ 1–3ಜಿ2, ಬಗಂಬಿಲ ರಸ್ತೆ,<br>ದೇರಳಕಟ್ಟೆ ಪೋಸ್ಟ್, ಮಂಗಳೂರು,<br>ದ.ಕ. ಜಿಲ್ಲೆ |
| ಎಂ.ಎಚ್.* | **ಹನುಮಂತ ರಾವ್ ಎಂ.**<br>ಉಪಶಾಸನ ತಜ್ಞ, ಕಾಳಿದಾಸ ರಸ್ತೆ,<br>ಜಯಲಕ್ಷ್ಮೀಪುರಂ, ಮೈಸೂರು |
| ಎಂ.ಆರ್.ಎ.* | **ರಾಮಚಂದ್ರ ಎಂ.**<br>ಕನ್ನಡ ವಿಭಾಗ, ಭುವನೇಂದ್ರ ಕಾಲೇಜು,<br>ಕಾರ್ಕಳ, ದ.ಕ. ಜಿಲ್ಲೆ |
| ಎಂ.ಎಸ್. | **ಮೂಲೆಮಜ್ಲು ಸೋಮಣ್ಣ**<br>ಪೆರಾಜೆ, ಮಡಿಕೇರಿ ತಾಲೂಕು<br>ಕೊಡಗು ಜಿಲ್ಲೆ |
| ಎಂ.ವಿ.* | **ವಾಸುದೇವರಾವ್ ಎಂ.**<br>ಮುಖ್ಯೋಪಾಧ್ಯಾಯ, ಮರ್ಪಾಡಿ,<br>ಕುಳಾಯಿ ಅಂಚೆ, ಸುರತ್ಕಲ್, ದ.ಕ. ಜಿಲ್ಲೆ |
| ಎನ್.ಆರ್. | **ನರೇಂದ್ರ ರೈ ದೇರ್ಲ**<br>ಕನಸು, ಮಾಡಾವು ಅಂಚೆ – 574 210<br>ಪುತ್ತೂರು ತಾಲೂಕು, ದ.ಕ. ಜಿಲ್ಲೆ |
| ಎನ್.ಎಸ್.ಟಿ.* | ತಾರಾನಾಥ<br>ಎನ್.ಎಸ್, ಪ್ರಾಧ್ಯಾಪಕ,<br>ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ,<br>ಮಾನಸಗಂಗೋತ್ರಿ, ಮೈಸೂರು |
| ಪಿ.ಬಿ. | **ಪುರುಷೋತ್ತಮ ಬಿಳಿಮಲೆ**<br>6098/8, ಆ6, ಸಂತುಷ್ಟಿ<br>ಅಪಾರ್ಟ್‌ಮೆಂಟ್ಸ್, ವಸಂತಕುಂಜ್,<br>ನವ ದೆಹಲಿ– 110 070 |
| ಪಿ.ಬಿ.ಜಿ.* | **ಬೋರೇಗೌಡ ಪಿ.ಜಿ.**<br>ಭೂಗೋಳಶಾಸ್ತ್ರ ವಿಭಾಗ,<br>ಮಾನಸಗಂಗೋತ್ರಿ, ಮೈಸೂರು |
| ಪಿ.ಡಿ. | **ದೀಕ್ಷಿ ಪಟ್ಟಡ**<br>ಸೀಗೆಹೊಸೂರು ಗ್ರಾಮ,<br>ಮದಲಾಪುರ ಅಂಚೆ,<br>ಕುಶಾಲನಗರ ತಾಲೂಕು,<br>ಕೊಡುಗು ಜಿಲ್ಲೆ – 571 232 |
| ಪಿ.ಕೆ. | **ಪೂವಪ್ಪ ಕಣಿಯೂರು**<br>ನಿವೃತ ಪ್ರಾಂಶುಪಾಲರು, 'ಸ್ಫೂರ್ತಿ'<br>4ನೇ ಅಡ್ಡ ರಸ್ತೆ, ದಕ್ಷಿಣ ಬೀರ ಮಂಗಲ,<br>ಚರ್ಚ್ ರಸ್ತೆ, ಸುಳ್ಯ, ದ.ಕ.ಜಿಲ್ಲೆ–574 239 |
| ಪಿ.ಕೆ.ಆರ್. | **ಪುರುಷೋತ್ತಮ ಕೆ ವಿ ಕರಂಗಲ್ಲು**<br>ಪ್ರಾಂಶುಪಾಲರು, ಪೊಂಪೈ ಕಾಲೇಜು,<br>ಐಕಳ, ಮಂಗಳೂರು,<br>ದ.ಕ. ಜಿಲ್ಲೆ 574 141 |
| ಪಿ.ಆರ್. | **ಪಾಲ್ತಾಡಿ ರಾಮಕೃಷ್ಣ ಆಚಾರ್**<br>ನೆಲೆ, ಬಾಗಿಲು ಸಂಖ್ಯೆ #3–6 ಬೆದ್ರಾಳ,<br>ನರಿಮೊಗರು, ಪುತ್ತೂರು ತಾಲೂಕು,<br>ದ.ಕ. ಜಿಲ್ಲೆ – 574 202 |
| ಪಿ.ಅರ್.ಸಿ. | **ಚೊಕ್ಕಡಿ ಪ್ರೇಮ ರಾಘವಯ್ಯ**<br>ಟೀ ಜಾನ್ ಲೇಔಟ್, ಶಕ್ತಿ ಕ್ವಾಟ್ರಸ್,<br>ಮಡಿಕೇರಿ, ಕೊಡಗು ಜಿಲ್ಲೆ – 571201 |
| ಆರ್.ಜಿ.* | **ರಾಮೇಗೌಡ ರಾಗೌ**<br>ಪ್ರಾಧ್ಯಾಪಕ, #144, ಕಾಳಿದಾಸ ರಸ್ತೆ,<br>ಜಯಲಕ್ಷ್ಮೀಪುರಂ, ಮೈಸೂರು |





## ಲೇಕಕರ ಸೂಚಿ

**ಆರ್.ಎನ್.** — **ರೇವತಿ ನಂದನ್**
ಸ್ವಾತಿ, ಅಂಬಟೆಡ್ಕ, ಸುಳ್ಯ ತಾಲೂಕು,
ದ.ಕ. ಜಿಲ್ಲೆ – 574239

**ಆರ್.ಟಿ.ಎಸ್.*** — **ರಾಜಗೋಪಾಲ್ ಟಿ.ಎಸ್.**
ಇತಿಹಾಸ ವಿಭಾಗ, ಮಿಲಾಗ್ರೇಸ್ ಕಾಲೇಜು,
ಕಲ್ಯಾಣಪುರ, ಉಡುಪಿ ಜಿಲ್ಲೆ

**ಅರ್.ಯು.** — **ರೋಶನ್ ಉಳುವಾರನ**
ಉಳುವಾರು ಮನೆ, ಕನತ್ತೂರು ಗ್ರಾಮ,
ಮೂರ್ನಾಡು ಅಂಚೆ, ಮಡಿಕೇರಿ,
ಕೊಡಗು ಜಿಲ್ಲೆ – 571 252

**ಎಸ್.ಕೆ.** — **ಸುಂದರ ಕೇನಾಜೆ**
ದೀಪ್ತ ಶೀಲ ಮನೆ, ಬೆಟ್ಟಂಪಾಡಿ,
ಶಾಂತಿನಗರ, ಸುಳ್ಯ ತಾಲೂಕು,
ದ.ಕ. ಜಿಲ್ಲೆ – 574 239

**ಎಸ್.ಕೆ.ಬಿ.** — **ಸಹನಾ ಕಾಂತಬೈಲು**
ಬಲಂಬಿ ಅಂಚೆ, ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ – 574 234

**ಎಸ್.ಕೆ.ಕೆ.** — **ಶೀಲಾವತಿ ಕೊಳಂಬೆ**
ಕೊಳಂಬೆ ಮನೆ, ಚೊಕ್ಕಾಡಿ ಅಂಚೆ,
ಅಮರಪಡ್ನೂರು ಗ್ರಾಮ, ಸುಳ್ಯ,
ದ.ಕ. ಜಿಲ್ಲೆ – 574 212

**ಎಸ್.ಎನ್.ಕೆ.*** — **ಸೂರ್ಯನಾಥ ಕಾಮತ್**
ಇತಿಹಾಸ ವಿಭಾಗ, ಪ್ರಾಧ್ಯಾಪಕ,
ಬೆಂಗಳೂರು ವಿಶ್ವವಿದ್ಯಾಲಯ,
ಬೆಂಗಳೂರು

**ಎಸ್.ಪಿ.** — **ಶ್ರೀಧರ ಗೌಡ ಪಾಣತ್ತಿಲ**
ಬಿನ್ : ಸಾಂತಪ್ಪ ಗೌಡ ಪಿ., 'ಶಿವಕೃಪಾ',
ಖಾಸಗಿ ಬಸ್ ನಿಲ್ದಾಣದ ಹಿಂಬದಿ,
ನೆಲ್ಲಿಕಟ್ಟೆ, ಪುತ್ತೂರು, ದ.ಕ.ಜಿಲ್ಲೆ–574 201

**ಎಸ್.ಪಿ.ಕೆ.*** — **ಪ್ರಭಾಕರ್ ಎಸ್.**
ಪ್ರಾಂಶುಪಾಲ., ಎಸ್.ಡಿ.ಎಂ.
ಕಾಲೇಜು, ಉಜಿರೆ, ದ.ಕ. ಜಿಲ್ಲೆ

**ಎಸ್.ಆರ್.** — **ಸಂಗೀತ ರವಿರಾಜ್**
ಕೋಂ: ರವಿರಾಜ್, ಹೊಸೂರು ಮನೆ,
ಬಾಲಂಬಿ ಅಂಚೆ, ಚೆಂಬು ಗ್ರಾಮ,
ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ

**ಟಿ.ಎ.** — **ತುಕಾರಾಂ ಏನೇಕಲ್**
ಉಡುಡೋಳಿ ಮನೆ,
ಏನೇಕಲ್ ಗ್ರಾಮ ಮತ್ತು ಅಂಚೆ,
ಕಡಬ ತಾಲೂಕು,
ದ.ಕ. ಜಿಲ್ಲೆ – 574 238

**ಟಿ.ಪಿ.ಎಸ್.ಆರ್*** — **ರಾವ್ ಟಿ.ಪಿ.ಎಸ್.**
ಅಧ್ಯಾಪಕ, ಇತಿಹಾಸ ವಿಭಾಗ,
ಸರ್ಕಾರಿ ಜ್ಯೂನಿಯರ್ ಕಾಲೇಜು,
ಬೆಳ್ತಂಗಡಿ, ದ.ಕ. ಜಿಲ್ಲೆ

**ವಿ.ಬಿ.** — **ವಿಶ್ವನಾಥ ಬದಿಕಾನ**
# 9.88/934, ಫ್ಲಾಟ್ ನಂ. 407,
ಧ್ರುವ ರೆಸಿಡೆನ್ಸಿ, ಎಕ್ಕೂರು,
ಮಂಗಳೂರು, ದ.ಕ. ಜಿಲ್ಲೆ – 575002

**ವಿ.ಜಿ.ಕೆ.** — **ಕೃಷ್ಣಮೂರ್ತಿ**
ವಿ.ಜಿ. ಕೃಷ್ಣಾಲಯ, 12ನೆಯ ತಿರುವು,
ವಾಣಿವಿಲಾಸ ಮೊಹಲ್ಲಾ, ಮೈಸೂರು

**ವಿ.ಎನ್.** — **ವಾಮನ ನಂದಾವರ**
ದೃಶ್ಯ, 1 ನೇ ಮುಖ್ಯ, 5ನೇ ಕ್ರಾಸ್,
ಲೋಹಿತ್ ನಗರ, ದೇರೆಬೈಲ್,
ಮಂಗಳೂರು, ದ.ಕ. ಜಿಲ್ಲೆ – 575 006

**ವಿ.ಎನ್.ಎನ್.*** — **ನಾಯಕ ವಿ.ಎನ್.**
ಪ್ರಾಧ್ಯಾಪಕ., ಭೂಗೋಳ ವಿಜ್ಞಾನ ವಿಭಾಗ,
ಕಾವೇರಿ ಕಾಲೇಜು, ಗೋಣಿಕೊಪ್ಪಲು,
ಕೊಡಗು ಜಿಲ್ಲೆ

**ವೈ.ಜಿ.** — **ಯದುಪತಿ ಗೌಡ**
ಡೆಚ್ಚಾರು ಮನೆ,
ಪುದುವೆಟ್ಟು ಅಂಚೆ ಮತ್ತು ಗ್ರಾಮ,
ಬೆಳ್ತಂಗಡಿ ತಾಲೂಕು,
ದ.ಕ. ಜಿಲ್ಲೆ–574 216

## ಅರೆಭಾಷೆ ವಿಶ್ವಕೋಶ ವಿಷಯಸೂಚಿ


| | |
|---|---|
| ಅಂಕೆ ಉಮ್ಮಯ | 171 |
| ಅಕ್ಕಿರೊಟ್ಟಿ | 128 |
| ಅಗೆ ತೆಗೆದು | 62 |
| ಅಗೆ ತೆಗೆಯುದು | 62 |
| ಅಗೆ ಪೂಜೆ | 62 |
| ಅಗ್ಗಿ ಕಟ್ಟುದು | 331 |
| ಅಟ್ಟಾಮುಟ್ಟ | 160 |
| ಅಡಿಕೆಮಣೆ | 77 |
| ಅಡಿಗೆರ | 136 |
| ಅಡ್ಡಿಲ್ ಹಾಕುದು | 288 |
| ಅಡ್ಡಣಪೆಟ್ಟ್ | 1 |
| ಅಪ್ಪದಿಟ್ಟ್ | 128 |
| ಅಪ್ಪದಿಟ್ಟ್ ಕಾವಲಿ | 128 |
| ಅಬ್ಬಗ – ದಾರಗ | 171 |
| ಅಬ್ಬಿ ಜಲಪಾತ | 184 |
| ಅಬ್ಬಿ ಜಲಪಾತ | 303 |
| ಅಭಿನಯ ಸುಳ್ಯ | 344 |
| ಅಮರ ಸುಳ್ಯದ ರೈತ ಹೋರಾಟ | 2 |
| ಅರಮನೆ | 302 |
| ಅರೆಬಾಸಿಗರ ತಿನ್ಸ್‌ಗ | 128 |
| ಅರೆಬಾಸೆ | 9 |
| ಅರೆಬಾಸೆ ನೆರೆಕರೆ | 12 |
| ಅರೆಬಾಸೆ ಪ್ರದೇಶದ ನಂಬಿಕೆಗ | 172 |
| ಅರೆಬಾಸೆ ಸಾಹಿತ್ಯ | 16 |
| ಅರೆಬಾಸೆ ಸಿಸುಪ್ರಾಸ | 351 |
| ಅರೆಬಾಸೆಲಿ ಮಕ್ಕಳ ಪದಗ | 355 |
| ಅವಳಿ ವೀರರ ಆರಾದನೆ | 165 |
| ಅವುಲು ಹಾಕುದು | 363 |
| ಅಳತೆ ಸಾದನಗ | 18 |
| ಅಳೆಗೆ | 136 |
| ಆಟಪಾಟ್ | 110 |
| ಆಟಿ ಕಳ್‌ಂಜ | 19 |
| ಆಟಿ ಕುದುರುದು | 321 |
| ಆಟಿ ತಿಂಗ | 348 |
| ಆನೆ ಮುಟ್ಟಿ | 82 |
| ಆನೆಬೇಟೆ | 285 |
| ಇಗ್ಗುತಪ್ಪದೇವರ ಬೆಟ್ಟ | 22 |
| ಇಜ್ಜಾಲ್ ಪೂಜೆ | 76 |
| ಇಡಮಣೆ ಹಿಟ್ಟ್ | 129 |
| ಇಡ್ಲಿ | 129 |
| ಇಮ್ಮಡಿ ಸೋಮಶೇಕರ ನಾಯಕ | 95 |
| ಇರುಪ್ಪು ಜಲಪಾತ | 184 |
| ಉಂಬಳೆ ಜಲಪಾತ | 185 |
| ಉಡುಗೆ | 23 |
| ಉತ್ತನಾಡಿ – ಜಗನ್ನಾಡಿ ಪುರುಸರ್ | 169 |
| ಉಪ್ಪನಕಾಯಿ | 130 |
| ಉಪ್ಪನೆಕಾಯಿ ಮರ್ಗಿಲ್ | 130 |
| ಉಪ್ಪುಗೋಣಿಯಾಟ | 161 |
| ಉಬರ್ ಮೀನ್ | 289 |
| ಉಮ್ಮತ್ತಾಟ್ | 105 |
| ಉರುಳಿಗುಂಡಿ ಜಲಪಾತ | 185 |
| ಉರ್‌ಕು ಕಟ್ಟುದು | 331 |
| ಉರ್ಳಿ | 136 |
| ಉಲ್ಲಾಕ್ಲು ದೆವ್ವ | 164 |
| ಊರುಗೌಡ | 37 |
| ಎನ್. ಎಸ್. ದೇವಿಪ್ರಸಾದ್ ಸಂಪಾಜೆ | 48 |
| ಎರವರ ಕೊಣ್ತ | 105 |
| ಎಲೆ ಅಡಿಕೆ | 25 |
| ಎಸ್. ಅಂಗಾರ | 25 |
| ಏಣೆಲ್ ಬೇಸಾಯ | 62 |
| ಐನ್ಮನೆ | 180 |
| ಒಕ್ಕಲಿಗರ ರಾಜಕೀಯ–ಸಾಮಾಜಿಕ ಹಿನ್ನೆಲೆ | 29 |
| ಒಕ್ಕಲಿಗರ್ | 25 |
| ಒಚ್ಚಿಮರ | 77 |
| ಒಡ್ಸಕತೆ | 42 |
| ಒನಲೆ | 77 |
| ಒನ್ಕೆ | 78 |
| ಒರ್‌ಳ್ ಕಲ್ಲ್ | 78 |
| ಒಳಾಂಗಣ ಆಟಗ | 157 |
| ಓಡಿಟ್ಟ್ | 130 |





## ಅರೆಭಾಷೆ ವಿಶ್ವಕೋಶ ವಿಷಯಸೂಚಿ


| | |
|---|---|
| ಕಂಬಳ | 157 |
| ಕಕ್ಕೆ ಗಿಳಿ | 156 |
| ಕಟ್ಟೆಮನೆ ಗೌಡ | 38 |
| ಕಡಬ ಪಣೆಮಜಲ್‌ನ ಸಬ್ಬಮ್ಮ ಮೂರ್ತಿ | 151 |
| ಕಡು ಹಾಕುದು | 288 |
| ಕಡುಂಬು (ಕಡಂಬಿಟ್ಟು) | 130 |
| ಕಡ್ಕಲ್ | 136 |
| ಕಡ್ಡಿ ಆಟ | 160 |
| ಕಣ್ಣ್ ಮುಚ್ಚಾಲೆ | 161 |
| ಕದಿಕೆ | 79 |
| ಕದಿಕೆ ಕಟ್ಟುದು | 67 |
| ಕನ್ನೆಕಂಬ | 43 |
| ಕಪ್ಪೆ ಲಾಗ | 157 |
| ಕಪ್ಪೆಯಾಟ್ | 106 |
| ಕಬಡ್ಡಿ ಆಟ | 161 |
| ಕಬರ್ ಬೊಳಿ | 312 |
| ಕರಡಿ ಕೊಣ್ತ | 46 |
| ಕರಿಕೊಳ್ಳಿ | 69 |
| ಕರಿಯ ಕಾಸಿಂಗ – ಬೆಳಿಯ ದೇಸಿಂಗ | 170 |
| ಕರ್ನಾಟಕ (ರಾಜ್ಯ) | 47 |
| ಕರ್ನಾಟಕ ಅರೆಭಾಷೆ? ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ | 48 |
| ಕಲ್ಕುಡ ಕಲ್ಲುರ್ಟಿ | 169 |
| ಕಲ್ತಪ್ಪ / ಕೆಂಡದಿಟ್ಟ್ | 131 |
| ಕಲ್ಯಾಣಸ್ವಾಮಿ | 5 |
| ಕಲ್ಯಾಳ ಜಲಪಾತ | 185 |
| ಕಲ್ಲಾಟ | 158 |
| ಕಳಿ | 271 |
| ಕಳು ತೋಂಡುದು–ಕೆಡ್ಡ ತೋಂಡುದು | 286 |
| ಕಳೆ | 69 |
| ಕಳ್ಸಿಗೆ | 18 |
| ಕಳ್ಳ ಪೋಲೀಸಾಟ | 159 |
| ಕಾಂತಾಬಾರೆ ಬೂದಾಬಾರೆ | 168 |
| ಕಾಟಕ್ಕಿಸುದು | 260 |
| ಕಾಡ್‌ಮೊದ್ದ್ | 175 |
| ಕಾನದ–ಕಾಟದ | 166 |
| ಕಾಪು | 67 |
| ಕಾಯಿ ಕುಟ್ಟುದು | 162 |
| ಕಾಯಿ ಗುದ್ದುದು | 162 |
| ಕಾಯಿಗಂಜಿ | 131 |
| ಕಾಯಿಗೆ ಕಲ್ಲ್ಲಿ ಗುರಿ ಹೊಡಿದು | 162 |
| ಕಾರ್ತಿಂಗ | 347 |
| ಕಾರ್ಯಪ್ಪ ಕೆ. ಎಂ. | 50 |
| ಕಾಲೆ | 142 |
| ಕಾವಂಗ | 137 |
| ಕಾವೇರಿ | 50 |
| ಕಾವೇರಿ ಪುರ್ಸ | 142 |
| ಕಾವೇರಿ ಸಂಕ್ರಮಣ | 144 |
| ಕಾಸರಗೋಡು | 55 |
| ಕಿಡಿಂಜೋಳು/ಪಣೆ/ಗೊರಗೆ | 78 |
| ಕುಕ್ಕೆ ಸುಬ್ರಹ್ಮಣ್ಯ | 59 |
| ಕುಟುಂಬ ಮತ್ತೆ ರಕ್ತ ಬಾಂದವ್ಯ | 119 |
| ಕುಟುಂಬದ ಸಮ್ಮಂದಗ | 118 |
| ಕುಡಿಯರ ಕೊಣ್ತ | 106 |
| ಕುಡೆಕಲ್ಲ್ ಪುಟ್ಟೇಗೌಡ | 8 |
| ಕುದುಪೆ | 137 |
| ಕುಮಾರಧಾರಾ | 59 |
| ಕುಮೇರಿ ಬೇಸಾಯ | 74 |
| ಕುಮೇರಿ ಮಂಜ | 76 |
| ಕುರುಂಜಿ ವೆಂಕಟ್ರಮಣ | 60 |
| ಕುರುಂಟು ಒಪ್ಪುಸುದು | 320 |
| ಕುರುಬಾಟ್ | 106 |
| ಕುರೆಕೊಣ್ತ | 60 |
| ಕುಶಾಲನಗರ | 61 |
| ಕುಸುಮ ಸಾರಂಗ | 343 |
| ಕೂಂಜೋಳು | 290 |
| ಕೂಸುಗೆ ಹೆಸರಿಸುದು | 193 |
| ಕೂಸುನ ಚಾಕ್‌ರಿ | 190 |
| ಕೂಸ್‌ನ ಕೆಬಿ ಒಟ್ಟೆ ಮಾಡುದು | 191 |

## ಅರೆಭಾಷೆ ವಿಶ್ವಕೋಶ ವಿಷಯಸೂಚಿ


| | |
|---|---|
| ಕೂಳಿ | **289** |
| ಕೆ. ಚಿದಾನಂದ ಗೌಡ | **90** |
| ಕೆ. ಜಿ. ಬೋಪಯ್ಯ | **92** |
| ಕೆ. ವಿ. ಗೌಡ | **93** |
| ಕೆಂಚಮ್ಮನ ಆರಾದನೆ | **150** |
| ಕೆಡ್ಡಸ ಹಬ್ಬ | **86** |
| ಕೆದಂಬಾಡಿ ಜತ್ತಪ್ಪ ರೈ | **92** |
| ಕೆದಂಬಾಡಿ ರಾಮಯ್ಯ ಗೌಡ | **6** |
| ಕೆಸರುಗದ್ದೆ | **155** |
| ಕೆಳದಿ (ಇಕ್ಕೇರಿ) ನಾಯಕರ್ | **30** |
| ಕೆಳದಿ ರಾಜವಂಶ | **93** |
| ಕೇದಗಡಿ ಗುಡ್ಡಪ್ಪ | **98** |
| ಕೈ ಮರ್ಗಿಲ್ | **137** |
| ಕೈ ಮುಟ್ಟಿ | **82** |
| ಕೈ ಮೊದ್ದ್ ಹಾಕುದು | **331** |
| ಕೈತಲೆ ಆಟ್ | **106** |
| ಕೈಬಿತ್ತ್ | **282** |
| ಕೊಂಡೆ–ಪಾವು–ಸೇರ್ | **18** |
| ಕೊಂಬಾಟ್ | **107** |
| ಕೊಂಬುಕೊಟ್ಟವಾಲಗ | **107** |
| ಕೊಡಗ್ | **99** |
| ಕೊಡಗ್ ಅರೆಬಾಸೆನ ಕೂಸುನ ಬಾಸೆ (ಬಾಲ ಬಾಸೆ) | **354** |
| ಕೊಡಗ್‌ನ ಕೈಮಾಡ | **102** |
| ಕೊಡಗ್‌ನ ಗೌಡಜೆನ | **102** |
| ಕೊಡಗ್‌ನ ಗೌರಮ್ಮ | **103** |
| ಕೊಡಗ್‌ಲಿ ಗೌಡರ್ | **33** |
| ಕೊಡವ ಬಾಸೆ ಮತ್ತೆ ಸಾಹಿತ್ಯ | **103** |
| ಕೊಡವ ಸೀಮೆ ಜನಪದ ಕೊಣ್ತಗ | **105** |
| ಕೊದಿ ತೆಗೆವ ಮಂತ್ರ | **332** |
| ಕೊಮ್ಮೆ | **79** |
| ಕೊಯ್ಲ್ | **70** |
| ಕೊರಗರ್ | **111** |
| ಕೊರಿಂಗೆ | **80** |
| ಕೊರ್ತಿ ಆಟ | **106** |
| ಕೊಲೆ ಆರಾದನೆ | **144** |
| ಕೊಲ್ಯದ ಗಿರೀಶ್ | **49** |
| ಕೊಳಂಬೆ ಪುಟ್ಟಣ್ಣ | **115** |
| ಕೊಳ್ಕೆ | **74** |
| ಕೊಳ್ಳಿ ಕೂಡುದು | **358** |
| ಕೋಟಿ ಚೆನ್ನಯರ್ | **165** |
| ಕೋಡಿ ಕುಶಾಲಪ್ಪ ಗೌಡ | **115** |
| ಕೋಲ | **220** |
| ಕೋಲಾಟ | **116** |
| ಕೋಳಿಕಟ್ಟ | **157** |
| ಕ್ರಿಸಿ ಕೆಲ್ಸದ ಸೊತ್ತುವ | **77** |
| ಕ್ರಿಸಿ ಜಾನಪದ | **62** |
| ಗಂಜಿ ಅರ್ಪುವ ಮಡಕೆ | **137** |
| ಗಂಜಿ ಮಡ್ಕೆ | **137** |
| ಗಣ ಪೂಜೆ | **291** |
| ಗದ್ದೆ ಆಳುದು | **67** |
| ಗದ್ದೆಗೋರಿ | **66** |
| ಗದ್ದೆಗೋರಿನ ಹೇಳಿಕೆ ಕೊಣ್ತ | **86** |
| ಗಾಂದಿ ಮಂಟಪ | **302** |
| ಗಾದೆಗ | **119** |
| ಗಾಳ ಹಾಕುವುದು | **288** |
| ಗಿರೀಶ್ ಭಾರದ್ವಾಜ್ | **121** |
| ಗುಂಡನ ಬೊಳಿ | **312** |
| ಗುಂಡಿಕಲ್ಲ್ | **161** |
| ಗುಂಡು ಹಾಕಿ ಮೀನ್ ಹಿಡಿದು | **289** |
| ಗುಂಬ ಪೂಜೆ | **238** |
| ಗುಜಾಣಿಕೆ | **138** |
| ಗುಡ್ಡೆಮನೆ ಅಪ್ಪಯ್ಯ ಗೌಡ | **121** |
| ಗೂಡೆ ನೋಡ್ದು | **313** |
| ಗೇರು ಬೀಜದ ಆಟಗ | **155** |
| ಗೊಟ್ಟೆ | **271** |
| ಗೊರವಂಗೆ ಇಸುದು | **122** |
| ಗೋಂದೊಲು ಪೂಜೆ | **122** |
| ಗೋರಿ | **290** |
| ಗೋಳಿ ಬೊಳಿ | **312** |
| ಗೌಡ ಜೆನಾಂಗ ಮತ್ತೆ ನಾಥ ಸಂಪ್ರದಾಯ | **40** |





## ಅರೆಭಾಷೆ ವಿಶ್ವಕೋಶ ವಿಷಯಸೂಚಿ


ಗೌಡ ಪದ ನಿಷ್ಪತ್ತಿ 27
ಗೌಡ ಸಮುದಾಯದ ಆಡೆಳ್ತ ವೆವಸ್ತೆ 36
ಗೌಡ ಸಮುದಾಯಲಿ ಇರ್‌ವ ನ್ಯಾಯವೆವಸ್ತೆ 36
ಗೌಡ ಸಮುದಾಯಲಿ ಊರ್‌ಗೌಡ್ರ ಪಾತ್ರ 38
ಗೌಡರ ಆರಾದಾನಾ ಪರಂಪರೆನ ಪಳೆಯುಳಿಕೆ ಮತ್ತೆ ಪಲ್ಲಟ 207
ಗೌಡರ ಪ್ರಸರಣ 30
ಗೌಡರ ಮೂಲ 205
ಗೌಡ್ರ ಬೊಳಿ 313
ಚಂಗಾಳ್ವ ವಂಶ 125
ಚಪ್ಪರ 324
ಚಾಮಡ್ಕ ಜಲಪಾತ 186
ಚಾರ್ಮಾಡಿ ಗಟ್ಟ 126
ಚಾಲ್ಯರ ಬೊಳಿ 312
ಚಿಕ್ಲಿಹೊಳೆ ಜಲಾಸಯ (ಅಣೆಕಟ್ಟ್) 186
ಚಿತ್ತರ್ ಬೊಳಿ 313
ಚಿಪ್ಪಿ ಸೆಡೆ 138
ಚಿಬುಳಿ 138
ಚೆ.ರಾಮಸ್ವಾಮಿ 152
ಚೊಂಟೆನ ಮರ್‌ಗಿಲ್ 80
ಚೌಟವಂಶ 127
ಚೌಡಗೌಡ 94
ಜನಪದ ದೆವ್ವಗ 162
ಜಾತಕ 191
ಜಾಲಾಟ 222
ಜಾಳ್ತೆ ತಿಂಗ 349
ಜಿಬ್ಲಿ (ಕುಂಟೊಬಿಲ್ಲೆ) 161
ಜೀವನಾವರ್ತನ 188
ಜೀವನ್ ರಾಂ ಸುಳ್ಯ 187
ಜೆನಪದ ಆಟಗ 153
ಜೆನಪದ ವಾಸ್ತು 178
ಜೆನಪದ ವೈದ್ಯ 174
ಜೇನ್ ಸಾಕಣೆ 193
ಜೋಗಿಪುರುಸ ಕೊಣ್ತ 194
ಜೋಯಿಪಾಟ್ 107
ಡಿ. ವಿ. ಸದಾನಂದ ಗೌಡ 196
ಡೋಳುಪಾಟ್ 108
ತಕ್ಕ ಮುಕ್ಕಸ್ತರ್ 196
ತಡಿಯಂಡಮೋಳ್ 197
ತಲಕಾಡಿನ ಗಂಗರು 29
ತಲಕಾವೇರಿ 198
ತಿಂಗಗ 282
ತಿತಿ ಬೊಜ್ಜ 358
ತುಪ್ಪದ ಕಟ್ಲೆನ ಪೊದ್ದತಿ 326
ತುಳುಗೌಡರ್ 199
ತುಳುನಾಡ್ಗೆ ಗೌಡ್ರ ಪ್ರಸರಣ 205
ತುಳುನಾಡ್‌ನ್ನ ಇತಿಹಾಸ ರಚನೆಲಿ ಐತಿಹ್ಯ–ಪುರಾಣಗಳ ಪಾತ್ರ 200
ತುಳುಬಾಸೆ 204
ತೂಗು ಸೇತುವೆ 186
ತೆರೆ 325
ತೊಡಬ್ 80
ತೊಡುಗೆಗ 24
ದಕ್ಷಿಣ ಕನ್ನಡ ಜಿಲ್ಲೆಲಿ ಗೌಡ ಸಮುದಾಯ ಬೆಳ್ದ್ ಬಂದ ಹಿನ್ನೆಲೆ 28
ದಕ್ಷಿಣಕನ್ನಡ ಗೌಡರ್ ಮತ್ತೆ ಆರಾದನಾ ಪರಂಪರೆ 204
ದಕ್ಷಿಣಕನ್ನಡ ಜಿಲ್ಲೆ 209
ದನ ಕೂಡುದು 156
ದನಕರ್‌ಗೆ ಮೊದ್ದ್ 273
ದಪ್ಪು ಕೊಣ್ತ 108
ದರ್ಮದೆವ್ವ 223
ದಾರಾಕಾರ್ಯ 317
ದಿನ ನಿಸ್ಚಯ ಮಾಡ್ದು 313
ದಿಬ್ಬಣ ಹೊರ್‌ಡುದು 315
ದೀಪಾವಳಿ 214
ದೂಪೆನ ಅಲಂಕರ್‌ಸುವ ಕ್ರಮ 359
ದೆವ್ವಾರಾದನೆ 215
ದೆವ್ವಾರಾದನೆನ ಕಟ್ಟ್‌ಪಾಡ್‌ಗ 217
ದೇವರಗುಂಡಿ ಜಲಪಾತ 185
ದೋಸೆ 131
ದ್ರಿಸ್ಟಿ ಆದಕ್ಕೆ ಮಂತ್ರ 332

## ಅರೆಭಾಷೆ ವಿಶ್ವಕೋಶ ವಿಷಯಸೂಚಿ


ಧರ್ಮಸ್ಥಳ 225
ನಂದರ ಬೊಳಿ 310
ನರ್ಸಣ್ಣ 227
ನಲಿಕೆ 228
ನಾಕೂರು ಗಯ 228
ನಾಗರಹೊಳೆ 230
ನಾಗಾರಾದನೆ 231
ನಾಗೋಳಿ ಶಾಸ್ತ್ರ 321
ನಾಟಿ 66
ನಾಟಿ ಮೊದ್ದ್ 175
ನಾಮ ಇಸಿಕಂಬ ಒಕ್ಕಲಿಗರ್ 34
ನಾಯರ್ ದೆವ್ವ 234
ನಾಯರ್ ಬೊಳಿ 312
ನಾಲ್ಕ್ ನಾಡ್ 235
ನಿರಂಜನ 236
ನಿರ್ನಾಲ್ ತಿಂಗ 349
ನೀರು ಆರ್ಸಿ ಮೀನ್ ಹಿಡಿದು 288
ನೀರ್ದೋಸೆ 131
ನೆಂಟ್ರ್ ಬಾವಾಟ 160
ನೆರ್‌ದ ಮೊದ್‌ವೆ 237
ನೆಲು 138
ನೆಹರು ಮಂಟಪ 302
ನೇಕೆ 80
ನೇಗಿಲು ಪೂಜೆ 62
ನೇಗ್‌ಲ್ 81
ನೇಜಿ 65
ನೇತ್ರಾವತಿ 239
ನೇಮ 217
ನೊಜ್ಜ 81
ನೋಂಡಿ 161
ನ್ಯಾಯ ತೀರ್ಮಾನದ ಕತೆ 218
ನ್ಯಾಯ–ಸತ್ಯ–ದಾನ–ದರ್ಮ ವಿಚಾರಂಗ 218
ಪಗ್ಗು 346
ಪಟ್ಟೆದಾರ 181
ಪಟ್ಟೆದಾರ 37
ಪಟ್ಲ 74
ಪತ್ರೊಡೆ 131
ಪಯ್ಯೊಲಿಗೆ 241
ಪರವ 241
ಪರಿಯಕಳಿ 108
ಪಶು ವೈದ್ಯ 273
ಪಾನೀಯಗ 242
ಪಾಯ್ಸ 132
ಪಿ. ಸಿ. ಜಯರಾಮ್ 49
ಪಿಂಡ ಹಾಕುದು 358
ಪಿಜಿನ್ 243
ಪೀಲಿಯಾಟ್ 109
ಪುಂಡಿ 132
ಪುಂಡಿ ಬಿತ್ತ್ (ಹಿಡಿಬಿತ್ತನೆ) 73
ಪುಂಡಿ ಮಡಕೆ 139
ಪುತ್ತೂರು 249
ಪುನರ್ವಿವಾಹ ಪೊದ್ದತಿ/ಎರಡ್‌ನೆ ಮೊದ್ವೆ 322
ಪುರುಷೋತ್ತಮ ಬಿಳಿಮಲೆ 260
ಪುರುಸ 254
ಪುರುಸ ದೆವ್ವ 250
ಪುರುಸ ಪೂಜೆ 260
ಪುರುಸವೇಸ 258
ಪೂಕರೆ(ಪೂಕಳೆ) 261
ಪೂಕಳೆ ಹಾಕುದು 86
ಪೂಮಲೆ 263
ಪೂಮಾಣಿ – ಕಿನ್ನಿಮಾಣಿ 168
ಪೆರಾರ್ದೆ 349
ಪೆರಿಯಾಕುಳು (ವೀರ ವಿಕ್ರಮರ್) 168
ಪೊಂಚು ಕುಕ್ಕೆ 82
ಪೊಡಿಮಂಚ 82
ಪೊಡುವಣ ಗಟ್ಟನ ನೈಸರ್ಗಿಕ ಪ್ರಕೋಪ 240
ಪೊನ್ನಿ ತಿಂಗ 349
ಪೊಲಿ 70
ಪೊಲ್ಲಿ ಹಿಡಿದು 160
ಪೊಳ್ಮನೆ 82





